

ಶ್ರೀ ವೇದವ್ಯಾಸಃ ಪ್ರಸೀದತು

ಭಗವಾನ್ ಶ್ರೀ ವೇದವ್ಯಾಸ ರಚಿತ

# ಪದ್ಮ ಮಹಾಪುರಾಣ ಭಾಗ-2

ಭೂಮಿಖಂಡ, ಸ್ವರ್ಗಖಂಡ, ಬ್ರಹ್ಮಖಂಡ, ಪಾತಾಳಖಂಡ

ಅನುವಾದ-ಲೇಖಕರು ಮಹಾಮಹೋಪಾಧ್ಯಾಯ

**ಪಂ. ಪಂಢರೀನಾಥಾಚಾರ್ಯ ಗಲಗಲಿ**

ರಾಷ್ಟ್ರಪ್ರಶಸ್ತಿ, ರಾಜ್ಯಪ್ರಶಸ್ತಿ

ರಾಮಕೃಷ್ಣ ದಾಲ್ಮಿಯಾ ಲಕ್ಷ್ಮೀ ಶ್ರೀವಾಣಿ ಅಲಂಕರಣ ಪ್ರಶಸ್ತಿ ಪುರಸ್ಕೃತ

—: ಪ್ರಕಾಶಕರು :—

**ಖೋಡೇ ಫೌಂಡೇಶನ್**

ಗ್ರಂಥ ಪ್ರಕಟಣಾ ವಿಭಾಗ

ನಂ. 9, ಮೊದಲನೇ ಮುಖ್ಯರಸ್ತೆ, ಗಾಂಧಿನಗರ

ಬೆಂಗಳೂರು-560 009

ದೂರವಾಣಿ : 26320014 ಫ್ಯಾಕ್ಸ್ : 0091-80-26321416

PADMA MAHAPURANA Part - 2 of Bhagavan Sri Vedavyasa Mahårshi, edited and translated in to Kannada by Rajyaprashasti, Rastraprashasti, Ramakrishna Dhalmia Lakshmi Shreevani Alankarana Prashasti Puraskrutha Panditha Sri Pandarinathacharya Galagali, Vishveswara Nagar, Shanti Colony, Hubli-580032 Ph : (0836) 2250250

First Edition : 1967

Second Edition : 2005

No. of Pages : xvii + 642

No. of Copies : 1,000



Price : Rs. 206 = 00

Printed at : **SRI VENKATESHWARA PRINTERS**
No. 3, Yellappa Road, Susheela Road Cross
Chickmavalli, Lalbagh Crumbigal Road Cross
BANGALORE-560 004
Phone : 26573001

# ಪ್ರಸ್ತಾವನೆ

ಪುರಾಣಗಳು ಭಾರತೀಯ ಸಂಸ್ಕೃತಿಯ ಅಮೂಲ್ಯ ನಿಧಿ. ಸನಾತನ ಧರ್ಮದ ಆಚಾರ ವಿಚಾರಗಳ ಆಗರ. ಹಿಂದೂದೇಶದ ಅಂದಿನ ಜನಜೀವನಕ್ಕೆ ಹಿಡಿದ ಕನ್ನಡಿ. ನಮ್ಮ ನಾಡಿನ ಹಿರಿಯರು ಬಾಳಿ ಬದುಕಿದ ಬಗೆಯನ್ನು ತಿಳಿಸಿ ಮುಂದಾದರೂ ಮಾನವರ ಜೀವನ ರಥವು ನ್ಯಾಯ ನೀತಿಗಳ ಆದರ್ಶ ಪಥದಲ್ಲಿ ಹೇಗೆ ಮುಂದುವರಿಯ ಬೇಕೆಂಬುದನ್ನು ಈ ಪುರಾಣಗಳು ತಿಳಿಸಿಕೊಡುತ್ತವೆ.

ಒಟ್ಟು ಪುರಾಣಗಳು ಹದಿನೆಂಟು. ಈ ಪುರಾಣಗಳು ಭಗವಂತನ ಮುಖದಿಂದ ವೇದಗಳಿಗಿಂತ ಮೊದಲು ಹೊರಬಂದವು.

"ಪುರಾಣಂ ಸರ್ವಶಾಸ್ತ್ರಾಣಾಂ ಪ್ರಥಮಂ ಬ್ರಹ್ಮಣಾ ಸ್ಮೃತಂ ।
ಅನಂತರಂ ಚ ವಕ್ತ್ರೇಭ್ಯೋ ವೇದಾಸ್ತಸ್ಯ ವಿನಿರ್ಗತಾಃ"

ಎಲ್ಲ ಶಾಸ್ತ್ರಗಳಿಗಿಂತ ಮೊದಲು ಪುರಾಣಗಳು ಪರಬ್ರಹ್ಮನ ಮುಖದಿಂದ ಹೊರಟವು. ಅನಂತರ ವೇದಗಳು ಹೊರಬಂದವು ಎಂದು ಮತ್ಸ್ಯ ಹಾಗೂ ಬ್ರಹ್ಮಾಂಡ ಪುರಾಣಗಳಲ್ಲಿ ಹೇಳಿದ್ದಾರೆ.

ಧರ್ಮ, ಅರ್ಥ, ಕಾಮ, ಮೋಕ್ಷ ಮುಂತಾದ ಚತುರ್ವಿಧ ಪುರುಷಾರ್ಥ ಸಾಧನೆಯ ಉಪಾಯಗಳನ್ನು ಬೋಧಿಸುವ ಈ ಪುರಾಣಗಳು ಮೊದಲು ನೂರಾರು ಕೋಟಿ ಗ್ರಂಥಗಳಷ್ಟು ವಿಸ್ತಾರವಾಗಿದ್ದವು ಹಿಂದಿನ ಕಾಲದಲ್ಲಿ. ಅದೆಲ್ಲ ಅತಿ ವಿಸ್ತೃತವಾದ ಗ್ರಂಥರಾಶಿಯು. **"ಕಾಲೇನಾಗ್ರಹಣಂ ದೃಷ್ಟ್ವಾ"** ಕಾಲಕ್ರಮದಿಂದ ಜನಸಾಮಾನ್ಯರಿಗೆ ಎಟುಕಲಾರದೆಂದುಬಗೆದು ಭಗವಂತನೇ ದ್ವಾಪರಯುಗದಲ್ಲಿ ಶ್ರೀ ವೇದವ್ಯಾಸರೂಪದಿಂದ ಅವತರಿಸಿ ನಾಲ್ಕುಲಕ್ಷ ಗ್ರಂಥರೂಪವಾಗಿ ಹದಿನೆಂಟು ಪುರಾಣಗಳನ್ನಾಗಿ ವಿಂಗಡಿಸಿದನು ಎಂದು ಪದ್ಮಪುರಾಣ, ಸ್ಕಂದ ಪುರಾಣಗಳಲ್ಲಿ ತಿಳಿಸಲಾಗಿದೆ. ಅದರಂತೆ ಹದಿನೆಂಟು ಪುರಾಣಗಳಲ್ಲಿ ಒಂದಾದ ಪದ್ಮ ಮಹಾಪುರಾಣ ಬೃಹತ್ ಕೃತಿಯಾಗಿದ್ದು ಐದು ಭಾಗಗಳಲ್ಲಿದೆ ಸೃಷ್ಟಿಖಂಡ; ಭೂಮಿಖಂಡ, ಸ್ವರ್ಗಖಂಡ, ಪಾತಾಳಖಂಡ ಮತ್ತು ಉತ್ತರಖಂಡ.

ಆಪಸ್ತಂಬಧರ್ಮಸೂತ್ರ -

ಯೋ ಹಿಂಸಾರ್ಥಮಭಿಕ್ರಾಂತಂ ಹಂತಿ ಮನ್ಯುರೇವ ಮನ್ಯುಂಸ್ಪೃಶತಿ
ನ ತಸ್ಮಿನ್ ದೋಷಾ ಇತಿ ಪುರಾಣೇ ೧-೧೯-೧

ಅಥಪುರಾಣೇ ಶ್ಲೋಕಾವುದಾಹರಂತಿ-ಅಷ್ಟಾಶೀತಿಸಹಸ್ರಾಣಿ...೨-೨೩-೩

ಆಭೂತಸಂಪ್ಲವಾತ್ತೇಸ್ವರ್ಗಜಿತಃ
ಪುನಃಸ್ಸರ್ಗೇ ಬೀಜಾರ್ಥಾ ಭವಂತಿ ಭವಿಷ್ಯತ್ಪುರಾಣೇ ।
ಅಥಾಪಿಪ್ರಜಾಪತೇರ್ವಚನಂ

ಆಪಸ್ತಂಬ ಧರ್ಮಸೂತ್ರ ೨-೨೪-೫

**ವ್ಯಾಡಿಯ ವಿಕೃತವಲ್ಲೀ**

**ಕ್ರಮಾಧ್ಯಯನ ಸಂಪನ್ನೋ ಮಂತ್ರಬ್ರಾಹ್ಮಣಪಾರಗಃ**
**ಜಟಾಪಾರಾಯಣಪರೋ ರುದ್ರಲೋಕ ಮಹೀಯತೇ ॥**

**ಶುಕ್ರನೀತಿ -**

**ಸರ್ಗಶ್ಚ ಪ್ರತಿಸರ್ಗಶ್ಚ ವಂಶೋ ಮನ್ವಂತರಾಣಿ ಚ**
**ವಂಶಾನುಚರಿತಂ ಯಸ್ಮಿನ್ ಪುರಾಣಂ ತತ್ಪ್ರಕೀರ್ತಿತಮ್ ॥**

ಹೀಗೆ ಅತ್ಯಂತ ಪ್ರಾಚೀನವಾದ ಗ್ರಂಥಗಳಲ್ಲಿ ಪುರಾಣಗಳ ಉಲ್ಲೇಖಗಳನ್ನು ನಾವು ಕಾಣುತ್ತೇವೆ. ಇದರ ಮೇಲಿಂದ ವೇದಸ್ಮೃತಿಕಾಲದಷ್ಟು ಪುರಾಣಗಳು ಪ್ರಾಚೀನ ಎಂದು ಸಿದ್ಧವಾಗುವದು. ಈ ಎಲ್ಲ ಪುರಾಣಗಳನ್ನು ರಚಿಸಿದವರು ಶ್ರೀ ವೇದವ್ಯಾಸದೇವರೇ ಎಂಬುದು ಎಲ್ಲ ಪುರಾಣಗಳಲ್ಲಿಯೂ ಸುಸ್ಪಷ್ಟವಾಗಿದೆ. ಶ್ರೀ ಮಧ್ವಾಚಾರ್ಯರು ಸ್ಕಂದ ಪುರಾಣದ ವಚನವನ್ನು ಉದಾಹರಿಸಿ ಸಾಕ್ಷಾದ್ವಿಷ್ಣುವೇ ವೇದವ್ಯಾಸ ರೂಪದಿಂದ ಅವತರಿಸಿ ವೇದವಿಭಾಗ ಹಾಗೂ ಮಹಾಭಾರತ ಮತ್ತು ಪುರಾಣಗಳನ್ನು ನಿರ್ಮಿಸಿದ್ದಾರೆ.

**ಅವತೀರ್ಣೋ ಮಹಾಯೋಗೀ ಸತ್ಯವತ್ಯಾಂ ಪರಾಶರಾತ್**
**ಉತ್ಸನ್ನಾನ್ ಭಗವಾನ್ ವೇದಾನ್ ಉಜ್ಜಹಾರ ಹರಿಃಸ್ವಯಮ್॥**

ಎಂದು ಸ್ಕಂದ ಪುರಾಣ ವಚನಗಳನ್ನು ಉದಾಹರಿಸಿದ್ದಾರೆ.

**ಭವಿಷ್ಯ ಪುರಾಣದಲ್ಲಿ -**

ಸೋಽಯಂ ನಾರಾಯಣಃಸಾಕ್ಷಾದ್ವ್ಯಾಸರೂಪೀ ಮಹಾಮುನಿಃ ॥

**ಪದ್ಮಪುರಾಣ -**

**ಕಾಲೇನಾಗ್ರಹಣಂ ದೃಷ್ಟ್ವಾ ಪುರಾಣಸ್ಯ ತಥಾ ವಿಭುಃ**
**ವ್ಯಾಸರೂಪೀ ತದಾ ಬ್ರಹ್ಮಾ ಸಂಗ್ರಹಾರ್ಥಂ ಯುಗೇ ಯುಗೇ**
**ಚತುರ್ಲಕ್ಷಪ್ರಮಾಣೇನ ದ್ವಾಪರೇ ದ್ವಾಪರೇ ಪ್ರಭುಃ**
**ತದಷ್ಟಾದಶಧಾ ಕೃತ್ವಾ ಭೂಲೋಕೇಽಸ್ಮಿನ್ ಪ್ರಕಾಶ್ಯತೇ ॥**

ವ್ಯಾಸರೂಪಿಯಾದ ಪರಬ್ರಹ್ಮ ವಿಷ್ಣುವೇ ಶತಕೋಟಿ ವಿಸ್ತಾರವಾದ ಪುರಾಣ ರಾಶಿಯು ಮಂದಮತಿಗಳಾದ ಮಾನವರ ಅರಿವು ತಿಳಿವುಗಳಿಗೆ ನಿಲುಕಲಾರದೆಂದೆಣಿಸಿ ನಾಲ್ಕು ಲಕ್ಷ ಗ್ರಂಥಗಳಿಗೆ ಇಳಿಸಿದರು. ಅವೇ ಹದಿನೆಂಟು ಪುರಾಣ ರೂಪದಿಂದ ಹೊಮ್ಮಿವೆ ಎಂದು ಬಿತ್ತರಿಸಿದ್ದಾರೆ.

ಆದಿ ಶಂಕರಾಚಾರ್ಯರು "**ಅನ್ಯಾನಿ ಪುರಾಣಾನಿ ವ್ಯಸ್ತಾನಿ ಅನೇನ ಇತಿವ್ಯಾಸಃ** ಎಂದು ಪುರಾಣಗಳನ್ನುಹದಿನೆಂಟು ವಿಧವಾಗಿ ವಿಂಗಡಿಸಿ ಇಟ್ಟಿದ್ದರಿಂದ ವ್ಯಾಸ ಎಂದು ಹೆಸರು ಬಂದಿಯೆಂದು ವ್ಯಾಸ ಶಬ್ದದ ವ್ಯುತ್ಪತ್ತಿಯನ್ನು ಪ್ರದರ್ಶಿಸಿದ್ದಾರೆ. ಶಂಕರ ಮಧ್ವರಾಮಾನುಜರು ತಮ್ಮ ಅನೇಕ ಗ್ರಂಥಗಳಲ್ಲಿ ಪರಮ ಪ್ರಮಾಣತ್ವೇನ ವೇದವ್ಯಾಸ ರಚಿತವಾದ ವಿಷ್ಣುಪುರಾಣ, ವಿಷ್ಣುಧರ್ಮ, ವಿಷ್ಣುಧರ್ಮೋತ್ತರ, ಭವಿಷ್ಯ, ಬ್ರಹ್ಮ,

ಬ್ರಹ್ಮವೈವರ್ತ, ಪದ್ಮ, ಲಿಂಗ, ನೃಸಿಂಹ, ಕೂರ್ಮ, ಬ್ರಹ್ಮಾಂಡ ಮುಂತಾದ ಪುರಾಣಗಳನ್ನು ಉದಾಹರಿಸಿದ್ದಾರೆ. ಹೀಗೆ ಅನೇಕಾನೇಕ ಬಹಿರಂಗ ಪ್ರಮಾಣಗಳನ್ನು ಪರೀಕ್ಷಿಸಿದಾಗ ಪುರಾಣಗಳ ಕಾಲವು ಕ್ರಿಸ್ತಪೂರ್ವ ಸಹಸ್ರಾರುವರ್ಷ ಹಿಂದೆ ಹೋಗುವುದು. ಪುರಾಣಗಳ ಅಂತರಂಗ ಪರಿಶೀಲನೆಯಿಂದಲೂ ಈ ವಿಷಯ ಮನದಟ್ಟಾಗುವದು.

''ಏವಂ ಸಪಾದಾಃ ಪಂಚೈತೇ ಲಕ್ಷಾ ಮರ್ತ್ಯೇ ಪ್ರಕೀರ್ತಿತಾಃ'' ॥

ಎಂದು ಮತ್ಸ್ಯಲೋಕದಲ್ಲಿ ಈಗ ಪ್ರಚಲಿತವಿದ್ದ ಒಟ್ಟು ಪುರಾಣಗ್ರಂಥ ಸಂಖ್ಯೆ ಐದು ಲಕ್ಷ ಎಂದು ಕೊಟ್ಟಿದ್ದಾರೆ.

ಈ ಎಲ್ಲ ಪುರಾಣಕರ್ತೃರಾದ ವ್ಯಾಸರು ಸುಮಂತು ಜೈಮಿನಿ ಪೈಲ ವೈಶಂಪಾಯನ ಮೊದಲಾದ ಶಿಷ್ಯರಿಗೆ ಋಗ್ವೇದ ಯಜುರ್ವೇದ ಸಾಮವೇದ ಅಥರ್ವಣ ವೇದಗಳನ್ನು ಉಪದೇಶಿಸಿದಂತೆ ತಮ್ಮ ಮತ್ತೊಬ್ಬ ಶಿಷ್ಯನಾದ ಸೂತ ಜಾತಿಯ ರೋಮಹರ್ಷಣನಿಗೆ ಪುರಾಣಸಂಹಿತೆಯನ್ನು ಉಪದೇಶಿಸಿದರು. ಎಲ್ಲ ಜಾತಿ ಧರ್ಮದ ಜನರೂ ಸದ್ಗತಿಯನ್ನು ಕಾಣಬೇಕೆಂದು ಭಗವಂತನ ಹೆಬ್ಬಯಕೆ. ವೇದ ಓದಲು ಬಾರದವರು ಉದ್ಧಾರ ಹೊಂದಲೆಂದೇ ಈ ಪುರಾಣ ಸಂಹಿತೆಯನ್ನು ಬಾದರಾಯಣರೂಪೀ ಭಗವಾನ್ ನಿರ್ಮಿಸಿದ. ಮತ್ತು ಅದನ್ನು ಬ್ರಾಹ್ಮಣೇತರನಾದ ಸೂತ ಜಾತಿಯ ರೋಮಹರ್ಷಣನಿಗೆ ಉಪದೇಶಿಸಿ ದೇಶದಲ್ಲಿ ಪ್ರಚುರಪಡಿಸಲಿಕ್ಕೆ ಆಜ್ಞಾಪಿಸಿದ. ಆ ರೋಮಹರ್ಷಣ ಮುಂದೆ ಈ ಪುರಾಣಸಂಹಿತೆಯನ್ನು ತನ್ನ ಆರು ಜನ ಶಿಷ್ಯರಿಗೆ ಬೋಧಿಸಿದ. ಸುಮತಿ, ಅಗ್ನಿವರ್ಚ, ಮಿತ್ರಯ ಶಾಂಶಪಾಯನ, ಅಕೃತವ್ರಣ, ಸಾವರ್ಣಿ ಈ ಆರು ಪಂಡಿತರಿಗೆ ಈ ಪುರಾಣಪಾಠ ಹೇಳಿ ಪೌರಾಣಿಕ ಮಹಾಪಂಡಿತರನ್ನಾಗಿ ಮಾಡಿದ. ಅವರೂ ಮುಂದೆ ಬಹು ಪಾಠ ಹೇಳಿ ಪೌರಾಣಿಕ ಮಹಾಪಂಡಿತರನ್ನಾಗಿ ಮಾಡಿದ. ಅವರೂ ಮುಂದೆ ಬಹು ವಿಧವಾಗಿ ಪೌರಾಣಿಕ ವಾಙ್ಮಯವನ್ನು ಬಿತ್ತರಿಸಿದರು ಎಂದು ವಿಷ್ಣುಪುರಾಣ ಭಾಗವತಾದಿ ಗ್ರಂಥಗಳಲ್ಲಿ ಹೇಳಲಾಗಿದೆ.

ವಿಷ್ಣು ಪುರಾಣಃ

ಆಖ್ಯಾನೈಶ್ಚಾಪ್ಯು ಪಾಖ್ಯಾನೈರ್ಗಾಥಾಭಿ ಕಲ್ಪಶುದ್ಧಿಭಿಃ<br>
ಪುರಾಣಸಂಹಿತಾಂ ಚಕ್ರೇ ಪುರಾಣಾರ್ಥವಿಶಾರದಃ ॥

ಪ್ರಖ್ಯಾತೋ ವ್ಯಾಸಶಿಷ್ಯೋಭೂತ್ ಸೂತೋ ವೈ ರೋಮಹರ್ಷಣಃ<br>
ಸುಮತಿಶ್ಚಾಗ್ನಿವರ್ಚಾಶ್ಚ ಮಿತ್ರಯುಃ ಶಾಂಶಪಾಯನಃ<br>
ಅಕೃತವ್ರಣೋಽಥ ಸಾವರ್ಣಿಃ ಷಟ್ ಶಿಷ್ಯಾಸ್ತಸ್ಯ ಚಾಭವನ್ ॥

ಈ ರೋಮಹರ್ಷಣನ ಮಗ ಉಗಶ್ರವನು ತಂದೆಯಿಂದಲೂ ಇತರ ವ್ಯಾಸ ಶಿಷ್ಯರಿಂದಲೂ ಕಲಿತು ಶೌನಕಾದಿಗಳಿಗೆ ಭಾಗವತಾದಿ ಪುರಾಣಗಳನ್ನು ಉಪದೇಶಿಸಿದ ಎಂದು ತಿಳಿಸಿದ್ದಾರೆ.

ಇದೇ ಕ್ರಮವನ್ನು ಪುರಾಣ ಸಮುಚ್ಚಯ ಗ್ರಂಥದಲ್ಲಿಯೂ ಕಾಣಿಸಿದ್ದಾರೆಂದು ಭಾಗವತದನ ರಸರಂಜನೀ ಟೀಕೆಯಲ್ಲಿ ಉದ್ಧರಿಸಿದ್ದಾರೆ.

''ತ್ರಯ್ಯಾರುಣಿ, ಕಶ್ಯಪ, ಸಾವರ್ಣ್ಯಕೃತವ್ರಣ, ವೈಶಂಪಾಯನ, ಹಾರೀತೇ ಭ್ಯಃಷಡ್ಭ್ಯಃ ಷಟ್ ಪುರಾಣಾನಿ ರೋಮಹರ್ಷಣಾಚ್ಚತ್ವಾರಿ ವ್ಯಾಸತ್ಸಪ್ತ ಏವಂ ಸಪ್ತದಶ ಪುರಾಣಾನಿ

ವ್ಯಾಸಾಶ್ರಮೇ ಅಧೀತ್ಯ ಭಾಗವತಂ ಶುಕೋಧ್ಯಾಪಯತೀತಿ ವ್ಯಾಸಾಜ್ಞಪ್ತ ಉಗ್ರಶ್ರವಾ ಲಿಪಿಶುಕಮುಖಾತ್ ಶುಶ್ರಾವಃ ತತಃಸ ನೈಮಿಷಾರಣ್ಯಂ ಜಗಾಮ ತತ್ರ ಮುನಿಭಿರ್ಬಹುಮಾನ ಪೂರ್ವಕಂ ವ್ಯಾಸಶಿಷ್ಯಂ ರೋಮಹರ್ಷಣ ಪುತ್ರಂಜ್ಞಾತ್ವಾಪೃತ್ಯೈೇ ಅಸನೇ ಸ್ಥಾಪಿತಃ।'' ಹೀಗೆ ವ್ಯಾಸಶಿಷ್ಯರಾದ ಆರು ಪೌರಾಣಿಕ ಪಂಡಿತರಿಂದ ಆರು ಪುರಾಣಗಳನ್ನೂ ರೋಮಹರ್ಷಣ (ತಂದೆ) ನಿಂದ ನಾಲ್ಕು, ಸಾಕ್ಷಾತ್ ವೇದವ್ಯಾಸರಿಂದ ಏಳು ಹೀಗೆ ಹದಿನೇಳು ಪುರಾಣಗಳನ್ನು ಓದಿ ಕೊನೆಗೆ ಶುಕ್ರಾಚಾರ್ಯರಿಂದ ಭಾಗವತವನ್ನು ಕಲಿತು ಒಟ್ಟು ಹದಿನೆಂಟೂ ಪುರಾಣಗಳಲ್ಲಿ ಮಹಾ ಪಂಡಿತನಾದ ಉಗ್ರಶ್ರವಸೂತ ಎಂದೂ ನಿರೂಪಿಸಿದ್ದಾರೆ.

ಈ ಎಲ್ಲ ಪ್ರಮಾಣವಚನ ಪರಿಶೀಲನೆಯಿಂದಲೂ ಹಾಗೂ ಸ್ವಯಂ ವ್ಯಾಸರೇ -

**''ಇತಿಹಾಸ ಪುರಾಣಾನಿ ಮಯಾ ಸೃಷ್ಟಾನಿ ಸುವ್ರತ** (ಭವಿಷ್ಯ ಪುರಾಣ) ಇತಿಹಾಸ ಪುರಾಣಗಳನ್ನೆಲ್ಲ ನಾನೇ ರಚಿಸಿದ್ದೇನೆಂದು ಹೇಳಿದ್ದರಿಂದಲೂ ವ್ಯಾಸರು ಪುರಾಣ ಗ್ರಂಥಗಳ ಕರ್ತಾರರೆಂಬುದು ನಿರ್ವಿವಾದ. ಈ ಕೃಷ್ಣದ್ವೈಪಾಯನ ಎಂಬ ಹೆಸರುಳ್ಳ ವೇದವ್ಯಾಸರು ದ್ವಾಪರಯುಗದ ಅಂತ್ಯ ಭಾಗದಲ್ಲಿ ಸತ್ಯವತಿ ಎಂಬ ಅಂಬಿಗರ ಹೆಣ್ಣಿನ ಹೊಟ್ಟೆಯಿಂದ ಪರಾಶರ ಕುಮಾರರಾಗಿ ಹುಟ್ಟಿ ಕೌರವ ಪಾಂಡವರ ಗುರುಗಳೂ ಮಾರ್ಗದರ್ಶಕರೂ ಆಗಿದ್ದುದು ಮಹಾಭಾರತದಲ್ಲಿ ಸ್ಪಷ್ಟವಾಗಿದೆ. ಈ ಹದಿನೆಂಟು ಪುರಾಣ, ಬ್ರಹ್ಮಸೂತ್ರ ಮೊದಲಾದವುಗಳನ್ನೆಲ್ಲ ರಚಿಸಿದ ನಂತರ ವ್ಯಾಸರು ಮಹಾಭಾರತವನ್ನು ರಚಿಸಿದ್ದಾರೆಂದು ಹಿಂದೆ ಉದಾಹರಿಸಿದ ಭವಿಷ್ಯ ಪುರಾಣದ **''ಅಷ್ಟಾದಶ ಪುರಾಣಾನಿ''** ಎಂಬ ಪದ್ಯವು ತಿಳಿಸುತ್ತದೆ.

ಇದರ ಮೇಲಿಂದ ಈ ಎಲ್ಲ ಹದಿನೆಂಟು ಪುರಾಣಗಳ ನಿರ್ಮಾಣ ಕಾಲವು ಕಲಿಯುಗದ ಪ್ರಾರಂಭ ಕಾಲವೆಂಬುದು ಅವಿಪ್ರತಿಪನ್ನವೇ ಆಗಿದೆ. ಕಲಿಯುಗವು ಪ್ರಾರಂಭವಾಗಿ ಐದುಸಾವಿರ ವರ್ಷವಾಯಿತೆಂದು ಭಾರತೀಯರ ತಿಳುವಳಿಕೆ ಇದೆ. ಆದುದರಿಂದ ಬೇರೆಬೇರೆ ಪುರಾಣಗಳ ಕಾಲನಿರ್ಣಯದ ಮಹಾಪ್ರಯಾಸವನ್ನು ಮಾಡುವ ಪ್ರಮೇಯವೇ ಇಲ್ಲ ಎಂಬುದು ಸನಾತನ ವೈದಿಕ ಪಂಡಿತರ ಒಟ್ಟಾಭಿಪ್ರಾಯವಾಗಿದೆ.

ಮಹಾಭಾರತ ಪುರಾಣಾದಿಗಳ ಕರ್ತರಾದ ಸ್ವತಃ ವ್ಯಾಸರೂ ಅವರಲ್ಲಿ ಓದಿ ಕೇಳಿ ಅಧ್ಯಯನ ಮಾಡಿ ಪ್ರಚಾರ ಮಾಡಿದ ಶಿಷ್ಯರೂ ತಾವಾಗಿ ಒಪ್ಪಿಕೊಂಡ ಮಹಾಭಾರತದ ಯುದ್ಧಕಾಲದ ಹತ್ತಿರದ ಕಾಲವೇ ಈ ಪುರಾಣಗಳ ರಚನಾ ಕಾಲ ಎಂದು ಒಪ್ಪುವದು ಸೂಕ್ತ ಎನಿಸುವದು.

ಹಿಂದೆ ಕಲ್ಕತ್ತಾ ಉಚ್ಚನ್ಯಾಯಾಲಯದಲ್ಲಿ ನ್ಯಾಯಾಧೀಶರಾಗಿದ್ದ ಶ್ರೀಮಾನ್ ಎಫ್.ಈ. ಪರ್ಗಿಟರರು ತಮ್ಮ **''ಏನ್ಶಿಯಂಟ್ ಇಂಡಿಯನ್ ಹಿಸ್ಟಾರಿಕಲ್ ಟ್ರ್ಯಾಡಿಶನಲ್''** ಎಂಬ ವಿಮರ್ಶಾತ್ಮಕ ಪ್ರಬಂಧದಲ್ಲಿ ಮೌಲಿಕ ಪುರಾಣಗಳ ಕಾಲ ಎಂಬ ನಾಲ್ಕನೆಯ ಪ್ರಕರಣದಲ್ಲಿ ವಾಯುಪುರಾಣವು ಇಸ್ವಿಸನ್ ೬೨೦ ಕ್ಕಿಂತ ಮೊದಲಿನದಾಗಿದೆ. ಅದಕ್ಕೆ ಕಾರಣ ಏಳನೆಯ ಶತಕದ ಮಧ್ಯದಲ್ಲಿ ಜೀವಿಸಿದ ಸಂಸ್ಕೃತ ಕಾದಂಬರೀಕಾರ ಬಾಣಂಭಟ್ಟನು ತನ್ನ ಹರ್ಷ ಚರಿತದಲ್ಲಿ ವಾಯುಪುರಾಣವನ್ನು ಉಲ್ಲೇಖಿಸಿದ್ದಾನೆಂಬುದು. ಇದರಂತೆ ಕೆಲವು ಭೂದಾನಗಳನ್ನು ಕೊರೆದಿಟ್ಟ ಶಿಲಾಶಾಸನಗಳಲ್ಲಿ ಪದ್ಮ ಭವಿಷ್ಯ ಹಾಗೂ ಬ್ರಹ್ಮ ಪುರಾಣದ ಪದ್ಯಗಳು ದೊರೆತಿರುವುದರಿಂದ ಆ ಶಿಲಾಶಾಸನಗಳ ಕಾಲವಾದ ನಾಲ್ಕನೆ ಶತಕಕ್ಕಿಂತ

ಈ ಪುರಾಣಗಳು ಪ್ರಾಚೀನ ಅಂದರೆ ಐದನೆಯ ಶತಮಾನಕ್ಕಿಂತ ಪೂರ್ವದವು ಎಂದು ಹೇಳಿ ಈ ಪುರಾಣಗಳ ಹಿಂದಿನ ಗಡುವನ್ನು ಅಂತಃಸಾಕ್ಷಿ ಹಾಗೂ ಬಹಿಸ್ಸಾಕ್ಷಿಗಳಿಂದ ಕ್ರಿ.ಪೂ. ಐದುನೂರು ವರ್ಷಗಳವರೆಗೆ ಎಳೆದಿದ್ದಾರೆ.

ಪರ್ಗಿಟರರೇ ಹೇಳುವಂತೆ ಕ್ರಿಸ್ತಪೂರ್ವ ನಾಲ್ಕನೇ ಶತಕದಲ್ಲಿ ರೂಪುಗೊಂಡ ಕೌಟಿಲ್ಯನ ಅರ್ಥಶಾಸ್ತ್ರದಲ್ಲಿಯೂ ಅಥರ್ವಣವೇದ, ಛಾಂದೋಗ್ಯೋಪನಿಷತ್, ಶತಪಥ ಬ್ರಾಹ್ಮಣ, ಸಾಂಖ್ಯಾಯನಶ್ರೌತಸೂತ್ರ, ಅಶ್ವಲಾಯನಸೂತ್ರ, ಆಪಸ್ತಂಬ ಧರ್ಮಸೂತ್ರ ಮುಂತಾದ ಅತ್ಯಂತ ಪ್ರಾಚೀನವಾದ ಗ್ರಂಥಗಳಲ್ಲಿಯೂ ಪುರಾಣಗಳ ಉಲ್ಲೇಖವು ಬಂದಿರುವುದರಿಂದ ಈ ಎಲ್ಲ ಹದಿನೆಂಟೂ ಪುರಾಣಗಳು ತಮ್ಮ ಮೂಲ ರೂಪದಲ್ಲಿ ಕ್ರಿಸ್ತಪೂರ್ವ ಮೂರು ಸಾವಿರ ವರ್ಷಗಳ ಹಿಂದೆಯೇ ಭಗವಾನ್ ಬಾದರಾಯಣರಿಂದ ರಚಿಸಲ್ಪಟ್ಟಿವೆ ಎಂದು ಒಪ್ಪುವದು ಯುಕ್ತಿಯುಕ್ತವೂ ಪ್ರಮಾಣ ಸಮ್ಮತವೂ ಸಂಪ್ರದಾಯಾನುಗುಣವೂ ಆಗಿದೆ. ಈ ವಿಷಯದಲ್ಲಿ ಇನ್ನೂ ಹೆಚ್ಚಿನ ಪ್ರಮಾಣ ಹಾಗೂ ಯುಕ್ತಿ ಉಕ್ತಿಗಳಿಂದ ಖಚಿತವಾದ ವಿಮರ್ಶಾಪೂರ್ವಕ ಸಿದ್ಧಾಂತ ನಿರ್ಣಯವನ್ನು ತಿಳಿಯ ಬಯಸುವವರು ನಾವು ಕನ್ನಡಿಸಿದ ವಿಷ್ಣು, ವರಾಹ, ವಾಮನ, ಮತ್ಸ್ಯಾದಿ ಪುರಾಣಗಳ ಮುನ್ನುಡಿಯನ್ನು ನೋಡಬೇಕು.

ಪ್ರಕೃತ ಪದ್ಮಪುರಾಣವು ಗಾತ್ರದಿಂದ ಬೃಹತ್ತರವೂ ವಿಷಯ ವೈಶಾಲ್ಯದಿಂದ ಮಹತ್ತರವೂ ಆದ ಶ್ರೇಷ್ಠ ಪುರಾಣವಾಗಿದೆ. ಇದರ ಗ್ರಂಥ ಸಂಖ್ಯೆ ಐವತ್ತೈದು ಸಾವಿರದಷ್ಟು ಐದು ಖಂಡಗಳು ಇದರಲ್ಲಿ ಇರುತ್ತವೆ. ಸೃಷ್ಟಿಖಂಡ, ಭೂಮಿಖಂಡ, ಸ್ವರ್ಗಖಂಡ, ಪಾತಾಳಖಂಡ, ಉತ್ತರಖಂಡ ಇದರಲ್ಲಿ ಮೊದಲನೆಯದಾದ ಸೃಷ್ಟಿಖಂಡದಲ್ಲಿ ಐದು ಪರ್ವಗಳಿರುತ್ತವೆ.

ಈ ಐದುಖಂಡಗಳನ್ನು ನಾಲ್ಕು ಭಾಗಗಳಲ್ಲಿ ಇತ್ತೀಚಿಗೆ ಅಂದರೆ ೨೦೦೫ನೇ ಇಸವಿಯಲ್ಲಿ ದ್ವಿತೀಯ ಮುದ್ರಣ ಮಾಡಿ ಪ್ರಕಟಿಸಿದ್ದೇವೆ. ಅದರಲ್ಲಿ ಪದ್ಮಮಹಾಪುರಾಣ ಭಾಗ-೧ ಸೃಷ್ಟಿಖಂಡ, ಪದ್ಮಮಹಾಪುರಾಣ ಭಾಗ-೨ರಲ್ಲಿ ಭೂಮಿಖಂಡ, ಸ್ವರ್ಗಖಂಡ, ಪಾತಾಳಖಂಡ, ಪದ್ಮಮಹಾಪುರಾಣ ಭಾಗ-೩ರಲ್ಲಿ ಉತ್ತರಖಂಡ ಶುರುವಾಗಿ ಪದ್ಮಮಹಾಪುರಾಣ ಭಾಗ-೪ರಲ್ಲಿ ಉತ್ತರಖಂಡ ಸಂಪೂರ್ಣವಾಗುವುದರೊಂದಿಗೆ ವೇದವ್ಯಾಸರಚಿತ ಬೃಹತ್ ಪದ್ಮಮಹಾಪುರಾಣ ಕನ್ನಡಾನುವಾದವು ಭಾಗ-೧, ಭಾಗ-೨, ಭಾಗ-೩, ಭಾಗ-೪ ಒಟ್ಟು ನಾಲ್ಕು ಭಾಗದಲ್ಲಿ ಸಂಪೂರ್ಣವಾಗಿ ಮುದ್ರಣಗೊಂಡಿದೆ. (ಈ ಹಿಂದೆ ಈ ಐದು ಖಂಡಗಳೂ ಒಟ್ಟು ಏಳು ಭಾಗದಲ್ಲಿ ಮುದ್ರಣವಾಗಿದ್ದು ಸರಿಯಷ್ಟೆ. ಈ ಹಿಂದೆ ಏಳು ಭಾಗದಲ್ಲಿ ಮುದ್ರಣವಾಗಿದ್ದನ್ನೇ, ಒಂದರಕ್ಷರವೂ ಬಿಡದಂತೆ ಯಥಾವತ್ತಾಗಿ ಕಂಪ್ಯೂಟರ್ ಅಕ್ಷರ ಜೋಡಣೆ ತಾಂತ್ರಿಕತೆ ಹಾಗೂ ಮುದ್ರಣಕಾರರಾದ ಶ್ರೀ ವೆಂಕಟೇಶ್ವರ ಪ್ರಿಂಟರ್ಸ್ ಮಾಲೀಕರಾದ ಚಿರಂಜೀವಿ ಕೆ.ವಿ. ಸತ್ಯನಾರಾಯಣರವರ ಶ್ರದ್ಧೆ ಹಾಗೂ ಅವರ ತಂದೆಯವರಿಂದ ಕಲಿತ ಮುದ್ರಣ ಕೌಶಲ್ಯದ ಅಪಾರ ಜ್ಞಾನ ಹಾಗೂ ಆಸಕ್ತಿಯಿಂದ ಬರೀ ನಾಲ್ಕು ಭಾಗಗಳಲ್ಲೇ ಮುದ್ರಣ ಪೂರ್ಣಗೊಳಿಸಲಾಗಿದೆ).

ಪಾದ್ಮಂ ತತ್ ಪಂಚಪಂಚಾಶತ್‌ಸಹಸ್ರಾಣೀಹ ಪಠ್ಯತೇ
ಪಂಚಭೀಃಪರ್ವಭಿಃಪ್ರೋಕ್ತಂ ಸಂಕ್ಷೇಪಾದ್ವ್ಯಾ ಸಕಾರಣಾತ್ ॥

ಪೌಷ್ಕರಂ ಪ್ರಥಮಂ ಪರ್ವಂ ಯತ್ರೋತ್ಪನ್ನಃ ಸ್ವಯಂ ವಿರಾಟ್
ದ್ವಿತೀಯಂ ತೀರ್ಥ ಪರ್ವಂತು ಸರ್ವಗ್ರಹಗಣಾಶ್ರಯಂ ॥

ತೃತೀಯ ಪರ್ವಗ್ರಹಣೇ ರಾಜಾಂತಾ ಭೂರಿದಕ್ಷಿಣಾಃ
ವಂಶಾನು ಚರಿತಂ ಚೈವ ಚತುರ್ಥೆ ಪರಿಕೀರ್ತಿತಂ
ಪಂಚಮೇ ಮೋಕ್ಷ ತತ್ವಂ ಚ ಸರ್ವಜ್ಞತ್ವಂ ನಿಗದ್ಯತೇ ॥

ಪೌಷ್ಕರಪರ್ವ, ತೀರ್ಥಪರ್ವ, ತೃತೀಯಪರ್ವ, ರಾಜವಂಶಪರ್ವ, ಮೋಕ್ಷಪರ್ವ ಎಂದು ಐದು ಪರ್ವಾತ್ಮಕವಾದ ವಿಭಾಗವನ್ನು ಸೃಷ್ಟಿಖಂಡದಲ್ಲಿ ಹೇಳಲಾಗಿದೆ. ಇಡೀ ಪದ್ಮಪುರಾಣವು ಐದು ಖಂಡಗಳಲ್ಲಿ ವಿಭಕ್ತವಾಗಿದೆ.

''ಪ್ರಥಮಂ ಸೃಷ್ಟಿಖಂಡಂಚ ದ್ವಿತೀಯಂ ಭೂಮಿ ಖಂಡಕಂ
ಪಾತಾಲಂ ಚ ತೃತೀಯಂ ಸ್ಯಾತ್ ಚತುರ್ಥಂ ಪುಷ್ಕರಂ ತಥಾ
ಉತ್ತರಂ ಪಂಚಮಂ ಪ್ರೋಕ್ತಂ ಖಂಡಾನ್ಯನುಕ್ರಮೇಣವೈ''

ಆ. ೧।೬೬-೬೮

ಸೃಷ್ಟಿಖಂಡ, ಭೂಮಿಖಂಡ, ಪಾತಾಳಖಂಡ, ಪುಷ್ಕರಖಂಡ, ಉತ್ತರಖಂಡ ಎಂದು ಐದು ವಿಧವಾಗಿಯೂ ವಿಭಾಗಿಸಿದ್ದಾರೆ.

ಮೊದಲನೆಯದಾದ ಸೃಷ್ಟಿಖಂಡದಲ್ಲಿ ಈ ಮೊದಲೇ ತಿಳಿಸಿದಂತೆ ಐದು ಪರ್ವಗಳಿವೆ. ಪುಷ್ಕರಪ್ರಾದುರ್ಭಾವ, ತೀರ್ಥಕ್ಷೇತ್ರಗಳ ವಿವರಣೆ, ರಾಜವಂಶ ವರ್ಣನೆ, ಸಮುದ್ರ ಮಥನ, ವಾಮನಾವತಾರ ಕಥೆ, ಮಾರ್ಕಂಡೇಯ ವೃತ್ತಾಂತ, ಸ್ಕಂದನ ಉತ್ಪತ್ತಿ, ಕ್ಷೇಮಂಕರೀ ಆಖ್ಯಾನ, ಪಾರ್ವತೀಪರಮೇಶ್ವರ ಆಖ್ಯಾನ, ರಾಮಚರಿತ್ರ, ತಾರಕಾಸುರನ ಸಂಹಾರ, ವ್ರತೋಪವಾಸ ಪ್ರಾಯಾಶ್ಚಿತ್ತಾದಿ ನಿರೂಪಣೆ ಮುಂತಾದ ಅನೇಕ ವಿಷಯಗಳು ಬಂದಿವೆ.

## ಭೂಮಿಖಂಡದಲ್ಲಿ

ಪಿತೃಭಕ್ತಿಯ ಮಹಿಮೆ, ಅದರಿಂದ ಶಿವಶರ್ಮಗೆ ಆದ ಸದ್ಗತಿ, ಪೃಥುರಾಜನ ಪಾವನ ಚರಿತ, ಸಾಧ್ವೀಶಿಖಾಮಣಿಯಾದ ಸುಕಲೆಯ ರೋಮಹರ್ಷಣ ವೃತ್ತಾಂತ, ಯಯಾತಿ ನಹುಷಮಹಾರಾಜರವೃತ್ತಾಂತ, ಮಾತಲಿಯ ಚರಿತ್ರ, ಆಧ್ಯಾತ್ಮ ವಿಚಾರ, ಸುಕನ್ಯಾಚ್ಯವನರ ಚರಿತ್ರ, ಅಶೋಕ ಸುಂದರಿಯ ಕಥೆ, ಹುಂಡವಧ ಚ್ಯವನ ಕುಂಡಲ ಸಂವಾದ, ಕಾಮೋದಾಖ್ಯಾನ, ವಿಹುಂಡವಧ, ಸಿದ್ಧಖ್ಯಾನ ಮುಂತಾದ ವಿಷಯಗಳನ್ನು ಬಿತ್ತರಿಸಲಾಗಿದೆ.

## ಸ್ವರ್ಗಖಂಡದಲ್ಲಿ

ಬ್ರಹ್ಮಾಂಡದ ಉತ್ಪತ್ತಿ, ಭೂಮಿ, ಪಾತಾಲ, ಸ್ವರ್ಗಾದಿ ಸಪ್ತಲೋಕಗಳ ನಿಲುವು, ತೀರ್ಥಕ್ಷೇತ್ರಗಳ ವರ್ಣನೆ, ನರ್ಮದಾ ನದಿಯ ಉತ್ಪತ್ತಿ, ಕುರುಕ್ಷೇತ್ರಾದಿ ತೀರ್ಥ ವರ್ಣನೆ, ಯಮುನೆಯ ವೃತ್ತಾಂತ, ಕಾಶೀಮಹಾತ್ಮ್ಯ, ಗಯಾಪ್ರಯಾಗಾದಿ ಮಹಿಮೆ,

ವರ್ಣಾಶ್ರಮ ಧರ್ಮ, ವ್ಯಾಸಜೈಮಿನಿ ಸಂವಾದ, ವ್ರತ ಪುಣ್ಯಕರ್ಮಾದಿ ನಿರೂಪಣ, ಶಾಕುಂತಲೋಪಾಖ್ಯಾನ ಮುಂತಾಗಿ ಅನೇಕ ವಿಷಯಗಳನ್ನು ನಿರೂಪಿಸಲಾಗಿದೆ.

## ಪಾತಾಲಖಂಡದಲ್ಲಿ

ಶ್ರೀರಾಮಚಂದ್ರನ ಪಟ್ಟಾಭಿಷೇಕ, ರಾಮನು ಗೈದ ಅಶ್ವಮೇಧ ವಿಧಾನೋಪದೇಶ, ರಾಜರ ಚರಿತ್ರ, ಜಗನ್ನಾಥಪುರಿಯ ಮಹಿಮೆ, ವೃಂದಾವನಾದಿ ಕ್ಷೇತ್ರ ಮಹಿಮೆ, ವೈಶಾಖಸ್ನಾನ, ದಾನ ಪೂಜೆಗಳ ಫಲ, ಭೂದೇವಿ ವರಾಹ ಸಂವಾದ, ಯಮ ಬ್ರಾಹ್ಮಣರ ಕಥೆ, ದಧೀಚಿಯ ಕಥೆ, ಮಹಾದೇವರ ಮಹಿಮೆ, ನಾಗಲೋಕ ವರ್ಣನೆ, ಗೌತಮಾಖ್ಯಾನ, ಶಿವಗೀತಾ ಮುಂತಾದ ಅನೇಕ ವಿಷಯಗಳು ಬಂದಿವೆ.

## ಉತ್ತರ ಖಂಡದಲ್ಲಿ

ಪರ್ವತಾಖ್ಯಾನ, ಜಾಲಂಧರನ ಕಥೆ, ಶ್ರೀ ಶೈಲಾದಿಕ್ಷೇತ್ರ, ಸಮುದ್ರ, ಗಂಗಾ ಪ್ರಯಾಗ, ಕಾಶಿ, ಗಯಾ ಮುಂತಾದ ತೀರ್ಥಕ್ಷೇತ್ರಗಳ ಬಣ್ಣನೆ, ಇಪ್ಪತ್ತುನಾಲ್ಕು ಏಕಾದಶೀ ವ್ರತಗಳ ಮಹಿಮಾನು ವರ್ಣನೆ, ವಿಷ್ಣುಧರ್ಮ, ವಿಷ್ಣು ಸಹಸ್ರನಾಮ ಕಾರ್ತಿಕ ವ್ರತ, ಮಾಘಸ್ನಾನ, ನರಸಿಂಹವೃತ್ತಾಂತ, ವಿಷ್ಣು ಮತ್ತು ಶಿವರ ಪೂಜಾದಿಗಳು, ವಿಷ್ಣು ಮತ್ತು ರಾಮಸಹಸ್ರನಾಮಗಳಂತಹ ಸಹಸ್ರನಾಮಗಳ ಮಹಿಮೆ ಕರ್ಮ ಮತ್ತು ಅದರ ಫಲ ದೇವಶರ್ಮಾಖ್ಯಾನ, ಗೀತಾ ಮಹಾತ್ಮ್ಯ, ಭಾಗವತ ಮಹಾತ್ಮ್ಯ, ಮಂತ್ರರತ್ನಾಭಿಧಾನ, ಮತ್ಸ್ಯಾದಿ ದಶಾವತಾರ ಕಥಾ, ರಾಮನಾಮ ಮಹಾತ್ಮ್ಯ, ಭೃಗುಕೃತ ವಿಷ್ಣು ವೈಭವ ಪರೀಕ್ಷಾ ಮುಂತಾಗಿ ಅನೇಕ ವಿಷಯ ವಿಶೇಷಗಳು ಪ್ರತಿಪಾದಿತವಾಗಿವೆ.

ಮುಖ್ಯವಾಗಿ ಈ ಪದ್ಮ ಪುರಾಣವು ವೈಷ್ಣವ ಪುರಾಣವಾಗಿದೆ. ಇದರ ಬಹು ಭಾಗವು ಶ್ರೀ ವಿಷ್ಣುವಿನ ಪರಮೋತ್ಕರ್ಷವನ್ನು ಅನೇಕ ಆಖ್ಯಾನ ಉಪಾಖ್ಯಾನ ಸಂವಾದ ಉಪದೇಶ ಮುಂತಾದವುಗಳಿಂದ ಪ್ರತಿಪಾದಿಸಲಿಕ್ಕಾಗಿಯೇ ಹೊರಟಿದೆ. ಆದರೆ ಇದರಲ್ಲಿ ಇತರ ದೇವತಾ ನಿಂದೆ, ತಿರಸ್ಕಾರ. ಧ್ವನಿ ಕೇಳಬರುವುದಿಲ್ಲ ಅನೇಕ ಸಂದರ್ಭದಲ್ಲಿ ಮಹಾದೇವರ ಹಾಗು ಬ್ರಹ್ಮದೇವರ ಮಹಾ ಮಹಿಮೆಗಳೂ ಚೆನ್ನಾಗಿಯೇ ಪ್ರತಿಪಾದಿಸಲ್ಪಟ್ಟಿವೆ. ಅನೇಕ ಸಂದರ್ಭಗಳಲ್ಲಿ ಸ್ಪಷ್ಟ ವಚನಗಳಿಂದ ಒಬ್ಬನೇ ಪರಮಾತ್ಮನು. ಬ್ರಹ್ಮ, ಶಿವ, ಹರಿ ರೂಪಿಯಾಗಿ ಅವರವರಲ್ಲಿ ನಿಂತು ಸೃಷ್ಟಿ ಸ್ಥಿತಿ ಸಂಹಾರಾದಿ ಕಾರ್ಯಗಳನ್ನು ಮಾಡುವನೆಂದು ಹೇಳಲಾಗಿದೆ.

ಈ ಪದ್ಮ ಪುರಾಣದ ಶೈಲಿ, ರಚನೆ, ಪಾತ್ರಸೃಷ್ಟಿ, ಧರ್ಮದೃಷ್ಟಿ, ರಸಪುಷ್ಟಿಗಳ ಬಗೆಗೆ ಬಹಳಷ್ಟು ಹೇಳಲಿಕ್ಕಿದ್ದರೂ ಈಗಾಗಲೇ ಈ ಪೂರ್ವಪೀಠಿಕೆಯು ಪರ್ಯಾಪ್ತ ಮಾತ್ರೆಯಲ್ಲಿ ಅತಿಲಂಬಿಸಿರುವುದರಿಂದ ಅದೆಲ್ಲವನ್ನು ಈ ಪದ್ಮಪುರಾಣದ ಮುಂದಿನ ಭಾಗದಲ್ಲಿ ನಿರೂಪಿಸಲಾಗಿದೆ.

ಮಹಾಮಹೋಪಾಧ್ಯಾಯ
ಹುಬ್ಬಳ್ಳಿ ಪಂ. ಪಂಢರೀನಾಥಾಚಾರ್ಯಗಲಗಲಿ
ದಿನಾಂಕ 3 – 11 – 2005 ಶಾಂತಿ ಕಾಲೋನಿ, ವಿಶ್ವೇಶ್ವರನಗರ, ಹುಬ್ಬಳ್ಳಿ – 580 032

# ಪುರಾಣ ಪ್ರಜ್ಞೆ

ಭಾರತೀಯ ಸಂಸ್ಕೃತಿಯ ಸಂಕೇತವಾಗಿ ಇಂದಿಗೂ ಅಳಿಯದೆ ಉಳಿದಿರುವ ಪ್ರಾಚೀನ ಸಂಸ್ಕೃತ ಗ್ರಂಥಗಳಲ್ಲಿ ಪುರಾಣಗಳಿಗೆ ಪ್ರಧಾನ್ಯವಿದೆ. ಭಾರತೀಯ ಸಂಸ್ಕೃತಿ ಬೆಳೆದು ಮಹಾವಟವೃಕ್ಷವಾಗಿ ನೆರಳು ನೀಡುತ್ತಿರುವ ಕಥೆ ಈ ಪುರಾಣಗಳಿಂದ ಚೆನ್ನಾಗಿ ತಿಳಿದುಬರುತ್ತದೆ. ಭಾರತೀಯರ ಜನಜೀವನದ ಪ್ರತಿಬಿಂಬವೇ ಈ ಪುರಾಣಗಳು.

ವೇದಗಳನ್ನು ಬಿಟ್ಟರೆ ಪುರಾಣಗಳಿಗೆ ಹೆಚ್ಚು ಮಹತ್ವ. ಇದಕ್ಕೆ 'ಪಂಚಮವೇದ' ಎಂದೂ ಕರೆಯುತ್ತಾರೆ. ಶ್ರುತಿ, ಸ್ಮೃತಿ ಮತ್ತು ಇತಿಹಾಸಗಳಿಗೆ ಧರ್ಮಾದಿ ವಿಷಯಗಳ ವರ್ಣನೆ ಮತ್ತು ನಿರೂಪಣೆಯಲ್ಲಿ ಸಮಸಮವಾಗಿ ತೂಗುವ, ಸತ್ಯ, ತತ್ವ ಮತ್ತು ಮಹತ್ವವೇನೆ ಇದ್ದರೂ ಆರು ಪುರಾಣಗಳಿಂದ ಬರುತ್ತದೆ.

ಅಮರಸಿಂಹನ ನಾಮಲಿಂಗನುಶಾಸನದಲ್ಲಿ ಪುರಾಣದಲ್ಲಿರುವುದನ್ನು ಈ ರೀತಿ ಹೇಳುತ್ತಾರೆ.

**''ಆಖ್ಯಾಯಿಕೋಪಲಬ್ದಾರ್ಥಾಪುರಾಣ ಪಂಚಲಕ್ಷಣಂ,**
**ಸ್ವರ್ಗಶ್ಚ ಪ್ರತಿಸ್ವರ್ಗಶ್ಚ ವಂಶೋಮನ್ವಂತರಾಶಿ ಚ**
**ವಂಶಾನುಚರಿತಂ ಚೈವ ಪುರಾಣಂ ಪ್ರಂಚಲಿಪುಣಂ''**

ಒಟ್ಟು ಹದಿನೆಂಟು ಪುರಾಣಗಳು, ಬ್ರಹ್ಮ, ಪದ್ಮ, ವಿಷ್ಣು, ವಾಯು, ಭಾಗವತ, ನಾರದ, ಮಾರ್ಕಂಡೇಯ, ಅಗ್ನಿ, ಭವಿಷ್ಯ, ಬ್ರಹ್ಮವೈವರ್ತ, ವರಾಹ, ಲಿಂಗ, ಸ್ಕಂದ, ವಾಮನ, ಕೂರ್ಮ, ಮತ್ಸ್ಯ, ಗರುಡ, ಬ್ರಹ್ಮಾಂಡ ಇವುಗಳು ನಾಲ್ಕು ಲಿಪಿ ಶ್ಲೋಕಗಳಲ್ಲಿ ಬಂದಿವೆ.

ಪ್ರಸ್ತುತ ಪಂಡಿತ ಪಂಢರೀನಾಥಾಚಾರ್ಯ ಗಲಗಲಿಯವರು ಬಹುಶ್ರಮದಿಂದ ಈ ಪುರಾಣಗಳನ್ನು ಲೇಖಾನುವಾದ ಮಾಡಿದ್ದಾರೆ. ಭಾರತದೇಶದ, ವಿಶೇಷವಾಗಿ ಕರ್ನಾಟಕದ ಜನತೆಯ ಮನೆ-ಮನದಲ್ಲಿ ಅವರು ಪ್ರಾಥಸ್ಮರಣೀಯರು.

ಆದ್ದರಿಂದ ಈ ಎಲ್ಲಾ ಹದಿನೆಂಟುಪುರಾಣಗಳನ್ನು ಪಠಿಸಿ, ಕೇಳಿ, ಮನನ ಮಾಡಿಕೊಂಡು ಬಾಳನ್ನು ಸಾರ್ಥಕಗೊಳಿಸಿಕೊಳ್ಳೋಣ. ಹಾಗೆಯೇ. ''ಅಬ್ಧಿಗೆ ಅತಿ ಮಿತಿಯುಂಟು, ಆದರೆ ಬುದ್ಧಿಗೆ ಮಿತಿಯಿಲ್ಲ.'' ಆದ್ದರಿಂದ ಪ್ರಜ್ಞರು, ಬಲ್ಲವರು ಈ ಪುರಾಣಗಳಲ್ಲಿ ಬರುವ, ವಸ್ತು, ಪಾತ್ರ, ಶೈಲಿ, ನಿರೂಪಣೆ ಮತ್ತು ಭಾಷೆಯ ಬಗ್ಗೆ ತಮ್ಮ ಅಭಿಪ್ರಾಯ ಮತ್ತು ಲೋಪದೋಷ, ಜಿಜ್ಞಾಸೆಗಳೇನಾದರೂ ಕಂಡು ಬಂದಲ್ಲಿ ಅದನ್ನು ತಮ್ಮ ಪ್ರತಿಯಲ್ಲಿ ತಿದ್ದಿ ತಿಳಿಸಿದರೆ ಅದರಬದಲು ತಮ್ಮಗೆ ಮತ್ತೊಂದು ಶುದ್ಧಪ್ರತಿಯನ್ನು ನೀಡಲಾಗುವುದು. ಹಾಗೂ ತಾವು ತೋರಿಸಿದ ಲೋಪ- ದೋಷಗಳನ್ನು ಪರಿಷ್ಕರಿಸಿ ದ್ವಿತೀಯ ಮುದ್ರಣದಲ್ಲಿ ಅಳವಡಿಸಿಕೊಳ್ಳಲು ಸಂಪಾದಕ ವರ್ಗವು ಸದಾ ಸಿದ್ಧವಿದೆ. ದ್ವಿತೀಯಮುದ್ರಣದ ನಂತರ ತಮಗೆ ಉಡುಗೊರೆಯ ಜೊತೆ ನೂತನ ಪರಿಷ್ಕರಿಸಿದ ಪ್ರತಿಯನ್ನೂ ಸಹ ನೀಡಲಾಗುವುದು. ತಮ್ಮ ಅಭಿಪ್ರಾಯವನ್ನು ಅತ್ಯಂತ ಆದರದಿಂದ ಸ್ವಾಗತಿಸುತ್ತೇವೆ. ದಯವಿಟ್ಟು ಈ ಅನಂತಸಾಗರ ಪುರಾಣಪ್ರಜ್ಞಾ ಕೈಂಕರ್ಯದಲ್ಲಿ ತಮ್ಮ ಪಾಂಡಿತ್ಯವನ್ನು ವಿನಿಯೋಗಿಸಿ. ಹಾಗೂ ದ್ವಿತೀಯ ಮುದ್ರಣವು ಇನ್ನೂ ಉತ್ತಮವಾಗಿ ಹೊರತರಲು ತಮ್ಮೆಲ್ಲರ ಸಹಕಾರ ಅಗತ್ಯ.

# ಕೃತಜ್ಞತಾ ಸಮರ್ಪಣೆ

ಸಂಸ್ಕೃತದಲ್ಲಿ ಒಂದು ಸುಭಾಷಿತವಿದೆ.

**ಶತೇಷು ಜಾಯತೇ ಶೂರಃ ಸಹಸ್ರೇಷು ಚ ಪಂಡಿತಃ ।**
**ವಕ್ತಾ ದಶಸಹಸ್ರೇಷು ದಾತಾ ಭವತಿ ವಾ ನ ವಾ ॥**

ನೂರು ಜನರಲ್ಲಿ ಒಬ್ಬನು ಶೂರನಿರುತ್ತಾನೆ. ಸಾವಿರ ಜನರಲ್ಲಿ ಒಬ್ಬನು ಪಂಡಿತನಿರುತ್ತಾನೆ. ಹತ್ತುಸಾವಿರ ಜನರಲ್ಲಿ ಒಬ್ಬನು ವಾಕ್ ಚತುರನಿರುತ್ತಾನೆ. ಆದರೆ ಕೊಡುಗೈ ದಾನಿಯು ಎಲ್ಲಿಯಾದರೂ ಇರುವನೋ ಅಥವಾ ಇಲ್ಲವೋ!

ಈ ಸುಭಾಷಿತಕಾರನ ಸಂದೇಹಕ್ಕೆ ಸಮಂಜಸ ಉತ್ತರವೆಂದರೆ ಬೆಂಗಳೂರಿನ ಸುಪ್ರಸಿದ್ಧ ಉದ್ಯಮಿಗಳಾದ ಹಾಗೂ ಸ್ವತಃ ಕವಿ ಪಂಡಿತರಾದ ಶ್ರೀಹರಿಖೋಡೆಯವರು. ಹತ್ತುಸಾವಿರ ಸಿರಿವಂತರಲ್ಲಿ ಒಬ್ಬರಿಗೂ ಇರದಿರುವ ವಾಕ್‌ಚಾತುರ್ಯ, ಕವಿತ್ವಕೌಶಲ್ಯ ಇವರ ಸೊತ್ತಾಗಿದೆ. ಇವರು ಒಂದು ಗಾಯತ್ರೀ ಹೋಮ ಮಾಡಿಸಿದರೆ ಅದೊಂದು ಅಭೂತ ಪೂರ್ವವಾದ '**ನ ಭೂತೋ ನ ಭವಿಷ್ಯತಿ**' ಎನ್ನುವಂಥ ಮಹಾಕಾರ್ಯವಾಗಿತ್ತು. ಅದರ ವೈಭವ ಪೂರ್ಣವಾದ ಆಚರಣೆಯ ನೆನಪು ಬೆಂಗಳೂರು ನಾಗರಿಕರಲ್ಲಿ ಹಚ್ಚಹಸಿರಾಗಿಯೇ ಇದೆ.

ಮುಖ್ಯವಾಗಿ ವಿಷ್ಣು, ವರಾಹ, ಕೂರ್ಮಪುರಾಣವೇ ಮೊದಲಾದ ಶ್ರೀ ವೇದವ್ಯಾಸ ರಚಿತ ಹದಿನೆಂಟೂ ಪುರಾಣಗಳ ಕನ್ನಡ ಅನುವಾದ ಗ್ರಂಥಗಳ ಪ್ರಕಾಶನದ ಬಹುದೊಡ್ಡ ಭಾರವನ್ನು, ಕೂರ್ಮರೂಪಿ ಶ್ರೀಹರಿಯು ತನ್ನ ಬೆನ್ನಮೇಲೆ ಮಂದಾರಪರ್ವತವನ್ನು ಹೊತ್ತಂತೆ, ಶ್ರೀಹರಿಯವರೂ ಹೊತ್ತಿದ್ದಾರೆ. ನನ್ನ ಮೇಲಿನ ಭಾರವನ್ನು ಕಡಿಮೆ ಮಾಡಿ ನಾನು ನಿರಂತರ ಪುರಾಣಗ್ರಂಥಗಳ ಸಂಶೋಧನೆ ಪರಿಶೀಲನೆ ಅನುವಾದನ ಮುದ್ರಣಾದಿ ಕಾರ್ಯಗಳನ್ನು ನಿಶ್ಚಿಂತೆಯಿಂದ ಮಾಡಲು ಸರ್ವವಿಧ ಸೌಲಭ್ಯ ಸೌಕರ್ಯಗಳನ್ನು ಒದಗಿಸಿಕೊಡುತ್ತಿದ್ದಾರೆ.

ಶ್ರೀಹರಿಖೋಡೆಯವರ ಇನ್ನೊಂದು ಅಪೂರ್ವವಾದ ವೈಶಿಷ್ಟ್ಯ, ಅವರೊಬ್ಬ ಶ್ರೀಹರಿಯ ಪರಮಭಕ್ತರು, ಮಹಾಕವಿಗಳು. ದೇವರ ಮೇಲೆ ಅವರು ಭಾವಪೂರ್ಣವಾದ ಅನೇಕ ಹಾಡುಗಳನ್ನು, ಸುಶ್ರಾವ್ಯವಾದ ಕಾವ್ಯಗಳನ್ನೂ ಸ್ವಂತ ರಚಿಸಿದ್ದಾರೆ. ಶ್ರೀಹರಿಯ ಅಂಕಿತದಿಂದ ಅಲಂಕೃತವಾದ ಈ ಪದ್ಯಗಳು ಪುರಂದರದಾಸ, ಕನಕದಾಸ, ಜಗನ್ನಾಥದಾಸ ರಂಥ ದಾಸಕೂಟ ಧುರೀಣರ ಭಕ್ತಿಪರ ಹಾಡುಗಬ್ಬಗಳ ಹೆದ್ದಾರಿಯಲ್ಲಿ ಇರಿಸಿದ ಹೆಜ್ಜೆನಿನ ಹೆಜ್ಜೆಗಳಾಗಿವೆ. ಅನುಭವಿ ಸಂತ ಶರೀಫಸಾಹೇಬರ ಪ್ರಭಾವಲಯದ ಪ್ರಭಾವಿ ಪರಿಧಿಯಲ್ಲಿ ಚಂಕ್ರಮಣ-ಸಂಕ್ರಮಣ ಗೈಯುವ ಶ್ರೀಹರಿಖೋಡೆಯವರ ಆಡುನುಡಿಯ ತಾಳಲಯ ಬದ್ಧವಾದ ಹಾಡುಗಳು ಕೇಳುಗರ ಹೃದಯನಾಡಿಗಳನ್ನು ಮಿಡಿಯುತ್ತವೆ.

ಸ್ವತಃ ಸಿವಿಲ್ ಇಂಜಿನಿಯರಿಂಗ್ ವ್ಯಾಸಂಗಮಾಡಿರುವ ಶ್ರೀಹರಿಖೋಡೆಯವರೇ ಬೆಂಗಳೂರಿನಲ್ಲಿ ಅತ್ಯಾಧುನಿಕ ಕಂಪ್ಯೂಟರ್ ಭವನವನ್ನು ನಿರ್ಮಿಸಿದ್ದಾರೆ. ಪಾಶ್ಚಾತ್ಯ ದೇಶಗಳಲ್ಲಿನ ಕಂಪ್ಯೂಟರ್ ಭವನಗಳಿಗೆ ಸ್ವತಃ ಭೇಟಿ ಮಾಡಿ, ಆ ಎಲ್ಲಾ ಭವನಗಳ ವಿನ್ಯಾಸ ದಲ್ಲಿನ ನ್ಯೂನತೆಗಳನ್ನು ಪರಿಶೀಲಿಸಿ, ಮನಗಂಡು ಹಾಗೂ ಅನುಕೂಲತೆಗಳನ್ನು ಮೆಚ್ಚಿ ಆಯಾ ಕಂಪ್ಯೂಟರ್ ಭವನಗಳ ಪಾಶ್ಚಾತ್ಯ ವಿನ್ಯಾಸಕರಲ್ಲಿ ಕೂಲಂಕುಷವಾಗಿ ಚರ್ಚಿಸಿ,

ಶ್ರೀಹರಿಖೋಡೆಯವರೇ ವಿನ್ಯಾಸಮಾಡಿರುವ ಹಾಗೂ ತಾವೇ ಖುದ್ದು ನಿಂತು ಕಟ್ಟಿಸಿರುವ ಖೋಡೇ ಕಾಂಟ್ಯಾಕ್ಟ್ ಸೆಂಟರ್ ಎಂಬ ಕಂಪ್ಯೂಟರ್ ಭವನದಲ್ಲಿ ಒಂದು ಸಾವಿರ ಕಂಪ್ಯೂಟರ್ ಇಂಜಿನಿಯರುಗಳು, ವಿಜ್ಞಾನಿಗಳು ಅಹೋರಾತ್ರಿ ಕೆಲಸ ಮಾಡುತ್ತಿದ್ದಾರೆ. ಅದಕ್ಕಾಗಿ ನಮ್ಮ ಹಾಗೂ ಅವರ ಕುಲಸ್ವಾಮಿಯಾದ ಶ್ರೀ ಪಾಂಡುರಂಗ ವಿಠಲದೇವರು ಅವರಿಗೂ, ಅವರ ಕುಟುಂಬ ಪರಿವಾರಕ್ಕೂ ಆಯುಷ್ಯ, ಆರೋಗ್ಯ, ಐಶ್ವರ್ಯ, ವಿಜಯ ವೀರ್ಯ ಸೌಭಾಗ್ಯಗಳನ್ನು ದಯಪಾಲಿಸಿ ಉತ್ತರೋತ್ತರ ಉತ್ಕರ್ಷವನ್ನೂ ಶ್ರೆಯಸ್ಸನ್ನೂ ಕೊಟ್ಟು ಕರುಣೆಯಿಂದ ಕಾಪಾಡಲಿ ಎಂದು ಪ್ರಾರ್ಥಿಸುತ್ತೇನೆ.

ಈ ಪದ್ಮಪುರಾಣ ಗ್ರಂಥದ ಮುದ್ರಣವನ್ನು ಅತ್ಯಂತ ಶ್ರದ್ಧೆಯಿಂದ ಬಹಳ ಅಚ್ಚುಕಟ್ಟಾಗಿ ಮಾಡಿರುವ **ಶ್ರೀ ವೆಂಕಟೇಶ್ವರ ಪ್ರಿಂಟರ್ಸ್**, 3, ಯಲ್ಲಪ್ಪರಸ್ತೆ, ಚಿಕ್ಕಮಾವಳ್ಳಿ, ಸುಶೀಲ ರಸ್ತೆ, ಬೆಂಗಳೂರು-4 ಇದರ ಮಾಲೀಕರಾದ **ಮುದ್ರಣಪ್ರಶಸ್ತಿ ವಿಜೇತ ಕೆ. ವಿ. ಸತ್ಯನಾರಾಯಣ ಮತ್ತು** ಕುಟುಂಬದವರಿಗೆ ಹಾಗೂ ಶ್ರೀಮತಿ ಮತ್ತು ಶ್ರೀ ಎಂ. ಮಂಜುನಾಥ್‌ರವರಿಗೆ ಶ್ರೀ ಲಕ್ಷ್ಮೀವೆಂಕಟೇಶ್ವರ ಸ್ವಾಮಿಯು ಸಕಲ ಸನ್ಮಂಗಳವನ್ನು ದಯಪಾಲಿಸಲಿ. ಮುದ್ರಣ ಕಾರ್ಯದಲ್ಲಿನ ಅವರ ಮೂವತ್ತೆಂಟು ವರ್ಷದ ಅನುಭವ ಇಲ್ಲಿ ವ್ಯಕ್ತವಾಗಿದೆ. ಈ ಹಿಂದೆ ಅಕ್ಷರಜೋಡಣೆ ವಿಧಾನದಿಂದ ಮುದ್ರಣಗೊಂಡ ಐದು ಖಂಡಗಳನ್ನೊಳಗೊಂಡ (ಸೃಷ್ಟಿಖಂಡ, ಭೂಮಿಖಂಡ, ಸ್ವರ್ಗಖಂಡ, ಪಾತಾಳಖಂಡ, ಉತ್ತರಖಂಡ) ಏಳು ಸಂಪುಟಗಳನ್ನೂ ಯಥಾವತ್ತಾಗಿ ಒಂದಕ್ಷರವೂ ಬಿಡದೆ ಕಂಪ್ಯೂಟರ್ ಅಕ್ಷರ ಜೋಡಣೆ ತಾಂತ್ರಿಕತೆ ಹಾಗೂ ಅವರ ತಂದೆಯವರಿಂದ ಕಲಿತ ಮುದ್ರಣ ಕೌಶಲ್ಯದ ಅಪಾರ ಜ್ಞಾನ, ಆಸಕ್ತಿಯಿಂದ ನಾಲ್ಕು ಸಂಪುಟಗಳಲ್ಲೇ ಈ ಪದ್ಮಮಹಾಪುರಾಣವನ್ನು ಪೂರ್ಣಗೊಳಿಸಿದ್ದಾರೆ. ರಕ್ಷಾಪುಟ ವಿನ್ಯಾಸವನ್ನು ಕಲಾವಿದರಾದ ಶ್ರೀ ಎಂ. ಮೋಹನ್, ತ್ಯಾಗರಾಜನಗರ, ಬೆಂಗಳೂರು ರವರು ಬಹಳ ಶ್ರದ್ಧೆಯಿಂದ ಅಚ್ಚುಕಟ್ಟಾಗಿ ಬರೆದಿದ್ದಾರೆ. ಶ್ರೀ ಪಾಂಡುರಂಗ ವಿಠಲದೇವರು ಅವರಿಗೂ, ಅವರ ಕುಟುಂಬ ಪರಿವಾರಕ್ಕೂ ಆರೋಗ್ಯ ಸೌಭಾಗ್ಯಗಳನ್ನು ದಯಪಾಲಿಸಿ ಕರುಣೆಯಿಂದ ಕಾಪಾಡಲಿ ಎಂದು ಆಶಿಸುತ್ತೇನೆ.

ಮುಖ್ಯವಾಗಿ ನನ್ನನ್ನು ಕೈಗಾರಿಕೋದ್ಯಮಿ ಎಲ್. ಶ್ರೀಹರಿಖೋಡೆಯವರಿಗೆ ಪರಿಚಯಿಸಿ, ಅವರಿಗೆ ಈ ಕಾರ್ಯದ ಮಹತ್ವ, ಅವಶ್ಯಕತೆಗಳನ್ನು ತಿಳಿಸಿ ಅವರಿಂದ ಪುರಾಣ ಪ್ರಕಾಶನಕ್ಕೆ ಪರ್ಯಾಪ್ತವಾದ ಸಹಾಯಧಾರೆ ಹರಿದುಬರುವಂತೆ ಮಾಡಿದ ಶ್ರೀ ಅನಂತರಾವ್ ಮತ್ತು ಕುಟುಂಬದವರಿಗೂ ನಾನು ಆಭಾರಿಯಾಗಿದ್ದೇನೆ. ಈ ಗ್ರಂಥ ಪಠಿಸುವವರಿಗೆಲ್ಲಾ ಶ್ರೀಹರಿಯು ಸಕಲ ಸನ್ಮಂಗಳವನ್ನು ದಯಪಾಲಿಸಲಿ ಎಂದು ಆಶಿಸುತ್ತೇನೆ.

ಮಹಾಮಹೋಪಾಧ್ಯಾಯ
**ಪಂ. ಪಂಢರೀನಾಥಾಚಾರ್ಯಗಲಗಲಿ**
ಶಾಂತಿ ಕಾಲೋನಿ, ವಿಶ್ವೇಶ್ವರನಗರ, ಹುಬ್ಬಳ್ಳಿ – 580 032

ಹುಬ್ಬಳ್ಳಿ
ದಿನಾಂಕ 3 – 11 – 2005

# ಪದ್ಮ ಪುರಾಣ ಭಾಗ - ೨

## ಭೂಮಿಖಂಡ, ಸ್ವರ್ಗಖಂಡ, ಬ್ರಹ್ಮಖಂಡ, ಪಾತಾಳಖಂಡ

## ವಿಷಯಾನುಕ್ರಮಣಿಕೆ

ಅಧ್ಯಾಯ **ಭೂಮಿಖಂಡ** ಪುಟಸಂಖ್ಯೆ

ಅಧ್ಯಾಯ **ಸ್ವರ್ಗಖಂಡ** ಪುಟಸಂಖ್ಯೆ

| ಅಧ್ಯಾಯ | ಬ್ರಹ್ಮಖಂಡ | ಪುಟಸಂಖ್ಯೆ |
|---|---|---|

| ಅಧ್ಯಾಯ | ಪಾತಾಳ ಖಂಡ | ಪುಟಸಂಖ್ಯೆ |
|---|---|---|

—o—

ಮಹರ್ಷಿ ವೇದವ್ಯಾಸ ಪ್ರಣೀತ

# ಪದ್ಮಮಹಾಪುರಾಣ ಭಾಗ - ೨

## ಭೂಮಿಖಂಡ



### ಅಧ್ಯಾಯ - ೧

ಋಷಿಃ ಊಚುಃ

ಶೃಣು ಸೂತ ಮಹಾಭಾಗ ಸರ್ವತತ್ವಾರ್ಥಕೋವಿದ ।
ಸಂದೇಹಮಾಗತಂ ವಿದ್ವನ್ ದಾರುಣಂ ಬುದ್ಧಿನಾಶನಂ
ಕೇಚಿತ್ ಪಠಂತಿ ಪ್ರಹ್ಲಾದಂ ಪುರಾಣೇಷು ದ್ವಿಜೋತ್ತಮಾಃ ।
ಪಂಚವರ್ಷಾನ್ವಿತೇನಾಪಿ ಕೇಶವಃ ಪರಿತೋಷಿತಃ ॥
ದೇವಾಸುರೇ ಕಥಂ ಪ್ರಾಪ್ತೇ ಹರಿಣಾ ಸಹಯುಧ್ಯತಿ ।
ನಿಹತೋ ವಾಸುದೇವೇನ ಪ್ರವಿಷ್ಟೋ ವೈಷ್ಣವೀಂ ತನುಂ ॥

**ಋಷಿಗಳು** :- ಮಹಾನುಭಾವನಾದ ಸೂತನೆ, ಒಂದು ದೊಡ್ಡ ಸಂಶಯ ನಮ್ಮನ್ನು ಕಾಡುತ್ತಿದೆ. ಕೆಲವು ಪುರಾಣಗಳಲ್ಲಿ ಹೇಳುವಂತೆ ಪ್ರಹ್ಲಾದನು ಐದು ವರುಷದ ಹಸುಳೆಯಾಗಿದ್ದಾಗಲೆ ಹರಿಯನ್ನೊಲಿಸಿಕೊಂಡಿರುವುದಾದರೆ ದೇವಾಸುರಯುದ್ಧದಲ್ಲಿ ಅವನು ಹರಿಯೊಡನೆ ಕಾದಿ, ಮಡಿದು ಹರಿಯ ಶರೀರವನ್ನೇ ಪ್ರವೇಶಿಸಿದನೆಂಬುದು ಹೇಗೆ ಸಾಧ್ಯವಾಯಿತು ?

**ಸೂತ** :- ವಿಪ್ರರೆ, ಈ ಸಂಶಯಕ್ಕೆ ಸಮಾಧಾನವನ್ನು ಹಿಂದೆಯೇ ಬ್ರಹ್ಮನು ವೇದವ್ಯಾಸರಿಗೆ ಹೇಳಿರುವನು. ಅದನ್ನು ನಿಮಗೆ ಸಂಕ್ಷೇಪವಾಗಿ ವರ್ಣಿಸುವೆನು. ಪ್ರಹ್ಲಾದನ ಪೂರ್ವಜನ್ಮದ ವೃತ್ತಾಂತ ಹೀಗಿತ್ತು. ಪಶ್ಚಿಮ ಸಮುದ್ರ ತೀರದ ದ್ವಾರಕೆಯಲ್ಲಿ ಸರ್ವಶಾಸ್ತ್ರ ವಿಶಾರದನಾದ ಯೋಗಿ ಶಿವಶರ್ಮನಿದ್ದ. ಯಜ್ಞಶರ್ಮ, ವೇದಶರ್ಮ, ಧರ್ಮಶರ್ಮ, ವಿಷ್ಣುಶರ್ಮ ಮತ್ತು ಸೋಮಶರ್ಮ ಇವರು ಅವನ ಐದು ಜನ ಮಕ್ಕಳು; ಎಲ್ಲರೂ ಪಿತೃಭಕ್ತಿ ಪರಾಯಣರು. ಪಿತೃಭಕ್ತಿಗಿಂತ ಬೇರೆ ಧರ್ಮವನ್ನೆ ಅರಿಯದವರು, ಇದನ್ನು ನೋಡಿ ತಂದೆ ಹಿಗ್ಗುತ್ತಿದ್ದ. ಒಂದುದಿನ ದೇವತೆಗಳೂ ಬೆರಗಾಗುವಂತೆ ಅವರ ಪಿತೃಭಕ್ತಿಯನ್ನು ಪರೀಕ್ಷಿಸತೊಡಗಿದ. ಅಂದು ಒಂದು ದಿನ ಮಕ್ಕಳು ಅವರ ಪ್ರೀತಿಯ ತಾಯಿ ರೋಗದಿಂದ ನರಳಿ ಅಸುನೀಗಿದುದನ್ನು ಕಂಡರು. ಶಿವಶರ್ಮನೊಡ್ಡಿದ್ದ ಈ ಮಾಯೆನ್ನರಿಯದೆ ಮಕ್ಕಳು ಅವನ ಬಳಿ ದುಃಖದಿಂದ ನುಡಿದರು.

**ಮಕ್ಕಳು** :- ನಮ್ಮನ್ನು ಹೆತ್ತ ತಾಯಿ ನಮ್ಮನ್ನಗಲಿದ್ದಾಳೆ. ದೇಹತೊರೆದು ಅಕ್ಷಯ ಲೋಕವನ್ನು ಸೇರಿದ್ದಾಳೆ. ಈಗ ನಾವು ಮಾಡಬೇಕಾಗಿರುವ ಕರ್ತವ್ಯವೇನು ?

ತಂದೆ ಹಿರಿಯ ಮಗನನ್ನು ಕರೆದು ಹೇಳಿದ :-

**ಶಿವಶರ್ಮ :-** ಇಗೋ ಈ ಕತ್ತಿಯಿಂದ ಅವಳ ಶವವನ್ನು ಕಡಿದು ಹೊರಗೆ ಚೆಲ್ಲು, ಮಗ ಅಧೀರನಾಗದೆ ತಂದೆಯ ಆಜ್ಞೆಯನ್ನು ಪಾಲಿಸಿ ನುಡಿದ.

**ಯಜ್ಞಶರ್ಮ:-** ಅಪ್ಪ, ನೀನು ಅಜ್ಞೆ ಮಾಡಿದರೆ ನಾನೆಂತಹ ದಾರುಣ ಕರ್ಮವನ್ನೂ ಮಾಡಬಲ್ಲೆ. ಹೇಳು, ಇನ್ನೇನು ಮಾಡಬೇಕಾಗಿದೆ ?

ಹೀಗೆ ಹಿರಿಯ ಮಗ ಪರೀಕ್ಷೆಯಲ್ಲಿ ಯಶಸ್ವಿಯಾಗಿ ಉತ್ತೀರ್ಣನಾದ.

ಈಗ ಎರಡನೆ ಮಗ ವೇದಶರ್ಮನ ಸರದಿ. ಶಿವಶರ್ಮ ಮಾಯೆಯಿಂದ ಓರ್ವ ಹೆಣ್ಣನ್ನು ನಿರ್ಮಿಸಿದ. ಮಗನನ್ನು ಕರೆದು ಹೇಳಿದ.

**ಶಿವಶರ್ಮ :-** ಮಗು, ನೋಡು ಆ ಚೆಲುವೆಯನ್ನು. ನಾನು ಆಕೆಯನ್ನು ಪಡೆಯಬೇಕು. ಕಾಮಬಾಧೆಗೊಳಗಾಗಿದ್ದೇನೆ. ಹೋಗು, ಕರೆದು ತಾ.

ವೇದಶರ್ಮ ಒಡನೆ ಆಕೆಯ ಬಳಿಗೆ ಹೋಗಿ ಬೇಡಿದ.

**ವೇದಶರ್ಮ :-** ದೇವಿ, ನಮ್ಮ ತಂದೆ ನಿನ್ನನ್ನು ಬಯಸಿದ್ದಾನೆ. ಕಾಮಬಾಧೆ ಗೊಳಗಾಗಿದ್ದಾನೆ. ದಯೆದೋರು.

**ಆಕೆ :-** ಛೆ, ಛೆ, ಅವನೆ ನಿಮ್ಮ ತಂದೆ ? ವ್ಯಾಧಿಯಿಂದ ನರಳುತ್ತ ಕೆಮ್ಮುತ್ತಿದ್ದಾನೆ, ಮುದುಕ. ಅವನನ್ನು ನಾನು ಸೇರಬೇಕೆ ? ನೀನು ಸ್ಫುರದ್ರೂಪಿ, ಬಲಶಾಲಿಯಾದ ತರುಣ. ನನಗೆ ನೀನು ಬೇಕು. ನಾನು ನಿನಗೆ ಎಲ್ಲ ಬಗೆಯ ಸುಖವನ್ನೂ ಕೊಡಬಲ್ಲೆ. ಆ ಮುದುಕನಿಂದ ನಿನಗೇನಾಗಬೇಕು ? ಅವನನ್ನು ತೊರೆದು ಬಾ ! ನನ್ನ ಈ ಮೈಯ ಸುಖವನ್ನು ಸವಿದು ನೋಡು.

ಪಾಪಪೂರಿತವಾದ ಈ ಮಾತು ವೇದಶರ್ಮನಿಗೆ ರುಚಿಸಲಿಲ್ಲ.

**ವೇದಶರ್ಮ :-** ಹಾಗನ್ನಬೇಡ, ದೇವಿ, ತಂದೆಯ ಸುಖವನ್ನು ಬಯಸಿ ನಾ ನಿನ್ನ ಬಳಿಗೆ ಬಂದೆ. ಬೇರೆ ಮಾತು ಬೇಡ. ನನ್ನ ಕೋರಿಕೆಯನ್ನೀಡೇರಿಸು. ಮೂರು ಲೋಕದಲ್ಲಿ ಏನು ಬೇಕಿದ್ದರೂ ಕೇಳು, ಕೊಡುತ್ತೇನೆ.

**ಆಕೆ :-** ಹ್ಹ ಹ್ಹ ! ಅಷ್ಟೊಂದು ಸಾಮರ್ಥ್ಯವಿದೆಯೆ ನಿನ್ನಲ್ಲಿ? ಹಾಗಾದರೆ ಇಂದ್ರಾದಿ ದೇವತೆಗಳನ್ನು ಈಗ ಇಲ್ಲಿ ನನ್ನೆದುರಿಗೆ ತಂದು ತೋರಿಸು.

ಆಶ್ಚರ್ಯ! ಕ್ಷಣಮಾತ್ರದಲ್ಲಿ ಎಲ್ಲ ದೇವತೆಗಳು ಬಂದು ಮೈದೋರಿ ವೇದಶರ್ಮನ ಬಳಿಯಲ್ಲಿ ನಿಂತಿದ್ದರು. ಅವರು ಕೇಳಿದರು.

**ದೇವತೆಗಳು :-** ವಿಪ್ರೋತ್ತಮ, ನಿನಗೇನು ಬೇಕು, ಕೇಳಿಕೊಳ್ಳು.

**ವೇದಶರ್ಮ :-** ಇನ್ನೂ ಹೆಚ್ಚಿನ ಪಿತೃಭಕ್ತಿಯನ್ನನುಗ್ರಹಿಸಿರಿ.

ಹೀಗೆಂದು ಬೇಡಿ ಅವರನ್ನು ಬೀಳ್ಕೊಂಡ, ವೇದಶರ್ಮ

**ಆಕೆ :-** ನನಗೀ ದೇವತೆಗಳಿಂದ ಆಗಬೇಕಾದುದೇನಿರಲಿಲ್ಲ. ಅಂತೂ ನಿನ್ನ ತಪೋಬಲವನ್ನು ನೋಡಿದಂತಾಯಿತು. ನನ್ನ ಅಪೇಕ್ಷೆ ಬೇರೆಯೇ ಇದೆ. ವಿಪ್ರೋತ್ತಮ,

ನೀನು ನಿನ್ನ ತಲೆಯನ್ನು ಕಡಿದು ನನಗೊಪ್ಪಿಸುವೆಯಾ ? ಹಾಗಿದ್ದರೆ ನಾನು ನಿಮ್ಮ ತಂದೆಯನ್ನು ಸೇರುವೆ.

**ವೇದಶರ್ಮ :-** ತಾಯಿ, ಧನ್ಯನಾದೆ. ಇದೀಗ ಋಣತ್ರಯದಿಂದ ನಾನು ಮುಕ್ತನಾದೆ.

ಹೀಗೆನ್ನುತ್ತ ನಗುತ್ತಲೆ ತನ್ನ ತಲೆಯನ್ನು ಕಡಿದು ಆಕೆಗೊಪ್ಪಿಸಿದ ವೇದಶರ್ಮ. ರಕ್ತದಿಂದ ತೊಯ್ದ ಆ ರುಂಡವನ್ನು ಆಕೆ ಶಿವಶರ್ಮನ ಕೈಯಲ್ಲಿಟ್ಟು ನುಡಿದಳು.

**ಆಕೆ :-** ಇಗೋ, ನಿನ್ನ ಮಗನ ರುಂಡ ! ನಿನ್ನ ಸುಖಕ್ಕಾಗಿ ತಾನೇ ಕಡಿದು ನೀಡಿದ್ದಾನೆ. ಇಂದಿನಿಂದ ನಾ ನಿನ್ನವಳು.

ಮಕ್ಕಳು ನೋಡಿ ಭಯದಿಂದ ನಡುಗಿ ಹೋದರು.

ತಾಯಿಯ ಅಗಲಿಕೆಯ ದುಃಖ ಇನ್ನೂ ಆರದಿರುವಾಗಲೆ ಸೋದರನ ಈ ದುರಂತ !

ಆದರೂ ತಂದೆಯ ಸುಖಕ್ಕಾಗಿ ಅಸುನೀಗಿದ ವೇದಶರ್ಮನೆ ಧನ್ಯನೆಂದು ಕೊಂಡರು ಅವರು. ತಂದೆ ಆ ರುಂಡವನ್ನು ಧರ್ಮಶರ್ಮನ ಕೈಲಿಟ್ಟು ನುಡಿದ, 'ಇಗೋ, ನಿಮ್ಮಣ್ಣನ ಶಿರಸ್ಸು.'

**ಸೂತ ಉವಾಚ**

**ಸೂತ :-** ಧರ್ಮಶರ್ಮನು ಆ ರುಂಡವನ್ನು ಎತ್ತಿಕೊಂಡು ಹೊರಗೆ ಹೋದನು. ತಪೋಬಲದಿಂದ ಧರ್ಮದೇವತೆಯನ್ನು ತನ್ನೆಡೆಗೆ ಕರೆಸಿಕೊಂಡು ನುಡಿದನು.

**ಧರ್ಮಶರ್ಮ :-** ನನ್ನಲ್ಲಿ ಪಿತೃಭಕ್ತಿ, ತಪೋನಿಷ್ಠೆಗಳಿರುವುದಾದರೆ ನನ್ನ ಈ ಸೋದರನನ್ನು ಬದುಕಿಸಿ ಕೊಡು.

**ಧರ್ಮದೇವತೆ :-** ನಿನ್ನಲ್ಲಿ ನೀನು ಹೇಳುವ ಗುಣಗಳು ಖಂಡಿತವಾಗಿ ಇವೆ. ಅವುಗಳೆ ನಿನ್ನ ಸೋದರನನ್ನು ಬದುಕಿಸಿ ಕೊಡಬಲ್ಲುವು. ಈಗ ನಾನು ನಿನಗೇನು ವರ ನೀಡಲಿ ಹೇಳು.

ಧರ್ಮಶರ್ಮ ಬೇರೇನೂ ಕೇಳದೆ ನುಡಿದ.

**ಧರ್ಮಶರ್ಮ :-** ದೇವ ನನಗಿನ್ನೂ ಹೆಚ್ಚಿನ ಪಿತೃಭಕ್ತಿ ನೀಡು, ಧರ್ಮ ನಿಷ್ಠೆಯನ್ನು ಹೆಚ್ಚಿಸು, ಮೋಕ್ಷಮಾರ್ಗದಲ್ಲಿ ಮುನ್ನಡೆಸು.

'ಹಾಗೆ ಆಗಲಿ' ಎಂದು ಹೇಳಿ ಯಮಧರ್ಮರಾಜ ಅದೃಶ್ಯನಾದ.

ನಿದ್ದೆಯಿಂದೆಚ್ಚತ್ತವನಂತೆ ವೇದಶರ್ಮನೆದ್ದು ಕುಳಿತು ಕೇಳಿದ.

**ವೇದಶರ್ಮ :-** ತಮ್ಮ, ನಾವೆಲಿದ್ದೇವೆ ? ಆ ತಾಯಿ ಎಲ್ಲಿ ? ತಂದೆ ಎಲ್ಲಿ? ಧರ್ಮಶರ್ಮನೆಲ್ಲವನ್ನೂ ಸಂಕ್ಷೇಪವಾಗಿ ಹೇಳಿದಾಗ ಆನಂದ ತುಂದಿಲನಾದ, ಅಣ್ಣ. 'ನಿನ್ನಂಥ ಹಿತವರು ನನಗಿನ್ನಾರು ?' ಎಂದ.

ಸೋದರರಿಬ್ಬರೂ ಉತ್ಸಾಹದಿಂದ ತಂದೆಯ ಬಳಿ ಬಂದು ನಿಂತರು.

ತಂದೆ, ಮಕ್ಕಳ ಈ ನಿಷ್ಠೆಯನ್ನು ಕಂಡು ಒಳಗೊಳಗೆ ಬಲು ಹಿಗ್ಗಿದ !. ವಿಷ್ಣುಶರ್ಮನನ್ನು ಕರೆದು ನುಡಿದ.

**ಶಿವಶರ್ಮ :-** ಮಗು, ನನಗೆ ಅಮೃತವನ್ನು ತಂದು ಕೊಡುವೆಯಾ ? ನಾನೀಕೆಯ ಜತೆಗೆ ನಲಿಯಬೇಕು. ನಾನು ವೃದ್ಧ. ತರುಣಿಯಾದೀಕೆ ನನ್ನನ್ನು ಬಿಟ್ಟು ಹೋಗದೆ ಸದಾ ನನ್ನ ಜತೆ ಬಾಳಬೇಕಾದರೆ, ನಾನು ಅಮೃತವನ್ನು ಕುಡಿದು ಬಲಶಾಲಿಯಾಗಬೇಕು. ನೀರೋಗಿಯಾಗಬೇಕು.

ವಿಷ್ಣುಶರ್ಮ ಹಾಗೆ ಆಗಲೆಂದು ಹೇಳಿ, ಭಕ್ತಿಯಿಂದ ನಮಸ್ಕರಿಸಿ ತಪೋಬಲದಿಂದ ಗಗನಕ್ಕೇರಿ ವಾಯುವೇಗದಿಂದ ಸ್ವರ್ಗದ ಕಡೆ ಧಾವಿಸಿದ.

**ಸೂತ ಉವಾಚ**

**ಸೂತ :-** ತನ್ನ ಲೋಕಕ್ಕೆ ಧಾವಿಸಿ ಬರುತ್ತಿರುವ ವಿಷ್ಣುಶರ್ಮನನ್ನು ಕಂಡು ದೇವೇಂದ್ರ ಮೇನಕೆಯನ್ನು ಕರೆದು ''ವಿಷ್ಣುಶರ್ಮನೀ ಕಡೆ ಬರದಂತೆ ನೋಡಿಕೊ'' ಎಂದ.

ಮೇನಕೆ ಚೆಲುವಿನ ಮುದ್ದೆ. ಇನ್ನೂ ಸಿಂಗರಿಸಿಕೊಂಡು ನಂದನವನದ ತೂಗುಯ್ಯಾಲೆಯಲ್ಲಿ ಕುಳಿತು. ವಿಷ್ಣುಶರ್ಮನಿಗೆ ಕೇಳಿಸುವಂತೆ ಮೋಹಕವಾಗಿ ಹಾಡಿದಳು.

ವಿಷ್ಣುಶರ್ಮ ಆ ಗೀತವನ್ನಾಲಿಸಿದ. ಆಕೆಯನ್ನು ನೋಡಿದ. ನೋಡದವನಂತೆಯೆ ಮುಂದುವರಿದ.

''ಇಂದ್ರನೇ ಈಕೆಯನ್ನು ಕಳಿಸಿರಬೇಕು. ಇವಳಿಂದ ನನ್ನ ಕಾರ್ಯಕೆಡುವ ಸಂಭವವಿದೆ'' ಎಂದುಕೊಂಡು ತನ್ನ ವೇಗವನ್ನು ಹೆಚ್ಚಿಸಿದ.

ಮೇನಕೆ ಹತಾಶಳಾದಳು ! ಅವನನ್ನು ಕೂಗಿ ಕರೆದಳು.

**ಮೇನಕೆ :-** ಓ ಚೆಲುವ, ಎಲ್ಲಿಗೆ ಹೋಗುತ್ತಿರುವೆ ?.

**ವಿಷ್ಣುಶರ್ಮ :-** ತಂದೆಯ ಕೆಲಸಕ್ಕಾಗಿ ಇಂದ್ರನೆಡೆಗೆ ಹೋಗ್ತುತಿದ್ದೇನೆ.

**ಮೇನಕೆ :-** ಒಳ್ಳೆಯದು, ಆದರೆ ನಿನ್ನನ್ನು ನೋಡಿದ ಕ್ಷಣದಿಂದ ನಾನು ನಿನಗೆ ಮಾರು ಹೋಗಿದ್ದೇನೆ. ಕಾಮನ ಬಾಣಗಳಿಂದ ಗಾಸಿಗೊಂಡಿದ್ದೇನೆ. ಬಯಕೆಯ ಬೆಂಕಿಯಿಂದ ಬೇಯುತ್ತಿದ್ದೇನೆ. ಬಾ, ಮಹಾತ್ಮ, ನನ್ನ ಬದುಕು ನಿನ್ನ ಕೈಲಿದೆ. ನನ್ನನ್ನುಳಿಸಿ ಪುಣ್ಯ ಕಟ್ಟಿಕೊಳ್ಳು.

**ವಿಷ್ಣುಶರ್ಮ :-** ಹೆಣ್ಣೆ, ನಿನ್ನ ಚರಿತ್ರೆ, ಆ ಇಂದ್ರನ ಚತುರತೆ ಎಲ್ಲ ನನಗೆ ಗೊತ್ತು, ನಾನೇನೂ ಅಂಥವನಲ್ಲ. ವಿಶ್ವಾಮಿತ್ರರಂಥ ಕೆಲವರು ನಿನ್ನ ಬೆಡಗಿಗೆ ಮರುಳಾಗಬಹುದು. ನಾನು ಶಿವಶರ್ಮನ ಮಗ. ಎಂದೂ ಎಳವೆಯಲ್ಲೇ ಕಾಮಕ್ರೋಧಗಳನ್ನು ಗೆದ್ದವ. ಹೋಗು, ಬೇರೆ ಯಾರನ್ನಾದರೂ ಹುಡುಕಿಕೊಳ್ಳು.

ಮೇನಕೆ ಪೂರ್ತಿಯಾಗಿ ಸೋತಳು. ಇಂದ್ರನು ಬಿಡಲಿಲ್ಲ. ಏನೋ ಹೇಳಿ ಆಕೆಯನ್ನು ತಿರುಗಿ ಕಳಿಸಿದ. ಆಕೆ ವಿಷ್ಣುಶರ್ಮನಿಗೆ ದಾರಿಯುದ್ದಕ್ಕೂ ಭೀಕರ ಆಕೃತಿಗಳನ್ನು ಪ್ರದರ್ಶಿಸಿ ಬೆದರಿಸಲು ಯತ್ನಿಸಿದಳು. ಅದರೇನು ? ಹುಲ್ಲಿನ ಮೆದೆಯನ್ನು ಬೆಂಕಿ ಸುಡುವಂತೆ ಅವನ್ನೆಲ್ಲ ತನ್ನ ಬ್ರಹ್ಮತೇಜಸ್ಸಿನಿಂದ ಸುಟ್ಟು ಮುನ್ನಡೆದ ವಿಷ್ಣುಶರ್ಮ.

ಮೇನಕೆ ತಿರುಗಿ ವಿಫಲಳಾದಳು. ಇಂದ್ರ ತಾನೆ ಭಯಂಕರ ವಿಘ್ನಗಳನ್ನು ನಿರ್ಮಿಸತೊಡಗಿದ. ಅವನ್ನೂ ದೂರಮಾಡುತ್ತ ವೇಗದಿಂದ ಮುಂದುವರಿದ

ವಿಷ್ಣುಶರ್ಮ. ಛಲದಿಂದ ದೇವೇಂದ್ರ ತಿರುಗಿ ವಿಘ್ನ ಉಂಟುಮಾಡಿದ. ವಿಷ್ಣುಶರ್ಮನ ಕೋಪವೀಗ ಅಸಹನೀಯವಾಯಿತು.

''ಕರ್ತವ್ಯ ನಿರತವಾದ ಒಬ್ಬ ಸತ್ಪುರುಷನಿಗೆ ವಿಘ್ನತಂದೊಡ್ಡುವವನಿಂದ್ರನೆ ಆದರೇನಂತೆ? ಅವನಿಗೆ ತಕ್ಕಶಾಸ್ತಿ ಮಾಡುವೆ. ಅವನನ್ನು ಸಿಂಹಾಸನದಿಂದ ಕೆಡವಿ ಇನ್ನೊಬ್ಬನನ್ನು ಕೂರಿಸುವೆ!''

ವಿಪ್ರನ ಕೋಪಕ್ಕೆ ಶಕ್ರ ಬೆದರಿದ. ಓಡಿಬಂದು ಅಡ್ಡಬಿದ್ದ.

**ಇಂದ್ರ :-** ವಿಪ್ರೋತ್ತಮ ತಾಳು. ತಪಸ್ಸು, ನಿಯಮ, ದಮ, ಸತ್ಯ, ಶೌಚ ಪಿತೃಭಕ್ತಿಗಳಲ್ಲಿ ಯಾರೂ ನಿನಗೆಣೆಯಲ್ಲ. ನಾನು ಸೋತೆ, ನನ್ನ ತಪ್ಪನ್ನು ಮನ್ನಿಸು, ಬೇಕಾದ ವರವನ್ನು ಕೇಳು, ಎಂಥ ದುರ್ಲಭ ವರವನ್ನೂ ನಾನು ಕೊಡುವೆ.

**ವಿಷ್ಣುಶರ್ಮ :-** ದೇವೇಂದ್ರ, ಬ್ರಹ್ಮತೇಜಸ್ಸು, ಅದರಲ್ಲೂ ಪಿತೃಭಕ್ತನಾದ ನನ್ನಂಥ ವಿಪ್ರನ ತೇಜಸ್ಸು ದೇವಾಧಿದೇವತೆಗಳಿಗೂ ತಡೆಯಲಶಕ್ಯ. ಅವನ ತೇಜೋಭಂಗಮಾಡಲು ಎಂದೂ ಯತ್ನಿಸಬೇಡ. ಅವನು ಸಿಟ್ಟಾದರೆ ಬ್ರಹ್ಮ-ವಿಷ್ಣು- ಮಹೇಶ್ವರರನ್ನೂ ಅವರ ಮಕ್ಕಳು ಮರಿಮಕ್ಕಳ ಜತೆಗೆ ಬೂದಿಮಾಡಬಲ್ಲ. ನೀನೀಗ ಬಾರದಿರುತ್ತಿದ್ದರೆ ಇನ್ನೊಬ್ಬ ಇಂದ್ರನನ್ನು ಸೃಷ್ಟಿಸುತ್ತಿದ್ದೆ. ಹೇಗೋ ಬಂದಿರುವೆ, ವರವನ್ನು ಕೊಡುವೆನೆನ್ನುತ್ತಿರುವೆ. ನನಗೆ ಈಗ ಅಮೃತಬೇಕು, ಕೊಡು, ನನ್ನ ಪಿತೃಭಕ್ತಿ ಇನ್ನೂ ಅಚಲವಾಗುವಂತೆ ಮಾಡು.

ದೇವೇಂದ್ರ ಹಾಗೇ ಆಗಲೆಂದು ಹೇಳಿ ಅಮೃತಕುಂಭವನ್ನು ಕೊಟ್ಟ. ಬ್ರಹ್ಮ ತೇಜಸ್ಸಿನ ಅದಮ್ಯಶಕ್ತಿಯನ್ನು ಕಂಡು ಆನಂದಗೊಂಡ.

ವಿಷ್ಣುಶರ್ಮ ವಿಜಯಿಯಾಗಿ ಭೂಲೋಕಕ್ಕೆ ಹಿಂತಿರುಗಿದ. ಭಕ್ತಿಯಿಂದ ತಂದೆಯ ಕೈಯಲ್ಲಿ ಅಮೃತ ಕುಂಭವನ್ನಿಟ್ಟ. ತಂದೆಗಾದ ಆನಂದಕ್ಕೆ ಪಾರವೆ ಇರಲಿಲ್ಲ. ಮಕ್ಕಳ ಈ ಅಚಲವಾದ ಪಿತೃಭಕ್ತಿಯನ್ನು ಕಂಡು ಹೆಮ್ಮೆಯಿಂದ ಉಬ್ಬಿ ನುಡಿದ.

**ಶಿವಶರ್ಮ :-** ಮಕ್ಕಳೇ, ನೀವು ನಿಜವಾಗಿಯೂ ಪಿತೃಭಕ್ತರು, ಬೇಕಾದ ವರವನ್ನು ಕೇಳಿಕೊಳ್ಳಿ.

ಮಕ್ಕಳೆಲ್ಲರೂ ಒಕ್ಕೊರಲಿನಿಂದ ನುಡಿದರು.

**ಮಕ್ಕಳು :-** ಅಪ್ಪ, ಮೊದಲಿಗೆ ನೀನು ನಮ್ಮ ತಾಯಿಯನ್ನು ಬದುಕಿಸು. ಅವಳ ವ್ಯಾಧಿಯನ್ನು ತೊಲಗಿಸು. ಜನ್ಮಜನ್ಮಾಂತರಗಳಲ್ಲಿಯೂ ನಿಮ್ಮಿಬ್ಬರ ಮಕ್ಕಳಾಗಿ ಜನಿಸುವ ಪುಣ್ಯವಂತರು ನಾವಾಗುವಂತೆ ಅನುಗ್ರಹಿಸು.

ಶಿವಶರ್ಮ **'ತಥಾಸ್ತು'** ಎಂದ. ಹಾಗೆ ಅನ್ನುವಷ್ಟರಲ್ಲಿಯೆ ಅವರ ತಾಯಿ ಬದುಕಿಬಂದು ಆನಂದದಿಂದ ನುಡಿದಳು.

**ತಾಯಿ :-** ನಿಮ್ಮಂಥ ಸತ್ಪುತ್ರರನ್ನು ಪಡೆಯಲು ಪುಣ್ಯಬೇಕು. ನಿಮ್ಮ ತಂದೆ ಅದೆಷ್ಟು ಪುಣ್ಯ ಮಾಡಿರುವರೊ! ಅವರ ಅನುಗ್ರಹ ಬಲದಿಂದ ನಾನು ತಂದೆಯನ್ನು ಮೀರಿಸುವ ಮಕ್ಕಳನ್ನು ಪಡೆಯುವಂತಾಯಿತು. ಒಬ್ಬರನ್ನೊಬ್ಬರು ಗುಣದಲ್ಲಿ ಮೀರಿಸುವ ಐದುಮಂದಿ ಮಕ್ಕಳನ್ನು ಹಡೆದ ನಾನೆ ಅಲ್ಲವೆ ಪುಣ್ಯವಂತೆ!

**ಮಕ್ಕಳು :-** ಅಮ್ಮ, ನಿಮ್ಮಂಥ ತಾಯಿ ತಂದೆಗಳ ಮಕ್ಕಳಾಗಿ ಜನಿಸಿದ ನಾವೇ ಭಾಗ್ಯವಂತರು ! ಜನುಮಜನುಮಗಳಲ್ಲಿ ನೀವೆ ನಮಗೆ ತಾಯಿ-ತಂದೆಗಳಾಗಿರಿ.

**ಶಿವಶರ್ಮ :-** ಮಕ್ಕಳೇ, ಅಕ್ಷಯಲೋಕವನ್ನು ಬಯಸುವಿರಾದರ [illegible] ಹೊಡುತ್ತೇನೆ.

**ಮಕ್ಕಳು :-** ಹಾಗಾದರೆ ನಮ್ಮನ್ನು ವಿಷ್ಣುಲೋಕಕ್ಕೆ ಕಳಿಸು.

ಶಿವಶರ್ಮ 'ಆಗಲಿ' ಎನ್ನುವಷ್ಟರಲ್ಲಿ ಶಂಖ-ಚಕ್ರ-ಗದಾಪಾಣಿ ಶ್ರೀಹರಿ ಗರುಡಾರೂಢನಾಗಿ ಮೈದೋರಿ ನಿಂತು ನುಡಿದ.

**ವಿಷ್ಣು :-** ಶಿವಶರ್ಮ, ನಿನ್ನ ಮತ್ತು ನಿನ್ನ ಮಕ್ಕಳ ಭಕ್ತಿಗೆ ನಾನು ಸೋತಿದ್ದೇನೆ. ನಾಲ್ವರು ಮಕ್ಕಳೊಂದಿಗೆ ಪತ್ನಿಯೊಂದಿಗೆ ನನ್ನ ಲೋಕಕ್ಕೆ ಬಂದುಬಿಡು.

**ಶಿವಶರ್ಮ :-** ದೇವ, ಈ ನಾಲ್ವರು ಮಕ್ಕಳು ನಿನ್ನ ಲೋಕಕ್ಕೆ ಹೋಗಲಿ. ನಾನೀ ಪತ್ನೀ ಮತ್ತು ಕಿರಿಯ ಮಗನೊಂದಿಗೆ ಭೂಮಿಯಲ್ಲಿ ಕೆಲಕಾಲ ಇರುತ್ತೇನೆ.

ವಿಷ್ಣು 'ಹಾಗೇ ಆಗಲಿ' ಎಂದ.

ಒಡನೆ ನಾಲ್ವರು ಮಕ್ಕಳು ವಿಷ್ಣುವಿನಂತೆ ರೂಪು ತಳೆದರು. ಶಂಖ-ಚಕ್ರ-ಗದಾಪಾಣಿಗಳಾಗಿ ಇಂದ್ರನೀಲದಂತೆ ಹೊಳೆದರು. ಕೋಟಿಸೂರ್ಯರ ಪ್ರಕಾಶದಿಂದ ಬೆಳಗುತ್ತ ವಿಷ್ಣುಶರೀರವನ್ನು ಸೇರಿದರು, ದೀಪವು ದೀಪವನ್ನು ಸೇರಿ ಒಂದಾಗುವಂತೆ.

**ಸೂತ ಉವಾಚ**

**ಸೂತ :-** ಶಿವಶರ್ಮನೊಂದುದಿನ ಕಿರಿಯಮಗ ಸೋಮಶರ್ಮನನ್ನು ಬಳಿಗೆ ಕರೆದು ನುಡಿದ.

**ಶಿವಶರ್ಮ :-** ಮಗು, ನಾಳೆ ತೀರ್ಥಯಾತ್ರೆಗೆ ಹೊರಟ್ಟಿದ್ದೇವೆ. ಈ ಅಮೃತ ಕುಂಭವನ್ನು ಜೋಪಾನವಾಗಿ ನೋಡಿಕೊಳ್ಳು.

ಶಿವಶರ್ಮ ದಂಪತಿಗಳು ಮನೆಯಿಂದ ಹೊರಟು ಹೋದರು. ಹತ್ತು ವರ್ಷಗಳು ಕಳೆದ ಬಳಿಕ ಒಂದು ದಿನ ಅವರು ಹಿಂತಿರುಗಿ ಬಂದಾಗ ಇಬ್ಬರೂ ಕುಷ್ಠರೋಗದಿಂದ ವಿಕಾರಗೊಂಡು ಅಸಹ್ಯ ಮಾಂಸದ ಮುದ್ದೆಗಳಂತೆ ಕಾಣುತ್ತಿದ್ದರು. ಸೋಮಶರ್ಮ ಅವರನ್ನೀ ಅವಸ್ಥೆಯಲ್ಲಿ ಕಂಡು ತಡೆಯಲಾರದ ವ್ಯಥೆಯಿಂದ ನುಡಿದ.

**ಸೋಮಶರ್ಮ :-** ಅಪ್ಪ, ನಿಮ್ಮಂಥ ತಪಸ್ವಿಗಳು ಲೋಕದಲ್ಲಿಯೇ ಇನ್ನಿಲ್ಲ. ದೇವತೆಗಳು ನಿಮಗೆ ದಾಸರು. ಸದಾ ನಿಮ್ಮಾಜ್ಞೆಗೆ ಕಾಯುತ್ತಿರುವವರು. ಈ ತಾಯಿಯೂ ಮಹಾಪತಿವ್ರತೆ. ನಿಮ್ಮ ಅನುಗ್ರಹಬಲದಿಂದ ಮೂರುಲೋಕವನ್ನೇ ಹೊಸದಾಗಿ ನಿರ್ಮಿಸಬಲ್ಲಳು. ಇಂಥ ನಿಮಗೆ ಈ ಕುಷ್ಠರೋಗದ ಬಾಧೆ ಏಕೆ ಉಂಟಾಯಿತು ? ಹೇಗೆ ಉಂಟಾಯಿತು ಹೇಳು.

ತನ್ನ ಪಿತೃಭಕ್ತಿಯನುದಿ255 ಪರೀಕ್ಷಿಸಲು ತಂದೆಯ ಒಡ್ಡಿದ್ದ ಮಾಯೆ ಇದೆಂದು ಅರಿಯದ ಸೋಮಶರ್ಮ ದುಃಖದಿಂದ ಪದೇ ಪದೇ ಹೀಗೆ ಕೇಳತೊಡಗಿದ.

**ಶಿವಶರ್ಮ :-** ಮಗು, ಇದು ಪೂರ್ವಾರ್ಜಿತ ಕರ್ಮಫಲ. ಯಾರಾದರೂ ಅನುಭವಿಸಲೇಬೇಕು. ಈಗ ನೀನು ನಮಗೆ ಆರೈಕೆಮಾಡು. ಪುಣ್ಯ ಬರುತ್ತದೆ.

**ಸೋಮಶರ್ಮ :-** ಅಪ್ಪ, ನೀವು ಪುಣ್ಯವಂತರು. ನಾನೇ ಪಾಪಿ ನನ್ನ ಪಾಪದಿಂದ ನಿಮಗೀ ಅವಸ್ಥೆ ಬಂದಿರಬೇಕು. ಸೋಮಶರ್ಮ ಭಕ್ತಿಯಿಂದ, ಪ್ರೀತಿಯಿಂದ ಮಾತಾಪಿತರ ಸೇವೆಮಾಡಿದ. ಅವರ ಮೈತೊಳೆದ, ಮಲಮೂತ್ರಗಳನ್ನು ತೆಗೆದ. ಮೈಕೈಗಳನ್ನೊತ್ತಿದ, ಹೆಗಲಮೇಲೆ ಹೊತ್ತು ತೀರ್ಥಕ್ಷೇತ್ರಗಳನ್ನು ಸುತ್ತಿದ. ತೀರ್ಥಸ್ನಾನ, ದೇವಪಿತೃತರ್ಪಣಗಳನ್ನು ಅವರಿಂದ ಮಾಡಿಸಿದ. ಹೋಮಹವನಗಳನ್ನು ಅವರ ಪರವಾಗಿ ತಾನೂ ನಡೆಸಿದ. ನಿತ್ಯವೂ ಮೆತ್ತನೆಯ ಹಾಸಿಗೆಯಲ್ಲಿ ಅವರನ್ನು ಮಲಗಿಸಿ ಸುಖ ನಿದ್ದೆ ಮಾಡಿಸಿದ. ಭಕ್ಷ್ಯ-ಭೋಜ್ಯಗಳನ್ನು ಉಣಿಸಿದ. ವಸ್ತ್ರ, ಪುಷ್ಪ, ಗಂಧ, ತಾಂಬೂಲಗಳನ್ನಿತ್ತು ಉಪಚರಿಸಿದ. ಅವರು ಬೇಡಿದುದನ್ನೆಲ್ಲ ತಪ್ಪದೆ ಒಡನೆ ತಂದಿತ್ತ.

ಆದರೂ ಶಿವಶರ್ಮನೇಕೋ ದಿನದಿಂದ ದಿನಕ್ಕೆ ನಿಷ್ಠುರನಾಗಿ ಮಗನಲ್ಲಿ ವರ್ತಿಸಿದ. ಸದಾ ಬಯ್ಯುತ್ತ ಕುಲಕಂಟಕನೆಂದು ನಿಂದಿಸುತ್ತ ಕೆಲವೊಮ್ಮೆ ಮುಷ್ಠಿಯಿಂದ ತಿವಿದು, ಕೋಲಿಂದ ಹೊಡೆಯುತ್ತ, ನಾನಾ ಬಗೆಯಿಂದ ಮಗನನ್ನು ನೋಯಿಸಿದ. ಸೋಮಶರ್ಮನು ಮಾತ್ರ ಅವೆಲ್ಲವನ್ನೂ ಸಂತೋಷದಿಂದ ಸ್ವೀಕರಿಸಿ ತ್ರಿಕರಣಪೂರ್ವಕವಾಗಿ ಸೇವೆ ಮಾಡಿದ.

ಈ ಕಿರಿಯ ಮಗ ಉಳಿದ ತನ್ನೆಲ್ಲ ಮಕ್ಕಳನ್ನೂ ಮೀರಿಸುವನೆಂದು ತಂದೆಗೆ ಮನವರಿಕೆಯಾಯಿತು. 'ಎಂಥ ದುಃಖಸಹಿಷ್ಣು, ಈತ ! ನಾನು ಇವನ ದುಃಖ ಕಳೆಯಲೆ ಬೇಕು' ಎನಿಸಿತು. ಆದರೂ ಕೊನೆಯದಾಗಿ ಇನ್ನೊಂದು ಪರೀಕ್ಷೆ ಮಾಡಬೇಕೆನಿಸಿತು.

**ಶಿವಶರ್ಮ :-** ಅಮೃತವೆಲ್ಲಿ ? ಕೊಡು ನಾನು ಕುಡಿಯಬೇಕು.

ತಂದೆ ಗುಡುಗಿದ. ಮಗ ಸಂಭ್ರಮದಿಂದ ಅಮೃತ ಕುಂಭವನ್ನೆತ್ತಿದ. ಅದು ಹಗುರಾಗಿತ್ತು! ತುಂಬಿದ್ದ ಕೊಡ ಈಗ ಬರಿದಾಗಿತ್ತು ! 'ಹಾಯ್, ಎಂಥ ಮೋಸವಾಯಿತು ! ಯಾವ ಪಾಪಿ ಇದನ್ನು ಬರಿದುಮಾಡಿದನೊ ! ಮೊದಲೆ ವ್ಯಾಧಿಯಿಂದ ನರಳುತ್ತಿರುವ ತಂದೆ ಇದನ್ನು ತಿಳಿದರೆ ಎಷ್ಟು ಕೋಪಿಸಿಕೊಳ್ಳುವನೊ ! ಏನು ಮಾಡಲಿ ? ನನ್ನಲ್ಲಿ ಪಿತೃಭಕ್ತಿ ಇರುವುದಾದರೆ, ತಪಸ್ಸು, ಇಂದ್ರಿಯ ನಿಗ್ರಹ, ಶೌಚಗಳನ್ನು ನಾನು ಸದಾ ಮನಃಪೂರ್ವಕ ಆಚರಿಸಿವುದೇ ಆದರೆ, ಈ ಕ್ಷಣವೆ ಈ ಅಮೃತಕುಂಭ ತುಂಬಿಕೊಳ್ಳಲಿ' ಎಂದು ಮನಸ್ಸಿನಲ್ಲಿ ಚಿಂತಿಸಿದ, ಸೋಮಶರ್ಮ. ಕ್ಷಣಮಾತ್ರದಲ್ಲಿ ಅದು ಅಮೃತದಿಂದ ತುಂಬಿಕೊಂಡಿತು. ತುಂಬಿದ ಆ ಕೊಡವನ್ನು ಸಂಭ್ರಮದಿಂದೆತ್ತಿ ತಂದೆಯ ಕೈಯಲ್ಲಿಟ್ಟು ನಮಸ್ಕರಿಸಿದ. ಸ್ವೀಕರಿಸೆಂದು ಬೇಡಿಕೊಂಡ, ಸೋಮಶರ್ಮ.

ಮಗನ ಆ ಸವಿಮಾತು ತಂದೆಯ ಎದೆಯಲ್ಲಿ ಆನಂದ ತುಂಬಿತು.

*ಇತಿ ಪದ್ಮ ಮಹಾಪುರಾಣ ಭಾಗ-೨ರ ಭೂಮಿಖಂಡದ ದೇವಾಸುರಚರಿತ್ರೆಯಲ್ಲಿ ಶಿವಶರ್ಮೋಽಖ್ಯಾನದಲ್ಲಿ ಮೊದಲನೇಯ ಅಧ್ಯಾಯ ಮುಗಿದುದು*

—o—

ಅಧ್ಯಾಯ - ೨

**ಶಿವಶರ್ಮ :-** ಮಗು, ನಿನ್ನ ಪಿತೃಭಕ್ತಿ, ತಪಸ್ಸು, ಇಂದ್ರಿಯನಿಗ್ರಹ, ಶೌಚಗಳನ್ನು ನೋಡಿ ನಾವು ಪ್ರೀತರಾಗಿದ್ದೇವೆ. ನಮ್ಮ ಈ ವಿಕಾರರೂಪವನ್ನು ತೊರೆದು ಬಿಡುವೆವು, ನಿನ್ನ ದುಃಖವನ್ನು ಪರಿಹರಿಸುವೆವು.

ಹೀಗೆ ಹೇಳಿ ಶಿವಶರ್ಮ ದಂಪತಿಗಳು ನಿಜರೂಪದಲ್ಲಿ ದಿವ್ಯ ಶರೀರಗಳಾಗಿ ಕಾಣಿಸಿಕೊಂಡರು. ಸೂರ್ಯನಂತೆ ಹೊಳೆಯುತ್ತಿದ್ದ ಆ ತಂದೆ-ತಾಯಿಗಳ ಅಡಿಗಳಿಗೆರಗಿದ ಭಕ್ತಿಯಿಂದ ಸೋಮಶರ್ಮ.

ಕೆಲಕಾಲ ಕಳೆದ ಬಳಿಕ ಶಿವಶರ್ಮ ದಂಪತಿಗಳು ಹರಿಯ ಅನುಗ್ರಹದಿಂದ ಯೋಗಸಮಾಧಿಯ ಮೂಲಕ ಹರಿಪದವನ್ನೈದಿದರು. ಯೋಗಾಭ್ಯಾಸ ಒಂದನ್ನುಳಿದು ಇತರ ಯಾವ ಉಪಾಯದಿಂದಲೂ ಮುಕ್ತಿದಾಯಕನಾದ ಹರಿಯ ದರ್ಶನವಾಗಲಾರದು.

ಸೋಮಶರ್ಮನೂ ವೈರಾಗ್ಯತಳೆದು, ವಿಷಯಭೋಗಗಳಿಂದ ದೂರವಿದ್ದು ಏಕಾಂತದಲ್ಲಿ ಯೋಗಭ್ಯಾಸ ಮಾಡತೊಡಗಿದ. ಶಾಲಗ್ರಾಮವೆಂಬ ಮಹಾಕ್ಷೇತ್ರದಲ್ಲಿ ಅನ್ನನಿದ್ದೆಬಿಟ್ಟು ತೀವ್ರತಪಸ್ಸುಮಾಡುತ್ತಿದ್ದಂತೆಯೆ ಅವನಿಗೆ ಮರಣಕಾಲ ಬಂದೊದಗಿತು. ಮರಣೋನ್ಮುಖನಾದ ಸೋಮಶರ್ಮನ ಬಳಿಗೆ ದೈತ್ಯರೂ ದಾನವರೂ ಬಂದರು. ಸಮೀಪದಲ್ಲಿದ್ದ ಮುನಿಜನರು 'ದೈತ್ಯರು !' 'ದಾನವರು !' ಎನ್ನ ತೊಡಗಿದರು. ಆ ಧ್ವನಿ ಸೋಮಶರ್ಮನ ಕಿವಿಯೊಳಗೆ ಪ್ರವೇಶಿಸಿ ನಡುಕ ಹುಟ್ಟಿಸಿತು. ಇದರಿಂದ ಧ್ಯಾನಾವಸ್ಥೆಯಲ್ಲಿಯೂ ಭಯದಿಂದ ದೈತ್ಯರನ್ನು ಚಿಂತಿಸುತ್ತಲೆ ಆತ ಶರೀರತ್ಯಾಗ ಮಾಡಿದ. ಇದರ ಫಲವಾಗಿ ಮುಂದೆ ದೈತ್ಯಜನ್ಮ ಪಡೆದ. ಹಿರಣ್ಯಕಶಿಪುವಿನ ಮಗನಾಗಿ ಪ್ರಹ್ಲಾದನೆಂಬ ಹೆಸರಿನಿಂದ ಹುಟ್ಟಿದ.

ಒಮ್ಮೆ ದೇವ-ಅಸುರರೊಳಗೆ ಯುದ್ಧನಡೆಯಿತು. ಆಗ ಪ್ರಹ್ಲಾದ ಹರಿಯೊಡನೆ ಹೋರಾಡಿದ. ಪೂರ್ವಜನ್ಮದ ಯೋಗಾಭ್ಯಾಸದ ಬಲದಿಂದ ಆತನಿಗೆ ಪೂರ್ವಜನ್ಮದ ಸ್ಮರಣೆ ಇತ್ತು. ಈ ದಾನವರ ಜನ್ಮದಿಂದ ತನಗೆಂದು ಮುಕ್ತಿಯಾದೀತೆಂಬ ತವಕವಿತ್ತು. ರಣಭೂಮಿಯಲ್ಲಿ ಹರಿಯ ದರ್ಶನವಾದುದಕ್ಕೆ ಆತ ಹಿಗ್ಗಿದ. ಅವನೊಂದಿಗೆ ಹೋರಾಡಿ ಅವನ ವಿಶ್ವರೂಪವನ್ನೇ ಕಾಣುತ್ತ ಸಂತೋಷದಿಂದ ಚಕ್ರದ ತೀಕ್ಷ್ಣಧಾರೆಗೆ ತಲೆಯೊಡ್ಡಿದ. ಪ್ರಹ್ಲಾದನ ತಾಯಿ ಕಮಲೆ ಪುತ್ರಶೋಕದಿಂದ ಕಣ್ಣೀರ ಕೋಡಿ ಹರಸಿದಳು. ಹಗಲು- ರಾತ್ರಿಯೆನ್ನದೆ ಹಲುಬಿದಳು. ಪತಿವ್ರತೆಯಾದ ಆಕೆಯ ಬಳಿಗೆ ನಾರದರು ಬಂದು ಸಮಾಧಾನ ಮಾಡಿದರು.

**ನಾರದ :-** ದೇವಿ, ಅಳಬೇಡ. ನೀನು ಭಾಗ್ಯವಂತಳು. ನಿನ್ನ ಮಗ ತಿರುಗಿ ನಿನ್ನ ಹೊಟ್ಟೆಯಲ್ಲಿ ಹುಟ್ಟಿಬರುತ್ತಾನೆ. ಪ್ರಹ್ಲಾದನೆಂದೆ ಪ್ರಸಿದ್ಧನಾಗಿ ದೇವಸ್ವಭಾವಪಡೆದು ಮುಂದೆ ಇಂದ್ರನಾಗುತ್ತಾನೆ. ಎಲ್ಲ ದೇವತೆಗಳಿಗೂ ವಂದ್ಯನೆನಿಸುತ್ತಾನೆ. ಅವನ

ತಾಯಿಯಾಗಿ ನೀನು ಎಲ್ಲ ಬಗೆಯ ಸುಖವನ್ನೂ ಕಾಣುವೆ. ಈ ರಹಸ್ಯವನ್ನು ಮಾತ್ರ ನೀನು ಯಾರಿಗೂ ಹೇಳಬೇಡ.

ನಾರದರು ಹೇಳಿದಂತೆ ಪ್ರಹ್ಲಾದನು ತಿರುಗಿ ಕಮಲೆಯ ಗರ್ಭದಲ್ಲಿ ಜನಿಸಿದ. ಅದೇ ರೂಪ ! ಅದೇ ಆಕೃತಿ ! ಅದೇ ಹೆಸರು ! ಎಳವೆಯಲ್ಲಿಯೆ ಅವನಿಗೆ ಸದಾ ಕೃಷ್ಣಧ್ಯಾನ ಆ ನರಸಿಂಹನ ಅನುಗ್ರಹದಿಂದ ದೇವತ್ವ ಲಭಿಸಿತು. ದೇವರಾಜ ಪದವಿಯೂ ದೊರೆಯಿತು. ಕೊನೆಗೆ ವಿಷ್ಣುಲೋಕವೂ ಲಭ್ಯವಾಯಿತು. ಸೃಷ್ಟಿಯ ರೀತಿ ಹೀಗೆಯೆ ಅನೇಕ ವಿಧವಾಗಿರುತ್ತದೆ. ತಿಳಿದವರು ಮೋಹಕ್ಕೊಳಗಾಗುವುದಿಲ್ಲ. ಸೂತನು ಹೀಗೆ ಹೇಳಿ 'ಇನ್ನೂ ಸಂದೇಹಗಳಿದ್ದರೆ ಕೇಳಿ, ಉತ್ತರಿಸುತ್ತೇನೆ' ಎಂದಾಗ ಋಷಿಗಳು ಕೇಳಿದರು.

**ಋಷಿಗಳು :-** ಈಗ ದೇವರಾಜ ಪದವಿಯಲ್ಲಿರುವವನಾರು ? ಅವನಿಗೆ ಆ ಪದವಿಯನ್ನು ಯಾರು ಕೊಟ್ಟರು ?

**ಸೂತ :-** ಋಷಿಗಳೇ ಕೇಳಿ, ಸ್ವಲ್ಪ ವಿಸ್ತಾರವಾಗಿಯೆ ಹೇಳುತ್ತೇನೆ. ಎಲ್ಲ ದೈತ್ಯರೂ, ಪಾಪಿಗಳೂ ಹರಿಯಿಂದ ನಾಶ ಹೊಂದಿದರು. ಆದರೆ ದೇವತೆಗಳಿಗೆ ಮುಂದಾಳಾಗಿದ್ದು ಮೂರು ಲೋಕವನ್ನು ಆಳುವವನೊಬ್ಬ ಬೇಕಾಗಿದ್ದ. ದೇವತೆಗಳು, ಗಂಧರ್ವರು, ನಾಗರು, ವಿದ್ಯಾಧರರು ಇವರೆಲ್ಲರೂ ಮಾಧವನ ಬಳಿಯಲ್ಲಿ ನಿಂತು ಕೈಮುಗಿದು ಹೇಳಿದರು.

**ದೇವತೆಗಳು :-** ದೇವದೇವ, ಹೃಷಿಕೇಶ, ನಮ್ಮೆಲ್ಲರ ಶಿಕ್ಷೆ-ರಕ್ಷೆಗಳ ಹೊಣೆ ಹೊರಬಲ್ಲ ಧರ್ಮಶೀಲನಾದ ಒಬ್ಬ ರಾಜನನ್ನು ನಮಗೆ ಕರುಣಿಸು. ಮೂರುಲೋಕವೂ ಅವನ ಆಶ್ರಯದಲ್ಲಿ ನೆಮ್ಮದಿಯಿಂದ ಬಾಳುವಂತಾಗಲಿ.

**ವಿಷ್ಣು :-** ದೇವತೆಗಳೆ, ನನ್ನ ಬಳಿ ಸುವ್ರತನೆಂಬ ಒಬ್ಬ ವಿಪ್ರನಿದ್ದಾನೆ. ವೈಷ್ಣವ ತೇಜಸ್ಸು ಅವನಲ್ಲಿ ತುಂಬಿಕೊಂಡಿದೆ. ಅವನು ನನ್ನ ಲೋಕದಲ್ಲಿ ಇರಬೇಕಾದ ಅವಧಿ ತೀರಿತು. ಅವನು ಅದಿತಿದೇವಿಯ ಉದರದಲ್ಲಿ ಜನಿಸಿ ನಿಮಗೆ ರಾಜನಾಗುತ್ತಾನೆ. ಧರ್ಮದಿಂದ ಲೋಕಧಾರಕನಾಗುತ್ತಾನೆ.

ವಿಷ್ಣು ಹೀಗೆ ವರವಿತ್ತು ಅವರನ್ನು ಅದಿತಿ-ಕಶ್ಯಪರ ಬಳಿಗೆ ಕರೆತಂದನು. ಮಕ್ಕಳನ್ನು ನೋಡಿ ಕಶ್ಯಪದಂಪತಿಗಳಿಗಾನಂದವಾಯಿತು. ತಮ್ಮ ತಪಸ್ಸಿನ ಪ್ರಭಾವದಿಂದ ಮಕ್ಕಳು ನೆಮ್ಮದಿಯಂದಿರುವುದನ್ನು ಕಂಡು ತೃಪ್ತಿಯಿಂದ ಇನ್ನೂ ಬೇಕಾದ ವರವನ್ನು ಕೇಳಿ ಎಂದು ಮುಂತಾಗಿ ಸುಖಸಲ್ಲಾಪ ಮಾಡತೊಡಗಿದರು.

ವಿಷ್ಣು ಅದಿತಿದೇವಿಯನ್ನು ಕುರಿತು 'ನಿನ್ನ ಅಭೀಷ್ಟವೇನಿದೆ ಕೇಳು, ನಾನು ಪೂರೈಸುವೆನು' ಎಂದನು. ಅದಿತಿ ನುಡಿದಳು.

**ಅದಿತಿ :-** ಮಾಧವ, ನಿನ್ನ ಅನುಗ್ರಹದಿಂದ ನಾನೀ ಮಕ್ಕಳನ್ನು ಪಡೆದೆ. ಅವರು ಅಮರರಾದುದೂ ನಿನ್ನ ಅನುಗ್ರಹದಿಂದ. ಇನ್ನು ನೀನೊಮ್ಮೆ ನನ್ನ ಮಗುವಾಗಿ ನನಗಾನಂದ ತರಬೇಕು.

**ವಿಷ್ಣು :-** ದೇವಿ, ನೀನು ದೇವಕಾರ್ಯಕ್ಕಾಗಿ ಮನುಷ್ಯಳಾಗಿ ಜನಿಸಲಿರುವೆ. ಆಗ ನಾನು ಹನ್ನೆರಡನೆ ಚತುರ್ಯುಗದಲ್ಲಿ ಪರಶುರಾಮನಾಗಿ, ಇಪ್ಪತ್ತೇಳನೆ ತ್ರೇತಾಯುಗದಲ್ಲಿ

ರಾಮನಾಗಿ, ಇಪ್ಪತ್ತೆಂಟನೆ ದ್ವಾಪರದಲ್ಲಿ ವಾಸುದೇವನಾಗಿ ನಿನ್ನ ಗರ್ಭದಲ್ಲಿ ಅವತರಿಸುವೆ. ಈಗ ನೀನೊಂದು ಕಾರ್ಯಮಾಡಬೇಕಾಗಿದೆ. ಸರ್ವಲಕ್ಷಣ ಸಂಪನ್ನನಾದ ಸುಂದರ ಕುಮಾರನೊಬ್ಬನಿಗೆ ನೀನು ಜನ್ಮ ನೀಡಬೇಕು. ಅವನಿಗೆ ನಾನು ಇಂದ್ರಪದವಿಯನ್ನು ನೀಡುತ್ತೇನೆ.

ಅದಿತಿಗೆ ಆನಂದವಾಯಿತು. ಒಂದು ದಿನ ಋತುಸ್ನಾನಳಾಗಿ ಕಶ್ಯಪರಲ್ಲಿ ಪುತ್ರ ಭಿಕ್ಷೆಯನ್ನು ಬೇಡಿದಳು. ಕಶ್ಯಪರು ಆಕೆಯ ತಲೆಯ ಮೇಲೆ ಕೈಯಿಟ್ಟು 'ತಥಾಸ್ತು', ಮೂರುಲೋಕವನ್ನು ಆಳಬಲ್ಲ. ಯಜ್ಞಗಳನ್ನು ಸ್ವೀಕರಿಸಬಲ್ಲ ಪುತ್ರನೊಬ್ಬನನ್ನು ಪಡೆ' ಎಂದು ಹರಿಸಿದರು. ಒಡನೆ ವಿಷ್ಣುಲೋಕದಿಂದ ಸುವ್ರತನು ಬಂದು ಅದಿತಿಯ ಗರ್ಭದಲ್ಲಿ ಅವತರಿಸಿದ.

ಅದಿತಿ ಒಂದು ನೂರು ದಿವ್ಯ ವರ್ಷಗಳ ಕಾಲ ತೀವ್ರ ತಪಸ್ಸುಮಾಡಿ ಸೂರ್ಯನಂತೆ ಹೊಳೆವ ದಿವ್ಯತೇಜಸ್ಸನ್ನು ಪಡೆದಳು. ಆಕೆ ತಪಸ್ಸುಮಾಡುತ್ತಿದ್ದಾಗ ದೇವತೆಗಳೂ ಋಷಿಗಳೂ ಆಕೆಯ ಗರ್ಭವನ್ನು ಎಚ್ಚರದಿಂದ ಕಾಪಾಡುತ್ತಿದ್ದರು. ತಪಸ್ಸು ಪೂರ್ಣಗೊಂಡಿತು. ವಿಷ್ಣು ಅವಳಲ್ಲಿಗೆ ಬಂದು, 'ದೇವಿ, ಗರ್ಭವು ಪೂರ್ಣವಾಗಿ ಬೆಳೆದಿದೆ. ನೀನಿಗಲೆ ಪ್ರಸವಿಸಬಹುದೆಂದು ಹೇಳಿದ. ಅದಿತಿ ಸೂರ್ಯನಂತೆ ಹೊಳೆವ ಒಂದು ಸುಂದರ ಶಿಶುವಿಗೆ ಜನ್ಮವಿತ್ತಳು.

ದೇವತೆಗಳು, ಋಷಿಗಳು, ಗಂಧರ್ವರು, ಸಿದ್ಧರು, ವಿದ್ಯಾಧರರು, ಪರ್ವತ ನದೀಸಾಗರ ದೇವತೆಗಳು ಎಲ್ಲರೂ ಸರ್ವಲಕ್ಷಣ ಸಂಪನ್ನನಾದ ಚತುರ್ಭುಜಾಕೃತಿಯ ಆ ದಿವ್ಯ ಶಿಶುವನ್ನು ಕಣ್ತುಂಬನೋಡಿ ಹರ್ಷಪಟ್ಟರು. ಗಂಧರ್ವರು ಹಾಡಿದರು. ಅಪ್ಸರೆಯರು ಕುಣಿದರು. ಬ್ರಹ್ಮ-ವಿಷ್ಣು-ಮಹೇಶ್ವರರೂ ಕಶ್ಯಪರೂ ಮತ್ತು ಬೃಹಸ್ಪತ್ಯಾಚಾರ್ಯರೂ ಶಿಶುವಿಗೆ ನಾಮಕರಣ ಮಾಡಿದರು.

ವಸುದತ್ತ, ವಸುದ, ಅಖಂಡಲ, ಮರುತ್ವಾನ್, ಮಘವನ್, ಬಿಡ್‌ಜಾ, ಪಾಕಶಾಸನ, ಶಕ್ರ ಮುಂತಾದ ಅನೇಕ ನಾಮಗಳನ್ನಿತ್ತರು. ಮಂಗಳಸ್ನಾನಮಾಡಿಸಿ ವಿಶ್ವಕರ್ಮ ನಿರ್ಮಿತವಾದ ದಿವ್ಯ ಆಭರಣಗಳನ್ನು ತೊಡಿಸಿದರು. ಶುಭಮುಹೂರ್ತದಲ್ಲಿ ಬಹುಸಂಭ್ರಮದಿಂದ ಇಂದ್ರಪದವಿಯಲ್ಲಿ ಕುಳ್ಳಿರಿಸಿ ಪಟ್ಟಾಭಿಷೇಕಮಾಡಿದರು.

ಈ ಇಂದ್ರನಂಥ ಸುಂದರ ಬಲಿಷ್ಠ ಪುರುಷರಿನ್ನಿಲ್ಲ. ವಿಷ್ಣುವಿನ ಅನುಗ್ರಹದಿಂದ ದಿವ್ಯ ಐಶ್ವರ್ಯಪಡೆದ ಮಹಾಪುರುಷನೆಂದರೆ ಈತನೆ ಎಂದು ಶುಕ್ರಾಚಾರ್ಯರು ಹಾಡಿಹೊಗಳಿದರು.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಭೂಮಿಖಂಡದ ದೇವಾಸುರ ಚರಿತದಲ್ಲಿ ಇಂದ್ರಾಭಿಷೇಕವೆಂಬ ಎರಡನೆಯ ಅಧ್ಯಾಯ ಮುಗಿದುದು*

—o—

 

**ಸೂತ ಉವಾಚ**

**ಸೂತ :-** ಕಶ್ಯಪರ ಇನ್ನೊಬ್ಬ ಮಡದಿ ದನುದೇವಿ ಪುತ್ರಶೋಕದಿಂದ ಪೀಡಿತಳಾಗಿ ದಿತಿಯ ಮನೆಗೆ ಬಂದು ಅಳತೊಡಗಿದಳು. ದಿತಿ ಸಮಾಧಾನ ಪಡಿಸಲು ಯತ್ನಿಸಿದಳು.

**ದಿತಿ :-** ತಂಗಿ, ಏಕೆ ಅಳುತ್ತಿರುವೆ ? ಶುಂಭ, ನಿಶುಂಭ, ಹಿರಣ್ಯಾಕ್ಷ, ಹಿರಣ್ಯಕಶಿಪುಗಳಂಥ ಹತ್ತಾರುಮಂದಿ ಪರಾಕ್ರಮಿಗಳಾದ ಮಕ್ಕಳು ನಿನಗಿದ್ದಾರೆ. ನೀನಳಲು ಕಾರಣವಿಲ್ಲ. ಒಬ್ಬ ಮಗನಿದ್ದರೂ ಹೆಣ್ಣು ಪುತ್ರವತಿ ಎನಿಸುವಳಲ್ಲವೆ ?

**ದನು :-** ಅಕ್ಕ, ನಿನಗೇನೂ ತಿಳಿಯದು ನೋಡು. ಆ ಅದಿತಿಗೆ ಹಿಂದೆ ವಿಷ್ಣು ಅನೇಕ ವರಗಳನ್ನಿತ್ತುದು ಸಾಲದೆ ? ಈಗ ಅವಳ ಕಿರಿಯಮಗ ವಸುದತ್ತನಿಗೆ ಮೂರು ಲೋಕದ ಒಡೆತನನ್ನಿತ್ತಿದ್ದಾನೆ. ಅದಿತಿ ಈಗ ಸುಖದ ಸುಪ್ಪತ್ತಿಗೆಯಲ್ಲಿ ಮೆರೆಯುತ್ತಿದ್ದಾಳೆ. ಆ ವಸುದತ್ತನೂ ಇಂದ್ರಪದವಿಯಲ್ಲಿ ಕುಳಿತು ಎಲ್ಲ ದೇವತೆಗಳೊಡನೆ ಎಲ್ಲ ವಿಲಾಸ-ವೈಭವಗಳನ್ನನುಭವಿಸುತ್ತಿದ್ದಾನೆ.

**ದಿತಿ :-** ತಂಗಿ, ಏನೆಂದೆ ? ನನ್ನ ಮತ್ತು ನಿನ್ನ ಮಕ್ಕಳು ಇದನ್ನೆಲ್ಲ ನಿರ್ವೀರ್ಯರಾಗಿ ನೋಡುತ್ತ ಕುಳಿತಿದ್ದರೆ? ಇಂದ್ರಪದವಿಯನ್ನು ಅವರೇಕೆ ಆಕ್ರಮಿಸಿಕೊಳ್ಳಲಿಲ್ಲ? ಎಲ್ಲವನ್ನೂ ವಿವರಿಸಿ ಹೇಳು.

**ದನು :-** ಅಕ್ಕ, ನಾನೇನು ಹೇಳಲಿ? ದೇವಾಸುರಯುದ್ಧದಲ್ಲಿ ವಿಷ್ಣು ಅಸುರರನ್ನೆಲ್ಲ ನಾಶಪಡಿಸಿದ್ದಾನೆ. ಬೆಂಕಿ ಹುಲ್ಲಿನರಾಶಿಯನ್ನು 'ಸುಡುವಂತೆ ಅಸುರ ಸೇನೆಯನ್ನು ಅಳಿಸಿದ್ದಾನೆ. ಬೆಂಕಿಯಲ್ಲಿ ಹುಳುಗಳು ಬಿದ್ದು ಸಾಯುವಂತೆ ಆ ವಿಷ್ಣುವಿನೊಡನೆ ಹೋರಾಡಿ ನನ್ನ ನಿನ್ನ ಮಕ್ಕಳು ಸತ್ತಿದ್ದಾರೆ.

ಈ ಮಾತಿನಿಂದ ದಿತಿಗೆ ಸಿಡಿಲೆರಗಿದಂತಾಯಿತು. ಮೂರ್ಛೆ ಕವಿಯಿತು. ಎಚ್ಚತ್ತು ಗೋಳಿಟ್ಟಳು. ಕಲ್ಲು ಕರಗುವಂತೆ ಅತ್ತಳು. ಕಶ್ಯಪರು ನೋಡಿ ಮನಕರಗಿ ಸಂತಯಿಸಿದರು.

**ಕಶ್ಯಪ :-** ಪ್ರಿಯೆ, ಈ ಸಂಸಾರದಲ್ಲಿ ಯಾರು ಯಾರಿಗೆ ಮಕ್ಕಳು ? ಯಾರು ಯಾರಿಗೆ ಬಾಂಧವರು ? ಈ ಮೋಹವನ್ನು ಬಿಡುವವರೆ ಧೀರರು. ನಿನ್ನ ಮಕ್ಕಳೂ ಸತ್ಯ ಧರ್ಮಗಳನ್ನು ಬಿಟ್ಟು ಬಿಟ್ಟಿದ್ದರು. ಇಂದ್ರಿಯಗಳಿಗೆ ವಶರಾಗಿದ್ದರು. ತಮ್ಮ ಮೇಲೆ ತಮಗೆ ಹತೋಟಿ ಇಲ್ಲದವರು ಶತ್ರುಗಳನ್ನು ಗೆಲ್ಲಬಲ್ಲರೆ ? ಅವರು ತಮ್ಮ ತಪ್ಪಿನಿಂದ ತಾವೇ ವಿಷ್ಣುವಿನ ಕೈಯಲ್ಲಿ ಮಡಿದರು. ಇದರಲ್ಲಿ ದೇವತೆಗಳು ನಿಮಿತ್ತ ಮಾತ್ರ. ನೀವೆಲ್ಲರೂ ದಕ್ಷನ ಮಕ್ಕಳು, ನನ್ನ ಪ್ರೀತಿಯ ಮಡದಿಯರು. ನಿಮ್ಮ ಬಯಕೆಗಳನ್ನೆಲ್ಲ ಪೂರೈಸುವವ ನಾನಿದ್ದೇನೆ. ವ್ಯರ್ಥಶೋಕವನ್ನು ಬಿಟ್ಟುಬಿಡು. ಮನಸ್ಸಿಗೆ ಸಮಾಧಾನ ತಂದುಕೊಳ್ಳು.

**ತಸ್ಮಾಚ್ಛೋಕೋ ನ ಕರ್ತವ್ಯಃ ಸತ್ಯ ಮೋಕ್ಷವಿನಾಶನಃ ।**
**ಶೋಕೋ ಹಿ ನಾಶಯೇತ್ ಪುಣ್ಯಂ ಕ್ಷಯಾತ್ ಪುಣ್ಯಸ್ಯ ನಶ್ಯತಿ ॥**

ಸತ್ಯ, ಶೌಚ ಮುಂತಾದ ಧರ್ಮದ ಆಚರಣೆಗೂ ಮೋಕ್ಷಸಾಧನೆಗೂ ಶೋಕವೆಂಬುದು ವಿಘ್ನರೂಪವಾಗಿದೆ. ಹಿಂದೆಗಳಿಸಿದ ಪುಣ್ಯವನ್ನು ಅದು ನಾಶಪಡಿಸುತ್ತದೆ. ಹೀಗೆ ಪುಣ್ಯ ಕ್ಷಯವಾದರೆ ದುರ್ಗತಿಯುಂಟಾಗುತ್ತದೆ. ಆದ್ದರಿಂದ ಶೋಕವನ್ನು ಮಾಡಕೂಡದು. ಹೀಗೆ ಹೇಳಿ ಕಶ್ಯಪರು ಸುಮ್ಮನಾದರು.

**ದಿತಿರುವಾಚ**

**ದಿತಿ :-** ನಾಥ, ನೀನನ್ನುವುದು ನಿಜ ಆದರೂ ನನ್ನ ಮಕ್ಕಳೆಂಬ ಅಭಿಮಾನದಿಂದ ಪರಿತಪಿಸುತ್ತಿದ್ದೇನೆ. ಆತ್ಮಹತ್ಯೆಗೆ ಯತ್ನಿಸುವಷ್ಟು ದುಃಖ, ಮಾನಭಂಗ, ಸಂತಾಪ ನನಗಾಗುತ್ತಿದೆ.

**ಕಶ್ಯಪ :-** ಪ್ರಿಯೆ, ನಾನು ಹೇಳುವುದನ್ನು ಸ್ವಲ್ಪ ಕೇಳು. ಈ ಸಂಸಾರ ಬಂಧನವೆಂಬುದೊಂದು ಮಾಯೆ. ನಿಜವಾಗಿ ಯಾರೂ ಯಾರಿಗೂ ಬಂಧುಗಳಲ್ಲ, ಮಿತ್ರರಲ್ಲ. ತನಗೆ ತಾನೆ ಬಂಧು, ತಾನೆ ಮಿತ್ರ.

**ಆಚಾರೇಣ ನರೇ ದೇವಿ ಸುಖಿತ್ವಮುಪಜಾಯತೇ**
**ಅನಾಚಾರೇಣ ಪಾಪೇನ ನಾಶಂ ಯಾತಿ ತಥಾಧ್ರುವಂ ॥**

ಮಾನವನು ತಾನೆ ಸದಾಚಾರದಲ್ಲಿದ್ದು ತನ್ನ ಸುಖ ಸಾಧಿಸಿಕೊಳ್ಳಬೇಕು. ಪಾಪಕರವಾದ ಅನಾಚಾರಮಾಡಿದರೆ ನಿಶ್ಚಯವಾಗಿಯೂ ವಿನಾಶಹೊಂದುತ್ತಾನೆ. ಅಸತ್ಯಪೂರಿತ ದುಷ್ಕರ್ಮದಿಂದ ಕ್ರೂರಯೋನಿಯಲ್ಲಿ ಜನ್ಮಪ್ರಾಪ್ತವಾಗುತ್ತದೆ.

**ರಿಪುತ್ವೇ ವರ್ತತೇ ಮರ್ತ್ಯಃ ಪ್ರಾಣಿನಾಂ ನಿತ್ಯಸಂಸ್ಥಿತಃ ।**
**ರಿಪವಸ್ತಸ್ಯ ವರ್ತಂತೇ ಯತ್ರತತ್ರ ನ ಸಂಶಯಃ ॥**

**ಮೈತ್ರೇಣ ವರ್ತತೇ ಮರ್ತ್ಯೋ ಯದಾ ಲೋಕೇ ಪ್ರಿಯೇ ಶುಭೇ ।**
**ತದಾ ತಸ್ಯ ಭವಂತ್ಯೇವ ಮಿತ್ರಾಃ ಸರ್ವತ್ರ ಭಾಮಿನಿ ॥**

**ಕೃಷಿಕಾರೋ ಯದಾ ದೇವಿ ಕ್ಷೇತ್ರೇ ಬೀಜಂ ಸುಸಂಸ್ಥಿತಃ ।**
**ಯಾದೃಶಂ ತು ವಪತ್ಯೇವ ತಾದೃಶಂ ಫಲಮಶ್ನುತೇ ॥**

ಪ್ರಾಣಿಗಳನ್ನು ದ್ವೇಷಿಸಿದರೆ ಆ ಮಾನವನಿಗೆ ಎಲ್ಲಿ ನೋಡಿದರೂ ಶತ್ರುಗಳೇ ಇರುತ್ತಾರೆ. ಸ್ನೇಹದಿಂದಿದ್ದರೆ ಎಲ್ಲೆಡೆಗಳಲ್ಲಿಯೂ ಸ್ನೇಹಿತರೆ ದೊರಕುತ್ತಾರೆ. ಬೇಸಾಯಗಾರನಿಗೆ ಸಿಗುವ ಫಲ ಆತ ಬಿತ್ತುವ ಬೀಜಕ್ಕೆ ಸಮನಾಗಿರುತ್ತದೆ.

ಪ್ರಿಯೆ, ನಿನ್ನ ಮಕ್ಕಳು ಪಾಪಮಾಡಿದರು. ಉತ್ತಮ ಪದವಿಯನ್ನು ಕಳೆದು ಕೊಂಡರು.

**ಆತ್ಮ ಕರ್ಮಾನುಸಾರೇಣ ಫಲಂ ಭುಂಜಂತಿ ಜಂತವಃ ।**

ಪ್ರತಿಯೊಬ್ಬ ಜೀವಿಯೂ ತನ್ನ ಕರ್ಮಕ್ಕೆ ತಕ್ಕ ಫಲವನ್ನೇ ತಾನುಣ್ಣುತ್ತಾನೆ. ನಾವು ಚಿಂತಿಸಿ ಫಲವಿಲ್ಲ.

ಪಾಂಚಭೌತಿಕವಾದ ಈ ಶರೀರದ ಮೇಲಣ ಮೋಹವೊಂದೆ ಈ ಎಲ್ಲ ದುಃಖಕ್ಕೆ ಮೂಲಕಾರಣ. ಆತ್ಮನು ನಿರ್ಮಲ, ಪುಣ್ಯಸ್ವರೂಪಿ, ತತ್ವಜ್ಞಾನ ಮತ್ತು ನಿರ್ಮಲಧ್ಯಾನ ಇವೆರಡು ಅವನ ಹಿತಚಿಂತಕರು, ಸೇವಕರು. ಒಮ್ಮೆ ಆತ್ಮನೆದುರಿನಲ್ಲಿ ಪಂಚಭೂತಗಳು ಮೂರ್ತಿಮತ್ತಾಗಿ ಕಾಣಿಸಿಕೊಂಡುವು. ಆತ್ಮ ಅವರ ಸ್ನೇಹಬಯಸಿ ಅದಕ್ಕಾಗಿ ಜ್ಞಾನವನ್ನು ಅವರೆಡೆಗೆ ಕಳಿಸಲುದ್ಯುಕ್ತನಾದ. ಜ್ಞಾನ ಪ್ರತಿಭಟಿಸಿತು.

**ಜ್ಞಾನ** :- ಆತ್ಮನೆ, ಪರಿಶುದ್ಧನಾಗಿರುವ ನಿನಗೆ ಬೇಡ, ಈ ಪಂಚಭೂತಗಳ ಸಂಗ, ಇದರಿಂದ ನೀನು ಮೋಹಪಾಶದಲ್ಲಿ ಸಿಲುಕುವೆ, ಮಹಾದುಃಖಕ್ಕೆ ಈಡಾಗುವೆ.

**ಆತ್ಮ** :- ಸರಿ, ಹಾಗಿದ್ದರೆ ನಿನ್ನಿಚ್ಛೆಯಂತಾಗಲಿ.

ಹೀಗೆ ಹೇಳುತ್ತ ಆತ್ಮ ಧ್ಯಾನದಾಸರೆಯಲ್ಲಿ ಸುಮ್ಮನೆ ಕುಳಿತ, ಆದರೆ ಪಂಚಭೂತಗಳು ಸುಮ್ಮನಿರಲಿಲ್ಲ. ಅವು ಆತ್ಮನೆಡೆಗೆ ಬುದ್ಧಿಯನ್ನು ಕಳಿಸಿದುವು. ಬುದ್ಧಿ ದೂತಿಯಾಗಿ ಬಂದು ಹೇಳಿತು.

**ಬುದ್ಧಿ** :- ಆತ್ಮನೆ, ಪಂಚಭೂತಗಳು ಇನ್ನಾರೂ ಅಲ್ಲ, ನಿನ್ನವರೆ, ನಿನ್ನ ಸಂಗ ಬಯಸುತ್ತಿದ್ದಾರೆ. ಈ ಧ್ಯಾನವನ್ನು ನೀನು ಬಿಟ್ಟುಬಿಡು.

ಆಗ ತಿರುಗಿ ಜ್ಞಾನ ಆತ್ಮನನ್ನೆಚ್ಚರಿಸಿತು.

**ಜ್ಞಾನ** :- ಆತ್ಮನೆ, ಮೋಸ ಹೋಗಬೇಡ ! ಧ್ಯಾನವನ್ನು ಬಿಟ್ಟು ಪಂಚಭೂತಗಳ ಸಂಗಮಾಡಿದರೆ ಮುಂದೆ ಮಹಾ ಅನರ್ಥವಿದೆ. ನನ್ನನ್ನೂ ತೊರೆದು ಅಜ್ಞಾನದಲ್ಲಿ ಮುಳುಗಿ ಹೋಗುವೆ !

ಆತ್ಮನು ಬೆದರಿ ಬುದ್ಧಿಯನ್ನು ಹಿಂದೆ ಕಳಿಸಿಬಿಟ್ಟ. ಪಂಚಭೂತಗಳು ಬಿಡಲಿಲ್ಲ. ತಾವೇ ಆತ್ಮನ ಬಳಿಗೆ ಬಂದು ತಮ್ಮ ಶಕ್ತಿಪ್ರಭಾವಗಳನ್ನು ಬಣ್ಣಿಸತೊಡಗಿದುವು.

**ಪೃಥ್ವಿ** :- ಶರೀರವು ಏನೂ ಕೆಲಸ ಮಾಡಬೇಕಾದರೂ ನಾನೇ ಅದಕ್ಕೆ ಆಧಾರ. ಚರ್ಮ, ಮಾಂಸ, ಅಸ್ಥಿ ಎಲ್ಲವೂ ನಾನೆ. ಉಗುರು ಕೂದಲುಗಳೂ ನಾನೆ, ಶರೀರದಲ್ಲಿ ಎಲ್ಲರಿಗಿಂತ ಹೆಚ್ಚಿನ ಸ್ಥಾನ ಪ್ರಭಾವಗಳು ನನ್ನವು. ಮೂಗಿನಲ್ಲಿರುವ ಘ್ರಾಣೇಂದ್ರಿಯ ನನ್ನ ಸೇವಕ.

**ವಾಯು** :- ಶರೀರದಲ್ಲಿ ಉಚ್ಛ್ವಾಸನಿಶ್ವಾಸಗಳೆ ನಾನು. ನಾನಿಲ್ಲದೆ ಶರೀರದ ಯಾವ ಕೆಲಸವೂ ನಡೆಯಲಾರದು. ಶರೀರವನ್ನೆಲ್ಲ ವ್ಯಾಪಿಸಿರುವ ತ್ವಗಿಂದ್ರಿಯವು ನನ್ನ ಸೇವಕ.

**ತೇಜ** :- ಆಹಾರ ಪಚನವಾಗುವುದು ನನ್ನಿಂದ. ಕಣ್ಣುಗಳಲ್ಲಿರುವ ಚಕ್ಷುರಿಂದ್ರಿಯ ನನ್ನ ಸೇವಕ.

**ಅಪ್** :- ಶರೀರದಲ್ಲಿ ಶುಕ್ರಧಾತು ನಾನು, ಮಜ್ಜೆ, ರಕ್ತ, ಲಾಲಾರಸ ಎಲ್ಲವೂ ನಾನೆ. ಶರೀರದಲ್ಲಿ ಎಲ್ಲ ಕಡೆ ನನ್ನ ಸಂಚಾರವಿದೆ. ಎಲ್ಲಕ್ಕೂ ನನ್ನಿಂದಲೆ ಪೋಷಣೆ. ನಾಲಗೆಯಲ್ಲಿರುವ ರಸನೇಂದ್ರಿಯವು ನನ್ನ ಸೇವಕ.

**ಘ್ರಾಣ :-** ಗಂಧವು ನನ್ನ ಗುಣ. ಸುಗಂಧ-ದುರ್ಗಂಧಗಳ ವಿವೇಕಜ್ಞಾನ ಬರುವುದು ನನ್ನಿಂದ. ಸುಗಂಧ ದ್ರವ್ಯಗಳ ಸೇವನೆಯಿಂದ ಶರೀರಕ್ಕೆ ಪೋಷಣೆ ಮತ್ತು ದುರ್ಗಂಧಯುಕ್ತ ಪದಾರ್ಥಗಳ ತ್ಯಾಗದಿಂದ ರಕ್ಷಣೆ ದೊರೆಯುವುದು ನನ್ನ ಅಧೀನ. ಬುದ್ಧಿಯ ಪ್ರೇರಣೆಯಿಂದ ನಾನೀ ಕೆಲಸವನ್ನು ಮಾಡುತ್ತೇನೆ.

**ಶ್ರವಣ :-** ಶಬ್ದವು ನನ್ನ ಗುಣ. ಬುದ್ಧಿಯ ಪ್ರೇರಣೆಯೊಂದಿದ್ದರೆ ನಾನು ಶುಭ-ಅಶುಭ, ಪ್ರಿಯ-ಅಪ್ರಿಯ, ಸತ್ಯ-ಅಸತ್ಯ ಎಲ್ಲ ವಿಧದ ಮಾತುಗಳನ್ನೂ ಆಲಿಸಬಲ್ಲೆ. ಎಲ್ಲತರದ ಧ್ವನಿಗಳನ್ನೂ ಗುರುತಿಸಬಲ್ಲೆ.

**ತ್ವಕ್ :-** ಸ್ಪರ್ಶವು ನನ್ನ ಗುಣ. ಬುದ್ಧಿಯ ಪ್ರೇರಣೆ ಪಡೆದು ನಾನು ಶರೀರದೊಳಗೆ ಪಂಚಪ್ರಾಣವಾಯುಗಳ ಸಂಚಾರವನ್ನರಿಯಬಲ್ಲೆ. ಹೊರಗಿಂದ ಶರೀರವನ್ನು ಸ್ಪರ್ಶಿಸುವ ತಂಪು, ಬಿಸಿ, ಗಾಳಿ, ಬಿಸಿಲು, ಮಳೆಗಳನ್ನರಿಯಬಲ್ಲೆ. ಶರೀರಗಳ ಪರಸ್ಪರ ಆಲಿಂಗನದ ಸುಖವನ್ನು ಅನುಭವಿಸಬಲ್ಲೆ.

**ಚಕ್ಷುಸ್ :-** ರೂಪವು ನನ್ನ ಗುಣ. ಬುದ್ಧಿಯ ಪ್ರೇರಣೆಯಿಂದ ಲೋಕದಲ್ಲಿರುವ ಎಲ್ಲ ವಿಧದ ಸುಂದರ-ವಿಕಾರ ಆಕೃತಿಗಳನ್ನು ಗುರುತಿಸಿ ಅನುಭವಿಸಬಲ್ಲೆ.

**ರಸ :-** ರಸವು ನನ್ನ ಗುಣ. ಬುದ್ಧಿಯ ಸಹಾಯದಿಂದ ನಾನು ಲೋಕದಲ್ಲಿರುವ ಎಲ್ಲ ಬಗೆಯ ಸಿಹಿ-ಕಹಿಗಳನ್ನರಿಯಬಲ್ಲೆ. ಷಡ್ರಸಗಳನ್ನು ವಿವೇಚಿಸಿ ತಿಳಿಯಬಲ್ಲೆ.

**ಬುದ್ಧಿ :-** ನಾನಿಲ್ಲದೆ ಹೋದರೆ ಶರೀರ ನಿಲ್ಲಲಾರದು. ನನ್ನ ಪ್ರೇರಣೆಯಿಂದಲೆ ನೀನೆಲ್ಲ ಕಾರ್ಯಗಳನ್ನು ಮಾಡಬಲ್ಲೆ.

**ಕರ್ಮ :-** ನೀನು ಯಾವ ದಾರಿಯಲ್ಲಿ ನಡೆಯಬೇಕೆನ್ನುವುದನ್ನು ನಿರ್ಧರಿಸಿ ಆ ದಾರಿಯಲ್ಲಿ ನಿನ್ನನ್ನು ಕಳಿಸುವವನು ನಾನು.

ಬಳಿಕ ಪಂಚಭೂತಗಳೂ, ಪಂಚೇಂದ್ರಿಯಗಳೂ, ಬುದ್ಧಿಕರ್ಮಗಳೂ ಸೇರಿ ನುಡಿದವು-

'ನಾವೆಲ್ಲರೂ ಸೇರಿ ನಿನ್ನ ಶರೀರವನ್ನು ಉತ್ಪಾದಿಸುವೆವು. ಆ ಶರೀರದಲ್ಲಿ ನೀನು ನೆಲೆಸುವಿ. ಅಲ್ಲಿ ನೀನಿರುವ ತನಕ ನಾವಿರುವೆವು. ಆದ್ದರಿಂದ ನಿನ್ನ ಸ್ನೇಹ ನಮಗೆ ಬೇಕು.'

**ಆತ್ಮ :-** ನಿಮ್ಮಿಷ್ಟದಂತೆ ಆಗಲಿ. ಆತ್ಮನಿಗೆ ಮೋಹ ಕವಿಯಿತು. ರಾಗ-ದ್ವೇಷಗಳ ಸೆಳವು ಅದಮ್ಯವಾಯಿತು. ಜ್ಞಾನ-ಧ್ಯಾನಗಳೆಷ್ಟು ಎಚ್ಚರಿಕೆ ನೀಡಿದರೂ ಪ್ರಯೋಜನವಾಗಲಿಲ್ಲ. ಪಂಚಭೂತಗಳೊಡ ನಾಟವನ್ನೇ ಆತ್ಮ ಪ್ರೀತಿಯಿಂದ ಸ್ವೀಕರಿಸಿದ.

ಅಪ್ಪರಲ್ಲಿ ಮಲಮೂತ್ರಗಳ ನಡುವೆ ನಾರುತ್ತಿದ್ದ ನೀರಸುಳಿಯಲ್ಲಿ ಗರ್ಭ ಅವಿರ್ಭವಿಸಿತ್ತು. ಆತ್ಮ ಪಂಚಭೂತ, ಪಂಚೇಂದ್ರಿಯ, ಬುದ್ಧಿ, ಕರ್ಮಗಳೊಡನೆ ಆ ಗರ್ಭದಲ್ಲಿ ಬಿದ್ದು ನರಳತೊಡಗಿದ ಅಸಹಾಯಕನಾಗಿ ದುಃಖದಿಂದ ಒರಲಿದ.

**ಆತ್ಮ :-** ಪಂಚಭೂತಗಳೆ, ನಿಮ್ಮ ಸಂಗದ ಫಲವಾಗಿ ನನಗೀ ದುರ್ಗತಿ ಬಂದೊದಗಿತು. ಈಗ ನಾನೇನು ಮಾಡಲಿ ?

**ಪಂಚಭೂತಗಳು :-** ಆತ್ಮನೆ, ಸ್ವಲ್ಪ ತಾಳು. ಗರ್ಭಪೂರ್ತಿಯಾಗಿ ಬೆಳೆಯಲಿ. ಬಳಿಕ ಹೊರಗೆ ಹೋಗುವೆ. ನಮ್ಮ ಈ ಶರೀರ ಸಾಮ್ರಾಜ್ಯದ ಅಧಿಪತಿಯಾಗಿ ಎಲ್ಲ ಸುಖಭೋಗಗಳನ್ನನುಭವಿಸಲಿರುವೆ.

ಆದರೆ ತಾಳಲಾಗದ ವೇದನೆ ಇರುವಾಗ 'ತಾಳು'ವುದೆಂತು ? ಹೇಗಾದರೂ ಅಲ್ಲಿಂದ ಪಲಾಯನ ಮಾಡಬಯಸಿದನಾತ್ಮ.

**ಕಶ್ಯಪ ಉವಾಚ**

**ಕಶ್ಯಪ :-** ಆತ್ಮನಿಗೆ ದಿನದಿಂದ ದಿನಕ್ಕೆ ಗರ್ಭವಾಸದ ದುಃಖ ಉಲ್ಬಣಗೊಂಡಿತು. ಹಾ ! ಹಾ ! ಎಂದು ಗೋಳಿಡತೊಡಗಿದನಾತ. ಅಂದು ಜ್ಞಾನ, ಧ್ಯಾನಗಳು ಕೊಟ್ಟಿದ್ದ ಎಚ್ಚರಿಕೆಯನ್ನು ಮೂಢತನದಿಂದ ನಾನು ಕಡೆಗಣಿಸಿದುದಕ್ಕೆ ತಕ್ಕ ಶಾಸ್ತಿ ಈಗ ಆಗುತ್ತಿದೆ ಎಂದು ಮನವರಿಕೆಯಾಯಿತು. ಜ್ಞಾನವನ್ನು ಕೂಗಿ ಕರೆದು ಕ್ಷಮೆ ಕೇಳಿದ. ಅದು ಪ್ರೀತಿಯಿಂದ ನುಡಿಯಿತು.

**ಜ್ಞಾನ :-** ಆತ್ಮನೆ, ನೀನು ಧ್ಯಾನದ ಬಳಿ ಕ್ಷಮೆ ಬೇಡಿ, ಅದರ ಆಶ್ರಯ ಪಡೆ. ಆಗ ನಿನಗೆ ಗರ್ಭವಾಸದ ದುಃಖ ಮರೆಯಾಗುವುದು. ಧ್ಯಾನದ ಆನಂದ ಲಭಿಸುವುದು.

ಆತ್ಮ ಧ್ಯಾನವನ್ನು ಕೂಗಿ ಕರೆದು 'ಕಾಪಾಡು' ಎಂದು ಮೊರೆಯಿಟ್ಟ. ಧ್ಯಾನವು ಒಡನೆ ಅಭಯನೀಡಿ ತನ್ನಾಶ್ರಯದಲ್ಲಿಟ್ಟುಕೊಂಡಿತು. ಆತ್ಮನೀಗ ಸುಖಿಯಾದ, ಗರ್ಭವಾಸದ ದುಃಖವನ್ನು ಮರೆತ. ಜ್ಞಾನ-ಧ್ಯಾನಗಳ ಸಂಗದಿಂದ ಮೋಹವನ್ನು ತ್ಯಜಿಸಿ.

**ಇತೋ ನಿಷ್ಕ್ರಾಂತ ಮಾತ್ರಸ್ತು ತ್ಯಜೇ ಪಂಚಾತ್ಮಕಂ ವಪ್ರಃ**
**ಏವಂ ಚಿಂತಯತೇ ನಿತ್ಯಂ ಗರ್ಭವಾಸಗತಃ ಪ್ರಭುಃ**

'ಈ ಗರ್ಭದಿಂದ ಹೊರಗೆ ಹೋದೊಡನೆ ಪಾಂಚಭೌತಿಕ ಶರೀರದಿಂದ ಮೋಕ್ಷ ಪಡೆಯುವೆನು' ಎಂದು ಗರ್ಭವಾಸದಲ್ಲಿರುವ ಆತ್ಮ ಪ್ರತಿಕ್ಷಣವೂ ಸಂಕಲ್ಪ ಮಾಡುತ್ತಿರುತ್ತಾನೆ.

ಅದರೇನು ? ಪ್ರಸವಕಾಲದ ಪ್ರಜಾಪತ್ಯ ವಾಯುವಿನ ಆಘಾತದಿಂದ ಗರ್ಭವು ಹೊರಗೆ ತಳ್ಳಲ್ಪಟ್ಟಾಗ ಆತ್ಮಾನುಜ್ಞಾನ-ಧ್ಯಾನಗಳಿಂದ ಬೇರ್ಪಟ್ಟು ಮೋಹಕ್ಕೊಳಗಾದ. ಜ್ಞಾನಧ್ಯಾನಗಳನ್ನು ಮರೆತುಬಿಟ್ಟ. ಕ್ರಮೇಣ ವಿಷಯಲಾಲಸೆಯನ್ನು ಬೆಳೆಸಿಕೊಂಡ. ಇಂದ್ರಿಯಗಳಿಗೆ ವಶನಾದ. ಬಂಧು-ಬಾಂಧವರ ಮೋಹದ ಬಲೆಯಲ್ಲಿ ಸಿಲುಕಿ.

**ಕೈವರ್ತೇನ ಯಥಾ ಬದ್ಧಃ ಶಕುಲೋ ಜಾಲಬಂಧನೈಃ**

ಬೆಸ್ತನಿಂದ ಬಲೆಯಲ್ಲಿ ಬಂಧನಕ್ಕೊಳಗಾದ ಸಣ್ಣ ಮೀನಿನಂತೆ ಚಡಪಡಿಸಿದ. ಆಗಲೆ ಕಾಮಕ್ರೋಧಾದಿ ಅಂತಃಶತ್ರುಗಳು ದಾಳಿ ಇಟ್ಟರು. ಪುತ್ರಶೋಕಾದಿ ದುಃಖಗಳು ನಿತ್ಯ ಪೀಡಿಸಿದವು. ಇಂಥ ದುರ್ಭರ ಪ್ರಸಂಗದಲ್ಲೊಮ್ಮೆ ದೈವಾತ್ ವೈರಾಗ್ಯ ಅವನ ದೃಷ್ಟಿಗೆ ಬಿದ್ದ. ಯಾರ ಭಯವೂ ಇಲ್ಲದೆ ನಿರಾತಂಕವಾಗಿ ಪ್ರಶಾಂತಸ್ಥಿತಿಯನ್ನು ಅನುಭವಿಸುತ್ತ ಏಕಾಂಗಿಯಾಗಿ ಕುಳಿತಿದ್ದ ವೈರಾಗ್ಯ ಆತನ ಕಣ್ಣಿಗೆ ಬೆತ್ತಲೆಯಾಗಿರುವಂತೆ ಕಂಡ. ಆಶ್ಚರ್ಯದಿಂದ ಕೇಳಿದನಾತ್ಮ.

**ಆತ್ಮ :-** ಯಾರಯ್ಯ ನೀನು ? ಎಲ್ಲ ಜನರ ಮಧ್ಯೆ, ಅದರಲ್ಲಿಯೂ ಹೆಣ್ಣು ಮಕ್ಕಳು- ಯುವತಿಯರು. ವೃದ್ಧೆಯರು. ತಾಯಂದಿರು-ಇರುವಲ್ಲಿ ಬೆತ್ತಲೆಯಾಗಿ ತಿರುಗಲು ನಿನಗೆ ಲಜ್ಜೆಯೆನಿಸುವುದಿಲ್ಲವೆ ?

**ವೈರಾಗ್ಯ** :- ಯಾರು ಬೆತ್ತಲೆ ? ನಾನೊ, ನೀನೊ ? ನಾನು ಹುಟ್ಟುವಾಗಲೆ ಜ್ಞಾನದ ಬಟ್ಟೆಉಟ್ಟೇಹುಟ್ಟಿದ್ದೇನೆ. ನೀನಿನ್ನೂ ಬೆತ್ತಲೆಯಾಗೇ ಇರುವೆ. ಎಲ್ಲ ಮರ್ಯಾದೆಯನ್ನೂ ತೂರಿಬಿಟ್ಟು ಇಂದ್ರಿಯಗಳು ಹೇಳಿದಂತೆ ಕುಣಿಯುತ್ತಿರುವೆ.

**ಆತ್ಮ** :- ಅದೇನು ಮರ್ಯಾದೆ ಎಂದರೆ ?

**ವೈರಾಗ್ಯ** :- ಎಂಥ ಸುಖದುಃಖಗಳಲ್ಲಿಯೂ ಮನಸ್ಸಿನ ಸ್ಥೈರ್ಯ ಕಳೆದುಕೊಳ್ಳದಿರುವುದೆ ಮರ್ಯಾದೆ. ಅದನ್ನು ನೀನು ಬಿಟ್ಟಿರುವೆ. 'ನನಗೆ ಲಜ್ಜೆ ಎನಿಸುವುದಿಲ್ಲವೆ ? ಎಂದು ನೀನು ಕೇಳಿದೆ. 'ಇಲ್ಲ' ಎನ್ನುತ್ತೇನೆ. ಲಜ್ಜೆ ಎಂದರೆ ಏನು ? 'ನಾನು ಬೆತ್ತಲೆ, ಜನರ ಮಧ್ಯದಲ್ಲಿ ಕುಳಿತುಕೊಳ್ಳುವಂತಿಲ್ಲ' ಎಂಬ ಭಾವನೆಯ ಲಜ್ಜೆ. ನಾನು ಬೆತ್ತಲೆಯಲ್ಲ. ನನ್ನ ಸುತ್ತ ಜನರೂ ಇಲ್ಲ. ನಾನು ಏಕಾಂಗಿ. ಜನರೆಂದರೆ ಯಾರೆಂದು ತಿಳಿದಿರುವೆ ? ಕುಂಬಾರನು ಮಣ್ಣನ್ನು ಚಕ್ರದಲ್ಲಿಟ್ಟು ತಿರುಗಿಸಿ ತನಗೆ ಬೇಕೆನಿಸಿದ ಆಕೃತಿಗಳನ್ನು ತೋರಿಸುವಂತೆ ಸೃಷ್ಟಿಕರ್ತನು ನಾನಾ ಜಂತುಗಳನ್ನು ನಿರ್ಮಿಸುತ್ತಾನೆ. ಅವೆಲ್ಲ ಏನಾದರೊಂದು ಕಾರಣದಿಂದ ನಾಶಹೊಂದುತ್ತವೆ. ಜನ ಅಂದರೆ ಇವು ಅಲ್ಲ. ನಾಶಹೊಂದದೆ ಸದಾ ಇರುವ ಪಂಚಭೂತಗಳ ಜನರು. ಅವರು ನಿನ್ನ ಸ್ನೇಹಿತರು. ನಿನ್ನ ಶರೀರದ ಒಳಗೂ ಹೊರಗೂ ವ್ಯಾಪಿಸಿರುವರು. ನನ್ನ ಸುತ್ತಮುತ್ತ ಅವರಾರೂ ಇಲ್ಲ. ಹಾಗಾದರೆ ಯಾರಿಗೆ ಈ ಲಜ್ಜೆ ?

ಹೆಣ್ಣು ಮಕ್ಕಳಿದ್ದಾರೆ ಎಂದೆ ನೀನು. ಅವರು ಯಾರು ? ನೀರು ತುಂಬಿದ ಅನೇಕ ಪಾತ್ರೆಗಳಲ್ಲಿ ಚಂದ್ರನ ಅನೇಕ ಪ್ರತಿಬಿಂಬಗಳು ಬಿದ್ದರೂ ಆ ಚಂದ್ರನೊಬ್ಬನೆ. ಶರೀರದಲ್ಲಿ ಕಾಣುವ ಸ್ತ್ರೀ-ಪುರುಷರೆಂಬ ಆಕಾರ ಭೇದ ವೈಚಿತ್ರ್ಯಗಳು ಆತ್ಮನಿಗೆ ಸಂಬಂಧಿಸಿಲ್ಲ. ಸೃಷ್ಟಿಕರ್ತನಿಗೆ ಇಂಥ ವಿಚಿತ್ರ ಆಕಾರಗಳನ್ನು ನಿರ್ಮಿಸುವುದೊಂದಾಟ. ಆದ್ದರಿಂದ ನೀನು ತೋರಿಸುವ ಹೆಣ್ಣುಗಳು ನಿಜವಾಗಿ ಹೆಣ್ಣುಗಳಲ್ಲ. ಪಂಚಭೂತಗಳ ಸಹವಾಸದಿಂದ ಕೆಟ್ಟಿರುವ ನಿನ್ನಂಥ ಆತ್ಮಗಳಿಗೆ ಮಾಯಾಮೋಹಮಯವಾದ ಪಾಪಮೂಲವಾದ ಯೋನಿದ್ವಾರ, ಕುಚ, ನಿತಂಬಗಳಲ್ಲಿ ತಾರುಣ್ಯದ ಮಾಂಸಲತೆಯು ಮೋಹಕವಾಗಿ ಕಾಣಬಹುದು. ಮುಂದೆ ಸಂಭವಿಸುವ ಪತನಕ್ಕೂ ಹೇತುವಾಗಬಹುದು.

ನಿಜವಾದ ಹೆಣ್ಣು ಎಂದರೆ ಪ್ರಕೃತಿ. ಅವಳೊಂದಿಗೆ ರಮಿಸುವ ನಿನ್ನಂಥ ಪುರುಷನೆ ಗಂಡು. ನನಗೆ ಈ ಹೆಣ್ಣಿನ ಮೋಹವಿಲ್ಲವೆಂದ ಮೇಲೆ ಯಾರಿಗೆ ಈ ಲಜ್ಜೆ ?

ನೀನು ಹೇಳುವ ವೃದ್ಧೆಯರು, ಯುವತಿಯರು, ತಾಯಂದಿರು ಯಾರು ? ಸುಕ್ಕುಗಟ್ಟಿದ ಮೈ, ಚರ್ಮ, ನರೆತು ಬೆಳಗಾದ ಕೂದಲು, ಮುಪ್ಪಿನಿಂದ ಜರ್ಜರಿತವಾಗಿ ಬಲಹೀನವಾದ ಅಂಗಾಂಗಳುಳ್ಳ ವಯಸ್ಸಾದ ಹೆಣ್ಣು ವೃದ್ಧೆಯಲ್ಲ. ಜ್ಞಾನದಿಂದ ವೃದ್ಧಳಾದ ನಿಜವಾದ ವೃದ್ಧೆ ಎಂದರೆ ಸುಮತಿ. ಜೀವನ ಬಳಿಯೆ ಇದ್ದು ಸುಖ ನೀಡುವುದರಿಂದ ಯುವತಿ ಎಂದರೂ ಅದುವೆ. ಪ್ರಾಣಿಗಳ ಪಾಲನೆ-ಪೋಷಣೆ; ಹಿತಸಂರಕ್ಷಣೆಗಳಿಗಾಗಿಯೆ ಇರುವದರಿಂದ ಅದುವೆ ನಿಜವಾದ ತಾಯಿಯೂ ಹೌದು. ಅದರ ಮುಂದೆ ನೀನೆಷ್ಟು ಲಜ್ಜೆ ತೋರುತ್ತಿರುವೆ ?

**ಆತ್ಮ** :- ಹಿತವಾದ ಈ ತಂಪಿನ ನುಡಿಗಳನ್ನಾಡುತ್ತಿರುವ ನೀನಾರು ಮಹಾತ್ಮ ?

**ವೈರಾಗ್ಯ :-** ಅವನ ಲಕ್ಷಣವನ್ನು ನಾನು ವರ್ಣಿಸುವುದಿಲ್ಲ. ಅವನನ್ನೇ ಇಲ್ಲಿಗೆ ಕೂಗಿ ಕರೆಯುತ್ತೇನೆ.

ಹೀಗೆ ಹೇಳಿ ವೈರಾಗ್ಯವು ವಿವೇಕವನ್ನು ಕೂಗಿ ಕರೆಯಿತು.

ಒಡನೆ ವಿವೇಕ ಬಂದನು. ಜತೆಗೆ ಶಾಂತಿ, ಕ್ಷಮೆಗಳೆಂಬ ಇಬ್ಬರು ಮಡದಿಯರು, ಯೋಗವೆಂಬ ಹಿರಿಯ ಮಗ, ಧಾರಣಾ, ಧೀ ಎಂಬಿಬ್ಬರು ಹೆಣ್ಣು ಮಕ್ಕಳು, ಮೋಕ್ಷವೆಂಬ ಗುರು ಇವರೆಲ್ಲರೂ ಬಂದಿದ್ದರು. ಆ ವಿವೇಕವು ಸದಾ ನಿರ್ಮಲ, ನಿರಹಂಕಾರಿ, ಸಂದೇಹಗಳಿಗೆಲ್ಲಾ ಶತ್ರು, ಜ್ಞಾನಕ್ಕೆ ಮಿತ್ರ. ಧರ್ಮ-ಸತ್ಯಗಳೆಂಬ ಅಮಾತ್ಯರು ಸದಾ ಬಳಿಯಲ್ಲಿರಬೇಕು. ಅದು ವೈರಾಗ್ಯದ ಬಳಿ ಬಂದು ಕೇಳಿತು.

**ವಿವೇಕ :-** ತಮ್ಮ ಏಕೆ ನನ್ನನ್ನು ಕೂಗಿ ಕರೆದೆ ?

**ವೈರಾಗ್ಯ :-** ಅಣ್ಣಾ, ನೋಡು ಈ ಆತ್ಮನನ್ನು. ಈತ ಪಂಚಭೂತಗಳ ಸಹವಾಸದಿಂದ ಸಂಸಾರದ ಮೋಹಪಾಶದಲ್ಲಿ ಬದ್ಧನಾಗಿ ಜ್ಞಾನ-ಧ್ಯಾನಗಳ ಆಸರೆಯನ್ನು ಬಿಟ್ಟಿದ್ದಾನೆ. ಅವನ ಸ್ಥಿತಿಗತಿಗಳನ್ನು ವಿಚಾರಿಸು.

**ವಿವೇಕ :-** ಆತ್ಮನೆ, ನೀನು ಸುಖವಾಗಿರುವೆಯಾ ? ಸಂಸಾರಕ್ಕೆ ಬಂದ ಮೇಲೆ ನೀನು ಯಾವ ಯಾವ ಸುಖವನ್ನನುಭವಿಸಿದೆ, ಹೇಳು.

**ಆತ್ಮ :-** ಸುಖವೆ ? ಇಲ್ಲ. ಗರ್ಭವಾಸದಲ್ಲಿ ದಾರುಣ ದುಃಖ. ಹುಟ್ಟಿದ ಮೇಲೂ ಬಾಲ್ಯದಲ್ಲಿ ಅಜ್ಞಾನದಿಂದ ಎಷ್ಟೋ ಅಕಾರ್ಯಮಾಡಿ ದುಃಖವನ್ನನುಭವಿಸಿದೆ. ಬಳಿಕ ಯೌವನದಲ್ಲಿ ಮಾತ್ರ ಮಡದಿಯೊಡನಾಟದಲ್ಲಿ ಸೌಖ್ಯ ಕಂಡಿದ್ದೇನೆ. ಮುಪ್ಪಿನಲ್ಲಿ ತಿರುಗಿ ಹೆಂಡಿರು-ಮಕ್ಕಳ ವಿಯೋಗದಿಂದ ದುಃಖ. ನಾನಾ ಬಗೆಯ ಚಿಂತೆಗಳಿಂದ ಮನಸ್ತಾಪ. ಸುಖವೆಂಬುದೆ ಇಲ್ಲ. ಮಹಾತ್ಮ, ನಾನೀಗ ಏನು ಮಾಡಲಿ? ಈ ಸಂಸಾರದಿಂದ ಬಿಡುಗಡೆ ಹೊಂದಲು ಉಪಾಯವೇನಿದೆ ಹೇಳು ?

**ವಿವೇಕ :-** ಚಿಂತಿಸಬೇಡ, ವೈರಾಗ್ಯದ ಆಸರೆಯನ್ನುಬೇಡು. ಅವನೆ ನಿನಗೆ ಸುಖ-ಶಾಂತಿ ದೊರಕಿಸುವನು.

**ಜ್ಞಾನ :-** ಅಂದು ನಾವು ಹೇಳಿದ ಮಾತನ್ನು ಅಲಕ್ಷಿಸಿ ನಮ್ಮನ್ನು ಬಿಟ್ಟು ಹೋಗಿದ್ದೆ. ಆಗಲಿ, ತಿರುಗಿ ಈ ತಪ್ಪುಮಾಡಬೇಡ. ನಾವು ನಿನ್ನ ಸೇವಕರೆಂಬುದನ್ನು ಮರೆಯಬೇಡ. ನೀನು ಈಗ ಧ್ಯಾನದ ಬಳಿಗೆ ಹೋಗು. ಅವನು ನಿನಗೆ ಸುಖ ನೀಡುತ್ತಾನೆ.

ಆತ್ಮ ಧ್ಯಾನದ ಬಳಿಗೆ ನಡೆದ. ಧ್ಯಾನ ನುಡಿಯಿತು.

**ಧ್ಯಾನ :-** ಯಾವ ಕೆಲಸ ಮಾಡುವಾಗಲೂ ನೀನು ನಮ್ಮನ್ನು ಮರೆಯದಿರು. ವೈರಾಗ್ಯ ವಿವೇಕ, ಜ್ಞಾನಗಳ ಸಹಾಯದಿಂದ ನನ್ನಾಶ್ರಯದಲ್ಲಿ ಏಕಾಂತದಲ್ಲಿ ಕುಳಿತು ನಿನ್ನಾತ್ಮವನ್ನು ಸ್ಥಿರವಾಗಿ ನೋಡುತ್ತಿರು. ಆಗ ಬಿರುಗಾಳಿ ಇಲ್ಲದ ಸ್ಥಳದಲ್ಲಿ ಸ್ಥಿರವಾಗಿ ಉರಿಯುವ ದೀಪ ನಿಧಾನವಾಗಿ ಕಾಡಿಗೆಯನ್ನು ಚೆಲ್ಲುತ್ತ ಪ್ರಜ್ವಲಿಸಿ ಪ್ರಕಾಶಿಸುವಂತೆ ನೀನೂ ಪರಿಶುದ್ಧನಾಗಿ ಹೊಳೆಯತೊಡಗುವೆ, ಚಿಂತಿಸಬೇಡ. ಉತ್ತಮವಾದ ವಿಷ್ಣುಲೋಕವು ಮುಂದೆ ನಿನಗೆ ಕಾದಿದೆ.

**ಕಶ್ಯಪ ಉವಾಚ**

**ಕಶ್ಯಪ:**-ಧ್ಯಾನ, ಜ್ಞಾನ ಮುಂತಾದವುಗಳ ಈ ಉಪದೇಶದಿಂದ ಆತ್ಮನೆಚ್ಚರಗೊಂಡು ಪಂಚಭೂತಗಳ ಸ್ನೇಹಸಂಬಂಧವನ್ನು ಕಿತ್ತುಹಾಕಲು ಹಾತೊರೆದು ಸಮಯ ಕಾಯುತ್ತ ಕುಳಿತ. ಶರೀರದ ಯೋಗಕ್ಷೇಮದ ಬಗ್ಗೆ ನಿರ್ಲಕ್ಷ್ಯದಿಂದಿರತೊಡಗಿದ.

ಪ್ರಿಯೆ, ನೀನಿದನ್ನು ವಿಚಾರಮಾಡು. ಹುಟ್ಟುವಾಗ ಬಂದಿರುವ ಶರೀರ ಪ್ರಾಣವಾಯುಗಳ ಸಂಬಂಧವೆ ಆತ್ಮನಿಗೆ ನಿತ್ಯವಲ್ಲ. ಹೆಂಡಿರು-ಮಕ್ಕಳು ಧನ-ಕನಕಗಳ ಸಂಬಂಧ, ಒಡೆತನ ಆತ್ಮನಿಗೆಲ್ಲಿಯದು? ಎಲ್ಲವೂ ಜನಾರ್ದನನದು. ದೇವತೆಗಳಲ್ಲಿಯೂ, ನಿನ್ನ ಮಕ್ಕಳಲ್ಲಿಯೂ ಅಂತರ್ಯಾಮಿಯಾಗಿರುವವನು ಅವನೆ. ಬ್ರಹ್ಮ, ವಿಷ್ಣು, ಮಹೇಶ್ವರ ರೂಪದಿಂದ ಸೃಷ್ಟಿ-ಸ್ಥಿತಿ-ಸಂಹಾರಗಳನ್ನು ಮಾಡುವವನೂ ಅವನೆ, ಅವನು ಧರ್ಮಾತ್ಮ, ಧರ್ಮಸ್ವರೂಪ, ಧರ್ಮರಕ್ಷಕ, ದೇವತೆಗಳು ಧರ್ಮವನ್ನು ಪಾಲಿಸಿದರು. ನಿನ್ನ ಮಕ್ಕಳು ಕಡೆಗಣಿಸಿದರು. ಆದರಿಂದ ವಿಷ್ಣು ದೇವತೆಗಳನ್ನುಳಿಸಿದ. ನಿನ್ನ ಮಕ್ಕಳನ್ನಳಿಸಿದ. ಇದರಲ್ಲೇನಾಶ್ಚರ್ಯ?

**ವಿಷ್ಣೋಃ ಕಾಯಮಿದಂ ಧರ್ಮಂ ಸತ್ಯಂ ಹೃದಯಮೇವ ಚ ।**
**ಯಸ್ತೌ ಪಾಲಯತೇ ನಿತ್ಯಂ ತಸ್ಯವಿಷ್ಣುಃಪ್ರಸೀದತಿ ॥**

ಧರ್ಮವೇ ವಿಷ್ಣುವಿನ ಶರೀರ. ಸತ್ಯವೇ ಅವನ ಹೃದಯ. ಸತ್ಯ ಧರ್ಮಗಳನ್ನು ಪಾಲಿಸಿದವನಿಗೆ ಅವನೊಲಿವ.

ನಿನ್ನ ಮಕ್ಕಳು ಅಧರ್ಮವನ್ನಾಶ್ರಯಿಸಿದುದರಿಂದ ಅಂತರ್ಯಾಮಿಯಾದ ವಿಷ್ಣು ಮುನಿದು ಅವರಿಂದ ಪಾಪವನ್ನೇ ಮಾಡಿಸಿದ, ಬಳಿಕ ಆ ಪಾಪದ ದೆಸೆಯಿಂದ ಅವರನ್ನು ಕೊಂದ. ಹೀಗೆ ಒಳಗೂ ಹೊರಗೂ ಅವನೆ ಶತ್ರುವೆನಿಸಿದ. ದೇವಿ, ನಿನ್ನ ಮಕ್ಕಳನ್ನು ಅವನೆ ಹುಟ್ಟಿಸಿದ, ಅವನೆ ಕೊಂದ. ಏಕೆ ಮೋಹದಿಂದ ಇಲ್ಲದ ಹೊಣೆಗಾರಿಕೆಯನ್ನು ಹೊತ್ತುಕೊಳ್ಳುವೆ.

ಕಶ್ಯಪರ ಈ ಹಿತವಚನವನ್ನು ಕೇಳಿದ ಮೇಲೆ ದಿತಿ ಅಳುನಿಲ್ಲಿಸಿದಳು.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಭೂಮಿಖಂಡದ ದೇವಾಸುರಚರಿತ್ರೆಯಲ್ಲಿ ಶರೀರೋತ್ಪತೀ ಮೂರನೇಯ ಅಧ್ಯಾಯ ಮುಗಿದುದು*

—o—

## ದೈತ್ಯತಪಶ್ಚರ್ಯೆ



**ಸೂತ ಉವಾಚ**

ಯುದ್ಧದಲ್ಲಿ ದಾನವರು ಸೋತುದರಿಂದ ಅವರ ದರ್ಪವಡಗಿತು. ಅವರು ದುಃಖದಿಂದ ತಂದೆಯಾದ ಕಶ್ಯಪರ ಬಳಿಗೆ ಬಂದು ಕೇಳಿದರು.

**ದಾನವರು :-** ದೇವತೆಗಳಂತೆ ನಾವು ನಿನ್ನ ಮಕ್ಕಳು. ಅವರಿಗಿಂತ ಹೆಚ್ಚಿನ ಬಲವೀರ್ಯ ಪರಾಕ್ರಮ ಉಳ್ಳವರು, ಧೀರರು, ಉಪಾಯಶೂರರು, ಪ್ರಯತ್ನಶಾಲಿಗಳು. ಮದಿಸಿದ ಸಾವಿರ ಆನೆಗಳ ಬಲ ನಮ್ಮಲ್ಲಿ ಪ್ರತಿಯೊಬ್ಬನಿಗೂ ಇದೆ. ಸಂಖ್ಯೆಯಲ್ಲಿಯೂ ನಾವು ದೇವತೆಗಳಿಗಿಂತ ಹೆಚ್ಚು. ಅವರು ಎಲ್ಲ ವಿಧದಿಂದಲೂ ನಮಗಿಂತ ಕಡಿಮೆ. ಆದರೆ ಯುದ್ಧದಲ್ಲಿ ಸೋಲುವುದು ನಾವು ಹೀಗೇಕೆ ?

**ಕಶ್ಯಪ :-** ಮಕ್ಕಳೆ, ತಂದೆಯಾದವನು ಬೀಜಬಿತ್ತುವ ಕಾರ್ಯ ಮಾತ್ರ ಮಾಡುವನು. ಬೀಜ ಮೊಳೆತು ತಾನೇ ನೀರು ಗೊಬ್ಬರಗಳನ್ನು ಹೀರಿ ಬೆಳೆಯಬೇಕು. ಇದೆಲ್ಲವೂ ಕರ್ಮಾನುಸಾರ ನಡೆಯುವುದು. ಆ ಕರ್ಮವು ಎರಡು ವಿಧ.

**ತಪೋಧ್ಯಾನ ಸಮಾಯುಕ್ತಂ ತಾರಣಾಯ ಹಿತಂ ಸತಾಃ ।**
**ಪಾತಕಂ ಪತನಾಯೋಕ್ತಂ ಸರ್ವದೈವ ನ ಸಂಶಯಃ ॥**

ಮಕ್ಕಳೆ, ತಪಸ್ಸು - ಧ್ಯಾನಗಳಿಂದ ಸಹಿತವಾಗಿ ಮಾಡಿದ ಕರ್ಮವು ತಾರಕವಾಗಿದ್ದು ಹಿತವೆನಿಸುತ್ತದೆ. ಪಾಪಕರ್ಮವು ಮಾತ್ರ ಎಂದೂ ಅಧೋಗತಿಗೆ ಕಾರಣವಾಗುತ್ತದೆ. ಇದರಲ್ಲಿ ಸಂಶಯವಿಲ್ಲ. ದೈಹಿಕ ಬಲ, ಜನಸಹಾಯ, ಧೈರ್ಯ, ಪರಾಕ್ರಮಗಳೇ ಇರಲಿ ಪುಣ್ಯಹೀನರಲ್ಲಿ ಅವು ವಿಫಲವಾಗುವುವು. ದೊಡ್ಡ ಬೆಟ್ಟದ ತುದಿಯಲ್ಲಿ ಬೆಳೆದ ಮರಗಳು ಎಷ್ಟೇ ಬಲವಾಗಿ ಬೇರೂರಿದ್ದರೂ ಬಿರುಗಾಳಿಯ ವೇಗವನ್ನು ಅವು ತಡೆದುಕೊಳ್ಳಲಾರವು. ಇಹಪರಗಳೆರಡರಲ್ಲಿಯೂ ತಾರಕವಾದ ಸತ್ಯಧರ್ಮ, ತಪಸ್ಸುಗಳನ್ನು ನೀವು ಪರಿತ್ಯಜಿಸಿದಿರಿ. ಅಧರ್ಮವನ್ನು ಪರಿಗ್ರಹಿಸಿದಿರಿ, ದೇವತೆಗಳು ಸತ್ಯ, ಧರ್ಮ, ತಪಸ್ಸುಗಳನ್ನು ಪರಿಗ್ರಹಿಸಿದರು. ಅಧರ್ಮವನ್ನು ಪರಿತ್ಯಜಿಸಿದರು.

**ಯತ್ರ ಸತ್ಯಂ ಚ ಧರ್ಮಶ್ಚ ತಪಃ ಪುಣ್ಯಂ ತಥೈವ ಚ ।**
**ಯತ್ರ ವಿಷ್ಣುರ್ಹೃಷೀಕೇಶೋ ಜಯಸ್ತತ್ರ ಪ್ರದೃಶ್ಯತೇ ॥**

ಎಲ್ಲಿ ಸತ್ಯ, ಧರ್ಮ, ತಪಸ್ಸು, ಪುಣ್ಯಗಳಿವೆಯೋ ಎಲ್ಲಿ ಇಂದ್ರಿಯ ಪ್ರೇರಕನಾದ ಹರಿ ಇರುವನೋ ಅಲ್ಲಿ ಜಯ ಕಂಡುಬರುತ್ತದೆ.

ಮಕ್ಕಳೆ, ನೀವೂ ಜ್ಞಾನ, ಧ್ಯಾನ ತಪಸ್ಸುಗಳನ್ನಾಶ್ರಯಿಸಿರಿ. ದೇವತೆಗಳಲ್ಲಿಯೂ ವಿಷ್ಣುವಿನಲ್ಲಿಯೂ ವೈರಬುದ್ಧಿಯನ್ನು ಬಿಡಿರಿ. ಸ್ನೇಹದಿಂದಿರಿ. ನಿಮಗೆ ಒಳ್ಳೆಯದಾಗುವುದು.

ದಾನವರು ಕಶ್ಯಪರ ಈ ಉಪದೇಶವನ್ನು ಕೇಳಿ ಅವರಿಗೆ ನಮಸ್ಕರಿಸಿ ಹೊರಟು ಹೋದರು. ಬಳಿಕ ಪರಸ್ಪರ ಮಂತ್ರಾಲೋಚನೆಗೆ ತೊಡಗಿದರು. ರಾಜನಾದ ಹಿರಣ್ಯಕಶಿಪು ತನ ಮತವನ್ನು ಸಭೆಗೆ ತಿಳಿಸಿದ.

**ಹಿರಣ್ಯಕಶಿಪು :-** ನಾವೆಲ್ಲರೂ ತೀವ್ರ ತಪಸ್ಸು ಮಾಡುವುದು ಉತ್ತಮ.

**ಹಿರಣ್ಯಾಕ್ಷ :-** ನಾನೂ ತೀವ್ರ ತಪಸ್ಸು ಮಾಡಬೇಕೆನ್ನುವವನು. ಆ ತಪಸ್ಸಿನ ಫಲದಿಂದ ಮೂರು ಲೋಕವನ್ನಾಳಬೇಕು. ಯುದ್ಧದಲ್ಲಿ ಕಪಟಿಯಾದ ಆ ಗೋವಿಂದನನ್ನು ಗೆದ್ದು, ದೇವತೆಗಳನ್ನೆಲ್ಲ ಕೊಂದು, ಇಂದ್ರನ ಸಿಂಹಾಸನವನ್ನು ಆಕ್ರಮಿಸಿಕೊಳ್ಳಬೇಕು.

**ಬಲಿ :-** ನಾವು ಈಗ ದುರ್ಬಲರಾಗಿದ್ದೇವೆ. ಶತ್ರುಗಳು ಪ್ರಬಲರಾಗಿದ್ದಾರೆ. ಇಂಥ ಪ್ರಸಂಗಗಳಲ್ಲಿ ಶತ್ರುಗಳನ್ನು ಮೊದಲು ಆಶ್ರಯಿಸಿ ಬಳಿಕ ಸಮಯ ಬಂದಾಗ ಅವರನ್ನಾಕ್ರಮಿಸಬೇಕು. ಇದು ರಾಜನೀತಿ. ದೀಪದ ಕೆಳಗೆ ಕತ್ತಲು ಅಡಗಿದ್ದು, ಎಣ್ಣೆ ಆರಿದೊಡನೆ ದುರ್ಬಲವಾದ ಆ ದೀಪವನ್ನಾಕ್ರಮಿಸಿ ಸುತ್ತಲೂ ಹಬ್ಬಿಕೊಳ್ಳುತ್ತದೆ. ಆದ್ದರಿಂದ ನಾವು ಈಗ ವಿಷ್ಣುವಿನ ಆರಾಧನೆ ಮಾಡಬೇಕು. ಇದು ಧರ್ಮಶಾಸ್ತ್ರ, ನೀತಿಶಾಸ್ತ್ರಗಳೆರಡಕ್ಕೂ ಅನುಗುಣವಾಗಿದೆ. ತಾತ ಕಶ್ಯಪರೂ ಈ ನೀತಿಯನ್ನೇ ಉಪದೇಶಿಸಿದ್ದಾರೆ.

**ಹಿರಣ್ಯಕಶಿಪು :-** ಈ ನೀತಿ ಸರಿಯಲ್ಲ. ದಾನವರ ಕುಲಕ್ಕೆ ಇದು ಅಪಮಾನಕರ.

**ಉಳಿದ ದಾನವರು :-** ಬಲಿಯು ಹೇಳುವ ನೀತಿ, ದೇವತೆಗಳಿಗೆ ಪ್ರಿಯಕರವಾದುದು. ಇಂದ್ರನಿಗೆ ಗೌರವ ನೀಡುವ ಈ ನೀತಿ ದಾನವರಿಗೆ ಭಯಂಕರವೇ ಸರಿ. ತಪೋಬಲದಿಂದ ದೇವತೆಗಳನ್ನು ಗೆದ್ದು ನಮಗೆ ಬರಬೇಕಾದ ಸ್ಥಾನಗಳನ್ನು ನಾವು ಬಲಾತ್ಕಾರವಾಗಿ ಪಡೆಯುವುದೆ ಉತ್ತಮ. ಬಲಿಯ ಸೂಚನೆಯನ್ನು ತಳ್ಳಿಹಾಕಿ ಎಲ್ಲರೂ ವಿಷ್ಣುದ್ವೇಷವನ್ನೇ ಎದೆಯಲ್ಲಿ ತುಂಬಿಕೊಂಡು ಗಿರಿ ದುರ್ಗಗಳಲ್ಲಿ ಕಠಿನ ತಪಸ್ಸು ಮಾಡತೊಡಗಿದರು.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಭೂಮಿಖಂಡದಲ್ಲಿ*
*ದೈತ್ಯತಪಶ್ಚರ್ಯಾ ಎಂಬ ನಾಲ್ಕನೇಯ ಅಧ್ಯಾಯ ಮುಗಿದುದು.*

—o—

**ಋಷಿಯ ಉವಾಚ**

**ಋಷಿಗಳು :-** ದೇವಾಸುರ ಯುದ್ಧದ ವೃತ್ತಾಂತವನ್ನು ತಿಳಿದೆವು. ಆ ಮಹಾತ್ಮ ಸುವ್ರತನು ಯಾರ ಪುತ್ರ ? ಅವನು ಯಾವ ತಪಸ್ಸು ಮಾಡಿದ ? ಹರಿಯನ್ನು ಹೇಗೆ ಆರಾಧಿಸಿದ ?

**ಸೂತ :-** ಹಿಂದಿನ ಕಲ್ಪದ ಕತೆ. ನರ್ಮದಾ ನದಿಯ ತೀರದ ವಾಮನತೀರ್ಥದಲ್ಲಿ ಕುಶಿಕ ಗೋತ್ರದ ಸೋಮಶರ್ಮನೆಬ್ಬೊಬ್ಬ ಬ್ರಾಹ್ಮಣನಿದ್ದ. ಚ್ಯವನ ಮಹರ್ಷಿಯ ಮಗಳು ಸುಮನೆ ಅವನ ಮಡದಿ. ಒಂದು ದಿನ ಚಿಂತೆಯಿಂದ ತಲೆ ತಗ್ಗಿಸಿ ಸುಮ್ಮನೆ ಕುಳಿತಿದ್ದ ಪತಿಯನ್ನು ಕುರಿತು ಆಕೆ ಹೇಳಿದಳು.

**ಸುಮನೆ :-** ಪ್ರಿಯ, ಹೀಗೆ ಚಿಂತೆಮಾಡುತ್ತ ಕುಳಿತಿರಬಾರದು. ನಿನ್ನ ಈ ಚಿಂತೆಗೆ ಕಾರಣವೇನೆಂದು ನನ್ನಲ್ಲಿ ಹೇಳಬಾರದೆ ?

**ನಾಸ್ತಿ ಚಿಂತಾ ಸಮಂ ದುಃಖಂ ಕಾಯಂ ಶೋಷಣಮೇವಹಿ ।**
**ಯಸ್ತ್ವಾಂ ಸಂತ್ಯಜ್ಯ ವರ್ತೇತ ಸ ಸಂಖೇನ ಪ್ರಮೋದತೇ ॥**

ಚಿಂತೆಗೆ ಸಮನಾದ ದುಃಖ ಬೇರೆ ಇಲ್ಲ. ಅದು ಶರೀರವನ್ನು ಶೋಷಿಸುತ್ತದೆ, ಅದನ್ನು ಸರ್ವಾತ್ಮನಾಗಿ ತೊರೆದವನು ಆನಂದದಿಂದ ನಲಿಯುತ್ತಾನೆ.

ನಿನ್ನ ಚಿಂತೆಗೇನು ಕಾರಣ, ಹೇಳು.

**ಸೋಮಶರ್ಮ :-** ನಾನು ಯಾವ ಪಾಪದಿಂದ ಹೀಗೆ ಬಡವನಾಗಿ ಪುತ್ರಸಂತತಿಹೀನನಾಗಿರುವೆನೆಂದೆ ತಿಳಿಯಲಿಲ್ಲ ಆದಕ್ಕೆ ಈ ಚಿಂತೆ.

**ಸುಮನೆ :-** ಪ್ರಿಯ, ಐಶ್ವರ್ಯ, ಪುತ್ರಸಂತತಿಗಳ ಲೋಭ ನಿನ್ನನ್ನು ಚಿಂತೆ ಗೀಡುಮಾಡಿದೆ ಎಂದಂತಾಯಿತು. ನೋಡು, ಈ ಲೋಭ ಬೀಜ ಒಮ್ಮೆ ಅಂಕುರಿಸಿತೆಂದರೆ ಅದು ಮೋಹವೆಂಬ ಬೇರುಬಿಟ್ಟು, ಅಸತ್ಯವೆಂಬ ಕಾಂಡ, ಮಾಯೆಯೆಂಬ ಕೊಂಬೆ, ಮೋಸ ಡಂಭಾಚಾರಗಳೆಂಬ ಎಲೆಗಳು, ಘಾತಕತನವೆಂಬ ವಾಸನೆ ಬೀರುವ ದುರ್ಬುದ್ಧಿ ಎಂಬ ಹೂಗಳು, ಅಧರ್ಮರಸ ತುಂಬಿದ ಅಜ್ಞಾನ ಫಲಗಳು ಇವುಗಳಿಂದ ಕೂಡಿ ಪಾಪವೆಂಬ ಹೆಮ್ಮರವಾಗಿ ಬೆಳೆಯುತ್ತದೆ. ಪಾಪ ಪಕ್ಷಿಗಳಿಗಾಶ್ರಯ ನೀಡುತ್ತದೆ. ಅದರ ನೆರಳಲ್ಲಿ ಕುಳಿತವನು ಅದರ ಅಜ್ಞಾನ ಫಲದ ಅಧರ್ಮರಸವನ್ನು ಸವಿದು ಸಂತುಷ್ಟನಾಗಿ ಕೂಡಲೆ ಪತಿತನಾಗುತ್ತಾನೆ. ಒಳ್ಳೆಯ ಹೆಂಡತಿ ಮಕ್ಕಳನ್ನು ಹೇರಳ ಧನಸಂಪತ್ತನ್ನು ಪಡೆಯುವೆನೆಂದು ಹಗಲುಗನಸು ಕಾಣುತ್ತ ಕ್ಷಣಕಾಲ ಆನಂದ ಪಡುವುದು, ತಿರುಗಿ ನಿಟ್ಟುಸಿರು ಬಿಡುವುದು ಇದು ಮೂರ್ಖತನ. ನೀನು ತಿಳಿದವ. ಮೂರ್ಖರಂತೆ ಚಿಂತೆ ಮೋಹಗಳಿಗೊಳಗಾಗಬೇಡ. ಬಂಧು-ಮಿತ್ರರಿಗಾಗಿ ಹಾತೊರೆವ ಮುನ್ನ ಅವರೆಲ್ಲ ಪೂರ್ವಜನ್ಮದ ಯಾವುದಾದರೊಂದು ಸಂಬಂಧದಿಂದ ಈಗ ದೊರಕುವವರೆಂಬುದನ್ನು ಮರೆಯಬಾರದು.

**ಸೋಮಶರ್ಮ :-** ಪ್ರಿಯೆ, ಅದು ಯಾವ ತರದ ಸಂಬಂಧ ಹೇಳು.

**ಸುಮನೆ :-** ಸಂಬಂಧ ನಾನಾ ವಿಧವಾಗಿರುತ್ತವೆ. ಹಿಂದಿನ ಜನ್ಮದಲ್ಲಿ ನಾವು ಇನ್ನೊಬ್ಬರ ಸೊತ್ತನ್ನು ಅಪಹರಿಸಿದ್ದರೆ ಅವರು ಈ ಜನ್ಮದಲ್ಲಿ ನಮ್ಮ ಪ್ರೀತಿಯ ಬಂಧುಗಳಾಗಿ ಹುಟ್ಟಿ ನಮ್ಮ ಸಂಪತ್ತನ್ನು ಭೋಗಿಸುತ್ತಾರೆ. ಒಳ್ಳೆಯ ಗುಣರೂಪಗಳಿಂದ ನಮ್ಮ ಪ್ರೀತಿ ಸಂಪಾದಿಸಿ ಒಂದು ದಿನ ಅಗಲಿ ಹೋಗುತ್ತಾರೆ. ಹಾ ಪುತ್ರ! ಹಾ ಮಿತ್ರ! ಎಂದೇನೇನೋ ಪ್ರಲಾಪ ಮಾಡುತ್ತೇವೆ. ಆದರೆ ನಿಜವಾಗಿ ಯಾರು ಪುತ್ರರು ? ಯಾರು ಮಿತ್ರರು ? ಅವರೆಲ್ಲ ಬಂದು ಸೇರಿರುವುದು ಪೂರ್ವಜನ್ಮದಲ್ಲಿ ನಮ್ಮಿಂದ ಅವರಿಗಾಗಿದ್ದ ಅನ್ಯಾಯದ ಸೇಡು ತೀರಿಸಲು.

**ಸುಮನೋವಾಚ**

**ಸುಮನೆ :-** ಹಿಂದಿನ ಜನ್ಮದಲ್ಲಿ ಇನ್ನೊಬ್ಬರ ಋಣಪಡೆದು ತೀರಿಸದಿದ್ದರೆ ಅವರು ನಮ್ಮ ಬಂಧುಗಳಾಗಿ ಹುಟ್ಟಿ, ನಮ್ಮ ಐಶ್ವರ್ಯವನ್ನು ಭೋಗಿಸುತ್ತಾರೆ ಮತ್ತು ಅಪವ್ಯಯವನ್ನೂ ಮಾಡುತ್ತಾರೆ. ತಡೆದರೆ ಸಿಟ್ಟಾಗಿ ನಿಂದಿಸುತ್ತಾರೆ. ಕಟುಮಾತುಗಳನ್ನಾಡುತ್ತಾರೆ. ನಾನಾ ವಿಧವಾಗಿ ಹಿಂಸೆಕೊಡುತ್ತಾರೆ. ಸದಾ ನಿಷ್ಠುರರಾಗಿದ್ದು ಸತ್ತ ತಂದೆ-ತಾಯಿಗಳಿಗೆ ಶ್ರಾದ್ಧವನ್ನೂ ಮಾಡದಿರುತ್ತಾರೆ. ಹಿಂದಿನ ಜನ್ಮದಲ್ಲಿ ನಾವು ಇನ್ನೊಬ್ಬರನ್ನು ದ್ವೇಷಿಸಿದ್ದರೆ ಈಗ ಅವರು ನಮ್ಮ ಮಕ್ಕಳಾಗಿ ಹುಟ್ಟಿ ನಮ್ಮನ್ನು ದ್ವೇಷಿಸುತ್ತಾರೆ. ಆಟ ಆಡುತ್ತಲೇ ತಂದೆ-ತಾಯಿಗಳಿಗೆ ಹೊಡೆದು ನಗುತ್ತ ಓಡಿ ಹೋಗುತ್ತಾರೆ. ಹೆದರಿಕೊಂಡು ಮೆಲ್ಲಮೆಲ್ಲನೆ ತಿರುಗಿ ಬರುತ್ತಾರೆ. ಹೀಗೆ ಹಿಂದಿನ ವೈರಕ್ಕೆ ಸೇಡು ತೀರಿಸಿಕೊಳ್ಳುತ್ತಾರೆ. ಹಿಂದಿನ ಜನ್ಮದಲ್ಲಿ ನಾವು ಇನ್ನೊಬ್ಬರಿಗೆ ಉಪಕಾರಮಾಡಿದ್ದರೆ ಅವರು ನಮ್ಮ ಮಕ್ಕಳಾಗಿ ಹುಟ್ಟಿ ನಮ್ಮಲ್ಲಿ ಪ್ರೀತಿ ವಿಶ್ವಾಸ ಇಟ್ಟಿರುತ್ತಾರೆ. ಸದಾ ಒಳ್ಳೆಯ ಮಾತು ನಡತೆಗಳಿಂದ ಆನಂದಉಂಟುಮಾಡುತ್ತಾರೆ. ತಂದೆ-ತಾಯಿಗಳು ಸತ್ತಾಗ ದುಃಖ ತಾಳಲಾರದೆ ಅಳುತ್ತಾರೆ. ಶ್ರಾದ್ಧ, ಪಿಂಡದಾನ ಮುಂತಾದ ಸತ್ಕರ್ಮಗಳನ್ನು ಮಾಡುತ್ತ ಅವರನ್ನು ದುಃಖದಿಂದ ಸ್ಮರಿಸುತ್ತಾರೆ. ಅವರಿಗಾಗಿ ತೀರ್ಥಯಾತ್ರೆ ಕೈಗೊಳ್ಳುತ್ತಾರೆ.

ನಾವು ಪ್ರಾಯಶಃ ಯಾರ ಸೊತ್ತನ್ನೂ ಅಪಹರಿಸಲಿಲ್ಲ. ಯಾರ ಋಣವನ್ನೂ ಇಟ್ಟುಕೊಂಡಿಲ್ಲ. ಯಾರನ್ನೂ ದ್ವೇಷಿಸಲಿಲ್ಲ. ಯಾರಿಗೂ ಉಪಕಾರ ಮಾಡಿಲ್ಲ. ಇದರಿಂದ ನಮಗೆ ಮಕ್ಕಳಾಗಲಿಲ್ಲ ಎಂದು ತಿಳಿಯೋಣ. ಯಾರಿಗೂ ದಾನ ಮಾಡದಿರುವುದರಿಂದ ಈಗ ದಾರಿದ್ರ್ಯ ಬಂದಿತೆನ್ನೋಣ. ಐಶ್ವರ್ಯದ ಯೋಗವಿದ್ದರೆ ಅನಾಯಾಸವಾಗಿ ಕೈಗೆ ಬರುತ್ತದೆ. ಬಂದ ಹಣ ನಾವೆಷ್ಟೇ ಜೋಪಾನ ಮಾಡಿದರೂ ನಾವು ಹೋಗುವಾಗ ನಮ್ಮ ಹಿಂದೆ ಅದು ಬರುವುದಿಲ್ಲ ಹೀಗೆ ಐಶ್ವರ್ಯವನ್ನು ಕುರಿತು ಮಾಡುವ ಚಿಂತೆ ಯಾವಾಗಲೂ ವ್ಯರ್ಥವೆ.

ಈ ಸಂಸಾರದಲ್ಲಿ ನಿಜವಾಗಿ ಯಾರೂಯಾರಿಗೂ ಬಂಧುಗಳಲ್ಲ. ಮಿತ್ರರಲ್ಲ, ಈ ಮೋಹವನ್ನು ಬಿಡಬೇಕು.

**ಸೋಮಶರ್ಮ :-** ಪ್ರಿಯೆ, ನೀನನ್ನುವುದು ನಿಜ. ಆದರೆ ವಂಶೋದ್ಧಾರಕನಾದ ಸತ್ಪುತ್ರನನ್ನು ಪಡೆಯಬೇಕು. ದಾನ ಮಾಡುವುದಕ್ಕಾಗಿ ಧನವನ್ನಪೇಕ್ಷಿಸಬೇಕೆಂದು ಬಲ್ಲವರು ಹೇಳುತ್ತಾರೆ.

**ಏಕಃ ಪುತ್ರೋ ವರೋ ವಿದ್ವಾನ್ ಬಹುಭಿರ್ನಿರ್ಗುಣೈಸ್ತು ಕಿಂ ।**
**ಏಕಸ್ತಾರಯತೇ ವಂಶಮನ್ಯೇ ಸಂತಾಪಕಾರಕಾಃ ॥**

ವಿವೇಕಿಯಾದ ಒಬ್ಬ ಪುತ್ರನಿರುವುದೊಳಿತು. ಗುಣಹೀನರಾದ ಅನೇಕರಿಂದೇನು ? ಆ ಒಬ್ಬ ಮಗ ಕುಲವನ್ನುದ್ಧರಿಸುತ್ತಾನೆ. ಉಳಿದವರು ಕೇವಲ ದುಃಖವನ್ನೇ ಕೊಡುವವರು.

ನಾನು ಹೇಳಿದ ಪೂರ್ವಜನ್ಮದ ಸಂಬಂಧವಿಲ್ಲದೆ ಸತ್ಪುತ್ರನೊಬ್ಬ ಜನಿಸಬೇಕಾದರೆ ಈ ಜನ್ಮದಲ್ಲಿ ಪುಣ್ಯ ಸಂಪಾದಿಸಬೇಕು.

**ಜಾತಸ್ಯ ಮೃತಿರೇವಾಸ್ತಿ ಜನ್ಮ ಏವಮೃತಸ್ಯ ಚ ।**
**ಸುಜನ್ಮ ಪ್ರಾಪ್ಯತೇ ಪುಣ್ಯೈಃ ಮರಣಂ ತು ತಥೈವ ಚ ॥**

ಹುಟ್ಟಿದವನಿಗೆ ಸಾವು ತಪ್ಪಿದ್ದಲ್ಲ. ಸತ್ತವನಿಗೆ ಪುನರ್ಜನ್ಮವೂ ತಪ್ಪಿದ್ದಲ್ಲ. ಒಳ್ಳೆಯ ಜನ್ಮ ಮತ್ತು ಒಳ್ಳೆಯ ಮರಣ ದೊರಕಲು ಪುಣ್ಯಮಾಡಬೇಕು.

**ಸೋಮಶರ್ಮ**:-ಪ್ರಿಯೆ, ಪುಣ್ಯದ ಲಕ್ಷಣವೇನು ? ಅದನ್ನು ಹೇಗೆ ಆಚರಿಸಬೇಕು?

**ಸುಮನೆ** :-

**ಬ್ರಹ್ಮಚರ್ಯೇಣ ಸತ್ಯೇನ ಮಖಪಂಚಕವರ್ತನೈಃ ।**
**ದಾನೇನ ನಿಯಮೈಶ್ಚಾಪಿ ಕ್ಷಮಾ ಶೌಚೇನವಲ್ಲಭ ॥**
**ಅಹಿಂಸಯಾ ಸುಶಕ್ತ್ಯಾಚ ಅಸ್ತೇಯೇನಾಪಿ ವರ್ತನೈಃ ।**
**ಏತೈರ್ದಶಭಿರಂಗೈಸ್ತುಧರ್ಮಮೇವಂ ಪ್ರಪೂರಯೇತ್ ॥**

ಬ್ರಹ್ಮಚರ್ಯ, ಸತ್ಯ, ಪಂಚಯಜ್ಞಗಳು, ದಾನ, ನಿಯಮಗಳು, ಕ್ಷಮೆ, ಶೌಚ, ಅಹಿಂಸೆ, ಶಕ್ತಿ, ಅಸ್ತೇಯಗಳೆಂಬ ಹತ್ತು ಅಂಶಗಳ ಧರ್ಮಾಚರಣೆಯಿಂದ ಧರ್ಮಸಾಂಗವಾಗಿ ಪೂರ್ಣವೆನಿಸುವುದು.

ತ್ರಿಕರಣಪೂರ್ವಕವಾಗಿ ಸಾಂಗ ಧರ್ಮಾಚರಣೆ ಮಾಡಿದರೆ ಧರ್ಮದೇವತೆಯೊಲಿದು ಪುಣ್ಯವನ್ನನುಗ್ರಹಿಸುವನು. ಆದರಿಂದ ಬಯಸಿದುದೆಲ್ಲವೂ ದೊರಕುವುದು.

**ಸೋಮಶರ್ಮ** :- ಪ್ರಿಯೆ, ಧರ್ಮ ದೇವತೆಯ ಲಕ್ಷಣವೇನು ? ಅಂಗಗಳಾವುವು ? ಎಲ್ಲವನ್ನೂ ತಿಳಿಯಬೇಕೆಂಬ ಶ್ರದ್ಧೆ ನನ್ನಲ್ಲಿ ಮೂಡಿದೆ.

**ಸುಮನೆ** :- ಈ ಧರ್ಮದೇವತೆಯನ್ನು ದತ್ತ, ದೂರ್ವಾಸರೆಂಬ ಇಬ್ಬರು ಅತ್ರಿ ಪುತ್ರರನ್ನು ಹೊರತು ಲೋಕದಲ್ಲಿ ಇನ್ನಾರೂ ಕಂಡವರಿಲ್ಲ. ಅವರೂ ಇದಕ್ಕಾಗಿ ಲಕ್ಷವರ್ಷಗಳ ಕಾಲ ಘೋರತಪಸ್ಸು ಮಾಡಿದ್ದರು. ಆದರೂ ಮೊದಲಿಗೆ ಧರ್ಮದೇವತೆ ಮೈದೋರಲಿಲ್ಲ. ದೂರ್ವಾಸಮುನಿ ಕೋಪಗೊಂಡಾಗ ಬೆದರಿದ ಧರ್ಮದೇವತೆ ಪರಿವಾರಸಮೇತನಾಗಿ ಮೈದೋರಿ ನಿಂತ.

ಬ್ರಹ್ಮಚರ್ಯ, ತಪಸ್ಸು, ದಮ, ನಿಯಮ, ಶೌಚಗಳು ದಿವ್ಯತೇಜಸ್ಸಿನಿಂದ ಬೆಳಗುವ ಬ್ರಾಹ್ಮಣರೂಪು ತಳೆದು ನಿಂತಿದ್ದುವು. ಕ್ಷಮೆ, ಶಾಂತಿ, ಅಹಿಂಸೆ, ಶುಶ್ರೂಷೆ, ಅಕಲ್ಪನೆ, ಬುದ್ಧಿ ಪ್ರಜ್ಞೆ, ದಯೆ, ಶ್ರದ್ಧೆ, ಮೇಧೆ ಇವು ಸುಂದರ ತರುಣಿಯರ ವೇಷದಿಂದ ಬಂದಿದ್ದುವು. ಪಂಚಾಗ್ನಿಗಳು, ವೇದಗಳು, ಅಗ್ನ್ಯಾಧಾನಾದಿಗಳು, ಅಶ್ವಮೇಧಾದಿಯಜ್ಞಗಳು ಕಿರೀಟಕುಂಡಲ ದಿವ್ಯಾಭರಣಗಳಿಂದ ಉಜ್ವಲವಾಗಿ ಹೊಳೆವ ಆಕೃತಿ ಧರಿಸಿ ನಿಂತಿದ್ದುವು.

ಕಾಲರುದ್ರನಂತೆ ಕ್ರುದ್ಧನಾಗಿ ನಿಂತಿದ್ದ ದೂರ್ವಾಸಮುನಿಯನ್ನು ಕುರಿತು ಧರ್ಮದೇವತೆ ಕೇಳುತ್ತಾನೆ.

**ಧರ್ಮ :-** ಮುನಿಯೆ, ನೀನೊಬ್ಬ ದೊಡ್ಡ ತಪಸ್ವಿ. ಏಕೆ ಈ ಕೋಪ ? ಶ್ರೇಯಸ್ಸಿಗೆ ಎಂದೂ ಈ ಕೋಪವು ಮಾರಕ. ತಪಸ್ಸಿನ ಫಲ ಬೇರೆಯೇ ಇದೆ. ಇದಕ್ಕಿಂತ ಎಷ್ಟೋ ಮಿಗಿಲಾಗಿದೆ.

**ದೂರ್ವಾಸ :-** ಯಾರು ನೀನು ? ಈ ಬ್ರಾಹ್ಮಣರು. ಈ ಸುಂದರ ತರುಣಿಯರು ಇವರೆಲ್ಲ ಯಾರು ? ಹೇಳು.

**ಧರ್ಮ :-** ದಂಡಕಮಂಡಲಧಾರಿಯಾದ, ಈ ಬ್ರಾಹ್ಮಣನು **ಬ್ರಹ್ಮಚರ್ಯ,** ಕೆಂಪಗೆ ಹೊಳೆವ, ಚಿನ್ನದ ಕಣ್ಣಿನ ಈ ಬ್ರಾಹ್ಮಣನು **ಸತ್ಯ.** ವಿಶ್ವೇದೇವತೆಗಳಂತೆ ಹೊಳೆವ ಈ ಬ್ರಾಹ್ಮಣನೆ ನೀನು ಸದಾ ಆಶ್ರಯಿಸಿಕೊಂಡಿರುವ **ತಪಸ್ಸು.** ಭೂತದಯೆಯಿಂದ ತುಂಬಿ ಪ್ರಸನ್ನವಾಣಿಯನ್ನಾಡುವ ಈ ಬ್ರಾಹ್ಮಣ ನಿನಗೆ ಸದಾ ಪೋಷಣೆ ನೀಡುತ್ತಿರುವ **ದಮ,** ಕೈಯಲ್ಲಿ ಖಡ್ಗ ಹಿಡಿದು ಸಮಸ್ತ ಪಾಪಗಳಿಗೆ ಶತ್ರುವೆನಿಸಿದ, ಚಿನ್ನದ ಮೈಯ ಈ ಜಟಾಧಾರಿ ಉಗ್ರರೂಪಿ ಬ್ರಾಹ್ಮಣನೆ **ನಿಯಮ** ಕಮಂಡಲ, ದಂತಕಾಷ್ಟಗಳನ್ನು ಹಿಡಿದು ಸ್ಫಟಿಕದಂತೆ ಹೊಳೆವ ಈ ಬ್ರಾಹ್ಮಣನೆ **ಶೌಚ.**

ಸತ್ಯವೆಂಬ ಭೂಷಣದಿಂದ ಅಲಂಕೃತೆಯಾದ ಈ ಸಾಧ್ವಿಯೆ **ಶುಶ್ರೂಷೆ.** ಕೈಯಲ್ಲಿ ಕಮಲದ ಹೂವನ್ನು ಹಿಡಿದು ಮುಗಳುನಗು ಬೀರುವ ಈ ಗೌರಾಂಗಿಯೆ **ಕ್ಷಮೆ.** ದಿವ್ಯರತ್ನಾಭರಣಗಳಿಂದ ಹೊಳೆಯುತ್ತ ಶಾಂತಳಾಗಿ ನಿಂತಿರುವ ಈ ಚದುರೆಯೆ **ಶಾಂತಿ,** ಪರೋಪಕಾರ, ಸತ್ಯ, ಮಿತ ಭಾಷಣಗಳೆಂಬ ಭೂಷಣಗಳಿಂದೊಪ್ಪುವ ಈಕೆ **ಅಕಲ್ಪನೆ.** ಕಮಲದ ಹೂವಿನಲ್ಲಿ ಕುಳಿತಿರುವ ಶ್ಯಾಮಲ ವರ್ಣೆಯಾದೀ ಚೆಲುವೆ **ಅಹಿಂಸೆ** ಕೆಂಪುಸೀರೆ ಉಟ್ಟು, ಮುತ್ತಿನಾಭರಣ ತೊಟ್ಟು, ಮೋಹಕ ನಗು ಬೀರುವ ಈ ಚಿನ್ನದ ಮೈಯವಳೆ **ಶ್ರದ್ಧೆ.** ಜ್ಞಾನ-ಆನಂದಗಳಿಂದ ಮೈ, ಕೈ ತುಂಬಿಕೊಂಡು ಕೆಂಪಗೆ ಹೊಳೆವ ಈ ಮಂಗಳಮಯಿಯೆ **ಬುದ್ಧಿ,** ಎಲ್ಲರಿಗೂ ಶುಭವನ್ನೇ ಕೋರುತ್ತ ಲೋಕಕ್ಕೆ ತಾಯಿಯಂತೆ ನಿಂತಿರುವ, ವಿಪುಲಶ್ರೋಣಿಪಯೋಧರೆಯೂ ಸರ್ವಾಭರಣಭೂಷಿತೆಯೂ ಆದ ಈ ಗೌರಾಂಗಿಯೆ **ಮೇಧೆ,** ಹಂಸಚಂದ್ರರಂತೆ ಹೊಳೆವ ಮೈಯವಳು, ಬಿಳಿಸೀರೆಯುಟ್ಟು, ಮುತ್ತಿನ ಹಾರತೊಟ್ಟು, ಪುಸ್ತಕ, ಕಮಲ, ಅಕ್ಷಮಾಲೆಗಳನ್ನು ಹಿಡಿದು ಹೊಂಬಣ್ಣದ ಹೂಗಳ ಮಾಲೆತೊಟ್ಟು, ಎಲ್ಲ ಆಭರಣಗಳಿಂದೊಪ್ಪುತ್ತ ಮೂಲೋಕದ ಹಿತಕ್ಕಾಗಿ, ಘೋಷಣೆಗಾಗಿ ನಿಂತಿರುವ, ಲಾಕ್ಷಾರಸದ ಕಾಂತಿಯಿಂದ ಹೊಳೆವ ಈ ವೃದ್ಧ ತಪಸ್ವಿನಿಯೇ ನನ್ನ ತಾಯಿ, **ದಯೆ.** ನಾನೇ **ಧರ್ಮದೇವತೆ.**

**ದೂರ್ವಾಸ :-** ನೀನೇಕೆ ಬಂದೆ ? ನನ್ನಿಂದೇನಾಗಬೇಕು ?

**ಧರ್ಮ :-** ನೀನೇಕೆ ಕೋಪಿಸಿಕೊಂಡೆ ? ಇವರೆಲ್ಲ ನಿನಗೇನು ಅಪರಾಧ ಮಾಡಿದರು ಹೇಳು.

**ದೂರ್ವಾಸ :-** ಒಂದು ಲಕ್ಷ ವರ್ಷಗಳ ಕಾಲ ಇಂದ್ರಿಯ ನಿಗ್ರಹ, ಶೌಚ, ಕಾಯಕ್ಲೇಶಗಳಿಂದ ಕಠಿನ ತಪಸ್ಸು ಮಾಡಿದ್ದೇನೆ. ನೋಡು, ನನ್ನ ಈ ಶರೀರ ಎಷ್ಟು ಸೊರಗಿ ಹೋಗಿದೆ! ಆದರೂ ನಿನ್ನ ಮನ ಕರಗಲಿಲ್ಲ. ಅದರಿಂದ ಈ ಕೋಪ. ನಿನಗಿದೋ ಕೊಡುವೆ ಶಾಪ.

**ಧರ್ಮ :-** ನೀನು ತಿಳಿದವ. ನಾನು ನಾಶ ಹೊಂದಿದರೆ ಲೋಕ ಉಳಿದೀತೆ, ಹೇಳು. ನಿನಗೆ ಕ್ಲೇಶ ಉಂಟಾಗಿರುವುದು ನಿಜ. ಆದರೆ ಮುಂದೆ ನಿನಗೆ ಮಹಾಸುಖವನ್ನೇ ನೀಡುವೆನು. ತಪಸ್ವಿಯು ತಪಸ್ಸು ಮಾಡುತ್ತಲೆ ಸಾವನ್ನಪ್ಪಿದರೂ ಅವನಿಗೆ ಪರಲೋಕದಲ್ಲಿ ಸುಖ ಕೊಡುವೆನು. ಇದು ನನ್ನ ನೀತಿ. ಮೊದಲು ಸುಖ ಕೊಟ್ಟ ಬಳಿಕ ದುಃಖದಲ್ಲಿ ತಳ್ಳುವುದು ಪಾಪದ ರೀತಿ.

**ದೂರ್ವಾಸ :-** ಧರ್ಮರಾಜ, ತಪಸ್ಸಿನಿಂದ ಕ್ಲೇಶಪಡುತ್ತಿರುವವರಿಗೆ ನೀನೆಂದೂ ಸುಖ ಕೊಟ್ಟಿಲ್ಲ. ಪರಲೋಕದಲ್ಲಿ ಸುಖ ಕೊಡುವಿ ಎಂಬುದನ್ನು ಯಾರು ಬಲ್ಲರು? ಕ್ಲೇಶ ಪಡುವವರು ಕ್ಲೇಶ ಪಡುತ್ತಲೇ ಇರಬೇಕು. ಏನೂ ಮಾಡದವರು ಸುಖ ಪಡಬೇಕು. ಒಬ್ಬನು ಒಳ್ಳೆಯ ಕೆಲಸ ಮಾಡಿದರೆ ಅದರ ಸತ್ಫಲ ಉಣ್ಣುವವನಿನ್ನೊಬ್ಬ. ದುಷ್ಕರ್ಮ ಮಾಡಿದರೆ ಅವನೇ ಉಣಬೇಕು. ಕಳ್ಳರು ಈ ಶರೀರದಲ್ಲಿ ಮಾಡುವ ಪಾಪವನ್ನು ಈ ಶರೀರದಲ್ಲಿಯೇ ಉಣಬೇಕು. ತಪಸ್ಸಿಗಳು ತಾವುಗಳಿಸುವ ಪುಣ್ಯವನ್ನು ಜನ್ಮಾಂತರದಲ್ಲಿ ಉಣಬೇಕು. ಇದು ಯಾವ ನ್ಯಾಯ? ನಾನಿದನ್ನೊಪ್ಪಲಾರೆ. ನೀನು ನನ್ನ ಶಾಪಕ್ಕೆ ತುತ್ತಾಗುವೆ.

**ಧರ್ಮ :-** ಆಗಲಿ, ಮುನಿಯೆ, ನೀ ನನ್ನ ಶಪಿಸು. ನನ್ನನ್ನು ಶಪಿಸಿ ದಾಸೀಪುತ್ರನನ್ನಾಗಿ ಮಾಡು, ರಾಜನನ್ನಾಗಿ ಮಾಡು ಇಲ್ಲವೆ ಚಂಡಾಲನನ್ನಾಗಿಯೆ ಮಾಡು!

**ದೂರ್ವಾಸ :-** ಧರ್ಮರಾಜ, ನೀನು ದಾಸೀಪುತ್ರನೂ ಆಗು, ರಾಜನೂ ಆಗು, ಚಂಡಾಲನೂ ಆಗು.

ಹೀಗೆ ಮೂರು ಶಾಪವಿತ್ತು ಹೊರಟುಹೋದ ದೂರ್ವಾಸಮುನಿ. ಈ ಪ್ರಸಂಗದಲ್ಲಿ ಒಮ್ಮೆ ಧರ್ಮದೇವತೆಯ ದರ್ಶನ ಮುನಿಗೆ ದೊರಕಿತ್ತು.

**ಸೋಮಶರ್ಮ :-** ಪ್ರಿಯೆ, ಮುನಿಯ ಶಾಪದಿಂದ ಧರ್ಮರಾಜ ಎಲ್ಲಿ ಹೇಗೆ ಅವತರಿಸಿದ ? ಹೇಳು.

**ಸುಮನೆ :-** ಭರತಕುಲದಲ್ಲಿ ಯುಧಿಷ್ಠಿರನಾಗಿಯೂ, ದಾಸೀಪುತ್ರ ವಿದುರನಾಗಿಯೂ, ಧರ್ಮರಾಜನವತರಿಸಿದ. ವಿಶ್ವಾಮಿತ್ರನು ಹರಿಶ್ಚಂದ್ರನ ಸತ್ವಪರೀಕ್ಷೆ ಮಾಡಿದ ಕಾಲದಲ್ಲಿ ಶ್ಮಶಾನಪಾಲಕನಾದ ಚಂಡಾಲನಾಗಿ ಬಂದವನೂ ಈ ಧರ್ಮರಾಜನೆ. ಹೀಗೆ ಕರ್ಮಫಲವನ್ನು ಧರ್ಮದೇವತೆಯೂ ಉಣಬೇಕಾಗಿ ಬಂದಿತು.

**ಸೋಮಶರ್ಮ :-** ಬ್ರಹ್ಮಚರ್ಯ, ತಪಸ್ಸು ಮುಂತಾದವುಗಳ ಲಕ್ಷಣ ಸ್ವರೂಪಗಳನ್ನು ವರ್ಣಿಸು.

**ಸುಮನೆ :-** ಗೃಹಸ್ಥನು ಋತುಸ್ನಾತಳಾದ ತನ್ನ ಪತ್ನಿಯನ್ನು ಕೂಡುವ ನಿಯಮವಿಟ್ಟುಕೊಂಡರೆ, ಕುಲದ ಸದಾಚಾರಗಳನ್ನು ತಪ್ಪದೆ ಮಾಡುತ್ತಿದ್ದರೆ, ಅದು **ಬ್ರಹ್ಮಚರ್ಯ,** ಯತಿಯು ಧರ್ಮ, ಸತ್ಯಗಳಿಗೆ ನಿಷ್ಠನಾಗಿದ್ದು, ಪಾಪಭೀರುವಾಗಿದ್ದು ಸ್ತ್ರೀಸಂಗವನ್ನು ಪರಿತ್ಯಜಿಸಿದರೆ, ಧ್ಯಾನ-ಜ್ಞಾನಗಳಲ್ಲಿ ನಿರತನಾಗಿದ್ದರೆ ಅದು **ಬ್ರಹ್ಮಚರ್ಯ.**

ಕಾಮ, ಕ್ರೋಧಗಳನ್ನು ಬಿಟ್ಟು ಎಲ್ಲ ಪ್ರಾಣಿಗಳಿಗೂ ಉಪಕಾರ ಮಾಡುತ್ತ ಸದಾಚಾರ ನಿರತನಾಗಿರುವುದೆ ತಪಸ್ಸು. ಪರಸ್ತ್ರೀ, ಪರದ್ರವ್ಯಗಳಿಗೆ ಆಸೆ ಪಡದಿರುವುದೆ **ಸತ್ಯ.**

ಹಸಿದವನಿಗೆ ಒಂದು ತುತ್ತು ಅನ್ನ ಕೊಟ್ಟರೂ ಅದು ದೊಡ್ಡ ದಾನವೆನಿಸುವುದು. ಅದರಿಂದ ಮೋಕ್ಷ ದೊರೆಯುತ್ತದೆ. ತನ್ನ ಶಕ್ತಿಗನುಸಾರ ಒಳ್ಳೆಯ ಒಂದು ಮಾತು,

ಹುಲ್ಲಿನ ಹಾಸಿಗೆ, ಮನೆ, ನೆರಳು, ನೆಲ, ನೀರು, ಅನ್ನ, ಬಟ್ಟೆ, ಆಸನ, ಪಾದ್ಯಗಳನ್ನು ಕಪಟವಿಲ್ಲದೆ ದಾನ ಮಾಡಬೇಕು. ದೇವ, ಪಿತೃಗಳ ಆರಾಧನೆ ಮಾಡಬೇಕು. ಹೀಗೆ ಮಾಡುತ್ತಿದ್ದರೆ ಇಹ, ಪರಗಳೆರಡರಲ್ಲಿಯೂ ಸುಖವಿದೆ. ದಾನ, ಅಧ್ಯಯನಗಳಿಂದ ಸಮಯವನ್ನು ಸಾರ್ಥಕಗೊಳಿಸುವವನು ಮಾನವನೆ ಆದರೂ ದೇವನೆಂದೆ ಆತನನ್ನು ತಿಳಿಯಬೇಕು. ಶೌಚ, ಸಂತೋಷ ಮುಂತಾದ ನಿಯಮಗಳಿದ್ದರೆ ದೇವ-ದ್ವಿಜರ ಆರಾಧನೆ, ದಾನ, ವ್ರತ, ಪರೋಪಕಾರಗಳೆಲ್ಲವೂ ಫಲಿಸುತ್ತವೆ. ಪರರು ನಿಂದಿಸಿದರೂ ಹೊಡೆದರೂ ಸಹಿಸಿಕೊಂಡು ಕೋಪ ಮಾಡದಿರುವುದೇ **ಕ್ಷಮೆ.**

ಅಂತಃಕರಣದಲ್ಲಿ ತುಂಬಿರುವ ರಾಗದ್ವೇಷಗಳನ್ನು ದೂರಮಾಡುವುದು. ನಿತ್ಯ, ಸ್ನಾನ, ಆಚಮನಗಳಿಂದ ಶರೀರವನ್ನು ನಿರ್ಮಲವಾಗಿಟ್ಟುಕೊಳ್ಳುವುದು. ಹೀಗೆ ಒಳಗೂ ಹೊರಗೂ, ಶುಚಿಯಾಗಿರುವುದೆ **ಶೌಚ.**

ಒಂದು ಹುಲ್ಲನ್ನೂ ಕಾರಣವಿಲ್ಲದೆ ಕತ್ತರಿಸದಿರುವುದು, ಇನ್ನೊಬ್ಬರಿಗೆ ಹಿಂಸೆಮಾಡದೆ ಸಂಯಮದಿಂದಿರುವುದು. ತನ್ನಂತೆ ಇತರರೆಂದು ಬಗೆಯುವುದು-ಇದು **ಅಹಿಂಸೆ.**

ಎಷ್ಟೇ ಕಷ್ಟ ಬಂದರೂ ವಿಚಲಿತನಾಗದೆ, ಪ್ರಾಣಿಗಳಲ್ಲಿ ವೈರವನ್ನು ಚಿಂತಿಸದೆ ಇರುವುದೆ **ಶಾಂತಿ.** ಇದರಿಂದ ಸುಖವಿದೆ. ಪರಸ್ತ್ರೀ, ಪರದ್ರವ್ಯಗಳನ್ನಪಹರಿಸದಿರುವುದು. ಅಪಹರಿಸುವ ಯೋಚನೆಯನ್ನು ಮಾಡದಿರುವುದು **ಅಸ್ತೇಯ.** ಇಂದ್ರಿಯಗಳನ್ನು ನಿಗ್ರಹಿಸಿ ಮನಸ್ಸಿನ ವಿಕಾರಗಳನ್ನೂ ತಡೆಹಿಡಿದು ಅವುಗಳ ಉಚ್ಛೃಂಖಲತೆಯನ್ನು ಹತ್ತಿಕ್ಕುವುದೆ **ದಮ.** ತ್ರಿಕರಣಪೂರ್ವಕವಾಗಿ ಗುರುಹಿರಿಯರ ಅಪೇಕ್ಷೆಯನ್ನೀಡೇರಿಸಲು ಯತ್ನಿಸುವುದೆ **ಶುಶ್ರೂಷೆ.**

ಇಂತಹ ಧರ್ಮಗಳನ್ನಾಚರಿಸಿದರೆ ಸ್ವರ್ಗ, ಮೋಕ್ಷಗಳೂ ಲಭಿಸುತ್ತವೆಂದಮೇಲೆ ಪುತ್ರ, ಸಂತತಿ, ಸಂಪತ್ತುಗಳು ಸಿಗುವುದರಲ್ಲೇನು ಸಂದೇಹ ? ಆದ್ದರಿಂದ ನೀನೂ ಧರ್ಮವನ್ನಾಚರಿಸು.

**ಸೋಮಶರ್ಮ :-** ಪ್ರಿಯೆ, ಧರ್ಮದ ಸ್ವರೂಪವನ್ನು ಎಷ್ಟು ಚೆನ್ನಾಗಿ ವರ್ಣಿಸುತ್ತಿರುವೆ ! ನೀನು ಇದನ್ನೆಲ್ಲ ಯಾರಿಂದ, ಹೇಗೆ ತಿಳಿದುಕೊಂಡೆ ?

**ಸುಮನೆ :-** ನಾನು ಬಾಲ್ಯದಲ್ಲಿ ಆಟ ಆಡುತ್ತಿದ್ದಾಗಲೂ ತಂದೆ ಚ್ಯವನ ಮಹರ್ಷಿಗಳು ಹೋದಲ್ಲೆಲ್ಲ ನಾನೂ ಜತೆಯಲ್ಲಿ ಹೋಗುತ್ತಿದ್ದೆ. ತೀರ್ಥಕ್ಷೇತ್ರಗಳಿಗೆ, ದೇವಾಲಯಗಳಿಗೆ, ವಿದ್ವತ್ ಸಭೆಗಳಿಗೆ ನಾವು ಸಂಚಾರ ಮಾಡುತ್ತಿದ್ದಾಗ ಒಮ್ಮೆ ದೈವವಶಾತ್ ವೇದಶರ್ಮರೆಂಬುವರು ನಮ್ಮನ್ನು ಸಂಧಿಸಿದರು. ಅವರು ನಮ್ಮ ತಂದೆಯ ಆಪ್ತಮಿತ್ರರು. ಕುಶಿಕ ಗೋತ್ರದವರು. ಅವರಿಗೂ ನಿನ್ನಂತೆ ಮಕ್ಕಳಿಲ್ಲದಿರುವ ಒಂದು ಕೊರಗು ಇತ್ತು. ಅದನ್ನು ನಮ್ಮ ತಂದೆಯ ಮುಂದೆ ಹೇಳಿಕೊಳ್ಳ ತೊಡಗಿದರು. ಆಗ ಓರ್ವ ಸಿದ್ಧಪುರುಷನಾಗಮಿಸಿ ಧರ್ಮ ಸ್ವರೂಪವನ್ನೆಲ್ಲ ವರ್ಣಿಸಿದ. ಅದನ್ನೆ ನಾನೀಗ ನಿನಗೆ ಹೇಳಿದ್ದೇನೆ.

**ಸೋಮಶರ್ಮ :-** ಧರ್ಮಾಚರಣೆ ಮಾಡಿದವನ ಮರಣ ಹೇಗಿರುತ್ತದೆ ?

**ಸುಮನೆ :-** ಧರ್ಮನಿಷ್ಠನಾದವನಿಗೆ ಮರಣಕಾಲದಲ್ಲಿ ರೋಗ, ಶ್ರಮ, ವೇದನೆ, ಗ್ಲಾನಿ, ಸ್ವೇದ, ಬುದ್ಧಿಭ್ರಮಣೆಗಳಿರುವುದಿಲ್ಲ. ಮಧುರಸಂಗೀತ, ಬ್ರಾಹ್ಮಣರ

ವೇದಘೋಷಗಳು ಕೇಳಿಬರುತ್ತವೆ. ಸುಖವಾಗಿ ಕುಳಿತಿರುವಾಗ, ದೇವರ ಪೂಜೆಮಾಡುವಾಗ, ಸ್ನಾನಕ್ಕಾಗಿ ಪುಣ್ಯತೀರ್ಥಗಳಲ್ಲಿದ್ದಾಗ ಮರಣ ಒದಗಬಹುದು. ಯಜ್ಞಶಾಲೆ, ಗೋಶಾಲೆ, ಅಶ್ವಶಾಲೆ, ಗಜಶಾಲೆ, ದೇವಾಲಯ, ಕೆರೆ, ತೋಟ, ಅಶ್ವತ್ಥ, ವಟ, ತುಳಸಿ, ಬಿಲ್ವ, ಅಶೋಕ, ಚೂತವೃಕ್ಷಗಳ ಬಳಿ, ಬ್ರಾಹ್ಮಣ ಸನ್ನಿಧಿ, ಅರಮನೆ, ರಣಭೂಮಿಗಳಲ್ಲಿ ಮರಣ ಉಂಟಾಗಬಹುದು. ಮರಣಕಾಲದಲ್ಲಿ ಪಾಪಿಗಳ ದರ್ಶನವಿರುವುದಿಲ್ಲ. (ಸಾತ್ವಿಕ ಧರ್ಮಿಷ್ಠರಾದ ಪ್ರೀತಿಯ ಬಂಧುಗಳನ್ನು ನೋಡುತ್ತ ಅವರ ಪ್ರಿಯ ನುಡಿಗಳನ್ನಾಲಿಸುತ್ತ ಮರಣ ಹೊಂದುವ ಯೋಗ) ಧರ್ಮನಿಷ್ಠನಿಗೆ ಲಭಿಸುತ್ತದೆ. ಯಮದೂತರು ಬಂದು **'ಮಹಾತ್ಮ,** ಧರ್ಮರಾಜ ನಿನ್ನನ್ನು ಕರೆಯುತ್ತಿದ್ದಾನೆ. ಬಾ' ಎಂದು ಸ್ನೇಹದಿಂದ ನುಡಿಯುತ್ತಾರೆ. ಅವನು ಜನಾರ್ದನನ್ನು ಸ್ಮರಿಸುತ್ತ ಬ್ರಹ್ಮರಂಧ್ರದ ಮೂಲಕ ಶರೀರದಿಂದ ನಿರ್ಗಮಿಸಿ ಆಗಲೆ ಸಿದ್ಧವಾಗಿರುವ ದಿವ್ಯ ವಿಮಾನವನ್ನೇರುತ್ತಾನೆ. ದಾರಿಯುದ್ದಕ್ಕೂ ಛತ್ರ-ಚಾಮರಗಳ ಮರ್ಯಾದೆ ಲಭಿಸುತ್ತದೆ. ಮಧುರಗೀತ, ಸ್ತುತಿ, ವೇದಪಾಠಗಳನ್ನು ಕೇಳುತ್ತ ಸುಂದರ ಉದ್ಯಾನಗಳ ದಾರಿಯಲ್ಲಿ ಅಪ್ಸರೆಯರ ಜತೆಗೆ ಪ್ರಯಾಣ ಬೆಳೆಸುತ್ತಾನೆ. ಬಳಿಕ ಧರ್ಮರಾಜನ ದರ್ಶನ. ದೇವತೆಗಳೊಂದಿಗೆ ದಿವ್ಯ ಸುಖಾನುಭವ. ಸಂಪಾದಿಸಿದ ಪುಣ್ಯ ಕ್ಷಯಿಸುವವರೆಗೂ ಅಲ್ಲಿದ್ದು ಬಳಿಕ ಭೂಮಿಯಲ್ಲಿ ಉತ್ತಮಕುಲದಲ್ಲಿ ಪುನರ್ಜನ್ಮ. ತಿರುಗಿ ಧರ್ಮಾಚರಣೆ.

**ಸೋಮಶರ್ಮ :-** ಪಾಪಿಯ ಮರಣ ಹೇಗಿರುತ್ತದೆ ?.

**ಸುಮನೆ :-** ಪಾಪಿಯು ಮಲಮೂತ್ರಗಳಿಂದ ಅಪವಿತ್ರವಾದ ನೆಲದಲ್ಲಿ ಇಲ್ಲವೆ ಚಂಡಾಲರು, ವೇಶ್ಯೆಯರು, ಕತ್ತೆಗಳಿರುವ ಸ್ಥಳದಲ್ಲಿ ಮರಣಹೊಂದುತ್ತಾನೆ. ಅವನನ್ನೆಳೆದೊಯ್ಯಲು ಬರುವ ಯಮದೂತರು ಅತಿ ಕ್ರೂರ, ಭಯಂಕರ, ಅಸಹ್ಯ-ಆಕಾರಗಳನ್ನು ತೋರುತ್ತಾರೆ. ದೊಡ್ಡಹೊಟ್ಟೆ, ಮಾಂಸ, ಚರ್ಮಗಳಿಲ್ಲದ ಕಪ್ಪಾದ ಒಣಕಲುಶರೀರ ಅದರಲ್ಲಿ ಕೆಂಪು ಕಣ್ಣುಗಳು, ಸಿಂಹದ ಮುಖ, ಕೋರೆ ಹಲ್ಲುಗಳು. ಕೈಯಲ್ಲಿ ಹಾವುಗಳು. ಇವುಗಳನ್ನು ಕಂಡು ಪಾಪಿ ನಡುಗುತ್ತಾನೆ., ಬೆವರುತ್ತಾನೆ. ಅವನ ಕಿವಿಯೊಳಗೆ ಯಮದೂತರು ಭಯಂಕರ ನರಿಯ ಕೂಗನ್ನು ಕೂಗುತ್ತಾರೆ. ಕುತ್ತಿಗೆಗೆ ಹಗ್ಗಬಿಗಿದು ಎಳೆಯುತ್ತಾರೆ. ಆಗಲೆ ಆ ಪಾಪಿ ಮಾಡಿದ ಪಾಪವೆಲ್ಲವೂ ಗಂಟಲಲ್ಲಿ ಕಫವಾಗಿ ಸೇರಿ 'ಘುರುಘುರು' ಎನ್ನುತ್ತದೆ. ದಾರುಣವೇದನೆ, ನಡುಕ, ಮೂರ್ಛೆಗಳನ್ನು ಅಡಿಗಡಿಗೆ ಉಂಟುಮಾಡುತ್ತದೆ. ಬಳಿಯಲ್ಲಿಲ್ಲದ ತಾಯಿತಂದೆ, ಹೆಂಡಿರುಮಕ್ಕಳು, ಬಂಧುಮಿತ್ರರ ಸ್ಮರಣೆ ಉಂಟುಮಾಡಿ ಅಳುವಂತೆ ಮಾಡುತ್ತದೆ. ಇಂಥ ನರಕಯಾತನೆ ಕೊಡುವ ಶರೀರವನ್ನು ಪ್ರಾಣಗಳೂ ಬಿಟ್ಟು ಹೋಗಲೊಲ್ಲವು. ಕಡೆಗೆ ಅವು ಬಲಾತ್ಕಾರದಿಂದ ತಳ್ಳಲ್ಪಟ್ಟು ಅಪಾನಮಾರ್ಗದಿಂದ ಹೊರಗೆ ಹೋಗುತ್ತವೆ.

**ಸುಮನೆ :-** ಯಮದೂತರು ಪಾಪಿಯನ್ನೆಳೆದೊಯ್ಯುವ ಮಾರ್ಗವೂ ಬಲು ಭೀಕರ. ಉರಿವ ಕೆಂಡದ ಮೇಲೂ ಎಳೆದೊಯ್ಯುತ್ತಾರೆ. ಬೆಟ್ಟಗುಡ್ಡಗಳ ದಾರಿಯಲ್ಲಿ ಹಸಿವು ನೀರಡಿಕೆಗಳಿಂದ ಬಳಲುತ್ತ ನಡೆಯುವಾಗ ಮೇಲಿಂದ ದ್ವಾದಶಾದಿತ್ಯರ ಸುಡುಬಿಸಿಲನ ಉರಿ. ಸುತ್ತಲೂ ಯಮದೂತರ ಕತ್ತಿ, ಕೊಡಲಿ, ಗದೆ, ಚಾವಟಿಗಳೇಟು. ಮನನೋಯಿಸುವ ಕಟುಮಾತುಗಳು. ಕೆಲವೊಮ್ಮೆ ಅನಿರೀಕ್ಷಿತವಾಗಿ ಬೀಸುವ ಕೊರೆವ ಹಿಮಗಾಳಿ.

ಹೀಗೆ ಪ್ರಯಾಣಮಾಡಿ ಯಮಲೋಕ ಸೇರಿದರೆ ಅಲ್ಲಿ ಕಾದಿದೆ. ಯಮನ ಮತ್ತು ಅವನ ಕಿಂಕರರ ಭೀಕರ ಕರಾಳ ಆಕೃತಿಗಳ ದರ್ಶನ. ಹಳದಿಬಟ್ಟೆ ಉಟ್ಟು, ಕೆಂಪುಗಂಧ ಬಳಿದುಕೊಂಡ ಆ ಕಾಡಿಗೆಯ ಬೆಟ್ಟಗಳು ಅವನ ಮೇಲೆ ಹರಿಹಾಯ್ದು ಕೋರೆ ಹಲ್ಲುಗಳನ್ನು ತೋರುತ್ತ ಕ್ರೂರ ಆಯುಧಗಳನ್ನು ಝಳಪಿಸಿ ದಾಳಿಯಿಡುತ್ತವೆ. ಅನೇಕ ಸಾವಿರ ಯುಗಗಳ ಕಾಲ ಇಂಥ ಯಾತನೆಗಳು. ಬಳಿಕ ಭೂಮಿಗೆ ಬಂದು ಮಲದಲ್ಲಿ ಕ್ರಿಮಿಯಾಗಿ ಹುಟ್ಟಬೇಕು. ಬಳಿಕ ನಾಯಿ, ಬೆಕ್ಕು, ಹಂದಿಗಳಂಥ ನಿಕೃಷ್ಟ ಜನ್ಮ. ಇಂಥ ಹೀನಯೋನಿಗಳಲ್ಲಿ ಅನೇಕ ಬಾರಿ ಹುಟ್ಟಿ, ಸತ್ತು, ಚಂಡಾಲಾದಿ ಪಾಪಯೋನಿಗಳಲ್ಲಿ ಜನಿಸುತ್ತಾನೆ.

**ಸೋಮಶರ್ಮ :-** ದೇವಿ, ಧರ್ಮಸ್ವರೂಪವನ್ನು ಚೆನ್ನಾಗಿ ವರ್ಣಿಸಿದೆ, ಈಗ ಗುಣವಂತನಾದ ಪುತ್ರನನ್ನು ಪಡೆಯಲು ಯಾವ ಧರ್ಮವನ್ನಾಚರಿಸಬೇಕು, ಹೇಳು.

**ಸಮನೆ :-** ನಾಥ, ಎಲ್ಲ ಧರ್ಮಗಳನ್ನೂ ತಿಳಿದವರೂ ಮಹಾತ್ಮರಾದ ವಶಿಷ್ಠ ಮಹರ್ಷಿಗಳು. ನೀನು ಅವರ ಬಳಿ ಬೇಡಿದರೆ ಸತ್ಪುತ್ರನನ್ನು ಹೊಂದುವ ಉಪಾಯವನ್ನು ಉಪದೇಶಿಸುವರು.

ಒಡನೆ ಸೋಮಶರ್ಮನು ವಶಿಷ್ಠರ ಬಳಿಗೆ ಹೋದನು. ಗಂಗಾತೀರದ ಒಂದು ಪುಣ್ಯಾಶ್ರಮದಲ್ಲಿ ಇನ್ನೊಬ್ಬ ಸೂರ್ಯನಂತೆ ಹೊಳೆಯುತ್ತಿದ್ದ ಆ ಮಹಾಮುನಿಗೆ ದಂಡವತ್‌ಪ್ರಣಾಮಗಳನ್ನರ್ಪಿಸಿದನು. ಮುನಿಯು ಅವನನ್ನು ಆಸನದಲ್ಲಿ ಕುಳ್ಳಿರಿಸಿ ಕುಶಲಪ್ರಶ್ನೆ ಮಾಡಿದನು.

**ವಶಿಷ್ಠ :-** ವಿಪ್ರೋತ್ತಮ, ಕ್ಷೇಮವೆ? ಅಗ್ನಿಹೋತ್ರ ಮತ್ತು ಇತರ ಪುಣ್ಯಕರ್ಮಗಳು ನಿರ್ವಿಘ್ನವಾಗಿ ನಡೆಯುತ್ತಿವೆಯೆ ? ನನ್ನಿಂದ ನಿನಗೇನು ಸಹಾಯ ಬೇಕಾಗಿದೆ.

**ಸೋಮಶರ್ಮ :-** ಭಗವನ್, ನನ್ನ ಒಂದು ಸಂದೇಹವನ್ನು ಪರಿಹರಿಸಿರಿ. ನಾನು ದಾರಿದ್ರ್ಯದಿಂದ ಬಳಲುತ್ತಿದ್ದೇನೆ. ಪುತ್ರಸೌಖ್ಯದಿಂದ ವಂಚಿತನಾಗಿದ್ದೇನೆ. ಇದಕ್ಕೇನು ಕಾರಣ ? ಧರ್ಮಾಚರಣೆಯ ಬಗ್ಗೆ ಅನೇಕ ವಿಷಯಗಳನ್ನು ನನ್ನ ಮಡದಿಯ ಬಾಯಿಂದ ತಿಳಿದುಕೊಂಡೆ. ಅವಳ ಸಲಹೆಯಂತೆ ಈಗ ನಿಮ್ಮ ಬಳಿಗೆ ಬಂದಿದ್ದೇನೆ. ನನಗೆ ಉಪದೇಶವಿತ್ತು ಸಂಸಾರದಿಂದ ಬಿಡುಗಡೆಯಾಗಲು ದಾರಿಯನ್ನು ತೋರಿಸಿರಿ.

**ವಶಿಷ್ಠ:-** ವಿಪ್ರೋತ್ತಮ, ಪೂರ್ವಜನ್ಮದ ಸಂಬಂಧದಿಂದ ಲಭಿಸಿದ ಬಂಧುಗಳಿಂದ ಸುಖವಿಲ್ಲ. ಸತ್ಪುತ್ರನಾದವನು ಸತ್ಯ ಧರ್ಮನಿರತನಾಗಿರಬೇಕು. ವೇದಾಧ್ಯಯನ, ತಪಸ್ಸು, ದೇವಬ್ರಾಹ್ಮಣ ಪೂಜೆ, ಯಜ್ಞ, ದಾನ, ಧ್ಯಾನಗಳಲ್ಲಿ ನಿಷ್ಠೆ ಇಟ್ಟಿರಬೇಕು. ತಂದೆ-ತಾಯಿಗಳ ಸೇವೆಮಾಡುತ್ತಿರಬೇಕು. ಇಲ್ಲದಿದ್ದರೆ ಅಂಥ ಮಕ್ಕಳಿಂದ ದುಃಖವೇ ಹೊರತು ಏನೂ ಲಾಭವಿಲ್ಲ.

ನೀನು ಹಿಂದಿನ ಜನ್ಮದಲ್ಲಿ ಶೂದ್ರನಾಗಿದ್ದೆ. ಬೇಸಾಯ, ಪಶುಪಾಲನೆಮಾಡಿ ಸಂಪತ್ತನ್ನು ಕೂಡಿಸುತ್ತಿದ್ದೆ. ಒಬ್ಬ ಹೆಂಡತಿಯೂ ಅನೇಕ ಮಕ್ಕಳೂ ಇದ್ದರು. ಆದರೆ ಕಡುಲೋಭಿಯಾಗಿದ್ದುದರಿಂದ ಅವರಾರನ್ನೂ ನೀನು ಪ್ರೀತಿಸಲಿಲ್ಲ. ಯಾರಿಗೂ ಕೈಯೆತ್ತಿ ಒಂದು ಚಿಕ್ಕಾಸು ಕೊಟ್ಟವನಲ್ಲ. ಧರ್ಮ-ಸತ್ಯವೆಂದರೇನೆಂದೆ ತಿಳಿಯದವ. ಇನ್ನು ತೀರ್ಥಯಾತ್ರೆಯ ಮಾತೆಲ್ಲಿ ? ತಾಯಿ-ತಂದೆಗಳ ಶ್ರಾದ್ಧದ ದಿನವೂ ಒಂದಿಷ್ಟು ದಾನಮಾಡದ ಕಡುಲೋಭಿ ನೀನಾಗಿದ್ದೆ. ನಿನ್ನ ಮಡದಿ ಶ್ರಾದ್ಧದ ದಿನ ಬಂದಿದೆ ಎಂದು

ಹೇಳಿದರೆ ಆ ದಿನ ಮನೆಬಿಟ್ಟು ಎಲ್ಲಿಯೋ ಹೋಗಿರುತ್ತಿದ್ದೆ. ನಿನಗೆ ಬಂಧುಸ್ನೇಹ ಬೇಕೆನಿಸಲಿಲ್ಲ. ಲೋಭ ಒಂದೇ ಬಂಧುವೂ ಬಳಗವೂ ಆಗಿತ್ತು. ಕೂಡಿಟ್ಟ ಹಣದ ರಾಶಿ ಬೆಳೆದಂತೆಲ್ಲಾ ನಿನ್ನಾಸೆ ಬಲಿಯಿತು. ಬೆಂಕಿಯಂತೆ ಎದೆಯನ್ನು ವ್ಯಾಪಿಸಿ ದಹಿಸಿತು. ಆದರಿಂದ ರಾತ್ರಿ ನಿದ್ದೆ ಬಿಟ್ಟು ಸಹ ಹಣವನ್ನೇ ಚಿಂತಿಸಿದೆ. ಹಣ ಸಂಪಾದಿಸುವ ಹೊಸಹೊಸ ಉಪಾಯಗಳನ್ನು ಯೋಚಿಸುತ್ತಲೆ ಇದ್ದೆ. ಭೂಮಿಯನ್ನಗೆಯುವುದು, ಅಂಜನಹಾಕಿ ನೋಡುವುದು, ಪಾದರಸದಿಂದ ಲೋಹಗಳನ್ನು ಚಿನ್ನಕ್ಕೆ ಪರಿವರ್ತಿಸುವುದು, ಸ್ಪರ್ಶಮಣಿಯನ್ನರಸುವುದು ಮುಂತಾದ ನಾನಾ ವಿದ್ಯೆಗಳ ಬಗ್ಗೆ ಸಿಕ್ಕಿದವರನ್ನು ಕೇಳುತ್ತ ಅಲೆಯುತ್ತಿದ್ದೆ. ಕೂಡಿಟ್ಟ ಹಣವನ್ನು ಮಕ್ಕಳಿಗೂ ತಿಳಿಯದಂತೆ ನೆಲದಲ್ಲಿ ಹೂತಿಟ್ಟು ಅವರೆಷ್ಟು ವಿಧದಿಂದ ಬೇಡಿದರೂ ಆ ಸ್ಥಳವನ್ನು ತಿಳಿಸದೆ ಸತ್ತು ಹೋದೆ. ಇಂಥ ಲೋಭದ ಪರಿಣಾಮವಾಗಿ ಈಗ ದರಿದ್ರನಾಗಿರುವೆ. ನೀನು ವಿಷ್ಣುವನ್ನಾರಾಧಿಸು. ಅವನ ಅನುಗ್ರಹ ಪಡೆ. ಆಗ ನೀನು ಭಕ್ತಿ ಜ್ಞಾನಸಂಪನ್ನರಾದ ಶೀಲವಂತರಾದ ಸತ್ಪುತ್ರರನ್ನು ಹೊಂದುವೆ. ಧನ-ಧಾನ್ಯ- ಸಂಪತ್ತುಗಳನ್ನೂ ಭೋಗಿಸುವೆ.

**ಸೋಮಶರ್ಮ :-** ಮಹಾತ್ಮ, ಪೂರ್ವಜನ್ಮದಲ್ಲಿ ನಾನೊಂದೂ ಪುಣ್ಯಕಾರ್ಯ ಮಾಡಿದವನಲ್ಲವೆಂದು ತಾವು ಹೇಳಿದಿರಿ. ಹಾಗಾದರೆ ನನಗೀ ಬ್ರಾಹ್ಮಣಜನ್ಮ ಹೇಗೆ ದೊರಕಿತು ?

**ವಶಿಷ್ಠ :-** ವಿಪ್ರೋತ್ತಮ, ಒಮ್ಮೆ ವಿಷ್ಣುಭಕ್ತನಾದ ಪರಮಧಾರ್ಮಿಕ ಬ್ರಾಹ್ಮಣನೊಬ್ಬ ತೀರ್ಥಯಾತ್ರೆಮಾಡುತ್ತ ನಿನ್ನ ಮನೆಗೆ ಬಂದ. ನಿನ್ನಲ್ಲಿ ವಾಸಕ್ಕೆ ಸ್ಥಳಾವಕಾಶ ಬೇಡಿದ. ನೀನು ಪವಿತ್ರ ಗೋಶಾಲೆಯಲ್ಲಿ ಅವನನ್ನಿರಿಸಿ ಭಕ್ತಿಯಿಂದ ಸತ್ಕರಿಸಿದೆ. ಅವನ ಪಾದಗಳನ್ನು ತೊಳೆದು ಆ ನೀರಿನಿಂದ ಸ್ನಾನಮಾಡಿದೆ. ಯಥೇಷ್ಟ ಅನ್ನ-ಪಾನಗಳನ್ನಿತ್ತೆ. ಹೆಂಡಿರು-ಮಕ್ಕಳ ಕೈಯಿಂದಲೂ ಸೇವೆಮಾಡಿಸಿದೆ. ತೀರ್ಥಯಾತ್ರೆಯ ಫಲ ದೊರಕಿತೆಂದು ಆನಂದಪಟ್ಟೆ.

ಮರುದಿನ ಆಷಾಢ ಶುದ್ಧ ಏಕಾದಶೀ, ಭಗವಾನ್ ವಿಷ್ಣು ಯೋಗನಿದ್ರೆಯನ್ನು ಆಶ್ರಯಿಸುವ ಪವಿತ್ರದಿನ. ಅಂದು ಎಲ್ಲ ಕೆಲಸಗಳನ್ನೂ ತೊರೆದು ಭಗವಂತನನ್ನು ಜನರು ಸ್ಮರಿಸುತ್ತಾರೆ. ಮಂಗಳವಾದ್ಯ, ವೇದಘೋಶಗಳಿಂದ ಉತ್ಸವವನ್ನಾಚರಿಸುತ್ತಾರೆ. ಆ ಬ್ರಾಹ್ಮಣನ ಮುಖದಿಂದ ಏಕಾದಶೀ ಮಹಾತ್ಮೆಯನ್ನು ಕೇಳಿದ ನೀನು ಪರಿವಾರ ಸಮೇತನಾಗಿ ಆ ವ್ರತವನ್ನು ಕೈಗೊಂಡೆ. ನದಿಯಲ್ಲಿ ಸ್ನಾನಮಾಡಿ ಭಗವಂತನನ್ನಾರಾಧಿಸಿದೆ. ರಾತ್ರಿ ಜಾಗರಣವನ್ನು ಮಾಡಿ ನೃತ್ಯ, ಗೀತ ಮುಂತಾದವುಗಳಿಂದ ಭಗವಂತನನ್ನು ಪೂಜಿಸಿದೆ. ಬೆಳಿಗ್ಗೆ ತಿರುಗಿ ಸ್ನಾನಮಾಡಿ ಭಗವಂತನನ್ನು ಸ್ಮರಿಸಿ ಬ್ರಾಹ್ಮಣನಿಗೆ ಅನ್ನ, ಪಾನ, ದಕ್ಷಿಣೆಗಳನ್ನಿತ್ತು ವ್ರತದ ಪಾರಣೆಮಾಡಿದೆ. ಭಕ್ತಿಪೂರ್ವಕ ಸದ್ಭಾವನೆಯಿಂದ ಬ್ರಾಹ್ಮಣನನ್ನು ಬೀಳ್ಕೊಟ್ಟೆ. ಹೀಗೆ ಬ್ರಾಹ್ಮಣ ಸಂಪರ್ಕದಿಂದ ನೀನು ವಿಷ್ಣುವಿನೊಲುಮೆಯನ್ನು ಗಳಿಸಿ ಈ ಬ್ರಾಹ್ಮಣಜನ್ಮ ಪಡೆದಿರುವೆ. ಆದರೆ ಹಣದಾಸೆಯಿಂದ ಪುತ್ರ ಸ್ನೇಹವನ್ನು ಕಡೆಗಣಿಸಿದ್ದರಿಂದ ದರಿದ್ರನೂ ಪುತ್ರಹೀನನೂ ಆದೆ. ನೀನು ಆ ನಾರಾಯಣನನ್ನೇ ಭಜಿಸು. ಉತ್ತಮ ಸಂಪತ್ತು, ಪುತ್ರಸಂತತಿ, ಸುಖಭೋಗ, ಸ್ವರ್ಗ-ಮೋಕ್ಷಗಳೆಲ್ಲವನ್ನೂ ಪಡೆ.

ಹೀಗೆ ವಶಿಷ್ಠರಿಂದ ಉಪದೇಶ ಪಡೆದು ಭಕ್ತಿಯಿಂದ ಅವರನ್ನು ನಮಿಸಿ ಹೊರಟ ಸೋಮಶರ್ಮ, ಎಲ್ಲ ವೃತ್ತಾಂತವನ್ನೂ ಸುಮನೆಗೆ ಬಣ್ಣಿಸಿ.

**ಆರಾಧಯಿಷ್ಯೇ ಮಧುಸೂದನಂ ತಂ**
**ಯಾಸ್ಯಾಮಿ ಮೋಕ್ಷಂ ಪರಮಂಪದಂತತ್ ॥**

ಆ ಮಧುಸೂಧನನನ್ನು ಆರಾಧಿಸುವೆ. ಉತ್ತಮಸ್ಥಾನವಾದ ಮೋಕ್ಷವನ್ನು ಹೊಂದುವೆ ಎಂದು ಸಂಕಲ್ಪಿಸಿದೆ. ಈ ಶುಭ ಸಂಕಲ್ಪವನ್ನು ತಿಳಿದು ಸುಮನೆ ಹರ್ಷಿತಳಾಗಿ ನುಡಿದಳು. 'ವಿಪ್ರೋತ್ತಮ, ವಶಿಷ್ಠರ ಉಪದೇಶದಿಂದೆಚ್ಚತ್ತ ನೀನೆ ಪುಣ್ಯವಂತ.''

**ಸೂತ ಉವಾಚ :**

**ಸೂತ :-** ಸೋಮಶರ್ಮ ಸುಮನೆಯೊಂದಿಗೆ ನರ್ಮದೆಯ ಕಪಿಲಾಸಂಗಮದಲ್ಲಿ ಸ್ನಾನ-ದೇವ-ಪಿತೃ ತರ್ಪಣಗಳನ್ನು ಮಾಡಿ ವಾಸುದೇವ ದ್ವಾದಶಾಕ್ಷರ ಮಂತ್ರ ಜಪಿಸಿದ.

**ಆಸನೇ ಶಯನೇ ಯಾನೆ ಸ್ವಪ್ನೇಪಶ್ಯತಿ ಕೇಶವಂ**

ಕುಳಿತಿರುವಾಗ, ಮಲಗಿರುವಾಗ, ನಡೆಯುವಾಗ, ನಿದ್ರಿಸುವಾಗ ಸದಾಕಾಲ ವಿಷ್ಣುವನ್ನೇ ಧ್ಯಾನಿಸಿದ.

ಸಾಧ್ವಿಯಾದ ಸುಮನೆ ಪತಿಶುಶ್ರೂಷೆ ಮಾಡಿದಳು.

ಸೋಮಶರ್ಮನ ಧ್ಯಾನಕ್ಕೆ ಭಂಗತರುವ ಭಯಂಕರ ವಿಘ್ನಗಳು ತಲೆದೋರಿದುವು. ವಿಷಪೂರಿತ ಕೃಷ್ಣ ಸರ್ಪಗಳು ಬಳಿಯಲ್ಲಿಯೇ ಹರಿದಾಡಿದುವು. ಹುಲಿ ಸಿಂಹ ಆನೆಗಳು ಗರ್ಜಿಸಿದುವು. ಭೂತ ಪ್ರೇತಗಳು ಕುಣಿದು, ಕೋರೆ ಹಲ್ಲುಗಳನ್ನು ತೋರಿ ಬಾಯ್ತೆರೆದು ಬೊಬ್ಬಿಟ್ಟು ಕೂಗಿದುವು ಬಿರುಗಾಳಿ ಬೀಸಿತು. ಜಡಿ ಮಳೆ ಸುರಿಯಿತು. ಸೋಮಶರ್ಮನು ಮಾತ್ರ ಧ್ಯಾನದಿಂದ ವಿಚಲಿತನಾಗಲಿಲ್ಲ.

ಸಿಂಹಗಳು ಭಯಂಕರವಾಗಿ ಗರ್ಜಿಸುತ್ತ ಮುಂದೆ ಬಂದಾಗ ಸೋಮಶರ್ಮ ಭಯದಿಂದ ಕಣ್ಮುಚ್ಚಿ ಆ ನರಸಿಂಹನನ್ನೇ ಧ್ಯಾನಿಸಿದ. ಕೈಗಳಲ್ಲಿ ಶಂಖಚಕ್ರಗದಾ ಪದ್ಮಗಳನ್ನು, ಶ್ರೀವತ್ಸದಿಂದೊಪ್ಪುವ ಎದೆಯಲ್ಲಿ ಕೌಸ್ತುಭ ಮಣಿಯನ್ನು ಧರಿಸಿ, ಮಂದಹಾಸದಿಂದೆಸೆವ ಪೀತಾಂಬರಧಾರಿ ನೀಲವರ್ಣ, ಭಗವಂತನನ್ನು ನೆನೆದು 'ದೇವ ದೇವ, ರಕ್ಷಿಸು, ದಾನವರ ಸಂಹಾರಮಾಡುವ, ಭಕ್ತರನ್ನು ಸಲಹುವ ನಿನ್ನನ್ನೇ ಮೊರೆಹೊಕ್ಕಿದ್ದೇನೆ' ಎಂದು ಬೇಡಿದ. ನರಸಿಂಹನೇ ಸಿಂಹರೂಪದಿಂದ ಬಂದು ಪರೀಕ್ಷಿಸುತ್ತಿರುವನೆಂದು ತಿಳಿದ.

ಮದಿಸಿದ ಆನೆ ಘೀಳಿಡುತ್ತ ಬಂದಾಗ ಪಾಶಾಂಕುಶಧಾರಿ ಗಜವದನನನ್ನು ಬೇಡಿದ, ಕಾಡುಹಂದಿಯ ಉಗ್ರರೂಪ ಕಂಡಾಗ ಹಿರಣ್ಯಾಕ್ಷನನ್ನು ಸಂಹರಿಸಿದ ವರಾಹಮೂರ್ತಿಯನ್ನು ಕೂಗಿಕರೆದ. ವಾಮನಾಕೃತಿಯ ಕ್ರೂರಪ್ರೇತಗಳ ದರ್ಶನವಾದಾಗ ವಾಮನಮೂರ್ತಿಯನ್ನು ಧ್ಯಾನಿಸಿದ. ಬಿರುಗಾಳಿ ಬೀಸಿದರೆ ಸದಾಗತಿಯೆನಿಸಿದ ಹರಿಯನ್ನೇ ಶರಣುಹೊಕ್ಕ. ಅವನೆ ಈ ಎಲ್ಲ ಭೀಕರಾಕೃತಿಗಳನ್ನು ತೋರುತ್ತಿರುವನೆಂದು ತಿಳಿದು,

**ಅಭಯೋ ಯೋಹಿಜಗತೋ ಭೀತಿಘ್ನೋ ಭೀತಿದಾಯಕಃ ।**
**ಭಯರೂಪಂ ಪ್ರಪನ್ನೋಸ್ಮಿ ಕಿಂ ಭಯಂ ಮೇ ಕರಿಷ್ಯತಿ ॥**

ಯಾವ ಹರಿ ತಾನು ನಿರ್ಭಯನಾಗಿದ್ದು ಜಗತ್ತಿಗೆ ಭಯ ಉಂಟುಮಾಡುವವನೂ ಭಯಪರಿಹರಿಸುವವನೂ ಆಗಿರುವನೋ ಅಂಥ ಭಯರೂಪಿಯಾದ ಹರಿಯನ್ನು ಆಶ್ರಯಿಸಿದ ನನಗೆ ಭಯ ಏನು ಮಾಡೀತು ? ಎಂದುಕೊಂಡ.

**ಮೃತ್ಯು ರೂಪಧರಾ ಸರ್ವೇ ದರ್ಶಯಂತಿ ಭಯಂಮನು ।**
**ಅಮೃತಂ ತಂ ಪ್ರಪನ್ನೋಽಸ್ಮಿ ಕಿಂಭಯಂಮೇ ಕರಿಷ್ಯತಿ ॥**

ಮೃತ್ಯುವಿನಂತೆ ಕಾಣುವ ಈ ಸಿಂಹ, ಆನೆ ಮುಂತಾದವು ನನಗೆ ಭಯ ಉಂಟು ಮಾಡಿದರೇನು ? ಮೃತ್ಯುವನ್ನು ಪರಿಹರಿಸುವ ಹರಿಯನ್ನು ನಾನು ಆಶ್ರಯಿಸಿರುವಾಗ ಈ ಭಯ ಏನು ಮಾಡೀತು ? ಎಂದು ಧೈರ್ಯತಳೆದು ಅನನನ್ನೇ ಎಡೆಬಿಡದೆ ಧ್ಯಾನಿಸಿದ.

ಒಂದು ದಿನ ಹರಿ ಒಲಿದು ಮೈದೋರಿ 'ಬೇಕಾದ ವರವನ್ನು ಕೇಳು' ಎಂದ. ಸೋಮಶರ್ಮ ಕಣ್ತೆರೆದು ಲಕ್ಷ್ಮೀಸಮೇತನಾಗಿ ಗರುಡಾರೂಢನಾಗಿ ಕುಳಿತಿದ್ದ ಪೀತಾಂಬರಧಾರಿ ಘನಶ್ಯಾಮಮೂರ್ತಿಯನ್ನು ಕಂಡು ಆನಂದ ಪರವಶನಾದ. ಕಣ್ತುಂಬ ನೋಡುತ್ತ ಸಾಷ್ಟಾಂಗ ನಮಸ್ಕಾರಮಾಡಿ ಕೈಮುಗಿದು, 'ದೇವ ಜಗನ್ನಾಥ, ನಿನಗೆ ಜಯವಾಗಲಿ. ಬ್ರಹ್ಮ-ರುದ್ರಾದಿ ದೇವತೆಗಳಿಂದ ವಂದ್ಯನಾದ ನಿನ್ನ ಡಿದಾವರೆಗಳಿಗೂ ನನ್ನ ಅನಂತ ನಮಸ್ಕಾರಗಳು. ಕೇವಲ ಜ್ಞಾನಮಯವಾದ ಮತ್ಸ್ಯಾದಿದಶರೂಪಗಳನ್ನೂ ಕಪಿಲ-ಹಯಗ್ರೀವ-ವೇದವ್ಯಾಸ ಮುಂತಾದ ರೂಪಗಳನ್ನೂ ಆಯಾ ಕಾಲದಲ್ಲಿ ಕೋರಿ ಎಲ್ಲರ ವ್ಯಸನಗಳನ್ನೂ ಪರಿಹರಿಸುವ ನಿನ್ನ ಗುಣಗಾನವನ್ನು ಮಾಡಲು ಸರ್ವಜ್ಞನಾದ ಬ್ರಹ್ಮನೂ ಸಮರ್ಥನಲ್ಲ. ರುದ್ರನೂ ಸಮರ್ಥನಲ್ಲ. ನಾನೆಷ್ಟರವನು ? ಜನ್ಮ-ಜನ್ಮದಲ್ಲಿಯೂ ನಾ ನಿನ್ನ ದಾಸ. ದಯೆತೋರು.

**ಹರಿರುವಾಚ**

**ಹರಿ :-** ವಿಪ್ರೋತ್ತಮ, ಈ ನಿನ್ನ ತಪಸ್ಸಿಗೂ ಸ್ತೋತ್ರಕ್ಕೂ ಮಾರುಹೋಗಿದ್ದೇನೆ. ನೀನು ಏನೆಲ್ಲ ಬಯಸುವಿಯೋ ಅದನ್ನು ಕೊಡುತ್ತೇನೆ.

**ಸೋಮಶರ್ಮ :-** ಹೇ ಕೃಷ್ಣ, ಜನುಮಜನುಮದಲ್ಲಿಯೂ ನಿನ್ನ ಭಕ್ತಿಯನ್ನು ಕೊಟ್ಟು ಮೋಕ್ಷಮಾರ್ಗದಲ್ಲಿ ನನ್ನನ್ನು ಮುನ್ನಡೆಸು. ಕುಲದೀಪಕನಾದ, ನಿನ್ನಲ್ಲಿ ಭಕ್ತನಾದ ಸತ್ಪುತ್ರನನ್ನು ನೀಡು, ದಾರಿದ್ರ್ಯವನ್ನು ಪರಿಹರಿಸು.

**ಹರಿ :-** ಹಾಗೇ ಆಗಲಿ ನೀನು ಬದುಕಿರುವಷ್ಟು ಕಾಲ ಪುತ್ರಸೌಖ್ಯವನ್ನೂ ದಿವ್ಯೈಶ್ವರ್ಯ ಭೋಗವನ್ನೂ ಅನುಭವಿಸಿ ಸದ್ಗತಿಯನ್ನು ಹೊಂದುವೆ.

ಹೀಗೆ ಹೇಳಿ ವಿಷ್ಣು ಅಂತರ್ಧಾನ ಹೊಂದಿದ. ಎಲ್ಲವೂ ಒಂದು ಅದ್ಭುತ ಕನಸಿನಂತೆ ತೋರಿತು. ಸೋಮಶರ್ಮ ದಂಪತಿಗಳಿಗೆ.

ಅವರು ಆ ಪವಿತ್ರ ಕ್ಷೇತ್ರದಲ್ಲಿಯೆ ದಾನ, ತಪಸ್ಸುಗಳನ್ನು ಮಾಡಿದರು.

ಒಂದು ದಿನ ತೀರ್ಥದಲ್ಲಿ ಸ್ನಾನಮಾಡಿ ಮನೆಯ ಕಡೆಗೆ ಹೊರಟಿದ್ದ ಸೋಮಶರ್ಮ. ಅದೇ ದಾರಿಯಲ್ಲಿ ಸುಂದರವಾದ ಬಿಳಿಯ ಮದ್ದಾನೆಯನ್ನೇರಿ ಒಬ್ಬ ದಿವ್ಯಪುರುಷನೂ ಹೋಗುತ್ತಿದ್ದ. ಗಂಧ ಮಾಲ್ಯ ಆಭರಣಗಳಿಂದ ಅಲಂಕೃತನಾಗಿದ್ದು ದಿವ್ಯಲಕ್ಷಣಗಳಿಂದೊಪ್ಪುತ್ತಿದ್ದ ಆ ಮಹಾಪುರುಷನನ್ನು ಗಂಧರ್ವಸಿದ್ಧಚಾರಣರೆಲ್ಲರೂ

ಸ್ತುತಿಸುತ್ತಿದ್ದರು. ಸೋಮಶರ್ಮನಿಗೆ ಅವನನ್ನು ಎಷ್ಟು ನೋಡಿದರೂ ತೃಪ್ತಿಯಾಗಲಿಲ್ಲ. ಇವನು ಯಾರಿರಬಹುದೆಂದು ಬೆರಗಿನಿಂದ ಯೋಚಿಸುತ್ತಿದ್ದಂತೆಯೇ ಆತ ತನ್ನ ಮನೆಯೊಳಗೆ ಪ್ರವೇಶಿಸಿದುದನ್ನು ಕಂಡು ಆನಂದ ತುಂದಿಲನಾದ. ಬೇಗಬೇಗನೆ ನಡೆದು ಮನೆ ಸೇರಿದ. ಆದರೆ ಆತ ಅಲ್ಲಿ ಕಾಣಿಸಲಿಲ್ಲ, ಅಂಗಳದಲ್ಲೆಲ್ಲ ಮಧುರವಾಸನೆ ಬೀರುವ ಹೂಗಳು ಚೆಲ್ಲಿದ್ದುವು. ಸುಮನೆಯೂ ದಿವ್ಯ ವಸ್ತ್ರಾಭರಣಗಳಿಂದ ಶೋಭಿಸುತ್ತಿದ್ದಳು. ಸೋಮಶರ್ಮ ಬೆರಗಾಗಿ ಸುಮನೆಯನ್ನು ನೋಡುತ್ತ ಹೇಳಿದ.

**ಸೋಮಶರ್ಮ :-** ಪ್ರಿಯೆ, ನಿನಗೆ ಈ ರೂಪ ಸೌಭಾಗ್ಯ ತಂದು ಕೊಟ್ಟುವರಾರು ? ಈ ದಿವ್ಯ ವಸ್ತ್ರಾಲಂಕಾರಗಳೆಲ್ಲಿಂದ ಬಂದುವು ?

**ಸುಮನೆ :-** ಪ್ರಿಯ, ಬಿಳಿಯಾನೆಯನ್ನೇರಿ ಒಬ್ಬ ದಿವ್ಯ ಸುಂದರಪುರುಷ ನಮ್ಮ ಮನೆಗೆ ಬಂದು ಹೇರಳ ಸಂಪತ್ತನ್ನು ತುಂಬಿಟ್ಟು ಹೊರಟುಹೋದ. ಅವನ ಜತೆಗೆ ಬಂದಿದ್ದ ಸುಂದರಿಯರು ನನ್ನನ್ನು ಪವಿತ್ರಾಸನದಲ್ಲಿ ಕುಳ್ಳಿರಿಸಿ ವಸ್ತ್ರಾಲಂಕಾರಗಳನ್ನಿತ್ತು ಮಂಗಳಗೀತಗಳನ್ನು ಹಾಡುತ್ತ ನನಗೆ ಅಭಿಷೇಕ ಮಾಡಿದರು. 'ಇಂದಿನಿಂದ ನಾವು ನಿನ್ನ ಮನೆಯಲ್ಲಿ ಸದಾ ವಾಸಿಸುತ್ತೇವೆ. ನೀನು ಪತಿಯೊಂದಿಗೆ ಸದಾ ಶುಚಿಯಾಗಿ ಬಾಳು' ಎಂದು ಹೇಳಿ ಅದೃಶ್ಯರಾದರು.

ಸೋಮಶರ್ಮನೆಷ್ಟು ಯೋಚಿಸಿದರೂ ಬಗೆಹರಿಯದೆ 'ಇದೆಲ್ಲವೂ ಆ ಹರಿಯ ಅನುಗ್ರಹ'ವೆಂದು ತೀರ್ಮಾನಿಸಿ ಧರ್ಮಕಾರ್ಯಗಳಲ್ಲಿ ನಿರತನಾದ.

ಕೆಲಕಾಲದ ಬಳಿಕ ಸುಮನೆ ಗರ್ಭವತಿಯಾದಳು. ದಿವ್ಯ ತೇಜಸ್ಸಿನಿಂದ ಹೊಳೆವ ಒಂದು ಶಿಶುವಿಗೆ ಜನ್ಮವಿತ್ತಳು. ಆಗ ಅಂತರಿಕ್ಷದಿಂದ ದೇವದುಂದುಭಿಯ ಮೊಳಗು ಕೇಳಿಸಿತು. ಶಂಖನಾದ ಪ್ರತಿಧ್ವನಿಸಿತು. ಗಂಧರ್ವರು ಹಾಡಿದರು. ಅಪ್ಸರೆಯರು ಕುಣಿದರು. ಸಾಕ್ಷಾತ್ ಬ್ರಹ್ಮನೇ ಎಲ್ಲ ದೇವತೆಗಳೊಂದಿಗೆ ಬಂದು ಶಿಶುವಿಗೆ ನಾಮಕರಣಮಾಡಿದ. **ಸುವ್ರತ**ನೆಂದು ಕರೆದ.

ಅಂದಿನಿಂದ ಸೋಮಶರ್ಮನ ಮನೆ ಮಹಾಲಕ್ಷ್ಮಿಯ ಆಗರವಾಯಿತು. ಧನ, ಧಾನ್ಯ ಗೋ, ಸಂಪತ್ತು, ಆನೆ, ಕುದುರೆಗಳಿಂದ ತುಂಬಿತು. ಕುಬೇರನ ಮನೆಯಂಥ ಸಮೃದ್ಧಿಯ ನೆಲೆಯಾಯಿತು. ಧರ್ಮಕಾರ್ಯಗಳ ಬೀಡೆನಿಸಿತು.

ಸುವ್ರತ ಬೆಳೆದು ಪ್ರಾಪ್ತವಯಸ್ಕನಾದಾಗ ಅವನಿಗೆ ವಿವಾಹಮಾಡಿದ ಸೋಮಶರ್ಮ. ಮನೆತುಂಬ ಮನಸೆಳೆವ ಮೊಮ್ಮಕ್ಕಳು ಓಡಾಡಿದರು.

ಸೋಮಶರ್ಮನಿನ್ನೂ ಇಪ್ಪತ್ತೈದರ ನವತರುಣನಂತೆ ದೃಢಕಾಯನಾಗಿದ್ದ. ಸುಮನೆಯೂ ಹದಿನಾರರ ಹೊಸ ಹರೆಯದ ಹೆಣ್ಣಿನಂತಿದ್ದಳು.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಭೂಮಿಖಂಡದ ಸುಮನೋಪಾಖ್ಯಾನದಲ್ಲಿ ಸುಮಾನೋಪಾಖ್ಯಾನ ಎಂಬ ಐದನೇಯ ಅಧ್ಯಾಯ ಮುಗಿದುದು.*

—o—

**ಸೂತ ಉವಾಚ**

**ಸೂತ:**- ಒಮ್ಮೆ ವೇದವ್ಯಾಸರು ಬ್ರಹ್ಮನಲ್ಲಿ ಸುವ್ರತನ ಚರಿತೆಯನ್ನು ಕೇಳಬಯಸಿದರು.

**ವ್ಯಾಸ:**- ದೇವದೇವ, ಸುವ್ರತನ ಚರಿತ್ರೆಯನ್ನು ನಾನು ನಿನ್ನಿಂದ ಕೇಳಬಯಸುತ್ತೇನೆ.

**ಬ್ರಹ್ಮ** :- ಸುವ್ರತನ ತಪಶ್ಚರ್ಯೆಯ ವೃತ್ತಾಂತವನ್ನು ನಿನಗೆ ಬಿತ್ತರಿಸುವೆನು. ಈ ಸುವ್ರತನು ತಾಯಿಯ ಗರ್ಭದಲ್ಲಿದ್ದಾಗಲೆ ನಾರಾಯಣನನ್ನು ಕಣ್ಣಾರೆ ಕಂಡವನು. ಪೂರ್ವಜನ್ಮದ ಅಭ್ಯಾಸ ಬಲವೂ ಸೇರಿ ಅವನ ಬಾಲ್ಯದ ಆಟಪಾಠಗಳನ್ನೆಲ್ಲ ಹರಿಧ್ಯಾನಮಯವಾಗಿಸಿದುವು. ಜತೆಯ ಹುಡುಗರಿಗೆಲ್ಲ ಹರಿಯ ಹೆಸರುಗಳನ್ನಿಟ್ಟು ಆ ಹೆಸರುಗಳಿಂದಲೇ ಕೂಗುತ್ತಿದ್ದನಾತ. 'ಕೇಶವ, ಮಾಧವ, ಪುರುಷೋತ್ತಮ, ಬನ್ನಿ ಆಟ ಆಡೋಣ' ಎನ್ನುತ್ತಿದ್ದ. ಆತನಿಗೆ ಸೃಷ್ಟಿ ಎಲ್ಲವೂ ವಿಷ್ಣುಮಯ! ಆಕಾಶ-ಭೂಮಿ- ಪರ್ವತ, ಕಾಡು-ನೆಲ-ಜಲ-ಪ್ರಾಣಿಗಳು-ಎಲ್ಲೆಲ್ಲೂ ನರಸಿಂಹ! ಜತೆಯ ಹುಡುಗರೊಡನೆ ಆಟ ಆಡುವಾಗಲೂ ಇಂಪಾದ ದನಿಯಿಂದ ತಾಳಲಯಬದ್ಧವಾಗಿ ಹೀಗೆ ಹಾಡುತ್ತಿದ್ದ -

**ಲೋಕೇಷು ಯೋಹಿ ಸಕಲೇಷ್ವನುವರ್ತತೇ ಧೊ**
**ಲೋಕಾಶ್ಚ ಯತ್ರ ಸತತಂ ನಿವಸಂತಿ ಸರ್ವೇ ।**
**ದೋಷೈರ್ವಿಹೀನಮುಖಿಲೈಃ ಪರಮೇಶ್ವರಂ ತಂ**
**ಸಂಚಿಂತ್ಯ ಪಾದಯುಗಳಂ ಸತತಂ ನಮಾಮಿ ॥**

ಯಾರು ಪ್ರಪಂಚದಲ್ಲಿ ಎಲ್ಲೆಡೆ ಇರುವನೊ, ಯಾರ ಉದರದಲ್ಲಿ ಎಲ್ಲ ಪ್ರಪಂಚಗಳಿವೆಯೊ, ಯಾರಲ್ಲಿ ಯಾವ ದೋಷಗಳಿಗೂ ಆಸ್ಪದವಿಲ್ಲವೋ ಆ ಮಧುಸೂದನನನ್ನು ನೆನೆದು ಅವನ ಪಾದಯುಗಳವನ್ನು ಸದಾ ನಮಸ್ಕರಿಸುವೆನು.

**ಗಾಯಾಮ್ಯಹಂ ಸುರಸ ಗೀತಕ ತಾಲಮಾನೈಃ**
**ಶ್ರೀರಂಗಮೇಕಮನಿಶಂ ಭುವನಸ್ಯ ದೇವಂ ।**
**ಅಜ್ಞಾನ ನಾಶಕಮಲಂ ಚ ದಿನೇಶತುಲ್ಯಂ**
**ಆನಂದ ಕಂದಮಖಿಲಂ ಮಹಿಮಾ ಸಮೇತಂ ॥**

ಅಜ್ಞಾನದ ಕತ್ತಲೆಯನ್ನು ಕಳೆವಲ್ಲಿ ಸೂರ್ಯನಂತಿರುವವನೂ ಆನಂದಪೂರ್ಣನೂ ಲೋಕಕ್ಕೆಲ್ಲ ಮಹಿಮಾನ್ವಿತದೇವನೂ ಆದ ಶ್ರೀರಂಗನೊಬ್ಬನನ್ನೇ ನಾನು ರಸಭರಿತ ಗೀತಗಳಿಂದ ತಾಳಬದ್ಧವಾಗಿ ಹಾಡಿ ಹೋಗಳುತ್ತೇನೆ.

ಹೀಗೆ ತಲ್ಲೀನನಾಗಿ ಹಾಡುತ್ತಿದ್ದರೆ ಹಸಿವೂ ಆಗುತ್ತಿದ್ದಿಲ್ಲ. ತಾಯಿ ಆತಂಕಗೊಂಡು ಕೂಗಿ ಕರೆದು 'ಮಗು, ಊಟಮಾಡು' ಎಂದರೆ 'ಅಮ್ಮ' ಹರಿಧ್ಯಾನದ ಅಮೃತರಸ

ಉಂಡು ತೃಪ್ತನಾಗಿದ್ದೇನೆ ಎನ್ನುತ್ತಿದ್ದನಾತ. ಊಟಕ್ಕೆ ಕುಳಿತರೆ ಅನ್ನ ವಿಷ್ಣುಮಯವಾಗಿ ಕಾಣುತ್ತಿತ್ತು. ಈ ಅನ್ನದಿಂದ ವಿಷ್ಣುವಿಗೆ ತೃಪ್ತಿಯಾಗಲೆಂದು ಅದರೊಳಗಿರುವ ಭಗವಂತನಿಗೆ ಅರ್ಪಿಸುತ್ತಿದ್ದ. ಆ ಕ್ಷೀರಸಾಗರಶಾಯಿಯೇ ಒಂದಂಶದಿಂದ ಈ ನೀರಲ್ಲಿದ್ದಾನೆ. ಆದ್ದರಿಂದ ಈ ನೀರು ಅವನಿಗೆ ತೃಪ್ತಿಕೊಡಲಿ ಎನ್ನುತ್ತಿದ್ದ. ತಾಂಬೂಲ, ಚಂದನ, ಗಂಧ, ಪುಷ್ಪಗಳನ್ನು ಸೇವಿಸುವಾಗಲೂ ಮೊದಲು ಅವುಗಳಲ್ಲಿರುವ ಭಗವಂತನಿಗೆ ಅವನ್ನು ಅರ್ಪಿಸುತ್ತಿದ್ದ. ನಿದ್ರಿಸುವಾಗ ಯೋಗನಿದ್ರೆಯಲ್ಲಿರುವ ಕೃಷ್ಣನನ್ನು ನೆನೆಯುತ್ತಿದ್ದ.

**ಭೋಜನಾಚ್ಛಾದನೇಷ್ವೇವಮಾಸನೇ ಶಯನೇ ದ್ವಿಜಃ ।**
**ಚಿಂತಯೇದ್ವಾಸುದೇವಂ ತಂತಸ್ಮೈಸರ್ವಂ ಪ್ರಕಲ್ಪಯೇತ್ ॥**

ಅನ್ನ, ಬಟ್ಟೆ, ಪಿಠೋಪಕರಣಗಳು, ಹಾಸಿಗೆ ಎಲ್ಲ ವಸ್ತುಗಳಲ್ಲಿಯೂ ವಾಸುದೇವನನ್ನು ಸ್ಮರಿಸಿ ಅವೆಲ್ಲವನ್ನೂ ಅವನಿಗೆ ಸಮರ್ಪಿಸುತ್ತಿದ್ದ. ಅವನು ಏರು ಜವ್ವನದಲ್ಲಿಯೂ ವಿಷಯಭೋಗಗಳನ್ನು ಬದಿಗಿರಿಸಿ ವೈಡೂರ್ಯ ಪರ್ವತದಲ್ಲಿ ವಿಷ್ಣುವಿನ ಸಿದ್ಧೇಶ್ವರಲಿಂಗವನ್ನೂ ರುದ್ರನ ಓಂಕಾರಲಿಂಗವನ್ನೂ ಪೂಜಿಸುತ್ತ ತಪಸ್ಸಿಗೆ ಕುಳಿತನು.

**ವ್ಯಾಸ :-** ಪೂರ್ವಜನ್ಮದ ಅಭ್ಯಾಸಬಲದಿಂದ ಸುವ್ರತನು ನಾರಾಯಣನ ಧ್ಯಾನದ ಕಡೆಗೇ ಒಲವು ತೋರಿದನೆಂದು ನೀನು ಹೇಳಿರುವೆ. ಅವನ ಪೂರ್ವಜನ್ಮದ ವೃತ್ತಾಂತವೇನು ?. ಆ ಜನ್ಮದಲ್ಲಿ ಅವನು ಹರಿಯನ್ನು ಹೇಗೆ ಧ್ಯಾನಿಸಿದ ?

**ಬ್ರಹ್ಮ :-** ಹಿಂದೆ ವಿದಿಶಾನಗರಿಯನ್ನು ಋತಧ್ವಜನ ಮಗ ರುಕ್ಮಾಂಗದ ಆಳುತ್ತಿದ್ದ. ಅವನ ಪತ್ನಿ ಸಂಧ್ಯಾವಳಿ. ಈ ದಂಪತಿಗಳಿಗೆ ಧರ್ಮಾಂಗದನೆಂಬೊಬ್ಬ ಮಗನಿದ್ದ. ಈತ ಮಹಾವಿಷ್ಣುಭಕ್ತ. ಪಿತೃಭಕ್ತಿ ಪರಾಯಣ. ತಂದೆಯ ಸುಖಕ್ಕಾಗಿ ಮೋಹಿನಿಗೆ ತನ್ನ ತಲೆಯನ್ನೇ ಕೊಟ್ಟವ. ಈತ ಸ್ವರ್ಗದಲ್ಲಿ ಸಾವಿರ ವರ್ಷ ದಿವ್ಯ ಭೋಗಗಳನ್ನುಂಡು ಸುಮನೆಯ ಗರ್ಭದಲ್ಲಿ ಸುವ್ರತನಾಗಿ ಜನಿಸಿದ.

ವೈಡೂರ್ಯ ಪರ್ವತದ ಸಿದ್ಧೇಶ್ವರವಿಷ್ಣುಲಿಂಗದ ಬಳಿಯಲ್ಲಿ ಕುಳಿತು ನೂರು ವರ್ಷಗಳ ಕಾಲ ತಪಸ್ಸುಮಾಡಿದ ಸುವ್ರತ. ಅವನ ತಪಸ್ಸಿಗೊಲಿದು ಜಗನ್ನಾಥ ಲಕ್ಷ್ಮೀ ಸಮೇತನಾಗಿ ಮೈದೋರಿ ಬೇಕಾದ ವರವನ್ನು ಕೇಳು ಎಂದ. ಸುವ್ರತನು ಆನಂದದಿಂದ ಪರವಶನಾಗಿ ಕೈ ಮುಗಿದು ಸ್ತುತಿಸಿದ.

**ಸುವ್ರತ :-**

**ಸಂಸಾರ ಸಾಗರಮತೀವಮಹಾಸುದುಃಖ**
**ಜಾಲೋರ್ಮಿಭಿರ್ವಿವಿಧ ಮೋಹಚಯೈಸ್ತರಂಗೈಃ ।**
**ಸಂಪೂರ್ಣಮಸ್ತಿ ನಿಜದೋಷ ಗುಣೈಸ್ತು ಪ್ರಾಪ್ತಂ**
**ತಸ್ಮಾತ್ ಸಮುದ್ಧರ ಜನಾರ್ದನ, ಮಾಶು ದೀನಂ ॥**

ಹೇ ಜನಾರ್ದನ, ದುಃಖಮೋಹಗಳೆಂಬ ಅಲೆಗಳಿಂದ ತುಂಬಿದ ಈ ಸಂಸಾರ ಸಾಗರದಲ್ಲಿ ಬಿದ್ದು ಬಳಲುತ್ತಿರುವ ನನ್ನನ್ನುದ್ಧರಿಸು.

**ಕರ್ಮಾಂಬುಧೇ ಮಹತಿ ಗರ್ಜತಿ ವರ್ಷತೀವ**
**ವಿದ್ಯುಲ್ಲತೋಲ್ಲಸತಿ ಪಾತಕ ಸಂಚಯೈರ್ಮೇ ।**
**ಮೋಹಾಂಧಕಾರ ಪಟಲೈರ್ಮಮ ನಷ್ಟದೃಷ್ಟೇ**
**ರ್ದೀನಸ್ಯ ತಸ್ಯ ಮಧುಸೂದನದೇಹಿಹಸ್ತಂ ॥**

ಕರ್ಮವೆಂಬ ಕಾರ್ಮುಗಿಲು ಗುಡುಗುತ್ತಿದೆ. ಪಾಪಗಳೆಂಬ ಮಿಂಚು ಹೊಳೆಯುತ್ತಿದೆ. ಮೋಹಾಂಧಕಾರದಿಂದ ಕುರುಡನಾಗಿದ್ದೇನೆ. ಮಧುಸೂದನ, ನನ್ನ ಕೈ ಹಿಡಿದು ನಡೆಸು.

**ಸಂಸಾರಕಾನನಘನಂ ಬಹು ದುಃಖವೃಕ್ಷೈಃ**
**ಸಂಸೇವ್ಯಮಾನಮಪಿ ಮೋಹಮಯೈಶ್ಚ ಸಿಂಹೈಃ ।**
**ಸಂದೀಪ್ತಮಸ್ತಿ ಕರುಣಾ ಬಹು ವಹ್ನಿ ತೇಜಃ**
**ಸಂದೀಪ್ಯಮಾನ ಮನಸಂ ಪರಿಪಾಹಿ ಕೃಷ್ಣ ॥**

ಬಹು ದುಃಖ ವೃಕ್ಷಗಳಿಂದ ದಟ್ಟವಾದ ಸಂಸಾರವೆಂಬ ಅರಣ್ಯದಲ್ಲಿ ಮೋಹವೆಂಬ ಸಿಂಹಗಳಿವೆ. ಶೋಕವೆಂಬ ಕಾಳ್ಗಿಚ್ಚು ಅಲ್ಲಿ ಉರಿಯುತ್ತಿದೆ. ನನ್ನ ಮನಸ್ಸನ್ನು ಸುಡುತ್ತಿದೆ. ಹೇ ಕೃಷ್ಣ, ಕಾಪಾಡು.

**ಸಂಸಾರ ವೃಕ್ಷಮತಿಜೀರ್ಣಮಪೀಹಉಚ್ಚಂ**
**ಮಾಯಾ ಸುಕಂದ ಕರುಣಾ ಬಹುದುಃಖಶಾಖಂ ।**
**ಜಾಯಾದಿ ಸಂಗಚ್ಛದನಂ ಫಲಿತಂ ಮುರಾರೇ**
**ತಂ ಚಾಧಿರೂಢ ಪತಿತಂ ಭಗವನ್‌ಹಿರಕ್ಷ ॥**

ಮಾಯಾ ಮೂಲಕವಾದ ಸಂಸಾರವೆಂಬ ದೊಡ್ಡ ಹಳೆಮರದ ಸತಿಸುತರೆಂಬ ಎಲೆಗಳಿಂದ ತುಂಬಿದ ದುಃಖಶಾಖೆಯನ್ನೇರಿ ಬಿದ್ದಿರುವ ನನ್ನನ್ನು, ಹೇ ಭಗವಂತ, ರಕ್ಷಿಸು.

**ನಾನ್ಯಂ ವದಾಮಿ ನ ಭಜಾಮಿ ನ ಚಿಂತಯಾಮಿ**
**(ತ್ವತ್‌ಪಾದಯುಗಳಂ ಸತತಂ ನಮಾಮಿ)**
**ಏವಂ ಹಿ ಮಾಮುಪಗತಂ ಶರಣಂ ಚ ರಕ್ಷ**
**ದೂರೇಣಯಾಂತು ಮಮ ಪಾತಕ ಸಂಚಯಾಸ್ತೇ ॥**

ನಾನು ಅನ್ಯರನ್ನು ಸ್ತುತಿಸಲಾರೆ, ಭಜಿಸಲಾರೆ, ಧ್ಯಾನಿಸಲಾರೆ. ಸದಾ ನಿನ್ನ ಡಿದಾವರೆಗಳಿಗೆ ನಮಿಸುವೆ. ನಿನ್ನನ್ನೇ ಮೊರೆಹೋಗುವೆ ಕಾಪಾಡು. ನನ್ನ ಪಾಪಗಳನ್ನು ದೂರಮಾಡು. ಕೃಷ್ಣ ನೀನೊಲಿದಿರುವಿಯಾದರೆ ನನ್ನನ್ನೂ ನನ್ನ ತಾಯಿ-ತಂದೆ-ಮಡದಿಯರನ್ನೂ ನಿನ್ನ ಲೋಕಕ್ಕೆ ಕರೆದೊಯ್ಯು.

ಕೃಷ್ಣನು ಹಾಗೇ ಆಗಲಿ' ಎಂದು ಹೇಳಿ ಅವರನ್ನೆಲ್ಲ ತನ್ನ ಲೋಕಕ್ಕೆ ಕರೆದೊಯ್ದ. ಅಲ್ಲಿ ಎರಡು ಕಲ್ಪಗಳ ಕಾಲ ಸುವ್ರತ ಸುಖದಿಂದಿದ್ದು ಬಳಿಕ ವಸುದತ್ತನಾಗಿ ಜನಿಸಿ ದೇವರಾಜಪದವಿಯನ್ನು ಪಡೆದ.

**ವ್ಯಾಸ :-** ಹಿಂದಿನ ಕಲ್ಪದ ಧರ್ಮಾಂಗದನು ಈಗ ಇಂದ್ರನಾಗಿರುವುದಾದರೆ ಈ ಕಲ್ಪದಲ್ಲಿ ತಿರುಗಿ ಧರ್ಮಾಂಗದನೆಲ್ಲಿಂದ ಉದ್ಭವಿಸಿದ ?

**ಬ್ರಹ್ಮ :-** ವಾರ, ಪಕ್ಷ, ಮಾಸ, ಋತು, ಸಂವತ್ಸರ, ಮನ್ವಂತರಗಳಂತೆ ಸೃಷ್ಟಿಯೂ ಪ್ರತಿ ಕಲ್ಪದಲ್ಲಿ ಪುನರಾವೃತ್ತಿಗೊಳ್ಳುತ್ತದೆ. ಈ ಕಲ್ಪದ ಕೊನೆಯಲ್ಲಿ ಚರಾಚರ ಪ್ರಪಂಚವನ್ನು ನನ್ನೊಳಗಿಟ್ಟುಕೊಂಡು ನಾನು ಜನಾರ್ದನನ ಉದರವನ್ನು ಪ್ರವೇಶಿಸುವೆನು. ಮುಂದಿನ ಕಲ್ಪದಲ್ಲಿ ಆ ಜನಾರ್ದನನೇ ಮೊದಲಿನಂತೆ ಎಲ್ಲ ದೇವತೆಗಳನ್ನೂ, ರಾಜರನ್ನೂ, ಪ್ರಜೆಗಳನ್ನೂ ಸೃಷ್ಟಿಸುವನು. ಪೂರ್ವಕಲ್ಪದಲ್ಲಿ ಒಬ್ಬನು ಧರ್ಮಾಂಗದನೆಂಬ ಹೆಸರಿನಿಂದ ಹುಟ್ಟಿದಂತೆ ಈ ಕಲ್ಪದಲ್ಲಿ ಇನ್ನೊಬ್ಬ ಆ ಹೆಸರಿನಿಂದ ಹುಟ್ಟಿದ್ದಾನೆ. ಹೀಗೆ ಉಳಿದ ರಾಜರೂ ಹುಟ್ಟುತ್ತಾರೆ. ಇಂದ್ರಪದವಿಯನ್ನು ಪಡೆಯುತ್ತಾರೆ.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಭೂಮಿಖಂಡದಲ್ಲಿ ಸುವ್ರತೋಪಾಖ್ಯಾನವೆಂಬ ಆರನೆಯ ಅಧ್ಯಾಯ ಮುಗಿದುದು*



## ಬಲ ಮತ್ತು ವೃತ್ರಾಸುರ ವಧೆ ಮರುದುತ್ಪತ್ತಿ | ಅಧ್ಯಾಯ - ೭

**ಋಷಿಯ ಊಚುಃ**

**ಋಷಿಗಳು :-** ನೀನು ಹೇಳಿದ ಈ ಕಥೆ ವಿಚಿತ್ರವಾಗಿದೆ. ಸರ್ವಪಾಪ ಪರಿಹಾರಕವಾಗಿದೆ. ಇನ್ನು ಮುಂದೆ ಪ್ರಪಂಚದ ಸೃಷ್ಟಿಗೆ ಸಂಬಂಧಿಸಿದ ಕಥೆಗಳನ್ನು ಹೇಳು.

**ಸೂತ :-** ಆಗಲಿ, ಹೇಳುತ್ತೇನೆ. ಹಿರಣ್ಯಕಶಿಪು ಬ್ರಹ್ಮನನ್ನು ತಪಸ್ಸಿನಿಂದೊಲಿಸಿ ಕೊಂಡು ಅಮರನೆನಿಸಿ ಎಲ್ಲ ಲೋಕಗಳನ್ನಾಕ್ರಮಿಸಿದಾಗ ದೇವ, ಋಷಿ, ಗಂಧರ್ವ ಮುಂತಾದವರೆಲ್ಲರೂ ಬ್ರಹ್ಮನನ್ನು ಮುಂದು ಮಾಡಿಕೊಂಡು ಕ್ಷೀರಸಮುದ್ರದಲ್ಲಿ ಯೋಗನಿದ್ರೆಮಾಡುತ್ತಿದ್ದ ನಾರಾಯಣನನ್ನು ಸೋತ್ರಮಾಡಿ ಎಬ್ಬಿಸಿದರು. ಎಚ್ಚತ್ತ ನಾರಾಯಣನು ನರಸಿಂಹನಾಗಿ ಹಿರಣ್ಯಕಶಿಪುವನ್ನು ಕೊಂದ, ವರಾಹ ರೂಪುತಾಳಿ ಹಿರಣ್ಯಾಕ್ಷನನ್ನೂ ಕೊಂದ. ದೈತ್ಯರನ್ನೆಲ್ಲ ನಾಶಪಡಿಸಿ ದೇವತೆಗಳಿಗೆ ಅವರ ಸ್ಥಾನಗಳನ್ನು ತಿರುಗಿ ಕೊಟ್ಟ. ಆಗ ದಿತಿ ಪುತ್ರಶೋಕದಿಂದ ಅಳತೊಡಗಿದಳು. ಕಶ್ಯಪರಲ್ಲಿ ತನ್ನ ವ್ಯಥೆಯನ್ನು ಹೇಳಿಕೊಂಡಳು.

**ದಿತಿ :-** ಭಗವಾನ್ ನನ್ನ ಮಕ್ಕಳನ್ನೆಲ್ಲ ವಿಷ್ಣು ನಾಶಪಡಿಸಿದ. ನಾನೀ ಪುತ್ರ ಶೋಕವನ್ನು ತಡೆಯಲಾರೆ. ನಾಥ, ನನಗೆ ಪುತ್ರಭಿಕ್ಷೆಯನ್ನು ನೀಡು. ಸೂರ್ಯನಂತೆ ತೇಜಸ್ವಿಯಾದ, ಬಲಿಷ್ಠನಾದ, ಎಲ್ಲ ಲೋಕಗಳನ್ನೂ ಗೆಲ್ಲುವ, ಸರ್ವಲಕ್ಷಣ ಸಂಪನ್ನನಾದ ಒಬ್ಬ ಮಗನನ್ನು ನನಗೆ ಅನುಗ್ರಹಿಸು.

ಕಶ್ಯಪರು ಕರುಣೆಯಿಂದ ಆಕೆಯ ತಲೆಯ ಮೇಲೆ ಕೈಯಿಟ್ಟು ನೀನು ಬಯಸುವ ಸತ್ಪುತ್ರನನ್ನೆ ಪಡೆ ಎಂದು ಆಶೀರ್ವದಿಸಿದರು. ಮೇರು ಪರ್ವತವನ್ನೇರಿ ಅಲ್ಲಿ ತಪಸ್ಸಿಗೆ ಕುಳಿತರು. ಗರ್ಭಿಣಿಯಾದ ದಿತಿದೇವಿ ನೂರು ವರ್ಷಗಳ ಕಾಲ ಶುಚಿಯಾಗಿದ್ದು ಎಲ್ಲ ವ್ರತಗಳನ್ನು ಮಾಡಿದಳು. ಬ್ರಹ್ಮತೇಜಸ್ಸಿನಿಂದ ಹೊಳೆವ ಶಿಶುವೊಂದನ್ನು ಹೆತ್ತಳು. ಕಶ್ಯಪರ ಮಗನಿಗೆ ಬಲನೆಂದು ಅನ್ವರ್ಥವಾದ ಹೆಸರಿಟ್ಟು ಉಪನಯನಮಾಡಿ

ಗುರುಕುಲಕ್ಕೆ ಕಳಿಸಿದರು. ಬಲನು ನೂರು ವರ್ಷಗಳ ಕಾಲ ಬ್ರಹ್ಮಚರ್ಯ, ತಪಸ್ಸು, ವೇದಾಧ್ಯಯನಗಳನ್ನು ಮಾಡಿ ತಾಯಿಯ ಬಳಿಗೆ ಬಂದಾಗ ಆಕೆಗೆ ಪರಮಾನಂದವಾಯಿತು.

**ದಿತಿ :-** ಮಗು, ನೀನು ಬಳಿಯಲ್ಲಿದ್ದರೆ ಹಿರಣ್ಯಾಕ್ಷ-ಹಿರಣ್ಯಕಶಿಪು ಮುಂತಾದ ಎಲ್ಲ ಮಕ್ಕಳೂ ನನ್ನ ಬಳಿಯಲ್ಲಿದ್ದಂತೆ. ಅವರನ್ನು ಕೊಂದ ದೇವತೆಗಳಲ್ಲಿ ನೀನು ವೈರಸಾಧಿಸಬೇಕು. ಮೊದಲು ಇಂದ್ರನನ್ನು ಕೊಲ್ಲು, ಬಳಿಕ ಎಲ್ಲ ದೇವತೆಗಳನ್ನೂ ಹರಿಯನ್ನೂ ಕೊಲ್ಲು.

ಈ ಮಾತುಕತೆಗಳನ್ನು ಕೇಳಿಸಿಕೊಂಡ ಅದಿತಿ ಭೀತಳಾಗಿ ಇಂದ್ರನಿಗೆ ಎಲ್ಲವನ್ನೂ ತಿಳಿಸಿ ಎಚ್ಚರದಿಂದಲು ಹೇಳಿದಳು. ಇಂದ್ರನು ಭಯದಿಂದ ಬಲನನ್ನು ಕೊಲ್ಲಲು ಹೊಂಚುಹಾಕಿ ಕುಳಿತು ಒಮ್ಮೆ ಆತ ಸಮುದ್ರತೀರದಲ್ಲಿ ಸಂಧ್ಯಾವಂದನೆಗೆ ಕುಳಿತು ಏಕಾಗ್ರತೆಯಿಂದ ಜಪಿಸುತ್ತಿದ್ದಾಗ ಅವನ ಮೇಲೆ ವಜ್ರಾಯುಧವನ್ನು ಬೀಸಿದ. ಬಲನು ನೆಲ್ಕಕೊರಗಿದುದನ್ನು ಕಂಡು ನೆಮ್ಮದಿಯ ಉಸಿರನ್ನೆಳೆದು ಹೊರಟು ಹೋದ.

**ಸೂತ ಉವಾಚ**

**ಸೂತ :-** ದಿತಿಯು ಈಗ ತಿರುಗಿ ಪುತ್ರಶೋಕದಿಂದ ಅಳತೊಡಗಿದಳು. ಕಶ್ಯಪರ ಬಳಿ ತನ್ನ ದುಃಖವನ್ನು ಹೇಳಿಕೊಂಡಳು.

**ದಿತಿ :-** ಆ ಮಹಾಪಾಪಿ ನಿನ್ನ ಮಗ ಇಂದ್ರನು ಸಮುದ್ರ ತೀರದಲ್ಲಿ ಸಂಧ್ಯಾವಂದನೆ ಮಾಡುತ್ತಿದ್ದ ನನ್ನ ಕಂದನನ್ನು ಕೊಂದ.

ಕಶ್ಯಪರು ಇದನ್ನು ಕೇಳಿ ಕೋಪದಿಂದ ಬೆಂಕಿಯಂತಾಗಿ ತಲೆಯಿಂದ ಒಂದು ಜಟೆಯನ್ನು ಕಿತ್ತು ಅಗ್ನಿಕುಂಡದಲ್ಲೆಸೆದರು. ಒಡನೆ ಉರಿವ ಆ ಅಗ್ನಿಕುಂಡದಿಂದ ಭೀಕರಾಕಾರದ ಪುರುಷನೊಬ್ಬ ಎದ್ದು ಬಂದ. ಕರಾಳ ಕೋರೆಹಲ್ಲುಗಳು, ಕೆಂಪಾದ ಕಣ್ಣುಗಳು, ಪ್ರಖರ ತೇಜೋಮಯ ಭೂತಾಕಾರ, ಬಲಿಷ್ಠ ಕಾಯ, ಕೈಯಲ್ಲಿ ಖಡ್ಗ. ಇವನೇ ವೃತ್ರ, ಕಶ್ಯಪರನ್ನು ನೋಡಿ ಕೇಳಿದನಾತ.

**ವೃತ್ರ :-** ವಿಪ್ರೋತ್ತಮ, ನನ್ನನ್ನೇಕೆ ಹುಟ್ಟಿಸಿದೆ ? ಅಪ್ಪಣೆ ಕೊಡು. ನಿನ್ನನುಗ್ರಹದಿಂದ ಯಾವ ಕಾರ್ಯವನ್ನೂ ಸಾಧಿಸಬಲ್ಲೆ.

**ಕಶ್ಯಪ :-** ಮಗು, ದುರಾತ್ಮನಾದ ಆ ಇಂದ್ರನನ್ನು ಕೊಲ್ಲು. ನಿನ್ನ ತಾಯಿಗೆ ಸಂತೋಷ ಕೊಡು. ಇಂದ್ರನ ಸಿಂಹಾಸನವನ್ನೇರು.

ಕಶ್ಯಪರಾಜ್ಞೆಯನ್ನು ಪಡೆದು ವೃತ್ರ ಮೊದಲು ವೇದಾಭ್ಯಾಸಮಾಡಿದ, ಧನುರ್ವೇದದಲ್ಲಿಯೂ ಪರಿಣತನಾದ. ಅವನ ಬಲ, ವೀರ್ಯ, ಧೈರ್ಯ ಕ್ಷಾತ್ರ ತೇಜಸ್ಸುಗಳನ್ನು ಕಂಡು ಇಂದ್ರನು ಭಯದಿಂದ ತಲ್ಲಣಿಸಿದ. ಅವನನ್ನು ಕೊಲ್ಲುವ ಉಪಾಯವೊಂದನ್ನು ಯೋಚಿಸಿದ. ಸಪ್ತಋಷಿಗಳನ್ನು ಕರೆದು 'ವೃತ್ರನೊಡನೆ ನನಗೆ ಸಂಧಿ ಮಾಡಿಸಿರಿ' ಎಂದ. ಋಷಿಗಳು ಒಪ್ಪಿ ವೃತ್ರನ ಬಳಿಗೆ ಹೋದರು.

**ಋಷಿಗಳು :-** ಇಂದ್ರನು ನಿನ್ನ ಸ್ನೇಹ ಬಯಸಿದ್ದಾನೆ. ಏಕೆ ಸಂಧಿ ಮಾಡಿಕೊಳ್ಳಕೂಡದು ? ಅವನೊಡನೆ ಅರ್ಧಾಸನವೇಕೆ ಪಡೆಯಕೂಡದು ?.

**ವೃತ್ರ** :- ಇಂದ್ರ ನಿಜವಾಗಿಯೂ ನನ್ನ ಸ್ನೇಹ ಬಯಸುವುದಾದರೆ ಸರಿ. ಆದರೆ ಅವನನ್ನು ನಾನು ಹೇಗೆ ನಂಬಲಿ ?

ಋಷಿಗಳು ಹಿಂತಿರುಗಿ ಬಂದು ಇಂದ್ರನಲ್ಲಿ ಈ ಪ್ರಶ್ನೆಯನ್ನು ಕೇಳಿದರು. 'ವಿಶ್ವಾಸಕ್ಕೆ ದ್ರೋಹ ಬಗೆದೆನಾದರೆ ನನಗೆ ಬ್ರಹ್ಮಹತ್ಯಾ ದೋಷ ಬರಲಿ' ಎಂದನಾತ. ಋಷಿಗಳು ಈ ಮಾತನ್ನು ವೃತ್ರನ ಮುಂದೆ ಹೇಳಿದಾಗ ಅವರ ಮಾತಿಗೆ ಗೌರವಕೊಟ್ಟು ಇಂದ್ರನೊಡನೆ ಮೈತ್ರಿಗೊಪ್ಪಿದ ವೃತ್ರ. ಇಂದ್ರನಾತನನ್ನು ಬರಮಾಡಿ ತನ್ನ ಅರ್ಧಾಸನವಿತ್ತು 'ಸ್ನೇಹದಿಂದ ಸುಖವಾಗಿರೋಣ' ಎಂದ. ಅಂತರಂಗದಲ್ಲಿ ಛಿದ್ರಾನ್ವೇಷಿಯಾಗಿದ್ದು ಹೊರಗೆ ಕೃತ್ರಿಮ ವಿಶ್ವಾಸ ತೋರಿದ.

ಬಳಿಕ ಹಗಲು-ರಾತ್ರಿಯೆನ್ನದೆ ಸದಾ ವೃತ್ರನ ಬಳಿಯಿದ್ದು ಪ್ರಯತ್ನಿಸಿದರೂ ಅವನನ್ನು ಕೊಲ್ಲುವ ಅವಕಾಶ ಪಡೆಯಲಾರದೆ ನಿರಾಶನಾದ. ಇಂದ್ರನೊಂದು ದಿನ ರಂಭೆಯನ್ನು ಕರೆದು ಹೇಳಿದ. 'ವೃತ್ರನನ್ನು ನಾನು ಕೊಲ್ಲಬೇಕಾಗಿದೆ. ನೀನು ಆತನನ್ನು ಮೋಹದಲ್ಲಿ ಕೆಡಹು.' ಒಡನೆ ರಂಭೆ ನಂದನವನವನ್ನು ಹೊಕ್ಕಳು. ಆ ವನದಲ್ಲಿ ಫಲ-ಪುಷ್ಪಭರಿತ ವೃಕ್ಷಗಳು, ನಾನಾ ವಿಧದ ಮೃಗಪಕ್ಷಿಗಳು, ದಿವ್ಯ ಅದ್ಭುತ ವಿಮಾನಗಳು, ಹಾಡುತ್ತಿರುವ ಗಂಧರ್ವರು, ಝೇಂಕರಿಸುವ ದುಂಬಿಗಳು, ಇಂಪಾಗಿ ಉಲಿವ ಕೋಗಿಲೆಗಳು, ಕುಣಿವ ನವಿಲುಗಳು, ತುಂಬಿದ ಕೊಳದಲ್ಲಿ ಅರಳಿದ ತಾವರೆಗಳು, ಹೊನ್ನ ಮಂಟಪಗಳು, ಛತ್ರ-ಚಾಮರ-ಕಲಶ ಪತಾಕೆಗಳು, ಸದಾ ಕೇಳಿ ಬರುವ ವೇದಗೀತಧ್ವನಿಗಳು ಎಲ್ಲವೂ ರಮ್ಯ, ಎಲ್ಲವೂ ದಿವ್ಯ, ಅದ್ಭುತ. ದೇವತೆಗಳು, ಋಷಿಗಳು, ಗಂಧರ್ವರು, ಸಿದ್ಧರು, ಚಾರಣರು, ಕಿನ್ನರರು ಅಪ್ಸರೆಯರು ಎಲ್ಲರೂ ಇಲ್ಲಿ ವಿಹರಿಸುತ್ತಾರೆ. ರೂಪಸಿಯಾದ ರಂಭೆ ಗೆಳತಿಯರೊಂದಿಗೆ ಅಲ್ಲಿ ಚಂದನ ವೃಕ್ಷದ ತಂಪು ನೆಳಲಲ್ಲಿ ಉಯ್ಯಾಲೆ ತೂಗುತ್ತ ಮೋಹಕವಾದ ಮಧುರ ಗೀತಗಳನ್ನು ಹಾಡಿದಳು. ವೃತ್ರನೂ ಆ ಸಮಯದಲ್ಲಿ ವನವಿಹಾರಕ್ಕೆ ಬಂದಿದ್ದ. ರಂಭೆಯನ್ನು ಕಂಡು ಅವಳ ಕಣ್ಣಿಗಳ ಚೆಲುವಿಗೂ, ದನಿಯ ಇಂಪಿಗೂ ಮಾರುಹೋದ. ಅವಳಲ್ಲಿ ಅನುರಕ್ತನಾದ. ಇಂದ್ರನು ವೃತ್ರನ ಬೆನ್ನ ಹಿಂದೆಯೆ ನಿಗೂಢನಾಗಿ ಸಂಚರಿಸುತ್ತಿದ್ದ. ಅವನನ್ನು ನಂಬಿದ್ದರಿಂದ ವೃತ್ರನಿಗೆ ಇದು ಗಮನಕ್ಕೆ ಬರಲಿಲ್ಲ.

**ಸೂತ ಉವಾಚ** :-

**ಸೂತ** :- ವೃತ್ರನು ರಂಭೆಯನ್ನು ನೋಡಿ ಮನಸ್ಸಿನಲ್ಲೆ ಅಂದುಕೊಂಡ.

**ವೃತ್ರ** :- ಯಾರೀಕೆ ಹಾಡುತ್ತಿರುವವಳು ? ತಾವರೆಯಂಥ ಬೊಗಸೆಗಣ್ಣವಳು ! ಉಬ್ಬಿದೆದೆಯವಳು ! ಚಂದನ ಬಳಿದ ಮೈಯವಳು ! ಇಡೀ ವನವನ್ನೆ ಶೃಂಗಾರಮಯವನ್ನಾಗಿ ಮಾಡುತ್ತಿರುವಳು ! ಲಕ್ಷ್ಮಿಯೇ ? ರತಿಯೇ ? ಶೃಂಗಾರದ ನೆಲೆಯಂತೂ ಹೌದು. ರಸಿಕರನ್ನಾಹ್ವಾನಿಸುವಂತಿದ್ದಾಳೆ. ಈಕೆ ಯಾರೆಂದು ಕೇಳುತ್ತೇನೆ.

ವೃತ್ರ ಆಕೆಯ ಬಳಿಗೆ ಹೋಗಿ ಕೇಳಿದ.

**ವೃತ್ರ** :- ಚೆಲುವೆ, ನೀನಾರು, ನಿನ್ನ ಹೆಸರೇನು ? ನಿನ್ನ ರೂಪಿಗೆ ಮರುಳಾಗಿದ್ದೇನೆ. ಬಾ, ನನ್ನವಳಾಗು.

**ರಂಭೆ** :- ನಾನು, ರಂಭೆ ನೀನಾರು ?

**ವೃತ್ರ :-** ನಾನು ಯಾರು ಎಂದು ಕೇಳುತ್ತಿರುವೆಯಾ ? ಕೇಳು ಹೇಳುತ್ತೇನೆ. ನಾನು ಬೆಂಕಿಯ ಒಳಗಿಂದ ಬಂದವ. ಮಹರ್ಷಿ ಕಶ್ಯಪರ ಪುತ್ರ. ದೇವರಾಜನ ಮಿತ್ರ, ಹೆಸರು ವೃತ್ರ. ದೇವರಾಜನ ಅರ್ಧಾಸನ ನನ್ನದು. ನಿನಗಿದು ತಿಳಿಯದೆ ? ನೋಡು, ಮೂಲೋಕದೊಡೆಯನಾದರೂ ನಾ ನಿನ್ನ ದಾಸನಾಗಿದ್ದೇನೆ. ಎಲೈ, ವಿಶಾಲ ನಯನೆ, ಬಾ.

**ರಂಭೆ :-** ವೀರನೆ, ನಾನು ಹೇಳಿದಂತೆ ನೀನು ಸದಾ ನಡೆವೆಯಾ ? ಹಾಗಿದ್ದರೆ ಮಾತ್ರ ನಾ ನಿನ್ನವಳು !

**ವೃತ್ರ :-** ಹಾಗೇ ಆಗಲಿ !

ಅಂದಿನಿಂದ ವೃತ್ರ ರಂಭೆಯೊಡನೆ ವಿಹರಿಸತೊಡಗಿದ. ಅವಳ ಗೀತ, ನೃತ್ಯ, ಹಾಸ, ಪರಿಹಾಸ, ಸುರತಚಾತುರ್ಯ ಇವೆಲ್ಲವೂ ಅವನನ್ನು ಮುಗ್ಧಗೊಳಿಸಿತು. ಮೈ ಮರೆಸಿತು. ಮೋಹದಲ್ಲಿ ಕೆಡವಿತು. ರಂಭೆ ಒಂದು ದಿನ ಅವನನ್ನು ಹೆಂಡ ಕುಡಿಯಲು ಒತ್ತಾಯಿಸಿದಳು.

ವೃತ್ರ :- **ಪುತ್ರೋಽಹಂ ಬ್ರಾಹ್ಮಣಸ್ಯಾಪಿ ವೇದವೇದಾಂಗಪಾರಗಃ**
**ಸುರಾಪಾನಂ ಕಥಂ ಭದ್ರೇ ಕರಿಷ್ಯಾಮಿ ವಿನಿಂದಿತಂ**

ಪ್ರಿಯೆ, ನಾನು ಬ್ರಾಹ್ಮಣನ ಮಗ, ವೇದ-ವೇದಾಂಗಗಳನ್ನು ಅಧ್ಯಯನ ಮಾಡಿದವ. ಶಾಸ್ತ್ರ ನಿಷಿದ್ಧವಾದ ಸುರಾಪಾನವನ್ನು ನಾನು ಹೇಗೆ ಮಾಡಲಿ !

ರಂಭೆ ಪ್ರೀತಿ ತೋರುತ್ತ ಬಲಾತ್ಕಾರದಿಂದ ಹೆಂಡ ಕುಡಿಸಿದಳು. ಅಸಹಾಯಕನಾದ ವೃತ್ರ ಕುಡಿದು ಮೈ ಮರೆತ. ಒಡನೆ ಇಂದ್ರ ವಜ್ರಾಯುಧವನ್ನು ಬೀಸಿದ. ಋಷಿಗಳು ಇದನ್ನು ಅನ್ಯಾಯವೆಂದು, ಬ್ರಹ್ಮಹತ್ಯೆಯೆಂದು ಪ್ರತಿಭಟಿಸಿದರು.

**ಋಷಿಗಳು :-** ದೇವೇಂದ್ರ, ನಮ್ಮ ಮಾತಿಗೆ ಗೌರವವಿತ್ತು ನಿನ್ನಲ್ಲಿ ಮೈತ್ರಿ ಮಾಡಿಕೊಂಡ ವೃತ್ರನಿಗೆ ನೀನು ದ್ರೋಹ ಬಗೆದೆ ? ವಿಶ್ವಾಸಘಾತ ಮಾಡಿದೆ ?

**ಇಂದ್ರ :-** ವಿಪ್ರೋತ್ತಮರೆ, ಶತ್ರುವನ್ನು ಹೇಗಾದರೂ ಕೊಲ್ಲಲೇಬೇಕು. ದೇವ ಬ್ರಾಹ್ಮಣರಿಗೆ-ಯಜ್ಞ-ಧರ್ಮಗಳಿಗೆ ಕಂಟಕನಾಗಿದ್ದು ಲೋಕವನ್ನೇ ನಾಶಗೊಳಿಸಲಿದ್ದ ದುಷ್ಟನನ್ನು ಹೇಗೆ ಕೊಂದರೂ ನ್ಯಾಯವೆ. ಕೋಪ ಪರವಶರಾಗದೆ ನಿಧಾನವಾಗಿ ವಿಮರ್ಶೆಮಾಡಿ ನೋಡಿ.

ಬ್ರಹ್ಮಾದಿ ದೇವತೆಗಳು ಇಂದ್ರನ ಮಾತನ್ನು ಅನುಮೋದಿಸಿದರು. ಋಷಿಗಳು ಸುಮ್ಮನಾದರು. ಹೇಗಾದರೂ ಒಂದು ಧರ್ಮಕಂಟಕ ನಿವಾರಣೆಯಾಯಿತೆಂದುಕೊಂಡರು.

**ಸೂತ ಉವಾಚ**

**ಸೂತ :-** ಇತ್ತ ದಿತಿ ತಿರುಗಿ ಅಳಲು ಪ್ರಾರಂಭಿಸಿದಳು. ಕಶ್ಯಪರು ಕನಿಕರಗೊಂಡು ಅವಳ ತಲೆಯ ಮೇಲೆ ಕೈಯಿಟ್ಟು 'ಇಂದ್ರನನ್ನು ಕೊಲ್ಲುವ ಇನ್ನೊಬ್ಬ ಮಗನನ್ನು ಪಡೆ' ಎಂದಾಶೀರ್ವದಿಸಿದರು. ಒಂದು ನೂರು ವರ್ಷಗಳ ಕಾಲ ನಿಯಮದಿಂದಿದ್ದು ಸದಾ ಶುಚಿಯಾಗಿರಲು ಹೇಳಿ, ಮೇರು ಪರ್ವತದ ಒಂದು ತಪೋವನಕ್ಕೆ ಕರೆದೊಯ್ದರು.

ದಂಪತಿಗಳು ತಪಸ್ಸಿಗೆ ಕುಳಿತರು. ಎಲ್ಲವನ್ನೂ ಜಾಗರೂಕತೆಯಿಂದ ಗಮನಿಸುತ್ತಿದ್ದ ಇಂದ್ರ ಇಪ್ಪತ್ತೈದರ ತರುಣ ತಾಪಸನಂತೆ ವೇಷ ಧರಿಸಿ ದಿತಿಯ ಬಳಿಗೆ ಬಂದು ನಮಸ್ಕರಿಸಿದ.

**ದಿತಿ :-** ವಿಪ್ರೋತ್ತಮ, ನೀನಾರು ?

**ಇಂದ್ರ :-** ಅಮ್ಮ, ನಾನು ನಿನ್ನ ಮಗನೆಂದೇ ತಿಳಿ. ವೇದಾಧ್ಯಯನ ಮಾಡಿದ್ದೇನೆ. ಧರ್ಮರಹಸ್ಯಗಳನ್ನರಿತಿದ್ದೇನೆ ತಪಸ್ಸು ಮಾಡುತ್ತಿರುವಾಗ ನಿನಗೆ ಸೇವೆ ಮಾಡಲು ಬಯಸಿ ಬಂದಿದ್ದೇನೆ.

ದಿತಿ ಒಪ್ಪಿದಳು. ಇಂದ್ರ ಆಕೆಯ ಸೇವೆ ಮಾಡತೊಡಗಿದ. ಹೂ, ಹಣ್ಣು, ನೀರು, ನಾರುಡೆಗಳನ್ನು ತಂದು ಕೊಡುವುದು, ಸದಾ ಬಳಿಯಲ್ಲಿದ್ದು ಕೈಕಾಲುಗಳನ್ನೊತ್ತುವುದು, ಕಾಲ್ತೊಳೆಯುವುದು ಮುಂತಾದ ಎಲ್ಲ ಬಗೆಯ ಶುಶ್ರೂಷೆ ಮಾಡಿ ಆಕೆಯ ವಿಶ್ವಾಸವನ್ನು ಸಂಪಾದಿಸಿದ, ಒಂದು ದಿನ ದಿತಿ ಹೇಳಿದಳು.

**ದಿತಿ :-** ಮಗು, ನನಗೊಬ್ಬ ಬಲಿಷ್ಠನಾದ ಮಗ ಹುಟ್ಟುತ್ತಾನೆ. ಇಂದ್ರನನ್ನು ಕೊಂದು ದೇವರಾಜನಾಗುತ್ತಾನೆ. ಆಗ ನೀನೂ ಅವನ ಜತೆಯಲ್ಲಿ ಇಂದ್ರಪದವಿಯನ್ನು ಅನುಭವಿಸುವೆ.

**ಇಂದ್ರ :-** ಅಮ್ಮ, ನಿಮ್ಮ ಅನುಗ್ರಹದಿಂದ ಆ ಭಾಗ್ಯ ನನಗೆ ದೊರಕಲಿ.

ಇಂದ್ರನು ಹೀಗೆ ನುಡಿಯುತ್ತಿದ್ದರೂ ಅವನ ಲಕ್ಷ್ಯ ಬೇರೆ ಕಡೆಗಿತ್ತು. ಸದಾ ಜಾಗರೂಕನಾಗಿ ಛಿದ್ರಾನ್ವೇಷಣೆಯನ್ನೇ ಮಾಡುತ್ತಿದ್ದನಾತ.

ಒಂದು ದಿನ ದಿತಿ ಕಾಲ್ತೊಳೆಯದೆ ತಲೆ ಕೂದಲು ಕಟ್ಟಿಕೊಳ್ಳದೆ ಅಶುಚಿಯಾಗಿ ಹಾಸಿಗೆಯಲ್ಲಿ ಮಲಗಿದ್ದಳು. ಆಕೆಯ ಗರ್ಭಕ್ಕೆ ನೂರು ವರ್ಷಗಳು ತುಂಬಿದ್ದುವು. ಆಯಾಸದಿಂದ ಆಕೆ ಹಾಗೆ ನಿದ್ದೆ ಹೋಗಿದ್ದಳು. ಇಂಥ ಅವಕಾಶಕ್ಕಾಗಿಯೆ ಕಾಯುತ್ತಿದ್ದ ಇಂದ್ರ ಕೂಡಲೇ ಆಕೆಯ ಗರ್ಭವನ್ನು ಪ್ರವೇಶಿಸಿದ. ವಜ್ರಾಯುಧದಿಂದ ಶಿಶುವನ್ನು ಏಳು ಭಾಗವಾಗಿ ತುಂಡರಿಸಿದ. ಶಿಶು ಅಳತೊಡಗಿತು. ಮಾ ರುದ (ಅಳಬೇಡ) ಎಂದ ಇಂದ್ರ. ಹೀಗೆನ್ನುತ್ತಲೆ ಆ ಏಳು ಭಾಗಗಳನ್ನು ತಿರುಗಿ ಏಳೇಳು ಭಾಗಗಳನ್ನಾಗಿ ತುಂಡರಿಸಿದ. ಇದರ ಫಲವಾಗಿ ದಿತಿ ನಲವತ್ತೊಂಬತ್ತು ಮಂದಿ ಶಿಶುಗಳಿಗೆ ಜನ್ಮವಿತ್ತಳು.

ಹುಟ್ಟಿದ ಈ ಮಕ್ಕಳು ದೇವತ್ವವನ್ನು ಪಡೆದು ಅಸದೃಶ ಪರಾಕ್ರಮಿಗಳಾಗಿ ಮೆರೆದರು. ಇಂದ್ರನು ಇವರಿಗೆ ಮಾ ರುದ ಎಂದು ಹೇಳಿದ್ದರಿಂದ ಇವರು ಮರುತ್ತುಗಳೆಂದ ಕರೆಯಲ್ಪಟ್ಟರು ಇಂದ್ರನನ್ನಾಶ್ರಯಿಸಿದ್ದು ಎಲ್ಲ ಲೋಕಗಳಿಗೂ ಹಿತ ಉಂಟು ಮಾಡಿದರು. ಅವರಿಗೆಲ್ಲ ವಿಷ್ಣು ಒಂದೊಂದು ಲೋಕ ಆಧಿಪತ್ಯವನ್ನಿತ್ತನು.

ಆ ವಿಷ್ಣುವೆ ಮೊದಲ ಪ್ರಜಾಪತಿ. ಚರಾಚರ ಪ್ರಪಂಚವೆಲ್ಲ ಅವನ ಸೃಷ್ಟಿ, ಇದನ್ನು ತಿಳಿದವನಿಗೆ ಜನನ ಮರಣಗಳ ಚಕ್ರದಲ್ಲಿ ಸುತ್ತುವ ಭಯವಿಲ್ಲ. ಅವನ ಪಾಪಗಳೆಲ್ಲ ಪರಿಹಾರವಾಗುತ್ತವೆ. ವಿಷ್ಣುಲೋಕ ದೊರೆಯುತ್ತದೆ.

*ಇತಿ ಪದ್ಮ ಮಹಾಪುರಾಣ ಭಾಗ-೨ರ ಭೂಮಿಖಂಡದಲ್ಲಿ*
*ಬಲ ಮತ್ತು ವೃತ್ರಾಸುರ ವಧೆ ಮರುದುತ್ಪತ್ತಿಯೆಂಬ ಏಳನೇಯ ಅಧ್ಯಾಯ ಮುಗಿದುದು*

—o—

## ಪೃಥು ಮಹಾರಾಜನ ವೃತ್ತಾಂತ

**ಅಧ್ಯಾಯ - ೮**

**ಸೂತ ಉವಾಚ**

**ಸೂತ :-** ಜಗದೊಡೆಯನಾದ ವಿಷ್ಣು ವೇನನಮಗ ಪೃಥುರಾಜನಿಗೆ ಸರ್ವಲೋಕಗಳ ಆಧಿಪತ್ಯವನ್ನಿತ್ತನು. ಚಂದ್ರನಿಗೆ ವನಸ್ಪತಿಗಳ, ಬ್ರಾಹ್ಮಣರ ಮತ್ತು ಗ್ರಹ ನಕ್ಷತ್ರಗಳೊಡೆತನವನ್ನಿತ್ತನು. ತಪಸ್ಸು, ಧರ್ಮ, ಯಜ್ಞಗಳು ಮತ್ತು ತೀರ್ಥಗಳಿಗೆ ವರುಣ ಅಧಿಪತಿಯೆನಿಸಿದ. ಯಕ್ಷರಿಗೆ ಕುಬೇರ, ಆದಿತ್ಯರಿಗೆ ವಿಷ್ಣು, ಪುಣ್ಯಕರ್ಮಗಳಿಗೆ ದಕ್ಷ, ದೈತ್ಯ-ದಾನವರಿಗೆ ಪ್ರಹ್ಲಾದ, ಪಿತೃಗಳಿಗೆ ಯಮ, ಯಕ್ಷ, ರಾಕ್ಷಸ, ಭೂತ, ಪಿಶಾಚ ಉರಗ ಬೇತಾಳ ಮುಂತಾದವುಗಳಿಗೆ ರುದ್ರ, ಪರ್ವತಗಳಿಗೆ ಹಿಮಾಲಯ, ನದಿ, ಕೆರೆ, ಬಾವಿ, ಸಮುದ್ರಗಳ ತೀರ್ಥ ಜಲಕ್ಕೆ ಪುಷ್ಕರ, ಗಂಧರ್ವರಿಗೆ ಚಿತ್ರರಥ, ನಾಗರಿಗೆ ವಾಸುಕಿ, ಸರ್ಪಗಳಿಗೆ ತಕ್ಷಕ, ಆನೆಗಳಿಗೆ ಐರಾವತ, ಕುದುರೆಗಳಿಗೆ ಉಚ್ಚೈಶ್ರವಸ್ಸು, ಪಕ್ಷಿಗಳಿಗೆ ಗರುಡ ಮೃಗಗಳಿಗೆ ಸಿಂಹ, ಗೋವುಗಳಿಗೆ ಎತ್ತು, ಮರಗಳಿಗೆ ಪ್ಲಕ್ಷ. ಪೂರ್ವದಿಕ್ಕಿಗೆ ವೇನರಾಜನ ಮಗ ಸುಧನ್ವ. ದಕ್ಷಿಣಕ್ಕೆ ಕರ್ದಮರ ಮಗ ಶಂಖಪಾದ, ಪಶ್ಚಿಮದಿಕ್ಕಿಗೆ ವರುಣನ ಮಗ ಪುಷ್ಕರ, ಉತ್ತರದಿಕ್ಕಿಗೆ ನಳಕೂಬರ ಹೀಗೆ ಅಧಿಪತಿಗಳಾದರು. ಚಾಕ್ಷುಷ ಮನ್ವಂತರ ಕಳೆದು ಈಗ ನಡೆಯುತ್ತಿರುವ ಮನ್ವಂತರಕ್ಕೆ ವೈವಸ್ವತ ಮನು ಅಧಿಪತಿಯಾಗಿದ್ದಾನೆ.

ಪೃಥು ಮಹಾರಾಜನ ವೃತ್ತಾಂತವನ್ನು ನೀವು ಕೇಳ ಬಯಸಿದರೆ ವಿಸ್ತಾರವಾಗಿ ಹೇಳುತ್ತೇನೆ. ಇದು ಪುಣ್ಯಕರವಾದ ಒಳ್ಳೆಯ ಬುದ್ಧಿ-ಕೀರ್ತಿಗಳನ್ನೂ ಪುತ್ರಸಂಪತ್ತನ್ನೂ ಸ್ವರ್ಗವನ್ನೂ ಕೊಡಬಲ್ಲದು.

**ಋಷಿಯ ಉವಾಚ**

**ಋಷಿಗಳು :-** ಮಹಾತ್ಮನಾದ ಪೃಥುವಿನ ಜನ್ಮವೃತ್ತಾಂತವನ್ನು ವಿಸ್ತಾರವಾಗಿ ಕೇಳಬಯಸುತ್ತೇವೆ. ಮತ್ತು ಅವನು ಭೂಮಿಯನ್ನು ಹಿಂಡಿ ಹಾಲು ಕರೆದ ವೃತ್ತಾಂತವನ್ನೂ ಹೇಳು. ಬಳಿಕ ದೇವತೆಗಳು, ಪಿತೃಗಳು, ದೈತ್ಯರು ಮೊದಲಾದವರೂ ತಮಗೆ ಬೇಕಾದಂತೆ ಹಾಲು ಕರೆದರಂತೆ! ಅದನ್ನೂ ಹೇಳು.

**ಸೂತ :-** ಪೃಥುವಿನ ಚರಿತ್ರೆಯನ್ನು ವಿಸ್ತಾರವಾಗಿ ಹೇಳುತ್ತೇನೆ ಕೇಳಿ. ಶ್ರದ್ಧೆ ಇಲ್ಲದವರಿಗೆ ಇದನ್ನು ಹೇಳಕೂಡದು. ಸತ್ಯವಂತರೂ ಧರ್ಮಶೀಲರೂ ಆದ ನಿಮಗೆ ಈ ಪಾವನ ಚರಿತ್ರೆಯನ್ನು ಹೇಳುತ್ತೇನೆ. ವೇದದಂತೆ ಪರಮರಹಸ್ಯವಿದು. ಕೇಳಿದವನ ಏಳು ಜನ್ಮದ ಪಾಪ ಪರಿಹಾರಮಾಡುವುದು. ಬ್ರಾಹ್ಮಣನು ಕೇಳಿದರೆ ವೇದಾರ್ಥಜ್ಞಾನದ ಫಲ, ಕ್ಷತ್ರಿಯನಿಗೆ ವಿಜಯ, ವೈಶ್ಯನಿಗೆ ಧನ, ಶೂದ್ರನಿಗೆ ಸುಖ.

ಹಿಂದೆ ಪರಮ ಧಾರ್ಮಿಕನಾದ ಅಂಗನೆಂಬ ದೊರೆ ಇದ್ದ. ಈತ ಅತ್ರಿ ಮಹರ್ಷಿಯ ಮಗ. ಯಮಧರ್ಮನ ಮಗಳು, ಸುನೀಥೆ ಅವನ ಪಟ್ಟದರಾಣಿ. ಇವಳಲ್ಲಿ ಜನಿಸಿದ ವೇನ ಯಮಧರ್ಮನ ಒಂದು ದೋಷದಿಂದ ಧರ್ಮಕಂಟಕನೆನಿಸಿದ. ಕಾಮಕ್ರೋಧಗಳಿಗೆ ವಶನಾಗಿ ವೇದಧರ್ಮವನ್ನು ಕಡೆಗಣಿಸಿದ; ದುರಾಚಾರಿಯಾದ. ಪ್ರಜೆಗಳು

ಅವನನ್ನನುಕರಿಸಿ ವೇದಾಧ್ಯಯನವನ್ನು ತ್ಯಜಿಸಿದರು. ದೇವಪಿತೃ ಕಾರ್ಯಗಳನ್ನೇ ಮರೆತರು. ದೇವತೆಗಳಿಗೆ ಯಜ್ಞದಲ್ಲಿ ಸೋಮಪಾನ ಕೊಡುವುದನ್ನು ನಿಲ್ಲಿಸಿದರು. ಲೋಕದಲ್ಲಿ ಯಾರೂ ಯಜ್ಞದಾನ ಅಧ್ಯಯನಗಳನ್ನು ನಡೆಸಕೂಡದೆಂದು ವೇನನ ಕಟ್ಟಪ್ಪಣೆಯಿತ್ತು. 'ಯಜ್ಞ ಮಾಡುವವನೂ ನಾನೆ, ಮಾಡಿಸಿಕೊಳ್ಳುವವನೂ ನಾನೆ, ನನಗೇ ಎಲ್ಲ ಆಹುತಿಗಳೂ ಸೇರತಕ್ಕದ್ದು. ನನ್ನ ಹೊರತು ವಿಷ್ಣು ಎಂಬುವನು ಬೇರೆ ಇಲ್ಲ. ಬ್ರಹ್ಮ-ರುದ್ರ-ಇಂದ್ರ ಎಲ್ಲವೂ ನಾನೆ' ಎಂದು ಆತ ಘೋಷಿಸಿದ್ದ.

ತಪಸ್ವಿಗಳು ಇದನ್ನು ನೋಡಿ ಸಹಿಸದೆ ಅವನಿಗೆ ತಿಳಿಹೇಳಿದರು.

**ಋಷಿಗಳು :-** ರಾಜೇಂದ್ರ, ನಾವು ಹನ್ನೆರಡು ವರ್ಷದ ಒಂದು ವ್ರತವನ್ನು ಪ್ರಾರಂಭಿಸಿದ್ದೇವೆ, ನೀನಿದನ್ನು ಕಾಪಾಡಬೇಕು. ಇಂಥ ಪುಣ್ಯ ಕಾರ್ಯಗಳನ್ನು ನೀನು ಪ್ರೋತ್ಸಾಹಿಸುತ್ತಿರಬೇಕು. ಧರ್ಮಮೂರ್ತಿಯಾಗಿರಬೇಕು. ನೀನು ಸಿಂಹಾಸನವೇರುವಾಗ ಧರ್ಮದಿಂದ ರಾಜ್ಯಪಾಲನೆ ಮಾಡುವೆನೆಂದು ಎಲ್ಲರೆದುರು ಪ್ರತಿಜ್ಞೆ ಮಾಡಿರುವುದನ್ನು ಮರೆಯಬೇಡ.

ಉನ್ಮತ್ತನಾಗಿದ್ದ ವೇನನ ಈ ಮಾತನ್ನು ಕೇಳಿ ನಕ್ಕು ಬಿಟ್ಟ. ಅರ್ಥವಿಲ್ಲದ ಮಾತುಗಳನ್ನಾಡಿದ.

**ವೇನ :-** ಯಾರು, ಈ ಧರ್ಮ ಎಂಬುದನ್ನು ಸೃಷ್ಟಿಸಿದವನು ? ನಾನೆ ಅಲ್ಲವೆ ? ಅಧ್ಯಯನ-ತಪಸ್ಸು-ಸತ್ಯ-ವೀರ್ಯ-ಪರಾಕ್ರಮಗಳಲ್ಲಿ ನನಗೆಣೆಯಾದವನು ಯಾರಿದ್ದಾನೆ ? ಪ್ರಪಂಚದ ಸೃಷ್ಟಿಕರ್ತನೆ ನಾನು. ಎಂಥ ಮೂಢರು. ನೀವು ! ನಿಮಗಿದು ತಿಳಿಯದೆ ? ನಾ ಬಯಸಿದರೆ ಲೋಕವನ್ನೇ ಸುಟ್ಟೇನು, ಪ್ರಳಯವನ್ನೇ ತಂದೇನು. ಭೂಮ್ಯಂತರಿಕ್ಷಗಳನ್ನು ತಡೆದೇನು. ಈ ಮೂರ್ಖತನಕ್ಕೆ ಮದ್ದಿಲ್ಲವೆಂದು ಮನಗಂಡ ಋಷಿಗಳು ಬಲಾತ್ಕಾರದಿಂದ ಅವನನ್ನು ಹಿಡಿದುಕೊಂಡರು. ಅವನ ಬಲತೊಡೆಯನ್ನು ಮಥಿಸಿದರು.

ಆಗ ಕಾಡಿಗೆ ಮುದ್ದೆಯಂತೆ ಕಪ್ಪಾದ ವಿಚಿತ್ರ ವಿಕಾರಾಕಾರದ ಕುಳ್ಳನೊಬ್ಬ ಆ ತೊಡೆಯಿಂದ ಎದ್ದುನಿಂತ. ಕುಳಿತುಕೊ ಎಂದರು ಋಷಿಗಳು. ಭಯದಿಂದ ನಡುಗುತ್ತ ಕುಳಿತನಾತ. ಅವನೆ ನಿಷಾದ (ಕುಳಿತುಕೊಂಡವ). ಉದ್ದಜೋಲು ಮೋರೆ, ದಪ್ಪಕಿವಿ, ವಿಕಾರಕಣ್ಣು, ದೊಡ್ಡಹೊಟ್ಟೆಯ ಈ ಕರಿಯ ಕುಳ್ಳನ ವಂಶ ಗುಡ್ಡಗಾಡುಗಳಲ್ಲಿ ನೆಲೆಸಿತು. ಈ ನಿಷಾದನಂತೆ ಕಿರಾತ, ಭಿಲ್ಲ, ಮ್ಲೇಚ್ಛ ಜಾತಿಗಳೂ ವೇನನ ತೊಡೆಯಿಂದ ಎದ್ದು ಬಂದುವು.

ವೇನನ ಶರೀರವೀಗ ಪರಿಶುದ್ಧವಾಯಿತು. ನಿರ್ಮಲವಾಯಿತು. ಋಷಿಗಳು ಅವನ ಬಲತೋಳನ್ನು ಮಥಿಸಿದರು. ಬೆವರು ಬಂದಿತು. ಇನ್ನೂ ಮಥಿಸಿದರು. ಆಗ ದ್ವಾದಶಾದಿತ್ಯರಂತೆ ದೇದಿಪ್ಯಮಾನನಾಗಿ ಜ್ವಲಿಸುವ ಮಹಾಪುರುಷ ಪೃಥು ಎದ್ದು ಬಂದ. ಆಜಾನುಬಾಹುವಾದ ಎಲ್ಲ ಲಕ್ಷಣಗಳಿಂದೊಪ್ಪುವ ಅವನ ಶರೀರವು ಪುಟಕ್ಕಿಟ್ಟ ಚಿನ್ನದಂತೆ ಹೊಳೆಯುತ್ತಿತ್ತು. ಅವನ ಭವ್ಯ ಆಕರ್ಷಕ ವ್ಯಕ್ತಿತ್ವಕ್ಕೆ ದಿವ್ಯವಸ್ತ್ರ, ಆಭರಣ ಗಂಧ ಮಾಲ್ಯಗಳ ಶೋಭೆಯೂ ಸೇರಿಕೊಂಡಿತ್ತು. ಸೂರ್ಯನಂತೆ ಹೊಳೆವ ಕಿರೀಟ,

ಕುಂಡಲಗಳನ್ನೂ ಖಡ್ಗ, ಧನುರ್ಬಾಣ ಕವಚಗಳನ್ನೂ ಧರಿಸಿ ಸಾಕ್ಷಾದಗ್ನಿ ದೇವತೆಯಂತೆ ಕಾಣುತಿದ್ದನಾತ. 'ದೇವಲೋಕದಲ್ಲಿ ಇಂದ್ರ, ಭೂಲೋಕದಲ್ಲಿ ಪೃಥು ಮಹಾರಾಜ' ಎಂದರು ಜನ. ಅವನ ಹುಟ್ಟು ಎಲ್ಲ ಜೀವಿಗಳಿಗೂ ಹರ್ಷ ತಂದಿತು. ಬ್ರಹ್ಮಾದಿ ದೇವತೆಗಳೂ ಋಷಿಗಳೂ, ಏಕೆ, ಸಮಸ್ತ ಚರಾಚರ ಪ್ರಪಂಚವೇ ಸಂಭ್ರಮದಿಂದ ಅವನಿಗೆ ಅಭಿಷೇಕ ಮಾಡಿ ದೊಡ್ಡ ಉತ್ಸವವನ್ನೇ ಆಚರಿಸಿತು.

ಪೃಥುವಿನ ರಾಜ್ಯಭಾರದಲ್ಲಿ ರಾಜನಾದವನು ಪ್ರಜೆಗಳನ್ನು ಹೇಗೆ ರಂಜಿಸಬಲ್ಲನೆಂಬುದರ ಅನುಭವ ಪ್ರಜೆಗಳಿಗೆ ದೊರೆಯಿತು. ವೇನನ ಕಾಲದಲ್ಲಿ ಇದಕ್ಕೆ ಅವಕಾಶವಿರಲಿಲ್ಲ. ಆಳುವ ಅರಸು ಒಬ್ಬ ಪ್ರಜೆಗಳನ್ನು ರಂಜಿಸಿ ರಾಜನೆನಿಸಿದುದು ಪೃಥು ಮಹಾರಾಜನ ಕಾಲದಲ್ಲಿ ಮಾತ್ರ ಸರಿ. ಪೃಥು ರಥವನ್ನೇರಿ ಹೊರಟರೆ ಸಮುದ್ರವೂ ಭಯದಿಂದ ದಾರಿ ಕೊಡುತ್ತಿತ್ತು. ಬೆಟ್ಟಗಳೂ ದಾರಿಯನ್ನು ಸುಗಮ ಮಾಡಿಕೊಡುತ್ತಿದ್ದುವು. ಭೂಮಿಯನ್ನುಳದಿದ್ದರೂ ಬೆಳೆ ಸಿಗುತ್ತಿತ್ತು. ಕಾಲ ಕಾಲಕ್ಕೆ ಮಳೆಯಾಗುತ್ತಿತ್ತು. ವೇದಾಧ್ಯಯನ, ಯಜ್ಞ, ದಾನ ಮುಂತಾದ ಸತ್ಕರ್ಮಗಳು ಎಲ್ಲೆಡೆ ನಿರಂತರ ನಡೆಯುತ್ತಿದ್ದವು.

**ನ ದುರ್ಭಿಕ್ಷಂ ನಚ ವ್ಯಾಧಿರ್ನಕಾಲಮರಣಂ ನೃಣಾಂ**
**ಸರ್ವೇ ಸುಖೇನ ಜೀವಂತಿ ಲೋಕಾ ಧರ್ಮಪರಾಯಣಂ**
**ತಸ್ಮಿನ್ ಶಾಸತಿ ದುರ್ಧರ್ಷೇ ರಾಜರಾಜೇಮಹಾತ್ಮನಿ**

ಮಹಾತ್ಮಾ ಪೃಥು ಚಕ್ರವರ್ತಿ ಆಳುತ್ತಿದ್ದಾಗ ದುರ್ಭಿಕ್ಷ. ರೋಗ, ಅಕಾಲ ಮರಣಗಳೆಂಬುವಿರಲಿಲ್ಲ. ಎಲ್ಲರೂ ಧರ್ಮಪರಾಯಣರಾಗಿ ಸುಖದಿಂದ ಬಾಳಿದರು.

ಪೃಥು ಮಹಾರಾಜನೊಮ್ಮೆ ಬ್ರಹ್ಮನನ್ನು ಕುರಿತು ಯಜ್ಞ ಮಾಡುತ್ತಿದ್ದಾಗ, ಅದರಲ್ಲಿ ಸೋಮರಸ ಹಿಂಡುವ ಸ್ಥಳದಿಂದ ಸೂತ-ಮಾಗಧರು ಹುಟ್ಟಿದರು. ಸೂತನು ಯಜ್ಞೋಪವೀತ ಉಳ್ಳವನು. ವೇದಾಧ್ಯಯನ ಮಾಡುವವನು. ಯಜ್ಞ, ದಾನ ಮುಂತಾದ ಬ್ರಾಹ್ಮಣ ಕರ್ಮಗಳನ್ನು ಅನುಷ್ಠಾನ ಮಾಡುತ್ತಾನೆ. ಮಾಗಧ, ಬಂದಿ, ಚಾರಣರು ಮಾಡುವುದಿಲ್ಲ. ಋಷಿಗಳು ಸೂತ ಮಾಗಧರನ್ನು ಕರೆದು ರಾಜನನ್ನು ಸ್ತುತಿಸಿರಿ' ಎಂಧರು ಆಗ ಸೂತ ಮಾಗಧರು ಹೇಳಿದರು.

**ಸೂತ - ಮಾಗಧರು :-** ಮುನಿಗಳೆ ರಾಜನನ್ನು ನಾವು ಏನೆಂದು ಸ್ತುತಿಸಬೇಕು. ಅವನು ಹಿಂದೆ ಏನು ಮಹಾಕಾರ್ಯಗಳನ್ನು ಮಾಡಿದ್ದಾನೆ. ಮುಂದೇನು ಮಾಡಬೇಕಾಗಿದೆ. ಪ್ರಜೆಗಳಲ್ಲಿ ಹೇಗೆ ನಡೆದುಕೊಳ್ಳಬೇಕಾಗಿದೆ. ಇದನ್ನೆಲ್ಲ ತಿಳಿದರೆ ಸ್ತೋತ್ರಮಾಡಲು ಸಾಧ್ಯ, ತಾವು ಇದನ್ನು ತಿಳಿಸಬೇಕು.

ಋಷಿಗಳು ಒಕ್ಕೊರಲಿನಿಂದ ಮಹಾರಾಜನ ಗುಣಗಾನ ಮಾಡಿದರು.

**ಋಷಿಗಳು :-** ಪೃಥು ಮಹಾರಾಜನೆಂದರೆ ಒಬ್ಬ ಮಹಾಪುರುಷ. ಅವನಲ್ಲಿ ಎಲ್ಲ ದಿವ್ಯ ಸದ್ಗುಣಗಳೂ ನೆಲೆಸಿವೆ. ಸತ್ಯವೆ, ಜ್ಞಾನವೆ, ಬುದ್ಧಿಯೆ, ಪರಾಕ್ರಮವೆ ? ಎಲ್ಲವೂ ಇದೆ. ತ್ಯಾಗ. ಗುಣಗ್ರಹಣ ಸಾಮರ್ಥ್ಯ, ಸವಿಮಾತುಗಳೂ ಇವೆ. ಅವನು ಯುದ್ಧರಂಗದಲ್ಲಿ ವೈರಿಗಳನ್ನು ಪರಾಭವಗೊಳಿಸುತ್ತಾನೆ. ಪ್ರಜೆಗಳ ಯೋಗಕ್ಷೇಮ

ನೋಡಿಕೊಳ್ಳುತ್ತಾನೆ. ರಾಜಸೂಯ ಮುಂತಾದ ಮಹಾಯಾಗಗಳನ್ನು ಮಾಡುತ್ತಾನೆ ಧನ್ಯ ! ರಾಜನೆಂದರೆ ಇವನಂತಿರಬೇಕು.

ಸೂತ-ಮಾಗಧರು ಇದನ್ನು ಕೇಳಿ ಅದರಂತೆ ರಾಜನನ್ನು ಸ್ತುತಿಸಿದರು. ಅವನಿಂದ ಹೇರಳ ದ್ರವ್ಯವನ್ನು ಬಹುಮಾನವಾಗಿ ಪಡೆದರು. ಅಂದಿನಿಂದ ರಾಜರು ಸೂತ-ವಂದಿ-ಮಾಗಧ-ಚಾರಣರಿಂದ ಸ್ತೋತ್ರ ಮಾಡಿಸಿಕೊಳ್ಳುವುದು ವಾಡಿಕೆಯಾಯಿತು.

ಪೃಥು ಮಹಾರಾಜನು ಇಂಥ ಅನೇಕ ಯಜ್ಞಯಾಗಗಳನ್ನು ಮಾಡಿ ಯಥೇಚ್ಛ ದಾನಮಾಡುತ್ತಿದ್ದ. ಪ್ರಜೆಗಳು 'ಎಂಥ ಪುಣ್ಯಾತ್ಮ ನೀರಾಜ'ನೆಂದುಕೊಳ್ಳುತ್ತಿದ್ದರು. ಈ ಮಹಾರಾಜ ಪಟ್ಟವನ್ನೇರಿದ ಕಾಲದಲ್ಲಿ ಮೊದಲಿಗೆ ಭೂಮಿಯು ಬಿತ್ತಿದ ಬೀಜಗಳನ್ನೆಲ್ಲ ಹಾಗೆ ನುಂಗಿಕೊಳ್ಳುತ್ತಿತ್ತು. ಏನೂ ಬೆಳೆ ಕೊಡುತ್ತಿರಲಿಲ್ಲ. ಪ್ರಜೆಗಳು ರಾಜನಲ್ಲಿ ಮೊರೆಯಿಟ್ಟರು. ಒಡನೆ ರಾಜ ಬಿಲ್ಲು ಬಾಣಗಳನ್ನು ಧರಿಸಿ ಭೂಮಿಯನ್ನು ಶಿಕ್ಷಿಸಲು ಹೊರಟ. ಭೂಮಿ ಹೆಣ್ಣಾನೆಯ ರೂಪುತಾಳಿ ಬೆಟ್ಟಗುಡ್ಡಗಳಲ್ಲಿ ಅಡಗಿ ಕುಳಿತಳು. ಇದನ್ನು ತಿಳಿಯದೆ ರಾಜ ಹುಡುಕುತ್ತಲೆ ಇದ್ದ. ಋಷಿಗಳು ಬಂದು 'ರಾಜನ್, ಆಕೆ ಹೆಣ್ಣಾನೆಯ ರೂಪು ಧರಿಸಿ ಅಡಗಿದ್ದಾಳೆ' ಎಂದರು. ಇದರಿಂದ ರಾಜ ಅವಳನ್ನು ಗುರುತಿಸಿ ಬೆನ್ನಟ್ಟಿ ಹೋದ. ಬಾಣದಿಂದ ಹೊಡೆದ. ಒಡನೆ ಆಕೆ ಸಿಂಹ ರೂಪವನ್ನು ಧರಿಸಿದಳು. ರಾಜ ಕ್ರುದ್ಧನಾಗಿ ಬಾಣದಿಂದ ಹೊಡೆದ. ಆಕೆ ಎಮ್ಮೆಯ ರೂಪದಿಂದೋಡತೊಡಗಿದಳು. ಕೊನೆಗೆ ಆಕಳಿನ ರೂಪದಿಂದ ಸ್ವರ್ಗಕ್ಕೆ ಓಡಿಹೋಗಿ ಬ್ರಹ್ಮ-ವಿಷ್ಣು-ಮಹೇಶ್ವರರನ್ನೂ, ಎಲ್ಲ ದೇವತೆಗಳನ್ನೂ ಮೊರೆಹೊಕ್ಕಳು. ಆದರೆ ಎಲ್ಲಿಯೂ ರಕ್ಷಣೆ ಸಿಗಲಿಲ್ಲ. ನಿರುಪಾಯಳಾಗಿ ಪೃಥುವಿನ ಬಳಿಗೇ ಬಂದು ಹೇಳಿದಳು.

**ಭೂಮಿ :-** ರಾಜನ್, ನಾನು ಭೂತಧಾತ್ರಿ. ಎಲ್ಲ ಪ್ರಾಣಿಗಳಿಗೂ ಆಧಾರಳು ಎನ್ನುವುದು ನಿನಗೆ ಗೊತ್ತು. ನನ್ನನ್ನು ರಕ್ಷಿಸು. ನನ್ನನ್ನು ಕೊಂದರೆ ಏಳು ಲೋಕವೂ ನಾಶಹೊಂದುವುದು. ನಾನಿಲ್ಲದಿದ್ದರೆ ಲೋಕ ಸ್ಥಿರವಾಗಿ ನಿಲ್ಲದು. ನೀನಾದರೂ ಅದನ್ನು ಹೇಗೆ ಕಾಪಾಡಬಲ್ಲೆ, ಹೇಳು. ನಾನು ಸ್ತ್ರೀ, ಮೇಲಾಗಿ ಗೋವು, ಸ್ತ್ರೀವಧೆ, ಗೋವಧೆಗಳು ಮಹಾಪಾಪಕರ. ಋಷಿಗಳನ್ನು ಕೇಳು, ಹಾಗೇ ಹೇಳುತ್ತಾರೆ. ರಾಜನ್, ಬೇಡ, ನನ್ನನ್ನು ಕೊಲ್ಲಬೇಡ. ನಿನಗೆ ಶ್ರೇಯಸ್ಸು ಬೇಕಿದ್ದರೆ ನನ್ನ ಮಾತು ಕೇಳು, ನನ್ನನ್ನು ಕೊಲ್ಲಬೇಡ. ನನ್ನನ್ನು ಕೊಂದು ಪ್ರಜೆಗಳನ್ನು ಎಷ್ಟು ಮಾತ್ರಕ್ಕೂ ನೀನು ರಕ್ಷಿಸಲಾರೆ, ಪೋಷಿಸಲಾರೆ. ಕೋಪ ಬಿಡು. ನಾನು ಪ್ರಜೆಗಳಿಗೆ ಅನ್ನನೀಡಿ ಪೋಷಿಸುತ್ತೇನೆ ನೋಡು, ನೀನು ಸ್ತ್ರೀಹತ್ಯಾ ಪಾತಕಿಯಾಗುವೆಯ ? ಪ್ರಾಣಿವರ್ಗದಲ್ಲಿಯೂ ಹೆಣ್ಣನ್ನು ಕೊಲ್ಲಬಾರದೆಂದು ಹೇಳುತ್ತಾರೆ. ಸ್ವಲ್ಪ ಆಲೋಚಿಸಿ ನೋಡು ಮಹಾರಾಜ. ನೀನು ಧರ್ಮವನ್ನು ಬಿಡುವೆಯ ? ಈ ನಿನ್ನ ಭಯಂಕರ ಕೋಪವನ್ನು ಒಮ್ಮೆ ಕಡಿಮೆಮಾಡು. ನೀನು ಪ್ರಸನ್ನನಾದರೆ ನಾನು ಇನ್ನು ಮುಂದೆ ತಪ್ಪುಮಾಡದೆ ಸರಿಯಾಗೇ ನಡೆದುಕೊಳ್ಳುವೆ. ಹೀಗೆ ಭೂಮಿ ನಾನಾ ವಿಧವಾಗಿ ಅತ್ತೂ ಕರೆದು ಮೊರೆಯಿಟ್ಟಳು.

**ಪೃಥುರುವಾಚ**

**ಪೃಥು :-** ಪಾಪಿಷ್ಠೆಯಾದ ನಿನ್ನೊಬ್ಬಳನ್ನು ಕೊಂದರೆ ಲೋಕ ಖಂಡಿತವಾಗಿಯೂ ಉಳಿಯುವುದು. ಸುಖವಾಗಿ ಬದುಕುವುದು. ನೀನು ಎಲ್ಲ ಬೀಜಗಳನ್ನೂ ನುಂಗಿ, ಬೆಳೆ

ನೀಡದೆ. ಪ್ರಜೆಗಳ ಅಳಿವಿಗೆ ಕಾರಣಳಾದೆ. ಈಗ ಎಲ್ಲಿಗೆ ಓಡುವೆ ? ನಿನ್ನನ್ನು ಕೊಂದರೆ ಪಾಪವಿಲ್ಲ.

**ಏಕಸ್ಯಾರ್ಥೇ ನಯೋಹನ್ಯಾತ್ ಆತ್ಮನೋ ವಾಪರಸ್ಯವಾ ।**
**ಲೋಕೋಪತಾಪಕಂ ಹತ್ವಾ ನ ಭವೇತ್ ತಸ್ಯ ಪಾತಕಂ ॥**

ತನ್ನೊಬ್ಬನ ಅಥವಾ ಇನ್ನೊಬ್ಬನ ಸುಖಕ್ಕಾಗಿ ಹಿಂಸೆ ಮಾಡದೆ ಲೋಕ ಕಂಟಕರನ್ನು ಮಾತ್ರ ಕೊಂದರೆ ಪಾಪವಿಲ್ಲ.

**ಯ ಸ್ಮಿಂಸ್ತು ನಿಹತೇ ಪಾಪೇ ಏಕಸ್ಮಿನ್ ಸ್ವೇ ಪರೇ ತಥಾ ।**
**ಬಹವಃ ಸುಖಮೇಧಂತೇ ಹನ್ಯಾದ್‌ದುಷ್ಟಂ ನ ಪಾತಕಂ ॥**

ಒಬ್ಬನ ನಾಶದಿಂದ ಬಹು ಮಂದಿಗೆ ಸುಖವಾಗುವುದಾದರೆ ಆ ಒಬ್ಬನನ್ನು ಅವನು ತನ್ನವನೆ ಇರಲಿ, ಪರಕೀಯನೆ ಇರಲಿ. ಅವನು ದುಷ್ಟನಾಗಿದ್ದರೆ ಕೊಲ್ಲಬಹುದು. ಅದರಿಂದ ಪಾಪವಿಲ್ಲ.

ತನ್ನನ್ನು ಕೊಂದರೆ ಲೋಕವೆಲ್ಲಿ ನಿಲ್ಲಬಲ್ಲುದೆಂಬ ಜಂಬ ನಿನಗೆ ಬೇಡ. ನನ್ನಾತ್ಮಬಲ, ಪುಣ್ಯಪ್ರಭಾವಗಳಿಂದ ನಾನೆ ಲೋಕವನ್ನು ಧರಿಸಬಲ್ಲೆ. ನನ್ನಾಜ್ಞೆಗೆ ಮಣಿದು ಪ್ರಜೆಗಳನ್ನು ಲಾಲಿಸು. ಆಗ ಮಾತ್ರ ನಾನು ನಿನ್ನನ್ನು ಕಾಪಾಡುವೆ. ಇನ್ನು ಮುಂದೆ ಬರುವ ರಾಜರೂ ಕಾಪಾಡುವರು.

**ಭೂಮಿ :-** ಮಹಾರಾಜ, ನಿನ್ನಾಜ್ಞೆಯಂತೆ ಪ್ರಜೆಗಳ ಹಿತಕ್ಕಾಗಿ ನಾನೆಲ್ಲ ಪ್ರಯತ್ನವನ್ನೂ ಮಾಡುವೆ. ಆದರೆ ನೀನೂ ಸರಿಯಾದ ಒಂದು ಉಪಾಯವನ್ನು ಆಲೋಚಿಸಿ ಪ್ರಜಾಪಾಲನೆಯ ವಿಷಯದಲ್ಲಿ ಕೃತಕೃತ್ಯನಾಗು.

**ಉದ್ಯಮೇನಾಪಿ ಪುಣ್ಯೇನ ಉಪಾಯೇನ ನರೇಶ್ವರ ।**
**ಸಮಾರಂಭಾಃ ಪ್ರಸಿದ್ಧ್ಯಂತಿ ಪುಣ್ಯಾಶ್ಚೈವಾಪ್ಯುಪಕ್ರಮಾಃ ॥**

ರಾಜನ್, ದೊಡ್ಡ ದೊಡ್ಡ ಪವಿತ್ರ ಸಮಾರಂಭಗಳೂ, ಕಾರ್ಯಗಳೂ, ಒಳ್ಳೆಯ ಉಪಾಯ ಮತ್ತು ಪ್ರಯತ್ನಗಳಿದ್ದರೆ ಮಾತ್ರ ಫಲಿಸುವುವು. ಮೊದಲಿಗೆ ನನ್ನ ಮೈಗೆ ತಗುಲಿರುವ ಈ ನಿನ್ನ ಬಾಣಗಳನ್ನು ತೆಗೆದುಹಾಕು.

ಮೈತುಂಬ ಅಲ್ಲಲ್ಲಿ ಬೆಟ್ಟಗುಡ್ಡಗಳ ರೂಪದಿಂದಿದ್ದ ಪೃಥುವಿನ ಬಾಣಗಳು ಭೂಮಿಗೆ ತಡೆಯಲಾಗದೆ ವೇದನೆಯುಂಟುಮಾಡುತ್ತಿದ್ದುವು. ಬಿಲ್ಲಿನ ತುದಿಯಿಂದ ಪೃಥು ಅವನ್ನು ತೆಗೆದು ಭೂಮಿಯ ಮೈಯನ್ನು ಸಮಗೊಳಿಸಿದ. ಹಿಂದೆ ಭೂಮಿಯ ಮೈಯೆಲ್ಲ ಹಳ್ಳ ತಿಟ್ಟಾಗಿತ್ತು. ಹಳ್ಳಿ, ನಗರ, ಗದ್ದೆಹೊಲಗಳೆಂಬುವೆ ಇರಲಿಲ್ಲ. ಜನರ ಸಂಚಾರಕ್ಕೆ ಬೇಕಾಗುವ ದಾರಿಗಳೂ ಇರಲಿಲ್ಲ. ಕೃಷಿ, ವ್ಯಾಪಾರ, ಪಶುಪಾಲನೆಗಳನ್ನು ಜನರು ಮಾಡುತ್ತಿರಲಿಲ್ಲ. ಸುಳ್ಳು ಹೇಳುತ್ತಿರಲಿಲ್ಲ. ಲೋಭ ಅಭಿಮಾನ ಪಾಪಕೃತ್ಯಗಳೇನೆಂದೇ ಅವರು ತಿಳಿದಿರಲಿಲ್ಲ. ಬಯಲು ಗುಡ್ಡ ಬೆಟ್ಟಗಳು, ನದೀ ಸಮುದ್ರ ತೀರಗಳು, ಸಣ್ಣ ತೋಪುಗಳು ಇವುಗಳಲ್ಲಿ ಅವರ ವಾಸ. ಅದೃಷ್ಟವಶಾತ್ ಅವರಿಗೆ ಹಣ್ಣು ಹಂಪಲು, ಜೇನು ಗಡ್ಡೆಗೆಣಸುಗಳಂಥ ಆಹಾರ ಪದಾರ್ಥಗಳು ದೊರೆಯುತ್ತಿದ್ದುವು. ಈ ಪರಿಸ್ಥಿತಿಯನ್ನು ಕಂಡೆ ಪೃಥು ಭೂಮಿಯ ಮೇಲೆ ಕೋಪಗೊಂಡಿದ್ದ.

ನೋಡಿಕೊಳ್ಳುತ್ತಾನೆ. ರಾಜಸೂಯ ಮುಂತಾದ ಮಹಾಯಾಗಗಳನ್ನು ಮಾಡುತ್ತಾನೆ ಧನ್ಯ! ರಾಜನೆಂದರೆ ಇವನಂತಿರಬೇಕು.

ಸೂತ-ಮಾಗಧರು ಇದನ್ನು ಕೇಳಿ ಅದರಂತೆ ರಾಜನನ್ನು ಸ್ತುತಿಸಿದರು. ಅವನಿಂದ ಹೇರಳ ದ್ರವ್ಯವನ್ನು ಬಹುಮಾನವಾಗಿ ಪಡೆದರು. ಅಂದಿನಿಂದ ರಾಜರು ಸೂತ-ವಂದಿ-ಮಾಗಧ-ಚಾರಣರಿಂದ ಸ್ತೋತ್ರ ಮಾಡಿಸಿಕೊಳ್ಳುವುದು ವಾಡಿಕೆಯಾಯಿತು.

ಪೃಥು ಮಹಾರಾಜನು ಇಂಥ ಅನೇಕ ಯಜ್ಞಯಾಗಗಳನ್ನು ಮಾಡಿ ಯಥೇಚ್ಛ ದಾನಮಾಡುತ್ತಿದ್ದ. ಪ್ರಜೆಗಳು 'ಎಂಥ ಪುಣ್ಯಾತ್ಮನೀರಾಜ'ನೆಂದುಕೊಳ್ಳುತ್ತಿದ್ದರು. ಈ ಮಹಾರಾಜ ಪಟ್ಟವನ್ನೇರಿದ ಕಾಲದಲ್ಲಿ ಮೊದಲಿಗೆ ಭೂಮಿಯು ಬಿತ್ತಿದ ಬೀಜಗಳನ್ನೆಲ್ಲ ಹಾಗೆ ನುಂಗಿಕೊಳ್ಳುತ್ತಿತ್ತು. ಏನೂ ಬೆಳೆ ಕೊಡುತ್ತಿರಲಿಲ್ಲ. ಪ್ರಜೆಗಳು ರಾಜನಲ್ಲಿ ಮೊರೆಯಿಟ್ಟರು. ಒಡನೆ ರಾಜ ಬಿಲ್ಲು ಬಾಣಗಳನ್ನು ಧರಿಸಿ ಭೂಮಿಯನ್ನು ಶಿಕ್ಷಿಸಲು ಹೊರಟ. ಭೂಮಿ ಹೆಣ್ಣಾನೆಯ ರೂಪುತಾಳಿ ಬೆಟ್ಟಗುಡ್ಡಗಳಲ್ಲಿ ಅಡಗಿ ಕುಳಿತಳು. ಇದನ್ನು ತಿಳಿಯದೆ ರಾಜ ಹುಡುಕುತ್ತಲೆ ಇದ್ದ. ಋಷಿಗಳು ಬಂದು 'ರಾಜನ್, ಆಕೆ ಹೆಣ್ಣಾನೆಯ ರೂಪು ಧರಿಸಿ ಅಡಗಿದ್ದಾಳೆ' ಎಂದರು. ಇದರಿಂದ ರಾಜ ಅವಳನ್ನು ಗುರುತಿಸಿ ಬೆನ್ನಟ್ಟಿ ಹೋದ. ಬಾಣದಿಂದ ಹೊಡೆದ. ಒಡನೆ ಆಕೆ ಸಿಂಹ ರೂಪವನ್ನು ಧರಿಸಿದಳು. ರಾಜ ಕ್ರುದ್ಧನಾಗಿ ಬಾಣದಿಂದ ಹೊಡೆದ. ಆಕೆ ಎಮ್ಮೆಯ ರೂಪದಿಂದೋಡತೊಡಗಿದಳು. ಕೊನೆಗೆ ಆಕಳಿನ ರೂಪದಿಂದ ಸ್ವರ್ಗಕ್ಕೆ ಓಡಿಹೋಗಿ ಬ್ರಹ್ಮ-ವಿಷ್ಣು-ಮಹೇಶ್ವರರನ್ನೂ, ಎಲ್ಲ ದೇವತೆಗಳನ್ನೂ ಮೊರೆಹೊಕ್ಕಳು. ಆದರೆ ಎಲ್ಲಿಯೂ ರಕ್ಷಣೆ ಸಿಗಲಿಲ್ಲ. ನಿರುಪಾಯಳಾಗಿ ಪೃಥುವಿನ ಬಳಿಗೇ ಬಂದು ಹೇಳಿದಳು.

**ಭೂಮಿ :-** ರಾಜನ್, ನಾನು ಭೂತಧಾತ್ರಿ. ಎಲ್ಲ ಪ್ರಾಣಿಗಳಿಗೂ ಆಧಾರಳು ಎನ್ನುವುದು ನಿನಗೆ ಗೊತ್ತು. ನನ್ನನ್ನು ರಕ್ಷಿಸು. ನನ್ನನ್ನು ಕೊಂದರೆ ಏಳು ಲೋಕವೂ ನಾಶಹೊಂದುವುದು. ನಾನಿಲ್ಲದ್ದಿದರೆ ಲೋಕ ಸ್ಥಿರವಾಗಿ ನಿಲ್ಲದು. ನೀನಾದರೂ ಅದನ್ನು ಹೇಗೆ ಕಾಪಾಡಬಲ್ಲೆ, ಹೇಳು. ನಾನು ಸ್ತ್ರೀ, ಮೇಲಾಗಿ ಗೋವು, ಸ್ತ್ರೀವಧೆ, ಗೋವಧೆಗಳು ಮಹಾಪಾಪಕರ. ಋಷಿಗಳನ್ನು ಕೇಳು, ಹಾಗೇ ಹೇಳುತ್ತಾರೆ. ರಾಜನ್, ಬೇಡ, ನನ್ನನ್ನು ಕೊಲ್ಲಬೇಡ. ನಿನಗೆ ಶ್ರೇಯಸ್ಸು ಬೇಕಿದ್ದರೆ ನನ್ನ ಮಾತು ಕೇಳು, ನನ್ನನ್ನು ಕೊಲ್ಲಬೇಡ. ನನ್ನನ್ನು ಕೊಂದು ಪ್ರಜೆಗಳನ್ನು ಎಷ್ಟು ಮಾತ್ರಕ್ಕೂ ನೀನು ರಕ್ಷಿಸಲಾರೆ, ಪೋಷಿಸಲಾರೆ. ಕೋಪ ಬಿಡು. ನಾನು ಪ್ರಜೆಗಳಿಗೆ ಅನ್ನನೀಡಿ ಪೋಷಿಸುತ್ತೇನೆ ನೋಡು, ನೀನು ಸ್ತ್ರೀಹತ್ಯಾ ಪಾತಕಿಯಾಗುವೆಯ? ಪ್ರಾಣಿವರ್ಗದಲ್ಲಿಯೂ ಹೆಣ್ಣನ್ನು ಕೊಲ್ಲಬಾರದೆಂದು ಹೇಳುತ್ತಾರೆ. ಸ್ವಲ್ಪ ಆಲೋಚಿಸಿ ನೋಡು ಮಹಾರಾಜ. ನೀನು ಧರ್ಮವನ್ನು ಬಿಡುವೆಯ? ಈ ನಿನ್ನ ಭಯಂಕರ ಕೋಪವನ್ನು ಒಮ್ಮೆ ಕಡಿಮೆಮಾಡು. ನೀನು ಪ್ರಸನ್ನನಾದರೆ ನಾನು ಇನ್ನು ಮುಂದೆ ತಪ್ಪುಮಾಡದೆ ಸರಿಯಾಗೇ ನಡೆದುಕೊಳ್ಳುವೆ. ಹೀಗೆ ಭೂಮಿ ನಾನಾ ವಿಧವಾಗಿ ಅತ್ತೂ ಕರೆದು ಮೊರೆಯಿಟ್ಟಳು.

**ಪೃಥುರುವಾಚ**

**ಪೃಥು :-** ಪಾಪಿಷ್ಠೆಯಾದ ನಿನ್ನೊಬ್ಬಳನ್ನು ಕೊಂದರೆ ಲೋಕ ಖಂಡಿತವಾಗಿಯೂ ಉಳಿಯುವುದು. ಸುಖವಾಗಿ ಬದುಕುವುದು. ನೀನು ಎಲ್ಲ ಬೀಜಗಳನ್ನೂ ನುಂಗಿ, ಬೆಳೆ

ನೀಡದೆ. ಪ್ರಜೆಗಳ ಅಳಿವಿಗೆ ಕಾರಣಳಾದೆ. ಈಗ ಎಲ್ಲಿಗೆ ಓಡುವೆ ? ನಿನ್ನನ್ನು ಕೊಂದರೆ ಪಾಪವಿಲ್ಲ.

**ಏಕಸ್ಯಾರ್ಥೇ ನಯೋಹನ್ಯಾತ್ ಆತ್ಮನೋ ವಾಪರಸ್ಯವಾ ।**
**ಲೋಕೋಪತಾಪಕಂ ಹತ್ವಾ ನ ಭವೇತ್ ತಸ್ಯ ಪಾತಕಂ ॥**

ತನ್ನೊಬ್ಬನ ಅಥವಾ ಇನ್ನೊಬ್ಬನ ಸುಖಕ್ಕಾಗಿ ಹಿಂಸೆ ಮಾಡದೆ ಲೋಕ ಕಂಟಕರನ್ನು ಮಾತ್ರ ಕೊಂದರೆ ಪಾಪವಿಲ್ಲ.

**ಯ ಸ್ಮಿಂಸ್ತು ನಿಹತೇ ಪಾಪೇ ಏಕಸ್ಮಿನ್ ಸ್ವೇ ಪರೇ ತಥಾ ।**
**ಬಹವಃ ಸುಖಮೇಧಂತೇ ಹನ್ಯಾದ್‌ದುಷ್ಟಂ ನ ಪಾತಕಂ ॥**

ಒಬ್ಬನ ನಾಶದಿಂದ ಬಹು ಮಂದಿಗೆ ಸುಖವಾಗುವುದಾದರೆ ಆ ಒಬ್ಬನನ್ನು ಅವನು ತನ್ನವನೆ ಇರಲಿ, ಪರಕೀಯನೆ ಇರಲಿ. ಅವನು ದುಷ್ಟನಾಗಿದ್ದರೆ ಕೊಲ್ಲಬಹುದು. ಅದರಿಂದ ಪಾಪವಿಲ್ಲ.

ತನ್ನನ್ನು ಕೊಂದರೆ ಲೋಕವೆಲ್ಲಿ ನಿಲ್ಲಬಲ್ಲುದೆಂಬ ಜಂಬ ನಿನಗೆ ಬೇಡ. ನನ್ನಾತ್ಮಬಲ, ಪುಣ್ಯಪ್ರಭಾವಗಳಿಂದ ನಾನೆ ಲೋಕವನ್ನು ಧರಿಸಬಲ್ಲೆ. ನನ್ನಾಜ್ಞೆಗೆ ಮಣಿದು ಪ್ರಜೆಗಳನ್ನು ಲಾಲಿಸು. ಆಗ ಮಾತ್ರ ನಾನು ನಿನ್ನನ್ನು ಕಾಪಾಡುವೆ. ಇನ್ನು ಮುಂದೆ ಬರುವ ರಾಜರೂ ಕಾಪಾಡುವರು.

**ಭೂಮಿ :-** ಮಹಾರಾಜ, ನಿನ್ನಾಜ್ಞೆಯಂತೆ ಪ್ರಜೆಗಳ ಹಿತಕ್ಕಾಗಿ ನಾನೆಲ್ಲ ಪ್ರಯತ್ನವನ್ನೂ ಮಾಡುವೆ. ಆದರೆ ನೀನೂ ಸರಿಯಾದ ಒಂದು ಉಪಾಯವನ್ನು ಆಲೋಚಿಸಿ ಪ್ರಜಾಪಾಲನೆಯ ವಿಷಯದಲ್ಲಿ ಕೃತಕತ್ಯನಾಗು.

**ಉದ್ಯಮೇನಾಪಿ ಪುಣ್ಯೇನ ಉಪಾಯೇನ ನರೇಶ್ವರ ।**
**ಸಮಾರಂಭಾಃ ಪ್ರಸಿದ್ಧ್ಯಂತಿ ಪುಣ್ಯಾಶ್ಚೈವಾಪ್ಯುಪಕ್ರಮಾಃ ॥**

ರಾಜನ್, ದೊಡ್ಡ ದೊಡ್ಡ ಪವಿತ್ರ ಸಮಾರಂಭಗಳೂ, ಕಾರ್ಯಗಳೂ, ಒಳ್ಳೆಯ ಉಪಾಯ ಮತ್ತು ಪ್ರಯತ್ನಗಳಿದ್ದರೆ ಮಾತ್ರ ಫಲಿಸುವುವು. ಮೊದಲಿಗೆ ನನ್ನ ಮೈಗೆ ತಗುಲಿರುವ ಈ ನಿನ್ನ ಬಾಣಗಳನ್ನು ತೆಗೆದುಹಾಕು.

ಮೈತುಂಬ ಅಲ್ಲಲ್ಲಿ ಬೆಟ್ಟಗುಡ್ಡಗಳ ರೂಪದಿಂದಿದ್ದ ಪೃಥುವಿನ ಬಾಣಗಳು ಭೂಮಿಗೆ ತಡೆಯಲಾಗದೆ ವೇದನೆಯುಂಟುಮಾಡುತ್ತಿದ್ದುವು. ಬಿಲ್ಲಿನ ತುದಿಯಿಂದ ಪೃಥು ಅವನ್ನು ತೆಗೆದು ಭೂಮಿಯ ಮೈಯನ್ನು ಸಮಗೊಳಿಸಿದ. ಹಿಂದೆ ಭೂಮಿಯ ಮೈಯೆಲ್ಲ ಹಳ್ಳ ತಿಟ್ಟಾಗಿತ್ತು. ಹಳ್ಳಿ, ನಗರ, ಗದ್ದೆಹೊಲಗಳೆಂಬುವೆ ಇರಲಿಲ್ಲ. ಜನರ ಸಂಚಾರಕ್ಕೆ ಬೇಕಾಗುವ ದಾರಿಗಳೂ ಇರಲಿಲ್ಲ. ಕೃಷಿ, ವ್ಯಾಪಾರ, ಪಶುಪಾಲನೆಗಳನ್ನು ಜನರು ಮಾಡುತ್ತಿರಲಿಲ್ಲ. ಸುಳ್ಳು ಹೇಳುತ್ತಿರಲಿಲ್ಲ. ಲೋಭ ಅಭಿಮಾನ ಪಾಪಕೃತ್ಯಗಳೇನೆಂದೇ ಅವರು ತಿಳಿದಿರಲಿಲ್ಲ. ಬಯಲು ಗುಡ್ಡ ಬೆಟ್ಟಗಳು, ನದೀ ಸಮುದ್ರ ತೀರಗಳು, ಸಣ್ಣ ತೋಪುಗಳು ಇವುಗಳಲ್ಲಿ ಅವರ ವಾಸ. ಅದೃಷ್ಟವಶಾತ್ ಅವರಿಗೆ ಹಣ್ಣು ಹಂಪಲು, ಜೇನು ಗಡ್ಡೆಗೆಣಸುಗಳಂಥ ಆಹಾರ ಪದಾರ್ಥಗಳು ದೊರೆಯುತ್ತಿದ್ದುವು. ಈ ಪರಿಸ್ಥಿತಿಯನ್ನು ಕಂಡೆ ಪೃಥು ಭೂಮಿಯ ಮೇಲೆ ಕೋಪಗೊಂಡಿದ್ದ.

ಭೂಮಿಯ ಪ್ರಾರ್ಥನೆಯಂತೆ ಪ್ರಜೆಗಳ ಪೋಷಣೆಗೊಂದು ಉಪಾಯವನ್ನು ಪೃಥು ಕಂಡುಕೊಂಡ ಹಸುವಿನ ರೂಪುತಳೆದ ಭೂಮಿಯನ್ನು ತೊರೆಬಿಡಿಸುವ ಯೋಗ್ಯ ಕರುವನ್ನರಸಿ ಕೊನೆಗೆ ಸ್ವಾಯಂಭುವ ಮನುವನ್ನು ಇದಕ್ಕಾಗಿ ಆರಿಸಿಕೊಂಡ. ತಾನೆ ಬೆಳೆಗಳ ರೂಪದ ಹಾಲನ್ನು ಭೂಮಿಯಿಂದ ಹಿಂಡಿಕೊಂಡ. ತನ್ನ ಕೈಯೆ ಹಿಂಡುವ ಪಾತ್ರೆಯಾಗಿತ್ತು. ಅಮೃತದಂಥ ಆ ಹಾಲನ್ನು ಪ್ರೀತಿಯಿಂದ ಪ್ರಜೆಗಳಿಗಿತ್ತ, ಮಹಾರಾಜ. ಪ್ರಜೆಗಳು ಅದನ್ನು ದೇವ, ಋಷಿ, ಪಿತೃಗಳಿಗೆ, ಅತಿಥಿಗಳಿಗೆ ಸಮರ್ಪಿಸಿ ಆನಂದದಿಂದ ಯಜ್ಞ-ದಾನಗಳಿಂದ ಹರಿಯನ್ನಾರಾಧಿಸಿದರು. ತೃಪ್ತನಾದ ಹರಿಯ ಅನುಗ್ರಹದಿಂದ ಒಳ್ಳೆಯ ಮಳೆಯಾಯಿತು. ಸಸ್ಯಗಳು ಸಮೃದ್ಧವಾಗಿ ಬೆಳೆದುವು. ಹೀಗೆ ಪೃಥು ಮಹಾರಾಜ ತೋರಿಸಿಕೊಟ್ಟ ವಿಧಾನದಿಂದಲೆ ದೇವತೆಗಳು, ಋಷಿಗಳು, ಪಿತೃಗಳು ಮೊದಲಾದವರು ಬೇರೆ ಬೇರೆ ಕರು, ಹಿಂಡುವ ಪಾತ್ರೆಗಳನ್ನು ತಂದು ತಮಗೆ ಬೇಕಾದ ಇಷ್ಟಾರ್ಥಗಳನ್ನು ಕರೆದುಕೊಂಡರು. ದೇವತೆಗಳಲ್ಲಿ ಚಂದ್ರನು ಕರು. ಬೃಹಸ್ಪತಿ ಹಾಲು ಕರೆದವ. ಚಿನ್ನದ ಪಾತ್ರೆಯಲ್ಲಿ ಬಲವೆಂಬ ಹಾಲನ್ನು ಆತ ಕರೆದು ದೇವತೆಗಳಿಗಿತ್ತ. ಪಿತೃಗಳಲ್ಲಿ ಯಮನು ಕರು. ಬೆಳ್ಳಿಯ ಬಟ್ಟಲಲ್ಲಿ ಸ್ವಧೆಯೆಂಬ ಹಾಲನ್ನು ಅಂತಕನು ಕರೆದು ಕೊಟ್ಟ. ನಾಗರರಲ್ಲಿ ತಕ್ಷಕನು ಕರು. ಸೋರೆಬುರುಡೆಯ ಪಾತ್ರೆಯಲ್ಲಿ ವಿಷವೆಂಬ ಹಾಲನ್ನು ಧೃತರಾಷ್ಟ್ರ ಕರೆದುಕೊಟ್ಟ. ಆ ಭಯಂಕರ ವಿಷವು ನಾಗರಿಗೆ ಪುಷ್ಟಿ ಬಲ, ಪರಾಕ್ರಮಗಳನ್ನು ಕೊಡುತ್ತದೆ. ಆದುವೆ ಅವರಿಗೆ ಆಹಾರ. ಅಸುರರಲ್ಲಿ ವಿರೋಚನನು ಕರು, ಕಬ್ಬಿಣದ ಬಟ್ಟಲಿನಲ್ಲಿ ಮಾಯೆಯೆಂಬ ಹಾಲು ಕರೆದವನು ಮಧು, ಈ ಮಾಯೆಯಿಂದಲೆ ಅಸುರರಿಗೆ ಬದುಕು. ಅದರಿಂದಲೆ ಬಲ, ಪರಾಕ್ರಮಗಳು. ಯಕ್ಷರಲ್ಲಿ ಕುಬೇರನೆ ಕರು. ರಾಜಕುಮಾರ ರಜತನಾಭ ಹಾಲು ಕರೆದವ. ಅವನಿಗೆ ಎಂಟು ಕೈಗಳು. ಎರಡು ತಲೆ, ಕಬ್ಬಿಣದ ಬಟ್ಟಲಲ್ಲಿ ಅಂತರ್ಧಾನ ವಿದ್ಯೆಯೆಂಬ ಹಾಲನ್ನು ಹಿಂಡಿ ಕೊಟ್ಟಿದ್ದನಾತ. ರಾಕ್ಷಸರೂ, ಪಿಶಾಚಗಳೂ ಅರೆಬೆಂದ ಶವ ಕಪಾಲದಲ್ಲಿ ನೆತ್ತರವನ್ನು ಹಿಂಡಿ ತೆಗೆದರು. ಸುಮಾಲಿ ಕರುವಾಗಿದ್ದ. ಗಂಧರ್ವರೂ, ಅಪ್ಸರೆಯರೂ ತಾವರೆಯ ಬಟ್ಟಲಲ್ಲಿ ಮಧುರ ಗೀತೆಗಳೆಂಬ ಹಾಲನ್ನು ಹಿಂಡಿಕೊಂಡರು. ಗೀತವಿಶಾರದನಾದ ಚಿತ್ರರಥ ಕರುವಾಗಿದ್ದ. ಸುರುಚಿ ಹಾಲು ಹಿಂಡಿದ. ಪರ್ವತಗಳಲ್ಲಿ ಹಿಮಾಲಯವೆ ಕರು. ವಿವಿಧ ರತ್ನಗಳು ಮತ್ತು ದಿವ್ಯ ಔಷಧಿಗಳೆಂಬ ಹಾಲನ್ನು ಮೇರು ಹಿಂಡಿಕೊಟ್ಟ. ವೃಕ್ಷಗಳೂ ಹಾಲು ಹಿಂಡಿದುವು, ಪ್ಲಕ್ಷವೆ ಕರು, ಶಾಲವು ಹಾಲು ಹಿಂಡಿತು. ಕಡಿದರೂ ಸುಟ್ಟರೂ ತಿರುಗಿ ಚಿಗುರುವ ಶಕ್ತಿಯೆ ಹಾಲು. ಹೀಗೆ ಗುಹ್ಯಕ, ಸಿದ್ಧ, ವಿದ್ಯಾಧರ, ಚಾರಣ ಮೊದಲಾದವರು ತಮ್ಮ ತಮ್ಮ ಇಷ್ಟಾರ್ಥಗಳನ್ನು ಭೂಮಿಯಿಂದ ಹಿಂಡಿಕೊಂಡರು.

**ಸರ್ವ ಕಾಮ ದುಘಾ ದೋಗ್ಧ್ರೀ ಸರ್ವ ಬೀಜ ಪ್ರರೋಹಿಣೀ ।**
**ಸರ್ವೇಷಾಂ ಶ್ರೇಯಸಾಂ ಮಾತಾ ಸರ್ವಲೋಕಧರಾತ್ವಿಯಂ ॥**

ಈ ಭೂಮಿ ಎಲ್ಲವನ್ನೂ ನೀಡಬಲ್ಲ ಕಾಮಧೇನು. ಎಲ್ಲ ಬೀಜಗಳನ್ನು ಬೆಳೆಸುವವಳು. ಎಲ್ಲ ವಿಧದ ಶ್ರೇಯಸ್ಸಗಳಿಗೂ ಮೂಲಕಾರಣ ಎಲ್ಲ ಪ್ರಾಣಿಗಳನ್ನು ಹೊತ್ತು ಸಲಹುವವಳು.

ಪೃಥುವಿನ ಈ ಮಹಾ ಕಾರ್ಯದಿಂದ ಭೂಮಿಗೆ ಈ ಹೊಗಳಿಕೆ ಯಥಾರ್ಥವೆನಿಸಿತು. ಮಧುಕೈಟಭರ ಮೇದಸ್ಸಿನಿಂದ ಜನಿಸಿ, **ಮೇದಿನಿ** ಎನಿಸಿದ್ದ ಆಕೆ ಈಗ ಪೃಥುವಿನ

ಪ್ರೀತಿಯ ಮಗಳಾಗಿ **ಪೃಥ್ವೀ** ಎನಿಸಿದಳು. ಗ್ರಾಮ-ನಗರಗಳು, ತೀರ್ಥ-ಕ್ಷೇತ್ರಗಳು, ಹೊಲ-ಗದ್ದೆಗಳು, ಗಣಿಗಳು ಇವೆಲ್ಲವನ್ನೂ ಧರಿಸಿ ಶೋಭಿಸಿದಳು.

ಬ್ರಹ್ಮ-ವಿಷ್ಣು-ಮಹೇಶ್ವರರಂತೆ ಎಲ್ಲರಿಗೂ ಪೂಜ್ಯನಾದ ಈ ಮಹಾತ್ಮ ಪೃಥುಚಕ್ರವರ್ತಿಯನ್ನು ನಮಿಸಿದರೆ ರಾಜ್ಯಕಾಂಕ್ಷಿಗಳಿಗೆ ರಾಜ್ಯ, ಧನುರ್ವಿದ್ಯೆ ಬಯಸುವವರಿಗೆ ಧನುರ್ವಿದ್ಯೆ, ಜಯಾರ್ಥಿಗಳಿಗೆ ಜಯ ದೊರಕುವುದು. ಈ ಕಥೆಯನ್ನು ಕೇಳಿದರೂ ಗಂಗಾಸ್ನಾನದ ಫಲ, ಸರ್ವಪಾಪ ಪರಿಹಾರ, ವಿಷ್ಣುಲೋಕ ಪ್ರಾಪ್ತಿ.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಭೂಮಿಖಂಡದ*
*ಪೃಥು ಮಹಾರಾಜನ ವೃತ್ತಾಂತ ಎಂಟನೇಯ ಅಧ್ಯಾಯ ಮುಗಿದುದು*



## ವೇನೋಪಾಖ್ಯಾನ, ಅಂಗ ವರಪ್ರಧ್ಯಾನ — ಅಧ್ಯಾಯ - ೯

**ಋಷಿಯ ಉವಾಚ**

**ಋಷಿಗಳು :-** ವೇನನ ಅಧರ್ಮಪ್ರವೃತ್ತಿ ಮುಂದೇನಾಯಿತು ? ಅವನ ಚರಿತ್ರೆಯನ್ನು ವಿಸ್ತಾರವಾಗಿ ಹೇಳು.

**ಸೂತ :-** ವೇನನು ವಸ್ತುತ: ಒಬ್ಬ ಮಹಾತ್ಮ. ಅವನ ಚರಿತ್ರೆ ಪುಣ್ಯಕರವಾದುದು. ಮೊದಲು ಅಧರ್ಮಿಯಾಗಿದ್ದರೂ ಪೃಥು ಜನಿಸಿದ ಮೇಲೆ ಅವನ ಸಂಪರ್ಕದಿಂದ ಪರಮ ಧಾರ್ಮಿಕನೆನಿಸಿದನಾತ.

**ಸತಾಂ ಸಂಗಾತ ಪ್ರಜಾಯೇತ ಪುಣ್ಯಮೇವ ನ ಸಂಶಯ ।**
**ಪಾಪಾನಾಂ ತು ಪ್ರಸಂಗೇನ ಪಾಪಂ ಸಿದ್ಧ್ಯತಿ ನಾನ್ಯಥಾ ॥**

ಸಜ್ಜನರ ಒಡನಾಟದಿಂದ ಪುಣ್ಯ ಉಂಟಾಗುತ್ತದೆ. ಪಾಪಿಗಳ ಸಹವಾಸದಿಂದ ಪಾಪ ಉಂಟಾಗುತ್ತದೆ. ಇದರಲ್ಲಿ ಸಂಶಯವಿಲ್ಲ.

**ಸಂಭಾಷಾದ್ ದರ್ಶನಾತ್ ಸ್ಪರ್ಶಾದ್ ಅಸನಾದ್ ಭೋಜನಾತ್ ಕಿಲ ।**
**ಪಾಪಿನಾಂ ಸಂಗಮಾಚ್ಚೈವ ಕಿಲ್ಬಿಷಂ ಪರಿಸಂಚರೇತ್ ॥**

ಪಾಪಿಗಳು ಮಾತನಾಡಿಸಿದರೆ, ನೋಡಿದರೆ, ಮುಟ್ಟಿದರೆ, ಜೊತೆಯಲ್ಲಿ ಉಂಡರೆ, ಸಹವಾಸ ಮಾಡಿದರೆ ಪಾಪಗಳು ನಮ್ಮಲ್ಲಿ ಬಂದು ಸೇರಿಕೊಳ್ಳುತ್ತವೆ.

**ತಥಾ ಪುಣ್ಯಾತ್ಮಕಾನಾಂ ಚ ಪುಣ್ಯಮೇವ ಪ್ರಸಂಚರೇತ್ ।**
**ಮಹಾತೀರ್ಥ ಪ್ರಸಂಗೇನ ಪಾಪಾಃ ಶುಧ್ಯಂತಿ ನಾನ್ಯಥಾ ॥**

ಪುಣ್ಯವಂತರೊಡನೆ ಸಹವಾಸ ಮಾಡಿದರೆ ನಮ್ಮಲ್ಲಿ ಪುಣ್ಯ ಬಂದು ಸೇರಿಕೊಳ್ಳುತ್ತದೆ. ಪವಿತ್ರ ತೀರ್ಥದ ಸಂಪರ್ಕದಿಂದ ಪಾಪಗಳು ದೂರವಾಗುತ್ತವೆ. ಸಂಶಯವಿಲ್ಲ.

**ಋಷಿಗಳು :-** ಪವಿತ್ರ ತೀರ್ಥದ ಸಂಪರ್ಕದಿಂದಲೇ ಪಾಪವು ದೂರವಾಗಿ ಸದ್ಗತಿ ದೊರೆಯುವುದು ಹೇಗೆ ಎಂಬುದನ್ನು ವಿಸ್ತಾರವಾಗಿ ಕೇಳಬಯಸುತ್ತೇವೆ.

**ಸೂತ** :- ವಿಪ್ರೋತ್ತಮರೇ, ಬೇಡರೂ ಬೆಸ್ತರಂಥವರೂ ನರ್ಮದಾ, ಯಮುನಾ, ಗಂಗಾನದಿಗಳಲ್ಲಿ ತಿಳಿದೂ ತಿಳಿಯದೆಯೊ ಸ್ನಾನಪಾನಗಳನ್ನು ಮಾಡಿ ಪರಗತಿಯನ್ನು ಪಡೆದುದುಂಟು.

ಹಿಂದೆ ಒಬ್ಬ ಬೇಡನು ಬೇಟೆನಾಯಿ, ಬಲೆ, ಬಿಲ್ಲು, ಬಾಣಗಳನ್ನು ಹಿಡಿದುಕೊಂಡು ಜಿಂಕೆ ಹಂದಿಗಳನ್ನು ನಿತ್ಯ ಬೇಟೆಯಾಡುತ್ತಿದ್ದ. ಮಾಂಸದಲ್ಲಿ ಮಿತಿ ಮೀರಿದ ಆಸೆ ಅವನಿಗೆ. ಒಮ್ಮೆ ಆತ ಬೇಟೆ ಆಡುತ್ತಿದ್ದಾಗ ಹೆಣ್ಣು ಜಿಂಕೆಯೊಂದು ಭಯದಿಂದ ಓಡಿ ನರ್ಮದೆಯ ತೀರಕ್ಕೆ ಬಂದಿತು. ಅಲ್ಲಿ ಮೀನು ಹಿಡಿಯುತ್ತಿದ್ದ ಒಬ್ಬ ಬೆಸ್ತನಿದನ್ನು ಕಂಡು ಬಿಲ್ಲನೆತ್ತಿದ. ಅಷ್ಟರಲ್ಲಿ ಬೇಡನು ಅಲ್ಲಿಗೆ ಧಾವಿಸಿ ಬಂದು 'ಇದು ನನ್ನ ಬೇಟೆ. ನೀ ಹೊಡೆಯಬೇಡ' ಎಂದನು. ಬೆಸ್ತನಿಗೂ ಮಾಂಸವೆಂದರೆ ಬಲು ಇಷ್ಟ. ಬೇಡನ ಮಾತನ್ನು ನಿರ್ಲಕ್ಷಿಸಿ ಜಿಂಕೆಯನ್ನು ಹೊಡೆದ. ಬೇಡನ ಬಾಣವೂ ತಗುಲಿತು. ಜಿಂಕೆ ಬಾಣಗಳ ಏಟಿಗೆ ತುತ್ತಾಗಿ ಹೊರಳಿ ಹೊರಳಿ ನರ್ಮದೆಯ ಮಡುವಿನಲ್ಲಿ ಬಿದ್ದಿತು. ಜಿಂಕೆಯನ್ನು ಬೆನ್ನಟ್ಟಿ ಬಂದಿದ್ದ ನಾಯಿಗಳೂ ಮಡುವಿನಲ್ಲಿ ಬಿದ್ದುವು. ಬೇಡನು ಬೆಸ್ತನೊಂದಿಗೆ ಜಗಳಕ್ಕೆ ನಿಂತು ಹೊಡೆದಾಡಿ ಅವನೊಂದಿಗೆ ತಾನೂ ಮಡುವಿನಲ್ಲಿ ಬಿದ್ದ. ಅಂದು ಅಮಾವಾಸ್ಯೆಯ ಪರ್ವದಿನ. ಇವರೆಲ್ಲರಿಗೂ ಆಕಸ್ಮಾತ್ ತೀರ್ಥಸ್ನಾನ ಲಭಿಸಿತು. ತಿಳಿಯದೆ ಮಾಡಿದ್ದರೂ ಆ ಸ್ನಾನದ ಫಲವಾಗಿ ಉತ್ತಮ ಗತಿ ಅವರೆಲ್ಲರಿಗೂ ಲಭಿಸಿತು. ಹೀಗೆ ತೀರ್ಥಸ್ನಾನ, ಸಜ್ಜನರೊಡನಾಟ ಇವೆರಡೂ ಎಂಥ ಪಾಪವನ್ನು ಬೆಂಕಿಯಂತೆ ಸುಟ್ಟು ಹಾಕಬಲ್ಲದು. ವೇನನು ಪೃಥುವಿನಂಥ ಸತ್ಪುರುಷನ ಸಂಪರ್ಕದಿಂದ ತನ್ನ ದೋಷಗಳೆಲ್ಲವನ್ನು ಕಳೆದುಕೊಂಡ. ಏಕೆಂದರೆ ಈ ದೋಷಗಳು ಅವನ ತಾಯಿಯ ತಂದೆಯಾದ ಯಮನ ದೋಷದಿಂದ ಬಂದವುಗಳು. ಸ್ವಾಭಾವಿಕವಾಗಿ ಅಲ್ಲ.

**ಋಷಿಗಳು** :- ಯಮಧರ್ಮರಾಜನಲ್ಲಿಯೂ ದೋಷವಿತ್ತೆ ? ಅವನು ಎಲ್ಲರ ತಪ್ಪಿಗೆ ಶಿಕ್ಷೆ ಕೊಡುವವನು. ಯಾರಿಗೂ ನಿಷ್ಕಾರಣವಾಗಿ ಪೀಡೆ ಕೊಡುವವನಲ್ಲ. ಪಾಪಿಗಳು ತಮ್ಮ ಪಾಪದಫಲವನ್ನು ಅವನ ಮುಂದೆ ಅನುಭವಿಸುತ್ತಾರೆ. ಅಷ್ಟೆ, ಇದರಲ್ಲಿ ಯಮನ ತಪ್ಪು ಏನಿದೆ ?

**ಸೂತ** :- ಪಾಪಿ ತನ್ನ ಪಾಪಕರ್ಮದ ಫಲವನ್ನೇ ಉಣ್ಣುತ್ತಾನೆನ್ನುವುದು ನಿಜ. ಆದರೆ ಯಮಲೋಕಕ್ಕೆ ಬಂದವರನ್ನೆಲ್ಲ ಯಮನು ಹಿಂಸಿಸುವುದನ್ನು ನೋಡಿ, ಎಲ್ಲರಿಗೂ ಹೊಡೆಯುವುದೆ ತಂದೆಯ ಕೆಲಸವೆಂದು ಎಳೆವಯಸ್ಸಿನ ಮಗಳು ಸುನೀತೆ ಭಾವಿಸಿದಳು. ಆದ್ದರಿಂದ ತಾನು ಯಾರಿಗೂ ಹೊಡೆಯಬಹುದು ಅದು ತಪ್ಪಲ್ಲವೆಂದೂ ತೀರ್ಮಾನಿಸಿದಳು.

ಆಕೆ ಆಟಆಡುತ್ತ ಸಖಿಯರೊಂದಿಗೆ ಕಾಡಿನಲ್ಲಿ ಸಂಚರಿಸುತ್ತಿದ್ದಾಗ ಒಮ್ಮೆ ಗಂಧರ್ವ ಕುಮಾರನೊಬ್ಬನು ತಪಸ್ಸಿಗೆ ಕುಳಿತಿದ್ದುದನ್ನು ಕಂಡಳು. ಅವನು ಸುಶಂಖ. ಸಂಗೀತ ವಿದ್ಯೆಯ ಸಿದ್ಧಿಗಾಗಿ ಸರಸ್ವತಿಯನ್ನು ಕುರಿತು ತಪಸ್ಸು ಮಾಡುತ್ತಿದ್ದ.

ಸುನೀತೆ ಆ ಯುವಕನ ಬಳಿ ಬಂದು ಉಪದ್ರವ ಕೊಡಲಾರಂಭಿಸಿದಳು. ಆತ ಸಹಿಸಿಕೊಂಡು, 'ಹೋಗು, ದೂರಹೋಗೆಂದು ಹೇಳುತ್ತಿದ್ದ. ಒಂದು ದಿನ ಆತ ಹಾಗೆ

ಹೇಳುತ್ತಿದ್ದಂತೆ ಸಿಟ್ಟಾಗಿ ಹೊಡೆದಳು. ಅವನಿಗೆ ತಡೆಯಲಾಗದಷ್ಟು ಕೋಪ ಬಂದಿತು. ಆದರೂ ತಡೆದುಕೊಂಡ, ಎಷ್ಟೆಂದರೂ ಹೆಣ್ಣುತಾನೆ ಎಂದುಕೊಂಡ.

**ಸುಶಂಖ** :- ಅಮ್ಮ, ನೀನು ಹೊಡೆಯಬಾರದಿತ್ತು ; ಹೊಡೆದೆ, ಆದರೂ ನಾನು ತಿರುಗಿ ಹೊಡೆಯುವುದಿಲ್ಲ.

**ತಾಡನಾತ್ತಾಡನಂ ಭದ್ರೇ ನ ಕುರ್ವಂತಿ ಮಹಾಜನಾಃ ।**
**ಅಕ್ರುಷ್ಟಾ ನೈವ ಕುಪ್ಯಂತಿ ಚೌತಿ ಧರ್ಮಸ್ಯ ಸಂಸ್ಥಿತಿಃ ॥**

ದೊಡ್ಡವರು ಹೊಡೆದವರನ್ನು ಪ್ರತಿಯಾಗಿ ಹೊಡೆಯುವುದಿಲ್ಲ. ನಿಂದಿಸಿದವರಲ್ಲಿ ಕೋಪಿಸುವುದಿಲ್ಲ. ಇದು ಧರ್ಮದ ರೀತಿ.

**ಸುನೀತೆ** :- ನಮ್ಮ ತಂದೆ ಮೂಲೋಕದವರನ್ನೆಲ್ಲ ಹೊಡೆಯುತ್ತಾನೆ!

**ಸುಶಂಖ** :- ಹೌದು, ಅಯೋಗ್ಯರನ್ನು, ಪಾಪಿಗಳನ್ನು ಎಲ್ಲರನ್ನೂ ಹೊಡೆಯುತ್ತಾನೆ, ಇದು ಪುಣ್ಯಕರ.

**ಅಸತೋ ಘಾತಯೇನ್ನಿತ್ಯಂ ಸತೋನ ಪರಿತಾಪಯೇತ್ ।**
**ನೈವದೋಷೋ ಭವೇತ್ತಸ್ಯ ಮಹಾಪುಣ್ಯೇನ ವರ್ತಯೇತ್ ।**

ದುಷ್ಟರನ್ನು ಹೊಡೆಯಲೇಬೇಕು. ಸಜ್ಜನರನ್ನು ನೋಯಿಸಕೂಡದು. ಹೀಗೆ ಮಾಡಿದರೆ ದೋಷವಿಲ್ಲ. ಮಹಾ ಪುಣ್ಯವೇ ಬರುತ್ತದೆ.

ಸುನೀತೆ ಇದೊಂದು ವಿಚಿತ್ರ ಹೊಸ ಸಂಗತಿ ಎನಿಸಿತು. ಆಕೆ ತಂದೆಯ ಬಳಿಗೋಡಿ ಎಲ್ಲವನ್ನೂ ಹೇಳಿದಳು. ಆ ಯುವಕನೆನ್ನುವುದು ಸರಿಯೇ ಎಂದು ಕೇಳಿದಳು. ತಂದೆ ಏಕೋ ಸುಮ್ಮನಿದ್ದ. ಮರುದಿನ ಸುನೀತೆ ಸುಶಂಖನನ್ನು ಇನ್ನೂ ಚೆನ್ನಾಗಿ ಹೊಡೆದಳು. ಚಾವಟಿಯಿಂದಲೇ ಥಳಿಸಿದಳು. ಆತ ಕೋಪವನ್ನು ತಡೆಯಲಾರದೆ ಶಪಿಸಿದ.

**ಸುಶಂಖ**:- ಏನೂ ತಪ್ಪುಮಾಡದಿರುವ ನನ್ನನ್ನು ಹೀಗೆ ಹೊಡೆಯುತ್ತಿರುವೆಯಲ್ಲ? ಮುಂದೆ ನೀನು ಮದುವೆಯಾಗಿ ಪಾಪಿ ದುಷ್ಪುತ್ರನೊಬ್ಬನನ್ನು ಪಡೆ.

ಸುನೀತೆ ಓಡಿಹೋಗಿ ತಂದೆಯ ಬಳಿ ಈ ವೃತ್ತಾಂತವನ್ನೂ ಉಸುರಿದಳು. 'ಅಮ್ಮ' ಮಗಳೆ, ಏನೂ ತಪ್ಪು ಮಾಡದಿದ್ದ ತಪಸ್ವಿಯನ್ನು ನೀನು ಹೊಡೆಯಬಾರದಿತ್ತು. ಎಂದು ದುಃಖದಿಂದ ಹೇಳಿದನಾತ.

ಅತ್ರಿ ಮಹರ್ಷಿಯ ಮಗನಾದ ಅಂಗರಾಜನೊಮ್ಮೆ ನಂದನವನಕ್ಕೆ ಹೋದಾಗ ಅಲ್ಲಿ ಇಂದ್ರನ ವಿಲಾಸ-ವೈಭವಗಳ ದೃಶ್ಯ ಅವನ ಕಣ್ಣಿಗೆ ಬಿದ್ದಿತು. ಬೆರಗಿನಿಂದ ಮೂಕನಾಗಿ ನೋಡುತ್ತ ನಿಂತುಬಿಟ್ಟನಾತ. ಅಪ್ಸರೆಯರು, ಗಂಧರ್ವರು, ಕಿನ್ನರರು ದೇವರಾಜನನ್ನು ಸುತ್ತುವರಿದು ಓಲೈಸುತ್ತಿದ್ದರು. ಮಹರ್ಷಿಗಳು ವೇದಮಂತ್ರಗಳಿಂದ ಹಾಡಿಹೊಗಳುತ್ತಿದ್ದರು. ಹಂಸಗಮನೆಯರಾದ ಚೆಲುವೆಯರು ಕಂಪುಬೀರುವ ಬೀಸಣಿಗೆ, ಚಾಮರಗಳಿಂದ ಬೀಸುತ್ತಿದ್ದರು. ಹಂಸದಂತೆ, ಚಂದ್ರನಂತೆ ಹೊಳೆವ ಶ್ವೇತಚ್ಛತ್ರ ಹಿಡಿದಿದ್ದರು. ಬಳಿಯಲ್ಲಿ ಪ್ರೀತಿಯ ಮಡದಿ ಅರಳಿದ ಮೊಗಸೆಗಣ್ಣಿಗಳ ಚೆಲುವೆ ಶಚೀದೇವಿ. ಸಂತಸದಿಂದ ನಲಿದು ಶೃಂಗಾರರಸ ಸವಿಯುತ್ತಿದ್ದಾನೆ ದೇವೇಂದ್ರ. 'ಧನ್ಯ! ಎಷ್ಟೊಂದು ತಪಸ್ಸು ಮಾಡಿರಬಹುದು ಈತ! ಎಂದುಕೊಂಡ ಅಂಗರಾಜ.

'ನನಗೊಬ್ಬ ಇಂಥ ಮಗ ಹುಟ್ಟಿದರೆ ಎಷ್ಟೊಂದು ಸಂತಸವಾದೀತು' ಈ ಆಲೋಚನೆಯ ಗುಂಗಿನಲ್ಲಿಯೇ ಆತ ಅರಮನೆಯ ಕಡೆ ಹೆಜ್ಜೆ ಹಾಕಿದ.

**ಸೂತ ಉವಾಚ**

**ಸೂತ :-** ಅಂಗರಾಜನು ತನ್ನ ತಂದೆಯ ಬಳಿಗೆ ಹೋಗಿ ನಮಸ್ಕರಿಸಿ ಆಸಕ್ತಿಯಿಂದ ಕೇಳಿದ.

**ಅಂಗ :-** ಈ ಇಂದ್ರನು ಇಂಥ ಮಹಾಪದವಿ ಹೊಂದಲು ಏನು ಪುಣ್ಯ ಮಾಡಿದ ?

**ಅತ್ರಿ :-** ಈತ ಪೂರ್ವಜನ್ಮದಲ್ಲಿ ಸುವ್ರತನೆಂಬೊಬ್ಬ ಬ್ರಾಹ್ಮಣನಾಗಿದ್ದ. ಹರಿಯನ್ನು ತಪಸ್ಸಿನಿಂದೊಲಿಸಿ ಅವನನುಗ್ರಹದಿಂದ ಅದಿತಿಯ ಪುಣ್ಯಗರ್ಭದಲ್ಲಿ ಜನಿಸಿ ಇಂದ್ರ ಪದವಿಯನ್ನು ಪಡೆದ.

**ಅಂಗ :-** ನಾನೂ ಅಂಥ ಒಬ್ಬ ಮಗನನ್ನು ಪಡೆಯಲು ಯಾರನ್ನು ಭಜಿಸಲಿ ?

**ಅತ್ರಿ :- ಭಕ್ತ್ಯಾ ತುಷ್ಯತಿ ಗೋವಿಂದೋ ಭಾವಧ್ಯಾನೇನ ಸತ್ತಮ ।**
**ಸರ್ವಂ ದದಾತಿ ತುಷ್ಟಾತ್ಮಾ ಭಕ್ತ್ಯಾ ಸಂತೋಷಿತೋ ಹರಿಃ ॥**

ಆ ಜಗನ್ನಾಥನೇ ಸುಖಕೊಡುವವ. ಎಲ್ಲ ಪುರುಷಾರ್ಥಗಳನ್ನೂ ಮೋಕ್ಷವನ್ನೂ ಕೊಡಬಲ್ಲವ. ಮಗು, ಹೋಗು, ಅವನನ್ನಾರಾಧಿಸು. ಇಂದ್ರ ಸಮಾನನಾದ ಪುತ್ರನನ್ನು ಪಡೆಯುವೆ. ಮಹರ್ಷಿಯ ಆಶೀರ್ವಾದ ಪಡೆದು ತಪಸ್ಸಿಗಾಗಿ ಮೇರುಪರ್ವತದ ಒಂದು ಶಿಖರವನ್ನೇರಿದ ಅಂಗರಾಜ.

**ಸೂತ ಉವಾಚ**

**ಸೂತ :-** ಪರ್ವತಗಳಲ್ಲೆಲ್ಲ ಶ್ರೇಷ್ಠವಾದುದು ಮೇರು. ಅಲ್ಲಿ ಎಲ್ಲೆಲ್ಲೂ ರತ್ನಗಳೆ, ಎಲ್ಲೆಲ್ಲೂ ಚಿನ್ನವೆ. ಅವುಗಳ ಪ್ರಕಾಶದಿಂದ ಬೆಟ್ಟವು ಸೂರ್ಯನಂತೆ ಹೊಳೆಯುತ್ತದೆ.

ಅಲ್ಲಿ ಅಶೋಕದ ತಂಪಾದ ನೆರಳಿನಲ್ಲಿ ಕುಳಿತು ಒಂದೆಡೆ ಯೋಗಿಗಳೂ, ಮುನಿಗಳೂ ಧ್ಯಾನಿಸುತ್ತಾರೆ. ಇನ್ನೊಂದೆಡೆ ಗಂಧರ್ವರೂ, ಕಿನ್ನರರೂ ಮಧುರಗಾನ ಮಾಡುತ್ತಿರುತ್ತಾರೆ. ಸುರಸುಂದರಿಯರ ನೃತ್ಯ ನಡೆದಿರುತ್ತದೆ. ದಿವ್ಯ ವೇದಧ್ವನಿ ಎಲ್ಲೆಲ್ಲೂ ಹರಡಿ ಎಲ್ಲರ ಪಾಪಗಳನ್ನು ನೀಗುತ್ತದೆ. ಚಂದನ, ಅಶೋಕ, ಪುನ್ನಾಗ, ಸಾಲ, ತಾಲ, ತಮಾಲ, ವಟಸಂತಾನ, ಕಲ್ಪವೃಕ್ಷ, ಕದಲಿ ಮುಂತಾದ ನಾನಾಬಗೆಯ ವೃಕ್ಷಗಳು ಮುಗಿಲೆತ್ತರಕ್ಕೆ ಬೆಳೆದು ಸದಾ ಪುಷ್ಪಿತವಾಗಿರುತ್ತವೆ. ಎಲ್ಲ ಬಗೆಯ ಅಪೂರ್ವ, ಆಶ್ಚರ್ಯಕರ, ಮಂಗಳಮಯ ವಸ್ತುಗಳು ಅಲ್ಲಿ ನೋಡಲು ಸಿಗುತ್ತವೆ. ದೇವತೆಗಳು, ಋಷಿಗಳು, ಸಿದ್ಧರು, ಗಂಧರ್ವರು, ಅಪ್ಸರೆಯರು ಎಲ್ಲರೂ ಅಲ್ಲಿರುತ್ತಾರೆ. ಬೆಟ್ಟದಷ್ಟು ಗಾತ್ರದ ಆನೆಗಳು, ಗರ್ಜಿಸುವ ಸಿಂಹಗಳು, ಶರಭಗಳು, ಮದವೇರಿದ ಹುಲಿಗಳು ಅಲ್ಲಿ ವಾಸಿಸುತ್ತವೆ. ಅಲ್ಲಲ್ಲಿ ತಂಪಾದ ನೀರಿನಿಂದ ತುಂಬಿ ತುಳುಕುವ ಕೊಳಗಳು, ಅವುಗಳಲ್ಲಿ ಅರಳಿನಿಂತ ಬಿಳಿ, ಕೆಂಪು, ಹೊಂಬಣ್ಣದ ತಾವರೆಗಳು, ಹಂಸ, ಕಾರಂಡವಗಳು, ಸುತ್ತಮುತ್ತಲೂ ಸೂರ್ಯನಂತೆ ಹೊಳೆವ ಚಿನ್ನ, ಬೆಳ್ಳಿ, ಸ್ಫಟಿಕಗಳ ವಿಸ್ತಾರವಾದ ಶಿಲಾ ಫಲಕಗಳು, ದೇವಾಲಯಗಳು, ಮಹಡಿಮನೆಗಳು, ಅವುಗಳಿಗೆ ಚಿನ್ನದ ಧ್ವಜಸ್ತಂಭಗಳು, ಕಲಶ ಚಾಮರಗಳು ಎಲ್ಲವೂ ಕಣ್ಣಿಗೆ ಹಬ್ಬ ತರುವಂಥವುಗಳು.

ಪಾವನಳಾದ ಗಂಗೆಯ ಉದ್ಭವ ಇಲ್ಲಿಂದಲೇ. ಹಂಸಗಳಿಂದ, ಪದ್ಮಗಳಿಂದ ತುಂಬಿದ ಆ ನದಿಯ ತೀರದಲ್ಲಿ ವಾಸಮಾಡುವುದೆಂದರೆ ಮುನಿಗಳಿಗೆ ಬಲು ಸಂತಸ.

ಅಂಗರಾಜನೂ ಇಲ್ಲಿಗೆ ಬಂದು ರತ್ನಮಯ ಗುಹೆಯೊಂದರಲ್ಲಿ ಕುಳಿತ. ಇಂದ್ರಿಯಗಳನ್ನು ನಿಗ್ರಹಿಸಿ ಏಕಾಗ್ರಚಿತ್ತದಿಂದ ಹೃಷಿಕೇಶನನ್ನು ಧ್ಯಾನಿಸಿದ.

**ಆಸನೇ ಶಯನೇ ಯಾನೇ ಧ್ಯಾನೇ ಚ ಮಧುಸೂದನಂ ।**
**ನಿತ್ಯಂ ಪಶ್ಯತಿ ಯುಕ್ತಾತ್ಮಾ ಯೋಗ ಯುಕ್ತೋ ಜಿತೇಂದ್ರಿಯಃ ॥**

ಕುಳಿತರೆ, ಮಲಗಿದರೆ, ನಡೆದರೆ, ಧ್ಯಾನಿಸಿದರೆ, ಅವನು ಸದಾ ಕಾಣುವುದು ಮಧುಸೂದನನ್ನೇ, ಏಕೆಂದರೆ ಆತ ಇಂದ್ರಿಯಗಳನ್ನು ನಿಗ್ರಹಿಸಿ ಚಿತ್ತಲಯವನ್ನು ಸಂಪಾದಿಸಿದ್ದ.

**ಚರಾಚರೇಷು ಜೀವೇಷು ತೇಷು ಪಶ್ಯತಿ ಕೇಶವಂ**

ಚರಾಚರಜೀವ ಪ್ರಪಂಚದಲ್ಲಿ ಎಲ್ಲೆಡೆ ಆತನಿಗೆ ಕೇಶವನೊಬ್ಬನೇ ಕಾಣಿಸಿ ಕೊಳ್ಳತೊಡಗಿದ.

ಹೀಗೆ ನೂರು ವರ್ಷಗಳ ಕಾಲ ತಪಸ್ಸು ಮಾಡಿದ ಅಂಗರಾಜ. ಭೀಕರ ವಿಘ್ನಗಳು ಕಾಣಿಸಿಕೊಂಡರೂ ಅವನ್ನೆಲ್ಲ ಆ ನರಸಿಂಹನ ಅನುಗ್ರಹ ಬಲದಿಂದಲೆ ಬೆಂಕಿ, ಕಟ್ಟಿಗೆಯನ್ನು ಸುಡುವಂತೆ ಸುಟ್ಟ. ಉಪವಾಸ, ನಿಯಮ, ಇಂದ್ರಿಯ ನಿಗ್ರಹಗಳಿಂದ ಶರೀರ ಒಣಗುತ್ತಿದ್ದಂತೆ ತೇಜಸ್ಸು ಹೆಚ್ಚುತ್ತ ಬಂದಿತು. ಸೂರ್ಯನಂತೆ, ಅಗ್ನಿಯಂತೆ ಆತ ಬೆಳಗತೊಡಗಿದ.

ಒಂದು ದಿನ ಜನಾರ್ದನನೊಲಿದು ಮೈದೋರಿದ. 'ಬೇಕಾದ ವರವನ್ನು ಕೇಳಿಕೊಳ್ಳು' ಎಂದ. ಅಂಗರಾಜ ಆನಂದದಿಂದ ಮೈಮರೆತು ಆ ದೇವದೇವನನ್ನು ಸ್ತುತಿಸತೊಡಗಿದ.

**ಅಂಗ :-** ಹೇ ಸ್ವಾಮಿ, ನೀನೆ ಎಲ್ಲರಿಗೂ ಗತಿಯೆನಿಸಿರುವೆ. ಗುಣಾತೀತನಾಗಿದ್ದು ಗುಣಗಳನ್ನು ಸೃಷ್ಟಿಸುವೆ. ಸಂಸಾರ ಕೊಡುವವನೂ ನೀನೆ, ಅದರಿಂದ ಬಿಡುಗಡೆ ಮಾಡುವವನೂ ನೀನೆ. ಯಜ್ಞಮಾಡುವವನೂ ನೀನೆ, ಅದಕ್ಕೆ ಫಲನೀಡುವವನೂ ನೀನೆ. ಮಾಯೆಯನ್ನು ಸೃಜಿಸುವವನೂ ನೀನೆ, ಅದನ್ನು ಪರಿಹರಿಸುವವನೂ ನೀನೆ. ಅನಂತ ರೂಪಗಳನ್ನು ನೀನು ಧರಿಸುವೆ, ಬ್ರಹ್ಮನಲ್ಲಿ ಬ್ರಹ್ಮನ ರೂಪದಿಂದಿರುವೆ. ರುದ್ರನಲ್ಲಿ ರುದ್ರರೂಪದಿಂದಿರುವೆ. ಹೇ ಶ್ರೀನಿವಾಸ, ಅಮೃತಾತ್ಮ, ನೃಸಿಂಹ, ಗೋವಿಂದ, ಗೋಪಾಲ, ವಿಶ್ವಂಭರ, ಸತ್ಯಧರ್ಮರಕ್ಷಕ, ಪದ್ಮನಾಭ ನಿನಗಿದೊ ನನ್ನ ನಮಸ್ಕಾರ.

**ಆನಂದ ಕಂದ ಕಮಲಾಪ್ರಿಯ ವಾಸುದೇವ**
**ಸರ್ವೇಶ ಈಶ ಮಧುಸೂದನ ದೇಹಿದಾಸ್ಯಂ**
**ಪಾದೇ ನಮಾಮಿ ತವ ಕೇಶವ ಜನ್ಮಜನ್ಮ**
**ಕೃಪಾಂಕುರುಷ್ವ ಮಮ ಶಾಂತಿದ ಶಂಖಪಾಣೇ**

ಹೇ ಆನಂದಕಂದ, ಇಂದಿರಾರಮಣ, ವಾಸುದೇವ, ಸರ್ವೇಶ್ವರ, ಮಧುಸೂದನ ನಿನ್ನಡಿಗಳಿಗೆರುವೆ. ನಾ ನಿನ್ನ ದಾಸನೆಂದು ಸ್ವೀಕರಿಸು. ಹೇ ಕೇಶವ ದಯೆದೋರು. ಶಂಖಪಾಣಿಯೆ ಶಾಂತಿಯನ್ನು ಕೊಡು.

ಶಂಖ-ಚಕ್ರ-ಗದಾ-ಪದ್ಮಗಳನ್ನು ಧರಿಸಿ ವನಮಾಲಾ ಶೋಭಿತನಾಗಿ ಶ್ರೀವತ್ಸ ಕೌಸ್ತುಭ ಸರ್ವಾಭರಣಭೂಷಿತನಾಗಿ ಹೊಳೆವ ಮೇಘಶ್ಯಾಮನಾದ ಗರುಡಾರೂಢನಾದ ಆ ಮಹಾಪ್ರಭು ಮೇಘ ಗಂಭೀರಧ್ವನಿಯಿಂದ ನುಡಿದ, 'ವಿಪ್ರೋತ್ತಮ, ನಿನ್ನ ತಪಸ್ಸಿಗೊಲಿದಿದ್ದೇನೆ, ಬೇಕಾದ ವರವನ್ನು ಕೇಳು.'

ಅಂಗರಾಜ ತಿರುಗಿ ನಮಸ್ಕರಿಸಿ ಆನಂದದಿಂದ ನುಡಿದ, 'ಹೇ, ದೇವೇಶ, ನಾ ನಿನ್ನ ದಾಸ. ನನಗೆ ನೀನು ವಿಷ್ಣು ತೇಜಸ್ಸಿನ ಬಲದಿಂದ ಎಲ್ಲರನ್ನೂ ಗೆದ್ದು ಮೂಲೋಕವನ್ನು ಕಾಪಾಡಬಲ್ಲ. ಸತ್ಯ, ಧರ್ಮರಕ್ಷಕನಾದ ಇಂದ್ರನಿಗೆ ಸಮಾನನಾದ ಗುಣವಂತನಾದ, ಒಬ್ಬ ಪುತ್ರನನ್ನು ಕೊಡು.'

**ವಿಷ್ಣು** :- ಹಾಗೇ ಆಗಲಿ, ಅತ್ರಿಕುಲವನ್ನುದ್ಧರಿಸುವ ಲೋಕ ವಿಧಾರಕನಾದ ತೇಜಸ್ವಿಯಾದ ಪುತ್ರನನ್ನು ನೀನು ಪಡೆಯುವೆ. ಕೊನೆಗೆ ನನ್ನ ಲೋಕವನ್ನು ಹೊಂದುವೆ. ಈಗ ಪುಣ್ಯಶೀಲನಾದೊಬ್ಬನ ಪುಣ್ಯಶೀಲೆಯಾದ ಕನ್ಯೆಯನ್ನು ವಿವಾಹವಾಗು. ಪುಣ್ಯಶೀಲನಾದ ಪುತ್ರನನ್ನು ಪಡೆ. ಆತ ನನ್ನ ಅನುಗ್ರಹದಿಂದ ನೀನು ಬಯಸುವಂಥ ಮಗನಾಗುತ್ತಾನೆ. ಹೀಗೆ ಹೇಳಿ ವಿಷ್ಣು ಅದೃಶ್ಯನಾದ.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಭೂಮಿಖಂಡದಲ್ಲಿ*
*ವೇನೋಪಾಖ್ಯಾನ, ಅಂಗ ವರಪ್ರಧಾನ ಒಂಬತ್ತನೇಯ ಅಧ್ಯಾಯ ಮುಗಿದುದು.*



## ಸುನೀತ ಚರಿತ್ರ

ಅಧ್ಯಾಯ - ೧೦

**ಋಷಿಯ ಉವಾಚ**

**ಋಷಿಗಳು** :- ಸುನೀತೆಗೆ ಗಂಧರ್ವ ಕುಮಾರ ಕೊಟ್ಟ ಶಾಪವೇನಾಯಿತು ? ಅವಳೇನು ಮಾಡಿದಳು ? ಎಂಥ ಮಗನನ್ನು ಪಡೆದಳು ? ಅವಳ ಈ ಚರಿತ್ರೆಯನ್ನು ವಿಸ್ತಾರವಾಗಿ ಹೇಳು.

**ಸೂತ** :- ಶಾಪದ ವೃತ್ತಾಂತವನ್ನು ತಂದೆಯ ಬಳಿ ಹೇಳಿದಾಗ ಆತ ಸುನೀತೆಗೆ ಹೀಗೆ ಬೋಧಿಸಿದ.

**ಯಮ** :- ಮಗಳೆ, ನಿರಪರಾಧಿಯಾದ ತಪಸ್ವಿಯೊಬ್ಬನಿಗೆ ನೀನು ಹೊಡೆದುದು ತಪ್ಪು. ಅಪರಾಧಿಗಳಿಗೂ ಕೋಪಪರವಶತೆಯಿಂದ ಹೊಡೆಯುವದರಲ್ಲಿ ದೋಷವಿದೆ. ನಿರಪರಾಧಿಗೆ ಹೊಡೆದರೆ ಅದೆಂಥ ಪಾಪಕೃತ್ಯ !

**ತಾಡಯಂತಂ ತಾಡಯೇದ್ಯಃ ಕ್ರೋಶುತಂ ಕ್ರೋಶಯೇತ್‌ಪುನಃ**
**ತಸ್ಯಪಾಪಂ ಸ ವೈ ಭುಕ್ತೇ ತಾಡಿತಸ್ಯ ನ ಸಂಶಯಃ**

ಹೊಡೆದವನನ್ನು ಪ್ರತಿಯಾಗಿ ಹೊಡೆದರೆ, ಬೈದವನನ್ನು ತಿರುಗಿ ಬೈದರೆ ಅವನ ಪಾಪವನ್ನು ತಾನು ಅನುಭವಿಸಬೇಕಾಗುತ್ತದೆ. ಇದರಲ್ಲಿ ಸಂಶಯವಿಲ್ಲ.

ನೀನು ಇನ್ನುಮುಂದೆ ಸತ್ಕರ್ಮಗಳಿಂದ ಈ ಪಾಪವನ್ನು ತೊಳೆದುಕೊಳ್ಳಬೇಕು. ಬೇರೆ ವಿಧಿಯಿಲ್ಲ. ನೋಡು ಮಗು, ಪವಿತ್ರ ತೀರ್ಥದ ಸ್ಪರ್ಶದಿಂದ, ಸ್ನಾನದಿಂದ, ಬರಿ ದರ್ಶನ ಮಾತ್ರದಿಂದಲೂ ಮುನಿಗಳು ಅಂತರಂಗ, ಬಹಿರಂಗ ಶುದ್ಧಿಗಳನ್ನು ಪಡೆದು ಬೇಗನೆ ತಪಃಸಿದ್ಧಿ ಪಡೆಯುವರು. ಇದಕ್ಕೇನು ಕಾರಣ ?

**ಆಪಃ ಶಾಂತಾಃ ಸುಶೀತಾಶ್ಚ ಮೃದುಗಾತ್ರಾಃ ಪ್ರಿಯಂಕರಾಃ**
**ನಿರ್ಮಲಾ ರಸವತ್ಯಶ್ಚ ಪುಣ್ಯವೀರ್ಯಾ ಮಲಾಪಹಾಃ**

ನೀರು ಪ್ರಶಾಂತ, ನಿರ್ಮಲವಾಗಿರುತ್ತದೆ. ಅದು ತನ್ನ ತಂಪಾದ ಹಿತವಾದ ಕೋಮಲ ಸ್ಪರ್ಶದಿಂದಲೇ ಕೊಳೆಯನ್ನು ದೂರಮಾಡುತ್ತದೆ. ಸವಿಯಾಗಿದ್ದು, ಸೇವಿಸಿದರೆ ಪುಣ್ಯವನ್ನು ತಂದುಕೊಡುತ್ತದೆ.

ಸತ್ಯ ಧ್ಯಾನ ತಪಸ್ಸು ಮುಂತಾದ ಸತ್ಕರ್ಮಗಳ ಸ್ವಭಾವವೂ ಹೀಗೇ ಇರುತ್ತದೆ. ಇನ್ನೊಂದು ಉದಾಹರಣೆ, ಬೆಂಕಿಯಲ್ಲಿ ಕರಗಿದ ಚಿನ್ನ ಶುದ್ಧವಾಗುತ್ತದೆ. ಪ್ರಕಾಶಮಾನವಾಗುತ್ತದೆ. ಕೈಯಿಂದ ಮುಟ್ಟಲಾಗದು. ಹಾಗೆಯೆ ಸತ್ಯ ಧ್ಯಾನ ತಪಸ್ಸುಗಳು. ಅವನ್ನು ಆಶ್ರಯಿಸಿದರೆ ಆತ್ಮ ನಿರ್ಮಲವಾಗಿ ಪ್ರಕಾಶಿಸುತ್ತದೆ. ಪಾಪಕರ್ಮ, ದುಷ್ಟ ಆಲೋಚನೆಗಳು ಬಳಿಗೆ ಸುಳಿಯಲಾರವು. ಬೆಂಕಿಯಂತೆ ಪ್ರಜ್ವಲಿಸುವ ಆ ವ್ಯಕ್ತಿಯ ಮೇಲೆ ಪಾಪಕರ್ಮಿಗಳು ಕೈ ಮಾಡಲಾರರು. ಆದುದರಿಂದ ಪಾಪಕರ್ಮಗಳನ್ನು ಬಿಟ್ಟು ಪುಣ್ಯಕರ್ಮಗಳನ್ನಾಶ್ರಯಿಸು. ಆ ಅಧೋಕ್ಷಜನನ್ನು ಸ್ಮರಿಸುತ್ತಿರು.

ತಂದೆಯ ಈ ಉಪದೇಶವನ್ನು ಕೇಳಿದೊಡನೆ ಸುನೀತೆಗೆ ಜ್ಞಾನೋದಯವಾಯಿತು. ಅವನ ಆಶೀರ್ವಾದ ಪಡೆದು ನಿರ್ಜನವಾದ ಅರಣ್ಯದಲ್ಲಿ ತಪಸ್ಸಿಗೆ ಕುಳಿತಳು. ಆಕೆ ಎಳವೆಯ ಚಪಲತೆ ಚೆಲ್ಲಾಟಗಳನ್ನು ಬದಿಗಿಟ್ಟು ಕಾಮಕ್ರೋಧಗಳನ್ನು ಹತ್ತಿಕ್ಕಿ ಏಕಾಂತದಲ್ಲಿ ಕುಳಿತು ಹರಿಯನ್ನು ಧ್ಯಾನಿಸಿದಳು. ಆದರೆ ತಪಸ್ಸು ಅರ್ಧದಲ್ಲಿಯೆ ನಿಂತಿತು ! ರಂಭೆ ಮೊದಲಾದ ಅಪ್ಸರೆಯರು ಅವಳ ಬಳಿ ಬಂದಿದ್ದರು.

**ರಂಭೆ :-** ಅಮ್ಮ, ಏಕೆ ಹೀಗೆ ಚಿಂತೆ ಮಾಡುತ್ತಿರುವೆ ? ಧಾರ್ಮಿಕರು ಚಿಂತಿಸುತ್ತಾರೆ. ಯೋಗಿಗಳೂ ಚಿಂತಿಸುತ್ತಾರೆಂದು ಉಳಿದವರೂ ಚಿಂತಿಸಿದರೇನು ಲಾಭವಿದೆ, ಹೇಳು. ಲಾಭವಿಲ್ಲವೆಂಬುದು ಮಾತ್ರವೆ ಅಲ್ಲ ಚಿಂತೆ ಬಲು ಕೆಟ್ಟುದೂ ಹೌದು. ಅದು ಶರೀರವನ್ನೊಣಗಿಸುತ್ತದೆ. ಬಲ ತೇಜಸ್ಸುಗಳನ್ನಾರಿಸುತ್ತದೆ. ಕುಗ್ಗಿಸುತ್ತದೆ. ಎಲ್ಲ ಸೌಖ್ಯವನ್ನೂ ದೂರಮಾಡುತ್ತದೆ. ಶರೀರ ಸೌಂದರ್ಯವನ್ನು ಹಾಳುಗೆಡವುತ್ತದೆ. ಲೋಭ ಮೋಹಗಳನ್ನು ತರಿಸಿ ಪಾಪಕರ್ಮಗಳಿಗೆ ದಾರಿ ಮಾಡಿಕೊಡುತ್ತದೆ. ರೋಗರುಜಿನಗಳುಂಟುಮಾಡಿ ನರಕಯಾತನೆಗಳಿಗಾಸ್ಪದ ನೀಡುತ್ತದೆ. ಆದ್ದರಿಂದ ಚಿಂತೆಯನ್ನು ಬಿಟ್ಟುಬಿಡು.

**ಆರ್ಜಿತಂ ಕರ್ಮಣಾ ಪೂರ್ವಂ ಸ್ವಯಮೇವನರೇಣ ತಂ ।**
**ತದೇವ ಭುಂಕ್ತೇಸೀ ಜಂತುರ್ಜ್ಞಾನವಾನ್ನವಿಚಿಂತಯೇತ್ ॥**

ವಸ್ತುತ ಎಲ್ಲರೂ ತಾವು ಹಿಂದೆ ಮಾಡಿದ ಕರ್ಮವನ್ನೇ ಈಗ ಉಣ್ಣುತ್ತಾರೆ. ವಿವೇಕಿಯಾದವನು ಚಿಂತಿಸುವುದಿಲ್ಲ. ನೀನೀಗ ಚಿಂತಿಸಿ ಫಲವೇನು?. ನಿನಗೆ

ಬಂದೊದಗಿದ ಸಮಸ್ಯೆ ಏನೆಂಬುದನ್ನಾದರೂ ಹೇಳಬಾರದೆ?. ನಾವೆಲ್ಲ ಸೇರಿ ಏನಾದರೊಂದು ಪರಿಹಾರ ಕಂಡು ಹುಡುಕಿ ಹೇಳಲಾರೆವೆ ?

**ಸೂತ ಉವಾಚ :**

**ಸೂತ:-** ಸುನೀತೆ ತಾನು ಹಿಂದೆ ಕಾಡಿನಲ್ಲಿ ಸುಶಂಖನಿಂದ ಶಾಪಪಡೆದ ವೃತ್ತಾಂತವನ್ನೆಲ್ಲ ಸಖಿಯರಿಗೆ ಹೇಳಿದಳು.

**ಸುನೀತೆ :-** ಸಖಿಯರೆ, ಈ ದುರ್ಘಟನೆ ಸದಾ ನನ್ನ ಮನಸ್ಸನ್ನು ಕೊರೆಯುತ್ತಿದೆ. ಇಷ್ಟು ಮಾತ್ರವಲ್ಲ. ಒಮ್ಮೆ ನಮ್ಮ ತಂದೆ ನನ್ನನ್ನು ದೇವತೆಗಳಿಗೂ ಋಷಿಗಳಿಗೂ ಪರಿಚಯ ಮಾಡಿಸಿ 'ನಿಮ್ಮಲ್ಲಿ ಗುಣವಂತನಾದ ವರನಿಗೆ ಶೀಲವತಿಯೂ ಸುಂದರಿಯೂ ನವಯುವತಿಯೂ ಆದ ಈ ನನ್ನ ಮಗಳನ್ನು ಕೊಡಲು ಬಯಸಿದ್ದೇನೆ ಎಂದರು. ನನ್ನನ್ನು ಬೇಗನೆ ಮದುವೆ ಮಾಡಿಕೊಡುವ ಆಸೆ ನಮ್ಮ ತಂದೆಗೆ. ಅದರೇನು? ಅವರೆಲ್ಲ ನನ್ನನ್ನು ನೋಡಿ ಹೇಳಿದರು. ನಿನ್ನ ಮಗಳು ರೂಪವತಿ ಹೌದು, ಗುಣವತಿಯೂ ಹೌದು. ಆದರೆ ಋಷಿಯ ಶಾಪದ ದೆಸೆಯಿಂದ ವಂಶವನ್ನೇ ನಾಶಮಾಡಬಲ್ಲ ಮಹಾಪಾಪಿಯಾದ ಮಗನನ್ನು ಪಡೆಯಲಿದ್ದಾಳೆ. ಗಂಗೆಯ ಬಿಂದಿಗೆಯಲ್ಲಿ ಒಂದು ತೊಟ್ಟು ಹೆಂಡ ಬಿದ್ದರೂ ಬಿಂದಿಗೆ ಹೆಂಡದ ಬಿಂದಿಗೆಯೆ ಆಗುತ್ತದೆ. ನಮಗೆ ಈಕೆ ಬೇಡ, ಬೇರೆ ಯಾರಿಗಾದರೂ ಕೊಡು.'

ಇದನ್ನು ಕೇಳಿ ತಂದೆಯವರಿಗಾದ ದುಃಖ ಅಷ್ಟಿಷ್ಟಲ್ಲ.

ನಾನು ಮಹಾಪಾಪವನ್ನೆಸಗಿದ್ದೇನೆ. ತಪಸ್ಸಿನಿಂದ ಶರೀರವನೊಣಗಿಸಿಯಾದರೂ ಈ ಪಾಪಪರಿಹಾರ ಮಾಡಿಕೊಂಡೇನೆಂಬಾಸೆ. ಸುನೀತೆ ಅಳುತಡೆಯಲಾರದೆ ಮಾತು ನಿಲ್ಲಿಸಿದಳು. ಸಖಿಯರು ಸಂತೈಸ ತೊಡಗಿದರು.

**ಸಖಿಯರು :-** ಈ ಶೋಕವೆ ನಿನ್ನ ಶರೀರವನ್ನು ಹಿಂಡಿಹಿಪ್ಪೆಮಾಡುತ್ತಿದೆ. ತಪಸ್ಸು ಅಲ್ಲ. 'ನಾನು ಮಹಾಪಾಪಮಾಡಿದೆ' ಎನ್ನುತ್ತಿರುವೆಯಲ್ಲ? ಲೋಕದಲ್ಲಿ ಪಾಪ ಮಾಡದವರು ಯಾರಿದ್ದಾರೆ ? ಬ್ರಹ್ಮನೂ ಹಿಂದೆ ಶಿವನಲ್ಲಿ ಸುಳ್ಳು ಹೇಳಿದನಂತೆ ! ಅವನನ್ನು ಎಲ್ಲರೂ ಪೂಜೆ ಮಾಡುವುದಿಲ್ಲವೆ ? ಇಂದ್ರ ಬ್ರಹ್ಮಹತ್ಯೆ ಮಾಡಿದ ; ಗೌತಮರ ಪತ್ನಿ ಅಹಲ್ಯೆಯನ್ನು ಕೆಡಿಸಿದ. ಅವನಿನ್ನೂ ತ್ರೈಲೋಕಾಧಿಪತಿಯಾಗಿ ಮೆರೆಯುತ್ತಿಲ್ಲವೆ ? ಆ ಶಿವನೂ ಬ್ರಹ್ಮಹತ್ಯ ಮಾಡಿ ಕೈ ಕೊಡವಿದರೂ ಬೀಳದ ಬ್ರಹ್ಮಕಪಾಲವನ್ನು ಹಿಡಿದೆ ತಿರುಗುತ್ತಿದ್ದಾನೆ. ದೇವತೆಗಳೂ ಋಷಿಗಳೂ ಅವನನ್ನು ನಮಿಸುವುದಿಲ್ಲವೆ ? ಸೂರ್ಯನಿಗೆ ಕುಷ್ಠರೋಗ ತಗುಲಿದೆ. ಅವನು ಮೂರು ಲೋಕವನ್ನು ಬೆಳಗುತ್ತಿಲ್ಲವೆ ? ಚಂದ್ರನಿಗೂ ಕ್ಷಯರೋಗ ತಗುಲಿದೆ. ಬೃಹಸ್ಪತಿಯ ಪತ್ನಿ ತಾರೆಯನ್ನು ಕೆಡೆಸಿದವನೂ ಅವನೆ. ಕೃಷ್ಣನಿಗೂ ಭೃಗುಮುನಿಯ ಶಾಪತಪ್ಪಲಿಲ್ಲ. ಧರ್ಮರಾಜ ಯುಧಿಷ್ಠಿರನೆ ಸುಳ್ಳುಹೇಳಿ ಗುರುದ್ರೋಣರನ್ನು ಕೊಲ್ಲಿಸುವುದಾದರೆ ಉಳಿದವರ ಪಾಡೇನು, ಹೇಳು.

**ವೈಗುಣ್ಯಂ ಕಸ್ಯ ವೈ ನಾಸ್ತಿ? ಕಸ್ಯ ನಾಸ್ತಿ ಚ ಲಾಂಛನಂ?**
ದೋಷಯಾರಲ್ಲಿಲ್ಲ ? ಯಾರಲ್ಲಿ ಕಳಂಕವಿಲ್ಲ ?

ನೀನೊಂದು ಸಣ್ಣ ತಪ್ಪುಮಾಡಿರಬಹುದು. ನಾವು ಅದನ್ನು ಸರಿಪಡಿಸುತ್ತೇವೆ. ನಿನ್ನಲ್ಲಿರುವ ಉತ್ತಮ ಗುಣಗಳು ಎಲ್ಲ ಸ್ತ್ರೀಯರಲ್ಲಿ ನೋಡಲು ಸಿಗಲಾರವು. ನೋಡು, ಆದರ್ಶನಾರಿಯರಲ್ಲಿ ಮೊದಲಿಗೆ ಇರಬೇಕಾದ ಗುಣ ರೂಪ. ಬಳಿಕ ಶೀಲ. ಸತ್ಯ. ಋಜುಸ್ವಭಾವ, ಧರ್ಮನಿಷ್ಠೆ, ಸವಿಮಾತು, ಅಂತರಂಗ-ಬಹಿರಂಗ ಶುದ್ಧಿ, ಪಿತೃಭಕ್ತಿ, ಗುರುಶುಶ್ರೂಷೆ, ಸಹಿಷ್ಣುತೆ, ರಸಿಕತೆ ಮತ್ತು ಪಾತಿವ್ರತ್ಯ ಈ ಹನ್ನೆರಡು ಗುಣಗಳೂ ನಿನ್ನಲ್ಲಿವೆ. ನಿನಗೊಬ್ಬ ಯೋಗ್ಯ ವರ ಸಿಗುವಂತೆ ನಾವೊಂದು ಉಪಾಯ ಹೇಳುತ್ತೇವೆ. ತಾಳು, ದುಡುಕಿ ಏನಾದರೂ ಮಾಡಿಕೊಳ್ಳಬೇಡ.

ಸುನೀತೆಗೆ ಆನಂದವಾಯಿತು. 'ಹೇಳಿ, ಹೇಳಿ' ಎಂದಳು ಆಸಕ್ತಿಯಿಂದ. ಅವರು ಹೇಳಿದರು.

**ಸಖಿಯರು :-** ಪುರುಷರನ್ನು ಮರುಳುಮಾಡುವ ವಿದ್ಯೆಯೊಂದಿದೆ. ನಮ್ಮಲ್ಲಿ ನೀನು ಯಾರನ್ನು ಬಯಸುವಿಯೊ ಅವನು ದೇವತೆಯಾಗಲಿ, ಇನ್ನಾರೆ ಆಗಲಿ ಅವನನ್ನು ಈ ವಿದ್ಯೆಯಿಂದ ನೀನು ಮರುಳು ಮಾಡಬಲ್ಲೆ. ಹೀಗೆ ಹೇಳಿ ಸಖಿಯರು ಆ ವಿದ್ಯೆಯನ್ನು ಹೇಳಿಕೊಟ್ಟರು. ವಿದ್ಯೆ ಕರಗತವಾದೊಡನೆ ಸುನೀಥೆ ಗಂಡಿನ ಬೇಟೆಗೆ ಹೊರಟಳು. ಆಕೆ ಸಂಚರಿಸುತ್ತ ಮೇರುವಿನ ತಪ್ಪಲಿನಲ್ಲಿ ಗಂಗೆಯ ಬಳಿ ಗುಹೆಯೊಂದರಲ್ಲಿ ತೇಜಸ್ವಿ ಸ್ಫುರದ್ರೂಪಿ ತರುಣ ತಪಸ್ವಿಯೊಬ್ಬನನ್ನು ಕಂಡಳು. ಸರ್ವಲಕ್ಷಣ ಸಂಪನ್ನನಾಗಿದ್ದು ಮನ್ಮಥನಂತೆ ಕಾಣುತ್ತಿದ್ದನಾತ. ವಿಷ್ಣು ತೇಜಸ್ಸು ಮತ್ತು ಪರಾಕ್ರಮ ಅವನಲ್ಲಿ ತುಂಬಿತುಳುಕುತ್ತಿತ್ತು. ತಪಸ್ಸಿನ ಸಾಕಾರಮೂರ್ತಿಯೋ ಎಂಬಂತೆ ಕುಳಿತು ಧ್ಯಾನಿಸುತ್ತಿದ್ದ. ಅವನನ್ನು ನೋಡಿ ಮರುಳಾದ ಸುನೀಥೆ ಅವನಾರೆಂದು ರಂಭೆಯನ್ನು ಕೇಳಿದಳು.

**ರಂಭೋವಾಚ**

**ರಂಭೆ :-** ಇವನು ಅಂಗರಾಜ. ಬ್ರಹ್ಮನ ಮಗನಾದ ಅತ್ರಿ ಮಹರ್ಷಿ ಇವನ ತಂದೆ. ಇವನೊಮ್ಮೆ ನಂದನವನಕ್ಕೆ ಹೋದಾಗ ಆ ವಿಲಾಸ-ವೈಭವಗಳಿಂದ ವಿಹರಿಸುತ್ತಿದ್ದ ಇಂದ್ರನನ್ನು ಕಂಡು ಹಾಗೇ ಮೆರೆಯಬಲ್ಲ ಮಗನೊಬ್ಬನನ್ನು ಪಡೆಯಬೇಕೆಂದು ಬಯಸಿದ. ಹರಿಯನ್ನು ತಪಸ್ಸಿನಿಂದ ಒಲಿಸಿಕೊಂಡು ಆ ವರವನ್ನೂ ಪಡೆದ. ಈಗ ಇವನಿಗೆ ಯೋಗ್ಯ ಕನ್ಯೆಯೊಬ್ಬಳು ಬೇಕಾಗಿದ್ದಾಳೆ. ಇವನೆ ನಿನಗೆ ಅನುರೂಪನಾದ ವರ. ಇವನನ್ನ ಸೇರು. ವಿಷ್ಣು ತೇಜಸ್ಸು, ಪರಾಕ್ರಮಗಳಿಂದ ತುಂಬಿದ ಧರ್ಮಿಷ್ಠನಾದೊಬ್ಬ ಪುತ್ರನನ್ನೂ ಪಡೆ. ಆ ಸುಶಂಖನ ಶಾಪ ನಿನ್ನನೇನೂ ಮಾಡಲಾರದು. ಒಳ್ಳೆಯ ಬೀಜ ಬಿತ್ತಿದಾಗ ಒಳ್ಳೆಯ ಫಲ ಸಿಗುತ್ತದೆ. ಇವನಿಂದ ಜನಿಸುವ ಪುತ್ರ ಇವನಂತೆ ಇರುತ್ತಾನೆ!

ಸುನೀತೆಗೆ ಇದುವೆ ಸರಿಯಾದ ಉಪಾಯವೆಂದು ಮನವರಿಕೆಯಾಯಿತು.

**ಸುನೀಥೋವಾಚ**

**ಸುನೀತೆ:-** ಸಖಿ, ನೀನನ್ನುವುದು ನಿಜ. ನೀನು ಹೇಳಿದಂತೆಯೇ ಮಾಡುವೆ, ಇವನನ್ನು ಮರುಳುಮಾಡಿ ವಶಕ್ಕೆ ತಂದುಕೊಳ್ಳುವೆ. ನೀನು ದೂತಿಯಾಗಿ ನನಗೆ ಸಹಾಯ ಮಾಡಬೇಕು.

ರಂಭೆ ಒಪ್ಪಿದಳು. ಸುನೀತೆ ಈಗ ತಾನು ಕಲಿತ ಮಾಯಾ ವಿದ್ಯೆಯನ್ನು ಪ್ರಯೋಗಿಸಿದಳು.

ಆ ಸುಂದರವಾದ ಮೇರುವಿನ ತಪ್ಪಲಿನಲ್ಲಿ ದೇವತೆಗಳೂ, ಗಂಧರ್ವರೂ, ಅಪ್ಸರೆಯರೂ ವಿಹಾರಕ್ಕೆ ಬಯಸುವಂಥ ಒಂದು ಸುಂದರ ಪ್ರದೇಶ. ನಾನಾ ವಿಧದ ಧಾತು ರತ್ನಗಳಿವೆ. ಚಂದನ, ಅಶೋಕ ಮುಂತಾದ ಕಲ್ಪವೃಕ್ಷಗಳ ತಂಪಾದ ನೆರಳು ಹರಡಿಕೊಂಡಿದೆ. ಅಲ್ಲಿ ಸುನೀತೆ ಉಯ್ಯಾಲೆ ತೂಗುತ್ತ ಮೋಹಕವಾಗಿ ಹಾಡತೊಡಗಿದ್ದಾಳೆ. ಮೊದಲೇ ರೂಪ ಯೌವನಗಳಿಂದ ತುಂಬಿದ ಒಯ್ಯಾರಿ ಈಕೆ. ಮಾಯೆಯಿಂದ ಇನ್ನಷ್ಟು ಚೆಲುವು ಪಡೆದು ಮೋಹಿನಿಯೇ ಆದಳು. ನೀಲವರ್ಣದ ರೇಶಿಮೆ ಸೀರೆ ಉಟ್ಟು ಕೆಂಪು ದಾಸವಾಳ ಬಣ್ಣದ ರವಿಕೆ ತೊಟ್ಟು ವೀಣೆ ನುಡಿಸುತ್ತ ಸುಮಧುರ ಕಂಠದಿಂದ ಲೋಕವೆ ಮೈ ಮರೆಯುವಂತೆ ಹಾಡಿದಳು. ಸುತ್ತಲೂ ಅಪ್ಸರೆಯರು ಕುಣಿದರು.

ಅಂಗರಾಜನಿಗೆ ಈ ಗೀತಧ್ವನಿ ಕೇಳಿಸಿತು. ಧ್ಯಾನ ನಿಂತು ಹೋಯಿತು. ಆತನೆದ್ದು ನಿಂತು ಧ್ವನಿಬರುವ ಕಡೆಗೆ ಹುಚ್ಚನಂತೆ ಧಾವಿಸಿದ. ಉಯ್ಯಾಲೆಯಲ್ಲಿ ಕುಳಿತು ಒಯ್ಯಾರಿ ನಗುಮುಖದಿಂದ ಹಾಡುವುದನ್ನು ಕಂಡಾಗ ಮದನನ ಬಾಣದ ವೇಗವನ್ನು ತಡೆಯಲಾಗಲಿಲ್ಲ. ಅವನ ಮೈ ಬೆವರಿಟ್ಟಿತು. ನಡುಗಿತು, ಕಾವೇರಿ ಬೆಂಡಾಯಿತು. ಉನ್ಮತ್ತನಂತೆ ಪ್ರಲಪಿಸಿದನಾತ.

**ಅಂಗರಾಜ :-** ಸುಂದರಿ, ನೀನಾರು ಹೇಳು, ಏಕೆ ಇಲ್ಲಿ ಬಂದಿರುವೆ ? ನಿನ್ನನ್ನು ಕಾಡಿಗೆ ಕಳಿಸಿದವರಾರು ? ನಿನ್ನ ಪ್ರತಿಯೊಂದು ಅಂಗವೂ ಹೃಷ್ಟಪುಷ್ಟವಾಗಿದೆ. ಮನೋಹರವಾಗಿದೆ. ಕಣ್ಸೆಳೆಯುತ್ತಿದೆ. ನನ್ನಲ್ಲಿ ದಯೆದೋರು.

ಹೀಗೆ ಅಂಗಲಾಚಿ ಬೇಡಿದ ಅಂಗರಾಜ. ಮಾಯೆಯ ಶಕ್ತಿಗೂ ಮನ್ಮಥನ ಶೌರ್ಯಕ್ಕೂ ಸೋತು ಅಸಹಾಯಕನಾಗಿದ್ದನಾತ.

ಸುನೀತೆ ಏನೂ ಆಡದೆ ರಂಭೆಗೆ ಸನ್ನೆ ಮಾಡಿದಳು. ಆಕೆ ಹೇಳಿದಳು.

**ರಂಭೆ :-** ಈಕೆ ಯಮಧರ್ಮನ ಪುತ್ರಿ, ಸುನೀತೆ. 'ಸರ್ವಲಕ್ಷಣಸಂಪನ್ನೆ' ಎಂದು ಹೆಸರುಗಳಿಸಿದವಳು. ತಪಸ್ವಿಯಾದ ವೇದಜ್ಞನಾದೊಬ್ಬ ವರನನ್ನು ಇವಳು ಈಗ ಅರಸುತ್ತಿದ್ದಾಳೆ.

**ಅಂಗರಾಜ :-** ಹಾಗಾದರೆ ನನ್ನನ್ನೇ ಈಕೆ ವರಿಸಲಿ. ನಾನೂ ಹರಿಯನ್ನು ತಪಸ್ಸಿನಿಂದೊಲಿಸಿ ಸರ್ವಸಿದ್ಧಿಪ್ರದನಾದೊಬ್ಬ ಮಗನನ್ನು ಪಡೆಯುವಂತೆ ವರವನ್ನು ಸಂಪಾದಿಸಿದವ. ಈಗ ಧರ್ಮಿಷ್ಠನಾದೊಬ್ಬ ಯೋಗ್ಯ ತಂದೆಯ ಮಗಳನ್ನು ಮದುವೆಯಾಗಲು ಬಯಸಿದ್ದೇನೆ. ಈಕೆ ನೀನೆನ್ನುವಂತೆ ಧರ್ಮರಾಜನ ಮಗಳೆ ಆಗಿರುವ ಪಕ್ಷದಲ್ಲಿ ನನಗೆ ಇವಳೆ ಯೋಗ್ಯಳು. ಇವಳು ದೊರಕುವಂತಿದ್ದರೆ ಯಾವ ವಸ್ತುವನ್ನೂ ನಾನು ಕೊಡಬಲ್ಲೆ.

**ರಂಭೆ :-** ನೀನು ಬೇರೇನೂ ಕೊಡಬೇಕಾಗಿಲ್ಲ. 'ಇವಳು ನನ್ನ ಧರ್ಮಪತ್ನಿ, ನಾನೀಕೆಯನ್ನೆಂದೂ ಬಿಡುವುದಿಲ್ಲ. ಇವಳ ಗುಣದೋಷಗಳ ವಿಚಾರದ ಗೊಡವೆಗೆ ಹೋಗುವುದಿಲ್ಲ' ಎಂದು ಮಾತುಕೊಡು ಕೈಯಲ್ಲಿಕೈಯಿಟ್ಟು ಆಣೆ ಇಡು.

ಹಾಗೇ ಆಗಲಿ ಎನ್ನುತ್ತ ಆಣೆಯಿಟ್ಟು, ಅಂಗರಾಜ, ರಂಭೆ ಸುನೀಥೆಯನ್ನು ಗಾಂಧರ್ವವಿಧಿಯಿಂದ ಅವನ ಕೈಯಲ್ಲಿ ಒಪ್ಪಿಸಿದಳು. ತೃಪ್ತಿಯಿಂದ ಹೋಗಿ ಬರುವೆನೆಂದು ಹೇಳಿ ಎಲ್ಲ ಸಖಿಯರನ್ನು ಕರೆದುಕೊಂಡು ಹೊರಟುಹೋದಳು.

ಇತ್ತ ನವದಂಪತಿಗಳು ವಿಹಾರ ಮಾಡಿದರು. ಅವರಿಗೆ ಸರ್ವಲಕ್ಷಣ ಸಂಪನ್ನನಾದ ಒಬ್ಬ ಮಗ ಹುಟ್ಟಿದ. ಅವನೆ ವೇನ, ಮಹಾ ತೇಜಸ್ವಿ, ಎಲ್ಲ ವಿದ್ಯೆಗಳಲ್ಲಿಯೂ ನಿಪುಣ, ಆಚಾರಶೀಲ. ಕ್ಷತ್ರಿಯರ ಆಚಾರದಲ್ಲಿ ಅವನಿಗೆ ಹೆಚ್ಚಿನ ಒಲವಿತ್ತು. ಬಲಪರಾಕ್ರಮಗಳಲ್ಲಿ ಇಂದ್ರನನ್ನು ಸರಿತೂಗಿದ್ದನಾತ. ಆಗತಾನೆ ಚಾಕ್ಷುಷ ಮನ್ವಂತರ ಕಳೆದು ವೈವಸ್ವತ ಮನ್ವಂತರ ಪ್ರಾರಂಭವಾಗಿತ್ತು. ಲೋಕ ಅರಾಜಕವಾಗಿತ್ತು. ಯೋಗ್ಯನಾದ ಧರ್ಮಿಷ್ಠರಾಜನೊಬ್ಬ ಬೇಕಾಗಿದ್ದ. ಋಷಿಗಳು ವೇನನನ್ನು ನೋಡಿ ಸಂತೋಷದಿಂದ ಅವನಿಗೇ ಪಟ್ಟಾಭಿಷೇಕ ಮಾಡಿದರು.

ತಾಯಿ ಸುನೀತೆ ಸುಶಂಖನ ಶಾಪವನ್ನು ನೆನೆದು ತನ್ನ ಮಗ ಎಲ್ಲಿ ದಾರಿ ತಪ್ಪುವನೊ ಎಂದು ಭಯಪಡುತ್ತಲೆ ಇದ್ದಳು. ನಿತ್ಯವೂ, ಧರ್ಮ, ಸತ್ಯನಿಷ್ಠೆಗಳ ಬಗ್ಗೆ ಬೋಧನೆ ಮಾಡುತ್ತಲೇ ಇದ್ದಳು.

'ಮಗು, ನಾನು ಧರ್ಮದೇವತೆಯ ಮಗಳು. ನಿನ್ನ ತಂದೆಯೂ ಎಲ್ಲ ಧರ್ಮ ರಹಸ್ಯಗಳನ್ನು ತಿಳಿದವ, ಹಾಗೇ ನೀನೂ ಧರ್ಮದಲ್ಲಿ ಆಸಕ್ತಿ ಇಟ್ಟಿರಬೇಕು. ಅದನ್ನು ಎಂದೂ ಕಡೆಗಣಿಸಕೂಡದು' ಎನ್ನುತ್ತಿದ್ದಳು. ವೇನ ಧರ್ಮದಿಂದಲೆ ರಾಜ್ಯಭಾರ ಮಾಡಿದ. ಪ್ರಜೆಗಳು ಸುಖದಿಂದ ಬಾಳಿದರು.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಭೂಮಿಖಂಡದ*
*ವೇನೋಪಾಖ್ಯಾನದಲ್ಲಿ ಸುನೀತ ಚರಿತ್ರ ಎಂಬ ಹತ್ತನೇಯ ಅಧ್ಯಾಯ ಮುಗಿದುದು.*



## ವೇನನ ಧರ್ಮದ್ರೋಹ, ವೇನನ ಸಂಹಾರ

ಅಧ್ಯಾಯ - ೧೧

**ಋಷಿಯ ಉವಾಚ**

**ಋಷಿಗಳು :-** ಮಹಾತ್ಮನಾದ ವೇನನ ಜನ್ಮಚರಿತ್ರೆ ಹೀಗಿದ್ದರೆ, ಅವನು ಧರ್ಮವನ್ನು ಬಿಟ್ಟು ಅಧರ್ಮವನ್ನು ಹೇಗೆ ಪರಿಗ್ರಹಿಸಿದ ?

**ಸೂತ :-**

**ಜ್ಞಾನ ವಿಜ್ಞಾನ ಸಂಪನ್ನಾ ಮುನಯಸ್ತತ್ವವೇದನಃ ।**
**ಶುಭಾಶುಭಂ ವದಂತ್ಯೇವಂ ತನ್ನ ಸ್ಯಾದಿಹ ಚಾನ್ಯಥಾ ॥**

ಜ್ಞಾನವಿಜ್ಞಾನ ಸಂಪನ್ನರಾದ ತತ್ವಜ್ಞಾನಿಗಳಾದ ಮುನಿಗಳು ಶುಭವನ್ನೆ ನುಡಿಯಲಿ, ಅಶುಭವನ್ನೆ ನುಡಿಯಲಿ, ಅದು ಹಾಗೇ ಆದೀತು; ಸುಳ್ಳಾಗಲಾರದು.

ಸುಶಂಖನೂ ಒಳ್ಳೆಯ ತಪಸ್ವಿ. ಅವನ ಶಾಪ ಹೇಗೆ ಸುಳ್ಳಾದೀತು ? ವೇನನು ಧರ್ಮದಿಂದ ರಾಜ್ಯಪಾಲನೆ ಮಾಡುತ್ತಿದ್ದಂತೆಯೆ ಒಂದು ದಿನ ವಿರಕ್ತನ ವೇಷದಿಂದ ಒಬ್ಬನು ರಾಜಸಭೆಯನ್ನು ಪ್ರವೇಶಿಸಿದ. ಬೆತ್ತಲೆ, ಬೋಳುತಲೆ, ಕಂಕುಳಲ್ಲಿ ನವಿಲುಗರಿಯ ಬರಲು, ಕೈಯಲ್ಲಿ ತೆಂಗಿನ ಕರಟದ ಜಲಪಾತ್ರೆಹೀಗಿತ್ತು ಅವನ ವೇಷ. ಉನ್ನತ ಕಾಯ, ಒಳ್ಳೆಯ ತೇಜಸ್ಸು. ಬಾಯಲ್ಲಿ ಮಾತ್ರ ವೇದಶಾಸ್ತ್ರಗಳ ನಿಂದೆ. ವೇನನು ಅವನನ್ನು ನೋಡಿ ಪ್ರಶ್ನಿಸಿದ.

**ವೇನ :-** ನೀನಾರು ? ಏಕೆ ಬಂದೆ ? ಇದೇನು ನಿನ್ನ ವೇಷ ?

ಸುನೀತೆ ಮಾಡಿದ್ದ ಪಾತಕದ ಸಾಕಾರಮೂರ್ತಿಯಂತಿದ್ದನಾತ. ಅವನೆಂದ.

**ಪಾತಕ :-** ಈ ರೀತಿಯಿಂದ ರಾಜ್ಯಪಾಲನೆ ಮಾಡುತ್ತಿರುವ ನೀನು ನಿಜವಾಗಿಯೂ ಮೂರ್ಖ. ಧರ್ಮವೆಂದರೇನೆಂದೇ ಅರಿಯದವ. ನಾನೇ ಸಾಕ್ಷಾತ್ ಧರ್ಮಸ್ವರೂಪಿ. ದೇವತೆಗಳಿಗೂ ಪೂಜ್ಯ. ಜ್ಞಾನವೂ ನಾನೆ, ಸತ್ಯವೂ ನಾನೆ, ಮೋಕ್ಷವೂ ನಾನೆ. ನಾನು ಸರ್ವದೇವಮಯ, ಜಿನರೂಪಿ, ಯೋಗಿಗಳೆಲ್ಲ ಜ್ಞಾನಕ್ಕಾಗಿ ನನ್ನ ಬಳಿಗೆ ಧಾವಿಸಿ ಬರುತ್ತಾರೆ.

**ವೇನ :-** ನಿನ್ನ ಧರ್ಮ ಯಾವುದು ? ಆಚಾರ, ವಿಚಾರಗಳೇನು ?

**ಪಾತಕ :-** ನನಗೆ ಅರ್ಹಂಥನೆ ದೇವ. ನಿರ್ಗ್ರಂಥನೆ ಗುರು. ದಯೆಯೆ ಧರ್ಮ. ಅದರಿಂದಲೇ ಮೋಕ್ಷ. ವೇದಾಧ್ಯಯನ, ಯಜ್ಞ, ದಾನ, ತಪಸ್ಸು, ಹವ್ಯಕವ್ಯಗಳಾವುವೂ ನನ್ನ ಧರ್ಮದಲ್ಲಿಲ್ಲ, ಕೃಷ್ಣನಿಗೆ ಪೂಜೆಯಿಲ್ಲ. ಕ್ಷಪಣಕರಿಗೆ ಪೂಜೆ, ಅರ್ಹಂಥನ ಧ್ಯಾನ. ಇದು ನನ್ನ ಧರ್ಮ, ಜೈನಮಾರ್ಗ.

**ವೇನ :-** ಹಾಗಾದರೆ ವೇದಧರ್ಮವೆಂಬುದಿಲ್ಲವೆ ? ದಯಾಧರ್ಮದ ಲಕ್ಷಣವಾದರೂ ಏನು ?

**ಪಾತಕ :-** ಈ ಪಾರ್ಥಿವ ಶರೀರ ಆತ್ಮನಿಗೆ ಸ್ವಾಭಾವಿಕವಲ್ಲ. ನಿತ್ಯವೂ ಅಲ್ಲ. ನೀರಗುಳ್ಳೆಯಂತೆ ಅಲ್ಪಕಾಲವಿದ್ದು ಹೊರಟು ಹೋಗುತ್ತದೆ. ಸಾಯುವಾಗ ಆತ್ಮನಲ್ಲಿಗೋ ದೇಹವೆಲ್ಲಿಗೋ ಹೊರಟು ಹೋಗುತ್ತದೆ. ಬಂಧು ಮೋಹದಿಂದ ಮೂರ್ಖರು ಸತ್ತವರಿಗೆ ಶ್ರಾದ್ಧ ತರ್ಪಣಗಳನ್ನು ಮಾಡುತ್ತಾರೆ. ಸತ್ತವರೆಲ್ಲಿರುತ್ತಾರೆ, ಹೇಗೆ ಉಣ್ಣುತ್ತಾರೆ ಏನು ಮಾಡುತ್ತಾರೆ, ನೋಡಿದವರಾರು ?. ಊಟದ ಬ್ರಾಹ್ಮಣರು ಉಂಡು ತೃಪ್ತರಾಗಿ ಹೋಗುತ್ತಾರೆನ್ನುವುದು ಮಾತ್ರ ನಿಜ. ಇವರ ವೇದೋಕ್ತ ಕರ್ಮಗಳೆಲ್ಲವೂ ಅತ್ಯಂತ ಘೋರ, ಕ್ರೂರ, ಒಬ್ಬ ಅತಿಥಿ ಮನೆಗೆ ಬಂದನೆಂದರೆ ಚೆನ್ನಾಗಿ ಬೆಳೆದು ಕೊಬ್ಬಿದ ಬಸವನ ಇಲ್ಲವೆ ಆಡಿನ ಮಾಂಸದ ಅಡುಗೆಯಾಗಬೇಕು. ಅಶ್ವಮೇಧ ಯಾಗವೆಂದರೆ ಕುದುರೆಯ ಬಲಿ. ಗೋಮೇಧವೆಂದರೆ ಬಸವನ ಹತ್ಯೆ ನರಮೇಧದಲ್ಲಿ ಮನುಷ್ಯನ ಕೊಲೆ. ರಾಜಸೂಯದಲ್ಲಿ ಹಲವು ಪ್ರಾಣಿಗಳು ಬಲಿಯಾಗುತ್ತವೆ. ವಾಜಪೇಯದಲ್ಲಿಯೂ ಆಡಿನ ಬಲಿಯಿದೆ. ಗಜಮೇಧದಲ್ಲಿ ಆನೆಯ ಬಲಿ ಇದೆ. ಪುಂಡರೀಕ ಸೌತ್ರಾಮಣಿಗಳಲ್ಲಿಯೂ ಪಶುಬಲಿಯಾಗಬೇಕು. ಏನೊಂದೂ ಅಪರಾಧ ಮಾಡದಿರುವ ಈ ಪ್ರಾಣಿಗಳನ್ನು ಕೊಂದು ಇವರೇನು ಪುಣ್ಯಸಂಪಾದಿಸುವರು?.

**ದಯಾಂ ವಿನಾಹಿಯೋ ಧರ್ಮಃ ಸಧರ್ಮೋ ವಿಫಲಾಯತೇ ।**
**ಜೀವಾನಾಂ ಪಾಲನಂ ಯತ್ರ ತತ್ರಧರ್ಮೋ ನ ಸಂಶಯಃ ॥**

ದಯೆ ಇಲ್ಲದ ಧರ್ಮ ನಿಷ್ಫಲವಾಗುತ್ತದೆ. ಪ್ರಾಣಿಗಳಿಗೆ ರಕ್ಷಣೆ ನೀಡುವ ಧರ್ಮವೆ ನಿಜವಾದ ಧರ್ಮ. ಇದರಲ್ಲಿ ಸಂಶಯವಿಲ್ಲ. ಯಜ್ಞ ಯಾಗಾದಿಗಳಲ್ಲಿ ದಯೆಗೆ ಸ್ಥಾನವಿಲ್ಲವೆಂದ ಮೇಲೆ ಅವೆಲ್ಲ ನಿಷ್ಫಲ.

**ಏತೇ ವೇದಾ ನ ವೇದಾಃ ಸ್ಯುರ್ದಯಾಯತ್ರನ ವಿದ್ಯತೇ ॥**

ದಯೆಯನ್ನು ಬೋಧಿಸದ ವೇದಗಳೂ ವೇದಗಳಲ್ಲ.

**ದಯಾ ದಾನಪರೋ ನಿತ್ಯಂ ಜೀವಮೇವ ಪ್ರರಕ್ಷಯೇತ್ ।**
**ಚಂಡಾಲೋಽಪ್ಯಥ ಶೂದ್ರೋವಾ ಸ ವೈ ಬ್ರಾಹ್ಮಣ ಉಚ್ಯತೇ ॥**

ದಯೆ ದಾನಗಳಲ್ಲಿ ನಿರತನಾಗಿ ಪ್ರಾಣಿಗಳನ್ನು ರಕ್ಷಿಸುವವ ಚಂಡಾಲನೇ ಇರಲಿ, ಶೂದ್ರನಿರಲಿ ಅವನನ್ನೇ ಬ್ರಾಹ್ಮಣನೆನ್ನಬೇಕು.

ಪಶುಬಲಿಯಲ್ಲಿ ಆಸಕ್ತನಾದ ಬ್ರಾಹ್ಮಣನು ನಿರ್ದಯಿ, ಪಾಪಿ, ಕ್ರೂರ, ಅವನು ಮಾಡುವ ದಾನಕ್ಕೆ ಫಲವಿಲ್ಲ. ಜಿನಧರ್ಮವೊಂದೆ ನಿಜವಾದ ಧರ್ಮ. ಪ್ರಾಣಿಗಳಲ್ಲಿ ದಯೆ, ಜಿನನ ಪೂಜೆ ಇವು ಕರ್ತವ್ಯಗಳು.

**ವೇನ :-** ಗಂಗಾದಿ ತೀರ್ಥಗಳು ಬಹು ಪುಣ್ಯದಾಯಕಗಳೆಂದು ಈ ಬ್ರಾಹ್ಮಣರು ಹೇಳುತ್ತಾರೆ. ಇದರ ಬಗ್ಗೆ ನಿನ್ನ ಅಭಿಪ್ರಾಯವೇನು ?

**ಪಾತಕ :-** ಆಕಾಶದಿಂದ ಮೋಡಗಳು ಮಳೆಗರೆದರೆ ಎಲ್ಲೆಡೆ ನೀರು ಹರಿಯುತ್ತದೆ. ಕೆಲವು ಕಡೆ ಮಾತ್ರ ಆ ನೀರು ಪುಣ್ಯದಾಯಕ ತೀರ್ಥವೆಂದೆನಿಸುವುದು ಹೇಗೆ ?

**ಸ್ನಾನೇ ಯದಾ ಮಹತ್ ಪುಣ್ಯಂ, ಕಸ್ಮಾನ್ ಮತ್ಸ್ಯೇಷು ವೈ ನಹಿ?**

ತೀರ್ಥಸ್ನಾನದಿಂದ ಮಹಾಪುಣ್ಯ ದೊರೆಯುವುದಾದರೆ ಮೀನುಗಳಿಗೆ ಏಕೆ ಆ ಪುಣ್ಯವಿಲ್ಲ ?

**ಯತ್ರ ಜನಸ್ತತ್ರ ತೀರ್ಥಂ ತತ್ರ ಧರ್ಮಃ ಸನಾತನಃ ।**
**ತಪೋದಾನಾದಿಕಂ ಸರ್ವಂ ಪುಣ್ಯಂ ತತ್ರ ಪ್ರತಿಷ್ಠಿತಂ ॥**

ಎಲ್ಲಿ ಜನನಿರುವನೋ ಅಲ್ಲಿ ತೀರ್ಥವಿದೆ. ಅಲ್ಲಿ ಸನಾತನಧರ್ಮವಿದೆ. ತಪಸ್ಸು ದಾನ ಮುಂತಾದ ಎಲ್ಲ ಪುಣ್ಯಕರ್ಮಗಳೂ ಅಲ್ಲಿಯೆ ಇವೆ. ಆ ಜನನನ್ನೇ ಧ್ಯಾನಿಸು, ನಿನಗೆ ಸುಖವಾಗುತ್ತದೆ. ಆ ಪಾಪಿ ಹೀಗೆ ವೇದಧರ್ಮವನ್ನು ನಿಂದಿಸಿ ವೇನನಿಗೆ ದುರ್ಬೋಧನೆ ಮಾಡಿದ.

**ಸೂತ ಉವಾಚ**

**ಸೂತ :-** ಈ ದುರ್ಬೋಧನೆಯಿಂದ ವೇನನು ಮೋಸಹೋಗಿ ಅವನ ಕಾಲುಗಳಿಗೆ ಬಿದ್ದ. ಅಂದಿನಿಂದ ಆತ ವೇದಧರ್ಮವನ್ನು ನಿಂದಿಸತೊಡಗಿದ. ಇತರರೂ ವೇದಾಧ್ಯಯನ, ಯಜ್ಞದಾನ, ತಪಸ್ಸುಗಳನ್ನು ಮಾಡದಂತೆ ಕಟ್ಟಪ್ಪಣೆ ಮಾಡಿದ. ಇದರಿಂದ ಲೋಕವೆ ಪಾಪಮಯವಾಯಿತು.

ತಂದೆತಾಯಿಗಳು ವೇನನಿಗೆ ಬಹು ವಿಧದಿಂದ ಬುದ್ಧಿ ಹೇಳಿದರೂ ಪ್ರಯೋಜನವಾಗಲಿಲ್ಲ. ಛಲದಿಂದ ಇನ್ನೂ ಹೆಚ್ಚಿನ ಪಾಪಕರ್ಮಗಳಲ್ಲಿ ಆತ ತೊಡಗಿದ. ಅಂಗರಾಜನಿಗೆ ದಿಗ್ಭ್ರಮೆಯಾಯಿತು. ಮಡದಿ ಸುನೀತೆಯನ್ನು ಕೇಳಿದ.

**ಅಂಗರಾಜ :-** ಇಂಥ ದುಷ್ಪುತ್ರನು ನಿನ್ನ ಹೊಟ್ಟೆಯಲ್ಲಿ ಹೇಗೆ ಹುಟ್ಟಿದ ? ಇದು ಯಾರ ದೋಷ ?

**ಸುನೀತೆ :-** ನಾಥ, ಇದೆಲ್ಲವೂ ನನ್ನ ದೋಷ. ನಾನು ಬಾಲ್ಯದಲ್ಲಿ ತಪಸ್ವಿಯಾದ ಸುಶಂಖನೆಂಬೋರ್ವ ಗಂಧರ್ವ ಕುಮಾರನಲ್ಲಿ ಅಪರಾಧವೆಸಗಿದೆ. ಅವನು ಕೊಟ್ಟ ಶಾಪ ಈಗ ಫಲಿಸಿದೆ.

ಇದನ್ನು ಕೇಳಿ ಅಂಗರಾಜ ವೈರಾಗ್ಯ ತಳೆದು ಸುನೀತೆಯೊಂದಿಗೆ ಕಾಡಿಗೆ ಹೊರಟು ಹೋದ. ಇತ್ತ ವೇನನಿಗೆ ಬುದ್ಧಿ ಹೇಳಲು ಸಪ್ತಋಷಿಗಳು ಪ್ರಯತ್ನಿಸಿದರು.

**ಋಷಿಗಳು :-** ವೇನ, ದುಡುಕಬೇಡ. ನೀನು ಪ್ರಜಾಪಾಲನೆಯ ಹೊಣೆಯನ್ನು ಹೊತ್ತವನು. ಮೂರು ಲೋಕವೂ ನಿನ್ನೊಬ್ಬನನ್ನಾಶ್ರಯಿಸಿದೆ. ಲೋಕದಲ್ಲಿ ನಡೆಯುವ ಧರ್ಮ, ಅಧರ್ಮಗಳೆಲ್ಲಕ್ಕೂ ನೀನು ಹೊಣೆ. ಅಧರ್ಮವನ್ನು ಬಿಡು. ಧರ್ಮವನ್ನಾಶ್ರಯಿಸು. ಧರ್ಮದಿಂದಲೆ ಲೋಕದ ಉಳಿವು.

ವೇನನಿದನ್ನು ಕೇಳಿ ನಕ್ಕು ಬಿಟ್ಟ.

**ವೇನ :- 'ಅಹಮೇವ ಪರೋಧರ್ಮ'** ಶ್ರೇಷ್ಠ ಧರ್ಮವೊಂದಿರುವುದಾದರೆ ಅದು ನಾನೆ. ನಾನೆ ಅರ್ಹಂತ. ನಾನೆ ಲೋಕಗಳಿಗೆ ಧಾರಕ, ಪೋಷಕ. ವೇದಾರ್ಥವೂ ನಾನೆ, ಮಹಾ ಪುಣ್ಯಕರವಾದ ಸನಾತನ ಜೈನ ಧರ್ಮವೂ ನಾನೇ.

**ಮಾಮೇವ ಕರ್ಮಣಾ ವಿಪ್ರಾ ಭಜಧ್ವಂ ಧರ್ಮ ರೂಪಿಣಂ ।**

ಬ್ರಾಹ್ಮಣರೆ, ಧರ್ಮಸ್ವರೂಪಿಯಾದ ನನ್ನನ್ನೇ ನೀವು ಕರ್ಮಾಚರಣೆಯಿಂದ ಸೇವಿಸಿರಿ.

ಋಷಿಗಳು ನಿರಾಶರಾಗದೆ ತಿರುಗಿ ಬೋಧಿಸತೊಡಗಿದರು.

**ಋಷಿಗಳು :-** ರಾಜನ್, ಬ್ರಾಹ್ಮಣರು, ಕ್ಷತ್ರಿಯರು ಮತ್ತು ವೈಶ್ಯರು ಇವರೆಲ್ಲರೂ ದ್ವಿಜರು. ಇವರು ವೇದೋಕ್ತ ಧರ್ಮಗಳನ್ನಾಚರಿಸುವದರಿಂದ ಪ್ರಾಣಿಗಳು ಬದುಕಿವೆ. ನೀನೂ ಬ್ರಹ್ಮನ ವಂಶದಲ್ಲಿ ಜನಿಸಿದವ. ಬ್ರಾಹ್ಮಣ, ಪರಾಕ್ರಮದಿಂದ ರಾಜನೂ ಆಗಿರುವೆ.

**ರಾಜ್ಞಃ ಪುಣ್ಯೇನ ರಾಜೇಂದ್ರ ಸುಖಂ ಜೀವಂತಿ ವೈ ಪ್ರಜಾಃ ।**
**ರಾಜ್ಞಃ ಪಾಪೇನ ನಶ್ಯಂತಿ ತಸ್ಮಾತ್ ಪುಣ್ಯಂ ಸಮಾಚರ ॥**

ರಾಜನ ಪುಣ್ಯದಿಂದ ಪ್ರಜೆಗಳು ಸುಖವಾಗಿ ಬದುಕುತ್ತಾರೆ. ಅವನ ಪಾಪದಿಂದ ನಾಶಹೊಂದುತ್ತಾರೆ. ಪ್ರಜೆಗಳಿಗಾಗಿ ನೀನು ಪುಣ್ಯ ಕರ್ಮಗಳನ್ನಾಚರಿಸಬೇಕು.

ನೀನು ಹಿಂದೆ ಕೃತಯುಗದ ಧರ್ಮವನ್ನಾಚರಿಸುತ್ತಿದ್ದೆ. ಈಗ ನಿನ್ನ ಶಾಸನದಿಂದ ಪ್ರಜೆಗಳು ಕಲಿಯ ಪ್ರವೇಶಕ್ಕೆ ಎಡೆ ಕೊಡುತ್ತಿದ್ದಾರೆ. ಜೈನ ಧರ್ಮವನ್ನು ಪರಿಗ್ರಹಿಸಿ ವೇದಧರ್ಮದ ನಿಂದೆಮಾಡುತ್ತಿದ್ದಾರೆ. ಮಹಾಪಾಪ ಕಟ್ಟಿಕೊಳ್ಳುತ್ತಿದ್ದಾರೆ. ಕಲಿಯುಗದಲ್ಲಿ ಇಂಥ ದಾರುಣ ಪರಿಸ್ಥಿತಿ ಬರುವಾಗ ವಿಷ್ಣು ಕಲ್ಕಿರೂಪದಿಂದ ಅವತರಿಸಿ ಮ್ಲೇಚ್ಛರನ್ನು ನಾಶಪಡಿಸಲಿದ್ದಾನೆ. ಆ ಪರಿಸ್ಥಿತಿಯನ್ನೀಗಲೆ ತರಿಸಬೇಡ. ಕಲಿಯುಗದ ವ್ಯವಹಾರವನ್ನು ಬಿಡು. ಧರ್ಮದಿಂದ ರಾಜ್ಯಭಾರಮಾಡು.

**ವೇನ :-** ನನಗೆ ಎಲ್ಲ ಗೊತ್ತಿದೆ. ನೀವೇನೂ ಹೇಳಬೇಡಿ. ಈಗ ನಾನು ಹೇಳಿದಂತೆ ನೀವು ನಡೆಯದಿದ್ದರೆ ನಿಮ್ಮನ್ನು ದಂಡಿಸಬೇಕಾಗುತ್ತದೆ.

ಋಷಿಗಳ ತಾಳ್ಮೆ ಕೆಟ್ಟಿತು. ಅವರೆಲ್ಲಿ ಕೋಪದಿಂದ ಶಾಪ ಕೊಡುವರೊ ಎಂಬ ಭಯದಿಂದ ವೇನ ಒಂದು ಹುತ್ತದೊಳಗೆ ಅಡಗಿ ಕುಳಿತ. ಋಷಿಗಳು ಹುಡುಕಿ ಕೊನೆಗೆ ಆ ಹುತ್ತದಿಂದ ಅವನನ್ನೆಳೆದು ಹೊರಗೆ ತಂದರು. ಅವನ ಬಲ ತೊಡೆಯನ್ನು ಚೆನ್ನಾಗಿ ಮಥಿಸಿದರು. ಆಗ ಕಪ್ಪಾದ ಭೀಕಾರಕೃತಿಯ ಕುಳ್ಳನೊಬ್ಬ ಜನಿಸಿದ. ಅವನು ಮುಂದೆ ಪಾಪಿಗಳಾದ ಬೇಡರಿಗೂ ಮ್ಲೇಚ್ಛರಿಗೂ ರಾಜನೆನಿಸಿದ. ಋಷಿಗಳು ಬಲತೋಳನ್ನು ಮಥಿಸಿದರು. ಆಗ ಹುಟ್ಟಿದವನೆ ಮಹಾತ್ಮನಾದ ಪೃಥು ಚಕ್ರವರ್ತಿ. ಗೋರೂಪ ಧರಿಸಿದ ಭೂಮಿಯಿಂದ ಹಾಲು ಕರೆದವ. ಅವನ ಪುಣ್ಯ ಪ್ರಭಾವದಿಂದ ವೇನ ಚಕ್ರವರ್ತಿಯಾಗಿ ಮೆರೆದು ವಿಷ್ಣುವಿನ ಅನುಗ್ರಹದಿಂದ ವಿಷ್ಣುಲೋಕವನ್ನೂ ಪಡೆದ.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಭೂಮಿಖಂಡದ*
*ವೇನೋಪಾಖ್ಯಾನದಲ್ಲಿ ವೇನನ ಧರ್ಮದ್ರೋಹ, ವೇನನ ಸಂಹಾರ ಎಂಬ*
*ಹನ್ನೊಂದನೇಯ ಅಧ್ಯಾಯ ಮುಗಿದುದು.*

—o—

**ಋಷಯ ಊಚುಃ**

**ಋಷಿಗಳು :-** ವೇನನು ಅಧರ್ಮವನ್ನು ತೊರೆದು ಸ್ವರ್ಗವನ್ನು ಸಂಪಾದಿಸಿದ ಬಗೆ ಹೇಗೆ ? ಅದನ್ನು ವಿಸ್ತಾರವಾಗಿ ವರ್ಣಿಸು.

**ಸೂತ :-** ಋಷಿಗಳ ಪವಿತ್ರ ಸಂಪರ್ಕದಿಂದ, ಅವರೊಡನೆ ಮಾಡಿದ ಸಂಭಾಷಣೆಯಿಂದ ಮತ್ತು ಶರೀರದ ಮಥನದಿಂದ ವೇನನ ಪಾಪಗಳೆಲ್ಲ ಹೊರಗೆ ಹೊರಟು ಹೋದುವು. ಆತ ಪರಿಶುದ್ಧನಾಗಿ, ಜ್ಞಾನಿಯಾಗಿ, ನರ್ಮದೆಯ ದಕ್ಷಿಣ ತೀರದ ತೃಣಬಿಂದುವಿನ ಆಶ್ರಮದಲ್ಲಿ ನೂರು ವರ್ಷಗಳ ಕಾಲ ತಪಸ್ಸು ಮಾಡಿದ. ಅವನ ತಪಸ್ಸಿಗೊಲಿದ ವಾಸುದೇವ ಮೈದೋರಿ ಬೇಕಾದ ವರವನ್ನು ಕೊಡುವೆನೆಂದ.

**ವೇನ :-** ದೇವ, ನಾನೂ ನನ್ನ ತಂದೆ-ತಾಯಿಗಳೂ ಸಶರೀರವಾಗಿ ನಿನ್ನ ಲೋಕವನ್ನು ಸೇರುವಂತೆ ಅನುಗ್ರಹಿಸು.

**ವಾಸುದೇವ :-** ರಾಜನೆ, ನಿನಗೆ ಮೋಹ ಬರಿಸಿ ನಿನ್ನನ್ನು ತಮಸ್ಸಿನ ದಾರಿಗಳೆದ ಆ ಮಹಾಮೋಹ ಈಗೆಲ್ಲಿ ?.

**ವೇನ :-** ಅದು ನನ್ನ ಪೂರ್ವಾರ್ಜಿತ. ಎಲ್ಲಿಗೆ ಹೋದೀತು ? ಅದು ನನ್ನಿಂದ ಘೋರ ಪಾಪ ಮಾಡಿಸಿತು. ಅದನ್ನು ಪರಿಹಾರ ಮಾಡಬಲ್ಲ ನಿನ್ನ ಒಂದು ಸ್ತೋತ್ರವನ್ನು ನನಗೆ ಉಪದೇಶಿಸು.

**ವಿಷ್ಣು :-** ರಾಜನೇ ನಿನ್ನ ಪಾಪಗಳೆಲ್ಲ ತಪಸ್ಸಿನಿಂದ ತೊಳೆದುಹೋಗಿವೆ. ಆದರೂ ಪುಣ್ಯಕರವಾದ ಒಂದು ಸ್ತೋತ್ರವನ್ನು ನಿನಗೆ ಉಪದೇಶಿಸುತ್ತೇನೆ. ಹಿಂದೆ ಬ್ರಹ್ಮನು ನನ್ನ ನಾಭಿಕಮಲದಲ್ಲಿ ತಪಸ್ಸು ಮಾಡಿದಾಗ ನಾನೊಲಿದು ಮೈದೋರಿದೆ. ಅವನೂ ನಿನ್ನಂತೆ ಒಂದು ಸ್ತೋತ್ರವನ್ನುಪದೇಶಿಸೆಂದು ಬೇಡಿಕೊಂಡ. ಪಠಿಸುವವರಿಗೆ, ಜಪಿಸುವವರಿಗೆ ಎಲ್ಲ ಸೌಖ್ಯವನ್ನೂ ನೀಡಬಲ್ಲ ಆ ವಾಸುದೇವ ಸ್ತೋತ್ರ ಹೀಗಿದೆ -

**ಏತತ್ ಸರ್ವಂ ಜಗದ್ವ್ಯಾಪ್ತಂ ಮಯಾತ್ವವ್ಯಕ್ತಮೂರ್ತಿನಾ**
**ಅತೋ ಮಾಂ ಮುನಯಃ ಪ್ರಾಹುರ್ವಿಷ್ಣುವಿಷ್ಣುಪರಾಯಣಾಃ**

ನಾನು ಅವ್ಯಕ್ತರೂಪದಿಂದ ಈ ಎಲ್ಲ ಜಗತ್ತನ್ನು ವ್ಯಾಪಿಸಿರುವೆನು. ಇದರಿಂದ ವಿಷ್ಣುಭಕ್ತರಾದ ಮುನಿಗಳು ನನ್ನನ್ನು **ವಿಷ್ಣು** ಎಂದೆ ಕರೆಯುವರು.

**ವಸಂತಿ ಯತ್ರ ಭೂತಾನಿ ವಸತ್ಯತೇಷು ಚ ಯೋ ವಿಭುಃ**
**ಸ ವಾಸುದೇವೋ ವಿಜ್ಞೇಯೋ ವಿದ್ವದ್ಭಿರಹಮಾದರಾತ್**

ಎಲ್ಲ ಜೀವಿಗಳೂ ನನ್ನಲ್ಲಿ ವಾಸಿಸುತ್ತವೆ. ಇವುಗಳಲ್ಲಿ ನಾನು ವಾಸಿಸುತ್ತೇನೆ. ಹೀಗೆ ವ್ಯಾಪ್ತನಾದ ನನ್ನನ್ನು ಜ್ಞಾನಿಗಳು ಭಕ್ತಿಯಿಂದ **ವಾಸುದೇವ**ನೆಂದು ಉಪಾಸನೆ ಮಾಡಬೇಕು.

ಪ್ರಳಯ ಕಾಲದಲ್ಲಿ ಎಲ್ಲವನ್ನೂ ಅವ್ಯಕ್ತದೆಡೆಗೆ ಸೆಳೆಯುವುದರಿಂದ ನಾನು **ಸಂಕರ್ಷಣ**ನೆಂದು ತಿಳಿಯಬೇಕು.

ಬಹುರೂಪದಿಂದ ವ್ಯಕ್ತನಾಗುವನೆಂಬ ಇಚ್ಛೆಯಿಂದ ಪ್ರಾಣಿಗಳ ಅಂತರಂಗದಲ್ಲಿ ಕಾಮದ ರೂಪಿನಿಂದ ಇರುವೆನಾದುದರಿಂದ ಪುತ್ರಾರ್ಥಿಗಳು ನನ್ನನ್ನು **ಪ್ರದ್ಯುಮ್ನ**ನೆಂದು ಉಪಾಸನೆ ಮಾಡಬೇಕು, ನಾನು ಯಾರಿಂದಲೂ ನಿಯಂತ್ರಿಸಲಾಗದವನಾದುದರಿಂದ **ಅನಿರುದ್ಧ**ನೆನಿಸಿದೆ. ಜಾಗ್ರದವಸ್ಥೆಯಲ್ಲಿ, ಚಿಂತೆ, ನಾನು, ನನ್ನದು ಎಂಬ ಅಭಿಮಾನ, ಪ್ರಪಂಚದ ಜ್ಞಾನ-ಅಜ್ಞಾನ ಇವೆಲ್ಲಕ್ಕೂ ನಿಯಮಾಕನಾಗಿ **ವಿಶ್ವ**ನೆನಿಸಿದ್ದೇನೆ. ಸ್ವಪ್ನಾವಸ್ಥೆಯಲ್ಲಿ ಜಗತ್ತಿಗೆ ವ್ಯಾಪಾರ, ಜ್ಞಾನ-ಕರ್ಮಗಳನ್ನು ತೋರಿಸುವಲ್ಲಿ ಇಂದ್ರಿಯದಂತಿರುವ ನಾನು **ತೈಜಸನೆ**ನಿಸಿದ್ದೇನೆ. ಸುಷುಪ್ತ್ಯವಸ್ಥೆಯಲ್ಲಿ ನಿಯಮಾಕನೆಂದು ಪ್ರಸಿದ್ಧನಾದ ನಾನು ಲೋಕ ವ್ಯಾಪಾರದಲ್ಲಿ ಉದಾಸೀನನಾಗಿದ್ದೇನೆ. **ಪ್ರಾಜ್ಞ**ನೆನಿಸಿದ್ದೇನೆ. ನಿರ್ಲಿಪ್ತ, ನಿರ್ವಿಕಾರಿಯಾದ ನಾನು ತ್ರಿಗುಣಾತೀತ ಮೋಕ್ಷಾವಸ್ಥೆಯಲ್ಲಿ ಎಲ್ಲ ಚೇತನರಿಗೆ ಬಿಂಬರೂಪದಿಂದ ಸಾಕ್ಷೀರೂಪದಿಂದ, ಇರುವೆನಾದುದರಿಂದ **ತುರೀಯ** ನೆನಿಸಿದ್ದೇನೆ. ಚಿದಾನಂದ ಸ್ವರೂಪನಾಗಿ ಅಂಥ ಚೇತನರಲ್ಲಿದ್ದು ನಿತ್ಯನಾಗಿ ಕ್ಷಯರಹಿತನಾಗಿರುವುದರಿಂದ **ಬ್ರಹ್ಮ**ನೆನಿಸಿದ್ದೇನೆ. ಈ ಸ್ತೋತ್ರವನ್ನುಪದೇಶಿಸಿ ನಾನು ಅಂತರ್ಧಾನ ಹೊಂದಿದೆನು. ಬ್ರಹ್ಮನು ಇದನ್ನುಕೇಳಿ ಕೃತಾರ್ಥನಾದ. ಪೃಥುವಿನ ಜನ್ಮದಿಂದ ನೀನು ಪುನೀತನೆ ಇರುವಿಯಾದರೂ ಈ ಸ್ತೋತ್ರದಿಂದ ನನ್ನನ್ನು ಭಜಿಸು. ಬೇಕಾದ ವರಗಳನ್ನೂ ಪಡೆ.

**ವೇನ :-** ಸದ್ಗತಿ ಪಡೆಯಲು ಇನ್ನೂ ಕೆಲವು ಉಪಾಯಗಳನ್ನು ಉಪದೇಶಿಸು.

**ವಿಷ್ಣು :-** ಹಿಂದೆ ಅಂಗರಾಜನು ನನ್ನನ್ನಾರಾಧಿಸಿ ಉತ್ತಮವಾದ ನನ್ನ ಲೋಕವನ್ನು ಹೊಂದುವಂತೆ ವರ ಪಡೆದಿದ್ದಾನೆ. ನಿನಗೆ ನಾನು ಸದ್ಗತಿಯನ್ನು ಕೊಡುವುದು ನಿಶ್ಚಿತ. ಏಕೆಂದರೆ ನಿನ್ನ ತಾಯಿಗೆ ಸುಶಂಖನು ಶಾಪ ಕೊಟ್ಟಿರುವುದರಿಂದ ನಿನ್ನ ಉದ್ಧಾರಕ್ಕಾಗಿ ನಾನು ನಿನ್ನ ತಂದೆಗೆ ಸುಪುತ್ರನನ್ನು ಪಡೆವಂತೆ ವರವಿತ್ತೆ. ನಿನ್ನ ಶರೀರದಿಂದ ಪೃಥುವಾಗಿ ನಿನ್ನ ಮಗನಾಗಿ ನಾನೆ ಜನಿಸಿದೆ. ಇಂದ್ರನಂತೆ ವೈಭವದಿಂದ ಮೆರೆದೆ. **'ಆತ್ಮಾ ವೈ ಪುತ್ರನಾಮಾಸಿ'** ಎಂದು ಶ್ರುತಿ ಹೇಳುವಂತೆ ಪ್ರತಿಯೊಬ್ಬನಿಗೂ ಮಗನೆಂದರೆ ತನ್ನ ಇನ್ನೊಂದು ರೂಪವೆನಿಸುವುದರಿಂದ ನೀನೆ ಪೃಥುವಿನ ರೂಪದಿಂದ ಸುಪುತ್ರನೆನಿಸಿದೆ. ನಿನಗೆ ದುರ್ಬೋಧನೆ ಮಾಡಲು ಆ ಜೈನಯತಿಯ ರೂಪದಿಂದ ನಾನೆ ಬಂದಿದ್ದೆ. ನಾನು ಹಾಗೆ ಮಾಡದಿರುತ್ತಿದ್ದರೆ ಸುಶಂಖನ ಶಾಪ ಸುಳ್ಳಾಗುತ್ತಿತ್ತು. ಶಾಪ-ವರಗಳೆರಡನ್ನೂ ನಾನೆ ನಡೆಸಿಕೊಡುವವನು. ಕರ್ಮಕ್ಕನುಗುಣವಾಗಿ ಫಲ ನೀಡುವವನು. ಆದುದರಿಂದ ನೀನೂ ಅಶ್ವಮೇಧ ಮುಂತಾದ ಸತ್ಕರ್ಮಗಳನ್ನು ಮಾಡು. ಭೂದಾನ, ಸ್ವರ್ಣದಾನ, ಅನ್ನದಾನ ಮುಂತಾದ ದಾನಗಳನ್ನೂ ಕೊಡು. ನಿನಗೆ ಇಹಪರಗಳೆರಡರಲ್ಲಿಯೂ ಸೌಖ್ಯ ದೊರೆಯುವುದು.

ಯೋಗ್ಯಕಾಲದಲ್ಲಿ ಪವಿತ್ರ ತೀರ್ಥದಲ್ಲಿ ಶ್ರದ್ಧೆಯಿಂದ ನನ್ನನ್ನುದ್ದೇಶಿಸಿ ಸತ್ಪಾತ್ರರಿಗೆ ಯಾರು ದಾನ ಮಾಡುವರೋ ಅವರಿಗೆ ನಾನು ಬಯಸಿದುದನ್ನೆಲ್ಲ ಕೊಡುವೆ.

**ವೇನ :-** ದೇವ, ದಾನ ಮಾಡಲು ಯೋಗ್ಯವಾದ ಕಾಲ, ತೀರ್ಥ, ಪಾತ್ರಗಳಾವುವು ? ದಾನ ಮಾಡುವ ವಿಧಾನ ಹೇಗೆ ಎಂಬುದನ್ನು ವಿಸ್ತಾರವಾಗಿ ಉಪದೇಶಿಸು.

**ವಿಷ್ಣು :- ನಿತ್ಯ, ನೈಮಿತ್ತಿಕ, ಕಾಮ್ಯ, ಅಭ್ಯುದಯಿಕ, ಪ್ರಾಯಿಕ**ವೆಂದು ಹಲವು ಬಗೆಯ ದಾನಗಳುಂಟು. ಅವುಗಳ ವಿಧಾನವನ್ನು ಹೇಳುತ್ತೇನೆ.

ನಿತ್ಯ ದಾನವನ್ನು ಪ್ರಾತಃಕಾಲ, ಮಧ್ಯಾಹ್ನ, ಅಪರಾಹ್ನ ಈ ಮೂರು ಕಾಲಗಳಲ್ಲಿಯೂ ಯಥಾಶಕ್ತಿ ಶ್ರದ್ಧೆಯಿಂದ ಮಾಡಬೇಕು. ಇದಕ್ಕೆ ಫಲವೂ ಅನಂತವಿರುತ್ತದೆ. ಪ್ರಾತಃಕಾಲವೆಂದರೆ ಘೋರವಾದ ಅಂಧಕಾರವನ್ನು ಭೇದಿಸಿ ತೇಜೋನಿಧಿಯಾದ ನನ್ನ ಅಂಶನಾದ ಸೂರ್ಯನುದಯಿಸಿದ ಪುಣ್ಯಕಾಲ. ಅವನ ತೇಜಸ್ಸಿನಿಂದ ಪಾಪಗಳು ಸುಟ್ಟು ಹೋಗುವ ಕಾಲ. ಆಗ ಅವನನ್ನು ನೋಡಿ ನೀರಿನಿಂದಲಾದರೂ ಅರ್ಘ್ಯಪ್ರದಾನ ಮಾಡಿದರೆ ಅದರ ಫಲ ಎಷ್ಟೆಂದು ಹೇಳಲಾಗದು. ಆಗ ಮಾಡುವ ಸ್ನಾನ ದೇವಪಿತೃ ತರ್ಪಣ ಅನ್ನವಸ್ತ್ರಾದಿ ದಾನಗಳಿಗೂ ಅಮಿತ ಪುಣ್ಯಫಲ. ಅವಿಚ್ಛಿನ್ನ ಸುಖಭೋಗ ಭಾಗ್ಯಗಳ ಲಾಭವಿದೆ. ಹೀಗೆ ಮೂರು ಕಾಲಗಳಲ್ಲಿಯೂ ನನ್ನನ್ನು ಸ್ಮರಿಸಿ ದಾನಮಾಡಬೇಕು.

ದಾನ ಮಾಡದೆ ಉಣ್ಣುವವನನ್ನು ಮುಂದೆ ಉಣಲಾಗದಂತೆ ಮಾಡುತ್ತೇನೆ. ಅವನುಣ್ಣುವ ಅನ್ನ ಮಲಕ್ಕೆ ಸಮಾನ. ನಾನಾ ರೋಗಗಳಿಗೆ ಕಾರಣ. ಘೋರ ಪಾಪವನ್ನೂ ಉಂಟುಮಾಡುತ್ತದೆ. ಆ ಪಾಪ ಪರಿಹಾರಕ್ಕೆ ಕಾಯಕ್ಲೇಶದ ಘೋರ ಪ್ರಾಯಶ್ಚಿತವೇ ಬೇಕಾಗುತ್ತದೆ. ಚಮ್ಮಾರನು ಚರ್ಮವನ್ನು ಕಷಾಯದಲ್ಲಿ ಬೇಯಿಸಿ ಶೋಧಿಸುವಂತೆ ನಾನೂ ಆ ಪಾಪಿಯನ್ನು ವೈದ್ಯರೂಪದಿಂದ ಔಷಧಿ ಪ್ರಯೋಗ, ಕಷಾಯ, ಕಟುದ್ರವ್ಯ, ಉಷ್ಣೋದಕ, ಶಾಖ ಮುಂತಾದವುಗಳ ಮೂಲಕ ಶೋಧಿಸುತ್ತೇನೆ. ಅಮಾವಾಸ್ಯೆ, ಹುಣ್ಣಿಮೆ, ಸಂಕ್ರಮಣ, ವ್ಯತೀಪಾತ, ವೈಧೃತಿ, ಏಕಾದಶಿ, ಮಾಘ-ಆಷಾಢ-ವೈಶಾಖ-ಕಾರ್ತೀಕಗಳ ಹುಣ್ಣಿಮೆ, ಸೋಮವತಿ ಅಮಾವಾಸ್ಯೆ, ಮನ್ವಾದಿ, ಯುಗಾದಿ ತಿಥಿಗಳು, ಅಶ್ವಿನಿ ಕೃಷ್ಣ ತ್ರಯೋದಶಿ, ಪಿತೃಗಳ ಕ್ಷಿಯಾಹ ತಿಥಿ ಇವು ನೈಮಿತ್ತಿಕ ದಾನದ ಕಾಲಗಳು. ಆಗ ಭಕ್ತಿಯಿಂದ ನನ್ನನ್ನುದ್ದೇಶಿಸಿ ವಿಪ್ರರಿಗೆ ದಾನ ಮಾಡಿದರೆ ಐಹಿಕ ಸುಖವನ್ನೂ ಸ್ವರ್ಗಮೋಕ್ಷಗಳನ್ನೂ ಕೊಡುತ್ತೇನೆ.

ಬೇರೆ ದೇವತೆಗಳನ್ನುದ್ದೇಶಿಸಿ ವ್ರತಗಳನ್ನಾಚರಿಸುವ ಕಾಲದಲ್ಲಿ ಕೊಡುವ ದಾನವೆ **ಕಾಮ್ಯದಾನ.**

ವಿವಾಹ, ಜಾತಕರ್ಮ, ಉಪನಯನಾದಿ ಶುಭಕರ್ಮಗಳು, ಮನೆಕಟ್ಟಸುವುದು. ಕೆರೆ-ಬಾವಿತೋಡುವುದು ಮೊದಲಾದ ಸಂದರ್ಭಗಳಲ್ಲಿ ಮಾಡುವ ದಾನವು **ಅಭ್ಯುದಯಿಕ.** ಇದು ಸರ್ವಸಿದ್ಧಿಪ್ರದ.

ಮರಣಕಾಲ ಸಮೀಪಿಸಿದಾಗ ಯಮಲೋಕ ಪ್ರಯಾಣದಲ್ಲಿ ಸುಖ ದೊರೆಯಲು ನೀಡುವ ದಾನವೆ **ಪ್ರಾಯಿಕದಾನ.** ಇವೆಲ್ಲವೂ ದಾನಕ್ಕೆಯೋಗ್ಯ ಕಾಲಗಳು.

ತೀರ್ಥವೆಂದರೆ ಗಂಗಾ, ಸರಸ್ವತಿ, ನರ್ಮದಾ, ಯಮುನಾ, ತಪತೀ, ಸರಯೂ, ಘರ್ಘರಾ, ವೇಣಾ, ಕಾವೇರಿ, ಕಪಿಲಾ. ಗೋದಾವರೀ, ತುಂಗಭದ್ರಾ, **ಚರ್ಮಣ್ವತೀ,** ಭೀಮರಥೀ. ವೇದಿಕಾ ಕೃಷ್ಣಗಂಗಾ ಮೊದಲಾದ ಮಹಾನದಿಗಳು. ಇವು ಗ್ರಾಮದಲ್ಲಿ ಹರಿದರೂ ತೀರ್ಥವೆ, ಅರಣ್ಯದಲ್ಲಿ ಹರಿದರೂ ತೀರ್ಥವೆ. ಇವುಗಳ ಹೆಸರು ತಿಳಿಯದಿದ್ದಾಗ ವಿಷ್ಣುತೀರ್ಥವೆಂದೆ ಕರೆಯಬೇಕು. ಎಲ್ಲ ತೀರ್ಥಗಳ ದೇವತೆ ನಾನೆ. ಆದುದರಿಂದ ನನ್ನ ಹೆಸರಿನಿಂದ ಅವುಗಳ ನಾಮೋಚ್ಚಾರಣ ಮಾಡಿ ಸ್ನಾನ-ದಾನಗಳನ್ನು

ಮಾಡಿದರೆ ಪುಣ್ಯ ಅಕ್ಷಯ ಫಲವಿದೆ. ಸಪ್ತ ಸಾಗರಗಳೂ, ಮಾನಸ ಮುಂತಾದ ಸರೋವರಗಳೂ, ಬೆಟ್ಟದ ಝರಿಗಳೂ, ಕೊಳಗಳೂ, ಬಾವಿಯೊಂದನ್ನು ಹೊರತು ಎಲ್ಲ ಜಲಾಶಯಗಳೂ ತೀರ್ಥಗಳೆ. ಮೇರು ಮುಂತಾದ ಪರ್ವತಗಳು, ಯಜ್ಞಶಾಲೆ, ಶ್ರಾದ್ಧ ಭೂಮಿ, ದೇವಾಲಯ, ವೇದಾಧ್ಯಯನ, ಪುರಾಣಪಠನಗಳ ಸ್ಥಳ, ಗೋಶಾಲೆ, ಸೋಮಯಾಜಿಯ ಮನೆ, ಅಶ್ವತ್ಥವೃಕ್ಷ, ಬ್ರಹ್ಮವೃಕ್ಷ, ವಟವೃಕ್ಷಗಳಿರುವ ಸ್ಥಳ, ತಂದೆ-ತಾಯಿಗಳು ಗುರು-ಹಿರಿಯರು, ಪತಿವ್ರತಯಾದ ಮಡದಿ. ಸತ್ಪುತ್ರ ಇವು ಎಲ್ಲವೂ ಪವಿತ್ರ ತೀರ್ಥಗಳೆ.

ದಾನಕ್ಕೆ ಸತ್ಪಾತ್ರನೆಂದರೆ ಸತ್ಕುಲ ಪ್ರಸೂತನೂ, ವೇದಾಧ್ಯಯನ, ಶಮ, ದಮ, ದಯೆ, ಪ್ರಜ್ಞೆ, ಜ್ಞಾನ, ಸತ್ಯನಿಷ್ಠೆ, ತಪಸ್ಸು, ವಿಷ್ಣುಭಕ್ತಿಗಳುಳ್ಳವನೂ, ನಾಸ್ತಿಕರ ಸಂಗದಿಂದ ದೂರವಿರುವವನೂ ಆದ ಬ್ರಾಹ್ಮಣನಾಗಿರಬೇಕು. ಈ ಗುಣಗಳಿಂದ ಕೂಡಿದ ಸೋದರಿಯ ಮಗ, ಮಗಳ ಮಗ, ಅಳಿಯ, ಗುರು, ಯಜ್ಞದೀಕ್ಷಿತನಾದ ದ್ವಿಜ, ಇವರೆಲ್ಲರೂ ಸತ್ಪಾತ್ರರು. ವೇದೋಕ್ತ ಸದಾಚಾರ ಉಳ್ಳವನು ಮಾತ್ರ **ಪಾತ್ರ**ನೆನಿಸುವನು.

ಜೂಜಾಡುವವನು ಕುರುಡ, ಕಪ್ಪು ನೀಲ ಅಥವ ಕಪಿಲವರ್ಣದವನು, ಏಡಿಯಂಥ ಕಣ್ಣಿನವನು, ಕಪ್ಪು, ನೀಲ, ಹಳದಿ ಹಲ್ಲಿನವನು, ಅಂಗವಿಕಲನು, ಅಧಿಕ ಅಂಗಉಳ್ಳವನು, ಕುಷ್ಠರೋಗಿ. ಉಗುರು-ಚರ್ಮಗಳಲ್ಲಿ ದೋಷ ಉಳ್ಳವನು. ಬಟ್ಟು ತಲೆಯವನು, ಕುಲಟೆಯಾದ ಹೆಂಡತಿ ಉಳ್ಳವನು, ಸ್ತ್ರೀಗೆವಶನಾದವನು, ವ್ಯಾಧಿಯಿಂದ ಬಳಲುವವನು, ಸೂತಕಾನ್ನವನ್ನು ತಿನ್ನುವವನು, ಕಳವುಮಾಡುವವನು ಎಷ್ಟು ದೊರೆತರೂ ತೃಪ್ತಿ ಇಲ್ಲದವನು, ಮದದಿಂದ ಕೊಬ್ಬಿದವನು, ಕಪಟಿ, ವೇದಶಾಸ್ತ್ರವನ್ನರಿತೂ ಸದಾಚಾರಮಾಡದವನೂ, ಇವರೆಲ್ಲರೂ ಅಪಾತ್ರರೆನಿಸುವರು. ಕಾಲ, ತೀರ್ಥ, ಪಾತ್ರಗಳಷ್ಟೇ ಪ್ರಮುಖವಾದುದು ಶ್ರದ್ಧೆ.

**ನಾಸ್ತಿಶ್ರದ್ಧಾಸಮಂ ಪುಣ್ಯಂ ನಾಸ್ತಿಶ್ರದ್ಧಾಸಮಂ ಸುಖಂ ।**
**ನಾಸ್ತಿಶ್ರದ್ಧಾ ಸಮಂ ತೀರ್ಥಂ ಸಂಸಾರೇ ಪ್ರಾಣಿನಾಂ ನೃಪ ॥**

ರಾಜನೆ, ಶ್ರದ್ಧೆಗೆ ಸಮನಾದ ಪುಣ್ಯಕರ, ಸುಖಕರ, ಪವಿತ್ರಸಾಧನ ಜೀವಿಗಳಿಗೆ ಪ್ರಪಂಚದಲ್ಲಿ ಬೇರೊಂದಿಲ್ಲ.

ಶ್ರದ್ಧೆಯಿಂದ ನನ್ನನ್ನು ಸ್ಮರಿಸಿ ಸತ್ಪಾತ್ರನಿಗೆ ಅಲ್ಪದಾನ ಮಾಡಿದರೂ ಅದರ ಫಲಕ್ಕೆ ಮಿತಿ ಎಂಬುದಿಲ್ಲ. ನನ್ನನುಗ್ರಹದಿಂದ ಉತ್ತಮ ಸುಖವೇ ಲಭಿಸುತ್ತದೆ.

**ವೇನ ಉವಾಚ**

**ವೇನ** :- ದೇವ, ನಿತ್ಯದಾನದ ಫಲವನ್ನು ಹೇಳಿರುವೆ. ನೈಮಿತ್ತಿಕ ಮುಂತಾದ ದಾನಗಳ ಫಲವೇನು ? ದಾನದ ಮಹಿಮೆಯನ್ನು ಕೇಳಿದಷ್ಟೂ ತೃಪ್ತಿಯಾಗುತ್ತಿಲ್ಲ. ಕೇಳಬೇಕೆಂಬ ಶ್ರದ್ಧೆ ಹೆಚ್ಚುತ್ತಿದೆ.

**ವಿಷ್ಣು** :- ರಾಜನ್, ಪರ್ವಕಾಲಗಳಲ್ಲಿ ಶ್ರದ್ಧೆಯಿಂದ ಸತ್ಪಾತ್ರರಿಗೆ ಆನೆ, ಕುದುರೆ, ರಥಗಳನ್ನು ದಾನಮಾಡಿದರೆ ಒಂದು ಪುಣ್ಯದೇಶದ ಬಲಶಾಲಿ ರಾಜನಾಗಿ ಹುಟ್ಟುತ್ತಾನೆ. ಭೂದಾನ, ಗೋದಾನಗಳನ್ನು ಮಾಡಿದರೆ ಎಲ್ಲ ವಿಧದ ಭೋಗಗಳನ್ನು ಪಡೆಯುತ್ತಾನೆ.

ಗುಪ್ತದಾನ ಮಾಡಿದರೆ ನಿಧಿ ದೊರಕುತ್ತದೆ. ಬೆಲೆ ಬಾಳುವ ಬಟ್ಟೆಬರೆ, ಚಿನ್ನದಾಭರಣಗಳನ್ನಿತ್ತರೆ ಸುಖ, ಐಶ್ವರ್ಯ, ಪುಣ್ಯಗಳು ಲಭಿಸುತ್ತವೆ. ಸತ್ಪುತ್ರರು ಹುಟ್ಟಿ ವೇದಪಾರಂಗತರಾಗಿ ತತ್ವಜ್ಞಾನ, ಯಶಸ್ಸು ದೀರ್ಘಾಯುಸ್ಸು, ಪುತ್ರಸಂತತಿಗಳನ್ನು ಪಡೆಯುತ್ತಾರೆ.

ಕಪಿಲೆಯನ್ನು ದಾನಮಾಡಿದರೆ ಬ್ರಹ್ಮ ಕೊಟ್ಟ ಆಯುಸ್ಸು ತೀರುವವರೆಗೂ ಸರ್ವ ಸೌಖ್ಯಾನುಭವ. ಅಲಂಕೃತ ಗೋದಾನದಿಂದ ಅಪಾರ ಸಂಪತ್ತು, ಸಮಸ್ತ ವಿದ್ಯೆಗಳು ಕರಗತವಾಗುವುವು. ವಿಷ್ಣು ಭಕ್ತಿ ಹೆಚ್ಚುವುದು. ವಿಷ್ಣುಲೋಕ ದೊರೆಯುವುದು. ಅನ್ನ-ವಸ್ತ್ರ-ಭೂಮಿದಾನಗಳನ್ನು ಕೊಟ್ಟರೆ ವಿಷ್ಣುವಿನಂತೆ ಪರಾಕ್ರಮಿಯಾಗಿ ವೈಕುಂಠದಲ್ಲಿ ನಲಿಯುತ್ತಾನೆ. ಚಿನ್ನ, ಬಟ್ಟೆಗಳನ್ನಿತ್ತರೆ ಅಗ್ನಿಯಂತೆ ಹೊಳೆಯುತ್ತ ವೈಕುಂಠದಲ್ಲಿ ನಲಿಯುತ್ತಾನೆ. ಬಂಗಾರದ ಕೊಡದಲ್ಲಿ ತುಪ್ಪ ತುಂಬಿಸಿ ಬೆಳ್ಳಿಯ ಮುಚ್ಚಳದಿಂದ ಮುಚ್ಚಿ ವಸ್ತ್ರ, ಹಾರ ಯಜ್ಞೋಪವೀತ ಹೂಮಾಲೆಗಳಿಂದ ಸಿಂಗರಿಸಿ ವೇದಮಂತ್ರಗಳಿಂದ ಷೋಡಶೋಪಚಾರಗಳನ್ನರ್ಪಿಸಿ ದಾನಮಾಡಬೇಕು. ಹೀಗೆ ಅಲಂಕೃತ ಷೋಡಶ ಗೋದಾನ, ಅಲಂಕೃತ ದ್ವಾದಶ ಗೋದಾನ, ಅಲಂಕೃತ ಚತುರ್ಗೋದಾನ ಮುಂತಾದ ಅನೇಕ ದಾನಗಳಿವೆ. ಎಲ್ಲವೂ ಅನಂತ ಪುಣ್ಯಫಲದಾಯಕಗಳು. ಇವೆಲ್ಲವೂ ನೈಮಿತ್ತಿಕ ದಾನಗಳು.

ಕಾಮ್ಯದಾನಗಳನ್ನು ಭಕ್ತಿಯಿಂದ ನನ್ನನ್ನುದ್ದೇಶಿಸಿ ಕೊಟ್ಟರೆ ಕಾಮನೆಗೆ ಅನುಗುಣವಾದ ಫಲ ಸಿಗುತ್ತದೆ. ಅಭ್ಯುದಯಿಕ ದಾನಗಳಿಂದ ಇಹ-ಪರಗಳಲ್ಲಿ ಸುಖ-ಭೋಗ, ದಾತೃ ತನ್ನ ಕುಲವನ್ನು ಸಾವಿರ ಕಲ್ಪಗಳ ಕಾಲ ಸ್ವರ್ಗದಲ್ಲಿರಿಸಬಲ್ಲ. ಪ್ರಾಯಿಕ ದಾನಗಳನ್ನು ಮರಣೋನ್ಮುಖನು ತಾನೆ ಕೊಡಬೇಕು. ಮನುಷ್ಯ ಸಾಯುವಾಗ ಮಡದಿಮಕ್ಕಳೂ ಇಷ್ಟಮಿತ್ರರೂ ತನ್ನ ಅನಂತರ ಹೇಗೆ ಬಾಳುವರೊ ಎಂಬ ಚಿಂತೆಯಿಂದ ದಾನಮಾಡದೆ ಸಾಯುತ್ತಾನೆ. ಬಂಧುಗಳು ಆಗ ಅಳುತ್ತಾರೆ. ಎಲ್ಲ ವಿಧದ ದಾನಗಳನ್ನು ಮೃತನ ಆತ್ಮದ ಶಾಂತಿಗಾಗಿ ಕೊಡಲು ಸಂಕಲ್ಪಿಸುತ್ತಾರೆ. ಬಳಿಕ ಲೋಭದಿಂದ ಮರೆತು ಬಿಡುತ್ತಾರೆ. ಇತ್ತ ಮೃತನು ಯಮಲೋಕಕ್ಕೆ ಪ್ರಯಾಣ ಮಾಡುವಾಗ ದಾರಿಯಲ್ಲಿ ಹಸಿವು ಬಾಯಾರಿಕೆಗಳಿಂದ ನಾನಾವಿಧದ ಪೀಡೆಗಳಿಂದ ದುಃಖ ಅನುಭವಿಸುತ್ತಾನೆ. ಆದ್ದರಿಂದ ತಾನೆ ಸಾಯುವ ಮುನ್ನ ದಾನ ಮಾಡಬೇಕು. ಸತ್ತಮೇಲೆ ಯಾರು ಮಕ್ಕಳು ? ಯಾರು ಬಂಧುಗಳು ? ಬದುಕಿರುವಾಗಲೆ ಅನ್ನ, ಪಾನ, ತಾಂಬೂಲ, ಸುವರ್ಣ, ಗೋ, ಭೂಮಿ, ಜಲಪಾತ್ರ, ವಾಹನ, ಪಾದರಕ್ಷೆ ಮುಂತಾದವನ್ನು ದಾನ ಕೊಟ್ಟಿದ್ದರೆ ಸತ್ತಮೇಲೆ ಯಮನ ಬಳಿಗೆ ಸುಖ ಪ್ರಯಾಣ ಮಾಡಲು ಸಾಧ್ಯ.

*ಇತಿ ಪದ್ಮ ಮಹಾಪುರಾಣ ಭಾಗ-೨ರ ಭೂಮಿಖಂಡದ ವೇನೋಪಾಖ್ಯಾನದಲ್ಲಿ ವಿಷ್ಣು ಮತ್ತು ವೇನನ ಸಂವಾದ, ದಾನದ ಫಲ ಎಂಬ ಹನ್ನೆರಡನೆಯ ಅಧ್ಯಾಯ ಮುಗಿದುದು*

—o—

**ವೇನ ಉವಾಚ**

**ವೇನ** :- ಹೆಂಡತಿ, ಮಕ್ಕಳು, ತಾಯಿ-ತಂದೆಗಳು, ಗುರು, ಹಿರಿಯರು ಹೇಗೆ ತೀರ್ಥರೆನಿಸುವರು ? ಇದನ್ನು ವಿಸ್ತಾರವಾಗಿ ಹೇಳು.

**ವಿಷ್ಣು** :- ರಾಜನ್, ಕೇಳು. ಹಿಂದೆ ವಾರಾಣಸಿಯಲ್ಲಿ ಕೃಕಲನೆಂಬೊಬ್ಬ ವೈಶ್ಯನಿದ್ದ. ಅವನ ಮಡದಿ ಸುಕಲೆ ಮಹಾ ಪತಿವ್ರತೆ. ಅವನೂ ಒಳ್ಳೆಯ ಜ್ಞಾನಿ. ವೇದ ಪುರಾಣಗಳ ರಹಸ್ಯವನ್ನು ಸದಾ ಶ್ರವಣ ಮಾಡುತ್ತಿದ್ದ. ಒಮ್ಮೆ ಬ್ರಾಹ್ಮಣರೂ ವೈಶ್ಯರೂ ಸೇರಿ ಅನೇಕ ಮಂದಿ ತೀರ್ಥಯಾತ್ರೆಗೆ ಹೊರಟರು. ಕೃಕಲನೂ ಆ ಗುಂಪಿನಲ್ಲಿ ಸೇರಬೇಕೆಂದು ಬಯಸಿದ. ಸುಕಲೆ ತಾನೂ ಬರುವೆನೆಂದಳು.

**ಸುಕಲೆ** :- ಪ್ರಿಯ, ನಾನು ನಿನ್ನ ಧರ್ಮಪತ್ನಿ. ನೀನು ಮಾಡುವ ಎಲ್ಲ ಪುಣ್ಯಕರ್ಮಗಳಲ್ಲಿಯೂ ಜೊತೆಯಾಗಿರಬೇಕಾದವಳು. ಪತಿಯೆ ದೈವವೆಂದು ನಂಬಿದವಳು. ನಿನ್ನ ಜೊತೆಗೇ ಬರುವೆ, ನೆರಳಿನಂತೆ ಹಿಂಬಾಲಿಸುವೆ. ಸ್ತ್ರೀಯರಿಗೆ ಪಾತಿವ್ರತ್ಯ ಒಂದೇ ಪಾಪಹರವಾದ ಸದ್ಗತಿದಾಯಕವಾದಧರ್ಮ. ಅದೊಂದರಿಂದಲೆ ಅವರು ಲೋಕದಲ್ಲಿ ಈ ಪುಣ್ಯವತಿಯರೆನಿಸುವರು.

**ಯುವತೀನಾಂ ಪೃಥಕ ತೀರ್ಥಂ ವಿನಾ ಭರ್ತುರ್ದ್ವಿಜೋತ್ತಮ ।**
**ಸುಖದಂ ನಾಸ್ತಿ ವೈಲೋಕೇ ಸ್ವರ್ಗಮೋಕ್ಷ ಪ್ರದಾಯಕಂ ॥**

ಯುವತಿಯರಿಗೆ ಪತಿಯ ಹೊರತು ಸುಖ, ಸ್ವರ್ಗ, ಮೋಕ್ಷಗಳನ್ನು ಕೊಡಬಲ್ಲ ತೀರ್ಥ ಲೋಕದಲ್ಲಿ ಬೇರೊಂದಿಲ್ಲ.

**ಸವ್ಯಂ ಪಾದಂ ಸ್ವಭರ್ತುಶ್ಚ ಪ್ರಯಾಗಂ ವಿದ್ಧಿ ಸತ್ತಮ ।**
**ವಾಮಂ ಚ ಪುಷ್ಕರಂ ತಸ್ಯಯಾ ನಾರೀ ಪರಿಕಲ್ಪಯೇತ್ ॥**

ಪತಿವ್ರತೆಯಾದವಳಿಗೆ ಪತಿಯ ಬಲಪಾದವೆ ಪ್ರಯಾಗ, ಎಡಪಾದವೆ ಪುಷ್ಕರವೆಂದು ತಿಳಿ.

**ತಸ್ಯ ಪಾದೋದಕ ಸ್ನಾನಾತ್ ತತ್ಪುಣ್ಯಂ ಪರಿಜಾಯತೇ ।**
**ಪ್ರಯಾಗ ಪುಷ್ಕರಸಮಂಸ್ನಾನಂ ಸ್ತ್ರೀಣಾಂನಸಂಶಯಃ ॥**

ಸ್ತ್ರೀಯರಿಗೆ ಪತಿಯು ಪಾದೋದಕದ ಸ್ನಾನ ಪ್ರಯಾಗ ಪುಷ್ಕರ ಸಮಾನವಾಗಿದ್ದು ಅದರಿಂದ ಆ ಪುಣ್ಯ ಲಭಿಸುತ್ತದೆ. ಸಂಶಯವಿಲ್ಲ.

**ಸರ್ವತೀರ್ಥ ಮಯೋ ಭರ್ತ್ತಾ ಸರ್ವಧರ್ಮಮಯಃ ಪತಿಃ ।**
**ಮಖಾನಾಂ ಯಜುನಾತ್ ಪುಣ್ಯಂ ಯದ್ವೈಭವತಿ ದೀಕ್ಷಿತೇ ।**
**ತತ್ಪುಣ್ಯಂ ಸಮವಾಪ್ನೋತಿ ಸೇವಯಾ ಭರ್ತುರೇವ ಹಿ ॥**

ಪತಿಯು ಸರ್ವತೀರ್ಥಮಯನೂ ಸರ್ವಧರ್ಮಮಯನೂ ಹೌದು. ಯಾಗಗಳನ್ನು ಮಾಡುವದರಿಂದ ದೀಕ್ಷಿತನಿಗೆ ಯಾವ ಪುಣ್ಯಲಭಿಸುತ್ತದೋ ಆ ಪುಣ್ಯವನ್ನು ಪತಿ ಸೇವೆಯಿಂದಲೆ ಪಡೆಯಬಹುದು.

**ಗಯಾದೀನಾಂ ಸುತೀರ್ಥಾನಾಂ ಯಾತ್ರಾಂ ಕೃತ್ವಾ ಹಿಯದ್‌ಭವೇತ್।**
**ತತ್‌ಫಲಂ ಸಮವಾಪ್ನೋತಿ ಭರ್ತುಃ ಶುಶ್ರೂಷಣಾದಪಿ ॥**

ಗಯೆ ಮುಂತಾದ ಪುಣ್ಯ ತೀರ್ಥಗಳ ಯಾತ್ರೆಮಾಡಿದರೆ ಯಾವ ಪುಣ್ಯ ಉಂಟಾಗುವುದೋ ಅದನ್ನು ಪತಿಸೇವೆಯಿಂದಲೂ ಪಡೆಯಬಹುದು.

**ಸಮಾಸೇನ ಪ್ರವಕ್ಷ್ಯಾಮಿ ತನ್ಮೇ ನಿಗದತಃ ಶೃಣು ।**
**ನಾಸ್ತ್ಯಸ್ಯಾಹಿ ಪೃಥಗ್ ಧರ್ಮಃ ಪತಿ ಶುಶ್ರೂಷಣಂ ವಿನಾ ॥**

ಪತಿಶುಶ್ರೂಷೆ ಹೊರತು ಸ್ತ್ರೀಗೆ ಬೇರೆ ಧರ್ಮವಿಲ್ಲ.

ಆದುದರಿಂದ ನಾನು ನಿನ್ನ ಜೊತೆಗೆ ಬರುವೆ ನಿನಗೆ ಸಹಾಯಕಳಾಗಿದ್ದು ಸುಖನೀಡುವೆ.

**ವಿಷ್ಣು:-** ಕೃಕಲನು ಯೋಚಿಸತೊಡಗಿದ. ''ಈಕೆಯನ್ನು ನನ್ನ ಜೊತೆಯಲ್ಲಿ ಗುಡ್ಡಬೆಟ್ಟಗಳ ದಾರಿಯಲ್ಲಿ ನಡೆಸಿದರೆ, ತಾವರೆಯಂತೆ ಮೃದುವಾದ ಇವಳ ಶರೀರಕ್ಕೆ ನೋವಾದೀತು. ಇವಳ ಕೋಮಲ ರೂಪ, ಸೌಂದರ್ಯ ಮಳೆಬಿಸಿಲುಗಳ ಆಘಾತಗಳನ್ನು ತಡೆದುಕೊಳ್ಳಲಾರದು. ಬಣ್ಣ ಕಪ್ಪಾದೀತು. ಕಲ್ಲು ದಾರಿಯನ್ನು ತುಳಿವಾಗ ಕಾಲು ನೋಯಬಹುದು. ತಡೆಯಲಾರದಂಥ ಹಸಿವು ಬಾಯಾರಿಕೆ ಉಂಟಾದೀತು. ಇವನ್ನೆಲ್ಲ ಈಕೆ ಸಹಿಸಿಕೊಳ್ಳಲಾರಳು. ನನ್ನ ಪ್ರಾಣದಂತಿರುವ ಅರ್ಧಾಂಗಿ, ನನಗೆ, ನನ್ನ ಧರ್ಮಾಚರಣೆಗೆ ಸದಾ ಆಸರೆಯಾಗಿರುವವಳು. ಇವಳೇನಾದರೂ ಯಾತ್ರೆಯಲ್ಲಿ ಬಳಲಿ ಬೆಂಡಾಗಿ ಹೋದರೆ, ಸತ್ತರೆ ನಾನುಳಿಯಲಾರೆ. ಆದುದರಿಂದ ನನ್ನ ಈ ಪ್ರಾಣೇಶ್ವರಿಯನ್ನು ಎಷ್ಟು ಮಾತ್ರಕ್ಕೂ ಜೊತೆಯಲ್ಲಿ ಕರೆದೊಯ್ಯಲಾರೆ. ನಾನೊಬ್ಬನೆ ಹೋಗುವೆ.''

ಪತಿಯು ದೀರ್ಘವಾಗಿ ಯೋಚಿಸುವುದನ್ನು ಕಂಡಾಗ ಸುಕಲೆಗೆ ಅವನ ಅಭಿಪ್ರಾಯ ತಿಳಿದುಹೋಯಿತು. ತಿರುಗಿ ಹೇಳಿದಳು.

**ಸುಕಲೆ :-** ನನ್ನನ್ನು ಬಿಟ್ಟು ಹೋಗಬೇಡ. ನಿನ್ನ ಧರ್ಮಾಚರಣೆಯೊಂದೂ ನಾನಿಲ್ಲದೆ ಪೂರ್ಣವೆನಿಸದು. ನನ್ನನ್ನೂ ಕರೆದೊಯ್ಯು.

ಕೃಕಲನು ಜೋರಾಗಿ ನಕ್ಕು ಹೇಳತೊಡಗಿದ.

**ಕೃಕಲ :-** ಪ್ರಿಯೆ, ಏಕಿಷ್ಟು ದುಗುಡ ? ಧರ್ಮಪತ್ನಿಯನ್ನು ಯಾರಾದರೂ ಬಿಟ್ಟು ಹೋಗುವುದುಂಟೆ ? ಹಾಗೆ ಮಾಡಿದರೆ ಧರ್ಮವನ್ನೆ ಬಿಟ್ಟಂತೆ. ನಿನ್ನನ್ನು ಬಿಟ್ಟು ಎಲ್ಲಿಗೂ ಹೋಗಲಾರೆ. ಹೀಗೆ ಬಾರಿಬಾರಿಗೂ ಹೇಳುತ್ತ ಒಂದು ದಿನ ಅವಳು ತಿಳಿಯದಂತೆ ಯಾತ್ರಿಕರ ಗುಂಪಿನೊಂದಿಗೆ ಹೊರಟು ಹೋದ ಕೃಕಲ. ಇತ್ತ ದೇವರಪೂಜೆಯ ಕಾಲದಲ್ಲಿಯೂ ಪತಿ ಮನೆಗೆ ಬರದೆ ಇದ್ದಾಗ ಸುಕಲೆ ದುಃಖ ತಡೆಯಲಾರದೆ ಅತ್ತಳು. ಎಲ್ಲ ಗೆಳತಿಯರನ್ನೂ ಕೇಳಿದಳು. 'ನನ್ನ ಪ್ರಾಣೇಶ್ವರನೆಲ್ಲಿ ಹೋದ? ನೀವು ನೋಡಿದಿರೇನು?' 'ಹೇಳಿ' ಅಂಗಲಾಚಿ ಬೇಡಿದಳು. ಅವರು ಸಮಾಧಾನಪಡಿಸುತ್ತ ಹೇಳಿದರು.

**ಗೆಳತಿಯರು :-** ನಿನ್ನ ಪತಿ ತೀರ್ಥಯಾತ್ರೆಗೆ ಹೋಗಿದ್ದಾನೆ ಅದನ್ನು ಪೂರೈಸಿ ತಿರುಗಿ ಬಂದೇ ಬರುತ್ತಾನೆ. ಏಕೆ ಅಳುವೆ ?.

ಸುಕಲೆ ಮನೆಯೊಳಗೆ ಬಂದು ಗೋಳೋ ಎಂದು ಅತ್ತಳು. 'ಪತಿ ಬರುವವರೆಗೂ ನೆಲದಲ್ಲಿಯೇ ಮಲಗುತ್ತೇನೆ. ಹಾಲು ಮೊಸರು ಸೇವಿಸುವುದಿಲ್ಲ. ಎಣ್ಣೆ, ಬೆಲ್ಲ, ಉಪ್ಪು ತಿನ್ನುವುದಿಲ್ಲ. ತಾಂಬೂಲ ಮೆಲ್ಲುವುದಿಲ್ಲ. ಒಪ್ಪತ್ತು ಉಣ್ಣುವೆ, ಇಲ್ಲವೆ ಅದನ್ನೂ ಬಿಟ್ಟುಬಿಡುವೆ. ಅವನು ಬರುವವರೆಗೂ ದಿನಗಳೆಣ್ಣೆಣಿಸುತ್ತಿರುವೆ.' ಎಂದುಕೊಂಡಳು.

ಒಂದೇ ಜಡೆ, ಕೊಳೆಯಾದ ಒಂದೇ ಬಟ್ಟೆಯಲ್ಲಿದ್ದಳು. ವಿಯೋಗದ ಬೆಂಕಿಯಲ್ಲಿ ಬೆಂದು ಕಪ್ಪಾದಳು. ಹಾಹಾಕಾರ ಮಾಡಿದಳು. ನಿಟ್ಟುಸಿರಿಟ್ಟಳು. ಹಗಲುರಾತ್ರಿಯೆನ್ನದೆ ಕಣ್ಣೀರು ಹರಿಸಿದಳು. ನಿದ್ದೆಯಿಲ್ಲ, ಊಟವಿಲ್ಲ. ಸಖಿಯರು, ಸುಕಲೆಯನ್ನೀ ಅವಸ್ಥೆಯಲ್ಲಿ ಕಂಡು ಮರುಗಿ ಸಂತೈಸತೊಡಗಿದರು.

**ಸಖಿಯರು :-** ಗೆಳತಿ, ನೀನು ಹೀಗೆ ಕಣ್ಣೀರಿಡಲು ಅಂಥ ಕಾರಣವೇನಿದೆ, ಹೇಳು.

**ಸುಕಲೆ :-** ನಾನು ಪತಿವ್ರತೆಯಾಗಿದ್ದೂ ನನ್ನನ್ನು ಬಿಟ್ಟು ಪತಿ ತೀರ್ಥಯಾತ್ರೆಗೆ ಹೊರಟು ಹೋಗಬಹುದೆ ?. ಹೇಳಿ. ನಾನಿನ್ನೇಕೆ ಬದುಕಿರಬೇಕು ? ವಿಷವನ್ನು ಕುಡಿವೆ, ಇಲ್ಲವೆ ಬೆಂಕಿಗೆ ಹಾರುವೆ.

**ಸಖಿಯರು :-** ತೀರ್ಥಯಾತ್ರೆಗೆ ಹೋದವನು ತಿರುಗಿ ಬರದಿರುತ್ತಾನೆಯೆ ?. ಏಕೆ ಸುಮ್ಮನೆ ಸೊರಗುತ್ತೀಯೆ ? ಅನ್ನ ನೀರು ಬಿಟ್ಟು ಏನೂ ಪ್ರಯೋಜನವಿಲ್ಲ. ಹಿಂದಿನ ಜನ್ಮದಲ್ಲಿ ನೀನು ಅನ್ಯರಿಗೆ ಕೊಟ್ಟ ಅನ್ನ ನೀರು ಈಗ ನಿನಗೆ ಲಭಿಸಿದೆ. ಅದನ್ನು ಸೇವಿಸು. ಈ ಸಂಸಾರದಲ್ಲಿ ಯಾರೂ ಯಾರಿಗೂ ಪತಿಯಲ್ಲ, ಬಂಧುವಲ್ಲ. ಬದುಕಿರುವಾಗ ಉಣಬೇಕು. ಸತ್ತಮೇಲೆ ಉಣಲಿದೆಯೇ? ಇದ್ದರೂ ಅದನ್ನು ನೋಡಿದವರಾರು ? ಹೇಳು.

**ಸುಕಲೆ :-** ಸಖಿಯರೆ, ಇದೇನು ಹೇಳುತ್ತಿರುವಿರಿ ? ನಿಮ್ಮ ಮಾತು ವೇದಕ್ಕೆ ಸಮ್ಮತವಲ್ಲ. ಗಂಡನನ್ನು ಬಿಟ್ಟು ಬಾಳುವವಳು ಪಾಪಿಷ್ಠೆ ಎನಿಸುತ್ತಾಳೆ. ಸಜ್ಜನರು ಆಕೆಯನ್ನು ಗೌರವಿಸುವುದಿಲ್ಲ.

ಸತಿ-ಪತಿಗಳ ಸಂಬಂಧ ಅವಾಸ್ತವವೇನೂ ಅಲ್ಲ. ಅದು ಪುಣ್ಯದಿಂದ ಲಭಿಸುತ್ತದೆ. ಸದಾ ತ್ರಿಕರಣಪೂರ್ವಕವಾಗಿ ಸತಿಯು ಪತಿಯನ್ನಾರಾಧಿಸಬೇಕು. ಅವನ ಬಲಪಾರ್ಶ್ವ ಆಕೆಗೆ ಮಹಾತೀರ್ಥ. ಅಲ್ಲಿದ್ದು ಕೊಂಡೆ ಆಕೆ ದಾನಧರ್ಮಗಳನ್ನು ಮಾಡಿದರೆ ಅದರಿಂದ ಸಿಗುವ ಫಲ ಗಂಗೆ, ವಾರಾಣಾಸಿ, ಪುಷ್ಕರ, ದ್ವಾರಕಾ, ಅವಂತಿ, ಕೇದಾರಗಳಲ್ಲಿಯೂ ಸಿಗಲಾರದು. ಪತಿಯೊಲಿದರೆ ಆಕೆಗೆ, ಸ್ನಾನ-ಪಾನ-ವಸ್ತ್ರ, ಅಲಂಕಾರ, ರೂಪ ಸೌಭಾಗ್ಯ, ಗುಣ ಪುತ್ರಸಂತತಿ, ಯಶಸ್ಸು, ಕೀರ್ತಿ ಎಲ್ಲವೂ ದೊರೆಯುತ್ತದೆ. ಪತಿಯೊಲಿದರೆ ಆಕೆಗೆ ದೇವತೆಗಳೂ ಒಲಿಯುವರು. ಋಷಿಗಳೂ ಎಲ್ಲ ಸಜ್ಜನರೂ ಪ್ರಸನ್ನರಾಗುವರು. ಪತಿಯಿದ್ದರೆ ಮಾತ್ರ ಸತಿಯ ಶೃಂಗಾರ ಭೂಷಣಗಳಿಗೆ ಶೋಭೆ. ಇಲ್ಲದಿದ್ದರೆ ಅವೆಲ್ಲ ಹಾವಿನ ಬಾಯಲ್ಲಿ ಸುರಿವ ಹಾಲಿನಂತೆ. ಲೋಕವು ಆಕೆಯನ್ನು **'ಕುಲಟೆ'** ಎನ್ನುತ್ತದೆ. ಪತಿಯನ್ನೆಂದೂ ಬಿಡದಿರುವುದು ಸತಿಯ ಧರ್ಮವೆಂದು ನಾನು ತಿಳಿದಿರುವೆ. ಹೀಗಿರುವಾಗ ಪತಿಯು ನನ್ನನ್ನೇಕೆ ಬಿಟ್ಟುಹೋದ ?

ಈ ವಿಷಯದಲ್ಲಿ ಸುದೇವೆ ಚರಿತ್ರೆ ಉತ್ತಮ ನಿದರ್ಶನ. ಅದು ಪಾಪಹರ ಮತ್ತು ಪುಣ್ಯಸಾಧನವೂ ಹೌದು.

**ಸುಖ್ಯ ಊಚು :**

**ಸಖಿಯರು :-** ಸುದೇವೆ ಎಂದರೆ ಯಾರು ? ಅವಳ ಚರಿತ್ರೆಯೇನು ? ಹೇಳು.

**ಸುಕಲೆ :-** ಮನುಕುಮಾರ, ಇಕ್ಷ್ವಾಕು ಮಹಾರಾಜ ಅಯೋಧ್ಯೆಯನ್ನಾಳುತ್ತಿದ್ದ. ಕಾಶಿರಾಜನಾದ ದೇವರಾಜನ ಮಗಳು ಸುದೇವೆ, ಅವನ ಪಟ್ಟದ ರಾಣಿ. ದಂಪತಿಗಳೀರ್ವರೂ ಪರಮ ಧಾರ್ಮಿಕರು. ಅನೇಕ ಯಾಗಗಳನ್ನು ನಡೆಸಿದ ಪುಣ್ಯವಂತರು. ಒಮ್ಮೆ ಗಂಗೆಯ ತೀರದ ಕಾಡಿನಲ್ಲಿ ರಾಜ ಬೇಟೆಯಾಡಿದ. ಆಗ ಸುದೇವೆಯೂ ಜತೆಯಲ್ಲಿದ್ದಳು. ಆನೆ, ಸಿಂಹ, ಕಾಡುಕೋಣ, ಹಂದಿ ಮೊದಲಾದ ಪ್ರಾಣಿಗಳು ರಾಜನ ಬೇಟೆಗೆ ಬಲಿಯಾಗುತ್ತಿದ್ದಂತೆ ಕಾಡುಹಂದಿಯೊಂದು ದೂರದಿಂದ ರಾಜನನ್ನು ನೋಡಿತು. ಆದರೂ ಧೈರ್ಯದಿಂದ ಮಡದಿ-ಮಕ್ಕಳು-ಮೊಮ್ಮಕ್ಕಳೊಡನೆ ಅಲ್ಲಿಯೆ ನಿಂತಿತು. ಮಡದಿಯನ್ನು ಕುರಿತು ಹೇಳಿತು.

**ವರಾಹ :-** ಅಗೋ ಅಲ್ಲಿ ನೋಡು; ಅಯೋಧ್ಯಾಧಿಪತಿ ಬೇಟೆಯಾಡುತ್ತ ಇತ್ತಕಡೆ ಬರುತ್ತಿದ್ದಾನೆ. ಮಹಾಬಲಶಾಲಿ, ಉಳಿದ ಬೇಟೆಗಾರರಿಂದ ಪ್ರಾಣ ಭಯವಿಲ್ಲ. ಇವನು ಮಾತ್ರ ನನ್ನ ಈ ಮೈಯ ಗಾತ್ರ ರೂಪಗಳನ್ನು ಕಂಡರೆ ಸುಮ್ಮನೆ ಬಿಡುವವನಲ್ಲ. ಒಳ್ಳೆಯ ಉತ್ಸಾಹದಿಂದ ಬಿಲ್ಲು-ಬಾಣಗಳನ್ನು ಸಜ್ಜುಮಾಡಿ ಬೇಟೆ ನಾಯಿಗಳೊಂದಿಗೆ ಎಲ್ಲ ಬೇಟೆಗಾರರ ಜೊತೆಗೆ ನನ್ನ ಕಡೆಗೇ ಧಾವಿಸಿ ಬಂದು ಹೊಡೆದು ಸಾಯಿಸುತ್ತಾನೆ.

**ಸೂಕರಿ :-** ಪ್ರಿಯ, ಬೇಟೆಗಾರರ ದರ್ಶನವಾದೊಡನೆ ಹೆದರಿ ನಮ್ಮೆಲ್ಲರನ್ನು ಕಟ್ಟಿಕೊಂಡು ದೂರ ಓಡಿ ಹೋಗುವವ ನೀನು. ಈ ದಿನ ಮಾತ್ರ ಮಹಾ ಬಲಶಾಲಿಯಾದೊಬ್ಬ ರಾಜನನ್ನು ಕಂಡೂ ಧೈರ್ಯದಿಂದ ಇಲ್ಲೆ ನಿಂತಿರುವೆ ಏನು ಕಾರಣ?

**ವರಾಹ :-** ಪ್ರಿಯೆ, ಬೇಟೆಗಾರರು ಪಾಪಿಗಳು, ವಂಚಕರು, ದುಷ್ಟರ ಹೊಟ್ಟೆಯಲ್ಲಿ ಹುಟ್ಟಿ ದುಷ್ಟ ಆಲೋಚನೆಗಳನ್ನೇ ತಲೆಯಲ್ಲಿ ತುಂಬಿಕೊಂಡವರು. ಅವರ ಕೈಯಲ್ಲಿ ಸಾವನ್ನಪ್ಪಿದರೆ ಆ ಸಾವು ಅಪಮೃತ್ಯುವೆನಿಸುವುದು. ಮಹಾಪಾಪಕರ ಅದು. ಅದಕ್ಕೆ ಹೆದರಿ ನಾನು ಹಿಂದೆ ದೂರ ಓಡಿ ಹೋಗುತ್ತಿದ್ದೆ. ಈ ರಾಜನು ಮಾತ್ರ ಪುಣ್ಯವಂತ, ಸಾಕ್ಷಾತ್ ವಿಷ್ಣುವಿನಂತಿದ್ದಾನೆ. ಇವನೊಂದಿಗೆ ಪೌರುಷದಿಂದ ಪರಾಕ್ರಮದಿಂದ ಕಾದಿಗೆದ್ದರೂ ಅಸದೃಶ ಕೀರ್ತಿ, ಮಡಿದರೂ ಸ್ವರ್ಗಪ್ರಾಪ್ತಿ. ನನ್ನ ಮೈಯ ಮಾಂಸದಿಂದ ಆ ಮಹಾರಾಜನಿಗೆ ತೃಪ್ತಿ ಲಭಿಸಿದರೆ ದೇವತೆಗಳಿಗೂ ತೃಪ್ತಿ. ಆಹಾ ! ವಜ್ರಪಾಣಿಯಾದ ಇಂದ್ರನಂತೆ ಕಾಣುತ್ತಿದ್ದಾನೆ. ಇವನ ಕೈಯಲ್ಲಿ ಮರಣ ಹೊಂದುವ, ಒಳ್ಳೆಯ ಕೀರ್ತಿ ಯಶಸ್ಸು ವಿಷ್ಣುಲೋಕಗಳನ್ನು ಪಡೆಯುವ ಒಂದು ಒಳ್ಳೆಯ ಅವಕಾಶವೀಗ ಲಭಿಸಿದೆ. ನಾನು ಹಿಂದಿನ ಜನ್ಮದಲ್ಲಿ ಎಷ್ಟು ಪಾಪ ಮಾಡಿರುವೆನೊ ? ಈ ಹಾಳು ಹಂದಿಯ ಜನ್ಮ ಬಂದಿದೆ. ಪುಣ್ಯಮೂರ್ತಿಯಾದ ಮಹಾರಾಜನ ತೀಕ್ಷ್ಣ ಭಯಂಕರ ಬಾಣಗಳೆಂಬ ನೀರಿನಿಂದ ನನ್ನಪಾಪಗಳು ತೊಳೆದು ಹೋಗಲಿ. ನೀನು ನಮ್ಮ ಮಕ್ಕಳು-ಮೊಮ್ಮಕ್ಕಳು-ಬಂಧು-ಬಾಂಧವರ ಜೊತೆಗೆ ದೂರದ ಬೆಟ್ಟಕ್ಕೆ ಹೊರಟು ಹೋಗು. ನನ್ನ

ಮೇಲಿನ ಸ್ನೇಹ-ಮೋಹಗಳನ್ನು ತೊರೆದು ಓಡು, ನಾನೀ ರಾಜನ ಜತೆಗೆ ಹೋರಾಡಿ ಮಡಿಯುವೆನು. ಏನೋ ನನ್ನ ಅದೃಷ್ಟದಿಂದ ಸ್ವರ್ಗದ ಬಾಗಿಲು ನನಗಾಗಿ ತೆರೆದುಕೊಂಡಿದೆ. ಈ ಅವಕಾಶವನ್ನು ನಾನು ಕಳೆದುಕೊಳ್ಳಲಾರೆ.

ಈ ಮಾತುಗಳನ್ನು ಕೇಳಿ ಹೆಣ್ಣುಹಂದಿಯ ಎದೆ ತಲ್ಲಣಿಸಿತು.

**ಸೂಕರಿ :-** ನಾಥ, ನೀನಿದ್ದರೆ ಮಾತ್ರ ನಮ್ಮ ಕುಲಕ್ಕೆ ಒಂದು ಶೋಭೆ ಇದೆ. ನೀನು ನಮಗೆಲ್ಲ ನಾಯಕನಾಗಿದ್ದು, ಮಕ್ಕಳು. ಮೊಮ್ಮಕ್ಕಳು, ಇಷ್ಟಮಿತ್ರ, ಬಂಧು-ಬಾಂಧವ ಸಮೇತನಾಗಿ ಕ್ಷೇಮದಿಂದಿದ್ದರೆ ನಮ್ಮ ಮಕ್ಕಳು ಯಾವ ಭೀತಿಯೂ ಇಲ್ಲದೆ ಗರ್ಜಿಸುತ್ತ ಕಾಡಿನಲ್ಲೆಲ್ಲ ಓಡಾಡುತ್ತವೆ. ನಿಶ್ಚಿಂತೆಯಿಂದ ಗಡ್ಡೆಗೆಣಸುಗಳನ್ನು ಮೆಲ್ಲುತ್ತವೆ. ಸಿಂಹವೆ ಬರಲಿ, ಮನುಷ್ಯನೆ ಬರಲಿ, ನಿನ್ನ ರಕ್ಷಣೆಯಲ್ಲಿ ಅವು ಇಂದಿನವರೆಗೆ ಭಯವನ್ನೇ ಕಂಡಿದ್ದಿಲ್ಲ. ನೀನು ಹೊರಟು ಹೋದರೆ ಈ ಎಳೆಯ ಮಕ್ಕಳು ತಬ್ಬಲಿಗಳಾಗುತ್ತಾರೆ. ಅವರಿಗಿನ್ನು ದಿಕ್ಕು ತೋಚದಂಥ ಪರಿಸ್ಥಿತಿ ಬರುತ್ತದೆ.

ನಾನೂ ನಿನ್ನನ್ನು ಕಳೆದುಕೊಂಡು ಬಾಳುತ್ತಿದ್ದರೇನು ಚಂದ ?. ಹೆಣ್ಣು ಎಷ್ಟೇ ಚೆಲುವೆಯಾಗಿರಲಿ, ಎಷ್ಟು ಸಿಂಗರಿಸಿಕೊಳ್ಳಲಿ, ಪತಿಯಿಲ್ಲದಿದದರೆ ಎಲ್ಲವೂ ನಿಷ್ಫಲ. ತಂದೆ-ತಾಯಿಗಳು, ಸೋದರ-ಸೋದರಿಯರು, ಅತ್ತೆ-ಮಾವಂದಿರು ಎಲ್ಲ ಇದ್ದೂ ಪತಿಯೊಬ್ಬನಿಲ್ಲದಿದ್ದರೆ, ಹೆಣ್ಣು ಮಕ್ಕಳಿಲ್ಲದ ಮನೆಯಂತೆ, ಚಂದ್ರನಿಲ್ಲದ ರಾತ್ರಿಯಂತೆ !

ನೀನಿಲ್ಲದಿದ್ದರೆ ನಮ್ಮ ಕುಟುಂಬವೂ ದೀಪವಿಲ್ಲದ ಮನೆಯಂತಾಗುತ್ತದೆ.

**ಆಚಾರೇಣ ವಿನಾ ಮರ್ತ್ಯೋ ಜ್ಞಾನಹೀನೋ ಯತಿರ್ಯಥಾ**
**ಮಂತ್ರಹೀನೋ ಯಥಾ ರಾಜಾ ತಥಾಯಂ ನೈವ ಶೋಭತೇ ॥**

ಆಚಾರವಿಲ್ಲದ ಮನುಷ್ಯನಂತೆ, ಜ್ಞಾನವಿಲ್ಲದ ಯತಿಯಂತೆ, ಮಂತ್ರಾಲೋಚನೆ ಯಿಲ್ಲದ ರಾಜನಂತೆ ನೀನಿಲ್ಲದ ನಮ್ಮ ಕುಟುಂಬ ಬೆಳಗಲಾರದು.

ನೀನಿಲ್ಲದ ನಮ್ಮ ಸೇನೆಯೂ ಅಂಬಿಗನಿಲ್ಲದ ಡೋಣಿಯಂತೆ, ವರ್ತಕನಿಲ್ಲದ ಅಂಗಡಿಯಂತೆ ವೇದಾಧ್ಯಯನವಿಲ್ಲದ ದ್ವಿಜನಂತೆ ಕಂಗೆಡುವುದು. ನಮ್ಮ ಈ ದೊಡ್ಡ ಕುಟುಂಬದ ಭಾರವನ್ನು ನನ್ನಲ್ಲಿಟ್ಟು ಸುಖವಾಗಿ ಸಾವನ್ನಪ್ಪುವೆನೆಂದು ಹೇಳುತ್ತಿರುವೆಯಲ್ಲ ? ಇದು ಉಚಿತವೆ ? ಪ್ರಾಣನಾಥ, ನೀನಿಲ್ಲದೆ ನಾನು ಬದುಕಲಾರೆ. ನೀನು ಸ್ವರ್ಗಕ್ಕೆ ಹೋಗು, ನರಕಕ್ಕೇ ಹೋಗು. ಇಲ್ಲವೆ ಭೂಮಿಯಲ್ಲೆ ಇರು. ನಾ ನಿನ್ನ ಜತೆಗೆ ಇರುವವಳು. ನಾವು ಈ ಮಕ್ಕಳೊಡನೆ ಆ ದೂರದ ಬೆಟ್ಟಕ್ಕೆ ಹೋಗೋಣ. ಸಾಯುವುದರಲ್ಲಿ ಏನು ಲಾಭವಿದೆ, ಹೇಳು.

**ವರಾಹ :-** ಪ್ರಿಯೆ, ವೀರನ ಧರ್ಮ ಏನೆಂಬುದನ್ನು ನೀನರಿಯೆ. ಯುದ್ಧಾರ್ಥಿಯಾಗಿ ಒಬ್ಬ ವೀರನು ಬಂದಾಗ ಯುದ್ಧವನ್ನು ನಿರಾಕರಿಸಿದರೆ ಆತ ಕುಂಭೀಪಾಕನರಕದಲ್ಲಿ ಸಾವಿರ ಯುಗಗಳ ಕಾಲ ವಾಸಮಾಡುತ್ತಾನೆ. ನಿರ್ಭಯವಾಗಿ ಪೌರುಷದಿಂದ ಕಾದಿ, ಗೆದ್ದರೆ ಯಶಸ್ಸು, ಮಡಿದರೂ ವೀರಲೋಕದಲ್ಲಿ ಇಪ್ಪತ್ತು ಸಾವಿರ ವರ್ಷಗಳ ಕಾಲ ದಿವ್ಯಭೋಗಾನುಭವ. ಈ ಮಹಾರಾಜ ವೀರಾಧಿವೀರ, ಹೋರಾಟ ಬಯಸಿ ನನ್ನ ಬಳಿ ಬರುತ್ತಿದ್ದಾನೆ. ನಾನು ಅವನ ಈ ಬಯಕೆಯನ್ನೀಡೇರಿಸಲೇಬೇಕು.

**ಯುದ್ಧಾತಿಥಿಃ ಸಮಾಯಾತೋ ವಿಷ್ಣುರೂಪಃ ಸನಾತನಃ ।**
**ಸತ್ಕಾರೋ ಯುದ್ಧರೂಪೇಣ ಕರ್ತವ್ಯಶ್ಚ ಚಮಯಾಶುಭೇ ॥**

ಯುದ್ಧವನ್ನು ಬಯಸಿ ಅತಿಥಿಯಾಗಿ ಸನಾತನ ವಿಷ್ಣುರೂಪನಾದ ರಾಜ ಬರುತ್ತಿದ್ದಾನೆ. ಯುದ್ಧರೂಪದ ಸತ್ಕಾರವನ್ನು ನಾನು ಅವನಿಗೆ ನೀಡಲೇ ಬೇಕಾಗಿದೆ.

**ಸೂಕರಿ :-** ರಾಜನಿಗೆ ನೀನು ಯುದ್ಧ ನೀಡುವುದೆ ಆದರೆ ನಿನ್ನ ಪೌರುಷವನ್ನು ನಾನು ನೋಡಬೇಕು. ಮಕ್ಕಳೆ, ವಿಷ್ಣು ಸ್ವರೂಪಿಯಾದ ಒಬ್ಬ ಯುದ್ಧಾರ್ಥಿ ಬಂದಿದ್ದಾನಂತೆ ! ನಿಮ್ಮ ತಂದೆ ಹೋದಲ್ಲಿ ನಾನೂ ಹೋಗುವವಳು. ಅವನು ಬದುಕಿರುವಾಗಲೆ ನೀವೆಲ್ಲರೂ ಇಲ್ಲಿಂದ ಹೊರಟು ದೂರದ ಬೆಟ್ಟಗಳನ್ನು ಸೇರಿಕೊಳ್ಳಿ. ಈ ಬೇಟೆಗಾರರಿಂದ ಪಾರಾಗಿ ಸುಖದಿಂದಿರಿ. ದಾರಿಯಲ್ಲಿ ಈ ನಿಮ್ಮ ಹಿರಿಯ ಸೋದರ ನಿಮ್ಮನ್ನು ನೋಡಿಕೊಳ್ಳುತ್ತಾನೆ ನಿಮ್ಮ ಚಿಕ್ಕ ತಂದೆಗಳೂ ರಕ್ಷಣೆ ಮಾಡುತ್ತಾರೆ.

**ಮಕ್ಕಳು :-** ಅಮ್ಮ ಈ ದೊಡ್ಡ ಬೆಟ್ಟದಲ್ಲಿ ನಮಗೇತರ ಭಯ ? ಇಲ್ಲಿ ಗಡ್ಡೆ ಗೆಣಸುಗಳಿವೆ. ನೀರಿದೆ, ನಾವಿಲ್ಲಿ ಸುಖವಾಗಿಯೆ ಇದ್ದೇವೆ. ಅಕಸ್ಮಾತ್ತಾಗಿ ಇದೇನೋ ಭಯಂಕರ ಆಪತ್ತು ಬಂದಿರುವಂತೆ ಮಾತನಾಡುತ್ತಿದ್ದೀರ. ಏಕೆ, ಏನು ಕಾರಣ, ಹೇಳಬಾರದೆ ?

**ಸೂಕರಿ :-** ಮಕ್ಕಳೆ, ನೋಡಿ, ದೂರದಲ್ಲಿ ಯಮನಂತೆ ಭಯಂಕರನಾದ ಒಬ್ಬ ರಾಜ ಇಲ್ಲಿಗೆ ಬರುತ್ತಿದ್ದಾನೆ. ಮೃಗಗಳನ್ನು ಕೊಲ್ಲುವುದೇ ಅವನ ಆಟ, ಮಹಾ ಪರಾಕ್ರಮಿ, ಇಕ್ಷ್ವಾಕು ಎಂದು ಅವನಿಗೆ ಹೆಸರಂತೆ ! ನಮ್ಮನ್ನೆಲ್ಲ ಕೊಲ್ಲುತ್ತಾನೆ, ಓಡಿಹೋಗಿ.

**ಮಕ್ಕಳು :-** ತಂದೆ-ತಾಯಿಗಳನ್ನು ಬಿಟ್ಟು ದೂರ ಹೋದರೆ ನರಕವಾಗುವುದಂತೆ ! ತಾಯಿಯ ಪವಿತ್ರ ಎದೆಹಾಲನ್ನು ಕುಡಿದು ಪುಷ್ಟರಾಗಿರುವ ನಾವು ಆ ತಾಯಿಯನ್ನು ಬಿಡುವೆವೆ ? ತಂದೆಯನ್ನು ಬಿಡಲಾದೀತೆ ?

ಹೀಗೆ ತಂದೆ-ತಾಯಿ-ಮಕ್ಕಳು ಧರ್ಮದ ದೃಷ್ಟಿಯಿಂದ ವಾದ-ವಿವಾದ ಮಾಡಿ ಕೊನೆಗೆ ಎಲ್ಲರೂ ಯುದ್ಧಸನ್ನದ್ಧರಾಗಲು ತೀರ್ಮಾನಿಸಿದರು. ವ್ಯೂಹರಚನೆ ಮಾಡಿಕೊಂಡು ನಿಂತರು. ರಾಜನು ಬಂದು ದಾಳಿಯಿಡುವುದನ್ನು ನಿರೀಕ್ಷಿಸುತ್ತ ಪೌರುಷದಿಂದ ಗರ್ಜಿಸತೊಡಗಿದರು.

**ಸುಕಲೋವಾಚ**

**ಸುಕಲೆ :-** ದಷ್ಟಪುಷ್ಟವಾಗಿ ಬೆಳೆದು ಕೊಬ್ಬಿನಿಂತ ಆ ಕಾಡುಹಂದಿ ಕೊರೆದಾಡೆ ಓರಿದು ಭಯಂಕರವಾಗಿ ಗರ್ಜಿಸುತ್ತ ವ್ಯೂಹದ ಮಧ್ಯದಲ್ಲಿ ಓಡಾಡುತ್ತಿದ್ದುದನ್ನು ದೂರದಿಂದಲೇ ಕಂಡ ಇಕ್ಷ್ವಾಕು ಮಹಾರಾಜ 'ಹಿಡಿಯಿರಿ, ಹೊಡೆಯಿರಿ' ಎಂದು ಬೇಟೆಗಾರರಿಗೆ ಆದೇಶ ನೀಡಿದ. ಬೇಟೆಗಾರರು ಆನಂದೋನ್ಮಾದದಿಂದ ಕುಣಿಯುತ್ತ ಬೇಟೆನಾಯಿಗಳೊಂದಿಗೆ ಆ ದಿಕ್ಕಿಗೆ ಓಡಿದರು. ರಾಜನೂ ಉತ್ಸಾಹದಿಂದ ಕುದುರೆಯನ್ನೇರಿ ಸೈನ್ಯಸಮೇತನಾಗಿ ಮೇರುಪರ್ವತದಲ್ಲಿ ಗಂಗೆಯ ಬಳಿಯಲ್ಲಿ ಬೆಳದಿದ್ದ ಆ ಕಾಡನ್ನು ಪ್ರವೇಶಿಸಿದ.

ಮುಗಿಲು ಮುಟ್ಟುವಂತೆ ಎತ್ತರಕ್ಕೆ ಬೆಳೆದು ನಿಂತಿರುವ ಗಿರಿರಾಜ ಮೇರುವಿನ ಒಂದು ಮಹಾರಣ್ಯ ಅದು. ಅಲ್ಲಿ ಗಂಗೆಯ ಪಾವನತರಂಗಗಳ ಹೊಡೆತದಿಂದೇಳುವ. ಮುತ್ತಿನಂತೆ

ಹೊಳೆವ ನಿರ್ಮಲ ತುಂತುರು ಹನಿಗಳು ಬಳಿಯ, ಬಿಳಿ ಹಾಸುಗಲ್ಲುಗಳು ತೊಳೆದು ಸ್ವಚ್ಛವಾಗಿಸಿವೆ. ಅದುವೆ ದೇವ ಋಷಿ ಗಂಧರ್ವ ಕಿನ್ನರ ನಾಗ ಸಿದ್ಧ ವಿದ್ಯಾಧರ ಅಪ್ಸರೆಯರು ಓಡಾಡಿ ನಲಿವ ಚೆಲುವಿನ ತಾಣ. ಶ್ರೀಖಂಡ ಚಂದನ ಸರಲ ತಾಲ ತಮಾಲ ರುದ್ರಾಕ್ಷ ಕಲ್ಪಲತೆಗಳು ಬೆಳೆದು ನಳನಳಿಸುವ ಗಿರಿಧಾಮ. ತೆಂಗು ಕಂಗು ಬಾಳೆಗಳು ಸೊಂಪಾಗಿ ಬೆಳೆವ ತಂಪಿನ ಆರಾಮ. ದಿವ್ಯ ಪುನ್ನಾಗ ಬಕುಲ ಚಂಪಕ ಕೇತಕ ಕಮಲ ಪುಷ್ಪಗಳ ನಾನಾ ಬಗೆಯ ಹೂಬಳ್ಳಿಗಳ ತವರೂರು. ವಿಚಿತ್ರ ಧಾತುರತ್ನಗಳಿಂದ, ತುಂಬಿಹರಿಯುವ ಹೊಳೆ ತೊರೆ ತಡಸಲುಗಳಿಂದ, ತಿಳಿನೀರ ಮಡು, ಕೆರೆ, ಹೊಂಡಗಳಿಂದ ಶ್ರೀಮಂತನಾದ ನೆಲ. ಯೋಗಿಗಳು ಸಿದ್ಧಪುರುಷರು ವಾಸಿಸ ಬಯಸುವ ಗಿರಿಕಂದರಗಳ ಬೀಡು. ಶರಭ ಶಾರ್ದೂಲ ಮತ್ತು ಮಾತಂಗ, ಮಹಿಷ, ರುರು ಮುಂತಾದ ಮೃಗಗಳು ನೆಲೆಸಿದ ದಟ್ಟಕಾಡು. ಅಯೋಧ್ಯೆಯ ಅಧಿಪತಿ ಇಕ್ಷ್ವಾಕು ಮಹಾರಾಜನಿಲ್ಲಿಗೆ ಬಂದಿದ್ದ.

ಮುಂದೆ ಶೂರರಾದ ಬೇಟೆಗಾರರು, ಬಲಿಷ್ಠ ನಾಯಿಗಳು, ಹಿಂದೆ ಹಿಂದೆ ಚತುರಂಗ ಬಲ. ಕಾಡುಹಂದಿ ತನ್ನ ಪ್ರಿಯೆಗೆ ರಾಜನನ್ನು ತೋರಿಸಿ ನುಡಿಯಿತು.

**ವರಾಹ :-** ಪ್ರಿಯೆ ನೋಡು, ರಾಜನು ಸಮೀಪಕ್ಕೆ ಬರುತ್ತಿದ್ದಾನೆ. ದೇವ ದಾನವರೂ ನೋಡಿ ಬೆರಗಾಗುವಂತೆ ನಾನೀತನೊಡನೆ ಹೋರಾಡುವೆನು.

ಇತ್ತ ರಾಜನೂ ಹಂದಿಯ ಕಡೆಗೆ ಬೆಟ್ಟುಮಾಡಿ ರಾಣಿಗೆ ತೋರಿಸಿ ನುಡಿದ.

**ರಾಜ :-** ಪ್ರಿಯೆ, ನೋಡು, ಆ ದೊಡ್ಡ ಹಂದಿ ಮತ್ತು ಅದರ ಪರಿವಾರವನ್ನು ಬೇಟೆಗಾರರಿಗೆ ಅದು ವಶವಾಗದು. ನಾನೇ ನೋಡಿಕೊಳ್ಳುವೆ.

ಬೇಟೆಗಾರರಿಗೂ ಹಂದಿಗಳಿಗೂ ಆಗಲೆ ಹೋರಾಟ ಪ್ರಾರಂಭವಾಗಿತ್ತು. ಬಾಣ, ತೋಮರಗಳಂಥ ಶಸ್ತ್ರಗಳಮಳೆಯನ್ನೇ ಸುರಿಸಿದರು ಬೇಟೆಗಾರರು. ಹಂದಿಗಳೂ ಕೋರೆ ದಾಡೆಯಿಂದ ಬೇಟೆಗಾರರನ್ನು ಸೀಳುತ್ತಿದ್ದುವು. ದೊಡ್ಡ ಹಂದಿ ನೇರವಾಗಿ ರಾಜನ ಕಡೆಗೋಡಿ ಕೋರೆದಾಡೆ ಇರಿದು ಯುದ್ಧಕ್ಕಾಹ್ವಾನಿಸಿತು. ಹಲ್ಲು, ಉಗುರಗಳಿಂದ ನೆಲವನ್ನು ಕೆರೆಯುತ್ತ, ಹೂಂಕರಿಸುತ್ತ ವಿಷ್ಣುವಿನ ವರಾಹಲೀಲೆಯನ್ನು ತೋರಿ ರಾಜನನ್ನು ರೋಮಾಂಚಗೊಳಿಸಿತು. ರಾಜ. ಚತುರಂಗ ಬಲವನ್ನು ಅದರ ಮೇಲೆರಗಿಸಿದ. ಖಡ್ಗ, ಬಾಣ, ಭುಶುಂಡಿ ಮುಂತಾದ ಆಯುಧಗಳಿಂದ ಸೇನೆ ಹೋರಾಡಿತು. ಬಲೆ ಹಿಡಿದು ಆರ್ಭಟಿಸುತ್ತ ಬೇಟೆಗಾರರ ಗುಂಪೂ ಮುನ್ನುಗ್ಗಿತು. ಆದರೇನು ? ಹಂದಿ ಕೆಲವೊಮ್ಮೆ ಕಣ್ಮರೆಯಾಗುತ್ತಿತ್ತು. ಕೆಲವೊಮ್ಮೆ ಕಾಣಿಸಿಕೊಳ್ಳುತ್ತಿತ್ತು. ಕೆಂಗಣ್ಣಿನ ರುದ್ರ ರೂಪ ತೋರಿ ಭಯಉಂಟುಮಾಡುತ್ತಿತ್ತು. ಕುದುರೆಗಳನ್ನೂ, ವೀರಭಟ್ಟರನ್ನೂ ಧ್ವಂಸಗೊಳಿಸುತ್ತಿತ್ತು. ಸಿಡಿಲಿನಂತೆ ಗರ್ಜಿಸುತ್ತ, ಮಿಂಚಿನಂತೆ ಹೊಳೆವ ಕೋರೆದಾಡೆಗಳನ್ನು ಪ್ರದರ್ಶಿಸುತ್ತ, ಧೈರ್ಯ, ಪರಾಕ್ರಮಗಳಿಂದ ಹೋರಾಡುತ್ತ ರಣರಂಗದಲ್ಲಿ ತಾನೇ ತಾನಾಗಿ ಸಂಚರಿಸಿ, ಮೆರೆದು ಶೋಭಿಸುತ್ತಿತ್ತು. ರಾಜ ತೀಕ್ಷ್ಣ ಬಾಣಗಳನ್ನು ಮಳೆಗರೆದ. ಸೇನೆಯನ್ನು ಹುರಿದುಂಬಿಸಿ ಕೋಪದಿಂದ ಅವರ ಅಶಕ್ತಿಯನ್ನು ಜರಿದು ಆಕ್ಷೇಪಿಸಿದ. ಅನೇಕ ಸಾವಿರ ಸಂಖ್ಯೆಯ ಆ ಸೇನೆ ಕಾಡನ್ನೆಲ್ಲ ತುಂಬಿ ಹಂದಿಯನ್ನು ಹೊಡೆದು ಗಾಯಗೊಳಿಸಿದಾಗ ಅದು ರಕ್ತಧಾರೆಯಲ್ಲಿ

ಮಿಂದು ರೋಷದಿಂದ ಹುಚ್ಚಾಗಿ ಭಟ್ಟರನ್ನೂ, ಆನೆ-ಕುದುರೆಗಳನ್ನೂ ಸೀಳಿತು. ನಾಯಿಗಳನ್ನು ಕೊಂದಿತು.

ಅತ್ತ ರಾಜನ ಖಡ್ಗದೇಟಿಗೆ ಅನೇಕ ಹಂದಿಗಳು ಬಲಿಯಾದುವು. ಇನ್ನೂ ಅನೇಕವು ಓಡಿಹೋದುವು. ಬೇಟೆಗಾರರಲ್ಲಿ ಹೆಚ್ಚಿನವರು ಹಂದಿಗಳ ಕೋರೆದಾಡೆಗೆ ಸಿಕ್ಕಿ ಸೀಳಾಗಿ ನೆಲಕ್ಕೊರಗಿದರು. ಬಲೆಗಳು, ಪಂಜರಗಳು ಅಲ್ಲಲ್ಲಿ ಚದುರಿ ಬಿದ್ದುವು. ಆ ಹಂದಿ ಮಾತ್ರ ಮೂವತ್ತೈದು ಮಂದಿ ಮಕ್ಕಳು-ಮೊಮ್ಮಕ್ಕಳ ಮಧ್ಯೆ ತನ್ನ ಪ್ರಿಯಯೊಡನೆ ಅಜೇಯವಾಗಿ ನಿಂತಿತು. ಮೈಗೆ ಏಟುಗಳು ಮಾತ್ರ ಬಲವಾಗಿಯೆ ಬಿದ್ದಿದ್ದುವು. ಹೆಣ್ಣು ಹಂದಿ ಹೇಳಿತು.

**ಸೂಕರಿ :-** ಪ್ರಿಯ, ಈಗಲಾದರೂ ಓಡಿ ಹೋಗಬಾರದೇಕೆ ?.

**ವರಾಹ :-** ಪ್ರಿಯೆ, ಏಟು ಬಲವಾಗಿ ಬಿದ್ದಿದೆ. ಎಲ್ಲಿಗೆ ಹೋಗಲಿ ? ಏನು ಮಾಡಲಿ? ಮತ್ತು ನಾನೀಗ ಓಡಿ ಹೋದರೆ ನಮ್ಮ ಕುಲಕ್ಕೆ ಅವಮಾನ. ನಮ್ಮ ಪರಾಕ್ರಮ ಏನೆಂಬುದು ನಿನಗೆ ಗೊತ್ತಿದೆ.

**ದ್ವಯೋಶ್ಚ ಸಿಂಹಯೋರ್ಮಧ್ಯೇ ಜಲಂ ಪಿಬತಿ ಸೂಕರಃ**
**ದ್ವಯೋಃ ಸೂಕರಯೋರ್ಮಧ್ಯೇ ಸಿಂಹೋ ನೈವ ಪಿಬತ್ಯಪಃ**

ಎರಡು ಸಿಂಹಗಳ ನಡುವೆ ಹಂದಿ ನೀರು ಕುಡಿಯುತ್ತದೆ. ಆದರೆ ಎರಡು ಹಂದಿಗಳ ಮಧ್ಯ ಸಿಂಹವು ನೀರು ಕುಡಿವ ಸಾಹಸ ಮಾಡಲಾರದು.

ಇಂತಹ ಪರಾಕ್ರಮಕ್ಕೆ ನಾನು ಅಪಚಾರ ಮಾಡಲಾರೆ. ಯುದ್ಧವೆಂಬುದೊಂದು ಪವಿತ್ರ ತೀರ್ಥ. ಅದರಲ್ಲಿ ಮುಳುಗಿ ಸ್ನಾನಮಾಡಿದರೆ ವಿಷ್ಣುಲೋಕ ಪ್ರಾಪ್ತಿಯಾಗುವುದು. ವಂಶ ಉದ್ಧಾರವಾಗುವುದು. ರಣರಂಗದಲ್ಲಿ ಮುಂದಿಟ್ಟ ಪ್ರತಿ ಹೆಜ್ಜೆಗೂ ಭಾಗೀರಥೀ ಸ್ನಾನದ ಫಲವಿದೆ. ಭಯದಿಂದ ಬಿಟ್ಟೋಡಿದರೆ ಹೆತ್ತ ತಾಯಿಗೆ ಕಳಂಕ. ವೀರರು ಹೋರಾಡುವುದನ್ನು ನೋಡಿ ಆನಂದಿಸಲು ದೇವಋಷಿ, ಸಿದ್ಧ, ಚಾರಣರೂ, ಎಲ್ಲ ಯಜ್ಞಗಳೂ, ತೀರ್ಥಗಳೂ ಬಂದು ನೆರೆಯುವರು. ಅಡಿಯ ಹಿಂದಿಡುವ ಹೇಡಿಯನ್ನು ಅವರು ಶಪಿಸುವರು; ಅಪಹಾಸಮಾಡುವರು. ಸತ್ತಾಗ ಯಮಧರ್ಮನೂ ಅವನ ಹೇಡಿತನಕ್ಕೆ ಶಿಕ್ಷೆ ವಿಧಿಸುವನು. ಎದುರು ನಿಂತು ಹೋರಾಡಿ ತನ್ನ ತಲೆಯಿಂದ ಹರಿವ ನೆತ್ತರ ಧಾರೆಯನ್ನು ಕುಡಿವವನು ಅಶ್ವಮೇಧದ ಫಲವನ್ನು ಸವಿಯುವನು. ಆದುದರಿಂದ ನಾನೀ ವೀರರಾಜನೊಂದಿಗೆ ಕೊನೆತನಕ ಕಾದುವೆ. ನೀನು ಮಕ್ಕಳೊಡನೆ ಹೊರಟು ಹೋಗು.

**ಸೂಕರಿ :-** ಪ್ರಿಯ, ನಿನ್ನ ಪ್ರೇಮ, ಆದರ, ರತಿ, ಸ್ನೇಹಗಳ ಬಂಧನಕ್ಕೊಳಗಾಗಿರುವ ನಾನು ಮಕ್ಕಳೊಂದಿಗೆ ನಿನ್ನ ಬಳಿಯಲ್ಲಿಯೆ ಇದ್ದು ಪ್ರಾಣಗಳನ್ನು ತೊರೆಯಬಲ್ಲೆವು, ಆದರೆ ಎಲ್ಲಿಗೂ ಹೋಗಲಾರೆವು.

ಹೀಗೆ ಮಾತನಾಡಿಕೊಳ್ಳುತ್ತ ಆ ಹಂದಿಗಳು ರಾಜನ ಕಡೆಗೆ ನೋಡಿ ಮಳೆಗಾಲದ ಕಾರ್ಮೋಡಗಳಂತೆ ಗುಡುಗಿ ಹೋರಾಟಕ್ಕೆ ಆಹ್ವಾನಿಸಿದುವು. ರಾಜ ಅವುಗಳೆದುರಿಗೆ ಕುದುರೆಯನ್ನೋಡಿಸಿದ.

**ಸುಕಲೆ :-** ತನ್ನ ಸೇನೆಯನ್ನು ನುಚ್ಚುನೂರು ಮಾಡಿದ ಆ ಹಂದಿಯ ಮೇಲೆ ರಾಜನ ಕೋಪ ಎಲ್ಲೆ ಮೀರಿತು. ಪ್ರಳಯಕಾಲದ ಬೆಂಕಿಯಂತೆ ಹೊಳೆವ ಬಾಣವನ್ನು ಹಿಡಿದು ಮುನ್ನುಗ್ಗಿದ. ಹಂದಿ ಕುದುರೆಯ ಕಾಲ್ಗಳ ಕೆಳಗಿಂದ ಹಾದು ತಿವಿಯಿತು. ಕುದುರೆ ನೆಲಕ್ಕೊರಗಿತು. ಒಡನೆ ರಾಜ ರಥವನ್ನೇರಿ ಹಂದಿಯ ಮೇಲೆ ಗದೆಯನ್ನು ಬೀಸಿದ. ಹಂದಿ ಆ ಏಟನ್ನು ತಾಳಲಾರದೆ ನೆಲಕ್ಕೊರಗಿ ಅಸು ನೀಗಿತು.

ದೇವತೆಗಳು ಆನಂದದಿಂದ ಘಮಘಮಿಸುವ ಕಲ್ಪವೃಕ್ಷದ ಹೂಗಳನ್ನು ಚಂದನ, ಕುಂಕುಮಗಳನ್ನೂ ಮಳೆಗರೆದರು. ಹಂದಿಯ ಆತ್ಮ ದಿವ್ಯಾಂಬರಾಲಂಕಾರಭೂಷಿತನಾದ ಚತುರ್ಭುಜಾಕಾರದ ಗಂಧರ್ವನಾಗಿ ಸೂರ್ಯನಂತೆ ಹೊಳೆಯುತ್ತ ದಿವ್ಯ ವಿಮಾನವನ್ನೇರಿ ವಿಷ್ಣುಲೋಕಕ್ಕೆ ತೆರಳುತ್ತಿದ್ದಾಗ ದೇವತೆಗಳೂ ಅದನ್ನು ಗೌರವಿಸಿದರು.

**ಸುಕಲೆ :-** ಬೇಟೆಗಾರರು ಈಗ ಹೆಣ್ಣು ಹಂದಿಯನ್ನು ಸುತ್ತುವರಿದರು. ಅದು ತನ್ನ ನಾಲ್ಕು ಮಕ್ಕಳ ಮಧ್ಯೆ ನಿಂತು ಯೋಚಿಸಿತು.

**ಸೂಕರಿ :-** ನನ್ನ ಪ್ರಿಯಕರನೀಗ ಕೃತಕೃತ್ಯನಾದ. ದೇವತೆಗಳೂ ಋಷಿಗಳೂ ಮೆಚ್ಚುವಂತೆ ಪರಾಕ್ರಮದಿಂದ ಹೋರಾಡಿ ಸ್ವರ್ಗಕ್ಕೆ ತೆರಳಿದ. ನಾನೂ ಅವನ ಹಿಂದೆ ಹೊರಟು ಹೋಗುವೆ. ಸ್ವರ್ಗದಲ್ಲಿ ಅವನನ್ನೇ ಸೇರುವೆ. ಈ ನಾಲ್ಕು ಮಕ್ಕಳಾದರೂ ಬದುಕಿ ಉಳಿದರೆ ನನ್ನ ನಾಥನ ವಂಶ ಬೆಳೇದೀತು. ಏನು ಮಾಡಲಿ?.

ಹೀಗೆ ಯೋಜಿಸಿ ಅಲ್ಲಿಂದ ಪಾರಾಗಿ ಓಡುವ ಒಂದು ಮಾರ್ಗವನ್ನು ಕಂಡು ಮಕ್ಕಳನ್ನು ಕುರಿತು 'ತಡಮಾಡದೆ ಈ ಮಾರ್ಗದಿಂದ ಓಡಿಹೋಗಿರಿ' ಎಂದಿತು. ದೊಡ್ಡ ಮರಿ ಇದಕ್ಕೊಪ್ಪಲಿಲ್ಲ. 'ಅಮ್ಮ, ನಿನ್ನನ್ನು ಬಿಟ್ಟು ಪ್ರಾಣಭಯದಿಂದ ದೂರ ಹೋದರೆ ನನ್ನ ಬಾಳಿಗೆ ಧಿಕ್ಕಾರ. ತಂದೆಯನ್ನು ಕೊಂದುದರ ಸೇಡುತೀರಿಸಲು ನಾನಿಲ್ಲೇ ನಿಲ್ಲುವೆ. ನೀನು ಈ ಮೂವರೊಂದಿಗೆ ಓಡಿ ಪಾರಾಗು' ಎಂದಿತು. ಹೆಣ್ಣು ಹಂದಿ ನುಡಿಯಿತು. 'ಮಗು, ನೀನ್ನೊಬ್ಬನನ್ನು ಬಿಟ್ಟು ನಾನೂ ಹೋಗಲಾರೆ. ಆದುದರಿಂದ ಈ ಮೂವರು ಹೋಗಲಿ.' ಮೂರೂ ಮರಿಗಳೂ ಅಲ್ಲಿಂದ ಓಡಿ ಪಾರಾದುವು.

ತಾಯಿ ಮತ್ತು ಮಗ ಇಬ್ಬರೂ ಗರ್ಜಿಸುತ್ತ ಹೋರಾಟಕ್ಕಿಳಿದುವು. ಮರಿ ತಾಯಿಯನ್ನು ಹಿಂದೆ ನಿಲ್ಲಿಸಿಕೊಂಡು ಸೆಣಸಾಡಿತು. ಅನೇಕ ಮಂದಿ ವೀರರನ್ನು ಕೋರೆದಾಡೆ, ಮೂತಿ, ಉಗುರುಗಳಿಂದ ಸೀಳಿ ಕೆಡಹಿತು.

ರಾಜನಿದನ್ನು ಕಂಡು ತಂದೆಯಂತೆಯೆ ಶೂರನೀ ಮಗನೆಂದುಕೊಂಡು ಕ್ರೂರವಾದ ಅರ್ಧಚಂದ್ರಾಕಾರದ ಬಾಣವನ್ನು ಅದರ ಎದೆಗೆ ಗುರಿಯಿಟ್ಟು ಎಸೆದ. ಒಡನೆ ಆ ಹಂದಿ ನೆಲಕ್ಕೊರಗಿತು. ತಾಯಿ ದುಃಖ ತಡೆಯಲಾರದೆ ಒಂದು ಕ್ಷಣ ಅದರ ಮೇಲೆ ಒರಗಿದ್ದು ಒಡನೆ ಸಾವರಿಸಿಕೊಂಡೆದ್ದು ಶತ್ರುಗಳ ಮೇಲೆ ದಾಳಿಯಿಟ್ಟಿತು. ಬೇಟೆಗಾರರನ್ನೂ ಸೇನೆಯನ್ನೂ ಒಂದೇಸವನೆ ಕೋರೆದಾಡೆಯಿಂದ ತಿವಿದು ಕೊಲ್ಲತೊಡಗಿತು. ಎಲ್ಲರನ್ನೂ ನುಂಗುವ ಮಾರಿಯಂತೆ ಭಯಂಕರ ತಾಂಡವವಾಡಿತು.

ರಾಜನೇಕೋ ಸುಮ್ಮನಿದ್ದುದನ್ನು ಕಂಡು ರಾಣಿ ಕೇಳಿದಳು.

**ರಾಣಿ :-** ನಾಥ, ಇದೇನು ಸುಮ್ಮನಿರುವೆ ? ಸೇನೆಯನ್ನೆಲ್ಲ ನಾಶಪಡಿಸುತ್ತಿರುವ ಈ ಹಂದಿಯನ್ನೇಕೆ ಕೊಲ್ಲದೆ ಬಿಟ್ಟಿರುವೆ ?

**ರಾಜ :-** ಪ್ರಿಯೆ, ಇದು ಹೆಣ್ಣು, ನಾನು ಕೊಲ್ಲಲಾರೆ, ಕೊಲ್ಲಿಸಲಾರೆ. ಸ್ತ್ರೀವಧೆ ಮಹಾಪಾಪಕರವೆಂದು ದೇವತೆಗಳೂ ಅದಕ್ಕೆ ಹಿಂದೆಗೆಯುತ್ತಾರೆ.

ರಾಜ ಹೀಗೆನ್ನುತ್ತಿದ್ದಾಗಲೆ ಝುರ್ಝುರನೆಂಬ ಒಬ್ಬ ಬೇಡ ತೀಕ್ಷ್ಣವಾದ ಬಾಣವನ್ನು ಹಂದಿಗೆ ಗುರಿಯಿಟ್ಟೆಸೆದಿದ್ದ. ಹಂದಿ ಗಾಯಗೊಂಡು ರಕ್ತದಿಂದ ತೊಯ್ದು ಹೋದರೂ ಮುನ್ನುಗ್ಗಿ ಆ ಬೇಡನನ್ನು ಮೂತಿಯಿಂದ ತಿವಿಯಿತು. ಅವನು ನೆಲಕ್ಕುರುಳಿದ. ಉರುಳುತ್ತಿದ್ದಂತೆ ಅವನು ಬೀಸಿದ ಖಡ್ಗದಿಂದ ಹಂದಿಯೂ ಗಾಯಗೊಂಡು ನೆಲಕ್ಕುರುಳಿತು. ಆದರೂ ಸಾಯಲಿಲ್ಲ. ಮೂರ್ಛೆ ಹೊಂದಿ ಮೆಲ್ಲನೆ ಉಸಿರಾಡಿಸುತ್ತಿತ್ತು.

**ಸುಕಲೆ :-** ಮರಿಯನ್ನು ಅಷ್ಟೊಂದು ಪ್ರೀತಿಸುತ್ತಿದ್ದ ಹಂದಿ ಮೂರ್ಛೆಗೊಂಡು ಬಿದ್ದಿರುವುದನ್ನು ಕಂಡ ರಾಣಿ ಸುದೇವೆಗೆ ಅನುಕಂಪ ಮೂಡಿತು. ಆಕೆ ಹಂದಿಯ ಮೂತಿಗೂ ಮೈಗೂ ತಣ್ಣೀರು ಚಿಮುಕಿಸಿದಳು. ಹಂದಿ ಕಣ್‌ತೆರೆದು ರಾಣಿಯನ್ನೊಮ್ಮೆ ನೋಡಿ ಹೇಳಿತು.

**ಸೂಕರಿ :-** ದೇವಿ, ನಿನಗೆ ಸುಖವಾಗಲಿ. ನನಗೆ ತಣ್ಣೀರೆರೆದ ದಯಾಮಯಿ ನೀನೆ ಅಲ್ಲವೆ ? ನಿನ್ನಸ್ಪರ್ಶದಿಂದ ಮತ್ತು ದರ್ಶನದಿಂದ ನನ್ನ ಪಾಪ ತೊಳೆದು ಹೋಯಿತು.

ಹಂದಿಯಬಾಯಿಯಿಂದ ಶುದ್ಧ ಸಂಸ್ಕೃತ ಭಾಷೆಯಲ್ಲಿ ಮಾನವ ಧ್ವನಿ ಹೊರಡುತ್ತಿರುವುದನ್ನು ಕಂಡು ಆಶ್ಚರ್ಯಚಕಿತಳಾದಳು. ರಾಜನೆಡೆಗೆ ತಿರುಗಿ ಹೇಳಿದಳು.

**ರಾಣಿ:-** ಪ್ರಿಯ, ನೋಡು, ಇದೊಂದು ಆಶ್ಚರ್ಯಕರ ಘಟನೆ. ಪಶುಯೋನಿಯಲ್ಲಿ ಜನಿಸಿದ ಈ ಹೆಣ್ಣು ಮಾನವರಂತೆ ಸ್ಪಷ್ಟವಾಗಿ ಮಾತನಾಡುತ್ತಿದೆ ಈ ಅದ್ಭುತವನ್ನು ನಾನೆಂದೂ ಕಂಡಿಲ್ಲ, ಕೇಳಿಲ್ಲ.

'ಯಾರೆಂದು ಕೇಳು' ಎಂದ ರಾಜ. ರಾಣಿ ಕೇಳಿದಳು.

**ರಾಣಿ :-** ಯಾರಮ್ಮ ನೀನು? ಮನುಷ್ಯರಂತೆ ಹೇಗೆ ಮಾತನಾಡುತ್ತಿರುವೆ ? ನಿನ್ನ ಪತಿ ಪರಾಕ್ರಮದಿಂದ ಹೋರಾಡಿ ಸ್ವರ್ಗಕ್ಕೆ ಹೊರಟು ಹೋದನಲ್ಲವೆ ? ಅವನಾರು ? ನಿಮ್ಮಿಬ್ಬರ ಪೂರ್ವ ಚರಿತ್ರೆಯನ್ನು ಹೇಳುವೆಯಾ ?.

**ಸೂಕರಿ :-** ನನ್ನ ಪತಿ ಹಿಂದಿನ ಜನ್ಮದಲ್ಲಿ ಗೀತವಿದ್ಯಾಧರನೆಂಬೋರ್ವ ಗಂಧರ್ವ. ಸಂಗೀತಶಾಸ್ತ್ರದಲ್ಲಿ ನಿಪುಣ. ಈ ಮೇರು ಪರ್ವತದ ಗುಹೆಯೊಂದರಲ್ಲಿ ಪುಲಸ್ತ್ಯಮುನಿ ತಪಸ್ಸು ಮಾಡುತ್ತಿದ್ದಾಗ ಈತ ಅವನ ಬಳಿಯಲ್ಲಿಯೆ ಕುಳಿತು ಸಂಗೀತ ಸಾಧನೆ ಮಾಡುತ್ತಿದ್ದ. ಮಧುರ ಕಂಠದಿಂದ ಅವನು ಹಾಡುವಾಗ ಮುನಿಯ ಧ್ಯಾನಕ್ಕೆ ಭಂಗ ಉಂಟಾಗುತ್ತಿತ್ತು.

**ಪುಲಸ್ತ್ಯ :-** ನಿನ್ನ ಮಧುರ ಗೀತವು ದೇವತೆಗಳನ್ನೂ ಮೈಮರೆಸುವಂತಿದೆ. ಆಹಾ ! ಏನು ಸ್ವರ, ಏನು ಲಯ, ಏನು ತಾಳ ! ನನ್ನ ಮನಸ್ಸು ಚಂಚಲವಾಗುತ್ತಿದೆ. ಧ್ಯಾನವೇ ಮುಂದೆ ಸಾಗುತ್ತಿಲ್ಲ. ನೀನೀ ಸ್ಥಳವನ್ನು ಬಿಟ್ಟು ಬೇರೆಲ್ಲಿಯಾದರೂ ಹೋಗಿ ಸಂಗೀತ ಸಾಧನೆ ಮಾಡು.

**ಗೀತವಿದ್ಯಾಧರ :-** ಮುನಿಯೆ, ನಿನ್ನ ಆತ್ಮಧ್ಯಾನಕ್ಕೆ ಯಾವ ವಿಧದಲ್ಲಿಯೂ ನನ್ನ ಸಂಗೀತ ಕಡಿಮೆಯಲ್ಲ. ಯಾರಿಗೂ ದುಃಖದಾಯಕವಲ್ಲ. ಎಲ್ಲರಿಗೂ ಸುಖವನ್ನೇ ಕೊಡುತ್ತದೆ. ದೇವತೆಗಳಿಗೂ ಇದರಿಂದ ಆನಂದವಾಗುತ್ತದೆ. ಶಿವನೂ ಪರವಶನಾಗುತ್ತಾನೆ. ನವರಸಭರಿತವಾದ ಸಂಗೀತದಿಂದ ನಾಲ್ಕು ವೇದಗಳಿಗೂ ಹೆಚ್ಚಿನ ಶೋಭೆ ಬರುತ್ತದೆ. ವೇದಮಂತ್ರವನ್ನು ಮಧುರವಾಗಿ ಹಾಡಿದರೆ ಮಾತ್ರ ದೇವತೆಗಳು ತುಷ್ಟರಾಗುತ್ತಾರೆ. ಇಂಥ ಸಂಗೀತವನ್ನು ನೀನು ಹಳಿಯುವುದು ನ್ಯಾಯವೆ ?. ನಾನೇಕೆ ಬೇರೆ ಕಡೆ ಹೋಗಬೇಕು ?.

**ಪುಲಸ್ತ್ಯ :-** ಸಂಗೀತ ಒಂದು ಪವಿತ್ರವಿದ್ಯೆ ಅನ್ನುವುದು ನಿಜವೆ. ಅದನ್ನು ನಾನು ದೂಷಿಸುತ್ತಿಲ್ಲ. ಆ ಶಾಸ್ತ್ರಕ್ಕೆ ಇದೋ ನನ್ನ ವಂದನೆ ! ಆದರೆ ಅದನ್ನು ಕೇಳುತ್ತಿದ್ದರೆ ಮನಸ್ಸು ಏಕಾಗ್ರತೆಯನ್ನು ಕಳೆದುಕೊಳ್ಳುವುದು. ಚಪಲವಾದ ಇಂದ್ರಿಯಗಳು ಮನಸ್ಸನ್ನು ವಿಷಯ ಭೋಗದ ಕಡೆಗೆ ಸೆಳೆದೊಯ್ಯುವುವು. ಧ್ಯಾನಾವಸ್ಥೆಯಲ್ಲಿರಗೊಡಲಾರವು. ಧ್ಯಾನದಿಂದಲೆ ಹದಿನಾಲ್ಕು ವಿದ್ಯೆಗಳು ಸಿದ್ಧಿಸುವುವು. ಆದ್ದರಿಂದ ಎಲ್ಲಿ ಇಂಪಾದ ಧ್ವನಿ, ಕಣ್ ಸೆಳೆವ ರೂಪಗಳಿಲ್ಲವೊ, ಎಲ್ಲಿ ಯುವತಿಯರಿಲ್ಲವೊ ಅಲ್ಲಿ ಮುನಿಗಳು ತಪಸ್ಸಿಗೆ ಕುಳ್ಳಿರುತ್ತಾರೆ. ನಿನ್ನ ಸಂಗೀತ ಪವಿತ್ರ ಸುಖದಾಯಕವೆ ಆಗಿದ್ದರೂ ಈಗ ನನಗೆ ಅದು ಬೇಡ. ನೀನು ಬೇರೆ ಕಡೆ ಹೋಗು.

**ಗೀತವಿದ್ಯಾಧರ :-** ಇಂದ್ರಿಯಗಳನ್ನು ಗೆದ್ದವ. ಮಧುರ ಧ್ವನಿಗೆ, ಮೋಹಕರೂಪಿಗೆ ಮರುಳಾಗದೆ ಧ್ಯಾನಮಾಡಬಲ್ಲವ ನಿಜವಾದ ಯೋಗಿ, ಧೀರ ಸಾಧಕ. ನಿನಗೆ ಆ ಧೈರ್ಯ ಇಲ್ಲ. ಇಂದ್ರಿಯ ನಿಗ್ರಹವಿಲ್ಲ. ಸುಮ್ಮನೆ ನನ್ನ ಗೀತವನ್ನು ಹಳಿಯುತ್ತಿರುವೆ. ನನ್ನ ಸಂಗೀತದ ಪ್ರಭಾವವನ್ನು ದೇವತೆಗಳೂ ಮೀರಲಾರರೆಂಬುದನ್ನು ತಿಳಿದುಕೊ. ಶಕ್ತಿ ಇಲ್ಲದವರು ಈ ವನವನ್ನು ಬಿಟ್ಟು ಹೋಗಲಿ. ಈ ವನ ನಿನ್ನೊಬ್ಬನದೆ ಅಲ್ಲ. ಇದರ ಮೇಲೆ ಎಲ್ಲರಿಗೂ ಸಮಾನ ಹಕ್ಕು ಇದೆ. ನಾನೇಕೆ ಬಿಟ್ಟು ಹೋಗಬೇಕು ? ನೀನು ಹೋಗು, ಇಲ್ಲವೆ ಇರು. ಅದು ನಿನ್ನಿಷ್ಟ.

ಈ ಮೂರ್ಖತನವನ್ನು ಕಂಡು ಮುನಿ ಕ್ಷಣಕಾಲ ಚಿಂತಿಸಿ ಕ್ಷಮಿಸಿಬಿಟ್ಟ. ತಾನೆ ಬೇರೆ ಕಡೆಗೆ ಹೊರಟುಹೋದ. ಕೆಲವು ದಿನಗಳು ಕಳೆದುವು. ಮುನಿ ಹಿಂತಿರುಗಿ ಬರಲಿಲ್ಲ. ಮುನಿಗೆ ನಾನೆಂದರೆ ಭಯ ಎಂದುಕೊಂಡು ಹೆಮ್ಮೆಪಟ್ಟ ಗೀತವಿದ್ಯಾಧರ 'ಅವನೆಲ್ಲಿದ್ದಾನೆ ? ಏನು ಮಾಡುತ್ತಿದ್ದಾನೆ. ? ಸಿಕ್ಕರೆ ಅಲ್ಲಿಯೂ ಕಿರುಕುಳ ಕೊಡುವ ಹುಚ್ಚು ಕುತೂಹಲದಿಂದ ಮುನಿಯನ್ನು ಅರಸುತ್ತ ಕಾಡಿನಲ್ಲಿ ಅಲೆಯತೊಡಗಿದ. ಒಂದೆಡೆ ಏಕಾಂತದಲ್ಲಿ ಕುಳಿತು ಏಕಾಗ್ರಚಿತ್ತದಿಂದ ಧ್ಯಾನಮಾಡುತ್ತಿದ್ದ ಮುನಿಯನ್ನು ಕಂಡುಹಿಡಿದ. ಉತ್ಸಾಹದಿಂದ ಒಂದು ಹಂದಿಯ ರೂಪವನ್ನು ತಾಳಿ ಅವನ ಬಳಿಗೆ ಹೋದ. ಸಾಧ್ಯವಿದ್ದಷ್ಟೂ ಕಿರುಕುಳ ಕೊಡತೊಡಗಿದ. ಪದೇಪದೇ ಮೂತಿಯಿಂದ ತಿವಿದ. ಅವನ ಮುಂದೆ ಮಲಮೂತ್ರ ವಿಸರ್ಜಿಸಿದ, ಮೈಮೇಲೆ ಹಾರಿ ಬಿದ್ದ, ಕುಣಿದ. ಆದರೂ ಏನೂ ತಿಳಿಯದ ಒಂದು ಪ್ರಾಣಿ ಎಂದು ಮುನಿ ತಡೆದುಕೊಂಡು ಸುಮ್ಮನಿದ್ದ. ಒಮ್ಮೆ ಹಂದಿ ಜೋರಾಗಿ ಅಟ್ಟಹಾಸಗೈದು ಸುಸ್ವರದಿಂದ ಹಾಡಲು ಪ್ರಾರಂಭಿಸಿತು. ಈಗ

ಮುನಿಗೆ ತಿಳಿದು ಹೋಯಿತು. ಇದೆಲ್ಲ ಆ ಮೂರ್ಖ ಗಂಧರ್ವನ ಹುಚ್ಚಾಟ. ಇದು ನಿಜವಾದ ಹಂದಿಯಲ್ಲ ಎಂದು ಕೋಪದಿಂದ ನೀನು ಹಂದಿಯಾಗೆ ಜನಿಸು ಎಂದು ಶಪಿಸಿದ. ಭಯದಿಂದ ನಡುಗುತ್ತ ಇಂದ್ರನಲ್ಲಿ ಮೊರೆಯಿಟ್ಟ.

**ಗೀತವಿದ್ಯಾಧರ:-** ದೇವೇಂದ್ರ, ನಿನಗೆ ಇಷ್ಟವಾದ ಒಂದು ಕಾರ್ಯವನ್ನು ಮಾಡಲು ಹೋದ ನನಗೆ, ಅನರ್ಥ ಉಂಟಾಗಿದೆ. ಪುಲಸ್ತ್ಯಮುನಿ ಉಗ್ರವಾದ ತಪಸ್ಸು ಮಾಡುತ್ತಿದ್ದಾನೆ. ಅವನಿಗೆ ನಾನು ಕಿರುಕುಳ ಕೊಟ್ಟೆ. ಈಗ ಅವನ ಶಾಪದಿಂದ ನನ್ನ ದೇವತ್ವ ಹೊರಟು ಹೋಗುತ್ತಿದೆ. ನಾನು ಪಶುಯೋನಿಯಲ್ಲಿ ಬೀಳುತ್ತಲಿದ್ದೇನೆ, ಕಾಪಾಡು. ದೇವೇಂದ್ರ ಎಲ್ಲ ವೃತ್ತಾಂತವನ್ನೂ ಕೇಳಿ ಅವನೊಂದಿಗೆ ಮುನಿಯ ಬಳಿಗೆ ಬಂದು 'ಮುನೀಶ್ವರ, ಕ್ಷಮಿಸು, ಶಾಪದಿಂದ ಬಿಡುಗಡೆಯನ್ನನುಗ್ರಹಿಸು' ಎಂದು ಕೇಳಿಕೊಂಡ. ಮುನಿಯ ಕೋಪ ಶಾಂತವಾಯಿತು.

**ಪುಲಸ್ತ್ಯ :-** ದೇವರಾಜ, ನಿನ್ನ ಕೋರಿಕೆಯನ್ನು ಮನ್ನಿಸಿ ಈತನನ್ನು ಕ್ಷಮಿಸಿದ್ದೇನೆ. ಮನುಕುಮಾರ ಇಕ್ಷ್ವಾಕು ಮಹಾರಾಜನ ಕೈಯಿಂದ ಮರಣ ಉಂಟಾದಾಗ ಶಾಪ ನಿವೃತ್ತಿಯಾಗುವುದು.

**ಸೂಕರಿ :-** ಇದು ನನ್ನ ಪತಿಯ ಪೂರ್ವ ವೃತ್ತಾಂತ. ನನ್ನ ಪೂರ್ವಜನ್ಮದ ಕಥೆ ಇನ್ನೂ ಘೋರವಾಗಿದೆ. ಹೇಳುತ್ತೇನೆ ಕೇಳು.

**ಸುಕಲೆ :-** ಸುದೇವೆ, ಆ ಹೆಣ್ಣು ಹಂದಿಯನ್ನು ಕುರಿತು ಹೇಳಿದಳು.

**ಸುದೇವೆ:-** ಈ ಪಶುಜನ್ಮದಲ್ಲಿ ನೀನು ಸಂಸ್ಕೃತ ಭಾಷೆಯನ್ನು ಹೇಗೆ ಆಡುತ್ತಿರುವೆ ? ನಿನ್ನ ಮತ್ತು ನಿನ್ನ ಪತಿಯ ಪೂರ್ವಜನ್ಮ ವೃತ್ತಾಂತವನ್ನು ಹೇಗೆ ತಿಳಿದೆ ?.

**ಸೂಕರಿ :-** ಈ ಪಶುಜನ್ಮದಲ್ಲಿ ಬಂದಿರುವ ನನಗೆ ಆಯುಧಗಳಿಂದ ತಲೆಗೆ ಏಟು ಬಿದ್ದು ಮೂರ್ಛೆ ಹೊಂದುವವರೆಗೂ ಮೋಹ, ಪಾಪಗಳೇ ನನ್ನನ್ನು ಕವಿದಿದ್ದುವು. ಕರುಣಾಮಯಿಯಾದ ನೀನು ನಿನ್ನ ಪವಿತ್ರಹಸ್ತದಿಂದ ನನ್ನ ಮೈಮೇಲೆ ನೀರೆರೆದೆ. ಆದರಿಂದ ನನ್ನ ಎಲ್ಲ ಅಜ್ಞಾನ, ಮೋಹ, ಪಾಪಗಳು ಬೆಳಕು ಬಿದ್ದೊಡನೆ ತೊಲಗುವ ಅಂಧಕಾರದಂತೆ ಎಲ್ಲೋ ಹೊರಟು ಹೋದುವು. ನನ್ನ ಮತ್ತು ನನ್ನ ಪತಿಯ ಪೂರ್ವಜನ್ಮವೃತ್ತಾಂತ ಸ್ಮರಣೆಗೆ ಬಂದಿತು.

ಈಗ ನಾನು ಪೂರ್ವಜನ್ಮದಲ್ಲಿ ಮಾಡಿದ ಪಾಪದ ಕಥೆಯನ್ನು ಹೇಳುವೆ.

ಕಳಿಂಗದೇಶದ ಶ್ರೀಪುರದಲ್ಲಿ ವಸುದತ್ತನೆಂಬ ಉತ್ತಮ ಬ್ರಾಹ್ಮಣನಿದ್ದ. ನಾನು ಅವನ ಮಗಳಾಗಿ ಜನಿಸಿದೆ. ನನಗೆ ಸುದೇವೆ ಎಂದು ಹೆಸರಿಟ್ಟಿದ್ದ. ನನ್ನನ್ನು ಅರೆಕ್ಷಣವೂ ಬಿಟ್ಟಿರಲಾಗದಷ್ಟು ಮಮತೆ ಅವನಿಗಿತ್ತು. ನಾನೂ ಅನುಪಮ ರೂಪವತಿಯಾಗಿದ್ದೆ. ಯೌವನ ಬಂದಾಗ ನನ್ನನ್ನು ಕಂಡವರೆಲ್ಲ ಕನ್ಯಾರ್ಥಿಗಳಾಗಿ ನನ್ನ ತಂದೆಯ ಬಳಿಗೆ ಬರುತ್ತಿದ್ದರು. ಆದರೆ ಅವನು ಯಾರಿಗೂ ನನ್ನನ್ನು ಕೊಡಲು ಇಷ್ಟಪಡಲಿಲ್ಲ. ವಯಸ್ಸಿಗೆ ಬಂದ ಹುಡುಗಿಯನ್ನು ಮನೆಯಲ್ಲಿ ಹಾಗೇ ಇಟ್ಟು ಕೊಂಡಿರುವುದು ನನ್ನ ತಾಯಿಗೆ

ಸರಿತೋರಲಿಲ್ಲ. ಒಂದು ದಿನ ಆಕೆ ಅಂದುಬಿಟ್ಟಳು. 'ನಮ್ಮ ಹುಡಿಗಿಗೆ ವಯಸ್ಸಾಗಿದೆ. ಮದುವೆಮಾಡಿಕೊಡಲು ಏಕಿನ್ನೂ ವಿಳಂಬಮಾಡುತ್ತಿದ್ದೀರಿ. ಒಳ್ಳೆಯ ಬ್ರಾಹ್ಮಣ ಯುವಕನಿಗೆ ಕೊಟ್ಟು ಬಿಡಬಾರದೆ ?'

**ವಸುದತ್ತ**:- ನಾನೇನು ಮಾಡಲಿ? ಮಗಳ ಮೇಲಿನ ಮೋಹ ನನ್ನನ್ನು ಕಟ್ಟಿಹಾಕಿದೆ. ಆಕೆ ನನ್ನ ಪ್ರಾಣ ಅಳಿಯನಾಗುವನು ಮುಂದೆ ನಮ್ಮ ಮನೆಯಲ್ಲಿಯೆ ಇರುವನಾದರೆ ನಾನೀಗಲೆ ಕನ್ಯಾದಾನಕ್ಕೆ ಸಿದ್ಧನಾಗಿದ್ದೇನೆ.

ಕೌಶಿಕ ಗೋತ್ರದ ಒಬ್ಬ ಬ್ರಾಹ್ಮಣ, ಸರ್ವ ವಿದ್ಯಾಪಾರಂಗತ, ಗುಣವಂತ, ಭಿಕ್ಷಾಟನ ಮಾಡುತ್ತ ನಮ್ಮ ಮನೆ ಬಾಗಿಲಿಗೆ ಬಂದ. ನಮ್ಮ ತಂದೆ ಕೇಳಿದರು, 'ನೀನಾರು ? ನಿನ್ನ ಹೆಸರೇನು ? ಗೋತ್ರವೇನು ?' ಅವನೆಂದ, 'ನಾನು ಶಿವಶರ್ಮ ಕುಶಿಕ ಗೋತ್ರದವನು ವೇದ ಓದಿದ್ದೇನೆ. ತಂದೆ ತಾಯಿಗಳಿಲ್ಲ. ನಾಲ್ಕುಮಂದಿ ಸೋದರರಿದ್ದಾರೆ. ಎಲ್ಲರೂ ವೇದಾಭ್ಯಾಸ ಮಾಡಿದ್ದಾರೆ. ಈ ಯುವಕ ಮಗಳಿಗೆ ಯೋಗ್ಯ ವರ, ತಂದೆ ತಾಯಿಗಳಿಲ್ಲದವನಾದುದರಿಂದ ನಮ್ಮ ಮನೆಯಲ್ಲಿಯೆ ಇರಬಲ್ಲನೆಂದು ಸಂತೋಷದಿಂದ ನನ್ನ ತಂದೆ ಒಂದು ಶುಭ ಮುಹೂರ್ತದಲ್ಲಿ ನನ್ನನ್ನು ಧಾರೆಯೆರೆದು ಕೊಟ್ಟರು.

ನನ್ನ ಪತಿ ನಮ್ಮ ಮನೆಯಲ್ಲಿಯೆ ಇದು ಬಿಟ್ಟ. ಆದರೂ ನಾನು ಅವನ ಶುಶ್ರೂಷೆ ಮಾಡಲಿಲ್ಲ. ಅವನು ಬಡವ, ನಿರ್ಗತಿಕ, ನಾನು ಶ್ರೀಮಂತಮನೆತನದವಳೆಂಬ ಗರ್ವದಿಂದ, ನಾನು ಅವನೊಡನೆ ಒಂದು ಒಳ್ಳೆಯ ಮಾತನ್ನೂ ಆಡದಷ್ಟು ದುಷ್ಟಳಾದೆ. ಕುಲಟೆಯರ ಸಂಗಮಾಡಿದೆ. ತಂದೆ-ತಾಯಿಗಳು, ಸೋದರರು ಎಲ್ಲರನ್ನೂ ಕಡೆಗಣಿಸಿ ಸ್ವಚ್ಛಂದವಾಗಿ ಊರೆಲ್ಲ ಅಲೆಯತೊಡಗಿದೆ. ನನ್ನ ತಂದೆ-ತಾಯಿಗಳ ಮೇಲಿನ ಆದರದಿಂದ ಪತಿ ಒಮ್ಮೆಯೂ ನನ್ನನ್ನು ಆಕ್ಷೇಪಿಸಲಿಲ್ಲ. ಇದನ್ನೆಲ್ಲ ನೋಡುತ್ತ ತಂದೆ-ತಾಯಿಗಳು ನೊಂದು ಕೊಂಡರು. ಪತಿಯೂ ಊರು ಬಿಟ್ಟು ಹೊರಟುಹೋದ. ನನ್ನ ತಂದೆಗಾದ ವ್ಯಥೆ ಅಷ್ಟಿಷ್ಟಲ್ಲ. ವ್ಯಥೆಯಿಂದ ಸೊರಗಿ ಹೋದರು. ರೋಗದಿಂದ ಬಳಲುವವರಂತೆ ಕಂಡರು. ನನ್ನ ತಾಯಿ ಕೇಳಿದರು. 'ಏಕೆ ಇಷ್ಟೊಂದು ವ್ಯಥೆ ಪಡುತ್ತಿದ್ದೀರಿ ?' ನಮ್ಮ ತಂದೆ ಆಗಲೆ ತಾನೂ ಮನೆಬಿಟ್ಟು ಎಲ್ಲಿಗಾದರೂ ಹೋಗಿ ಮನಃಶಾಂತಿ ಪಡೆಯಲು ಬಯಸಿದ್ದರು. ಅವರೆಂದರು, 'ನನ್ನ ಪ್ರೀತಿಯ ಮಗಳು ಅಳಿಯನನ್ನೋಡಿಸಿ ಬಿಡುವಷ್ಟು ದುಷ್ಟಳಾದಳು. ಕುಲಕ್ಕೆ ಕಳಂಕ ಹಚ್ಚಿದಳು. ಅವಳು ಕುಲಟೆಯಾಗಿ ಅಲೆಯುತ್ತಿದ್ದರೂ ಅಳಿಯ ನನ್ನ ಮೇಲಿನ ಸ್ನೇಹದಿಂದ ಒಂದೂ ಮಾತು ಆಡಲಿಲ್ಲ. ಅಂಥ ಒಳ್ಳೆಯ ಸ್ವಭಾವದ ಪತಿಯನ್ನೂ ಬಿಟ್ಟಳು. ನೀಚಳು, ಮಹಾಪಾಪಿಷ್ಠಳು. ಅವಳಿರುವ ಈ ಮನೆಯನ್ನು ನಾನೂ ಬಿಟ್ಟು ಎಲ್ಲಿಗಾದರೂ ಹೋಗುವೆ.'

ನನ್ನ ತಾಯಿ ಸಮಾಧಾನಪಡಿಸುತ್ತ ಹೇಳಿದಳು.

**ಬ್ರಾಹ್ಮಣ** :- ಪ್ರಿಯ, ನಿನಗೆ ಇಂದು ಜ್ಞಾನೋದಯವಾಯಿತು. ನಿನ್ನ ಪ್ರೀತಿಯ ಮಗಳ ಗುಣದೋಷಗಳ ಪರಿಜ್ಞಾನ ಉಂಟಾಯಿತು. ಆದರೆ ನಿನ್ನ ಅತಿಯಾದ ಪ್ರೀತಿಯೆ ಮಗಳನ್ನು ಕೆಡಿಸಿತು ಎಂಬುದನ್ನೂ ನೀನರಿಯಬೇಕು. ಮಕ್ಕಳನ್ನು ಐದು ವರ್ಷಗಳವರೆಗೆ ಮನಃಪೂರ್ತಿಲಾಲಿಸಬೇಕು.

**ತಾವದ್ಧಿ ಲಾಲಯೇತ್ ಪುತ್ರಂ ಯಾವತ್ ಸ್ಯಾತ್ ಪಂಚವಾರ್ಷಿಕಃ**

ಬಳಿಕ ಮಗುವಿನ ಅನ್ನಪಾನ, ಆರೈಕೆಗಳ ಜೊತೆಗೆ ಗುಣ-ನೀತಿಗಳ ಶಿಕ್ಷಣದ ಕಡೆಗೂ ಗಮನ ಹರಿಸಬೇಕು.

**ಗುಣ ಶಿಕ್ಷಾಸು ನಿರ್ಮೋಹಃ ಪಿತಾ ಭವತಿ ಸರ್ವದಾ ।**
**ಪಾಲನೇ ಪೋಷಣೇ ಕಾಂತಸಮೋಹಃ ಪರಿಜಾಯತೇ ॥**

ಗುಣ, ನೀತಿ, ಸಂಹಿತೆಗಳನ್ನು ಬೋಧಿಸುವಾಗ ತಂದೆ ಮಗನಲ್ಲಿ ಮೋಹವನ್ನು ತೋರಕೂಡದು. ಪಾಲನೆ-ಪೋಷಣೆಗಳನ್ನು ಮಾಡುವಾಗ ಅದನ್ನು ತೋರಬಹುದು.

ಮಗನನ್ನೆಂದೂ ಹೊಗಳಕೂಡದು. ಸದಾ ನಿಷ್ಠುರನಾಗಿದ್ದು ಅವನ ವಿದ್ಯೆಗುಣಗಳ ವಿಕಾಸದ ಕಡೆಗೆ ಗಮನವಿಡಬೇಕು. ಹೀಗೆ ತಾಯಿ ಮಗಳನ್ನು, ಅತ್ತೆ ಸೊಸೆಯನ್ನು, ಗುರು ಶಿಷ್ಯನನ್ನು, ಪತಿಯು ಪತ್ನಿಯನ್ನು, ರಾಜನು ಮಂತ್ರಿಯನ್ನು, ಕುದುರೆ ಸವಾರನು ಕುದುರೆಯನ್ನು, ಮಾವಟಿಗನು ಆನೆಯನ್ನು ಶಿಕ್ಷಣದ ದೃಷ್ಟಿಯಿಂದ ಎಂದೂ ಸಲುಗೆಯಿಂದ ನೋಡಿಕೊಳ್ಳಕೂಡದು.

ನೀನೂ ಆ ಅಳಿಯನೂ ಸೇರಿ ಮಗಳ ಸ್ವಚ್ಛಂದ ಪ್ರವೃತ್ತಿಯನ್ನು ಪ್ರೋತ್ಸಾಹಿಸಿ ಅವಳನ್ನು ಕೆಡಿಸಿದ್ದೀರಿ. ಎಂಟು ವರ್ಷಗಳು ತುಂಬಿದ ಮೇಲೆ ಮಗಳನ್ನು ಮನೆಯಲ್ಲಿಟ್ಟು ಕೊಳ್ಳುವುದೆ ತಪ್ಪು. ಹಾಗೆ ಇಟ್ಟುಕೊಂಡರೆ ಅವಳು ಮಾಡುವ ಪಾಪಕ್ಕೆ ತಂದೆ-ತಾಯಿಗಳೇ ಹೊಣೆಯಾಗುತ್ತಾರೆ. ಆದ್ದರಿಂದ ಪತಿಗೃಹದಲ್ಲಿಯೇ ಆಕೆ ಇದ್ದು, ಪತಿಯ ಶುಶ್ರೂಷೆ ಮಾಡುತ್ತಿರಬೇಕು. ಅಲ್ಲಿ ಅವಳು ಪಾಪ ಮಾಡಿದರೆ ಅದಕ್ಕೆ ಪತಿ ಹೊಣೆಯಾಗುತ್ತಾನೆ. ಒಳ್ಳೆಯ ಶೀಲವತಿಯಾಗಿದ್ದು ಮಕ್ಕಳು ಪರಿವಾರವನ್ನು ಆರೈಕೆ ಮಾಡುತ್ತಿದ್ದರೆ ಕುಲ ಬೆಳಗುತ್ತದೆ. ತಂದೆಗೂ ಕೀರ್ತಿ ಬರುತ್ತದೆ.

ಮದುವೆ ಮಾಡಿಕೊಟ್ಟ ಹೆಣ್ಣನ್ನು ತಿರುಗಿ ಮನೆಯಲ್ಲಿಯೇ ಇರಿಸಿಕೊಳ್ಳಕೂಡದೆಂಬ ವಿಷಯದಲ್ಲಿ ಇಪ್ಪತ್ತೆಂಟನೇ ದ್ವಾಪರಯುಗದಲ್ಲಿ ನಡೆದ ಯದುವಂಶದ ಉಗ್ರಸೇನ ರಾಜನ ಕಥೆ ನಿದರ್ಶನವಾಗಬಲ್ಲುದು. ಅದನ್ನು ಹೇಳುತ್ತೇನೆ ಕೇಳು.

**ಬ್ರಾಹ್ಮಣಿ** :- ಮಧುರೆಯಲ್ಲಿ ಯದುವಂಶದ ಉಗ್ರಸೇನ ರಾಜ ಧರ್ಮದಿಂದ ರಾಜ್ಯವಾಳುತ್ತಿದ್ದ. ವಿದರ್ಭದೇಶದ ಸತ್ಯಕೇತುವಿನ ಮಗಳು ಪದ್ಮಾವತಿ ಅವನ ರಾಣಿ. ಹೆಣ್ಣಿನಲ್ಲಿರಬೇಕಾದ ಎಲ್ಲ ಸದ್ಗುಣ ಆಕೆಯಲ್ಲಿತ್ತು. ಸಾಕ್ಷಾತ್ ಲಕ್ಷ್ಮಿಯಂತಿದ್ದ ಅವಳ ಸಾನ್ನಿಧ್ಯದಲ್ಲಿ ಉಗ್ರಸೇನ ಉತ್ತಮ ಸುಖವನ್ನು ಕಾಣುತ್ತಿದ್ದ . ಅವಳ ಪ್ರೀತಿ-ಸ್ನೇಹಗಳಿಗೆ ಮುಗ್ಧನಾಗಿದ್ದು ಅವಳಿಲ್ಲದೆ ಊಟವನ್ನು ಮಾಡುತ್ತಿದ್ದಿಲ್ಲ. ಯಾವ ಆಟಕ್ಕೂ ಮನಸ್ಸು ಮಾಡುತ್ತಿದ್ದಿಲ್ಲ. ಪ್ರಾಣಕ್ಕಿಂತ ಮಿಗಿಲಾಗಿದ್ದಳಾಕೆ.

ಒಂದು ದಿನ ಉಗ್ರಸೇನನ ಬಳಿಗೆ ವಿದರ್ಭದಿಂದ ಒಬ್ಬ ದೂತ ಬಂದು ಹೇಳಿದ. 'ಮಹಾರಾಜ ಸತ್ಯಕೇತು ನನ್ನನ್ನು ಕಳಿಸಿದ್ದಾನೆ. ಅವನು ಮಗಳನ್ನೊಮ್ಮೆ ನೋಡಬೇಕಂತೆ! ಕೆಲದಿನಗಳ ಮಟ್ಟಿಗೆ ಆಕೆಯನ್ನು ಕಳಿಸಿಕೊಡಬೇಕೆಂದು ಪ್ರಾರ್ಥಿಸಿದ್ದಾನೆ. 'ಮಾವನ ಪ್ರೀತಿ, ಸ್ನೇಹ, ದಾಕ್ಷಿಣ್ಯಗಳಿಗೆ ಕಟ್ಟುಬಿದ್ದು ಉಗ್ರಸೇನ ರಾಣಿಯನ್ನು ಹೇಗೋ ಕಳಿಸಿಕೊಟ್ಟ.

ತವರಿಗೆ ಬಂದ ಪದ್ಮಾವತಿಯನ್ನು ರಾಜ ಸತ್ಯಕೇತು ಆನಂದದಿಂದಲೂ ಪ್ರೀತಿಯಿಂದಲೂ ಉಪಚರಿಸಿದ. ಆಕೆಯೂ ಸುಖದಿಂದ ತಂದೆ-ತಾಯಿಯರ ಬಳಿ ಇದ್ದಳು. ಗೆಳತಿಯರೊಂದಿಗೆ ಯಥೇಚ್ಛ ವಿಹಾರಮಾಡಿದಳು. ಎಳವೆಯಲ್ಲಿ ಆಟ ಆಡಿದಂತೆ ಈಗಲೂ ಅದೆ ವನ, ಉಪವನ, ಉದ್ಯಾನ, ಕೊಳಗಳಲ್ಲಿ, ಲತಾಮಂಟಪಗಳಲ್ಲಿ ಆಡತೊಡಗಿದಳು. ಸಣ್ಣ ಹುಡುಗಿಯಂತೆ ನಾಚಿಕೆ ಸಂಕೋಚಗಳನ್ನು ಬದಿಗಿಟ್ಟು, ಈ ಸುಖ ಮಾವನ ಮನೆಯಲ್ಲಿ ದೊರೆಯದು ಎಂದುಕೊಳ್ಳುತ್ತ ಸ್ವಚ್ಛಂದವಾಗಿ ವಿಹರಿಸಿದಳು.

**ಬ್ರಾಹ್ಮಣ :-** ಒಮ್ಮೆ ಪದ್ಮಾವತಿ ವಿಹಾರಮಾಡುತ್ತ ಒಂದು ಸುಂದರವಾದ ವನವನ್ನು ಹೊಕ್ಕಳು. ಅಲ್ಲಿ ಕದಲಿ, ಸಾತ, ತಮಾಲ, ನಾರಿಕೇಲ, ಪೂಗ, ಮಾತುಲಿಂಗ, ನಾರಂಗ, ಜಂಬು, ಕುಟಕ, ವಟ ಮುಂತಾದ ವೃಕ್ಷಗಳಿದ್ದವು. ಚಂಪಕ, ಪಾಟಲ, ಅಶೋಕ, ಬಕುಲ ಮುಂತಾದ ಹೂಗಳು ಅರಳಿದ್ದುವು. ಅಲ್ಲಲ್ಲಿ ತುಂಬಿದ ಕೊಳಗಳು, ಅವುಗಳಲ್ಲಿ ಅರಳಿದ ನಾನಾ ಬಗೆಯ ಕಮಲ, ಉತ್ಪಲ, ಕಲ್ಹಾರಗಳು, ಆಡುವ ಹಂಸ. ಬಾತುಕೋಳಿಗಳು ಕಣ್ಣುಗಳಿಗೆ ಹಬ್ಬ ಉಂಟು ಮಾಡುತ್ತಿದ್ದುವು. ಕೋಗಿಲೆಗಳು ಹಾಡುತ್ತಿದ್ದುವು. ಹಕ್ಕಿಗಳು ಚಿಲಿಪಿಲಿ ಗುಟ್ಟುತ್ತಿದ್ದುವು. ದುಂಬಿಗಳು ಝೇಂಕರಿಸುತ್ತಿದ್ದುವು. ಈ ಸೌಂದರ್ಯ, ಮಾಧುರ್ಯಗಳನ್ನು ಸವಿದ ಪದ್ಮಾವತಿ ಸ್ತ್ರೀಸ್ವಭಾವಕ್ಕೆ ಸಹಜವಾದ ಚಾಪಲ್ಯಕ್ಕೊಳಗಾದಳು. ಸುಂದರವಾದೊಂದು ಕೊಳವನ್ನು ಕಂಡು ಅಲ್ಲಿ ನೀರಾಟಕ್ಕಿಳಿದಳು. ಮದುವೆಯಾದ ಪ್ರಬುದ್ಧ ಸ್ತ್ರೀ ತಾನೆನ್ನುವುದನ್ನು ಮರೆತು ನಿಃಸಂಕೋಚವಾಗಿ ನಗುತ್ತ, ಹಾಡುತ್ತ ತಲ್ಲೀನಳಾಗಿ ಸಖಿಯರೊಂದಿಗೆ ಜಲಕ್ರೀಡೆಯಾಡಿದಳು.

ಆಗ ಕುಬೇರನ ಪರಿವಾರಕ್ಕೆ ಸೇರಿದ ಗೋಭಿಲನೆಂಬೊಬ್ಬ ದೈತ್ಯ ದಿವ್ಯ ವಿಮಾನವನ್ನೇರಿ ಆಕಾಶದಲ್ಲಿ ಆ ಮಾರ್ಗದಲ್ಲಿ ಹೋಗುತ್ತಿದ್ದ. ಚೆಲುವೆ ಪದ್ಮಾವತಿ ಸಖಿಯರೊಂದಿಗೆ ನಿರ್ಭಯವಾಗಿ ನೀರಾಟವಾಡುವುದನ್ನು ಆತ ಕಂಡು 'ಯಾರು ಈ ಮಾಟಗಾತಿ ? ಆ ಮನ್ಮಥನ ಅರಗಿಣಿ ರತಿ ಎಂದರೆ ಈಕೆಯೇ ಇರಬಹುದೇ ? ಇಲ್ಲವೆ ಈಕೆ ಲಕ್ಷ್ಮೀಯೆ, ಪಾರ್ವತಿಯೆ, ಶಚಿಯೆ? ಮೋಹಕವಾಗಿ ನಗುತ್ತಿರುವ ಈ ಹೆಣ್ಣಿಗೆ ಯಾರು ಸಾಟಿ ಈ ಲೋಕದಲ್ಲಿ? ಹಂಸದಂತೆ ನೀರಿನಲ್ಲಿ ಆಡುತ್ತಿದ್ದಾಳೆ. ಎಂಥ ಮೈಮಾಟ! ಎಂಥ ಭಂಗಿಗಳು. ದುಂಡಾಗಿ ಕಣ್ಸೆಳೆವ ಎದೆಗಳ ಈ ಬಾಲೆ ಯಾರ ಹೆಣ್ಣಾಗಿರಬಹುದು? ಎಂದು ಆಲೋಚಿಸಿದ. ಮೊದಲಿಗೆ ಯಾರ ಹೆಣ್ಣಾದರೇನು ? ಎಂದುಕೊಂಡ. ಆದರೆ ಮರುಕ್ಷಣದಲ್ಲಿ ಜ್ಞಾನಶಕ್ತಿಯಿಂದ ಅರಿತ, 'ಈಕೆ ಉಗ್ರಸೇನನ ಮಡದಿ, ಪತಿವ್ರತೆ. ಒಳ್ಳೆಯ ಆತ್ಮಬಲ ಉಳ್ಳವಳು. ಸುಲಭವಾಗಿ ವಶಳಾಗುವವಳಲ್ಲ. ಆ ಉಗ್ರಸೇನನಂಥ ಮೂರ್ಖ! ಇಂಥ ಚೆಲುವಿನ ಖನಿಯನ್ನು ಬಿಟ್ಟೂ ಬದುಕಿದ್ದಾನಲ್ಲ ! ಸದಾ ಈಕೆಯ ಬಳಿಯಲ್ಲಿಯೇ ಇರಲು ಅವನಿಗೆ ಅದೃಷ್ಟಬೇಕು. ಆತ ನಪುಂಸಕನಿರಲೂ ಬಹುದು. ನಾನಂತೂ ಈಕೆಯನ್ನನುಭವಿಸದೆ ಹೋದೆನಾದರೆ ಸಾಯುವುದು ನಿಶ್ಚಿತ, ಆ ಕಾಮನ ಶಕ್ತಿಗೆ ಇದಿರುಂಟೆ ? ಆದರೆ ಪತಿವ್ರತೆಯಾದೀಕೆಯನ್ನು ಉಪಾಯದಿಂದಲೇ ಪಡೆಯಬೇಕು. ಹೇಗೆ ? ಹೀಗೆ ಯೋಚಿಸಿ ಮಾಯೆಯಿಂದ ಆ ಉಗ್ರಸೇನನಂತೆಯೇ ರೂಪುತಳೆದ, ಅವನದೆ ನಡೆ. ಅವನದೆ ಮಾತು, ಅವನದೆ ಸ್ವರ, ಅವನಂತೆಯೇ ವೇಷ-ಭೂಷಣಗಳು. ದಿವ್ಯಮಾಲೆ, ಗಂಧ, ಆಭರಣಗಳನ್ನು ಧರಿಸಿ ಆ ವನದಲ್ಲಿಯೇ ಒಂದೆಡೆ ಅಶೋಕವೃಕ್ಷದ

ನೆರಳಲ್ಲಿ ಹಾಸುಗಲ್ಲಿನ ಮೇಲೆ ಕುಳಿತು ವೀಣೆನುಡಿಸುತ್ತ ಮಧುರವಾಗಿ ಹಾಡತೊಡಗಿದ. ಆ ನಾದ ಮಾಧುರ್ಯಕ್ಕೆ ಲೋಕ ಮೈಮರೆಯುವಂತಿತ್ತು. ತಾಳಲಯ ಬದ್ಧವಾಗಿ ತಲ್ಲೀನನಾಗಿ ಭಾವಪರವಶತೆಯಿಂದ ಆತ ಹಾಡುತ್ತಿದ್ದಂತೆ ಪದ್ಮಾವತಿ ಕೇಳಿ ಉತ್ಕಂಠಿತಳಾದಳು. 'ಇಷ್ಟೊಂದು ಸೊಗಸಾಗಿ ಹಾಡುವವನು ಯಾರೀತ ?' ಎಂದು ಉತ್ಸುಕತೆಯಿಂದ ಆ ಧ್ವನಿ ಬರುವ ಕಡೆಗೆ ಓಡಿದಳು. 'ಅಲ್ಲಿ ಹಾಸುಗಲ್ಲಿನ ಮೇಲೆ ನನ್ನ ನಾಥ ಕುಳಿತಿದ್ದಾನೆ ! ರಾಜ್ಯವನ್ನು ಬಿಟ್ಟು ಇಲ್ಲಿಗೆ ಯಾವಾಗ ಬಂದನೊ ?, ಎಂದು ಆಕೆ ಅಂದುಕೊಳ್ಳುತ್ತಿದ್ದಾಗ ಆತ ಸಂಭ್ರಮದಿಂದೆದ್ದು 'ಬಾ, ಪ್ರಿಯೆ, ಬಾ' ಎಂದು ಕರೆದ. 'ದೇವಿ, ನಿನ್ನನ್ನಗಲಿ ನಾನು ಬದುಕಲಾರೆ' ಎಂದ. ಪತಿಯನ್ನಗಲಿಯೂ ನಿರಾತಂಕವಾಗಿ ವಿಹರಿಸುತ್ತಿದ್ದ ತನ್ನನ್ನು ಕಂಡು ಆತ ಎಷ್ಟು ಕೋಪಗೊಳ್ಳುವನೋ ಎಂದು ಹೆದರಿದ್ದ ಪದ್ಮಾವತಿಗೆ ಈ ಮಾತು ಕೇಳಿ ಆನಂದವಾಯಿತು. ಅವನ ಮುಖವನ್ನು ನೋಡಿ ನಾಚಿದಳು. ಒಡನೆ ಆತ ಅಲಿಂಗಿಸಿ ಏಕಾಂತಕ್ಕೆ ಎಳೆದೊಯ್ದು ಮನ ಬಂದಂತೆ ಆಕೆಯನ್ನು ಭೋಗಿಸಿದ.

ವೃಷಣಸ್ಥಾನದಲ್ಲಿ ಪತಿಯ ಚಿಹ್ನೆಯೊಂದು ಕಾಣಸದಿದ್ದಾಗ ಪದ್ಮಾವತಿ ಧಿಗ್ಗನೆದ್ದು ಬಟ್ಟೆ ಸುತ್ತಿಕೊಂಡಳು. ಒಂದೆಡೆ ದುಃಖ, ಇನ್ನೊಂದೆಡೆ ಅಸಹನೀಯ ಕೋಪ. ಆಕೆಗೆ ನಡುಕ ಬಂದಿತು. 'ಯಾರು ನೀನು ಪಾಪಿ, ದುರಾತ್ಮ, ವಂಚಕ ? ನನ್ನ ಪತಿಯ ರೂಪದಿಂದ ಬಂದು ಪಾತಿವ್ರತ್ಯವನ್ನು ಹಾಳುಮಾಡಿದೇಯಾ ? ಎನ್ನುತ್ತ ದುಃಖ ತಡೆಯಲಾರದೆ ಅತ್ತುಬಿಟ್ಟಳು. 'ನನ್ನ ಜನ್ಮವನ್ನೇ ಹಾಳುಮಾಡಿದ ನಿನ್ನನ್ನು ನಾನು ಬಿಡುವನೆ ? ನೋಡು, ಉಗ್ರಶಾಪವನ್ನು ಕೊಡುವೆನೆಂದಳು.

**ಸುಕಲೆ** :- ಪದ್ಮಾವತಿ ಹೀಗೆ ಗೋಭಿಲನಿಗೆ ಶಾಪ ಕೊಡಲುದ್ಯುಕ್ತಳಾದಾಗ ಗೋಭಿಲ ಪ್ರಶ್ನಿಸಿದ.

**ಗೋಭಿಲ** :- ಏಕೆ ನನ್ನನ್ನು ಶಪಿಸುವೆ ? ನಾನೇನು ತಪ್ಪುಮಾಡಿದೆ, ಹೇಳು. ನಾನು ಗೋಭಿಲನೆಂಬ ಒಬ್ಬ ದೈತ್ಯ. ಕುಬೇರನ ಭೃತ್ಯ. ಎಲ್ಲ ವಿದ್ಯೆಗಳನ್ನೂ ವೇದಶಾಸ್ತ್ರವನ್ನೂ ಕಲಿತಿದ್ದೇನೆ. ಎಲ್ಲ ಕಲೆಗಳಲ್ಲಿಯೂ ನಿಪುಣ ನಾನು. ದೈತ್ಯರ ಆಚಾರವನ್ನು ಪಾಲಿಸುವವ. ಅದರಿಂದಲೆ ಪರಸ್ತ್ರೀಪರಧನಗಳನ್ನು ಅಪಹರಿಸಿ ಭೋಗಿಸುತ್ತೇನೆ. ಬ್ರಾಹ್ಮಣರು ತಪಸ್ಸು ಮಾಡುತ್ತಿದ್ದರೆ ಸಮಯ ನೋಡಿ ಅದಕ್ಕೆ ವಿಘ್ನಉಂಟುಮಾಡುತ್ತೇನೆ. ಯಜ್ಞಗಳು ನಡೆಯುತ್ತಿದ್ದರೆ ನಿಲ್ಲಿಸುತ್ತೇನೆ. ಆದರೆ,

**ತೇಜೋ ದೇವಿ ಸುವಿಪ್ರಸ್ಯ ಹರೇಶ್ಚೈವ ಮಹಾತ್ಮನಃ ।**
**ನಾರ್ಯಾಃ ಪತಿವ್ರತಾಯಾಶ್ಚ ಸೋಢಂ ದೈತ್ಯಾಶ್ಚ ನ ಕ್ಷಮಾಃ ॥**

ದೇವಿ, ಒಳ್ಳೆಯ ಬ್ರಾಹ್ಮಣ, ಮಹಾತ್ಮನಾದ ಹರಿ ಮತ್ತು ಪತಿವ್ರತೆಯಾದ ನಾರಿ ಇವರ ತೇಜಸ್ಸನ್ನು ದೈತ್ಯರು ತಡೆದುಕೊಳ್ಳಲಾರರು.

ಆದ್ದರಿಂದ ಮಿಕ್ಕೆಲ್ಲರ ಧರ್ಮವನ್ನೂ ನಾನು ಕೆಡಿಸುತ್ತೇನೆ. ಇದು ದೈತ್ಯರ ಧರ್ಮ. ನಾನು ದೈತ್ಯನಾದುದರಿಂದ ದೈತ್ಯ ಧರ್ಮವನ್ನಾಚರಿಸುತ್ತಿದ್ದೇನೆ. ನನ್ನ ತಪ್ಪೇನಿದೆ ? ಹೇಳು, ಏಕೆ ಶಪಿಸುವೆ ?

**ಪದ್ಮಾವತಿ :-** ನಾನು ಪತಿವ್ರತೆ. ನನ್ನಷ್ಟಕ್ಕೆ ನಾನು ಪಾತಿವ್ರತ್ಯ ಧರ್ಮವನ್ನಾಚರಿಸುತ್ತಿದ್ದೆ. ನೀನು ವಂಚಿಸಿ ನನ್ನ ಧರ್ಮವನ್ನು ಕೆಡಿಸಿದೆ. ನೋಡು ನನ್ನ ಶಾಪದಿಂದ ನೀನು ಬೂದಿಯಾಗುವೆ.

**ಗೋಭಿಲ :-** ತಾಳ್ಮೆಯಿಂದ ಕೇಳುವಿಯಾದರೆ ಧರ್ಮರಹಸ್ಯವೇನೆಂಬುದನ್ನು ಹೇಳುತ್ತೇನೆ ಕೇಳು. ಅಗ್ನಿಹೋತ್ರಿಯಾದ ಬ್ರಾಹ್ಮಣನು ಎರಡುಹೊತ್ತು ಅಗ್ನಿಹೋತ್ರ ತಪ್ಪದೆ ಮಾಡಬೇಕು. ಭೃತ್ಯನಾದವನು ತ್ರಿಕರಣದಿಂದಲೂ ಸ್ವಾಮಿಯಾಜ್ಞೆಯನ್ನು ಪಾಲಿಸಬೇಕು. ಮಗನು ತಂದೆ-ತಾಯಿಗಳನ್ನು ತ್ರಿಕರಣಗಳಿಂದಲೂ ಸೇವಿಸಬೇಕು. ಅದಕ್ಕೆ ಭಾಗೀರಥೀ ಸ್ನಾನದ ಫಲವಿದೆ. ಅದನ್ನು ಕಡೆಗಣಿಸಿದರೆ ಪತಿತನಾಗುತ್ತಾನೆ. ಪತಿವ್ರತೆ ತ್ರಿಕರಣಗಳಿಂದಲೂ ಪತಿಯ ಶುಶ್ರೂಷೆ ಮಾಡಬೇಕು. ಅವನು ಕೋಪಿಸಿಕೊಳ್ಳಲಿ, ತಪ್ಪು ಮಾಡಲಿ, ಹೊಡೆಯಲಿ ಅದನ್ನು ಗಣನೆಗೆ ತಂದುಕೊಳ್ಳದೆ ಸಂತೋಷದಿಂದ ಸೇವೆಮಾಡಬೇಕು. ಇದೇ ರೀತಿಯಿಂದ ಭೃತ್ಯನು ಸ್ವಾಮಿಯನ್ನುಪಚರಿಸಬೇಕು. ಮಗನು ತಂದೆ-ತಾಯಿಗಳ ಸೇವೆಮಾಡಬೇಕು. ಹಾಗೆ ಮಾಡಿದರೆ ಅವರು ವಿಷ್ಣುಲೋಕವನ್ನು ಸೇರುತ್ತಾರೆ.

**ಅಗ್ನಿಂ ಚ ಪಿತರಂ ಚೈವ ನತ್ಯಜೇತ್ ಸ್ವಾಮಿನಂ ಶುಭೇ ।**
**ಸದಾ ವಿಪ್ರಃ ಸುತೋ ಭೃತ್ಯಃ ಸತ್ಯಂ ಸತ್ಯಂ ವದಾಮ್ಯಹಂ ॥**

ಬ್ರಾಹ್ಮಣನು ಅಗ್ನಿಯನ್ನೂ, ಮಗನು ತಂದೆಯನ್ನೂ, ಸೇವಕನು ಸ್ವಾಮಿಯನ್ನು, ಎಂದೂ ಪರಿತ್ಯಾಗ ಮಾಡಕೂಡದು. ನಾನು ಹೇಳುತ್ತೇನೆ, ಇದು ಸತ್ಯ, ಸತ್ಯ.

ಪರಿತ್ಯಾಗಮಾಡಿದರೆ ನರಕ ಪ್ರಾಪ್ತಿಯಾಗುತ್ತದೆ. ಪತಿವ್ಯಾಧಿಯಿಂದ ಬಳಲುತ್ತಿರಲಿ. ಎಲ್ಲ ಕರ್ಮಗಳನ್ನು ಬಿಟ್ಟವನೇ ಇರಲಿ, ದರಿದ್ರನಾಗಿರಲಿ ಅವನನ್ನು ಬಿಟ್ಟರೆ ಸತಿಗೆ ಶ್ರೇಯಸ್ಸಿಲ್ಲ. ಹೀಗೆ ಎಲ್ಲ ಧರ್ಮರಹಸ್ಯಗಳನ್ನೂ ನಾನು ತಿಳಿದಿದ್ದೇನೆ.

ದಾನವರು, ರಾಕ್ಷಸರು, ಪ್ರೇತಗಳು ಇವರನ್ನೆಲ್ಲ ಬ್ರಹ್ಮನೇಕ ಸೃಷ್ಟಿಸಿದ, ನಿನಗೆ ಗೊತ್ತೇ ? ಧರ್ಮದ ರಹಸ್ಯಗಳನ್ನು ಅವರೆಲ್ಲ ತಿಳಿದಿದ್ದಾರೆ. ಆದರೆ ಆಚರಿಸುವುದಿಲ್ಲ. ಏಕೆಂದರೆ ಅರೆಬರೆ ಜ್ಞಾನಸಂಪಾದಿಸಿದ ಮಾನವರು ವಿಧಿವತ್ತಾಗಿ ಕರ್ಮಗಳನ್ನು ಮಾಡುವದಿಲ್ಲ, ಹೀಗೆ ವಿಧಿಯನ್ನತಿಕ್ರಮಿಸುವ ಆ ನರಾಧಮರಿಗೆ ಶಿಕ್ಷೆ ವಿಧಿಸುವುದೆ ನಮ್ಮ ಕೆಲಸ. ನೀನು ಪತಿಯನ್ನು ಬಿಟ್ಟುಬಂದು ಒಳ್ಳೆಯ ಶೃಂಗಾರದ ವೇಷಭೂಷಣಗಳನ್ನು ಧರಿಸಿ ನಿರ್ಭಯವಾಗಿ ಯಾವ ಸಂಕೋಚವೂ ಇಲ್ಲದೆ ಇಲ್ಲಿ ವನವಿಹಾರಮಾಡುತ್ತಿರುವೆ. ನಿನ್ನ ಈ ನಡತೆಯನ್ನು ನೋಡಿದರೆ ನೀನು ಪತಿವ್ರತೆಯೆಂದು ಹೇಗೆ ಹೇಳಲಾದೀತು ? ನಿನ್ನ ಈ ಅಧರ್ಮಕ್ಕೆ ನಾನು ಈಗ ಶಿಕ್ಷೆ ವಿಧಿಸಿದ್ದೇನೆ. ನಿನ್ನ ಪಾತಿವ್ರತ್ಯವೆಲ್ಲಿದೆ ತೋರಿಸು. ಬೇರೆ ಹಾಸಿಗೆಯಲ್ಲಿ ಮಲಗಿದರೂ ನಾರಿ ವ್ಯಭಿಚಾರಿಣಿ ಎನಿಸುವಳು.

**ಪೃಥಕ್ ಛಯ್ಯಾ ಯಥಾ ನಾರೀ ತದಾ ಸಾ ಪುಂಶ್ಚಲೀ ಮತಾ**

ಹೀಗಿರುವಲ್ಲಿ ನೀನು ಪತಿಯನ್ನು ಬಿಟ್ಟು ನೂರು ಯೋಜನಗಳಷ್ಟು ದೂರ ಬಂದು ಇಲ್ಲಿ ವಿಹಾರಮಾಡುತ್ತಿರುವೆ. ಎಲ್ಲಿದೆ ನಿನ್ನ ಪಾತಿವ್ರತ್ಯ ? ನನ್ನ ಇದಿರಿನಲ್ಲಿ ನಿಂತು ಹೀಗೆ

ನಾನು ಪತಿವ್ರತೆಯೆಂದು ವಾದಿಸಲು ಲಜ್ಜೆಯಾಗುವುದಿಲ್ಲವೆ ? ನಾಚಿಕೆ ಕೆಟ್ಟವಳೆ, ನಿನ್ನ ತೇಜಸ್ಸೆಲ್ಲಿ ? ತಪಸ್ಸೆಲ್ಲಿ ? ಬಲವೆಲ್ಲಿ ? ಎಲ್ಲವನ್ನೂ ಈಗಲೆ ತೋರಿಸು.

**ಪದ್ಮಾವತಿ :-** ಮಗಳ ಮೇಲಿನ ಮೋಹದಿಂದ ತಂದೆ ನನ್ನನ್ನು ಇಲ್ಲಿಗೆ ಕರೆಸಿಕೊಂಡರು. ಕಾಮ, ಲೋಭ, ಮೋಹಗಳಿಗೊಳಗಾಗಿ ನಾನು ಪತಿಯನ್ನು ಬಿಟ್ಟು ಬರಲಿಲ್ಲ. ಪತಿಯನ್ನೇ ದೇವರೆಂದು ತಿಳಿದವಳು ನಾನು. ಇದರಲ್ಲಿ ನನ್ನ ತಪ್ಪೇನಿದೆ? ನೀನು ಪತಿಯ ರೂಪದಿಂದ ನನ್ನನ್ನು ವಂಚಿಸಿದೆ. ಪತಿಯೆಂದು ತಿಳಿದು ನಾ ನಿನ್ನ ಬಳಿಗೆ ಬಂದೆ. ಈಗ ನಿನ್ನ ವಂಚನೆಯನ್ನು ತಿಳಿದಿದ್ದೇನೆ. ಒಂದು ಹುಂಕಾರದಿಂದ ನಿನ್ನನ್ನು ಸುಟ್ಟು ಬಿಡುತ್ತೇನೆ.

**ಗೋಭಿಲ :-** ಕಣ್ಣಿಲ್ಲದ ಮಾನವನೇನನ್ನೂ ನೋಡಲಾರ. ನಿನಗೆ ಒಳಗಿನ ಜ್ಞಾನದ ಕಣ್ಣು, ಧರ್ಮದ ಕಣ್ಣು ಇಲ್ಲ. ನನ್ನನ್ನು ಹೇಗೆ ಕಾಣಬಲ್ಲೆ ನೀನು. ಎಂದು ಪತಿಯ ಧ್ಯಾನವನ್ನು ತೊರೆದೆಯೊ, ತಂದೆಯ ಮನೆಯಲ್ಲಿ ಆದರ ತಳೆದೆಯೋ ಅಂದೆ ನಿನ್ನ ಜ್ಞಾನದ ಕಣ್ಣು, ಧರ್ಮದ ಕಣ್ಣು ಕುರುಡಾಯಿತು.

**ಕಸ್ಯಾ ಮಾತಾ ಪಿತಾ ಭ್ರಾತಾ ಕಸ್ಯಾಃ ಸ್ವಜನ ಬಾಂಧವಾಃ ।**
**ಸರ್ವಸ್ಥಾನೇ ಪತಿರ್ಹ್ಯೇಕೋ ಭಾರ್ಯಾಯಾಸ್ತು ನ ಸಂಶಯಃ ॥**

ಮದುವೆಯಾದ ಹೆಣ್ಣಿಗೆ ತಾಯಿ, ತಂದೆ, ಸೋದರ, ಸ್ವಜನ ಬಾಂಧವರು ಬೇರೆ ಯಾರೂ ಇಲ್ಲ. ಅವರೆಲ್ಲರ ಸ್ಥಾನದಲ್ಲಿ ಆಕೆಯ ಪತಿಯೊಬ್ಬನೆ ಇರುವನು. ಇದರಲ್ಲಿ ಸಂಶಯವಿಲ್ಲ.

ನೀನು ವ್ಯಭಿಚಾರಿಣಿ, ನಿನ್ನ ಭಯ ನನಗಿಲ್ಲ. ನಿನ್ನ ಶಾಪದಿಂದೇನಾದೀತು ? ಸುಮ್ಮನೆ ಕೋಪದಿಂದ ನಡುಗುತ್ತಿರುವೆ ಏಕೆ ? ನನ್ನ ಮನೆಗೆ ಬಂದು ಬೇಕಾದ ಸುಖ ಭೋಗಗಳನ್ನನುಭವಿಸು.

**ಪದ್ಮಾವತಿ :-** ಪಾಪಿ, ತೊಲಗು ಇಲ್ಲಿಂದ. ಏಕೆ ಹೀಗೆಲ್ಲ ಹರಟುತ್ತಿರುವೆ ? ನಾನು ಪತಿ ಪರಾಯಣೆಯಾಗಿಯೆ ಇದ್ದೇನೆ. ಹೆಚ್ಚು ಮಾತನಾಡಿದರೆ ನಿನ್ನನ್ನು ಸುಟ್ಟು ಬಿಡುತ್ತೇನೆ.

ಹೀಗೆ ಹೇಳುತ್ತ ಶಕ್ತಿ ಉಡುಗಿ ಕುಸಿದು ನೆಲದ ಮೇಲೆ ಕುಳಿತಳು ಪದ್ಮಾವತಿ. ದುಃಖವನ್ನು ತಡೆಯಲಾರದೆ ಅತ್ತಳು. ತಿರುಗಿ ಗೋಭಿಲ 'ನಿನ್ನ ಹೊಟ್ಟೆಯಲ್ಲಿ ನಾನಿಟ್ಟ ವೀರ್ಯದಿಂದ ಮೂರು ಲೋಕವನ್ನೂ ಕ್ಷೋಭೆಗೊಳಿಸುವ ಮಗನೊಬ್ಬ ಹುಟ್ಟುತ್ತಾನೆ' ಎಂದು ಹೇಳಿ ಹೊರಟುಹೋದ.

**ಬ್ರಾಹ್ಮಣ :-** ಪಾಪಿಯಾದ ಗೋಭಿಲ ಹೊರಟು ಹೋದ. ಪದ್ಮಾವತಿ ಅಳುತ್ತ ಅಲ್ಲೇ ಕುಳಿತಳು. ಆಕೆಯ ಅಳುವಿನ ಧ್ವನಿ ಕೇಳಿ ಗೆಳತಿಯರೆಲ್ಲ ಬಂದು ಪ್ರಶ್ನಿಸಿದರು. 'ಸಖಿ, ಏಕೆ ಅಳುವೆ ? ಮಹಾರಾಜನೆಲ್ಲಿಗೆ ಹೋದ ? ಪ್ರಿಯೆ ಬಾ ಎಂದು ಕರೆದನಲ್ಲವೆ ?' ಎಂದರು.

ಪದ್ಮಾವತಿ ಅಳುತ್ತ ನಡೆದ ವೃತ್ತಾಂತವನ್ನು ತಿಳಿಸಿದಳು. ಗೆಳತಿಯರು ಆಕೆಯನ್ನು ಅರಮನೆಗೊಯ್ದು ಅವಳ ತಾಯಿಯ ಬಳಿ ಎಲ್ಲವನ್ನೂ ತಿಳಿಸಿದರು. ಆಕೆ ಮಹಾರಾಜನಲ್ಲಿ ಎಲ್ಲವನ್ನೂ ಹೇಳಿದಳು. ಆತ ದುಃಖದಿಂದ ಈ ಘಟನೆಯನ್ನು ಮುಚ್ಚಿಟ್ಟು ಮಗಳನ್ನು ಮಧುರೆಗೆ ಕಳಿಸಿಕೊಟ್ಟ.

ಉಗ್ರಸೇನ ಪದ್ಮಾವತಿಯನ್ನು ಕಂಡು ಆನಂದದಿಂದ 'ಪ್ರಿಯೆ, ನಿನ್ನನ್ನು ಬಿಟ್ಟು ಇಷ್ಟು ದಿನ ನಾನು ಬದುಕುವುದೆ ಅಶಕ್ಯವೆನಿಸಿತ್ತು. ನಿನ್ನ ಗುಣ, ಶೀಲ, ಭಕ್ತಿ, ಸತ್ಯ, ಪಾತಿವ್ರತ್ಯ ಮೊದಲಾದ ಗುಣಗಳಿಗೆ ನಾನು ಮಾರು ಹೋಗಿದ್ದೇನೆ' ಎನ್ನುತ್ತ ಪ್ರೀತಿಯಿಂದ ಬರಮಾಡಿಕೊಂಡ. ಹಿಂದಿನಂತೆ ಅವಳೊಂದಿಗೆ ಸುಖಪಟ್ಟ.

ಪದ್ಮಾವತಿಯ ಹೊಟ್ಟೆಯಲ್ಲಿ ಸರ್ವಲೋಕ ಭಯಂಕರ ಕ್ರೂರಗರ್ಭ ಬೆಳೆಯಲಾರಂಭಿಸಿತು. ಹಗಲು ರಾತ್ರಿ ಆಕೆ ಆ ಗರ್ಭದ, ಕ್ರೂರ ಇತಿಹಾಸವನ್ನೇ ಚಿಂತಿಸಿದಳು. ಈ ದುಷ್ಟ ಗರ್ಭ ಬೆಳೆದರೆ ಏನು ಪ್ರಯೋಜನವೆಂದುಕೊಂಡು ಅದನ್ನಿಳಿಸಿ ಕೊಳ್ಳಲು ನಾನಾ ಬಗೆಯ ಔಷಧಗಳನ್ನು ಸೇವಿಸಿದಳು. ಗರ್ಭದಲ್ಲಿರುವ ಶಿಶು ಒಂದು ದಿನ ತಾಯಿಯನ್ನು ಕುರಿತು ಹೇಳಿತು. 'ಏಕೆ ವ್ಯರ್ಥವಾಗಿ ಔಷಧಿಗಳನ್ನು ಸೇವಿಸಿ ನೋವನ್ನು ಅನುಭವಿಸುವೆ ? ಯಾರನ್ನೂ ಯಾರೂ ಕೊಲ್ಲಲ್ಲು ಸಾಧ್ಯವಿಲ್ಲ. ಆಯುಷ್ಯವು ಪುಣ್ಯದಿಂದ ಬೆಳೆಯುತ್ತದೆ. ಪಾಪದಿಂದ ಕ್ಷೀಣಿಸುತ್ತದೆ. ಅವರವರ ಕರ್ಮಾನುಸಾರ ಕೆಲವರು ಗರ್ಭದಲ್ಲಿಯೆ ಸಾಯುತ್ತಾರೆ. ಕೆಲವರು ಹುಟ್ಟಿದೊಡನೆ, ಇನ್ನು ಕೆಲವರು ಬಾಲ್ಯದಲ್ಲಿಯೋ, ತಾರುಣ್ಯದಲ್ಲಿಯೋ, ಮುದಿತನದಲ್ಲಿಯೋ ಸಾಯುತ್ತಾರೆ. ಔಷಧಗಳು, ಮಂತ್ರಗಳು ಎಲ್ಲವೂ ಮರಣದಲ್ಲಿ ನಿಮಿತ್ತ ಮಾತ್ರ. ನಾನು ಯಾರೆಂಬುದು ನಿನಗೆ ಗೊತ್ತಿಲ್ಲ. ನೀನು ಕೇಳಿರಬಹುದು. ಹಿಂದೆ ಕಾಲನೇಮಿ ಎಂಬ ಬಲಿಷ್ಠ ದಾನವನಿದ್ದ. ಮೂರುಲೋಕಕ್ಕೊ ಭಯಉಂಟುಮಾಡುತ್ತಿದ್ದ. ದೇವಾಸುರ ಮಹಾಯುದ್ಧದಲ್ಲಿ ವಿಷ್ಣುವಿನಿಂದ ಮಡಿದು ಈಗ ಆ ವೈರವನ್ನು ಸಾಧಿಸಿ, ಸೇಡುತೀರಿಸಲು ನಿನ್ನ ಹೊಟ್ಟೆಯಲ್ಲಿ ಹುಟ್ಟಿದ್ದಾನೆ. ಔಷಧಿಗಳನ್ನು ಸೇವಿಸಿ ವ್ಯರ್ಥತೊಂದರೆಗಳಿಗೀಡಾಗಬೇಡ. ಪದ್ಮಾವತಿ ಉಪಾಯವಿಲ್ಲದೆ ಸುಮ್ಮನಿದ್ದು ಒಳಗೊಳಗೆ ಕೊರಗುತ್ತ ಕುಳಿತಳು.

ಹತ್ತು ವರ್ಷಗಳ ಬಳಿಕ ಗರ್ಭದಿಂದ ಮಹಾಬಲಶಾಲಿಯಾದ ಕಂಸ ಹುಟ್ಟಿದ. ಮೂರುಲೋಕಕ್ಕೂ ಹಿಂಸೆ ಮಾಡತೊಡಗಿದ. ಕೃಷ್ಣನು ಅವನನ್ನು ಕೊಂದ. ಹೀಗೆ ಮದುವೆಯಾದ ಹುಡುಗಿಯನ್ನು ತಂದೆಯು ಮನೆಯಲ್ಲಿರಿಸಿಕೊಂಡರೆ ಕೆಟ್ಟುಹೋಗುತ್ತಾಳೆ. ನೀನು ಮಗಳ ಮೇಲಿನ ಮೋಹವನ್ನು ಬಿಟ್ಟು ಆಕೆಯನ್ನು ಮನೆಯಿಂದ ಹೊರಗಟ್ಟು. ಮುಂದೆ ಅದರಿಂದಾಗುವ ದುಃಖವನ್ನು ಅನುಭವಿಸಲು ನಾನೂ ನಿನ್ನ ಜೊತೆಯಲ್ಲಿದ್ದೇನೆ. ಅದು ದುಃಖವೆನಿಸಿದರೂ ಅದರಿಂದಲೇ ಶ್ರೇಯಸ್ಸು.

**ಸೂಕರಿ :-** ಈ ಮಾತನ್ನು ಕೇಳಿದಾಗ ತಂದೆಗೆ ಅದುವೆ ಸರಿಯೆನಿಸಿತು. ನನ್ನನ್ನು ಕರೆದು ಬಟ್ಟೆ, ಆಭರಣಗಳನ್ನು ಕೊಟ್ಟು ನೀನು ನಿನ್ನ ಕೆಟ್ಟನಡತೆಯಿಂದ ಆ ಶಿವಶರ್ಮನನ್ನು ಮನೆಯಿಂದ ಹೊರಗೆ ಅಟ್ಟಿದೆ. ನಿನ್ನಿಂದ ವಂಶಕ್ಕೆ ಕಲಂಕ ಉಂಟಾಗಿದೆ. ನಮ್ಮ ಮನೆಯಲ್ಲಿರಬೇಡ. ಪತಿಯ ಬಳಿಗೆ ಹೋಗು. ಇಲ್ಲವೆ ನಿನ್ನಿಷ್ಟ ಬಂದ ಕಡೆಗೆ ಹೋಗು ಎಂದುಬಿಟ್ಟ.

ನಾನು ಹೀಗೆ ತಾಯಿ-ತಂದೆಗಳಿಂದ, ಬಂಧು-ಮಿತ್ರರಿಂದ ಪರಿತ್ಯಕ್ತಳಾಗಿ ಆಸರೆಯಿಲ್ಲದೆ ನಿರ್ಲಜ್ಜಳಾಗಿ ಅಲೆಯತೊಡಗಿದೆ. ಲೋಕ ನನ್ನನ್ನು **ಕುಲಟೆ** ಎಂದು ನಿಂದಿಸಿ ತಿರಸ್ಕರಿಸಿತು. ಊರಿಂದ ಊರಿಗೆ ಅಲೆಯುತ್ತ ಗುರ್ಜರದೇಶದ

ಪ್ರಭಾಸತೀರ್ಥದ ಬಳಿ ಸೋಮನಾಥಮಂದಿರದ ಸಮೀಪ ವನಸ್ಥಲವೆಂಬ ನಗರವನ್ನು ಸೇರಿದೆ. ಸಮೃದ್ಧಿಯಿಂದ ಕೂಡಿದ ಆ ನಗರದಲ್ಲಿಯೂ ನನಗೆ ಒಂದು ತುತ್ತು ಅನ್ನ ಸಿಗಲಿಲ್ಲ. ಮನೆ ಬಾಗಿಲಲ್ಲಿ ನಿಂತು ನಾನು ಭಿಕ್ಷೆ ಬೇಡಿದರೆ ಮನೆಯಾಕೆ ನನ್ನನ್ನು ನೋಡಿ ಪಾಪಿಷ್ಠೆ ಎಲ್ಲಿಂದ ಬಂದಳೊ ಎಂದುಕೊಳ್ಳುತ್ತ ಭಿಕ್ಷೆ ನೀಡದೆ ಒಳಗೆ ಹೊರಟುಹೋಗುತ್ತಿದ್ದಳು. ಹೀಗೆ ಎಲ್ಲೆಡೆಯೂ ನಿರಾಸೆ ನನ್ನ ಪಾಲಿಗೆ. ಆದರೆ ಒಮ್ಮೆ ಒಂದು ದೊಡ್ಡ ಮನೆಯನ್ನು ಕಂಡು ಅದರ ಬಾಗಿಲ ಬಳಿ ನಿಂತೆ. ಒಳಗಡೆಯಿಂದ ವೇದಘೋಷದ ಧ್ವನಿ ಕೇಳಿ ಬರುತ್ತಿತ್ತು. ಅನೇಕ ಮಂದಿ ಬ್ರಾಹ್ಮಣ ವಟುಗಳು ಅಲ್ಲಿ ವೇದಾಭ್ಯಾಸ ಮಾಡುತ್ತಿದ್ದರು. ಧನ-ಧಾನ್ಯಗಳಿಂದ, ದಾಸ-ದಾಸಿಯರಿಂದ ತುಂಬಿ ಸಿರಿಯ ಆಡುಂಬೊಲದಂತಿತ್ತು ಆ ಮನೆ. 'ಭಿಕ್ಷಾಂದೇಹಿ' ಎಂದು ದುಃಖದಿಂದ ನಾನು ಕೂಗಿದೆ.

ಆ ಮನೆ ಶಿವಶರ್ಮನದೆ ಆಗಿತ್ತು. ನನ್ನ ಧ್ವನಿಯನ್ನುಕೇಳಿ ತನ್ನ ಎರಡನೆ ಹೆಂಡತಿ ಮಂಗಳೆಯನ್ನು ಕೂಗಿ ಕರೆದನಾತ. 'ಪ್ರಿಯೆ, ಈ ಭಿಕ್ಷುಕಿಯನ್ನು ಒಳಗೆ ಕರೆದು ಅನ್ನಬಡಿಸು. ಪಾಪ, ಮೈಯಲ್ಲೇನೂ ತ್ರಾಣವಿಲ್ಲ' ಎಂದು, ನಗುತ್ತ. ಮಂಗಳೆ ಮಹಾಲಕ್ಷ್ಮಿಯಂಥ ಹೆಂಗಸು. ನನ್ನಲ್ಲಿ ಅನುಕಂಪೆಯಿಂದ 'ಆಗಲಿ ಒಳ್ಳೆಯ ಊಟವನ್ನೇ ಹಾಕುತ್ತೇನೆ' ಎಂದಳಾಕೆ. ರುಚಿಕರವಾದ ಮೃಷ್ಟಾನ್ನ ಭೋಜನ ಅಂದು ನನಗೆ ದೊರಕಿತು. ಊಟವಾದ ಮೇಲೆ ಶಿವಶರ್ಮ ನನ್ನ ಬಳಿಗೆ ಬಂದು 'ಯಾರಮ್ಮ ನೀನು ? ಯಾರ ಮಡದಿ ? ಊರೆಲ್ಲ ಹೀಗೇಕೆ ಅಲೆಯುತ್ತಿರುವೆ ಎಂದು ಕೇಳಿದ.

ಆಗ ನಾನು ಆತ ಶಿವಶರ್ಮನೆಂದರಿತೆ. ಅವನೂ ನನ್ನನ್ನು ಗುರುತಿಸಿದ. 'ನಾನು ನಾಚಿ ತಲೆ ಬಾಗಿ ನಿಂತೆ. ಮಂಗಳೆ ಇದನ್ನು ನೋಡಿ, ಅವನನ್ನು ಕೇಳಿದಳು ನಿನ್ನನ್ನು ನೋಡಿ ನಾಚುತ್ತಿದ್ದಾಳೆ, ಯಾರೀಕೆ ?'

**ಶಿವಶರ್ಮ** :- ಈಕೆ ವಸುದತ್ತನೆಂಬ ಬ್ರಾಹ್ಮಣನ ಮಗಳು ಸುದೇವೆ. ನನ್ನ ಮಡದಿ. ನನ್ನ ಅಗಲಿಕೆಯ ದುಃಖದಿಂದ ಬೆಂದು ಹೀಗಾಗಿದ್ದಾಳೆ. ನಾನಿಲ್ಲಿರುವೆನೆಂದು ಹೇಗೋ ತಿಳಿದುಕೊಂಡು ಭಿಕ್ಷುಕಿಯ ವೇಷದಿಂದ ಬಂದಿದ್ದಾಳೆ. ನೀನೀಕೆಗೆ ಒಳ್ಳೆಯ ಉಪಚಾರ ಮಾಡಿದರೆ ನನಗೆ ಸಂತೋಷವಾಗುತ್ತದೆ. ಮಂಗಳೆ ಪತಿಯೆದೈವವೆಂದು ತಿಳಿದವಳು. ಸಂತೋಷದಿಂದ ನನಗೆ ಅನ್ನ ಬಟ್ಟೆಗಳನ್ನೂ, ಒಡವೆಗಳನ್ನೂ ಇತ್ತು ಉಪಚರಿಸಿದಳು. 'ಶಿವಶರ್ಮನಿಗೆ ನನ್ನಲ್ಲಿ ಅದೆಷ್ಟು ಪ್ರೀತಿ ! ಆತ ಮಹಾತ್ಮ, ನಾನು ಅವನೊಡನೆ ಒಂದು ಒಳ್ಳೆಯ ಮಾತು ಆಡಿರಲಿಲ್ಲ. ಕಾಲ್ತೊಳೆಯಲಿಲ್ಲ. ಮೈ-ಕೈಗಳನ್ನು ಒತ್ತಲಿಲ್ಲ. ಏಕಾಂತದ ಸುಖ ನೀಡಲಿಲ್ಲ. ಈಗ ನಾನು ಅವನನ್ನು ಹೇಗೆ ಮಾತನಾಡಿಸಲಿ ?' ಎಂದು ನನ್ನೆದೆಯ ಒಳಗೆ ತೀವ್ರ ದುಃಖ ಬಲಿಯಿತು. ಹಗಲು-ರಾತ್ರಿ ಚಿಂತೆ ನನ್ನನ್ನು ದಹಿಸಿತು. ಒಂದು ದಿನ ಎದೆಯೊಡೆದು ಪ್ರಾಣಬಿಟ್ಟೆ. ಭಯಂಕರವಾದ ಯಮದೂತರು ಬಂದು ಸರಪಣಿಯಿಂದ ಬಿಗಿದು ಎಳೆದೊಯ್ದರು. ಆಯುಧಗಳಿಂದ ಹೊಡೆದು ನೋಯಿಸಿದರು. ನನ್ನ ಅಳುವನ್ನು ಯಾರೂ ಕೇಳುವವರಿರಲಿಲ್ಲ. ಅವರು ನನ್ನನ್ನು ಜರಿದು ಮಾತಾಡಿ ಯಮನ ಮುಂದೆ ನಿಲ್ಲಿಸಿದರು.

ಯಮನೂ ಕೋಪದಿಂದ ನನ್ನನ್ನು ನೋಡಿ ಧಗಧಗಿಸುವ ಕೆಂಡಗಳ ಮೇಲೆ ನನ್ನನ್ನು ಬೀಳಿಸಿದ. ಕೆಂಪಗೆ ಕಾದ ಕಬ್ಬಿಣದ ಪುರುಷವಿಗ್ರಹವನ್ನು ನನ್ನೆದೆಯಿಂದ ಅಪ್ಪುವಂತೆ ಮಾಡಿದ. ಪತಿಗೆ ನಾನು ಮಾಡಿದ ವಂಚನೆಗೆ ಈ ಶಿಕ್ಷೆ ನನಗಾಗಿತ್ತು. ಕುದಿವ ಎಣ್ಣೆಯಲ್ಲಿ

ಹಾಕುವುದು, ಗರಗಸದಿಂದ ಕೊಯ್ಯುವುದು, ಮರದಲ್ಲಿ ನೇಣುಹಾಕುವುದು ಮುಂತಾದ ಅನೇಕವಿಧ ಶಿಕ್ಷೆಯನ್ನೂ ನಾನು ಅನುಭವಿಸಿದೆ. ಬಳಿಕ ಭೂಮಿಯಲ್ಲಿ ಕ್ರಿಮಿಯಾಗಿ ಹುಟ್ಟಿದೆ. ನರಿ-ನಾಯಿ-ಕೋಳಿ-ಇಲಿ-ಬೆಕ್ಕು ಮುಂತಾದ ನಾನಾ ಯೋನಿಗಳಲ್ಲಿ ಹುಟ್ಟಿ, ಸತ್ತು ಈಗ ಹಂದಿಯಾಗಿ ಹುಟ್ಟಿದ್ದೇನೆ.

ಮಹಾತ್ಮಳೆ, ನಿನ್ನ ಹಸ್ತದಲ್ಲಿ ಎಲ್ಲ ತೀರ್ಥಗಳ ಸನ್ನಿಧಾನವಿದೆ. ಆದರಿಂದ ನೀನು ನನ್ನ ಮೈಮೇಲೆ ನೀರೆರೆದಾಗ ನನ್ನ ಪಾಪವೆಲ್ಲ ತೊಳೆದುಹೋಯಿತು. ನಿನ್ನ ಪವಿತ್ರ ತೇಜಸ್ಸಿನ ಪ್ರಭಾವದಿಂದ ಪೂರ್ವಜನ್ಮದ ಸ್ಮರಣೆಯೂ ಬಂದಿತು. ದೇವಿ, ನೀನು ನನ್ನನ್ನುದ್ಧರಿಸಬೇಕು. ಇಲ್ಲದಿದ್ದರೆ ಅದೆಷ್ಟೋ ನರಕಗಳನ್ನು ಕಂಡ ನಾನು ತಿರುಗಿ ಆ ನರಕಕ್ಕೆ ಬೀಳುವೆನು. ನೀನು ಕೈ ಬಿಟ್ಟರೆ ನನಗೆ ಬೇರೆ ಆಸರೆಯಿಲ್ಲ.

**ಸುದೇವೆ** :- ನಿನ್ನನ್ನು ಉದ್ಧಾರಮಾಡಲು ನಾನು ಯಾರು ?. ನಾನೇನು ಪುಣ್ಯ ಮಾಡಿದ್ದೇನೆ ? ಹೇಳು.

**ಸೂಕರಿ** :- ಮಹಾತ್ಮನಾದ ಈ ಇಕ್ಷ್ವಾಕು ಮಹಾರಾಜ ಸಾಕ್ಷಾತ್ ವಿಷ್ಣುವೇ ಆಗಿದ್ದಾನೆ. ನೀನು ಮಹಾಲಕ್ಷ್ಮಿ, ಮಹಾಪತಿವ್ರತೆ. ಎಲ್ಲ ತೀರ್ಥಗಳೂ ಎಲ್ಲ ದೇವತೆಗಳೂ ನಿನ್ನಲ್ಲಿ ನೆಲೆಸಿದ್ದಾರೆ. ಹಗಲು-ರಾತ್ರಿಯೆನ್ನದೆ ಸದಾ ಪತಿಶುಶ್ರೂಷೆಮಾಡುತ್ತಿರುವೆ. ನಿನ್ನ ಒಂದು ದಿನದ ಪತಿಸೇವೆಯ ಪುಣ್ಯವನ್ನು ನನಗೆ ನೀಡುವೆಯಾ ? ನೀನೆ ನನ್ನ ತಾಯಿ, ನೀನೆ ತಂದೆ, ನೀನೆ ಗುರು. ನಾನು ಪಾಪಿಷ್ಠೆ, ದುರಾಚಾರೆ. ಯಮನ ಬಾಧೆಗೆ ಭೀತಳಾಗಿದ್ದೇನೆ ನನ್ನನ್ನುದ್ಧರಿಸು.

**ಸುಕಲೆ** :- ಈ ಮಾತನ್ನು ಕೇಳಿ ಸುದೇವೆ ಪತಿಯ ಮುಖವನ್ನು ನೋಡಿ 'ಏನು ಮಾಡಲಿ ? ಹಂದಿಯ ಮಾತನ್ನು ಕೇಳಿದೆಯ ?' ಎಂದಳು, ಅವನೆಂದ.

**ಇಕ್ಷ್ವಾಕು** :- ಪಾಪ, ಕಷ್ಟದಲ್ಲಿದ್ದಾಳೆ. ನಿನ್ನ ಪುಣ್ಯವನ್ನಿತ್ತು ಉದ್ಧಾರಮಾಡು. ಇದರಿಂದ ಶ್ರೇಯಸ್ಸಿದೆ.

**ಸುದೇವ** :- ದೇವ, ಇದೊ ನಿನಗೆ ನನ್ನ ಒಂದು ವರ್ಷದ ಪತಿಸೇವೆಯ ಪುಣ್ಯವನ್ನಿತ್ತೆ.

ಒಡನೆ ಆ ಹಂದಿಯ ಆತ್ಮ ಉಜ್ವಲ ದಿವ್ಯರೂಪ ಧರಿಸಿತು. ರೂಪ ಯೌವನಗಳಿಂದ ಕೂಡಿ ದಿವ್ಯ ಮಾಲ್ಯ ಆಭರಣ ಗಂಧಗಳಿಂದ ಶೋಭಿಸುತ್ತ, ದಿವ್ಯ ವಿಮಾನವೇರಿ ಸ್ವರ್ಗಕ್ಕೆ ಹೊರಟಳು. ತಲೆಬಾಗಿ ರಾಣಿಯನ್ನು ವಂದಿಸಿ ಹೇಳಿದಳು : 'ದೇವಿ, ನಿನಗೆ ಶುಭವಾಗಲಿ. ನಿನ್ನ ಅನುಗ್ರಹದಿಂದ ನಾನೆಲ್ಲ ಪಾಪಗಳಿಂದ ಮುಕ್ತಳಾಗಿ ಪುಣ್ಯಮಯ ಸ್ವರ್ಗಲೋಕವನ್ನು ಹೊಂದುತ್ತಿದ್ದೇನೆ.'

**ಸುಕಲೋವಾಚಃ**

**ಸುಕಲೆ** :- ಪುರಾಣಗಳಲ್ಲಿ ಹೀಗೆ ಸತೀಧರ್ಮಗಳು ಉಕ್ತವಾಗಿವೆ. ಇದನ್ನು ತಿಳಿದ ನಾನು ಪತಿಯನ್ನಗಲಿ ಹೇಗೆ ಸುಖಿಸಲಿ ? ಹೇಗೆ ಬಾಳುತ್ತಿರಲಿ ?

ರಾಜನೆ, ಹೀಗೆ ಸುಕಲೆಯ ಬಾಯಿಯಿಂದ ಸ್ತ್ರೀಯರಿಗೆ ಶ್ರೇಯಸ್ಕರವಾದ ಪವಿತ್ರ ಪಾತಿವ್ರತ್ಯಧರ್ಮವನ್ನು ಕೇಳಿ ಸಖಿಯರೆಲ್ಲರೂ ಸಂತೋಷಪಟ್ಟರು ಅವಳು ಮಹಾತ್ಮಳು ಎಂದುಕೊಂಡರು. ಅವಳ ಧರ್ಮನಿಷ್ಠೆಯನ್ನು ಕೊಂಡಾಡಿದರು.

ಸುಕಲೆ ತನ್ನ ಪಾತಿವ್ರತ್ಯ ಧರ್ಮದಲ್ಲಿ ಅಷ್ಟೊಂದು ದೃಢವಾಗಿದ್ದುದನ್ನು ಕಂಡು ಇಂದ್ರನು 'ಆಕೆಯ ಪತಿನಿಷ್ಠೆಯನ್ನು ಅಲ್ಲಾಡಿಸಿ ಬಿಡುವೆನು' ಎಂದುಕೊಂಡು ಮನ್ಮಥನನ್ನು ಸ್ಮರಿಸಿದ. ಒಡನೆ ಆತ ತನ್ನ ಪ್ರಿಯೆ ರತಿಯೊಡನೆ ಮೈದೋರಿ ಕೈಮುಗಿದು ಕೇಳಿದ ''ಪ್ರಭು, ನನ್ನನ್ನೇಕೆ ಸ್ಮರಿಸಿದೆ ? ನಾನೇನು ಮಾಡಬೇಕಾಗಿದೆ, ಅಪ್ಪಣೆ ಕೊಡು.''

**ಇಂದ್ರ** :- ಈ ಸುಕಲೆಯ ಪಾತಿವ್ರತ್ಯವನ್ನು ನಾನು ಭಂಗಗೊಳಿಸಬೇಕೆಂದು ಬಯಸಿದ್ದೇನೆ. ನೀನಿದರಲ್ಲಿ ಸಹಾಯ ನೀಡಬೇಕು.

**ಮನ್ಮಥ** :- ಹಾಗೆ ಆಗಲಿ. ನಿನ್ನಿಷ್ಟದಂತೆ ನಿನ್ನ ಕಾರ್ಯದಲ್ಲಿ ಸಹಾಯ ಮಾಡುವೆ. ನಾನು ದೇವತೆಗಳನ್ನೂ ಮುನಿಗಳನ್ನೂ ಗೆಲ್ಲಬಲ್ಲವನು. ಈ ಅಬಲೆಯರಾದ ಕಾಮಿನಿಯರು ಎಷ್ಟರವರು ? ಅವರ ಅಂಗಾಂಗಗಳಲ್ಲಿಯೆ ನಾನು ನೆಲೆಸಿರುವವನು. ಹಣೆ, ಎದೆ, ಕಣ್ಣು, ಕೂದಲು, ಹೊಕ್ಕಳು, ನಡು ಮುಂತಾದ ಎಲ್ಲ ಅಂಗ-ಪ್ರತ್ಯಂಗಗಳಲ್ಲಿ ನಾನಿರುವುದರಿಂದ ನನಗೆ ಹಣೆ ವಾಸದ ಮನೆ. ನಾನು ಅಲ್ಲಿಯೇ ಇದ್ದು ಗಂಡಿನ ಮಾರಣ ಮಾಡುತ್ತಿರುತ್ತೇನೆ. ಸ್ವಾಭಾವಿಕವಾಗಿ ಹೆಣ್ಣು ಅಬಲೆ. ನನ್ನ ಬಾಣಗಳಿಗೂ ತುತ್ತಾದರೆ ರೂಪವಂತನಾದ, ಗುಣಶಾಲಿಯಾದ ಒಬ್ಬನನ್ನು ನೋಡಿದಾಗ, ಅವನು ಸ್ವತಃ ತಂದೆಯೆ ಇರಲಿ ಇಲ್ಲವೆ ಬಂಧು-ಮಿತ್ರನೆ ಇರಲಿ ಆಕೆ ದಾರಿ ತಪ್ಪುವಳು. ಮುಂದಿನ ಪರಿಣಾಮವನ್ನು ಯೋಚಿಸಲಾರಳು. ದೇವರಾಜ, ಸಂಶಯಪಡಬೇಡ. ಸುಕಲೆಯ ಪಾತಿವ್ರತ್ಯವನ್ನು ನಾನು ನಾಶಪಡಿಸುವೆನು.

**ಇಂದ್ರ** :- ಹಾಗಾದರೆ ನಾನು ರೂಪವಂತನಾದ, ಗುಣಶಾಲಿಯಾದ ಯುವಕನಾಗಿ ಕೇವಲ ಕುತೂಹಲದಿಂದ ಆಕೆಯ ಪಾತಿವ್ರತ್ಯವನ್ನು ಪರೀಕ್ಷಿಸುವ ಉದ್ದೇಶದಿಂದ ಅವಳ ಶೀಲಭಂಗಕ್ಕೆ ಪ್ರಯತ್ನಿಸುವೆನು. ನಾನಾಕೆಯನ್ನು ಬಯಸಿಲ್ಲ. ಯಾವ ಭಯದಿಂದಲೂ ಹೀಗೆ ಮಾಡುತ್ತಿಲ್ಲ. ಅದರಿಂದ ನನಗೇನಾಗಬೇಕಾದುದೂ ಇಲ್ಲ.

ಇಂದ್ರನು ಒಳ್ಳೆ ಸ್ಫುರದ್ರೂಪಿ ತರುಣನಾಗಿ ಎಲ್ಲ ಆಭರಣಗಳನ್ನು ಧರಿಸಿ, ವಿಲಾಸಿ ಪುರುಷನಂತೆ ಸುಕಲೆಯ ಬಳಿಯಲ್ಲೆ ಓಡಾಡಿದ. ತನ್ನ ಬಯಕೆಯನ್ನು ವ್ಯಕ್ತಗೊಳಿಸಿದ. ಸುಕಲೆ ಅವನನ್ನು ಕಣ್ಣೆತ್ತಿಯೂ ನೋಡಲಿಲ್ಲ. ಅವನ ಕಾಮ ಚೇಷ್ಟೆಗಳೆಲ್ಲ ವ್ಯರ್ಥವಾದುವು.

ಹತಾಶನಾಗಿ ಇಂದ್ರ ದೂತಿಯನ್ನು ಕಳಿಸಿಕೊಟ್ಟ. ಆಕೆ ಸುಕಲೆಯ ಬಳಿ ಬಂದು ಅವಳ ಸೌಂದರ್ಯ, ಕಾಂತಿ, ಧೈರ್ಯ, ಸ್ಥೈರ್ಯ, ಸತ್ಯ ಮುಂತಾದ ಗುಣಗಳನ್ನು ಬಾಯಿ ತುಂಬ ಹೊಗಳಿ 'ಯಾರಮ್ಮ ನೀನು ? ಯಾರ ಮಡದಿ ? ನಿನ್ನನ್ನು ಪಡೆದ ಆ ನಿನ್ನ ಪತಿ ನಿಜವಾಗಿಯೂ ಧನ್ಯ, ಎಷ್ಟೋ ಪುಣ್ಯ ಮಾಡಿರಬೇಕು.' ಎಂದಳು.

ಸುಕಲೆ ತನ್ನ ಪರಿಚಯ ಹೇಳಿಕೊಂಡಳು.

**ಸುಕಲೆ** :- ನಾನು ಕೃಕಲನೆಂಬ ಧರ್ಮಾತ್ಮನಾದೊಬ್ಬ ವೈಶ್ಯನ ಮಡದಿ. ಅವನು ತೀರ್ಥಯಾತ್ರೆಗೆ ಹೋಗಿದ್ದಾನೆ. ಇಂದಿಗೆ ಮೂರು ವರ್ಷಗಳು ಕಳೆದುವು. ಅವನಿಲ್ಲದೆ ಇರುವುದರಿಂದ ಸದಾ ಕೊರಗುತ್ತಿದ್ದೇನೆ. ಅದಿರಲಿ, ನೀನಾರು ಹೇಳು.

**ದೂತಿ** :- ನಾನೊಂದು ಕಾರ್ಯಾರ್ಥ ನಿನ್ನ ಬಳಿಗೆ ಬಂದಿದ್ದೇನೆ. ಅದನ್ನು ಹೇಳುತ್ತೇನೆ, ಮನಸ್ಸಿಟ್ಟು ಕೇಳು. ಏನೊಂದೂ ಕರುಣೆಯಿಲ್ಲದೆ ನಿನ್ನನ್ನು ಬಿಟ್ಟು ಹೋದ

ಆ ನಿನ್ನ ಪತಿಯಿಂದ ನಿನಗೇನಾಗಬೇಕಾಗಿದೆ ? ಪತಿವ್ರತೆಯಾದ ನಿನ್ನನ್ನು ಬಿಟ್ಟು ಹೋದ ಅವನು ನಿಜವಾಗಿಯೂ ಪಾಪಿ. ಅವನು ಬದುಕಿರುವನೋ ಸತ್ತಿರುವನೋ ಅದನ್ನು ಹೇಳಲಾಗದು. ಏಕೆ ಸುಮ್ಮನೆ ಕೊರಗುತ್ತ ಕುಳಿತುಕೊಳ್ಳುವೆ ? ಚಿನ್ನದಂತೆ ಹೊಳೆವ ನಿನ್ನ ಮೈಯದಿವ್ಯಕಾಂತಿಯನ್ನು ಹಾಳುಮಾಡುತ್ತಿರುವೆಯಲ್ಲ ? ಬಾಲ್ಯದಲ್ಲಿ ಮನುಷ್ಯನಿಗೆ ಆಟದ ಸುಖ ಒಂದು ಬಿಟ್ಟರೆ ಬೇರೆ ಸುಖವಿಲ್ಲ. ಮುದಿತನದಲ್ಲಿ ಶರೀರ ಜರ್ಜರಿತವಾಗುವುದರಿಂದ ಕೇವಲ ದುಃಖ. ಅನುಭವಿಸಬೇಕಾಗಿರುವ ಎಲ್ಲ ಸುಖವನ್ನೂ ಯೌವನದಲ್ಲಿ ಅನುಭವಿಸಬೇಕು. ಯೌವನ ಕಳೆಯಿತೆಂದರೆ ನಿತ್ಯವೂ ಚಿಂತೆ. ಸುಖಾನುಭವ ತರಬಲ್ಲ ಒಂದು ಕಾರ್ಯವೂ ಸಿದ್ಧಿಸುವುದಿಲ್ಲ.

**ಪಯಸ್ಯಪಿ ಗತೇ ಬಾಲೆ ಕ್ರಿಯತೇ ಸೇತು ಬಂಧನಂ**
**ತಾದೃಶೋಯಂ ಭವೇತ್ ಕಾಯಸ್ತಾರುಣ್ಯೇತು ಗತೇ ಶುಭೇ**

ನೀರು ಬತ್ತಿಹೋದ ಮೇಲೆ ಸೇತುವೆ ಕಟ್ಟಿದಂತಾಗುತ್ತದೆ. ಯೌವನ ಕಳೆದ ಮೇಲೆ ಮಾಡುವ ಶರೀರ ಪೋಷಣೆ.

ಆದುದರಿಂದ ನೀನೀಗಲೆ ಯೌವನ ಕಾಲವನ್ನು ವ್ಯರ್ಥಗೊಳಿಸದೆ ಸುಖಪಡು. ಮಧುಪಾನಮಾಡು. ನಿನ್ನ ಅಂಗಗಳೆಲ್ಲ ಕಾಮಬಾಣದಿಂದ ಸುಟ್ಟು ಹೋಗುತ್ತಿವೆ. ಇಲ್ಲಯೇ ಸಮೀಪದಲ್ಲಿ ಒಳ್ಳೆಯ ರೂಪವಂತನಾದ ಯುವಕ ನಿನ್ನನ್ನೇ ಪ್ರೀತಿಯಿಂದ ಧ್ಯಾನಿಸುತ್ತ ಕುಳಿತಿದ್ದಾನೆ.

**ಸುಕಲೆ** :- ಆತ್ಮನಿಗೆ ಬಾಲ್ಯ-ಯೌವನ-ಮುದಿತನಗಳೆಂಬುದಿಲ್ಲ. ಅವನು ಅಜರ, ಅಮರ. ಈ ದೇಹ ಅವನ ಮನೆ.ಮನೆಯನ್ನು ಕಟ್ಟಿಗೆ, ಮಣ್ಣು, ನೀರು ಮುಂತಾದವುಗಳಿಂದ ಕಟ್ಟಿ ಸುಣ್ಣ-ಬಣ್ಣ ಬಳಿದು ಸಿಂಗರಿಸಿದರೆ ಸುಂದರವಾಗುತ್ತದೆ. ಕಾಲಕಾಲಕ್ಕೆ ಅದರ ಜೀರ್ಣೋದ್ಧಾರದ ಕಡೆಗೆ ಗಮನವಿಟ್ಟರೆ ಅದು ಹಿತವಾಗಿರುತ್ತದೆ. ಬಹುಕಾಲ ಕಳೆದ ಮೇಲೆ ಜೀರ್ಣೋದ್ಧಾರ ಮಾಡಲೂ ಸಾಧ್ಯವಿಲ್ಲದಷ್ಟು ಶಿಥಿಲಗೊಂಡು ಬಿದ್ದುಹೋಗುವ ಸ್ಥಿತಿಗೆ ಬರುತ್ತದೆ. ಆಗ ಅದನ್ನು ಬಿಡಲೆ ಬೇಕಾಗುತ್ತದೆ. ಬೇರೆ ಮನೆಯನ್ನು ಕಟ್ಟಿಕೊಳ್ಳಬೇಕಾಗುತ್ತದೆ. ಹೀಗೆ ಶರೀರಕ್ಕೂ ಬಾಲ್ಯ, ಯೌವನ, ಮುದಿತನ ಬರುತ್ತದೆ. ಕೊನೆಗೆ ಮರಣವಿದೆ. ಯೌವನದ ಕಾಲದಲ್ಲಿ ಶರೀರ ಪೋಷಣೆ ಮಾಡಿದರೆ ಅದು ಸುಂದರವಾಗಿ ಕಾಣುತ್ತದೆ. ಮಾಂಸವಾಗಿ ಬೆಳೆಯುತ್ತದೆ. ಹಲ್ಲು, ತುಟಿ, ಎದೆ, ತೋಳು, ನಡು, ತೊಡೆ ಎಲ್ಲವೂ ಹೃಷ್ಟಪುಷ್ಟವಾಗಿ ಬೆಳೆದಾಗ ಮನುಷ್ಯ ಸುಂದರನೆನಿಸುತ್ತಾನೆ. ಆದರೆ ಶರೀರ ಒಂದು ಮಲಮೂತ್ರಗಳ ಚೀಲವಾಗಿದ್ದು ಅಪವಿತ್ರವಾಗಿರುವಾಗ ಅದರ ರೂಪವನ್ನೇನೆಂದು ಬಣ್ಣಿಸಬೇಕು ? ಆ ರೂಪವೂ ನೀರಮೇಲಿನ ಗುಳ್ಳೆಯಂತೆ ಕೆಲಕಾಲವಿರುತ್ತದೆ. ಕೇವಲ ಐವತ್ತು ವರ್ಷಗಳ ಕಾಲ ಮಾತ್ರ ದೃಢವಾಗಿದ್ದು ಸುಂದರವಾಗಿರುತ್ತದೆ. ಬಳಿಕ ದಿನೇ ದಿನೇ ದುರ್ಬಲವಾಗುತ್ತದೆ. ಹಲ್ಲು ಬಿದ್ದು ಹೋಗುತ್ತದೆ. ಬಾಯಲ್ಲಿ ಜೊಲ್ಲು ಸುರಿಯುತ್ತದೆ. ಕಣ್ಣು ಕುರುಡಾಗುತ್ತದೆ. ಕಿವಿ ಕೇಳಲು ನಿರಾಕರಿಸುತ್ತದೆ. ಕೈಕಾಲುಗಳು ಸುಮ್ಮನಿರುತ್ತವೆ. ಮುದಿತನದಲ್ಲಿ ಮನುಷ್ಯ ಯಾವ ಕಾರ್ಯವನ್ನೂ ಮಾಡಲಾರ. ಆಗ ನೀನು ಹೇಳುವ ರೂಪವೆಲ್ಲಿರುತ್ತದೆ ?.

ನನ್ನ ಈಗಿನ ರೂಪವನ್ನು ಹೊಗಳುತ್ತಿರುವೆ. ಆದರೆ ನನ್ನ ಶರೀರದಲ್ಲಿ ಅಂಥ ವಿಶೇಷವೇನು ಕಂಡೆ ? ಅದರಲ್ಲಿ ನಿನ್ನ ನಾಯಕನ ಶರೀರಕ್ಕಿಂತ ಏನೂ ಹೆಚ್ಚು ಇಲ್ಲ, ಕಡಿಮೆಯಿಲ್ಲ. ನಿನ್ನ ಹಾಗೇ ಅವನೂ, ನಾನೂ. ಯಾರಿಗೆ ರೂಪವಿದೆ, ಯಾರಿಗಿಲ್ಲ ?.

**ಸ್ಥಾವರೇಷ್ವೇವ ಸರ್ವೇಷು ಜಂಗಮೇಷು ಚ ದೂತಿಕೇ**
**ಏಕೋ ನಿವಸತೇ ಶುದ್ಧೋಘಟೇಷ್ವೇಕಂ ಯಥೋದಕಂ**

ಎಲ್ಲ ಪಾತ್ರೆಗಳಲ್ಲಿಯೂ ಒಂದೇ ನೀರಿರುವಂತೆ ಎಲ್ಲ ಸ್ಥಾವರಜಂಗಮ ಶರೀರಗಳಲ್ಲಿಯೂ ಶುದ್ಧನಾದ ಒಬ್ಬನೇ ಆತ್ಮ ಇರುತ್ತಾನೆ.

ಶರೀರ ಹೋದರೆ ಆತ್ಮರೆಲ್ಲ ಒಂದೆ ವಿಧವಾಗಿರುತ್ತಾರೆ. ನೀನು ನಿನ್ನ ನಾಯಕನನ್ನೇ ಕೇಳು. 'ಸುಕಲೆಯನ್ನು ಭೋಗಿಸ ಬಯಸಿದ ನೀನು ಅವಳಲ್ಲೇನು ಹೊಸ ತನ್ನು ಕಂಡೆ' ಎಂದು.

ವ್ಯಾಧಿಯಿಂದ ಬಳಲುವವನ ಶರೀರ ತನ್ನ ನಿಜರೂಪ ಕಳೆದುಕೊಂಡು ದುರ್ಗಂಧಮಯವಾಗಿ ಕ್ರಿಮಿಗಳಿಗೆ ಆಶ್ರಯ ಕೊಡುತ್ತದೆ. ಆಗ ಮೈಯಲ್ಲಿ ನವೆ ಉಂಟಾಗುತ್ತದೆ. ಉಗುರುಗಳಿಂದ ಕರೆದುಕೊಂಡರೆ ತತ್ಕಾಲದಲ್ಲಿ ಸಮಾಧಾನ. ಪ್ರೇಮಿಗಳ ಸಂಭೋಗ ಕ್ರಿಯೆಯೂ ಹೀಗೆಯೆ.

ತಿಂದ ಅನ್ನ ವಾಯುವಿನ ಪ್ರೇರಣೆಯಿಂದ ಜಠರಾಗ್ನಿಯ ಬಳಿ ಹೋಗಿ ಪಾಕಗೊಳ್ಳುತ್ತದೆ. ಆಗ ಮಲ ಭಾಗವನ್ನು ವಾಯು ಹೊರಗೆ ತಳ್ಳುತ್ತದೆ. ಸಾರಭಾಗ ರಸ-ರಕ್ತ-ಮಾಂಸ ಮುಂತಾದ ಕ್ರಮದಿಂದ ವೀರ್ಯವಾಗಿ ಪರಿಣಮಿಸಿ ದೇಹದಲ್ಲೆಲ್ಲ ವ್ಯಾಪಿಸುತ್ತದೆ.

ಪಿಂಗಲಿ, ಶೃಂಖಲಿ, ಚಪಲ, ಪಿಪ್ಪಲ, ಜಂಗಲಿ ಮುಂತಾದ ಐದು ಸಾವಿರ ಕ್ರಿಮಿಗಳು ತಲೆ ಬುರುಡೆಯಲ್ಲಿರುತ್ತವೆ. ಬೆಣ್ಣೆಯಂತೆ ಬಿಳಿಯಾಗಿದ್ದು ಸಾಸಿವೆ ಕಾಳಿನಷ್ಟಿರುತ್ತವೆ. ಇವುಗಳಲ್ಲಿ ಪ್ರಾಜಾಪತ್ಯವೆಂಬ ಕ್ರಿಮಿಯ ಬಾಯಿಗೆ ವೀರ್ಯ ಬಿದ್ದೊಡನೆ ಮದವೇರಿ ಇಡಾ, ಪಿಂಗಳಾ, ಸುಷುಮ್ನಾನಾಡಿಗಳಲ್ಲಿ ಸಂಚರಿಸಿ ಕಾಮದ ನವೆಯುಂಟುಮಾಡುತ್ತದೆ. ಆಗ ಹೆಣ್ಣು-ಗಂಡುಗಳಲ್ಲಿ ಇಂದ್ರಿಯಗಳು ಉತ್ತೇಜನಗೊಳ್ಳುವುವು. ಸಂಭೋಗಕ್ರಿಯೆ ಅನಿವಾರ್ಯವೆನಿಸುವುದು. ಶರೀರಗಳ ಪರಸ್ಪರ ಘರ್ಷಣೆಯಿಂದ ಸಮಾಧಾನವೆನಿಸುವುದು. ಈ ಸಮಾಧಾನ ಕ್ಷಣಿಕ. ತಿರುಗಿ ನವೆ ಪ್ರಾರಂಭವಾಗುವುದು. ಇದು ಎಲ್ಲ ಪ್ರಾಣಿಗಳ ಹಣೆಬರಹ ಇದರಲ್ಲಿ ಹೊಸತೇನಿದೆ, ಹೇಳು ನನಗಂತೂ ಇದರಲ್ಲಿ ಏನೂ ಹೊಸತಿಲ್ಲ. ಏನೂ ಉತ್ಸಾಹವಿಲ್ಲ. ನೀನು ಹೊರಟು ಹೋಗು.

**ವಿಷ್ಣು :-** ದೂತಿ ಹಿತಿರುಗಿ ಬಂದು ಇಂದ್ರನಲ್ಲಿ ಸುಕಲೆಯಾಡಿದ ಮಾತನ್ನೆಲ್ಲ ಹೇಳಿದಳು. ಇಂದ್ರ ಬೆರಗಾದ. 'ಇಂಥ ಮಾತುಗಳನ್ನಾಡುವ ಹೆಣ್ಣು ಭೂಲೋಕದಲ್ಲಿರುವಳೆ? ನಿಜವಾಗಿಯೂ ಈಕೆ ಮಹಾತ್ಮಳು, ಪವಿತ್ರಳು,' ಎಂದುಕೊಂಡ.

ಆದರೂ ಮನ್ಮಥನನ್ನು ಕರೆದು ಹೇಳಿದ.

**ಇಂದ್ರ :-** ಈಗ ನಾನು ನಿನ್ನ ಜತೆಗೇ ಹೋಗಿ ಆಕೆಯನ್ನು ಕಾಣುವೆ.

**ಮನ್ಮಥ :-** ದೇವರಾಜ, ಹೋಗೋಣ, ಬಾ. ಅವಳ ಸ್ಥೈರ್ಯ, ಸತ್ಯ, ಪತಿನಿಷ್ಠೆಗಳನ್ನೆಲ್ಲ ಒಮ್ಮೆಲೆ ನಾಶಪಡಿಸುವೆ. ಈ ಕೆಲಸ ನನಗೆಷ್ಟರದು ?.

**ಇಂದ್ರ :-** ಮನ್ಮಥ, ನಾನು ಹೇಳುವುದನ್ನು ಕೇಳು. ಹೆಚ್ಚು ಮಾತೇ ಬೇಡ. ಆಕೆಯ ಮನಸ್ಸನ್ನು ಚಂಚಲಗೊಳಿಸಲು ಸಾಧ್ಯವಿಲ್ಲ. ಅವಳೆಂದೂ ನಿನಗೆ ಸೋಲುವವಳಲ್ಲ.

**ಮನ್ಮಥ :-** ಏನೆಂದೆ ? ನನ್ನ ಮುಂದೆ ದೇವತೆಗಳ, ಋಷಿಗಳ ಧೈರ್ಯವೂ ಉಡುಗಿ ಹೋಗುತ್ತದೆ. ಈ ಅಬಲೆ ಎಷ್ಟರವಳು ? ಸುಮ್ಮನಿರು. ಅವಳ ದರ್ಪವೆಲ್ಲ ಹೇಗೆ ಅಡಗುವುದೊ ನೋಡು. ಬಿಸಿಯಾದರೆ ಬೆಣ್ಣೆ ಕರಗದೆ ಇದ್ದೀತೆ ? ನನ್ನ ರೂಪ ಕಂಡೊಡನೆ ಆಕೆ ದ್ರವಿಸುತ್ತಾಳೆ. ಮಹತ್‌ಕಾರ್ಯವೊಂದು ನಡೆಯಬೇಕಾಗಿರುವಾಗ ಸುಮ್ಮನೆ ನನ್ನನ್ನು ಜರೆಯುತ್ತ ಕಾಲಹರಣ ಮಾಡಬೇಡ. ಬಾ, ಹೋಗೋಣ.

**ಇಂದ್ರ :-** ಆಗಲಿ, ನಿನ್ನ ಪೌರುಷವನ್ನು ನೋಡುವೆನು.

ಇಂದ್ರ, ಮನ್ಮಥನು ರತಿ ದೂತಿಯರೊಂದಿಗೆ ಸುಕಲೆಯ ಬಳಿಗೆ ಹೋದರು. ಯೋಗಿಗಳಂತೆ ಮನಸ್ಸನ್ನು ನಿಗ್ರಹಿಸಿ ಪತಿಯನ್ನೇ ಧ್ಯಾನಿಸುತ್ತ ಅದ್ಭುತ ತೇಜಸ್ಸಿನಿಂದ ಹೊಳೆಯುತ್ತಿದ್ದಳಾಕೆ. ಸುಂದರ, ಶ್ರೀಮಂತ, ವಿಲಾಸೀ ತರುಣರಂತೆ ಇಂದ್ರ.ಮನ್ಮಥರು ಆಕೆಯ ಬಳಿ ಕಾಣಿಸಿಕೊಂಡು ಹಿಂದೆಮುಂದೆ ಓಡಾಡಿದರು. ಅವರ ರೂಪಿಗೆ, ಹಾವಭಾವಗಳಿಗೆ ವಿಲಾಸಕ್ಕೆ ಆಕೆ ಏನೂ ಬೆಲೆಗೊಡಲಿಲ್ಲ.

**ಅಂಭೋ ಯಥಾ ಪದ್ಮದಲೇ ಗತಂವೈ**
**ಪ್ರಯಾತಿ ಮುಕ್ತಾಫಲಕಸ್ಯ ಕೀರ್ತಿಂ ।**
**ತದ್ವತ್ ಸ್ವಭಾವಃ ಪರಿಸತ್ಯಯುಕ್ತೋ**
**ಜಜ್ಞೇಚ ತಸ್ಯಾಸ್ತು ಪತಿವ್ರತಾಯಾಃ ।**

ತಾವರೆಯ ಎಲೆಯಲ್ಲಿ ನೀರಹನಿ ಮುತ್ತಿನ ಕಾಂತಿಯಿಂದ ಹೊಳೆವಂತೆ ಪತಿವ್ರತೆಯಾದ ಸುಕಲೆಯ ವ್ಯಕ್ತಿತ್ವವೂ ಸತ್ಯನಿಷ್ಠೆಯಾಸರೆಯಲ್ಲಿ ನಿರ್ಮಲವಾಗಿ ಪ್ರಕಾಶಿಸಿತು.

ಇಂದ್ರನನ್ನು ಕಂಡು ಆಕೆ ಮನಸ್ಸಿನಲ್ಲೇ ಅಂದುಕೊಂಡಳು.

**ಸುಕಲೆ :-** ಇವನೆ ಅಲ್ಲವೆ ದೂತಿಯನ್ನು ಕಳಿಸಿದವನು ? ಇವನೇ ಅಲ್ಲವೆ ಆಕೆ ಒಳ್ಳೆಯ ಗುಣವಂತನೆಂದು ಹೊಗಳಿದ್ದು. ಕಾಮಚೇಷ್ಟೆಗಳನ್ನೆಲ್ಲ ಇನ್ನೂ ನನ್ನ ಮುಂದೆ ಪ್ರದರ್ಶಿಸುತ್ತಿದ್ದಾನೆ. ನನ್ನ ಪತಿ ಬಳಿಯಲ್ಲಿಲ್ಲದ ಸಮಯವನ್ನೇ ಕಾದು ಈಗ ನನ್ನೆಡೆಗೆ ಬಂದಿದ್ದಾನೆ, ದುಷ್ಟ, ತನ್ನ ಅಂದವನ್ನು ತೋರಿಸುತ್ತಿದ್ದಾನೆ. ನನ್ನ ಪ್ರೀತಿ, ಸತ್ಯನಿಷ್ಠೆಗಳನ್ನು ಕಂಡು ಪತಿ ನನಗಾಗಿ ಬದುಕಿರುತ್ತಾನೆ. ನನ್ನ ಸತ್ಯ ನಿಷ್ಠೆಯ ಕಲ್ಲಿನಿಂದ ಈಗ ರತಿ ಸಮೇತನಾದ ಆ ಕಾಮನನ್ನೇ ಕುಟ್ಟಿ, ಪುಡಿಮಾಡುತ್ತೇನೆ. ಆತ ಹೇಗೆ ಬದುಕಿ ಉಳಿವನೋ ನೋಡುತ್ತೇನೆ. ಅವನ ಪಾಲಿಗೆ ನನ್ನ ಈ ಶರೀರ ಶವದಂತೆ ನಿಶ್ಚೇಷ್ಟವಾಗಿರುತ್ತದೆ. ಹೀಗೆ ಅಂದುಕೊಂಡು ಸುಕಲೆ ಮನೆಯೊಳಗೆ ನಡೆದಳು.

**ವಿಷ್ಣುರುವಾಚ**

**ವಿಷ್ಣು :-** ಸುಕಲೆಯ ಭಾವವನ್ನರಿತ ಇಂದ್ರ, ಮನ್ಮಥನನ್ನು ತಿರುಗಿ ಅಕ್ಷೇಪಿಸಿದ.

**ಇಂದ್ರ :-** ಮನ್ಮಥ

**ಧರ್ಮಾಖ್ಯ ಚಾಪಂ ಸ್ವಕರೇ ಗೃಹೀತ್ವಾ**
**ಜ್ಞಾನಾಭಿಧಾನಂ ವರಮೇವಬಾಣಂ ।**
**ಯೋದ್ಧುಂ ರಣೇ ಸಂಪ್ರತಿ ಸಂಸ್ಥಿತಾ ಸತೀ**
**ವೀರೋ ಯಥಾ ದರ್ಪಿತ ವೀರ್ಯಭಾವಃ ॥**

ಪತಿವ್ರತೆಯಾದೀಕೆ ಧರ್ಮವೆಂಬ ಬಿಲ್ಲನ್ನೂ ಜ್ಞಾನವೆಂಬ ಬಾಣವನ್ನೂ ಹಿಡಿದು ವೀರ್ಯದಿಂದ ದರ್ಪಿತನಾದ ವೀರನಂತೆ ಯುದ್ಧಕ್ಕೆ ನಿಂತಿದ್ದಾಳೆ.

ಅವಳನ್ನು ಗೆಲ್ಲುವುದಾಗದು, ಅವಳೆ ಗೆಲ್ಲುವಳು. ಆಗ ನಮ್ಮ ಗತಿ ಏನಾದೀತೆಂದು ಯೋಚಿಸಬೇಕು. ನೀನು ಹಿಂದೆ ಶಿವನನ್ನು ವಿರೋಧಿಸಿ ಹಿಡಿಬೂದಿಯಾದೆ, ಅನಂಗನೆನಿಸಿದೆ.

**ಯೇ ಜ್ಞಾನವಂತಃ ಪುರುಷಾ ಜಗತ್ತ್ರಯೇ**
**ವೈರಂ ಪ್ರಕುರ್ವಂತಿ ಮಹಾತ್ಮಭಿಃ ಸಮಂ ।**
**ಭುಂಜಂತಿ ತೇ ದುಷ್ಕೃತಮೇವ ತತ್ಫಲಂ**
**ದುಃಖಾನ್ವಿತಂ ರೂಪವಿನಾಶನಂ ಚ ॥**

ಮಹಾತ್ಮರೊಡನೆ ಬುದ್ಧಿಪೂರ್ವಕವಾಗಿ ವೈರ ಮಾಡುವವರು ಮೂರು ಲೋಕದಲ್ಲಿ ಯಾರೆ ಇರಲಿ ಅವರು ತಮ್ಮ ದುಷ್ಕೃತ್ಯಕ್ಕೆ ತಕ್ಕ ಫಲವನ್ನು ದುಃಖದಿಂದ ಉಣಲೇಬೇಕು. ಸ್ವರೂಪವಿನಾಶವನ್ನೂ ಅನುಭವಿಸಲೇಬೇಕು.

ಇವಳು ನಿಜವಾಗಿಯೂ ಪತಿವ್ರತೆಯೆಂದು ಘೋಷಿಸಿ ಹೊರಟುಹೋಗೋಣ. ಏಕೆಂದರೆ ನಾನೂ ಹಿಂದೆ ಅನೇಕ ಬಾರಿ ಪತಿವ್ರತೆಯರನ್ನು ಕೆಣಕಿ ಭಯಂಕರ ದುಃಖಕ್ಕೀಡಾಗಿದ್ದೇನೆ. ಅದೆಲ್ಲ ನಿನಗೆ ಗೊತ್ತಿದೆ.

ನಾನು ಗೌತಮರ ಶಾಪದಿಂದ ಮೇಷವೃಷಣನೆನಿಸಿದುದು ಈ ಕಾರಣದಿಂದಲೇ, ನೀನು ಅಂದು ನನ್ನನ್ನು ರಕ್ಷಿಸಲಾರದೆ ಹೋದೆ.

**ತೇಜಃ ಪ್ರಭಾವೋ ಹ್ಯತುಲಃ ಸತೀನಾಂ**
**ಧಾತಾ ಸಮರ್ಥಃ ಸಹಿತುಂ ನ ಸೂರ್ಯಃ ॥**

ಪತಿವ್ರತೆಯರ ತೇಜಸ್ಸಿನ ಪ್ರಭಾವವನ್ನು ಬ್ರಹ್ಮನೂ ಸಹಿಸಿಕೊಳ್ಳಲಾರ. ಸೂರ್ಯನೂ ತಡೆದುಕೊಳ್ಳಲಾರ. ಮಾಂಡವ್ಯನ ಶಾಪದಿಂದ ಪತಿಗೆ ಬಾಧೆಯುಂಟಾಗದಂತೆ ಶೈಬ್ಯೆ ಸೂರ್ಯೋದಯವನ್ನೇ ತಡೆಹಿಡಿದುದುಂಟು. ಅನಸೂಯೆ ಪಾತಿವ್ರತ್ಯ ಉಳಿಸಿಕೊಳ್ಳುವುದಕ್ಕಾಗಿ ತ್ರಿಮೂರ್ತಿಗಳನ್ನೇ ತನ್ನ ಕೂಸುಗಳನ್ನಾಗಿ ಮಾಡಿಕೊಂಡಳು. ಸತೀ ಸಾವಿತ್ರಿ ಮಡಿದ ಗಂಡನನ್ನು ಯಮನಿಂದ ತಿರುಗಿ ಪಡೆದುಕೊಂಡುದೂ ನಿನಗೆ ಗೊತ್ತು.

**ಅಗ್ನೇಃ ಶಿಖಾಂ ಕಃ ಪರಿಸಂಸ್ಪೃಶೇದ್ವೈ**
**ತರೇದ್ಧಿ ಕಃ ಸಾಗರಮೇವ ಮೂಢಃ ।**

**ಗಲೇ ತುಬದ್ಧ್ವಾಸುಶಿಲಾಂ ಭುಜಾಭ್ಯಾಂ**
**ಕೋ ವಾ ಸತೀಂ ವಶ್ಯತಿ ವೀತರಾಗಾಂ ॥**

ಉರಿವ ಬೆಂಕಿಯನ್ನು ಯಾರು ಮುಟ್ಟಬಲ್ಲ ? ಕುತ್ತಿಗೆಗೆ ಕಲ್ಲು ಕಟ್ಟಿಕೊಂಡು ಸಾಗರವನ್ನು ಈಜಿ ದಾಟಲು ಯಾವ ಮೂಢ ಯತ್ನಿಸುವನು ? ರಾಗವನ್ನು ಗೆದ್ದಿರುವ ಪತಿವ್ರತೆಯನ್ನು ಯಾರು ವಶಪಡಿಸಿಕೊಳ್ಳಬಲ್ಲ ?

**ಮನ್ಮಥ :-** ದೇವೇಂದ್ರ, ನೀನೆ ನನ್ನನ್ನು ಈ ಕಾರ್ಯಕ್ಕಾಗಿ ಕರೆಸಿ ಈಗ ಹೇಡಿಯಂತೆ ಭಯದಿಂದ ಉಪದೇಶಮಾಡುತ್ತಿರುವೆ. ಒಬ್ಬ ಹೆಣ್ಣಿನ ಕೈಯಲ್ಲಿ ಸೋತನೆಂದು ನನ್ನನ್ನು ಜನ ಆಡಿಕೊಳ್ಳುತ್ತಾರೆ. ನನ್ನ ಕೀರ್ತಿ ನಾಶವಾಗುತ್ತದೆ. ಹಿಂದೆ ನನ್ನಿಂದ ಪರಾಜಿತರಾದ ದೇವತೆಗಳು, ಋಷಿಗಳು, ದೈತ್ಯರು ಎಲ್ಲರೂ **'ನಾರ್ಯಾಜಿತೋ ಮನ್ಮಥ ಏಷ ಭೀಮಃ'** ಶತ್ರುಭಯಂಕರನೆಂದು ಹೇಳಿಕೊಳ್ಳುತ್ತಿದ್ದ ಈ ಮನ್ಮಥ ಹೆಣ್ಣಿನಿಂದ ಸೋತನೆಂದು ಹೇಳಿ ನಗುತ್ತಾರೆ.

ನಾನು ನಿನ್ನ ಜೊತೆಗಿದ್ದೇನೆ, ಭಯಪಡಬೇಡ. ಅವಳ ಸ್ಥೈರ್ಯವನ್ನು ನಾನು ಕಳೆಯುವೆ.

ಹೀಗೆ ಹೇಳಿ ಮನ್ಮಥ ಹೂಬಾಣಗಳನ್ನು ಬಿಲ್ಲನ್ನೂ ಸಜ್ಜುಗೊಳಿಸಿದ. ಬಳಿಯಲ್ಲಿಯೇ ನಿಂತಿದ್ದ ಕ್ರೀಡೆಯನ್ನು ಕುರಿತು ಹೇಳಿದ. 'ನೀನು ಮಾಯೆಯನ್ನು ಸೃಜಿಸಿ ಸುಕಲೆಯ ಬಳಿಯಲ್ಲಿದ್ದು ನಮ್ಮ ಕಾರ್ಯವನ್ನು ಸಾಧಿಸು' ಪ್ರೀತಿಯನ್ನು ಕುರಿತು ಹೇಳಿದ. 'ನೀನು ನಿನ್ನ ಪ್ರಭಾವದಿಂದ ಒಳ್ಳೆಯ ಮಾತುಗಳಿಂದ ಸುಕಲೆಯನ್ನು ನಮ್ಮ ವಶಕ್ಕೆ ತಂದುಕೊಡು.' ವಸಂತನನ್ನು ಕುರಿತು ಹೇಳಿದ, 'ಮಿತ್ರ, ನೀನು ನಂದನವನದಂತಿರುವ ಒಂದು ಮಾಯಾಮಯವಾದ ವನವನ್ನು ನಿರ್ಮಿಸು. ಅದು ಪುಷ್ಪಫಲಭರಿತವಾಗಿರಬೇಕು. ಅಲ್ಲಿ ಕೋಗಿಲೆ ಹಾಡುತ್ತಿರಬೇಕು. ದುಂಬಿ ಮೊರೆಯುತ್ತಿರಬೇಕು.' ಮಕರಂದನನ್ನು ಕರೆದು ಹೇಳಿದ, 'ಹೂ, ಹಣ್ಣುಗಳಲ್ಲೆಲ್ಲ ಸವಿಯಾದ ರಸವನ್ನು ತುಂಬು.'

ಹೀಗೆ ಇನ್ನೂ ಅನೇಕ ಮಂದಿ ಸೈನಿಕರನ್ನು ಮನ್ಮಥ ಕಳಿಸಿಕೊಟ್ಟು ಇಂದ್ರನೊಡನೆ ತಾನೂ ಸುಕಲೆಯ ಬಳಿಗೆ ಹೊರಟನು.

**ವಿಷ್ಣು :-** ಮನ್ಮಥನು ಇಂದ್ರನ ಜೊತೆಗೆ ಸುಕಲೆಯ ಬಳಿಗೆ ಹೊರಟಾಗ ಸತ್ಯವು ಧರ್ಮವನ್ನು ಕುರಿತು ಹೇಳಿತು.

**ಸತ್ಯ :-** ಧರ್ಮರಾಜ, ಕಾಮನ ಉಪದ್ರವವನ್ನು ಸಹಿಸಲು ಸಾಧ್ಯವಾಗುತ್ತಿಲ್ಲ. ನಾನು, ನನಗಾಗಿ, ನಿನಗಾಗಿ, ಪುಣ್ಯಕ್ಕಾಗಿ ಪತಿವ್ರತೆ, ತಪಸ್ವಿ ಬ್ರಾಹ್ಮಣ ಮತ್ತು ಧರ್ಮಿಷ್ಠನಾದ ರಾಜನೆಂಬ ಉತ್ತಮವಾದ ಮನೆಗಳನ್ನು ಸಿದ್ಧಪಡಿಸಿದರೆ ಈ ಮನ್ಮಥ ಅವುಗಳನ್ನು ಸದಾ ನಾಶಪಡಿಸಲು ಯತ್ನಿಸುವನು. ಈ ಮನೆಗಳಲ್ಲಿ ನಾವು ಪುಣ್ಯ, ಶ್ರದ್ಧೆ, ಕ್ಷಮೆ, ಶಾಂತಿ, ಸತ್ಯ, ದಮೆ, ದಯೆ, ಮೈತ್ರಿ, ಪ್ರಜ್ಞೆ, ವೈರಾಗ್ಯ, ಶೌಚ, ಅಹಿಂಸೆ, ಸಹನೆ, ಬುದ್ಧಿ, ಶುಶ್ರೂಷೆ, ವಿಷ್ಣು, ಲಕ್ಷ್ಮಿ, ಅಗ್ನಿ ಮುಂತಾದ ದೇವತೆಗಳು ಶಿವೆಯಿಂದ ಕೂಡಿದ ಜಗದೀಶನಾದ ಶಿವ ಎಲ್ಲರೂ ಸುಖವಾಗಿ ವಾಸಿಸುತ್ತೇವೆ. ಇಂಥ ಮನೆಗಳನ್ನು ಮನ್ಮಥ ಹಾಳುಗೆಡಹುತ್ತ ನಮ್ಮಲ್ಲಿ ವೈರ ಸಾಧಿಸುತ್ತಾನೆ.

ವಿಶ್ವಾಮಿತ್ರ ತಪಸ್ಸು ಮಾಡುತ್ತಿದ್ದರೆ ಮೇನಕೆಯ ಸಹಾಯದಿಂದ ಮನ್ಮಥ ಅದನ್ನು ತಡೆದ. ಪತಿವ್ರತೆಯಾದ ಅಹಲ್ಯೆಯ ಸತ್ವನಿಷ್ಠೆಯನ್ನು ನಾಶಪಡಿಸಿದ. ಹೀಗೆ ಸತ್ಯಧರ್ಮನಿರತರಾದ ಮುನಿಗಳನ್ನೂ ಪತಿವ್ರತಾ ಸ್ತ್ರೀಯರನ್ನೂ ಆತ ಕಾಮಾಗ್ನಿಯಿಂದ ಸುಡುತ್ತಾನೆ. ಅವನ ಬಲ ಅದಮ್ಯ. ಸತ್ಯವಂತರಿಗೆ ಅತಿ ನಿಷ್ಠುರನಾಗಿದ್ದು ನಿತ್ಯವೂ 'ಸತ್ಯವೆಲ್ಲಿದೆ' ಎಂದು ಹುಡುಕುತ್ತ ಬಂದು ಧನುರ್ಬಾಣಗಳಿಂದ ನನ್ನ ಮನೆಗಳನ್ನು ಕೆಡಹುತ್ತಲೇ ಇರುತ್ತಾನೆ. ಸೇನಾಧಿಪತಿ ಅಸತ್ಯನ ಸಹಾಯದಿಂದ, ಮೋಸದಿಂದ ನನ್ನನ್ನು ಗೆದ್ದು ಎಲ್ಲ ಪಾಪಗಳಿಗೆ ಮನೆಮಾಡಿಕೊಡುತ್ತಾನೆ. ನಿರಾಶ್ರಯನಾದ ನನ್ನನ್ನು ಪಾಪಶಸ್ತ್ರಗಳಿಂದ ಹೊಡೆದು ತನ್ನ ತೇಜಸ್ಸಿನಿಂದ ಸುಡುತ್ತಾನೆ. ನನಗಿನ್ನು ಶೂನ್ಯವಾಸ್ಥೆ ಬರುವುದು ನಿಶ್ಚಿತ.

ಕೃಕಲನ ಪತ್ನಿ ಸುಕಲೆಯೆಂಬ ಒಂದು ಹೊಸ ಮನೆ ನನಗೆ ಈಗ ದೊರೆತಿರುವುದನ್ನು ಕಂಡು ಅದನ್ನೂ ಸುಡಲು ಆ ಪಾಪಿ ಉದ್ಯುಕ್ತನಾಗಿದ್ದಾನೆ. ಅವನಿಗೆ ಸಹಾಯ ಮಾಡಲು ದೇವೇಂದ್ರನಿದ್ದಾನೆ. ಅವನೂ ಹಿಂದೆ ಅಹಲ್ಯೆಯನ್ನು ಬಲಾತ್ಕರಿಸಿ ಗೌತಮ ಶಾಪದಿಂದ ಮೇಷವೃಷಣನಾಗಿರುವುದನ್ನು ಏಕೋ ಮರೆತಿದ್ದಾನೆ. ಎಲ್ಲವೂ ಮನ್ಮಥನ ಪ್ರಭಾವ. ಈಗ ಇವರಿಬ್ಬರೂ ಸುಕಲೆಯನ್ನು ಪೀಡಿಸದಂತೆ ಏನಾದರೊಂದು ಉಪಾಯವನ್ನು ಹೇಳು. ಬುದ್ಧಿವಂತರಲ್ಲಿಯೇ ಮೊದಲಿಗನು ನೀನು.

**ಧರ್ಮರಾಜ :-** ಮನ್ಮಥನ ಪರಾಕ್ರಮವನ್ನು ನಾನು ಕ್ಷೀಣಗೊಳಿಸುತ್ತೇನೆ. ಅದಕ್ಕೊಂದು ಉಪಾಯವಿದೆ ನೋಡು. ಈ ನಮ್ಮ ಪ್ರಜ್ಞೆ, ಹಕ್ಕಿಯ ರೂಪದಿಂದ ಸುಕಲೆಯ ಬಳಿಗೆ ಹೋಗಿ ಆಕೆಗೆ ಪತಿಯ ಆಗಮನದ ಶುಭವಾರ್ತೆಯನ್ನು ಸೂಚಿಸುತ್ತ ಶಕುನ ನುಡಿಯಲಿ. ಆಗ ಸುಕಲೆ ಪತಿ ಬೇಗನೆ ಬರುತ್ತಾನೆಂಬ ವಿಶ್ವಾಸದಿಂದ ಸ್ವಸ್ಥಚಿತ್ತಳಾಗಿದ್ದು ದುಷ್ಟರು ಕೊಡುವ ಉಪದ್ರವಗಳನ್ನು ಧೈರ್ಯದಿಂದ ಎದಿರಿಸುತ್ತಾಳೆ.

ಹೀಗೆ ಹೇಳಿ ಆತ ಪ್ರಜ್ಞೆಯನ್ನು ಕಳಿಸಿಕೊಟ್ಟ. ಪ್ರಜ್ಞೆ ಹಕ್ಕಿಯ ರೂಪದಿಂದ ಸುಕಲೆಯ ಮನೆಯ ಬಳಿಯಲ್ಲಿ ಶಕುನ ನುಡಿಯಿತು. ಸುಕಲೆ ಆ ಹಕ್ಕಿಯನ್ನು ಧೂಪ, ದೀಪಾದಿಗಳಿಂದ ಪೂಜಿಸಿ ಒಬ್ಬ ಬ್ರಾಹ್ಮಣನಲ್ಲಿ ಶಕುನದ ಫಲವನ್ನು ಕೇಳಿದಳು ಬ್ರಾಹ್ಮಣ ಅದನ್ನು ಹೇಳಿದ.

**ಬ್ರಾಹ್ಮಣ :-** ದೇವಿ, ನಿನ್ನ ಪತಿ ಇಂದಿನಿಂದ ಏಳು ದಿನಗಳೊಳಗೆ ಇಲ್ಲಿಗೆ ಬರುತ್ತಾನೆಂದು ಹಕ್ಕಿ ನುಡಿಯುತ್ತಿದೆ.

ಇದನ್ನು ಕೇಳಿ ಸುಕಲೆ ಬಲು ಹರ್ಷಿತಳಾದಳು.

**ವಿಷ್ಣು :-** ಕ್ರೀಡೆ ಓರ್ವ ಪತಿವ್ರತೆಯ ರೂಪದಿಂದ ಸುಕಲೆಯ ಮನೆಗೆ ಬಂದಳು. ಸುಕಲೆ ಆದರದಿಂದ ಅವಳನ್ನಿದಿರುಗೊಂಡು ಸತ್ಕರಿಸಿ 'ಅಮ್ಮ, ನೀನಾರು ?' ಎಂದು ಕೇಳಿದಳು. ಕ್ರೀಡೆ ನಗುತ್ತ ಮಾಯೆಯಿಂದ ಮೋಹಕವಾಗಿ ನುಡಿದಳು.

**ಕ್ರೀಡೆ :-** ನಿನ್ನಂತೆ ನಾನು ಮಹಾತ್ಮನಾದ, ವಿದ್ಯಾವಂತನಾದ ನನ್ನ ಪತಿಯ ವಿರಹದಿಂದ ಬೇಯುತ್ತಿದ್ದೇನೆ. ಅವನು ನನ್ನನ್ನು ಬಿಟ್ಟು ಹೋಗಿದ್ದಾನೆ.

ಹೆಣ್ಣಿನ ಸ್ವಭಾವದಂತೆ ಸುಕಲೆಯೂ ಈ ಮಾತುಗಳನ್ನು ಕೇಳಿ ತುಂಬ ಆತ್ಮೀಯತೆಯಿಂದ ಪತಿಯು ಪ್ರವಾಸ ಕೈಗೊಳ್ಳಲು ಕಾರಣವನ್ನು ಕೇಳಿದಳು. ಆಕೆ ಹೇಳಿದಳು.

**ಕ್ರೀಡೆ :-** ನಾನು ಸದಾ ಪತಿಯನ್ನನುಸರಿಸಿ ಅವನ ಮಾತಿನಂತೆ ನಡೆಯುತ್ತಿದ್ದೆ. ಅವನ ಶುಶ್ರೂಷೆ ಮಾಡುತ್ತಿದ್ದೆ. ಅವನು ನನ್ನನ್ನು ಬಿಟ್ಟು ಹೋಗಲು ಯಾವ ಕಾರಣವೂ ಇಲ್ಲ. ಪೂರ್ವಜನ್ಮದಲ್ಲಿ ಏನೋ ಪಾಪ ಮಾಡಿದ್ದೇನೆ. ಅದು ಈಗ ಫಲಕೊಡುತ್ತಿದೆ. ನನ್ನ ಬಾಳು ಈಗ ದುಃಖಮಯವಾಗಿದೆ. ಪತಿಯಿಲ್ಲದೆ ಇದ್ದರೆ ನಾರಿಯ ಬಾಳು ಬಾಳೆ ಅಲ್ಲ. ರೂಪ, ಶೃಂಗಾರ, ಸೌಭಾಗ್ಯ, ಸುಖ, ಸಂಪತ್ತು ಎಲ್ಲವೂ ನಾರಿಗೆ ಪತಿಯ ಹೊರತು ಬೇರೆ ಇಲ್ಲವೆಂದು ಶಾಸ್ತ್ರ ಹೇಳುತ್ತಿದೆಯಲ್ಲವೆ ?

ಸುಕಲೆ ಕ್ರೀಡೆಯ ಈ ಮಾತುಗಳನ್ನು ನಂಬಿ ಆಕೆಯಲ್ಲಿ ವಿಶ್ವಾಸವಿರಿಸಿದಳು. ತನ್ನ ಚರಿತ್ರೆಯನ್ನೆಲ್ಲ ಹೇಳಿ ತನ್ನ ಪತಿಯೂ ತೀರ್ಥಯಾತ್ರೆಗೆ ಹೋಗಿದ್ದು ತಾನು ವಿರಹಿಣಿಯಾಗಿರುವೆನೆಂದು ಹೇಳಿಕೊಂಡಳು. ಒಂದು ದಿನ ಕ್ರೀಡೆ ಹೇಳಿದಳು.

**ಕ್ರೀಡೆ :-** ಸಖಿ, ನಾನು ನಿನಗೊಂದು ಸುಂದರವಾದ ವನವನ್ನು ತೋರಿಸುವೆ. ಬಾ. ಅಲ್ಲಿ ದಿವ್ಯ ವೃಕ್ಷಗಳಿವೆ. ಹೂಬಳ್ಳಿಗಳಿವೆ. ಒಂದು ಪವಿತ್ರ ತೀರ್ಥವೂ ಇದೆ.

ಸುಕಲೆ ಒಪ್ಪಿದಳು. ಇಬ್ಬರೂ ವನವನ್ನು ನೋಡಲು ಹೊರಟರು. ಆ ವನ ನಂದನವನದಂತೆ ಎಲ್ಲ ಕಾಲದ ಎಲ್ಲ ಬಗೆಯ ಅರಳಿದ ಹೂಗಳು. ಹಾಡುವ ಕೋಗಿಲೆ ಮೊರೆಯುವ ದುಂಬಿ, ಚಿಲಿಪಿಲಿಗುಟ್ಟುವ ಹಕ್ಕಿ, ಸುವಾಸನೆ ಬೀರುವ ಚಂದನದಂಥ ವೃಕ್ಷಗಳು ಇವುಗಳಿಂದ ತುಂಬಿ ಎಲ್ಲ ಸುಖಭೋಗಗಳಿಗಾಗರದಂತಿತ್ತು. ಸುಕಲೆಯನ್ನು ಮೋಹಗೊಳಿಸಲೆಂದೇ ವಸಂತನು ಸಿದ್ಧಪಡಿಸಿದ ಮಾಯಾಮಯವನ ಅದಾಗಿತ್ತು.

ಕ್ರೀಡೆಯೊಂದಿಗೆ ಸುಕಲೆ ಆ ವನವನ್ನು ಪ್ರವೇಶಿಸಿ ಅದರ ಸೊಬಗನ್ನು ನೋಡ ತೊಡಗಿದಳು. ಅತ್ತ ಇಂದ್ರ ಮನ್ಮಥರೂ ವನವನ್ನು ಪ್ರವೇಶಿಸಿದರು.

ಇಂದ್ರ, ಮನ್ಮಥನನ್ನು ಕುರಿತು ಹೇಳಿದ.

**ಇಂದ್ರ :-** ಅಗೋ ಸುಕಲೆ ಬಂದಿದ್ದಾಳೆ. ಕ್ರೀಡೆ ಮಾಯೆಯಿಂದ ಆಕೆಯನ್ನು ಮೋಹಗೊಳಿಸಿ ಇಲ್ಲಿಗೆ, ನಿನ್ನ ಬಳಿಗೆ ಕರೆತಂದಿದ್ದಾಳೆ. ಈಗಲೇ, ಅವಳು ಕ್ರೀಡೆಯ ಬಳಿ ನಿಂತಿರುವಾಗಲೆ, ನಿನ್ನ ಬಾಣವನ್ನೆಸೆದು, ನಿನ್ನಲ್ಲಿ ಪೌರುಷವಿರುವುದಾದರೆ ಅದನ್ನು ತೋರಿಸಿಬಿಡು.

**ಮನ್ಮಥ :-** ನೀನು ಇದಿರು ನಿಂತು ನಿನ್ನ ಕಾಮಕಲಾ ಚಾತುರ್ಯವನ್ನೆಲ್ಲ ಪ್ರದರ್ಶಿಸು. ನಾನು ಎಲ್ಲ ಐದು ಹೂ ಬಾಣಗಳನ್ನು ಒಮ್ಮೆಲೆ ಎಸೆವೆ.

**ಇಂದ್ರ :-** ಮೂರ್ಖ, ಹಾಗಾದರೆ ನಿನ್ನ ಪೌರುಷವೆಲ್ಲಿ ? ಎಲ್ಲ ವಿಡಂಬನೆ. ನಾನು ಇದಿರು ನಿಲ್ಲಬೇಕು. ನೀನು ಯುದ್ಧ ಮಾಡಬೇಕು ! ಬಹು ಚೆನ್ನಾಗಿದೆ !

**ಮನ್ಮಥ :-** ಆ ಶಿವ ಎಂದೊ ನನ್ನನ್ನು ಸುಟ್ಟು ನನ್ನ ಶರೀರವನ್ನು ಅಪಹರಿಸಿರುವುದು ನಿನಗೆ ಗೊತ್ತಿದೆ. ಈಗ ನಾನು ಹೆಣ್ಣನ್ನು ಬಾಧಿಸಲು ಗಂಡಿನ ಶರೀರದಲ್ಲಿ, ಗಂಡನ್ನು ಬಾಧಿಸಲು ಹೆಣ್ಣಿನಲ್ಲಿ ವ್ಯಕ್ತನಾಗಿ ನನ್ನ ಪರಾಕ್ರಮವನ್ನು

ತೋರಬೇಕಾಗಿದೆ. ಈಗ ನಾನು ಹೆಣ್ಣಿನ ಮೈ ಮಾಟವನ್ನು ಸ್ಮರಿಸುವ ಗಂಡಿಗೆ ಉನ್ಮಾದ ಉಂಟುಮಾಡುವೆ ಗಂಡಿನ ಆಕಾರವನ್ನು ನಿರಂತರ ಸ್ಮರಿಸುವ ಹೆಣ್ಣಿಗೆ ಹುಚ್ಚು ಹಿಡಿಸುತ್ತೇನೆ. ಆದರಿಂದಲೆ ನನ್ನನ್ನು **ಸ್ಮರ** ಎಂದು ಕರೆಯುತ್ತಾರೆ. ಶರೀರವಿಲ್ಲದ ನಾನು ಇನ್ನೇನು ಮಾಡಲಿ, ಹೇಳು.

ಬಳಿಕ ಇಂದ್ರನ ಮೈಯಲ್ಲಿಯೂ ವಸಂತನ ಮೈಯಲ್ಲಿಯೂ ಮನ್ಮಥ ವ್ಯಾಪಿಸಿ ನಿಂತು ಸುಕಲೆಯನ್ನೇ ನೋಡುತ್ತ ಬಾಣವನ್ನೆಸೆಯಲು ಸಿದ್ಧನಾದ. ಸಮಯವನ್ನಿದಿರು ನೋಡುತ್ತ ಕಾದು ನಿಂತ.

**ವಿಷ್ಣು :-** ಸುಂದರವಾದ ಆ ವನವನ್ನು ಕ್ರೀಡೆ ಸುಕಲೆಗೆ ತೋರಿಸುತ್ತಿದ್ದಳು. ಸುಕಲೆ ಕೇಳಿದಳು, ''ಇದು ಯಾರ ವನ ?'' ''ಮನ್ಮಥನದು'' ಎಂದಳು ಕ್ರೀಡೆ. ದುರಾತ್ಮನಾದ ಮನ್ಮಥನ ವನವಿದೆಂದು ತಿಳಿದೊಡನೆ ಸುಕಲೆ ಎಚ್ಚರಗೊಂಡಳು. ಹಣ್ಣು ಹೂಗಳ ಮಧುರ ಸುವಾಸನೆಯನ್ನು ಹೊತ್ತು ತರುವ ತಂಗಾಳಿ ಅವಳಿಗೆ ಹಿತವೆನಿಸಲಿಲ್ಲ. ಹಣ್ಣುಗಳ ರಸವನ್ನು ಸವಿಯಲು ಆಕೆ ಒಪ್ಪಲಿಲ್ಲ. ಮಾಗಿದ ಹಣ್ಣುಗಳಿಂದ; ಹೂಗೊಂಚಲುಗಳಿಂದ ತನಿರಸ ಸುರಿಯುತ್ತಿದ್ದರೂ ಆಕೆ ಗಮನ ನೀಡಲಿಲ್ಲ. ವಸಂತ ಮಕರಂದರಿಬ್ಬರೂ ಸುಕಲೆಯಿಂದ ಪರಾಜಿತರಾದರು. ಲಜ್ಜಿತರಾದರು. ಯುದ್ಧದಲ್ಲಿ ಮಡಿದ ಯೋಧನಂತೆ ಮಕರಂದ ನೆಲಕ್ಕೆ ಬಿದ್ದೊಡನೆ ನೊಣಗಳು ಮುತ್ತಿಕೊಂಡುವು. ಮಕರಂದ ಮೆಲ್ಲಮೆಲ್ಲನೆ ಹರಿದು ತೆಗ್ಗಿನ ಪ್ರದೇಶಕ್ಕೆ ಹೋಗುವಾಗ ಹಕ್ಕಿಗಳು ಆನಂದದಿಂದ ಕೂಗಿದುವು. ''ಸುಕಲೆಯಿಂದ ಸೋತು ಎಂಥ ಅಧೋಗತಿಯನ್ನು ಹೊಂದುತ್ತಿದ್ದಾನೆ, ಮಕರಂದ !'' ಎಂದು ನಗುವಂತಿದ್ದುವು ಆ ಹಕ್ಕಿಗಳು.

ರತಿ, ಪ್ರೀತಿಯರು ಸುಕಲೆಯ ಬಳಿಗೆ ಹೋಗಿ 'ಅಮ್ಮ, ನಿನಗೆ ಒಳ್ಳೆಯದಾಗಲಿ. ಬಾ, ನಿನಗೆ ಸ್ವಾಗತ. ಈ ವನ ಸೌಂದರ್ಯವನ್ನು ನೋಡು. ಇಂದ್ರನ ಸೊಬಗನ್ನು ನೋಡು. ನೋಡಿ ಸುಖಪಡು. ನಿನಗೆ ಬೇಕೆನಿಸಿದರೆ ಹೇಳು. ಆ ಇಂದ್ರನನ್ನೂ ನಿನ್ನ ಬಳಿಗೆ ಕರೆತರುವೆವು, ಎಂದನು.

**ಸುಕಲೆ :-** 'ನನ್ನ ಪತಿ ಹೋಗುವಾಗ ನನ್ನ ಸುಖವನ್ನೂ ಜೊತೆಗೊಯ್ದಿದ್ದಾನೆ. ಆವನಿರುವಲ್ಲಿ ನನಗೆ ಸುಖ. ಪ್ರೀತಿ ಎಲ್ಲವೂ ಈ ಶರೀರದಿಂದ ಇಲ್ಲಿ ನನಗೇನೂ ಸಿಗಲಾರದು.'

ಇದನ್ನು ಕೇಳಿ ರತಿ-ಪ್ರೀತಿ ಇಬ್ಬರೂ ಸೋತು ನಾಚಿ ಮನ್ಮಥನೆಡೆಗೆ ಬಂದರು. ಬಿಲ್ಲನ್ನೆಳೆದು ಬಾಣದ ಗುರಿ ನೋಡುತ್ತ ನಿಂತಿದ್ದ ಅವನನ್ನು ತಡೆದು ಹೇಳಿದರು; 'ನಿನ್ನ ಪೌರುಷವನ್ನು ಬದಿಗಿಡು. ಈಕೆ ನಿರಂತರ ಪತಿಯನ್ನೇ ಬಯಸುತ್ತಿದ್ದಾಳೆ.'

**ಮನ್ಮಥ :-** ತಾಳು, ಇಂದ್ರನ ಸೊಬಗನ್ನು ಆಕೆ ಪ್ರತ್ಯಕ್ಷವಾಗಿ ಕಾಣಲಿ. ಆಗ ಆಕೆಯನ್ನು ಬಾಣದಿಂದ ಹೊಡೆದು ವಶಕ್ಕೆ ತಂದುಕೊಳ್ಳುವೆ.

ಅತಿ ಸುಂದರಾಕಾರದ ದೇವೇಂದ್ರ ದಿವ್ಯ ವಸ್ತ್ರಾಭರಣಗಳಿಂದ, ಗಂಧ ಮಾಲ್ಯಗಳಿಂದ ಭೂಷಿತನಾಗಿ ಹಾವಭಾವವಿಲಾಸಗಳನ್ನು ತೋರುತ್ತ ರತಿಯೊಂದಿಗೆ ಸುಕಲೆಯ ಬಳಿಗೆ ಬಂದು ಹೇಳಿದ.

**ದೇವೇಂದ್ರ :-** ದೇವಿ, ನಾನು ನಿನ್ನನ್ನು ಪ್ರೀತಿಸಿ ದೂತಿಯನ್ನು ಕಳಿಸಿದ್ದೆ. ನೀನೇಕೆ ನಿರಾಕರಿಸಿದೆ ? ಈಗ ನಾನೇ ಬಂದಿದ್ದೇನೆ, ನೋಡು. ಈಗಲಾದರೂ ನನ್ನನ್ನು ಸ್ವೀಕರಿಸು.

**ಸುಕಲೆ :-** ನನ್ನ ಪತಿ ಹೋಗುವಾಗ ನನ್ನನ್ನು ಏಕಾಕಿನಿಯಾಗಿ ಬಿಟ್ಟು ಹೋಗಿಲ್ಲ. ಶೂರರಾದ ಅನೇಕ ಮಂದಿ ಮಕ್ಕಳು ನನ್ನ ರಕ್ಷಣೆಗಿದ್ದಾರೆ. ನಾನು ಹೆಚ್ಚೇನು ಹೇಳುವುದಿಲ್ಲ. ಎಂದಿನವರೆಗೆ ನನ್ನ ಕಣ್ಣುಗಳು ಸ್ಪಂದಿಸುವುವೋ ಅಂದಿನವರೆಗೂ ನಾನು ನನ್ನ ಪತಿಯ ಕಾರ್ಯದಲ್ಲಿಯೇ ನಿರತಳಾಗಿರುವೆ. ಈಗ ಲಜ್ಜೆ, ಭಯ ಇವೆರಡನ್ನು ಬದಿಗಿಟ್ಟು ನನ್ನಲ್ಲಿ ರಮಿಸಲು ಬಂದ ನೀನಾರು ? ಹೇಳು.

**ಇಂದ್ರ :-** ಈ ವನದಲ್ಲಿ ನಾನು ನಿನ್ನೊಬ್ಬಳನ್ನೇ ಕಾಣುತ್ತಿರುವೆನಲ್ಲ ? ನೀನು ಹೇಳಿದ ಆ ಮಕ್ಕಳೆಲ್ಲಿ, ತೋರಿಸು.

**ಸುಕಲೆ :-** ದಮ, ಶೌಚಗಳಿಂದ ಕೂಡಿದ ಧರ್ಮ, ಶಾಂತಿ, ಕ್ಷಮೆಗಳಿಂದ ಕೂಡಿದ ಸತ್ಯ, ಬುದ್ಧಿ, ಪುಣ್ಯ ಇವರೆಲ್ಲ ನನ್ನ ಪತಿಗೆ ಎಲ್ಲ ಕಾರ್ಯಗಳಲ್ಲಿ ಸಹಾಯಕರಾಗಿದ್ದು ಈಗ ನನ್ನನ್ನು ರಕ್ಷಿಸುವ ಕಾರ್ಯದಲ್ಲಿ ಸದಾ ಎಚ್ಚರದಿಂದ ಇದ್ದಾರೆ. ಸಾಕ್ಷಾತ್ ಇಂದ್ರನೆ ಬರಲಿ ಮನ್ಮಥನೆ ಬರಲಿ, ನನ್ನನ್ನು ಗೆಲ್ಲಲಾರರು. ಮನ್ಮಥನ ಬಾಣಗಳೆಲ್ಲವೂ ವ್ಯರ್ಥವಾಗುವುದರಲ್ಲಿ ಸಂಶಯವಿಲ್ಲ. ನೀನು ದೂತಿಯೊಂದಿಗೆ ನಿರ್ಭಯವಾಗಿ ಬಂದಿರುವೆಯಲ್ಲ? ಯಾರು ನೀನು? ಧರ್ಮ, ಸತ್ಯ ಮುಂತಾದ ಈ ಶೂರರು ನಿನ್ನನ್ನು ನಿಶ್ಚಯವಾಗಿಯೂ ಕೊಂದುಬಿಡುವರು. ಹೋಗು, ದೂರ ಹೋಗು, ನನ್ನ ಮುಂದೆ ನಿಲ್ಲಬೇಡ.

**ಭರ್ತ್ರಾವಿನಾ ನಿರೀಕ್ಷೇತ ಮಮ ರೂಪಂ ಯದಾ ಭವಾನ್ ।**
**ಯಥಾ ದಾರು ದಹೇದಗ್ನಿಸ್ತಥಾ ಧಕ್ಷ್ಯಾಮಿ ನಾನ್ಯಥಾ ॥**

ಪತಿಯು ನನ್ನ ಬಳಿ ಇಲ್ಲದಿರುವಾಗ ನನ್ನ ಸೌಂದರ್ಯವನ್ನು ನೀನು ನೋಡುತ್ತ ನಿಂತರೆ ಬೆಂಕಿ ಕಟ್ಟಿಗೆಯನ್ನು ಸುಡುವಂತೆ ಸುಟ್ಟು ಬಿಡುತ್ತೇನೆ, ಸಂಶಯ ಬೇಡ.

ಇಂದ್ರ ಈ ಮಾತನ್ನು ಕೇಳಿ ಮನ್ಮಥನ ಮುಂದೆ ನುಡಿದ.

**ಇಂದ್ರ :-** ನೋಡು 'ಈಕೆಯ ಪೌರುಷವನ್ನು ನಿನ್ನಲ್ಲಿ ಪೌರುಷವಿದೆಯೆ ? ಇದ್ದರೆ ಇವಳ ಮುಂದೆ ನಿಂತು ಹೋರಾಡು.'

ಎಲ್ಲರೂ ಪತಿವ್ರತೆಯ ಶಾಪದ ಭೀತಿಯಿಂದ ತಮ್ಮತಮ್ಮ ಸ್ಥಾನಗಳಿಗೆ ಹೊರಟುಹೋದರು. ಸುಕಲೆ ಪತಿಯನ್ನೇ ಧ್ಯಾನಿಸುತ್ತ ಮನೆಯನ್ನು ಸೇರಿದಳು.

**ವಿಷ್ಣು :-** ಇತ್ತ ಕೃಕಲನು ತೀರ್ಥಯಾತ್ರೆಯನ್ನು ಮುಗಿಸಿ ಹಿಂತಿರುಗಿ ಬರುವಾಗ 'ನನ್ನ ತೀರ್ಥಯಾತ್ರೆ ಸಫಲವಾಯಿತು. ಪಿತೃಗಳು ತೃಪ್ತರಾಗಿ ಸ್ವರ್ಗಪಡೆದರು' ಎಂದುಕೊಳ್ಳುತ್ತಿದ್ದ. ಅಷ್ಟರಲ್ಲಿ ಒಬ್ಬ ದಿವ್ಯ ಪುರುಷನು ಪಿತೃಗಳನ್ನು ಕಟ್ಟಿ ಎಳೆದು ಕೃಕಲನ ಮುಂದೆ ತಂದು ನಿಲ್ಲಿಸಿದ. ''ನಿನ್ನ ತೀರ್ಥಯಾತ್ರೆಯಿಂದ ಏನೂ ಪುಣ್ಯ ಉಂಟಾಗಲಿಲ್ಲ, ಕೇವಲ ಶ್ರಮ ಮಾತ್ರ. ತೀರ್ಥಯಾತ್ರೆಯೊಂದು ಮುಗಿಯಿತೆಂದು ತೃಪಿಪಡು'' ಎಂದ.

ಕೃಕಲನಿಗೆ ದುಃಖ ಉಂಟಾಯಿತು. ದುಃಖದಿಂದಲೇ ನುಡಿದ.

**ಕೃಕಲ :-** ಯಾರು ನೀನು ? ಪಿತೃಗಳನ್ನೇಕೆ ಕಟ್ಟಿ ಎಳೆಯುತ್ತಿರುವೆ ? ಯಾರ ತಪ್ಪಿಗೆ ಈ ಶಿಕ್ಷೆ ? ನನ್ನ ತೀರ್ಥಯಾತ್ರೆಗೆ ಏಕೆ ಫಲವಿಲ್ಲ ? ಎಲ್ಲವನ್ನೂ ಸ್ಪಷ್ಟವಾಗಿ ತಿಳಿಸು.

**ಧರ್ಮ :-** ನೀನು ಪವಿತ್ರಳಾದ ಪತ್ನಿಯನ್ನು ತೊರೆದು ತೀರ್ಥಯಾತ್ರೆ ಮಾಡಿದರೆ, ಧರ್ಮಕಾರ್ಯಗಳನ್ನು ನಡೆಸಿದರೆ ಎಲ್ಲವೂ ವ್ಯರ್ಥವೆ. ಪತ್ನಿ ಪತಿವ್ರತೆಯಾಗಿದ್ದರೆ ಧರ್ಮಾಚರಣೆಯಲ್ಲಿ ಆಸಕ್ತಳಾಗಿದ್ದರೆ ಅವಳಿರುವ ಮನೆಯಲ್ಲಿ ದೇವತೆಗಳು, ಋಷಿಗಳು, ಪಿತೃಗಳು, ಗಂಗಾದಿ ಪುಣ್ಯನದಿಗಳು, ಸಾಗರಗಳು, ಯಜ್ಞಗಳು, ಗೋವುಗಳು ಇವೆಲ್ಲವುಗಳ ಸನ್ನಿಧಾನವಿರುತ್ತದೆ. ಇಂಥ ಪತ್ನಿ ಇದ್ದರೆ ಆಕೆಯ ಪತಿ ಗೃಹಸ್ಥನೆನಿಸುತ್ತಾನೆ.

**ಗಾರ್ಹಸ್ಥ್ಯಾತ್ ಪರಮೋಧರ್ಮೋ ದ್ವಿತೀಯೋ ನಾಸ್ತಿ ಭೂತಲೇ**

ಗೃಹಸ್ಥ ಧರ್ಮಕ್ಕಿಂತ ಉತ್ತಮವಾದ ಧರ್ಮವಿನ್ನೊಂದು ಈ ಭೂಮಿಯಲ್ಲಿಯೇ ಇಲ್ಲ.

ಎಲ್ಲ ಪ್ರಾಣಿಗಳು ಗೃಹಸ್ಥಧರ್ಮದಾಶ್ರಯದಲ್ಲಿ ಬದುಕಿವೆ. ಪತಿವ್ರತೆಯಾದ ಮಡದಿ ಇಲ್ಲದ ಮನೆ ಕಾಡಿಗೆ ಸಮಾನ. ಅಲ್ಲಿ ಯಜ್ಞ, ದಾನ, ವ್ರತ, ಧರ್ಮಕಾರ್ಯಗಳೆಲ್ಲ ವ್ಯರ್ಥವಾಗುವುವು.

**ನಾಸ್ತಿ ಭಾರ್ಯಾ ಸಮಂ ತೀರ್ಥಂ ಧರ್ಮಸಾಧನ ಹೇತವೇ ।**
**ಶೃಣುಷ್ವತ್ವಂ ಗೃಹಸ್ಥಸ್ಯ ನಾನ್ಯೋ ಧರ್ಮೋ ಜಗತ್‌ತ್ರಯೇ ॥**

ಪತಿವ್ರತೆಯಾದ ಮಡದಿಗೆ ಸಮಾನವಾದ ಪವಿತ್ರವಸ್ತು ಧರ್ಮಸಾಧನಕ್ಕೆ ಅವಶ್ಯವಾದುದು ಬೇರೆ ಇಲ್ಲ. ಅವಳಿಗೆ ಸಮನಾದ ಧರ್ಮಸಾಧನ ಗೃಹಸ್ಥನಿಗೆ ಮೂರು ಲೋಕದಲ್ಲಿಯೂ ಬೇರೆ ಇಲ್ಲ.

**ಯತ್ರ ಭಾರ್ಯಾ ಗೃಹಂ ತತ್ರ ಪುರುಷಸ್ಯಾಪಿ ನಾನ್ಯಥಾ ।**
**ಗ್ರಾಮೇವಾಪ್ಯಥವಾರಣ್ಯೇ ಸರ್ವ ಧರ್ಮಸ್ಯ ಸಾಧನಂ ॥**

ಪುರುಷನು ಗ್ರಾಮದಲ್ಲೇ ಇರಲಿ ಅರಣ್ಯದಲ್ಲೇ ಇರಲಿ ಎಲ್ಲ ಧರ್ಮಾಚರಣೆಗೂ ಸಾಧನವಾದ ಪತ್ನಿ ಜೊತೆಗೆ ಇದ್ದರೆ ಅದೇ ಅವನಿಗೆ ಮನೆ ಇದ್ದಂತಾಯಿತು.

**ನಾಸ್ತಿ ಭಾರ್ಯಾ ಸಮಂ ತೀರ್ಥಂ ನಾಸ್ತಿ ಭಾರ್ಯಾ ಸಮಂ ಸುಖಂ ।**
**ನಾಸ್ತಿ ಭಾರ್ಯಾ ಸಮಂ ಪುಣ್ಯಂ ತಾರಣಾಯ ಹಿತಾಯ ಚ ॥**

ಪತ್ನಿಗೆ ಸಮಾನ ಪವಿತ್ರವಸ್ತು ಇಲ್ಲ. ಪತ್ನಿಗೆ ಸಮಾನ ಸುಖ ಸಾಧನವಿಲ್ಲ. ಪತ್ನಿಗೆ ಸಮಾನ ಪುಣ್ಯ ಸಾಧನವಿಲ್ಲ. ದುಃಖದಿಂದ ಪಾರಾಗಲೂ ಆಕೆ ಬೇಕು. ಹಿತವನ್ನು ಪಡೆಯಲೂ ಆಕೆ ಬೇಕು.

ನೀನು ಅವಳನ್ನು ಬಿಟ್ಟು ತೀರ್ಥಕ್ಷೇತ್ರಗಳಲ್ಲಿ ಶ್ರಾದ್ಧ, ದಾನಗಳನ್ನು ಮಾಡಿದೆ. ಅದಕ್ಕೆ ನೋಡು ಇದು ಶಿಕ್ಷೆ. ಅವಳಿಲ್ಲದಾಗ ಪಿಂಡದಾನಮಾಡಿದ ನೀನು ಕಳ್ಳ; ಅದನ್ನುಂಡ ಈ ಪಿತೃಗಳೂ ಕಳ್ಳರು. ಅವಳು ತನ್ನ ಕೈಯಿಂದ ಪಾಕಮಾಡಿ ಕೊಟ್ಟ ಅನ್ನವೇ ಅಮೃತತುಲ್ಯವಾಗಿರುತ್ತದೆ. ಅದರಿಂದಲೆ ನಿಜವಾದ ತೃಪ್ತಿ. ಸಂತೋಷ.

**ಕೃಕಲ :-** ಧರ್ಮರಾಜ, ನನಗೆ ತೀರ್ಥಯಾತ್ರೆಯ ಫಲ ಹೇಗೆ ಸಿದ್ಧಿಸುವುದು ? ಈ ಪಿತೃಗಳಿಗೆ ಬಂಧನದಿಂದ ಬಿಡುಗಡೆ ಹೇಗೆ ?

**ಧರ್ಮ :-** ಮನೆಗೆ ಹೋಗು. ಪತ್ನಿಯನ್ನು ಸಮಾಧಾನಪಡಿಸಿ ಅವಳ ಸಹಾಯದಿಂದ ಶ್ರಾದ್ಧದಾನಗಳನ್ನು ಮಾಡು. ಪುಣ್ಯತೀರ್ಥಗಳನ್ನು ನೆನೆದು ದೇವತೆಗಳನ್ನಾರಾಧಿಸು. ಆಗ ನಿನ್ನ ತೀರ್ಥಯಾತ್ರೆಗೆ ಫಲದೊರೆಯುವುದು. ಪಿತೃಗಳು ಮುಕ್ತರಾಗುವರು.

**ವಿಷ್ಣು** :- ಇದನ್ನು ಕೇಳಿ ಕೃಕಲನು ಮನೆಯನ್ನು ಸೇರಿ ಸುಕಲೆಯ ಮುಂದೆ ಧರ್ಮರಾಜನ ಆದೇಶವನ್ನು ತಿಳಿಸಿದ. ಆವಳಿಗೆ ಆನಂದವಾಯಿತು. ದಂಪತಿಗಳು ಶ್ರದ್ಧೆಯಿಂದ ಶ್ರಾದ್ಧವನ್ನಾಚರಿಸಿದರು. ಆಗ ಪಿತೃಗಳ ಜೊತೆಗೆ ಎಲ್ಲ ದೇವತೆಗಳೂ ಗಂಧರ್ವರೂ ಬಂದು ಮೈದೋರಿ ಬೇಕಾದ ವರವನ್ನು ಕೇಳು ಎಂದರು.

**ಕೃಕಲ** :- ದೇವತೆಗಳೇ, ನೀವೆಲ್ಲರೂ ಬಂದು ನನಗೆ ವರವನ್ನು ಕೊಡಲು ಅಂಥ ಪುಣ್ಯಕರ್ಮ ನಾನೇನು ಆಚರಿಸಿದ್ದೇನೆ ?.

**ಇಂದ್ರ** :- ನಿನ್ನ ಮಡದಿ ಸುಕಲೆಯ ಸತ್ಯನಿಷ್ಠೆಗೆ ನಾವು ಒಲಿದು ಬಂದಿದ್ದೇವೆ.

ಹೀಗೆ ಹೇಳಿ ಕೃಕಲನ ತೀರ್ಥಯಾತ್ರೆಯ ಕಾಲದಲ್ಲಿ ನಡೆದ ಸುಕಲೆಯ ವೃತ್ತಾಂತವನ್ನು ಸಂಕ್ಷೇಪವಾಗಿ ತಿಳಿಸಿದ ದೇವೇಂದ್ರ. ಕೃಕಲ ಆನಂದಬಾಷ್ಪವನ್ನು ಸುರಿಸುತ್ತ ದೇವತೆಗಳಿಗೆ ನಮಿಸಿ ಜನುಮಜನುಮದಲ್ಲಿಯೂ ದೇವತೆಗಳಲ್ಲಿ ಭಕ್ತಿ ಧರ್ಮ, ಸತ್ಯಗಳಲ್ಲಿ ನಿಷ್ಠೆ, ಪತ್ನಿಯೊಡನೆ ಮತ್ತು ಪಿತೃಗಳೊಡನೆ ವಿಷ್ಣುಲೋಕ ಪ್ರಾಪ್ತಿ ಹೀಗೆ ಮೂರು ವರಗಳನ್ನು ಬೇಡಿ ಪಡೆದ.

ದಂಪತಿಗಳ ಮೇಲೆ ಹೂಮಳೆ ಸುರಿಯಿತು. ಗಂಧರ್ವರು ಮಂಗಳಗೀತವನ್ನು ಹಾಡಿದರು. ಅಪ್ಸರೆಯರು ಕುಣಿದರು.

ಎಲ್ಲರೂ ಪತಿವ್ರತೆ ಸುಕಲೆಯನ್ನು ಪ್ರಶಂಶಿಸಿದರು. ಈ ಸುಕಲಾ ಚರಿತ್ರೆಯನ್ನು ಶ್ರದ್ಧೆಯಿಂದ ಕೇಳಿದರೆ ಎಲ್ಲ ಸೌಭಾಗ್ಯಗಳೂ ದೊರೆಯುವುವು. ಧನ, ಧಾನ್ಯ, ಪುತ್ರ, ಸಂಪತ್ತು ಹೆಚ್ಚುವುವು. ಸ್ತ್ರೀಯರು ಜನ್ಮ, ಜನ್ಮಗಳಲ್ಲಿಯೂ ಪತಿವ್ರತೆಯರಾಗುವರು. ಬ್ರಾಹ್ಮಣನಿಗೆ ವೇದವಿದ್ಯೆ, ಕ್ಷತ್ರಿಯನಿಗೆ ಜಯ ವೈಶ್ಯನಿಗೆ ಧನ-ಧಾನ್ಯಗಳು, ಶೂದ್ರನಿಗೆ ಸುಖ-ಸಂಪತ್ತುಗಳು ದೊರೆಯುವುವು.

*ಇತಿ ಪದ್ಮ ಮಹಾಪುರಾಣ ಭಾಗ-೨ರ ಭೂಮಿಖಂಡದ ವೇನೋಪಾಖ್ಯಾನದಲ್ಲಿ*
*ಸುಕಲೆಯ ಚರಿತ್ರೆ ಎಂಬ ಹದಿಮೂರನೇಯ ಅಧ್ಯಾಯ ಮುಗಿದುದು*

—o—

## ಮಾತೃ-ಪಿತೃಗಳ ಸೇವೆಯ ಮಹಾತ್ಮೆ

ಅಧ್ಯಾಯ - ೧೪

**ವೇನ ಉವಾಚ**

**ವೇನ** :- ದೇವ, ಪತಿವ್ರತೆಯೆಂಬ ಪವಿತ್ರ ಪುಣ್ಯ ಸಾಧನವನ್ನು ವರ್ಣಿಸಿರುವಿರಿ. ಈಗ ಮಕ್ಕಳಿಗೆ ಸದ್ಗತಿಯನ್ನು ಕೊಡಬಲ್ಲ, ಪಿತೃಸೇವೆಯ ಪ್ರಭಾವವನ್ನು ತಿಳಿಸಿ.

**ವಿಷ್ಣು** :- ಕುರುಕ್ಷೇತ್ರದಲ್ಲಿ ಕುಂಡಲನೆಂಬ ಬ್ರಾಹ್ಮಣನ ಮಗ ಸುಕರ್ಮ ಮಹಾ ಪಿತೃಭಕ್ತ. ವೃದ್ಧರಾದ ಶಾಸ್ತ್ರಕೋವಿದರಾದ ತಂದೆತಾಯಿಗಳನ್ನು ಹಗಲುರಾತ್ರಿ ಭಕ್ತಿಯಿಂದ ಸೇವೆಮಾಡುತ್ತ ಅವರಿಂದ ಶಾಸ್ತ್ರಗಳನ್ನೂ ಅರಿತ. ಆ ಸಮಯದಲ್ಲಿ ಕಶ್ಯಪಗೋತ್ರದ ಪಿಪ್ಪಲನೆಂಬ ಬ್ರಾಹ್ಮಣನು ದಶಾರಣ್ಯದಲ್ಲಿ ಉಗ್ರತಪಸ್ಸು ಮಾಡುತ್ತಿದ್ದ. ಅವನ ತಪಸ್ಸಿನ ಪ್ರಭಾವದಿಂದ ಆ ತಪೋವನದಲ್ಲಿ ಮೃಗಗಳು ಪರಸ್ಪರ ವೈರವನ್ನು ಮರೆತು ಸೋದರರಂತೆ ಇರತೊಡಗಿದವು. ದೇವತೆಗಳೂ ಋಷಿಗಳೂ ಅವನ ತಪಸ್ಸನ್ನು ನೋಡಿ ಬೆರಗಾದರು. ಈ ಪಿಪ್ಪಲನೆಂಥ ನಿರ್ವಿಕಾರ ! ಕಾಮಕ್ರೋಧಗಳನ್ನು ಗೆದ್ದು ಏಕಾಗ್ರತೆಯಿಂದ ನಿಶ್ಚಲನಾಗಿ ಕುಳಿತು ಬ್ರಹ್ಮನನ್ನು ಧ್ಯಾನಿಸುತ್ತಿದ್ದಾನೆ. ಆ ಧ್ಯಾನದ ಆನಂದದಿಂದ ಅವನ ಮುಖಕಮಲ ಪ್ರಸನ್ನವಾಗಿದೆ ಎಂದು ಹೊಗಳಿದರು.

ಒಂದು ಸಾವಿರ ವರ್ಷಗಳ ಕಾಲ ಪಿಪ್ಪಲ ತಪಸ್ಸು ಮಾಡಿದ. ಅಷ್ಟರಲ್ಲಿ ಅವನ ಮೈಮೇಲೆ ಹುತ್ತ ಬೆಳೆದಿತ್ತು. ಹುತ್ತದೊಳಗೆ ಕೃಷ್ಣಸರ್ಪಗಳು ಪ್ರವೇಶಿಸಿ ಮುನಿಯನ್ನು ಕಚ್ಚಿದುವು. ಆದರೆ ಅವುಗಳ ಕೋರೆಹಲ್ಲುಗಳು ಆತನ ಚರ್ಮವನ್ನು ಭೇದಿಸಲು ಅಶಕ್ತವಾದವು. ಕೊನೆಗೆ ಅವನ ತೇಜಸ್ಸಿನ ಪ್ರಭಾವದಿಂದ ಆ ವಿಷ ಸರ್ಪಗಳೂ ಸುಮ್ಮನಾದುವು. ಮೋಡದ ಮರೆಯಲ್ಲಿ ಸೂರ್ಯಬಿಂಬ ಕಾಣದಿದ್ದರೂ ಬೆಳಕು ಕಾಣುವಂತೆ ಹುತ್ತದೊಳಗೆ ಕುಳಿತಿದ್ದ ಮುನಿ ಕಾಣದಿದ್ದರೂ ಅವನ ಉಜ್ವಲ ಕಾಂತಿ ಎಲ್ಲೆಡೆ ಪಸರಿಸಿತ್ತು. ನಿರಾಹಾರನಾಗಿ ಕೇವಲ ಗಾಳಿಯನ್ನು ಸೇವಿಸುತ್ತ ಮೂರು ಸಾವಿರ ವರ್ಷಗಳ ಕಾಲ ಹೀಗೆ ತಪಸ್ಸು ಮಾಡಿದುದನ್ನು ಕಂಡು ದೇವತೆಗಳು ಹೂಮಳೆಗರೆದರು. ಇದಿರಿನಲ್ಲಿ ಅವರು ಮೈದೋರಿ 'ಮುನಿಯೆ, ನೀನು ಬ್ರಹ್ಮಜ್ಞಾನಿಯಾಗಿರುವೆ. ಬಯಸಿದುದನ್ನೆಲ್ಲ ಹೊಂದಬಲ್ಲೆ' ಎಂದರು.

ಪಿಪ್ಪಲನು ಭಕ್ತಿಯಿಂದ ದೇವತೆಗಳ್ನು ನಮಿಸಿ ಪ್ರಪಂಚವನ್ನೇ ವಶದಲ್ಲಿಟ್ಟು ಕೊಳ್ಳಬಲ್ಲ ವಿದ್ಯಾಧರ ತಾನಾಗಬೇಕೆಂಬ ಬಯಕೆಯನ್ನು ಅವರ ಮುಂದಿಟ್ಟ. ದೇವತೆಗಳು ಅಸ್ತು ಎಂದರು.

ಅವರು ಹೊರಟು ಹೋದೊಡನೆ ತಾನು ವಿದ್ಯಾಧರನಾಗಿ ಎಲ್ಲವನ್ನೂ ವಶಕ್ಕೆ ತಂದುಕೊಳ್ಳಬಲ್ಲ ಶಕ್ತಿ ತನಗೆ ಬಂದಿದೆಯೇ ಎನ್ನುವುದನ್ನು ಪರೀಕ್ಷಿಸಿ ನೋಡಿದ. ಬಯಸಿದ ವಸ್ತುವೆಲ್ಲ ವಶವಾಗುತ್ತಿರುವುದನ್ನು ಕಂಡು ಇನ್ನು ನನಗೆ ಸಮಾನರು ಯಾರಿಲ್ಲವೆಂದೂ ತಿಳಿದುಕೊಂಡ. ಒಮ್ಮೆ ಒಂದು ಸರೋವರದ ಬಳಿ ಸಾರಸಪಕ್ಷಿಯೊಂದು ಪಿಪ್ಪಲನ್ನು ಕುರಿತು ಸ್ಪಷ್ಟವಾಗಿ ಹೀಗೆ ನುಡಿಯಿತು. ಮುನಿಯೆ, ಎಲ್ಲವನ್ನು ವಶದಲ್ಲಿಟ್ಟುಕೊಳ್ಳಬಲ್ಲೆನೆಂಬ ಗರ್ವ ನಿನಗೇಕೆ ? ನಿನಗೆ ಪ್ರಾಚೀನ ಮತ್ತು

ಅರ್ವಾಚೀನಗಳ ಜ್ಞಾನವಿದೆಯೆ ? ಮೂರು ಸಾವಿರ ವರ್ಷಗಳ ಕಾಲ ಘೋರ ತಪಸ್ಸು ಮಾಡಿ ಏನು ಪ್ರಯೋಜನ ? ಕುಂಡಲನ ಪುತ್ರ ಸುಕರ್ಮ ಜಗತ್ತನ್ನೇ ವಶಕ್ಕೆ ತಂದುಕೊಂಡಿದ್ದಾನೆ. ಪ್ರಾಚೀನ ಅರ್ವಾಚೀನಗಳ ಜ್ಞಾನವೂ ಅವನಿಗಿದೆ. ಅವನಂಥ ಮಹಾಜ್ಞಾನಿ ಲೋಕದಲ್ಲೆ ಇನ್ನಿಲ್ಲ. ಅವನು ನಿನ್ನಂತೆ ಯಜ್ಞದಾನ, ತೀರ್ಥಯಾತ್ರೆ ಮುಂತಾದವನ್ನು ಮಾಡಿದವನಲ್ಲ. ಕೇವಲ ಪಿತೃಶುಶ್ರೂಷೆ ಮತ್ತು ವೇದಾಧ್ಯಯನಗಳೆ ಅವನ ಸಾಧನೆಗಳು. ಆದರೆ ಸಣ್ಣವನಾದ ಅವನಿಗಿರುವ ಜ್ಞಾನ ಸಂಪತ್ತು ನಿನ್ನಲ್ಲಿಲ್ಲ. ಏಕೆ ನಿನಗೆ ಈ ಗರ್ವ ?'

**ಪಿಪ್ಪಲ :-** ನೀನಾರು, ಪಕ್ಷಿರೂಪದಿಂದಿರುವೆ ? ಜ್ಞಾನವಿಲ್ಲದವನೆಂದು ನನ್ನನ್ನೇಕೆ ಹಳಿಯುವೆ? ನಿನಗೆ ಜ್ಞಾನ ಹೇಗೆ ಉಂಟಾಯಿತು? ಪ್ರಾಚೀನ ಅರ್ವಾಚೀನಗಳೆಂದರೇನು? ನೀನು ಬ್ರಹ್ಮನೋ, ವಿಷ್ಣುವೋ, ರುದ್ರನೋ ಯಾರು ?

**ಸಾರಸ :-** ನೀನು ಮಾಡಿದ ತಪಸ್ಸಿಗೆ ಫಲವಿಲ್ಲ. ಎಳೆವಯಸ್ಸಿನ ಆ ಸುಕರ್ಮನಲ್ಲಿರುವ ಗುಣಗಳು ನಿನ್ನಲ್ಲಿಲ್ಲ. ಅದರಿಂದಲೆ ನಿನಗೆ ಜ್ಞಾನ ಉಂಟಾಗಿಲ್ಲ. ನೀನು ಸುಕರ್ಮನ ಬಳಿಗೆ ಹೋಗು. ನಾನಾರೆಂಬುದನ್ನು ಆತ ಹೇಳುತ್ತಾನೆ. ಎಲ್ಲ ಜ್ಞಾನವನ್ನೂ ಉಪದೇಶಿಸುತ್ತಾನೆ.

**ವಿಷ್ಣು :-** ಸಾರಸ ಪಕ್ಷಿ ನುಡಿದ ಈ ಮಾತನ್ನು ಕೇಳಿದೊಡನೆ ದಶಾರಣ್ಯವನ್ನು ಬಿಟ್ಟು ವೇಗವಾಗಿ ಸುಕರ್ಮನ ಬಳಿಗೆ ನಡೆದ, ಪಿಪ್ಪಲ ಮುನಿ.

**ವಿಷ್ಣು :-** ಪಿಪ್ಪಲನು ಸುಕರ್ಮನ ಮನೆಗೆ ಬಂದಾಗ ಆತ ತಂದೆ-ತಾಯಿಗಳ ಬಳಿ ಭಕ್ತಿಯಿಂದ ಕುಳಿತಿದ್ದ. ಒಳ್ಳೆಯ ತೇಜಸ್ಸಿನಿಂದ ಹೊಳೆಯುತ್ತಿದ್ದ, ಬಂದ ಅತಿಥಿಯನ್ನು ಸುಕರ್ಮನಾದರದಿಂದ ಇದಿರುಗೊಂಡು ಆಸನ ಪಾದ್ಯ ಅರ್ಘ್ಯಗಳನ್ನಿತ್ತು ಕುಶಲಪ್ರಶ್ನೆ ಮಾಡಿದ. 'ಮುನಿಯೆ, ಕ್ಷೇಮವೇ ? ಆ ಸಾರಸ ಪಕ್ಷಿ ನಿನ್ನನ್ನಿಲ್ಲಿಗೆ ಕಳುಹಿಸಿತಲ್ಲವೆ ?' ನೀನು ಮೂರು ಸಾವಿರ ವರ್ಷಗಳ ಕಾಲ ಘೋರ ತಪಸ್ಸು ಮಾಡಿಯೂ ಏನೂ ಫಲ ಸಿಗಲಿಲ್ಲ. ಎಲ್ಲವನ್ನೂ ವಶದಲ್ಲಿಟ್ಟುಕೊಳ್ಳುವ ವಿದ್ಯೆಯೊಂದನ್ನು ಮಾತ್ರ ಪಡೆದು ಅಷ್ಟರಿಂದಲೆ ಗರ್ವಿತನಾದೆ. ಅದರಿಂದಲೇ ಸಾರಸ ಪಕ್ಷಿ ನಿನ್ನನ್ನು ನನ್ನ ಬಳಿಗೆ ಕಳಿಸಿತು.

**ಪಿಪ್ಪಲ :-** ಆ ಸಾರಸ ಪಕ್ಷಿ ಯಾರು ? ಹೇಳು.

**ಸುಕರ್ಮ :-** ಅದು ಪರಮೇಶ್ವರ, ಬ್ರಹ್ಮ

**ಪಿಪ್ಪಲ :-** ಎಲ್ಲ ಜಗತ್ತು ನಿನ್ನ ವಶದಲ್ಲಿದೆ ಎಂದು ಕೇಳಿದ್ದೇನೆ. ಅದನ್ನು ಪ್ರತ್ಯಕ್ಷವಾಗಿ ಕಾಣುವ ಕುತೂಹಲ ನನ್ನಲ್ಲಿ ಮೂಡಿದೆ. ತೋರಿಸುವೆಯಾ ?

**ಸುಕರ್ಮ :-** ಆಗಲಿ ತೋರಿಸುವೆನು, ನೋಡು.

ಹೀಗೆನ್ನುತ್ತ ಸುಕರ್ಮನೆಲ್ಲ ದೇವತೆಗಳನ್ನು ಸ್ಮರಿಸಿದ. ಒಡನೆ ಅವರೆಲ್ಲ ಮೈದೋರಿ ನಿಂತು 'ವಿಪ್ರೋತ್ತಮ, ನಮ್ಮನ್ನೇಕೆ ಸ್ಮರಿಸಿದೆ ?' ಎಂದು ಕೇಳಿದರು.

**ಸುಕರ್ಮ:-** ಈ ವಿದ್ಯಾಧರ ಪಿಪ್ಪಲನು ನನ್ನ ವಶ್ಯಾವಶ್ಯತ್ವ ವಿದ್ಯೆಯನ್ನು ಪ್ರತ್ಯಕ್ಷವಾಗಿ ಕಾಣಬಯಸಿದುದರಿಂದ ನಿಮ್ಮನ್ನು ಸ್ಮರಿಸಿದೆ. ನೀವಿನ್ನು ಹೋಗಬಹುದು.

**ದೇವತೆಗಳು :-** ನಮ್ಮ ದರ್ಶನವೆಂದೂ ವ್ಯರ್ಥವಾಗಲಾರದು. ನಿನಗೆ ಬೇಕಾದ ವರವನ್ನು ಕೇಳು, ಕೊಡುತ್ತೇವೆ.

**ಸುಕರ್ಮ :-** ಪ್ರಾಚೀನವೆಂದರೆ ಸರ್ವತ್ರ ವ್ಯಾಪ್ತನಾದ ಜಗನ್ನಾಥನ ಒಂದು ರೂಪ. ಯೋಗಿಗಳೂ ಅದನ್ನು ನೋಡಲಾರರು. ಶ್ರುತಿಯೂ ಅದನ್ನು ಹೇಳುವಾಗ ಭಯಗೊಂಡಂತೆ ಕಾಣುತ್ತದೆ. ಏಕೆಂದರೆ ಅದಕ್ಕೆ ಕೈಕಾಲುಗಳಿಲ್ಲ, ಕಣ್ಣು ಮೂಗು ಕಿವಿಗಳಿಲ್ಲ. ಆದರೆ ಅದು ಎಲ್ಲ ಕಾರ್ಯಗಳನ್ನೂ ಮಾಡುತ್ತದೆ. ಎಲ್ಲ ಕಡೆ ಇರುತ್ತದೆ. ಎಲ್ಲವನ್ನೂ ನೋಡುತ್ತದೆ. ಯಾರು ಸತ್ಯವಂತರು, ಯಾರು ಅಲ್ಲ ಎಂಬುದನ್ನು ತಿಳಿಯುತ್ತದೆ ಅದು ವ್ಯಾಪಕ, ಶುದ್ಧ, ಎಲ್ಲ ಸಿದ್ಧಿಯನ್ನೂ ಅದು ಕೊಡಬಲ್ಲುದು. ಮಹಾಯೋಗಿ ವ್ಯಾಸನೊಬ್ಬ ಅದನ್ನು ತಿಳಿದಿದ್ದಾನೆ.

ಅರ್ವಾಚೀನವನ್ನು ವ್ಯಾಸ, ಮಾರ್ಕಂಡೇಯ ಮುನಿಗಳು ತಿಳಿದಿದ್ದಾರೆ. ಒಮ್ಮೆ ಪ್ರಳಯಕಾಲದಲ್ಲಿ ನೀರಲ್ಲಿ ಶೇಷನ ಮೇಲೆ ಯೋಗನಿದ್ರೆಮಾಡುವ ಕೋಟಿ ಸೂರ್ಯರಂತೆ ಬೆಳಗುವ ಜನಾರ್ದನನ್ನು ಮಾರ್ಕಂಡೇಯ ಮುನಿ ಕಂಡ. ಎಲ್ಲೆಲ್ಲೂ ನೀರೂ, ಕತ್ತಲೂ, ಹಬ್ಬಿದ್ದುದರಿಂದ ನಿಲ್ಲಲು ಸ್ಥಳ ಸಿಗದೆ ಅಲೆಯುತ್ತ ಅಲ್ಲಿಗೆ ಬಂದಿದ್ದನಾತ. ಆ ಜನಾರ್ದನನ ಬಳಿ ಕಾಡಿಗೆಯಂತೆ ಕಪ್ಪಾಗಿ ಕೋರೆ ಹಲ್ಲುಗಳನ್ನು ತೋರುತ್ತ ಭಯಂಕರಳಾಗಿದ್ದ ಓರ್ವ ಸ್ತ್ರೀ ಇದ್ದಳು. 'ಮುನಿಯೆ, ಹೆದರಬೇಡ.' ಎನ್ನುತ್ತ ಆಕೆ ಐದು ಯೋಜನ ವಿಸ್ತಾರದ ಒಂದು ತಾವರೆಯೆಲೆಯ ಮೇಲೆ ಅವನನ್ನು ಕುಳ್ಳಿರಿಸಿ 'ಕೇಶವನು ನಿದ್ರಿಸುತ್ತಿದ್ದರೂ ನಿನಗಿಲ್ಲೇನೂ ಭಯವಿಲ್ಲ' ಎಂದಳು. ಅವನು ಕೇಳಿದ, 'ಯಾರಮ್ಮ ನೀನು ?'' ಅವಳೆಂದಳು ''ವಿಪ್ರೋತ್ತಮ, ಶೇಷನ ಮೇಲೆ ಮಲಗಿರುವ ಈ ಕೇಶವನ ವೈಷ್ಣವೀ ಶಕ್ತಿ. ಕಾಲರಾತ್ರಿ ನಾನು. ಪುರಾಣಗಳಲ್ಲಿ ಪ್ರಸಿದ್ಧಳಾದ ಮಹಾಮಾಯೆಯೂ ನಾನೆ ಹೀಗೆ ಹೇಳಿ ಅವಳು ಅದೃಶ್ಯಳಾದಳು.

ದೇವಿ ಅದೃಶ್ಯಳಾದೊಡನೆ ಮುನಿ ನೋಡುತ್ತಿದ್ದಂತೆ ನಾರಾಯಣನ ನಾಭಿಯಿಂದ ಚಿನ್ನದಂತೆ ಹೊಳೆವ ಕಮಲ ಉದಿಸಿತು. ಅದರೊಳಗಿರುವ ಪಿತಾಮಹನಾದ ಬ್ರಹ್ಮ ಅವಿರ್ಭವಿಸಿದ. ಅವನಿಂದ ಲೋಕಗಳೆಲ್ಲ ನಿರ್ಮಿತವಾದುವು. ದೇವತೆಗಳೆಲ್ಲ ಹುಟ್ಟಿದರು. ಇದು ಅರ್ವಾಚೀನ ಸ್ವರೂಪ. ಇದಕ್ಕೆ ರೂಪವಿದೆ. ಪ್ರಾಚೀನಕ್ಕಿಲ್ಲ. ಬ್ರಹ್ಮನಿಂದಾರಂಭಿಸಿ ಎಲ್ಲ ಲೋಕವೂ ಅರ್ವಾಚೀನ, ಯೋಗಿಗಳು ಕಾಣುವ ಶುದ್ಧವಾದ ಪರಬ್ರಹ್ಮವೇ, ಪ್ರಾಚೀನ. ಅದುವೆ ಮೋಕ್ಷ ರೂಪವಾದ ಉತ್ತಮ ಸ್ಥಾನ.

**ಪಿಪ್ಪಲ :-** ಈ ಅದ್ಭುತವಾದ ಜ್ಞಾನ ನಿನಗೆ ಹೇಗೆ ದೊರಕಿತು ?. ಉಗ್ರವಾದ ತಪಸ್ಸನ್ನು ನೀನು ಮಾಡುತ್ತಿಲ್ಲ. ಯಜ್ಞಗಳನ್ನಾಗಲಿ, ತೀರ್ಥಯಾತ್ರೆಗಳನ್ನಾಗಲಿ ಕೈಗೊಳ್ಳುತ್ತಿಲ್ಲ. ಯಾವುದರ ಪ್ರಭಾವದಿಂದ ನೀನೀ ಪ್ರಾಚೀನಾರ್ವಾಚೀನಗಳ ಜ್ಞಾನವನ್ನು ಸಂಪಾದಿಸಿದೆ, ಹೇಳು.

**ಸುಕರ್ಮ :-** ಮುನಿಯೆ, ನೀನೆನ್ನುವುದು ನಿಜ ತಪಸ್ಸು ಕಾಯಶೋಷಣ ಗಳೊಂದನ್ನೂ ನಾನರಿಯೆ. ಯಜ್ಞ, ತೀರ್ಥಯಾತ್ರೆ, ಧ್ಯಾನಗಳ್ಳೂ ಅರಿಯೆ. ಈ ಎರಡು ಕೈಗಳಿಂದ ತಂದೆತಾಯಿಗಳ ಸೇವೆ ಮಾಡುವುದೊಂದನ್ನು ಮಾತ್ರ ನಾನು ಬಲ್ಲೆ. ಅವರ ಕಾಲು

ತೊಳೆಯುತ್ತೇನೆ. ಸ್ನಾನ ಮಾಡಿಸುತ್ತೇನೆ. ಅನ್ನಪಾನಗಳನ್ನಿತ್ತು ಉಪಚರಿಸುತ್ತೇನೆ. ಅವರ ಪಾದೋದಕವನ್ನು ತಲೆಯಲ್ಲಿ ಧರಿಸುತ್ತೇನೆ. ಅವರು ಬದುಕಿರುವಷ್ಟು ಕಾಲ ಅವರ ಸೇವೆ ಮಾಡುವ ಭಾಗ್ಯ ನನ್ನದಾಗಿದೆ. ಮೂರು ಕಾಲಗಳಲ್ಲಿಯೂ ನಿರ್ಮಲ ಮನಸ್ಸಿನಿಂದ ಅವರನ್ನಾರಾಧಿಸುವ ನನಗೆ ಬೇರೆ ತಪಸ್ಸಿನಿಂದ ಏನಾಗಬೇಕಾಗಿದೆ ? ಅದರ ಫಲವೆಲ್ಲ ಇದೊಂದರಿಂದಲೆ ನನಗೆ ದೊರೆಯುತ್ತಿದೆ. ತಂದೆತಾಯಿಗಳ ಸೇವೆಯೊಂದೆ ಮಕ್ಕಳಿಗೆ ಎಲ್ಲ ಪವಿತ್ರ ತೀರ್ಥಗಳ ಫಲ ನೀಡಬಲ್ಲುದು. ಅವರಿದ್ದಲ್ಲಿ ಎಲ್ಲ ತೀರ್ಥಗಳ ಸನ್ನಿಧಾನವಿದೆ. ಅವರನ್ನು ಬಿಟ್ಟರೆ ಮಕ್ಕಳಿಗೆ ಬೇರೆಲ್ಲ ಧರ್ಮವೂ ಕೇವಲ ಶ್ರಮವೆನಿಸುತ್ತದೆ.

**ಮಾತಾ ಪಿತ್ರೋಸ್ತು ಯಃ ಪಾದೆ ನಿತ್ಯಮೇವಹಿಕ್ಷಾಲಯೇತ್ ॥**
**ತಸ್ಯ ಭಾಗೀರಥೀಸ್ನಾನಮಹನ್ಯಹನಿ ಜಾಯತೇ ॥**

ನಿತ್ಯ ತಾಯಿ-ತಂದೆಗಳ ಕಾಲು ತೊಳೆವವನಿಗೆ ಪ್ರತಿ ದಿನ ಗಂಗಾಸ್ನಾನ ಮಾಡಿದ ಫಲ ಸಿಗುತ್ತದೆ.

ಅವರಿಗೆ ಭಕ್ತಿಯಿಂದ ಉಣಿಸಿದರೆ ಅಶ್ವಮೇಧದ ಫಲವಿದೆ. ಜ್ಞಾನ, ಕೀರ್ತಿ, ಯಶಸ್ಸು ಎಲ್ಲವೂ ದೊರೆಯುವುದು.

**ಸುಕರ್ಮ :-** ತಂದೆ-ತಾಯಿಗಳನ್ನು ಸ್ನಾನಮಾಡಿಸುವಾಗ ಅವರ ಮೈಯ ನೀರು ಮಗನ ಮೈಗೆ ಬಿದ್ದರೆ ಎಲ್ಲ ತೀರ್ಥಗಳಲ್ಲಿ ಸ್ನಾನಮಾಡಿದ ಫಲವಿದೆ. ಅವರು ವ್ಯಾಧಿಯಿಂದ ಬಳಲುವಾಗ ಉಪಚರಿಸಿದರೆ ವಿಷ್ಣುಲೋಕ ಪ್ರಾಪ್ತಿ. ಆಗ ಅವರನ್ನು ದೂರವಿರಿಸಿದರೆ ನರಕ ಪ್ರಾಪ್ತಿ. ಅವರು ಕರೆದಾಗ ಬಳಿಗೆ ಹೋಗದಿದ್ದರೆ ಸಾವಿರ ಹಂದಿ, ನಾಯಿಗಳ ಜನ್ಮ ಬರುತ್ತದೆ. ಅವರನ್ನುಣಿಸದೆ ತಾನುಂಡರೆ ಮಲ-ಮೂತ್ರಗಳನ್ನುಣ್ಣುವ ಕ್ರಿಮಿಗಳ ಜನ್ಮ ಬರುತ್ತದೆ. ಅವರನ್ನು ತಿರಸ್ಕಾರದಿಂದ ಕಂಡರೆ ಕೃಷ್ಣಸರ್ಪವಾಗಿ ಹುಟ್ಟುತ್ತಾನೆ. ಕಟುನುಡಿಗಳಿಂದ ನಿಂದಿಸಿದರೆ ಮೊಸಳೆಯಾಗುತ್ತಾನೆ.

**ನಾಸ್ತಿ ಮಾತೃ ಸಮಂ ತೀರ್ಥಂ ಪುತ್ರಾಣಾಂ ಚ ಪಿತುಃ ಸಮಂ ।**
**ತಾರಣಾಯ ಹಿತಾಯೈವ ಇಹೈವ ಚಪಂಡಿತ್ರ ಚ ॥**

ಮಕ್ಕಳಿಗೆ ಇಹಪರಗಳೆರಡರಲ್ಲಿಯೂ ದುಃಖ ನಿವಾರಣೆಯಾಗಿ ಸುಖಪ್ರಾಪ್ತಿಯಾಗಬೇಕಾದರೆ ತಾಯಿ-ತಂದೆಗಳ ಸೇವೆಗೆ ಸಮನಾದ ಪವಿತ್ರ ಸಾಧನ ಇನ್ನೊಂದಿಲ್ಲ.

ಆದುದರಿಂದ ನಾನು ತಾಯಿ-ತಂದೆಗಳ್ನು ದೇವರಂತೆ ಪೂಜಿಸುತ್ತೇನೆ. ಅವರ ಅನುಗ್ರಹದಿಂದ ಒಳ್ಳೆಯ ಜ್ಞಾನ ಸಂಪಾದಿಸಿದ್ದೇನೆ. ಜಗತ್ತು ನನ್ನ ವಶವಾಗಿದೆ. ಪ್ರಾಚೀನ, ಅರ್ವಾಚೀನಗಳೆರಡನ್ನೂ ತಿಳಿದಿದ್ದೇನೆ.

**ವೇದೈರಪಿ ಚ ಕಿಂ ವಿಪ್ರ ಪಿತಾಯೇನ ನ ಪೂಜಿತಃ ।**
**ಮಾತಾ ನ ಪೂಜಿತಾ ಯೇನತಸ್ಯವೇದಾ ನಿರರ್ಥಕಾ ॥**

ತಂದೆಯನ್ನು ಸಂತೋಷಗೊಳಿಸಿ ಪುರುರಾಜ ಸುಖವನ್ನು ಪಡೆದ. ತುರು ಅವನ ಶಾಪದಿಂದ ದುರ್ಗತಿ ಪಡೆದ.

**ಪಿಪ್ಪಲ :-** ತಂದೆಯ ಅನುಗ್ರಹದಿಂದ ಪೂರು ಸುಖವನ್ನು ಪಡೆದುದು ಹೇಗೆ ? ಅವನ ಶಾಪದಿಂದ ತುರು ದುರ್ಗತಿ ಹೊಂದಿದುದು ಹೇಗೆ ?

**ಸುಕರ್ಮ :-** ಚಂದ್ರವಂಶದಲ್ಲಿ ನಹುಷನೆಂಬ ರಾಜ ನೂರು ಅಶ್ವಮೇಧಗಳನ್ನೂ ನೂರು ವಾಜಪೇಯಗಳನ್ನೂ ಮಾಡಿ ಅದರ ಪುಣ್ಯ ಪ್ರಭಾವದಿಂದ ಇಂದ್ರಪದವಿಯನ್ನು ಹೊಂದಿದ. ಅವನ ಮಗ ಯಯಾತಿಯೂ ಯಜ್ಞ, ದಾನಗಳನ್ನುಮಾಡುತ್ತ ಧರ್ಮದಿಂದ ರಾಜ್ಯಭಾರಮಾಡುತ್ತಿದ್ದ. ಎಂಬತ್ತು ಸಾವಿರ ವರ್ಷಗಳ ಕಾಲ ಸತ್ಯಧರ್ಮನಿಷ್ಠನಾಗಿ ಪ್ರಜಾಪಾಲನೆ ಮಾಡಿದ್ದುದರಿಂದ ಅವನ ಕೀರ್ತಿ ಮೂರು ಲೋಕಗಳಲ್ಲಿ ಹಬ್ಬಿತ್ತು. ಅವನ ಮಕ್ಕಳೂ ತುರು, ಪುರು, ಯದು, ಕುರು ಎಂಬ ನಾಲ್ವರು ಪರಾಕ್ರಮಿಗಳಾಗಿದ್ದು ತಂದೆಯನ್ನೇ ಹೋಲುತ್ತಿದ್ದರು.

ಒಂದು ದಿನ ನಾರದ ಮಹರ್ಷಿ ಇಂದ್ರನ ಆಸ್ಥಾನಕ್ಕೆ ಬಂದಾಗ ಆತ ಮುನಿಯನ್ನು ಮಧುಪರ್ಕ ಮುಂತಾದವುಗಳಿಂದ ಸತ್ಕರಿಸಿ ಪ್ರಶ್ನೆ ಕೇಳಿದ.

**ಇಂದ್ರ :-** ಮಹಾಮುನಿ, ಎಲ್ಲಿಂದ ಬಂದೆ ? ನಿನ್ನಾಗಮನಕ್ಕೆ ಕಾರಣವೇನು ? ನಿನ್ನ ಅಭೀಷ್ಟವೇನು ?

**ನಾರದ :-** ದೇವರಾಜ, ಭೂಲೋಕದಿಂದ ಬರುತ್ತಿದ್ದೇನೆ.

**ಇಂದ್ರ :-** ಭೂಲೋಕದಲ್ಲಿ ಸತ್ಯಧರ್ಮನಿರತನಾಗಿ, ದಾನಶೀಲನಾಗಿ ರಾಜ್ಯಭಾರ ಮಾಡುವವರು ಈಗ ಯಾರಿದ್ದಾರೆ ?

**ನಾರದ :-** ನಹುಷನ ಪುತ್ರ ಯಾಯತಿ ಇದ್ದಾನೆ. ಸತ್ಯ, ಪರಾಕ್ರಮಗಳಿಂದ ಲೋಕವನ್ನು ಪಾಲಿಸುತ್ತಿದ್ದಾನೆ. ಅವನು ಎಲ್ಲ ವಿಧದದಲ್ಲಿಯೂ ನಿನ್ನಂತೆ. ನೀನು ಸ್ವರ್ಗದಲ್ಲಿ ಅವನು ಮಾತ್ರ ಭೂಮಿಯಲ್ಲಿ. ಅವನ ತಂದೆ ಯಯಾತಿಯಂತೆ ನೂರು ಅಶ್ವಮೇಧ, ನೂರು ವಾಜಪೇಯಗಳನ್ನೂ ಮಾಡಿದ್ದಾನೆ. ಕೋಟಿಗಟ್ಟಲೆ ಗೋದಾನ ಮಾಡಿದ್ದಾನೆ. ಎಂಬತ್ತು ಸಾವಿರ ವರ್ಷಗಳ ಕಾಲ ಸತ್ಯದಿಂದ ರಾಜ್ಯಭಾರ ನಡೆಸಿದ್ದಾನೆ.

ಇದನ್ನು ಕೇಳಿ ಇಂದ್ರಭೀತನಾದ. 'ನೂರುಯಾಗಮಾಡಿ ನಹುಷ ನನ್ನ ಪದವಿಯನ್ನಪಹರಿಸಿದ. ಶಚಿಯ ಬುದ್ಧಿ ಪ್ರಭಾವದಿಂದ ಆತ ಪದಭ್ರಷ್ಟನಾದ. ಆ ತಂದೆಯ ಮಗ ಯಯಾತಿಯೂ ನನ್ನ ಪದವಿಯನ್ನಾಕ್ರಮಿಸಬಹುದು. ಅವನಿನ್ನೂ ಧರ್ಮಾಚರಣೆಮಾಡದಂತೆ ಏನಾದರೊಂದು ಉಪಾಯದಿಂದ ಅವನನಲ್ಲಿಗೆ ಕರೆತರುವೆನೆಂದುಕೊಂಡು ಯಯಾತಿಯ ಬಳಿಗೆ ಮಾತಲಿಯನ್ನು ಕಳಿಸಿಕೊಟ್ಟ. ಮಾತಲಿ ಯಯಾತಿಯಾಸ್ಥಾನಕ್ಕೆ ಬಂದು ಹೇಳಿದ.

**ಮಾತಲಿ :-** ರಾಜನ್, ದೇವೇಂದ್ರನ ಸಾರಥಿ ಮಾತಲಿ ನಾನು. ಅವನು ನನ್ನನ್ನು ಕಳಿಸಿದ್ದಾನೆ. 'ನೀನು ಕೂಡಲೆ ರಾಜ್ಯವನ್ನು ಮಕ್ಕಳಿಗೊಪ್ಪಿಸಿ ಅಂತ್ಯೇಷ್ಟಿಯನ್ನು ಪೂರೈಸಿ ಸ್ವರ್ಗಕ್ಕೆ ಬರಬೇಕು. ಇಲ ಪುರೂರವ, ವಿಪ್ರಚಿತ್ತಿ, ಶಿಬಿ, ಇಕ್ಷ್ವಾಕು, ಸಗರ, ನಹುಷ ಮುಂತಾದ ರಾಜರ ಜೊತೆಗೆ ಸ್ವರ್ಗಸುಖವನ್ನನುಭವಿಸಬೇಕು. ನೀನು ಧರ್ಮಾತ್ಮನಾಗಿರುವೆ' ಎಂದು ಹೇಳಿದ್ದಾನೆ.

**ಯಯಾತಿ :-** ಈ ಶರೀರವೆ ಪುಣ್ಯ-ಪಾಪಗಳಿಗೆ ಸಾಧನವಾಗಿರುವಾಗ ಅದನ್ನೇಕೆ ಬಿಟ್ಟು ಬರಬೇಕು ?

**ಮಾತಲಿ :-** ಈ ಶರೀರವನ್ನು ನೀನೆಲ್ಲಿ ಪಡೆದೆಯೋ ಅದನ್ನು ಅಲ್ಲಿಯೇ ಬಿಟ್ಟು ಬರಬೇಕು. ಎಲ್ಲರೂ ಹೀಗೆ ಶರೀರವನ್ನು ಬಿಟ್ಟೆ ಬೇರೆ ಲೋಕಕ್ಕೆ ತೆರಳುತ್ತಾರೆ.

**ಯಯಾತಿ :-** ಬೇರೆ ಲೋಕಕ್ಕೆ ಹೋಗುವಾಗ ಪುಣ್ಯ-ಪಾಪಗಳನ್ನು ಜೊತೆಗೆ ಒಯ್ಯಬೇಕು. ಅದಕ್ಕೆ ಸಾಧನವಾದ ಶರೀರವನ್ನು ಬಿಡಬೇಕು. ಇದು ಯಾವ ನ್ಯಾಯ ? ಈ ಶರೀರ ಆತ್ಮನಿಗೆ ಪ್ರೀತ್ಯಾಸ್ಪದವಾಗಿರುವಾಗ ಅದನ್ನು ಬಿಡುವುದೆಂತು ?

**ಮಾತಲಿ :-** ನೀನನ್ನುವುದು ನಿಜ. ಆದರೆ ಶರೀರವು ಮುಪ್ಪಿನಲ್ಲಿ ವ್ಯಾಧಿಯಿಂದ ಜರ್ಜರಿತವಾದಾಗ, ಶಿಥಿಲವಾದಾಗ ಆತ್ಮನೆ ಅದನ್ನು ಬಿಟ್ಟು ಹೋಗಬೇಕು. ಪಾಪ-ಪುಣ್ಯಗಳಿಗೆ ಮುದಿತನವಿಲ್ಲ.

**ಯಯಾತಿ :-** ಮುದಿತನ ಶರೀರದಲ್ಲಿ ಹೇಗುಂಟಾಗುತ್ತದೆ ? ಏಕೆ ಪೀಡಿಸುತ್ತದೆ ?

**ಮಾತಲಿ :-** ಪಂಚಭೂತಾತ್ಮಕವಾದ ಈ ಶರೀರವನ್ನು ಆತ್ಮನು ಬಿಟ್ಟು ಹೋದಾಗ ಅದನ್ನು ಸುಡುತ್ತಾರೆ. ಶರೀರದೊಂದಿಗೆ ಅದರಲ್ಲಿರುವ ರಸವೂ ಸುಟ್ಟು ಹೊಗೆಯಾಗುತ್ತದೆ. ಹೊಗೆ ಮೋಡವಾಗುತ್ತದೆ. ಮೋಡದಿಂದ ನೀರು ಭೂಮಿಗೆ ಬೀಳುತ್ತದೆ. ಭೂಮಿ ರಜಸ್ವಲೆಯಾದ ಹೆಣ್ಣಿನಂತಾಗುತ್ತದೆ. ಬಳಿಕ ಗಂಧ, ಗಂಧದಿಂದ ರಸ, ರಸದಿಂದ ಅನ್ನ, ಅನ್ನದಿಂದ ಶುಕ್ರ, ಶುಕ್ರದಿಂದ ಶರೀರ-ಈ ಕ್ರಮದಿಂದ ಶರೀರೋತ್ಪತ್ತಿಯಾಗುವುದು. ಆ ಶರೀರ ಪ್ರತಿದಿನ ಕಾಲಕಾಲಕ್ಕೆ ರಸವನ್ನು ಸೇವಿಸುತ್ತದೆ. ರಸದಿಂದ ಜಠರಾಗ್ನಿ ಪ್ರಜ್ವಲಿಸಿ ಆ ರಸವನ್ನೇ ನುಂಗುತ್ತದೆ. ಕಟ್ಟಿಗೆಯಲ್ಲಿರುವ ಉರಿ ಕಟ್ಟಿಗೆಯನ್ನೇ ಸುಡುವಂತೆ. ಹಸಿವಿನ ರೂಪದಲ್ಲಿರುವ ಈ ಅಗ್ನಿ ಪೌಷ್ಟಿಕವಾದ ಆಹಾರದ ರಸವನ್ನುಂಡು ದೇಹವನ್ನು ಆರೋಗ್ಯದಲ್ಲಿಡುತ್ತದೆ. ಸರಿಯಾದ ಆಹಾರ ಸಿಗದಿದ್ದರೆ ಆ ಅಗ್ನಿ, ರಕ್ತ, ವೀರ್ಯಗಳನ್ನು ಕಬಳಿಸುತ್ತದೆ. ಶರೀರ ಆಗ ಕ್ಷಯರೋಗಕ್ಕೆ ತುತ್ತಾಗುತ್ತದೆ. ಮಿತಿಮೀರಿ ರಸಸೇವನೆಮಾಡಿದರೆ ಆ ರಸದ ಪೀಡೆಯಿಂದ ಅಗ್ನಿಜ್ವರರೂಪದಿಂದ ಅಂಗಾಂಗಗಳ ಸಂಧಿಗಳಲ್ಲಿ ಕುಳಿತುಕೊಳ್ಳುವುದು. ಮಿತವಾಗಿ ರಸಸೇವನೆ ಮಾಡಿದರೆ ಬಲರೂಪವಾಗಿ ಪರಿಣಮಿಸುವುದು. ಬಲವು ಮರ್ಮಗಳನ್ನು ಪ್ರಚೋದಿಸಿದರೆ ಕಾಮಾಗ್ನಿ ಉಂಟಾಗುತ್ತದೆ. ಈ ಕಾಮಾಗ್ನಿ ಸಂಭೋಗದ ಮೂಲಕ ಬಲವನ್ನು ಕಬಳಿಸಿ ಬಲಹೀನತೆಯುಂಟುಮಾಡುತ್ತದೆ. ಆಗ ಅಗ್ನಿ, ರಕ್ತ, ಶುಕ್ರಧಾತುಗಳನ್ನು ನಾಶಪಡಿಸುತ್ತದೆ. ಪ್ರಚಂಡ ವಾತ ಪ್ರಕೋಪ ಉಂಟಾಗಿ ಶರೀರದ ವಿವರ್ಣತೆ ಬುದ್ಧಿ ವೈಕಲ್ಯಗಳಿಗೆ ಅವಕಾಶ ಸಿಗುತ್ತದೆ. ಇದು ಮುಪ್ಪು.

ಹಿಂದೆ ಭೋಗಿಸಿದ ವಿಷಯ ಪದಾರ್ಥವನ್ನು ನಿರಂತರ ಚಿಂತಿಸುತ್ತಾ ತೃಪ್ತಿಪಡೆಯದೆ ಇನ್ನೂ ಬಲಗುಂದುತ್ತಾನೆ, ವೃದ್ಧ. ಹೀಗೆ ಮುಪ್ಪಿನ ಬೆಂಕಿ ಶರೀರವನ್ನು ನಿಧಾನವಾಗಿ ಸುಟ್ಟು ನಾಶಪಡಿಸುತ್ತದೆ. ಎಲ್ಲ ಸ್ಥಾವರ, ಜಂಗಮಗಳಿಗೂ ಈ ಮುಪ್ಪಿನ ಪೀಡೆ ತಪ್ಪಿದ್ದಲ್ಲ.

**ಯಯಾತಿ :-** ಧರ್ಮಕ್ಕೆ ಆಲಂಬನವಾಗಿರುವ ಈ ದೇಹವನ್ನು ಬಿಟ್ಟು ಆತ್ಮನೊಬ್ಬನೇ ಸ್ವರ್ಗಕ್ಕೆ ಹೋಗುವುದು ನ್ಯಾಯವೆ ?

**ಮಾತಲಿ :-** ಶರೀರಕ್ಕೂ ಆತ್ಮನಿಗೂ ಪರಸ್ಪರ ವೈಲಕ್ಷಣ್ಯ ಬಹಳವಾಗಿರುವುದರಿಂದ ಸ್ವಾಭಾವಿಕ ಸಂಬಂಧ ಅವುಗಳಲ್ಲಿಲ್ಲ. ಶರೀರದಲ್ಲಿ ಪಾರ್ಥಿವಭಾಗವೇ ಅಧಿಕವಾಗಿರುವುದರಿಂದ ಅದಕ್ಕೂ ಪೃಥ್ವಿಗೂ ಹತ್ತಿರದ ನಂಟು. ಭೂಮಿಯ ಮೇಲೆ ನೀರು ನಿಂತರೆ ನೆಲ ಮಿದುವಾಗಿ ಕೊಳಚೆ ಉಂಟಾಗುತ್ತದೆ. ಇರುವೆ, ಕ್ರಿಮಿಗಳು, ಇಲಿ, ಹೆಗ್ಗಣಗಳು, ಹುತ್ತಗಳು, ಹಳ್ಳ, ತಿಟ್ಟುಗಳುಂಟಾಗುತ್ತವೆ. ಹಾಗೆ ಶರೀರದಲ್ಲಿಯೂ ರಸ ಅಧಿಕವಾದಾಗ ಗಂಡಮಾಲೆ, ಗುಳ್ಳೆ, ನಾನಾ ವಿಧದ ಚರ್ಮರೋಗಗಳುಂಟಾಗುತ್ತವೆ. ಹೀಗೆ ಭೂಮಿಯಂತಿರುವ ಶರೀರ ಸ್ವರ್ಗಕ್ಕೆ ಹೋಗುವುದಾದರೆ, ಭೂಮಿ ಸ್ವರ್ಗಕ್ಕೆ ಏಕೆ ಹೋಗಕೂಡದು ?

**ಯಯಾತಿ :-** ಪುಣ್ಯ ಮಾಡಿದರೂ ಈ ದೇಹ ಬಿದ್ದು ಹೋಗುತ್ತದೆ. ಪಾಪ ಮಾಡಿದರೂ ಬಿದ್ದು ಹೋಗುತ್ತದೆ. ಪುಣ್ಯದಲ್ಲೇನು ವಿಶೇಷವಿದೆ ? ಒಂದು ದೇಹ ಬಿದ್ದು ಹೋದ ಮೇಲೆ ಇನ್ನೊಂದು ಉತ್ಪತ್ತಿಯಾಗುವ ಕ್ರಮ ಹೇಗೆ ?

**ಮಾತಲಿ :-** ಪಾಪದಿಂದ ನರಕಕ್ಕೆ ಹೋಗುವವರಿಗೆ ಅವರ ಪಾಪದ ಪ್ರಭಾವದಿಂದ ಕ್ಷಣಮಾತ್ರದಲ್ಲಿ ಭೂತಗಳಿಂದ ದೇಹ ನಿರ್ಮಿತವಾಗುತ್ತದೆ. ಪುಣ್ಯಮಾಡಿ ಸ್ವರ್ಗಕ್ಕೆ ಹೋಗುವವರಿಗೆ ಕ್ಷಣಮಾತ್ರದಲ್ಲಿ ಭೂತಸಾರದಿಂದ ದಿವ್ಯ ದೇಹ ಸಿದ್ಧವಾಗುತ್ತದೆ. ಕರ್ಮಾನುಸಾರ ಭೂಮಿಯಲ್ಲಿ ಹುಟ್ಟುವವರ ಶರೀರವು ಮಾತ್ರ ನಾಲ್ಕು ವಿಧವಾಗಿ ಉತ್ಪತ್ತಿಯಾಗುವುದು. ತೃಣ, ಗುಲ್ಮ ಮುಂತಾದ ಸ್ಥಾವರ ಶರೀರವು ಉದ್ಭಿಜ್ಜವೆನಿಸುವುದು ಕ್ರಿಮಿ ಕೀಟ-ಪತಂಗ ಮುಂತಾದುವು ಸ್ವೇದಜವೆನಿಸುವುವು. ಪಕ್ಷಿಗಳು, ಹಾವುಗಳು, ಮೊಸಳೆಗಳು ಇವೆಲ್ಲ ಅಂಡಜಗಳು. ಮನುಷ್ಯರು, ಪ್ರಾಣಿಗಳು ಎಲ್ಲವೂ ಜರಾಯುಜಗಳು. ನೆಲ, ನೀರು, ಬಿಸಿಲು ಗಾಳಿಗಳಿಂದ ಹದವೆನಿಸಿದಾಗ ಬಿತ್ತಿದ ಭತ್ತದ ಬೀಜಗಳು ಮೊಳೆಯುವುವು. ಮೊಳೆತು ಗಿಡವಾಗಿ ತೆನೆ ಬಿಡುವುವು. ಹದಿನೇಳು ವಿಧದ ಉತ್ತಮ ಜಾತಿಯ ಭತ್ತಗಳಿವೆ. ಇವುಗಳಿಂದ ಅಕ್ಕಿ ತಯಾರಿಸಿ ಅನ್ನ ಮಾಡಬೇಕು. ಭಕ್ಷ್ಯ, ಭೋಜ್ಯ, ಪೇಯ, ಲೇಹ್ಯ, ಚೋಷ್ಯ, ಖಾದ್ಯವೆಂದು ಅನ್ನವು ಆರು ವಿಧ, ಅನ್ನವನ್ನು ಸೇವಿಸಿದಾಗ ವಾಯು ಅದನ್ನು ಜಠರದಲ್ಲಿ ವ್ಯವಸ್ಥಿತವಾಗಿಟ್ಟು ಪಾಕಕ್ಕೆ ಅಣಿಮಾಡುತ್ತದೆ. ಅಗ್ನಿಯ ಮೇಲೆ ಜಲ, ಅದರ ಮೇಲೆ ಅನ್ನವನ್ನಿಟ್ಟು ತಾನು ಕೆಳಗೆ ಅಗ್ನಿಯನ್ನು ಜ್ವಲಿಸುವಂತೆ ಮಾಡುತ್ತದೆ. ಆಗ ಅನ್ನ ಪಾಕಹೊಂದಿ ಕಿಟ್ಟ ಮತ್ತು ರಸವೆಂದು ಎರಡು ವಿಧವಾಗಿ ಬೇರ್ಪಡುತ್ತದೆ. ಹನ್ನೆರಡು ವಿಧದ ಮಲಗಳೆ ಕಿಟ್ಟ. ಅವು ಶರೀರದಿಂದ ಹೊರಗೆ ಹೋಗುತ್ತವೆ. ಕಿವಿ ಕಣ್ಣು ಮೂಗು ನಾಲಗೆ, ಹಲ್ಲು ತುಟಿ ಲಿಂಗ ಗುದ ರೋಮಕೂಪಗಳಿಂದ ಈ ಮಲಗಳು ವಿಸರ್ಜಿತವಾಗುತ್ತವೆ. ರಸವನ್ನು ವಾಯು ನಾಡಿಗಳಲ್ಲಿ ತುಂಬುತ್ತದೆ. ಅಲ್ಲಿ ತಿರುಗಿ ಮೈಯ ಕಾವಿನಿಂದ ಪಾಕವಾಗಬೇಕು. ಆಗ ರಸ ರಕ್ತ ಮಾಂಸ ಮೇದಸ್ ಅಸ್ಥಿ ಮಜ್ಜಾ ಶುಕ್ರ ಈ ಕ್ರಮದಿಂದ ಶುಕ್ರ ಸಿದ್ಧವಾಗುತ್ತದೆ. ಈ ಶುಕ್ರವು ಸ್ತ್ರೀ ಶೋಣಿತದಿಂದ ಬೆರೆತಾಗ ಜೀವನೂ ಕರ್ಮಾನುಸಾರ ಅಲ್ಲಿಗೆ ಬಂದು ಸೇರುವನು. ಅಲ್ಲಿ ಕಲಲ ಬುದ್ಬುದ ಮಾಂಸ ರೂಪವನ್ನು ಕ್ರಮವಾಗಿ ಹೊಂದಿ ಎಂಟು ತಿಂಗಳಲ್ಲಿ ಎಲ್ಲ ಅವಯವಗಳೂ ಸ್ಪಷ್ಟವಾಗಿ ಕಾಣುವುವು. ಆಗ ಜೀವನಿಗೆ ಪೂರ್ವಜನ್ಮದ ಸ್ಮರಣೆ ಉಂಟಾಗುತ್ತದೆ ಅವನು ಹೀಗೆ ಚಿಂತಿಸುತ್ತಾನೆ.

'ನಾನಾ ಯೋನಿಗಳಲ್ಲಿ ಅನೇಕ ಬಾರಿ ಹುಟ್ಟಿ ಸತ್ತು ಈಗ ತಿರುಗಿ ಹುಟ್ಟುತ್ತಿದ್ದೇನೆ. ಇನ್ನು ಮುಂದೆ ಸತ್ಕರ್ಮವನ್ನೇ ಮಾಡಿ ಒಳ್ಳೆಯ ಜ್ಞಾನಸಂಪಾದಿಸಿ ಈ ಸಂಸಾರದಿಂದಲೇ ಬಿಡುಗಡೆ ಹೊಂದುವೆ. ಜೀವನಿಗೆ ಆಗ ಜರಾಯುವಿನೊಳಗಡೆ ಪರ್ವತದ ಗುಹೆಯಲ್ಲಿ ಬಂಧಿಸಿದಂತೆ ಅನುಭವವಾಗುತ್ತದೆ. ಗರ್ಭೋದಕದಲ್ಲಿರುವುದರಿಂದ ಅವನಿಗೆ ಸಾಗರಜಲದಲ್ಲಿ ಬಿದ್ದಂತೆ ಅನುಭವವಾಗುತ್ತದೆ. ಜಠರಾಗ್ನಿಯ ಬೇಗೆಯಿಂದ ಪಾತ್ರೆಯೊಳಗೆ ಬೇಯುತ್ತಿರುವಂತಾಗುತ್ತದೆ. ಕೆಂಪಗೆ ಕಾದ ಸೂಜಿಗಳಿಂದ ನಿರಂತರ ಚುಚ್ಚುತ್ತಿದ್ದರೆ ಆಗುವ ವೇದನೆಗಿಂತ ಎಂಟು ಪಾಲು ಅಧಿಕ ಈ ಗರ್ಭವಾಸ ದುಃಖ. ಗರ್ಭವಾಸಕ್ಕೆ ಸಮನಾದ ದುಃಖ ಲೋಕದಲ್ಲಿ ಬೇರೆ ಇಲ್ಲ. ಅದಕ್ಕಿಂತ ಕೋಟಿಪಾಲು ಹೆಚ್ಚಿನ ದುಃಖ ಪ್ರಸವಕಾಲದಲ್ಲಿ. ಆಗ ಮೂರ್ಛೆ ಬಂದಿರುತ್ತದೆ. ಯಂತ್ರವು ಕಬ್ಬನ್ನು ಹಿಂಡುವಂತೆ ಪ್ರಸವವಾಯು ಶಿಶುವಿನ ಶರೀರವನ್ನು ಚೆನ್ನಾಗಿ ಹಿಂಡಿ ನೆಲದ ಮೇಲೊಗೆಯುತ್ತದೆ. ಇಷ್ಟು ದುಃಖದಿಂದ ಜೀವನು ಹೊಂದುವ ಶರೀರ ರಕ್ತ ಮಾಂಸ ಮಲ ಮೂತ್ರ ಕೂದಲು ಉಗುರುಗಳಿಂದಲೂ ನಾನಾ ವಿಧದ ವ್ಯಾಧಿಗಳಿಂದ ಕೂಡಿ ಅಪವಿತ್ರ, ದುಃಖಮಯವಾಗಿರುತ್ತದೆ. ಹೊರಗೆ ಎಷ್ಟು ಪ್ರಯತ್ನದಿಂದ ತೊಳೆದರೂ ಒಳಗೆ ಅಪವಿತ್ರವೆ ಆಗಿದೆ ಈ ಶರೀರ. ಪವಿತ್ರವಾದ ಪಂಚಗವ್ಯ ಹವಿಸ್ಸುಗಳನ್ನುಂಡರೂ ಕ್ಷಣಮಾತ್ರದಲ್ಲಿ ಒಳಗೆ ಅದು ಅಪವಿತ್ರವಾಗುವುದು. ರುಚಿಕರವಾದ ಸುವಾಸನೆ ಉಳ್ಳ ಭಕ್ಷ್ಯಭೋಜ್ಯಗಳು ಶರೀರದೊಳಗೆ ಹೋದಾಗ ಕೆಟ್ಟುಹೋಗಿ ದುರ್ವಾಸನೆ ಪಡೆಯುವುವು. ಇಂಥ ಶರೀರವನ್ನು ಹೇಗೆ ಶೋಧಿಸಲಾದೀತು ? ಇದ್ದಿಲನ್ನು ಎಷ್ಟು ತೊಳೆದರೂ ಬಿಳಿ ಅದೀತೆ ? ಇದು ಎಲ್ಲರಿಗೂ ತಿಳಿದ ವಿಷಯವೆ ಆಗಿದ್ದರೂ ವೈರಾಗ್ಯ ಮೂಡುತ್ತಿಲ್ಲ. ತಿರುಗಿ ದೇಹವನ್ನು ಸ್ವಚ್ಛಮಾಡುವ ಪ್ರಯತ್ನ ಕೈಗೊಳ್ಳುತ್ತೇವೆ.

**ಕಾಯೋಯ ಮಗ್ರ್ಯಧೂಪಾದ್ಯೈರ್ಯತ್ನೇನಾಪಿ ಸುಸಂಸ್ಕೃತ :**
**ನ ಜಹಾತಿ ಸ್ವಭಾವಂ ಹಿ ಶ್ವಪುಚ್ಛಮಿವ ನಾಮಿತಂ ॥**

ಉತ್ತಮವಾದ ಧೂಪ ಮುಂತಾದ ಸಾಧನಗಳಿಂದ ಪ್ರಯತ್ನಪಟ್ಟು ದೇಹವನ್ನು ನಿರ್ಮಲಗೊಳಿಸದರೂ ಅದು ಡೊಂಕಾದ ನಾಯಿಯ ಬಾಲದಂತೆ ಸ್ವಭಾವವನ್ನು ಬಿಡಲಾರದು.

ಹೀಗೆ ತನ್ನ ದೇಹ ಸ್ವಭಾವತಃ ಅಪವಿತ್ರವೆಂದು ತಿಳಿದೂ ವೈರಾಗ್ಯ ಹೊಂದದವನಿಗೆ ಇನ್ನು ಹೇಗೆ ವೈರಾಗ್ಯವನ್ನುಪದೇಶಿಸಲು ಸಾಧ್ಯ ? ಆದುದರಿಂದ ಭಾವಶುದ್ಧಿಯೊಂದೆ ನಿಜವಾದ ಶುದ್ಧಿ, ದೇಹಶುದ್ಧಿ ಎಂಬುದು ಎಂದೂ ಇಲ್ಲ.

**ಗಂಗಾ ತೋಯೇನ ಸರ್ವೇಣ ಮೃದ್ಭಾರೈರ್ಗಾತ್ರ ಲೇಪನೈಃ ।**
**ಮರ್ತ್ಯೋರ್ದುರ್ಗಂಧ ದೇ-ಹೋಸೋ ಭಾವದುಷ್ಟೋನ ಶುಧ್ಯತಿ ॥**

ಗಂಗೆಯ ಎಲ್ಲ ನೀರನ್ನು ಸುರಿದರೂ ಎಲ್ಲ ಮಣ್ಣು ಲೇಪಿಸಿಕೊಂಡು ತೊಳೆದರೂ ದುರ್ವಾಸನೆ ನೀಗಿಕೊಳ್ಳದ ಶರೀರ ಮಾನವನದು. ಆದ್ದರಿಂದ ಮನಸ್ಸಿನ ಭಾವನೆ ಕೆಟ್ಟದಾದರೆ ಅವನು ಶುದ್ಧನೆನಿಸಲಾರ.

**ಚಿತ್ತಂ ಶೋಧಯ ಯತ್ನೇನ ಕಿಮನ್ಯೈರ್ಬಾಹ್ಯ ಶೋಧನೈಃ ॥**
**ಜ್ಞಾನಾಮಲಾಂಭಸಾ ಪುಂಸಃ ಸದ್ವೈರಾಗ್ಯಮೃದಾ ಪುನಃ ।**

**ಅವಿದ್ಯಾರಾಗ ವಿಣ್ಮೂತ್ರ ಲೇಪೋನಶ್ಯೇತೆ ವಿಶೋಧನೈಃ ॥**

ಮನಸ್ಸನ್ನು ಪ್ರಯತ್ನದಿಂದ ತೊಳೆದುಕೊಳ್ಳು. ಬಾಹ್ಯಶರೀರವನ್ನು ತೊಳೆದರೇನು ಫಲ ? ಜ್ಞಾನವೆಂಬ ನೀರು ಮತ್ತು ವೈರಾಗ್ಯವೆಂಬ ಮಣ್ಣು ಇವುಗಳಿಂದ ಅವಿದ್ಯೆ ಎಂಬ ಮಲ ಮತ್ತು ರಾಗವೆಂಬ ಮೂತ್ರಗಳ ಲೇಪವನ್ನು ತೊಳೆದುಕೊಳ್ಳಬಹುದು.

ಜೀವನಿಗೆ ಗರ್ಭವಾಸದ ಕಾಲದಲ್ಲಿದ್ದ ಜ್ಞಾನ ವೈರಾಗ್ಯವೆಲ್ಲವೂ ಅವನ ಅವಿದ್ಯೆ ಕಾಮ ಕರ್ಮಗಳ ಪ್ರಭಾವದಿಂದ ಹುಟ್ಟುವ ಕ್ಷಣದಲ್ಲಿಯೆ ನಾಶವಾಗುವುವು. ಆಗ ಯೋನಿ ಯಂತ್ರದಲ್ಲಿ ಹಿಂಡಿದಂತಾಗಿ ಮೂರ್ಛೆ ಬಂದಿರುವುದು. ಹೊರಗಿನ ಗಾಳಿ ಮೈಗೆ ತಗುಲಿದೊಡನೆ ಜ್ವರ ಉಂಟಾಗುವುದು. ಅದರಿಂದ ಮೋಹ ಕವಿದು ಪೂರ್ವಜನ್ಮದ ಸ್ಮರಣೆ ಮರೆಯಾಗುವುದು. ಅವಿದ್ಯೆಯ ಪ್ರಭಾವದಿಂದ ತಿರುಗಿ ರಾಗದ್ವೇಷಗಳಿಗೊಳಗಾಗಿ ಅಕಾರ್ಯದಲ್ಲಿ ತೊಡಗುವನು. ಬಾಲ್ಯದಲ್ಲಿ ಈ ಜೀವನಿಗೆ ಇಂದ್ರಿಯಗಳ ಪೂರ್ಣ ಬೆಳವಣಿಗೆ ಆಗದಿರುವುದರಿಂದ ದುಃಖ ಬಹಳ. ಯೌವನದಲ್ಲಿ ಇಂದ್ರಿಯಗಳು ಪೂರ್ಣ ಬೆಳೆದಿರುತ್ತವೆ. ಆದರೇನು ? ರಾಗ-ದ್ವೇಷಗಳಿಗೊಳಗಾಗಿ ಅಯೋಗ್ಯ ವಿಷಯಗಳಲ್ಲಿ ಇಂದ್ರಿಯಗಳನ್ನು ಹರಿಸಿ ನಾನಾ ರೋಗಗಳಿಗೆ ತುತ್ತಾಗುವನು.

**ರಾತ್ರೌನ ಕುರುತೇ ನಿದ್ರಾಂ ಕಾಮಾಗ್ನಿ ಪರಿಖೇದಿತಃ ।**
**ದಿವಾ ವಾಪಿ ಕುತಃ ಸೌಖ್ಯಂ ಅರ್ಥೋಪಾರ್ಜನ ಚಿಂತಯಾ ॥**

ರಾತ್ರಿಯಲ್ಲಿ ಕಾಮಾಗ್ನಿ ಪೀಡಿಸುವುದರಿಂದ ನಿದ್ದೆ ಇಲ್ಲ, ಹಗಲು ಧನಾರ್ಜನೆಯ ಚಿಂತೆಯಿಂದ ಸೌಖ್ಯವಿಲ್ಲ.

**ಕೃಮಿಭಿಃ ಪೀಡ್ಯಮಾನಸ್ಯ ಕುಷ್ಠಿನಃ ಪಾಮರಸ್ಯ ಚ ।**
**ಕಂಡೂಯ ನಾಭಿತಾಪೇನ ಯತ್ ಸುಖಂ ಸ್ತ್ರೀಷು ತದ್ವಿದುಃ ॥**

ಕುಷ್ಠ ಮತ್ತು ಇತರ ಚರ್ಮರೋಗದಿಂದ ಬಳಲುವವನು ಕೆರೆದು ಉರಿಯನ್ನುಂಟು ಮಾಡಿಕೊಳ್ಳುವುದರಿಂದ ಯಾವ ಸುಖವೋ ಅದುವೆ ಸ್ತ್ರೀ ಸಂಗದಿಂದ ದೊರೆಯುವುದು.

ಮುಪ್ಪಿನಲ್ಲಿ ಶರೀರ ದುರ್ಬಲವಾದಾಗ ಇತರರು ಮಾಡುವ ಅಪಮಾನ, ತಿರಸ್ಕಾರಗಳನ್ನು ನುಂಗಿಕೊಂಡಿರಬೇಕಾದ ಅವಸ್ಥೆ ಬರುತ್ತದೆ. ಯಾವ ಪುರುಷಾರ್ಥವನ್ನೂ ಅವನು ಸಾಧಿಸಿಕೊಳ್ಳಲಾರ.

**ಏಕೋತ್ತರಂ ಮೃತ್ಯುಶತಂ ಅಸ್ಮಿನ್ ದೇಹೇ ಪ್ರತಿಷ್ಠಿತಂ ।**
**ತತ್ರೈಕಃ ಕಾಲ ಸಂಯುಕ್ತಃ ಶೇಷಾಸ್ತ್ವಾಗಂತವಃ ಸ್ಮೃತಾಃ ॥**

ಒಂದು ನೂರು ಒಂದು ವಿಧದಲ್ಲಿ ಮರಣ ಈ ಶರೀರದಲ್ಲಿ ಒದಗಬಹುದು. ಅವುಗಳಲ್ಲಿ ಆಯುಸ್ಸು ತೀರಿದಾಗ ಒದಗುವ ಮರಣ ಒಂದು ವಿಧ. ಉಳಿದುವೆಲ್ಲ ಆಕಸ್ಮಿಕ ಮರಣಗಳು.

ಮರಣ ಸಂಕಟಕ್ಕೆ ಸಮನಾದ ದುಃಖ ಇನ್ನೊಂದಿಲ್ಲ.

**ಮಂಡೂಕ ಇವ ಸರ್ಪೇಣ ಗ್ರಸ್ಯತೇ ಮೃತ್ಯುನಾ ಜಗತ್**

ಹಾವು ಕಪ್ಪೆಯನ್ನು ನುಂಗುವಂತೆ ಮೃತ್ಯು ಎಲ್ಲರನ್ನೂ ಕಬಳಿಸುವುದು.

ಮರಣಕಾಲದಲ್ಲಿ ಅಪ್ಪ, ಅಮ್ಮ, ಪ್ರಿಯ ಎಂದು ಮುಂತಾಗಿ ಕೂಗಿಕೊಳ್ಳುತ್ತ ಬಿಸಿಯಾದ ನಿಟ್ಟುಸಿರಿಡುತ್ತ ಬಾಯಾರಿ ಹಾಸಿಗೆಯಲ್ಲಿ ಹೊರಳುತ್ತಾನೆ. ಆಗಾಗ ಮೂರ್ಛೆ ಹೊಂದುತ್ತಾನೆ. ಕೈಕಾಲುಗಳನ್ನು ಕೊಡವುತ್ತಾನೆ. ಹಾಸಿಗೆಯಿಂದ ನೆಲಕ್ಕೆ, ನೆಲದಿಂದ ಹಾಸಿಗೆಗೆ ಹೋಗಬಯಸುತ್ತಾನೆ. ವಿವಶನಾಗಿ ಲಜ್ಜೆ ತೊರೆದು ಮಲಮೂತ್ರ ವಿಸರ್ಜಿಸುತ್ತ ಗಂಟಲೊಣಗಿ ನೀರು ಬೇಡುತ್ತಾನೆ. ನನ್ನ ಅನಂತರ ಈ ಸಂಪತ್ತೆಲ್ಲ ಯಾರಿಗೆಂದು ಚಿಂತಿಸುತ್ತಾನೆ. ಅಷ್ಟರಲ್ಲಿ ಯಮದೂತರು ಬಂದು ಪಾಶವನ್ನು ಬಿಗಿದು ಎಳೆದೊಯ್ಯುತ್ತಾರೆ. ಗಂಟಲಲ್ಲಿ ಘುರುಘುರು ಎನ್ನುತ್ತ ಆತ ಮರಣ ಹೊಂದುತ್ತಾನೆ.

**ಮರಣಾತ್ ಪ್ರಾರ್ಥನಾ ದುಃಖಮಧಿಕಂ ಹಿ ವಿವೇಕಿನಾಂ ।**
**ಕ್ಷಣಿಕಂ ಮರಣೇ ದುಃಖಂ ಅನಂತಂ ಪ್ರಾರ್ಥನಾ ಕೃತಂ ॥**

ಮರಣದ ದುಃಖಕ್ಕಿಂತ ಲೋಭದ ದುಃಖ ಅಧಿಕವೆಂದು ವಿವೇಕಿಗಳು ತಿಳಿಯುತ್ತಾರೆ. ಮರಣದ ದುಃಖ ಕ್ಷಣಿಕ. ಲೋಭದಿಂದ, ದುಃಖ ಸದಾ ಇರುತ್ತದೆ. ಅದಕ್ಕೆ ಕೊನೆಯಿಲ್ಲ.

ವಾಮನಾವತಾರದಲ್ಲಿ ಆ ಜಗತ್ಪತಿಯೂ ಬೇಡುತ್ತ ಸಣ್ಣವನಾದ. ಆಸೆಯಿಂದ ಎಷ್ಟು ದೊಡ್ಡವನೂ ಸಣ್ಣವನಾಗುತ್ತಾನೆ.

**ಅರ್ಥನ್ಯೋಪಾರ್ಜನೇ ದುಃಖಂ ದುಃಖವರ್ಜಿತ ರಕ್ಷಣೇ ।**
**ನಾಶೇ ದುಖಂ ವ್ಯಯೇ ದುಃಖಂ ಅರ್ಥಸ್ಸೈವ ಕುತಃ ಸುಖಂ ॥**

ಹಣವನ್ನು ಗಳಿಸುವಾಗಲೂ ದುಃಖ, ಗಳಿಸಿದ ಮೇಲೂ, ರಕ್ಷಿಸುವಾಗಲೂ, ದುಃಖ, ಅದು ನಾಶವಾದಾಗ ದುಃಖ, ವ್ಯಯ ಹೊಂದಿದಾಗಲೂ ದುಃಖ, ಆದರಿಂದ ಸುಖ ಯಾವಾಗ?

ಕಳ್ಳರು, ಬೆಂಕಿ, ನೀರು, ಬಂಧುಗಳು, ರಾಜರು ಇವರ ಭಯದಿಂದ ನಿತ್ಯ ದುಃಖ. ಹಣಉಳ್ಳವನಿಗೆ ಮರಣಭಯದಂತಿರುತ್ತದೆ ಈ ಭಯ. ಒಂದು ಮಾಂಸದ ತುಂಡಿಗೆ ನೀರಿನಲ್ಲಿ ಮೀನುಗಳು, ನೆಲದಲ್ಲಿ ಮೃಗಜಂತುಗಳು, ಆಗಸದಲ್ಲಿ ಹಕ್ಕಿಗಳು ಓಡಿಬರುವಂತೆ ಧನಿಕನೆಲ್ಲಿದ್ದರೂ ಎಲ್ಲರೂ ಆಸೆಯಿಂದ ಬರುತ್ತಾರೆ.

ರಾಜ್ಯ ಲಾಭದಿಂದಲೂ ಸುಖವಿಲ್ಲ. ರಾಜನಾದವನು ಪರಾಕ್ರಮದಿಂದ ಎಲ್ಲರನ್ನೂ ತುಳಿದೇ ಸುಖಪಡುತ್ತಾನೆ. ಕಾಡಿಗೆ ಹೋಗಿ ಯಾವ ರಾಜನೂ ಪ್ರಸಿದ್ಧನಾದುದಿಲ್ಲ. ಆದರಿಂದ ಶತ್ರುರಾಜರ ಭಯ ಎಂದೂ ತಪ್ಪುವುದಿಲ್ಲ. ಒಂದು ವಸ್ತುವಿಗಾಗಿ ನಾಯಿಗಳು ಪರಸ್ಪರ ಕಚ್ಚಾಡುವಂತೆ ರಾಜ್ಯಕ್ಕಾಗಿ ಎಲ್ಲ ರಾಜರೂ ಹೋರಾಡುತ್ತಾರೆ. ಕಾರ್ತವೀರ್ಯನ ಸಾವಿರ ತೋಳುಗಳನ್ನು ಪರಶುರಾಮ ಕಡಿದ. ಪರಶುರಾಮನ ತೇಜಸ್ಸನ್ನು ದಾಶರಥಿ ರಾಮ ಕಳೆದ. ಬಲರಾಮನ ಕೀರ್ತಿಯನ್ನು ಜರಾಸಂಧ ಕೆಡಿಸಿದ. ಜರಾಸಂಧನ ಯಶಸ್ಸನ್ನು ಭೀಮ ನಾಶಪಡಿಸಿದ. ಭೀಮನ ಶಕ್ತಿಯನ್ನು ಹನುಮಂತ ಸುಳ್ಳಾಗಿಸಿದ. ಹನುಮಂತನನ್ನು ಹೊಡೆದು ಸೂರ್ಯ ನೆಲಕ್ಕೆಸೆದ. ಸೂರ್ಯಪುತ್ರ ಕರ್ಣನನ್ನು ಅರ್ಜುನ ಕೊಂದ. ಅರ್ಜುನನು ಗೋವಳರಿಗೆ ಸೋತ.

ಸೂರ್ಯನನ್ನು ಮೋಡ ಕವಿಯುತ್ತದೆ. ಮೋಡವನ್ನು ಗಾಳಿ ಓಡಿಸುತ್ತದೆ. ಗಾಳಿಯ ವೇಗವನ್ನು ಪರ್ವತ ತಿರಸ್ಕರಿಸುತ್ತದೆ. ಪರ್ವತನ್ನು ಬೆಂಕಿ ಸುಡುತ್ತದೆ. ಬೆಂಕಿಯನ್ನು ನೀರು ಆರಿಸುತ್ತದೆ. ನೀರನ್ನು ಸೂರ್ಯ ಬತ್ತಿಸುತ್ತಾನೆ.

**ಏವಂ ನೈವಾಸ್ತಿ ಸಂಸಾರೇಯಚ್ಚ ಸರ್ವೋತ್ತಮಂ ಬಲಂ**
**ವಿಹಾಯೈಕಂ ಜಗನ್ನಾಥಂ ಪರಮಾತ್ಮಾನವವ್ಯಯಂ**

ಪ್ರಪಂಚದಲ್ಲಿ ಎಲ್ಲಕ್ಕಿಂತ ಹೆಚ್ಚಿನ ಬಲವೆಂಬುದು ಅವ್ಯಯನಾದ, ಪರಮಾತ್ಮನಾದ ಜಗನ್ನಾಥನನ್ನು ಬಿಟ್ಟರೆ ಎಲ್ಲೂ ಇಲ್ಲ.

ಬ್ರಹ್ಮನ ಪ್ರತಿದಿನದಲ್ಲಿಯೂ ಜಗತ್ತು ಲಯ ಹೊಂದುತ್ತದೆ. ಎರಡು ಪರಾರ್ಧಗಳೂ ಕಳೆದುವೆಂದರೆ ಆ ಬ್ರಹ್ಮನೂ ಎಲ್ಲ ದೇವತೆಗಳೂ ಜಗನ್ನಾಥನಿಂದ ಲಯಹೊಂದುತ್ತಾರೆ.

ಶರೀರದ ಬಲದಂತೆ ಪಾಂಡಿತ್ಯವೂ ಒಬ್ಬನ ಸೊತ್ತಲ್ಲ.

**ನಹ್ಯಸ್ತಿ ಸರ್ವವಿತ್ ಕಶ್ಚಿತ್ ನವಾ ಮೂರ್ಖೋಽಪಿ ಸರ್ವತಃ ।**
**ಯಾವದ್‌ಯಸ್ತುವಿಜಾನಾತಿ ತಾವತ್ ತತ್ರ ಸ ಪಂಡಿತಃ ॥**

ಎಲ್ಲ ತಿಳಿದವನು ಯಾರೂ ಇಲ್ಲ. ಏನೂ ತಿಳಿಯದವ ಇಲ್ಲವೇ ಇಲ್ಲ. ಯಾರು ಎಷ್ಟು ತಿಳಿದಿದ್ದಾನೊ ಅವನು ಅಷ್ಟು ವಿಷಯದಲ್ಲಿ ಪಂಡಿತ. ಹೀಗೆ ಧನ, ಸಂಪತ್ತು, ರಾಜ್ಯ, ವಿದ್ಯಾ, ವೈಭವಗಳಲ್ಲಿ ಗರ್ವಪಡಬಾರದು. ಅತಿ ಆಸೆಯನ್ನು ಬಿಡಬೇಕು.

**ಏವಂ ವಸ್ತ್ರಯುಗ್ಮಂ ರಾಜನ್ ಪ್ರಸ್ಥಮಾತ್ರಂ ತಂ ಭೋಜನಂ**
**ಯಾನಂ ಶಯ್ಯಾಸನಂ ಚೈವ ಶೇಷಂ ದುಃಖಾಯ ಕೇವಲಂ**

ಉಡಲು ಎರಡು ಬಟ್ಟೆ, ಉಣಲು ಒಂದು ಪ್ರಸ್ಥ ಅನ್ನ, ಪ್ರಯಾಣಕ್ಕೆ ಒಂದು ಬಂಡಿ, ಮಲಗಲು ಒಂದು ಹಾಸಿಗೆ, ಕೂಡಲು ಒಂದು ಆಸನ ಇದಕ್ಕಿಂತ ಹೆಚ್ಚಿನ ಎಲ್ಲ ವಸ್ತುಗಳೂ ಕೇವಲ ದುಃಖಕ್ಕೆ ಕಾರಣ.

ಬೆಳಿಗ್ಗೆ ಹಾಸಿಗೆ ಬಿಟ್ಟೇಳಲು ಸುಪ್ರಭಾತದ ವಾದ್ಯಘೋಷ ಕೇವಲ ಅಭಿಮಾನ ಮಾತ್ರ, ನನ್ನ ಮನೆಯಲ್ಲಿ ವಾದ್ಯಘೋಷವಿದೆ ಎಂದು ಆಭರಣಗಳನ್ನು ತೊಡುವುದೆಂದರೆ ಅದು ಕೇವಲ ಭಾರ. ಗೀತನೃತ್ಯಗಳು ಉನ್ಮತ್ತರ ಚೇಷ್ಟೆಗಳೆಂದು ತಿಳಿಯಬೇಕು.

ಸ್ವರ್ಗ ಸುಖವೂ ನಶ್ವರ. ಪುಣ್ಯ ತೀರಿದಾಗ ಅಲ್ಲಿಂದ ಕೆಳಗೆ ಈ ಕರ್ಮ ಭೂಮಿಗೆ ಬೀಳಲೇಬೇಕು. ಸ್ವರ್ಗದಲ್ಲಿ ಪುಣ್ಯಮಾಡಲು ಅವಕಾಶವಿಲ್ಲ. ಈ ಚಿಂತೆಯಿಂದ ಸ್ವರ್ಗದಲ್ಲಿದ್ದರೂ ದುಃಖ ತಪ್ಪಿದ್ದಲ್ಲ. ಒಬ್ಬರಿಗಿಂತ ಇನ್ನೊಬ್ಬರು ಹೆಚ್ಚು ವೈಭವದಿಂದಿರುವುದನ್ನು ಕಂಡು ಈ ಸ್ವರ್ಗವಾಸಿಗಳು ಮತ್ಸರಿಸದೆ ಬಿಡರು.

ಲೋಕದಲ್ಲಿ ಸುಖಕ್ಕಾಗಿ ನಾವು ಪಡುವ ಪ್ರಯತ್ನ ಭ್ರಾಂತಿ ಮೂಲಕವಾದುದು.

**ಸ್ಕಂಧಾತ್ ಸ್ಕಂಧೇನಯನ್ ಭಾರಂ ವಿಶ್ರಾಮಂ ಮನ್ಯತೇ ಯಥಾ**
**ತದ್ವತ್ ಸರ್ವಮಿದಂ ಲೋಕೇ ದುಃಖಂ ದುಃಖೇನ ಶಾಮ್ಯತಿ**

ಹೆಗಲಿನಿಂದ ಹೆಗಲಿಗೆ ಹೊರೆಯನ್ನು ಸ್ಥಳಾಂತರಿಸಿ ಸುಖವಾಯಿತೆಂದು ತಿಳಿವಂತೆ ಲೋಕದಲ್ಲಿ ಎಲ್ಲ ದುಃಖವೂ ದುಃಖದಿಂದಲೆ ಶಾಂತವಾಗುತ್ತದೆ.

ನಿಜವಾದ ಸುಖ, ದೇವತೆಗಳಿಗೂ ಇಲ್ಲ. ಯಜ್ಞನ ಶಿರಚ್ಛೇದವಾದಾಗ ಅಶ್ವಿನಿ ದೇವತೆಗಳು ಆ ತಲೆಯನ್ನು ಜೋಡಿಸಿದರು. ಆದರೂ ತಲೆನೋವು ಇನ್ನೂ ಶಾಂತವಾಗಿಲ್ಲ.

ಸೂರ್ಯನಿಗೆ ಕುಷ್ಠ, ಚಂದ್ರನಿಗೆ ಕ್ಷಯ, ಪೂಷನ ಹಲ್ಲುದುರಿತು. ಇಂದ್ರನ ಭುಜ ಸ್ತಂಭಿತವಾಯಿತು. ದಕ್ಷನಿಗೆ ಜ್ವರ ಬಾಧೆ, ಪ್ರತಿ ಕಲ್ಪದಲ್ಲಿಯೂ ದೇವತೆಗಳಿಗೆ ಪ್ರಳಯ.

ಎಲ್ಲವೂ ದುಃಖಮಯವೆಂದು ತಿಳಿದು ವೈರಾಗ್ಯ ತಳೆದರೆ ವಿವೇಕ ಉಂಟಾಗುವುದು. ಅದರಿಂದ ಮುಕ್ತಿ ಪರಮಸುಖ.

**ಯಯಾತಿ :-** ಮಾತಲಿ, ನನ್ನ ಭಾಗ್ಯದಿಂದ ನಿನ್ನ ದರ್ಶನ ಲಭಿಸಿತು. ಈಗ ಮಾನವರು ಮಾಡುವ ಪಾಪಾಚರಣೆ ಮತ್ತು ಅದರ ಪರಿಣಾಮಗಳನ್ನು ಹೇಳು.

**ಮಾತಲಿ :-** ವೇದಗಳನ್ನೂ ಬ್ರಾಹ್ಮಣರ ಆಚಾರವನ್ನೂ ನಿಂದಿಸುವುದು, ಸಜ್ಜನರಿಗೆ ಹಿಂಸೆ ಕೊಡುವುದು, ಕುಲಾಚಾರವನ್ನು ಬಿಟ್ಟು ಅನ್ಯ ಧರ್ಮಾಚರಣೆ ಮಾಡುವುದು, ತಾಯಿತಂದೆಯರ, ಗುರುಹಿರಿಯರ ನಿಂದೆ, ಶ್ರಾದ್ಧಕಾಲದಲ್ಲಿ ಅಳಿಯ, ಮಗಳ ಮಗ, ಸೋದರಿ, ಆಕೆಯ ಮಗ ಇವರು ಐದು ಕ್ರೋಶದೊಳಗೆ ಇದ್ದರೂ ಅವರನ್ನು ಕರೆಯದೆ ಬೇರೆಯವರಿಗೆ ಅನ್ನದಾನ ಮಾಡುವುದು, ದಾನಕಾಲದಲ್ಲಿ ಅನೇಕ ಮಂದಿ ಬ್ರಾಹ್ಮಣರು ಬಂದಿದ್ದರೂ ಕೆಲವರಿಗೆ ಮಾತ್ರ ದಾನ ನೀಡುವುದು, ಮನೆಯಲ್ಲಿಯೇ ಆಶ್ರಯಿಸಿ ಕೊಂಡಿರುವ ಬ್ರಾಹ್ಮಣರಿಗೆ ದಾನ ಕೊಡದಿರುವುದು ಇವೆಲ್ಲ ಮಹಾ ಪಾತಕಗಳು.

ವ್ಯತೀಪಾತ, ವೈಧೃತಿ ಮುಂತಾದ ಪರ್ವದಿನಗಳಲ್ಲಿ ಶ್ರಾದ್ಧಮಾಡಬೇಕು. ಯಜ್ಞದಲ್ಲಿ ಋತ್ವಿಜರು ಹೇಗೋ ಹಾಗೆ ಶ್ರಾದ್ಧದಲ್ಲಿ ಬ್ರಾಹ್ಮಣರು. ಕುಲ, ಗೋತ್ರ, ಆಚಾರಗಳನ್ನು ಚೆನ್ನಾಗಿ ತಿಳಿದು ಒಳ್ಳೆಯ ಬ್ರಾಹ್ಮಣರನ್ನೇ ಕರೆಯಬೇಕು. ಅಪರಿಚಿತನಾದರೂ ವೇದವೇದಾಂಗಗಳನ್ನರಿತಿದ್ದರೆ ಅಂಥ ಬ್ರಾಹ್ಮಣನನ್ನೂ ಆಮಂತ್ರಿಸಬೇಕು. ಬ್ರಾಹ್ಮಣನಿಲ್ಲದ ಶ್ರಾದ್ಧವನ್ನು ಪಿತೃಗಳು ಸ್ವೀಕರಿಸುವುದಿಲ್ಲ. ಇದರಿಂದ ಬ್ರಹ್ಮಹತ್ಯಾಪಾತಕ ಉಂಟಾಗುವುದು.

ಪವಿತ್ರವಾದ ಭಾಗವತ, ವಿಷ್ಣು, ಮತ್ಸ್ಯ, ಪದ್ಮಪುರಾಣಗಳನ್ನು, ಹರಿವಂಶವನ್ನು ಇತರೆ ವೈಷ್ಣವಶಾಸ್ತ್ರಗಳನ್ನೂ ನಿತ್ಯ ಪೂಜಿಸಬೇಕು. ಅದು ಸಾಕ್ಷಾತ್ ವಿಷ್ಣುವನ್ನೇ ಪೂಜಿಸಿದಂತೆ ಹಾಗೆ ಪೂಜೆಮಾಡದೆ ಶಾಸ್ತ್ರಾಧ್ಯಯನ, ಪ್ರವಚನಮಾಡುವುದು ಜ್ಞಾನದ ನಿಂದೆ ಎನಿಸುವುದು.

**ಬ್ರಹ್ಮ ಹಾ ಸ್ವರ್ಣಸ್ತೇಮೀ ಚ ಸುರಾಪೀ ಗುರುತಲ್ಪಗಃ ।**
**ಮಹಾಪಾತಕಿನಶ್ಚೈತೇ ತತ್ಸಂಯೋಗೀ ಚ ಪಂಚಮಃ ॥**

ಬ್ರಹ್ಮಹತ್ಯೆ, ಸ್ವರ್ಣಸ್ತೇಯ, ಸುರಾಪಾನ, ಗುರುತಲ್ಪಗಮನ ಇವನ್ನು ಮಾಡುವ ಪಾತಕಿಯ ಸಂಸರ್ಗ ಇವು ಐದು ಮಹಾಪಾತಕಗಳು.

ಬ್ರಾಹ್ಮಣನನ್ನು ದ್ವೇಷದಿಂದ ಹಿಂಸಿಸುವುದು, ಕರೆದೂ ದಾನಮಾಡದೆ ಹಿಂದಕ್ಕೆ ಕಳಿಸುವುದು, ವಿದ್ಯಾಮದದಿಂದ ಸಭೆಯಲ್ಲಿ ಅವನ ತೇಜೋಭಂಗ ಮಾಡುವುದು, ಆತ್ಮಪ್ರಶಂಸೆ ಮಾಡಿಕೊಳ್ಳುವುದು, ಹಸಿದವರನ್ನುಣಲು ಬಿಡದಿರುವುದು, ಚಾಡಿಹೇಳುವುದು, ದತ್ತಾಪಹಾರ ಮಾಡುವುದು ಇವೆಲ್ಲವೂ ಬ್ರಹ್ಮಹತ್ಯಾ ಪಾತಕವೆ.

ಅಗ್ನಿಹೋತ್ರ, ಪಂಚಯಜ್ಞಗಳನ್ನು ಬಿಟ್ಟು ಗುರುಹಿರಿಯರ ಸೇವೆಮಾಡದೆ ಅಭಕ್ಷ್ಯಭಕ್ಷಣ ಮಾಡುವುದು, ನಿರಪರಾಧಿ ಪ್ರಾಣಿಗಳನ್ನು ಹಿಂಸಿಸುವುದು, ಸುಳ್ಳುಸಾಕ್ಷಿ

ನೀಡುವುದು, ಗೋಶಾಲೆ, ವನ, ಗ್ರಾಮಗಳನ್ನು ಸುಡುವುದು ಇವೆಲ್ಲವೂ ಸುರಾಪಾನಕ್ಕೆ ಸಮಾನವಾದ ಪಾತಕಗಳು.

ಬಡವರ ಸೊತ್ತನ್ನಪಹರಿಸುವುದು, ಪರಸ್ತ್ರೀಗಮನ, ಪರರ ನ್ಯಾಸವನ್ನಪಹರಿಸುವುದು ಇವೆಲ್ಲ ಸ್ವರ್ಣಸ್ತೇಯಕ್ಕೆ ಸಮಾನ. ಕನ್ಯೆಯನ್ನು ಯೋಗ್ಯವರನಿಗೆ ದಾನ ಮಾಡದಿರುವುದು, ಸೋದರಿ, ಸೊಸೆ, ಮಿತ್ರರ ಸ್ತ್ರೀಯರು, ಅಪ್ರಾಪ್ತ ವಯಸ್ಕರಾದ ಕುಮಾರಿಯರು, ಅಂತ್ಯಜಸ್ತ್ರೀ ಇವರನ್ನು ಕೂಡುವುದು-ಗುರತಲ್ಪಗಮನಕ್ಕೆ ಸಮಾನ ಪಾಪಗಳು. ಗರ್ವ, ಕೋಪ, ಡಾಂಭಿಕತನ, ಕೃತಘ್ನತೆ, ವಿಷಯಾಸಕ್ತಿ, ಲೋಭ, ದ್ರೋಹ, ಮತ್ಸರ, ಅನಾಥ ದೀನ, ಜನರಲ್ಲಿ ಅನುಕಂಪ ತೋರದಿರುವುದು. ಇವೆಲ್ಲವೂ ಪಾಪಕರ. ಯಾವ ರಾಜನ ಆಳ್ವಿಕೆಯಲ್ಲಿ ಜನರು ಪಾಪಮಾಡಿ ನರಕಕ್ಕೆ ಹೋಗುವರೋ ಆ ರಾಜ ನರಕ ಭಾಗಿಯಾಗುತ್ತಾನೆ. ಅಧರ್ಮಿಯಾದ ರಾಜನಿಂದ ದಾನವನ್ನು ಸ್ವೀಕರಿಸುವ ಬ್ರಾಹ್ಮಣರು ಘೋರ ನರಕಕ್ಕೆ ಹೋಗುತ್ತಾರೆ. ಅಪರಾಧಿಗಳನ್ನು ಬಿಟ್ಟು ನಿರಪರಾಧಿಗಳನ್ನು ಶಿಕ್ಷಿಸುವ ರಾಜನೂ ನರಕಭಾಜನನಾಗುತ್ತಾನೆ. ಈ ಎಲ್ಲ ಪಾಪಿಗಳಿಗೆ ಯಮಧರ್ಮನು ಶಿಕ್ಷೆ ಕೊಡುತ್ತಾನೆ. ವಿನಯ, ಆಚಾರಸಂಪನ್ನರಾಗಿದ್ದೂ ತಿಳಿಯದೆ ಪ್ರಮಾದವಶಾತ್ ಅನಾಚಾರ ಮಾಡಿದವರಿಗೆ ಗುರು ಪ್ರಾಯಶ್ಚಿತ್ತ ರೂಪದಿಂದ ಶಿಕ್ಷೆ ವಿಧಿಸುತ್ತಾನೆ. ಪರದಾರಾಪಹರಣ, ಚೌರ್ಯ, ಅನ್ಯಾಯ ವ್ಯವಹಾರಗಳನ್ನು ಮಾಡುವವರಿಗೆ ರಾಜನು ಶಿಕ್ಷೆ ವಿಧಿಸುತ್ತಾನೆ. ರಾಜನ ಕಣ್ಣು ತಪ್ಪಿಸಿ ಅವ್ಯವಹಾರ ಮಾಡುವವರಿಗೆ ಯಮನು ಶಿಕ್ಷೆ ಕೊಡುತ್ತಾನೆ. ಈ ಪಾಪಕರ್ಮಗಳನ್ನು ತಾನೆ ಮಾಡಲಿ, ಇನ್ನೊಬ್ಬರಿಂದ ಮಾಡಿಸಲಿ ಇಲ್ಲವೆ ಮಾಡುವವರಿಗೆ ಅನುಮೋದನೆ ನೀಡಲಿ ಅದರ ಫಲವನ್ನು ಅವನು ಉಣ್ಣಲೇಬೇಕು. ಉಣ್ಣದೆ ಕಲ್ಪಗಳೇ ಉರುಳಿದರೂ ಆ ಪಾಪ ನಾಶವಾಗದು.

**ಯಯಾತಿ :-** ಅಧರ್ಮದ ಫಲವನ್ನು ಕೇಳಿದ್ದಾಯಿತು. ಇನ್ನು ಧರ್ಮಾಚರಣೆಯ ಫಲವನ್ನು ಬಿತ್ತರಿಸು.

**ಮಾತಲಿ :-** ರಾಜನ್, **'ಅವಶ್ಯಂ ಹಿ ಕೃತಂ ಕರ್ಮಭೋಕ್ತವ್ಯಂ'** ತಾನು ಮಾಡಿದ ಕರ್ಮವನ್ನು ತಾನುಣಲೇಬೇಕು. ಶುಭಕರ್ಮ ಮಾಡಿದರೆ ಸುಖವಾಗಿ ಯಮನ ಬಳಿಗೆ ಹೋಗುತ್ತಾರೆ. **'ನ ತೇಽತ್ರ ಪ್ರಾಣಿನಃ ಸಂತಿ ಯೇನ ಯಾಂತಿ ಯಮಕ್ಷಯಂ'** ಯಮಲೋಕಕ್ಕೆ ಹೋಗದ ಪ್ರಾಣಿಗಳೇ ಇಲ್ಲ. ಬ್ರಾಹ್ಮಣರಿಗೆ ಪಾದುಕೆ, ಛತ್ರ, ವಸ್ತ್ರ, ಪಲ್ಲಕ್ಕಿ, ಆಸನಗಳನ್ನು ದಾನಮಾಡುವವನ ಯಮಲೋಕ ಪ್ರಯಾಣ ಉತ್ತಮ ವಿಮಾನದಲ್ಲಿ ಸುಖಕರವಾಗಿ ಪರಿಣಮಿಸುತ್ತದೆ. ದೇವಾಲಯ, ಮಠ, ಅನಾಥಾಶ್ರಮ, ಹೂದೋಟಗಳನ್ನು ನಿರ್ಮಿಸಿ ಕೊಡುವುದು, ದೇವ ಅಗ್ನಿ ಗುರು ಬ್ರಾಹ್ಮಣ ಮಾತಾ ಪಿತೃಗಳ ಪೂಜೆ ಶ್ರದ್ಧೆಯಿಂದ ಬ್ರಾಹ್ಮಣರಿಗೆ, ದೀನರಿಗೆ, ಗುಣವಂತರಿಗೆ ಯಥಾಶಕ್ತಿ ದಾನಮಾಡುವುದು ಇಂಥ ಧರ್ಮಾಚರಣೆಗಳಿಂದ ಸಮಸ್ತ ಅಭೀಷ್ಟಗಳು ಸಿದ್ಧಿಸುವುವು.

**ಮಾತಲಿ :-** ಶಿವನಿಂದ ಉಕ್ತವಾದ ಶಿವಧರ್ಮಗಳೂ ಅನೇಕ ವಿಧವಾಗಿವೆ. ಅವು ಶಿವನನ್ನು ಧರಿಸುತ್ತ ಶಿವನ ಉಪದೇಶದಿಂದ ಧರಿಸಲ್ಪಡುವುದರಿಂದ ಶಿವಧರ್ಮ ಎನಿಸುತ್ತವೆ. ಸಂಸಾರವೆಂಬ ಸಮುದ್ರವನ್ನು ಅವು ದಾಟಿಸುತ್ತವೆ.

ಅಹಿಂಸೆ, ಕ್ಷಮೆ, ಸತ್ಯ, ಲಜ್ಜೆ, ಶ್ರದ್ಧೆ, ಇಂದ್ರಿಯ ಸಂಯಮ, ದಾನ, ಯಜ್ಞ, ತಪಸ್ಸು, ಧ್ಯಾನ ಇವು ಹತ್ತು ಧರ್ಮಸಾಧನಗಳು. ಇವುಗಳನ್ನು ಅನುಷ್ಠಾನ ಮಾಡಿದರೆ ಶಿವಲೋಕ ಪ್ರಾಪ್ತಿಯಾಗುವುದು. ಅಲ್ಲಿ ಕೇವಲ ಪುಣ್ಯಫಲ ಭೋಗವಿರುತ್ತದೆ. ಕೆಲವರು ಅಲ್ಲಿ ಜ್ಞಾನಯೋಗ ನಿರತವಾಗಿ ಮುಕ್ತರಾಗುತ್ತಾರೆ. ಕೆಲವರು ಹಿಂತಿರುಗಿ ಬರುತ್ತಾರೆ. ಅವರ ಭೋಗಾಸಕ್ತಿ ಮೋಕ್ಷಮಾರ್ಗಕ್ಕೆ ಅಡಚಣೆಯಾಗಿರುತ್ತದೆ. ಒಮ್ಮೆಯಾದರೂ ರುದ್ರನನ್ನು ಪೂಜಿಸಿದರೆ ಆತ ಪಿಶಾಚಲೋಕದಲ್ಲಿ ಭೋಗಗಳನ್ನು ಅನುಭವಿಸುವನು. ಅನ್ನದಾನದಿಂದ ಎಲ್ಲ ದಾನಗಳ ಫಲ ಸಿದ್ಧಿಸುವುದು.

**ಯಸ್ಯಾನ್ನಪಾನ ಪುಷ್ಟಾಂಗಃ ಕುರುತೇ ಪುಣ್ಯಸಂಚಯಂ ।**
**ಅನ್ನಪ್ರದಾತುಸ್ತಸ್ಯಾರ್ಧಂಕತಶ್ಚಾರ್ಧಂ ನ ಸಂಶಯಃ ॥**

**ಧರ್ಮಾರ್ಥ ಕಾಮ ಮೋಕ್ಷಾಣಾಂ ದೇಹಃ ಪರಮಸಾಧನಂ ।**
**ಸ್ಥಿತಿಸ್ತಸ್ಯಾನ್ನಪಾನಾಭ್ಯಾಂ ಅತಸ್ತತ್ಸರ್ವಸಾಧನಂ ॥**

ಯಾರ ಅನ್ನಪಾನಗಳಿಂದ ಪುಷ್ಟನಾದವನು ಪುಣ್ಯಗಳಿಸುವನೋ ಅವನಿಗೆ ಆ ಪುಣ್ಯದ ಅರ್ಧಾಂಶ ಸಲ್ಲುತ್ತದೆ. ಉಳಿದ ಅರ್ಧಾಂಶ ಗಳಿಸಿದವನಿಗೆ. ದೇಹವು ಧರ್ಮ ಅರ್ಥ ಕಾಮ ಮೋಕ್ಷಗಳಿಗೆ ಪರಮಸಾಧನ. ಅದು ಉಳಿಯಬೇಕಾದರೆ ಅನ್ನಪಾನಗಳು ಬೇಕು. ಆದ್ದರಿಂದ ಅದನ್ನು ದಾನಮಾಡುವುದು ಎಲ್ಲ ಅಭೀಷ್ಟಗಳಿಗೂ ಸಾಧನವಾಗಬಲ್ಲುದು.

**ಅನ್ನಪಾನಾಶ್ವ ಗೋವಸ್ತ್ರಶಯ್ಯಾಸೂತ್ರಾಸನಾನಿ ಚ ।**
**ಪ್ರೇತಲೋಕೇ ಪ್ರಶಸ್ತಾನಿ ದಾನಾನ್ಯಷ್ಟೌ ವಿಶೇಷತಃ ॥**

ಅನ್ನ, ಪಾನ, ಅಶ್ವ, ಗೋ, ವಸ್ತ್ರ, ಶಯ್ಯಾ, ಸೂತ್ರ, ಆಸನ ಈ ಎಂಟು ದಾನಗಳು ಪ್ರೇತಲೋಕ ಪ್ರಾಪ್ತಿಗೆ ಉತ್ತಮ ಸಾಧನಗಳು.

ಶಿವಭಕ್ತರು ಶಿವಲೋಕವನ್ನೂ, ವಿಷ್ಣುಭಕ್ತರು ಅದರ ಮೇಲೆ ಇರುವ ವಿಷ್ಣುಲೋಕವನ್ನೂ, ಯಜ್ಞಗಳನ್ನು ಮಾಡುವ ಜ್ಞಾನಿಗಳಾದ ಬ್ರಾಹ್ಮಣರು ಬ್ರಹ್ಮಲೋಕವನ್ನೂ, ಯುದ್ಧಶೂರರಾದ ಕ್ಷತ್ರಿಯರು ಇಂದ್ರಲೋಕವನ್ನೂ ಉಳಿದ ಪುಣ್ಯವಂತರು ಆಯಾ ಪುಣ್ಯಲೋಕಗಳನ್ನೂ ಹೊಂದುತ್ತಾರೆ.

**ಮಾತಲಿ :-** ಪಾಪಿಗಳಿಗೆ ಯಮಲೋಕದಲ್ಲಿ ಕಠಿನ ಶಿಕ್ಷೆಯಾಗುತ್ತದೆ. ಅಲ್ಲಿ ಸಿಂಹ, ಹುಲಿ ಮುಂತಾದ ಕ್ರೂರಮೃಗ ಕೀಟ, ಹಾವು, ಡಾಕಿನಿಯರು, ರಾಕ್ಷಸರು, ಘೋರ ವ್ಯಾಧಿಗಳು, ಬಿರುಗಾಳಿ, ಕಲ್ಲಿನ ಸುರಿಮಳೆ, ಉಲ್ಕಾಪಾತ, ಬೆಂಕಿಯಮಳೆ ಮುಂತಾದ ನಾನಾ ರೀತಿಯ ಶಿಕ್ಷೆಗಳಿವೆ.

**ಯಯಾತಿ :-** ಮಾತಲಿ ದೇವತೆಗಳು ಪಡೆದಿರುವ ಐಶ್ವರ್ಯ, ಸುಖ, ಭೋಗಗಳ ಪ್ರಮಾಣವೆಷ್ಟು ?

**ಮಾತಲಿ :-** ಮಹಾರಾಜ, ದಾನವರ ಸುಖಕ್ಕಿಂತ ಎಂಟುಪಾಲುಮಿಗಿಲು ಮಾನವರದು. ಅದಕ್ಕಿಂತ ಹದಿನಾರು ಪಾಲು ಅಧಿಕ ಚಕ್ರವರ್ತಿಗಳದು. ಅದಕ್ಕಿಂತ ಹೆಚ್ಚಿನದು ಗಂಧರ್ವರದು. ಈ ಎಲ್ಲ ಐಶ್ವರ್ಯ ಪಾಂಚಭೌತಿಕವಾದುದು. ಇದಕ್ಕಿಂತ

ನಲವತ್ತು ಪಾಲು ಹೆಚ್ಚು ಇಂದ್ರನ ಐಶ್ವರ್ಯ, ಮನಸ್ತತ್ವಾತ್ಮಕ, ಇದಕ್ಕಿಂತ ಇನ್ನೂ ಅಧಿಕ ರುದ್ರನ ಅಹಂಕಾರ ತತ್ವಾತ್ಮಕ ಐಶ್ವರ್ಯ, ಪ್ರಧಾನ ತತ್ವಾತ್ಮಕ ಆದಿಮಧ್ಯಾಂತರಹಿತ ಅನುಪಮ ಐಶ್ವರ್ಯ ವಿಷ್ಣುವಿನದು.

ತಪೋಬಲದಿಂದ ಯಾರು ಯಾವ ತತ್ವದ ಸ್ಥಾನಕ್ಕೆ ಹೋಗುವರೋ ಅವರ ಭೋಗ ಸಾಮಗ್ರಿ ಆ ತತ್ವದಿಂದ ನಿರ್ಮಿತವಾಗಿರುತ್ತದೆ. ಸಂಸರ್ಗದಿಂದ, ಪರಿಹಾಸದಿಂದ ಇಲ್ಲವೆ ಸ್ವಾರ್ಥಬುದ್ಧಿಯಿಂದ ಒಮ್ಮೆಯಾದರೂ ಈಶ್ವರನನ್ನು ನಮಿಸಿದರೆ ಅವನ ಲೋಕ ಸಿಗುವುದು. ಅವನ ನಾಮಸಂಕೀರ್ತನೆ ನಮಸ್ಕಾರಗಳೊಂದೂ ವಿಫಲವಾಗದು.

**ಪ್ರಸಂಗೇನಾಪಿ ಯೇ ಕುರ್ಯುಃ ಶಂಕರಸ್ಮರಣಂ ನರಾಃ**
**ತ್ಯೈರ್ಲಭ್ಯಂತ್ವತುಲಂ ಸೌಖ್ಯಂ ಕಿಂ ಪುನಸ್ತತ್ಪರಾಯಿಣೈಃ**
**ವಿಷ್ಣು ಚಿಂತಾಂ ಪ್ರಕುರ್ವಂತಿ ಧ್ಯಾನೇನಾಕುಲ ಮಾನಸಾಃ**
**ತೇ ಯಾಂತಿ ಪರಮಂ ಸ್ಥಾನಂ ತದ್ವಿಷ್ಣೋಃ ಪರಮಂ ಪದಂ**

ಆಕಸ್ಮಾತ್ ಶಂಕರ ಸ್ಮರಣೆಮಾಡುವವರಿಗೂ ಅನುಪಮ ಸೌಖ್ಯವಿದೆ. ಅದರಲ್ಲಿಯೇ ಆಸಕ್ತರಾದವರಿಗೆ ಏನು ಹೇಳಲಿ ? ಧ್ಯಾನಪೂರ್ಣ ಮನಸ್ಸಿನಿಂದ ಹರಿ ಸ್ಮರಣೆ ಮಾಡುವವರು ಉತ್ತಮ ಸ್ಥಾನವನ್ನೇ ಪಡೆಯುವರು. ಅದುವೆ ವಿಷ್ಣುವಿನ ಪರಂಧಾಮ.

**ಶಿವಾಯ ವಿಷ್ಣುರೂಪಾಯ ಶಿವರೂಪಾಯ ವಿಷ್ಣುವೇ**
**ಶಿವಸ್ಯ ಹೃದಯೇ ವಿಷ್ಣು ವಿಷ್ಣೋಶ್ಚ ಹೃದಯೇ ಶಿವಃ**
**ಏಕ ಮೂರ್ತಿಸ್ತ್ರಯೋ ದೇವಾಃ ಬ್ರಹ್ಮವಿಷ್ಣುಮಹೇಶ್ವರಾಃ**
**ತ್ರಯಾಣಾಮಂತರಂ ನಾಸ್ತಿ ಗುಣಭೇದಾಃ ಪ್ರಕೀರ್ತಿತಾಃ**

ಶಿವನು ವಿಷ್ಣುವಿನ ರೂಪ, ವಿಷ್ಣು ಶಿವನ ರೂಪ. ಏಕೆಂದರೆ ಶಿವನ ಹೃದಯದಲ್ಲಿ ವಿಷ್ಣು, ವಿಷ್ಣುವಿನ ಹೃದಯದಲ್ಲಿ ಶಿವ. ಹೀಗಿದೆ ಅವರ ಪರಸ್ಪರ ಪ್ರೀತಿ. ಮೂರ್ತಿ ಎಂದು, ದೇವತೆಗಳು ಮೂವರು, ಬ್ರಹ್ಮ ವಿಷ್ಣು ಮಹೇಶ್ವರರು ಏಕೆಂದರೆ ಅವರಲ್ಲಿ ಗುಣ ಭೇದವಿದೆ. ಮತಭೇದವಿಲ್ಲ.

ಮಹಾರಾಜ, ನೀನು ಶಿವಭಕ್ತನೂ ಹೌದು. ಭಗವದ್ಭಕ್ತನೂ ಹೌದು. ತ್ರಿಮೂರ್ತಿಗಳ ಅನುಗ್ರಹಕ್ಕೂ ನೀನು ಪಾತ್ರನಾಗಿರುವೆ. ನೀನೀಗ ಇಂದ್ರ. ಬ್ರಹ್ಮ, ಶಿವ ವಿಷ್ಣುಲೋಕಗಳನ್ನು ಸೇರಿ ಸುಖಿಸೆಂದು ಹೇಳಲು ಇಂದ್ರನಾದೇಶದಂತೆ ನಾನು ಬಂದೆ.

**ಪಿಪ್ಪಲ** :- ಮಾತಲಿಯ ಮಾತನ್ನು ಕೇಳಿದ ಯಯಾತಿ ಮುಂದೇನು ಮಾಡಿದ ? ಪುಣ್ಯಕರವಾದ ಈ ಕಥೆಯನ್ನು ಎಷ್ಟು ಕೇಳಿದರೂ ತೃಪ್ತಿಯೆನಿಸುವುದಿಲ್ಲ.

**ಸುಕರ್ಮ** :- ಯಯಾತಿ ಮಾತಲಿಯನ್ನು ಕುರಿತು ಹೀಗೆ ಹೇಳಿದ

**ಯಯಾತಿ** :- ಮಾತಲಿ, ನೀನು ಈ ಶರೀರದ ದೋಷಗಳನ್ನೆಲ್ಲ ವರ್ಣಿಸಿರುವೆ. ಅದರ ಜೊತೆಗೆ ಸ್ವರ್ಗ ಸುಖದ ದೋಷಗಳನ್ನೂ ಹೇಳಿರುವೆ. ಆದ್ದರಿಂದ ಈ ದೇಹವನ್ನು ಬಿಟ್ಟು ಸ್ವರ್ಗಕ್ಕೆ ನಾನು ಬರಲಾರೆ, ನೀನು ಇಂದ್ರನಲ್ಲಿ ಈ ಮಾತನ್ನೇ ಹೇಳು. ಆತ್ಮನು ದೇಹದ ಸಹಾಯವಿಲ್ಲದೆ ಯಾವ ಪುಣ್ಯವನ್ನೂಗಳಿಸಲಾರ. ಹೀಗೆ ಆತ್ಮನ ಮಿತ್ರನಾದ

ಈ ದೇಹವನ್ನು ನಾನು ಬಿಡಲಾರೆ ದುಷ್ಟವ್ಯಾಧಿಗಳೂ ಮುದಿತನವೂ ಶರೀರಕ್ಕೆ ಕೇವಲ ಪಾಪದಿಂದ ಬಂದೊದಗುವವು. ನಾನು ಪುಣ್ಯಪ್ರಭಾವದಿಂದ ನನ್ನ ಶರೀರದಲ್ಲಿ ಹದಿನಾರು ವಯಸ್ಸಿನ ತಾರುಣ್ಯವನ್ನು ಕಾಪಾಡಿಕೊಂಡು ಬಂದಿದ್ದೇನೆ. ಶರೀರದ ಎಲ್ಲ ವ್ಯಾಧಿಗಳಿಗೂ ಧರ್ಮಾಚರಣೆಯೇ ಉತ್ತಮ ಔಷಧ. ಅದನ್ನು ಸೇವಿಸಿ ಬಲಿಷ್ಠನಾಗಿದ್ದೇನೆ.

ಹೃಷೀಕೇಶನ ನಾಮೋಚ್ಚಾರಣೆಯೆಂಬ ರಸಾಯನವನ್ನು ನಿತ್ಯ ಸೇವಿಸಿ ಎಲ್ಲ ವ್ಯಾಧಿಗಳ ಭಯದಿಂದ ನಾನು ದೂರವಿದ್ದೇನೆ.

**ವಿದ್ಯಮಾನೇ ಹಿ ಸಂಸಾರೇ ಕೃಷ್ಣನಾಮ್ನಿ ಮಹೌಷಧೇ ।**
**ಮಾನವಾ ಮರಣಂ ಯಾಂತಿ ಪಾಪವ್ಯಾಧಿಪ್ರಪೀಡಿತಾಃ ॥**

ಸಂಸಾರದಲ್ಲಿ ಕೃಷ್ಣನಾಮವೆಂಬ ದೊಡ್ಡ ಔಷಧವಿರುವಾಗಲೂ ಮಾನವರು ಪಾಪ, ವ್ಯಾಧಿಗಳಿಂದ ಪೀಡಿತರಾಗಿ ಮರಣಹೊಂದುತ್ತಾರೆ.

ಕೃಷ್ಣನಾಮೋಚ್ಚಾರವೆಂಬ ರಸಾಯನವನ್ನು ಸೇವಿಸದವನು ಮಹಾಮೂಢ. ಕೃಷ್ಣನ ಪೂಜೆ-ಧ್ಯಾನಗಳಿಂದ ನಿಯಮ, ಸತ್ಯ, ದಾನ, ಕರ್ಮಗಳಿಂದ ಶರೀರ ದಿನದಿಂದದಿನಕ್ಕೆ ನೂತನವಾಗುವುದು. ಎಲ್ಲ ದೋಷಗಳೂ ದೂರವಾಗುವುವು. ಬಾಹ್ಯಾಂಭ್ಯಂತರ ಶುಚಿ ಉಂಟಾಗುವುದು. ದುರ್ಗಂಧ ತೊಲಗುವುದು.

**ನಾಹಂ ಸ್ವರ್ಗಂ ಗಮಿಷ್ಯಾಮಿ ಸ್ವರ್ಗಮತ್ರ ಕರೋಮ್ಯಹಂ ।**
**ತಪಸಾ ಚೈವ ಭಾವೇನ ಸ್ವಧರ್ಮೇಣ ಮಹೀತಲಂ ॥**

ನಾನು ಸ್ವರ್ಗಕ್ಕೆ ಹೋಗಲಾರೆ. ನನ್ನ ತಪಸ್ಸು, ಸ್ವಧರ್ಮ, ಶುದ್ಧ ಭಾವಗಳಿಂದ ಭೂಮಿಯನ್ನೇ ಸ್ವರ್ಗವನ್ನಾಗಿ ಮಾಡುವೆ.

ನನ್ನ ಈ ಮಾತುಗಳನ್ನು ಇಂದ್ರನಲ್ಲಿ ಹೇಳು.

**ಸುಕರ್ಮ :-** ಮಾತಲಿ ರಾಜನನ್ನಭಿನಂದಿಸಿ ಸ್ವರ್ಗಕ್ಕೆ ತೆರಳಿದ. ಇಂದ್ರನು ಅವನಿಂದ ಎಲ್ಲವನ್ನೂ ಕೇಳಿ ಯಯಾತಿಯನ್ನು ಸ್ವರ್ಗಕ್ಕೆ ಕರೆತರಲು ಬೇರೆ ಉಪಾಯಗಳನ್ನು ಚಿಂತಿಸತೊಡಗಿದ.

**ಪಿಪ್ಪಲ :-** ಮಾತಲಿ ಹೊರಟು ಹೋದಮೇಲೆ ಯಯಾತಿ ಏನು ಮಾಡಿದ ?

**ಸುಕರ್ಮ :-** ಯಯಾತಿ ತನ್ನ ದೂತರನ್ನು ಕರೆದು ಅಜ್ಞಾಪಿಸಿದ. 'ನೀವೆಲ್ಲರೂ ಈ ಲೋಕದಲ್ಲಿರುವ ಎಲ್ಲ ದೇಶಗಳಿಗೂ ದ್ವೀಪಗಳಿಗೂ ಹೋಗಿ ನನ್ನಾಜ್ಞೆಯನ್ನು ಘೋಷಿಸಿರಿ. ಏನೆಂದರೆ ಅಮೃತದಂತಿರುವ ಪವಿತ್ರ, ಹರಿಧ್ಯಾನ, ಜ್ಞಾನ, ಯಜ್ಞಗಳನ್ನು ಎಲ್ಲರೂ ಮಾಡಿ ಹರಿಯನ್ನಾರಾಧಿಸಬೇಕು. ವಿಷಯಾಸಕ್ತಿಯನ್ನು ದೂರ ಮಾಡಬೇಕು. ಎಲ್ಲೆಡೆ ಹರಿಯ ಸನ್ನಿಧಾನವನ್ನು ಕಾಣಬೇಕು. ಈ ನನ್ನಾಜ್ಞೆಯನ್ನು ಪಾಲಿಸದವರು ಕಳ್ಳರಿಗೆ ದೊರೆವ ಶಿಕ್ಷೆಗೆ ಗುರಿಯಾಗುವರು.

ದೂತರು ಸಂತೋಷದಿಂದ ಎಲ್ಲೆಡೆ ಈ ರಾಜಾಜ್ಞೆಯನ್ನು ಘೋಷಿಸಿ ಹೇಳಿದರು. 'ಶ್ರೀ ಕೇಶವ, ಮಧುಸೂದನ, ಪದ್ಮನಾಭ, ಆನಂದ, ಅನಂತ, ರಾಮ, ಆದಿತ್ಯ ಮುಂತಾದ ಶ್ರೀಹರಿ ನಾಮಾಮೃತವು ಎಲ್ಲ ದೋಷಗಳನ್ನು ಕಳೆಯುವುದು. ಯಯಾತಿ ಮಹಾರಾಜನು

ಇದನ್ನು ಲೋಕಕ್ಕೆ ಕೊಡುತ್ತಿದ್ದಾನೆ. ಪ್ರಭಾತಕಾಲದಲ್ಲಿ ಎಲ್ಲರೂ ಶುದ್ಧಭಾವದಿಂದ ಈ ನಾಮಾಮೃತವನ್ನು ದಾನಮಾಡಿ ಮೋಕ್ಷವನ್ನು ಸಂಪಾದಿಸಬೇಕು.'

**ಸುಕರ್ಮ :-** ರಾಜದೂತರು ಹೀಗೆ ರಾಜಾಜ್ಞೆಯನ್ನು ಘೋಷಿಸಿದಾಗ ಪ್ರಜೆಗಳು ಅದನ್ನು ಕೇಳಿ ಅಂದಿನಿಂದ ವಿಷ್ಣುವಿನಾರಾಧನೆಗೆ ತೊಡಗಿದರು. ವಿಷ್ಣುವನ್ನೇ ಧ್ಯಾನ ಮಾಡಿದರು. ಅವನನ್ನೆ ಹಾಡಿ ಹೊಗಳಿದರು. ಪವಿತ್ರ ವೇದಮಂತ್ರಗಳಿಂದ ಅವನನ್ನೇ ಜಪಿಸಿದರು. ವ್ರತ, ಉಪವಾಸಗಳಿಂದ ತ್ರಿಕರಣ ಶುದ್ಧಿಯನ್ನು ಸಂಪಾದಿಸಿ ಪ್ರೇಮದಿಂದ ಅವನನ್ನು ಭಜಿಸಿದರು.

ವಿಷ್ಣುವಿನ ಧ್ಯಾನ-ಸ್ತೋತ್ರ-ನಾಮೋಚ್ಚಾರಣೆಗಳ ಪ್ರಭಾವದಿಂದ ಪ್ರಜೆಗಳು ಆದಿವ್ಯಾಧಿಗಳಿಂದ ಮುಕ್ತರಾಗಿ ಎಲ್ಲ ಸಂಪತ್ತುಗಳನ್ನು ಪಡೆದು ಸುಖದಿಂದ ಬಾಳಿದರು. ಅವರ ಮನೆಯ ಮುಂದೆ ಬೆಳೆದ ಮರಗಳೇ ಕಲ್ಪವೃಕ್ಷಗಳಾದುವು. ಗೋವುಗಳು ಕಾಮಧೇನುಗಳಾದುವು. ಅವರು ಚಿಂತಾಮಣಿಗಳನ್ನು ಪಡೆದರು. ತಾವೂ ಅಮರರಾದರು. ಅವರ ಸುಂದರವಾದ ಮನೆಗಳು ಶಂಖಚಕ್ರಗದಾಪದ್ಮ ಚಿಹ್ನಗಳಿಂದೊಪ್ಪುತ್ತ ಹೊರಗೆ ತುಳಸೀವನ, ಒಳಗೆ ಕೇಶವ ಮಂದಿರಗಳಿಂದ ಕೂಡಿದ್ದುವು ಪವಿತ್ರ ಶಂಖಶಬ್ದ ಮೊಳಗುತ್ತಿತ್ತು. ಸುಸ್ವರವಾಗಿ ತಾಲಲಯಯುಕ್ತವಾಗಿ ಹರಿ ನಾಮಸಂಕೀರ್ತನೆ ಕೇಳಿ ಬರುತ್ತಿತ್ತು.

**ನ ದುರ್ಭಿಕ್ಷಂ ನಚವ್ಯಾಧಿರ್ನಾಕಾಲ ಮರಣಂ ನೃಣಾಂ**
**ತಸ್ಮಿನ್ ಶಾಸತಿ ಧರ್ಮಜ್ಞೇ ಯಯಾತ್ ನೃಪತೌ ತದಾ**
**ವೈಷ್ಣವಾ ಮಾನವಾಃ ಸರ್ವೇ ವಿಷ್ಣುವ್ರತ ಪರಾಯಣಾಃ**

ಧರ್ಮಜ್ಞನಾದ ಯಯಾತಿ ಮಹಾರಾಜನಾಳುತ್ತಿದ್ದಾಗ ಲೋಕದಲ್ಲಿ ದುರ್ಭಿಕ್ಷವಿರಲಿಲ್ಲ. ವ್ಯಾಧಿ ಇರಲಿಲ್ಲ. ಅಕಾಲ ಮರಣವಿರಲಿಲ್ಲ. ಎಲ್ಲರೂ ವೈಷ್ಣವರಾಗಿದ್ದರು. ವಿಷ್ಣುವ್ರತಪರಾಯಣರಾಗಿದ್ದರು.

**ಸುಕರ್ಮ :-** ಹರಿನಾಮ ಸ್ಮರಣೆಯನ್ನು ಎಲ್ಲ ಪ್ರಜೆಗಳೂ ಕುಳಿತಾಗ, ನಿಂತಾಗ, ನಡೆವಾಗ ಮಾಡುತ್ತಿದ್ದರು. ಮನೆಗೆಲಸ ಮಾಡುವ ಗೃಹಿಣಿಯರೂ ಹರಿಯನ್ನೇ ಹಾಡುತ್ತಿದ್ದರು. ಸಣ್ಣಮಕ್ಕಳು ಆಟವಾಡುತ್ತ ಗೋವಿಂದನನ್ನು ನಮಿಸುತ್ತಿದ್ದರು. ಪ್ರತಿ ಮನೆಗಳಲ್ಲಿಯೂ ಶಿಖರದ ಮೇಲೆ ವಿಷ್ಣುಚಕ್ರ ಸೂರ್ಯನಂತೆ ಹೊಳೆಯುತ್ತಿತ್ತು. ಭೂಲೋಕ ವಿಷ್ಣುಲೋಕದಂತಾಗಿತ್ತು. ಪ್ರಜೆಗಳು ರೋಗ, ಜರೆ, ಮರಣಭಯದಿಂದ ನಿರ್ಮುಕ್ತರಾಗಿದ್ದರು. ಚಿರಂಜೀವಿಗಳಾಗಿದ್ದರು. ಎಲ್ಲರೂ ಇಪ್ಪತ್ತೈದು ವರುಷದ ತಾರುಣ್ಯವನ್ನು ಸದಾ ಅನುಭವಿಸುತ್ತಿದ್ದರು. ಭೂಮಿ ಸ್ವರ್ಗದಂತಾಗಿತ್ತು. ಪ್ರಜೆಗಳನ್ನೆಳೆದೊಯ್ಯಲು ಯಮದೂತರು ಬಂದಾಗಲೆಲ್ಲ ವಿಷ್ಣುದೂತರು ಅವರನ್ನು ಹೊಡೆದೋಡಿಸುತ್ತಿದ್ದರು. ಹೀಗೆ ಭೂಲೋಕದಲ್ಲಿ ಮರಣವೆ ಇಲ್ಲವೆಂದಾದಾಗ ಯಮಧರ್ಮನಿಗೆ ಚಿಂತೆ ಉಂಟಾಯಿತು.

**ಸುಕರ್ಮ :-** ಯಮನು ಸ್ವರ್ಗಕ್ಕೆ ಹೋಗಿ ಇಂದ್ರನನ್ನು ಕಂಡ. ಇಂದ್ರನಾತನನ್ನು ಇದಿರುಗೊಂಡು ಅರ್ಘ್ಯವನ್ನಿತ್ತು ಅವನಾಗಮನಕ್ಕೆ ಕಾರಣವನ್ನು ಕೇಳಿದ. ಯಮನು ಯಯಾತಿಯ ಚರಿತ್ರೆಯನ್ನೆಲ್ಲ ಇಂದ್ರನಿಗೆ ತಿಳಿಸಿ ತನ್ನಾಗಮನ ಕಾರಣವನ್ನು ಹೇಳತೊಡಗಿದ.

**ಧರ್ಮ:-** ದೇವರಾಜ, ಯಯಾತಿ ಮಹಾರಾಜ ತನ್ನ ಪ್ರಜೆಗಳನ್ನೆಲ್ಲ ವೈಷ್ಣವರನ್ನಾಗಿ ಮಾಡಿ ಲೋಕದಲ್ಲಿ ರೋಗ, ಜರೆ, ಮರಣಗಳಿಲ್ಲದಂತೆ ಮಾಡಿದ್ದಾನೆ. ಯಾರಲ್ಲಿಯೂ ಕಾಮಕ್ರೋಧ, ಲೋಭ ಮೋಹಗಳಿಲ್ಲ, ಅಸತ್ಯವಿಲ್ಲ. ಧರ್ಮಪರಾಯಣರಾಗಿ ಸ್ಥಿರಯೌವನವನ್ನು ಪಡೆದಿದ್ದಾರೆ. ಮಕ್ಕಳು-ಮೊಮ್ಮಕ್ಕಳು- ಮರಿಮಕ್ಕಳು ಹೀಗೆ ದೀರ್ಘವಾದ ವಂಶಪರಂಪರೆಯನ್ನು ಪ್ರತಿಯೊಬ್ಬನೂ ಜೀವಂತನಾಗಿ ನೋಡುತ್ತಿದ್ದಾನೆ. ದೂರ್ವೆಯ ಬಳ್ಳಿ ಬೆಳೆವಂತೆ ಪ್ರತಿಯೊಬ್ಬನೂ ತನ್ನ ಪರಿವಾರವನ್ನು ಬೆಳೆಸಿಕೊಳ್ಳುತ್ತಿದ್ದಾನೆ. ಲೋಕದಲ್ಲಿ ಮರಣವೇ ಇಲ್ಲವೆಂದರೆ ನನಗೇನು ಕೆಲಸವಿದೆ ? ನಾನು ಪದಭ್ರಷ್ಟನಾಗುತ್ತಿದ್ದೇನೆ. ಅದರಿಂದ ನಾನು ನಿನ್ನೆಡೆಗೆ ಬಂದೆ.

**ಇಂದ್ರ:-** ಧರ್ಮರಾಜ, ಹಿಂದೆಯೆ ನಾನು ಯಯಾತಿಯ ಬಳಿಗೆ ದೂತನನ್ನು ಕಳಿಸಿದ್ದೆ. 'ಸ್ವರ್ಗಕ್ಕೆ ಬಂದುಬಿಡೆಂದು ಹೇಳಿದರೆ ಆತ 'ನನಗೆ ಸ್ವರ್ಗ ಸುಖ ಬೇಡ. ಸ್ವರ್ಗಕ್ಕೆ ಬರುವುದಿಲ್ಲ. ಭೂಮಿಯನ್ನೇ ಸ್ವರ್ಗವನ್ನಾಗಿ ಮಾಡುವೆನೆಂದು. ಅವನ ಧರ್ಮಾಚರಣೆಯಿಂದ ನಾನೂ ಪದಭ್ರಷ್ಟನಾಗುವೆನೋ ಎಂದು ಭೀತನಾಗಿದ್ದೇನೆ.

**ಧರ್ಮ :-** ಏನಾದರೊಂದು ಉಪಾಯದಿಂದ ಅವನನ್ನಿಲ್ಲಿಗೆ ತರಿಸು.

ಇಂದ್ರ ಕ್ಷಣಕಾಲಯೋಚಿಸಿ ಮನ್ಮಥ-ರತಿ-ಮಕರಂದರನ್ನೂ, ಗಂಧರ್ವರನ್ನೂ ಕರೆಸಿದ. ನೀವೂ ಭೂಲೋಕಕ್ಕೆ ಹೋಗಿ ಏನಾದರೊಂದು ಉಪಾಯದಿಂದ ಯಯಾತಿ ಮಹಾರಾಜನನ್ನು ಇಲ್ಲಿಗೆ ಕರೆದುಕೊಂಡು ಬನ್ನಿರೆಂದ.

ಅವರೆಲ್ಲರೂ ಆಗಲಿ ಎಂದು ಹೇಳಿ ಭೂಲೋಕಕ್ಕೆ ತೆರಳಿದರು. ಯಯಾತಿಯ ಆಸ್ಥಾನದಲ್ಲಿ ನಟರ ವೇಷದಿಂದ ಕಾಣಿಸಿಕೊಂಡು ನಾವು ಒಂದು ನೃತ್ಯನಾಟಕ ವನ್ನಾಡುವೆವು ಎಂದರು. ರಾಜ, ಸಭೆಯನ್ನು ಸಿದ್ಧಪಡಿಸಿ ತಾನೂ ಸ್ವತಃ ಬಂದು ಕುಳಿತ.

ನಟರು ವಾಮನಾವತಾರದ ಕಥೆಯನ್ನು ಆಡಿ ತೋರಿಸಿದರು. ಈ ನಾಟಕದಲ್ಲಿ ಜರೆ ಅನುಪಮ ಸುಂದರಿಯಾಗಿ ಸುಸ್ವರದಿಂದ ಹಾಡಿದಳು. ಅವಳ ಗೀತ ವಿಲಾಸ, ಲಲಿತ ಹಾಸ್ಯ, ಮಧುರಾಲಾಪಗಳ ಜತೆಗೆ ಮನ್ಮಥನ ಮಾಯೆಯೂ ಸೇರಿ ರಾಜನನ್ನು ಮೋಹ ಕವಿಯುವಂತೆ ಮಾಡಿದುವು. ನಾಟಕದ ವಸ್ತು ದಿವ್ಯವಾಗಿತ್ತು. ಬಲಿ, ವಿಂಧ್ಯಾವಳಿ, ವಾಮನ ಪಾತ್ರಗಳು ನೈಜ ಅಭಿನಯಗಳಿಂದ ಪ್ರೇಕ್ಷಕರನ್ನು ಆಕರ್ಷಿಸಿದ್ದುವು. ಸ್ವಯಂ ಮನ್ಮಥನೇ ಸೂತ್ರಧಾರನಾಗಿದ್ದ. ವಸಂತನೆ ಪಾರಿಪಾರ್ಶ್ವಿಕ, ರತಿ ನಟಿ ವೇಷ ಧರಿಸಿದ್ದಳು. ನೇಪಥ್ಯದಲ್ಲಿ ಮಕರಂದನಿದ್ದ ನಾಟಕದ ನೃತ್ಯಗೀತಗಳು ರಾಜನನ್ನು ಪರವಶಗೊಳಿಸಿದುವು.

**ಸುಕರ್ಮ :-** ಕಾಮನ ಗೀತ ಲಾಸ್ಯ ಲಲಿತ ಹಾಸ್ಯಗಳಿಗೆ ಮುಗ್ಧನಾದ ರಾಜ ನಡುವೆ ಮಲಮೂತ್ರ ವಿಸರ್ಜನೆ ಮಾಡಿದ ಬಳಿಕ ಕೈಕಾಲು ತೊಳೆದುಕೊಳ್ಳದೆ ಆತುರದಿಂದ ಬಂದು ಸಭೆಯಲ್ಲಿ ಕುಳಿತ. ಒಡನೆ ಜರೆ ಅವನ ಶರೀರವನ್ನು ಪ್ರವೇಶಿಸಿತು. ನಾಟಕ ಮುಗಿಯಿತು. ರಾಜ ಜರೆಗೆ ವಶನಾದ, ಕಾಮಾಸಕ್ತಿಯನ್ನು ತಳೆದ. ಇಂದ್ರನ ಮನೋರಥ ಫಲಿಸಿತು. ಮನ್ಮಥ ಕೃತಕೃತ್ಯನಾದ.

ಒಂದು ದಿನ ರಾಜ ಕಾಡಿನಲ್ಲಿ ಬೇಟೆಯಾಡುತ್ತ ಒಂದು ಸುಂದರವಾದ ಜಿಂಕೆಯನ್ನು ಕಂಡ. ನಾಕುಕೊಂಬುಗಳು. ಚಿನ್ನದಂತೆ ಹೊಳೆವ ಮೈ. ಸಾಧಾರಣವಾಗಿ ಜಿಂಕೆಗಳು

ಹೀಗಿರುವುದಿಲ್ಲ. ಯಾರೋ ದೈತ್ಯನಿರಬಹುದೆಂದು ಬಿಲ್ಲಿಗೆ ಬಾಣವನ್ನು ಹೂಡಿ ಬೆನ್ನಟ್ಟಿ ಧಾವಿಸಿದ. ಬಹು ದೂರದವರೆಗೆ ವೇಗದಿಂದ ರಥವನ್ನೋಡಿಸಿದರೂ ಜಿಂಕೆ ವಶವಾಗಲಿಲ್ಲ. ರಾಜನು ಆಯಾಸಗೊಂಡ. ಅಷ್ಟರಲ್ಲಿ ಜಿಂಕೆ ಅದೃಶ್ಯವಾಯಿತು. ಎದುರಿಗೆ ನಂದನವನದಂತೆ ಶೋಭಿಸುವ ಒಂದು ಅದ್ಭುತವನವನ್ನು ರಾಜನು ಕಂಡ. ಅಲ್ಲಿಯೆ ಚಂದನ, ಅಶೋಕ, ಬಕುಲ, ಪುನ್ನಾಗ ಮೊದಲಾದ ಮರಗಳಿಂದ, ಹೂಬಳ್ಳಿಗಳಿಂದ ಸುತ್ತುವರಿದ ವಿಶಾಲವಾದ ಒಂದು ಸರಸ್ಸನ್ನೂ ಕಂಡ. ಅದರ ತಿಳಿನೀರಲ್ಲಿ ಅರಳಿದ ತಾವರೆಗಳು, ಮಧುರವಾಗಿ ಕೂಗುವ ಹಂಸ, ಕಾರಂಡವ ಮುಂತಾದ ನೀರಹಕ್ಕಿಗಳು, ಮದವೇರಿ ಝೇಂಕರಿಸುವ ದುಂಬಿಗಳು ಇವನ್ನು ನೋಡಿ ರಾಜನು ರಥದಿಂದಿಳಿದು ಅಲ್ಲಿಯೇ ಕೊಳದದಂಡೆಯ ಮಾವಿನ ನೆರಳಲ್ಲಿ ಕುಳಿತು ಶ್ರಮ ಪರಿಹಾರಮಾಡಿಕೊಂಡ. ಬಳಿಕ ಆ ಕೊಳದಲ್ಲಿ ಸ್ನಾನಮಾಡಿದ. ತಂಪಾದ, ತಾವರೆ ಹೂವಿನ ಸುವಾಸನೆಯಿಂದ ಯುಕ್ತವಾದ ಆ ನೀರನ್ನು ಕುಡಿದು ಅಮೃತದ ಸವಿಯನ್ನು ಅದರಲ್ಲಿ ಕಂಡು ಆನಂದಿಸಿದ.

ಆಗ ಒಂದು ಮಧುರ ಸಂಗೀತದ ಧ್ವನಿ ಕೇಳಿಸಿತು. ಯಾರೋ ಒಂದು ಹೆಣ್ಣಿನ ಕೋಮಲ ಕಂಠಧ್ವನಿ. ಯಾರಿರಬಹುದೆಂದು ರಾಜ ಯೋಚಿಸುತ್ತ ನೋಡುತ್ತಿದ್ದಂತೆ ಓರ್ವ ಹೆಣ್ಣು ರಾಜನ ಕಡೆಗೆ ಬಂದಳು. ಪುಷ್ಟವಾದ ಎದೆ, ನಿತಂಬಗಳುಳ್ಳ ಆ ಚೆಲುವೆ ಎಲ್ಲ ಆಭರಣಗಳಿಂದ ಸಿಂಗರಿಸಿಕೊಂಡು ಇನ್ನೂ ಹೆಚ್ಚಿನ ಶೋಭೆಯಿಂದ ಕಂಗೊಳಿಸುತ್ತಿದ್ದಳು.

ರಾಜ ಕೇಳಿದ, 'ಯಾರು ನೀನು ? ಇಲ್ಲಿಗೇಕೆ ಬಂದೆ ?' ಆಕೆ ಏನೂ ಪ್ರತ್ಯುತ್ತರ ಕೊಡದೆ ನಕ್ಕು ಹಾಗೇ ಹೊರಟು ಹೋದಳು. ರಾಜನಿಗೆ ಆಶ್ಚರ್ಯವಾಯಿತು. ''ನಾನು ಮಾತನಾಡಿಸಿದರೂ ಏನೂ ಆಡದೆ ಹೊರಟು ಹೋದಳು ! ಆ ಜಿಂಕೆಯಂತೆ ಇದೂ ಒಂದು ದಾನವರ ಮಾಯೆ ಇರಬಹುದು'' ಎಂದುಕೊಂಡು ಸುಮ್ಮನೆ ಕುಳಿತ.

ತಿರುಗಿ ಆ ಸಂಗೀತದ ಧ್ವನಿ ಕೇಳಿಸಿತು. ಈಗ ರಾಜನೆದ್ದು ಧ್ವನಿ ಬರುತ್ತಿದ್ದ ಕಡೆಗೆ ನಡೆದ. ಅಲ್ಲಿ ಒಂದು ತಾವರೆಯ ಮಧ್ಯದಲ್ಲಿ ದಿವ್ಯ ಲಕ್ಷಣಗಳಿಂದ ಕೂಡಿದ ಚೆಲುವೆಯೊಬ್ಬಳು ಕುಳಿತು ವೀಣೆ ನುಡಿಸುತ್ತ ಹಾಡುತ್ತಿದ್ದಳು. ದಿವ್ಯಾಭರಣಭೂಷಿತಳಾದ ಆ ವಿಶಾಲಾಕ್ಷಿಯನ್ನು ರಾಜ ಕಂಡು ಇಂಥ ಚೆಲುವೆ ಲೋಕದಲ್ಲಿ ಇನ್ನಾರೂ ಇಲ್ಲವೆಂದುಕೊಂಡ. ಒಡನೆ ಹಿಂದೆ ನಾಟಕ ನೋಡುತ್ತಿದ್ದಾಗ ರಾಜನ ಶರೀರದಲ್ಲಿ ಜರೆಯೊಂದಿಗೆ ಪ್ರವೇಶಿಸಿದ್ದ ಮನ್ಮಥ ಪ್ರಕಟನಾದ. ಬೆಂಕಿಗೆ ತುಪ್ಪ ಸುರಿದರೆ ಅದು ಪ್ರಜ್ವಲಿಸುವಂತೆ, ಆ ಸುಂದರಿಯ ದರ್ಶನವಾದೊಡನೆ ರಾಜನ ಮೈಯಲ್ಲಿ ಸುಪ್ತವಾಗಿದ್ದ ಕಾಮ ಉದ್ದೀಪಿತವಾಯಿತು, ಪ್ರಜ್ವಲಿಸಿ ದೇಹವನ್ನು ಸುಡಲು ತೊಡಗಿತು. ಆಕೆಯನ್ನೊಮ್ಮೆ ಆಲಿಂಗಿಸಿದರೆ ತನ್ನ ಜನ್ಮ ಸಾರ್ಥಕವಾಗುವುದೆಂದುಕೊಂಡ ರಾಜ. ಆದರೆ ಹೇಗೆ ?

ರಾಜನಾಕೆಯನ್ನು ಕೇಳಿದ, 'ಯಾರು ನೀನು ?'

ಅಷ್ಟರಲ್ಲಿ ಅವನು ಹಿಂದೆ ನೋಡಿದ ಹೆಣ್ಣು ಅಲ್ಲಿಗೆ ಬಂದಿದ್ದಳು. ಅವಳನ್ನೂ ಕೇಳಿದ ರಾಜ, 'ಯಾರೀಕೆ ?. ದೇವಿ, ಹೇಳಬಾರದೆ ? 'ನಾನು ನಹುಷ ಮಹಾರಾಜನ ಮಗ, ಸಪ್ತದ್ವೀಪಗಳ ಅಧಿಪತಿ, ಮೂಲೋಕದಲ್ಲಿ ಕೀರ್ತಿಪಡೆದ ಯಯಾತಿ ಮಹಾರಾಜ ನಾನು' ಅವಳು ಈಗಲೂ ಉತ್ತರ ಕೊಡಲಿಲ್ಲ.

'ದೇವಿ, ನನಗೆ ನಿನ್ನ ಅಂಗಸಂಗವನ್ನು ನೀಡು. ನೀನೇನು ಬಯಸಿದ್ದರೂ ಅದನ್ನು ನಾನು ಕೊಡುವೆ. ಕಾಮನ ಪೀಡೆಯಿಂದ ಸಾಯುತ್ತಿದ್ದೇನೆ. ದಯೆದೋರಿ ಕಾಪಾಡು. ನಿನಗೆ ಶರಣಾಗಿದ್ದೇನೆ. ನಿನಗೇ ರಾಜ್ಯವನ್ನೇ ಕೊಡುವೆ. ಸಮಸ್ತ ಭೂಮಂಡಲವನ್ನೇ ಕೊಡುವೆ. ನಿನ್ನ ಅಂಗಸಂಗವನ್ನು ಕೊಡುವಿಯಾದರೆ ಮೂರುಲೋಕಗಳನ್ನೇ ನಿನಗರ್ಪಿಸಬಲ್ಲೆ' ಎಂದು ಹೂವಿನ ಮೇಲೆ ಕುಳಿತ ಹೆಣ್ಣನ್ನು ಬೇಡಿದ ರಾಜ.

ಆಕೆ ಬಳಿಯಲ್ಲಿ ನಿಂತಿದ್ದ ಗೆಳತಿ ವಿಶಾಲೆಯೊಡನೆ ಅಂದಳು. "ಸಖಿ, ನನ್ನ ಹೆಸರು, ಸ್ಥಳ, ತಂದೆ-ತಾಯಿಗಳ ಕುರಿತು ಎಲ್ಲವನ್ನೂ ಈ ರಾಜನಿಗೆ ಹೇಳು. ನನ್ನ ಅಭೀಷ್ಟವನ್ನೂ ತಿಳಿಸು." ವಿಶಾಲೆ ರಾಜನ ಕಡೆಗೆ ತಿರುಗಿ ಮಧುರವಾಗಿ ನುಡಿದಳು.

**ವಿಶಾಲೆ :-** ರಾಜನೆ, ಹಿಂದೆ ಶಿವನು ಮನ್ಮಥನನ್ನು ಸುಟ್ಟಾಗ ರತಿ ಗೋಳಿಟ್ಟಳು. ಆಗ ಅವಳು ಈ ಕೊಳದಲ್ಲಿ ವಾಸಿಸುತ್ತಿದ್ದಳು. ಅವಳ ಶೋಕಾವೇಗವನ್ನು ಕಂಡು ದೇವತೆಗಳು ಮರುಕಗೊಂಡು ಶಿವನನ್ನು ಪ್ರಾರ್ಥಿಸಿಕೊಂಡರು.

"ಮಹಾದೇವ, ಮನ್ಮಥನನ್ನು ತಿರುಗಿ ಬದುಕಿಸು. ಅವನನ್ನಗಲಿದ ಈ ರತಿಯ ಗೋಳನ್ನು ನೋಡಲಾರೆವು. ನಮ್ಮ ಮೇಲಿನ ಪ್ರೀತಿಯಿಂದ ಅವಳ ಮನ್ಮಥನನ್ನು ಅವಳಿಗೇ ಹಿಂತಿರುಗಿಸು."

ಶಿವನೆಂದ, "ಆಗಲಿ, ಮನ್ಮಥನನ್ನು ಬದುಕಿಸುತ್ತೇನೆ. ಆದರೆ ಅವನಿಗೆ ಸ್ಥೂಲ ಶರೀರವಿರುವುದಿಲ್ಲ. ದಿವ್ಯ ಶರೀರದಿಂದ ಇದ್ದು ಮೊದಲಿನಂತೆ ಪಂಚಬಾಣನಾಗುತ್ತಾನೆ. ಮಿತ್ರನಾಗಿರುತ್ತಾನೆ."

ಹೀಗೆ ಶಿವನ ಅನುಗ್ರಹದಿಂದ ಮನ್ಮಥ ತಿರುಗಿ ಬದುಕಿದ. ರತಿಯನ್ನು ಕಾಣಲು ಈ ಕೊಳಕ್ಕೆ ಬಂದ. ಆತ ಬರುವುದಕ್ಕೆ ಮುನ್ನ ರತಿಯು ಪತಿ ವಿರಹತಪ್ತಳಾಗಿ ಕಣ್ಣೀರು ಸುರಿಸುತ್ತಿದ್ದಾಗ ನೀರಿಗೆ ಬಿದ್ದ ಆ ಕಂಬನಿಗಳಿಂದ ಮಹಾಶೋಕ, ಜರೆ, ವಿಯೋಗ, ಮೂರ್ಛೆ, ಕಾಮಜ್ವರ, ವಿಭ್ರಮ, ಪ್ರಲಾಪ, ಉನ್ಮಾದ, ಮೃತ್ಯು ಇವು ಹುಟ್ಟಿ, ಮೂರ್ತಿಮತ್ತಾಗಿ ರತಿಯ ಬಳಿ ನಿಂತಿದ್ದುವು. ಯಾರೋ ಹೇಳಿದರು, ಮನ್ಮಥ ತಿರುಗಿ ಬದುಕಿ ಬಂದನೆಂದು. ರತಿ ಕಣ್ತೆರೆದು ನೋಡಿದಳು, ಇದಿರಿನಲ್ಲಿ ಮನ್ಮಥ ನಿಂತಿದ್ದ ಆನಂದಬಾಷ್ಪ ಕಣ್ಣಿಂದ ಸುರಿಯಿತು. ಆ ಬಾಷ್ಪಬಿಂದುಗಳು ನೀರಲ್ಲಿ ಬಿದ್ದಾಗ ಪ್ರೀತಿ, ಖ್ಯಾತಿ, ಲಜ್ಜೆ, ಮಹಾನಂದ, ಶಾಂತಿ, ಲೀಲೆ, ಕ್ರೀಡೆ ಇವು ಆವಿರ್ಭವಿಸಿದುವು. ಕೊನೆಗೆ ರತಿಯ ಎಡಗಣ್ಣಿನಿಂದ ಸುರಿದ ಆನಂದದ ಅಶ್ರುಬಿಂದು ನೀರಿಗೆ ಬಿದ್ದಾಗ ಅಲ್ಲಿ ಈ ತಾವರೆ ಹುಟ್ಟಿತು. ತಾವರೆಯಿಂದ ಈ ನಮ್ಮ ಸಖಿ ಅಶ್ರುಬಿಂದುಮತಿ ಜನಿಸಿದಳು. ನಾನು ವಿಶಾಲೆ, ವರುಣನ ಮಗಳು. ರಾಜನೆ, ಈಕೆ ಈಗ ಯೋಗ್ಯಪತಿಯನ್ನು ಹೊಂದುವುದಕ್ಕಾಗಿ ತಪಸ್ಸು ಮಾಡುತ್ತಿದ್ದಾಳೆ.

**ಯಯಾತಿ :-** ನನ್ನನ್ನೇ ಈಕೆ ವರಿಸಲಿ. ಇವಳು ಬಯಸಿದುದನ್ನೆಲ್ಲ ನಾನು ಕೊಡುವೆ. ದೇವಿ, ಈಕೆ ನನ್ನವಳಾಗುವಂತೆ ಮಾಡು.

**ವಿಶಾಲೆ :-** ರಾಜನೆ, ದೇವರಾಜ ಇಂದ್ರನಂತೆ, ನಾರಾಯಣನಂತೆ ಇರುವ ಧರ್ಮಿಷ್ಠನಾದ, ಉತ್ತಮಜ್ಞಾನಿಯಾದ, ಸುಂದರನಾದ, ಯೌವನಶಾಲಿಯಾದ, ಮೂರು ಲೋಕದಲ್ಲಿ ಪ್ರಸಿದ್ಧನಾದ ಒಬ್ಬ ಪತಿಯನ್ನು ವರಿಸಬೇಕೆಂದು ಈಕೆ ನಿರ್ಧರಿಸಿದ್ದಾಳೆ.

**ಯಯಾತಿ :-** ಅಂತಹ, ನಾನೆ ಇಲ್ಲಿಗೆ ಬಂದಿದ್ದೇನೆ ನೋಡು. ಇವಳಿಗಾಗಿಯೆ ನನ್ನನ್ನು ಆ ಸೃಷ್ಟಿಕರ್ತ ಹುಟ್ಟಿಸಿದ್ದಾನೆ. ಸಂಶಯವಿಲ್ಲ.

**ವಿಶಾಲೆ :-** ನೀನು ಅಂಥವನೆ, ಸಂಶಯವಿಲ್ಲ. ಆದರೆ ಒಂದು ದೋಷ ನಿನ್ನಲ್ಲಿದೆ.

**ಯಯಾತಿ :-** ಆ ದೋಷವೇನು ? ದಯವಿಟ್ಟು ಹೇಳು.

**ವಿಶಾಲೆ :-** ನಿನಗೆ ನಿನ್ನ ದೋಷ ತಿಳಿಯದೆ ?. ನೀನು ಮುದುಕ. ನಿನ್ನನ್ನು ಈಕೆ ವರಿಸಲಾರಳು.

ಯಯಾತಿ ಮಹಾರಾಜ ಇದನ್ನು ಕೇಳಿ ಬಹು ದುಃಖದಿಂದ ಹೇಳಿದ.

**ಯಯಾತಿ :-** ಮುದಿತನ ನನ್ನಲ್ಲಿ ಯಾರ ಸಂಸರ್ಗದಿಂದಲೋ ಹೇಗೋ ಬಂದು ಬಿಟ್ಟಿದೆ. ಆದರೆ ಮೂರು ಲೋಕದಲ್ಲಿರುವ ಯಾವ ವಸ್ತುವನ್ನೂ ಆಕೆ ಬಯಸಿದರೆ ನಾನು ಕೊಡಬಲ್ಲೆ.

**ವಿಶಾಲೆ :-** ಮುಪ್ಪನ್ನು ದೂರಮಾಡಿಕೊಂಡೆಯಾದರೆ ಮಾತ್ರ ಈಕೆ ನಿನ್ನವಳಾಗುವಳು. ಇದು ನಿಶ್ಚಯ. ರಾಜನೆ, ಮಕ್ಕಳು, ಸೋದರರು, ಭೃತ್ಯರು ಇವರಲ್ಲಿ ಮುದಿತನವನ್ನಿಟ್ಟು ಅವರಿಂದ ಯೌವನವನ್ನು ಪಡೆಯುವುದುಂಟೆಂದು ಹೇಳುತ್ತಾರೆ. ಹೀಗೆ ಪುಣ್ಯವನ್ನು ಇನ್ನೊಬ್ಬರಿಗೆ ದಾನಮಾಡುವುದುಂಟು. ಈಗ ನೀನು ನಿನ್ನ ಮಕ್ಕಳಲ್ಲಿ ಯಾರಾದರೊಬ್ಬರಿಂದ ಯೌವನ ಪಡೆಯಬಾರದೇಕೆ ? ನಿನಗೆ ಸುಖಬೇಕಿದ್ದರೆ ಹಾಗೇ ಮಾಡು.

**ಯಯಾತಿ :-** ಸರಿ, ಹಾಗೆ ಮಾಡುವೆ.

ರಾಜ ಅರಮನೆಯನ್ನು ಸೇರಿ ತನ್ನ ನಾಲ್ವರು ಮಕ್ಕಳನ್ನೂ ಕರೆದು ಹೇಳಿದ.

**ಯಯಾತಿ :-** ಮಕ್ಕಳೆ, ನೀವು ನನಗೆ ಸುಖ ಕೊಡುವಿರಾ ?.

**ಮಕ್ಕಳು :-** ತಂದೆ ಏನೇ ಹೇಳಲಿ, ಮಕ್ಕಳು ಅದನ್ನು ನಡೆಸಿಕೊಡಬೇಕು. ನೀನು ಹೇಳು. ನಾವು ನಡೆಸಿಕೊಡುತ್ತೇವೆ.

**ಯಯಾತಿ :-** ನಿಮ್ಮಲ್ಲಿ ಯಾರಾದರೊಬ್ಬರು ಧೈರ್ಯದಿಂದ ನನ್ನ ಮುಪ್ಪನ್ನು ಸ್ವೀಕರಿಸಿ ಯೌವನವನ್ನು ಕೊಡಬೇಕು. ಅವನಿಗೆ ನನ್ನ ರಾಜ್ಯ, ಧನ, ಧಾನ್ಯ, ಸಂಪತ್ತು ಕೊಡುತ್ತೇನೆ. ಉತ್ತಮ ಸಂತತಿ, ಯಶಸ್ಸು, ಕೀರ್ತಿ ಅವನದಾಗುವುದು. ನಾನು ಕಾಮಾಗ್ನಿಯಿಂದ ಬೆಂದು ಹೋಗುತ್ತಿದ್ದೇನೆ. ನಾನೀ ರೀತಿ ನಿಮ್ಮನ್ನು ಕೇಳುತ್ತಿದ್ದೇನೆ.

**ಮಕ್ಕಳು :-** ಧರ್ಮಿಷ್ಠನಾದ ನಿನ್ನಲ್ಲಿ ಇಂಥ ಚಾಪಲ್ಯ ಹೇಗುಂಟಾಯಿತು ?

**ಯಯಾತಿ :-** ಹಿಂದೊಮ್ಮೆ ಕೆಲವು ಜನ ನಟರು ಬಂದು ನನ್ನ ಮುಂದೆ ನಾಟಕವಾಡಿ ತೋರಿದರು. ಅವರಿಂದ ನನಗೀ ಮೋಹ, ಮುದಿತನ, ಕಾಮಾಸಕ್ತಿಗಳು ಬಂದವು. ಈ ನಡುವೆ ಓರ್ವ ಚೆಲುವೆಯನ್ನು ನಾನು ಕಂಡೆ. ಆವಳ ಸಖಿ ಹೇಳಿದಳು. 'ಮುಪ್ಪನ್ನು ದೂರ ಮಾಡಿಕೊಂಡೆಯಾದರೆ ಮಾತ್ರ ಈಕೆ ನಿನ್ನವಳಾಗುವಳು' ಎಂದು. ನಾನು 'ಸರಿ ಹಾಗೆ ಮಾಡುವೆ'ನೆಂದು ಹೇಳಿ ನಿಮ್ಮಲ್ಲಿಗೆ ಬಂದಿದ್ದೇನೆ.

**ತುರು :-** ಧರ್ಮ ಸಾಧನವಾದ ಶರೀರವನ್ನು ತಂದೆ-ತಾಯಿಗಳು ನೀಡುವುದರಿಂದ ಅವರ ಸೇವೆ ಮಾಡಬೇಕು, ನಿಜ. ಆದರೆ ಯೌವನ ದಾನ ಮಾಡಲು ಇದು ಕಾಲವಲ್ಲ.

ಆಯುಸ್ಸಿನ ಮೊದಲ ಭಾಗ ವಿಷಯ ಭೋಗಕ್ಕೆ ಉಚಿತವಾದುದು. ನಿನಗೆ ಈಗ ಆ ಕಾಲ ಕಳೆದುಹೋಗಿದೆ.

ಯಯಾತಿ ಇದನ್ನು ಕೇಳಿ ಕೋಪದಿಂದ ಮಗನಿಗೆ ಶಾಪವಿತ್ತ.

**ಯಯಾತಿ** :- ನನ್ನ ಮಾತು ನಡೆಸಿಕೊಡಲಾರದ ನೀನು ಪಾಪಿ. ಸರ್ವಧರ್ಮ ಬಹಿಷ್ಕೃತನಾಗು. ಬ್ರಹ್ಮಹತ್ಯಾ ಪಾತಕಿ ಎನಿಸು. ಜ್ಞಾನಹೀನನಾಗು, ಕುಷ್ಠರೋಗದಿಂದ ಬಳಲುತ್ತಿರು. ನಿನ್ನ ಮಕ್ಕಳು, ಮೊಮ್ಮಕ್ಕಳು ಎಲ್ಲರೂ ನಿನ್ನಂತೆ ಪಾಪಿಗಳಾಗಲಿ, ಮ್ಲೇಚ್ಛರೆನಿಸಲಿ.

ಯದು, ನೀನು ನನ್ನ ಮುದಿತನವನ್ನು ಕೊಳ್ಳು, ನನ್ನ ರಾಜ್ಯವನ್ನು ನಿಷ್ಕಂಟಕವಾಗಿ ಅನುಭವಿಸು.

**ಯದು**:- ಅಪ್ಪ, ಮುಪ್ಪಿನ ಭಾರವನ್ನು ಹೊರಲು ಈ ವಯಸ್ಸಿನಲ್ಲಿ ನನ್ನಲ್ಲಿ ಶಕ್ತಿಯಿಲ್ಲ.

**ಶೀತಮಧ್ವಾ ಕದನ್ನಂ ಚ ವಯೋತೀತಾಶ್ಚ ಯೋಷಿತಃ ।**
**ಮನಸಃ ಪ್ರಾತಿಕೂಲ್ಯಂ ಚ ಜರಾಯಾಃ ಪಂಚ ಹೇತವಃ ॥**

ಶೀತಬಾಧೆಯನ್ನು ಸಹಿಸಿಕೊಳ್ಳುವುದು. ಶಕ್ತಿಮೀರಿ ಪ್ರಯಾಣ ಮಾಡುವುದು. ಅಹಿತವಾದ ಆಹಾರ ಸೇವನೆಮಾಡುವುದು, ಮುದಿಹೆಣ್ಣುಗಳ ಸಂಗಮಾಡುವುದು. ಮನಸ್ಸಿನಲ್ಲಿ ಸದಾ ಚಿಂತೆ ಇಟ್ಟುಕೊಳ್ಳುವುದು ಇವು ಐದು ಮುಪ್ಪಿಗೆ ಕಾರಣಗಳು.

**ಯಯಾತಿ** :- ನಿನ್ನ ವಂಶದವರಿಗೆಂದೂ ರಾಜ್ಯ ಲಭಿಸದೆ ಹೋಗಲಿ. ಅವರೆಲ್ಲ ಬಲ, ತೇಜಸ್ಸು, ಕ್ಷಮೆ, ಕ್ಷಾತ್ರಧರ್ಮ ಇಲ್ಲದವರಾಗಲಿ.

**ಯದು** :- ನಾನು ನಿನ್ನ ಮಗ. ಏನೂ ಅಪರಾಧ ಮಾಡಿಲ್ಲ. ಆದರೂ ಶಾಪನೀಡಿರುವೆ. ನಿನ್ನಲ್ಲಿದಯೆ ಎಂಬುದು ಇರುವುದಾದರೆ ನನಗೆ ಅನುಗ್ರಹಮಾಡು.

**ಯಯಾತಿ** :- ಮಗನಾದವನು ತಂದೆಯ ದುಃಖವನ್ನು ಕಳೆಯಬೇಕು. ಅವನ ರಾಜ್ಯಭಾರದ ಹೊಣೆಯನ್ನು ಹೊರಬೇಕು. ಇವೆರಡನ್ನೂ ಒಲ್ಲದವನು ಏನೂ ಅಪರಾಧ ಮಾಡಿಲ್ಲವೆಂದರೆ ಹೇಗೆ ? ನಾನು ನಿನಗೆ ಅನುಗ್ರಹ ಮಾಡಲಾರೆ. ನೀನೇನು ಬೇಕಾದರೂ ಮಾಡಿಕೊ.

**ಯದು** :- ನನ್ನ ರಾಜ್ಯವನ್ನೂ ಕುಲವನ್ನೂ ನೀನು ಹಾಳುಮಾಡಿದೆ. ಇದರಿಂದ ನಾನು ದುಷ್ಟನಾಗುವೆ. ನನ್ನ ವಂಶದವರೆಲ್ಲ ಕ್ರೂರ, ಬಲಿಷ್ಠ ಮ್ಲೇಚ್ಛರಾಗಿ ಜನಿಸಿ ನಿನ್ನ ವಂಶದ ಕ್ಷತ್ರಿಯರ ರಾಜ್ಯ, ಸ್ತ್ರೀಯರು, ರತ್ನಗಳು ಇವೆಲ್ಲವನ್ನೂ ಅಪಹರಿಸಿ ಭೋಗಿಸುವರು.

**ಯಯಾತಿ** :- ನನ್ನ ವಂಶದವರನ್ನು ನಿನ್ನ ವಂಶ ದ್ವೇಷಿಸಿದರೆ ಚಂದ್ರ, ಸೂರ್ಯ, ಪೃಥ್ವಿ, ನಕ್ಷತ್ರಗಳಿರುವಷ್ಟು ಕಾಲ ಕುಂಭೀಪಾಕ, ರೌರವನರಕಗಳಲ್ಲಿ ಬೆಂದು ಹೋಗಲಿ.

ಕೋಪದ ಆವೇಶದಲ್ಲಿ ರಾಜನೀರೀತಿ ಶಪಿಸಿದರೂ ಮರುಗಳಿಗೆಯಲ್ಲಿ ಶಾಂತನಾಗಿ 'ಮುಂದೆ ನಿನ್ನ ವಂಶದಲ್ಲಿ ವಿಷ್ಣು ಅವತರಿಸಿದಾಗ ಅದು ಪರಿಶುದ್ಧವಾಗುವುದು' ಎಂದ.

ಯಯಾತಿಯ ಮಕ್ಕಳಲ್ಲಿ ಕುರು ಇನ್ನೂ ಎಳೆ ವಯಸ್ಸಿನವನು. ಮಕ್ಕಳೊಂದಿಗೆ ಆಟವಾಡುತ್ತಿದ್ದ. ಅವನನ್ನು ತಂದೆ ಕರೆಯಲಿಲ್ಲ. ಇನ್ನು ಉಳಿದವನೆಂದರೆ ಪೂರು ಅವನು ಭಕ್ತಿಯಿಂದ ನುಡಿದ.

**ಪೂರು :-** ರಾಜ್ಯವನ್ನು ನೀನೆ ಭೋಗಿಸು. ನಿನ್ನಾಜ್ಞೆಯನ್ನು ನಾನು ಪಾಲಿಸುವೆ. ನಿನ್ನ ಮುದಿತನವನ್ನು ನನಗೆ ಕೊಡು. ತರುಣನಾಗಿ, ಸ್ಫುರದ್ರೂಪಿಯಾಗಿ ಸಕಲಭೋಗಗಳನ್ನೂ ಅನುಭವಿಸು. ನೀನು ಬಯಸುವಷ್ಟು ಕಾಲ ಆ ನಿನ್ನ ಪ್ರೇಯಸಿಯೊಂದಿಗೆ ನಲಿಯುತ್ತಿರು. ನಾನು ಬದುಕುವಷ್ಟು ಕಾಲವೂ ಮುದಿತನವನ್ನು ಹೊತ್ತು ಬಾಳುವೆ.

ಯಯಾತಿಗೆ ಆನಂದವಾಯಿತು. ಪ್ರೀತಿಯಿಂದ ನುಡಿದ.

**ಯಯಾತಿ :-** ಮಗು, ನೀನೊಬ್ಬನೆ ನನ್ನಾಜ್ಞೆಯನ್ನು ಪಾಲಿಸಿದವನು. ನೀನೇ ರಾಜ್ಯವನ್ನು ಭೋಗಿಸು. ಅದನ್ನು ನಿನಗೇ ಕೊಟ್ಟಿದ್ದೇನೆ.

ತಂದೆ ಮಕ್ಕಳು ತಮ್ಮ ವಯಸ್ಸುಗಳನ್ನು ವಿನಿಮಯ ಮಾಡಿಕೊಂಡರು. ತಂದೆ ಯುವಕನಾದ, ಮಗ ಮುದುಕನಾದ. ಯಯಾತಿ ಮಹಾರಾಜನೀಗ ಹದಿನಾರು ವರುಷದ ನವತರುಣನ ರೂಪದಲ್ಲಿ. ಮನ್ಮಥನಿಗೆ ಸಮಾನ. ರಾಜ್ಯ, ಕೋಶ, ಬಲ, ಧನುಸ್ಸು, ಛತ್ರ, ಚಾಮರ, ವ್ಯಜನ, ಆಸನ, ಗಜ, ರಥ ಎಲ್ಲವೂ ಪೂರುವಿನದಾಯಿತು. ಇತ್ತ ಯಯಾತಿ ತರುಣನಾಗಿ ಅಶ್ರುಬಿಂದುಮತಿಯ ಬಳಿಗೆ ಬಂದ. ಸಖಿ ವಿಶಾಲೆ ಅಂದಳು, 'ರಾಜನೆ, ಇನ್ನೂ ಒಂದು ದೋಷ ನಿನ್ನಲ್ಲಿದೆ'. 'ಅದೇನು ಹೇಳು' ಎಂದ ಯಯಾತಿ.

**ವಿಶಾಲೆ :-** ರಾಜನೆ, ನಿನಗೆ ಈಗಾಗಲೆ ಶರ್ಮಿಷ್ಠೆ, ದೇವಯಾನಿಯರೆಂಬ ಇಬ್ಬರು ಮಡದಿಯರಿದ್ದಾರೆ. ಈಗ ನಿನ್ನನ್ನು ಹೇಗೆ ಅಶ್ರುಬಿಂದುಮತಿ ಹೇಗೆ ವರಿಸುವುದು ? ನೀನು ಚಂದನ ವೃಕ್ಷದಂತಿದ್ದರೆ ಈ ಇಬ್ಬರು ಸವತಿಯರು ನಿನ್ನನ್ನು ಬಳಸಿರುವ ಸರ್ಪಗಳು. ಬೆಂಕಿಗೆ ಹಾರಬಹುದು. ಬೆಟ್ಟದ ತುದಿಯಿಂದ ಬೀಳಬಹುದು. ರೂಪಸಿಯರಾದ ಸವತಿಯರ ಕಾಟವು ಮಾತ್ರ ಬೇಡ.

**ಯಯಾತಿ :-** ಅವರಿಬ್ಬರನ್ನೂ ನಾನು ಬಿಟ್ಟು ಬಿಡುವೆ.

**ಅಶ್ರುಬಿಂದುಮತಿ :-** ಇಂದಿನಿಂದ ನಿನ್ನ ರಾಜ್ಯಕ್ಕೂ ನಿನ್ನ ಶರೀರಕ್ಕೂ ನಾನೇ ಸ್ವಾಮಿನಿ. ನಾನು ಹೇಳುವ ಎಲ್ಲ ಕಾರ್ಯವನ್ನೂ ನೀನು ನಡೆಸಿ ಕೊಡಬೇಕು. ಹೀಗೆ ನನ್ನ ಕೈಯಲ್ಲಿ ಕೈಯಿಟ್ಟು ಮಾತುಕೊಡು.

**ಯಯಾತಿ :-** ಇನ್ನು ಮುಂದೆ ನಿನ್ನನ್ನುಳಿದು ಇನ್ನಾರೂ ನನಗೆ ಮಡದಿಯರಿಲ್ಲ. ರಾಜ್ಯವೂ ಕೋಶವೂ ನಿನ್ನದು. ನನ್ನ ಶರೀರವೂ ನಿನ್ನೊಬ್ಬಳದು. ನೀನು ಹೇಳುವ ಎಲ್ಲ ಕಾರ್ಯವನ್ನೂ ನಾನು ನಡೆಸುವೆ. ಇಗೊ ನನ್ನ ಕೈಯನ್ನು ನಿನ್ನ ಕೈಯಲಿಡುವೆ.

**ಅಶ್ರುಬಿಂದುಮತಿ :-** ಇಂದಿನಿಂದ ನಾ ನಿನ್ನವಳು.

ಯಯಾತಿ ಬಹು ಸಂತೋಷದಿಂದ ಗಾಂಧರ್ವ-ವಿವಾಹ ಮಾಡಿಕೊಂಡ. ಸಮುದ್ರತೀರ, ವನ, ಉಪವನ, ಪರ್ವತ, ನದಿಗಳಂಥ ಎಲ್ಲ ಸುಂದರ ಪ್ರದೇಶಗಳಲ್ಲಿ ವಿಹರಿಸಿದರು. ಹೀಗೆ ಇಪ್ಪತ್ತು ಸಾವಿರ ವರ್ಷಗಳ ಕಾಲ ಯಯಾತಿಗೆ ಮೋಹ ಕವಿದಿತ್ತು. ಇಂದ್ರನಿಗಾಗಿ ಮನ್ಮಥ ನಡೆಸಿದ ಪ್ರಯತ್ನ ಸಫಲವಾಯಿತು. ಯಯಾತಿ ಹಗಲು-ರಾತ್ರಿಯೆನ್ನದೆ ಸದಾ ಪ್ರೇಯಸಿಯ ತೋಳತೆಕ್ಕೆಯಲ್ಲಿ ಮುಗ್ಧನಾಗಿ ಇರುತ್ತಿದ್ದ. ಕಣ್ ಸೆಳೆವ ಕಣ್‌ಗಳ ಆ ಕಾಮಕನ್ಯೆಗೆ ವಶನಾಗಿದ್ದ. ಒಂದು ದಿನ ಆಕೆ ಹೇಳಿದಳು.

**ಅಶ್ರುಬಿಂದುಮತಿ :-** ಪ್ರಿಯ, ನನ್ನದೊಂದು ಬಯಕೆಯಿದೆ ನೀನು ಅಶ್ವಮೇಧ ಯಾಗವನ್ನು ಮಾಡಬೇಕು.

ಯಯಾತಿ ಆಗಲೆಂದು ಹೇಳಿ ಮಗ ಪೂರುವಿಗೆ ಹೇಳಿ ಕಳಿಸಿದ. ಒಡನೆ ಆತ ಬಂದು ಅವರಿಬ್ಬರ ಕಾಲುಗಳಿಗೆ ಬಿದ್ದು ಕೈ ಮುಗಿದು ಹೇಳಿದ. 'ನಾನೇನು ಮಾಡಬೇಕೆಂದಾಜ್ಞಾಪಿಸಿರಿ. ನಾನು ನಿಮ್ಮ ಸೇವಕ'.

**ಯಯಾತಿ** :- ನಾನು ಅಶ್ವಮೇಧಯಾಗಮಾಡಲು ಸಂಕಲ್ಪಿಸಿದ್ದೇನೆ. ಅದಕ್ಕೆ ಬೇಕಾದ ಎಲ್ಲ ಏರ್ಪಾಡುಗಳನ್ನೂ ಮಾಡು. ಬ್ರಾಹ್ಮಣರನ್ನು, ಋತ್ವಿಜರನ್ನು ಆಹ್ವಾನಿಸು. ರಾಜರುಗಳಿಗೆ ಕರೆ ಕಳುಹಿಸು.

ಪೂರು ತಂದೆ ಹೇಳಿದಂತೆ ಎಲ್ಲವನ್ನೂ ಮಾಡಿದ. ಯಯಾತಿ ಕಾಮಕನ್ಯೆಯೊಡನೆ ಯಜ್ಞದೀಕ್ಷಿತನ ಎಲ್ಲ ವಿಧದ ದಾನಗಳನ್ನಿತ್ತು ಯಜ್ಞ ಪೂರೈಸಿದ. 'ಇನ್ನೇನು ನಿನ್ನ ಬಯಕೆ ? ಅದೆಷ್ಟೇ ದುಃಸಾಧ್ಯವಿರಲಿ ನಡೆಸಿಕೊಡುತ್ತೇನೆ. ಎಂದ ಯಯಾತಿ.

**ಅಶ್ರುಬಿಂದುಮತಿ** :- ರಾಜನೆ, ನನ್ನ ಇನ್ನೊಂದು ಬಯಕೆ. ಏನೆಂದರೆ ಇಂದ್ರಲೋಕ, ಬ್ರಹ್ಮಲೋಕ, ಶಿವಲೋಕ, ವಿಷ್ಣುಲೋಕಗಳನ್ನು ನಾನು ನೋಡಬೇಕು. ನಾ ನಿನ್ನ ಪ್ರಿಯೆ ಅಲ್ಲವೆ ?

**ಯಯಾತಿ** :- ಇದಕ್ಕೆ ಸ್ತ್ರೀಸ್ವಭಾವವೆಂದೆನ್ನಬೇಕು. ಇಂಥ ಚಾಪಲ್ಯವೇಕೆ, ಪ್ರಿಯೆ ? ಇಂದ್ರಾದಿ ಲೋಕಗಳನ್ನು ಸುಮ್ಮನೆ ನೋಡಲು ಹೋಗುವುದುಂಟೆ ? ಯಜ್ಞ, ದಾನ, ತಪಸ್ಸುಗಳು ಅದಕ್ಕೆ ಬೇಕು. ಈ ಶರೀರವನ್ನು ಬಿಡಬೇಕು. ಬೇರೆ ಏನಾದರೂ ಅಭೀಷ್ಟವಿದ್ದರೆ ಹೇಳು. ಇಂಥ ಅಸಾಧ್ಯ ವಿಷಯಗಳನ್ನು ಮಾತ್ರ ಹೇಳಬೇಡ.

**ಅಶ್ರುಬಿಂದುಮತಿ** :- ಬೇರೆ ರಾಜರಿಗೆ ಇದು ಅಸಾಧ್ಯವೆಂದರೆ ಒಪ್ಪತಕ್ಕ ಮಾತು. ನಿನಗೆ ಅಸಾಧ್ಯವಾದುದೂ ಒಂದಿದೆಯೇ ? ತಪಸ್ಸು, ದಾನ, ಯಜ್ಞ ಕ್ಷಾತ್ರ ತೇಜಸ್ಸುಗಳಲ್ಲಿ ನಿನಗೆ ಸಮಾನವಾದ ಮಾನವ ಯಾರಿದ್ದಾನೆ ? ಹೇಳು.

**ಪಿಪ್ಪಲ** :- ಕಾಮಕನ್ಯೆಯನ್ನು ಯಯಾತಿ ಮದುವೆಯಾದ ಮೇಲೆ ದೇವಯಾನಿ, ಶರ್ಮಿಷ್ಠೆಯರೇನು ಮಾಡಿದರು ?

**ಸುಕರ್ಮ** :- ಕಾಮಕನ್ಯೆಯನ್ನು ರಾಜನು ಅಂತಃಪುರಕ್ಕೆ ತಂದಿರಿಸಿದಂದಿನಿಂದಲೇ ದೇವಯಾನಿ ಆಕೆಯಲ್ಲಿ ವೈರ ತಳೆದಳು. ತನ್ನ ಮಕ್ಕಳಿಬ್ಬರಿಗೂ ಪತಿ ಶಾಪವಿತ್ತುದು ಆಕೆಯ ಸಲುವಾಗಿ ಎಂದು ದ್ವೇಷದಿಂದ ಆಕೆಯನ್ನು ನಾಶಪಡಿಸಲು ಎಲ್ಲ ಪ್ರಯತ್ನಗಳನ್ನೂ ಮಾಡಿದಳು. ಜೊತೆಗೆ ಶರ್ಮಿಷ್ಠೆಗೂ ದುರ್ಬೋಧನೆಮಾಡಿ ಅವಳ ಕೈಯಿಂದಲೂ ಆಕೆಗೆ ಕಿರುಕುಳ ಕೊಡಿಸಿದಳು. ವ್ರತ, ದಾನ, ಪುಣ್ಯಕರ್ಮಗಳನ್ನು ಅವರಿಬ್ಬರೂ ಆಕೆಯ ಅಳಿವಿಗಾಗಿ ಆಚರಿಸಿದರು. ಕಾಮಕನ್ಯೆ ಇದನ್ನು ತಿಳಿದು ರಾಜನಲ್ಲಿ ದೂರಿತ್ತಳು. ರಾಜ ಕ್ರುದ್ಧನಾಗಿ ಯದುವನ್ನು ಕರೆಸಿದ. ''ದೇವಯಾನಿ, ಶರ್ಮಿಷ್ಠೆಯರಿಬ್ಬರನ್ನೂ ಕೊಲ್ಲು'' ಎಂದಾಜ್ಞಾಪಿಸಿದ. ಯದು ಒಪ್ಪಲಿಲ್ಲ.

**ಯದು** :- ನಾನು ತಾಯಿಯನ್ನು ಕೊಲ್ಲಲಾರೆ. ಅದು ಮಹಾಪಾಪಕಾರ್ಯವೆಂದು ವೇದಜ್ಞರು ಹೇಳುತ್ತಾರೆ. ಇಬ್ಬರು ತಾಯಂದಿರೂ ನಿರಪರಾಧಿಗಳು. ತಾಯಿ ಸಾವಿರ ಅಪರಾಧವನ್ನೇ ಮಾಡಿರಲಿ, ಮಕ್ಕಳು ಕೊಲ್ಲಬಾರದು. ಸೋದರಿ ಏನೇ ತಪ್ಪು ಮಾಡಲಿ ಸೋದರನು ಅವಳನ್ನು ಕೊಲ್ಲಲಾಗದು.

ಯಯಾತಿ ಕುಪಿತನಾಗಿ ಶಾಪವಿತ್ತ, ''ಆ ನಿನ್ನ ತಾಯಂದಿರು ಮಾಡುವ ಕರ್ಮಗಳಲ್ಲಿ ಒಂದಂಶವನ್ನು ನೀನೂ ಉಣ್ಣು.''

**ಸುಕರ್ಮ** :- ದೇವೇಂದ್ರನಿಗೆ ಯಯಾತಿಯನ್ನು ಸ್ವರ್ಗಕ್ಕೆ ಕರೆಸುವುದೆಂತು ಎಂಬುದೆ ದೊಡ್ಡ ಚಿಂತೆ. ಮೇನಕೆಯನ್ನು ಕರೆದು ಹೇಳಿದ 'ಕಾಮಕನ್ಯೆಯ ಬಳಿಗೆ ಹೋಗಿ ಹೇಳು. ಏನಾದರೊಂದು ಉಪಾಯದಿಂದ ರಾಜನನ್ನು ಸ್ವರ್ಗಕ್ಕೆ ಕಳುಹಿಸು ಎಂದು.' ಮೇನಕೆ ಹಾಗೇ ಮಾಡಿದಳು. ಕಾಮಕನ್ಯೆ ಒಂದು ದಿನ ಸಿಟ್ಟಿನಿಂದ ರಾಜನೊಡನೆ ಹೀಗೆ ಹೇಳಿದಳು.

**ಅಶ್ರುಬಿಂದುಮತಿ** :- ರಾಜನೆ, ನೀನು ಕೊಟ್ಟ ಮಾತನ್ನು ನಡೆಸುವ ಸತ್ಯವಂತನೆಂದು ತಿಳಿದು ನಿನ್ನೊಡನೆ ಬಂದೆ. ಆ ಕೊಳದ ದಂಡೆಯಲ್ಲಿ ನೀನು ನಾನು ಹೇಳಿದುದನ್ನೆಲ್ಲ ನಡೆಸಿಕೊಡುವೆನೆಂದು ಭಾಷೆ ಕೊಟ್ಟಿರುವೆ ಈಗ ಅದಕ್ಕೆ ತಪ್ಪುತ್ತಿರುವೆ. ನನಗಿನ್ನು ನಿನ್ನ ಸಂಗ ಸಾಕು, ನಾನು ಹೋಗುವೆ.

**ಯಯಾತಿ** :- ಪ್ರಿಯೆ, ಮನುಷ್ಯಸಾಧ್ಯವಾದ ಯಾವುದೆ ಕಾರ್ಯವನ್ನು ನಾನು ನಡಿಸಿಕೊಡುವೆ. ಅಸಾಧ್ಯವಾದುದನ್ನು ಮಾತ್ರ ಹೇಳಬೇಡ.

**ಅಶ್ರುಬಿಂದುಮತಿ** :- ನಿನಗೆ ಅಸಾಧ್ಯವೆಂಬುದಿಲ್ಲವೆಂದು ತಿಳಿದು ನಿನ್ನನ್ನುವರಿಸಿದೆ. ವಿಷ್ಣುಭಕ್ತಾಗ್ರೇಸರ, ಸರ್ವಧರ್ಮ ಪರಿಪಾಲಕ, ನೀನು.

**ಯಸ್ಯ ವಿಷ್ಣುಪ್ರಸಾದೋಸ್ತಿ ಸ ಸರ್ವತ್ರ ಪರಿವ್ರಜೇತ್**
**ದುರ್ಲಭಂ ನಾಸ್ತಿ ರಾಜೇಂದ್ರ ತ್ರೈಲೋಕ್ಯೇ ಸಚರಾಚರೇ**

ವಿಷ್ಣುವಿನ ಅನುಗ್ರಹಕ್ಕೆ ಪಾತ್ರನಾದವನು ಯಾವ ಲೋಕಕ್ಕೂ ಹೋಗಬಲ್ಲ. ಅವನಿಗೆ ದುರ್ಲಭವಾದುದು ಮೂರು ಲೋಕದಲ್ಲಿಯೇ ಇಲ್ಲ.

ಅಸಾಧ್ಯವನ್ನು ಸಾಧಿಸಿದವನಲ್ಲವೆ ನೀನು ? ನಿನ್ನ ಪ್ರಜೆಗಳನ್ನು ಜರಾಮರಣ ಮುಕ್ತರನ್ನಾಗಿಸಿರುವೆ. ಎಲ್ಲರ ಮನೆ ಬಾಗಿಲಲ್ಲಿ ಕಲ್ಪವೃಕ್ಷ, ಕಾಮಧೇನುಗಳನ್ನು ನಿಲ್ಲಿಸಿರುವೆ. ಹೀಗೆ ಯಮನಿಗೂ ಇಂದ್ರನಿಗೂ ಪಂಥಾಹ್ವಾನ ನೀಡಿದ ಸಾಹಸಿಗನಿಗೆ, ಭೂಮಿಯನ್ನು ಸ್ವರ್ಗವನ್ನಾಗಿ ಮಾಡಿದವನಿಗೆ, ಸ್ವರ್ಗಕ್ಕೆ ಹೋಗುವುದೊಂದು ಅಸಾಧ್ಯವೆ ? ನೋಡು, ನೀನು ಕೊಟ್ಟ ಮಾತಿಗೆ ತಪ್ಪಿದರೆ ಹಿಂದೆ ಮಾಡಿದ ಎಲ್ಲ ಪುಣ್ಯವೂ ಭಸ್ಮವಾದೀತು.

**ಯಯಾತಿ** :- ಪ್ರಿಯೆ, ನೀನನ್ನುವುದು ನಿಜ. ಆ ಜಗನ್ನಾಥನ ದಯೆಯಿಂದ ನನಗೆ ಸಾಧ್ಯ-ಅಸಾಧ್ಯವೆಂಬ ಭೇದವಿಲ್ಲ. ನಾನು ಸ್ವರ್ಗಕ್ಕೆ ಹೋಗದಿರಲು ಬೇರೆ ಒಂದು ಕಾರಣವಿದೆ. ನಾನು ಇಲ್ಲಿಂದ ಹೊರಟು ಹೋದರೆ ಮಾನವರು, ನನ್ನ ಪ್ರಜೆಗಳು ಮೃತ್ಯುವಿಗೆ ವಶವಾಗುತ್ತಾರೆ. ಸತ್ಯವಾಗಿ ಹೇಳುತ್ತಿದ್ದೇನೆ, ಸ್ವರ್ಗಕ್ಕೆ ಹೋಗಲು ನನಗೆ ಮನಸ್ಸಿಲ್ಲ.

**ಅಶ್ರುಬಿಂದುಮತಿ** :- ಹಾಗಾದರೆ ಸ್ವರ್ಗವನ್ನು ನೋಡಿ ಹಿಂತಿರುಗು. ಹೇಗಾದರೂ ನನ್ನಾಸೆಯನ್ನು ನೀನು ಪೂರೈಸಲೆಬೇಕು.

**ಯಯಾತಿ** :- ಆಗಲಿ, ಪ್ರಿಯೆ, ನಿನ್ನಾಸೆಯನ್ನು ಪೂರೈಸುತ್ತೇನೆ. ಹೀಗೆ ಹೇಳಿ ರಾಜ ಯೋಚನಾ ಮಗ್ನನಾದ.

'ನೀರಲ್ಲಿ ಬಲು ಚುರುಕುತನದಿಂದ ಓಡಾಡುವ ಮೀನು ಬಲೆಗೆ ಬೀಳುತ್ತದೆ. ವಾಯುವೇಗದಿಂದ ಓಡುವ ಜಂಕೆಯೂ ಬಲೆಗೆ ಬೀಳುತ್ತದೆ. ಆಗಸದಲ್ಲಿ ಬಲು

ಎತ್ತರದಲ್ಲಿ ಹಾರುವ ಹಕ್ಕಿಗೆ ನೆಲದಲ್ಲಿ ಒಂದು ಮಾಂಸದ ತುಣುಕು ಕಣ್ಣಿಗೆ ಬೀಳುತ್ತದೆ. ಎಲ್ಲವೂ ಆ ಕಾಲಪುರುಷನ ಲೀಲೆ. ಸ್ಥಾವರ-ಜಂಗಮಗಳೆಲ್ಲವೂ ಅವನ ಆಟಿಕೆಗಳು. ಎಲ್ಲವನ್ನೂ ತನ್ನ ವಶದಲ್ಲಿ ಬಂಧಿಸುವುದರಿಂದ ಅವನು ಕಾಲ, **ಸರ್ವಂ ಕಲಯತೇ ಕಾಲಃ,** ಕಾಲಪೀಡಿತನಾದವನನ್ನು ಮಂತ್ರ, ತಪಸ್ಸು, ದಾನಗಳು ಕಾಪಾಡಲಾರವು. ಬಂಧು-ಬಾಂಧವರು ರಕ್ಷಣೆ ನೀಡಲಾರರು. ವಿವಾಹ-ಜನನ-ಮರಣ ಇವು ಮೂರು ಕಾಲಪಾಶಗಳು. ಇವನ್ನು ಮೀರಲು ಯಾರಿಗೂ ಸಾಧ್ಯವಿಲ್ಲ. ಗಾಳಿ ಮೋಡವನ್ನು ಮನಬಂದಂತೆ ಬೇಕಾದೆಡೆಗೆ ಹಾರಿಸಿಕೊಂಡು ಹೋಗುವಂತೆ ಎಲ್ಲವನ್ನೂ ಕಾಲ ಸೆಳೆದೊಯ್ಯುತ್ತದೆ. ಎಲ್ಲ ಜೀವಿಗಳೂ ಕರ್ಮಕ್ಕೆ ವಶವಾಗಿರುತ್ತವೆ. ಒಬ್ಬನ ಸುಖದುಃಖಗಳು ಅವನ ಕರ್ಮಕ್ಕನುಗುಣವಾಗಿರುತ್ತವೆ.

**ಪಂಚೈತಾನೀಹ ಸೃಜ್ಯಂತೇ ಗರ್ಭಸ್ಥಸ್ಯೈವ ದೇಹಿನಃ ।**
**ಆಯುಃ ಕರ್ಮ ಚ ವಿತ್ತಂ ಚ ವಿದ್ಯಾನಿಧನಮೇವ ಚ ॥**

ಆಯುಸ್ಸು, ಕರ್ಮ, ಐಶ್ವರ್ಯ, ವಿದ್ಯೆ, ಮರಣ ಈ ಐದು ದೇಹಕೆ ಅವನು ಗರ್ಭದಲ್ಲಿರುವಾಗಲೆ ನಿರ್ಮಿತವಾಗಿರುತ್ತವೆ.

ದೇಹಬಲ, ಬುದ್ಧಿಬಲ ಎಷ್ಟೇ ಇರಲಿ, ಮಾಡಿದ ಕರ್ಮಕ್ಕೆ ಅನುಗುಣವಾಗಿ ಸುಖವನ್ನೊ ದುಃಖವನ್ನೊ ಉಣಲೆಬೇಕು.

**ಯಥಾ ಧೇನುಸಹಸ್ರೇಷು ವತ್ಸೋ ವಿಂದತಿ ಮಾತರಂ ।**
**ತಥಾ ಶುಭಾಶುಭಂ ಕರ್ಮ ಕರ್ತಾರಮನುಗಚ್ಛತಿ ॥**

ಸಾವಿರ ಗೋವುಗಳ ಮಧ್ಯದಲ್ಲಿಯೂ ಕರು ತನ್ನ ತಾಯಿಯನ್ನು ಕಂಡು ಹಿಡಿಯುವಂತೆ ಶುಭ-ಅಶುಭ ಕರ್ಮಗಳು ಕರ್ತನ ಬೆನ್ನು ಹತ್ತುತ್ತವೆ.

ಕುಂತಲ್ಲಿ, ನಿಂತಲ್ಲಿ, ಹೋದಲ್ಲಿ ನೆರಳಿನಂತೆ ಕರ್ಮ ಕರ್ತನನ್ನು ಹಿಂಬಾಲಿಸುತ್ತದೆ.

ನಾವು ಒಂದು ಬಗೆದರೆ, ದೈವವಿನ್ನೊಂದು ಬಗೆಯುತ್ತದೆ. ನಾವು ನಮ್ಮ ಸೊತ್ತನ್ನು ಎಷ್ಟು ಬಗೆಯಿಂದ ರಕ್ಷಿಸಲೆತ್ನಿಸಿದರೂ ದೈವ ಕೈಬಿಟ್ಟರೆ ಅದು ಉಳಿಯಲಾರದು. ಎಣ್ಣೆ ಬತ್ತಿದರೆ ದೀಪ ಉರಿಯದು ಕರ್ಮ ಹಿಂಗಿದರೆ ದೇಹ ಉಳಿಯದು. ನನ್ನ ಪೂರ್ವಾರ್ಜಿತ ಕರ್ಮ ಈ ಹೆಣ್ಣಿನ ರೂಪದಿಂದ ನನ್ನ ಬೆನ್ನು ಹತ್ತಿದೆ. ಇಲ್ಲದಿದ್ದರೆ ಆ ನಟರು ನನ್ನರಮನೆಗೇಕೆ ಬಂದರು ? ಅವರೊಡನಾಟವೇಕೆ ಒದಗಿ ಬಂದಿತು ? ಮುಪ್ಪು ಏಕೆ ಅಪ್ಪಿಕೊಂಡಿತು ? ಎಲ್ಲವೂ ಕರ್ಮದ ಪ್ರಭಾವ ಆದರಿದಿರಿನಲ್ಲಿ ಪುರುಷ ಪ್ರಯತ್ನವೇನೂ ನಡೆಯದು. ಇಂದ್ರ ಮಾತಲಿಯನ್ನು ಕಳಿಸಿದ. ಸ್ವರ್ಗಕ್ಕೆ ಬಾ ಎಂದು ಕರೆದ. ನಾನೊಪ್ಪಲಿಲ್ಲ. ಅದರ ಫಲ ಈಗ ಕಾಣಿಸಿಕೊಳ್ಳುತ್ತಿದೆ. ಇವಳು ಹೇಳಿದಂತೆ ನಡೆಯದ್ದಿದರೆ ವಚನಭಂಗವಾದೀತು. 'ಹೇ ಮಧುಸೂದನ, ಲಕ್ಷ್ಮೀರಮಣ, ನಾ ನಿನ್ನ ಮೊರೆಹೊಕ್ಕಿದ್ದೇನೆ ಕಾಪಾಡು.'

**ಸುಕರ್ಮ :-** ರಾಜನೀರೀತಿ ಚಿಂತಾಮಗ್ನನಾಗಿ ಕುಳಿತುದನ್ನು ಕಂಡು ಕಾಮಕನ್ಯೆ ಎಚ್ಚರಿಸುತ್ತ ನುಡಿದಳು.

**ಅಶ್ರುಬಿಂದುಮತಿ :-** ಹೆಣ್ಣು ಸ್ವಭಾವತಃ ಚಪಲೆಯಿರಬಹುದು. ಆದರೆ ನಾನು ಚಪಲತೆಯಿಂದ ನಿನ್ನಿಂದೇನೂ ಅಕಾರ್ಯ ಮಾಡಿಸುತ್ತಿಲ್ಲವಲ್ಲ ? ಪುಣ್ಯಲೋಕಗಳನ್ನು, ದೇವತೆಗಳನ್ನು ದರ್ಶನಮಾಡುವ ಭಾಗ್ಯ ಮನುಷ್ಯರಿಗೆ ದುರ್ಲಭ. ನನಗೆ ಅದೊಂದೇ ಆಸೆ. ನಿನಗೂ ಅದು ಲಭಿಸಲೆಂದು ನಾನೀರೀತಿ ಹೇಳುತ್ತಿದ್ದೇನೆ. ನನ್ನೊಡನಾಟದ ದೆಸೆಯಿಂದ ನಿನ್ನಿಂದೇನಾದರೂ ಪಾಪಕಾರ್ಯ ನಡೆದಿದ್ದರೆ ಹೇಳು. ಏನೊ ದೊಡ್ಡ ಅಕಾರ್ಯ ಮಾಡುತ್ತಿರುವಂತೆ, ಮಹಾ ಆಪತ್ತು ಬಂದಿರುವಂತೆ ಚಿಂತಾಮಗ್ನನಾಗಿ ಶೋಕಿಸುತ್ತ ಕುಳಿತಿರುವೆ. ಬೇಡ, ನೀನು ಹೀಗೆ ಚಿಂತಿಸುವುದೂ ಬೇಡ, ಸ್ವರ್ಗಕ್ಕೆ ಹೋಗುವುದೂ ಬೇಡ. ನನ್ನಿಂದ ನಿನಗೇಕೆ ತೊಂದರೆ ?

**ಯಯಾತಿ :-** ಹಾಗಲ್ಲ ದೇವಿ, ನಾನು ಹೇಳುವುದನ್ನು ಕೇಳು. ನಾನೀಗ ಸ್ವರ್ಗಕ್ಕೆ ಹೊರಟು ಹೋದರೆ, ಯಮನು ನನ್ನ ಪ್ರಜೆಗಳನ್ನು ನಾನಾ ವ್ಯಾಧಿಗಳಿಂದ ಪೀಡಿಸಲು ತೊಡಗುತ್ತಾನೆ ಎಂದು ಮಾತ್ರ ನಾನು ಚಿಂತಿಸಿದೆ, ಅಷ್ಟೆ. ಪ್ರಿಯೆ, ನಿಶ್ಚಯವಾಗಿಯೂ ನಾ ನಿನ್ನ ಜತೆಗೆ ಸ್ವರ್ಗಕ್ಕೆ ಬರುತ್ತೇನೆ.

ಹೀಗೆ ಹೇಳಿ ರಾಜನು ಮಗ ಪೂರುವನ್ನು ಕರೆದ.

'ಮಗು, ಬಾ. ನನ್ನ ಮಾತಿನಂತೆ ನಡೆದು ಧರ್ಮವನ್ನು ಕಾಪಾಡಿರುವೆ. ಈಗ ನನ್ನ ಮುದಿತನವನ್ನು ನನಗೆ ಕೊಟ್ಟು, ಯೌವನವನ್ನು ತಿರುಗಿಪಡೆ. ನನ್ನ ರಾಜ್ಯವನ್ನಾಳು. ಸಮಸ್ತ ಭೂಮಂಡಲವನ್ನೂ ಎಲ್ಲ ಐಶ್ವರ್ಯವನ್ನೂ ನಿನಗೆ ಕೊಟ್ಟಿದ್ದೇನೆ. ಪ್ರಜಾಪಾಲನೆ ಮಾಡುವುದನ್ನೆಂದೂ ಮರೆಯಬೇಡ. ಧರ್ಮಶಾಸ್ತ್ರಕ್ಕನುಸಾರವಾಗಿ ದುಷ್ಟರಿಗೆ ಶಿಕ್ಷೆ, ಸಜ್ಜನರಿಗೆ ಅಭಯ ನೀಡು. ಸೇನೆಯ ವೀರಭಟರಿಗೆ ಕೈತುಂಬ ಹಣ ಹೊಟ್ಟೆತುಂಬ ಅನ್ನ ಕೊಡು. ಗೂಢಚಾರರು ನಿನಗೆ ಕಣ್ಣುಗಳಂತೆ. ಅವರನ್ನು ಚೆನ್ನಾಗಿ ನೋಡಿಕೊಳ್ಳು. ನೀತಿಶಾಸ್ತ್ರ ಅರಿತವರೊಂದಿಗೆ ಗೋಪ್ಯವಾಗಿ ಮಂತ್ರಾಲೋಚನೆ ಮಾಡುವುದನ್ನು ಮರೆಯದಿರು. ಬೇಟೆಯಾಡುವ ಹವ್ಯಾಸಕ್ಕೆ ಬಲಿಯಾಗಬೇಡ. ದಾನಧರ್ಮಮಾಡು ಯಜ್ಞಗಳಿಂದ ವಿಷ್ಣುವನ್ನಾರಾಧಿಸು. ಪ್ರಜೆಗಳು ಬಯಸುವುದನ್ನು ಕಾಲ-ಕಾಲಕ್ಕೊದಗಿಸು. ಪ್ರಜೆಗಳ ಪೋಷಣೆಗೆ, ಅವರ ಸೌಖ್ಯದ ಕಡೆಗೆ ಸದಾ ಗಮನವಿರಲಿ. ನಮ್ಮ ವಂಶ ಮುಂದೆ ಬೆಳೆಯುವಂತೆ ನೋಡಿಕೊಳ್ಳು. ಪರಸ್ತ್ರೀಯರನ್ನು ಬಯಸಬೇಡ. ವೇದಶಾಸ್ತ್ರಗಳನ್ನೂ ಆನೆ, ಕುದುರೆ, ರಥಗಳ ವಿದ್ಯೆಯನ್ನು ಅಭ್ಯಾಸ ಮಾಡುತ್ತಿರು' ಎಂದು ಉಪದೇಶಿಸಿ ಅವನ ಮುದಿತನವನ್ನು ತಾನು ಸ್ವೀಕರಿಸಿ ಯೌವನವನ್ನು ತಿರುಗಿ ಕೊಟ್ಟ. ಕೈಯಲ್ಲಿ ತನ್ನಾಯುಧವನ್ನಿಟ್ಟು ಆಶೀರ್ವದಿಸಿದ. ಯಯಾತಿ ಮಹಾರಾಜನೀಗ ಸ್ವರ್ಗಕ್ಕೆ ಹೋಗಲು ಸಿದ್ಧನಾದ.

**ಸುಕರ್ಮ :-** ಎಲ್ಲ ದ್ವೀಪಗಳಲ್ಲಿರುವ ತನ್ನ ಪ್ರಜೆಗಳನ್ನು ರಾಜ ತನ್ನಲ್ಲಿಗೆ ಕರೆಸಿಕೊಂಡು ಹೇಳಿದ.

**ಯಯಾತಿ :-** ಪ್ರಜೆಗಳೆ, ನಾನು ಇಂದ್ರಲೋಕ, ಬ್ರಹ್ಮಲೋಕ, ಶಿವಲೋಕಗಳನ್ನೂ ಬಳಿಕ ಎಲ್ಲ ಪಾಪಗಳನ್ನು ಕಳೆದು ಸದ್ಗತಿ ನೀಡುವ ವಿಷ್ಣುಲೋಕವನ್ನೂ ಈ ನನ್ನ ದೇವಿಯೊಡನೆ ಹೋಗಿ ಸೇರುವೆನು. ನೀವು ಎಲ್ಲರೂ ಸುಖದಿಂದ ಇರಿ. ಈ ಪೂರು ನಿಮ್ಮನ್ನು ಪಾಲಿಸುತ್ತಾನೆ. ಅವನಿಗೆ ನಾನೆಲ್ಲವನ್ನೂ ಒಪ್ಪಿಸಿದ್ದೇನೆ.

**ಪ್ರಜೆಗಳು :-** ಮಹಾರಾಜ, ವೇದ-ಪುರಾಣಗಳಲ್ಲೆಲ್ಲೂ ಕೇಳಿರದ ಅಪೂರ್ವ ಧರ್ಮರಾಜ್ಯವನ್ನು ನಾವು ನಿನ್ನ ಆಳ್ವಿಕೆಯಲ್ಲಿ ಕಂಡೆವು. ಪವಿತ್ರ ಸೋಮವಂಶದಲ್ಲಿ ಮಹಾತ್ಮ ನಹುಷ ಮಹಾರಾಜನ ಮಗನಾಗಿ ಜನಿಸಿ ಜ್ಞಾನವಿಜ್ಞಾನಸಂಪನ್ನನೆನಿಸಿ ಗುಣಗಳಿಗಾಕರನಾಗಿ ಧರ್ಮದಿಂದ ರಾಜ್ಯವಾಳಿದ ನಿನ್ನನ್ನು ಬಿಡಲು ನಮ್ಮ ತ್ರಿಕರಣಗಳೂ ಹಿಂಜರಿಯುತ್ತವೆ. ನಿನ್ನ ಹಿಂದೆ ನಾವೂ ಬರುವೆವು. ನೀನು ನರಕಕ್ಕೆ ಹೋದರೂ ಸರಿಯೆ ನಾವು ನಿನ್ನ ಹಿಂದೆ ಇರುತ್ತೇವೆ. ನೀನಿಲ್ಲದ ಈ ನೆಲದಲ್ಲಿ ನಮಗೇನಿದೆ ?

**ಯಯಾತಿ :-** ನನ್ನ ಜತೆಗೆ ಬರುವವರು ಬನ್ನಿ. ಹೀಗೆ ಹೇಳಿ ಮಹಾರಾಜ ಹಂಸದಂತೆ ಬಿಳಿಯಾದ ರಥವನ್ನೇರಿ ದೇವರಾಜನಂತೆ ಚಾಮರ-ಬೀಸಣಿಗೆಗಳ ಮರ್ಯಾದೆಯೊಡನೆ ಸುಖವಾಗಿ ಪ್ರಯಾಣ ಬೆಳೆಸಿದ. ಋಷಿಗಳೂ, ವಂದಿಚಾರಣರೂ ಪ್ರಜೆಗಳೂ ಅವನನ್ನು ಹೊಗಳಿದರು. ಪ್ರಜೆಗಳೂ ಎಲ್ಲ ವರ್ಣದವರೂ ಆನೆ-ಕುದರೆ-ರಥಗಳನ್ನೇರಿ ದಿವ್ಯಮಾಲೆ ತುಳಸೀದಲ, ಚಂದನ, ಗಂಧ, ವಸ್ತ್ರ, ಆಭರಣಗಳಿಂದ ಶೋಭಿಸುತ್ತ ಹರಿಧ್ಯಾನಮಾಡುತ್ತ ರಾಜನನ್ನು ಹಿಂಬಾಲಿಸಿದರು. ಎಲ್ಲರೂ ಸ್ವರ್ಗವನ್ನು ಸೇರಿದರು. ದೇವೇಂದ್ರ ಮಹಾರಾಜನನ್ನು ಇದಿರುಗೊಂಡ. ಇಲ್ಲೆ ಇದ್ದು ಎಲ್ಲ ಭೋಗಗಳನ್ನೂ ಅನುಭವಿಸು ಎಂದ. ರಾಜನು ಆತನನ್ನು ವಂದಿಸಿ ಬ್ರಹ್ಮಲೋಕಕ್ಕೆ ಹೋಗುವನೆಂದು ಹೇಳಿ ಹೊರಟ, ಬ್ರಹ್ಮಲೋಕವನ್ನು ಸೇರಿ ಬ್ರಹ್ಮನ ಆತಿಥ್ಯವನ್ನೂ ಸ್ವೀಕರಿಸಿ ಶಿವಲೋಕವನ್ನೂ ಸೇರಿದ. ಶಿವನು ಉಮೆಯಿಂದೊಡಗೂಡಿ ರಾಜನಿಗೆ ಅತಿಥ್ಯವನ್ನು ನೀಡಿ ಹೇಳಿದ.

**ಶಿವ :-** ರಾಜನೆ, ನೀನು ವಿಷ್ಣುಭಕ್ತನೆಂದ ಮೇಲೆ ನನಗೂ ಪ್ರಿಯನೆ ಆಗಿರುವೆ. ನಮ್ಮಲ್ಲಿಯೆ ಇದ್ದು ಎಲ್ಲ ಭೋಗವನ್ನೂ ಅನುಭವಿಸು. ನನಗೂ ವಿಷ್ಣುವಿಗೂ ಯಾವ ಅಂತರವೂ ಇಲ್ಲ. ವಿಷ್ಣು ಶಿವಸ್ವರೂಪಿ. ಶಿವನು ವಿಷ್ಣುಸ್ವರೂಪಿ. ವಿಷ್ಣುಭಕ್ತನಿಗೆ ಯೋಗ್ಯವಾದ ಸ್ಥಾನವನ್ನು ನಾನೂ ಕೊಡುವೆನು.

**ಯಯಾತಿ :-** ಮಹಾದೇವ, ನೀನು ಹೇಳುವುದು ನಿಜ. ನಿಮ್ಮಿಬ್ಬರಲ್ಲಿ ಅಂತರವಿಲ್ಲ. ಆದರೂ ನಿನ್ನಡಿಗಳಿಗೆ ವಂದಿಸಿ ವಿಷ್ಣುಲೋಕವನ್ನು ಹೊಂದಲು ಬಯಸುವೆ.

ಶಿವನಿದನ್ನು ಕೇಳಿ 'ಆಗಲಿ, ಮಹಾರಾಜ, ನೀನು ವಿಷ್ಣುಲೋಕಕ್ಕೆ ಹೋಗು' ಎಂದ.

ಮಹಾರಾಜ ವಿಷ್ಣುಲೋಕದ ಕಡೆಗೆ ಹೊರಟ. ಆತನ ಹಿಂದೆ ಮುಂದೆ ವಿಷ್ಣುಭಕ್ತರು ಕುಣಿಯುತ್ತಿದ್ದರು. ಪವಿತ್ರ ಶಂಖನಾದಗೈಯುತ್ತಿದ್ದರು. ಚಾರಣರು, ಗಂಧರ್ವರು ಸುಸ್ವರದಿಂದ ಹಾಡುತ್ತಿದ್ದರು. ಋಷಿಗಳು ಹೊಗಳುತ್ತಿದ್ದರು. ಅಪ್ಸರೆಯರು ಓಲೈಸುತ್ತಿದ್ದರು. ವಿಷ್ಣುಲೋಕವನ್ನು ಕಂಡ, ಮಹಾರಾಜ. ಅಲ್ಲಿ ಹಂಸದಂತೆ ಬಿಳಿಯಾದ ಸೌಧಗಳಿವೆ, ಪ್ರಾಸಾದಗಳಿವೆ. ಅವುಗಳ ಸುವರ್ಣ ಶಿಖರಗಳು. ಆ ಲೋಕದಲ್ಲೆಲ್ಲ ತುಂಬಿರುವುದರಿಂದ ಆಕಾಶವು ನಕ್ಷತ್ರಗಳಿಂದ ತುಂಬಿ ಹೊಳೆವಂತೆ ಹೊಳೆಯುತ್ತಿತ್ತು. ಅದು ತನ್ನ ಪ್ರಕಾಶವನ್ನು ಸುತ್ತಲೂ ಚೆಲ್ಲುತ್ತ ಕಣ್ಣಿಂದ ನೋಡುವಂತಿತ್ತು. ನಾನಾ ವಿಧದ ರತ್ನಗಳಿಂದ ಹಲ್ಲುಗಳನ್ನು ತೋರುತ್ತ ನಗುವಂತಿತ್ತು. ಹಾರುವ ಧ್ವಜಗಳಿಂದ ವಿಷ್ಣುಭಕ್ತರನ್ನು ಕೈಬೀಸಿ ಕರೆಯುವಂತಿತ್ತು. ನಾನಾ ಬಗೆಯ ಸುಂದರ ವೃಕ್ಷಗಳು,

ಕೆರೆಬಾವಿಗಳು, ಕೊಳಗಳು. ಅವುಗಳಲ್ಲಿ ಆಡುವ ಹಂಸ, ಕಾರಂಡವಗಳು ಪದ್ಮ ಉತ್ಪಲ, ಕಲ್ಹಾರ, ಶತಪತ್ರ ಹೂಗಳು, ಸುಂದರ ಉದ್ಯಾನಗಳು ಇವುಗಳಿಂದ ಸರ್ವತೋಭಾಕರವಾಗಿ ಕಂಗೊಳಿಸುವ ಆ ವೈಕುಂಠವನ್ನು ಯಯಾತಿ ಮಹಾರಾಜ ಪ್ರವೇಶಿಸಿದ. ಅಲ್ಲಿ ಸರ್ವಕ್ಲೇಶ ಪರಿಹಾರಕನಾದ ದುಃಖದೂರನಾದ ನಾರಾಯಣನನ್ನು ಕಂಡ. ಆ ಜಗದೊಡೆಯನು ಪೀತಾಂಬರಧಾರಿಯಾಗಿ ಸರ್ವಾಭರಣ ಭೂಷಿತನಾಗಿ ಮಹಾತೇಜಸ್ಸಿನಿಂದ ಬೆಳಗುತ್ತ ಲಕ್ಷ್ಮೀಯೊಂದಿಗೆ ಗರುಡಾರೂಢನಾಗಿದ್ದ. ಕೇವಲ ಪರಮಾನಂದ ರೂಪದಿಂದ ವಿರಾಜಮಾನನಾಗಿದ್ದು ದೇವತೆಗಳು, ಗಂಧರ್ವರು, ಅಪ್ಸರೆಯರಿಂದ ಸೇವಿಸಲ್ಪಡುತ್ತಿದ್ದ. ಯಯಾತಿ ತನ್ನ ಸತಿಯೊಡನೆ ನಾರಾಯಣನ ಪಾದಕಮಲಗಳಿಗೆ ನಮಿಸಿದ. ಜತೆಯಲ್ಲಿ ಬಂದ ಮಾನವರೆಲ್ಲರೂ ನಮಿಸಿದರು. ಹೃಷೀಕೇಶ ರಾಜನನ್ನು ಕಂಡು ಹೇಳಿದ.

**ವಿಷ್ಣು :-** ನಾನು ನಿನಗೊಲಿದಿದ್ದೇನೆ. ಬೇಕಾದ ವರವನ್ನು ಕೇಳು.

**ಯಯಾತಿ :-** ದೇವದೇವ, ಜಗದೊಡೆಯ, ನೀನೊಲಿದಿರುವೆಯಾದರೆ ನಿನ್ನ ದಾಸ್ಯವನ್ನು ಸದಾ ನನಗೆ ಕರುಣಿಸು.

**ವಿಷ್ಣು :-** ಹಾಗೇ ಆಗಲಿ. ಈಕೆಯ ಜತೆಗೆ ನೀನಿಲ್ಲಿಯೆ ನನ್ನ ಲೋಕದಲ್ಲಿರು.

ಅಂದಿನಿಂದ ಯಯಾತಿ ಮಹಾರಾಜ ವಿಷ್ಣುಲೋಕದಲ್ಲಿ ವಾಸಮಾಡಿದ.

**ಸುಕರ್ಮ :-** ಹೀಗೆ ತಂದೆಯ ಅನುಗ್ರಹದಿಂದ ಮಗ ಪೂರು ರಾಜ್ಯವನ್ನು ಪಡೆದ. ಅವನ ಆಗ್ರಹದಿಂದ ತುರು ದುರ್ಗತಿಗೀಡಾದ. ಈ ಪವಿತ್ರಕಥೆ ಮಕ್ಕಳಿಗೆ ತಾರಕವೆನಿಸುವುದು. ತಂದೆ-ತಾಯಿಗಳು ಪ್ರೀತಿಯಿಂದ ಮಕ್ಕಳನ್ನು ಕರೆದಾಗ ಮಕ್ಕಳು ಅಷ್ಟೇ ಪ್ರೀತಿಯಿಂದ ಓಗೊಟ್ಟರೆ ಅವರಿಗೆ ಗಂಗಾಸ್ನಾನದ ಫಲ. ಸರ್ವತೀರ್ಥಮಯಿ ಗಂಗೆ ಬಹು ಪುಣ್ಯಮಯಿ ಸಮುದ್ರ. ಮಕ್ಕಳಿಗೆ ಮಾತ್ರ ತಾಯಿಯೆ ಗಂಗೆ. ತಂದೆಯೆ ಸಮುದ್ರ. ಅವರ ಕಾಲು ತೊಳೆದರೆ ಎಲ್ಲ ತೀರ್ಥಗಳಲ್ಲಿ ಸ್ನಾನಮಾಡಿದ ಫಲವಿದೆ. ಅವರನ್ನು ತಿರಸ್ಕರಿಸಿದರೆ ಆ ಪಾಪಕ್ಕೆ ಪ್ರಾಯಶ್ಚಿತ್ತವೆ ಇಲ್ಲ. ನಾನು ಇದನ್ನು ತಿಳಿದು ಸದಾ ತಂದೆ-ತಾಯಿಗಳ ಸೇವೆ ಮಾಡುತ್ತಿದ್ದೇನೆ. ಅವರು ಏನು ಹೇಳಿದರೂ ಅದನ್ನು ಒಂದಿಷ್ಟೂ ವಿಚಾರಿಸದೆ ಯಥಾಶಕ್ತಿ ನಡೆಸಿಕೊಡುತ್ತೇನೆ. ಅದರ ಫಲವಾಗಿ ನನಗೆ ಉತ್ತಮ ಜ್ಞಾನ ಲಭಿಸಿದೆ. ಜಗತ್ತಿನ ಯಾವ ಮೂಲೆಯಲ್ಲಿ ಯಾರು ಏನು ಮಾಡುವರೊ ಅದನ್ನು ನಾನು ಮನೆಯೊಳಗಿದ್ದುಕೊಂಡೆ ಅರಿಯಬಲ್ಲೆ. ಯಾವ ಹುತ್ತದೊಳಗೆ ಯಾವ ಹಾವಿದೆ ಎನ್ನುವುದನ್ನೂ ನಾನಿಲ್ಲಿ ಇದ್ದೇ ಅರಿಯಬಲ್ಲೆ. ಅದೆಲ್ಲವೂ ಈ ತಂದೆ-ತಾಯಿಗಳ ಅನುಗ್ರಹ.

ಪಿಪ್ಪಲನಿದನ್ನು ಕೇಳಿ ಲಜ್ಜಿತನಾದ. ಸುಕರ್ಮನಿಗೆ ತಲೆಬಾಗಿ ನಮಿಸಿ ಹೊರಟುಹೋದ. ಸುಕರ್ಮ ತಂದೆ-ತಾಯಿಗಳ ಸೇವೆಯಲ್ಲಿಯೆ ಕಾಲಕಳೆದ. ಹೀಗೆ ತಂದೆ-ತಾಯಿಗಳು ಮಕ್ಕಳಿಗೆ ಪವಿತ್ರ.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಭೂಮಿಖಂಡದ ವೇನೋಪಾಖ್ಯಾನದಲ್ಲಿ*
*ಮಾತೃ-ಪಿತೃಗಳ ಸೇವೆಯ ಮಹಿಮೆ ಎಂಬ ಹದಿನಾಲ್ಕನೇಯ ಅಧ್ಯಾಯ ಮುಗಿದುದು*

—o—

## ಗುರುತೀರ್ಥ ಮಹಿಮೆ

ಅಧ್ಯಾಯ - ೧೫

**ವೇನ ಉವಾಚಃ**

**ವೇನ** :- ದೇವದೇವ, ಭಾರ್ಯಾತೀರ್ಥ, ಪಿತೃತೀರ್ಥಗಳ ಮಹಿಮೆಯನ್ನು ನನಗೆ ಉಪದೇಶ ಮಾಡಿರುವೆ. ಗುರುತೀರ್ಥ ಮಹಿಮೆಯನ್ನು ಉಪದೇಶಿಸು.

**ವಿಷ್ಣು** :- ಗುರುವಿನ ಅನುಗ್ರಹದಿಂದ ಶಿಷ್ಯನಿಗೆ ಒಳ್ಳೆಯ ಜ್ಞಾನ ಲಭಿಸುತ್ತದೆ. ಆದರಿಂದ ಇಹದಲ್ಲಿಯೂ ಪರದಲ್ಲಿಯೂ ಸುಖ, ಕೀರ್ತಿ, ಯಶಸ್ಸುಗಳು ದೊರೆಯುತ್ತವೆ. ಸೂರ್ಯನ ಬೆಳಕು ಹಗಲಿನಲ್ಲಿ, ಚಂದ್ರನ ಬೆಳಕು ರಾತ್ರಿಯಲ್ಲಿ, ದೀಪದ ಬೆಳಕು ಮನೆಯೊಳಗಡೆ, ಗುರು ನೀಡುವ ಜ್ಞಾನದ ಬೆಳಕು ಎಲ್ಲೆಡೆ, ಎಲ್ಲ ಕಾಲದಲ್ಲಿ ಮಾರ್ಗದರ್ಶಕವಾಗುತ್ತದೆ. ಆದರಿಂದ ಶಿಷ್ಯನು ಗುರುವನ್ನು ಉತ್ತಮ ತೀರ್ಥವೆಂದು ತಿಳಿದು ತ್ರಿಕರಣಪೂರ್ವಕವಾಗಿ ಅವನ ಸೇವೆ ಮಾಡಬೇಕು.

ಚ್ಯವನ ಮಹರ್ಷಿಯ ಕಥೆ ಇದಕ್ಕೊಂದು ಉತ್ತಮ ನಿದರ್ಶನ. ಈತ ಭಾರ್ಗವ ಗೋತ್ರದವ. ಜ್ಞಾನ ಸಂಪಾದನೆಮಾಡುವ ಮಹತ್ವಾಕಾಂಕ್ಷೆಯಿಂದ ಹೆಂಡತಿ ಮಕ್ಕಳನ್ನು ತೊರೆದು ತೀರ್ಥಯಾತ್ರೆ ಕೈಗೊಂಡಿದ್ದ. ಗಂಗೆ, ಗೋದಾವರಿ, ಸರಸ್ವತಿ ಮುಂತಾದ ನದಿಗಳನ್ನು ಸಾಗರಗಳನ್ನು ಪುಣ್ಯಕ್ಷೇತ್ರಗಳನ್ನೂ ಸಂದರ್ಶಿಸಿ ತನ್ನ ದೇಹವನ್ನು ಪವಿತ್ರಗೊಳಿಸಿಕೊಂಡು ಸೂರ್ಯನಂಥ ದೀಪ್ತಿಯಿಂದ ಹೊಳೆಯತೊಡಗಿದ. ನರ್ಮದೆಯ ತೀರದಲ್ಲಿ ಅಮರಕಂಟಕ ಸಿದ್ಧನಾಥ, ಜ್ವಾಲೇಶ್ವರ, ಅಮರೇಶ್ವರ, ಬ್ರಹ್ಮೇಶ, ಕಪಿಲೇಶ, ಮಾರ್ಕಂಡೇಶ್ವರ, ಓಂಕಾರಲಿಂಗಗಳನ್ನು ಪೂಜಿಸಿ ಒಂದು ಆಲದಮರದ ನೆರಳಲ್ಲಿ ಕುಳಿತಿದ್ದ. ಆಗ ಆ ಮರದ ಮೇಲೆ ಗಿಳಿಗಳು ದಿವ್ಯಭಾಷೆಯಿಂದ ಅರ್ಥವತ್ತಾಗಿ ಮಾತನಾಡಿಕೊಳ್ಳುತ್ತಿದ್ದುದು ಅವನಿಗೆ ಕೇಳಿಸಿತು. ಆತ ಕುತೂಹಲದಿಂದ ಆಲಿಸಿದ. ಅಲ್ಲಿ ಕುಂಜಲನೆಂಬ ಒಂದು ಮುದಿಯಾದ ಗಿಳಿಗೆ ಉಜ್ವಲ, ಸಮುಜ್ಜ್ವಲ, ವಿಜ್ವಲ, ಕಪಿಂಜಲ ಎಂಬ ನಾಲ್ಕು ಮರಿಗಳು. ಅವು ದೂರದ ಗುಡ್ಡ ಬೆಟ್ಟಗಳಿಂದ, ದ್ವೀಪಗಳಿಂದ ತಂದ ರುಚಿಕರವಾದ ಹಣ್ಣು ಹಂಪಲುಗಳನ್ನು ತಂದೆಗೆ ಪ್ರೀತಿಯಿಂದ ಕೊಡುತ್ತ ಅಲ್ಲಲ್ಲಿ ತಾವು ಕಂಡ ಅಪೂರ್ವ ವಿಚಿತ್ರ ದೃಶ್ಯಗಳನ್ನು ವರ್ಣಿಸುತ್ತಿದ್ದುವು. ಉಜ್ಜ್ವಲ ಹೇಳಲಾರಂಭಿಸಿದ.

**ಉಜ್ಜ್ವಲ** :- ನಾನು ಪ್ಲಕ್ಷದ್ವೀಪಕ್ಕೆ ಹೋಗಿದ್ದೆ. ಅಲ್ಲಿ ಜನರು ಸುಖದಿಂದ ಬಾಳುತ್ತಾರೆ ಜಪ-ತಪ-ಧ್ಯಾನ ಮುಂತಾದುವನ್ನು ಮಾಡುತ್ತಾರೆ. ಅವರಿಗೆ ದಿವೋದಾಸನು ರಾಜ. ಅವನ ಮಗಳು ದಿವ್ಯೆ ಒಳ್ಳೆಯ ರೂಪವತಿ, ಗುಣವತಿ, ನವಯುವತಿ. ಅವಳನ್ನು ರೂಪದೇಶದ ಚಿತ್ರಸೇನನೆಂಬ ರಾಜಕುಮಾರನಿಗೆ ಕೊಟ್ಟು ಮದುವೆ ಮಾಡಬೇಕೆಂದಿದ್ದ, ದಿವೋದಾಸ. ಆದರೆ ಮದುವೆ ಮಂಟಪದಲ್ಲಿಯೇ ರಾಜಕುಮಾರ ಮೃತನಾದ. ಬ್ರಾಹ್ಮಣರು ಹೇಳಿದರು, 'ರಾಜನೆ, ನಿನ್ನ ಕುಮಾರಿಗೆ ಪತಿಯ ಸಂಗವಾಗದಿರುವ ಕಾರಣ ಧರ್ಮಶಾಸ್ತ್ರದ ಪ್ರಕಾರ ಪುನರ್ವಿವಾಹ ಮಾಡಬಹುದು. ಪತಿಯ ಸಂಗ ಆಗುವುದಕ್ಕೆ ಮೊದಲು ಆತ ಸತ್ತರೆ, ಸತಿಯನ್ನು ಪರಿತ್ಯಾಗ ಮಾಡಿದರೆ, ಸಂನ್ಯಾಸ ಸ್ವೀಕರಿಸಿದರೆ, ಅಥವಾ ಮಹಾವ್ಯಾಧಿಗಳಿಗೆ ತುತ್ತಾದರೆ ಮರುಮದುವೆ ಮಾಡುವುದು ಶಾಸ್ತ್ರ ವಿಹಿತ.'

ರಾಜನಿದನ್ನು ಕೇಳಿ ಮಗಳನ್ನು ರೂಪಸೇನನೆಂಬ ಇನ್ನೊಬ್ಬ ರಾಜಕುಮಾರನಿಗೆ ಕೊಟ್ಟು ವಿವಾಹಮಾಡಲು ಬಯಸಿದ. ಆ ರಾಜಕುಮಾರನೂ ವಿವಾಹ ಕಾಲದಲ್ಲಿಯೆ ಮೃತನಾದ. ರಾಜನಿನ್ನೊಬ್ಬ ವರನನ್ನು ಮದುವೆ ಮಂಟಪಕ್ಕೆ ಕರೆದ. ಅವನೂ ಅಲ್ಲಿಯೇ ಸತ್ತ. ಹೀಗೆ ಇಪ್ಪತ್ತೊಂದು ಜನ ರಾಜಕುಮಾರರು ಸತ್ತಾಗ ರಾಜ ನಿರಾಶೆ ಹೊಂದಿದ. ಆದರೆ ಮಂತ್ರಿಗಳೆಲ್ಲ ಸೇರಿ ರಾಜನನ್ನು ಮಗಳ ಸ್ವಯಂವರಕ್ಕೊಪ್ಪಿಸಿದರು. ಪ್ಲಕ್ಷದ್ವೀಪದ ಎಲ್ಲ ರಾಜಕುಮಾರರೂ ಸ್ವಯಂವರಕ್ಕೆ ಬಂದರು. ರಾಜಕುಮಾರಿಯ ರೂಪಸೌಂದರ್ಯಕ್ಕೆ ಮರುಳಾಗಿ ಸ್ಪರ್ಧೆಯಿಂದ ತಮ್ಮೊಳಗೆ ಹೋರಾಡಿ ಅವರೆಲ್ಲರೂ ಮಡಿದರು. ರಾಜಕುಮಾರಿ ಕಾಡಿಗೆ ಹೋಗಿ ಒಂದು ಗುಹೆಯಲ್ಲಿ ಕುಳಿತು ಮನಃಪೂರ್ತಿ ಅತ್ತಳು.

ಅಪ್ಪ, ಇದೊಂದು ವಿಚಿತ್ರ ಘಟನೆ. ಇದಕ್ಕೆ ಕಾರಣವೇನಿರಬಹುದು ?

**ಕುಂಜಲ :-** ದಿವ್ಯೆ ಪೂರ್ವಜನ್ಮದಲ್ಲಿ ಪಾಪ ಮಾಡಿದ್ದಳು. ಚಿತ್ರೆ ಎಂಬ ಹೆಸರಿನಿಂದ ಪುಣ್ಯನಗರಿ ವಾರಾಣಸಿಯಲ್ಲಿ ಸುವೀರನೆಂಬ ಒಬ್ಬ ಶ್ರೀಮಂತ ವೈಶ್ಯನ ಮಡದಿಯಾಗಿದ್ದು ಸ್ವೈರಿಣಿಯಾಗಿ ಬಾಳಿದ್ದಳು. ಪತಿಯೊಡನೆ ನಿತ್ಯ ಕಲಹಮಾಡುತ್ತ ಬೇರೆಯವರೊಡನೆ ಬೆರೆಯುತ್ತಿದ್ದಳು. ಸಜ್ಜನರ ನಿಂದೆ, ಅಪಹಾಸ್ಯಗಳನ್ನು ಮಾಡುತ್ತಿದ್ದಳು. ಅವಳ ಜೀವನವೇ ಪಾಪಮಯವಾದುದನ್ನು ಕಂಡು ಸುವೀರನಾಕೆಯನ್ನು ಪರಿತ್ಯಜಿಸಿದ. ಬೇರೆ ಹೆಣ್ಣನ್ನು ಮದುವೆಯಾದ. ಅಂದಿನಿಂದ ಚಿತ್ರೆ ಪ್ರಚಂಡದೂತಿಯಾಗಿ ಒಳ್ಳೆಯ ಗೃಹಿಣಿಯರನ್ನು ಮಾತಿನ ಮೋಡಿಯಿಂದ ಬಲೆಯಲ್ಲಿ ಹಾಕಿಕೊಂಡು ಅವರನ್ನು ದುಷ್ಟರ ಕೈಗೊಪ್ಪಿಸಿದಳು. ಪುರುಷರ ಮನಸ್ಸನ್ನು ಕೆಡಿಸಿ ಪರಸ್ತ್ರೀಯರ ಬಳಿಗೊಯ್ದಳು. ಹೀಗೆ ನೂರಾರು ಮನೆಗಳನ್ನೊಡೆದ ಆ ಪಾಪಿಷ್ಠೆಗೆ ಯಮ ತೀವ್ರ ದಂಡನೆಯನ್ನೇ ಕೊಟ್ಟಿದ್ದ. ಆದರೂ ಈ ಜನ್ಮದಲ್ಲಿ ಅವಳಿಗೆ ಪತಿಲಾಭವಿಲ್ಲ. ಹಿಂದೆ ನೂರು ಮನೆ ಒಡೆದುದಕ್ಕೆ ಒಂದು ನೂರು ವರಗಳು ಮಡಿದುದು ನ್ಯಾಯವೆ ತಾನೆ ?

**ಉಜ್ಜ್ವಲ :-** ಅಷ್ಟು ಪಾಪ ಮಾಡಿದ ಚಿತ್ರೆ ರಾಜಕುಮಾರಿಯಾಗಿ ಹೇಗೆ ಹುಟ್ಟಿದಳು?

**ಕುಂಜಲ :-** ಒಮ್ಮೆ ಒಬ್ಬ ಸಂನ್ಯಾಸಿಯಾದ ಸಿದ್ಧಪುರುಷ ಇವಳ ಮನೆಬಾಗಿಲಿಗೆ ಬಂದ. ದೂರ ಪ್ರಯಾಣಮಾಡಿ ಬಳಲಿ ನೀರಡಿಸಿ ಬಿಸಿಲಿನ ತಾಪಕ್ಕೆ ಕಂಗೆಟ್ಟು ಅಲ್ಲಿ ಆತ ಕುಳಿತ. ಚಿತ್ರೆ ಅವನ ಕಾಲು ತೊಳೆದು ಆಸನವಿತ್ತು ಉಪಚರಿಸಿದಳು. ರುಚಿಯಾದ ಅನ್ನವನ್ನು ಣಬಡಿಸಿದಳು. ತಂಪಾದ ನೀರನ್ನು ಕುಡಿಸಿದಳು. ಮೈಕೈಗಳನ್ನೊತ್ತಿ ಅವನ ಶ್ರಮವನ್ನು ಹೋಗಲಾಡಿಸಿದಳು. ಅವಳು ಸಾಯುವುದಕ್ಕೆ ಮುನ್ನ ಇದೊಂದು ಪುಣ್ಯಕಾರ್ಯ ಮಾಡಿದ್ದುದರಿಂದ ರಾಜಕುಮಾರಿಯಾಗಿ ಜನಿಸಿದಳು. ಅವಳು ಯೋಗಿಯೊಬ್ಬನಿಗೆ ಅನ್ನ ನೀರು ಕೊಟ್ಟಿದ್ದರಿಂದ ಅರಮನೆಯಲ್ಲಿ ದಿವ್ಯಭೋಗ ಅನುಭವಿಸಿದಳು. ಆದರೆ ಗೃಹಭೇದ ಮಾಡಿದ ಪಾಪದಿಂದ ವಿಧವೆಯಾಗೇ ಉಳಿಯಬೇಕಾಯಿತು.

**ಉಜ್ಜ್ವಲ :-** ಆ ಪಾಪದಿಂದ ಮುಕ್ತಳಾಗಲು ಅವಳೇನು ಮಾಡಬೇಕು ?

**ಕುಂಜಲ :-** ಹರಿಧ್ಯಾನ, ಜಪ-ಹೋಮ-ವ್ರತಗಳಿಂದ ಎಲ್ಲ ಪಾಪಗಳೂ ದೂರವಾಗುವುವು. ಸಿಂಹವನ್ನು ಕಂಡರೆ ಆನೆಯ ಮದ ಇಳಿದುಹೋಗುವುದು. ಗರುಡನ ದರ್ಶನವಾದರೆ ಹಾವಿನ ವಿಷ ಹೊರಟುಹೋಗುವುದು. ಹರಿನಾಮೋಚ್ಚಾರಣ ಮಾತ್ರದಿಂದ ಬ್ರಹ್ಮಹತ್ಯಾಪಾತಕವೂ ತೊಲಗುವುದು. ಹರಿಯ ನೂರು ಪವಿತ್ರ

ನಾಮಗಳನ್ನು ದಿವ್ಯ ಜಪಿಸಿದರೆ, ಇಂದ್ರಿಯಗಳನ್ನು ನಿಗ್ರಹಿಸಿ ಏಕ ಮನಸ್ಸಿನಿಂದ ಹರಿಯನ್ನು ಧ್ಯಾನಿಸಿದರೆ ದಿವ್ಯೆ ಎಲ್ಲ ಪಾಪಗಳಿಂದ ಮುಕ್ತಳಾಗುವಳು.

**ಉಜ್ಜ್ವಲ :-** ಹರಿಧ್ಯಾನ, ವ್ರತ-ಜಪಗಳನ್ನು ಮಾಡುವ ವಿಧಾನವೇನು ?

**ಕುಂಜಲ :-** ಮೊದಲು ರಾಗದ್ವೇಷಗಳನ್ನು ದೂರ ಮಾಡಿ ಇಂದ್ರಿಯಗಳನ್ನು ವಿಷಯಗಳ ಕಡೆ ಹರಿಯದಂತೆ ನೋಡಿಕೊಳ್ಳಬೇಕು. ಹಿಂದೆ ಮಾಡಿದ ಪುಣ್ಯ, ಪಾಪಕರ್ಮಗಳನ್ನು ಅನುಭವಿಸಬೇಕು. ದೀಪ ಉರಿಯುವಾಗ ಬತ್ತಿಯ ಸಹಾಯದಿಂದ ಎಣ್ಣೆಯನ್ನು ಸೆಳೆದು ಬರಿದು ಮಾಡುತ್ತದೆ. ಬಿರುಗಾಳಿಯಿಲ್ಲದ ಕಡೆ ದೀಪವನ್ನುರಿಯಲು ಬಿಟ್ಟರೆ ಅದು ನಿರ್ಮಲವಾಗಿ ಪ್ರಕಾಶಿಸಿ ಕಾಡಿಗೆಯನ್ನು ಚೆಲ್ಲುತ್ತದೆ. ಎಲ್ಲೆಡೆ ಬೆಳಕನ್ನು ಬೀರುತ್ತದೆ. ಹಾಗೆಯೇ ಕಾಮಕ್ರೋಧಗಳೆಂಬ ಬಿರುಗಾಳಿಯಿಲ್ಲದಿದ್ದರೆ ದೇಹವೆಂಬ ಬತ್ತಿಯ ಸಹಾಯದಿಂದ ಕರ್ಮವೆಂಬ ಎಣ್ಣೆಯನ್ನು ಆತ್ಮಜ್ಯೋತಿ ಹೀರಿ ಬರಿದುಮಾಡುತ್ತದೆ. ವಿಷಯ ಭೋಗವೆಂಬ ಕಾಡಿಗೆಯನ್ನು ಹೊರಚೆಲ್ಲುತ್ತದೆ. ನಿರ್ಮಲ ಆತ್ಮಪ್ರಕಾಶದಿಂದ ಮೂರುಲೋಕವನ್ನು ಕಾಣುತ್ತದೆ. ಆತ್ಮ ಕೇವಲಜ್ಞಾನರೂಪವಾಗಿ ಉಳಿಯುತ್ತದೆ. ಈ ಸ್ಥಿತಿಗೇರಬೇಕಾದರೆ ಹರಿಧ್ಯಾನ ಮಾಡಬೇಕು. ಆ ಹರಿಯನ್ನು ಹೀಗೆ ಧ್ಯಾನ ಮಾಡಬೇಕು -

ಅವನು ಕೈಯಿಲ್ಲದೆ ಮೂಲೋಕದ ಸ್ಥಾವರ-ಜಂಗಮ ವಸ್ತುಗಳನ್ನು ಹಿಡಿಯುತ್ತಾನೆ. ಕಾಲಿಲ್ಲದೆ ಎಲ್ಲೆಡೆ ಸಂಚರಿಸುತ್ತಾನೆ. ಮೂಗಿಲ್ಲದೆ ಮೂಸುತ್ತಾನೆ. ಬಾಯಿಯಿಲ್ಲದೆ ನುಂಗುತ್ತಾನೆ. ಕಿವಿಯಿಲ್ಲದೆ ಕೇಳುತ್ತಾನೆ. ರೂಪವಿಲ್ಲದೆ ರೂಪಿ ಎನಿಸುತ್ತಾನೆ. ನಾಲಿಗೆಯಿಲ್ಲದೆ ವೇದವನ್ನುಪದೇಶಿಸುತ್ತಾನೆ. ಸದಾ ನಿರ್ಮಲನಾಗಿ ಆನಂದಮಗ್ನ ನಾಗಿರುತ್ತಾನೆ. ಸರ್ವಸಾಕ್ಷಿಯಾಗಿದ್ದು ಜಗತ್ತನ್ನೆಲ್ಲ ತನ್ನ ವಶದಲ್ಲಿಟ್ಟುಕೊಂಡಿರುತ್ತಾನೆ. ಅವನ ಧ್ಯಾನ ಸಾಕಾರವಿರಬಹುದು. ನಿರಾಕಾರವೂ ಇರಬಹುದು. ಬ್ರಹ್ಮಾಂಡದಲ್ಲೆಲ್ಲ ವ್ಯಾಪಿಸಿ ವಾಸುದೇವನೆನಿಸಿದವ ಅವನು ಮಳೆಗರೆಯುತ್ತಿರುವ ಮೋಡದ ಬಣ್ಣದಿಂದ ಸೂರ್ಯನ ತೇಜಸ್ಸಿನಿಂದ ಹೊಳೆವವನು. ನಾಲ್ಕು ಕೈಗಳಲ್ಲಿ ಉಜ್ಜ್ವಲವಾದ ಶಂಖ-ಚಕ್ರ-ಗದಾ-ಪದ್ಮಗಳನ್ನು ಧರಿಸಿದವನು. ತಾವರೆಯಂಥ ಕಣ್ಣುಳ್ಳವನು. ಹವಳದ ತುಟಿಯುಳ್ಳವನು. ಕೌಸ್ತುಭ, ಶ್ರೀವತ್ಸದಿಂದೊಪ್ಪುವ ಎದೆಯವನು. ಕಿರೀಟ-ಹಾರ-ಕೇಯೂರ-ಕಂಕಣ-ಕರ್ಣಕುಂಡಲಗಳಿಂದೊಪ್ಪುವ, ಪೀತಾಂಬರಧಾರಿ, ಗರುಡವಾಹನ, ಲಕ್ಷ್ಮೀರಮಣನು ಆ ಹರಿ.

**ಕುಂಜಲ :-** ಜಯಾ ವಿಜಯಾ ಜಯಂತೀ ಪಾಪನಾಶಿನೀ ತ್ರಿಃಸ್ಪೃಶಾ ವಂಜಲೀ ತಿಲಗಂಧಾ ಅಖಂಡಾ ಮನೋರಕ್ಷಾ ಅಶೂನ್ಯಶಯನ ಜನ್ಮಾಷ್ಟಮೀ ಮುಂತಾದ ವ್ರತಗಳಿಂದ ಹರಿಯನ್ನಾರಾಧಿಸಿದರೆ ಪಾಪವೆಲ್ಲವೂ ದೂರವಾಗುತ್ತದೆ.

ವಿಷ್ಣು ಶತನಾಮಸ್ತೋತ್ರ ಒಂದಿದೆ. ಅದು ಪಾಪರಾಶಿವಿನಾಶಕ. ಅದು ಹೀಗಿದೆ.

ಅಸ್ಯ ಶ್ರೀವಿಷ್ಣು ಶತನಾಮಸ್ತೋತ್ರಸ್ಯ ಬ್ರಹ್ಮಋಷಿಃ ಅನುಷ್ಟುಪ್ ಛಂದಃ ವಿಷ್ಣುರ್ದೇವತಾ ಸಾರ್ವಕಾಮಿಕ ಸಂಸಿದ್ಧ್ಯೈ ಮೋಕ್ಷಾರ್ಥೇ ಚ ಜಪೇ ವಿನಿಯೋಗಃ ॥

**ನಮಾಮ್ಯಹಂ ಹೃಷಿಕೇಶಂ ಕೇಶವಂ ಮಧುಸೂಧನಂ**
**ಸೂದನಂ ಸರ್ವದೈತ್ಯಾನಾಂ ನಾರಾಯಣ ಮನಾಮಯಂ**
**ಜಯಂತಂ ವಿಜಯಂ ಕೃಷ್ಣಂ ಅನಂತಂ<sup>೦</sup> ವಾಮನಂ ತಥಾ**

ವಿಷ್ಣು ವಿಶ್ವೇಶ್ವರಂ ಪುಣ್ಯಂ ವಿಶ್ವಾಧಾರಂ ಸುರಾರ್ಚಿತಂ
ಅನಘಂ ತ್ವಘ ಹಂತಾರಂ ನರಸಿಂಹಂ ಶ್ರಿಯಃ ಪ್ರಿಯಂ
ಶ್ರೀಪತಿಂ ಶ್ರೀಧರಂ ಶ್ರೀದಂ ಶ್ರೀನಿವಾಸಂ ಮಹೋದಯಂ
ಶ್ರೀರಾಮಂ ದೂಧವಂ ಮೋಕ್ಷಂ ಕ್ಷಮಾರೂಪಂ ಜನಾರ್ದನಂ
ಸರ್ವಜ್ಞಂ ಸರ್ವವೇತ್ತಾರಂ ಸರ್ವದಂ ಸರ್ವನಾಯಕಂ
ಹರಿಂ ಮುರಾರಿಂ ಗೋವಿಂದಂ ಪದ್ಮನಾಭಂ ಪ್ರಜಾಪತಿಂ
ಆನಂದಂ ಜ್ಞಾನಸಂಪನ್ನಂ ಜ್ಞಾನದಂ ಜ್ಞಾನನಾಯಕಂ
ಅಚ್ಯುತಂ ಸಬಲಂ ಚಂದ್ರವಕ್ತ್ರಂ ವ್ಯಾಪ್ತ ಪರಾವರಂ
ಯೋಗೇಶ್ವರಂ ಜಗದ್ಯೋನಿಂ ಬ್ರಹ್ಮರೂಪಂ ಮಹೇಶ್ವರಂ
ಮುಕುಂದಂ ಚಾಪಿ ವೈಕುಂಠಂ ಏಕರೂಪಂ ಕವಿಂಧ್ರುವಂ
ವಾಸುದೇವಂ ಮಹಾದೇವಂ ಬ್ರಹ್ಮಣ್ಯಂ ಬ್ರಾಹ್ಮಣ ಪ್ರಿಯಂ
ಗೋಪ್ರಿಯಂ ಗೋಹಿತಂ ಯಜ್ಞಂ ಯಜ್ಞಾಂಗಂ ಯಜ್ಞವರ್ಧನಂ
ಯಜ್ಞಸ್ಯಾಪಿ ಸುಭೋಕ್ತಾರಂ ವೇದವೇದಾಂಗ ಪಾರಗಂ
ವೇದಜ್ಞಂ ವೇದರೂಪಂ ತಂ ವಿದ್ಯಾವಾಸಂ ಸುರೇಶ್ವರಂ
ಅವ್ಯಕ್ತಂ ತಂ ಮಹಾಹಂಸಂ ಶಂಖಪಾಣಿಂ ಪುರಾತನಂ
ಪುರುಷಂ ಪುಷ್ಕರಾಕ್ಷಂ ಚ ವರಾಹಂ ಧರಣೀಧರಂ
ಪ್ರದ್ಯುಮ್ನಂ ಕಾಮಪಾಲಂ ಚ ವ್ಯಾಸಂ ವ್ಯಾಲಮಹೇಶ್ವರಂ
ಸರ್ವಸೌಖ್ಯಂ ಮಹಾಸೌಖ್ಯಂ ಸಾಂಖ್ಯಂ ಚ ಪುರುಷೋತ್ತಮಂ
ಯೋಗರೂಪಂ ಮಹಾಜ್ಞಾನಂ ಯೋಗಿನಾಂ ಗತಿದಂಪ್ರಿಯಂ
ಅಸುರಾರಿಂ ಲೋಕನಾಥಂ ಪದ್ಮಹಸ್ತಂ ಗದಾಧರಂ
ಗುಹಾವಾಸಂ ಸರ್ವವಾಸಂ ಪುಣ್ಯವಾಸಂ ಮಹಾಬುಜಂ,
ನಮಾಮಿ ನಿಶ್ಚಲಂ ನಿತ್ಯಂ ಮನೋವಾಕ್ಕಾಯ ಕರ್ಮಭಿಃ
ನಾಮ್ನಾಂ ಶತೇನಾಪಿ ಸಂಪುಣ್ಯಕರ್ತಾಯಃಸ್ತೌತಿ ಕೃಷ್ಣಂ ಮನಸಾಸ್ಥಿರೇ।
ಸಯಾತಿ ಲೋಕಂಮಧುಸೂದನಸ್ಯ ವಿಹಾಯ ದೋಷಾನಿಹಪುಣ್ಯಪೂತಃ॥

ಈ ಸ್ತೋತ್ರವನ್ನು ಹೇಳಿ ವಿಷ್ಣು ಶತನಾಮವನ್ನು ಜಪಿಸಿದರೆ ಗಂಗಾಸ್ನಾನದ ಫಲ. ಅಶ್ವಮೇಧದಫಲ. ಏಕಾದಶಿ ಉಪವಾಸಮಾಡಿ ಜಾಗರಕಾಲದಲ್ಲಿ ಜಪಿಸಿದರೆ ಪುಂಡರೀಕ ಯಾಗದ ಫಲ. ತುಳಸೀ ಸನ್ನಿಧಿಯಲ್ಲಿ ಜಪಿಸಿದರೆ ರಾಜಸೂಯಫಲ. ಕಾರ್ತೀಕ ಮಾಘಸ್ನಾನ ಮಾಡುವವನು ಇದನ್ನು ಜಪಿಸಿದರೆ ಪರಗತಿ ದೊರೆಯುವುದು. ಶ್ರಾದ್ಧಕಾಲದಲ್ಲಿ ಈ ಸ್ತೋತ್ರವನ್ನು ಪಠಿಸಿದರೆ ಪಿತೃಗಳಿಗೆ ಸದ್ಗತಿ ದೊರೆಯುವುದು. ಬ್ರಾಹ್ಮಣನಿಗೆ ವೇದವಿದ್ಯೆ, ಕ್ಷತ್ರಿಯನಿಗೆ ರಾಜ್ಯ, ವೈಶ್ಯನಿಗೆ ಧನಸಮೃದ್ಧಿ, ಶೂದ್ರನಿಗೆ ಸುಖ ಸಿಗುವುದು.

**ಕುಂಜಲ :-** ಮಗು, ನೀನು ಬೇಗನೆ ಹೋಗಿ ದಿವ್ಯೆಗೆ ನಾನು ಹೇಳಿರುವ ಹರಿ ಧ್ಯಾನದ ವಿಧಾನ, ಅಶೂನ್ಯ ಶಯನವೆಂಬ ವ್ರತ, ವಿಷ್ಣು ಶತನಾಮಸ್ತೋತ್ರಗಳನ್ನು ಹೇಳಿ ಎಚ್ಚರಿಸು. ಪಾಪದಿಂದ ಉದ್ಧೃತಳಾಗಲು ಅದನ್ನು ಮಾಡಬೇಕೆಂದು ಹೇಳು.

ಉಜ್ಜ್ವಲನು ಆಗಲೆಂದು ಹೇಳಿ ತಂದೆತಾಯಿಗಳಿಗೆ ನಮಸ್ಕರಿಸಿ ಪ್ಲಕ್ಷದ್ವೀಪಕ್ಕೆ ಹಾರಿ ದಿವ್ಯೆಯು ಅಳುತ್ತ ಕುಳಿತಿರುವ ಬೆಟ್ಟವನ್ನು ಸೇರಿದ. ದಿವ್ಯೆಯ ಬಳಿ ನಿಂತು 'ಅಮ್ಮ, ನೀನಾರು ? ಏಕೆ ಅಳುತ್ತಿರುವೆ ?' ಎಂದು ಕೇಳಿದ.

**ದಿವ್ಯೆ** :- ನನ್ನ ಕರ್ಮದ ಫಲವಾಗಿ ವೈಧವ್ಯವನ್ನುನುಭವಿಸುತ್ತಿದ್ದೇನೆ. ನೀನಾರು ಮಹಾತ್ಮ ?. ಪಕ್ಷಿರೂಪದಿಂದ ಬಂದು ನನ್ನಲ್ಲಿ ದಯೆಯಿಂದ ನುಡಿಯುತ್ತಿರುವೆ ?.

**ಉಜ್ಜ್ವಲ** :- ನಾನು ಪಕ್ಷಿರೂಪದಿಂದ ಬಂದ ಯಾವ ಮಹಾತ್ಮ್ಯನೂ ಅಲ್ಲ. ನಾನೊಬ್ಬ ಪಕ್ಷಿ. ನಿನ್ನ ದುಃಖವನ್ನು ಕಂಡು ನನ್ನ ಮನ ಕರಗಿದೆ. ನೀನೇಕೆ ಅಳುವೆ. ಹೇಳು.

ದಿವ್ಯೆ ತನ್ನ ವೃತ್ತಾಂತವನ್ನು ಉಜ್ಜ್ವಲನಿಗೆ ತಿಳಿಸಿದಳು. ಉಜ್ಜ್ವಲನೆಂದ.

**ಉಜ್ಜ್ವಲ** :- ನಿನ್ನ ವಿವಾಹ-ಸ್ವಯಂವರದ ವೃತ್ತಾಂತವನ್ನು ನಾನು ಕಣ್ಣಾರೆ ಕಂಡು ನನ್ನ ತಂದೆಯ ಬಳಿಯಲ್ಲಿ ಹೇಳಿ ಅದಕ್ಕೆ ಕಾರಣವನ್ನು ಕೇಳಿದೆ. ಅದೆಲ್ಲ ಅವಳು ಮಾಡಿದ ಪೂರ್ವಕರ್ಮಗಳ ಫಲವೆಂದು ಅವರು ಹೇಳಿದರು.

**ದಿವ್ಯೆ** :- ಹೇ ಪಕ್ಷಿಯೇ, ಆ ಪಾಪದಿಂದ ದೂರಾಗುವ ಉಪಾಯವೇನು, ಹೇಳು. ನನ್ನಲ್ಲಿ ದಯೆದೋರು.

**ಉಜ್ಜ್ವಲ** :- ನಿನಗಾಗಿ ಆ ಉಪಾಯವನ್ನು ತಂದೆ ನನ್ನಲ್ಲಿ ಹೇಳಿದರು. ನೀನು ಹರಿಯನ್ನು ಧ್ಯಾನಮಾಡು. ಅವನ ಶತನಾಮಗಳನ್ನು ಜಪಿಸು. ಅಶೂನ್ಯ ಶಯನ ವ್ರತವನ್ನೂ ಮಾಡು.

ಹೀಗೆ ಹೇಳಿ ಅವುಗಳನ್ನು ಮಾಡುವ ವಿಧಾನವನ್ನೂ ಬೋಧಿಸಿದ ಉಜ್ಜ್ವಲ. ದಿವ್ಯೆ ಅದರಂತೆ ಮಾಡಿದಳು. ನಾಲ್ಕು ವರ್ಷಗಳ ಕಾಲ ಹರಿಧ್ಯಾನ ಜಪವ್ರತಗಳನ್ನು ಮಾಡಿದಾಗ ಹರಿ ಒಲಿದು ಮೈದೋರಿ ನಿಂತ. ಯಾರು ನೀನು ? ಬ್ರಹ್ಮನೋ? ವಿಷ್ಣುವೋ? ಶಿವನೋ ? ದಯೆಯಿಟ್ಟು ಹೇಳು ಎಂದು ಕೈಮುಗಿದು ಬೇಡಿಕೊಂಡಳು. ಹರಿ ಹೇಳಿದ ತ್ರಿಮೂರ್ತಿಗಳಲ್ಲಿ ಅಂತರವಿಲ್ಲ. ಬ್ರಹ್ಮ-ಶಿವರನ್ನರ್ಚಿಸಿದರೆ ನನ್ನನ್ನೇ ಅರ್ಚಿಸಿದಂತೆ. ನನ್ನನ್ನರ್ಚಿಸಿದರೆ ಅವರಿಬ್ಬರನ್ನೂ ಅರ್ಚಿಸಿದಂತೆ. ನಾನು ವಿಷ್ಣು, ನಿನ್ನ ವ್ರತ ಸ್ತೋತ್ರಗಳಿಗೆ ಮೆಚ್ಚಿ ಬಂದಿದ್ದೇನೆ. ಬೇಕಾದ ವರವನ್ನು ಬೇಡು.

**ದಿವ್ಯೆ** :- ಕೃಷ್ಣ, ನಿನಗೆ ಜಯವಾಗಲಿ. ನಿನ್ನ ಕಾಲ್ಗಳಿಗೆರಗುವೆ. ಉದ್ಧರಿಸು, ವರವನ್ನು ಕೊಡುವಿಯಾದರೆ ನಿನ್ನ ಪಾದಕಮಲಗಳಲ್ಲಿ ಭಕ್ತಿ ನೀಡು. ಮೋಕ್ಷಮಾರ್ಗವನ್ನು ತೋರು. ವೈಕುಂಠದಲ್ಲಿ ನನಗೆ ದಾಸ್ಯವನ್ನು ಕರುಣಿಸು.

**ಹರಿ** :- ಹಾಗೇ ಆಗಲಿ. ಯೋಗಿಗಳಿಗೂ ದುರ್ಲಭವಾಗಿರುವ ನನ್ನ ಲೋಕವನ್ನು ನನ್ನನುಗ್ರಹದಿಂದ ನೀನು ಸೇರುಲಿರುವೆ.

ಅಷ್ಟರಲ್ಲಿ ದಿವ್ಯೆ ದಿವ್ಯಶರೀರ ಪಡೆದಳು. ದಿವ್ಯಹಾರ, ದಿವ್ಯಮಾಲೆ, ದಿವ್ಯ ಆಭರಣಗಳನ್ನು ಧರಿಸಿ ಸೂರ್ಯನಂತೆ ಹೊಳೆಯುತ್ತ ದಾಹ, ಪ್ರಳಯ ವರ್ಜಿತವಾದ ವಿಷ್ಣುಲೋಕವನ್ನು ಸೇರಿದಳು. ಉಜ್ಜ್ವಲ ಸಂತೋಷದಿಂದ ಹಿಂತಿರುಗಿ ಬಂದು ಕುಂಜಲನ ಬಳಿ ಎಲ್ಲವನ್ನೂ ಬಣ್ಣಿಸಿದ.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಭೂಮಿಖಂಡದ ವೇನೋಪಾಖ್ಯಾನದಲ್ಲಿ*
*ಗುರುತೀರ್ಥ ಮಹಿಮೆ ಎಂಬ ಹದಿನೈದನೇಯ ಅಧ್ಯಾಯ ಮುಗಿದುದು*

—o—

**ವಿಷ್ಣುರುವಾಚಃ**

**ವಿಷ್ಣು**:- ಕುಂಜಲನು ಸಮುಜ್ಜ್ವಲನನ್ನು ಕೇಳಿದ, 'ನೀನೇನು ವಿಶೇಷವನ್ನು ಕಂಡೆ ?'

**ಸಮುಜ್ಜ್ವಲ** :- ಹಿಮಾಲಯ ಪರ್ವತದಲ್ಲಿ ಆಹಾರವನ್ನರಸುತ್ತ ಸಂಚರಿಸುತ್ತಿದ್ದೆ. ಅಲ್ಲಿ ಮಾನಸ ಸರೋವರದ ಬಳಿ ನಾಲ್ಕು ಕಪ್ಪು ಹಂಸಗಳನ್ನೂ ನಾಲ್ಕು ಮಂದಿ ಭಯಂಕರ ವಿಕಾರ ರೂಪದ ಹೆಣ್ಣುಗಳನ್ನೂ ಕಂಡೆ. ಹಂಸಗಳು ಸರೋವರದಲ್ಲಿ ಮುಳುಗಿ ಸ್ನಾನಮಾಡಿ ಎದ್ದು ಬಂದುವು. ಆ ಹೆಣ್ಣುಗಳು ನೋಡಿ ನಕ್ಕುವು. ನಾಲ್ಕು ಹಂಸಗಳೂ ಆಕಾಶದಲ್ಲಿ ಹಾರುತ್ತ ವಿಂಧ್ಯಪರ್ವತದ ಶಿಖರದಲ್ಲಿ ಒಂದು ಮರದ ನೆರಳಿನಲ್ಲಿ ಕುಳಿತು ವಿಶ್ರಾಂತಿ ಪಡೆದುವು. ಆ ಹೆಣ್ಣುಗಳೂ ಅಲ್ಲಿಗೆ ಬಂದುವು. ಹಂಸಗಳೇಕೊ ಮನಸ್ಸಿನಲ್ಲಿ ದಾರುಣವಾದ ದುಃಖದಿಂದ ಕೊರಗುತ್ತಿದ್ದುವು. ಆಗ ಒಬ್ಬ ಬೇಡ ಮೃಗಗಳನ್ನು ಬೇಟೆಯಾಡುತ್ತ ಬಂದು ಅಲ್ಲಿಯೆ ಒಂದು ಹಾಸುಗಲ್ಲಿನ ಮೇಲೆ ಕುಳಿತ. ಬಳಿಕ ಬೇಡತಿಯೂ ಅಲ್ಲಿಗೆ ಬಂದಳು. ಆಕೆ ಅನ್ನ ನೀರು ತಂದಿದ್ದಳು. ಆದರೆ ಬೇಡನನ್ನು ಆಕೆ ಕಂಡಾಗ ಆತ ಹಿಂದೆ ಎಂದೂ ಇಲ್ಲದಿದ್ದ ವಿಲಕ್ಷಣ ತೇಜಸ್ಸಿನಿಂದ ಹೊಳೆಯುತ್ತಿದ್ದುದರಿಂದ ಪತಿಯೆಂದು ಗುರುತಿಸಲಾರದೆ ಹೋದಳು. ಆಕೆ ಹಿಂತಿರುಗಿ ಮನೆಯ ಕಡೆಗೆ ಹೆಜ್ಜೆ ಹಾಕುವುದನ್ನು ಕಂಡು ಬೇಡ ತಡೆದು ಹೇಳಿದ.

**ಬೇಡ** :- ಏಕೆ ಪ್ರಿಯೆ, ಹೀಗೆ ಹಿಂತಿರುಗಿ ಹೋಗುವೆ ? ಹಸಿವಿನಿಂದ ನಿನಗಾಗಿ ಕಾಯುತ್ತಿದ್ದೆ.

**ಬೇಡತಿ** :- ಯಾರು ನೀನು ?

**ಬೇಡ** :- ನಾನು, ನಿನ್ನ ಪತಿ. ಏಕೆ ಹೀಗೆ ಪ್ರಶ್ನೆಮಾಡುತ್ತಿರುವೆ ? ಹಸಿವಿನಿಂದ ಬಳಲುತ್ತಿದ್ದೇನೆ. ಅನ್ನ ನೀರು ಕೊಡಬಾರದೆ ?

**ಬೇಡಿತಿ** :- ನೀನು ನನ್ನ ಪತಿ ಹೇಗೆ ? ಆತ ಕಪ್ಪಗಿದ್ದು ಎಲ್ಲ ಮೃಗಗಳಿಗೆ ಭಯಂಕರನಾಗಿದ್ದು ಕರಿಯ ಅಂಗಿ ಧರಿಸುತ್ತಾನೆ. ಕೆಂಪುಗಣ್ಣುಗಳು. ನೀನೋ ದಿವ್ಯಶರೀರಿ, ಪ್ರಿಯೆ ಎಂದು ಕರೆದರೆ ಸಾಲದು. ನಿನ್ನ ಹೆಸರು, ಕುಲ, ಹುಟ್ಟೂರು, ಬಾಲ್ಯದಲ್ಲಿ ಆಡಿದ ಆಟಗಳು. ಮಕ್ಕಳ ಹೆಸರು ಎಲ್ಲವನ್ನೂ ಹೇಳು. ಈ ದಿವ್ಯ ಶರೀರ ಹೇಗೆ ಬಂದಿತು ? ಈ ಬಿಳಿಯಂಗಿ ಎಲ್ಲಿ ಸಿಕ್ಕಿತು ? ಎಲ್ಲವನ್ನೂ ಸರಿಯಾಗಿ ಹೇಳಿದರೆ ನಾನು ನಂಬುವೆ.

ಬೇಡನು ತನ್ನ ಹೆಸರು, ಕುಲ, ಹುಟ್ಟೂರು ಎಲ್ಲವನ್ನೂ ಹೇಳಿ ಹೀಗೆ ನುಡಿದ.

**ಬೇಡ** :- ನರ್ಮದೆಯ ಉತ್ತರದ ತೀರದಲ್ಲಿ ಸಂಗಮವಿದೆ. ಅಲ್ಲಿ ನಾನು ಶ್ರಮ ಪರಿಹಾರಕ್ಕಾಗಿ ಸ್ನಾನಮಾಡಿ ನೀರು ಕುಡಿದು ಇಲ್ಲಿಗೆ ಬಂದೆ. ಅದರಿಂದ ನನಗೀ ದಿವ್ಯ ಶರೀರ ಶುಭ್ರವಸ್ತ್ರ ಎಲ್ಲವೂ ದೊರೆಯಿತು.

**ಬೇಡಿತಿ :-** ಹಾಗಿದ್ದರೆ ಮೊದಲು ಆ ಸಂಗಮವನ್ನು ನನಗೆ ತೋರಿಸು. ಬಳಿಕ ನಿನಗೆ ಅನ್ನ ನೀರು ಕೊಡುವೆ.

ಬೇಡನು ಆಗಲಿ ಎನ್ನುತ್ತ ಆಕೆಯನ್ನು ಸಂಗಮದೆಡೆಗೆ ಕರೆದೊಯ್ದ. ಹಂಸಗಳೂ ಹಿಂದನಿಂದ ಬಂದುವು. ಬೇಡನು ಬೇಡಿತಿಯನ್ನು ಅಲ್ಲಿ ಸ್ನಾನ ಮಾಡಿಸಿದ. ಆಕೆಯೂ ದಿವ್ಯ ದೇಹ ಧರಿಸಿ ಮೇಲೆ ಬಂದಳು. ದಂಪತಿಗಳು ಇಬ್ಬರೂ ದಿವ್ಯ ವೇಷಧಾರಿಗಳಾಗಿ ದಿವ್ಯಕಾಂತಿಯಿಂದ ಬೆಳಗಿದರು. ದಿವ್ಯವಿಮಾನ ಬಂದಿತು. ಅವರು ಅದನ್ನೇರಿ ವಿಷ್ಣುಲೋಕಕ್ಕೆ ತೆರಳಿದರು. ಹಂಸಗಳು ಇದೆಲ್ಲವನ್ನು ನೋಡಿ ಸಂತೋಷದಿಂದ ಕೂಗುತ್ತ ತಾವೂ ಆ ಪವಿತ್ರ ತೀರ್ಥ ಸಂಗಮದಲ್ಲಿ ಸ್ನಾನಮಾಡಿ ನೀರು ಕುಡಿದುವು. ಒಡನೆ ಕರಿಯ ಬಣ್ಣ ತೊಲಗಿತು. ಉಜ್ವಲ ಕಾಂತಿ ಮೂಡಿತು. ಆ ಕರಿಯ ಹೆಣ್ಣುಗಳು ಮಾತ್ರ ಅಲ್ಲಿ ಸ್ನಾನಕ್ಕಿಳಿದೊಡನೆ 'ಹಾ' ಎನ್ನುತ್ತ ಅಳುತ್ತ ನಡುಗುತ್ತ ಯಮಲೋಕಕ್ಕೆ ಹೊರಟು ಹೋದುವು. ಹಂಸಗಳು ಆನಂದದಿಂದ ಬಾನಿನಲ್ಲಿ ಎತ್ತರಕ್ಕೆ ಹಾರಿ ಎಲ್ಲಿಗೋ ಹೊರಟು ಹೋದುವು. ಸಮುಜ್ಜಲನೀ ವಿಚಿತ್ರ ಕಥೆಯನ್ನು ಹೇಳಿ ಇದರ ಕಾರಣವೇನೆಂದು ತಿಳಿಯಲು ಬಯಸಿದ. ಕುಂಜಲ ಅದನ್ನು ಹೇಳತೊಡಗಿದ.

**ಕುಂಜಲ :-** ಒಮ್ಮೆ ದೇವೇಂದ್ರನ ಆಸ್ಥಾನಕ್ಕೆ ನಾರದ ಮಹರ್ಷಿ ಬಂದ. ಇಂದ್ರನು ಅವನಿಗೆ ಅರ್ಘ್ಯಪಾದ್ಯಗಳನ್ನಿತ್ತು ಕೈಜೋಡಿಸಿ ನಮಿಸಿದ. ಆಸನದಲ್ಲಿ ಕುಳ್ಳಿರಿಸಿ 'ಮುನಿಯೆ, ಎಲ್ಲಿಂದ ಬರುತ್ತಿರುವೆ ? ನಿನ್ನಾಗಮನಕ್ಕೆ ಕಾರಣವೇನೆಂದು ಕೇಳಿದ. ನಾರದ ಹೇಳತೊಡಗಿದ.

**ನಾರದ :-** ಭೂಮಿಯಲ್ಲಿ ಅನೇಕ ಪುಣ್ಯತೀರ್ಥಗಳಲ್ಲಿ ಸ್ನಾನಮಾಡಿ ದೇವತೆಗಳನ್ನೂ ಪಿತೃಗಳನ್ನೂ ಪೂಜಿಸಿ ನಿನ್ನನ್ನು ಕಾಣಲು ಬಂದೆ.

**ಇಂದ್ರ :-** ನೀನು ನೋಡಿದ ಪುಣ್ಯತೀರ್ಥಗಳಲ್ಲಿ ಬ್ರಹ್ಮಹತ್ಯೆ, ಸುರಾಪಾನ, ಗೋವಧೆ, ಸ್ವಾಮಿದ್ರೋಹ, ಸ್ವರ್ಣಸ್ತೇಯ, ಸ್ತ್ರೀವಧೆಗಳನ್ನು ಪರಿಹರಿಸಬಲ್ಲ ತೀರ್ಥ ಯಾವುದು ?

**ನಾರದ :-** ಎಲ್ಲ ತೀರ್ಥಗಳೂ ಪವಿತ್ರ, ಪಾಪಹರ. ಅವುಗಳಲ್ಲಿ ವಿಶೇಷವೇನೂ ನನಗೆ ತಿಳಿಯದು. ನೀನೆ ಪರೀಕ್ಷಿಸಿ ನೋಡಬಾರದೇಕೆ ?

ಇಂದ್ರನಿಗೂ ಅದು ಸರಿ ಎನಿಸಿತು. ಆತ ಎಲ್ಲ ತೀರ್ಥಗಳನ್ನೂ ತನ್ನ ಬಳಿಗೆ ಕರೆಸಿಕೊಂಡ ಅವೆಲ್ಲವೂ ಮೂರ್ತಿಮತ್ತಾಗಿ ದಿವ್ಯರೂಪದಿಂದ ಬಂದುವು. ಕೆಲವು ಮುತ್ತಿನ ಹೊಳಪಿನಿಂದ, ಕೆಲವು ಚಿನ್ನದ ಕಾಂತಿಯಿಂದ, ಕೆಲವು ತಾವರೆಯ ಬಣ್ಣದಿಂದ, ಕೆಲವು ಮಿಂಚಿನಂತೆ ಕೆಲವು ಸೂರ್ಯನಂತೆ ಇನ್ನುಕೆಲವು ಬೆಂಕಿಯಂತೆ ಹೀಗೆ ಎಲ್ಲವೂ ದಿವ್ಯಕಾಂತಿಯಿಂದ ಹೊಳೆದುವು. ಹಾರ, ಕಂಕಣ, ಕೇಯೂರಮಾಲೆ ಚಂದನಗಳಿಂದ ಅಲಂಕೃತವಾಗಿದ್ದುವು. ಗಂಗೆ, ನರ್ಮದೆ, ಸರಸ್ವತಿ ಮುಂತಾದ ನದಿಗಳು ಪ್ರಯಾಗ ಪುಷ್ಕರ ವಾರಾಣಸಿ ಮುಂತಾದ ಅರವತ್ತೆಂಟು ತೀರ್ಥಗಳು ಇಂದ್ರನ ಬಳಿಗೆ ಬಂದುವು ತಲೆ ಬಾಗಿ ನಮಿಸಿ ನುಡಿದುವು.

**ತೀರ್ಥಗಳು :-** ದೇವರಾಜ, ನಮ್ಮನ್ನೇಕೆ ಕರೆಸಿದೆ ?

**ಇಂದ್ರ :-** ನಿಮ್ಮಲ್ಲಿ ಬ್ರಹ್ಮಹತ್ಯೆ ಗೋವಧೆ ಸ್ತ್ರೀವಧೆ ಸ್ವಾಮಿದ್ರೋಹ ಸುರಾಪಾನ ಸ್ವರ್ಣಸ್ತೇಯ ಗುರುನಿಂದೆ ಭ್ರೂಣಹತ್ಯೆ ರಾಜದ್ರೋಹ ಮಿತ್ರದ್ರೋಹ ದೇವಭೇದ ಲಿಂಗಭೇದ ವಿಪ್ರರ ವೃತ್ತಿಚ್ಛೇದ ಗೋಪ್ರಚಾರನಾಶ ಆಗಾರದಹನ ಗೃಹದೀಪನವೆಂಬ ಹದಿನಾರು ಪಾಪಗಳನ್ನೂ ಆಗಮ್ಯಾಗಮನ ಸ್ವಾಮಿತ್ಯಾಗ ರಣದಿಂದಪಲಾಯನಗಳ ಪಾಪಗಳನ್ನೂ ಪರಿಹರಿಸ ಬಲ್ಲವರು ಯಾರು ? ನೀವು ವಿಚಾರಮಾಡಿ ಎಲ್ಲ ದೇವತೆಗಳೆದುರಿನಲ್ಲಿ ನಾರದ ಮಹರ್ಷಿಗಳ ಸಮಕ್ಷಮದಲ್ಲಿ ಹೇಳಬೇಕು.

**ತೀರ್ಥಗಳು :-** ನಮ್ಮಲ್ಲಿ ಎಲ್ಲರೂ ಪಾಪ ಪರಿಹಾರಕರೆ. ಆದರೆ ನೀನು ಹೇಳುವ ಮಹಾಪಾಪಗಳನ್ನೆಲ್ಲ ಪರಿಹಾರಮಾಡುವವರು ನಾಲ್ಕು ಮಂದಿ ಮಾತ್ರ. ಅವರೆ ಪ್ರಯಾಗ, ಪುಷ್ಕರ, ಅರ್ಘತೀರ್ಥ ಮತ್ತು ವಾರಾಣಸಿ.

ದೇವೇಂದ್ರ ಅವುಗಳ ಸ್ತೋತ್ರಮಾಡಿದ.

**ಕುಂಜಲ :-** ದೇವೇಂದ್ರ ಹಿಂದೆ ಬ್ರಹ್ಮಹತ್ಯೆಮಾಡಿದ. ಗೌತಮರ ಪತ್ನಿಯನ್ನು ಕೂಡಿ ಅಗಮ್ಯಾಗಮನದ ಪಾಪವನ್ನೂ ತಗುಲಿಸಿಕೊಂಡ. ಆಗ ದೇವತೆಗಳೂ ಋಷಿಗಳೂ ಅವನನ್ನು ತೊರೆದರು. ಅವನು ತಪಸ್ಸು ಮಾಡಿದ ಮೇಲೆ ಅವರೆಲ್ಲ ಬಂದು ಅವನನ್ನು ಮಾಳವ ದೇಶಕ್ಕೊಯ್ದರು. ವಾರಾಣಸಿ, ಪ್ರಯಾಗ, ಅರ್ಘತೀರ್ಥ, ಪುಷ್ಕರ ಇವುಗಳ ಪವಿತ್ರಜಲದಲ್ಲಿ ಅವನಿಗೆ ಅಭಿಷೇಕಮಾಡಿದರು. ದೇವೇಂದ್ರನು ಅಂದಿನಿಂದ ಪರಿಶುದ್ಧನೆನಿಸಿದ. ಆತ ಪ್ರಸನ್ನನಾಗಿ ಆ ನಾಲ್ಕು ತೀರ್ಥಗಳಿಗೆ ನೀವು ತೀರ್ಥರಾಜರೆನಿಸಿರೆಂದು ವರವಿತ್ತ. ಮಾಳವ ದೇಶಕ್ಕೆ ನೀನು ಅನ್ನಪಾನಗಳಿಂದ ಧನಧಾನ್ಯಗಳಿಂದ ತುಂಬಿರು. ದುರ್ಭಿಕ್ಷ ನಿನಗೆ ಒದಗದಿರಲಿ ಎಂದು ವರವಿತ್ತ.

ಪಾಂಚಾಲ ದೇಶದ ವಿದುರನೆಂಬೊಬ್ಬ ಕ್ಷತ್ರಿಯನು ಒಬ್ಬ ಬ್ರಾಹ್ಮಣನನ್ನು ಕೊಂದು ಬ್ರಹ್ಮಹತ್ಯಾಪಾತಕದಿಂದ ಕಳಂಕಿತನಾದ. ಶಿಖಾಯಜ್ಞೋಪವೀತ, ತಿಲಕಗಳನ್ನು ಧರಿಸದೆ ಭಿಕ್ಷೆಬೇಡುತ್ತ ಎಲ್ಲ ತೀರ್ಥಗಳ ಯಾತ್ರೆಮಾಡಿದ. ಆದರೂ ಅವನ ಪಾಪನಿವಾರಣೆಯಾಗಲಿಲ್ಲ. ದುಃಖದಿಂದ ಒಂದೆಡೆ ಮರದ ನೆರಳಿನಲ್ಲಿ ಕುಳಿತ. ಮಗಧ ದೇಶದ ಚಂದ್ರಶರ್ಮನೆಂಬೊಬ್ಬ ಬ್ರಾಹ್ಮಣ ಗುರುಹತ್ಯೆಯನ್ನು ಮಾಡಿ ಬಂಧು-ಮಿತ್ರರಿಂದ ಪರಿತ್ಯಕ್ತನಾಗಿ ಶಿಖಾಯಜ್ಞೋಪವೀತವನ್ನು ತೊರೆದು ಎಲ್ಲ ಊರುಗಳನ್ನು ತಿರುಗಿ ಆ ಮರದ ಬುಡದಲ್ಲಿ ಬಂದು ಕುಳಿತ. ಅಷ್ಟರಲ್ಲಿ ವೇದಶರ್ಮನೆಂಬ ಇನ್ನೊಬ್ಬ ಬ್ರಾಹ್ಮಣ ಅಘಮ್ಯಾಗಮನದ ಪಾತಕದಿಂದ ಬಂಧು-ಮಿತ್ರರ, ಊರವರ ನಿಂದೆಗೆ ಗುರಿಯಾಗಿ ಗೊತ್ತುಗುರಿಯಿಲ್ಲದೆ ಅಲೆಯುತ್ತ ಆ ಮರದ ಬುಡಕ್ಕೆ ಬಂದ ಬಳಿಕ ವಂಜುಲನೆಂಬೊಬ್ಬ ವೈಶ್ಯ ಗೋಹತ್ಯೆ ಸುರಾಪಾನಗಳ ಪಾಪದಿಂದ ಲೋಕನಿಂದೆಗೆ ಗುರಿಯಾಗಿ ಅಲ್ಲಿಗೆ ಬಂದ. ಹೀಗೆ ಅಕಸ್ಮಾತ್ ಈ ನಾಲ್ವರು ಪಾಪಿಗಳು ಸೇರಿ ತಮ್ಮ ಪಾಪದ ಕಥೆಗಳನ್ನು ಪರಸ್ಪರ ಹೇಳಿಕೊಂಡರು. ಎಲ್ಲ ತೀರ್ಥಗಳ ಯಾತ್ರೆ ಮಾಡಿದರು. ಪಾಪ ನಿವಾರಣೆ ಮಾತ್ರ ಆಗಲಿಲ್ಲ. ಕೊನೆಗೆ ಅವರು ಕಾಲಂಜರ ಪರ್ವತವನ್ನೇರಿದರು.

**ಕುಂಜಲ :-** ಕಾಲಂಜರ ಬೆಟ್ಟದ ಮೇಲೆ ಅವರು ಕುಳಿತಿದ್ದಾಗ ಒಬ್ಬ ಸಿದ್ಧಪುರುಷನು ಅಲ್ಲಿಗೆ ಬಂದ. ಅವರ ದುಃಖವನ್ನು ಕಂಡು ಜ್ಞಾನದೃಷ್ಟಿಯಿಂದ ಅವರ ಹಿಂದಿನ ಪಾತಕಗಳನ್ನು ತಿಳಿದು ಅನುಕಂಪದಿಂದ ನುಡಿದ.

**ಸಿದ್ಧಪುರುಷ :-** ಅಮಾವಾಸ್ಯೆಯು ಸೋಮವಾರ ಬಂದಾಗ ಪ್ರಯಾಗ, ಪುಷ್ಕರ, ಅರ್ಘತೀರ್ಥ, ವಾರಾಣಸಿ ಈ ನಾಲ್ಕು ತೀರ್ಥಗಳಲ್ಲಿ ಸ್ನಾನ ಮಾಡಿ ಪಾಪಗಳಿಂದ ಮುಕ್ತರಾಗಿರಿ.

ಹೀಗೆ ಸಿದ್ಧಪುರುಷನು ನೀಡಿದ ಆದೇಶವನ್ನು ಅವರು ಪಾಲಿಸಿದರು. ಆಗ ಅವರು ಕರಿಯ ಹಂಸಗಳಾಗಿ ಮಾರ್ಪಟ್ಟರು. ಅವರ ಮಹಾಪಾಪಗಳು ಶರೀರದಿಂದ ಹೊರಗೆಬಂದು ಕರಾಳ ಆಕೃತಿಯ ಕರೀಜು ಹೆಣ್ಣುಗಳಾಗಿ ಕೋರೆ ಹಲ್ಲುಗಳಿಂದ ನೆಟ್ಟಗೆ ನಿಂತ ಕೂದಲುಗಳಿಂದ ಅವರನ್ನು ಹೆದರಿಸುತ್ತ ಬೆನ್ನ ಹಿಂದೆ ಬರತೊಡಗಿದುವು. ಯಾತ್ರಿಕರು ಯಾವ ತೀರ್ಥಕ್ಕೇ ಹೋಗಲಿ ಅವರ ಬೆನ್ನಹಿಂದೆ ಈ ಹಂಸಗಳು, ಅವುಗಳ ಬೆನ್ನಹಿಂದೆ ನಾಲ್ಕು ಹೆಣ್ಣುಗಳು. ಅರವತ್ತೆಂಟು ತೀರ್ಥಗಳಲ್ಲಿ ಸ್ನಾನಮಾಡಿ ಮಾನಸ ಸರೋವರದಲ್ಲಿಯೂ ಸ್ನಾನ ಮಾಡಿದವು ಹಂಸಗಳು. ಅಲ್ಲಿ ನೀನು ಅವುಗಳನ್ನು ಕಂಡೆ. ಹಂಸಗಳು ತೀರ್ಥಸ್ನಾನ ಮಾಡಿ ತಮ್ಮ ಮೈಬಣ್ಣವನ್ನು ನೋಡಿಕೊಂಡರೆ ಆ ಹೆಣ್ಣುಗಳು ನಗುವವು. ಹಂಸಗಳು ಶುಭ್ರವರ್ಣವನ್ನು ಹೊಂದಲಾರದೆ ನಿರಾಶೆಗೊಂಡು ದುಃಖಿಸುವುವು. ಕೊನೆಗೆ ಬೇಡನು ತೋರಿಸಿದ ಸಂಗಮದಲ್ಲಿ ಹಂಸಗಳು ಸ್ನಾನಮಾಡಿ ಶುಭ್ರವರ್ಣವನ್ನು ಪಡೆದವು. ಹೆಣ್ಣುಗಳು ಆ ಪವಿತ್ರ ಜಲಸ್ಪರ್ಶದಿಂದ ಸತ್ತು ಹೋದುವು. ಹೀಗೆ ಪ್ರಯಾಗ ಮುಂತಾದ ನಾಲ್ಕುತೀರ್ಥಗಳಲ್ಲಿ ನಿವಾರಣೆಯಾಗದ ಪಾಪಗಳೂ ರೇವಾಸಂಗಮದಲ್ಲಿ ನಾಶಹೊಂದಿದವು. ನರ್ಮದೆಯ ನೀರಿನಲ್ಲಿ ಎಲ್ಲಿ ಸ್ನಾನಮಾಡಿದರೂ ಅಶ್ವಮೇಧಯಾಗ ಫಲ ದೊರಕುವುದು.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಭೂಮಿಖಂಡದ ವೇನೋಪಾಖ್ಯಾನದಲ್ಲಿ ಗುರುತೀರ್ಥ ವರ್ಣನೆ ಎಂಬ ಹದಿನಾರನೇಯ ಅಧ್ಯಾಯ ಮುಗಿದುದು*



## ಗುರುತೀರ್ಥ ವರ್ಣನೆ

ಅಧ್ಯಾಯ - ೧೭

**ಕುಂಜಲ :-** ವಿಜ್ವಾಲ, ನೀನೇನು ವಿಶೇಷವನ್ನು ಕಂಡೆ ?

**ವಿಜ್ವಾಲ :-** ನಾನು ಮೇರು ಪರ್ವತದ ಆನಂದವೆಂಬ ಒಂದು ಕಾಡಿನಲ್ಲಿ ಆಹಾರವನ್ನು ಹುಡುಕಿದೆ. ಆ ಕಾಡಿನಲ್ಲಿ ದೇವತೆಗಳು, ಋಷಿಗಳು, ಗಂಧರ್ವರು, ಕಿನ್ನರರು, ಅಪ್ಸರೆಯರು, ಎಲ್ಲರೂ ಇರುತ್ತಾರೆ. ಸಂಗೀತ ಧ್ವನಿ, ಮೇಘನಾದ, ದುಂಬಿಗಳ ಝೇಂಕಾರ ಎಲ್ಲವೂ ಅಲ್ಲಿ ಮಧುರವಾಗಿ ಕೇಳಿಬರುತ್ತದೆ. ಹಕ್ಕಿಗಳ ಕಲರವ ಕೇಳಲು ಇಂಪಾಗಿರುತ್ತದೆ. ಚಂದನ ಚೂತ ಚಂಪಕ ಮೊದಲಾದ ನಾನಾ ವೃಕ್ಷಗಳು ಹೂ ಬಿಟ್ಟು ವನದ ಶೋಭೆಯನ್ನು ಹೆಚ್ಚಿಸಿವೆ. ಅಲ್ಲಿ ಬಹು ವಿಶಾಲವಾದ ಒಂದು ಸರೋವರವಿದೆ. ಅದರ ತಿಳಿನೀರಿನಲ್ಲಿ ಅರಳಿದ ತಾವರೆಗಳಿವೆ ಹಂಸಕಾರಂಡವ ಪಕ್ಷಿಗಳಿವೆ. ನಾನು ಅಲ್ಲಿ ಒಂದು ಆಶ್ಚರ್ಯವನ್ನು ಕಂಡೆ. ದಿವ್ಯವಿಮಾನದಿಂದ ರಾಜಮರ್ಯಾದೆಯೊಡನೆ ಒಬ್ಬ ಅಪ್ರತಿಮ ಸುಂದರಾಕಾರದ ಪುರುಷನೊಬ್ಬ ಇಳಿದು ಬಂದ. ದಿವ್ಯ ವಸ್ತ್ರಾಭರಣ

ಗಂಧಮಾಲ್ಯಗಳಿಂದ ಭೂಷಿತನಾಗಿ ಋಷಿ ಗಂಧರ್ವ ಅಪ್ಸರೆಯರ ಸ್ತೋತ್ರಗಳನ್ನಾಲಿಸುತ್ತ ಸರೋವರದ ಬಳಿಗೆ ಬಂದ ಅವನ ಜತೆಗೆ ರತಿಯಂಥ ಓರ್ವ ಸುಂದರಿ ಇದ್ದಳು. ಚಿನ್ನದ ಹಾರ, ಮುತ್ತಿನ ಬಳೆ, ದಿವ್ಯ ವಸ್ತ್ರ ಗಂಧ ಚಂದನಗಳಿಂದ ಶೋಭಿಸುವ ಆಕೆಯೂ ಸರೋವರದ ಬಳಿ ಬಂದಳು. ಇಬ್ಬರೂ ಸ್ನಾನ ಮಾಡಿದರು. ಇಬ್ಬರೂ ಕತ್ತಿ ಎತ್ತಿದರು. ಅವರ ಶವಗಳು ಕೊಳದ ದಂಡೆಯಲ್ಲಿ ಬಿದ್ದಿದ್ದವು. ಒಡನೆ ಕತ್ತಿಯಿಂದ ತಮ್ಮ ಶವವನ್ನು ತಾವೆಕೊಯ್ದು ತಿಂದರು. ತಿಂದು ತೃಪ್ತರಾಗಿ ಕೊಳದ ನೀರು ಕುಡಿದು ಆ ವಿಮಾನದಿಂದಲೆ ಹೊರಟು ಹೋದರು. ಅವರು ಶವದ ಮಾಂಸವನ್ನು ತಿನ್ನುತ್ತಿದ್ದಾಗ ಇಬ್ಬರು ಸುಂದರ ರಮಣಿಯರು ನೋಡಿ ಒಂದೇ ಸಮನೆ ನಗುತ್ತಿದ್ದರು. ಇನ್ನಿಬ್ಬರು ಭಯಂಕರ ರೌದ್ರಾಕಾರದ ಹೆಣ್ಣುಗಳು ಬಾಯಿ ತೆರೆದು ಕೋರೆ ಹಲ್ಲುಗಳನ್ನು ತೋರುತ್ತ ದೇಹಿ ದೇಹಿ ಎಂದು ಮಾಂಸವನ್ನು ಬೇಡುತ್ತಿದ್ದವು.

ಇದು ಒಂದು ದಿನ ಮಾತ್ರ ನಡೆದ ಘಟನೆಯಲ್ಲ ಪ್ರತಿ ದಿನವೂ ಅವರ ಶವಗಳು ಮೈ ಕೈ ತುಂಬಿಕೊಂಡು ಅವರಂತೆ ದಿವ್ಯ ಸುಂದರ ರೂಪದಿಂದ ಹೊಳೆಯುತ್ತಿದ್ದುವು. ಪ್ರತಿ ದಿನವೂ ಅವರು ಅವುಗಳ ಮಾಂಸವನ್ನು ಕಿತ್ತು ತಿಂದು ಹೊರಟು ಹೋಗುತ್ತಿದ್ದರು.

ಅಪ್ಪ, ಅವರಿಬ್ಬರು ಯಾರು ? ಅವರು ಶವ ಮಾಂಸವನ್ನು ಭಕ್ಷಿಸುವಾಗ ನಗುವ ಇಬ್ಬರು ಸುಂದರಿಯರು ಯಾರು ? ಮಾಂಸವನ್ನು ಬೇಡುವ ಆ ಇಬ್ಬರು ಭಯಂಕರಿಯರು ಯಾರು ?

**ಕುಂಜಲ :-** ಮಗು, ಎಲ್ಲವೂ ಕರ್ಮಾಧೀನ. ಪುಣ್ಯಕರ್ಮದಿಂದ ಸುಖ ಪಾಪ ಕರ್ಮದಿಂದ ದುಃಖ, ಶಾಸ್ತ್ರದಿಂದ ಜ್ಞಾನವೆಂಬ ಕಣ್ಣು ಪಡೆದು ಅದರಿಂದ ನೋಡಿ ವಿಚಾರಿಸಿ ನಿಪುಣತೆಯಿಂದ ನಮಗೆ ಬೇಕಾದ ಕರ್ಮವನ್ನೇ ಮಾಡಬೇಕು. ಒಳ್ಳೆಯ ಮೂರ್ತಿಯನ್ನು ನಿರ್ಮಿಸುವ ಶಿಲ್ಪಿ ಧಾತುವನ್ನು ಕರಗಿಸಿ ತನಗೆ ಬೇಕಾದ ಆಕಾರವನ್ನು ಕೊಡುವಂತೆ ಕರ್ಮವನ್ನು ತನಗೆ ಬೇಕಾದ ರೀತಿಯಲ್ಲಿಯೇ ಜಾಗರೂಕತೆಯಿಂದ ಕೌಶಲದಿಂದ ಆಚರಿಸಬೇಕು. ಬೇಸಾಯಗಾರನು ಯಾವ ಬೀಜವನ್ನು ಬಿತ್ತುವನೊ ಅದರ ಫಲವನ್ನು ಪಡೆವಂತೆ ನಾವು ಯಾವ ಕರ್ಮವನ್ನು ಮಾಡುವೆವೊ ಅದರ ಫಲವನ್ನೇ ಪಡೆಯುತ್ತೇವೆ. ಪೂರ್ವಕರ್ಮಗಳೇ ನಮ್ಮ ಈ ಜನ್ಮದಲ್ಲಿ ಜೀವನ ರೀತಿಯನ್ನು ನಿರ್ಧರಿಸುತ್ತವೆ. ಈ ಜನ್ಮದಲ್ಲಿ ಯಾವ ಯೋನಿಯಲ್ಲಿ ಜನಿಸಬೇಕೆಂಬುದೂ ಪೂರ್ವ ಕರ್ಮದ ಅಧೀನ. ದೇಹಬಲದಿಂದಾಗಲಿ ಬುದ್ಧಿಶಕ್ತಿಯಿಂದಾಗಲಿ ಕರ್ಮವನ್ನು ಮೀರುವುದು ಯಾರಿಂದಲೂ ಸಾಧ್ಯವಿಲ್ಲ. ಅದರ ಫಲವನ್ನುಣ್ಣದ ಹೊರತು ಅದನ್ನು ಅಳಿಸಲೂ ಸಾಧ್ಯವಿಲ್ಲ. ನೆರಳಿನಂತೆ ಅದು ಬೆನ್ನು ಹತ್ತುತ್ತದೆ. ನೀನು ಹೇಳಿದ ಆ ಇಬ್ಬರು ದಂಪತಿಗಳೂ ಅವರು ಮಾಡಿದ ಕರ್ಮದ ಫಲ ಉಣ್ಣುತ್ತಿದ್ದಾರೆ. ಅವರು ಹಿಂದಿನ ಜನ್ಮದಲ್ಲಿ ಚೋಳ ದೇಶದ ರಾಜ ದಂಪತಿಗಳು. ರಾಜ ಸುಬಾಹು ಒಳ್ಳೆಯ ವಿಷ್ಣು ಭಕ್ತ. ಅಶ್ವಮೇಧ ಮುಂತಾದ ಅನೇಕ ಯಾಗಗಳನ್ನು ಮಾಡಿದವ. ಆದರೆ ದಾನಗಳನ್ನೆಂದೂ ಮಾಡುತ್ತಿದ್ದಿಲ್ಲ. ರಾಜಪುರೋಹಿತನಾದ ಜೈಮಿನಿ ಎಂಬ ಬ್ರಾಹ್ಮಣ ಆಗಾಗ ಹೀಗೆ ಉಪದೇಶ ಮಾಡುತ್ತಿದ್ದ.

**ಜೈಮಿನಿ :-** ರಾಜನ್, ದಾನಮಾಡಿದರೆ ಯಶಸ್ಸು ಕೀರ್ತಿ ಸುಖ ಎಲ್ಲವೂ ದೊರೆಯುತ್ತದೆ. ಈ ಲೋಕದಲ್ಲಿ ಎಂದಿನವರೆಗೆ ಕೀರ್ತಿ ಇರುವುದೋ ಅಂದಿನವರೆಗೆ ಸ್ವರ್ಗ ಸುಖಾನುಭವವೂ ಇರುವುದು. ದಾನ ಮಾಡುವುದು ಬಲು ಕಷ್ಟ. ಆದ್ದರಿಂದ ಎಲ್ಲ ಪ್ರಯತ್ನಗಳನ್ನು ಮಾಡಿ ದಾನ ಮಾಡಬೇಕು.

**ಸುಬಾಹು :-** ದಾನ ಮತ್ತು ತಪಸ್ಸುಗಳಲ್ಲಿ ಯಾವುದು ಹೆಚ್ಚು ಕಷ್ಟ ಸಾಧ್ಯ ? ಯಾವುದಕ್ಕೆ ಹೆಚ್ಚಿನ ಫಲ ?

**ಜೈಮಿನಿ :-** ದಾನಕ್ಕಿಂತ ಕಷ್ಟ ಸಾಧ್ಯವಾದುದು ಲೋಕದಲ್ಲಿಯೆ ಇಲ್ಲ. ಜೀವದ ಹಂಗು ತೊರೆದು ಸಮುದ್ರಕ್ಕಾಗಲಿ ಅರಣ್ಯಕ್ಕಾಗಲಿ ಧನ ಸಂಪಾದನೆಗಾಗಿ ಜನ ಹೋಗಲು ಸಿದ್ಧರಿರುತ್ತಾರೆ. ಅವರು ನಾಯಿಯಂತೆ ಧನಿಕರ ಹಿಂದೆ ಹೋಗಲೂ ಹೇಸಲಾರರು. ಹೀಗೆ ಬಹು ಕಷ್ಟದಿಂದ ಸಂಪಾದಿಸಿದ ಹಣವನ್ನು ದಾನ ಮಾಡುವುದು ಸುಲಭವಲ್ಲ. ಅದರಲ್ಲಿಯೂ ನ್ಯಾಯಮಾರ್ಗದಿಂದ ಹಣ ಸಂಪಾದಿಸಿ ಶ್ರದ್ಧೆಯಿಂದ ವಿಧಿವತ್ತಾಗಿ ಸತ್ಪಾತ್ರರಿಗೆ ದಾನ ಮಾಡಿದರೆ ಅನಂತ ಫಲ. ಶ್ರದ್ಧೆಯ ಬಲವೊಂದಿದ್ದರೆ ಸಂಸಾರವನ್ನೇ ದಾಟಬಹುದು.

**ಶ್ರದ್ಧಯಾ ಸಾಧ್ಯತೇ ಧರ್ಮೋ ಮಹದ್ಭಿರ್ನಾರ್ಥರಾಶಿಭಿಃ।**
**ನಿಷ್ಕಿಂಚನಾಸ್ತು ಮುನಯಃ ಶ್ರದ್ಧಾಧರ್ಮಾ ದಿವಂಗತಾಃ ॥**

ದಾನದಲ್ಲಿ ಶ್ರದ್ಧೆಯೇ ಮುಖ್ಯವಾಗಿ ಪುಣ್ಯ ಸಾಧನ. ದಾನಮಾಡುವ ಹಣದ ಮೊತ್ತ ಮುಖ್ಯವಲ್ಲ. ಏನೂ ಹಣವಿಲ್ಲದ ಮುನಿಗಳು ಶ್ರದ್ಧೆಯಿಂದಲೆ ಪುಣ್ಯ ಸಂಪಾದಿಸಿ ಸ್ವರ್ಗಕ್ಕೆ ಹೋಗುವುದುಂಟು.

ದಾನಗಳಲ್ಲಿ ಅನ್ನದಾನಕ್ಕೆ ಮಿಗಿಲಾದ ದಾನವಿಲ್ಲ. ಅನ್ನದ ಜೊತೆಗೆ ಸವಿಯಾದ ನೀರು, ಸವಿಯಾದ ಮಾತು ಇವೆರಡೂ ಬೇಕು. ಹೀಗೆ ಅನ್ನದಾನ ಮಾಡಿದರೆ ಅಕ್ಷಯ ಫಲವಿದೆ.

**ಪೂರ್ವಜನ್ಮನಿ ಯದ್ದತ್ತಂ ಭಕ್ತ್ಯಾ ಪಾತ್ರೇ ಸಕೃನ್ನರೈಃ ।**
**ಜನ್ಮಾಂತರಂ ಸುಸಂಪ್ರಾಪ್ಯ ನಿತ್ಯಮೇವ ಭುನಕ್ತಿ ಚ ॥**

ಪೂರ್ವಜನ್ಮದಲ್ಲಿ ಶ್ರದ್ಧೆಯಿಂದ ಸತ್ಪಾತ್ರನಿಗೆ ಒಮ್ಮೆ ದಾನಮಾಡಿದುದನ್ನು ಮುಂದಿನ ಜನ್ಮದಲ್ಲಿ ನಿತ್ಯವೂ ಭೋಗಿಸಬಹುದು.

ಆದುದರಿಂದ ಮಹಾರಾಜ, ನೀನು ಸರ್ವ ಪ್ರಯತ್ನದಿಂದ ಅನ್ನದಾನ ಮಾಡಬೇಕು.

**ಸುಬಾಹು :-** ವಿಪ್ರೋತ್ತಮ, ಸ್ವರ್ಗದ ಗುಣವೇನು ಹೇಳು.

**ಜೈಮಿನಿ :-** ಸ್ವರ್ಗದಲ್ಲಿ ದಿವ್ಯವಾದ ನಂದನವನವಿದೆ. ಅಲ್ಲಿಯ ಮರಗಳು ಬಯಸಿದುದನ್ನೆಲ್ಲ ಕೊಡಬಲ್ಲವು. ಅಪ್ಸರೆಯರಿಂದ ಕೂಡಿದ ದಿವ್ಯ ವಿಮಾನಗಳಿವೆ. ಉದಿಸುವ ಸೂರ್ಯನಂತೆ ಹೊಳೆವ ರತ್ನಗಳಿವೆ. ಚಂದ್ರನಂತೆ ಹೊಳೆವ ಬೆಳ್ಳಗಿನ ಹಾಸಿಗೆಗಳೂ ಆಸನಗಳೂ ಇವೆ. ಪುಣ್ಯವಂತರು ಮಾತ್ರ ಅಲ್ಲಿಗೆ ಹೋಗುತ್ತಾರೆ. ನಾಸ್ತಿಕರು, ಇಂದ್ರಿಯ ಲೋಲಪರು, ಕ್ರೂರ ಕೃತಘ್ನ ಮನುಷ್ಯರು ಹೋಗಲಾರರು. ಯಜ್ಞದಾನಗಳನ್ನು ಮಾಡಿದವರೆ ಹೋಗಬಲ್ಲರು. ಅಲ್ಲಿ ರೋಗವಿಲ್ಲ. ಹಸಿವು ನೀರಡಿಕೆಗಳಿಲ್ಲ. ಇನ್ನೂ ಅನೇಕ ಗುಣಗಳು ಸ್ವರ್ಗದಲ್ಲಿವೆ. ಆದರೆ ದೋಷಗಳೂ ಇಲ್ಲದಿಲ್ಲ.

**ಶುಭಸ್ಯ ಕರ್ಮಣ ಕೃತ್ಸ್ನಂ ಫಲಂ ತತ್ರೈವ ಭುಜ್ಯತೆ**
**ನ ಚಾತ್ರ ಕ್ರಿಯತೇ ಭೂಯಃ ಸೋತ್ರ ದೋಷೋ ಮಹಾನ್‌ಸ್ಮೃತಃ**

ಮಾಡಿದ ಪುಣ್ಯ ಕರ್ಮವನ್ನೆಲ್ಲ ಭೋಗಿಸಬೇಕು. ಬೇರೆ ಪುಣ್ಯ ಕರ್ಮಗಳನ್ನು ಮಾಡುವಂತಿಲ್ಲ. ಇದುವೆ ಸ್ವರ್ಗದಲ್ಲಿರುವ ಒಂದು ದೊಡ್ಡ ದೋಷ.

ತನಗಿಂತ ಹೆಚ್ಚು ವೈಭವದಿಂದ ಮೆರೆಯುವವರನ್ನು ಕಂಡಾಗ ಅಸಹನೆಪಡುವುದು ಸ್ವರ್ಗದಲ್ಲಿ ಇನ್ನೊಂದು ದೋಷ. ಸುಖಸಾಗರದಲ್ಲಿ ಮುಳುಗಿದವನು ಕರ್ಮಕ್ಷಯ ಆದಾಗ ತನಗರಿವಿಲ್ಲದಂತೆ ಒಮ್ಮೆಲೆ ಭೂಮಿಗೆ ಬೀಳುವುದು ಮತ್ತೊಂದು ದೋಷ.

**ಸುಬಾಹು** :- ಹಾಗಾದರೆ ಸ್ವರ್ಗದಲ್ಲಿ ಬಹು ದೋಷಗಳಿವೆ ಎಂದಂತಾಯಿತು. ದೋಷವಿಲ್ಲದ ಶಾಶ್ವತ ಪುಣ್ಯಲೋಕಗಳು ಯಾವವು ?

**ಜೈಮಿನಿ** :- ಬ್ರಹ್ಮಲೋಕದವರೆಗಿನ ಎಲ್ಲ ಲೋಕಗಳಲ್ಲಿಯೂ ದೋಷಗಳಿವೆ. ಅದಕ್ಕಿಂತ ಮೇಲಿನ ವಿಷ್ಣುಲೋಕ ಒಂದೆ ನಿರ್ದೋಷವಾದುದು. ಅಲ್ಲಿ ದಂಭ, ಮೋಹ, ಭಯ, ಕ್ರೋಧ ಮೊದಲಾದ ಯಾವ ದೋಷಗಳಿಗೂ ಎಡೆಯಿಲ್ಲ. ರಾಗದ್ವೇಷಗಳಿಲ್ಲದ ಜಿತೇಂದ್ರಿಯರಾದ, ಧ್ಯಾನಯೋಗಿಗಳು ಅಲ್ಲಿಗೆ ಹೋಗುವರು. ಆದುದರಿಂದ ವಿವೇಕಿಗಳು ಸ್ವರ್ಗವನ್ನು ಬಯಸದೇ ವಿಷ್ಣುಲೋಕ ಪ್ರಾಪ್ತಿಗೆ ಯತ್ನಿಸುತ್ತಾರೆ.

**ಸುಬಾಹು** :- ನಾನೂ ಸ್ವರ್ಗವನ್ನು ಬಯಸುವದಿಲ್ಲ. ಅದಕ್ಕಾಗಿ ಅನ್ನದಾನವನ್ನೂ ಮಾಡುವದಿಲ್ಲ. ದೊಡ್ಡ ಆಸೆ ಇಟ್ಟುಕೊಂಡು ದಾನಮಾಡಿ ಸ್ವರ್ಗಪಡೆದರೂ ಅದರಿಂದ ಪತನವಾಗುವದಾದರೆ ಆ ದಾನವನ್ನೇಕೆ ಮಾಡಬೇಕು ? ಹರಿಧ್ಯಾನವನ್ನೆ ಮಾಡಿ ದಾಹ ಪ್ರಲಯ ವರ್ಜಿತವಾದ ವಿಷ್ಣುಲೋಕವನ್ನು ಹೊಂದುವೆ.

**ಜೈಮಿನಿ** :- ಧ್ಯಾನವೂ ಒಂದು ಯಜ್ಞವೆ. ಅದನ್ನಾಚರಿಸುವಾಗಲೂ ಅನ್ನ, ವಸ್ತ್ರ, ತಾಂಬೂಲ, ಸುವರ್ಣ, ಭೂ ಗೋದಾನಗಳನ್ನುಕೊಡಬೇಕಾಗುತ್ತದೆ. ಧರ್ಮಿಷ್ಠರಾದ ರಾಜರೆಲ್ಲರೂ ವಿಷ್ಣುಲೋಕವನ್ನು ಸಂಪಾದಿಸಿದುದೂ ಹೀಗೆಯೆ. ನೀನೂ ಅನ್ನಪಾನ ಮುಂತಾದ ದಾನಗಳನ್ನು ಮಾಡಿ, ಜ್ಞಾನ ಸಂಪಾದಿಸಿ, ಹಸಿವು ನೀರಡಿಕೆಗಳ ಭಯದಿಂದ ಮುಕ್ತನಾಗಿ ಶಾಶ್ವತ ವಿಷ್ಣುಲೋಕವನ್ನುಪಡೆ.

ಪಾವನವಾದ ಈ ಚರಿತ್ರೆಯಲ್ಲಿ ಕೇಳಿದವನೂ ಎಲ್ಲ ಪಾಪಗಳಿಂದ ಮುಕ್ತನಾಗಿ ವಿಷ್ಣುಲೋಕವನ್ನು ಹೊಂದುವನು.

**ಸುಬಾಹು**:- ಯಾವ ಕರ್ಮಗಳು ನರಕಕ್ಕೆ ದಾರಿಯಾಗುವವು ? ಸ್ವರ್ಗಸಾಧನವಾದ ಕರ್ಮಗಳು ಯಾವವು ?

**ಜೈಮಿನಿ** :- ನಾಸ್ತಿಕ್ಯ, ವಿಷಯಲೋಲುಪತೆ, ದಂಭ, ಕೃತಘ್ನತೆ, ಕಳವು, ದರೋಡೆ, ಸುಳ್ಳು, ಚಾಡಿಕೋರತನ, ಪರಸ್ತ್ರೀಸಂಗ, ಹಿಂಸೆ, ಪರನಿಂದೆ, ಕೆರೆಬಾವಿಗಳನ್ನು ಹಾಳುಗೆಡಹುವುದು, ಪಿತೃದೇವತೆಗಳ ಪೂಜೆ ಮಾಡದಿರುವುದು. ಆಶ್ರಮ ಧರ್ಮವನ್ನು ಪಾಲಿಸದಿರುವುದು, ವಿಷ್ಣುಸ್ಮರಣೆ ಮಾಡದಿರುವುದು, ಯಜ್ಞಗುರು ಸಾಧು ಕನ್ಯೆ ಮಿತ್ರ ಇವರ ನಿಂದೆಮಾಡುವುದು. ಜನರು ನಡೆವ ದಾರಿಯನ್ನು ಕೆಡಿಸುವುದು, ಅವಿಶ್ವಾಸ, ಕಪಟ, ಅನಾಥರನ್ನೂ ದೀನರನ್ನೂ ರೋಗದಿಂದ ಬಳಲುವವರನ್ನೂ ವೃದ್ಧರನ್ನೂ

ಕಂಡು ಅನುಕಂಪೆ ತೋರದಿರುವುದು. ವ್ರತನಿಯಮಗಳನ್ನು ಪ್ರಾರಂಭಿಸಿ ಇಂದ್ರಿಯವಶರಾಗಿ ಆ ನಿಯಮಗಳನ್ನು ಮೀರುವುದು ಮುಂತಾದ ಪಾಪಗಳನ್ನು ಮಾಡಿದರೆ ನರಕ ಪ್ರಾಪ್ತಿಯಾಗುವುದು.

ಸತ್ಯ, ತಪಸ್ಸು, ಕ್ಷಮೆ, ದಾನ, ಅಧ್ಯಯನ, ದೇವತಾರಾಧನೆ, ವಿಷ್ಣುಭಕ್ತಿ, ಪಿತೃಭಕ್ತಿ, ಹಗಲು ನಿದ್ದೆ ಮಾಡದಿರುವುದು, ಹಿಂಸೆ ಮಾಡದಿರುವುದು, ಸಜ್ಜನರೊಡನಾಟ, ಎಲ್ಲರ ಹಿತಚಿಂತನೆ, ಲೋಭವನ್ನು ಬಿಡುವುದು, ಎಲ್ಲರಿಗೂ ಆಶ್ರಯ ನೀಡುವುದು, ಗುರುಗಳಿಗೆ ಗೌರವ ತೋರುವುದು, ಪ್ರತಿಗ್ರಹಣ ಮಾಡದಿರುವುದು, ಇಂದ್ರಿಯನಿಗ್ರಹ, ಅನ್ನಬಟ್ಟೆ ಸುವರ್ಣಗೋಭೂಮಿಗಳ ದಾನ, ಬೇಡುವವರನ್ನು ಕಂಡು ಸಂತೋಷದಿಂದ ಒಳ್ಳೆಯ ಮಾತುಗಳನ್ನಾಡಿ ನಿಃಸ್ವಾರ್ಥ ಬುದ್ಧಿಯಿಂದ ದಾನಮಾಡುವುದು, ವೈರಿಗಳಲ್ಲಿಯೂ ದೋಷವನ್ನು ಹುಡುಕದೆ ಗುಣವನ್ನು ಗ್ರಹಿಸುವದು, ಪರರ ಸಂಪತ್ತಿನಲ್ಲಿ ಮತ್ಸರಪಡದಿರುವುದು ಅದನ್ನು ನೋಡಿ ಸಂತಸ ಪಡುವದು, ವೇದ ಶಾಸ್ತ್ರಗಳಿಗನು ಗುಣವಾದ ಆಚಾರ, ಕೆಟ್ಟ ನಿಷ್ಠುರ ಮಾತುಗಳನ್ನಾಡದೆ ಸದಾ ಸವಿ ಮಾತುಗಳನ್ನಾಡುವುದು, ಕೆರೆ ಬಾವಿಗಳನ್ನು ಕಟ್ಟಿಸುವುದು. ಸತ್ಯ, ಆರ್ಜವ, ಸ್ನೇಹ, ಭೀತರಿಗೆ ಅಭಯ ನೀಡುವುದು, ಗಂಗೆ-ಗಯೆ-ಪುಷ್ಕರಗಳಲ್ಲಿ ಪಿತೃಗಳಿಗೆ ಪಿಂಡಪ್ರಧಾನ, ಸ್ತುತಿ ನಿಂದೆಗಳಲ್ಲಿ ಸಮಾನದೃಷ್ಟಿ, ತ್ರಿಕರಣಗಳಿಂದಲೂ ಪರಸ್ತ್ರೀಯರಲ್ಲಿ ರಮಿಸದಿರುವುದು, ನಿಷಿದ್ಧ ಕರ್ಮಗಳನ್ನು ತ್ಯಜಿಸಿ ವಿಹಿತ ಕರ್ಮಗಳನ್ನು ಮಾಡುವುದು ಇವೆಲ್ಲವೂ ಸ್ವರ್ಗಸಾಧನಗಳು.

**ನರಃ ಪರೇಷಾಂ ಪ್ರತಿಕೂಲಮಾಚರನ್**
**ಪ್ರಯಾತಿ ಘೋರಂ ನರಕಂ ಸುದಾರುಣಂ**
**ಸದಾನುಕೂಲಸ್ಯ ನರಸ್ಯ ಜೀವಿನಃ**
**ಸುಖಾವಹಾ ಮುಕ್ತಿರದೂರ ಸಂಸ್ಥಿತಾ**

ಪರರಿಗೆ ಅಹಿತವನ್ನುಂಟುಮಾಡುವವನು ಘೋರ ನರಕಕ್ಕೆ ಹೋಗುತ್ತಾನೆ. ಪರರ ಹಿತಕ್ಕಾಗಿಯಾರು ಬಾಳುವನೊ ಅವನಿಗೆ ಸುಖ ಕೊಡುವ ಮೋಕ್ಷ ದೂರದಲ್ಲಿರುವುದಿಲ್ಲ.

**ಸುಬಾಹು :-** ನಾನು ಪುಣ್ಯ ಕರ್ಮಗಳನ್ನು ಮಾಡುತ್ತೇನೆ. ಹೋಮ, ಜಪ, ಯಜ್ಞ, ತಪಸ್ಸುಗಳಿಂದ ವಾಸುದೇವನನ್ನಾರಾಧಿಸಿ ಅವನ ಲೋಕವನ್ನೇ ಸೇರುವೆ.

ಹೀಗೆ ಹೇಳಿ ರಾಜ ವಿಷ್ಣುವನ್ನಾರಾಧಿಸಿ ವಿಷ್ಣುಲೋಕವನ್ನೇ ಸೇರಿದ. ಆದರೆ ಅಲ್ಲಿ ಭಗವಂತನ ದರ್ಶನವಾಗಲಿಲ್ಲ. ಎಲ್ಲ ಸುಖ ಭೋಗ ಸಾಮಗ್ರಿ ಇದ್ದರೂ ಹಸಿವು ನೀರಡಿಕೆಗಳು ಶಾಂತವಾಗಲೊಲ್ಲವು. ರಾಜದಂಪತಿಗಳೀರ್ವರ ಪಾಡೂ ಹೀಗಾಯಿತು. ಹಸಿವನ್ನು ತಡೆಯಲಾರದೆ ಅಲ್ಲಿ ಇಲ್ಲಿ ಓಡಾಡಿದರು ದಂಪತಿಗಳು. ಎಲ್ಲ ಬಗೆಯ ಆಭರಣಗಳಿವೆ. ಉಡುಪು ತೊಡಪುಗಳಿವೆ. ಚಂದನಗಂಧಪುಷ್ಪಮಾಲೆಗಳಿವೆ. ಹಾರ ಕಂಕಣ ಕುಂಡಲಗಳೂ ಇವೆ. ದೇದೀಪ್ಯಮಾನ ಕಾಂತಿ ಚೆಲ್ಲುವ ರತ್ನಗಳು ಮೈ ಮೇಲಿವೆ, ಬಳಿಯಲ್ಲಿ ದೊಡ್ಡ ಪರಿವಾರವಿದೆ. ವಿಮಾನದಲ್ಲಿ ಸಂಚಾರ, ಋಷಿಗಳು ಗಂಧರ್ವರು ಹೊಗಳುತ್ತಿದ್ದಾರೆ. ರಾಜ ರಾಣಿಯನ್ನು ಕೇಳುತ್ತಾನೆ.

**ಸುಬಾಹು :-** ಪ್ರಿಯೆ, ಇದು ಯಾವ ಕರ್ಮದ ಫಲ ? ವಿಷ್ಣುಲೋಕವನ್ನು ಸೇರಿದರೂ ಹಸಿವು ಕ್ಷಣದಿಂದ ಕ್ಷಣಕ್ಕೆ ಉಲ್ಬಣಗೊಳ್ಳುತ್ತದೆ. ಆ ಮಧುಸೂಧನನ ದರ್ಶನವೂ ಸಿಗುತ್ತಿಲ್ಲ.

**ರಾಣಿ :-** ರಾಜನೆ, ನೀನು ವಿಷ್ಣುವನ್ನೇನೋ ಆರಾಧಿಸಿದೆ. ಆದರೆ ಅನ್ನದಾನ ಮಾಡಲಿಲ್ಲ. ಅದರ ಫಲವನ್ನು ನಾವೀಗ ಅನುಭವಿಸುತ್ತಿದ್ದೇವೆ.

ರಾಜ ಚಿಂತಾಮಗ್ನನಾದ.

ಒಮ್ಮೆ ರಾಜ ವಾಮದೇವ ಮುನಿಗಳಾಶ್ರಮವನ್ನು ಕಂಡ. ದಿವ್ಯವೃಕ್ಷಗಳು, ತಿಳಿನೀರಿನ ಕೊಳಗಳು, ಹಂಸಕಾರಂಡವ, ಕಲ್ಹಾರದಂಥ ಹೂಗಳು ಆಶ್ರಮದ ಸೊಬಗನ್ನು ಹೆಚ್ಚಿಸಿವೆ. ಅಲ್ಲಿ ಯೋಗಿಗಳು ಸಿದ್ಧರು ಅನೇಕಮಂದಿ ಇದ್ದಾರೆ. ರಾಜ ಆಶ್ರಮವನ್ನು ಪ್ರವೇಶಿಸಿ ಸೂರ್ಯನಂತೆ ಹೊಳೆಯುತ್ತ ಯೋಗಾಸನದಲ್ಲಿ ಮಂಡಿಸಿದ್ದ ವಾಮದೇವ ಮುನಿಗಳನ್ನು ಕಂಡ, ನಮಸ್ಕರಿಸಿದ. ಹೃಷೀಕೇಶನನ್ನು ಧ್ಯಾನಿಸುತ್ತಿದ್ದ ಮುನಿ ಕಣ್ಣು ತೆರೆದು ರಾಜನನ್ನು ಆಶೀರ್ವದಿಸಿ ಆಸನವಿತ್ತು ಅರ್ಘ್ಯಪಾದ್ಯ ಮುಂತಾದವುಗಳಿಂದ ಉಪಚರಿಸಿದ.

**ವಾಮದೇವ :-** ವಿಷ್ಣುಭಕ್ತನಾದ ಧರ್ಮಿಷ್ಠನಾದ ಚೋಳರಾಜನಲ್ಲವೆ ನೀನು ! ಕ್ಷೇಮವೆ ?

**ಸುಬಾಹು :-** ಮುನಿಯೆ, ವಿಷ್ಣುವನ್ನಾರಾಧಿಸಿ ಅವನೊಲಿಮೆಯಿಂದ ವಿಷ್ಣುಲೋಕವನ್ನು ಸೇರಿದರೂ ಅವನ ದರ್ಶನ ಲಭಿಸುತ್ತಿಲ್ಲ. ಹಸಿವೆ ನೀರಡಿಕೆಗಳು ಪೀಡಿಸುತ್ತಿವೆ. ಇದಕ್ಕೇನು ಕಾರಣ ? ದಯವಿಟ್ಟು ಹೇಳು.

**ವಾಮದೇವ :-** ರಾಜನೆ, ನೀನು ವಿಷ್ಣುವನ್ನು ಭಕ್ತಿಯಿಂದ ಸ್ನಾನ ಗಂಧ ಮುಂತಾದ ಉಪಚಾರಗಳಿಂದ ಆರಾಧಿಸಿದೆ. ಭಕ್ಷ್ಯಭೋಜ್ಯಗಳನ್ನು ಹಣ್ಣುಹಂಪಲಗಳನ್ನು ಮಾತ್ರ ನಿವೇದಿಸಲಿಲ್ಲ. ದಶಮಿ ಒಪ್ಪೊತ್ತು ಊಟ ಮಾಡಿದೆ. ಏಕಾದಶಿ ಉಪವಾಸ ಮಾಡಿದೆ. ವಿಪ್ರರನ್ನುಣಿಸಲಿಲ್ಲ.

ಅನ್ನದಾನವನ್ನೆಂದೂ ನೀನು ಮಾಡಲಿಲ್ಲ. ಭೂಲೋಕದ ಅಮೃತವೇ ಅನ್ನ ಅದನ್ನು ದೇವತೆಗಳಿಗೆ ಪಿತೃಗಳಿಗೆ ಅತಿಥಿಗಳಿಗೆ ವಿಷ್ಣುವನ್ನುದ್ದೇಶಿಸಿ ದಾನಮಾಡಿ ಪರಿಜನರನ್ನುಣಿಸಿ ಬಳಿಕ ತಾನುಣಬೇಕು. ಬ್ರಾಹ್ಮಣರೂ ಪಿತೃಗಳೂ ದೇವತೆಗಳೂ ಫಲವತ್ತಾದ ಭೂಮಿಯಂತೆ. ಆ ಭೂಮಿಯನ್ನುಳಲು ಶ್ರದ್ಧೆ ಎಂಬ ನೇಗಿಲು, ಬುದ್ಧಿ ತಪಸ್ಸುಗಳೆಂಬ ಎರಡು ಎತ್ತುಗಳು ಬೇಕು, ಹೊಲದಲ್ಲಿ ನಿತ್ಯ ಕಳೆ ಕೀಳುವಂಥ ಕೆಲಸಗಳು ಬಹಳ ಇರುತ್ತವೆ. ಹಾಗೆ ಇಲ್ಲಿಯೂ ನಮಸ್ಕಾರ ಒಳ್ಳೆಯ ಮಾತುಗಳು ಮೊದಲಾದುವು ಬೇಕು. ಬೀಜ ಬಿತ್ತುವವನು ಮಳೆಗಾಲವನ್ನು ಒಳ್ಳೆಯ ಸಮೃದ್ಧ ಜಲವನ್ನು ಇದಿರುನೋಡುವಂತೆ ಅನ್ನದಾನ ಮಾಡುವವನೂ ಪರ್ವಕಾಲ ತೀರ್ಥಕ್ಷೇತ್ರಗಳನ್ನು ಹೊಂದಬೇಕು. ಬೀಜಕ್ಕೆ ಅನುಗುಣವಾದ ಫಲ ದೊರೆಯುವಂತೆ ದಾನಕ್ಕನುಗುಣವಾದ ಫಲವೂ ದೊರೆಯುತ್ತದೆ. ರಾಜನ್ ನೀನು ಹಿಂದೆ ಮೃಷ್ಟಾನ್ನ ಭೋಜನವನ್ನು ಯಾರಿಗೂ ನೀಡದೆ ನೀನೆ ಉಂಡೆ. ನಿನ್ನ ಶರೀರವನ್ನೆ ಪೋಷಿಸಿಕೊಂಡೆ, ಅದರಿಂದ ನಿನಗೀ ಹಸಿವು. ಅದನ್ನಡಗಿಸಲು ನಿನ್ನ ಶರೀರವನ್ನೇ ನೀನು ಕೊಯ್ದು ತಿನ್ನಬೇಕು. ನಿನ್ನ ರಾಣಿಯೂ ಹಾಗೇ ಮಾಡಬೇಕು.

**ಸುಬಾಹು** :- ಮುನಿಯೆ ಎಷ್ಟು ಕಾಲ ನಾವು ಹೀಗೆ ಮಾಡುತ್ತಿರಬೇಕು ? ನಾವು ಮಾಡಿದ ಘೋರಪಾಪಕ್ಕೆ ಏನು ಪ್ರಾಯಶ್ಚಿತ್ತ ?

**ವಾಮದೇವ** :- ಇದಕ್ಕೆ ಪ್ರಾಯಶ್ಚಿತ್ತವಿಲ್ಲ. ಮಾಡಿದ ಕರ್ಮದ ಫಲವನ್ನನು-ಭವಿಸಲೇಬೇಕು. ನಿಮ್ಮ ಶರೀರಗಳು ಶವವಾಗಿ ಬೀಳುವಲ್ಲಿ ಅದನ್ನು ನೀವು ಕೊಯ್ದು ತಿನ್ನುತ್ತೀರಿ. ಎಂದು ನಿಮ್ಮ ಕಿವಿಗೆ ಪವಿತ್ರವಾದ ವಾಸುದೇವನ ಮಹಾಸ್ತೋತ್ರವು ಕೇಳಿಬರುತ್ತದೆಯೊ ಅಂದು ಈ ದುಃಖದಿಂದ ಪಾರಾಗುವಿರಿ.

ಅಂದಿನಿಂದ ವಾಮದೇವಮುನಿಗಳ ಆದೇಶದಂತೆ ಆ ದಂಪತಿಗಳು ತಮ್ಮ ಶವವನ್ನೇ ತಿಂದು ಹಸಿವನ್ನು ಅಡಗಿಸಿಕೊಳ್ಳುತ್ತಿದ್ದಾರೆ. ನಿತ್ಯ ಅವರ ಶರೀರ ಪುಷ್ಟಿ ಹೊಂದುತ್ತದೆ. ನಿತ್ಯ ಅದನ್ನು ತಿನ್ನುತ್ತಾರೆ. ತಿನ್ನುವಾಗ ವಾಮದೇವ ಮುನಿಗಳನ್ನು ಸ್ಮರಿಸುತ್ತಾರೆ. ಅವರಾಡಿದ ಮಾತನ್ನು ನೆನೆದು ಪೂರ್ವಜನ್ಮದಲ್ಲಿ ದಾನಮಾಡದಿರುವುದಕ್ಕಾಗಿ ಪಶ್ಚಾತ್ತಾಪ ಪಡುತ್ತಾರೆ. ತಿರುಗಿ ತಮ್ಮ ಶರೀರ ಮಾಂಸವನ್ನು ಕಿತ್ತು ತಿನ್ನುತ್ತಾರೆ. ಆಗ ಪ್ರಜ್ಞೆ ಶ್ರದ್ಧೆ ಎಂಬ ಇಬ್ಬರು ಸುಂದರ ಮಹಿಳೆಯರು ನಗುತ್ತಾರೆ. ನಾವು ಹಿಂದೆ ಎಷ್ಟು ವಿಧದಿಂದ ಪ್ರೇರಣೆ ನೀಡಿದರೂ ಈ ರಾಜ ಅನ್ನದಾನಮಾಡಲಿಲ್ಲ. ಈಗ ತನ್ನನ್ನೆ ತಾನು ಜರೆಯುತ್ತ ತನ್ನ ಮಾಂಸವನ್ನೆ ತಿನ್ನುತ್ತಿದ್ದಾನೆ ಎಂದು ಅವರು ಹಾಸ್ಯಮಾಡುತ್ತಿದ್ದಾರೆ. ರಾಜನೆ, ನಿನ್ನನ್ನು ಮರುಳುಮಾಡಿದ ಆ ಮಹಾಮೋಹ ಈಗ ಎಲ್ಲಿ ಇದೆ ? ಲೋಭದಿಂದ ಕೂಡಿ ಆ ಮೋಹ ನಿನ್ನನ್ನೀ ದುಃಖದ ಆಳಕ್ಕೆ ತಳ್ಳಿದೆ. ದಾನಮಾರ್ಗವನ್ನು ಬಿಟ್ಟು ಏಕೆ ಲೋಭ ಮಾರ್ಗವನ್ನು ತುಳಿದೆ, ಹೇಳು ಎಂದು ಕೇಳುತ್ತಿದ್ದಾರೆ. ಅದೇ ಕಾಲದಲ್ಲಿ ಕ್ಷುಧೆ ತೃಷ್ಣೆಗಳು ಭೀಕರರೂಪದಿಂದ ಮೂರ್ತಿಮತ್ತಾಗಿ ನಿಂತು ದೇಹಿ ದೇಹಿ ಎಂದು ಅನ್ನ ನೀರು ಬೇಡುತ್ತಿವೆ.

**ವಿಜ್ವಲ** :- ರಾಜದಂಪತಿಗಳಿಗೆ ಈ ದುಃಖದಿಂದ ಮುಕ್ತಿ ಕೊಡಬಲ್ಲ ಆ ವಾಸುದೇವ ಮಹಾಸ್ತೋತ್ರವನ್ನು ನನಗೆ ಹೇಳು.

**ವಿಷ್ಣು** :- ವಿಜ್ವಲನ ಅಪೇಕ್ಷೆಯಂತೆ ಕುಂಜಲನು ಆ ವಾಸುದೇವ ಸ್ತೋತ್ರವನ್ನು ಉಪದೇಶಿಸಿದ. ಎಲ್ಲ ಕ್ಲೇಶಗಳನ್ನು ಕಳೆದು ಶ್ರೇಯಸ್ಸನ್ನು ನೀಡುವ ವಾಸುದೇವನನ್ನು ಧ್ಯಾನಿಸುತ್ತ ಆ ಸ್ತೋತ್ರವನ್ನು ಹೇಳಿದರೆ ಮೋಕ್ಷ ಸುಖ ಶಾಂತಿ ಪುಷ್ಟಿಗಳನ್ನು ಅದು ನೀಡುತ್ತದೆ. ಅದನ್ನು ಉಪದೇಶಿಸಿ ಕುಂಜಲನು ನುಡಿದ.

**ಕುಂಜಲ** :- ಮಗು, ನೀನು ಸುಬಾಹುವಿನ ಬಳಿಗೆ ಹೋಗಿ ಅವನಿಗೆ ಕೇಳಿಸುವಂತೆ ಈ ಸ್ತೋತ್ರವನ್ನು ಪಠಿಸು. ಅವನ ಮಹಾಪಾಪವೆಲ್ಲವೂ ತೊಡೆದು ಹೋಗುತ್ತದೆ. ಜ್ಞಾನ ಉದಿಸುತ್ತದೆ.

ವಿಜ್ವಲನು ಒಡನೆ ಹಾರಿ ಆನಂದವನವನ್ನು ಸೇರಿದ. ರಾಜನ ಆಗಮನವನ್ನೇ ಇದಿರು ನೋಡುತ್ತ ಒಂದು ಮರದ ನೆರಳಲ್ಲಿ ಕುಳಿತ. ಅಷ್ಟರಲ್ಲಿ ರಾಜನ ವಿಮಾನ ಬಂದಿತು. ಕಿಂಕಿಣಿಗಳ ನಾದ, ಘಂಟಾರವ, ವೀಣೆ ಕೊಳಲುಗಳ ಧ್ವನಿ ಗಂಧರ್ವರ ಮಧುರ ಸಂಗೀತ ಇನ್ನೂ ಅನೇಕ ಭೋಗ ಸಾಮಗ್ರಿಗಳು ಆ ವಿಮಾನದಲ್ಲಿದ್ದುವು. ಅನ್ನ ನೀರು ಮಾತ್ರವಿಲ್ಲ. ರಾಜ ರಾಣಿಯರು ವಿಮಾನದಿಂದಿಳಿದು ಶಸ್ತ್ರವನ್ನು ಹಿಡಿದು ತಮ್ಮ ಶವಗಳನ್ನು ಕೊಯ್ಯಲು ತೊಡಗಿದರು.

**ವಿಜ್ವಲ :-** ರಾಜನೆ, ದೇವತೆಯಂಥ ನೀನು ಇಂಥ ಕರ್ಮವನ್ನು ಮಾಡಬಹುದೆ ? ಇದೇನು ವಿಧಿ ವಿಪರ್ಯಾಸ ? ವೇದೋಕ್ತ ಆಚಾರಗಳಿಗೆ ವಿರುದ್ಧವಾಗಿ ಈ ನಿಂದ್ಯ ಕರ್ಮವನ್ನೇಕೆ ಮಾಡುತ್ತಿರುವೆ ? ಸುಬಾಹು ಈ ಮಾತುಗಳನ್ನು ಕೇಳಿ ಅಚ್ಚರಿಯಿಂದ ರಾಣಿಯ ಬಳಿ ಹೇಳಿದ.

**ಸುಬಾಹು :-** ನೋಡು, ಪ್ರಿಯೆ, ನೂರಾರು ವರ್ಷಗಳ ಕಾಲ ಈ ಹೀನ ಕರ್ಮವನ್ನು ನಾವು ಮಾಡುತ್ತಿದ್ದರೆ ಯಾರೂ ಎಂದೂ ಏನೂ ಹೇಳಿಲ್ಲ. ಈಗ ಈ ಮಾತುಗಳನ್ನು ಕೇಳುತ್ತಿದ್ದಂತೆ ದುಃಖ, ಕಡಿಮೆಯಾಗುತ್ತಿದೆ. ಶಾಂತಿ ಮೂಡುತ್ತಿದೆ. ಮನಸ್ಸಿಗೆ ಆಹ್ಲಾದ ಉಂಟಾಗುತ್ತಿದೆ. ಈತ ದೇವತೆಯೊ, ಗಂಧರ್ವನೊ ಅಥವಾ ಸಾಕ್ಷಾತ್ ಇಂದ್ರನೊ ?

**ರಾಣಿ :-** ಪ್ರಿಯ, ನೀನು ಹೇಳುವುದು ನಿಜ. ಇದು ಅತ್ಯಂತ ಆಶ್ಚರ್ಯಕರ. ನಿನ್ನಂತೆ ನಾನೂ ಒಂದು ವಿಧದ ಶಾಂತಿಯನ್ನು ಅನುಭವಿಸುತ್ತಿದ್ದೇನೆ. ಪಕ್ಷಿರೂಪದಿಂದ ಬಂದು ಹಿತೈಷಿಯಂತೆ ನುಡಿವ ಈ ಮಹಾತ್ಮನು ಯಾರಿರಬಹುದು ?

ರಾಜನು ಪಕ್ಷಿಗೆ ಕೈಮುಗಿದು ಕೇಳಿದ

**ಸುಬಾಹು :-** ಪಕ್ಷಿರೂಪದಿಂದ ಬಂದಿರುವ ಓ ಮಹಾತ್ಮ, ಸ್ವಾಗತ. ನಾವಿಬ್ಬರೂ ನಿನ್ನ ಅಡಿದಾವರೆಗಳಿಗೆ ನಮಿಸುವೆವು. ನಾವು ಪೂರ್ವಜನ್ಮದಲ್ಲಿ ಮಾಡಿದ ಕರ್ಮವನ್ನೀಗ ಅನುಭವಿಸುತ್ತಿದ್ದೇವೆ.

ಹೀಗೆನ್ನುತ್ತ ರಾಜ ತನ್ನ ವೃತ್ತಾಂತವನ್ನು ವಿಜ್ವಲನಿಗೆ ತಿಳಿಸಿದ. ಅದೆಲ್ಲವೂ ಕುಂಜಲನು ಹೇಳಿದಂತೆ ಇತ್ತು. ಬಳಿಕ ರಾಜ "ನೀನಾರು ? ನಿನ್ನ ವೃತ್ತಾಂತವೇನು" ಎಂದು ಕೇಳಿದ-ವಿಜ್ವಲನು ನುಡಿದ.

**ವಿಜ್ವಲ :-** ನಾನು ವಿಜ್ವಲನೆಂಬ ಗಿಳಿ. ಕುಂಜಲನು ನನ್ನ ತಂದೆ. ಅವನ ನಾಲ್ವರು ಮಕ್ಕಳಲ್ಲಿ ಮೂರನೆಯವ ನಾನು. ನಾನು ದೇವನಲ್ಲ. ಗಂಧರ್ವನಲ್ಲ. ಸಿದ್ಧನೂ ಅಲ್ಲ. ನೀನು ಮಾಡುವ ಈ ಹೀನಕರ್ಮವನ್ನು ನಾನು ನಿತ್ಯ ನೋಡುತ್ತಿದ್ದೇನೆ. ಎಷ್ಟು ಕಾಲ ನೀನೀ ರೀತಿ ಮಾಡುವೆ ?

**ಸುಬಾಹು :-** ವಾಸುದೇವ ಮಹಾಸ್ತೋತ್ರವನ್ನು ಕೇಳಿದೊಡನೆ ನಮಗೀ ಸಂಕಟದಿಂದ ಬಿಡುಗಡೆ ಯಾಗುವುದೆಂದು ಮುನಿಗಳು ಹೇಳಿದ್ದಾರೆ.

**ವಿಜ್ವಲ :-** ನಾನೀ ಪ್ರಶ್ನೆಯನ್ನೇ ನಮ್ಮ ತಂದೆಯ ಬಳಿ ಕೇಳಿದಾಗ ಅವರೂ ಹೀಗೇ ಉತ್ತರಿಸಿದರು. ಆ ವಾಸುದೇವ ಸ್ತೋತ್ರವನ್ನೂ ನನಗೆ ಉಪದೇಶಿಸಿದರು. ಅದರ ಪ್ರಾರಂಭ ಈ ರೀತಿಯಾಗಿದೆ.

ಅಸ್ಯ ಶ್ರೀ ವಾಸುದೇವ ಮಹಾಸ್ತೋತ್ರಸ್ಯ ನಾರದ ಋಷಿ; ಅನುಷ್ಟುಪ್ ಛಂದಃ, ಓಂ ಕಾರೋ ದೇವತಾ, ಸರ್ವಪಾತಕ ನಾಶನಾರ್ಥೇ ಚತುರ್ವರ್ಗ ಸಾಧನಾರ್ಥೇಚ ಜಪೇ ವಿನಿಯೋಗಃ

**ಓಂ ನಮೋ ಭಗವತೇ ವಾಸುದೇವಾಯ**
**ಪಾವನಂ ಪರಮಂ ಪುಣ್ಯಂ ವೇದಜ್ಞಂ ವೇದಮಂದಿರಂ**
**ವಿದ್ಯಾಧಾರಂ ಭವಾಧಾರಂ ಪ್ರಣವಂ ವೈ ನಮಾಮ್ಯಹಂ ॥**

**ವಿಷ್ಣು** :- ಈ ಸ್ತೋತ್ರವನ್ನು ಕೇಳಿದೊಡನೆ ರಾಜನ ಎಲ್ಲ ಪಾಪಗಳೂ ಪರಿಹಾರವಾದವು. ಹಸಿವು ನೀರಡಿಕೆಗಳು ಶಾಂತವಾದವು. ರಾಣಿಯೂ ಅವನಂತೆ ಶುದ್ಧಳಾಗಿ ಸುಖ ಹೊಂದಿದಳು. ಎಲ್ಲ ದೇವತೆಗಳಿಂದ ಋಷಿಗಳಿಂದ ಪರಿವೃತನಾಗಿ ವಿಷ್ಣು ಮೈದೋರಿದ. ನಾರದ ಭಾರ್ಗವ ವ್ಯಾಸ ಮಾರ್ಕಂಡೇಯ ವಾಲ್ಮೀಕಿ ವಸಿಷ್ಠ ಗರ್ಗ ಜಾಬಾಲಿ ರೈಭ್ಯ ಕಶ್ಯಪ ಮುಂತಾದ ಎಲ್ಲ ವಿಷ್ಣುಭಕ್ತರೂ ಅಲ್ಲಿ ನೆರೆದು ರಾಜದಂಪತಿಗಳನ್ನು ಹರಿಸಿದರು. ದೇವತೆಗಳು ಕೊಂಡಾಡಿದರು.

''ರಾಜನ್ ನಿನಗೇನು ವರಬೇಕು.ಕೇಳು'' ಎಂದ ವಿಷ್ಣು.

ರಾಜನು ಇದಿರಿನಲ್ಲಿ ನಿಂತು ಮಾತನಾಡುತ್ತಿರುವ ಮುರಾರಿಯನ್ನು ಕಂಡ. ನೀಲೋತ್ಪಲದಂಥ ಮೈಯ ಕಾಂತಿ. ಶಂಖ ಚಕ್ರ ಗದಾ ಪದ್ಮಗಳನ್ನು ಹಿಡಿದಿದ್ದಾನೆ. ಸರ್ವಾಭರಣಭೂಷಿತನಾಗಿ ಲಕ್ಷ್ಮಿಯಿಂದೊಡಗೂಡಿ ದೇವತೆಗಳಿಂದ ಸೇವಿಸಲ್ಪಡುತ್ತಿದ್ದಾನೆ. ಸೂರ್ಯನಂತೆ ಹೊಳೆಯುತ್ತಿದಾನೆ. ರಾಜನು ಭಕ್ತಿಯಿಂದ ದಂಡ ಪ್ರಣಾಮವನ್ನು ಮಾಡಿ 'ಜಯವಾಗಲಿ' ಎಂದ ಆನಂದದಿಂದ.

**ಸುಬಾಹು** :- ಹೇ ದೇವ, ನಾನು ನಿನ್ನ ದಾಸ. ನನ್ನನ್ನು ಕಾಪಾಡು. ನಿನ್ನನ್ನೆ ಮೊರೆಹೊಕ್ಕಿದ್ದೇನೆ. ಧ್ಯಾನದಿಂದ ಶುದ್ಧವಾದ ಅಂತಃಕರಣದಿಂದ ಒಮ್ಮೆ 'ಮಾಧವ !' ಎಂದು ಕರೆದರೆ ನೀನು ವೈಕುಂಠವನ್ನೇ ಕೊಡುವೆ. ನಿನ್ನ ಪಾದ ಕಮಲಗಳಿಂದ ಹೊರಟ ನೀರನ್ನು ತಲೆಯಲ್ಲಿ ಹೊತ್ತವರು ಎಲ್ಲ ತೀರ್ಥಗಳ ಸ್ನಾನದ ಫಲವನ್ನು ಹೊಂದಿ ನಿನ್ನ ಲೋಕಕ್ಕೆ ಬರುತ್ತಾರೆ. ನನ್ನಲ್ಲಿ ಯೋಗವಿಲ್ಲ. ಭಕ್ತಿಯಿಲ್ಲ ಸತ್ಕರ್ಮವಿಲ್ಲ ನಾನೇನು ಪುಣ್ಯ ಮಾಡಿದೆನೆಂದು ನೀನೀಗ ವರವನ್ನು ಕೊಡುತ್ತಿರುವೆ ?

**ವಿಷ್ಣು** :- ವಾಸುದೇವ ಮಹಾಸ್ತೋತ್ರವನ್ನು ವಿಜ್ವಲನ ಮುಖದಿಂದ ನೀನು ಕೇಳಿರುವೆ ಆ ಸ್ತೋತ್ರ ಎಲ್ಲ ಪಾಪವನ್ನು ತೊಳೆಯುವಂತಹುದು. ಅದರಿಂದ ನೀನು ಮುಕ್ತಿ ಯೋಗ್ಯನಾಗಿರುವೆ. ನನ್ನ ಲೋಕದಲ್ಲಿ ಎಲ್ಲ ಸುಖವನ್ನು ಅನುಭವಿಸು.

**ಸುಬಾಹು** :- ದೇವ, ನೀನು ನನಗೆ ವರ ಕೊಡುವಿಯಾದರೆ ಮೊದಲಿಗೆ ನೀನು ವಿಜ್ವಲನಿಗೆ ವರವನ್ನು ನೀಡು.

**ವಿಷ್ಣು**:-ರಾಜನೇ ವಿಜ್ವಲನ ತಂದೆ ಕುಂಜಲ ಮಹಾಜ್ಞಾನಿ. ವಾಸುದೇವ ಸ್ತೋತ್ರವನ್ನು ಆತ ನಿತ್ಯ ಪಠಿಸುತ್ತಾನೆ. ಅವನು ತನ್ನೆಲ್ಲ ಮಕ್ಕಳೊಂದಿಗೆ ನನ್ನ ಲೋಕಕ್ಕೆ ಬರುವವನಿದ್ದಾನೆ.

**ಸುಬಾಹು** :- ಈ ಸ್ತೋತ್ರದ ಫಲವನ್ನು ಹೇಳು.

**ವಿಷ್ಣು** :- ಕೃತಯುಗದಲ್ಲಿ ಈ ಸ್ತೋತ್ರವನ್ನು ಕೇಳಿದವರಿಗೆ ಆ ಕ್ಷಣದಲ್ಲಿಯೇ ಮೋಕ್ಷಲಾಭ. ತ್ರೇತಾಯುಗದಲ್ಲಿ ಮೂರುತಿಂಗಳಕಾಲ, ದ್ವಾಪರದಲ್ಲಿ ಆರು ತಿಂಗಳ ಕಾಲ, ಕಲಿಯುಗದಲ್ಲಿ ಒಂದು ವರ್ಷಕಾಲ ಈ ಸ್ತೋತ್ರವನ್ನು ಜಪಿಸಿದರೆ ನನ್ನ ಮೋಕ್ಷ ಲಾಭವಿದೆ.

**ವಿಷ್ಣು** :- ವಿಜ್ವಲನು ಹಾರಿಬಂದು ನರ್ಮದೆಯ ತೀರದ ಆಲದಮರದಲ್ಲಿ ತಂದೆಯ ಬಳಿ ಕುಳಿತ. ತಂದೆಗೆ ನಮಸ್ಕರಿಸಿ ವಾಸುದೇವಸ್ತೋತ್ರದ ಮಹಿಮೆಯನ್ನು ತಾನು ಕಂಡಂತೆ ಬಣ್ಣಿಸಿದ. ಕುಂಜಲನಿಗೆ ಪರಮಾನಂದವಾಯಿತು. ಮಗನನ್ನು ಬಿಗಿದಪ್ಪಿ ''ಮಗು, ನೀನೊಂದು ಪುಣ್ಯಕರ್ಮವನ್ನೇ ಮಾಡಿದೆ. ಈ ಸ್ತೋತ್ರವನ್ನು ಪಠಿಸಿ ಮಹಾತ್ಮನಾದ ಆ ರಾಜನಿಗೆ ಉಪಕಾರ ಮಾಡಿದೆ'' ಎಂದು ಹೇಳುತ್ತ ಆಶೀರ್ವದಿಸಿದ ಅಭಿನಂದಿಸಿದ. ಚ್ಯವನಮುನಿ ಅದನ್ನೆಲ್ಲ ನೋಡುತ್ತಿದ್ದ.

**ವೇನ** :- ದೇವ, ಶಂಖದಿಂದ ಅಮೃತವನ್ನು ನೀಡುತ್ತಿರುವೆ. ಅದನ್ನು ಕುಡಿಯಲು ಯಾವ ಮಾನವನಿಗೆ ಶ್ರದ್ಧೆಯುಂಟಾಗದು ? ಅದರಿಂದ ಕುಂಜಲನು ತನ್ನ ನಾಲ್ಕನೆ ಮಗನನ್ನೇನು ಕೇಳಿದನು ? ಏನು ಹೇಳಿದನು ? ಅದನ್ನು ವಿಸ್ತಾರವಾಗಿ ಬಣ್ಣಿಸು.

**ವಿಷ್ಣು** :- ರಾಜನ್ ನಾನೀಗ ಕುಂಜಲನ ಕಥೆಯನ್ನೂ ಹೇಳುತ್ತೇನೆ. ಚ್ಯವನನ ಚರಿತ್ರೆಯನ್ನೂ ಹೇಳುತ್ತೇನೆ. ಅದನ್ನು ಕೇಳಿದರೆ ಎಲ್ಲ ಪಾಪಪರಿಹಾರವಾಗಿ ಸಾವಿರ ಗೋದಾನವದ ಫಲ ದೊರೆಯುತ್ತದೆ.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಭೂಮಿಖಂಡದ ವೇನೋಪಾಖ್ಯಾನದಲ್ಲಿ ಗುರುತೀರ್ಥ ವರ್ಣನೆಯಲ್ಲಿ ಚ್ಯವನಚರಿತ್ರೆಯಲ್ಲಿ ಹದಿನೇಳನೇಯ ಅಧ್ಯಾಯ ಮುಗಿದುದು*



## ಕಾಮೋದಾಖ್ಯಾನ

**ಅಧ್ಯಾಯ - ೧೮**

**ವಿಷ್ಣುರುವಾಚ**

**ವಿಷ್ಣು** :- ಕುಂಜಲನು ತನ್ನ ನಾಲ್ಕನೆ ಮಗನನ್ನು ಕೇಳಿದ.

**ಕುಂಜಲ** :- ಮಗು, ಕಪಿಂಜಲ ನೀನು ಇಂದು ಆಹಾರಕ್ಕಾಗಿ ಎಲ್ಲಿ ಸಂಚರಿಸಿದೆ ? ಏನು ಅಪೂರ್ವ ವಿಷಯಗಳನ್ನು ಕಂಡೆ ? ಹೇಳು.

**ಕಪಿಂಜಲ** :- ನಾನು ಕೈಲಾಸ ಪರ್ವತಕ್ಕೆ ಹೋಗಿದ್ದೆ. ಚಂದ್ರನಂತೆ ಬಿಳಿಯಾದ ದೊಡ್ಡ ಬೆಟ್ಟ ಅದು. ಅಲ್ಲಿ ನಾನಾ ಬಗೆಯ ಧಾತುಗಳೂ, ವೃಕ್ಷಗಳೂ, ಇವೆ. ಪವಿತ್ರ ಗಂಗಾಜಲದಿಂದ ಎಲ್ಲೆಡೆ ಶುದ್ಧವಾಗಿದ್ದ ಸಾವಿರಾರು ತಿಳಿನೀರಿನ ಕೊಳಗಳಿಂದಲೂ ಶೋಭಿಸುತ್ತದೆ ಆ ಬೆಟ್ಟ. ಆ ಕೊಳಗಳಲ್ಲಿ ಹಂಸ ಸಾರಸ ಪಕ್ಷಿಗಳು ವಾಸಿಸುತ್ತವೆ. ಕಿನ್ನರರು, ಅಪ್ಸರೆಯರು, ಗಂಧರ್ವರು, ಸಿದ್ಧರು ದೇವತೆಗಳು ಅಲ್ಲಿರುತ್ತಾರೆ. ಎಲ್ಲೆಡೆ ಅರಳಿದ ಹೂಗಳ ಪರಿಮಳವಿದೆ. ನಾನಾ ರತ್ನಗಳು, ಸ್ಫಟಿಕದ ಹಾಸುಗಲ್ಲುಗಳು ಇವುಗಳಿಂದ ಬೆಟ್ಟವಿಡಿ ಸೂರ್ಯನಂತೆ ಹೊಳೆಯುತ್ತದೆ. ಕೋಗಿಲೆ ಮುಂತಾದ ಪಕ್ಷಿಗಳ ದುಂಬಿಗಳ ಮಧುರ ಧ್ವನಿ ಕೇಳಿಸುತ್ತದೆ. ಆನೆಸಿಂಹಗಳಂಥ ಮೃಗಗಳಿವೆ. ಅನೇಕ ಜಾತಿಯ ಬೇಡರು ವಾಸಿಸುತ್ತಿದ್ದಾರೆ. ಅನೇಕ ಕೋಟಿ ಶಿವಗಣಗಳು ವಾಸಿಸುವ ಶಿವಮಂದಿರ ಅಲ್ಲಿ ಇದೆ. ಶಿವನ ವಾಸ ಅಲ್ಲಿಯೆ.

ಮೇರುಪರ್ವತದಿಂದ ಹಾಲಿನಂತೆ ಬಿಳಿಯಾದ ಗಂಗಾಪ್ರವಾಹ ಭೋರ್ಗರೆಯುತ್ತ ಕೆಳಗೆ ಇಳಿದು ಬಂದು ಆ ಕೈಲಾಸದ ಶಿಖರದ ಮೇಲೆ ಬೀಳುತ್ತದೆ. ಅಲ್ಲಿ ಅದು

ಎಲ್ಲೆಡೆಹರಡಿ ಹತ್ತು ಯೋಜನ ವಿಸ್ತಾರದ ಒಂದು ಮಡುವನ್ನು ನಿರ್ಮಿಸಿದೆ. ಅದರ ಪವಿತ್ರವಾದ ಸ್ವಚ್ಛ ಜಲರಾಶಿಯಲ್ಲಿ ಹಂಸಗಳು ಸಾಮಗಾನ ಮಾಡುತ್ತವೆ. ಆ ಮಡುವಿನ ತೀರದಲ್ಲಿ ಒಂದು ಕಲ್ಲಿನ ಮೇಲೆ ಓರ್ವ ಕನ್ಯೆ ಕುಳಿತಿದ್ದಾಳೆ. ತಲೆಕೂದಲು ಹರವಿಕೊಂಡಿದ್ದಾಳೆ. ದಿವ್ಯರೂಪವತಿ, ದಿವ್ಯಲಕ್ಷಣಗಳಿಂದೊಪ್ಪುವವಳು, ದಿವ್ಯಾಲಂಕಾರಭೂಷಿತೆ. ಅವಳು ಯಾರು ಪಾರ್ವತಿಯೆ, ಲಕ್ಷ್ಮಿಯೆ, ಸರಸ್ವತಿಯೆ, ಸ್ವಾಹಾದೇವಿಯೆ ಶಚಿಯೆ ರೋಹಿಣಿಯೆ ಎಂಬ ಸಂಶಯ ಮೂಡಿಸಬಲ್ಲ ಅವಳ ರೂಪಸೌಂದರ್ಯ ಇನ್ನು ಯಾವ ದಿವ್ಯಸ್ತ್ರೀಯರಲ್ಲಿಯೂ ಕಾಣಲುಸಿಗದು. ಜಗತ್ತನ್ನೇ ಮರಳು ಮಾಡಬಲ್ಲ ಮೋಹಿನಿ ಅವಳು. ಅವಳು ಏಕಾಕಿನಿಯಾಗಿ ಕುಳಿತು ಅಳುತ್ತಾಳೆ. ಅಳುವ ಧ್ವನಿಯೂ ಇಂಪಾಗಿದೆ. ಕಣ್ಣೀರು ಮುತ್ತಿನಂತೆ ಹನಿಹನಿಯಾಗಿ ಸುರಿಯುತ್ತದೆ. ಸುರಿದು ಆ ಮಡುವಿಗೆ ಬಿದ್ದೊಡನೆ ಕಮಲದ ಹೂಗಳಾಗಿ ಪ್ರವಾಹದಲ್ಲಿ ತೇಲಿಬರುತ್ತದೆ. ಹಂಸಗಳಿಗೆ ಆ ಕಮಲಗಳೆಂದರೆ ಬಲು ಇಷ್ಟ.

ಅಲ್ಲಿ ರತ್ನಗಿರಿ ಎಂಬ ಒಂದು ಬೆಟ್ಟವಿದೆ. ರತ್ನೇಶ್ವರನು ಅಲ್ಲಿ ಎಲ್ಲ ದೇವತೆಗಳಿಂದಲೂ ದೈತ್ಯರಿಂದಲೂ ಪೂಜೆಯನ್ನು ಕೈಗೊಳ್ಳುತ್ತಿದಾನೆ. ಅಲ್ಲಿಯೂ ಒಂದು ಆಶ್ಚರ್ಯವನ್ನು ಕಂಡೆ. ಒಬ್ಬದಿಗಂಬರನಾದ ಮುನಿ, ಜಟಾಧಾರಿ, ದುರ್ಬಲ, ಅಸ್ಥಿಚರ್ಮಮಾತ್ರವಿರುವ ತನ್ನ ಕೃಶ ಶರೀರಕ್ಕೆ ಎಲ್ಲೆಡೆ ಭಸ್ಮ ಲೇಪಿಸಿಕೊಂಡು ನಿರಾಹಾರಿಯಾಗಿ ತಪಸ್ಸುಮಾಡುತ್ತಿದ್ದಾನೆ. ಒಣಗಿ ಬಿದ್ದ ಎಲೆಗಳನ್ನು ಮಾತ್ರ ತಿಂದು ಬದುಕುತ್ತಿದ್ದಾನೆ. ಶಿವಭಕ್ತನಾದ ಮಹಾತಪಸ್ವಿ ಆತ. ಚೆನ್ನಾಗಿ ಹಾಡಬಲ್ಲ ಕುಣಿಯಬಲ್ಲ. ಹಿಮಕನ್ಯೆಯ ಕಣ್ಣೀರಿಂದ ಹುಟ್ಟುವ ಕಮಲದ ಹೂಗಳನ್ನು ಕಿತ್ತುತಂದು ರತ್ನೇಶ್ವರನನ್ನು ಪೂಜಿಸುವನು. ಅವನ ಮುಂದೆ ಹಾಡುತ್ತ ಕುಣಿಯುವವನು ತನ್ನ ಗುಡಿಸಲಿಗೆ ಹಿಂತಿರುಗಿ ಬಂದು ಕುಳಿತು ಗೋಳೊ ಎಂದು ಅಳತೊಡಗುವನು.

ಆ ಕನ್ಯೆ ಏಕೆ ಅಳುವಳು ? ಅವಳು ಯಾರು ? ಆ ತಪಸ್ವಿ ಏಕೆ ಈಶ್ವರನನ್ನು ಪೂಜಿಸಿ ಬಂದು ಅಳುತ್ತ ಕುಳಿತುಕೊಳ್ಳುವನು ?

**ಕುಂಜಲ :-** ಒಮ್ಮೆ ಮಹಾದೇವಿ ಪಾರ್ವತಿ ವಿಹಾರಮಾಡಲು ಬಯಸಿ ಶಿವನ ಬಳಿ ಯಾವುದಾದರೊಂದು ಒಳ್ಳೆಯ ವನವನ್ನು ತೋರಿಸೆಂದು ಹೇಳಿದಳು. ಶಿವನು ಆಗಲಿ ಎಂದು ಹೇಳಿ ನಂದನವನವನ್ನು ತೋರಿಸಲು ಹೊರಟನು. ಸುಂದರವಾದ ಘಂಟೆ, ಮಾಲೆ, ಕಿಂಕಿಣಿ ಚಾಮರ, ಪಟ್ಟಸೂತ್ರ, ಮುತ್ತಿನ ಮಾಲೆ ಆಭರಣಗಳಿಂದ ಶೋಭಿಸುವ, ಹಂಸ ಇಲ್ಲವೆ ಚಂದ್ರನಂತೆ ಹೊಳೆವ ಸುಲಕ್ಷಣವಾದ ಬಸವನನ್ನೇರಿ ನಂದಿ, ಭೃಂಗಿ ಮಹಾಕಾಲ, ಸ್ಕಂದ, ಚಂಡ ವೀರಭದ್ರ, ಗಣೇಶ, ಪುಷ್ಪದಂತ, ಸುಬಲ, ಮೇಘನಾದ, ಘಟಾವಹ, ಘಂಟಾಕರ್ಣ, ಕಾಲಿಂದ, ಪುಲಿಂದ, ವೀರಬಾಹುಕ, ಕಿಂಕರ, ಚಂದ್ರಹಾಸ ಪ್ರಜಾಪತಿ ಮೊದಲಾದ ಕೋಟಿಗಣಗಳೊಡಗೂಡಿ ಸನಕಾದಿ ಮುನಿಗಳಿಂದ ಪರಿವೃತನಾಗಿ ದೇವಿಯೊಡನೆ ನಂದನವನವನ್ನು ಪ್ರವೇಶಿದ. ಪ್ರವೇಶಿಸಿ ಆಕೆಗೆ ವನದ ಸೊಬಗನ್ನು ತೋರಿಸುತ್ತ ನಡೆದ.

ಹೂ ಹಣ್ಣುಗಳನ್ನು ಬಿಟ್ಟ ನಾನಾ ಬಗೆಯ ಮರಗಿಡಗಳನ್ನು ದೇವಿಗೆ ತೋರಿಸಿದ. ಶಿವ ಕದಲಿ, ಚಂಪಕ, ಮಲ್ಲಿಗೆ, ಮಾಲತಿ, ಪಾಟಲ, ಚಂದನ, ದೇವದಾರು, ಸರಲ,

ನಾರಿಕೇಲ, ಕ್ರಮುಕ, ಖರ್ಜೂರ, ಪನಸ, ಸಪ್ತಪರ್ಣ, ರಾಜವೃಕ್ಷ ಕದಂಬ, ಜಂಬು, ನಿಂಬ, ಮಾತುಲಿಂಗ, ನಾರಂಗ, ಸಿಂಧುವಾರ, ಪ್ರಿಯಾಲ, ಶಾಲ, ತಿಂದುಕ, ಉದುಂಬರ, ಕಪಿತ್ಥ, ಲಕುಚ, ಸ್ಫುಟನಾಗ, ಚೂತ, ಫಲರಾಜಾ, ನೀಲ, ಶಾಲ, ತಮಾಲ, ಕಲ್ಪವೃಕ್ಷಗಳು ಹೀಗೆ ಎಲ್ಲವೃಕ್ಷಲತೆಗಳನ್ನು ಅವುಗಳಲ್ಲಿ ಕೂಗುವ ಕೋಗಿಲೆ ಮತ್ತು ನಾನಾವಿಧ ಪಕ್ಷಿಗಳನ್ನೂ ತಾವರೆಗಳಿಂದ ಶೋಭಿಸುವ ನಿರ್ಮಲವಾದ ಸರೋವರಗಳನ್ನು ವಿಮಾನ ಕಲಶ ಪ್ರಸಾದಗಳನ್ನೂ ದೇವ ಗಂಧರ್ವ ಋಷಿ ಅಪ್ಸರೆ ಮುಂತಾದವರ ವಿಹಾರವನ್ನು ತೋರಿಸುತ್ತ ನಡೆದ. ಕಲ್ಪವೃಕ್ಷವನ್ನು ನೋಡಿ ದೇವಿಗೆ ಕುತೂಹಲ ಉಂಟಾಯಿತು ಇದು ಯಾವ ವೃಕ್ಷವೆಂದು.

**ಶಿವ :-** ಇದು ಕಲ್ಪವೃಕ್ಷ, ವೃಕ್ಷಗಳಲ್ಲೆಲ್ಲ ಅತ್ಯುತ್ತಮವಾದುದು. ದೇವತೆಗಳಲ್ಲಿ ಮಧುಸೂದನ, ನದಿಗಳಲ್ಲಿ ಗಂಗೆ, ಪ್ರಜಾಪತಿಗಳಲ್ಲಿ ಬ್ರಹ್ಮ, ಆಹ್ಲಾದಕರವಸ್ತುಗಳಲ್ಲಿ ಚಂದ್ರ, ಪಂಚಭೂತಗಳಲ್ಲಿ ಪೃಥಿವಿ, ಪರ್ವತಗಳಲ್ಲಿ ಹಿಮಾಲಯ, ಜಲಾಶಯಗಳಲ್ಲಿ ಸಮುದ್ರ, ಔಷಧಿಗಳಲ್ಲಿ ಅನ್ನ, ವಿದ್ಯೆಗಳಲ್ಲಿ ಆತ್ಮವಿದ್ಯೆ, ಮನುಷ್ಯರಲ್ಲಿ ರಾಜ ಶ್ರೇಷ್ಠ ಎನ್ನುವಂತೆ ವೃಕ್ಷಗಳಲ್ಲಿ ಇದು. ದೇವರಾಜನಿಗೆ ಬಲು ಪ್ರಿಯ.

**ಪಾರ್ವತಿ :-** ಅಂಥ ವಿಶೇಷಗುಣ ಇದರಲ್ಲೇನಿದೆ ?

**ಶಿವ :-** ಬಯಸಿದುದನ್ನೆಲ್ಲ ಕೊಡುತ್ತದೆ.

ದೇವಿ ಇದನ್ನು ಪರೀಕ್ಷಿಸಿ ನೋಡಬೇಕೆಂದುಕೊಂಡು ಶಂಕರನ ಅನುಮತಿಯಿಂದ ವೃಕ್ಷದ ಬಳಿ ನಿಂತು ಮನಸ್ಸಿನಲ್ಲಿ ಸ್ತ್ರೀರತ್ನ ಒಂದನ್ನು ಚಿಂತಿಸಿದಳು. ಒಡನೆ ಓರ್ವ ಯುವತಿ ಅವಿರ್ಭವಿಸಿದಳು. ಮನ್ಮಥನ ಸಹಾಯಕ್ಕಾಗಿಯೇ ಜನಿಸಿದಳೋ ಎನ್ನುವಂತಿದ್ದಳು ಆ ಚಲುವೆ. ತಾವರೆಯಂಥ ಮೊಗ, ತಾವರೆಯಂಥ ಕಂಗಳು. ಚಿನ್ನದ ಮೈಬಣ್ಣ ಅವಳದು. ನುಣುಪಾದ ಉದ್ದನೆಯ ಕಪ್ಪು ಕೂದಲುಗಳನ್ನು ಸುಂದರವಾಗಿ ಕಟ್ಟಿಕೊಂಡಿದ್ದಳು. ಸುವಾಸನೆ ಬೀರುವ ಹೂ ಮುಡಿದಿದ್ದಳು. ಬೈತಲೆಯಲ್ಲಿ ಮುತ್ತಿನ ಸರ, ಅದರ ಬುಡದಲ್ಲಿ ಉದಿಸಿದ ಬೆಳ್ಳಿಯಂತೆ ಹೊಳೆವ ಬೊಟ್ಟು, ಕಸ್ತೂರಿಯ ತಿಲಕಗಳನ್ನು ಧರಿಸಿದ್ದಳು. ಅವಳ ಮುಖ ಪೂರ್ಣಚಂದ್ರನಂತೆಯೇ ಹೊಳೆಯುತ್ತಿತ್ತು. ಆದರೆ ಅವನಂತೆ ಕಳಂಕವನ್ನು ಹೊತ್ತಿರಲಿಲ್ಲ. ಎಂದೂ ಕಳಾಹೀನವಾಗುತ್ತಿರಲಿಲ್ಲ. ಗಾಳಿ ಅವಳ ಮುಖದ ಸೌರಭವನ್ನು ಸುತ್ತಲೂ ಹರಡುತ್ತಿದ್ದಾಗ ತಾವರೆಗಳು, 'ಯಾರೀಕೆ, ನಮ್ಮ ಸೌರಭವನ್ನೆ ಎಲ್ಲಿಡೆ ಹಬ್ಬಿಸುತ್ತಿದ್ದಾಳೆ ? ನಮ್ಮ ಎಲ್ಲ ಗುಣಗಳನ್ನು ಮೈಗೂಡಿಸಿಕೊಂಡು ತಾವರೆ ಮೊಗದವಳೋರ್ವಳು ಈಗ ಮೂಡಿ ಬಂದಳೆ ?' ಎಂದು ಕೊಂಡು ಲಜ್ಜೆಯಿಂದ ನೀರಲ್ಲಿ ಅಡಗಿದುವು. ಅವಳ ಕೆಂಪು ತುಟಿಗಳ ಮೇಲೆ ಒಮ್ಮೆ ನಗು ಕುಣಿದಾಡಿತೆಂದರೆ ಆಗ ತೋರುವ ಹೊಳೆವ ರತ್ನದಂಥ ಹಲ್ಲುಗಳ ಸಾಲುಗಳನ್ನು ಕಂಡ ಸಹೃದಯರು ಮದನ ರಾಜನ ಬೊಕ್ಕಸದಲ್ಲಿ ಅವನ ಐಶ್ವರ್ಯದ ಮೊತ್ತ ಈಗ ಸಮುದ್ರದಂತೆ ಉಕ್ಕೇರಿತು ಎಂದು ಕೊಳ್ಳುತ್ತಿದ್ದರು. ಅವಳ ಹುಬ್ಬು ಮೂಗು ಕಿವಿ ಕೆನ್ನೆ ಎಲ್ಲವೂ ಚೆನ್ನ. ಕಂಠದಲ್ಲಿ ಶೋಭಿಸುವ ಮೂರು ಗೆರೆಗಳು ಅವಳ ಸೌಭಾಗ್ಯ ಸಂಪತ್ತು ಶೃಂಗಾರ ಈ ಮೂರನ್ನು ಸೂಚಿಸುತ್ತಿದ್ದವು. ಬೇಲದ ಹಣ್ಣಿನಂತೆ ದುಂಡಗೆ ಬಿಗಿಯಾಗಿ

ಬೀಗಿದ ಎದೆಗಳು ಮದನನ ಅಭಿಷೇಕಕ್ಕೆ ಅಣಿಮಾಡಿಟ್ಟ ಕಲಶಗಳಂತಿದ್ದವು. ಹೆಗಲೂ ತೋಳೂ ಲಕ್ಷಣವಾಗಿದ್ದವು. ಅಂಗೈ ಅಂಗಾಲುಗಳು ಕೆಂದಾವರೆಯ ಕೆಂಪನ್ನು ತಳೆದು ಕೆಂಪಾಗಿದ್ದವು. ಪದ್ಮ ಸ್ವಸ್ತಿಕೆಗಳ ರೇಖೆ ಮತ್ತು ಇತರ ಲಕ್ಷಣಗಳನ್ನು ಹೊತ್ತಿದ್ದವು. ಉಗುರುಗಳು ರತ್ನದಂತೆ ಹೊಳೆಯುತ್ತಿದ್ದವು. ಸರ್ವಾಂಗಗಳೂ ಪದ್ಮದ ಸೌರಭ ಸೂಸುತ್ತಿದ್ದುದರಿಂದ ಅವಳು ಪದ್ಮನಿ ಜಾತಿಯ ಹೆಣ್ಣು ಎನಲಡ್ಡಿ ಇರಲಿಲ್ಲ. ಸಾಮುದ್ರಿಕ ಶಾಸ್ತ್ರದಲ್ಲಿ ಹೇಳಿದ ಉತ್ತಮ ಶರೀರದ ಲಕ್ಷಣಗಳೆಲ್ಲ ಅವಳಲ್ಲಿ ಎದ್ದು ಕಾಣುತ್ತಿದ್ದವು.

ನೀಲ ದುಕೂಲ ಉಟ್ಟು ಕೆಂಪು ರವಿಕೆ ತೊಟ್ಟಿದ್ದಳು. ಹಾರ, ಬಳೆ, ಗೆಜ್ಜೆ ಮುಂತಾದ ಎಲ್ಲ ಆಭರಣಗಳಿಂದ ಸಿಂಗರಿಸಿಕೊಂಡಿದ್ದಳು. ದೇವಿ ಯಾವ ಯಾವ ಸೌಂದರ್ಯವನ್ನು ಮನಸ್ಸಿನಲ್ಲಿ ಚಿಂತಿಸಿಕೊಂಡಿದ್ದಳೋ ಅದೆಲ್ಲವನ್ನೂ ಹೊತ್ತು ಮೂಡಿ ಬಂದಿದ್ದಳಾಕೆ.

ಅವಳನ್ನು ನೋಡಿ ದೇವಿ ಅಂದಳು, 'ನಾಥ, ನೀನನ್ನುವಂತೆ ಈ ಕಲ್ಪವೃಕ್ಷ ನಿಜವಾಗಿಯೂ ಬಯಸಿದುದನ್ನೆಲ್ಲ ಕೊಡಬಲ್ಲುದು.

ಅಷ್ಟರಲ್ಲಿ ಆ ಚಲುವೆ ಅವರೆಡೆಗೆ ನಡೆದು ಬಂದು ಕಾಲುಮುಟ್ಟಿನಮಸ್ಕರಿಸಿ ವಿನಯದಿಂದ ಮಧುರವಾಗಿ ನುಡಿದಳು. 'ಅಮ್ಮ, ನನ್ನನ್ನೇಕೆ ಸೃಷ್ಟಿಸಿದೆ ?' ದೇವಿ ನುಡಿದಳು. 'ಮಗಳೆ, ಈ ಕಲ್ಪವೃಕ್ಷದ ಸಾಮರ್ಥ್ಯ ಎಷ್ಟಿದೆಯೋ ಎಂದು ನೋಡುವಾಸೆಯಿಂದ ಪರೀಕ್ಷಿಸಿದೆ. ಆಗ ನೀನು ಮೂಡಿಬಂದೆ. ನೀನು ಅಶೋಕ ಸುಂದರಿ ಎಂದು ಪ್ರಸಿದ್ಧಳಾಗು. ಮುಂದೆ ಸೋಮವಂಶದಲ್ಲಿ ನಹುಷನೆಂಬ ಹೆಸರಿನ ಇಂದ್ರನಂಥ ಒಬ್ಬ ಅರಸು ಹುಟ್ಟುತ್ತಾನೆ. ಅವನೇ ನಿನ್ನ ನಾಥನಾಗುತ್ತಾನೆ.' ಬಳಿಕ ಶಿವ ಪಾರ್ವತಿಯರು ಕೈಲಾಸಕ್ಕೆ ತೆರಳಿದರು.

**ಕುಂಜಲ** :- ಅಶೋಕಸುಂದರಿ ಚೆನ್ನಾಗಿ ಹಾಡ ಬಲ್ಲಳು, ಕುಣಿಯಬಲ್ಲಳು. ಸ್ವರ್ಗದಲ್ಲಿ ಸುಖವಾಗಿದ್ದು, ಚೆಲುವೆಯರಾದ ಗೆಳತಿಯರೊಂದಿಗೆ ನಂದನವನದಲ್ಲಿ ವಿಹರಿಸುತ್ತಿದ್ದಳು.

ಹುಂಡನೆಂಬ ಒಬ್ಬ ಕ್ರೂರಿಯಾದ ದೈತ್ಯ, ವಿಪ್ರಚಿತ್ತಿಯ ಮಗ, ಸ್ವೇಚ್ಛಾಚಾರಿ ಮಹಾಕಾಮಿ.. ಅವನೊಮ್ಮೆ ನಂದನವನವನ್ನು ಪ್ರವೇಶಿಸಿದ. ಅಶೋಕಸುಂದರಿಯನೊಮ್ಮೆ ನೋಡಿದೊಡನೆ ಕಾಮನ ಬಾಣಗಳಿಗೀಡಾದ. ಆ ಮಹಾಕಾಯದ ದೈತ್ಯ ಆಕೆಯ ಬಳಿ ಬಂದು 'ಯಾರೆ ನೀನು ? ಯಾರ ಮಗಳು ? ಈ ವನಕ್ಕೇಕೆ ಬಂದೆ ?' ಎಂದ.

**ಅಶೋಕ ಸುಂದರಿ** :- ನಾನು ಶಿವನ ಮಗಳು. ಈ ವನದಲ್ಲಿ ಆಟ ಆಡುತ್ತಿದ್ದೇನೆ. ನೀನಾರು ? ಏಕೆ ಈ ಪ್ರಶ್ನೆಗಳನ್ನು ಮಾಡುತ್ತಿರುವೆ ?

**ಹುಂಡ** :- ನಾನು ಹುಂಡ. ವಿಪ್ರಚಿತ್ತಿಯ ಮಗ. ಗುಣಲಕ್ಷಣಗಳೆಲ್ಲ ನನ್ನಲ್ಲಿವೆ. ನನ್ನ ಬಲ ವೀರ್ಯ ಧನಸಂಪತ್ತು ಇನ್ನಾರಲ್ಲೂ ಇಲ್ಲ. ದೈತ್ಯರಲ್ಲೆಲ್ಲ ನಾನು ಶ್ರೇಷ್ಠ. ರಾಕ್ಷಸರಲ್ಲಿಯೂ ನನ್ನಂಥವರಿಲ್ಲ, ದೇವತೆಗಳಲ್ಲಿ, ಮನುಷ್ಯರಲ್ಲಿ ನಾಗರಲ್ಲಿ ನನ್ನಂಥವರಾರೂ ಇಲ್ಲ. ಉದ್ದುದ ಕಣ್ಣಿನವಳೆ, ಮದನನ ಬಾಣಗಳಿಂದ ಸಾಯುತ್ತಿದ್ದೇನೆ. ಪ್ರಸನ್ನಳಾಗು ನಿನ್ನ ಮೊರೆಹೊಕ್ಕಿದ್ದೇನೆ. ನೀನೆನ್ನ ಮಡದಿಯಾಗು, ಪ್ರಾಣಪ್ರಿಯೆಯಾಗು.

**ಅಶೋಕ ಸುಂದರಿ :-** ಹುಂಡ, ನಾನು ಹೇಳುವುದನ್ನು ಕೇಳು. ಗಂಡಿಗೆ ಯೋಗ್ಯಳಾದ ಒಬ್ಬ ಹೆಣ್ಣು, ಹೆಣ್ಣಿಗೆ ಯೋಗ್ಯನಾದ ಒಬ್ಬ ಗಂಡು ಸಿಗಬೇಕು. ಇದು ಈ ಲೋಕದ ರೀತಿ. ನಾನು ನಿನಗೆ ಯೋಗ್ಯ ಮಡದಿ ಆಗಲಾರೆ. ಏಕೆ ಎನ್ನುವುದನ್ನು ತಾಳ್ಮೆಯಿಂದ ಕೇಳು.

ಶಿವನ ಅನುಮತಿಯಿಂದ ಪಾರ್ವತಿ ನನ್ನನ್ನು ಮನಸ್ಸಿನಲ್ಲಿ ಕಲ್ಪಿಸಿಕೊಂಡಾಗ ಕಲ್ಪವೃಕ್ಷದಿಂದ ಮೂಡಿಬಂದವಳು ನಾನು. ಆಗಲೆ ಅವರು ನನಗೊಬ್ಬ ಪತಿಯನ್ನು ಗೊತ್ತು ಮಾಡಿದ್ದಾರೆ. ಬಲದಲ್ಲಿ ಇಂದ್ರನಂತೆ, ತೇಜಸ್ಸಿನಲ್ಲಿ ಅಗ್ನಿಯಂತೆ, ರೂಪದಲ್ಲಿ ಮನ್ಮಥನಂತೆ ಇರುವ ಧರ್ಮಾತ್ಮನಾದ, ದಾನಶೀಲನಾದ, ಸದ್ಗುಣಗಳ ಖನಿಯಂತಿರುವ ನಹುಷನೆಂಬವ, ಚಂದ್ರವಂಶದವ ನನ್ನ ನಾಥನಾಗಲಿದ್ದಾನೆ, ಅವನಿಂದ ನಾನು ಎಲ್ಲ ಗುಣಗಳಿಂದ ಕೂಡಿದ ಇಂದ್ರ ಉಪೇಂದ್ರರಿಗೆ ಸಮನಾದ, ಜನಪ್ರಿಯನಾದ, ಯುದ್ಧಶೂರನಾದ ಯಯಾತಿ ಎಂಬ ರಾಜನನ್ನು ಮಗನನ್ನಾಗಿ ಪಡೆಯಲಿದ್ದೇನೆ. ಹುಂಡ, ನಾನು ನಿನಗೆ ಸಿಗುವೆನೆಂಬ ಭ್ರಾಂತಿಯಿದ್ದರೆ ಬಿಟ್ಟುಬಿಡು. ನಾನು ನಿನಗೆ ಪರಸ್ತ್ರೀ. ಅದರಲ್ಲಿಯೂ ಪತಿವ್ರತೆ ಹೋಗು, ದೂರಹೋಗು.

**ಹುಂಡ :-** ನೀನಾಗಲಿ, ಆ ಶಿವನಾಗಲಿ, ಪಾರ್ವತಿಯಾಗಲಿ ಹೇಳುವದೊಂದೂ ಸಮಂಜಸವಾಗಿಲ್ಲ. ಸೋಮವಂಶದಲ್ಲಿ ನಹುಷನೆಂಬ ರಾಜ ಹುಟ್ಟಲಿದ್ದಾನೆ ಎನ್ನುತ್ತಿರುವೆ. ಹಾಗಾದರೆ ನೀನು ವಯಸ್ಸಿನಲ್ಲಿ ದೊಡ್ಡವಳು, ಅವನು ಸಣ್ಣವನು. ಇದು ಸರಿಯೆ ? ಹೆಣ್ಣು ಚಿಕ್ಕವಳಾಗಿರಬೇಕು, ಗಂಡಲ್ಲ. ನಿನಗೆಂತು ಆತ ಪತಿಯಾಗುವನು ? ಅವನು ಹುಟ್ಟುವಾಗ ನಿನ್ನ ಯೌವನ ಎಂದೋ ಕಳೆದುಹೋಗಿರುತ್ತದೆ. ಯೌವನದ ಬಲದಿಂದ ಹೆಣ್ಣು ರೂಪಸಿಯಾಗಿ ಕಾಣುವಳು. ಗಂಡುಗಳಿಗೆ ಪ್ರಿಯಳೆನಿಸುವಳು. ಮನಸ್ಸಿಗೆ ಬೇಕಾದಂತೆ ಕಾಮಭೋಗಗಳನ್ನು ಸವಿಯುವಳು. ಯೌವನವೆನ್ನುವುದು ಯುವತಿಯರಿಗೆ ಅತ್ಯಮೂಲ್ಯವಾದುದು. ಆ ನಹುಷ ಎಂದೋ ಬರುವವನು. ಈಗ ನಿನ್ನ ಯೌವನ ವ್ಯರ್ಥವಾಗಿ ಜಾರುತ್ತಿದೆ. ಅವನಿನ್ನೂ ತಾಯಿಯ ಗರ್ಭವನ್ನು ಪ್ರವೇಶಿಸಬೇಕು. ಶಿಶುವಾಗಿ ಹುಟ್ಟಿ ಕೌಮಾರವನ್ನು ಕಳೆದು ಯುವಕನಾಗಿ ನಿನ್ನ ಬಳಿಗೆ ಬರಬೇಕು. ಉದ್ದಕಣ್ಣಿನವಳೆ ಬಾ, ಈ ಯೌವನದ ಕಾಲದಲ್ಲಿಯೇ ನನ್ನೊಡನೆ ಮಧುಪಾನ ಮಾಡು. ಸುಖವಾಗಿ ವಿಹರಿಸು.

**ಅಶೋಕಸುಂದರಿ :-** ಇಪ್ಪತ್ತೆಂಟನೆ ದ್ವಾಪರಯುಗದಲ್ಲಿ ಶೇಷನು ವಾಸುದೇವನ ಮಗ ಬಲರಾಮನಾಗಿ ಅವತರಿಸಿ ಕೃತಯುಗದಲ್ಲಿ ಹುಟ್ಟಿದ ರೇವತಿಯನ್ನು ಮದುವೆಯಾಗುತ್ತಾನೆ. ಮೂರುಯುಗದಷ್ಟು ದೊಡ್ಡವಳು ರೇವತಿ. ಆದರೂ ಬಲರಾಮನ ಪ್ರಾಣಪ್ರಿಯೆಯಾಗುವಳು. ಗಂಧರ್ವನ ಮಗಳು ಮಾಯಾವತಿ ಎಂದೋ ಹುಟ್ಟಿರುವಳು. ಅವಳನ್ನು ಶಂಬರ ಅಪಹರಿಸಿದ್ದಾನೆ. ಆದರೂ ಅವಳಿಗೆ ಮುಂದೆ ಹುಟ್ಟಲಿರುವ ಕೃಷ್ಣನ ಮಗ ಪ್ರದ್ಯುಮ್ನ ಪತಿಯಾಗಲಿದ್ದಾನೆ. ಇದನ್ನೆಲ್ಲ ಎಂದೋ ವೇದವ್ಯಾಸರಂಥ ಜ್ಞಾನಿಗಳು ಭವಿಷ್ಯ ನುಡಿದಿದ್ದಾರೆ. ಹೀಗೆ ನನ್ನ ತಾಯಿ ಜಗನ್ಮಾತೆ. ನನಗಾಗಿ ಆಶೆಪಟ್ಟು ಕೆಟ್ಟ ಮಾತುಗಳನ್ನಾಡುತ್ತಿರುವೆ. ಇದು ವೇದಶಾಸ್ತ್ರಗಳಿಗೆ ವಿರುದ್ಧವಾದುದು. ಪಾಪಪೂರಿತವಾದುದು. ಯಾರಿಗೆ ಏನು ಒದಗಬೇಕೋ ಅದು ಶುಭವೆ ಇರಲಿ, ಅಶುಭವೆ ಇರಲಿ. ಪೂರ್ವಕರ್ಮಾನುಸಾರವಾಗಿ ಒದಗುತ್ತದೆ.

**ದೇವಾನಾಂ ಬ್ರಾಹ್ಮಣಾನಾಂ ಚ ವದನೇ ಯತ್ಸುಭಾಷಿತಂ**
**ನಿಸ್ಸರೇದ್ಯದಿ ಸತ್ಯಂ ತದ್ ಅನ್ಯಥಾ ನೈವ ಜಾಯತೇ**

ದೇವತೆಗಳ ಬ್ರಾಹ್ಮಣರ ಬಾಯಿಯಿಂದ ಒಂದು ಮಾತು ಹೊರಟರೆ ಅದು ನಿಜವೆ ಆಗುತ್ತದೆ. ಸುಳ್ಳಾಗಲಾರದು.

ಆ ಶಿವ-ಪಾರ್ವತಿಯರು ನನ್ನ ಭಾಗ್ಯದಿಂದ ಆ ನಹುಷನ ಅದೃಷ್ಟ ಬಲದಿಂದ ಹಾಗೇ ಭವಿಷ್ಯ ನುಡಿದರು. ಇದನು ತಿಳಿದುಕೊ. ಮನುಷ್ಯನಲ್ಲಿರುವ ಭ್ರಾಂತಿಯನ್ನು ದೂರಮಾಡಿ ಶಾಂತಿಯನ್ನು ತಂದುಕೊ. ಯಾವ ರೀತಿಯಿಂದಲೂ ನನ್ನ ಮನಸ್ಸನ್ನು ಚಂಚಲಗೊಳಿಸುವುದು ನಿನ್ನಿಂದ ಆಗದು. ನೀನೆ ಏಕೆ, ಯಾರಿಂದಲೂ ಆಗದು. ನಾನು ಪತಿವ್ರತೆ. ಮಹಾ ಅಸುರನೆ, ದೂರಹೋಗು. ಇಲ್ಲದಿದ್ದರೆ ನಿನ್ನನ್ನು ಶಾಪದಿಂದ ಸುಟ್ಟುಬಿಡುವೆ.

ಈ ಮಾತುಗಳನ್ನು ಕೇಳಿ ಹುಂಡನೊಂದುಕ್ಷಣ ಯೋಚಿಸಿದ 'ನಾನು ಹೇಗೆ ಈಕೆಯನ್ನು ನನ್ನವಳನ್ನಾಗಿ ಮಾಡಿಕೊಳ್ಳಲಿ ?' ಎಂದು ಒಡನೆ ಅದೃಶ್ಯನಾದ ಆ ಮಾಯಾವಿ. ಅಶೋಕಸುಂದರಿ ಅವನ ನಾಶಕ್ಕಾಗಿ ತಪಸ್ಸಿಗೆ ಕುಳಿತಳು. ಕೆಲದಿನಗಳ ಬಳಿಕ ಹುಂಡ ಹೆಣ್ಣಿನ ರೂಪು ಧರಿಸಿ ನಗುತ್ತ ವೈಯ್ಯಾರದಿಂದ ಅಶೋಕಸುಂದರಿಯ ಬಳಿಗೆ ನಡೆದು ಬಂದು ಪ್ರೀತಿಯನ್ನು ತೋರುತ್ತ ನುಡಿದ.

**ಹುಂಡ :-** ಚೆಲುವೆ, ನೀನಾರು, ಯಾರ ಮಗಳು ? ಈ ತಪೋವನದಲ್ಲಿ ಏಕೆ ಕುಳಿತಿರುವೆ ? ಏಕೆ ಈ ತಪಸ್ಸು ?

ಈ ಒಳ್ಳೆಯ ಮಾತು ಆಡುತ್ತಿದ್ದಾಗ ಹುಂಡ ಆಸೆಯಿಂದ ಅವಳನ್ನು ನೋಡುತ್ತಿದ್ದ. ಮಾಯೆಯ ಶಕ್ತಿಯಿಂದ ಆಕೆಗೆ ಅದು ಗೋಚರವಾಗಲಿಲ್ಲ. ಅವಳು ತಾನು ಹುಟ್ಟಿದ ಬಗೆ, ತನ್ನ ತಪಸ್ಸಿನ ಉದ್ದೇಶವೆಲ್ಲವನ್ನೂ ಸ್ನೇಹಾದರದಿಂದ ಆಕೆಗೆ ಬಣ್ಣಿಸಿದಳು. ಹುಂಡ ಅದನ್ನೆಲ್ಲ ಕೇಳಿ ನುಡಿದ.

**ಹುಂಡ :-** ದೇವಿ, ನೀನು ನಿಜವಾಗಿಯೂ ದೊಡ್ಡ ಪತಿವ್ರತೆ. ನಾನೂ ಪತಿವ್ರತೆಯೆ. ಆ ದುರಾತ್ಮ ಹುಂಡನೆ ನನ್ನ ಪತಿಯನ್ನು ಕೊಂದ. ಅವನ ನಾಶಕ್ಕಾಗಿ ಘೋರವಾದ ತಪಸ್ಸು ಮಾಡುತ್ತಿದ್ದೇನೆ. ನನ್ನ ಆಶ್ರಮವನ್ನೊಮ್ಮೆ ನೋಡು ಬಾ, ಗಂಗೆಯ ತೀರದಲ್ಲಿಯೆ ಇದೆ.

ಇಂಥ ಹಲವು ಮಾತುಗಳಿಂದ ಹುಂಡ ಅವಳನ್ನು ಮರಳುಮಾಡಿದ. ಆಕೆ ಆತನನ್ನು ನಿಜವಾಗಿಯೂ ಗೆಳತಿ ಎಂದೇ ತಿಳಿದಳು. ನಂಬಿದಳು. ಅವನೊಂದಿಗೆ ಅವನ 'ಆಶ್ರಮ'ಕ್ಕೆ ಹೋದಳು.

ಮೇರುಪರ್ವತದ ವೈಡೂರ್ಯ ಶಿಖರದಲ್ಲಿ ಕಾಂಚನವೆಂಬ ದೊಡ್ಡ ನಗರ, ಉನ್ನತ ಸೌಧಗಳು, ಕಳಸಗಳು, ಕೆರೆಬಾವಿನದಿಗಳು. ನಾನಾ ವೃಕ್ಷಗಳುಳ್ಳ ಉದ್ಯಾನಗಳು, ರತ್ನಮಯ ಸುವರ್ಣ ಪ್ರಾಕಾರಗಳಿಂದ ಸುತ್ತುವರಿದ ಸರ್ವಕಾಮೋಪಭೋಗ ಸಮೃದ್ಧವಾದ ದೈತ್ಯರ ನಿವಾಸಗಳು ಆ ನಗರದಲ್ಲಿವೆ. ಹುಂಡನು ಅಶೋಕ ಸುಂದರಿಯನ್ನು ಅಲ್ಲಿಗೆ ಕರೆದೊಯ್ದು ಒಂದು ಉಯ್ಯಾಲೆಯಲ್ಲಿ ಕುಳ್ಳಿರಿಸಿದ.

ಆಕೆ ವಿಸ್ಮಯಗೊಂಡು ನಗರದ ಶೋಭೆಯನ್ನು ನೋಡುತ್ತ ಹೇಳಿದಳು. 'ಇದು ಯಾವ ದೇವತೆಯ ಲೋಕ ?'

**ಹುಂಡ :-** ಇದು ನಿನಗೆ ಮೊದಲೆ ಪರಿಚಿತನಾದ ಆ ದಾನವೇಂದ್ರ ಹುಂಡನ ನಗರ. ನಾನು ಬೇರೆ ಯಾರೂ ಅಲ್ಲ. ಅವನೆ. ಮಾಯೆಯಿಂದ ನಿನ್ನನ್ನು ಇಲ್ಲಿಗೆ ಕರೆತಂದೆ. ಚಂದ ಕಣ್ಣಿನವಳೆ, ನೀನೇನು ಬಯಸಿದರೂ ಅವನ್ನು ನಾನು ಕೊಡುವೆ. ಕಾಮಪೀಡೆಗೊಳಗಾಗಿ ನಿನ್ನ ದಾಸನಾಗಿರುವೆ. ಬಾ ನನ್ನನ್ನು ಸೇರು. ಹುಂಡ ತನ್ನ ನಿಜರೂಪ ತೋರಿ ಕೈ ಮುಗಿದು ಬೇಡುತ್ತ ತಿರುಗಿ ಈ ಮಾತುಗಳನ್ನೇ ಹೇಳತೊಡಗಿದ.

**ಅಶೋಕಸುಂದರಿ :-** ಹೀಗೆ ನನ್ನನ್ನು ಮರಳುಮಾಡಲು ನಿನ್ನಿಂದ ಸಾಧ್ಯವಿಲ್ಲ. ಹುಂಡ, ನನ್ನ ಮೇಲಿನ ಮೋಹವನ್ನು ಬಿಟ್ಟುಬಿಡು. ನಿನ್ನಂಥ ಪಾಪಿ ದೈತ್ಯರಿಗಾಗಲಿ ದೇವತೆಗಳಿಗೆ ಆಗಲಿ ನಾನು ವಶಳಾಗುವವಳಲ್ಲ. ವೃಥಾ ತಿರುಗಿ ಅದೇ ಮಾತುಗಳನ್ನಾಡಬೇಡ. ನೀನೀಗ ದೊಡ್ಡ ಅಪರಾಧವನ್ನೇ ಮಾಡಿರುವೆ. ಇದು ನಿನ್ನ ಸರ್ವನಾಶಕ್ಕೆ ಕಾರಣವಾಗುವುದು. ನಿನ್ನ ವಂಶ ಹಾಳಾಗುವುದು. ನೀನೀಗ ಉರಿವ ಬೆಂಕಿಯನ್ನು ನಿನ್ನ ಮನೆಯೊಳಗೆ ತಂದುಕೊಂಡಿರುವೆ. ಅಮಂಗಳವಾದ ಕೂಟಪಕ್ಷಿ ಒಬ್ಬನ ಮನೆಯನ್ನು ಹೊಕ್ಕರೆ ಅವನೂ ಅವನ ವಂಶವೂ ಪೂರ್ತಿನಾಶ ಹೊಂದುವಂತೆ ನಾನು ನಿನ್ನ ಮನೆಯನ್ನು ಹೊಕ್ಕರೆ ನಿನ್ನ ಸರ್ವನಾಶವನ್ನೇ ಸಾಧಿಸುವೆ. ನನ್ನ ಪತಿ ನಹುಷ ಚಕ್ರವರ್ತಿ ನಿನ್ನನ್ನು ಕೊಲ್ಲುತ್ತಾನೆ. ಯಾವಾಗ ಯಾರ ದೆಸೆಯಿಂದ ಸುಖ ದುಃಖಗಳು ಬಂದೊದಗಬೇಕೊ ಆಗ ಅವರ ದೆಸೆಯಿಂದಲೆ ಆ ಸುಖ ದುಃಖಗಳು ಬರುವುವೆಂದು ಎಲ್ಲರೂ ಹೇಳುವ ಮಾತು. ಅನುಭವಸಿದ್ಧವೇ ಆಗಿದ್ದರೂ ನಿನ್ನಂಥ ಕುಬುದ್ಧಿಗಳು ಅದನ್ನು ತಿಳಿದುಕೊಳ್ಳಲಾರರು. ಈ ನಿನ್ನ ಪರಸ್ತ್ರೀ ವ್ಯಾಮೋಹದಿಂದ ನೀನು ನರಕ ಭಾಗಿಯಾಗಿರುವೆ. ಹರಿತವಾದ ಕತ್ತಿಯಲಗಿಗೆ ಕೋಪದ ಭರದಲ್ಲಿ ತುದಿಯಿಂದ ಹೊಡೆವಂತೆ, ಕೋಪದಿಂದ ಗರ್ಜಿಸುತ್ತಿರುವ ಸಿಂಹದೆದುರಿಗೆ ಹೋಗಿ ಅದರ ಮುಖದ ಕೇಸರವನ್ನು ಕೀಳಲು ಯತ್ನಿಸುವಂತೆ, ಕೃಷ್ಣಸರ್ಪ ಬದುಕಿರುವಾಗ ಅದರ ಮಣಿಗೆ ಕೈಯಿಡುವಂತೆ, ಆಚಾರ ದಮ ತಪಸ್ಸುಗಳಿಂದ ಕೂಡಿದ ಪ್ರಭಾವ ತಪಸ್ಸುಗಳಿಂದ ಕೂಡಿದ ಪತಿವ್ರತೆಯೊಬ್ಬಳನ್ನು ನೀನು ಭೋಗಿಸಲು ಬಯಸುತ್ತಿರುವೆ. ಮೂರ್ಖ, ಮೃತ್ಯುವೀಗ ನಿನ್ನನ್ನು ನನ್ನ ಬಳಿಗೆ ಸೆಳೆದು ತಂದಿದೆ ಎಂಬುದನ್ನು ತಿಳಿದುಕೊಳ್ಳು. ಆ ನಹುಷ ಮಹಾರಾಜನನ್ನು ಹೊರತು ಅನ್ಯರು ನನ್ನನ್ನು ನೋಡಿದರೆ ನಾಶವಾಗುತ್ತಾರೆ. ತಪೋಜ್ವಾಲೆಯಿಂದಲೂ ಕೋಪದಿಂದಲೂ ಉರಿಯುತ್ತ ಮೃತ್ಯುವಿನ ಹೊರಚಾಚಿದ ನಾಲಿಗೆಯಂತಾಗಿ ಈ ಮಾತುಗಳನ್ನಾಡಿದ್ದಳು ಶಿವನ ಕನ್ಯೆ.

ಬಳಿಕ ಆಕೆ ಅಲ್ಲಿಂದ ಹೊರಟು ಗಂಗಾತೀರಕ್ಕೆ ಬಂದು 'ಹುಂಡ, ಮೊದಲು ಪತಿಗಾಗಿ ಉಗ್ರತಪಸ್ಸು ಮಾಡುತ್ತಿದ್ದೆ. ಇನ್ನು ಮುಂದೆ ನಿನ್ನ ನಾಶಕ್ಕಾಗಿಯೇ ಘೋರ ತಪಸ್ಸು ಮಾಡುವೆ. ಆ ಮಹಾತ್ಮನಾದ ನಹುಷನು ವಜ್ರಾಯುಧದಂತೆ ತೀಕ್ಷ್ಣವಾದ ಕಾಳೋರಗದಂತೆ ಭೀಕರವಾದ ಬಾಣಗಳಿಂದ ನಿನ್ನನ್ನು ಕೊಲ್ಲಲಿ. ರಣರಂಗದಲ್ಲಿ ನೀನು ಮಡಿದು ಬೀಳುವುದನ್ನು ಕಂಡಾಗಲೆ ನಾನು ನನ್ನ ಪತಿಯನ್ನು ಸೇರುವೆ' ಎಂದು ಪ್ರತಿಜ್ಞೆ ಮಾಡಿ ನಿಶ್ಚಲತಪಸ್ಸು ಮಾಡತೊಡಗಿದಳು.

ಹುಂಡನಿಗೆ ಭಯ ಉಂಟಾಯಿತು. ತನ್ನ ಮಂತ್ರಿ ಕಂಪನನನ್ನು ಕರೆಸಿ ಎಲ್ಲ ವೃತ್ತಾಂತವನ್ನು ತಿಳಿಸಿ ಹೇಳಿದ. 'ನಹುಷನಿಂದ ನನಗೆ ಮರಣವಾಗಲೆಂದು ಅಶೋಕ ಸುಂದರಿ ಶಾಪವಿತ್ತಿದ್ದಾಳೆ. ಆಯುವಿನ ಮಡದಿ ಗರ್ಭವತಿಯಾಗದಂತೆ ಮಾಡಿ ಆ ಶಾಪವನ್ನು ಹುಸಿಗೊಳಿಸು.'

**ಕಂಪನ :-** ಆಯುವಿನ ಮಡದಿಯನ್ನೀಗಲೆ ಅಪಹರಿಸಿ ತಂದುಬಿಡು. ಆಗ ಶತ್ರು ಹುಟ್ಟಲು ಅವಕಾಶವಿಲ್ಲ. ಅಥವಾ ಅವಳು ಗರ್ಭವತಿಯಾಗಿದ್ದರೆ ಗರ್ಭಪಾತ ಉಂಟುಮಾಡು. ಅದೂ ಸಾಧ್ಯವಾಗದಿದ್ದಲ್ಲಿ ಆ ನಹುಷ ಹುಟ್ಟಿದೊಡನೆ ಅವನನ್ನು ಅಪಹರಿಸಿ ತಂದು ಕೊಲ್ಲು.

ಕಂಪನನ ಈ ಸಲಹೆಯಂತೆ ಹುಂಡ ಕಾರ್ಯತತ್ಪರನಾದ.

ಐಲನ ಮಗ ಆಯು ಧರ್ಮಾತ್ಮನಾದ ಸಾರ್ವಭೌಮ ತಪಸ್ಸು ಬಲ ಕೀರ್ತಿ ದಾನಯಜ್ಞ ಸತ್ಯ ನಿಯಮಗಳಲ್ಲಿ ಇಂದ್ರ ಉಪೇಂದ್ರರಂತಿದ್ದ. ಏಕಚಕ್ರಾಧಿಪತಿಯಾಗಿ ಮೆರೆದು ಚಂದ್ರವಂಶಕ್ಕೆ ಭೂಷಣಪ್ರಾಯನಾಗಿದ್ದ. ಆತನಿಗೆ ಪುತ್ರಸಂತತಿ ಇಲ್ಲದಿರುವುದೊಂದೆ ಕೊರಗು. ಅದಕ್ಕಾಗಿ ಎಷ್ಟೋ ಪ್ರಯತ್ನಗಳನ್ನು ಮಾಡಿದ್ದನಾತ. ಆ ಸಮಯದಲ್ಲಿ ಅತ್ರಿಮುನಿಯ ಮಗನಾದ ದತ್ತಾತ್ರೇಯ ಮಹರ್ಷಿ ಮದ್ಯಪಾನ ಸ್ತ್ರೀಸಂಗಗಳಲ್ಲಿ ನಿರತನಾಗಿದ್ದ. ಅವನ ಕಣ್ಣುಗಳು ಮದದಿಂದ ಕೆಂಪೇರಿರುತ್ತಿದ್ದುವು. ತೊಡೆಯಮೇಲೊಂದು ಸುಂದರ ಹೆಣ್ಣು. ಸುತ್ತಲೂ ಓಲೈಸಲು ಹೆಣ್ಣುಗಳ ದೊಡ್ಡಗುಂಪು. ಯಥೇಚ್ಛ ಮದ್ಯ ಕುಡಿದು ಹಾಡಬೇಕು, ಕುಣಿಯಬೇಕು. ಯಜ್ಞೋಪವೀತವಿಲ್ಲ, ಮುತ್ತಿನಹಾರ ಹೂಮಾಲೆಗಳನ್ನು ಧರಿಸಿದ್ದ. ಚಂದನ ಅಗುರು ಲೇಪಿಸಕೊಳ್ಳುತ್ತಿದ್ದ. ಮಹಾಯೋಗೀಶ್ವರರಲ್ಲೇ ಅಗ್ರಗಣ್ಯನಾದ ಅವನ ಆ ಆಶ್ರಮಕ್ಕೆ ರಾಜ ತೆರಳಿದ. ಅಲ್ಲಿ ಮುನಿಯನ್ನು ಕಂಡು ದಂಡಪ್ರಣಾಮ ಮಾಡಿದ. ಭಕ್ತಿಯಿಂದ ಮುಂದೆ ಬಂದು ನಿಂತಿದ್ದ ಮಹಾರಾಜನನ್ನು ಮುನಿ ಅಲಕ್ಷಿಸಿದ. ನೂರು ವರ್ಷಗಳು ಹಾಗೇ ಕಳೆದವು. ಮಹಾರಾಜ ಮೊದಲಿನಂತೆಯೇ ನಿಶ್ಚಲಭಕ್ತಿಯಿಂದ ಮುನಿಯ ಅನುಗ್ರಹಕ್ಕೆ ಕಾದುಕುಳಿತಿದ್ದ. ಒಂದು ದಿನ ಮುನಿ ಕೇಳಿದ.

**ದತ್ತಾತ್ರೇಯ:-** ರಾಜನೆ, ಏಕೆ ಇಲ್ಲಿ ವ್ಯರ್ಥವಾಗಿ ಕ್ಲೇಶಪಡುತ್ತಿರುವೆ ? ನಾನು ಬ್ರಾಹ್ಮಣನಲ್ಲ. ಬ್ರಾಹ್ಮಣರ ಆಚಾರ ನನ್ನಲ್ಲಿಲ್ಲ. ನೋಡು ಮದ್ಯಮಾಂಸಗಳ ಚಟಕ್ಕೆ ಬಲಿಯಾಗಿದ್ದೇನೆ. ಸದಾ ಸ್ತ್ರೀ ಸಂಗದಲ್ಲಿ ಆಸಕ್ತನಾಗಿದ್ದೇನೆ. ನಿನಗೆ ವರನೀಡುವ ಶಕ್ತಿ ನನಗೆಲ್ಲಿಂದ ಬರಬೇಕು. ಹೇಳು. ಹೋಗು, ಬೇರೆ ಯಾರಾದರೊಬ್ಬ ಬ್ರಾಹ್ಮಣನನ್ನು ಸೇವಿಸು.

**ಆಯು :-** ಮಹಾತ್ಮ, ನಿನ್ನಂಥ ಉತ್ತಮ ಜ್ಞಾನಿ ಇನ್ನೆಲ್ಲೂ ಇಲ್ಲ. ಮೂಲೋಕದೊಡೆಯನಾದ, ಭಕ್ತರ ಅಭೀಷ್ಟಗಳನ್ನೆಲ್ಲ ಸಲ್ಲಿಸುವ ಗೋವಿಂದನೆ ಅತ್ರಿವಂಶದಲ್ಲಿ ನಿನ್ನ ರೂಪದಿಂದ ಜ್ಞಾನಿಯಾಗಿ ಅವತರಿಸಿದ್ದಾನೆ. ದೇವದೇವೋತ್ತಮ, ಪರಮೇಶ್ವರ ನಿನ್ನನ್ನು ನಮಸ್ಕರಿಸುತ್ತೇನೆ. ಶರಣಾಗತವತ್ಸಲನಾದ ನಿನ್ನನ್ನೇ ಶರಣು ಹೊಂದಿದ್ದೇನೆ ಉದ್ಧರಿಸು. ನೀನು ಮಾಯೆಯನ್ನು ತೋರಿದರೇನು ? ಸಾಕ್ಷಾತ್

ಜಗದೊಡೆಯ ಮಧುಸೂಧನನೇ ನೀನೆಂದು ನಾನು ತಿಳಿದಿರುವೆ. ನನ್ನನ್ನು ಕಾಪಾಡು, ನಿನಗಿದೋ ನಮಸ್ಕಾರ.

ದತ್ತಾತ್ರೇಯ ಸುಮ್ಮನಿದ್ದ. ಇನ್ನೂ ಕೆಲವು ಕಾಲ ಕಳೆದಾಗ ಮದ್ಯದ ಅಮಲಿನಲ್ಲಿ ಮಹಾರಾಜನನ್ನು ಕರೆದು ಹೇಳಿದ.

**ದತ್ತಾತ್ರೇಯ :-** ಈ ತಲೆ ಬುರುಡೆ ತುಂಬ ಮದ್ಯ ಸುರಿ. ಮಾಂಸದ ಭಕ್ಷ್ಯವನ್ನೂ ತಾ.

ಒಡನೆ ಮಹಾರಾಜ ಸಂಭ್ರಮದಿಂದ ಸುರೆಯನ್ನು ಕಪಾಲಕ್ಕೆ ಸುರಿದು ತಂದ, ಪಕ್ವವಾದ ಮಾಂಸವನ್ನೂ ತಂದ.

ಮಹಾರಾಜನ ಭಕ್ತಿಯನ್ನೂ ಗುರುಸೇವೆಯಲ್ಲಿರುವ ನಿಷ್ಠೆಯನ್ನೂ ಕಂಡು ಮುನಿ ಪ್ರಸನ್ನನಾಗಿ ನುಡಿದ.

**ದತ್ತಾತ್ರೇಯ :-** ರಾಜನೆ, ನಿನ್ನ ಅಭೀಷ್ಟವೇನು ಹೇಳು. ಅದೆಷ್ಟು ದುರ್ಲಭವಾದರೂ ಸರಿಯೆ. ನಾನದನ್ನು ಪೂರೈಸುವೆನು.

**ಆಯು:-** ವಿಪ್ರೋತ್ತಮ, ನನಗೊಬ್ಬ ಒಳ್ಳೆಯ ಗುಣವಂತನಾದ ಪುತ್ರನನ್ನು ನೀಡು. ಅವನು ದೇವ, ದಾನವ, ವಾನರ, ರಾಕ್ಷಸರಾರಿಂದಲೂ ಸೋಲದ ವೀರನಾಗಿರಬೇಕು. ದಾನಶೂರನಾಗಿರಬೇಕು ಶರಣಾಗತ ವತ್ಸಲನಾಗಿರಬೇಕು. ಜ್ಞಾನ ಭಕ್ತಿರೂಪ ಸೌಂದರ್ಯಗಳಿಂದ ಕೂಡಿದ್ದು ವಂಶೋಧಾರಕನಾಗಿರಬೇಕು.

**ದತ್ತಾತ್ರೇಯ :-** ಹಾಗೇ ಆಗಲಿ, ರಾಜನೇ, ಸರ್ವಭೂತ ದಯಾಪರನಾದ ಪುಣ್ಯವಂತ ಮಗ ಹುಟ್ಟುತ್ತಾನೆ. ನೀನು ಹೇಳುವ ಎಲ್ಲ ಗುಣಗಳಿಂದ ಕೂಡಿರುತ್ತಾನೆ. ವೈಷ್ಣವ ತೇಜಸ್ಸಿನಿಂದ ಇಂದ್ರನಂತೆ ಸಾರ್ವಭೌಮನಾಗಿ ಮೆರೆಯುತ್ತಾನೆ. ಮುನಿಯು ಹೀಗೆ ವರವಿತ್ತು ಒಂದು ಹಣ್ಣನ್ನು ರಾಜನ ಕೈಯಲ್ಲಿಟ್ಟು ಇದನ್ನು ನಿನ್ನ ರಾಣಿಗೆ ಕೊಡೆಂದು ಹೇಳಿ ಆಶೀರ್ವದಿಸಿ ಅದೃಶ್ಯನಾದ.

**ಕುಂಜಲ :-** ಆಯು ಮಹಾರಾಜ ರಾಜಧಾನಿಗೆ ಹಿಂತಿರುಗಿ ರಾಣಿ ಇಂದುಮತಿಯ ಅಂತಃಪುರವನ್ನು ಪ್ರವೇಶಿಸಿದ. ಇಂದ್ರನ ಅರಮನೆಯಂತಿದ್ದ ಆ ಅಂತಃಪುರದಲ್ಲಿ ಎಲ್ಲ ಸುಖ ಭೋಗಗಳನ್ನು ಆಕೆಯೊಂದಿಗೆ ಸವಿಯುತ್ತ ಇಂದ್ರನಂತೆಯೆ ರಾಜ್ಯಭಾರವನ್ನು ಮಾಡಿದ.

ರಾಣಿ ಫಲವನ್ನು ಸೇವಿಸಿ ಗರ್ಭವತಿಯಾದಳು. ಒಮ್ಮೆ ಆ ರಾತ್ರಿಯಲ್ಲಿ ಕನಸು ಕಂಡಳು. ಆ ಕನಸಿನಲ್ಲಿ ಸೂರ್ಯನಂತೆ ದೇದೀಪ್ಯಮಾನನಾದ ಒಬ್ಬ ಬ್ರಾಹ್ಮಣ ಆಕೆಯ ಅಂತಃಪುರವನ್ನು ಪ್ರವೇಶಿಸಿದ. ಬಿಳಿ ಬಟ್ಟೆ ಉಟ್ಟು ಬಿಳಿ ಹೂಮಾಲೆ ತೊಟ್ಟು ಮುತ್ತಿನ ಸರ ಮುಂತಾದ ಆಭರಣಗಳನ್ನು ಧರಿಸಿ ದಿವ್ಯಗಂಧವನ್ನು ಮೈಗೆ ಲೇಪಿಸಿ ಕೊಂಡಿದ್ದನಾತ. ಅವನಿಗೆ ನಾಲ್ಕು ಕೈಗಳು. ಅವುಗಳಲ್ಲಿ ಶಂಖ ಚಕ್ರ ಗದೆ ಖಡ್ಗಗಳನ್ನು ಧರಿಸಿದ್ದ. ಚಂದ್ರಬಿಂಬದಂತೆಸೆವ ಛತ್ರದಿಂದ ಶೋಭಿಸುತ್ತಿದ್ದ. ಅವನ ಕರ್ಣಕುಂಡಲಗಳು ಚಂದ್ರಬಿಂಬದಂತೆ ಹೊಳೆಯುತ್ತಿದ್ದುವು. ಅವನು ಇಂದುಮತಿಯನ್ನು ಕರೆದು ಕುಳ್ಳಿರಿಸಿ ಚಿನ್ನರತ್ನಗಳಿಂದ ಖಚಿತವಾದ, ಚಂದ್ರನಂತೆ ಹೊಳೆವ ಶಂಖದಿಂದ ಹಾಲಿನ ಅಭಿಷೇಕ

ಮಾಡಿ, ಮಹಾಮಣಿಯಿಂದ ಕೂಡಿದ ಸಾವಿರ ತಲೆಯ ಸುಂದರವಾದ ಬಿಳಿಯಾನೆಯೊಂದನ್ನು ಬಾಯೊಳಗೆ ಹಾಕಿದ. ಕುತ್ತಿಗೆಗೆ ಮುತ್ತಿನ ಮಾಲೆ ತೊಡಿಸಿ ಕೈಗೊಂದು ಕಮಲವನ್ನಿತ್ತು ಹೊರಟುಹೋದ. ಈ ಕನಸಿನ ವೃತ್ತಾಂತವನ್ನು ರಾಣಿ ರಾಜನಿಗೆ ತಿಳಿಸಿದಳು. ಅವನು ಗುರು ಶೌನಕರನ್ನು ಕರೆಸಿ ಸ್ವಪ್ನ ಫಲವನ್ನು ಕೇಳ ಬಯಸಿದ. ಶೌನಕರು ಪ್ರಶ್ನಿಸಿದರು.

**ಶೌನಕ** :- ರಾಜನ್, ಅಂದು ದತ್ತಾತ್ರೇಯ ಮಹರ್ಷಿ ನಿನಗೆ ವರವಿತ್ತು ಒಂದು ಹಣ್ಣನ್ನು ಕೊಟ್ಟಿದ್ದ. ಅದನ್ನೇನು ಮಾಡಿದೆ ? ಯಾರಿಗೆ ಕೊಟ್ಟೆ ?

**ಆಯು** :- ರಾಣಿಗೆ.

**ಶೌನಕ** :- ಹಾಗಾದರೆ ಅದರಿಂದ ರಾಣಿ ಗರ್ಭವತಿಯಾಗಿದ್ದಾಳೆ. ಮುನಿಯ ಅನುಗ್ರಹದಿಂದ ಇಂದ್ರ ಉಪೇಂದ್ರರಂಥ ದಿವ್ಯ ಶಕ್ತಿಶಾಲಿ ಧರ್ಮಾತ್ಮನಾದೊಬ್ಬ ಮಗ ವಿಷ್ಣುವಿನ ಅಂಶದಿಂದ ಯುಕ್ತನಾಗಿ ಹುಟ್ಟುತ್ತಾನೆ. ಸ್ವಪ್ನವೂ ಇದನ್ನೇ ಸೂಚಿಸುತ್ತದೆ.

ಹೀಗೆ ಹೇಳಿ ಶೌನಕ ಮಹರ್ಷಿ ಹೊರಟುಹೋದರು. ರಾಜದಂಪತಿಗಳು ಆನಂದವಶರಾದರು.

**ಕುಂಜಲ** :- ರಾಣಿ ಇಂದುಮತಿ ರಾಹುವಿನ ಮಗಳು. ಆಕೆ ನಂದನವನದಲ್ಲಿ ಅಡ್ಡಾಡುತ್ತಿದ್ದಾಗ ಚಾರಣರು ಮಾತನಾಡಿಕೊಂಡರು. 'ಈಕೆ ಆಯುವಿನ ಹೆಂಡತಿ. ಇವಳಲ್ಲಿ ವಿಷ್ಣುವಿನಂತೆ ಪರಾಕ್ರಮಿಯಾದ ಮಗನು ಹುಟ್ಟಿ, ಹುಂಡನನ್ನು ಕೊಲ್ಲಲಿರುವನು.' ರಾಣಿ ಇದನ್ನು ಕೇಳಿಸಿಕೊಂಡು ತನ್ನ ತಂದೆಗೆ ಈ ಭವಿಷ್ಯವಚನ ಅಪ್ರಿಯವಾದುದೆಂದು ತಿಳಿದು ಅವನ ಬಳಿ ಎಲ್ಲವನ್ನೂ ಹೇಳಿದಳು. ರಾಹು ಒಡನೆ ಹುಂಡನಿಗೆ ಅಶೋಕಸುಂದರಿ ಕೊಟ್ಟಿದ್ದ ಶಾಪವನ್ನು ನೆನೆದು ಇಂದುಮತಿಯ ಗರ್ಭವನ್ನು ನಾಶಪಡಿಸಲು ಯತ್ನಿಸಿದ. ಛಿದ್ರಾನ್ವೇಷಣಮಾಡುತ್ತ ಯೋಗ್ಯ ಸಮಯಕ್ಕಾಗಿ ಕಾದು ಕುಳಿತ. ಆದರೆ ಇಂದುಮತಿಗೆ ವಿಷ್ಣುತೇಜಸ್ಸಿನ ರಕ್ಷಣೆ ಇದ್ದುದರಿಂದ ರಾಹು ಸುಮ್ಮನಿರಬೇಕಾಯಿತು. ಆದರೂ ಗರ್ಭಿಣಿಯ ರಕ್ಷಣೆಯ ನೆವದಿಂದ ಸದಾ ಬಳಿಯಲ್ಲಿದ್ದು ನಾನಾ ಭಯಂಕರ ದೃಶ್ಯಗಳನ್ನು ಮಾಯೆಯಿಂದ ತೋರಿ ಭಯಪಡಿಸಲು ಯತ್ನಿಸಿದ. ರಾಣಿಗೆ, ಹೊರಗೆ ವಿಷ್ಣು ತೇಜಸ್ಸು, ಗರ್ಭದಲ್ಲಿ ಶಿಶುವಿನ ತೇಜಸ್ಸು ಇವುಗಳ ಬಲವಿದ್ದುದರಿಂದ ಈ ಮಾಯೆಯ ಆಟ ಸಫಲವಾಗಲಿಲ್ಲ. ಇದನ್ನು ತಿಳಿದು ಹುಂಡನೂ ನಿರಾಶೆಗೊಂಡ. ಆತ ನೋಡುತ್ತಿದ್ದಂತೆ ನೂರುವರ್ಷಗಳು ಕಳೆದುವು.

ಒಂದು ದಿನ ರಾತ್ರಿಯಲ್ಲಿ ರಾಣಿ ಸೂರ್ಯನಂತೆ ಹೊಳೆವ ಮಗನಿಗೆ ಜನ್ಮವಿತ್ತಳು. ಹೆರಿಗೆ ಮನೆಯಲ್ಲಿ ಒಬ್ಬಳು ದಾಸಿ ಮಹಾದುಷ್ಟೆ ಸದಾ ಅಶುಚಿಯಾಗಿಯೂ ಇದ್ದಳು. ಅವಳಲ್ಲಿ ಪಾಪಿ ಹುಂಡ ಆವೇಶಗೊಂಡು ಅವಳ ಮೂಲಕ ಎಲ್ಲರೂ ಗಾಢನಿದ್ರೆಯಲ್ಲಿದ್ದಾಗ ಶಿಶುವನ್ನೆತ್ತಿಕೊಂಡು ಹೊರಗೆ ನಡೆದ, ಕಾಂಚನಪುರದಲ್ಲಿ ತನ್ನ ಹೆಂಡತಿ ವಿಪುಲೆಯ ಕೈಯಲ್ಲಿಟ್ಟು, 'ಈ ಶಿಶು ನನ್ನ ಶತ್ರು ಇವನನ್ನು ಕೊಂದು ಅಡಿಗೆಯವನ ಕೈಗೆ ಕೊಡು. ಅವನು ಚೆನ್ನಾಗಿ ಪಾಕ ಮಾಡಿದ ಮೇಲೆ ನಾನು ತಿನ್ನುವೆ'. ಎಂದ.

ವಿಪುಲೆ ವಿಸ್ಮಯಗೊಂಡಳು. 'ಸರ್ವ ಲಕ್ಷಣ ಸಂಪನ್ನವಾದ ಸುಂದರವಾದ ಈ ಎಳೆಯ ಕಂದಮ್ಮನನ್ನು ತಿನ್ನುವೆನೆನ್ನುತ್ತಾನೆ. ಎಂಥ ಕಠೋರ ಹೃದಯ ಈತನದು !'

ಜಗದೊಡೆಯ ಮಧುಸೂಧನನೇ ನೀನೆಂದು ನಾನು ತಿಳಿದಿರುವೆ. ನನ್ನನ್ನು ಕಾಪಾಡು, ನಿನಗಿದೋ ನಮಸ್ಕಾರ.

ದತ್ತಾತ್ರೇಯ ಸುಮ್ಮನಿದ್ದ. ಇನ್ನೂ ಕೆಲವು ಕಾಲ ಕಳೆದಾಗ ಮದ್ಯದ ಅಮಲಿನಲ್ಲಿ ಮಹಾರಾಜನನ್ನು ಕರೆದು ಹೇಳಿದ.

**ದತ್ತಾತ್ರೇಯ :-** ಈ ತಲೆ ಬುರುಡೆ ತುಂಬ ಮದ್ಯ ಸುರಿ. ಮಾಂಸದ ಭಕ್ಷ್ಯವನ್ನೂ ತಾ.

ಒಡನೆ ಮಹಾರಾಜ ಸಂಭ್ರಮದಿಂದ ಸುರೆಯನ್ನು ಕಪಾಲಕ್ಕೆ ಸುರಿದು ತಂದ, ಪಕ್ವವಾದ ಮಾಂಸವನ್ನೂ ತಂದ.

ಮಹಾರಾಜನ ಭಕ್ತಿಯನ್ನೂ ಗುರುಸೇವೆಯಲ್ಲಿರುವ ನಿಷ್ಠೆಯನ್ನೂ ಕಂಡು ಮುನಿ ಪ್ರಸನ್ನನಾಗಿ ನುಡಿದ.

**ದತ್ತಾತ್ರೇಯ :-** ರಾಜನೆ, ನಿನ್ನ ಅಭೀಷ್ಟವೇನು ಹೇಳು. ಅದೆಷ್ಟು ದುರ್ಲಭವಾದರೂ ಸರಿಯೆ. ನಾನದನ್ನು ಪೂರೈಸುವೆನು.

**ಆಯು:-** ವಿಪ್ರೋತ್ತಮ, ನನಗೊಬ್ಬ ಒಳ್ಳೆಯ ಗುಣವಂತನಾದ ಪುತ್ರನನ್ನು ನೀಡು. ಅವನು ದೇವ, ದಾನವ, ವಾನರ, ರಾಕ್ಷಸರಾರಿಂದಲೂ ಸೋಲದ ವೀರನಾಗಿರಬೇಕು. ದಾನಶೂರನಾಗಿರಬೇಕು ಶರಣಾಗತ ವತ್ಸಲನಾಗಿರಬೇಕು. ಜ್ಞಾನ ಭಕ್ತಿರೂಪ ಸೌಂದರ್ಯಗಳಿಂದ ಕೂಡಿದ್ದು ವಂಶೋಧಾರಕನಾಗಿರಬೇಕು.

**ದತ್ತಾತ್ರೇಯ :-** ಹಾಗೇ ಆಗಲಿ, ರಾಜನೇ, ಸರ್ವಭೂತ ದಯಾಪರನಾದ ಪುಣ್ಯವಂತ ಮಗ ಹುಟ್ಟುತ್ತಾನೆ. ನೀನು ಹೇಳುವ ಎಲ್ಲ ಗುಣಗಳಿಂದ ಕೂಡಿರುತ್ತಾನೆ. ವೈಷ್ಣವ ತೇಜಸ್ಸಿನಿಂದ ಇಂದ್ರನಂತೆ ಸಾರ್ವಭೌಮನಾಗಿ ಮೆರೆಯುತ್ತಾನೆ. ಮುನಿಯು ಹೀಗೆ ವರವಿತ್ತು ಒಂದು ಹಣ್ಣನ್ನು ರಾಜನ ಕೈಯಲ್ಲಿಟ್ಟು ಇದನ್ನು ನಿನ್ನ ರಾಣಿಗೆ ಕೊಡೆಂದು ಹೇಳಿ ಆಶೀರ್ವದಿಸಿ ಅದೃಶ್ಯನಾದ.

**ಕುಂಜಲ :-** ಆಯು ಮಹಾರಾಜ ರಾಜಧಾನಿಗೆ ಹಿಂತಿರುಗಿ ರಾಣಿ ಇಂದುಮತಿಯ ಅಂತಃಪುರವನ್ನು ಪ್ರವೇಶಿಸಿದ. ಇಂದ್ರನ ಅರಮನೆಯಂತಿದ್ದ ಆ ಅಂತಃಪುರದಲ್ಲಿ ಎಲ್ಲ ಸುಖ ಭೋಗಗಳನ್ನು ಆಕೆಯೊಂದಿಗೆ ಸವಿಯುತ್ತ ಇಂದ್ರನಂತೆಯೆ ರಾಜ್ಯಭಾರವನ್ನು ಮಾಡಿದ.

ರಾಣಿ ಫಲವನ್ನು ಸೇವಿಸಿ ಗರ್ಭವತಿಯಾದಳು. ಒಮ್ಮೆ ಆ ರಾತ್ರಿಯಲ್ಲಿ ಕನಸು ಕಂಡಳು. ಆ ಕನಸಿನಲ್ಲಿ ಸೂರ್ಯನಂತೆ ದೇದೀಪ್ಯಮಾನನಾದ ಒಬ್ಬ ಬ್ರಾಹ್ಮಣ ಆಕೆಯ ಅಂತಃಪುರವನ್ನು ಪ್ರವೇಶಿಸಿದ. ಬಿಳಿ ಬಟ್ಟೆ ಉಟ್ಟು ಬಿಳಿ ಹೂಮಾಲೆ ತೊಟ್ಟು ಮುತ್ತಿನ ಸರ ಮುಂತಾದ ಆಭರಣಗಳನ್ನು ಧರಿಸಿ ದಿವ್ಯಗಂಧವನ್ನು ಮೈಗೆ ಲೇಪಿಸಿ ಕೊಂಡಿದ್ದನಾತ. ಅವನಿಗೆ ನಾಲ್ಕು ಕೈಗಳು. ಅವುಗಳಲ್ಲಿ ಶಂಖ ಚಕ್ರ ಗದೆ ಖಡ್ಗಗಳನ್ನು ಧರಿಸಿದ್ದ. ಚಂದ್ರಬಿಂಬದಂತೆಸೆವ ಛತ್ರದಿಂದ ಶೋಭಿಸುತ್ತಿದ್ದ. ಅವನ ಕರ್ಣಕುಂಡಲಗಳು ಚಂದ್ರಬಿಂಬದಂತೆ ಹೊಳೆಯುತ್ತಿದ್ದುವು. ಅವನು ಇಂದುಮತಿಯನ್ನು ಕರೆದು ಕುಳ್ಳಿರಿಸಿ ಚಿನ್ನರತ್ನಗಳಿಂದ ಖಚಿತವಾದ, ಚಂದ್ರನಂತೆ ಹೊಳೆವ ಶಂಖದಿಂದ ಹಾಲಿನ ಅಭಿಷೇಕ

ಮಾಡಿ, ಮಹಾಮಣಿಯಿಂದ ಕೂಡಿದ ಸಾವಿರ ತಲೆಯ ಸುಂದರವಾದ ಬಿಳಿಯಾನೆಯೊಂದನ್ನು ಬಾಯೊಳಗೆ ಹಾಕಿದ. ಕುತ್ತಿಗೆಗೆ ಮುತ್ತಿನ ಮಾಲೆ ತೊಡಿಸಿ ಕೈಗೊಂದು ಕಮಲವನ್ನಿತ್ತು ಹೊರಟುಹೋದ. ಈ ಕನಸಿನ ವೃತ್ತಾಂತವನ್ನು ರಾಣಿ ರಾಜನಿಗೆ ತಿಳಿಸಿದಳು. ಅವನು ಗುರು ಶೌನಕರನ್ನು ಕರೆಸಿ ಸ್ವಪ್ನ ಫಲವನ್ನು ಕೇಳ ಬಯಸಿದ. ಶೌನಕರು ಪ್ರಶ್ನಿಸಿದರು.

**ಶೌನಕ :-** ರಾಜನ್, ಅಂದು ದತ್ತಾತ್ರೇಯ ಮಹರ್ಷಿ ನಿನಗೆ ವರವಿತ್ತು ಒಂದು ಹಣ್ಣನ್ನು ಕೊಟ್ಟಿದ್ದ. ಅದನ್ನೇನು ಮಾಡಿದೆ ? ಯಾರಿಗೆ ಕೊಟ್ಟೆ ?

**ಆಯು :-** ರಾಣಿಗೆ.

**ಶೌನಕ :-** ಹಾಗಾದರೆ ಅದರಿಂದ ರಾಣಿ ಗರ್ಭವತಿಯಾಗಿದ್ದಾಳೆ. ಮುನಿಯ ಅನುಗ್ರಹದಿಂದ ಇಂದ್ರ ಉಪೇಂದ್ರರಂಥ ದಿವ್ಯ ಶಕ್ತಿಶಾಲಿ ಧರ್ಮಾತ್ಮನಾದೊಬ್ಬ ಮಗ ವಿಷ್ಣುವಿನ ಅಂಶದಿಂದ ಯುಕ್ತನಾಗಿ ಹುಟ್ಟುತ್ತಾನೆ. ಸ್ವಪ್ನವೂ ಇದನ್ನೇ ಸೂಚಿಸುತ್ತದೆ.

ಹೀಗೆ ಹೇಳಿ ಶೌನಕ ಮಹರ್ಷಿ ಹೊರಟುಹೋದರು. ರಾಜದಂಪತಿಗಳು ಆನಂದವಶರಾದರು.

**ಕುಂಜಲ :-** ರಾಣಿ ಇಂದುಮತಿ ರಾಹುವಿನ ಮಗಳು. ಆಕೆ ನಂದನವನದಲ್ಲಿ ಅಡ್ಡಾಡುತ್ತಿದ್ದಾಗ ಚಾರಣರು ಮಾತನಾಡಿಕೊಂಡರು. 'ಈಕೆ ಆಯುವಿನ ಹೆಂಡತಿ. ಇವಳಲ್ಲಿ ವಿಷ್ಣುವಿನಂತೆ ಪರಾಕ್ರಮಿಯಾದ ಮಗನು ಹುಟ್ಟಿ, ಹುಂಡನನ್ನು ಕೊಲ್ಲಲಿರುವನು.' ರಾಣಿ ಇದನ್ನು ಕೇಳಿಸಿಕೊಂಡು ತನ್ನ ತಂದೆಗೆ ಈ ಭವಿಷ್ಯವಚನ ಅಪ್ರಿಯವಾದುದೆಂದು ತಿಳಿದು ಅವನ ಬಳಿ ಎಲ್ಲವನ್ನೂ ಹೇಳಿದಳು. ರಾಹು ಒಡನೆ ಹುಂಡನಿಗೆ ಅಶೋಕಸುಂದರಿ ಕೊಟ್ಟಿದ್ದ ಶಾಪವನ್ನು ನೆನೆದು ಇಂದುಮತಿಯ ಗರ್ಭವನ್ನು ನಾಶಪಡಿಸಲು ಯತ್ನಿಸಿದ. ಛಿದ್ರಾನ್ವೇಷಣಮಾಡುತ್ತ ಯೋಗ್ಯ ಸಮಯಕ್ಕಾಗಿ ಕಾದು ಕುಳಿತ. ಆದರೆ ಇಂದುಮತಿಗೆ ವಿಷ್ಣುತೇಜಸ್ಸಿನ ರಕ್ಷಣೆ ಇದ್ದುದರಿಂದ ರಾಹು ಸುಮ್ಮನಿರಬೇಕಾಯಿತು. ಆದರೂ ಗರ್ಭಿಣಿಯ ರಕ್ಷಣೆಯ ನೆವದಿಂದ ಸದಾ ಬಳಿಯಲ್ಲಿದ್ದು ನಾನಾ ಭಯಂಕರ ದೃಶ್ಯಗಳನ್ನು ಮಾಯೆಯಿಂದ ತೋರಿ ಭಯಪಡಿಸಲು ಯತ್ನಿಸಿದ. ರಾಣಿಗೆ, ಹೊರಗೆ ವಿಷ್ಣು ತೇಜಸ್ಸು, ಗರ್ಭದಲ್ಲಿ ಶಿಶುವಿನ ತೇಜಸ್ಸು ಇವುಗಳ ಬಲವಿದ್ದುದರಿಂದ ಈ ಮಾಯೆಯ ಆಟ ಸಫಲವಾಗಲಿಲ್ಲ. ಇದನ್ನು ತಿಳಿದು ಹುಂಡನೂ ನಿರಾಶೆಗೊಂಡ. ಆತ ನೋಡುತ್ತಿದ್ದಂತೆ ನೂರುವರ್ಷಗಳು ಕಳೆದುವು.

ಒಂದು ದಿನ ರಾತ್ರಿಯಲ್ಲಿ ರಾಣಿ ಸೂರ್ಯನಂತೆ ಹೊಳೆವ ಮಗನಿಗೆ ಜನ್ಮವಿತ್ತಳು. ಹೆರಿಗೆ ಮನೆಯಲ್ಲಿ ಒಬ್ಬಳು ದಾಸಿ ಮಹಾದುಷ್ಟೆ ಸದಾ ಅಶುಚಿಯಾಗಿಯೂ ಇದ್ದಳು. ಅವಳಲ್ಲಿ ಪಾಪಿ ಹುಂಡ ಆವೇಶಗೊಂಡು ಅವಳ ಮೂಲಕ ಎಲ್ಲರೂ ಗಾಢನಿದ್ರೆಯಲ್ಲಿದ್ದಾಗ ಶಿಶುವನ್ನೆತ್ತಿಕೊಂಡು ಹೊರಗೆ ನಡೆದ, ಕಾಂಚನಪುರದಲ್ಲಿ ತನ್ನ ಹೆಂಡತಿ ವಿಪುಲೆಯ ಕೈಯಲ್ಲಿಟ್ಟು, 'ಈ ಶಿಶು ನನ್ನ ಶತ್ರು ಇವನನ್ನು ಕೊಂದು ಅಡಿಗೆಯವನ ಕೈಗೆ ಕೊಡು. ಅವನು ಚೆನ್ನಾಗಿ ಪಾಕ ಮಾಡಿದ ಮೇಲೆ ನಾನು ತಿನ್ನುವೆ'. ಎಂದ.

ವಿಪುಲೆ ವಿಸ್ಮಯಗೊಂಡಳು. 'ಸರ್ವ ಲಕ್ಷಣ ಸಂಪನ್ನವಾದ ಸುಂದರವಾದ ಈ ಎಳೆಯ ಕಂದಮ್ಮನನ್ನು ತಿನ್ನುವೆನೆನ್ನುತ್ತಾನೆ. ಎಂಥ ಕಠೋರ ಹೃದಯ ಈತನದು !'

ಎಂದುಕೊಂಡು 'ಏಕೆ ತಿನ್ನುವೆ ? ಇಂಥ ಎಳೆಯ ಶಿಶುವಿನಲ್ಲಿ ಕ್ರೋಧ ತಳೆಯಲು ಲಜ್ಜೆಯಾಗುವುದಿಲ್ಲವೆ ?' ಎಂದಳು. ಹುಂಡ ತಾನು ಅಶೋಕ ಸುಂದರಿಯ ಬಳಿ ಮಾಡಿದ ಅಪರಾಧವನ್ನೂ ಅವಳಿತ್ತ ಶಾಪವನ್ನೂ ತಿಳಿಸಿದ. ವಿಪುಲೆ ಅಂದುಕೊಂಡಳು 'ಮಗುವನ್ನು ಕೊಲ್ಲುವುದೆ ಸರಿ. ಇಲ್ಲದಿದ್ದರೆ ಪತಿ ಸಾಯುತ್ತಾನೆ.

ಅರಮನೆಯಲ್ಲಿ ಗಂಧ ತೇಯಲು ಮೇಖಲೆ ಎಂಬ ಓರ್ವ ಸೈರಂಧ್ರಿ ಇದ್ದಳು. ಅವಳ ಕೈಯಲ್ಲಿ ವಿಪುಲೆ ಶಿಶುವನ್ನು ಕೊಟ್ಟು ಹೇಳಿದಳು. 'ಈ ಮಗುವನ್ನು ಕೊಂದು ಅಡಿಗೆಯವನ ಕೈಗೊಪ್ಪಿಸು. ಹುಂಡನಿಗೆ ಇಂದಿನ ಊಟ ಇದುವೆ ಆಗಲಿ'. ಮೇಖಲೆ ಶಿಶವನ್ನೆತ್ತಿ ಕೊಂಡು ಅಡಿಗೆ ಮನೆಗೆ ಹೋಗಿ ಅವನ ಕೈಯಲ್ಲಿಟ್ಟು ಹೇಳಿದಳು. 'ಈ ಮಗುವನ್ನು ಕೊಂದು ಅಡುಗೆ ಮಾಡಬೇಕೆಂದು ರಾಜಾಜ್ಞೆಯಾಗಿದೆ ?' ಅಡುಗೆಯವನು ಮಗುವನ್ನು ಕೊಲ್ಲಲ್ಲು ಶಸ್ತ್ರ ಎತ್ತಿದ. ಆದರೆ ದೇವದೇವನಾದ ಆ ದತ್ತಾತ್ರೇಯನ ಅನುಗ್ರಹದಿಂದ ಮಗು ಕಿಲಕಿಲನೆ ನಗತೊಡಗಿತು. ನಗುತ್ತಿರುವ ಮಗುವನ್ನು ಹೇಗೆ ಕೊಲ್ಲಲ್ಲಿ ಎಂದುಕೊಂಡ ಅಡಿಗೆಯವ. ಮೇಖಲೆಗೂ ಹಾಗೇ ಅನಿಸಿತು. ಆಕೆ ಹೇಳಿದಳು.

**ಮೇಖಲೆ :-** ಮಗುವನ್ನು ಕೊಲ್ಲಬೇಡ, ದಿವ್ಯ ಲಕ್ಷಣ ಸಂಪನ್ನವಾಗಿದೆ. ಯಾರ ಸದ್ವಂಶದಲ್ಲಿ ಹುಟ್ಟಿದೆಯೋ, ಏನೊ !

**ಸೂದ:-** ನೀನು ಹೇಳುವುದು ನಿಜ. ಮಗುವಿನಲ್ಲಿ ರಾಜ ಲಕ್ಷಣಗಳು ತೋರುತ್ತಿವೆ. ಯಾರ ಮಗುವೋ ! ಸುಂದರವಾಗಿದೆ. ಈ ದುಷ್ಟ ಹುಂಡನಿದನ್ನೇಕೆ ತಿನ್ನಬೇಕು ? ಅದೃಷ್ಟ ಬಲದಿಂದ ಒಂದು ವಂಶ ಉಳಿಯುವುದಾದರೆ ಆ ವಂಶದ ಕುಡಿ ಎಂಥ ಆಪತ್ತಿನಲ್ಲಿಯೂ ಬದುಕಿ ಉಳಿದೀತು. ಅದೃಷ್ಟ ಒಂದಿದ್ದರೆ ಸಮುದ್ರದಲ್ಲಿ ಬೀಳಲಿ ಇಲ್ಲವೆ ಬೆಂಕಿಯ ನಡುವಿರಲಿ ಒಬ್ಬನು ನಿಶ್ಚಯವಾಗಿಯೂ ಬದುಕುತ್ತಾನೆ. ಅದಕ್ಕಾಗಿ ಸತ್ಕರ್ಮ ಮಾಡುತ್ತಿರಬೇಕು. ಅದು ಸರ್ವದಾ ರಕ್ಷಣೆ ನೀಡುತ್ತದೆ. ಅದಿಲ್ಲದಿದ್ದರೆ ಹುಟ್ಟಿದ ಮಗುವನ್ನು ಸ್ವತಃ ತಂದೆ ತಾಯಿಗಳೇ ರಕ್ಷಿಸಲಾರರು.

ಶಿಶುವನ್ನು ಕಾಡುತ್ತಿದ್ದ ಅದರ ಪೂರ್ವ ಜನ್ಮದ ಕರ್ಮವೆ ಸೂದ ಸೈರಂಧ್ರಿಯರಿಬ್ಬರಿಗೂ ಅನುಕಂಪೆ ಮೂಡಿಸಿತು. ಅವರಿಬ್ಬರೂ ಸೇರಿ ಶಿಶುವನ್ನು ಸುರಕ್ಷಿತವಾಗಿ ರಾತ್ರಿಯಲ್ಲಿ ಅಡಿಗೆ ಮನೆಯಿಂದ ಹೊರತಂದು ಹತ್ತಿರದಲ್ಲಿಯೇ ಇದ್ದ ವಶಿಷ್ಠರ ಆಶ್ರಮದಲ್ಲಿಟ್ಟು ಹೊರಟು ಹೋದರು. ಮರುದಿನ ಜಿಂಕೆಯ ಮಾಂಸವನ್ನು ಹುಂಡನಿಗೆ ಬಡಿಸಿದ ಸೂದ. ಹುಂಡನು ಅದನ್ನು ತಿಂದು ತೇಗಿ ಅಶೋಕ ಸುಂದರಿಯ ಶಾಪ ಹುಸಿಯಾಯಿತೆಂದುಕೊಂಡು ಆನಂದ ತುಂದಿಲನಾದ.

ಇತ್ತ ವಶಿಷ್ಠರು ಬೆಳಿಗ್ಗೆ ಪರ್ಣಕುಟೀರದಿಂದ ಹೊರಗೆ ಕಾಲಿಡುತ್ತಿದ್ದಂತೆ ಬಾಗಿಲಲ್ಲಿಯೆ ದಿವ್ಯ ಲಕ್ಷಣಗಳಿಂದೊಪ್ಪುವ ಪೂರ್ಣ ಚಂದ್ರನಂಥ ಸುಂದರ ಶಿಶುವನ್ನು ಕಂಡರು. ಎಲ್ಲ ಮುನಿಗಳನ್ನು ಕರೆದು ಶಿಶುವನ್ನು ತೋರುತ್ತ ನುಡಿದರು. ಮುನಿಗಳೇ, ನೋಡಿ ಈ ಮಗುವನ್ನು, ಯಾರದೋ ತಿಳಿಯದು. ಯಾರೋ ರಾತ್ರಿಯಲ್ಲಿ ಇಲ್ಲಿ ತಂದಿಟ್ಟು ಹೋಗಿದ್ದಾರೆ. ದೇವತಾ ಶಿಶುವಿನಂತಿದೆ. ಇಲ್ಲವೆ ಗಂಧರ್ವ ಶಿಶುವನಂತಿದೆ. ರಾಜಲಕ್ಷಣಗಳಿಂದ ಕೂಡಿದೆ. ಕೋಟಿ ಮನ್ಮಥರ ಚೆಲುವನ್ನು ಪಡೆದಿದೆ. ಎಲ್ಲ

ಮುನಿಗಳೂ ಆಶ್ಚರ್ಯದಿಂದ ನೋಡತೊಡಗಿದರು. ವಶಿಷ್ಠರು ಜ್ಞಾನಚಕ್ಷುಸ್ಸಿನಿಂದ ಶಿಶುವಿನ ಜನ್ಮವೃತ್ತಾಂತವನ್ನು ಹುಂಡನ ದುಷ್ಟತನವನ್ನೂ ತಿಳಿದು ಅನುಕಂಪೆಯಿಂದ ಮಗುವನ್ನೆತ್ತಿಕೊಂಡರು. ದೇವತೆಗಳು ಆಗ ಪುಷ್ಪವೃಷ್ಟಿ ಕರೆದರು. ಗಂಧರ್ವ ಕಿನ್ನರರು ಹಾಡಿದರು. ಋಷಿಗಳು ವೇದಮಂತ್ರಗಳನ್ನು ಪಠಿಸಿದರು. ವಶಿಷ್ಠರು ಮಗುವನ್ನು ಆಶೀರ್ವದಿಸಿದರು. 'ನೀನು ನಿನ್ನ ಮುಗ್ಧ ನಿಷ್ಕಪಟನಗುವಿನ ಬಲದಿಂದ ಶತ್ರುಗಳಿಂದ ಪಾರಾಗಿ ಬಂದೆ. ಅದರಿಂದ ನೀನು **ನಹುಷ**ನೆಂಬ ಹೆಸರಿನಿಂದ ಪ್ರಸಿದ್ಧನಾಗು. ಬಳಿಕ ಜಾತಕರ್ಮ ಮುಂತಾದುವನ್ನು ನೆರವೇರಿಸಿದರು. ನಹುಷನು ಬೆಳೆದು ದೊಡ್ಡವನಾದ ವೇದವೇದಾಂಗಗಳನ್ನೂ ಶಸ್ತ್ರವಿದ್ಯೆಯನ್ನೂ ಧನುರ್ವೇದವನ್ನೂ ವಶಿಷ್ಠರಿಂದ ಕಲಿತು ಒಳ್ಳೆಯ ಬಿಲ್ಲುಗಾರ ನೆನಿಸಿದ.

**ಕುಂಜಲ:-** ಇತ್ತ ಆಯುವಿನ ಮಡದಿ ಇಂದುಮತಿ ಮಗುವನ್ನು ಕಾಣದೆ ಹಾಹಾಕಾರ ಮಾಡಿದಳು. 'ಯಾರು ನನ್ನ ಮಗುವನ್ನೆತ್ತಿಕೊಂಡು ಹೋದವರು ?. ತಪಸ್ಸು ದಾನ ಯಜ್ಞ ದುಷ್ಕರ ವ್ರತನಿಯಮಗಳಿಂದ ಪಡೆದ ನನ್ನ ಮಗುವನ್ನು ಯಾರು ಅಪಹರಿಸಿದರು ? ದತ್ತಾತ್ರೇಯ ಮುನಿಗಳು ಅನುಗ್ರಹಿಸಿದ ನನ್ನ ಕಂದನೆಲ್ಲಿ ?. ಮಗು, ಎಲ್ಲಿರುವೆ ?. ಯಾರು ನಿನ್ನನ್ನೆತ್ತಿಕೊಂಡು ಹೋದರು ? ಹೇಳು. ಚಂದ್ರವಂಶಕ್ಕೆ ಭೂಷಣನಾದ, ನನ್ನ ಪ್ರಾಣಕ್ಕೆ ಸಮನಾದ, ತಾವರೆಯಂತಹ ಕಣ್ಣಿನ ನಿನ್ನನ್ನು ಯಾರು ಒಯ್ದರು ? ಹಾ ಮಗುವೆ ! ನಾನೆಲ್ಲಿಗೆ ಹೋಗಲಿ ! ಏನು ಮಾಡಲಿ ! ನಾನು ಹಿಂದಿನ ಜನ್ಮದಲ್ಲಿ ಯಾರ ಸಂಪತ್ತನ್ನು ಅಪಹರಿಸಿದೆನೊ ! ಯಾರ ರತ್ನವನ್ನು ಅಪಹರಿಸಿದೆನೊ ! ಅದರಿಂದ ದೈವ ನನ್ನ ಪುತ್ರ ರತ್ನವನ್ನು ಅಪಹರಿಸಿತು. ನಾನು ಎಳೆಗೂಸುಗಳಿಗೆ ದ್ರೋಹ ಮಾಡಿರಬೇಕು. ಅದರಿಂದ ನನ್ನ ಹಸುಗೂಸು ನನಗಿಲ್ಲವಾಯಿತು. ಹೀಗೆ ನಾನಾ ರೀತಿಯಿಂದ ವಿಹ್ವಲಳಾಗಿ ಗೋಳಿಟ್ಟಳು. ನಿಟ್ಟುಸಿರು ಬಿಟ್ಟಳು. ಕರುವನ್ನು ಕಾಣದ ಹಸುವಿನಂತಾದಳು. ಆಯು ಮಹಾರಾಜನೂ ಶಿಶುವಿನ ಅಪಹರಣವಾರ್ತೆಯನ್ನು ಕೇಳಿ ಅತ್ತು ಬಿಟ್ಟ. ಅವನ ಧೈರ್ಯ ಕರಗಿತು, ಹೀಗೆ ಶಿಶುವಿನ ಅಪಹರಣವಾಗುವುದಾದರೆ ತಪಸ್ಸಿಗೆ ಫಲ ಇನ್ನೆಲ್ಲಿ ? ದತ್ತಾತ್ರೇಯ ಮುನಿ ಅಂದು ಸಂತೋಷದಿಂದ ನನಗೆ ವರವಿತ್ತ. ಅಜೇಯನಾದ ಸರ್ವಗುಣ ಪೂರ್ಣನಾದ ಮಗನನ್ನು ಅನುಗ್ರಹಿಸಿದ್ದ. ಅದಕ್ಕೆ ಈ ರೀತಿಯಲ್ಲಿಯೂ ಒಂದು ವಿಘ್ನ ಬಂದಿತೆ ?' ಎಂದು ಚಿಂತಿಸಿದ.

**ಕುಂಜಲ :-** ಮಹಾರಾಜ ಆಯುವು ಚಿಂತೆಯಿಂದ ಕೊರಗುತ್ತ ಕುಳಿತ. ಆಗ ನಾರದರು ಸ್ವರ್ಗದಿಂದಾಗಮಿಸಿ 'ಮಹಾರಾಜ, ನಿನ್ನ ಮಗುವಿನ ಅಪಹರಣವಾಯಿತೆಂದು ದುಃಖಿಸಬೇಡ. ಅದರಿಂದ ಕ್ಷೇಮವಾಯಿತೆಂದೆ ತಿಳಿ. ನಿನ್ನ ಮಗ ಸರ್ವಜ್ಞನಾಗಿ ಒಳ್ಳೆಯ ಗುಣವಂತನಾಗಿ ನಿನ್ನ ಬಳಿಗೇ ಬರಲಿದ್ದಾನೆ. ಅವನನ್ನು ಅಪಹರಿಸಿದಾತ ತನ್ನ ಮನೆಗೆ ಮೃತ್ಯುವನ್ನೇ ಬರಮಾಡಿಕೊಂಡಿದ್ದಾನೆ. ಏಕೆಂದರೆ ನಿನ್ನ ಮಗ ಮಹಾಬಲಶಾಲಿಯಾಗಿ ಬೆಳೆದು ಅವನನ್ನು ಕೊಲ್ಲುತ್ತಾನೆ. ಶಿವನ ಕನ್ಯೆಯನ್ನು ಮದುವೆಯಾಗಿ ನಿನ್ನ ಬಳಿಗೆ ಬರುತ್ತಾನೆ. ತನ್ನ ಪರಾಕ್ರಮದಿಂದ ಇಂದ್ರ, ಉಪೇಂದ್ರರಂತೆ ಮೆರೆದು ಇಂದ್ರ ಪದವಿಯನ್ನು ಭೋಗಿಸುವ ಅದೃಷ್ಟವಂತನೂ ಆಗುತ್ತಾನೆ. ಎಂದು ಹೇಳಿ ನಿಲ್ಲದೆ ಹೊರಟು ಹೋದರು.

ರಾಜನೀ ಮಾತನ್ನು ರಾಣಿಗೆ ಹೇಳಿ ಅವಳನ್ನು ಸಂತೈಸಿದ, 'ದೇವಿ, ದತ್ತಾತ್ರೇಯ ಮುನಿಯು ನಮಗೆ ಕರುಣಿಸಿದ ಕಂದನಿನ್ನೂ ವಿಷ್ಣುವಿನ ಅನುಗ್ರಹದಿಂದ ಸುರಕ್ಷಿತನಾಗಿಯೆ ಇದ್ದಾನೆ. ಅವನನ್ನು ಅಪಹರಿಸಿದ ದುಷ್ಟನ ತಲೆಯನ್ನು ಕಡಿದು ತರುತ್ತಾನೆ. ಹೀಗೆ ನಾರದರೆ ಹೇಳಿದರು. ವೃಥಾ ಕೊರಗಬೇಡ.'

ರಾಣಿ ಆನಂದದಿಂದ ಪರವಶಳಾದಳು. ''ದೇವರ್ಷಿಗಳೆ ಹೀಗೆ ಹೇಳಿದರೆಂದರೆ ಅದು ನಿಜವಾಗಲೇಬೇಕು. ದತ್ತಾತ್ರೇಯನು ಕರುಣಿಸಿದ ಪುತ್ರ ನನ್ನ ಕಂದನೆಂದೂ ಸಾಯುವುದಿಲ್ಲ. ಆ ಮಹಾತ್ಮನಾದ ಅತ್ರಿಪುತ್ರನಿಗೆ ಇದೋ ನಮಸ್ಕಾರ.'' ಎಂದು ಮನಸ್ಸಿನಲ್ಲಿಯೇ ಮುನಿಯನ್ನು ವಂದಿಸಿದಳು. ಹೋದ ಮಗನು ಹಿಂತಿರುಗಿ ಬರುತ್ತಾನೆ ಎಂದು ಹಿಗ್ಗಿದಳು.

**ಕುಂಜಲ:-** ಒಂದು ದಿನ ವಶಿಷ್ಠ ಮುನಿಗಳ ಆದೇಶದಂತೆ ನಹುಷನು ದರ್ಭೆ ಸಮಿತ್ತು ಹಣ್ಣು-ಹಂಪಲು, ಗಡ್ಡೆ-ಗೆಣಸುಗಳನ್ನು ತರಲು ಅರಣ್ಯದಲ್ಲಿ ಸಂಚರಿಸುತ್ತಿದ್ದಾಗ ಆಕಾಶದಲ್ಲಿ ಚಾರಣರು ಮಾತನಾಡಿಕೊಳ್ಳುತ್ತಿದ್ದರು. ''ಇವನೆ ಧರ್ಮಾತ್ಮನಾದ ಆ ನಹುಷ, ಆಯುಮಹಾರಾಜನ ಪುತ್ರ. ಹಸುಗೂಸಾಗಿದ್ದಾಗಲೆ ಇವನನ್ನು ದಾನವರು ಅಪಹರಿಸಿದ್ದರು. ರಾಣಿ ಇಂದುಮತಿ ಪುತ್ರಶೋಕದಿಂದ ಇನ್ನೂ ಕೊರಗುತ್ತಿದ್ದಾಳೆ. ಅವಳು ಎಂದು ಈ ಪುತ್ರನನ್ನು ಕಾಣುವಳೊ ! ಅತ್ತ ಆ ಶಿವಕನ್ಯೆ ಅಶೋಕಸುಂದರಿಯೂ ಈ ನಹುಷನಿಗಾಗಿ ಘೋರ ತಪಸಸು ಮಾಡುತ್ತಿದ್ದಾಳೆ. ಅವಳು ಎಂದು ಈತನನ್ನು ಸೇರುವಳೊ !''

ಈ ಮಾತುಗಳನ್ನು ಕೇಳಿ ನಹುಷ ಆಶ್ಚರ್ಯಚಕಿತನಾದ. ದರ್ಭೆ ಸಮಿತ್ತು ಮುಂತಾದುವನ್ನು ಸಂಗ್ರಹಿಸಿ ಬೇಗನೆ ಆಶ್ರಮಕ್ಕೆ ಹಿಂತಿರುಗಿದ. ಮುನಿಗಳಿಗೆ ಕೈ ಮುಗಿದು ತಲೆಬಾಗಿ ನಮಿಸಿದ. ಕಾಡಿನಲ್ಲಿ ತಾನು ಕೇಳಿದ ಮಾತುಗಳನ್ನು ನಿವೇದಿಸಿದ.

**ನಹುಷ :-** ಪೂಜ್ಯರೆ, ಆಕಾಶದಲ್ಲಿ ಚಾರಣರು ಹೀಗೆ ಮಾತನಾಡಿಕೊಳ್ಳುತ್ತಿದ್ದಾರೆ. 'ಈ ನಹುಷ ಆಯುವಿನಮಗ. ದಾನವರು ಈತನನ್ನಪಹರಿಸಿ ರಾಣಿ ಇಂದುಮತಿಗೆ ಪುತ್ರಶೋಕ ಉಂಟುಮಾಡಿದ್ದಾರೆ. ಶಿವಕನ್ಯೆ ಅಶೋಕಸುಂದರಿಯೂ ಅತ್ತ ಈ ನಹುಷನಿಗಾಗಿಯೆ ಘೋರ ತಪಸ್ಸು ಮಾಡುತ್ತಿದ್ದಾಳೆ,' ಎಂದು. ಗುರುಗಳೆ, ಈ ಚಾರಣರು ಯಾವ ನಹುಷನ ಬಗ್ಗೆ ಮಾತನಾಡಿಕೊಳ್ಳುತ್ತಿದ್ದಾರೆ ? ಆಯು, ಇಂದುಮತಿ ಅಶೋಕಸುಂದರಿ ಇವರೆಲ್ಲಯಾರು ?

**ವಶಿಷ್ಠ :-** ಈ ಸಪ್ತದ್ವೀಪಗಳಿಗೆಲ್ಲ ಚಕ್ರವತಿ ಆಯುಮಹಾರಾಜ ಮಹಾ ಬಲಶಾಲಿ, ಧರ್ಮಾತ್ಮ. ಅವನ ರಾಣಿ ಇಂದುಮತಿ. ನೀನೆ ಅವರ ಮಗ ನಹುಷ. ಚಂದ್ರವಂಶಕ್ಕೆ ಭೂಷಣಪ್ರಾಯನೆನಿಸಲಿರುವೆ. ಅಶೋಕಸುಂದರಿ ಶಿವನ ಕನ್ಯೆ. ಒಳ್ಳೆಯ ರೂಪವತಿ, ಗುಣವತಿ. ನೀನಾಕೆಯ ಪತಿಯೆಂದು ವಿಧಿಯ ಸಂಕಲ್ಪವಿದೆ. ನಿನಗಾಗಿ ಆಕೆ ತಪಸ್ಸು ಮಾಡುತ್ತಿದ್ದಾಗ ಹುಂಡನೆಂಬ ದಾನವನು ಅವಳ ರೂಪಕ್ಕೆ ಮರುಳಾಗಿ ನೀನ್ನವಳಾಗೆಂದು ಬೇಡಿದ. ಆಕೆ ಅಂದಳು, 'ಹುಂಡ, ನಾನು ಪರಸ್ತ್ರೀ, ನಿನಗೆಂದೂ ಸಿಗುವವಳಲ್ಲ. ವ್ಯರ್ಥ ಸಾಹಸ ಮಾಡಬೇಡು. ಆಯುವಿನ ಪುತ್ರ ನಹುಷನೆಂಬ ಧರ್ಮಾತ್ಮ ನನ್ನ

ಪತಿಯಾಗಲಿದ್ದಾನೆ. ನೀನೇನಾದರೂ ನನಗೆ ಕಿರುಕುಳ ಕೊಟ್ಟೆಯಾದರೆ ನನ್ನ ಶಾಪದಿಂದ ಹಿಡಿಬೂದಿಯಾಗುವೆ.'

ಅಶೋಕಸುಂದರಿ ಇಷ್ಟು ಎಚ್ಚರ ನೀಡಿದ್ದರೂ ಹುಂಡ ಕಾಮಬಾಣಗಳಿಗೆ ವಶನಾಗಿದ್ದುದರಿಂದ ಆಕೆಯನ್ನು ವಂಚಿಸಿ ತನ್ನ ಮನೆಗೆ ಒಯ್ದ, ಅವಳು ಒಡನೆ ಇದನ್ನು ತಿಳಿದು ನಹುಷನಿಂದ ನಿನಗೆ ಮರಣ ಉಂಟಾಗಲೆಂದು ಶಾಪವಿತ್ತಳು. ಆಗ ನೀನಿನ್ನೂ ಹುಟ್ಟಿರಲಿಲ್ಲ. ಹುಟ್ಟಿದೊಡನೆ ಹುಂಡ ನಿನ್ನನ್ನು ಅಪಹರಿಸಿದ. ಆದರೆ, ಅವನ ಅಡಿಗೆಯವನೂ ಓರ್ವ ದಾಸಿಯೂ ನಿನ್ನನ್ನು ಸುರಕ್ಷಿತವಾಗಿ ನನ್ನಾಶ್ರಮದಲ್ಲಿ ಬಿಟ್ಟು ಹೋದರು. ಆ ಪಾಪಿ ಹುಂಡನನ್ನು ನೀನು ಕೊಲ್ಲು. ಅಶೋಕಸುಂದರಿಯ ಕಣ್ಣೀರೊರೆಸು. ಅವಳ ಪತಿಯಾಗು. ನಹುಷನು ವಶಿಷ್ಠರ ಈ ಮಾತುಗಳನ್ನು ಕೇಳಿ ಆಶ್ಚರ್ಯಗೊಂಡ, ಹುಂಡನನ್ನು ವಧಿಸಲು ನಿರ್ಧರಿಸಿ ವಶಿಷ್ಠರ ಅನುಜ್ಞೆ ಪಡೆದು ಹೊರಟ.

**ಕುಂಜಲ :-** ಇತ್ತ ಜಿಂಕೆಯ ಮಾಂಸವನ್ನು ರುಚಿಕರವಾದ ಅಡುಗೆಮಾಡಿ ಸೂದ ಬಡಿಸಿದಾಗ ನಹುಷನ ಮಾಂಸವಿದೆಂದು ಇಮ್ಮಡಿ ಆನಂದದಿಂದ ಹುಂಡ ಅದನ್ನುಂಡು ಸವಿದ. ನೇರವಾಗಿ ಅಶೋಕ ಸುಂರಿಯ ಬಳಿಗೆ ಹೋಗಿ ನಿಂತು ''ನಿನ್ನ ಪತಿ ನಹುಷನನ್ನು ನಾನು ತಿಂದಿದ್ದೇನೆ. ಇನ್ನು ನೀನು ನನ್ನವಳಾಗಬಹುದು'' ಎಂದ.''

**ಅಶೋಕಸುಂದರಿ :-** ನನಗೆ ಆ ನಹುಷ ದೇವದತ್ತನಾದ ಪತಿ. ಅವನನ್ನಾರೂ ಕೊಲ್ಲಲು ಸಾಧ್ಯವಿಲ್ಲ. ಸ್ವತಃ ದೇವತೆಗಳೆ ಅವನನ್ನು ಕೊಲ್ಲಲಾರರು.

**ಹುಂಡ :-** ಸುಂದರಿ, ಅವನು ಹುಟ್ಟಿದೊಡನೆ ಅಪಹರಿಸಿ ತಂದೆ. ಅವನ ಮಾಂಸವನ್ನೀಗ ತಾನೆ ತಿಂದು ಬಂದೆ.

**ಅಶೋಕಸುಂದರಿ :-** ಇದನ್ನು ನಾ ನಂಬಲಾರೆ. ನಾನು ಮನಃಪೂರ್ವಕವಾಗಿ ನಹುಷನನ್ನು ಪಡೆಯಲೆಂದು ತಪಸ್ಸು ಮಾಡಿದ್ದೇನೆ. ನನ್ನ ತಪಸ್ಸಿನ ಬಲದಿಂದ ಸತ್ಯದ ಬಲದಿಂದ ಆತ ಚಿರಾಯುವಾಗಲೇಬೇಕು. ನಿನಗೆ ಬದುಕವಾಸೆ ಇದ್ದರೆ ಇಲ್ಲಿಂದ ಹೊರಟುಹೋಗು. ಇಲ್ಲದಿದ್ದರೆ ನಿನಗಿನ್ನು ಶಾಪ ಕೊಡುವೆ.

ಹುಂಡ ಭೀತನಾಗಿ ಅಲ್ಲಿಂದ ಕಾಲ್ತೆಗೆದ.

ಅಶೋಕಸುಂದರಿಗೆ ತನ್ನ ತಪೋಬಲದಿಂದ ನಹುಷನನ್ನು ರಕ್ಷಿಸಬಲ್ಲೆನೆಂಬ ಆತ್ಮವಿಶ್ವಾಸ ಎಷ್ಟಿದ್ದರೂ ಹುಂಡನು ಹೇಳಿದ ಮಾತು ಮನಸ್ಸಿಗೆ ಕಿರಿಕಿರಿ ಉಂಟುಮಾಡಿತು. ಆಕೆ ಅಂದುಕೊಂಡಳು, ''ಈ ದೈತ್ಯರು ಒಳ್ಳೆ ಉಪಾಯ, ಬುದ್ಧಿವಂತಿಕೆ, ಪ್ರಯತ್ನಗಳಿಂದ ಏನುಬೇಕಾದರೂ ಸಾಧಿಸಬಲ್ಲರು. ನನ್ನನ್ನೇ ಮಾಯೆಯಿಂದ ವಂಚಿಸಿ ಅಪಹರಿಸಿದ್ದ ಆ ಪಾಪಿ. ಆದುದರಿಂದ ತಾನು ನಹುಷನನ್ನು ಕೊಂದೆನೆಂದು ಅವನೆನ್ನುವುದು ನಿಜವಿರಬಹುದೆ ? ಒಂದೆಡೆ ನನ್ನ ತಪಸ್ಸು ದೈವಾನುಗ್ರಹಗಳು, ಇನ್ನೊಂದೆಡೆ ಆ ಪಾಪಿಯ ಬುದ್ಧಿವಂತಿಕೆ ಪ್ರಯತ್ನಗಳು ಜಯ ಯಾವ ಕಡೆ ?.

ಅವಳು ಹೀಗೆ ಚಿಂತಿಸುತ್ತಿದ್ದಾಗ ವಿಜ್ವರನೆಂಬ ಓರ್ವ ಕಿಂನರನು ಅಲ್ಲಿಗೆ ಬಂದು ಹೇಳಿದ.

**ವಿಜ್ವರ :-** ದೇವಿ, ಏಕೆ ಚಿಂತಿಸುತ್ತಿರುವೆ ? ನಾನು ವಿಜ್ವರನೆಂಬ ಒಬ್ಬ ಕಿಂನರ. ದೇವತೆಗಳು ನನ್ನನ್ನು ನಿನ್ನ ಬಳಿಗೆ ಕಳಿಸಿದರು. ನಹುಷನ ಬಗ್ಗೆ ಏನೂ ಚಿಂತಿಸಬೇಡ.

ಪಾಪಿ ಹುಂಡನೆಷ್ಟು ವಿಧದಿಂದ ಅವನನ್ನು ಕೊಲ್ಲಲು ಯತ್ನಿಸಿದರೂ ದೇವತೆಗಳು ಅವನನ್ನು ರಕ್ಷಿಸಿದ್ದಾರೆ. ಹುಂಡನೇನೋ ತಾನು ನಹುಷನನ್ನು ಕೊಂದು ತಿಂದೆನೆಂದೆ ತಿಳಿದಿದ್ದಾನೆ. ಆದರೆ ಜನ್ಮಾಂತರದ ಪುಣ್ಯದಿಂದ ಆತ ಬದುಕಿದ್ದಾನೆ.

ಒಬ್ಬನ ಆಯುಸ್ಸು ಅವನ ಪುಣ್ಯದ ಬಲದಿಂದ ನಿಂತಿರುವಾಗ ಘಾತುಕರು ವಿಷ ಶಸ್ತ್ರ ಮುಂತಾದವುಗಳಿಂದ ಅವನನ್ನು ಕೊಲ್ಲಲ್ಲು ಸರ್ವವಿಧದಿಂದಲೂ ಯತ್ನಿಸುತ್ತಾರೆ, ಆದರೇನು ? ಅವನುಳಿದೇ ಉಳಿಯುತ್ತಾನೆ. ದೇವತೆಗಳು ಅವನನ್ನು ಕಾಪಾಡುತ್ತಾರೆ. ಕೊಲ್ಲಲ್ಲು ಯತ್ನಿಸಿದವರು ನಾಶಹೊಂದುತ್ತಾರೆ. ಅವರ ಪೂರ್ವಕರ್ಮಗಳು ಹ್ರಾಸಗೊಂಡು ಅವರನ್ನು ನಾಶದೆಡೆಗೊಯ್ಯುತ್ತವೆ. ನೀನೇನೂ ಚಿಂತಿಸಬೇಡ ದೇವಿ. ನಿನ್ನ ನಹುಷ ಬದುಕಿದ್ದಾನೆ. ತಂದೆತಾಯಿಗಳನ್ನಗಲಿ ತಪೋವನದಲ್ಲಿ ತಪಸ್ವಿಗಳ ರಕ್ಷಣೆಯಲ್ಲಿದ್ದು ವೇದವೇದಾಂಗ ತತ್ವಜ್ಞನಾಗಿ ಧನುರ್ವೇದ ಪಾರಂಗತನೆನಿಸಿದ್ದಾನೆ. ಚಂದ್ರನು ತನ್ನ ಕಲೆಗಳಿಂದ ಹೊಳೆಯುವಂತೆ ನಹುಷನೂ ಕಲೆ, ವಿದ್ಯೆ, ತಪಸ್ಸು ಯಶಸ್ಸುಗಳಿಂದ ಶತ್ರುಭಯಂಕರನಾಗಿ ದೇವತೆಗಳಿಗೆ ಪ್ರಿಯನಾಗಿ ಶೋಭಿಸುತ್ತಿದ್ದಾನೆ. ಹುಂಡನನ್ನು ಕೊಂದು ನಿನ್ನನ್ನು ಮದುವೆಯಾಗಿ ನಿನ್ನೊಡನೆ ಈತ ಇರುತ್ತಾನೆ. ನೀನು ಅವನಿಂದ ಯಯಾತಿಯೆಂಬ ಧರ್ಮಾತ್ಮನಾದ ರಾಜನನ್ನೂ ರೂಪಗುಣಗಳಿಂದ ಕೂಡಿದ ನೂರು ಜನ ಹೆಣ್ಣು ಮಕ್ಕಳನ್ನೂ ಪಡೆವೆ. ಈ ಎಲ್ಲ ಮಕ್ಕಳ ಪುಣ್ಯದಿಂದ ನಹುಷನು ದೇವರಾಜ ಪದವಿಯನ್ನೇರುತ್ತಾನೆ.

ಯಯಾತಿಗೆ ತುರು ಪುರು ಕುರು ಯದು ಎಂಬ ನಾಲ್ಕು ಮಕ್ಕಳು. ಯದುವಿಗೆ ಭೋಜ ಭೀಮಕ ಅಂಧಕ ಕುಂಜರ ವೃಷ್ಣಿಶ್ರುತಸೇನ ಶ್ರುತಾಧಾರ ಎಂಬ ಏಳು ಮಂದಿ ಮಕ್ಕಳು. ಯದುವಿನ ಸಂತತಿಯವರೆಲ್ಲರೂ **ಯಾದವ**ರೆಂದೇ ಪ್ರಸಿದ್ಧರಾಗುವರು. ಹೀಗೆ ನಹುಷನ ವಂಶ ಬೆಳೆಯುವುದು.

ದೇವಿ, ನಹುಷನು ಹಿಂತಿರುಗಿ ಬಂದು ತಾಯಿ ಇಂದುಮತಿಯ ಕಣ್ಣೀರೋರೆಸಿದಂತೆ ಆಯುವಿನ ದುಃಖವನ್ನು ಕಳೆದು ಕುಲವನ್ನುದ್ಧರಿಸುತ್ತಾನೆ. ನೀನು ದುಃಖಿಸಬೇಡ.

· **ಅಶೋಕಸುಂದರಿ** :- ನನ್ನ ಪತಿ ಎಂದು ಬರುತ್ತಾನೆ ? ಹೇಳು, ಹೇಳಿ ನನ್ನ ಮನಸ್ಸಿಗಾನಂದ ನೀಡು.

**ವಿಜ್ವರ** :- ದೇವಿ, ನೀನು ನಿನ್ನ ಪತಿಯನ್ನು ಬೇಗನೆ ಕಾಣುವೆ.

ಹೀಗೆ ಹೇಳಿ ಕಿಂನರನು ಹೊರಟುಹೋದ. ಅಶೋಕಸುಂದರಿ ತಿರುಗಿ ತಪಸ್ಸು ಮಾಡತೊಡಗಿದಳು.

**ಕುಂಜಲ** :- ನಹುಷನು ವಶಿಷ್ಠರ ಮತ್ತು ಎಲ್ಲ ಮುನಿಗಳ ಅನುಜ್ಞೆ ಪಡೆದು ಹುಂಡನ ವಧೆಗಾಗಿ ಹೊರಟುನಿಂತ. ಎಲ್ಲ ತಪಸ್ವಿಗಳೂ ಅವನನ್ನಾಶೀರ್ವದಿಸಿದರು. ದೇವದುಂದುಭಿ ಮೊಳಗಿತು. ನಹುಷನ ತಲೆಯ ಮೇಲೆ ಹೂ ಮಳೆಯಾಯಿತು.

ಸಾಕ್ಷಾತ್ ಇಂದ್ರನೆ ಬಂದು ಅವನಿಗೆ ಶಸ್ತ್ರಾಸ್ತ್ರಗಳನ್ನಿತ್ತ. ಎಲ್ಲ ದೇವತೆಗಳ ಕೋರಿಕೆಯಂತೆ ಇಂದ್ರನು ತನ್ನ ರಥವನ್ನೂ ಅವನಿಗಿತ್ತ. ಮಾತಲಿಯನ್ನು ಕರೆದು ಆಜ್ಞಾಪಿಸಿದ. 'ನಹುಷನನ್ನು ನನ್ನ ರಥದಲ್ಲಿ ಕುಳ್ಳಿರಿಸಿಕೊಂಡು ರಣರಂಗದಲ್ಲಿ

ಸಾರಥಿಯಾಗು' ಮಾತಲಿ "ನಿನ್ನಾಜ್ಞೆಯಂತೆ ನಡೆವೆನೆಂದು" ಹೇಳಿ ನಹುಷನ ಬಳಿಗೆ ಬಂದು ಹೇಳಿದ. "ಮಹಾರಾಜ, ಈ ರಥವನ್ನೇರಿ ಯುದ್ಧದಲ್ಲಿ ನೀನು ಜಯಗಳಿಸಬೇಕೆಂದು ಇಂದ್ರನ ಅಪೇಕ್ಷೆಯಿದೆ." ಅದನ್ನು ಕೇಳಿ ಆನಂದದಿಂದ ರೋಮಾಂಚಗೊಂಡು ಹೇಳಿದ ನಹುಷ, "ದೇವರಾಜನ ಅನುಗ್ರಹ, ವಶಿಷ್ಠರ ಆಶೀರ್ವಾದ ಇವುಗಳ ಬಲದಿಂದ ನಾನು ನಿಶ್ಚಯವಾಗಿ ಆ ಪಾಪಿ ದಾನವನ್ನು ಸಂಹರಿಸುವೆನು."

ಅಷ್ಟರಲ್ಲಿ ಸ್ವಯಂ ವಿಷ್ಣುವೆ ಬಂದು ತನ್ನ ಚಕ್ರದಿಂದ ಇನ್ನೊಂದು ಚಕ್ರವನ್ನು ತೆಗೆದು ನಹುಷನಿಗಿತ್ತ. ಶಿವನೂ ಶೂಲವನ್ನಿತ್ತ. ಇಂದ್ರನು ವಜ್ರಾಯುಧ ಶಕ್ತ್ಯಾಯುಧಗಳನ್ನಿತ್ತ. ವಾಯು ಬಿಲ್ಲು ಬಾಣಗಳನ್ನಿತ್ತ. ಅಗ್ನಿ ಅಗ್ನೇಯಾಸ್ತ್ರವನ್ನಿತ್ತ. ಹೀಗೆ ಎಲ್ಲ ದೇವತೆಗಳೂ ತಮ್ಮ ತಮ್ಮ ಶಸ್ತ್ರಾಸ್ತ್ರಗಳನ್ನಿತ್ತರು. ಎಲ್ಲ ದೇವತೆಗಳ, ಋಷಿಗಳ ಆಶೀರ್ವಾದ ಅಭಿನಂದನೆಗಳೊಂದಿಗೆ ನಹುಷ ದಿವ್ಯ ರಥವನ್ನೇರಿ ಆಕಾಶದಲ್ಲಿ ಸೂರ್ಯನಂತೆ ಪ್ರಯಾಣ ಮಾಡಿದ. ವಾಯುವೇಗದಿಂದ ಹೋಗಿ ಹುಂಡನ ನಗರವನ್ನು ಸೇರಿದ.

**ಕುಂಜಲ :-** ನಹುಷನ ಪ್ರಯಾಣ ಕಾಲದಲ್ಲಿ ದೇವತೆಗಳು ಗಂಧರ್ವರು ಕಿಂನರರ ಸ್ತ್ರೀಯರೆಲ್ಲರೂ ಅಪ್ಸರೆಯರು ಎಲ್ಲರೂ ಸುಸ್ವರದಿಂದ ಮಂಗಳಗೀತೆಗಳನ್ನು ಹಾಡಿದರು. ಅವನು ಹುಂಡನ ಮಹೋದಯವೆಂಬ ನಗರದಲ್ಲಿ ಬಂದಿಳಿದಾಗ ಈ ಸ್ತ್ರೀಯರೂ ಕುತೂಹಲದಿಂದ ಬಂದಿದ್ದರು, ಅವನು ಆ ನಗರದಲ್ಲಿ ನಂದನದಂಥ ವನಗಳು, ಏಳುಪ್ಪರಿಗೆ ಕಲಶ ಪತಾಕೆಗಳಿಂದ ಕೂಡಿ ಕೈಲಾಸ ಶಿಖರಗಳಂತೆ ಹೊಳೆವ ಉನ್ನತ ಸಂಪದ್ಭರಿತ ದಿವ್ಯ ಗೃಹಗಳು, ತಾವರೆ ತುಂಬಿದ ವಿಶಾಲ ಸರೋವರಗಳು, ಆನೆ ಕುದುರೆಗಳು, ಸುಂದರ ವಿಲಾಸಿನಿಯರು, ತೇಜಸ್ವಿ ಪುರುಷರು ಇವನ್ನೆಲ್ಲ ನೋಡಿ ನಗರದ ಹೊರವಲಯದಲ್ಲಿದ್ದ ಒಂದು ದಿವ್ಯವನದ ನದೀತೀರದಲ್ಲಿ ನಿಂತ. ಅಲ್ಲಿಗೆ ದಿವ್ಯನಾರಿಯರೆಲ್ಲ ಬಂದು ಅವನನ್ನು ಹಾಡಿ ಹೊಗಳಿದರು. ಸೂತರೂ ಮಾಗಧರೂ ಸ್ತುತಿಪಾಠಮಾಡಿದರು.

**ಕುಂಜಲ :-** ದೇವತಾಸ್ತ್ರೀಯರ ಸುಮಧುರ ಸಂಗೀತದಧ್ವನಿ ತಪಸ್ಸಿನಲ್ಲಿ ನಿರತಳಾಗಿ ಕುಳಿತಿದ್ದ ಅಶೋಕಸುಂದರಿಗೆ ಕೇಳಿಸಿತು. ಅವಳು ತಟ್ಟನೆದ್ದು ಉತ್ಸಾಹದಿಂದ ಆ ಧ್ವನಿ ಬರುವ ಕಡೆಗೋಡಿದಳು. ಅಲ್ಲಿ ದೇವತಾಪುರುಷನಂತೆ ದಿವ್ಯ ರೂಪದಿಂದ ಕೂಡಿ ದಿವ್ಯಗಂಧಮಾಲಆಭರಣಗಳಿಂದ ಶೋಭಿಸುತ್ತಿದ್ದ, ದಿವ್ಯ ಲಕ್ಷಣಸಂಪನ್ನನಾಗಿ ಸೂರ್ಯನಂತೆ ಬೆಳಗುತ್ತಿದ್ದ ನಹುಷನನ್ನು ನೋಡಿ ಯಾರಿವನು? ದೇವನೋ ಗಂಧರ್ವನೊ ವಿದ್ಯಾಧರನೋ ಇಂದ್ರನೋ ಶಿವನೋ ಮನ್ಮಥನೋ ಕುಬೇರನೋ ಯಾರಿರಬಹುದು' ಎಂದು ಅಲೋಚಿಸುತ್ತ ಆಕೆ ನಿಂತಿದ್ದಾಗ ರಂಭೆ ತನ್ನ ಸಖಿಯರೊಡನೆ ಅಲ್ಲಿಗೆ ಬಂದಳು. ಅಶೋಕಸುಂದರಿ ಬಿಟ್ಟಕಣ್ಣುಗಳಿಂದ ನಹುಷನನ್ನು ನೋಡುತ್ತ ನಿಂತಿದ್ದುದನ್ನು ಕಂಡು ನಕ್ಕು ಹೇಳಿದಳು.

**ರಂಭೆ :-** ದೇವಿ, ಇದೇನು ? ತಪಸ್ಸನ್ನೂ ಬಿಟ್ಟು ಒಬ್ಬ ಪುರುಷನನ್ನು ಹೀಗೆ ನೋಡುತ್ತ ನಿಂತಿರುವೆ, ಹೀಗೆ ಮಾಡಿದರೆ ಮನಸ್ಸು ಚಂಚಲವಾಗದಿರುವುದೆ ?

**ಅಶೋಕ ಸುಂದರಿ :-** ನಹುಷನನ್ನೇ ಬಯಸಿ ತಪಸ್ಸುಮಾಡುತ್ತ ಅದರಲ್ಲಿಯೆ ಮಗ್ನಳಾಗಿದ್ದೇನೆ. ನನ್ನ ಮನಸ್ಸನ್ನು ಚಂಚಲಗೊಳಿಸಲು ಯಾವ ದೇವತೆಗೂ ಅಸುರನಿಗೂ

ನಾಗನಿಗೂ ಸಾಧ್ಯವಿಲ್ಲ. ಆದರೆ ಈ ಪುರುಷನನ್ನು ಕಂಡಾಗ ಮನಸ್ಸು ಚಂಚಲವಾಗುತ್ತಿದೆ. ಅವನನ್ನೇ ಸೇರಿ ಸುಖಿಸಬೇಕೆಂಬಾಸೆ ಮೂಡುತ್ತಿದೆ. ಈ ವೈಪರೀತ್ಯಕ್ಕೇನು ಕಾರಣ ? ತಿಳಿದಿರುವೆಯಾ ? ತಿಳಿದಿದ್ದರೆ ಹೇಳು. ನನ್ನ ಪತಿ ನಹುಷನೆಂಬುದು ದೇವತೆಗಳ ಸಂಕಲ್ಪ. ಮನಸ್ಸು ಇವನೆಡೆಗೇಕೆ ಧಾವಿಸುತ್ತಿದೆ ? ಇವನೊಡನೆ ರತಿಸುಖಕ್ಕೇಕೆ ಎಳಸುತ್ತಿದೆ ?

**ರಂಭೆ :-** ಸಖಿ, ಎಲ್ಲ ಶರೀರಗಳಲ್ಲಿಯೂ ಆತ್ಮನಿರುತ್ತಾನೆ. ಅವನು ಜ್ಞಾನರೂಪ, ನಿತ್ಯ, ಈ ಪ್ರಾಕೃತ ಇಂದ್ರಿಯಗಳು ಅವನನ್ನು ಮೋಹಪಾಶಗಳಿಂದ ಕಟ್ಟಿಹಾಕಿವೆ. ಹೀಗಿದ್ದರೂ ಅವುಗಳಿಂದ ತಿಳಿಯಲಾಗದ ಎಷ್ಟೋ ವಿಷಯಗಳನ್ನಾತ ಅರಿಯಬಲ್ಲ ನೋಡು, ನಿನ್ನ ಆತ್ಮ ಈ ಪುರುಷನನ್ನು ಗುರುತಿಸಿರುವುದರಿಂದ ಅವನನ್ನು ನೋಡಿದಾಗ ನಿನ್ನ ದುಃಖ ಚಿಂತೆಗಳೆಲ್ಲ ಮರೆಯಾಗುತ್ತಿವೆ. ಮನಸ್ಸು ರತಿ ಸುಖಪಡೆಯಲು ಉತ್ಸುಕವಾಗುತ್ತಿದೆ ಏಕೆ ?. ಅವನು ನಿನ್ನ ಪತಿ, ನಹುಷ. ನಿಮ್ಮಿಬ್ಬರನ್ನೂ ಸತ್ಯಪಾಶದಿಂದ ದೇವತೆಗಳು ಬಂಧಿಸಿದ್ದಾರೆ. ಆದರಿಂದ ಅನ್ಯಪುರುಷರನ್ನು ಕಂಡಾಗ ನಿನ್ನ ಮನಸ್ಸು ಚಂಚಲವಾಗುವುದಿಲ್ಲ. ಇವನನ್ನು ಕಂಡು ಸೋಲುತ್ತದೆ, ಸಖಿ ನೋಡುತ್ತಿರು. ಈ ನಹುಷನೀಗ ಹುಂಡನನ್ನು ಸಂಹರಿಸಿ ತಂದೆ ತಾಯಿಯರನ್ನು ಸೇರುತ್ತಾನೆ. ನಿನ್ನನ್ನು ರಾಣಿಯನ್ನಾಗಿ ಮಾಡಿಕೊಳ್ಳುತ್ತಾನೆ.

**ಅಶೋಕಸುಂದರಿ :-** ಈ ಬಲಶಾಲಿ ಪುರುಷನು ನನ್ನ ಪತಿಯೆ ? ಅದರಿಂದಲೆ ನನ್ನ ಮನಸ್ಸು ಪರವಶತೆಯಿಂದ ಅವನೆಡೆಗೇ ನಿಲ್ಲದೆ ಧಾವಿಸುತ್ತಿದೆ. ಮನಸ್ಸಿಗೆಂಥ ಅದ್ಭುತ ಸಾಮರ್ಥ್ಯ ? ಇವನನ್ನು ನೋಡಿ ಧಾವಿಸುವಂತೆ ಅನ್ಯ ಪುರುಷನನ್ನು ಕಂಡಾಗ ಅದು ಧಾವಿಸುವುದಿಲ್ಲ. ಅವರು ಮನ್ಮಥನಂತೆ ದಿವ್ಯಲಕ್ಷಣಗಳಿಂದ ಸುಂದರರಾಗಿದ್ದರೂ ಮನಸ್ಸು ಒಪ್ಪುವುದಿಲ್ಲ. ಇರಲಿ, ಸಖಿ ನಾವೆಲ್ಲ ಮನೆಗೆ ಹೋಗೋಣ.

ರಂಭೆಗೆ ಗೊತ್ತು, ಅಶೋಕಸುಂದರಿ ನಹುಷನ ಸಾನ್ನಿಧ್ಯವನ್ನೇ ಬಯಸುತ್ತಿದ್ದಾಳೆ, ಮನೆಗೆ ಹೋಗ್ಗೋಣವೆಂದು ಹೇಳುತ್ತಿದ್ದಾಳೆ, ಅಷ್ಟೆ. ಅದರಿಂದ ಆಕೆ ತಡೆದು ಕೇಳಿದಳು.

**ರಂಭೆ :-** ಸಖಿ, ನಹುಷನ ಕಡೆಗೇಕೆ ಹೋಗಕೂಡದು ?

ಅಶೋಕಸುಂದರಿ ಸಂತೋಷದಿಂದ ಸಖಿಯರೊಂದಿಗೆ ನಹುಷನ ಬಳಿಗೆ ಹೋದಳು. ಅಲ್ಲಿ ರಂಭೆಯನ್ನು ಕರೆದು ಹೇಳಿದಳು.

**ಅಶೋಕ ಸುಂದರಿ :-** ಸಖಿ, ನೀನು ಈ ನಹುಷನ ಮುಂದೆ ನನ್ನ ಚರಿತ್ರೆಯನ್ನು ಹೇಳು.

**ರಂಭೆ :-** ಹಾಗೇ ಮಾಡುತ್ತೇನೆ ನಿನ್ನ ವ್ರತ ಬಯಕೆಗಳನ್ನೆಲ್ಲ ಹೇಳುತ್ತೇನೆ.

ಹೀಗೆ ಹೇಳಿ ನಹುಷನ ಮುಂದೆ ಹೇಳತೊಡಗಿದಳು.

''ಮಹಾತ್ಮ, ಆಯುಪುತ್ರ, ನಾನು ರಂಭೆ, ಶಿವನ ಮಗಳು ಅಶೋಕಸುಂದರಿ ನನ್ನನ್ನು ಕಳಿಸಿದ್ದಾಳೆ. ಆಕೆ ನಿನಗಾಗಿಯೆ ಶಿವ-ಶಿವೆಯರು ಸೃಷ್ಟಿಸಿದ ಹೆಣ್ಣು. ಲೋಕದಲ್ಲಿ ಇನ್ನಾರಿಗೂ ಆಕೆ ದೊರಕುವವಳಲ್ಲ. ದೇವತೆಗಳು ಋಷಿಗಳು ಗಂಧರ್ವರು ನಾಗರು ಸಿದ್ಧರು ಚಾರಣರು ಯಾರೂ ಆಕೆಯನ್ನು ಪಡೆಯುವಂತಿಲ್ಲ. ತಾನಾಗಿಯೆ ನಿನ್ನೆಡೆಗೆ

ಬಂದಿರುವ ಸ್ತ್ರೀರತ್ನ, ನಿನ್ನ ಪುಣ್ಯದಿಂದಲೇ ಹುಟ್ಟಿಕೊಂಡಿದೆ, ನಿನಗಾಗಿ ತಪಸ್ಸು ಮಾಡುತ್ತಿದೆ. ನಿನ್ನನ್ನು ಹೊರತು ಅನ್ಯರನ್ನು ಆಕೆ ಬಯಸುವುದಿಲ್ಲ. ಅವಳನ್ನು ಸ್ವೀಕರಿಸು.

**ನಹುಷ** :- ರಂಭೆ, ನೀನು ಹೇಳುವುದೆಲ್ಲ ನನಗೆ ಮೊದಲೆ ಗೊತ್ತಿದೆ. ವಶಿಷ್ಠ ಮಹರ್ಷಿ ಎಲ್ಲವನ್ನು ಹೇಳಿದ್ದಾರೆ. ಅವಳ ಮುಂದೆ ಹೀಗೆ ಹೇಳು ''ನನಗಾಗಿ ನೀನು ಜನಿಸಿರುವುದೂ ತಪಸ್ಸು ಮಾಡುತ್ತಿರುವುದೂ ನನಗೆ ಗೊತ್ತು. ನಿನ್ನನ್ನು ಆ ದಾನವ ಅಪಹರಿಸಿದಂತೆ ನನ್ನನ್ನೂ ಹೆರಿಗೆ ಮನೆಯಿಂದಲೆ ಅಪಹರಿಸಿ ಬಾಲ್ಯದಲ್ಲಿಯೇ ತಂದೆ ತಾಯಿಗಳ ವಿಯೋಗ ಉಂಟುಮಾಡಿದ್ದಾನೆ. ಆದರಿಂದ ಅವನನ್ನು ಕೊಂದು ನಿನ್ನನ್ನು ವಶಿಷ್ಠಾಶ್ರಮಕ್ಕೆ ಕರೆದೊಯ್ಯುತ್ತೇನೆ ಎಂದು ಹೇಳು.

ರಂಭೆ ಅಶೋಕ ಸುಂದರಿಯ ಬಳಿ ಎಲ್ಲವನ್ನು ತಿಳಿಸಿದಳು. ಆಕೆ ಸಂತೋಷಗೊಂಡು ನಹುಷನ ಯುದ್ಧ ಪರಾಕ್ರಮವನ್ನು ಕಾಣಲು ಅಲ್ಲಿಯೆ ನಿಂತಳು.

**ಕುಂಜಲ** :- ಹುಂಡನ ಚಾರರು ರಂಭೆಯ ಮುಂದೆ ನಹುಷನಾಡಿದ ಮಾತುಗಳನ್ನು ಅವನಿಗೆ ತಿಳಿಸಿದರು. ಆ ದಾನವ ಕೋಪಗೊಂಡು ದೂತರನ್ನು ಕಳಿಸಿದ. ಶಿವಕನ್ಯೆಯೊಡನೆ ಸಂಭಾಷಣೆ ಮಾಡಿದ ಆ ವ್ಯಕ್ತಿಯಾರೆಂದು ತಿಳಿದು ಬಾ'' ಎಂದು. ಅವನು ನಹುಷನ ಬಳಿಗೆ ಬಂದು ನುಡಿದ.

**ದೂತ** :- ನೀನು ಯಾರು ? ಈ ದಿವ್ಯರಥದಿಂದ ಬಂದು ಇಲ್ಲಿ ಇಳಿದಿರುವೆ. ಬಿಲ್ಲು ಬಾಣಗಳನ್ನು ಧರಿಸಿ ನಿಂತಿರುವೆ. ನೀನೇಕೆ ಬಂದೆ ? ನಿನ್ನನ್ನು ಯಾರು ಕಳಿಸಿದರು ? ರಂಭೆ ಅಶೋಕ ಸುಂದರಿಯರೊಡನೆ ನೀನೇನು ಹೇಳಿದೆ ? ಎಲ್ಲವನ್ನೂ ನನ್ನ ಮುಂದೆ ಹೇಳು. ದೇವತೆಗಳನ್ನು ಪುಡಿಮಾಡುವ ಹುಂಡನ ಭಯ ನಿನಗಿಲ್ಲವೆ ? ಬದುಕುವಾಸೆ ಇದ್ದರೆ ಬೇಗನೆ ಹೊರಟುಹೋಗು, ನಿಲ್ಲಬೇಡ, ಜೋಕೆ ! ದಾನವೇಶ್ವರ ಹುಂಡನ ಮುಂದೆ ಯಾರೂ ಸೆಣಸುವವರಿಲ್ಲ.

**ನಹುಷ** :- ದೂತ, ನಾನು ನಹುಷ. ಸಪ್ತದ್ವೀಪಾಧಿಪತಿ ಆಯು ಮಹಾರಾಜನ ಮಗ. ಎಲ್ಲ ದಾನವರನ್ನೂ ಅಳಿಸುವವ. ನಿನ್ನೊಡೆಯ ಹುಂಡ ನನ್ನನ್ನು ಬಾಲ್ಯದಲ್ಲಿ ಅಪಹರಿಸಿದ್ದ. ಈ ಶಿವಕನ್ಯೆಯನ್ನೂ ಅಪಹರಿಸಿದ್ದ. ಆಕೆ ಹುಂಡನ ನಾಶಕ್ಕಾಗಿ ತಪಸ್ಸು ಮಾಡುತ್ತಿದ್ದಾಳೆ. ನಾನು ಹೆರಿಗೆಮನೆಯಿಂದ ಅಪಹೃತನಾಗಿ ಹುಂಡನ ಮನೆಗೆ ಬಂದು ದಾಸಿ ಮತ್ತು ಸೂದರ ಕೈಯಲ್ಲಿ ಕೊಲೆಯಾಗುವವನಿದ್ದೆ. ಆ ನಹುಷ ನಾನೀಗ ಹುಂಡನ ಮತ್ತು ಎಲ್ಲ ದಾನವರ ಸಂಹಾರಕ್ಕಾಗಿ ಬಂದಿದ್ದೇನೆಂದು ತಿಳಿ. ಹಾಗೆ ಆ ಪಾಪಿಯ ಮುಂದೆ ಹೇಳು.

ದೂತನೀ ಮಾತನ್ನು ಹುಂಡನಿಗೆ ತಿಳಿಸಿದಾಗ ಆತನೆಂದ.

**ಹುಂಡ** :- ಆ ಪಾಪಿ ಸೂದ ಮತ್ತು ದಾಸಿಯರು ನಹುಷನನ್ನು ಕೊಲ್ಲದೇ ಬಿಟ್ಟರೆ ? ನಾನು ಉಪೇಕ್ಷಿಸಿ ಬಿಟ್ಟ ವ್ಯಾಧಿ ಈಗ ಬೆಳೆದು ಬಿಟ್ಟದೆ ಇರಲಿ ನಹುಷನನ್ನು ಶಿವಕನ್ಯೆಯನ್ನೂ ಜತೆಗೆ ಕೊಲ್ಲುತ್ತೇನೆ.

ಹುಂಡನು ಹೀಗೆ ನಿರ್ಧರಿಸಿ ಸಾರಥಿಯನ್ನು ಕರೆದು ಒಳ್ಳೆಯ ಜಾತಿಯ ಕುದುರೆಗಳನ್ನು ರಥಕ್ಕೆ ಹೂಡೆಂದಾಜ್ಞಾಪಿಸಿದ. ಸೇನಾಪತಿಯನ್ನು ಕರೆದು ಚತುರಂಗ ಬಲವನ್ನು ಅಣಿಮಾಡೆಂದ. ಹೀಗೆ ಎಲ್ಲ ಸಿದ್ಧತೆಗಳನ್ನು ಮಾಡಿ ನಹುಷನ ಬಳಿಗೆ ನಡೆದ.

ನಹುಷ ಇಂದ್ರನ ರಥದಲ್ಲಿ ಬಿಲ್ಲು ಬಾಣಗಳನ್ನು ಹಿಡಿದು ನಿಂತಿದ್ದ. ಯುದ್ಧದಲ್ಲಿ ಅವನನ್ನು ಎದುರಿಸಲು ದೇವದಾನವರಾರಿಗೂ ಶಕ್ಯವಲ್ಲ. ಅಂಥ ಮಹಾವೀರನನ್ನು ಕಾಣುವ ತವಕದಿಂದ ದೇವತೆಗಳ ವಿಮಾನಗಳು ಆಗಸದಲ್ಲಿ ಕಿಕ್ಕಿರಿದು ನೆರೆದಿದ್ದುವು. ಏಕೆಂದರೆ ಅವರಿಗೆ ಭೂಮಿಯಲ್ಲಿ ತೇಜಃಪುಂಜನಾಗಿ ಹೊಳೆವ ಇನ್ನೊಬ್ಬ ಸೂರ್ಯನನ್ನು ಕಂಡಂತಾಗುತ್ತಿತ್ತು.

ದಾನವರು ನಹುಷನ ಮೇಲೆ ಎಲ್ಲ ಬಗೆಯ ಆಯುಧಗಳನ್ನು ಮಳೆಗರೆದರು. ಗರ್ಜಿಸಿದರು. ಮೋಡಗಳೆಷ್ಟು ಗುಡಿಗಿದರೂ ಮಳೆಗರೆದರೂ ಪರ್ವತ ಚಲಿಸಲಾರದು. ನಹುಷ ತನ್ನ ಬಿಲ್ಲನ್ನು ಸೆಳೆದು ಠೇಂಕಾರಮಾಡಿದ ವಜ್ರಸ್ಫೋಟದಂತೆ ಆ ಧ್ವನಿ ಮೊಳಗಿತು. ದಾನವರನ್ನು ನಡುಗಿಸಿತು. ಅವರ ಎದೆಗುಂದಿತು. ಸತ್ವ ಅಡಗಿತು.

**ಕುಂಜಲ:-** ನಹುಷ ಮಹಾರಾಜ ಕುಪಿತನಾಗಿ ದಾನವರೆದುರು ನಿಂತಾಗ ಲೋಕವನ್ನೇ ಸಂಹರಿಸಲು ನಿಂತ ಕಾಲರುದ್ರನಂತೆ ಕಂಡ. ಬಿರುಗಾಳಿ ಮರಗಳನ್ನು ಬೇರು ಸಹಿತ ಕಿತ್ತೆಸೆಯುವಂತೆ ಮಹಾಸ್ತ್ರಗಳಿಂದ ದಾನವಸೇನೆಯನ್ನು ನಾಶಮಾಡತೊಡಗಿದ. ಅವನ ಬಾಣಗಳ ಏಟಿಗೆ ದಾನವರು ಗಾಳಿಯ ವೇಗಕ್ಕೆ ಸಿಲುಕಿದ ಮೋಡಗಳಂತಾದರು. ಕೆಲವರು ಸತ್ತು ಬಿದ್ದರು. ಕೆಲವರೋಡಿದರು.

ಹುಂಡನು ಕೋಪದಿಂದ ನಹುಷನಿದಿರು ನಿಂತು 'ನಿಲ್ಲು ನಿಲ್ಲು. ನಿನ್ನನ್ನೀಗಲೆ ಯಮಸದನಕ್ಕೆ ಅಟ್ಟುವೆ' ಎಂದ.

**ನಹುಷ** :- ನಿಂತೇ ಇದ್ದೇನೆ, ನೋಡು. ಪಾಪಿಯಾದ ನಿನ್ನನ್ನು ಕೊಲ್ಲಲೆಂದು ಬಂದಿದ್ದೇನೆ.

ಹೀಗೆ ಹೇಳುತ್ತ ನಹುಷ ಬೆಂಕಿಯಂತೆ ಜ್ವಲಿಸುವ ಬಾಣಗಳನ್ನು ಬಿಲ್ಲಿಗೆ ಹೂಡಿದ ಹುಂಡನ ಸುಮುಖಕ್ಕೆ ರಥವನ್ನು ನಡೆಸೆಂದು ಮಾತಲಿಗೆ ಆದೇಶವಿತ್ತ. ಒಡನೆ ಮಾತಲಿ ಕುದುರೆಗಳನ್ನು ನಡೆಸಿದ. ಅವು ಬಾನಿನಲ್ಲಿ ಅರಸಂಚೆ ಹಾರುವಂತೆ ನೆಗೆದುವು. ಶ್ವೇತಚ್ಛತ್ರ ಪತಾಕೆಗಳಿಂದ ಶೋಭಿಸುವ ರಥದಲ್ಲಿ ನಿಂತು ಆಕಾಶದಲ್ಲಿ ಮುನ್ನಡೆವ ಪರಾಕ್ರಮಿ ತೇಜಸ್ವಿ ನಹುಷ ಸೂರ್ಯನಂತೆ ಹೊಳೆಯತೊಡಗಿದ. ಹುಂಡನೂ ಅವನಿದಿರಿನಲ್ಲಿ ರಥವನ್ನು ನಿಲ್ಲಿಸಿ ಹರಿತವಾದ ಬಾಣಗಳಿಂದ ಯುದ್ಧಮಾಡತೊಡಗಿದ. ಅವರೀರ್ವರ ಯುದ್ಧ ದೇವತೆಗಳಿಗೂ ಅಚ್ಚರಿಉಂಟುಮಾಡುವಷ್ಟು ಉಗ್ರವಾಗಿತ್ತು. ಭಯಂಕರವಾಗಿತ್ತು. ದಾನವನ ಬಾಣಗಳೇಟು ಹೆಚ್ಚಿದಂತೆಲ್ಲ ನಹುಷ ರಕ್ತರಂಜಿತಗಾತ್ರನಾಗಿ ಇನ್ನೂ ಶೋಭಿಸಿದ. ಮೈಗೆ ನಾಟಿದ ಚಿನ್ನದ ಬಾಣಗಳಿಂದ ಹೊಂಗಿರಣನಾದ ಬಾಲರವಿಯಂತೆ ಕಂಡ. ಹತ್ತು ಬಾಣಗಳನ್ನೊಮ್ಮೆಲೆ ಹುಂಡನ ಹಣೆಗೆಸೆದು ಅವನನ್ನು ಮೂರ್ಛೆಗೊಳಿಸಿದ. 'ಮಹಾರಾಜನಿಗೆ ಜಯವಾಗಲಿ' ಎನ್ನುತ್ತ ಆಕಾಶದಲ್ಲಿ ದೇವತೆಗಳು ಸಂತೋಷದಿಂದ ಕೋಲಾಹಲವನ್ನೇ ಮಾಡಿದರು. ಶಂಖ ಊದಿದರು. ಆ ತುಮುಲ ನಿನಾದ ಮೂರ್ಛಿತನಾಗಿ ಬಿದ್ದಿದ್ದ ಹುಂಡನ ಕರ್ಣರಂಧ್ರವನ್ನು ಪ್ರವೇಶಿಸಿ ಅವನನ್ನು ಹೊಡೆದೆಬ್ಬಿಸಿತು.

ಹುಂಡನೆದ್ದು ನಿಂತು ಕಾಳೋರಗದಂತಿದ್ದ ಬಾಣ ಒಂದನ್ನು ಬಿಲ್ಲಿಗೆ ಹೂಡಿ 'ನಿಲ್ಲು, ನಿಲ್ಲು ನಾನು ಸತ್ತೆನೆಂದು ತಿಳಿಯಬೇಡ ಎನ್ನುತ್ತ ಪುಂಖಾನುಪುಂಖವಾಗಿ ಬಾಣಗಳನ್ನೆಸೆದ. ಒಮ್ಮೆಲೆ ಇಪ್ಪತ್ತೊಂದು ಬಾಣಗಳಿಂದ ನಹುಷನನ್ನೂ, ಅವನ ಸಾರಥಿ, ಕುದುರೆಗಳು,

ರಥದ ಧ್ವಜ ಛತ್ರಗಳನ್ನೂ ಹೊಡೆದ. ಅವನ ಹಸ್ತಲಾಘವವನ್ನು ಕಂಡು ದೇವತೆಗಳೂ ವಿಸ್ಮಿತರಾದರು. ಸ್ವತಃ ನಹುಷನೆ ಮುಕ್ತಕಂಠದಿಂದ ಅವನನ್ನು ಹೊಗಳಿ ಹತ್ತೇ ಬಾಣಗಳಿಂದ ಅವನ ರಥದ ಧ್ವಜ ಛತ್ರಗಳನ್ನೂ ಕುದುರೆಗಳನ್ನೂ ಸಾರಥಿಯನ್ನೂ ಕೆಡವಿದ. ಹುಂಡನೀಗ ಕಾಲುನಡಿಗೆಯಿಂದ ಯುದ್ಧಕ್ಕೆ ತೊಡಗಿದ. ಅವನ ಬಿಲ್ಲು, ಖಡ್ಗ, ಮುದ್ಗರಗಳನ್ನೊಂದೊಂದಾಗಿ ನಹುಷ ಹೊಡೆದುರುಳಿಸಿದಾಗ ಆತ ಗದೆಯನ್ನೆತ್ತಿ ರಾಜನನ್ನಡಗಿಸಿದ. ರಾಜನು ಖಡ್ಗದಿಂದ ಅವನ ತೋಳನ್ನು ಕಡಿದು ಕೆಡಹಿದ. ತೋಳ್ಬಂದಿ ಕಡಗಗಳಿಂದ ಶೋಭಿಸುತ್ತ ಗದೆಯನ್ನು ಹಿಡಿದಿದ್ದ ಆ ತೋಳು ನೆಲಕ್ಕೆ ಬಿದ್ದೊಡನೆ ದಾನವನು ನೆತ್ತರಿಂದ ತೊಯ್ದು ವಜ್ರಸ್ಫೋಟದಂಥ ಮಹಾಶಬ್ದವನ್ನುಮಾಡುತ್ತ ಕ್ರೋಧದ ಆವೇಶದಿಂದ ರಾಜನನ್ನು ನುಂಗುವಂತೆ ಮೇಲೆ ಹಾಯ್ದು ಬೀಳತೊಡಗಿದ. ರಾಜನು ಒಡನೆ ಶಕ್ತ್ಯಾಯುಧದಿಂದ ಅವನೆದೆಗೆ ಹೊಡೆದ. ವಜ್ರಾಯುಧದೇಟಿಗೆ ಬೆಟ್ಟ ಕೆಡೆದುರುಳುವಂತೆ ಅವನು ನೆಲಕ್ಕೊರಗಿದ. ಇದನ್ನು ನೋಡಿ ದಾನವರೆಲ್ಲ ಬೆದರಿ ಪಲಾಯನಮಾಡಿದರು. ಬೆಟ್ಟಗುಡ್ಡಗಳಲ್ಲಿ ಕೆಲವರು, ಪಾತಾಳದಲ್ಲಿ ಕೆಲವರು ಅಡಗಿದರು. ದೇವತೆಗಳು ಗಂಧರ್ವರು ಸಿದ್ಧರು ಚಾರಣರು ಎಲ್ಲರೂ ಆನಂದಪಟ್ಟರು.

**ಕುಂಜಲ :-** ಅಶೋಕ ಸುಂದರಿಯ ಆನಂದಕ್ಕೆ ಪಾರವೆ ಇರಲಿಲ್ಲ. ರಂಭೆಯೊಡನೆ ಆಕೆ ನಹುಷನ ಬಳಿಗೆ ಬಂದು 'ಎಷ್ಟು ಸಮಯದಿಂದ ನಿನಗಾಗಿ ತಪಸ್ಸು ಮಾಡಿದ್ದೇನೆ, ಈಗಲಾದರೂ ನನ್ನನ್ನು ಮದುವೆಯಾಗುವೆಯ ?' ಎಂದಳು.

**ನಹುಷ :-** ನನಗೆಂದೇ ಮೀಸಲಾಗಿರುವ ಹೆಣ್ಣು ನೀನು, ಅಂದಿನಿಂದ ಇಂದಿನ ವರೆಗೂ ನನಗಾಗಿ ತಪಸ್ಸುಮಾಡಿರುವೆ ಎಂದ ಮೇಲೆ ನಿನ್ನನ್ನು ಮದುವೆಯಾಗದಿರುತ್ತೇನೆಯೆ ? ಒಂದು ಮುಹೂರ್ತ ಮಾತ್ರ ತಾಳು. ಗುರು ವಶಿಷ್ಠರ ಆಶೀರ್ವಾದ ಪಡೆಯೋಣ ಬಾ. ರಂಭೆಯೊಂದಿಗೆ ನನ್ನ ರಥದಲ್ಲೇ ಕುಳ್ಳಿರಿ.

ನಹುಷ ಹೀಗೆ ಹೇಳಿ ಅವರಿಬ್ಬರನ್ನೂ ರಥದಲ್ಲಿ ಕೂಡಿಸಿ ವಶಿಷ್ಠಾಶ್ರಮಕ್ಕೆ ತೆರಳಿದ. ವಶಿಷ್ಠರನ್ನು ಕಂಡು ಯುದ್ಧದ ವೃತ್ತಾಂತವನ್ನು ಬಿತ್ತರಿಸಿದ. ಅವರು ಸಂತೋಷಪಟ್ಟು ಒಂದು ಶುಭಮುಹೂರ್ತದಲ್ಲಿ ಅಗ್ನಿ ಬ್ರಾಹ್ಮಣ ಸನ್ನಿಧಿಯಲ್ಲಿ ನಹುಷನಿಗೆ ಅಶೋಕ ಸುಂದರಿಯೊಡನೆ ವಿವಾಹ ಮಾಡಿಸಿದರು, ದಂಪತಿಗಳನ್ನು ಆಶೀರ್ವದಿಸಿ ನುಡಿದರು.

**ವಶಿಷ್ಠ :-** ಮಹಾರಾಜ, ಬೇಗನೆ ಹೋಗಿ ನಿನ್ನ ತಂದೆ ತಾಯಿಗಳನ್ನು ನೋಡು. ಅವರ ಆನಂದ ಪರ್ವಕಾಲದ ಸಮುದ್ರದಂತೆ ಉಕ್ಕಲಿ.

ನಹುಷ ಗುರುಗಳನ್ನು ವಂದಿಸಿ ಆ ಇಂದ್ರರಥವನ್ನೇ ಏರಿ ಆಯುಮಹಾರಾಜನೆಡೆಗೆ ತೆರಳಿದ.

ಇತ್ತ ಪುತ್ರಶೋಕದಿಂದ ಅಳುತ್ತಿದ್ದ ರಾಣಿ ಇಂದುಮತಿಯನ್ನು ಸಂತೈಸಲು ದೇವತೆಗಳು ಮೇನಕೆಯನ್ನು ಕಳಿಸಿಕೊಟ್ಟಿದ್ದರು. ಆಕೆ ಬಂದು ಹೇಳಿದಳು.

**ಮೇನಕೆ :-** ದೇವಿ, ಶೋಕವನ್ನು ಬಿಡು. ನಿನ್ನ ಮಗ ಅವನನ್ನಪಹರಿಸದ ಪಾಪಿದಾನವನನ್ನು ಕೊಂದು ನಿನ್ನೆಡೆಗೆ ಬರುತ್ತಾನೆ. ಜೊತೆಗೆ ಸೊಸೆಯನ್ನು ಕರೆದುಕೊಂಡು ಬರುತ್ತಾನೆ.

ಹೀಗೆ ಹೇಳಿ ಯುದ್ಧದಲ್ಲಿ ನಹುಷನು ತೋರಿದ ಪರಾಕ್ರಮವನ್ನು ವರ್ಣಿಸಿದಳು. ರಾಣಿ ಆನಂದ ಪರವಶಳಾಗಿ 'ಸಖಿ, ಇದು ನಿಜವೆ ?' ಅಮೃತದಂತೆ ಸವಿಯಾದ ಈ ಮಾತನ್ನಾಡುವ ನಿನಗೆ ನಾನೇನು ಕೊಡಲಿ ಹೇಳು, ನನ್ನ ಸರ್ವಸ್ವವನ್ನೇ ಕೊಡಬಲ್ಲೆ ಎಂದಳು.

ಬಳಿಕ ರಾಜನ ಬಳಿಗೆ ಹೋಗಿ ಹೇಳಿದಳು. 'ನಿನ್ನ ಮಗನು ಈಗಲೆ ಬರುತ್ತಾನೆ ಹಾಗೆ ನನ್ನ ಈ ಗೆಳತಿ ಮೇನಕೆ ಹೇಳುತ್ತಾಳೆ.' ರಾಜನೆಂದ.

**ಆಯು :-** ಪ್ರಿಯೆ, ನಾರದ ಮುನಿ ಅಂದೇ ಹೇಳಿದ್ದರು ''ರಾಜನ್, ಮಗನ ಬಗ್ಗೆ ಚಿಂತಿಸಬೇಡ. ಆತ ಆ ದಾನವನನ್ನು ಕೊಂದು ನಿನ್ನ ಬಳಿಗೆ ಬಂದೇ ಬರುತ್ತಾನೆ'' ಎಂದು. ಇದೀಗ ನಿಜವಾಯಿತು. ಮುನಿಯ ಮಾತು ಸುಳ್ಳಾಗುವುದುಂಟೆ? ಆ ದತ್ತಾತ್ರೇಯ ಮುನಿಯೂ ಸಾಕ್ಷಾತ್ ವಿಷ್ಣುಸ್ವರೂಪಿ. ಅವನನ್ನು ನಾವಿಬ್ಬರೂ ಸೇವಿಸಿ ವರಪಡೆದಿರಲಿಲ್ಲವೆ? ವೈಷ್ಣವ ತೇಜಸ್ಸಿನಿಂದ ಕೂಡಿ ಬಲಿಷ್ಠನಾಗಿ ದಾನವರನ್ನೆಲ್ಲ ಮರ್ದಿಸುತ್ತ ಪ್ರಜಾಪಾಲನೆ ಮಾಡಬಲ್ಲ ಪುತ್ರರತ್ನ ಆ ಮುನಿಯ ಅನುಗ್ರಹದಿಂದ ನಮಗೆ ದೊರಕಿದೆ.

ಹೀಗೆ ಹೇಳಿ ಕುಮಾರನ ಆಗಮನದ ಬಗ್ಗೆ ಮಹಾರಾಜ ಒಂದು ದೊಡ್ಡ ಉತ್ಸವವನ್ನೇ ಏರ್ಪಡಿಸಿದ. ಆನಂದಪರವಶನಾಗಿ ವಿಷ್ಣುವನ್ನು ನೆನೆದ.

**ಕುಂಜಲ :-** ನಹುಷ ಹಸ್ತಿನಾವತಿಗೆ ಬಂದು ರಥದಿಂದಿಳಿದಾಗ ಅಲ್ಲಿ ಎಲ್ಲೆಡೆ ಚಿನ್ನದ ತೋರಣ ಪತಾಕೆಗಳು, ಮಂಗಳವಾದ್ಯ ಘೋಷಗಳು, ಅಲಂಕೃತರಾಗಿ ಸಡಗರದಿಂದೋಡಾಡುವ ಸ್ತ್ರೀಪುರುಷರು ವೇದಧ್ವನಿ. ಸಂಗೀತ ಇವುಗಳಿಂದ ನಗರದ ಶೋಭೆ ಇಮ್ಮಡಿಸಿತ್ತು. ಪೌರರು ಕುಮಾರನನ್ನು ಇದಿರುಗೊಂಡರು, ಮಂಗಳವೇದ ಘೋಷದೊಂದಿಗೆ ಅವನನ್ನು ಅರಮನೆಗೆ ಕರೆತಂದರು. ಅಶೋಕಸುಂದರಿಯೊಂದಿಗೆ ಆತ ತಂದೆತಾಯಿಗಳ ಅಡಿಗಳಿಗೆರಗಿದ ಆಯು ಆನಂದಪುಲಕಿತನಾಗಿ ನುಡಿದ.

**ಆಯು :-** ಇಂದಿನಿಂದ ನನ್ನೆಲ್ಲ ದುಃಖಶೋಕ ಮನಸ್ತಾಪಗಳು ಮರೆಯಾದವು. ನಿನ್ನ ದರ್ಶನದಿಂದ ಲೋಕವೇ ಹರ್ಷಪಡುತ್ತದೆ. ನಿನ್ನಂತ ಪರಾಕ್ರಮಿಯಾದ ಪುತ್ರನನ್ನು ಪಡೆದು ನಾನೀಗ ಕೃತಕೃತ್ಯನಾಗಿದ್ದೇನೆ. ನನ್ನನ್ನೂ ನನ್ನ ವಂಶವನ್ನೂ ನಾನು ಉದ್ಧರಿಸಿದಂತಾಗಿದೆ.

**ಇಂದುಮತಿ :-** ನಿನ್ನನ್ನು ನೋಡಿದ ಮೇಲೆ ಪರ್ವಕಾಲದಲ್ಲಿ ಚಂದ್ರದರ್ಶನದಿಂದ ಸಮುದ್ರ ಉಕ್ಕೇರುವಂತೆ ನನ್ನ ಸಂತೋಷ ಉಕ್ಕುತ್ತದೆ. ನಾನು ಧನ್ಯಳಾದೆ.

ಎಂದು ಹೇಳಿ ರಾಣಿ ಕುಮಾರನನ್ನಾಲಿಂಗಿಸಿದಳು. ನೆತ್ತಿಯನ್ನಾಘ್ರಾಣಿಸಿದಳು. ಅಗಲಿದ ಕರುವನ್ನು ತಿರುಗಿ ಕಂಡ ಹಸುವಿನಂತೆ ಸಂತಸದಿಂದ ನಲಿದಳು.

ನಹುಷನು ತಾಯಿಯ ಮುಂದೆ ತನ್ನ ಅಪಹರಿಸಿ, ಅಶೋಕಸುಂದರಿಯ ಉತ್ಪತ್ತಿ ಹುಂಡನೊಡನೆ ತನ್ನ ಯುದ್ಧ ಈ ಎಲ್ಲ ವೃತ್ತಾಂತಗಳನ್ನೂ ಬಣ್ಣಿಸಿದ.

ಇಂದ್ರನ ರಥವನ್ನೇರಿ ಏಳು ದ್ವೀಪಗಳಲ್ಲಿಯೂ ದಿಗ್ವಿಜಯಮಾಡಿ ಸಂಪದ್ಭರಿತವಾದ ಸಮಸ್ತ ಪೃಥ್ವಿಯನ್ನು ಗೆದ್ದು ತಂದೆ ಆಯು ಮಹಾರಾಜನಿಗೆ ಅರ್ಪಿಸಿದ. ಅವನಿಂದ

ರಾಜಸೂಯದಂಥ ಯಾಗಗಳನ್ನು ಮಾಡಿಸಿದ. ದಾನ ವ್ರತ ನಿಯಮ ಮುಂತಾದವುಗಳಿಂದ ತಂದೆ-ತಾಯಿಗಳಿಗೆ ಪುಣ್ಯವನ್ನು ದೊರಕಿಸಿದ.

ಒಂದು ದಿನ ದೇವತೆಗಳು ಋಷಿಗಳು ಸಿದ್ಧರು ಈ ಎಲ್ಲರ ಸಮಕ್ಷಮದಲ್ಲಿ ಆಯು ಮಗನನ್ನೂ ಸೊಸೆಯನ್ನೂ ಸಿಂಹಾಸನದಲ್ಲಿ ಕುಳ್ಳಿರಿಸಿ ಪಟ್ಟಾಭಿಷೇಕಮಾಡಿ ಇಂದ್ರಲೋಕಕ್ಕೆ ತೆರಳಿದ. ಅಲ್ಲಿಂದ ಬ್ರಹ್ಮಲೋಕ ಶಿವಲೋಕಗಳ ಮಾರ್ಗವಾಗಿ ವಿಷ್ಣುಲೋಕವನ್ನು ಸೇರಿದ.

ಮನುಷ್ಯ ಹುಟ್ಟಿದ ಮೇಲೆ ಇಂಥ ಪುಣ್ಯಕರ್ಮಗಳನ್ನೇ ಮಾಡಬೇಕು. ಬರಿ ದುಃಖವನ್ನೇ ತಂದು ಕೊಡುವ ಬೇರೆ ಕರ್ಮಗಳಿಂದೇನು ಫಲ ?

ಪವಿತ್ರವಾದ ಈ ನಹುಷೋಪಾಖ್ಯಾನವನ್ನು ಕೇಳಿದವನು ಇಹದಲ್ಲಿ ಎಲ್ಲ ಸುಖಗಳನ್ನು ಸವಿದು ಹರಿಪದವನ್ನೈದುವನು.

**ಕಪಿಂಜಲ :-** ಅಪ್ಪ, ಗಂಗೆಯ ಮಡುವಿನ ಬಳಿಯಲ್ಲಿ ನಾನು ಕಂಡ ಕನ್ಯೆ ಯಾರು ಅವಳೇಕೆ ಅಳುವಳು ? ಗಂಗೆಯಲ್ಲಿ ತೇಲಿಬರುವ ಕಮಲದ ಹೂಗಳನ್ನಾಯ್ದು ಶಿವನನ್ನರ್ಚಿಸುವ ತಪಸ್ವಿ ಯಾರು ? ಅವನೇಕೆ ಅಳುತ್ತಾನೆ ? ಇದೆಲ್ಲವನ್ನು ಹೇಳು.

**ಕುಂಜಲ :-** ನಾನೀಗ ಹೇಳಿದಂತೆ ನಹುಷನ ಕೈಯಲ್ಲಿ ಹುಂಡದಾನವ ಮಡಿದಾಗ ಅವನ ಮಗ ವಿಹುಂಡ ಕೋಪದಿಂದ ದೇವತೆಗಳನ್ನು ಪೀಡಿಸಿ ಸೇಡುತೀರಿಸ ತೊಡಗಿದ, ಮೂಲೋಕವನ್ನು ಪೀಡಿಸುತ್ತಿದ್ದ ಅವನನ್ನು ಯುದ್ಧದಲ್ಲಿ ಎದಿರಿಸಲು ಶಕ್ಯವಿಲ್ಲವೆನ್ನುವುದು ಎಲ್ಲ ದೇವತೆಗಳಿಗೂ ಗೊತ್ತಿತ್ತು. ಅದರಿಂದ ಅವರು ವಿಷ್ಣುವಿನಲ್ಲಿ ಮೊರೆಯಿಟ್ಟರು. ವಿಷ್ಣು ಹೇಳಿದ.

**ವಿಷ್ಣು :-** ದೇವತೆಗಳೇ ನೀವೆಲ್ಲರೂ ನೆಮ್ಮದಿಯಿಂದಿರಿ. ನಾನು ಆ ವಿಹುಂಡನನ್ನು ನಾಶಪಡಿಸುತ್ತೇನೆ.

ಹೀಗೆ ಹೇಳಿ ತನ್ನ ಮಾಯೆಯಿಂದ ಮೋಹಿನಿರೂಪವನ್ನು ಧರಿಸಿ ನಂದನವನದಲ್ಲಿ ವಿಹರಿಸಿದನು. ವಿಹುಂಡ ದೇವತೆಗಳನ್ನು ಪೀಡಿಸುವ ಸಲುವಾಗಿ ಆ ಮಾರ್ಗದಿಂದ ಹೋಗುತ್ತಿದ್ದಾಗ ಈ ಮೋಹಿನಿ ಅವನ ಕಣ್ಣಿಗೆ ಕಾಣಿಸಿದಳು. ಪುಟಕ್ಕಿಟ್ಟ ಚಿನ್ನದಂತಹ ಮೈಬಣ್ಣದಿಂದ ರೂಪಸಂಪತ್ತಿನಿಂದ ಕಣ್ಣುಕೋರೈಸುವಂತಿದ್ದ ಆಕೆಯನ್ನು ಕಂಡೊಡನೆ ಕಾಮನ ಬಾಣಗಳಿಗೆ ಸಿಲುಕಿ, ಆಸೆಯಿಂದ ಅವಳ ಬಳಿಗೆ ನಡೆದ. ತನಗೆ ಆಕೆ ಮೃತ್ಯು ಸ್ವರೂಪಳೆಂಬುದರ ಅರಿವಿಲ್ಲದೆ ಮೋಹಮುಗ್ಧನಾಗಿ ಆ ಪಾಪಿ ಬೇಡಿದ.

**ವಿಹುಂಡ :-** ಓ ನನ್ನೆದೆಯನ್ನು ಕಲಕುವ ಚೆಲುವೆ, ನೀನಾರು ?. ನಿನ್ನ ಸಂಗವನ್ನಿತ್ತು ಕಾಪಾಡು. ಅದಕ್ಕಾಗಿ ನೀನೇನು ಬಯಸಿದರೂ ಕೊಡುವೆ, ದೇವದಾನವರಾರಿಗೂ ಲಭ್ಯವಾಗದ ವಸ್ತುವನ್ನೂ ನಾ ಕೊಡಬಲ್ಲೆ.

**ಮಾಯೆ :-** ದಾನವೇಂದ್ರ, ನೀ ನನ್ನ ಸಂಗವನ್ನು ಬಯಸುವೆಯಾದರೆ ಅದಕ್ಕೆ ಪ್ರತಿಯಾಗಿ ನೀನು ಏಳು ಕೋಟಿ ಸುಗಂಧಯುಕ್ತ ಕಾಮೋದಪುಷ್ಪಗಳನ್ನು ಶಿವನ ತಲೆಗೇರಿಸಿ ಪೂಜಿಸು. ಆ ಹೂಗಳ ಮಾಲೆಯನ್ನು ನನ್ನ ಕೊರಳಿಗೆ ತೊಡಿಸು.

**ವಿಹುಂಡ :-** ದೇವಿ, ನಿನ್ನ ಮನೋರಥವನ್ನು ನಾನು ಪೂರೈಸುತ್ತೇನೆ.

ಒಡನೆ ವಿಹುಂಡ ವನದಿಂದ ವನಕ್ಕೆ ಹುಚ್ಚನಂತೆ ಅಲೆಯುತ್ತ ಸಿಕ್ಕವರನ್ನೆಲ್ಲ ಕೇಳಿದ, '**ಕಾಮೋದ**ವೆಂಬ ಹೂವಿನ ಗಿಡವೆಲ್ಲಿದೆ' ಎಂದು. ಅಂಥ ಹೂವಿನ ಗಿಡವೆ ಇಲ್ಲ ಎಂದರು ಅವರೆಲ್ಲ. ಕೊನೆಗೆ ಶುಕ್ರಾಚಾರ್ಯರ ಬಳಿ ಈ ಪ್ರಶ್ನೆಯನ್ನು ಕೇಳಿದ.

**ಶುಕ್ರ** :- ದಾನವ, ಕಾಮೋದವೆಂದರೆ ಅದೊಂದು ಹೂವಿನ ಗಿಡವಲ್ಲ. ಆ ಹೆಸರಿನ ಒಬ್ಬ ಸುಂದರಿ ಇದ್ದಾಳೆ. ಅವಳಿಂದಾದರೂ ಪ್ರಸಂಗ ಬಂದಾಗ ನಕ್ಕರೆ ಸುಗಂಧಯುಕ್ತ ಹಳದಿ ಹೂಗಳು ಉದ್ಭವಿಸುತ್ತವೆ. ಅಂಥ ಒಂದು ಹೂವಿನಿಂದ ಶಿವನನ್ನು ಪೂಜಿಸಿದರೂ ಆತನೊಲಿದು ಎಲ್ಲ ಬಯಕೆಯನ್ನು ಪೂರೈಸುವ. ಆದರೆ ಈ ಕಾಮೋದೆ ಅತ್ತರೆ ಅದೇ ಗಾತ್ರದ ಕೆಂಪು ಹೂಗಳು ಉದ್ಭವಿಸುತ್ತವೆ. ಅವುಗಳಲ್ಲಿ ಸುವಾಸನೆ ಇರುವುದಿಲ್ಲ. ಅವುಗಳನ್ನು ಮುಟ್ಟಕೂಡದು.

**ವಿಹುಂಡ** :- ಆ ಕಾಮೋದೆ ಎಲ್ಲಿರುವಳು ?.

**ಶುಕ್ರ** :- ಗಂಗಾದ್ವಾರದಲ್ಲಿ ವಿಶ್ವಕರ್ಮ ನಿರ್ಮಿತವಾದ ಕಾಮೋದವೆಂಬ ಪಟ್ಟಣವಿದೆ. ಅಲ್ಲಿ ದಿವ್ಯಭೋಗಗಳನ್ನನುಭವಿಸುತ್ತ ಆಕೆ ವಾಸಿಸುತ್ತಿರುವಳು. ನೀನವಳನ್ನು ಹೇಗಾದರೂ ಉಪಾಯದಿಂದ ನಗಿಸು. ಹೀಗೆ ಹೇಳಿ ಶುಕ್ರಾಚಾರ್ಯರು ಸುಮ್ಮನಾದರು.

**ಕಪಿಂಜಲ** :- ಈ ಕಾಮೋದೆ ಯಾರು?. ಯಾರ ಮಗಳು?. ಅವಳು ನಕ್ಕಾಗ ಉದ್ಭವಿಸುವ ಹೂಗಳನ್ನು ದೇವತೆಗಳೇಕೆ ಬಯಸುವರು? ಅವುಗಳ ವಿಶೇಷ ಗುಣವೇನು ?

**ಕುಂಜಲ** :- ಹಿಂದೆ ದೇವತೆಗಳೂ ದೈತ್ಯರೂ ಸೇರಿ ಅಮೃತಕ್ಕಾಗಿ ಕ್ಷೀರಸಾಗರವನ್ನು ಕಡೆದರು. ಆಗ ಮೊದಲಿಗೆ ನಾಲ್ಕುಜನ ಕನ್ಯಾಮಣಿಗಳುದ್ಭವಿಸಿದರು. ಬಳಿಕ ಅಮೃತಕಲಶ ಆವಿರ್ಭವಿಸಿತು. **ಲಕ್ಷ್ಮೀ ವಾರುಣೀ ಶ್ರೇಷ್ಠಾ ಕಾಮೋದಾ** ಇವರೆ ಆ ನಾಲ್ಕು ಕನ್ಯಾಮಣಿಗಳು. ಇವರಲ್ಲಿ ಶ್ರೇಷ್ಠ **ತುಳಸಿ** ಎಂದು ಪ್ರಸಿದ್ಧಳಾಗಿ ಪೂಜ್ಯಳೆನಿಸಿದ್ದಾಳೆ. **ವಾರುಣಿ** ಅಮೃತದ ನೊರೆಯಿಂದ ಬಂದಳು. **ಕಾಮೋದ** ಅಮೃತದ ತೆರೆಯಿಂದ ಬಂದಳು. ಈಕೆ ಮುಂದೆ ತುಳಸಿಯಾಗಿ ಪೂಜ್ಯೆ ಳೆನಿಸುವಳು. ಹರಿ ಆಕೆಯೊಂದಿಗೆ ರಮಿಸುವನು.

**ತುಲಸ್ಯಾಃ ಪತ್ರಮೇಕಂ ಯೋನೀತ್ವಾ ಕೃಷ್ಣಾಯದಾಸ್ಯತಿ**
**ಮೇನೇ ತಸ್ಯೋಪಕಾರಾಣಾಂ ಕಿಮಸ್ಮೈ ಚದದಾಮ್ಯಹಂ**
**ಇನ್ಯೇವಂ ಚಿಂತಯೇನ್ನಿತ್ಯಂ ತಸ್ಯಪ್ರೀತಿಕರೋ ಭವೇತ್**

ತುಳಸಿಯ ಒಂದು ಎಲೆಯನ್ನು ಒಯ್ದು ಕೃಷ್ಣನಿಗೆ ಯಾರು ಅರ್ಪಿಸುವನೋ ಅವನಿಗೆ ಯಾವ ಯೋಗ್ಯ ಪ್ರತಿಫಲ ಕೊಡಲಿ ಎಂದು ಕೃಷ್ಣ ಸದಾ ಚಿಂತೆಗೊಳಗಾಗುತ್ತಾನೆ. ಅಷ್ಟೊಂದು ಸಂತೋಷ ಅವನಿಗಾಗುತ್ತದೆ.

ಈ ಕಾಮೋದೆ ಆನಂದದಿಂದ ನಕ್ಕರೆ ಅವಳ ಮುಖದಿಂದ ಎಂದೂ ಬಾಡದ, ಸುವಾಸನೆಬೀರುವ ಹೂಗಳು ಉದುರುತ್ತವೆ. ಅವುಗಳನ್ನಾಯ್ದು ಶಿವನನ್ನೊ ಬ್ರಹ್ಮನನ್ನೊ ವಿಷ್ಣುವನ್ನೊ ಪೂಜಿಸಿದರೆ ಅವರು ಸಂತುಷ್ಟರಾಗಿ ಅಭೀಷ್ಟವನ್ನೆಲ್ಲ ಪೂರೈಸುವರು. ಕಾಮೋದೆ ದುಃಖದಿಂದ ಅತ್ತರೆ ಅವಳ ಕಣ್ಣೀರಿನಿಂದ ಹೂಗಳು ಹುಟ್ಟುತ್ತವೆ.

ಅವುಗಳಲ್ಲಿ ಸುವಾಸನೆ ಇರುವುದಿಲ್ಲ. ಅವುಗಳಿಂದ ಶಿವನನ್ನರ್ಚಿಸಿದರೆ ದುಃಖ ಸಂತಾಪಗಳೇ ಉಂಟಾಗುತ್ತವೆ. ಇದು ಕಾಮೋದೆಯ ವೃತ್ತಾಂತ.

ಇತ್ತ ವಿಷ್ಣುವು ವಿಹುಂಡನ ಪ್ರಯತ್ನ ಸಾಹಸಗಳನ್ನು ತಿಳಿದವನಾದುದರಿಂದ ಅವನ ಬಳಿಗೆ ನಾರದರನ್ನು ಕಳಿಸಿದ. ಅವನನ್ನು ಮೋಹದಲ್ಲಿ ಕೆಡಹು ಎಂದ. ನಾರದರು ವಿಹುಂಡನ ಬಳಿಗೆ ಹೋದರು. ಆತ ಕಾಮೋದೆಯ ಬಳಿಗೆ ಹೊರಟಿದ್ದ. ಅವನನ್ನು ತಡೆದು ಕೇಳಿದರು ನಾರದರು.

**ನಾರದ :-** ದಾನವೇಂದ್ರ, ಎಲ್ಲಿಗೆ ಹೊರಟಿರುವೆ ? ಆತುರದಿಂದ ಎಲ್ಲಿಗೆ ಧಾವಿಸುತ್ತಿರುವೆ.

**ವಿಹುಂಡ :-** ಕಾಮೋದ ಪುಷ್ಪಗಳಿಗಾಗಿ ಹೊರಟಿದ್ದೇನೆ.

**ನಾರದ :-** ಅವು ನಿನಗೇಕೆ ?

**ವಿಹುಂಡ :-** ಮುನಿಯೆ, ನಾನೊಮ್ಮೆ ನಂದನವನದಲ್ಲಿ ಓರ್ವ ಸುಂದರಿಯನ್ನು ಕಂಡೆ. ಒಡನೆ ಮನ್ಮಥನಿಗೆ ಸೋತೆ. ಆಕೆ ಹೇಳಿದಳು. ಏಳುಕೋಟಿ ಕಾಮೋದ ಪುಷ್ಪಗಳಿಂದ ಶಿವನನ್ನರ್ಚಿಸು. ಆಗ ನಾನು ನಿನ್ನ ಮಡದಿಯಾಗುವೆ ಎಂದು ಅದಕ್ಕಾಗಿ ನಾನೀಗ ಕಾಮೋದ ಪಟ್ಟಣಕ್ಕೆ ಹೋಗುತ್ತಿದ್ದೇನೆ. ಕಾಮೋದೆ ಅಲ್ಲಿರುವಳು. ಅವಳ ಮನಸ್ಸಿಗೆ ಉಲ್ಲಾಸ ಬರಿಸಿ ನಕ್ಕು ನಗಿಸುತ್ತೇನೆ, ಅವಳು ನಗುತ್ತಾಳೆ. ಅವಳ ಆ ನಗುವಿನಿಂದ ನನ್ನ ಕಾರ್ಯ ನೆರವೇರುತ್ತದೆ. ಏಕೆಂದರೆ ಆಗ ಅವಳ ಮುಖದಿಂದ ದಿವ್ಯ ಪುಷ್ಪಗಳುದುರುತ್ತವೆ. ಅವುಗಳನ್ನಾಯ್ದು ಪಾರ್ವತಿ ಪತಿಯನ್ನರ್ಚಿಸುತ್ತೇನೆ. ಅವನೊಲಿದು ನನಗೆ ವರನೀಡುತ್ತಾನೆ.

**ನಾರದ :-** ಆದರೆ ನೀನು ಕಾಮೋದ ಪಟ್ಟಣಕ್ಕೆ ಹೋಗಬೇಕಾಗಿಲ್ಲ. ಅಲ್ಲಿ ವಿಷ್ಣುವೂ ಇರುತ್ತಾನೆ ಅವನು ಬುದ್ಧಿವಂತ. ದೈತ್ಯರ ನಾಶ ಮಾಡುವುದೊಂದೇ ಅವನ ಕೆಲಸ. ನೀನು ಅಲ್ಲಿಗೆ ಹೋಗದೆ ಆ ಹೂಗಳನ್ನು ಪಡೆಯಲು ಒಂದು ಉಪಾಯವನ್ನು ಹೇಳುವೆ, ಕೇಳು. ಗಂಗಾಪ್ರವಾಹದಲ್ಲಿ ಆ ಹೂಗಳೆ ತೇಲಿ ಬರುತ್ತವೆ. ಅವುಗಳನ್ನು ಎತ್ತಿಕೊಂಡರಾಯಿತು.

ವಿಹುಂಡನಿಗೆ ಅದುವೆ ಸರಿ ಎಂದೆನಿಸಿತು. ಅವನನ್ನು ಮೋಹದಲ್ಲಿ ಕೆಡಹುವ ಕಾರ್ಯ ಒಂದು ನೆರವೇರಿತು. ಇನ್ನು ಕಾಮೋದೆ ಅಳುವಂತೆ ಮಾಡಬೇಕು. ಅವಳು ದುಃಖದಿಂದ ಕಣ್ಣೀರು ಸುರಿಸುವಂತೆ ಮಾಡಲು ಏನು ಉಪಾಯವೆಂದು ಮುನಿ ಕ್ಷಣಕಾಲ ಆಲೋಚಿಸಿದ. ಒಂದು ಉಪಾಯ ಹೊಳೆಯಿತು. ನೇರವಾಗಿ ಕಾಮೋದ ಪಟ್ಟಣಕ್ಕೆ ತೆರಳಿದ.

**ಕುಂಜಲ :-** ಮುನಿ ನಾರದ ಕಾಮೋದ ನಗರದಲ್ಲಿ ಕಾಮೋದೆಯ ಮಂದಿರವನ್ನು ಪ್ರವೇಶಿಸಿದ. ದೇವಿ ಆತನನ್ನು ಸ್ವಾಗತಿಸಿ ಆಸನವಿತ್ತು ಸತ್ಕರಿಸಿದಳು. ಮುನಿ ಆಕೆಯನ್ನು ಆಶೀರ್ವದಿಸಿ ಕೇಳಿದ.

**ನಾರದ :-** ದೇವಿ ಕ್ಷೇಮವೇ ?.

**ಕಾಮೋದಾ :-** ಮುನಿಯೇ ನಿಮ್ಮ, ವಿಷ್ಣುವಿನ ಅನುಗ್ರಹದಿಂದ ನಾನು ಸುಖವಾಗಿಯೇ ಇದ್ದೇನೆ. ಆದರೆ ಇತ್ತೀಚೆಗೆ ಮೈಯಲ್ಲಿ ಏಕೊ ಆಲಸ್ಯ, ಮನುಷ್ಯರಂತೆ

ನಾನೂ ನಿದ್ದೆ ಹೋಗುತ್ತಿದ್ದೇನೆ. ನಿದ್ದೆಯಲ್ಲಿ ಒಂದು ದುಃಸ್ವಪ್ನವನ್ನೂ ಕಂಡೆ. ಯಾರೋ ಒಬ್ಬರು ಬಂದು ಹೇಳಿದರು ವಿಷ್ಣು ಸಂಸಾರದಲ್ಲಿ ಬೀಳುತ್ತಾನೆ ಎಂದು. ಈ ಸ್ವಪ್ನವನ್ನು ನೋಡಿದ ಮೇಲೆ ಸದಾ ಕೊರಗುತ್ತಿದ್ದೇನೆ. ಮುನಿಯೆ, ಈ ಸ್ವಪ್ನಕ್ಕೇನು ಕಾರಣ ಹೇಳು.

**ನಾರದ :-** ಮಾನವರಿಗೆ ಸಾಮಾನ್ಯವಾಗಿ ವಾತಪಿತ್ತಕಫಗಳ ಪ್ರಕೋಪದಿಂದ ಸ್ವಪ್ನಗಳುಂಟಾಗುತ್ತವೆ. ದೇವತೆಗಳಿಗೆ ಸ್ವಪ್ನವಿಲ್ಲ. ನಿದ್ದೆಯೂ ಇಲ್ಲ. ಸೂರ್ಯೋದಯ ಕಾಲದಲ್ಲಿ ಮಾನವರು ಸುಸ್ವಪ್ನ ಕಂಡರೆ ಒಳ್ಳೆಯ ಫಲವಿದೆ.

ಗಾಳಿ ವೇಗದಿಂದ ಬೀಸಿದಾಗ ನೀರಹನಿ ಮೇಲೇಳುತ್ತದೆ. ಒಂದುಕ್ಷಣ ಕಂಡೂ ಕಾಣದಂತಿದ್ದು ಮಾಯವಾಗುತ್ತದೆ. ಹಾಗೆ ಪ್ರಕೃತಿ ಪಂಚಭೂತಗಳ ವಿಕಾರವೆಂಬ ಗಾಳಿಯ ವೇಗದಿಂದ ಆತ್ಮನ ತೇಜಸ್ಸು ಮೇಲೆದ್ದು ಪ್ರಕಾಶಿಸುತ್ತದೆ. ಇದುವೆ ಅಂತರಾತ್ಮ. ನೀರು, ನೀರಹನಿಗಳಿರುವ ಸಂಬಂಧವೆ ಆತ್ಮ ಅಂತರಾತ್ಮಗಳಿಗಿದೆ. ನೀರಹನಿಯಂತೆ ಆಗಾಗ ಕ್ಷಣಕಾಲ ದೃಶ್ಯವಾಗುತ್ತದೆ ಬಳಿಕ ಅದೃಶ್ಯವಾಗುತ್ತದೆ ಈ ಅಂತರಾತ್ಮ. ಆತ್ಮ ಸದಾಪ್ರಕಾಶಿಸುತ್ತಾನೆ. ಪಂಚಭೂತಗಳೂ ಸದಾ ಇರುತ್ತವೆ. ಅವುಗಳಿಂದ ನಿರ್ಮಿತವಾದ ಈ ಶರೀರ ನಾಶವಾಗುತ್ತದೆಯೆ ಹೊರತು ಆ ಪಂಚಭೂತಗಳು ಅವುಗಳ ಸಂಪರ್ಕದಲ್ಲಿರುವ ಆತ್ಮ ಇವು ನಾಶಹೊಂದುವುದಿಲ್ಲ. ಆತ್ಮ ಶುದ್ಧನಾಗಿದ್ದರೆ ಅಂತರಾತ್ಮ ಪ್ರಕೃತಿಯಿಂದ ಬದ್ಧನಾಗಿರುತ್ತಾನೆ. ಒಳ್ಳೆಯ ಆಹಾರ ಉಂಡರೆ ಅಂತರಾತ್ಮನಿಗೆ ಸುಖವಾಗುತ್ತದೆ, ಸುಖದಿಂದ ಆಲಸ್ಯ, ಆಲಸ್ಯದಿಂದ ಮನಸ್ಸಿನ ಉಪರತಿ, ನಿದ್ದೆ ಅದೊಂದು ರೀತಿಯ ಕತ್ತಲು, ನಾಡೀಮಾರ್ಗದಿಂದ ಸೂರ್ಯಮೇರುವನ್ನು ದಾಟಿ ಹೋದಾಗ ರಾತ್ರಿ ಉಂಟಾಗುತ್ತದೆ. ವಿಷಯಾಂಧಕಾರವೂ ತೊಲಗಿದರೆ ಆಗ ಅಂತರಾತ್ಮ ಪ್ರಕಾಶಿಸುತ್ತಾನೆ. ಪೂರ್ವಜನ್ಮದ ಸಂಸ್ಕಾರ ವಿಕಾರಗಳು ಅವನಿಗೆ ಕಾಣಿಸುತ್ತವೆ. ಅವುಗಳ ಪ್ರಪಂಚದಲ್ಲಿ ಆತ ಸುತ್ತುತ್ತಾನೆ. ಶರೀರ ದೋಷಗಳಿಂದ ಈ ಸ್ಥಿತಿ ಉಂಟಾಗಬಹುದು. ಇದು ಒಂದುಕ್ಷಣ. ಬಳಿಕ ಉದಾನವಾಯು ಸ್ಫುರಿಸಿ ಶಬ್ದ ಉಂಟುಮಾಡುತ್ತದೆ. ಆ ವಾಯು ಪ್ರಬಲಗೊಂಡು ಶರೀರವನ್ನು ನಿಶ್ಚೇಷ್ಟಗೊಳಿಸುತ್ತದೆ. ಶರೀರವಾಗ ಮೃತವಾದಂತಿರುತ್ತದೆ. ನಿದ್ದೆ ಅಂಗಾಂಗಗಳನ್ನು ಆವರಿಸುತ್ತದೆ. ಸ್ವಲ್ಪಕಾಲದ ಅನಂತರ ಆತ್ಮನ ಪ್ರಭಾವದಿಂದ ಉದಾನವಾಯುವಿನ ಬಲ ಕಮ್ಮಿಯಾಗುತ್ತದೆ. ಪಂಚಪ್ರಾಣ ವಾಯುಗಳೂ ಆ ಆತ್ಮನ ಪ್ರಭಾವದಿಂದಲೇ ದೇಹದಲ್ಲಿ ಸಂಚರಿಸುತ್ತಿರುತ್ತವೆ. ಉದಾನವಾಯುವಿನ ಬಲ ಕುಂದಿದಾಗ ಅಂತರಾತ್ಮ ತಿರುಗಿ ಪೂರ್ವಾನುಭವ ಸಂಸ್ಕಾರದ ವಿಕಾರಗಳನ್ನು ಕಾಣುತ್ತಾನೆ. ಅವು ನಾನಾ ವಿಧವಾಗಿದ್ದು ಶುಭವೊ ಅಶುಭವೊ ಆಗಿರಬಹುದು. ಶುಭಾಶುಭಕರ್ಮಗಳನ್ನು ಸೂಚಿಸಬಹುದು. ವಾತಪ್ರಕೋಪ ಮಾತ್ರದಿಂದ ಉಂಟಾದ ಸ್ವಪ್ನದಲ್ಲಿ ಗಿರಿದುರ್ಗಗಳಂಥ ಪ್ರದೇಶಗಳಲ್ಲಿ ಏರುವುದು ಇಳಿಯುವುದು ಮುಂತಾದುವನ್ನು ಮಾಡುತ್ತಾನೆ ಅಂತರಾತ್ಮ. ಕಫದೋಷವಿರುವಾಗ ನದಿ ಕೆರೆ ಮುಂತಾದ ಜಲಾಶಗಳನ್ನು ಕಾಣುತ್ತಾನೆ. ಪಿತ್ತದೋಷವಿರುವಾಗ ಬೆಂಕಿ ಚಿನ್ನಗಳಂಥ ಹೊಳೆಯುವ ಪದಾರ್ಥಗಳನ್ನು ಕಾಣುತ್ತಾನೆ. ಈ ದೋಷಗಳಿಲ್ಲದಿರುವಾಗ ಪ್ರಭಾತ ಕಾಲದಲ್ಲಿ ಕಾಣುವ ಸುಸ್ವಪ್ನ ದುಸ್ವಪ್ನಗಳು ಶುಭಾಶುಭಕರ್ಮಗಳನ್ನು ಸೂಚಿಸುತ್ತವೆ. ದೇವಿ, ನಿನಗೆ ಕಾಣಿಸಿದ ಸ್ವಪ್ನ ನಿಜವಾಗಿ ಪರಿಣಮಿಸುತ್ತದೆ.

**ಕಾಮೋದ** :- ಆ ಜಗನ್ನಾಥನ ರೂಪ ಪರಿಮಿತಿಗಳನ್ನು ದೇವತೆಗಳೂ ಕಂಡಿಲ್ಲ. ಅವನಲ್ಲಿ ಎಲ್ಲ ಪ್ರಪಂಚವೂ ಲೀನವಾಗುತ್ತದೆ. ಅವನೊಬ್ಬನೆ ಆತ್ಮ. ಅವನ ಮಾಯೆ ಈ ಸಂಸಾರ. ಅಂಥ ನನ್ನ ಸ್ವಾಮಿಯೂ ಸಂಸಾರದಲ್ಲಿ ಬೀಳುವನೆ? ಪಾಪಪುಣ್ಯಕರ್ಮಗಳಿಂದ ಬದ್ಧನಾದ ಜೀವ ಸಂಸಾರದಲ್ಲಿ ಬಿದ್ದಿರುತ್ತಾನೆ. ಹರಿ ಏಕೆ ಹಾಗೆ ಬೀಳುತ್ತಾನೆ ?

**ನಾರದ** :- ದೇವಿ, ಹರಿ ಏನು ಮಾಡಿದನೆಂಬುದನ್ನು ಕೇಳು. ಭೃಗು ಮುನಿಯ ಯಜ್ಞವನ್ನು ತಾನು ರಕ್ಷಿಸುವೆನೆಂದು ಮಾತುಕೊಟ್ಟು ಮಧ್ಯದಲ್ಲಿಯೇ ಇಂದ್ರನ ಕರೆ ಬಂದಿತೆಂದು ಹರಿ ದಾನವರೊಡನೆ ಹೋರಾಡಲು ಹೊರಟುಹೋದ. ಇತ್ತ ದಾನವರು ಯಜ್ಞನಾಶಮಾಡಿದಾಗ ಭೃಗುಮುನಿ ಕುಪಿತನಾಗಿ ಹರಿಯನ್ನು ಶಪಿಸಿದ, ಹತ್ತು ಜನ್ಮಗಳನ್ನು ಪಡೆ ಎಂದು. ಹರಿಯು ತನ್ನ ಕರ್ಮದ ಫಲ ಉಣ್ಣುತ್ತಾನೆ. ಆದರಿಂದ ನಿನಗೀ ದುಃಸ್ವಪ್ನ ಕಾಣಿಸಿತು. ಹೀಗೆ ಹೇಳಿ ನಾರದ ಬ್ರಹ್ಮಲೋಕಕ್ಕೆ ಹೊರಟುಹೋದ.

ಇತ್ತ ಕಾಮೋದೆ ಹರಿಗೆ ಬರಲಿರುವ ಕಷ್ಟಪರಂಪರೆಯನ್ನು ನೆನೆದು ಅಳತೊಡಗಿದಳು. ಗಂಗೆಯ ತೀರದಲ್ಲಿ ಕುಳಿತು ಕಣ್ಣೀರು ಸುರಿಸಿದಳು. ಆ ಕಣ್ಣೀರು ಗಂಗಾಪ್ರವಾಹಕ್ಕೆ ಬಿದ್ದಾಗ ಕಮಲಗಳಾಗಿ ಪರಿಣಮಿಸಿ ತೇಲುತ್ತ ವಿಹುಂಡನ ಕೈಗೆ ಬಂದು ಸೇರಿದವು. ವಿಷ್ಣುಮಾಯೆಯ ಮೋಹದಿಂದ ಮುಗ್ಧನಾದ ಆ ದಾನವನು ಆ ಕಮಲಗಳು ದುಃಖದ ಕಣ್ಣೀರಿಂದ ಉದ್ಭವಿಸಿದವುಗಳೆಂದು ತಿಳಿದುಕೊಳ್ಳಲಿಲ್ಲ. ಶುಕ್ರಾಚಾರ್ಯರು ಹೇಳಿದ್ದುದನ್ನೂ ಮರೆತಿದ್ದ, ಕಮಲಗಳು ಕೈಗೆ ಸಿಗುತ್ತಿವೆ ಎಂಬ ಆನಂದದಿಂದ ಅವನ್ನು ಶಿವನಿಗರ್ಪಿಸತೊಡಗಿದ. ಪಾರ್ವತಿ ಇದನ್ನು ಕಂಡು ಕುಪಿತಳಾಗಿ ಶಿವನ ಬಳಿ ನುಡಿದಳು.

**ಪಾರ್ವತಿ** :- ನಾಥ, ಈ ದಾನವನು ದುಃಖದಿಂದ ಉದ್ಭವಿಸಿದ ಹೂಗಳಿಂದ ನಿನ್ನನ್ನು ಪೂಜಿಸುತ್ತಿದ್ದಾನೆ. ಇದಕ್ಕೆ ಪ್ರತಿಫಲವಾಗಿ ಈತ ದುಃಖ ಸಂತಾಪಗಳನ್ನೇ ಪಡೆಯಬೇಕು. ಸುಖಪಡೆಯಲು ಯೋಗ್ಯನಲ್ಲ.

**ಶಿವ** :- ಕಾಮದ ಹುಚ್ಚಿನಲ್ಲಿ ಈತ ವಿವೇಕವನ್ನೇ ಮರೆತಿದ್ದಾನೆ. ದುಃಖದಿಂದ ಉದ್ಭವಿಸಿದ ಹೂಗಳಿಂದ ನನ್ನನ್ನು ಅರ್ಚಿಸುತ್ತಿದ್ದಾನೆ. ಅದರ ಫಲ ದುಃಖವೆ ಸರಿ. ದೇವಿ, ನೀನಾತನನ್ನು ನಿಗ್ರಹಿಸು.

ಶಿವನಾಣತಿಯಂತೆ ಪಾರ್ವತಿ ವಿಹುಂಡನ ವಧೆಯನ್ನು ಸಂಕಲ್ಪಿಸಿ ತಕ್ಕ ಉಪಾಯವನ್ನು ಆಲೋಚಿಸಿದಳು. ಬಳಿಕ ಬ್ರಾಹ್ಮಣ ವೇಷದಿಂದ ಬಂದು ಒಳ್ಳೆಯ ಪಾರಿಜಾತದ ಹೂಗಳಿಂದ ಶಿವನನ್ನರ್ಚಿಸಿದಳು. ಒಡನೆ ದಾನವನು ಬಂದು ಆ ಹೂಗಳನ್ನು ತೆಗೆದು ದುಃಖದಿಂದುದ್ಭವಿಸಿದ ಹೂಗಳಿಂದ ಅರ್ಚನೆ ಮಾಡಿದನು. ಅರ್ಚಿಸುವ ಕಾಲದಲ್ಲಿ ಅವನು ಧ್ಯಾನಿಸುತ್ತಿದ್ದುದು ಆ ಮೋಹಿನಿಯನ್ನೇ, ಅರ್ಚನೆ ಮುಗಿಸಿ ತನ್ನ ಕುಟೀರವನ್ನು ಸೇರಿಯೂ ಆ ಮೋಹಿನಿಯನ್ನೇ ನೆನೆದು ಕಾಮವಿಹ್ವಲತೆಯಿಂದ ಅಳುತ್ತ ಕುಳಿತುಕೊಂಡನು. ಹೀಗೆ ಪ್ರತಿದಿನ ಬ್ರಾಹ್ಮಣವೇಷದಿಂದ ಬಂದ ದೇವಿ ಪಾರಿಜಾತ ಹೂವಿನಿಂದ ಶಿವನನ್ನರ್ಚಿಸಿದೊಡನೆ ಈ ದಾನವ ಬಂದು ದುಃಖದಿಂದುದ್ಭವಿಸಿದ ಹೂಗಳಿಂದ ಅರ್ಚಿಸುತ್ತಲೇ ಇದ್ದ. ಇಷ್ಟು ಮಾತ್ರವಲ್ಲ. ತಾನೂ

ಅಳುತ್ತ ಲಿಂಗದ ಮೇಲೆ ತನ್ನ ಕಣ್ಣೀರನ್ನು ಸುರಿಸುತ್ತಿದ್ದ. ಒಂದು ದಿನ ದೇವಿ ದಾನವನನ್ನು ಪ್ರಶ್ನಿಸಿದಳು.

**ಪಾರ್ವತಿ :-** ಯಾರು ನೀನು ? ಪ್ರತಿದಿನ ಅಳುತ್ತಲೆ ಶಿವನನ್ನರ್ಚಿಸುವೆ ? ಶೋಕದಿಂದ ಹುಟ್ಟುವ ನಿನ್ನ ಅಪವಿತ್ರವಾದ ಕಣ್ಣೀರು ದೇವನ ತಲೆಯ ಮೇಲೆ ಬೀಳುತ್ತಿವೆ.

**ವಿಹುಂಡ :-** ನಾನು ಹಿಂದೆ ಕಾಮನಿಗೂ ಮೋಹಬರಿಸುವ ಓರ್ವ ಸುಂದರಿಯನ್ನು ಕಂಡು ಮೋಹಿಸಿದೆ. ಕಾಮವಿಹ್ವಲನಾಗಿ ಅವಳನ್ನು ಬೇಡಿದೆ. ಅವಳು ಹೇಳಿದಳು. ಏಳು ಕೋಟಿ ಕಾಮೋದಪುಷ್ಪಗಳಿಂದ ಶಿವನನ್ನರ್ಚಿಸು ಎಂದು. ನಾನು ಈಗ ಹಾಗೇ ಮಾಡುತ್ತಿದ್ದೇನೆ.

**ಪಾರ್ವತಿ :-** ಹಾಗಾದರೆ ಅರ್ಚನೆಯ ಕಾಲದಲ್ಲಿ ನೀನು ಶಿವನ ಧ್ಯಾನಮಾಡುತ್ತಿಲ್ಲ. ಆ ಕಾಮೋದೆಯ ರೂಪ ಹೇಗಿರುವುದು ? ಅವಳ ನಗುವಿನಿಂದ ಜನಿಸುವ ಹೂಗಳನ್ನು ನೀನು ಹೇಗೆ ಪಡೆಯುವೆ, ಹೇಳು.

**ವಿಹುಂಡ :-** ಬ್ರಾಹ್ಮಣನೆ, ನೀನು ಹೇಳುವುದು ನಿಜ. ನಾನು ಶಿವನ ಧ್ಯಾನ ಮಾಡುತ್ತಿಲ್ಲ. ಆ ಕಾಮೋದೆಯನ್ನೊಮ್ಮೆಯೂ ನಾನು ನೋಡಿಲ್ಲ. ಶುಕ್ರಾಚಾರ್ಯರ ಆದೇಶದಂತೆ ಶಿವನನ್ನು ಪೂಜಿಸುತ್ತಿದ್ದೇನೆ. ಗಂಗಾಪ್ರವಾಹದಲ್ಲಿ ತೇಲಿಬರುವ ಹೂಗಳನ್ನು ಆರಿಸಿ ಅವುಗಳಿಂದ ಶಿವನನ್ನರ್ಚಿಸುತ್ತೇನೆ.

**ಪಾರ್ವತಿ :-** ಮೂರ್ಖ, ನೀನಾರಿಸುವ ಆ ಎಲ್ಲ ಹೂಗಳು ಕಾಮೋದೆಯ ದುಃಖದ ಕಣ್ಣೀರಿನಿಂದ ಹುಟ್ಟಿದವುಗಳು. ಅವುಗಳಿಂದ ಶಿವನನ್ನರ್ಚಿಸುವೆ. ದಿವ್ಯಪುಷ್ಪಗಳಿಂದ ನಾನು ಅರ್ಚಿಸಿದರೆ ಅವುಗಳನ್ನು ದೂರ ಎಸೆದು ಶೋಕಪುಷ್ಪಗಳಿಂದ ಅರ್ಚಿಸುವೆ. ಇದರ ಫಲವನ್ನು ನೀನುಣಬೇಕು. ನಾನು ನಿನಗೆ ಶಿಕ್ಷೆ ವಿಧಿಸುತ್ತೇನೆ.

**ವಿಹುಂಡ :-** ನೀಚ, ನಾನು ಮಾಡುವ ಅರ್ಚನೆಯನ್ನು ನಿಂದಿಸುವೆಯ ? ಈ ನನ್ನ ಖಡ್ಗದಿಂದ ನಿನ್ನನ್ನು ಸೀಳಬಿಡುವೆನು.

ಮೃತ್ಯುವಿನ ಸೆಳೆತಕ್ಕೆ ಸಿಲುಕಿ ಆ ದಾನವ ವಿವೇಕ ಶೂನ್ಯನಾದ. ಬ್ರಾಹ್ಮಣ ವೇಷದ ದೇವಿಯನ್ನು ಹೊಡೆಯಲು ಕತ್ತಿಯನ್ನೆತ್ತಿದ. ಒಡನೆ ದೇವಿ ಕೋಪದಿಂದ ಹೂಂಕರಿಸಿದಳು. ವಜ್ರಾಘಾತದಿಂದ ಬೆಟ್ಟ ಉರುಳುವಂತೆ ಆತ ನಿಶ್ಶೇಷನಾಗಿ ನೆಲಕ್ಕೊರಗಿದ. ಅಂದಿನಿಂದ ಎಲ್ಲ ಲೋಕಗಳಿಗೂ ಪೀಡೆ ನಿವಾರಣೆಯಾಯಿತು. ನೆಮ್ಮದಿ ದೊರೆಯಿತು. ಮಗು, ಕಪಿಂಜಲ, ಗಂಗಾತೀರದಲ್ಲಿ ಅಳುತ್ತ ಕುಳಿತ ಕನ್ಯೆಯೇ ಕಾಮೋದೆ. ಅವಳೇಕೆ ಅಳುತ್ತಾಳೆ ಎಂಬುದನ್ನು ನಾನು ಹೇಳಿದೆ. ಹೀಗೆ ಹೇಳಿ ಕುಂಜಲ ಸುಮ್ಮನಾದ.

*ಇತಿ ಪದ್ಮ ಮಹಾಪುರಾಣ ಭಾಗ-೨ರ ಭೂಮಿಖಂಡದ ವೇನೋಪಾಖ್ಯಾನದಲ್ಲಿ ಗುರುತೀರ್ಥವರ್ಣನೆಯಲ್ಲಿ ಚ್ಯವನಚರಿತ್ರೆಯಲ್ಲಿ ಕಾಮೋದಾಖ್ಯಾನದಲ್ಲಿ ಹದಿನೆಂಟನೇಯ ಅಧ್ಯಾಯ ಮುಗಿದುದು*

—○—

**ವಿಷ್ಣು :-** ಕುಂಜಲನು ಮಾತು ನಿಲ್ಲಿಸಿದಾಗ ಮರದ ಕೆಳಗೆ ಕುಳಿತು ಎಲ್ಲವನ್ನೂ ಕೇಳುತ್ತಿದ್ದ ಚ್ಯವನ ಮುನಿ ಅವನನ್ನು ಕೇಳಿದ.

**ಚ್ಯವನ :-** ಗಿಳಿಯೆ, ನೀನಾರು ? ಪಕ್ಷಿ ರೂಪದಿಂದ ಕುಳಿತು ಧರ್ಮೋಪದೇಶವನ್ನು ಮಾಡುತ್ತಿರುವೆ ? ದೇವನೆ, ಗಂಧರ್ವನೆ, ವಿದ್ಯಾಧರನೆ ? ಯಾರ ಶಾಪದಿಂದ ಈ ಗಿಳಿಯ ಜನ್ಮ ಪಡೆದೆ ? ನಿನಗಿಂಥ ಅತೀಂದ್ರಿಯ ಜ್ಞಾನ ಹೇಗೆ ಉಂಟಾಯಿತು ? ನೀನು ಅಂಥ ತಪಸ್ಸು ಏನು ಮಾಡಿರುವೆ ? ಅಥವಾ ವೇಷಾಂತರದಿಂದ ಬಂದ ಸಿದ್ಧಪುರುಷನೆ, ನೀನು ?.

**ಕುಂಜಲ :-** ಮುನಿಯೆ, ನೀನಾರು ? ನಿನ್ನ ಕುಲಗೋತ್ರಗಳೇನು ? ವಿದ್ಯೆ ತಪಸ್ಸು ಪ್ರಭಾವಗಳೇನು ? ಏಕೆ ಊರನ್ನೆಲ್ಲ ಅಲೆಯುತ್ತಿರುವೆ ಇವೆಲ್ಲವೂ ನನಗೆ ಗೊತ್ತು. ನೀನು ಭೃಗುಮುನಿಯ ಗೋತ್ರದಲ್ಲಿ ಜನಿಸಿದ ಚ್ಯವನನಲ್ಲವೆ ? ನಾನು ದೇವನೂ ಅಲ್ಲ, ಗಂಧರ್ವನೂ ಅಲ್ಲ. ವಿದ್ಯಾಧರನೂ ಅಲ್ಲ. ಹಿಂದಿನ ಜನ್ಮದಲ್ಲಿ ನಾನು ಕಶ್ಯಪ ಗೋತ್ರದ ವಿದ್ಯಾಧರನೆಂಬ ಒಬ್ಬ ಶ್ರೋತ್ರಿಯ ಬ್ರಾಹ್ಮಣನ ಮೂರು ಮಂದಿ ಮಕ್ಕಳಲ್ಲಿ ಕಿರಿಯ ಮಗ ಧರ್ಮಶರ್ಮನಾಗಿದ್ದೆ. ನನ್ನ ಸೋದರರು ವಸುಶರ್ಮ, ನಾಮಶರ್ಮರು. ಇಬ್ಬರೂ ಒಳ್ಳೆಯ ವೇದಶಾಸ್ತ್ರಪಾರಂಗತರು. ನಾನು ಮಾತ್ರ ಮೂರ್ಖನಾಗಿ ವಿದ್ಯಾಭ್ಯಾಸವನ್ನು ಅಲಕ್ಷಿಸಿದೆ. ನಮ್ಮ ತಂದೆ ಒಂದು ದಿನ ನನ್ನನ್ನು ಕುರಿತು ಚಿಂತಿಸಿದರು. 'ನನ್ನ ಈ ಮಗನಿಗೆ ಧರ್ಮಶರ್ಮನೆಂಬ ಹೆಸರು ನಿರರ್ಥಕವಾಯಿತು. ಹೆಸರಿಗೆ ತಕ್ಕಂತೆ ವಿದ್ಯೆ ಗುಣಗಳು ಅವನಲ್ಲಿಲ್ಲ.' ಹೀಗೆ ಚಿಂತಿಸಿ ನನ್ನನ್ನು ಕರೆದು ದುಃಖದಿಂದ ಹೇಳಿದರು. 'ಮಗು, ಗುರುಕುಲದಲ್ಲಿ ವಾಸಮಾಡು, ವಿದ್ಯೆಕಲಿ.' ನಾನೆಂದೆ, 'ನಿತ್ಯ ಆ ಗುರುಗಳು ಹೊಡೆಯುತ್ತಾರೆ, ನಿಂದಿಸುತ್ತಾರೆ, ಹುಬ್ಬುಗಂಟಿಕ್ಕುತ್ತಾರೆ, ಆಹಾರ ನಿದ್ರೆ ಸರಿಯಾಗಿ ಇರುವುದಿಲ್ಲ ನನಗೆ ಅಂಥ ಗುರುಕುಲವಾಸ ಬೇಡ. ನಾನಿಲ್ಲಿಯೆ ಸುಖವಾಗಿ ಉಂಡುತಿಂದು ನಲಿಯುವೆ.'' ಅವರೆಂದರು. ''ಮೂರ್ಖ, ಹಾಗೆ ಮಾಡಬೇಡ. ವಿದ್ಯೆಯನ್ನು ಕಲಿ. ವಿದ್ಯೆಯಿಂದಲೆ ಸುಖ ಯಶಸ್ಸು ಕೀರ್ತಿ, ಅದರಿಂದಲೆ ಸ್ವರ್ಗಮೋಕ್ಷಗಳೂ ದೊರೆಯುತ್ತವೆ. ಮೊದಲಿಗೆ ದುಃಖವೆನಿಸಿದರೂ ಕೊನೆಗೆ ಸುಖ ಅದರಿಂದ ಸಿಗುತ್ತದೆ'' ತಂದೆಯ ಮಾತನ್ನು ನಾನು ಅಲಕ್ಷಿಸಿದೆ. ದಿನಗಳುರುಳಿದುವು. ನಾನು ಎಲ್ಲ ಊರುಗಳನ್ನು ಅಲೆಯತೊಡಗಿದೆ. ಹಣದ ಅಪವ್ಯಯಮಾಡಿದೆ. ಜನ ನನ್ನನ್ನು ನೋಡಿ ಉಪಹಾಸ ಮಾಡಿದರು. ನಿಂದಿಸಿದರು. ನಾನು ಲಜ್ಜೆಯಿಂದ ಆತ್ಮಹತ್ಯೆ ಮಾಡಿಕೊಳ್ಳುವುದೆ ಲೇಸೆಂದು ಬಗೆಯುವಂತಾಯಿತು. ನನಗೆ ವಿದ್ಯೆ ಬೇಕೆನಿಸಿತು. ಆದರೆ ಯಾರು ಗುರು ?

ಹೀಗೆ ಚಿಂತಿಸುತ್ತ ಕಾಲಕಳೆದೆ. ಮುಪ್ಪು ಅಡರಿತು. ಒಂದು ದೇವಾಲಯದಲ್ಲಿ ದುಃಖದಿಂದ ಯೋಚಿಸುತ್ತ ಕುಳಿತಿದ್ದ ನನಗೆ ಒಬ್ಬ ಸಿದ್ಧಪುರುಷನ ದರ್ಶನ ಲಭಿಸಿತು. ಅವನು ನೆಲೆಯಿಲ್ಲದೆ ಅಲೆಯುತ್ತ ಜಿತೇಂದ್ರಿಯನಾಗಿ ಏಕಾಂತದಲ್ಲಿದ್ದು ಆನಂದಮಗ್ನನಾಗುತ್ತಿದ್ದ. ನಿಸ್ಪೃಹನಾಗಿದ್ದ. ಪರಬ್ರಹ್ಮನ ಧ್ಯಾನಮಾಡುತ್ತ

ಸಮಾಧಿಯಲ್ಲಿ ಕುಳಿತುಕೊಳ್ಳುತ್ತಿದ್ದ. ಅವನನ್ನು ಭಕ್ತಿಯಿಂದ ನಮಿಸಿ ದೈನ್ಯದಿಂದ ಅವನೆದುರು ತಲೆಬಾಗಿ ನಿಂತೆ. ಆತ ಕೇಳಿದ, ಬ್ರಾಹ್ಮಣನೆ ಏಕೆ ದುಃಖಿಸುವೆ ? ನಾನು ನನ್ನ ಪೂರ್ವ ವೃತ್ತಾಂತವನ್ನೆಲ್ಲ ತಿಳಿಸಿ 'ನಾನು ಮೂಢ, ಜ್ಞಾನೋಪದೇಶ ಮಾಡು' ಎಂದು ಬೇಡಿದೆ. ಅವನ ಉಪದೇಶಿಸಲು ತೊಡಗಿದ.

**ಸಿದ್ಧ :-** ಜ್ಞಾನದ ಸ್ವರೂಪವನ್ನು ಹೇಳುತ್ತೇನೆ, ಕೇಳು. ಜ್ಞಾನಕ್ಕೆ ಕೈಕಾಲುಕಣ್ಣು ಕಿವಿಗಳಿಲ್ಲ, ದೇಹವಿಲ್ಲ. ಕಣ್ಣಿನಿಂದ ನೋಡಲು ಸಾಧ್ಯವಿಲ್ಲ. ಆಕಾರವಿಲ್ಲ. ಆದರೆ ಅದು ಎಲ್ಲವನ್ನೂ ತಿಳಿಯುತ್ತದೆ. ಎಲ್ಲ ಕಡೆ ಹೋಗುತ್ತದೆ. ಸೂರ್ಯ ಚಂದ್ರ ಅಗ್ನಿಗಳು ಲೋಕದಲ್ಲಿ ಎಲ್ಲವನ್ನೂ ಬೆಳಗಿಸುತ್ತವೆ. ಆದರೆ ಶರೀರದೊಳಗಿರುವ ಈ ಚೈತನ್ಯವನ್ನು ಬೆಳಗಿಸಲಾರವು. ವಿಷ್ಣುಮಾಯೆಗೆ ಸಿಲುಕಿದವರು ಅದನ್ನು ನೋಡಲಾರರು. ಅದುವೆ ಎಲ್ಲ ಅಂಧಕಾರವನ್ನೂ ತೊಲಗಿಸುವ ದೀಪ. ಪ್ರಾಣಿಗಳ ಹೃದಯದಲ್ಲಿ ಅದು ಇರುತ್ತದೆ. ಕಾಮ, ಮೋಹ ಮೊದಲಾದುವನ್ನು ವಿವೇಕಾಗ್ನಿಯಿಂದ ಸುಟ್ಟು ಇಂದ್ರಿಯ ನಿಗ್ರಹಮಾಡಿಕೊಂಡರೆ ಈ ಜ್ಞಾನದ ದೀಪ ಬೆಳಗುತ್ತದೆ, ಎಲ್ಲವನ್ನೂ ಯಥಾರ್ಥವಾಗಿ ತೋರಿಸುತ್ತದೆ. ನೀನು ಮೊದಲು ಇಂದ್ರಿಯಗಳನ್ನು ನಿಗ್ರಹಿಸಿ ಶತ್ರುಮಿತ್ರರಲ್ಲಿ ಸಮತ್ವವನ್ನು ಸಂಪಾದಿಸು. ನಿಃಸಂಗ ನಿಸ್ಪೃಹನಾಗಿ ಏಕಾಂತದಲ್ಲಿ ಕುಳ್ಳಿರು. ಆಗ ಸರ್ವಜ್ಞನಾಗುವೆ. ಒಂದು ಕಡೆ ಕುಳಿತೇ ಮೂಲೋಕದಲ್ಲಿ ನಡೆವ ಎಲ್ಲ ವೃತ್ತಾಂತವನ್ನೂ ನನ್ನ ಅನುಗ್ರಹದಿಂದ ತಿಳಿಯಬಲ್ಲವನಾಗುವೆ.

**ಕುಂಜಲ :-** ಸಂಸರ್ಗದಿಂದಲೆ ಪಾಪ, ನಿಸರ್ಗದಿಂದಲೆ ಪುಣ್ಯ. ಒಮ್ಮೆ ಒಬ್ಬ ಬೇಡ ಒಂದು ಗಿಳಿಮರಿಯನ್ನು ಹಿಡಿದು ಮಾರುವುದಕ್ಕಾಗಿ ಬಂದ. ಅದರ ರೂಪ ಸೌಂದರ್ಯ ಮಾತಿನ ಮೋಡಿಗಳನ್ನು ಕಂಡು ಒಬ್ಬ ಬ್ರಾಹ್ಮಣನು ಅದನ್ನು ಕೊಂಡು ಪ್ರೀತಿಯಿಂದ ನನಗೆ ಕೊಟ್ಟ. ನಾನು ನಿತ್ಯಜ್ಞಾನಧ್ಯಾನನಿರತನಾಗಿದ್ದರೂ ಆ ಗಿಳಿಮರಿ ನನ್ನ ಕೈಯಲ್ಲಿಯೇ ಸದಾಕುಳಿತು ಮುದ್ದುಮುದ್ದಾಗಿ ಮಾತನಾಡುತ್ತ ನನ್ನನ್ನು ಮುಗ್ಧನನ್ನಾಗಿ ಮಾಡಿತು. ಆದ್ದರಿಂದ ನಾನು ಅದನ್ನು ಮಗನಂತೆ ಪ್ರೀತಿಯಿಂದ ನೋಡತೊಡಗಿದೆ. 'ಅಪ್ಪ, ಅಪ್ಪ, ಬಂದೆಯಾ ಕುಳಿತುಕೊಳ್ಳು' ಹೀಗೆ ಅದು ಮಾತನಾಡುತಿತ್ತು. ಸ್ನಾನಮಾಡು, ದೇವರ ಪೂಜೆಮಾಡು ಎಂದೂ ಹೇಳುತ್ತಿತ್ತು. ಅದರ ಮುದ್ದು ಮಾತುಗಳನ್ನು ಕೇಳುತ್ತ ಕುಳಿತರೆ ಜ್ಞಾನವೆಲ್ಲ ಮರೆತು ಹೋಗುತ್ತಿತ್ತು.

ಒಮ್ಮೆ ನಾನು ಹಣ್ಣು ಹೂಗಳನ್ನು ತರಲು ಕಾಡಿಗೆ ಹೋಗಿದ್ದಾಗ ಇತ್ತ ಒಂದು ಬೆಕ್ಕು ಆ ಗಿಳಿಮರಿಯನ್ನು ಹಿಡಿದು ತಿಂದಿತ್ತು. ನಾನು ಹಿಂತಿರುಗಿ ಬಂದು ಸ್ನೇಹಿತರ ಮಾತಿನಿಂದ ಆ ದುರ್ಘಟನೆಯನ್ನು ತಿಳಿದು ಶೋಕಾವೇಗ ತಡೆಯಲಾರದೆ ಪ್ರಲಾಪ ಮಾಡತೊಡಗಿದೆ. ಶುಕರಾಜ, ಪಂಡಿತ, ಶ್ಲೋಕರಾಜ, ರಾಮಚಂದ್ರ ಎಂದು ಮೊದಲಾಗಿ ಆ ಗಿಳಿಮರಿಗೆ ಮುದ್ದಿನಿಂದ ನಾನಿಟ್ಟಿದ್ದ ಹೆಸರುಗಳನ್ನು ಉಚ್ಚರಿಸತೊಡಗಿದೆ. ''ಮಗು ಪಕ್ಷಿರಾಜ ನಿನ್ನಂತೆ ಇನ್ನಾರು ನನ್ನೊಡನೆ ಸವಿ ಮಾತುಗಳನ್ನಾಡುವರು ? ವಿಚಿತ್ರ ಕಥೆಗಳನ್ನು ಯಾರು ಹೇಳುವರು? ಎಂದು ಮುಂತಾಗಿ ಗೋಳಿಡುತ್ತ ದುಃಖದ ಆವೇಗದಿಂದ ಮರಣವನ್ನಪ್ಪಿದೆ. ನಾನು ಸಾಯುವಾಗ ಆ ಗಿಳಿಮರಿಯನ್ನೇ ಧ್ಯಾನಿಸುತ್ತಿದ್ದುದರಿಂದ

ಈ ಜನ್ಮದಲ್ಲಿ ಗಿಳಿಯಾಗಿ ಹುಟ್ಟಿ ಗರ್ಭವಾಸದಲ್ಲಿ ಪಶ್ಚಾತ್ತಾಪ ಪಟ್ಟೆ. ನಾನು ಮೂಢನಾಗಿ ಏನೋ ಮಾಡಿಕೊಂಡೆನಲ್ಲ ಎಂದು ಪರಿತಪಿಸಿದೆ. ಅದರಿಂದಲೂ ನನ್ನ ಗುರುವಿನ ಅನುಗ್ರಹದಿಂದಲೂ ನಾನು ಜ್ಞಾನಿಯಾಗಿದ್ದೇನೆ. ಭೂತ ಭವಿಷ್ಯತ್ ವರ್ತಮಾನಗಳನ್ನರಿಯ ಬಲ್ಲೆ. ಇಲ್ಲಿದ್ದುಕೊಂಡೇ ಲೋಕದಲ್ಲಿ ಎಲ್ಲವನ್ನೂ ಕಾಣಬಲ್ಲೆ.

**ಮರಣೇ ಯಾದೃಶೋ ಭಾವಃ ಪ್ರಾಣಿನಾಂ ಪರಿಜಾಯತೇ ।**
**ತಾದೃಶಾಸ್ಯುಸ್ತು ಸತ್ವಾಸ್ತೇ ತದ್ರೂಪಾಸ್ತತ್ಪರಾಯಣಾಃ ॥**

ಮರಣಕಾಲದಲ್ಲಿ ಯಾವ ಮನೋಭಾವವಿರುತ್ತದೋ ಅದಕ್ಕನುಗುಣವಾಗಿ ಶರೀರ ಗುಣ ನಡತೆಗಳು ಮುಂದಿನ ಜನ್ಮದಲ್ಲಿ ಲಭಿಸುತ್ತವೆ.

**ನಾಸ್ತಿ ತೀರ್ಥಂ ಗುರುಸಮಂ ಬಂಧಚ್ಛೇದಕರಂ ದ್ವಿಜ**

ಗುರುವಿಗೆ ಸಮಾನವಾದ, ಸಂಸಾರ ಬಂಧನವನ್ನು ಹರಿದೊಗೆಯುವ ಪವಿತ್ರ ಸಾಧನ ಇನ್ನೊಂದಿಲ್ಲ.

ಮಣ್ಣು, ನೀರು ಬಾಹ್ಯಮಲವನ್ನು ಕಳೆಯುತ್ತವೆ. ಗುರುತೀರ್ಥವು ಮಾತ್ರ ಜನ್ಮಾಂತರದಲ್ಲಿ ಮಾಡಿದ ಪಾಪವೆಂಬ ಕೊಳೆಯನ್ನು ನೀಗಬಲ್ಲದು.

**ವಿಷ್ಣು :-** ಕುಂಜಲ ಈ ರೀತಿಯಾಗಿ ನುಡಿದು ಸುಮ್ಮನಾದ. ಹೀಗೆ ಗುರುತೀರ್ಥದ ಪ್ರಭಾವವನ್ನು ವರ್ಣಿಸಿದ್ದೇನೆ. ರಾಜನೆ, ನೀನು ಇನ್ನೇನನ್ನು ಅಪೇಕ್ಷಿಸುವೆ, ಹೇಳು.

**ವೇನ :-** ನಾನು ರಾಜ್ಯವನ್ನು ಬೇಡುವುದಿಲ್ಲ. ಬೇರೆ ಸುಖಭೋಗವೂ ಬೇಡ. ನಿನ್ನ ಶರೀರವನ್ನು ಪ್ರವೇಶಿಸಬೇಕೆಂಬ ಒಂದು ಬಯಕೆಮಾತ್ರವಿದೆ. ಅದನ್ನು ಪೂರೈಸು.

**ವಿಷ್ಣು :-** ರಾಜನೆ, ಅಶ್ವಮೇಧ, ರಾಜಸೂಯ ಯಾಗಗಳನ್ನುಮಾಡು. ಗೋ, ಭೂಮಿ, ಸುವರ್ಣ, ಅನ್ನ, ನೀರು ಮುಂತಾದವನ್ನು ದಾನಮಾಡು. ಅದರಿಂದ ಬ್ರಹ್ಮಹತ್ಯೆಯಂಥ ಪಾಪಗಳೂ ಪರಿಹಾರವಾಗುವವು. ನಾಲ್ಕು ಪುರುಷಾರ್ಥಗಳೂ, ಲಭಿಸುವವು. ಋಷಿಗಳ ದರ್ಶನ ಸ್ಪರ್ಶನಗಳಿಂದ ನಿನ್ನ ಪಾಪವೆಲ್ಲ ಪರಿಹಾರವಾಗಿದೆ. ಯಜ್ಞದಾನಗಳನ್ನು ಮಾಡು; ನನ್ನ ಶರೀರವನ್ನು ಆಗ ಪ್ರವೇಶಿಸುವೆ. ಹೀಗೆ ಹೇಳಿ ವಿಷ್ಣು ಅಂತರ್ಧಾನ ಹೊಂದಿದ.

**ಸೂತ :-** ವಿಷ್ಣು ಅಂತರ್ಧಾನ ಹೊಂದಿದಾಗ ವೇನ ಕ್ಷಣಕಾಲ ಅಚ್ಚರಿಯಿಂದ ದೇವನೆಲ್ಲಿಗೆ ಹೋದನೆಂದು ಚಿಂತಿಸಿ ಬಳಿಕ ಆನಂದದಿಂದ ರಾಜಧಾನಿಗೆ ಹಿಂತಿರುಗಿದ. ಪೃಥುರಾಜನನ್ನು ಪ್ರೀತಿಯಿಂದ ಕರೆದು ನುಡಿದ.

**ವೇನ :-** ಮಗು, ನೀನು ನನ್ನನ್ನು ಪಾಪದ ಮಡುವಿನಿಂದ ಪಾರುಮಾಡಿದೆ. ನನ್ನ ವಂಶವನ್ನು ಬೆಳಗಿಸಿದೆ. ನನ್ನ ತಪ್ಪುಗಳಿಂದ ಹಾಳಾಗುತ್ತಿದ್ದ ವಂಶ ನಿನ್ನ ಗುಣಗಳಿಂದ ಶೋಭೆಯನ್ನು ಪಡೆಯಿತು. ನಾನೀಗ ಅಶ್ವಮೇಧಯಾಗವನ್ನುಮಾಡಿ ಅನೇಕ ದಾನಗಳನ್ನಿತ್ತು ವಿಷ್ಣುಲೋಕವನ್ನು ಸೇರಲುಬಯಸಿದ್ದೇನೆ ತಕ್ಕ ಏರ್ಪಾಡುಗಳನ್ನು ಮಾಡು. ಶ್ರೋತ್ರಿಯರನ್ನಾಹ್ವಾನಿಸು.

**ಪೃಥು :-** ಮಹಾರಾಜ, ನೀನು ರಾಜ್ಯವನಾಳು. ಬೇಕಾದ ಸುಖಭೋಗಗಳನ್ನು ಅನುಭವಿಸು. ಯಜ್ಞಗಳಿಂದ ಹರಿಯನ್ನು ಆರಾಧಿಸು.

ಹೀಗೆ ಹೇಳಿ ರಾಜ್ಯದಲ್ಲಿ ಒಂದು ಘೋಷಣೆಯನ್ನು ಹೊರಡಿಸಿದ. 'ವೇನ ಮಹಾರಾಜ ರಾಜ್ಯವನ್ನು ಆಳುತ್ತಾನೆ. ಅವನಾಜ್ಞೆ ಉಲ್ಲಂಘಿಸಿ ಪಾಪಾಚರಣೆ ಮಾಡುವವರಿಗೆ ಮರಣದಂಡನೆ ವಿಧಿಸಲಾಗುತ್ತದೆ. ಎಲ್ಲರೂ ದಾನಯಜ್ಞಗಳಿಂದ ವಿಷ್ಣುವನ್ನಾರಾಧಿಸಬೇಕು.' ಎಂದು. ಬಳಿಕ ಪೃಥು ನೂರು ವರ್ಷಗಳ ಕಾಲ ಬ್ರಹ್ಮನನ್ನು ತಪಸ್ಸುಮಾಡಿ ಒಲಿಸಿಕೊಂಡ. ಬ್ರಹ್ಮನು ಮೈದೋರಿ "ರಾಜನೆ ನಿನ್ನ ಬಯಕೆ ಏನು ಎಂದು ಕೇಳಿದ."

**ಪೃಥು :-** ದೇವ, ನನ್ನ ತಂದೆ ಮೇನ ಮಹಾರಾಜ ರಾಜ್ಯವನ್ನಾಳುತ್ತಾನೆ. ಅವನ ರಾಜ್ಯದಲ್ಲಿ ಪಾಪಾಚರಣೆ ಮಾಡುವವರ ಶಿರಸ್ಸನ್ನು ವಿಷ್ಣು ಚಕ್ರದಿಂದ ತುಂಡರಿಸಿ ಶಿಕ್ಷಿಸಲಿ. ಅವರ ತಲೆಗಳು ಮಾಗಿದ ಹಣ್ಣುಗಳುದುರುವಂತೆ ಬೀಳಲಿ. ಪ್ರಜೆಗಳ ಪಾಪದಿಂದ ದೂರೆ, ವೇನ ಮಹಾರಾಜ ಲಿಪ್ತನಾಗದಿರಲಿ.

**ಬ್ರಹ್ಮ :-** ನಿನ್ನ ತಂದೆ ನಿನ್ನಂಥ ಸತ್ಪುತ್ರನ ಜನನದಿಂದಲೂ ವಿಷ್ಣುವಿನ ಉಪದೇಶದಿಂದಲೂ ಪಾಪ ನಿರ್ಮುಕ್ತನಾಗಿದ್ದಾನೆ. ಆದರೂ ನಿನ್ನ ಬಯಕೆ ಈಡೇರಲಿ.

ಪೃಥು ಹಿಂತಿರುಗಿ ಬಂದು ಪ್ರಜಾಪಾಲನೆಯಲ್ಲಿ ತಂದೆಗೆ ನೆರವಾದ. ಆಗ ಯಾರೂ ಪಾಪವನ್ನಾಚರಿಸುತ್ತಿದ್ದಿಲ್ಲ. ಆಚರಿಸಿದವನಿಗೆ ಶಿರಚ್ಛೇದದ ಶಿಕ್ಷೆ ಆಗುತ್ತಿತ್ತು. ವಿಷ್ಣು ಚಕ್ರ ಅದೃಶ್ಯವಾಗಿ ಸಂಚರಿಸುತ್ತಿದ್ದು ಅವರ ತಲೆಗಳನ್ನು ಉದುರಿಸುತ್ತಿತ್ತು. ಇದರಿಂದ ಪ್ರಜೆಗಳೆಲ್ಲರೂ ದಾನಧರ್ಮಗಳನ್ನಾಚರಿಸಿ ಸುಖದಿಂದ ಬಾಳಿದರು.

**ಸೂತ :-** ವೇನನಾಜ್ಞೆಯಂತೆ ಪೃಥು ಯಾಗಕ್ಕೆ ತಕ್ಕ ಏರ್ಪಾಡುಗಳನ್ನು ಮಾಡಿದ. ನಾನಾ ದೇಶಗಳಿಂದ ಉತ್ತಮ ಬ್ರಾಹ್ಮಣರನ್ನೂ ಕರೆಸಿದ. ವೇನನು ಅಶ್ವಮೇಧಯಾಗವನ್ನು ಮಾಡಿ ನಾನಾ ವಿಧದ ದಾನಗಳನ್ನೂ ಕೊಟ್ಟು ವಿಷ್ಣುಲೋಕವನ್ನು ಸೇರಿದ. ಬಳಿಕ ಪೃಥು ಸಿಂಹಾಸನವನ್ನೇರಿ ಮೂರು ಲೋಕವನ್ನಾಳಿದ ಪ್ರಜೆಗಳನ್ನೂ ರಂಜಿಸಿದ.

ಈ ಪದ್ಮಪುರಾಣದಲ್ಲಿ ಮೊದಲನೆಯದು ಸೃಷ್ಟಿಖಂಡ. ಎರಡನೆಯದು ಭೂಮಿಖಂಡ. ಈ ಖಂಡದ ಒಂದು ಶ್ಲೋಕದ ಶ್ರವಣದಿಂದ ಒಂದು ದಿನ ಎಲ್ಲ ಪಾಪ ಪರಿಹಾರವಾಗುತ್ತದೆ. ಒಂದು ಅಧ್ಯಾಯದ ಶ್ರವಣಮಾಡಿದರೆ ಪರ್ವಕಾಲದಲ್ಲಿ ಸಾವಿರ ಗೋದಾನ ಮಾಡಿದಂತೆ. ಈ ಪುರಾಣವನ್ನು ನಿತ್ಯ ಪಾರಾಯಣ ಮಾಡುತ್ತಿದ್ದರೆ ಕಲಿಯುಗದಲ್ಲಿ ವಿಘ್ನಗಳುಂಟಾಗುವುದಿಲ್ಲ.

**ವ್ಯಾಸ :-** ಕಲಿಯುಗದಲ್ಲಿ ಶ್ರೀ ಪದ್ಮಪುರಾಣವನ್ನು ಪಠಿಸುವವನಿಗೆ ವಿಘ್ನಗಳು ಹೇಗೆ ದೂರವಾಗುವುವು ?

**ಬ್ರಹ್ಮ :-** ಈ ಪುರಾಣಕ್ಕೆ ಅಶ್ವಮೇಧದ ಫಲವನ್ನೀವ ಸಾಮರ್ಥ್ಯವಿದೆ. ಕಲಿಯುಗದಲ್ಲಿ ಅಶ್ವಮೇಧ ನಡೆಯುವುದಿಲ್ಲ. ಅದರ ಫಲವನ್ನು ಕೊಡಲು ಈ ಪುರಾಣವಿದೆ. ಪಾಪಿಗಳು ಈ ಯುಗದಲ್ಲಿ ಪದ್ಮಪುರಾಣವನ್ನು ಶ್ರವಣಮಾಡುವುದಿಲ್ಲ. ನರಕಕ್ಕೆ ಹೋಗುವವರು ನಾಲ್ಕು ಪುರುಷಾರ್ಥಗಳನ್ನು ಕೊಡುವ ಈ ಪುರಾಣವನ್ನೇಕೆ ಕೇಳುವರು? ಭಕ್ತಿ ಶ್ರದ್ಧೆಗಳಿಂದ ಕೇಳಬಯಸುವವನಿಗೆ ಯಾವ ವಿಘ್ನಗಳೂ ಉಂಟಾಗುವುದಿಲ್ಲ. ಅಶ್ರದ್ಧೆ ಲೋಭಗಳು ಶ್ರೋತೃಗಳಲ್ಲಿ ಕಾಣಿಸಿಕೊಂಡರೆ ವಿಷ್ಣುಮಾಯೆ ಅವರನ್ನು ವಿನಾಶದೆಡೆಗೆ ಸೆಳೆದೊಯ್ಯುತ್ತದೆ.

ಈ ಪುರಾಣ ಶ್ರವಣಮಾಡಿದವನು ವೈಷ್ಣವ ಮಹಾಮಂತ್ರಗಳಿಂದಲೂ ವಿಷ್ಣುಸೂಕ್ತಗಳಿಂದಲೂ ಹೋಮಮಾಡಬೇಕು. 'ವಿಷ್ಣೋರರಾಟ' 'ಸಹಸ್ರಶೀರ್ಷಾ' 'ಇದಂ ವಿಷ್ಣುಃ' 'ಆಬ್ರಹ್ಮ' 'ತ್ರ್ಯಂಬಕಂ' ಮಂತ್ರಗಳಿಂದಲೂ ದ್ವಾದಶಾಕ್ಷರದಿಂದಲೂ ನೂರೆಂಟು ಬಾರಿ ತಿಲಆಜ್ಯಪಲಾಶಸಮಿತ್ತುಗಳಿಂದ ಹೋಮಮಾಡಬೇಕು. ನವಗ್ರಹ ಪೂಜೆಯನ್ನು ಮಾಡಬೇಕು. ಗಣೇಶ ಶಾರದೆ ಚಂಡಿಕೆಯರನ್ನೂ ಕ್ಷೇತ್ರಪಾಲನನ್ನೂ ತಿಲ ತಂಡುಲ ಅಜ್ಯ ಆಹುತಿಗಳಿಂದ ಸಮಂತ್ರಕವಾಗಿ ಪೂಜಿಸಬೇಕು. ಬ್ರಾಹ್ಮಣರಿಗೆ ದಕ್ಷಿಣೆ ನೀಡಬೇಕು ಗೋದಾನ ಮಾಡಬೇಕು. ಆಗ ಪುರಾಣದಿಂದ ಸಿದ್ಧಿ ಲಭಿಸುತ್ತದೆ. ವಿಘ್ನಗಳು ನಾಶಹೊಂದುತ್ತವೆ. ಅಶ್ರದ್ಧೆಯಿಂದ ಸುಮ್ಮನಿದ್ದರೆ ನಾನಾ ವಿಧದ ರೋಗಗಳು ಬಂಧು ವಿಯೋಗ, ಧನನಾಶ ಮುಂತಾದ ರೀತಿಯಲ್ಲಿ ವಿಘ್ನಗಳು ತಲೆದೋರುವವು.

ಶಕ್ತಿ ಇಲ್ಲದವರು ಏಕಾದಶಿ ಉಪಾವಾಸವನ್ನುಮಾಡಿ ಮಧುಸೂದನನ್ನು ಪೂಜಿಸಿ ಬ್ರಾಹ್ಮಣಭೋಜನವನ್ನು ಮಾಡಿಸಿ ಯಥಾಶಕ್ತಿ ಹವಿಸ್ಸನ್ನು ಕೇಶವನಿಗೆ ಆಹುತಿಯಿತ್ತು ಬಂಧು-ಬಾಂಧವರೊಂದಿಗೆ ತಾವೂ ಭೋಜನಮಾಡಿದರೆ ಪುರಾಣ ಶ್ರವಣದ ಫಲ ಸಿದ್ಧಿಸುವದು.

ಕೃತಯುಗದಲ್ಲಿ ಈ ಪುರಾಣದ ಒಂದೂ ಕಾಲುಲಕ್ಷಶ್ಲೋಕಗಳನ್ನು ಜನರು ಶ್ರವಣ ಮಾಡುತ್ತಿದ್ದರು. ತ್ರೇತಾಯುಗದಲ್ಲಿ ಅರ್ಧಲಕ್ಷ ಮತ್ತು ಎರಡು ಸಾವಿರ ದ್ವಾಪರದಲ್ಲಿ ಇಪ್ಪತ್ತೆರಡುಸಾವಿರ, ಕಲಿಯುಗದಲ್ಲಿ ಹನ್ನೆರಡು ಸಾವಿರ ಶ್ಲೋಕಗಳನ್ನು ಪಠಿಸುತ್ತಾರೆ.

ಬೇರೆಲ್ಲ ಜಪಧ್ಯಾನ ಶ್ರವಣಗಳನ್ನು ಬಿಟ್ಟರೂ ಈ ಶ್ರೀ ಪದ್ಮಪುರಾಣವನ್ನು ಮಾತ್ರ ತಪ್ಪದೆ ಕೇಳಲೇಬೇಕು. ಸೃಷ್ಟಿಖಂಡ, ಭೂಮಿಖಂಡ, ಸ್ವರ್ಗಖಂಡ, ಪಾತಾಳಖಂಡ ಮತ್ತು ಉತ್ತರಖಂಡ ಹೀಗೆ ಐದು ಖಂಡಗಳನ್ನು ಕ್ರಮವಾಗಿ ಶ್ರವಣಮಾಡಿದರೆ ಸಾವಿರಾರು ಗೋದಾನಗಳನ್ನು ಮಾಡಿದಂತಾಗುತ್ತದೆ. ಮಹಾಭಾಗ್ಯ ಲಭಿಸುತ್ತದೆ. ಮೋಕ್ಷವೂ ದೊರೆಯುತ್ತದೆ. ಇದರಲ್ಲಿ ಸಂಶಯವಿಲ್ಲ.

*ಶ್ರೀ ವ್ಯಾಸಪ್ರಣೀತ ಪದ್ಮಮಹಾಪುರಾಣ ಭಾಗ - ೨ರ ಭೂಮಿಖಂಡದಲ್ಲಿನ ವೇನೋಪಾಖ್ಯಾನದಲ್ಲಿ ವೇನನ ಅಶ್ವಮೇಧಯಾಗ ಎಂಬ ಹತ್ತೊಂಬತ್ತನೇಯ ಅಧ್ಯಾಯ ಮುಗಿಯುವುದರೊಂದಿಗೆ*

**ಭೂಮಿಖಂಡ ಸಂಪೂರ್ಣವಾಯಿತು**

—o—

## ಪದ್ಮ ಮಹಾಪುರಾಣದ

# ಸ್ವರ್ಗಖಂಡ

ಬ್ರಹ್ಮಾಂಡೋತ್ಪತ್ತಿ | ಅಧ್ಯಾಯ - ೧

**ನಮಾಮಿ ಗೋವಿಂದ ಪದಾರವಿಂದಂ ಸದೇಂದಿರಾ ವಂದಿತ ಮುತ್ತಮಾಢ್ಯಂ॥**
**ಜಗಜ್ಜನಾನಾಂ ಹೃದಿ ಸಂನಿವಿಷ್ಟಂ ಮಹಾಜನೈಕಾಯನಮುತ್ತಮೋತ್ತಮಂ॥**

ಲೋಕದ ಜನರ ಹೃದಯದಲ್ಲಿ ನೆಲೆಸಿರುವ, ಎಲ್ಲ ಜನರಿಗೂ ಅತ್ಯುತ್ತಮ ನೆಲೆಯೆನಿಸಿರುವ, ಇಂದಿರೆಯಿಂದ ವಂದಿತವಾದ, ಉತ್ತಮ ಸಂಪದ್ಭರಿತವಾದ ಗೋವಿಂದನ ಪಾದಕಮಲವನ್ನು ಸದಾ ನಮಿಸುವೆನು.

ಒಮ್ಮೆ ಹಿಮಾಲಯ ಮಹೇಂದ್ರ ಅರ್ಬುದಾರಣ್ಯ ಶ್ರೀಶೈಲ ಕುರುಕ್ಷೇತ್ರ ಧರ್ಮಾರಣ್ಯ ದಂಡಕಾರಣ್ಯ ಜಂಬೂಮಾರ್ಗ ಮೊದಲಾದ ದೇಶದ ನಾನಾ ಭಾಗಗಳಿಂದ ಬಂದ ಮಹಾತ್ಮರಾದ ಮುನಿಗಳೂ ಅವರ ಶಿಷ್ಯರೂ ನೈಮಿಷಾರಣ್ಯದಲ್ಲಿ ಶೌನಕಮುನಿಗಳನ್ನು ಭೆಟ್ಟಿಮಾಡಿದರು. ಎಲ್ಲರೂ ಪರಸ್ಪರ ಕೃಷ್ಣಕಥೆಗಳನ್ನು ಹೇಳಿದರು.

ಕೊನೆಯಲ್ಲಿ ಅವರ ಗೋಷ್ಠಿಗೆ ವೇದವ್ಯಾಸರ ಶಿಷ್ಯನೂ ಪುರಾಣಜ್ಞನೂ ಆದ ರೋಮಹರ್ಷಣನೆಂಬ ಸೂತನು ಬಂದು ಸೇರಿದನು. ಆಗ ಅವರೆಲ್ಲರೂ ಅವನಲ್ಲಿ ಈ ರೀತಿ ಪ್ರಶ್ನೆ ಮಾಡಿದರು.

**ಋಷಿಗಳು :-** ಸೂತನೆ ಹಿಂದೆ ಅನೇಕ ಬಾರಿ ನಿನ ಮುಖದಿಂದ ಪವಿತ್ರ ಪೌರಾಣಿಕ ಕಥೆಗಳನ್ನು ಕೇಳಿದ್ದೇವೆ. ಈಗಲೂ ನಾವು ಪರಸ್ಪರ ಕೃಷ್ಣ ಕಥೆಗಳನ್ನೇ ಹೇಳುತ್ತಿದ್ದೆವು.

**ಸ ವೈ ಪುಂಸಾಂ ಪರೋ ಧರ್ಮೋ ಯತೋ ಭಕ್ತಿರಧೋಕ್ಷಜೆ**

ಜನರಿಗೆ ಯಾವುದರಿಂದ ವಿಷ್ಣು ಭಕ್ತಿ ಹೆಚ್ಚುವುದೋ ಅದುವೆ ಶ್ರೇಷ್ಠಧರ್ಮ ಆದುದರಿಂದ ನೀನಿನ್ನು ಪುರಾಣದ ಕಥೆಗಳನ್ನು ಹೇಳು. ಬೇರೆ ಕಥೆಗಳೆಲ್ಲ ಸ್ಮಶಾನದಂತೆ ಅಮಂಗಲಕರ.

ತೀರ್ಥ ಸ್ವರೂಪದಿಂದ ಇರುವವನೂ ಹರಿಯೆ ಎಂದು ಕೇಳಿದ್ದೇವೆ. ಅದರಿಂದ ಪುಣ್ಯಕರವಾದ ತೀರ್ಥಗಳನ್ನೂ ವರ್ಣಿಸು.

ಈ ಜಗತ್ತಿಗೆ ಸೃಷ್ಟಿಸ್ಥಿತಿಲಯಗಳನ್ನು ತಂದು ಕೊಡುವವರು ಯಾರು ?

ಪುಣ್ಯಕ್ಷೇತ್ರಗಳು ನದಿಗಳು ಪರ್ವತಗಳು ಯಾವವು ? ಹೇಳು.

**ಸೂತ :-** ಮುನಿಗಳೆ, ನೀವು ಕೇಳಬಯಸಿದ ವಿಷಯಗಳೆಲ್ಲವೂ ಯೋಗ್ಯವೆ. ಗುರು ವ್ಯಾಸರನ್ನು ವಂದಿಸಿ ಶ್ರೀ ಪದ್ಮಪುರಾಣವನ್ನು ಹೇಳುವೆ.

**ಪಾರಾಶರ್ಯಂ ಪರಮಪುರುಷಂ ವಿಶ್ವವೇದೈಕಯೋನಿಂ**
**ವಿದ್ಯಾಧಾರಂ ವಿಪುಲಮತಿದಂ ವೇದವೇದಾಂತ ವೇದ್ಯಂ**
**ಶಶ್ವಚ್ಛಾಂತಂ ಸ್ವಮತಿ ವಿಷಯಂ ಶುದ್ಧತೇಜೋವಿಶಾಲಂ**
**ವೇದವ್ಯಾಸಂ ವಿತತಯಶಸಂ ಸರ್ವದಾಹಂ ನಮಾಮಿ**

ಪರಮ ಪುರುಷನೂ ಸಮಸ್ತ ವೇದಗಳನ್ನು ಉಪದೇಶಿಸುವವನೂ ಎಲ್ಲ ವಿದ್ಯೆಗಳಿಗಾಧಾರನೂ ಪೂರ್ಣ ಜ್ಞಾನವನ್ನು ನೀಡುವವನೂ ವೇದವೇದಾಂತ ವೇದ್ಯನೂ ಸದಾಶಾಂತನೂ ಸ್ವಪ್ರಕಾಶನೂ ಅಪ್ರಾಕೃತ ಜ್ಞಾನಪೂರ್ಣನೂ ವ್ಯಾಪ್ತವಾದ ಕೀರ್ತಿ ಉಳ್ಳವನೂ ಆದ ಪರಾಶರನ ಮಗ ವೇದವ್ಯಾಸನನ್ನು ನಾನು ಸದಾ ವಂದಿಸುತ್ತೇನೆ.

**ನಮೋ ಭಗವತೇ ತಸ್ಮೈ ವ್ಯಾಸಾಯಾಮಿತ ತೇಜಸೇ**
**ಯಸ್ಯ ಪ್ರಸಾದಾದ್ ವಕ್ಷ್ಯಾಮಿ ನಾರಾಯಣ ಕಥಾಮಿಮಾಮ್**

ಯಾರ ಅನುಗ್ರಹದಿಂದ ಮಾತ್ರ ನಾನು ಈ ನಾರಾಯಣಕಥೆಯನ್ನು ಹೇಳಬಲ್ಲೆನೋ ಅಂತ ಅಮಿತ ತೇಜಸ್ಸುಳ್ಳ ಪೂಜ್ಯನಾದ ವ್ಯಾಸನಿಗೆ ನಮಸ್ಕಾರ.

ಈ ಪದ್ಮಮಹಾಪುರಾಣದಲ್ಲಿ ಐವತ್ತೈದು ಸಾವಿರ ಶ್ಲೋಕಗಳಿವೆ. ಸೃಷ್ಟಿಖಂಡ ಭೂಮಿಖಂಡ, ಸ್ವರ್ಗಖಂಡ, ಬ್ರಹ್ಮಖಂಡ, ಪಾತಾಳಖಂಡ, ಉತ್ತರಖಂಡ, ಕ್ರಿಯಾಖಂಡಗಳೆಂದು ಏಳು ಖಂಡಗಳಿವೆ. ಈ ಜಗತ್ತಿನ ಮೂಲ ಕಾರಣವಾದ ಮಹಾಪದ್ಮದ ವೃತ್ತಾಂತವನ್ನೊಳಗೊಂಡಿರುವುದರಿಂದ ಈ ಪುರಾಣವು ಪದ್ಮಪುರಾಣ ವೆನಿಸಿದೆ. ಶುದ್ಧವಾದ ವಿಷ್ಣುಮಹಾತ್ಮ್ಯವಿಲ್ಲಿ ನಿರೂಪಿತವಾಗಿದೆ. ಇದನ್ನು ವಿಷ್ಣು ಬ್ರಹ್ಮನಿಗೂ ಬ್ರಹ್ಮನು ನಾರದರಿಗೂ ನಾರದರು ವೇದವ್ಯಾಸರಿಗೂ ವೇದವ್ಯಾಸರು ನನಗೂ ಉಪದೇಶಿಸಿದರು. ಇಂಥ ದುರ್ಲಭವಾದ ಪುರಾಣವನ್ನು ನಾನು ನಿಮಗೆ ಹೇಳುತ್ತೇನೆ. ಅದನ್ನು ಕೇಳಿದರೆ ಬ್ರಹ್ಮಹತ್ಯೆಯಂಥ ಮಹಾಪಾತಕ ಕಳೆಯುತ್ತದೆ. ಎಲ್ಲ ತೀರ್ಥಗಳಲ್ಲಿ ಸ್ನಾನಮಾಡಿದ ಫಲ ಸಿಗುವುದು. ಒಳ್ಳೆಯ ಶ್ರದ್ಧೆ ಭಕ್ತಿಗಳಿಂದ ಕೇಳಿದರೆ ಮುಕ್ತಿ ದೊರೆಯುವದು. ಶ್ರದ್ಧೆಯಿಲ್ಲದೆ ಕೇಳಿದರೂ ಬಹು ಪುಣ್ಯ ಲಭ್ಯವಾಗುವದು. ಆದುದರಿಂದ ಪ್ರಯತ್ನಪಟ್ಟು ನನ್ನ ಮುಖದಿಂದ ಎಲ್ಲರೂ ಈ ಶ್ರೀ ಪದ್ಮ ಮಹಾಪುರಾಣವನ್ನು ಕೇಳಬೇಕು. ಮೊದಲಿಗೆ ಆದಿಸೃಷ್ಟಿಯ ಕಥೆಯನ್ನು ಹೇಳುವೆ. ಅದು ಪಾಪನಾಶಕ, ಪುಣ್ಯದಾಯಕ.

**ಸೂತ :-** ಜಗತ್ತಿನ ಪ್ರಳಯವಾದ ಮೇಲೆ ಉಳಿಯುವುದು ಪರಬ್ರಹ್ಮ ರೂಪವಾದ ಜ್ಯೋತಿಯೊಂದೆ. ಸೃಷ್ಟಿಕಾಲದಲ್ಲಿ ಪರಬ್ರಹ್ಮನು ಪ್ರಕೃತಿಯನ್ನೂ ಅದರಿಂದ ಸಾತ್ವಿಕ ರಾಜಸ ತಾಮಸವೆಂದು ಮೂರುಬಗೆಯ ಮಹತ್ತತ್ವವನ್ನೂ ಸೃಷ್ಟಿಸಿದ. ಅದರಿಂದ ಕ್ರಮವಾಗಿ ವೈಕಾರಿಕ ತೈಜಸ ಭೂತಾದಿ ಎಂದು ಮೂರು ಬಗೆಯ ಅಹಂಕಾರವನ್ನೂ ನಿರ್ಮಿಸಿದ. ಭೂತಾದಿಯಿಂದ ಕ್ರಮವಾಗಿ ಶಬ್ದಸ್ಪರ್ಶರೂಪರಸಗಂಧತನ್ಮಾತ್ರೆಗಳನ್ನೂ ಆ ತನ್ಮಾತ್ರೆಗಳಿಂದ ಕ್ರಮವಾಗಿ ಆಕಾಶವಾಯು ತೇಜ ಜಲ ಪೃಥ್ವಿಗಳನ್ನೂ ನಿರ್ಮಿಸಿದ. ವೈಕಾರಿಕ ಅಹಂಕಾರದಿಂದ ದೇವತೆಗಳ ಶರೀರವನ್ನೂ ತೈಜಸಾಹಂಕಾರದಿಂದ ಪಂಚಜ್ಞಾನೇಂದ್ರಿಯ ಪಂಚಕರ್ಮೇಂದ್ರಿಯ ಮನಸ್ಸು ಹೀಗೆ ಹನ್ನೊಂದು ಇಂದ್ರಿಯಗಳನ್ನೂ ನಿರ್ಮಿಸಿದ. ಪಂಚಭೂತಗಳೊಂದಾಗಿ ಪ್ರಾಣಿಗಳ ಶರೀರವನ್ನು ನಿರ್ಮಿಸುತ್ತವೆ.

ಪರಬ್ರಹ್ಮನ ಪ್ರೇರಣೆ ಪ್ರಕೃತಿಯ ಅನುಗ್ರಹಗಳಿಂದ ಮಹದಾದಿ ತತ್ವಗಳು ಬ್ರಹ್ಮಾಂಡವನ್ನುಂಟುಮಾಡಿದವು. ಅದರೊಳಗೆ ಪರಬ್ರಹ್ಮನು ಪ್ರವೇಶಿಸಿ ದೇವತೆಗಳನ್ನೂ ಅಸುರರನ್ನೂ ಮನುಷ್ಯರನ್ನೂ ಸೃಷ್ಟಿಸಿದ. ವಿಷ್ಣುವಿನ ನಾಭಿಕಮಲದಲ್ಲಿ ರಜೋಗುಣಧಾರಿಯಾದ ಹರಿ ಬ್ರಹ್ಮ ರೂಪದಿಂದ ಕುಳಿತು ಸೃಷ್ಟಿಯನ್ನೂ ರಾಮಾದಿ ರೂಪದಿಂದ ಪಾಲನೆಯನ್ನೂ ನರಸಿಂಹಾದಿರೂಪದಿಂದಲೂ ರುದ್ರರೂಪದಿಂದಲೂ ಸಂಹಾರವನ್ನು ಮಾಡುತ್ತಾನೆ.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಸ್ವರ್ಗಖಂಡದಲ್ಲಿ ಬ್ರಹ್ಮಾಂಡೋತ್ಪತ್ತಿ ಎಂಬ ಮೊದಲನೆಯ ಅಧ್ಯಾಯ ಮುಗಿದುದು*



## ದ್ವೀಪ, ಪರ್ವತಗಳ ವರ್ಣನೆ

**ಅಧ್ಯಾಯ - ೨**

**ಋಷಿಗಳು :-** ನದಿ ಪರ್ವತ ದೇಶಗಳ ಹೆಸರುಗಳು, ಪೃಥಿವಿಯ ಪ್ರಮಾಣ ಮುಂತಾದುವನ್ನು ಹೇಳು.

**ಸೂತ :-** ಪೃಥಿವಿ ಅಪ ತೇಜ ವಾಯು ಆಕಾಶಗಳಲ್ಲಿ ಗಂಧ ರಸ ರೂಪ ಸ್ಪರ್ಶ ಶಬ್ದಗಳು ಗುಣಗಳು. ಪೃಥಿವಿಯಲ್ಲಿ ಈ ಎಲ್ಲ ಗುಣಗಳೂ ಇವೆ. ಜಲದಲ್ಲಿ ಗಂಧ ಒಂದನ್ನು ಹೊರತು ಇನ್ನೆಲ್ಲ ಗುಣಗಳಿವೆ. ತೇಜಸ್ಸಿನಲ್ಲಿ ಶಬ್ದ ಸ್ಪರ್ಶರೂಪಗಳಿವೆ. ವಾಯುವಿನಲ್ಲಿ ಶಬ್ದ ಸ್ಪರ್ಶಗಳು. ಆಕಾಶದಲ್ಲಿ ಶಬ್ದಮಾತ್ರವಿದೆ. ಈ ಪಂಚಭೂತಗಳು ಒಂದರಿಂದ ಇನ್ನೊಂದು ಕ್ರಮವಾಗಿ ಹುಟ್ಟಿ ಅದರಲ್ಲಿ ಲಯ ಹೊಂದುತ್ತವೆ. ಅವುಗಳ ಪರಿಮಾಣವನ್ನು ತರ್ಕದಿಂದ ಊಹಿಸಿ ಇಷ್ಟೆ ಎಂದು ಹೇಳುವುದುಂಟು. ಆದರೆ ಬರಿ ಊಹೆಯಿಂದ ಎಲ್ಲವನ್ನೂ ನಿರ್ಧಿಸಲಾಗದು. **'ಅಚಿಂತ್ಯಾಃ ಖಲು ಯೇ ಭಾವಾಸ್ತಾನ್ನ ತರ್ಕೇಣ ಯೋಜಯೇತ್'.**

ಮುನಿಗಳೇ ಸುದರ್ಶನ ದ್ವೀಪವನ್ನು ವರ್ಣಿಸುವೆನು, ಕೇಳಿ. ಈ ದ್ವೀಪ ವೃತ್ತಾಕಾರವಾಗಿದೆ. ಅದರಲ್ಲಿ ನದೀ, ಪರ್ವತಗಳು, ದೇಶಗಳು, ನಗರಗಳು ಇವೆ. ಫಲಪುಷ್ಪಭರಿತ ವೃಕ್ಷಗಳಿವೆ. ಧನಧಾನ್ಯಸಂಪತ್ತೂ ಇದೆ. ಸುತ್ತಲೂ ಲವಣ ಸಮುದ್ರದಿಂದ ಪರಿವೃತವಾಗಿದೆ. ಅದರ ಎರಡು ಭಾಗ ಪಿಪ್ಪಲ, ಇನ್ನೆರಡು ಭಾಗ ಶಶ. ಮುನಿಗಳೇ ಇನ್ನು ಮುಂದೆ ಎಲ್ಲವನ್ನೂ ಸಂಕ್ಷೇಪದಿಂದ ವರ್ಣಿಸುವೆನು.

**ಋಷಿಗಳು :-** ಸೂತನೆ, ನಮಗೆ ವಿಸ್ತಾರವಾಗಿಯೆ ಹೇಳು. ಶಶಭಾಗದಲ್ಲಿ ಭೂಮಿಯ ವಿಸ್ತಾರವನ್ನು ಹೇಳು. ಬಳಿಕ ಪಿಪ್ಪಲ ಭಾಗದ ಭೂವಿಸ್ತಾರವನ್ನೂ ಹೇಳು.

**ಸೂತ :-** ಆರು ರತ್ನಪರ್ವತಗಳು ಎರಡು ಪಾರ್ಶ್ವಗಳಲ್ಲಿ ಪೂರ್ವಪಶ್ಚಿಮ ಸಮುದ್ರಗಳನ್ನು ಪ್ರವೇಶಿಸಿವೆ. ಅವು ಹಿಮಾಲಯ, ಹೇಮಕೂಟ, ನಿಷಧ, ನೀಲ, ಶ್ವೇತ, ಶೃಂಗವಂತ ಎಂಬ ಹೆಸರಿನವುಗಳು ಸಿದ್ಧ ಚಾರಣರ ಆವಾಸಸ್ಥಾನವಾಗಿರುವವು.

ನಮ್ಮದು ಭಾರತ ವರ್ಷ. ಇದನ್ನು ದಾಟಿದರೆ ಉತ್ತರಕ್ಕೆ ಕಿಂಪುರುಷಖಂಡ. ಹೇಮಕೂಟ ನಿಷಧಪರ್ವತಗಳ ನಡುವೆ ಹರಿವರ್ಷಖಂಡ. ನಿಷಧನೀಲಪರ್ವತಗಳ

ನಡುವೆ ಮಾಲ್ಯವಂತ ಮತ್ತು ಗಂಧಮಾದನ ಪರ್ವತಗಳಿವೆ. ಈ ನಾಲ್ಕು ಪರ್ವತಗಳಿಂದ ನಾಲ್ಕುದಿಕ್ಕಿನಲ್ಲಿ ಸುತ್ತುವರಿದ ಮೇರುಪರ್ವತ ಬಾಲರವಿಯಂತೆ ಚಿನ್ನದಂತೆ ಹೊಗೆಯಿಲ್ಲದ ಬೆಂಕಿಯಂತೆ ಹೊಳೆಯುತ ಎಂಬತ್ತನಾಲ್ಕು ಸಾವಿರ ಯೋಜನದಷ್ಟು ಎತ್ತರವಿದೆ. ಎಂಬತ್ತನಾಲ್ಕು ಸಾವಿರ ಯೋಜನ ಭೂಮಿಯ ಒಳಭಾಗದಲ್ಲಿದೆ. ಅದರ ಪಾರ್ಶ್ವಗಳಲ್ಲಿ ಭದ್ರಾಶ್ವ ಕೇತುಮಾಲಖಂಡಗಳಿವೆ.

ಮೇರು ಪರ್ವತದಲ್ಲಿ ಕಾಗೆಗಳೂ, ಚಿನ್ನದಂತೆ ಹೊಳೆಯುವುದರಿಂದ ಸುಪಾರ್ಶ್ವನ ಮಗ ಸುಮುಖನೆಂಬ ಪಕ್ಷಿ ಹೇಳಿಕೊಂಡಿತು. 'ಉತ್ತಮ, ಮಧ್ಯಮ. ಅಧಮ ಹೀಗೆ ಮೂರು ವಿಧದ ಹಕ್ಕಿಗಳಿಗೂ ಮೇರುಪರ್ವತ ಸಮಾನವಾಗಿ ಚಿನ್ನದ ಬಣ್ಣವನ್ನೇ ಕೊಡುತ್ತದೆ. ಆದುದರಿಂದ ನಾನೀ ಪರ್ವತವನ್ನು ಬಿಟ್ಟು ಬಿಡುವೆನು.'

ಸೂರ್ಯನು ಸದಾ ಈ ಮೇರುಪರ್ವತವನ್ನು ಸುತ್ತುವನು. ಅವನೊಂದಿಗೆ ಚಂದ್ರ, ನಕ್ಷತ್ರಗಳು ವಾಯು ಎಲ್ಲವೂ ಸುತ್ತುವವು. ಈ ಪರ್ವತದಲ್ಲಿ ಚಿನ್ನದ ಮನೆಗಳಿವೆ. ದೇವತೆಗಳು ಋಷಿಗಳು ಗಂಧರ್ವರು ಅಸುರರು ರಾಕ್ಷಸರು ಅಪ್ಸರೆಯರು - ಎಲ್ಲರೂ ಇಲ್ಲಿ ವಿಹರಿಸುತ್ತಾರೆ. ಬ್ರಹ್ಮರುದ್ರ ಇಂದ್ರರು ಇಲ್ಲಿ ಯಜ್ಞಗಳನ್ನು ಮಾಡುತ್ತಾರೆ. ತುಂಬುರು ನಾರದ, ವಿಶ್ವಾವಸು ಹಾಹಾ ಹೂಹೂ ಮೊದಲಾದವರು ಭಗವಂತನನ್ನು ಸ್ತುತಿಸುತ್ತಾರೆ. ಸಪ್ತರ್ಷಿಗಳೂ ಕಶ್ಯಪ ಮುನಿಗಳೂ ಪರ್ವಕಾಲಗಳಲ್ಲಿ ಇಲ್ಲಿಗೆ ಬರುತ್ತಾರೆ. ಶುಕ್ರಾಚಾರ್ಯರೂ ಇಲ್ಲಿಯೇ ದೈತ್ಯರಿಂದ ಪೂಜಿಸಲ್ಪಡುತ್ತಾರೆ. ಇಲ್ಲಿಯ ಚಿನ್ನರತ್ನಗಳಕಾಲುಭಾಗವನ್ನು ಕುಬೇರ ಪಡೆದಿದ್ದಾನೆ. ಅದರ ಕಾಲಭಾಗವನ್ನು ಆತನು ಮನುಷ್ಯರಿಗೆ ಕೊಟ್ಟಿದ್ದಾನೆ. ಇಲ್ಲಿಯ ರಮ್ಯವಾದ ಕರ್ಣಿಕಾರವನದಲ್ಲಿ ಪಾರ್ವತೀಸಹಿತನಾದ ಪಶುಪತಿ ಭೂತಗಳಿಂದ ಪರಿವೃತನಾಗಿ ವಿಹರಿಸುತ್ತಾನೆ. ಕರ್ಣಿಕಾರದ ಹೂಗಳಮಾಲೆಯನ್ನು ತೊಟ್ಟ ಆ ತ್ರಿನೇತ್ರನನ್ನು ತಪಸ್ವಿಗಳು ಮಾತ್ರ ಕಾಣಬಲ್ಲರು. ಈ ಮೇರುಪರ್ವತದ ಶಿಖರದಿಂದ ಹಾಲಿನಂತೆ ಬಿಳಿಯಾದ ಪವಿತ್ರ ಭಾಗೀರಥಿಯ ಪ್ರವಾಹ ಭೋರ್ಗರೆಯುತ್ತ ಕೆಳಗಿಳಿದು ಚಂದ್ರನ ಮಡುವನ್ನು ನಿರ್ಮಿಸಿದೆ. ಸಾಗರದಂತೆ ವಿಶಾಲವಾದ ಈ ಮಡುವನ್ನು ಪರ್ವತವೂ ಹೊರಲಾರದು. ಶಿವನು ಅದನ್ನು ಲಕ್ಷವರ್ಷಗಳ ಕಾಲ ತಲೆಯಲ್ಲಿಯೇ ಧರಿಸಿದ್ದ.

ಮೇರುವಿನ ಪಶ್ಚಿಮ ಪಾರ್ಶ್ವದಲ್ಲಿ ಕೇತುಮಾಲ ಖಂಡವಿದೆ. ಅಲ್ಲಿ ಜನರಿಗೆ ಹತ್ತುಸಾವಿರವರ್ಷಗಳ ಆಯುಷ್ಯವಿದೆ. ಅವರಿಗೆ ರೋಗವಿಲ್ಲ. ದುಃಖವಿಲ್ಲ. ಸದಾ ಆನಂದವಿರುತ್ತದೆ. ಅವರು ಪುಟಕ್ಕಿಟ್ಟ ಚಿನ್ನದಂತೆ ಹೊಳೆಯುತ್ತಾರೆ. ಗಂಧಮಾದನದ ಶಿಖರಗಳಲ್ಲಿ ಕುಬೇರನು ರಾಕ್ಷಸರೊಂದಿಗೆ ವಾಸಿಸುತ್ತಾನೆ. ಅಪ್ಸರೆಯರೊಂದಿಗೆ ವಿಹರಿಸುತ್ತಾನೆ. ಗಂಧಮಾದನದ ಪಾರ್ಶ್ವದಲ್ಲಿ ಕೆಲವು ಪುಣ್ಯವಂತರು ವಾಸಿಸುತ್ತಾರೆ. ಅವರ ಆಯುಷ್ಯ ಹನ್ನೊಂದು ಸಾವಿರ ವರ್ಷಗಳು. ಕಪ್ಪು ಬಣ್ಣದಿಂದ ಕೂಡಿ ತೇಜಸ್ವಿಗಳಾಗಿರುತ್ತಾರೆ. ಬಲಿಷ್ಠರಾಗಿರುತ್ತಾರೆ. ಸ್ತ್ರೀಯರೂ ನೈದಿಲೆಯಂತೆ ಹೊಳೆಯುತ್ತ ಸುಂದರಿಯರಾಗಿರುತ್ತಾರೆ.

ನೀಲ ಪರ್ವತದಿಂದ ಶ್ವೇತಪರ್ವತದವರೆಗಿನ ಭೂಭಾಗವೇ ರಮ್ಯಕಖಂಡ, ಶ್ವೇತಪರ್ವತದಿಂದಾಚೆಗೆ ಹೈರಣ್ಯಕ ಖಂಡವಿದೆ. ಎಲ್ಲ ಖಂಡಗಳಿಗೂ ಮಧ್ಯದಲ್ಲಿ

ಇಲಾವೃತ ಖಂಡವಿದೆ. ಉತ್ತರಕ್ಕೆಹೋದಂತೆಲ್ಲ ಈ ಖಂಡಗಳಲ್ಲಿ ಆಯುಷ್ಯ ಆರೋಗ್ಯ ಧರ್ಮಅರ್ಥ ಕಾಮ ಎಲ್ಲವೂ ಅಧಿಕವಾಗಿರುತ್ತವೆ.

ಕೈಲಾಸದ ಉತ್ತರದಲ್ಲಿ ಹಿರಣ್ಯಶೃಂಗವೆಂಬ ಮಣಿಮಯಪರ್ವತ ಒಂದಿದೆ. ಅದರ ಬಳಿ ದಿವ್ಯವಾದ ವಿಷ್ಣು ಸರಸ್ಸೆಂಬ ಸರೋವರವಿದೆ. ವಿಶಾಲವಾದ ಈ ಸರೋವರದ ಮಳಲು ಚಿನ್ನವಾಗಿರುತ್ತದೆ. ಭಗೀರಥನು ಗಂಗೆಯನ್ನು ಇಲ್ಲಿ ಪ್ರತ್ಯಕ್ಷವಾಗಿ ಕಂಡು ಅನೇಕ ವರ್ಷಗಳ ಕಾಲ ವಾಸಮಾಡಿದ್ದ. ಇಲ್ಲಿ ನೆಲವೆಲ್ಲ ಹಿರಣ್ಮಯ. ಅದರಲ್ಲಿ ಮಣಿಮಯ ಯೂಪಗಳಿವೆ. ಇಂದ್ರನು ಇಲ್ಲಿ ಯಾಗಮಾಡಿ ಸಿದ್ಧಿಪಡೆದ. ನರ, ನಾರಾಯಣ, ಬ್ರಹ್ಮ, ಮನು, ಸ್ಥಾಣು ಈ ಐವರನ್ನು ಇಲ್ಲಿ ಎಲ್ಲ ಲೋಕವೂ ಪೂಜಿಸುತ್ತದೆ.

ಬ್ರಹ್ಮಲೋಕದಿಂದ ಬಂದ ಗಂಗೆ ಭೂಮಿಯಲ್ಲಿ ಮೊದಲಿಗೆ ಬಂದಿಳಿದ ಸ್ಥಳವೆ ಇದು. ವಟೋದಕಾ, ನಲಿನೀ, ಸರಸ್ವತೀ, ಜಂಬೂ, ಸೀತಾ, ಗಂಗಾ, ಸಿಂಧು ಎಂದು ಏಳು ಭಾಗಗಳಾಗಿ ಗಂಗೆ ಇಲ್ಲಿಂದ ಹರಿಯುತ್ತಾಳೆ. ಹಿಮಾಲಯದಲ್ಲಿ ರಾಕ್ಷಸರು, ಹೇಮಕೂಟದಲ್ಲಿ ಗುಹ್ಯಕರು, ನಿಷಧದಲ್ಲಿ ಸರ್ಪರು, ನಾಗರು, ಗಂಧರ್ವರು ಶ್ವೇತದಲ್ಲಿ ದೇವತೆಗಳು, ಅಸುರರು, ನೀಲದಲ್ಲಿ ಬ್ರಹ್ಮರ್ಷಿಗಳು, ಶೃಂಗವಂತನಲ್ಲಿ ದೇವತೆಗಳು ಹೀಗೆ ಪರ್ವತಗಳಲ್ಲಿ ನಾನಾ ಬಗೆಯ ಜನರ ವಾಸವಿದೆ.

**ಋಷಯ ಉವಾಚ**

**ಋಷಿಗಳು :-** ಮೇರುವಿನ ಉತ್ತರ ಪೂರ್ವ ಪಾರ್ಶ್ವಗಳನ್ನೂ ಮಾಲ್ಯವಂತ ಪರ್ವತವನ್ನೂ ಬಣ್ಣಿಸು.

**ಸೂತ :-** ಮೇರುವಿನ ಉತ್ತರದಲ್ಲಿ ಉತ್ತರ ಕುರುವರ್ಷವಿದೆ. ಅಲ್ಲಿ ಸಿದ್ಧಪುರುಷರು ವಾಸಿಸುತ್ತಾರೆ. ಮರಗಳೆಲ್ಲವೂ ನಿತ್ಯ ಹೂಹಣ್ಣುಗಳಿಂದ ತುಂಬಿರುತ್ತವೆ. ಹೂವಿನವಾಸನೆ ಮಧುರ, ಹಣ್ಣಿನರಸವೂ ಮಧುರ, ಕೆಲವು ಮರಗಳು ಬಯಸಿದುದನ್ನೆಲ್ಲ ಕೊಡಬಲ್ಲವು. ಕೆಲವು ಕ್ಷೀರವೃಕ್ಷಗಳು ಇವೆ. ಪಂಚಾಮೃತದಂತೆ ಸವಿಯಾದ ಹಾಲನ್ನು ಅವು ಸುರಿಸುತ್ತವೆ. ಕೆಲವು ಮರಗಳು ವಸ್ತ್ರ ಆಭರಣಗಳನ್ನೂ ಕೊಡುತ್ತವೆ. ನೆಲವೆಲ್ಲ ಮಣಿಮಯ, ಮಳಲೂ ಚಿನ್ನ. ದೇವಲೋಕದಿಂದ ಕೆಳಗೆ ಬಿದ್ದವರು ಅಲ್ಲಿ ಹುಟ್ಟುತ್ತಾರೆ. ಅವರ ಬಣ್ಣ ಬಿಳಿ, ರೂಪು ಚೆನ್ನ, ಸ್ತ್ರೀಯರು ಅಪ್ಸರೆಯರಂತಿರುತ್ತಾರೆ. ಅನುರೂಪವಾದ ಹೆಣ್ಣುಗಂಡುಗಳ ಜೋಡಿ, ಜತೆಗೇ ಹುಟ್ಟುತ್ತಾರೆ. ಚಕ್ರವಾಕದ ಜೋಡಿಗಳಂತಿರುತ್ತಾರೆ. ನೀರೋಗಿಗಳಾಗಿ ಆನಂದದಿಂದ ನಲಿಯುತ್ತಾರೆ. ಹನ್ನೊಂದು ಸಾವಿರ ವರ್ಷಗಳ ಕಾಲ ಬದುಕುತ್ತಾರೆ. ಭಾರುಂಡವೆಂಬ ಹಕ್ಕಿಗಳು ಅಲ್ಲಿ ಮೃತರ ಶವಗಳನ್ನು ಒಯ್ದು ಬೆಟ್ಟದ ಗುಹೆಗಳಲ್ಲಿಡುತ್ತವೆ.

ಮೇರುವಿನ ಪೂರ್ವಭಾಗದಲ್ಲಿ ಭದ್ರಾಶ್ವವರ್ಷವಿದೆ. ಅಲ್ಲಿ ಭದ್ರಶಾಲವನದಲ್ಲಿ ಕಾಲಾಮ್ರವೆಂಬ ಮಹಾವೃಕ್ಷಗಳು ನಿತ್ಯ ಹೂಹಣ್ಣುಗಳಿಂದ ತುಂಬಿದ್ದು ಯೋಜನದೆತ್ತರಕ್ಕೆ ಬೆಳೆಯುತ್ತವೆ. ಸಿದ್ಧಚಾರಣರು ಅಲ್ಲಿ ವಾಸಿಸುತ್ತಾರೆ. ಜನರು ಶುಭ್ರವರ್ಣದವರು ಬಲಿಷ್ಠರು. ಸ್ತ್ರೀಯರು ಬಿಳಿ ನೈದಿಲೆಯಂತಿದ್ದು ಲಾವಣ್ಯವತಿಯರಾಗಿರುತ್ತಾರೆ. ಚಂದ್ರನಂಥ ಮುಖ ಅವರದು. ಚಂದ್ರನಂತೆ ತಂಪು ಅವರ ಮೈ. ನೃತ್ಯ ಗೀತೆಗಳಲ್ಲಿ

ನಿಪುಣೆಯರು. ಹತ್ತುಸಾವಿರ ವರ್ಷ ಅಲ್ಲಿ ಜನರ ಆಯುಷ್ಯವಿದೆ ಕಾಲಾಮ್ರದ ಹಣ್ಣಿನ ರಸವನ್ನು ಸೇವಿಸಿ ನಿತ್ಯಯೌವನಭರಿತರಾಗಿರುತ್ತಾರೆ.

ನಿಷಧ ನೀಲ ಪರ್ವತಗಳ ನಡುವೆ ಸುದರ್ಶನವೆಂಬ ಒಂದು ದೊಡ್ಡ ಜಂಬೂ ವೃಕ್ಷವಿದೆ. ಒಂದು ಸಾವಿರದ ನೂರು ಯೋಜನದೆತ್ತರದ ಈ ಮಹಾವೃಕ್ಷವು ಸನಾತನ ವಾದುದು. ಬಯಸಿದುದನ್ನೆಲ್ಲ ಕೊಡಬಲ್ಲದು. ಸಿದ್ಧಚಾರಣರು ಇದನ್ನು ಆಶ್ರಯಿಸಿದ್ದಾರೆ. ಇದರ ಹೆಸರಿನಿಂದಲೆ ಈ ದ್ವೀಪವನ್ನು ಜಂಬೂದ್ವೀಪವೆಂದು ಕರೆಯುತ್ತಾರೆ. ಮಾಲ್ಯವಾನ ಎಂಬ ಬೆಟ್ಟ ಐವತ್ತು ಸಾವಿರ ಯೋಜನದಷ್ಟಿದ್ದು ಚಿನ್ನದಂತೆ ಹೊಳೆವ ಮನುಷ್ಯರು ಅಲ್ಲಿ ಹುಟ್ಟುತ್ತಾರೆ. ಬ್ರಹ್ಮಲೋಕದಿಂದ ಕೆಳಗೆ ಬಿದ್ದವರು ಬ್ರಹ್ಮಜ್ಞಾನಿಗಳು ಅಲ್ಲಿ ಊರ್ಧ್ವರೇತಸ್ಕರಾಗಿ ಕುಳಿತು ತಪಸ್ಸು ಮಾಡುವರು. ಲೋಕರಕ್ಷಣೆಗಾಗಿ ಅರವತ್ತಾರು ಸಾವಿರ ಮುನಿಗಳು ಸೂರ್ಯನ ಪರಿವಾರದಲ್ಲಿ ಸೇರಿ ಅರುಣನ ಮುಂಭಾಗದಲ್ಲಿ ಸದಾ ಪ್ರಯಾಣಮಾಡುತ್ತಾರೆ. ಅರವತ್ತಾರು ಸಾವಿರ ವರ್ಷಗಳ ಕಾಲ ಹೀಗೆ ಪ್ರಯಾಣಮಾಡಿ ಸೂರ್ಯನ ತಾಪವನ್ನು ಕಳೆದುಕೊಳ್ಳಲು ಚಂದ್ರಮಂಡಲವನ್ನು ಪ್ರವೇಶಿಸುತ್ತಾರೆ.

**ಋಷಿಯ ಉವಾಚ**

**ಋಷಿಗಳು :-** ಇನ್ನುಳಿದ ವರ್ಷ, ಪರ್ವತಗಳು ಮತ್ತು ಅಲ್ಲಿ ವಾಸಿಸುವ ಜನರು ಇವುಗಳನ್ನು ವರ್ಣಿಸು.

**ಸೂತ :-** ನೀಲಪರ್ವತದ ಉತ್ತರಕ್ಕೆ ಶ್ವೇತಪರ್ವತದ ದಕ್ಷಿಣಕ್ಕೆ ರಮ್ಯಕ ಖಂಡವಿದೆ. ಅಲ್ಲಿ ಜನರು ಶುಭ್ರವರ್ಣದವರು, ಸುಂದರರು, ಪರಸ್ಪರ ವೈರವಿಲ್ಲದವರು. ಅವರಿಗೆ ಹನ್ನೊಂದು ಸಾವಿರದ ಐನೂರು ವರ್ಷ ಆಯುಷ್ಯ. ಶ್ವೇತದಂದ ಉತ್ತರಕ್ಕೆ ಶೃಂಗದ ದಕ್ಷಿಣಕ್ಕೆ ಹಿರಣ್ಮಯ ವರ್ಷವಿದೆ. ಅಲ್ಲಿ ಹೈರಣ್ವತೀ ನದಿ ಹರಿಯುತ್ತದೆ. ಬ್ರಾಹ್ಮಣರು ಯಜ್ಞದಲ್ಲಿ ನಿರತರಾಗುತ್ತಾರೆ. ಕ್ಷತ್ರಿಯರು ಸುಂದರರೂ ಬಲಿಷ್ಠರೂ ಆಗಿರುತ್ತಾರೆ. ಹನ್ನೆರಡು ಸಾವಿರದ ಐನೂರು ವರ್ಷಗಳು ಅವರ ಆಯುಃಪ್ರಮಾಣ. ಶೃಂಗ ಪರ್ವತದಲ್ಲಿ ಮಣಿಮಯ, ಸುವರ್ಣಮಯ, ನವರತ್ನಮಯವಾಗಿರುವ ಮೂರು ಪವಿತ್ರ ಶಿಖರಗಳಿವೆ. ಈ ಪರ್ವತದಲ್ಲಿ ದೇವಿ ಸ್ವಯಂಪ್ರಭೆ ವಾಸಿಸುತ್ತಾಳೆ. ಶೃಂಗವತ್ ಪರ್ವತದ ಆಚೆ ಸಮುದ್ರದವರೆಗೆ ಇರಾವತ ವರ್ಷವಿದೆ. ಅಲ್ಲಿ ಜನರು ಪದ್ಮವರ್ಣ ಉಳ್ಳವರು. ಪದ್ಮ ಗಂಧದವರು. ನಿರಾಹಾರರು, ಜಿತೇಂದ್ರಿಯರು, ದೇವಲೋಕದಿಂದ ಕೆಳಗೆ ಬೀಳುವವರು ಅಲ್ಲಿ ಹುಟ್ಟಿ ಹದಿಮೂರು ಸಾವಿರ ವರ್ಷಗಳ ಕಾಲ ಧಾರ್ಮಿಕರಾಗಿ ಜೀವಿಸುವರು.

ಕ್ಷೀರಸಮುದ್ರದ ಉತ್ತರ ಭಾಗದಲ್ಲಿ ವೈಕುಂಠವಿದೆ. ಚಿನ್ನದ ರಥದಲ್ಲಿ ಹರಿ ಇದ್ದಾನೆ. ಆ ರಥಕ್ಕೆ ಎಂಟು ಚಕ್ರಗಳು, ಮನೋವೇಗದಿಂದ ಚಲಿಸಬಲ್ಲದು. ಬೆಂಕಿಯಂತೆ ಹೊಳೆಯುವಂಥದು. ಮುನಿಗಳೆ, ಈ ಹರಿಯೆ ಎಲ್ಲರಿಗೂ ಪ್ರಭು, ಅವನೆ ಯಜ್ಞ, ಅವನ ಮುಖವೆ ಅಗ್ನಿ.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಸ್ವರ್ಗಖಂಡದಲ್ಲಿ*

*ದ್ವೀಪ, ಪರ್ವತಗಳ ವರ್ಣನೆ ಎಂಬ ಎರಡನೇಯ ಅಧ್ಯಾಯ ಮುಗಿದುದು*

ಭಾರತವರ್ಷದ ವರ್ಣನೆ

ಅಧ್ಯಾಯ - ೩

**ಋಷಯ ಉವಾಚ**

**ಋಷಿಗಳು :-** ಈ ಭಾರತ ವರ್ಷದ ಬಗ್ಗೆ ಎಲ್ಲವನ್ನೂ ನಮಗೆ ಹೇಳು.

**ಸೂತ :-** ಈ ಭರತ ವರ್ಷವು ಪ್ರಿಯವ್ರತರಾಜ, ವೈವಸ್ವತ ಮನು, ಪೃಥು, ಇಕ್ಷ್ವಾಕು, ಯಯಾತಿ, ಅಂಬರೀಷ, ಮಾಂಧಾತೃ, ನಹುಷ, ಮುಚುಕುಂದ, ಕುಬೇರ ಉಶೀನರ, ಋಷಭ, ಐಲ, ನೃಗ. ಕುಶಿಕ, ಗಾಧಿ, ದಿಲೀಪ ಮುಂತಾದ ರಾಜರಿಗೆ ಪ್ರಿಯವಾದ ದೇಶ. ಇಲ್ಲಿ ಮಹೇಂದ್ರ, ಮಲಯ, ಸಹ್ಯ, ಶುಕ್ತಿಮಾನ್, ಋಕ್ಷ, ವಿಂಧ್ಯ, ಪಾರಿಯಾತ್ರವೆಂಬ ಏಳು ಕುಲಪರ್ವತಗಳೂ ಅನೇಕ ಸಣ್ಣ ಪರ್ವತಗಳೂ ಗಂಗಾ, ಸಿಂಧು, ಸರಸ್ವತಿ, ಗೋದಾವರಿ, ನರ್ಮದಾ, ಮಹಾನದಿ, ಶತದ್ರು, ಚಂದ್ರಭಾಗಾ, ಯಮುನಾ ಮುಂತಾದ ನದಿಗಳೂ ಇವೆ. ಎಲ್ಲ ಪ್ರಾಣಿಗಳಿಗೂ ನದಿಗಳು ತಾಯಿಯಂತೆ ಇವೆ. ಮಹಾಫಲದಾಯಕಗಳಾಗಿವೆ. ಕುರು, ಪಾಂಚಾಲ, ಶಾಲ್ವ, ಶೂರಸೇನ, ಪುಲಿಂದ, ಮಾಲ, ಸೈಂಧವ, ಚೇದಿ ಮತ್ಸ್ಯ, ಕರೂಷ, ಭೋಜ, ಸಿಂಧು, ದಶಾರ್ಣ, ಮೇಕಲ, ಉತ್ಕಲ, ಕೋಶಲ, ಮುಂತಾದ ಉತ್ತರ ಭಾರತದ ದೇಶಗಳೂ ದ್ರವಿಡ ಕೇರಲ ಕರ್ನಾಟಕ ಕಿಷ್ಕಿಂಧ ಕಂತಲ ಚೋಳ ಮೊದಲಾದ ದಕ್ಷಿಣ ದೇಶಗಳೂ ಪ್ರಸಿದ್ಧವಾಗಿವೆ. ಯವನ ಕಾಂಭೋಜರೂ ಹೂಣಪಾರಸಿಕ ಮುಂತಾದವರೂ ಮ್ಲೇಚ್ಛ ಜಾತಿಯವರು. ಶೂರ ವೀರ ಆಭೀರ ದರದ ಕಾಶ್ಮೀರ ಮುಂತಾದ ಪಶುಪಾಲಕರೂ ಈ ದೇಶದಲ್ಲಿದ್ದಾರೆ. ಖಾಂಡೀಕ ತುಷಾರ ಪದ್ಮಗ ಮುಂತಾದ ಕಿರಾತರೂ ಇದ್ದಾರೆ. ಹೀಗೆ ಇನ್ನೂ ಪೂರ್ವ ಪಶ್ಚಿಮ ಭಾರತದ ದೇಶಗಳೂ ಇವೆ. ಇವುಗಳನ್ನು ಚೆನ್ನಾಗಿ ತಿಳಿದರೆ ಧರ್ಮಾರ್ಥಕಾಮರೂಪ ಫಲ ದೊರೆಯುವುದು.

**ಋಷಿಗಳು :-** ಭರತ ವರ್ಷದಲ್ಲಿ ಜನರ ಆಯುಷ್ಯ ಬಲ ಮುಂತಾದುವು ಹಿಂದೆ ಹೇಗಿತ್ತು. ಈಗ ಹೇಗೆ, ಮುಂದೆ ಹೇಗಿರುವುದು ಇದೆಲ್ಲವನ್ನೂ ಹೇಳು.

**ಸೂತ :-** ಭರತ ವರ್ಷದಲ್ಲಿ ಕೃತ ತ್ರೇತಾ ದ್ವಾಪರ ಮತ್ತು ಕಲಿ ಅಥವಾ ತಿಷ್ಯ ಯುಗಗಳು ಕ್ರಮವಾಗಿ ಬರುತ್ತವೆ. ಕೃತಯುಗದಲ್ಲಿ ಜನರಿಗೆ ನಾಲ್ಕುಸಾವಿರಯುಗದ ವರ್ಷ ಆಯುಷ್ಯ ಪ್ರಮಾಣವಿತ್ತು. ಮೂರುಸಾವಿರ ವರ್ಷ ತ್ರೇತೆಯಯುಗದಲ್ಲಿ, ಎರಡು ಸಾವಿರ ವರ್ಷ ದ್ವಾಪರದಲ್ಲಿ. ಕಲಿಯುಗದಲ್ಲಿ ಜನರು ಗರ್ಭದಲ್ಲಿಯೇ ಕೆಲವರು ಸಾಯುತ್ತಾರೆ. ಹುಟ್ಟಿದಮೇಲೆ ಕೆಲವರು ಸಾಯುತ್ತಾರೆ. ಕೃತಯುಗದಲ್ಲಿ ದ್ವಿಜರೆಲ್ಲರೂ ಬಲಿಷ್ಠರು ಸುಂದರರು ತಪಸ್ವಿಗಳು ಸತ್ಯವಾದಿಗಳು ಉತ್ಸಾಹಶೀಲರು. ತ್ರೇತಾಯುಗದಲ್ಲಿ ಕ್ಷತ್ರಿಯರು ಎಲ್ಲರೂ ಚಕ್ರವರ್ತಿಗಳೆ. ದ್ವಾಪರದಲ್ಲಿ ಎಲ್ಲ ಜನರೂ ಮಹೋತ್ಸಾಹ ವೀರ್ಯಶಾಲಿಗಳು. ಕಲಿಯುಗದಲ್ಲಿ ಎಲ್ಲರೂ ಪರಸ್ಪರ ದ್ವೇಷ ಕ್ರೋಧಲೋಭಗಳಿಂದ ತುಂಬಿದ್ದು ಅನೃತವಾದಿಗಳಾಗಿರುವರು.

**ಋಷಿಗಳು :-** ಜಂಬೂದ್ವೀಪವನ್ನು ಚೆನ್ನಾಗಿ ವರ್ಣಿಸಿರುವೆ. ಅದರ ಪರಿಮಾಣವನ್ನು ಹೇಳು. ಅದನ್ನು ಸುತ್ತುವರಿದ ಸಮುದ್ರದ ಪ್ರಮಾಣವನ್ನೂ ಹೇಳು. ಶಾಕ ಕುಶ ಶಾಲ್ಮಲ ಕ್ರೌಂಚ ದ್ವೀಪಗಳನ್ನೂ ವರ್ಣಿಸು.

**ಸೂತ :-** ದ್ವೀಪಗಳು ಅನೇಕ ಇವೆ. ಅವುಗಳಲ್ಲಿ ಏಳು ದ್ವೀಪಗಳು ಮುಖ್ಯವಾದುವು. ಅವುಗಳನ್ನು ವರ್ಣಿಸುತ್ತೇನೆ. ಜಂಬೂದ್ವೀಪದ ವಿಸ್ತಾರ ಇಪ್ಪತ್ತನಾಲ್ಕು ಸಾವಿರ ಯೋಜನೆಗಳು. ಇದಕ್ಕೆ ಎರಡು ಪಾಲಿನಷ್ಟು ಲವಣ ಸಮುದ್ರದ ವಿಸ್ತಾರ. ಜಂಬೂ ದ್ವೀಪದ ಎರಡರಷ್ಟು ಶಾಕದ್ವೀಪವಿದೆ. ಕ್ಷೀರಸಮುದ್ರದಿಂದ ಸುತ್ತುವರಿಯಲ್ಪಟ್ಟಿದೆ. ಅಲ್ಲಿ ಜನರಿಗೆ ಮರಣವಿಲ್ಲ ದುರ್ಭಿಕ್ಷವಿಲ್ಲ. ಶಾಕದ್ವೀಪದಲ್ಲಿ ಏಳುಮಣಿಪರ್ವತಗಳಿವೆ. ಅವುಗಳಲ್ಲಿ ಮೇರು ಮೊದಲನೆಯದು. ದೇವ ಋಷಿ ಗಂಧರ್ವರು ಇಲ್ಲಿ ವಾಸಮಾಡುತ್ತಾರೆ. ಮಲಯವು ಅಂಥ ಇನ್ನೊಂದು ಪರ್ವತ. ಇಲ್ಲಿಂದ ಮೋಡಗಳು ಹುಟ್ಟಿ ಬರುತ್ತವೆ. ಜಲಧಾರ ಪರ್ವತದಿಂದ ಇಂದ್ರನು ನೀರನ್ನು ಸಂಗ್ರಹಿಸಿ ಮಳೆಗಾಲದಲ್ಲಿ ಮಳೆಗರೆಯುತ್ತಾನೆ. ರೈವತಕವು ಉನ್ನತವಾದ ಇನ್ನೊಂದು ಪರ್ವತ. ಅದರ ಮೇಲ್ಗಡೆ ಅಂತರಿಕ್ಷದಲ್ಲಿ ರೇವತಿ ನಕ್ಷತ್ರವಿದೆ. ಅದಕ್ಕೆ ಉತ್ತರ ದಿಕ್ಕಿನಲ್ಲಿ ಶ್ಯಾಮಪರ್ವತವಿದೆ. ಜನರಿಗೆ ಅದರಿಂದ ಶ್ಯಾಮಲವರ್ಣ ಬಂದಿದೆ.

**ಋಷಿಗಳು :-** ಜನರಿಗೆ ಅದರಿಂದ ಶ್ಯಾಮಲವರ್ಣ ಹೇಗೆ ಬಂದಿತು.

**ಸೂತ :-** ಎಲ್ಲ ದ್ವೀಪಗಳಲ್ಲಿಯೂ ಜನರ ಬಣ್ಣ ಬಿಳಿ ಅಥವಾ ಕಪ್ಪು. ಈ ದ್ವೀಪದಲ್ಲಿ ಅವುಗಳ ಮಧ್ಯವರ್ತಿಯಾದ ಶ್ಯಾಮಲವರ್ಣವಿದೆ. ಅದರಿಂದ ಈ ಬೆಟ್ಟಕ್ಕೆ ಶ್ಯಾಮವೆಂದೇ ಹೆಸರು. ದುರ್ಗಪರ್ವತವೂ ಒಂದು ಮಣಿಪರ್ವತ. ಹಾಗೇ ಕೇಶರೀ ಎಂಬ ಪರ್ವತವೂ ಇದೆ. ಇಲ್ಲಿಂದ ಕೇಸರಿಯುಕ್ತವಾದ ಗಾಳಿ ಬೀಸುತ್ತದೆ.

ಈ ಏಳು ಮಣಿ ಪರ್ವತಗಳ ಬಳಿ ಏಳುವರ್ಷಗಳಿವೆ. ಮೇರುವಿನ ಬಳಿ ಮಹಾಕಾಶ ವರ್ಷ. ಮಲಯದ ಬಳಿ ಕುಮುದ, ಜಲಧಾರದ ಬಳಿ ಸುಕುಮಾರ; ರೈವತಕದ ಬಳಿ ಕೌಮಾರ, ಶ್ಯಾಮದ ಬಳಿ ಮಣಿಕಾಂಚನ, ಕೇಶರಿಯ ಬಳಿ ಮೌದಾಕಿ ಮತ್ತು ದುರ್ಗದ ಬಳಿ ಪುಮಾನ್. ಈ ದ್ವೀಪದ ಮಧ್ಯದಲ್ಲಿ ಶಾಕವೆಂಬ ಮಹಾವೃಕ್ಷವಿದೆ. ಇಲ್ಲಿ ಜನರು ಶಂಕರನನ್ನು ಪೂಜಿಸುತ್ತಾರೆ. ಸಿದ್ಧರು ಚಾರಣರು ದೇವತೆಗಳು ಇಲ್ಲಿಗೆ ಬರುತ್ತಾರೆ. ನಾಲ್ಕು ವರ್ಣದ ಪ್ರಜೆಗಳೂ ಸ್ವಕರ್ಮನಿರತರಾಗಿರುತ್ತಾರೆ. ಅಲ್ಲಿ ಕಳ್ಳರಿಲ್ಲ. ಎಲ್ಲರೂ ದೀರ್ಘಾಯುಷಿಗಳು ಜರ ಮರಣ ವಿಲ್ಲದವರು. ಇಲ್ಲಿ ಅನೇಕ ನದಿಗಳಿವೆ. ಎಲ್ಲವೂ ಪವಿತ್ರ, ಗಂಗೆ ಇಲ್ಲಿ ಸುಕುಮಾರೀ ಕುಮಾರಿ ಶೀತಾ ಶೀತೋದಕಾ ಮಹಾನದೀ ಮಣಿಜಲಾ ಇಕ್ಷುವರ್ಧನಿಕಾ ಮುಂತಾಗಿ ಅನೇಕ ಕವಲುಗಳಾಗಿ ಹರಿಯುತ್ತದೆ. ಒಟ್ಟು ಒಂದು ಲಕ್ಷ ಸಂಖ್ಯೆಯಲ್ಲಿ ನದಿಗಳಿವೆ. ಅವುಗಳ ಹೆಸರನ್ನು ನೆನಪಿನಲ್ಲಿಟ್ಟುಕೊಳ್ಳುವುದು ಅಶಕ್ಯ. ಮೃಗ ಮಶಕ ಮಾನಸ ಮಲ್ಲಕಗಳೆಂದು ನಾಲ್ಕು ದೇಶಗಳಿವೆ. ಮೃಗದಲ್ಲಿ ಬ್ರಾಹ್ಮಣರು ಹೆಚ್ಚು. ಮಶಕದಲ್ಲಿ ಕ್ಷತ್ರಿಯರು ಮಾನಸದಲ್ಲಿ ವೈಶ್ಯರು, ಮಲ್ಲಕದಲ್ಲಿ ಶೂದ್ರರು. ಎಲ್ಲರೂ ಸ್ವಕರ್ಮನಿರತರು ಧರ್ಮಿಷ್ಠರು. ಅಲ್ಲಿ ರಾಜ ಇಲ್ಲ. ದಂಡನೆಗಳಿಲ್ಲ. ದಂಡಿಸುವವರಿಲ್ಲ. ಇಷ್ಟು ಮಾತ್ರ ಈ ದ್ವೀಪದ ಮಹತ್ವವನ್ನು ಹೇಳಬಹುದು.

**ಸೂತ :-** ಜಂಬುದ್ವೀಪದ ಉತ್ತರದಲ್ಲಿ ಸುರಾಘೃತದಧಿ ಕ್ಷೀರ ಸಮುದ್ರಗಳು ಕ್ರಮವಾಗಿ ಒಂದಕ್ಕಿಂತ ಇನ್ನೊಂದು ಎರಡರಷ್ಟು ವಿಸ್ತಾರವಾಗಿವೆ. ಅವುಗಳ ಮಧ್ಯದಲ್ಲಿ ದ್ವೀಪಗಳಿವೆ. ಕುಶದ್ವೀಪದ ಮಧ್ಯದಲ್ಲಿ ಕುಶಸ್ತಂಭವನ್ನು ಪೂಜಿಸುತ್ತಾರೆ. ಹೀಗೆ ಶಾಲ್ಮಲಿದ್ವೀಪದಲ್ಲಿ ಶಾಲ್ಮಲಿ ವೃಕ್ಷ. ಕ್ರೌಂಚದ್ವೀಪದಲ್ಲಿ ಮಹಾಕ್ರೌಂಚಗಿರಿ ಪೂಜಿಸಲ್ಪಡುತ್ತವೆ. ಕ್ರೌಂಚದ್ವೀಪದ ಗೋಮಂತ ಪರ್ವತದಲ್ಲಿ ವಿಷ್ಣುನೆಲೆಸಿದ್ದಾನೆ. ಮೋಕ್ಷಹೊಂದಿದವರು ಸದಾ ಇವನ ಬಳಿಯಲ್ಲೇ ಇರುವರು.

ಕುಶದ್ವೀಪದಲ್ಲಿ ಸುನಾಮ, ಹೇಮ, ದ್ಯುತಿಮಂತ, ಕುಮುದ, ಪುಷ್ಪವಂತ, ಕುಶೇಶಯ, ಹರಿಗಿರಿ ಎಂದು ಏಳುಪರ್ವತಗಳಿವೆ. ಔದ್ಭಿದ, ರೇಣು ಮಂಡಲ, ಸುರಥ, ಲಂಬನ, ಧೃತಿಮತ, ಪ್ರಭಾಕರ, ಕಾಪಿಲ ಎಂದು ಏಳುವರ್ಷಗಳಿವೆ. ಇಲ್ಲಿ ದೇವಗಂಧರ್ವರು ಪ್ರಜೆಗಳು ಅವರಿಗೆ ಮರಣವಿಲ್ಲ. ಅವರಲ್ಲಿ ಕಳ್ಳರಿಲ್ಲ. ಮ್ಲೇಚ್ಛಜಾತಿಯವರೂ ಇಲ್ಲ. ಬೆಳ್ಳಗೆ ಕೋಮಲ ಪ್ರಕೃತಿಯವರಾಗಿರುತ್ತಾರೆ.

ಕ್ರೌಂಚ ದ್ವೀಪದಲ್ಲಿ ಕ್ರೌಂಚ ವಾಮನಕ ಅಂಧಕಾರಕ ಮೈನಾಕ ಗೋಮಂತ ಪುಂಡರೀಕ ದುಂದುಭಿಸ್ವನ ಹೀಗೆ ಏಳುಪರ್ವತಗಳು, ಕುಶಲ, ಮನೋನುಗ, ಉಷ್ಣ ಪ್ರಾವರಕ, ಅಂಧಕಾರಕ, ಮುನಿ, ಧುನಿ, ದುಂದುಭಿಸ್ವನ ಹೀಗೆ ಏಳು ವರ್ಷಗಳು. ಈ ವರ್ಷಗಳಲ್ಲಿ ಸಿದ್ಧರು ಚಾರಣರು ಅಧಿಕ, ಬಿಳಿ ಬಣ್ಣ ಉಳ್ಳವರು.

ಪುಷ್ಕರ ದ್ವೀಪದಲ್ಲಿ ಪುಷ್ಕರವೆಂಬ ಮಣಿಪರ್ವತವಿದೆ. ಅಲ್ಲಿ ಬ್ರಹ್ಮನು ನೆಲೆಸಿದ್ದು ದೇವತೆಗಳಿಂದಲೂ ಋಷಿಗಳಿಂದಲೂ ಸೇವಿಸಲ್ಪಡುತ್ತಾನೆ.

ಈ ದ್ವೀಪಗಳಲ್ಲಿ ಆರೋಗ್ಯ ಆಯುಷ್ಯದ ಪ್ರಮಾಣಗಳು ಒಂದಕ್ಕಿಂತ ಇನ್ನೊಂದರಲ್ಲಿ ದ್ವಿಗುಣವಾಗಿರಲು ಪ್ರಜೆಗಳ ಬ್ರಹ್ಮಚರ್ಯ ಸತ್ಯಧರ್ಮಮಗಳೇ ಕಾರಣ. ಇವುಗಳಲ್ಲಿ ಧರ್ಮವು ನೆಲೆಸುವಂತೆ ಈಶ್ವರನು ಸ್ವತಃ ದಂಡಧರನಾಗಿದ್ದಾನೆ. ಪ್ರಜಾಪತಿಯಾಗಿ ರಕ್ಷಿಸುತ್ತಿದ್ದಾನೆ. ಅವನೆ ರಾಜ, ಅವನೆ ತಂದೆ, ಪ್ರಜೆಗಳು ಅನಾಯಾಸವಾಗಿ ಕೈಗೆ ಸಿಗುವ ಆಹಾರವನ್ನುಂಡು ಬದುಕುತ್ತಾರೆ. ಈ ಎಲ್ಲ ದ್ವೀಪಗಳಾಚೆ ದೊಡ್ಡ ಪರ್ವತವಿದೆ. ಅದರಲ್ಲಿ ವಾಮನ ಐರಾವತ ಅಂಜನ ಸುಪ್ರತೀಕವೆಂಬ ನಾಲ್ಕು ದಿಗ್ಗಜಗಳಿವೆ. ಆ ಪರ್ವತದ ಪ್ರಮಾಣವನ್ನು ಅಳೆದು ಹೇಳಲು ನಾನು ಬಯಸುವುದಿಲ್ಲ. ಹಾಗೆ ಅಳೆಯಲು ಶಕ್ಯವೂ ಇಲ್ಲ. ಅಲ್ಲಿ ಎಲ್ಲ ದಿಕ್ಕುಗಳಿಂದಲೂ ಗಾಳಿ ಬೀಸುತ್ತದೆ. ಅದನ್ನು ದಿಗ್ಗಜಗಳು ತಮ್ಮ ಸೊಂಡಿನಿಂದ ಎಳೆದುಕೊಂಡು ನಿಗ್ರಹಿಸಿ ನೂರಾರು ಕಡೆ ಬಿಟ್ಟು ಬಿಡುತ್ತವೆ. ಇದು ಅವುಗಳ ಶ್ವಾಸೋಚ್ಛ್ವಾಸಗಳಂತಿರುತ್ತದೆ. ಈ ಗಾಳಿಯಿಂದ ಪ್ರಜೆಗಳು ಬದುಕುತ್ತಾರೆ. ಹೀಗೆ ಪೃಥಿವಿಯ ಪರಿಮಾಣ ಮುಂತಾದುವನ್ನು ಕೇಳಿದರೆ ಆಯುಸ್ಸ ಬಲ ತೇಜಸ್ಸು ಹೆಚ್ಚುತ್ತವೆ. ಪರ್ವಕಾಲದಲ್ಲಿ ಇದನ್ನು ಕೇಳಿದರೆ ಪಿತೃಪಿತಾಮಹರೂ ಸಂತುಷ್ಟರಾಗುತ್ತಾರೆ.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಸ್ವರ್ಗಖಂಡದಲ್ಲಿ*
*ಭಾರತವರ್ಷದ ವರ್ಣನೆ ಎಂಬ ಮೂರನೇಯ ಅಧ್ಯಾಯ ಮುಗಿದುದು.*

—o—

**ಋಷಯ ಉವಾಚ**

**ಋಷಿಗಳು :-** ಪೃಥಿವಿಯ ಪರಿಮಾಣ ಪರ್ವತ ನದಿ ಮುಂತಾದವುಗಳ ವರ್ಣನೆಯನ್ನು ಕೇಳಿ ಅಮೃತ ಕುಡಿದಂತಾಯಿತು. ಈಗ ಭೂಮಿಯಲ್ಲಿರುವ ಪವಿತ್ರ ತೀರ್ಥಗಳ ಮಹಿಮೆಯನ್ನು ವಿಸ್ತಾರವಾಗಿ ತಿಳಿಯಲು ಬಯಸುತ್ತೇವೆ.

**ಸೂತ :-** ಹಿಂದೆ ಪಾಂಡವರು ರಾಜ್ಯವನ್ನು ಕಳೆದುಕೊಂಡು ದ್ರೌಪದೀ ಸಹಿತರಾಗಿ ವನವಾಸ ಮಾಡುತ್ತಿದ್ದರು. ಆಗ ನಾರದರು ಅವರಲ್ಲಿಗೆ ಬಂದರು. ಬ್ರಹ್ಮ ತೇಜಸ್ಸಿನಿಂದ ಅಗ್ನಿಯಂತೆ ಹೊಳೆಯುವ ಆ ದೇವರ್ಷಿಯನ್ನು ಪಾಂಡವರು ಪೂಜಿಸಿದರು. ಇಂದ್ರನನ್ನು ದೇವತೆಗಳು ಸುತ್ತುವರಿದು ಉಪಚರಿಸುವಂತೆ ಉಪಚರಿಸಿದರು. ದ್ರೌಪದಿ ಸದಾ ಅವರೊಂದಿಗೆ ಇರುತ್ತಿದ್ದಳು. ದೇವತೆಗಳನ್ನು ಸಾವಿತ್ರಿ, ಮೇರುವನ್ನು ಸೂರ್ಯನ ಪ್ರಭೆ ಬಿಡದಿರುವಂತೆ ದ್ರೌಪದಿ ಪಾಂಡವರನ್ನು ಬಿಡದೆ ಹಿಂಬಾಲಿಸುತ್ತಿದ್ದಳು. ನಾರದರು ಪಾಂಡವರು ಮಾಡಿದ ಸತ್ಕಾರವನ್ನು ಸ್ವೀಕರಿಸಿ ನಿಮ್ಮ ಅಭೀಷ್ಟವೇನು ಹೇಳಿ ಎಂದರು. ಆಗ ಧರ್ಮರಾಜನು ಕೈ ಮುಗಿದು ಹೇಳಿದನು.

**ಧರ್ಮರಾಜ :-** ನೀನು ಸಂತುಷ್ಟನಾದರೆ ಸಾಕು. ನಮಗೀನ್ನೇನೂ ಬೇಕಾಗಿಲ್ಲ. ನಮ್ಮಲ್ಲಿ ಅನುಗ್ರಹಮಾಡುತ್ತಿರುವೆಯಾದರೆ ನಮ್ಮ ಜಿಜ್ಞಾಸೆಯೊಂದನ್ನು ಪರಿಹರಿಸು. ನೀನು ಪೃಥಿವಿಯಲ್ಲಿ ಸದಾ ಸಂಚರಿಸುತ್ತ ಎಲ್ಲ ತೀರ್ಥಗಳನ್ನೂ ಸಂದರ್ಶಿಸುವೆ. ಅದರ ಫಲವೇನು ? ಅದನ್ನು ವಿಸ್ತಾರವಾಗಿ ಉಪದೇಶಿಸು.

**ನಾರದ :-** ರಾಜನೆ, ಹಿಂದೆ ದಿಲೀಪರಾಜನು ಒಂದು ವ್ರತವನ್ನು ಕೈಗೊಂಡು ದೇವಋಷಿ ಗಂಧರ್ವ ಸೇವಿತವಾದ ಗಂಗಾದ್ವಾರದಲ್ಲಿ ಪಿತೃದೇವಋಷಿಗಳನ್ನು ವಿಧಿಪೂರ್ವಕವಾಗಿ ಆರಾಧಿಸುತ್ತಿದ್ದನು. ಆಗ ಒಮ್ಮೆ ವಶಿಷ್ಠರು ಬಂದರು. ರಾಜ ಪುರೋಹಿತನಾದ ಆ ಮುನಿವರ್ಯನನ್ನು ಕಂಡು ಆನಂದದಿಂದ ಅರ್ಘ್ಯಾದಿಗಳನ್ನಿತ್ತು ಸತ್ಕರಿಸಿದ ದಿಲೀಪ. 'ನಾನು ನಿನ್ನ ದಾಸ ದಿಲೀಪ. ನಿನ್ನ ದರ್ಶನದಿಂದ ನನ್ನ ಎಲ್ಲ ಪಾಪಗಳೂ ಕಳೆದವು' ಎಂದ. ವ್ರತಾಚರಣೆ ವೇದಾಧ್ಯಯನಗಳ ಕಾಯಕ್ಲೇಶದಿಂದ ಸೊರಗಿ ಹೋಗಿದ್ದ ಮಹಾರಾಜನನ್ನು ಕಂಡು ಸಂತೋಷಪಟ್ಟರು ವಶಿಷ್ಠ ಮುನಿಗಳು.

**ವಶಿಷ್ಠ :-** ಮಗು, ನಿನ್ನ ಈ ವಿನಯ ಧರ್ಮ ಸತ್ಯಗಳನ್ನು ಕಂಡು ನನಗೆ ಸಂತೋಷ ವಾಗುತ್ತಿದೆ. ನಿನ್ನ ಧರ್ಮಾಚರಣೆಯಿಂದ ನಿನ್ನ ಪಿತೃಗಳಿಗೆ ಸದ್ಗತಿ ಉಂಟುಮಾಡಿರುವೆ. ನಿನ್ನಲ್ಲಿ ನನಗೆ ಮಮತೆ ಹೆಚ್ಚುತ್ತಿದೆ. ನಿನ್ನ ಅಭೀಷ್ಟವೇನಿದೆ. ಹೇಳು ನಾನು ಪೂರೈಸುತ್ತೇನೆ.

**ದಿಲೀಪ :-** ಗುರುವೆ, ಸರ್ವಲೋಕ ವಂದ್ಯನಾದ ನಿನ್ನ ದರ್ಶನ ದೊರಕಿರುವುದು ನನ್ನ ಭಾಗ್ಯ. ನಿನ್ನ ಅನುಗ್ರಹಕ್ಕೂ ನಾನು ಪಾತ್ರನಾಗಿರುವುದಾದರೆ ನನ್ನ

ಜಿಜ್ಞಾಸೆಯೊಂದನ್ನು ಪರಿಹರಿಸು. ಪೃಥಿವಿಯ ಎಲ್ಲ ತೀರ್ಥಗಳನ್ನು ಸಂದರ್ಶಿಸುವುದರಿಂದೇನು ಫಲ ?. ಹೇಳು.

**ವಶಿಷ್ಠ :-** ಯಾರ ಕೈ ಕಾಲು ಮನಸ್ಸು ದೃಢವಾಗಿರುತ್ತದೊ ವಿದ್ಯೆ, ತಪಸ್ಸು, ಕೀರ್ತಿ ಅಪರಿಗ್ರಹ ಸಂತೋಷ, ನಿಯಮ, ಶೌಚ, ನಿರಹಂಕಾರ, ವ್ರತೋಪವಾಸ, ಅಕ್ರೋಧ ಸತ್ಯನಿಷ್ಠೆ, ಭೂತದಯೆ, ಇವೆಲ್ಲ ಯಾರಲ್ಲಿರುವುದೊ ಅವರಿಗೆ ತೀರ್ಥಯಾತ್ರೆಯ ಫಲ ಪೂರ್ತಿಯಾಗಿ ಲಭಿಸುವುದು. ಯಜ್ಞಗಳನ್ನು ಮಾಡಲು ಅನೇಕ ಸಾಧನ ಸಾಮಗ್ರಿಬೇಕು. ಹೇರಳ ಸಂಪತ್ತುಳ್ಳವರು ಅಥವಾ ರಾಜರು ಮಾತ್ರ ಅವುಗಳನ್ನು ಮಾಡಲು ಸಮರ್ಥರು. ಆದರೆ ತೀರ್ಥಯಾತ್ರೆಯನ್ನು ಬಡವರೂ ಮಾಡಬಲ್ಲರು. ಯಜ್ಞಕ್ಕೆ ಸಮಾನವಾದ ಫಲವನ್ನು ಹೊಂದಬಲ್ಲರು. ಋಷಿಗಳು ಆಡುವ ರಹಸ್ಯವಾದ ಒಂದು ಕಿವಿಮಾತು ಏನೆಂದರೆ ತೀರ್ಥಯಾತ್ರೆ. ಯಜ್ಞಕ್ಕಿಂತಲೂ ಹೆಚ್ಚು ಪುಣ್ಯತರುತ್ತದೆ.

ಪುಷ್ಕರವೆಂಬುದು ಮನುಷ್ಯರಿಗೆ ಲಭ್ಯವಿರುವ ದೇವಲೋಕದ ತೀರ್ಥ. ಮೂರು ಲೋಕದಲ್ಲಿ ಪ್ರಸಿದ್ಧವಾದ ಈ ತೀರ್ಥವನ್ನು ಸೇವಿಸಿದರೆ ದೇವದೇವನಂತಾಗಬಹುದು. ಹತ್ತುಕೋಟಿ ಸಾವಿರ ತೀರ್ಥಗಳ ಫಲ ಪುಷ್ಕರದಲ್ಲಿ ತ್ರಿಸಂಧ್ಯೆಗಳಲ್ಲಿ ಲಭಿಸಬಹುದು. ಆದಿತ್ಯರು ವಸುಗಳು ರುದ್ರರು ಸಾಧ್ಯರು ಮರುತ್ತುಗಳು ಗಂಧರ್ವರು ಅಪ್ಸರೆಯರು ಎಲ್ಲರೂ ಇಲ್ಲಿರುವರು. ದೇವತೆಗಳು, ದೈತ್ಯರು, ಋಷಿಗಳು ಇಲ್ಲಿ ತಪಸ್ಸುಮಾಡಿ ದಿವ್ಯಯೋಗ ಪಡೆಯುವರು. ಪುಷ್ಕರ ಯಾತ್ರೆಮಾಡಲು ಸಂಕಲ್ಪಿಸಿದರೂ ಎಲ್ಲ ಪಾಪಪರಿಹಾರವಾಗುತ್ತದೆ. ಸ್ವರ್ಗ ಲಭಿಸುತ್ತದೆ. ಬ್ರಹ್ಮನು ಇಲ್ಲಿ ಸದಾ ನೆಲೆಸಿದ್ದಾನೆ. ಇಲ್ಲಿ ಸ್ನಾನಮಾಡಿ ಪಿತೃದೇವತಾರಾಧನೆ ಮಾಡಿದರೆ ಅಶ್ವಮೇಧಕ್ಕಿಂತ ಹತ್ತುಪಾಲು ಹೆಚ್ಚಿನ ಫಲವಿದೆ. ಇಲ್ಲಿ ಒಬ್ಬ ವಿಪ್ರನಿಗೆ ಅನ್ನ ದಾನಮಾಡಿದ್ದರೂ ಬ್ರಹ್ಮಲೋಕ ಪ್ರಾಪ್ತವಾಗುತ್ತದೆ. ಬೆಳಿಗ್ಗೆ ಸಂಜೆ ಕೈಮುಗಿದು ಪುಷ್ಕರವನ್ನು ನೆನೆದರೆ ಎಲ್ಲ ತೀರ್ಥಸ್ನಾನದ ಫಲ ಸಿಗುತ್ತದೆ.

**ಯಥಾ ಸುರಾಣಾಂ ಸರ್ವೇಷಾಮಾದಿಸ್ತು ಮಧುಸೂದನಃ ।**
**ತಥೈವ ಪುಷ್ಕರೋ ರಾಜಂಸ್ತೀರ್ಥಾನಾಮಾದಿರುಚ್ಯತೇ ॥**

ಎಲ್ಲ ದೇವತೆಗಳಿಗೂ ವಿಷ್ಣು ಹೇಗೋ ಮೊದಲಿಗನೊ ಹಾಗೆ ಎಲ್ಲ ತೀರ್ಥಗಳಿಗೂ ಪುಷ್ಕರ ಮೊದಲಿನದು.

ಹುಟ್ಟಿದಂದಿನಿಂದ ಮಾಡಿದ ಪಾಪವೆಲ್ಲ ಅಲ್ಲಿಗೆ ಹೋದರೆ ಪರಿಹಾರವಾಗುತ್ತದೆ. ಅಲ್ಲಿ ಹನ್ನೆರಡು ವರ್ಷಗಳ ಕಾಲ ನಿಯಮ ಶೌಚಗಳಿಂದ ಇದ್ದರೆ ಎಲ್ಲ ಯಜ್ಞಗಳ ಫಲವಿದೆ. ಬ್ರಹ್ಮಲೋಕವೂ ಲಭಿಸುತ್ತದೆ. ನೂರುವರ್ಷ ಅಗ್ನಿಹೋತ್ರಮಾಡಿದರೂ ಒಂದು ಕಾರ್ತಿಕ ಹುಣ್ಣಿಮೆ ಪುಷ್ಕರದಲ್ಲಿ ವಾಸ ಮಾಡಿದರೂ ಫಲವು ಒಂದೇ ಆಗಿರುತ್ತದೆ.

**ದುಷ್ಕರಂ ಪುಷ್ಕರೇ ಗಂತುಂ ದುಷ್ಕರಂ ಪುಷ್ಕರೇ ತಪಃ**
**ದುಷ್ಕರಂ ಪುಷ್ಕರೇ ದಾನಂ ವಸ್ತುಂ ಚೈವ ಸುದುಷ್ಕರಂ**

ಪುಷ್ಕರಕ್ಕೆ ಹೋಗುವುದೇ ಕಷ್ಟ. ಅಲ್ಲಿ ತಪಸ್ಸು ದಾನಗಳನ್ನು ಮಾಡುವುದು ಇನ್ನೂ ಕಷ್ಟ. ಅಲ್ಲಿ ವಾಸ ಮಾಡುವುದು ಬಲು ಕಷ್ಟ.

**ವಶಿಷ್ಠ :-** ತೀರ್ಥಯಾತ್ರೆಮಾಡುತ್ತ ಭೂಪ್ರದಕ್ಷಿಣೆಮಾಡುವವನು ಮೊದಲಿಗೆ ಜಂಬೂಮಾರ್ಗಕ್ಕೆ ಹೋಗಿ ಪಿತೃದೇವಋಷಿಗಳನ್ನು ಆರಾಧಿಸಬೇಕು. ಆದರಿಂದ ಅಶ್ವಮೇಧದ ಫಲವನ್ನು ಹೊಂದಿ ವಿಷ್ಣುಲೋಕವನ್ನು ಸೇರುವನು. ಅಲ್ಲಿ ಐದು ದಿನ ಉಪವಾಸವಿದ್ದು ಆರನೇದಿನ ಸಕಾಲದಲ್ಲಿ ಪಾರಣಮಾಡಿದವನಿಗೆಂದೂ ದುರ್ಗತಿಯಿಲ್ಲ. ಉತ್ತಮ ಸಿದ್ಧಿಯನ್ನೇ ಪಡೆಯುವನು. ಬಳಿಕ ದುಲಿಕಾಶ್ರಮಕ್ಕೆ ಹೋದರೆ ದುರ್ಗತಿ ಪರಿಹಾರ, ಸ್ವರ್ಗಪ್ರಾಪ್ತಿ. ಅಗಸ್ತ್ಯಾಶ್ರಮದಲ್ಲಿ ಪಿತೃದೇವತಾರ್ಚನೆಮಾಡುತ್ತ ಮೂರು ದಿನ ಉಪವಾಸ ಮಾಡಿದರೆ ಅಗ್ನಿಷ್ಟೋಮಫಲ. ಶಾಕ ಅಲ್ಲವೆ ಫಲಗಳನ್ನು ತಿಂದು ವಾಸಮಾಡಿದರೆ ಷಣ್ಮುಖನ ಲೋಕ ದೊರೆಯುತ್ತದೆ. ಲಕ್ಷ್ಮಿಯು ನೆಲೆಸಿರುವ ಕನ್ಯಾಶ್ರಮ ಪವಿತ್ರ ಧರ್ಮಾರಣ್ಯಗಳಲ್ಲಿ ಪ್ರವೇಶಮಾಡಿದ ಮಾತ್ರದಿಂದಲೇ ಎಲ್ಲ ಪಾಪ ಪರಿಹಾರ. ಅಲ್ಲಿ ದೇವತಾರಾಧನೆ ಮಾಡಿದರೆ ಎಲ್ಲ ಅಭೀಷ್ಟಗಳನ್ನು ಪೂರೈಸುವ ಯಜ್ಞದ ಫಲವಿದೆ.

ಅಲ್ಲಿಂದ ಯಯಾತಿ ಪತನಕ್ಕೆ ಹೋಗಿ ಅಶ್ವಮೇಧದ ಫಲವನ್ನು ಹೊಂದಬೇಕು. ಅಲ್ಲಿಂದ ಮಹಾಕಾಲಕ್ಕೆ ಹೋಗಿ ಅಲ್ಲಿರುವ ಕೋಟಿ ತೀರ್ಥದಲ್ಲಿ ಸ್ನಾನಮಾಡಿದರೆ ಅಶ್ವಮೇಧದ ಫಲ. ಭದ್ರವಟವೆಂಬ ಶಿವನ ಪವಿತ್ರ ಕ್ಷೇತ್ರವನ್ನು ಸೇರಿದರೆ ಸಹಸ್ರ ಗೋದಾನದ ಫಲವಿದೆ. ಶಿವನ ಅನುಗ್ರಹದಿಂದ ಅವನ ಗಣಗಳಿಗೊಡೆಯನೂ ಆಗಬಹುದು. ಮುಂದೆ ನರ್ಮದಾ ನದಿಯನ್ನು ಸೇರಿ ಪಿತೃದೇವತಾರಾಧನೆ ಮಾಡಿದರೆ ಅಗ್ನಿಷ್ಟೋಮಫಲವಿದೆ.

**ಯುಧಿಷ್ಠಿರ :-** ನಾರದರೆ, ವಶಿಷ್ಠರು ದಿಲೀಪನಿಗೆ ಹೇಳಿದ ನರ್ಮದಾ ತೀರ್ಥದ ಬಗ್ಗೆ ಇನ್ನೂ ಹೆಚ್ಚಿನ ವಿಷಯಗಳನ್ನು ನಮಗೆ ಉಪದೇಶಿಸಿರಿ. ಅದು ಹೇಗೆ ಪ್ರಖ್ಯಾತವಾಯಿತು. ?

**ನಾರದ:-** ನರ್ಮದೆ ಒಂದು ಶ್ರೇಷ್ಠ ನದಿ. ಎಲ್ಲ ಪಾಪಗಳನ್ನು ಪರಿಹರಿಸಬಲ್ಲುದು. ಎಲ್ಲ ಚರಾಚರಗಳಿಗೂ ತಾರಕವೆನಿಸಿರುವುದು. ಅದರ ಮಹಾತ್ಮೆಯ ಬಗ್ಗೆ ಹಿಂದೆ ವಶಿಷ್ಠರು ಹೇಳಿದುದನ್ನೇ ನಿನಗೆ ಹೇಳುವೆ.

ಗಂಗೆ ಕನಖಲದಲ್ಲಿ ಸರಸ್ವತಿ ಕುರುಕ್ಷೇತ್ರದಲ್ಲಿ ಪವಿತ್ರ. ನರ್ಮದೆ ಎಲ್ಲ ಕಡೆಗಳಲ್ಲಿಯೂ ಪವಿತ್ರವೆ. ಮೂರು ಸಪ್ತಾಹದಲ್ಲಿ ಸರಸ್ವತಿ, ಒಂದು ಸಪ್ತಾಹದಲ್ಲಿ ಯಮುನೆ, ತಕ್ಷಣದಲ್ಲಿ ಗಂಗೆ, ಕೇವಲ ದರ್ಶನದಿಂದಲೆ ನರ್ಮದೆ ಪವಿತ್ರಗೊಳಿಸುವುದು. ನರ್ಮದೆಯ ಬಳಿ ದೇವ ಅಸುರ ಗಂಧರ್ವ ಋಷಿಗಳು ತಪಸ್ಸು ಮಾಡಿ ಸಿದ್ಧಿಪಡೆದಿದ್ದಾರೆ. ಅಲ್ಲಿ ಸ್ನಾನಮಾಡಿ ಜಿತೇಂದ್ರಿಯನಾಗಿ ನಿಯಮ ಪೂರ್ವಕವಾಗಿ ಒಂದು ದಿನ ಉಪವಾಸ ಮಾಡಿದರೆ ನೂರುಕುಲವನ್ನು ಉದ್ಧರಿಸಿದಂತಾಗುತ್ತದೆ. ಜನೇಶ್ವರದಲ್ಲಿ ಸ್ನಾನ ಪಿಂಡಪ್ರದಾನ ಮಾಡುವುದರಿಂದ ಮಹಾಪ್ರಳಯದವರೆಗೂ ಪಿತೃಗಳು ತೃಪ್ತಿಯಿಂದಿರುತ್ತಾರೆ.

ಅಮರಕಂಟಕ ಪರ್ವತದ ಸುತ್ತಲೂ ಕೋಟಿ ರುದ್ರರು ನೆಲೆಸಿದ್ದಾರೆ. ಅಲ್ಲಿ ಸ್ನಾನ ಮಾಡಿದರೆ ಅವರು ಪ್ರೀತರಾಗುತ್ತಾರೆ. ಪಶ್ಚಿಮ ಭಾಗಗದಲ್ಲಿ ಸ್ವಯಂ ಶಿವನೆ ನೆಲೆಸಿದ್ದಾನೆ. ಅಲ್ಲಿ ಸ್ನಾನ ಮಾಡಿ ಬ್ರಹ್ಮಚಾರಿಯಾಗಿ ಜಿತೇಂದ್ರಿಯನಾಗಿ ಪಿತೃಗಳಿಗೆ ತಿಲೋದಕವನ್ನಿತ್ತರೆ ಏಳು ಕುಲದವರು ಸ್ವರ್ಗದಲ್ಲಿ ವಾಸಮಾಡುತ್ತಾರೆ. ಅರವತ್ತು ಸಾವಿರವರ್ಷಗಳ ಕಾಲ

ತಾನೂ ಅಲ್ಲಿ ಸುಖ ಅನುಭವಿಸಿ ಪವಿತ್ರ ಕುಲದಲ್ಲಿ ಶ್ರೀಮಂತ ದಾನಶೀಲ ಧಾರ್ಮಿಕನಾಗಿ ಹುಟ್ಟಿ ತಿರುಗಿ ಆ ತೀರ್ಥವನ್ನು ಸೇವಿಸುವನು. ನೂರುಕುಲವನ್ನು ಉದ್ಧರಿಸಿ ರುದ್ರಲೋಕವನ್ನು ಸೇರುವನು. ನರ್ಮದೆಯ ಉದ್ದ ನೂರು ಯೋಜನ, ಅಗಲ ಎರಡು ಯೋಜನ. ಅಮರ ಕಂಟಕದ ಸುತ್ತಲೂ ಅರವತ್ತು ಕೋಟಿ ಅರವತ್ತು ಸಾವಿರ ತೀರ್ಥಗಳಿವೆ. ಅಲ್ಲಿ ಬ್ರಹ್ಮಚರ್ಯ ಶೌಚ ಅಕ್ರೋಧ ಇಂದ್ರಿಯ ನಿಗ್ರಹ ಅಹಿಂಸೆ ಭೂತದಯೆಗಳನ್ನು ಹೊಂದಿ ಕ್ಷೇತ್ರಪಾಲದರ್ಶನ ಮಾಡುತ್ತಿದ್ದರೆ ಒಂದು ಲಕ್ಷ ವರ್ಷಗಳಕಾಲ ಸ್ವರ್ಗದಲ್ಲಿ ದಿವ್ಯ ಭೋಗಗಳನ್ನು ಅನುಭವಿಸಿ ಭೂಮಿಯಲ್ಲಿ ರಾಜನಾಗಿ ಹುಟ್ಟುತ್ತಾನೆ. ಇಂದ್ರನಂತೆ ಮೆರೆಯುತ್ತ ನೂರುವರ್ಷ ಬಾಳುತ್ತಾನೆ. ಅಮರಕಂಟಕದಲ್ಲಿ ಅಗ್ನಿ ಪ್ರವೇಶ ಜಲಪ್ರವೇಶ ಪ್ರಾಯೋಪವೇಶಗಳಿಂದ ಮೋಕ್ಷ ದೊರೆಯುವುದು. ಪರ್ವತದಿಂದ ಕೆಳಗೆ ಹಾರಿ ಪ್ರಾಣತೊರೆದರೆ ರಾಜನಾಗಿ ಹುಟ್ಟಿ ಭೂಮಿಯಲ್ಲಿ ಇನ್ನೆಲ್ಲಿಯೂ ಇಲ್ಲದ ವೈಭವವನ್ನು ಭೋಗಿಸುತ್ತಾನೆ. ಆ ಪರ್ವತದ ಪಶ್ಚಿಮದಲ್ಲಿರುವ ಜಾಲೇಶ್ವರದಲ್ಲಿ ಪಿಂಡಪ್ರದಾನ ಸಂಧ್ಯೋಪಾಸನೆಗಳಿಂದ ಪಿತೃಗಳು ಹತ್ತು ವರ್ಷ ತೃಪ್ತರಾಗಿರುತ್ತಾರೆ.

ನರ್ಮದೆಯ ದಕ್ಷಿಣದಲ್ಲಿ ಕಪಿಲಾನದಿ ಹರಿಯುತ್ತದೆ. ಇಬ್ಬದಿಗಳಲ್ಲಿ ಸರಲ ಅರ್ಜುನ ವೃಕ್ಷಗಳು ಬೆಳೆಯುತ್ತವೆ. ಅಲ್ಲಿ ನೂರುಕೋಟಿ ತೀರ್ಥಗಳಿವೆ. ಎಂದು ಪುರಾಣ ಹೇಳುತ್ತಿದೆ. ಅಲ್ಲಿ ಮರಗಳು ಬಿದ್ದು ನರ್ಮದೆಯ ನೀರಿನ ಸ್ಪರ್ಶಹೊಂದಿದರೆ ಅವೂ ಪರಗತಿಯನ್ನು ಹೊಂದುವವು.

ವಿಶಲ್ಯಕರಣಿ ಎಂಬ ಇನ್ನೊಂದು ನದಿಯಲ್ಲಿ ಸ್ನಾನಮಾಡಿದರೆ ಎಲ್ಲ ನೋವು ಪರಿಹಾರವಾಗುತ್ತದೆ. ಅಲ್ಲಿ ಒಂದು ದಿನ ಉಪವಾಸಮಾಡಿದರೆ ನೂರುಕುಲ ಉದ್ಧಾರವಾಗುತ್ತದೆ. ಕಪಿಲೆ ವಿಶಲ್ಯೆಯರ ತೀರದಲ್ಲಿ ಸ್ನಾನ ಮಾಡಿದರೆ ಅಶ್ವಮೇಧದ ಫಲ. ಪ್ರಾಯೋಪವೇಶ ಮಾಡಿದರೆ ಸ್ವರ್ಗಪ್ರಾಪ್ತಿ. ಸರಸ್ವತಿ, ಗಂಗೆ, ನರ್ಮದೆಯರಲ್ಲಿ ಸ್ನಾನ, ದಾನಗಳಿಗೆ ಸಮಾನಫಲವೆಂದು ಶಿವನೆ ಹೇಳಿದ್ದಾನೆ. ನರ್ಮದೆಯ ಪವಿತ್ರಜಲವನ್ನು ಸೇವಿಸಿದರೂ ಎಲ್ಲ ಪಾಪ ಪರಿಹಾರ ವಾಗುವುದು. ತೀರದಲ್ಲಿ ಕುಳಿತು ಒಂದುದಿನ ಉಪವಾಸ ಮಾಡಿದರೆ ಬ್ರಹ್ಮಹತ್ಯಾ ಪಾಪವೂ ಪರಿಹಾರವಾಗುವುದು. ಹೀಗೆ ಮೂರುಲೋಕವನ್ನು ಪವಿತ್ರಗೊಳಿಸುವದು ಈ ನರ್ಮದೆ.

**ನಾರದ :-** ಧರ್ಮರಾಜ, ಮೂರ್ಲೋಕದಲ್ಲಿ ಪ್ರಸಿದ್ಧವಾದ ಜ್ವಾಲೇಶ್ವರ ತೀರ್ಥದ ಉತ್ಪತ್ತಿಯ ವೃತ್ತಾಂತವನ್ನು ಹೇಳುತ್ತೇನೆ. ಕೇಳು. ಹಿಂದೊಮ್ಮೆ ದೇವತೆಗಳು ಮರುತ್ತುಗಳು ಮತ್ತು ಋಷಿಗಳು ದೇವದೇವನಾದ ಮಹೇಶ್ವರನನ್ನು ಸಮೀಪಿಸಿ ಸ್ತೋತ್ರಮಾಡಿದರು. ಭಯದಿಂದ ಉದ್ವಿಗ್ನರಾಗಿ ವಿರೂಪಾಕ್ಷ, ಪ್ರಭೋ ನಮ್ಮನ್ನು ಕಾಪಾಡು ಎಂದರು.

**ಶಿವ :-** ಋಷಿಗಳೇ, ದೇವತೆಗಳೇ, ನಿಮಗೆಲ್ಲರಿಗೂ ಸ್ವಾಗತ, ನೀವು ಬಂದ ಕಾರಣವೇನು ? ನಿಮ್ಮ ದುಃಖವೇನು ? ನಿಮಗೆ ಯಾರಿಂದ ಭಯ ಉಂಟಾಯಿತು ?

**ಋಷಿಗಳು :-** ಮಹಾಬಲಶಾಲಿ ಎಂದು ಪ್ರಸಿದ್ಧನಾದ ಬಾಣನೆಂಬ ದಾನವ ಮೂರು ಪಟ್ಟಣಗಳನ್ನು ಆಕಾಶದಲ್ಲಿ ನಿರ್ಮಿಸಿಕೊಂಡು ಸಂಚರಿಸುತ್ತಿದ್ದಾನೆ. ಅವನ

ಭಯದಿಂದ ನಾವು ನಿನ್ನನ್ನು ಮೊರೆಹೊಕ್ಕಿದ್ದೇವೆ. ಕಾಪಾಡು, ನಮಗೆ ನೀನೇಗತಿ. ನೀನು ಮನಸ್ಸು ಮಾಡಿದರೆ ದೇವತೆಗಳನ್ನು ಸುಖವಾಗಿ ಇರಿಸಬಲ್ಲೆ.

**ಶಿವ :-** ದುಃಖಿಸಬೇಡಿ, ನೀವು ಹೇಳಿದಂತೆ ಮಾಡುತ್ತೇನೆ.

ಶಿವನು ಅವರನ್ನು ಹೀಗೆ ಸಂತೈಸಿ ಆಶ್ವಾಸನೆ ಇತ್ತು ನರ್ಮದಾತೀರದಲ್ಲಿ ಕುಳಿತು ಆ ತ್ರಿಪುರಾಸುರನನ್ನು ಹೇಗೆ ವಧಿಸಬೇಕೆಂದು ಚಿಂತಿಸಿದ. ಬಳಿಕ ನಾರದರನ್ನು ಸ್ಮರಿಸಿದ. ಒಡನೆ ನಾರದರು ಬಂದು ಮುಂದೆ ನಿಂತರು.

**ನಾರದ :-** ಮಹದೇವ, ಆಜ್ಞಾಪಿಸು. ನನ್ನನ್ನೇಕೆ ಸ್ಮರಿಸಿದೆ ? ನಾನು ಯಾವ ಕಾರ್ಯವನ್ನು ಮಾಡಬೇಕು, ಹೇಳು.

**ಶಿವ :-** ನಾರದ, ಬಾಣಾಸುರನ ಮೂರು ಪಟ್ಟಣಗಳ ಕಡೆಗೆ ಹೋಗು. ಆ ಪಟ್ಟಣಗಳಲ್ಲಿರುವ ಪುರುಷರು ದೇವತೆಗಳಂತೆ, ಸ್ತ್ರೀಯರು ಅಪ್ಸರೆಯಂತೆ ಇದ್ದಾರೆ. ಆ ಸ್ತ್ರೀಯರ ತೇಜಸ್ಸಿನಿಂದ ತ್ರಿಪುರಗಳು ಆಗಸದಲ್ಲಿ ಸಂಚರಿಸುತ್ತಿವೆ. ನೀನು ಅಲ್ಲಿಗೆ ಹೋಗಿ ಅವರಿಗೆ ಬೇರೆ ವ್ರತನಿಯಮಗಳನ್ನು ಉಪದೇಶಿಸು.

ಹೀಗೆ ಆದೇಶವನ್ನು ಪಡೆದು ಮುನಿ ತ್ರಿಪುರವನ್ನು ಪ್ರವೇಶಿಸಿದನು. ನೂರು ಯೋಜನ ಅಗಲ ಇನ್ನೂರು ಯೋಜನ ಉದ್ದದ, ನಾನಾರತ್ನಗಳಿಂದ ಶೋಭಿತವಾದ ಆ ಪಟ್ಟಣಗಳಲ್ಲಿ ಬಾಣನು ವಿರಾಜಿಸುತ್ತಿದ್ದ. ನಾನಾ ಆಭರಣಗಳನ್ನು ತೊಟ್ಟು ಅವುಗಳಿಂದ ಮುಚ್ಚಿಹೋಗಿದ್ದ. ಅವನ ಮಡದಿಯರು ಚಿನ್ನ ರತ್ನಗಳಿಂದ ಅಲಂಕೃತರಾಗಿದ್ದರು. ನಾರದರು, ಬಂದುದನ್ನು ನೋಡಿ. ಆಸನದಿಂದೆದ್ದು ಬರಮಾಡಿಕೊಂಡನಾತ.

**ಬಾಣ :-** ದೇವರ್ಷಿ ನಾರದರು, ತಾವಾಗಿ ನಮ್ಮಲ್ಲಿಗೆ ದಯ ಮಾಡಿಸಿದಿರಿ. ನಾವು ಸಲ್ಲಿಸುವ ಅರ್ಘ್ಯ ಪಾದ್ಯ ಮುಂತಾದುದನ್ನು ಸ್ವೀಕರಿಸಬೇಕು. ಬಹು ಕಾಲದ ಮೇಲೆ ತಮ್ಮ ಆಗಮನವಾಗಿದೆ. ಈ ಆಸನದಲ್ಲಿ ಆಸೀನರಾಗಿರಿ.

ಹೀಗೆ ಮುನಿಯನ್ನು ಬಾಣ ಸತ್ಕರಿಸಿದ. ಅವನ ರಾಣಿ ಅನೌಪಮ್ಯೆ ಮುನಿಯನ್ನು ಕೇಳಿದಳು.

**ಅನೌಪಮ್ಯೆ :-** ಪೂಜ್ಯರೆ, ಮನುಷ್ಯಲೋಕದಲ್ಲಿ ಯಾವ ಯಾವ ವ್ರತ ನಿಯಮ ದಾನ ತಪಸ್ಸುಗಳಿಂದ ದೇವತೆಗಳು ಸಂತುಷ್ಟರಾಗುತ್ತಾರೆ ಹೇಳಿ.

**ನಾರದ :-** ತಿಲಧೇನುವನ್ನು ವೇದಜ್ಞ ಪಂಡಿತನಿಗೆ ದಾನ ಮಾಡಿದರೆ ಎಲ್ಲ ಸಾಗರ ದ್ವೀಪಗಳಿಂದ ಕೂಡಿದ ಭೂಮಿಯನ್ನೇ ದಾನ ಮಾಡಿದಂತಾಗುವುದು. ಸಮಸ್ತ ಭೋಗ ಗಳಿಂದ ಕೂಡಿದ, ಕೋಟಿ ಸೂರ್ಯರಂತೆ ಹೊಳೆವ ವಿಮಾನಗಳಲ್ಲಿ ಬಹುಕಾಲ ಅಕ್ಷಯ ಸುಖ ಹೊಂದಬಹುದು. ಅಷ್ಟಮಿ, ಚತುರ್ಥಿ, ದ್ವಾದಶಿ, ವಿಷುವ ಸಂಕ್ರಾಂತಿ, ದಿನಚ್ಛಿದ್ರ ಮುಖ ಈ ಪವಿತ್ರ ದಿನಗಳಲ್ಲಿ ಉಪವಾಸ ಮಾಡುವ ಸ್ತ್ರೀಯರಿಗೆ ಸ್ವರ್ಗ ಸಿಗುವುದರಲ್ಲಿ ಸಂಶಯವಿಲ್ಲ. ಅವರು ಕಲಿಕಾಲದಿಂದ ಮುಕ್ತರಾಗುವರು. ಎಲ್ಲ ಪಾಪಗಳಿಂದ ದೂರವಾಗುವರು. ದೇವಿ, ನೀನು ಇವುಗಳಲ್ಲಿ ಯಾವ ವ್ರತ ದಾನಗಳನ್ನೂ ಮಾಡಬಹುದು.

ಈ ಮಾತನ್ನು ಕೇಳಿ ರಾಣಿ ಹೇಳಿದಳು.

**ಅನೌಪಮ್ಯೆ :-** ಮುನಿಶ್ರೇಷ್ಠರೆ, ಅಭೀಷ್ಟವಾದ ಎಲ್ಲ ಪದಾರ್ಥಗಳನ್ನೂ ನಿಮಗೆ ದಾನಮಾಡುವೆ. ಸುವರ್ಣ ಮಣಿ ರತ್ನಗಳನ್ನೂ ವಸ್ತ್ರ ಆಭರಣಗಳನ್ನೂ ಇನ್ನೂ ಬೇಕೆನಿಸುವ ಯಾವ ದುರ್ಲಭವಾದ ವಸ್ತುವನ್ನೂ ಕೊಡುವೆ ಸ್ವೀಕರಿಸಿ. ಹರಿಹರರು ಸುಪ್ರೀತರಾಗಲಿ.

**ನಾರದ :-** ದೇವಿ, ಯಾವನಾದರೊಬ್ಬ ಬಡಬ್ರಾಹ್ಮಣನಿಗೆ ನೀನು ಈ ದಾನಗಳನ್ನು ಕೊಡು. ನಾನು ಕೇವಲ ಭಕ್ತಿ ಶೀಲಗಳನ್ನು ಬಯಸುವವನು.

ಹೀಗೆ ಹೇಳಿ ನಾರದರು ಬಾಣನ ರಾಣೀವಾಸದ ಎಲ್ಲ ಸ್ತ್ರೀಯರ ಮನಸ್ಸನ್ನು ಬೇರೆ ಕಡೆ ತಿರುಗಿಸಿ ಹೋದರು. ಆಗ ತ್ರಿಪುರಗಳಲ್ಲಿ ಛಿದ್ರ ಉಂಟಾಯಿತು.

**ನಾರದ :-** ಅತ್ತ ಶಿವನು ನರ್ಮದಾ ತೀರದಲ್ಲಿ ಕುಳಿತು ಬಾಣಾಸುರ ವಧೆಗೆ ಉಪಾಯವನ್ನು ಯೋಚಿಸಿದನು. ಕೊನೆಗೆ ಮಂದರವೆಂಬ ಬಿಲ್ಲಿಗೆ ವಾಸುಕಿಯೆಂಬ ಹೆದೆಯೇರಿಸಿದ. ವಿಷ್ಣುಬಾಣವಾದನು. ಮುಂದೆ ಅಗ್ನಿವಾಯುಗಳು. ಸರ್ವದೇವ ಮಯವಾದ ರಥವನ್ನು ನಾಲ್ಕುವೇದಗಳೆಂಬ ಕುದುರೆಗಳು ಎಳೆದುವು. ಬ್ರಹ್ಮನು ಸಾರಥಿ. ಒಂದು ಸಾವಿರ ವರ್ಷಗಳ ಕಾಲ ಶಿವನು ಸ್ಥಾಣುವಾಗಿ ಕಾಯುತ್ತ ಕುಳಿತು ಒಮ್ಮೆ ಆ ಮೂರು ಪಟ್ಟಣಗಳು ಒಂದುಕಡೆ ಸೇರಿದಾಗ ಬಾಣವನ್ನೆಸೆದ. ಅಲ್ಲಿ ಸ್ತ್ರೀಯರ ತೇಜಸ್ಸು ಮಸುಳಿಸಿತ್ತು. ಬಲಕುಂದಿತ್ತು. ಎಲ್ಲೆಲ್ಲೂ ಉತ್ಪಾತಗಳು ಕಂಡುಬರುತ್ತಿದ್ದುವು. ಮರದ ಬೊಂಬೆಗಳು ಅಟ್ಟಹಾಸ ಮಾಡುತ್ತಿದ್ದವು ಕಣ್ಣು ತೆರೆದು ನೋಡುತ್ತಿದ್ದುವು. ಸ್ವಪ್ನದಲ್ಲಿ ತಾವು ಕೆಂಪು ಬಟ್ಟೆ ಉಟ್ಟಿದ್ದುದನ್ನು ಜನರು ಕಾಣುತ್ತಿದ್ದರು. ಅವರ ಬಲ ಬುದ್ಧಿ ಎಲ್ಲವೂ ರುದ್ರನ ಕೋಪದಿಂದ ನಾಶವಾಯಿತು. ಮೃತ್ಯುವಿನಂತೆ ಅವನ ಬಾಣ ತ್ರಿಪುರವನ್ನು ಭೇದಿಸಿತು.

ಪ್ರಳಯಕಾಲದ ಬಿರುಗಾಳಿಯಂಥ ಸಂವರ್ತಕವಾಯು, ಅದರಿಂದ ಭುಗಿಲೆದ್ದ ಬೆಂಕಿ ಸರ್ವನಾಶ ಮಾಡತೊಡಗಿದುವು. ಎಲ್ಲೆಡೆ ಹಾಹಾಕಾರವೆದ್ದಿತು. ಅರಣ್ಯ ಪರ್ವತ ಉದ್ಯಾನ ಮನೆಗಳು ಹೊತ್ತಿಕೊಂಡು ಉರಿದುವು. ಹತ್ತು ದಿಕ್ಕುಗಳಲ್ಲಿ ಸಾವಿರ ನಾಲಿಗೆ ಚಾಚಿತು ಬೆಂಕಿ. ಜನರು ಒಂದು ಮನೆಯಿಂದ ಇನ್ನೊಂದು ಮನೆಗೆ ಹೋಗದಂತೆ ಹೊಗೆ ದಟ್ಟವಾಗಿ ತುಂಬಿತು. ದೊಡ್ಡ ದೊಡ್ಡ ಕಟ್ಟಡಗಳು ಜರಿದು ಬಿದ್ದುವು. ಬೆಟ್ಟದಂತೆ ರಾಶಿ ರಾಶಿಯಾಗಿ ಉರಿವ ಕೆಂಡಗಳು ಕಾಣಿಸಿದುವು. ಜನರು ತಮ್ಮ ಆಪ್ತ ಬಂಧುಗಳನ್ನು ಬಿಗಿದಪ್ಪಿಕೊಂಡು ಭಗವಂತನನ್ನು ರಕ್ಷಣೆಗಾಗಿ ಮೊರೆಯಿಟ್ಟರು. ಹಂಸಕಾರಂಡವ ಕಮಲಗಳಿಂದ ಕೂಡಿದ ಸರೋವರಗಳೂ ಬತ್ತಿ ಸುಟ್ಟುಹೋದುವು. ಹೆಣ್ಣು ಮಕ್ಕಳು ಶಿಶುಗಳು ವೃದ್ಧರು ಗೋವುಗಳು ಪಕ್ಷಿಗಳು ಕುದುರೆಗಳು ಎನ್ನದೆ ಎಲ್ಲವನ್ನೂ ಬೆಂಕಿ ನಿರ್ದಯತೆಯಿಂದ ಸುಡುತ್ತಮುನ್ನಡೆಯಿತು. ಜನರು ಕೆಲವರು ಮಡದಿಯರೊಂದಿಗೆ ಇದ್ದ ಹಾಗೇ ಸುಟ್ಟು ಹೋದರು. ಕೆಲವರು ನಿದ್ದೆ ಮಾಡುತ್ತಿದ್ದಂತೆಯೇ ಬೂದಿಯಾದರು ಕೆಲವರು ಮಕ್ಕಳನ್ನು ಅಪ್ಪಿಕೊಂಡರು ಅಸುನೀಗಿದರು. ಅಪ್ಸರೆಯರಂಥ ಚೆಲುವೆಯರು ಅಗ್ನಿಜ್ವಾಲೆಯ ಆಘಾತದಿಂದ ನೆಲಕ್ಕೊರಗಿದರು. ಓರ್ವ ಲಲನೆ ಕೈ ಮುಗಿದು ಬೆಂಕಿಯೊಡನೆ ಮಾತನಾಡಿದಳು.

ಓ ವೈಶ್ವಾನರನೆ, ಅಪರಾಧ ಮಾಡಿದೆವು. ಮನೆಯೆಂಬ ಪಂಜರದ ಕೋಗಿಲೆಗಳು ನಾವು. ಓ ಪಾಪಿ, ನಿರ್ದಯ, ನಿರ್ಲಜ್ಜ, ಅಬಲೆಯರಲ್ಲಿ ಏನೀ ನಿನ್ನ ಕೋಪ ? ನಿಗೊಂದಿಷ್ಟು ಲಜ್ಜೆಯಿಲ್ಲ, ಸಂಕೋಚವಿಲ್ಲ, ಸತ್ಯ ಶೌಚಗಳಿಲ್ಲ. ಲೋಕದಲ್ಲಿ ಹೆಣ್ಣು ಜಾತಿಯನ್ನು ಕೊಲ್ಲಲಾಗದೆಂದು ನೀನು ಕೇಳಿಲ್ಲವೆ ? ಹೆಣ್ಣನ್ನು ಪೀಡಿಸುವುದೂ ನಿನಗೊಂದು ಭೂಷಣವಾಯಿತು. ಅಂಗನೆಯರ ಮೇಲೆ ನಿನಗೆ ಕರುಣೆ ಇಲ್ಲವೆ ? ದಯೆ ಇಲ್ಲವೆ ? ದಾಕ್ಷಿಣ್ಯ ಇಲ್ಲವೆ ? ಹೆಣ್ಣೊಬ್ಬಳು ಸುಟ್ಟುಹೋಗುತ್ತಿದ್ದರೆ ಮ್ಲೇಚ್ಛ ಜಾತಿಯವರೂ ಕನಿಕರಗೊಳ್ಳುತ್ತಾರೆ. ನೀನು ಆ ಮ್ಲೇಚ್ಛರಿಗಿಂತಲೂ ನೀಚ, ಹೃದಯವಿಲ್ಲದವ, ದುರಾಚಾರಿಯೆ, ಹೆಣ್ಣುಗಳನ್ನೂ ಕೊಂದು ನಿನಗೇನು ಲಾಭವಿದೆ ? ದುಷ್ಟ, ನಿರ್ಲಜ್ಜ, ನಿರ್ದಯ, ಈ ಸಣ್ಣ ಮಕ್ಕಳನ್ನೂ ಸುಡುತ್ತಿರುವೆಯಲ್ಲ ? ಆಕೆ ಹೀಗೆ ನಾನಾ ರೀತಿಯಿಂದ ವಿಲಾಸಪ್ರಲಾಪಗಳನ್ನು ಮಾಡುತ್ತಿದ್ದರೆ ಇನ್ನೊಬ್ಬಳು ಪುತ್ರಶೋಕದಿಂದ ಕಂಗೆಟ್ಟು ಸಿಟ್ಟಾಗಿ ಬೆಂಕಿಯನ್ನು ಶಪಿಸಿದಳು. 'ಓ ಮ್ಲೇಚ್ಛನೆ ನಮ್ಮನ್ನೆಲ್ಲ ಹೀಗೆ ಸುಡುವ ನಿನಗೆಂಥ ದುರ್ಗತಿ ಕಾದಿದೆ ನೋಡು.' ಬೆಂಕಿ ಇವಾವುದನ್ನೂ ಲೆಕ್ಕಿಸದೆ ನಿರ್ದಯತೆಯಿಂದ ಎಲ್ಲರಿಗೂ ಶತ್ರುವಾಗಿ ಕೊಳ ಬಾವಿಗಳ ನೀರನ್ನೂ ಬಿಡದೆ ಎಲ್ಲವನ್ನೂ ಸುಡುತ್ತ ನುಡಿದ.

**ವೈಶ್ವಾನರ :-** ನಾನೇನೂ ಸ್ವತಂತ್ರನಾಗಿ ಈ ವಿನಾಶ ಕೃತ್ಯದಲ್ಲಿ ತೊಡಗಿಲ್ಲ. ಪ್ರಭುವಿನಾಜ್ಞೆಯನ್ನು ಪಾಲಿಸುತ್ತಿದ್ದೇನೆ. ಯಾರಲ್ಲಿಯೂ ನಾನು ದಯೆ ತೋರಲಾರೆ. ಮನ ಬಂದಂತೆ ವಿಧ್ವಂಸಮಾಡುತ್ತಲೆ ಓಡಾಡುವೆ.

ಪರಾಕ್ರಮಿಯಾದ ಬಾಣನೂ ತನ್ನ ಮೂರು ಪಟ್ಟಣಗಳು ಉರಿದು ಬೀಳುವುದನ್ನು ಕಂಡು ಹೇಳಿಕೊಂಡ.

**ಬಾಣ :-** ದೇವತೆಗಳು ನನ್ನನ್ನು ಹೀಗೆ ನಾಶ ಮಾಡಿದರೆ ? ದುರಾಚಾರಿಗಳು ! ದುರ್ಬಲರು ! ಈಶ್ವರನಲ್ಲಿ ನನ್ನ ಬಗ್ಗೆ ಏನೇನೋ ಹೇಳಿರಬೇಕು. ಆ ಈಶ್ವರನೂ ಚೆನ್ನಾಗಿ ವಿಚಾರಿಸದೆ ಎಲ್ಲವನ್ನೂ ಸುಡುತ್ತಿದ್ದಾನೆ. ಅವನನ್ನು ಹೊರತು ಇನ್ನಾರೂ ನನ್ನನ್ನು ಕೆಣಕಲಾರರು. ಹೀಗೆ ಹೇಳಿ ತಲೆಯ ಮೇಲೆ ಶಿವಲಿಂಗವನ್ನು ಹೊತ್ತು ಪುರದ್ವಾರದಿಂದ ಹೊರಗೆ ಬಂದನು. ತನ್ನ ಬಂಧುಮಿತ್ರರನ್ನು ಸ್ತ್ರೀಯರನ್ನೂ ರತ್ನಗಳನ್ನೂ ತೊರೆದು ಶಿವಲಿಂಗ ಒಂದನ್ನೇ ಹೊತ್ತು ಆತ ಹೊರಗೆ ಬಂದಿದ್ದ. ಶಿವನನ್ನು ಹೀಗೆ ಸುತ್ತಿಸಿದ.

**ಬಾಣ :-** ಶಿವನೆ, ನೀನು ನನ್ನನ್ನು ಕೊಲ್ಲುವುದಾದರೆ ಕೊಲ್ಲು. ಆದರೆ ನನ್ನ ಶಿವಲಿಂಗಕ್ಕೆ ಏನೂ ಬಾಧೆ ಉಂಟಾಗದಿರಲಿ. ನಾನು ಅದನ್ನು ಇಂದಿನವರೆಗೂ ಭಕ್ತಿಯಿಂದ ಪೂಜಿಸಿದ್ದೇನೆ. ಇದು ನನ್ನ ಕೈಯಲ್ಲಿದ್ದರೆ ನಿನ್ನ ಪಾದಗಳು ನನ್ನ ಕೈಲಿದ್ದಂತೆ ಜನ್ಮ ಜನ್ಮಗಳಲ್ಲಿಯೂ ನಾನು ನಿನ್ನ ಸೇವಕನಾಗುವೆ. ಶಿವನೆ ನಿನಗಿದೊ ನಮಸ್ಕಾರ.

**ಓಂ ಶಿವ ಶಂಕರ ಸರ್ವಕರಾಯ ನಮೋ ಭವಭೀಮ ಮಹೇಶ ಶಿವಾಯ ನಮಃ**
**ಕುಸುಮಾಯುಧದೇಹ ವಿನಾಶಕರ ತ್ರಿಪುರಾಂತಕರಾಂಧಕಚೂರ್ಣಕರ ॥**

ಮನ್ಮಥನ ಶರೀರವನ್ನು ಸುಟ್ಟು, ತ್ರಿಪುರಸಂಹಾರಮಾಡಿದ, ಅಂಧಕಾಸುರನನ್ನು ಪುಡಿಮಾಡಿದ ಶಿವನೆ, ನಿನಗಿದೊ ನಮಸ್ಕಾರ. ಹೀಗೆ ತೋಟಕ ವೃತ್ತದಲ್ಲಿ ರಚಿತವಾದ

ಐದು ಪದ್ಯಗಳಿಂದ ಸುತ್ತಿಸಿದ ಬಾಣನಿಗೆ ಶಿವಲೊಲಿದ ಮೈದೋರಿದ, ಅಭಯನೀಡಿದ. ಈ ಸ್ತೋತ್ರವನ್ನು ಪಠಿಸುವರೆಲ್ಲರಿಗೂ ಶಿವನೊಲಿವ.

**ಶಿವ :-** ಮಗು, ಹೆದರಬೇಡ. ನೀನು ಇಂದಿನಿಂದ ನಿನ್ನ ಮಕ್ಕಳುಮರಿಗಳು ಮಡದಿಯರು ದಾಸದಾಸಿಯರೊಡನೆ ಚಿನ್ನದ ಪಟ್ಟಣದಲ್ಲಿ ಸುಖವಾಗಿರು. ನಿನ್ನನ್ನು ದೇವತೆಗಳೂ ಬಾಧಿಸಲಾರರು. ಮುಂದೆ ನಿನಗೆ ಅಕ್ಷಯಲೋಕವೂ ಲಭಿಸುವುದು.

ಹೀಗೆ ಹೇಳಿ ಶಿವನು ಬೆಂಕಿಯನ್ನು ತಡೆದು ನಿಲ್ಲಿಸಿದ. ಎರಡು ಪಟ್ಟಣಗಳು ಆಗಲೆ ಬೂದಿಯಾಗಿದ್ದವು. ಒಂದು ಶ್ರೀಶೈಲದ ಮೇಲೆ ಇನ್ನೊಂದು ಅಮರ ಕಂಟಕ ಪರ್ವತದ ಮೇಲೆ ಬಿದ್ದಿತು. ಮೂರನೆಯ ಚಿನ್ನದ ಪಟ್ಟಣ ಶಿವನ ಅನುಗ್ರಹದಿಂದುಳಿದು ಇಂದಿಗೂ ಆಗಸದಲ್ಲಿ ಸುತ್ತುತ್ತಿದೆ. ಜ್ವಾಲೇಶ್ವರತೀರ್ಥದಲ್ಲಿ ಕುಳಿತ ಶಿವನು ಜ್ವಲಿಸುವ ಚಿನ್ನದ ನಗರವನ್ನು ಉಳಿಸಿದುದರಿಂದ ಆ ತೀರ್ಥಕ್ಕೆ ಅದು ಹೆಸರಾಯಿತು.

ಅಮರಕಂಟಕಯಾತ್ರೆ ಮಾಡುವವನು ಅನೇಕ ಕೋಟಿ ವರ್ಷಗಳ ಕಾಲ ಹದಿನಾಲ್ಕು ಲೋಕಗಳಲ್ಲಿ ಸುಖವನ್ನುಂಡು ಬಳಿಕ ಭೂಮಿಯಲ್ಲಿ ರಾಜನಾಗಿ ಹುಟ್ಟಿ ಏಕಚ್ಛತ್ರಾಧಿಪತಿಯಾಗಿ ಮೆರೆಯುವನು. ಇದರಲ್ಲಿ ಸಂಶಯವಿಲ್ಲ. ಚಂದ್ರ ಸೂರ್ಯಗ್ರಹಣಗಳ ಕಾಲದಲ್ಲಿ ಅಲ್ಲಿಗೆ ಹೋದರೆ ಅಶ್ವಮೇಧಕ್ಕಿಂತ ಹತ್ತು ಪಾಲು ಹೆಚ್ಚಿನ ಫಲ ಸಿಗುವುದು. ಅಲ್ಲಿ ಶಿವನ ದರ್ಶನಮಾಡಿದರೆ ಸ್ವರ್ಗ ಸಿಗುವುದು. ಜ್ವಾಲೇಶ್ವರ ತೀರ್ಥ ಸ್ನಾನಮಾಡುವವನಿಗೆ ತಿರುಗಿ ಸಂಸಾರವಿಲ್ಲ. ಗ್ರಹಣಕಾಲದಲ್ಲಿ ಅಲ್ಲಿ ಭಕ್ತಿಯಿಂದ ಪ್ರಾಣ ತ್ಯಾಗಮಾಡಿದವರು ರುದ್ರಲೋಕದಲ್ಲಿ ಮಹಾ ಪ್ರಳಯದವರೆಗೂ ಇರುತ್ತಾರೆ.

ಕಾಮನೆಯಿಂದಲೊ ನಿಷ್ಕಾಮನೆಯಿಂದಲೊ ನರ್ಮದೆಯ ಪುಣ್ಯಜಲದಲ್ಲಿ ಮಿಂದವನು ಪಾಪಗಳಿಂದ ಮುಕ್ತನಾಗಿ ರುದ್ರಲೋಕವನ್ನು ಸೇರುತ್ತಾನೆ.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಸ್ವರ್ಗಖಂಡದಲ್ಲಿ*
*ಪವಿತ್ರ ತೀರ್ಥಗಳ ಮಹಿಮೆ ಎಂಬ ನಾಲ್ಕನೇಯ ಅಧ್ಯಾಯ ಮುಗಿದುದು*



**ಸೂತ ಉವಾಚ**

**ಸೂತ :-** ನಾರದರನ್ನು ಪಾಂಡವರೂ ಎಲ್ಲ ತಪಸ್ವಿಗಳೂ ಕೇಳುತ್ತಾರೆ. ಪೂಜ್ಯರೆ, ಕಾವೇರಿ ಸಂಗಮದ ಮಹಿಮೆಯನ್ನು ವರ್ಣಿಸಿರಿ. ಆದರಿಂದ ಲೋಕಕ್ಕೆ ಹಿತ ಉಂಟಾಗುವುದು. ನಮಗೂ ಪುಣ್ಯವೃದ್ಧಿಯಾಗುವುದು. ಸದಾ ಪಾಪಾಚರಣೆಯಲ್ಲಿ ನಿರತರಾದವರೂ ಪಾಪಗಳಿಂದ ಮುಕ್ತರಾಗಿ ಪರಗತಿಯನ್ನು ಹೊಂದುವರು.

**ನಾರದ :-** ಈ ಕಾವೇರಿ ಸಂಗಮದಲ್ಲಿ ಕುಬೇರನು ಒಂದು ದೊಡ್ಡ ತಪಸ್ಸನ್ನು ಮಾಡಿ ದೊಡ್ಡ ಸಾಮ್ರಾಜ್ಯ ಒಂದಕ್ಕೆ ಅಧಿಪತಿ ಎನಿಸಿದ. ಈ ವೃತ್ತಾಂತವನ್ನು ಹೇಳುವೆನು ಕೇಳಿ. ಕಾವೇರಿ ನರ್ಮದೆಯನ್ನು ಸೇರುವ ಈ ಸ್ಥಳದಲ್ಲಿ ಮಿಂದು ಶುಚಿಯಾಗಿ ಕುಬೇರ ಒಂದು ನೂರು ದಿವ್ಯ ವರ್ಷಗಳ ಕಾಲ ತಪಸ್ಸುಮಾಡಿದಾಗ ಶಿವನೊಲಿದು ಮೈದೋರಿ ನುಡಿದ.

**ಶಿವ :-** ಯಕ್ಷನೆ, ನಿನ್ನ ಅಭೀಷ್ಟವೇನು ಹೇಳು.

**ಕುಬೇರ :-** ದೇವೇಶ, ನೀನು ಒಲಿದಿರುವೆಯಾದರೆ ಯಕ್ಷಲೋಕಕ್ಕೆ ನನ್ನನ್ನು ರಾಜನನ್ನಾಗಿ ಮಾಡು.

**ಶಿವ** :- ಹಾಗೆ ಆಗಲಿ.

ಶಿವನು ಕಣ್ಮರೆಯಾದ. ಕುಬೇರ ಯಕ್ಷರಿಗೆ ರಾಜನಾಗಿ ಪಟ್ಟಾಭಿಷಿಕ್ತನಾದ. ಈ ಕಾವೇರಿ ಸಂಗಮ ಸರ್ವಪಾಪ ಪರಿಹಾರಕ. ಅದನ್ನರಿಯದವರು ನಿಜವಾಗಿಯೂ ವಂಚಿತರು. ಆದರಿಂದ ಸರ್ವಪ್ರಯತ್ನದಿಂದ ಅಲ್ಲಿ ಸ್ನಾನ ಮಾಡಬೇಕು. ಶಿವನನ್ನು ಅರ್ಚಿಸಬೇಕು. ಆಗ ಅಶ್ವಮೇಧದ ಫಲವನ್ನು ಹೊಂದಿ ರುದ್ರಲೋಕದಲ್ಲಿ ಪೂಜಿತನಾಗುತ್ತಾನೆ. ಅಲ್ಲಿ ಅಗ್ನಿ ಪ್ರವೇಶ ಇಲ್ಲವೆ ಪ್ರಾಯೋಪವೇಶ ಮಾಡುವವನಿಗೆ ಪುನರ್ಜನ್ಮವಿಲ್ಲವೆಂದು ಶಿವನೇ ನನಗೆ ಹೇಳಿರುವನು. ದೇವಲೋಕದಲ್ಲಿ ಅವನು ಸುಖಭೋಗಿಸಿ ಅನೇಕ ಕೋಟಿವರ್ಷಗಳ ಕಾಲ ರುದ್ರಲೋಕದಲ್ಲಿಯೂ ನಲಿದು ಕೊನೆಗೆ ಸತ್ಕಾಲದಲ್ಲಿ ಧಾರ್ಮಿಕನಾದ ರಾಜನಾಗಿ ಹುಟ್ಟುತ್ತಾನೆ. ಅಲ್ಲಿ ನೀರು ಕುಡಿದರೆ ಚಾಂದ್ರಾಯಣ ವ್ರತದ ಫಲ. ಸ್ವರ್ಗಪ್ರಾಪ್ತಿ. ಗಂಗಾಯಮುನಾಸಂಗಮದಲ್ಲಿ ಸಿಗುವ ಪುಣ್ಯವೇ ಕಾವೇರಿ ಸಂಗಮದಲ್ಲಿಯೂ ದೊರೆಯುತ್ತದೆ.

**ನಾರದ ಉವಾಚ**

**ನಾರದ :-** ನರ್ಮದೆಯ ಉತ್ತರ ತೀರದಲ್ಲಿ ಯೋಜನ ವಿಸ್ತಾರದ ಪತ್ರೇಶ್ವರ. ಅಲ್ಲಿ ಸ್ನಾನಮಾಡಿದರೆ ಐದು ಸಾವಿರ ವರ್ಷಗಳ ಕಾಲ ದೇವತೆಗಳೊಂದಿಗೆ ಸುಖಭೋಗ ಲಭಿಸುವುದು.

ಅಲ್ಲಿಂದ ಗರ್ಜನತೀರ್ಥಕ್ಕೆ ಹೋಗಬೇಕು. ಅಲ್ಲಿಂದ ಮುಂದೆ ಮೇಘರಾವ ಬ್ರಹ್ಮಾವರ್ತಗಳು. ಬ್ರಹ್ಮಾವರ್ತದಲ್ಲಿ ಬ್ರಹ್ಮನು ಸನ್ನಿಹಿತನಾಗಿದ್ದು ಅಲ್ಲಿ ಸ್ನಾನಮಾಡಿದರೆ ಬ್ರಹ್ಮಲೋಕ ದೊರೆಯುವುದು. ಅಂಗಾರೇಶ್ವರದಲ್ಲಿ ಎಲ್ಲ ಪಾಪಗಳಿಂದ ಮುಕ್ತನಾಗಿ ರುದ್ರಲೋಕ ಸೇರಬಹುದು. ಕಪಿಲಾತೀರ್ಥದ ಸ್ನಾನದಿಂದ ಗೋದಾನದ ಫಲ. ಕಾಂಚೀತೀರ್ಥ ಸ್ನಾನದಿಂದ ಗೋಲೋಕಪ್ರಾಪ್ತಿ. ಕುಂಡಲೇಶ್ವರದಲ್ಲಿ ಪಾರ್ವತೀ ಸಹಿತನಾದ ರುದ್ರನಿದ್ದಾನೆ. ಅಲ್ಲಿ ಸ್ನಾನಮಾಡಿದರೆ ದೇವತೆಗಳೂ ಅವನನ್ನು ಕೊಲ್ಲಲಾರರು. ಪಿಪ್ಪಲೇಶವು ಸರ್ವಪಾಪ ಪರಿಹಾರಕ. ರುದ್ರಲೋಕವನ್ನೀಯಬಲ್ಲುದು. ವಿಮಲೇಶ್ವರದಲ್ಲಿ ಪ್ರಾಣತ್ಯಾಗದಿಂದ ರುದ್ರಲೋಕ ಪ್ರಾಪ್ತಿ. ಪುಷ್ಕರಿಣೀ ಸ್ನಾನದಿಂದ ಇಂದ್ರನ ಅರ್ಧಾಸನ ಲಾಭ. ನರ್ಮದೆ ರುದ್ರದೇಹದಿಂದ ಹೊರಟ ಉತ್ತಮ ನದಿ. ಎಲ್ಲ ಚರಾಚರಗಳಿಗೆ ತಾರಕ. ಇಂಥ ಮಹಿಮೆಯನ್ನು ಶಿವನೆ ಎಲ್ಲ ಋಷಿಗಳಿಗೂ ವಿಶೇಷವಾಗಿ ನನಗೂ ಉಪದೇಶಿಸಿದ್ದಾನೆ. ಲೋಕದ ಹಿತಕ್ಕಾಗಿಯೇ ರುದ್ರ ದೇಹದಿಂದ ಹೊರಟು ಎಲ್ಲ ಪ್ರಾಣಿಗಳ ವಂದನೆಯನ್ನು ಸ್ವೀಕರಿಸಿ, ಅವರ ಪಾಪವನ್ನು ತೊಳೆಯುತ್ತಾಳೆ ನರ್ಮದೆ. ಆದರಿಂದಲೇ ದೇವತೆಗಳೂ ಋಷಿಗಳೂ ಗಂಧರ್ವ ಅಪ್ಸರೆಯರೂ ಆಕೆಯನ್ನೂ ಸ್ತುತಿಸುತ್ತಾರೆ.

**ನಮಃ ಪುಣ್ಯಜಲೇಆದ್ಯೇ ನಮಃ ಸಾಗರಗಾಮಿನಿ**
**ನಮಃಸ್ತುತೇ ಋಷಿಗಣ್ಯೈಃ ನಮಃ ಶಂಕರನಿಃಸೃತೇ**
**ನಮೋಽಸ್ತುತೇ ಧರ್ಮಧೃತೇ ವರಾನನೇ ನಮೋಽಸ್ತುತೇ**
**ದೇವಗಣೈಕ ವಂದಿತೇ**
**ನಮೋಽಸ್ತುತೇ ಸರ್ವಪವಿತ್ರಪಾವನೇ ನಮೋಽಸ್ತುತೇ ಸರ್ವಜಗತ್**
**ಸಂಪೂಜಿತೇ**

ಪುಣ್ಯ ಜಲವುಳ್ಳವಳು ನದಿಗಳಲ್ಲಿ ಮೊದಲಿನವಳು ಸಾಗರವನ್ನು ಸೇರುವವಳು ಋಷಿಸಮೂಹಗಳಿಂದ ಸ್ತುತಿಸಲ್ಪಡುವವಳು ಶಂಕರಶರೀರದಿಂದ ಹೊರಬಂದವಳು ಧರ್ಮಧಾರಕಳು. ಚಂದದ ಮೊಗದವಳು, ದೇವಸಮೂಹದಿಂದ ವಂದಿತಳು. ಎಲ್ಲ ಪವಿತ್ರ ವಸ್ತುಗಳನ್ನೂ ಪವಿತ್ರಗೊಳಿಸುವವಳು. ಎಲ್ಲ ಜಗತ್ತಿಗೂ ಪೂಜ್ಯಳು. ಎನಿಸಿರುವ ಓ ನರ್ಮದೆಯೇ ನಿನಗಿದೊ ಅನೇಕ ನಮಸ್ಕಾರಗಳು.

ಈ ಸ್ತೋತ್ರವನ್ನು ನಿತ್ಯಪಠಿಸಿದರೆ ಬ್ರಾಹ್ಮಣನಿಗೆ ವೇದಾರ್ಥಜ್ಞಾನ, ಕ್ಷತ್ರಿಯನಿಗೆ ವಿಜಯ, ವೈಶ್ಯನಿಗೆ ಸಂಪತ್ತು, ಶೂದ್ರನಿಗೆ ಸದ್ಗತಿ ದೊರೆಯುವುದು. ನರ್ಮದೆಯನ್ನು ನೆನೆದರೆ ಹಸಿದವನಿಗೆ ಅನ್ನ ದೊರೆಯುವುದು. ಸ್ವಯಂ ಈಶ್ವರನೇ ನರ್ಮದೆಯನ್ನು ಸೇವಿಸುತ್ತಿದ್ದಾನೆ. ಆದರಿಂದ ಆಕೆ ಬ್ರಹ್ಮಹತ್ಯಾಪಾತಕವನ್ನು ತೊಳೆಯಬಲ್ಲ ಪುಣ್ಯನದಿ ಎಂದು ತಿಳಿಯಬೇಕು.

**ನಾರದ ಉವಾಚ**

**ನಾರದ :-** ಶಿವನ ಶೂಲವು, ಭೂಮಿಯಲ್ಲಿ ಬಿದ್ದ ಸ್ಥಳವೇ ನರ್ಮದಾ ತೀರದ ಶೂಲಭೇದತೀರ್ಥ. ಅಲ್ಲಿ ಬ್ರಹ್ಮಾದಿ ದೇವತೆಗಳೂ ತಪಸ್ಸು ಮಾಡುವರು. ಅಲ್ಲಿ

ಸ್ನಾನಮಾಡಿ ದೇವತಾರ್ಚನೆ ಮಾಡಿದರೆ ಸಾವಿರ ಗೋದಾನದ ಫಲ. ಮೂರು ದಿನ ಅಲ್ಲಿದ್ದು ಮಹಾದೇವನನ್ನರ್ಚಿಸಿದರೆ ಪುನರ್ಜನ್ಮವಿಲ್ಲ. ಭೀಮೇಶ್ವರ ನರ್ಮದೇಶ್ವರ ಆದಿತ್ಯೇಶ್ವರ ಮಲ್ಲಿಕೇಶ್ವರಗಳ ಸಂದರ್ಶನದಿಂದ ಜನ್ಮ ಸಫಲವಾಗುವುದು. ವರುಣೇಶ್ವರ, ನೀರಾಜೇಶ್ವರದ ಪಂಚಾಯತನ, ಕೋಟಿತೀರ್ಥಗಳ ದರ್ಶನ ಮಾಡಬೇಕು. ಒಂದು ಕೋಟಿ ದಾನವರನ್ನು ಯುದ್ಧದಲ್ಲಿ ಶಿವನು ಕೊಂದಿರುವ ಸ್ಥಳ **ಕೋಟಿತೀರ್ಥ**, ಅಲ್ಲಿ ಅವನ ಹೆಸರು ಕೋಟೇಶ್ವರ. ಆ ತೀರ್ಥದರ್ಶನ ಮಾತ್ರದಿಂದಲೇ ಜನರು ಸಶರೀರವಾಗಿ ಸ್ವರ್ಗವನ್ನು ಸೇರ ತೊಡಗಿದಾಗ ವಜ್ರಕೀಲದಿಂದ ಇಂದ್ರತಡೆದ. ತುಪ್ಪ ಬಿಲ್ವಪತ್ರೆಗಳನ್ನು ಶಿವನಿಗರ್ಪಿಸಿ ಪ್ರದಕ್ಷಿಣೆಮಾಡಿ ಅವುಗಳನ್ನು ತಲೆಯಲ್ಲಿ ಧರಿಸಿದರೆ ರಾಜ್ಯ ದೊರೆಯುತ್ತದೆ. ಬಳಿಕ ರುದ್ರಲೋಕ ಪ್ರಾಪ್ತಿ. ಪುನರ್ಜನ್ಮವಿರುವುದಿಲ್ಲ. ತ್ರಯೋದಶೀ ದಿನ ಸ್ನಾನಮಾಡಿ ಶಿವಾರ್ಚನೆ ಮಾಡಿದರೆ ಸರ್ವ ಯಜ್ಞಗಳ ಫಲ.

ಸುಂದರವಾದ ಅಗಸ್ತ್ಯೇಶ್ವರ ತೀರ್ಥ ಪಾಪಹರವೂ ಹೌದು ಅಲ್ಲಿ ಸ್ನಾನಮಾಡಿದರೆ ಬ್ರಹ್ಮಹತ್ಯಾಪಾತಕ ತೊಲಗುವುದು. ಕಾರ್ತೀಕ ಕೃಷ್ಣಪಕ್ಷ ಚತುರ್ದಶಿಯಂದು ಶಿವನಿಗೆ ಘೃತಾಭಿಷೇಕಮಾಡಿದರೆ ಅವನ ಇಪ್ಪತ್ತೊಂದು ಕುಲಕ್ಕೂ ಶಿವಲೋಕ ಪ್ರಾಪ್ತಿ. ವಾಹನ ಪಾದರಕ್ಷೆ ಛತ್ರಿ ಕಂಬಳಿ ಅನ್ನದಾನಮಾಡಿದರೆ ಕೋಟಿ ಫಲ.

ರವಿಸ್ತವತೀರ್ಥಸ್ನಾನದಿಂದ ರಾಜ್ಯಲಾಭ. ನರ್ಮದೆಯ ದಕ್ಷಿಣ ತೀರದ ಶಕ್ರತೀರ್ಥದಲ್ಲಿ ಒಂದು ದಿನ ಉಪವಾಸ ಸ್ನಾನ, ಜನಾರ್ದನನ ಪೂಜೆಗಳಿಂದ ಸಾವಿರ ಗೋದಾನದ ಫಲ, ವಿಷ್ಣುಲೋಕ ಪ್ರಾಪ್ತಿ. ಋಷಿ ತೀರ್ಥ ಸ್ನಾನದಿಂದ ಶಿವಲೋಕ ಪ್ರಾಪ್ತಿ. ನಾರದತೀರ್ಥ ಸ್ನಾನದಿಂದ ಸಾವಿರಗೋದಾನ ಫಲ. ಬ್ರಹ್ಮನಿರ್ಮಿತವಾದ ದೇವತೀರ್ಥದಲ್ಲಿ ಸ್ನಾನ ಮಾಡಿದರೆ ಬ್ರಹ್ಮಲೋಕಪ್ರಾಪ್ತಿ. ವಾಮನೇಶ್ವರ ದರ್ಶನದಿಂದ ಬ್ರಹ್ಮಹತ್ಯಾ ನಿವೃತ್ತಿ. ಈಶಾನೇಶ, ವಟೇಶ್ವರಗಳ ದರ್ಶನದಿಂದ ಜನ್ಮ ಸಾಫಲ್ಯ. ಭೀಮೇಶ್ವರದಲ್ಲಿ ಸರ್ವವ್ಯಾಧಿ ಪರಿಹಾರ. ವಾರಣೇಶ್ವರ ಸ್ನಾನದಿಂದ ಸರ್ವದುಃಖನಿವೃತ್ತಿ. ಸೋಮತೀರ್ಥದಲ್ಲಿ ಚಂದ್ರನನ್ನು ನೋಡಿ ಸ್ನಾನ ಮಾಡಿದರೆ ದಿವ್ಯದೇಹದಿಂದ ಅರವತ್ತು ಸಾವಿರ ವರ್ಷಗಳ ಕಾಲ ಶಿವಲೋಕದಲ್ಲಿ ಸುಖಭೋಗ. ಪಿಂಗಲೇಶ್ವರದಲ್ಲಿ ಒಂದು ದಿನದ ಉಪವಾಸದಿಂದ ತ್ರಿರಾತ್ರವ್ರತದ ಫಲ. ಕಪಿಲೆಯನ್ನು ದಾನಮಾಡಿದರೆ ಅದರ ಮತ್ತು ಅದರ ಕುಲದ ಮೈಯ ರೋಮದಷ್ಟು ಸಾವಿರ ವರ್ಷ ರುದ್ರಲೋಕಪ್ರಾಪ್ತಿ. ಅಲ್ಲಿ ಪ್ರಾಣತ್ಯಾಗಮಾಡಿದರೆ ಸೂರ್ಯಚಂದ್ರರಿರುವಷ್ಟುಕಾಲ ಅಕ್ಷಯಸುಖ. ಸುರಭಿಕೇಶ್ವರ, ನಾರಕೇಶ್ವರ, ಕೋಟಿಕೇಶ್ವರ, ಗಂಗಾವತರಣಗಳೂ ಪುಣ್ಯಪ್ರದಗಳು.

ನಂದಿತೀರ್ಥ ಸ್ನಾನದಿಂದ ನಂದೀಶ್ವರನಿಗೆ ತೃಪ್ತಿ. ಅದರಿಂದ ಸೋಮಲೋಕ ಪ್ರಾಪ್ತಿ. ಮುಂದೆ ವ್ಯಾಸತೀರ್ಥವೆಂಬ ತಪೋವನಕ್ಕೆ ಪ್ರದಕ್ಷಿಣೆ ಮಾಡಿದರೆ ಎಲ್ಲ ಅಭೀಷ್ಟ ಪೂರೈಸುವುದು. ಅಲ್ಲಿ ವ್ಯಾಸರ ಹುಂಕಾರದಿಂದ ಬೆದರಿದ ನರ್ಮದೆ ಬಲ ಬದಿಯಲ್ಲಿ ಹರಿದು ಹೋದಳು. ವ್ಯಾಸರಿಗೆ ಸೂತ್ರವೇಷ್ಟನಮಾಡಿದರೆ ರುದ್ರನಂತೆ ಅಕ್ಷಯ ಸುಖ ಪಡೆಯಬಹುದು. ಏರಂಡೀತೀರ್ಥವು ಏರಂಡೀ ನರ್ಮದೆಯರ ಸಂಗಮಸ್ಥಳ. ಅಲ್ಲಿ ಸ್ನಾನಮಾಡಿದರೆ ಎಲ್ಲ ಪಾಪ ಪರಿಹಾರ. ಆಶ್ವಯುಜ ಶುದ್ಧ ಅಷ್ಟಮಿಯಂದು ಸ್ನಾನ

ಉಪವಾಸಗಳನ್ನು ಮಾಡಿ ಒಬ್ಬ ಬ್ರಾಹ್ಮಣನನ್ನು ಉಣಿಸಿದರೆ ಕೋಟಿ ಬ್ರಾಹ್ಮಣರನ್ನುಣಿಸಿದ ಫಲ. ಆ ತೀರ್ಥಕ್ಕೆ ಪ್ರದಕ್ಷಿಣೆ ಮಾಡಿದರೆ ಸಪ್ತದ್ವೀಪಗಳಿಂದ ಕೂಡಿದ ಭೂಮಿಗೆ ಪ್ರದಕ್ಷಿಣೆ ಮಾಡಿದಂತೆ.

ಸುವರ್ಣತಿಲಕದಲ್ಲಿ ಸ್ನಾನ, ಸುವರ್ಣದಾನಗಳಿಂದ ಸುವರ್ಣ ವಿಮಾನದಲ್ಲಿ ರುದ್ರಲೋಕಕ್ಕೆ ಹೋಗಬಹುದು. ಅಲ್ಲಿದ್ದು ಬಳಿಕ ಭೂಮಿಯಲ್ಲಿ ರಾಜನಾಗಿ ಹುಟ್ಟುತ್ತಾನೆ. ಇಕ್ಷು ನದೀ ಸಂಗಮಸ್ನಾನದಿಂದ ರುದ್ರಗಣಗಳ ಒಡೆತನ ಸಿಗುವುದು. ಸ್ಕಂದ ತೀರ್ಥದಲ್ಲಿ ಸ್ನಾನ ಮಾಡಿದರೆ ಹುಟ್ಟಿದಂದಿನಿಂದ ಮಾಡಿದ ಎಲ್ಲ ಪಾಪಗಳ ಪರಿಹಾರ. ಆಂಗೀರಸ ಸ್ನಾನದಿಂದ ಸಾವಿರಗೋದಾನ ಫಲ, ರುದ್ರಲೋಕಪ್ರಾಪ್ತಿ. ಲಾಂಗಲ ತೀರ್ಥಸ್ನಾನದಿಂದ ಏಳು ಜನ್ಮಗಳ ಪಾಪ ಪರಿಹಾರ.

ಸರ್ವತೀರ್ಥಸ್ನಾನದಿಂದ ಸಾವಿರ ಗೋದಾನ ಫಲ. ಸಂಗಮೇಶ್ವರ ಸ್ನಾನದಿಂದ ರಾಜ್ಯಲಾಭ. ಭದ್ರತೀರ್ಥದಲ್ಲಿ ದಾನಕ್ಕೆ ಕೋಟಿ ಫಲ. ಅಂಗಾರೇಶ್ವರ ಸ್ನಾನದಿಂದ ರುದ್ರಲೋಕ ಪ್ರಾಪ್ತಿ. ಅಲ್ಲಿ ಮಂಗಳವಾರದ ಚತುರ್ಥಿಯಂದು ಸ್ನಾನದಿಂದ ಅಕ್ಷಯ ಸುಖಲಾಭ. ಅಯೋನಿ ಸಂಗಮಸ್ನಾನದಿಂದ ಯೋನಿ ಮಂದಿರ ದರ್ಶನವಿಲ್ಲದಂತಾಗುವುದು. ಪಾಂಡವೇಶ್ವರ ಸ್ನಾನದಿಂದ ಅಕ್ಷಯಸುಖ. ಸುರಾಸುರರಿಂದ ಅವಧ್ಯತ್ವ ಪ್ರಾಪ್ತಿ. ವಿಷ್ಣುಲೋಕದಲ್ಲಿ ಭೋಗ. ಬಳಿಕ ಭೂಮಿಯಲ್ಲಿ ರಾಜನಾಗಿ ಹುಟ್ಟುತ್ತಾನೆ. ಕಂಬೋಜಕೇಶ್ವರದಲ್ಲಿ ಉತ್ತರಾಯಣದಲ್ಲಿ ಸ್ನಾನ ಮಾಡಿದರೆ ಎಲ್ಲ ಅಭೀಷ್ಟಗಳ ಸಿದ್ಧಿ. ಚಂದ್ರಭಾಗಾಸ್ನಾನದಿಂದ ಸೋಮಲೋಕಪ್ರಾಪ್ತಿ.

ಶಕ್ರತೀರ್ಥ ದೇವರಾಜನಿಂದ ಮತ್ತು ದೇವತೆಗಳಿಂದ ನಮಸ್ಕೃತವಾಗಿದೆ. ಅಲ್ಲಿ ಸ್ನಾನ ಸುವರ್ಣದಾನ ನೀಲ ಬಣ್ಣದ ವೃಷಭದ ಉತ್ಸರ್ಗಗಳಿಂದ ಆ ವೃಷಭ ಮತ್ತು ಅದರ ಕುಲದ ಮೈಯ ರೋಮಗಳಷ್ಟು ಸಾವಿರ ವರ್ಷಗಳ ಕಾಲ ರುದ್ರಲೋಕವಾಸ. ಬಳಿಕ ರಾಜನಾಗಿ ಹುಟ್ಟಿ ಸಾವಿರ ಬಿಳಿ ಕುದುರೆಗಳಿಗೆ ಒಡೆಯನಾಗುತ್ತಾನೆ. ಕಪಿಲಾ ತೀರ್ಥ ಸ್ನಾನಮಾಡಿ ಕಪಿಲೆಯನ್ನು ದಾನಮಾಡಿದರೆ ಸಮಸ್ತ ಪೃಥಿವಿಯನ್ನೇ ದಾನ ಮಾಡಿದ ಫಲವಿದೆ. ನರ್ಮದೇಶ್ವರ ತೀರ್ಥಸ್ನಾನದಿಂದ ಅಶ್ವಮೇಧ ಫಲ ಸಿಗುತ್ತದೆ. ರಾಜನಾಗಿ ಹುಟ್ಟುತ್ತಾನೆ.

ನರ್ಮದೆಯ ಉತ್ತರ ತೀರದಲ್ಲಿ ಶಿವನು ನಿರ್ಮಿಸಿದ ಬಹುಸುಂದರ ತೀರ್ಥ ಆದಿತ್ಯಾಯತನ. ಅಲ್ಲಿ ದಾನ ಮಾಡಿದುದೆಲ್ಲ ಅಕ್ಷಯವಾಗುತ್ತದೆ. ದರಿದ್ರರೂ ವ್ಯಾಧಿಯಿಂದ ಬಳಲುವವರೂ ಇತರ ಪಾಪಕರ್ಮಿಗಳೂ ಪರಿಶುದ್ಧರಾಗಿ ಸೂರ್ಯಲೋಕವನ್ನು ಪಡೆಯುವರು. ಮಾಘ ಶುದ್ಧ ಸಪ್ತಮಿ ಅಲ್ಲಿ ಉಪವಾಸ ಮಾಡಿದರೆ ಎಲ್ಲ ವ್ಯಾಧಿಗಳ ಪರಿಹಾರ, ಸ್ತ್ರೀಯರು ನೋಡಿ ಮರುಳಾಗುವಂಥ ರೂಪ ಸೌಭಾಗ್ಯ ದೊರೆಯುವುದು. ಈ ತೀರ್ಥವನ್ನು ಒಮ್ಮೆಯೂ ಸಂದರ್ಶಿಸದವರು ನಿಜವಾಗಿಯೂ ವಂಚಿತರೆಂದು ಮಾರ್ಕಂಡೇಯರು ಹೇಳಿದ್ದಾರೆ.

ಮಾಸೇಶ್ವರತೀರ್ಥ ಸ್ನಾನದಿಂದ ಸ್ವರ್ಗಲೋಕ ಪ್ರಾಪ್ತಿ. ಹದಿನಾಕು ಇಂದ್ರರು ಇರುವಷ್ಟು ಕಾಲ ಸ್ವರ್ಗದಲ್ಲಿ ಸುಖ ಭೋಗ. ನಾಗೇಶ್ವರ ತಪೋವನದಲ್ಲಿ ಸ್ನಾನದಿಂದ ನಾಗಕನ್ಯೆಯರೊಡನೆ ಬಹುಕಾಲ ಸುಖ ಭೋಗಲಾಭ. ಕುಬೇರಭವನ ಕಾಲೇಶ್ವರಗಳಲ್ಲಿ

ಸ್ನಾನಮಾಡಿದರೆ ಸರ್ವಸಂಪತ್ತು. ಪಶ್ಚಿಮದಲ್ಲಿ ಮಾರುತಾಲಯ ತೀರ್ಥವಿದೆ. ಸ್ನಾನಮಾಡಿ ಅನ್ನ, ಸುವರ್ಣ ದಾನಮಾಡಿದರೆ ಪುಷ್ಪಕವಿಮಾನದಿಂದ ವಾಯುಲೋಕವನ್ನು ಸೇರಬಹುದು.

ಮಾಘ ಕೃಷ್ಣಪಕ್ಷ ಚತುರ್ದಶಿಯಲ್ಲಿ ಯಮತೀರ್ಥ ಸ್ನಾನಮಾಡಿ ರಾತ್ರಿ ಭೋಜನ ಮಾಡಿದರೆ ಯೋನಿ ಸಂಕಟವಿಲ್ಲದಂತಾಗುವುದು. ಪರಮೇಶ್ವರನ ತಪಸ್ಸು ಮಾಡಿ ಅಹಲ್ಯೆ ಮುಕ್ತಳಾದಳು. ಚೈತ್ರ ಶುಕ್ಲ ಪಕ್ಷತ್ರಯೋದಶಿ ಕಾಮದೇವದಿನ. ಅಂದು ಅಹಲ್ಯೆಯನ್ನು ಪೂಜಿಸಿದರೆ ಕಾಮದೇವನಂತೆ ಸ್ತ್ರೀ ಪ್ರಿಯನಾಗುವನು ಶಕ್ರತೀರ್ಥಸ್ನಾನದಿಂದ ಸಾವಿರ ಗೋದಾನದ ಫಲ ದೊರೆಯುವುದು.

ಸೋಮತೀರ್ಥ ಸ್ನಾನದಿಂದ ಸರ್ವಪಾಪ ಪರಿಹಾರ. ಚಂದ್ರ ಗ್ರಹಣಕಾಲದಲ್ಲಿ ಅಲ್ಲಿ ಸ್ನಾನಮಾಡಿದರೆ ಮಹಾಫಲ. ಅಲ್ಲಿ ಚಾಂದ್ರಾಯಣ ವ್ರತಮಾಡಿದರೆ ಸೋಮಲೋಕ ಪ್ರಾಪ್ತಿ. ಅಗ್ನಿ ಪ್ರವೇಶ ಪ್ರಾಯೋಪವೇಶಗಳಿಂದ ಪ್ರಾಣತ್ಯಾಗ ಮಾಡಿದವರಿಗೆ ತಿರುಗಿ ಜನ್ಮವಿಲ್ಲ. ಸ್ತಂಭತೀರ್ಥಸ್ನಾನದಿಂದ ಸೋಮಲೋಕಪ್ರಾಪ್ತಿ. ವಿಷ್ಣುತೀರ್ಥದಲ್ಲಿ ಒಂದು ದಿನ ಉಪವಾಸವಿದ್ದರೆ ಬ್ರಹ್ಮಹತ್ಯೆ ತೊಲಗುವದು. ಅಲ್ಲಿ ಕೋಟಿ ದಾನವರನ್ನು ವಿಷ್ಣು ಸಂಹರಿಸಿದ್ದನು. ಯೋಧನೀಪುರವೆಂದು ಅದು ಪ್ರಸಿದ್ಧವಾಗಿದೆ. ಅಮೋಹಕವೆಂದು ಪ್ರಸಿದ್ಧವಾದ ತಾಪೇಶ್ವರದಲ್ಲಿ ಹುಣ್ಣಿಮೆ ಅಮಾವಾಸ್ಯೆಗಳಲ್ಲಿ ಅವುಗಳಲ್ಲಿಯೂ ವೈಶಾಖದಲ್ಲಿ ಸ್ನಾನಮಾಡಿ ಆ ನೀರಿನಲ್ಲಿರುವ ಆನೆಯ ಗಾತ್ರದ ಬಂಡೆಗಳಲ್ಲಿ ಪಿಂಡ ಪ್ರದಾನ ಪಿತೃ ತರ್ಪಣಗಳನ್ನು ಮಾಡಿದರೆ ಭೂಮಿ ಇರುವಷ್ಟು ಕಾಲ ಪಿತೃಗಳು ತೃಪ್ತರಾಗಿರುತ್ತಾರೆ.

ಸಿದ್ಧೇಶ್ವರ ಯಾತ್ರೆಯಿಂದ ಗಣಪತಿಲೋಕಪ್ರಾಪ್ತಿ. ಜನಾರ್ದನ ಲಿಂಗಕ್ಷೇತ್ರದಲ್ಲಿ ಸ್ನಾನ ಮಾಡಿದರೆ ವಿಷ್ಣುಲೋಕ ಪ್ರಾಪ್ತಿ. ನರ್ಮದೆಯ ದಕ್ಷಿಣ ತೀರದಲ್ಲಿ ಸುಂದರವಾದ ಕುಸುಮೇಶ್ವರ ತೀರ್ಥವಿದೆ. ಅಲ್ಲಿ ಕಾಮದೇವನು ಸಾವಿರ ದಿವ್ಯ ವರ್ಷಗಳ ಕಾಲ ಶಿವನನ್ನು ತಪಸ್ಸುಮಾಡಿ ಒಲಿಸಿ ತಿರುಗಿ ದೇವತ್ವವನ್ನು ಪಡೆದ. ಅರ್ಧ ಯೋಜನ ವಿಸ್ತಾರದ ಆ ತೀರ್ಥ ಉತ್ತಮವೆನಿಸಲೆಂದೂ ವರಪಡೆದ. ಅಲ್ಲಿ ಸ್ನಾನ ಉಪವಾಸಗಳನ್ನು ಮಾಡಿದರೆ ಮನ್ಮಥನಂತಾಗಿ ರುದ್ರಲೋಕದಲ್ಲಿ ಸುಖಪಡಬಹುದು. ಅಂಧೋನದ ಬಳಿ ಸ್ನಾನದಾನ ಭೋಜನ ಪಿಂಡದಾನಗಳನ್ನು ಮಾಡಿದರೆ ಚಂದ್ರ ಸೂರ್ಯರಿರುವಷ್ಟು ಕಾಲ ಪಿತೃಗಳು ತೃಪ್ತರಾಗಿರುತ್ತಾರೆ. ಅಲ್ಲಿ ಅಗ್ನಿಪ್ರವೇಶ ಜಲಪ್ರವೇಶ ಪ್ರಾಯೋಪವೇಶಗಳಿಂದ ಪ್ರಾಣತ್ಯಾಗಮಾಡಿದರೆ ಪುನರ್ಜನ್ಮವಿಲ್ಲ. ಪ್ರಾತಃ ಕಾಲದಲ್ಲಿ ಸಿದ್ಧೇಶ್ವರನನ್ನರ್ಚಿಸಿದರೆ ಮಹಾಯಜ್ಞಗಳಿಂದಲೂ ಲಭಿಸದ ಸದ್ಗತಿಯನ್ನು ಪಡೆಯಬಹುದು.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಸ್ವರ್ಗಖಂಡದಲ್ಲಿ*
*ನರ್ಮದಾ ತೀರ್ಥದ ಮಹಿಮೆ ಎಂಬ ಐದನೇಯ ಅಧ್ಯಾಯ ಮುಗಿದುದು*

—o—

## ಶುಕ್ಲತೀರ್ಥಮಾಹಾತ್ಮ್ಯ

ಅಧ್ಯಾಯ - ೬

### ನಾರದ ಉವಾಚ

**ನಾರದ :-** ಭಾರ್ಗವೇಶ್ವರ ತೀರ್ಥಸ್ನಾನದಿಂದ ಎಲ್ಲ ಪಾಪ ಪರಿಹಾರವಾಗುವುದು. ಅಲ್ಲಿ ಹುಂಕಾರದಿಂದಲೆ ವಿಷ್ಣು ಹಿಂದೆ ದಾನವರನ್ನು ನಾಶಮಾಡಿದ್ದ.

ಯುಧಿಷ್ಠಿರ, ಶುಕ್ಲತೀರ್ಥದ ಮಹಿಮೆಯನ್ನು ಹೇಳುವೆ ಕೇಳು. ನಾನಾ ಧಾತುಗಳಿಂದ ಬಾಲರವಿಯಂತೆ, ಪುಟ್ಟಕ್ಕಿಟ್ಟ ಚಿನ್ನದಂತೆ ಹೊಳೆಯುವ ಹಿಮಾಲಯದ ಶಿಖರದಲ್ಲಿ ವಜ್ರ ಸ್ಫಟಿಕಗಳ ಸೋಪಾನದ ಮೇಲೆ, ಚಿನ್ನದಾಸನದಲ್ಲಿ ಉಮೆಯೊಡನೆ ಆಸೀನನಾದ ಶಿವನನ್ನು ಸ್ಕಂದ ನಂದಿ ಮಹಾಕಾಲ ವೀರಭದ್ರ ಗಣಗಳಿಂದ ಸೇವಿಸುತ್ತಿದ್ದರು. ಅಲ್ಲಿಗೆ ಮಾರ್ಕಂಡೇಯ ಮುನಿ ಬಂದು ಕೇಳಿದ.

**ಮಾರ್ಕಂಡೇಯ :-** ದೇವದೇವ, ಮಹಾದೇವ. ಸಂಸಾರಭಯದಿಂದ ಕಂಗೆಟ್ಟಿದ್ದೇನೆ. ಎಲ್ಲ ಪಾಪಗಳನ್ನು ಪರಿಹರಿಸಬಲ್ಲ, ತೀರ್ಥಗಳಲ್ಲೆಲ್ಲ ಉತ್ತಮವಾದ ತೀರ್ಥ ಯಾವುದೆಂದು ನನಗೆ ಉಪದೇಶಿಸು.

**ಶಿವ :-** ಈ ಪ್ರಶ್ನೆಯನ್ನೇ ಮನು ಅತ್ರಿ ಯಾಜ್ಞವಲ್ಕ್ಯ ಕಾಶ್ಯಪ ಅಂಗಿರಸ್ ಯಮ ಆಪಸ್ತಂಬ ಸಂವರ್ತ ಕಾತ್ಯಾಯನ ಬೃಹಸ್ಪತಿ ನಾರದ ಗೌತಮರೂ ಕೇಳುತ್ತಿದ್ದಾರೆ. ನೀವೆಲ್ಲರೂ ಶುಕ್ಲತೀರ್ಥದಲ್ಲಿ ಸ್ನಾನ ಧ್ಯಾನ ಮುಂತಾದವನ್ನು ಮಾಡಿರಿ. ಗಂಗೆ, ಅದರಲ್ಲಿಯೂ ಕನಖಲದಲ್ಲಿ, ಪ್ರಯಾಗ ಪುಷ್ಕರ ಗಯೆಯಲ್ಲಿ ಸೂರ್ಯನಿಗೆ ರಾಹುಗ್ರಹಣದ ಕಾಲದಲ್ಲಿ ಪುಣ್ಯಕರ. ಹಗಲು ರಾತ್ರಿಗಳೆರಡರಲ್ಲಿಯೂ ಈ ಶುಕ್ಲತೀರ್ಥ ಮಹಾಪುಣ್ಯಕರ. ದರ್ಶನ ಸ್ಪರ್ಶನ ಧ್ಯಾನ ತಪಸ್ಸು ಹೋಮ ಉಪವಾಸ ಎಲ್ಲವೂ ಶುಕ್ಲತೀರ್ಥದಲ್ಲಿ ಮಹಾಫಲಕಾರಿ, ಚಾಣಕ್ಯನೆಂಬ ರಾಜರ್ಷಿ ಸಿದ್ಧಿಪಡೆದ ಸ್ಥಳವಿದು. ಅಲ್ಲಿ ಮರದ ತುದಿಯನ್ನು ಕಂಡರೆ ಬ್ರಹ್ಮಹತ್ಯೆ ತೊಲಗುವದು. ನಾನೂ ಉಮೆಯೊಂದಿಗೆ ಅಲ್ಲಿ ನೆಲೆಸಿದ್ದೇನೆ. ವೈಶಾಖಕೃಷ್ಣಪಕ್ಷ ಚತುರ್ದಶಿಯಂದು ಕೈಲಾಸದಿಂದ ಹೊರಟು ಅಲ್ಲಿ ನೆಲೆಸುತ್ತೇನೆ. ದೇವ ಕಿನ್ನರ ಗಂಧರ್ವ ಸಿದ್ಧ ವಿದ್ಯಾಧರ ನಾಗರೂ ಅಪ್ಸರೆಯರೂ ಅಲ್ಲಿಗೆ ವಿಮಾನದಿಂದ ಬಂದು ಆಕಾಶದಲ್ಲಿ ನಿಂತು ಧರ್ಮಸಾಧನೆ ಮಾಡಿಕೊಳ್ಳುವರು. ಅಗಸನ ಕೈಯಲ್ಲಿ ಬಟ್ಟೆ ಶುಭ್ರವಾಗುವಂತೆ ಶುಕ್ಲತೀರ್ಥದಲ್ಲಿ ಹುಟ್ಟಿದಂದಿನಿಂದ ಇದ್ದ ಪಾಪವೆಲ್ಲ ತೊಲಗುವುದು. **'ಶುಕ್ಲ ತೀರ್ಥಾತ್ ಪರಂ ತೀರ್ಥಂ ನ ಭೂತಂ ನ ಭವಿಷ್ಯತಿ'** ಶುಕ್ಲತೀರ್ಥಕ್ಕಿಂತ ಹೆಚ್ಚಿನ ತೀರ್ಥ ಹಿಂದೆ ಇದ್ದಿಲ್ಲ, ಮುಂದೆಯೂ ಇಲ್ಲ ಇಲ್ಲಿ ಒಂದು ದಿನ ಉಪವಾಸ ಮಾಡಿರೂ ಅವನು ಹಿಂದೆ ಮಾಡಿದ ಪಾಪವೆಲ್ಲ ತೊಲಗುವುದು. ಇಲ್ಲಿ ಮಾಡುವ ತಪಸ್ಸು ಬ್ರಹ್ಮಚರ್ಯ ಯಜ್ಞದಾನಗಳಿಂದ ಲಭಿಸುವ ಪುಣ್ಯ ನೂರು ಯಾಗಗಳಿಂದಲೂ ದೊರೆಯದು.

ಕಾರ್ತಿಕ ಕೃಷ್ಣಪಕ್ಷ ಚತುರ್ದಶಿಯ ದಿನ ಉಪವಾಸವಿದ್ದು ಪರಮೇಶ್ವರನಿಗೆ ತುಪ್ಪದ ಅಭಿಷೇಕಮಾಡಿದರೆ ಇಪ್ಪತ್ತೊಂದು ಕುಲದೊಂದಿಗೆ ಶಿವಲೋಕದಲ್ಲಿ

ವಾಸಮಾಡಬಹುದು. ಸ್ನಾನದಿಂದಲೂ ಪುನರ್ಜನ್ಮವಿಲ್ಲದಂತಾಗುವುದು. ಸ್ನಾನಮಾಡಿ ಶಿವನನ್ನರ್ಚಿಸಿ ರಾತ್ರಿ ನೃತ್ಯ ಗೀತಾದಿಗಳಿಂದ ಜಾಗರವಿದ್ದು ಬೆಳಿಗ್ಗೆ ಸ್ನಾನ ದೇವತಾರ್ಚನೆ ಮಾಡಿ ಗುರುಗಳಿಗೆ ಭೋಜನನೀಡಿ ಪ್ರದಕ್ಷಿಣೆ ಮಾಡಬೇಕು. ಹೀಗೆ ಮಾಡಿದರೆ ದಿವ್ಯವಿಮಾನವೇರಿ ಅಪ್ಸರೆಯರ ಸ್ತೋತ್ರಗಳನ್ನಾಲಿಸುತ್ತ ಶಿವಲೋಕವನ್ನು ಸೇರುತ್ತಾನೆ. ಶಿವನಿಗೆ ಸಮಾನವಾದ ಬಲವನ್ನು ಹೊಂದಿ ಮಹಾಪ್ರಳಯದವರೆಗೂ ಅಲ್ಲಿರುತ್ತಾನೆ.

ಈ ಶುಕ್ಲತೀರ್ಥದಲ್ಲಿ ಸುವರ್ಣದಾನ ಮಾಡಿ ಕುಮಾರನಿಗೆ ತುಪ್ಪದ ಅಭಿಷೇಕ ಮಾಡಿ ಪೂಜಿಸಿದ ಮಹಿಳೆಯರು ಹದಿನಾಲ್ಕು ಇಂದ್ರರಿರುವಷ್ಟು ಕಾಲ ದೇವಲೋಕ ದಲ್ಲಿರುತ್ತಾರೆ. ಅಯನ ಪುಣ್ಯಕಾಲ ಚತುರ್ದಶಿ ಸಂಕ್ರಮಣ ವಿಷುವ ಕಾಲಗಳಲ್ಲಿ ಸ್ನಾನ ಉಪವಾಸ ದಾನಗಳನ್ನು ಮಾಡಿದರೆ ಎಲ್ಲವೂ ಅಕ್ಷಯವೆನಿಸುವುದು. ಯೋಗ್ಯಜ್ಞಾನಿಗೆ ಇಲ್ಲಿ ಕನ್ಯಾದಾನ ಮಾಡಿದವನು ಅವನ ಮತ್ತು ಅವನ ಕುಲದವರ ಮೈಯ ರೋಮಗಳಷ್ಟು ಸಾವಿರ ವರ್ಷಗಳ ಕಾಲ ಶಿವಲೋಕದಲ್ಲಿ ಸುಖಪಡುವನು.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಸ್ವರ್ಗಖಂಡದಲ್ಲಿ ಭಾರ್ಗವೇಶ್ವರತೀರ್ಥ ಶುಕ್ಲತೀರ್ಥಮಾಹಾತ್ಮ್ಯವೆಂಬ ಆರನೇಯ ಅಧ್ಯಾಯ ಮುಗಿದುದು*



## ನರಕ ತೀರ್ಥ

**ಅಧ್ಯಾಯ - ೭**

**ನಾರದ ಉವಾಚ**

**ನಾರದ :-** ನರಕತೀರ್ಥ ಸ್ನಾನಮಾಡಿದವನಿಗೆ ನರಕ ದರ್ಶನವಿಲ್ಲ. ಅಲ್ಲಿ ಅಸ್ಥಿಯನ್ನೆಸೆದರೆ ಮೃತನ ಪಾಪವೆಲ್ಲ ಪರಿಹಾರವಾಗುವುದು. ಗೋತೀರ್ಥ ದರ್ಶನದಿಂದಲೇ ಪಾಪ ಪರಿಹಾರವಾಗುತ್ತದೆ. ಕಪಿಲಾತೀರ್ಥಸ್ನಾನದಿಂದ ಸಾವಿರ ಗೋದಾನದ ಫಲ ಸಿಗುತ್ತದೆ. ಜ್ಯೇಷ್ಠಮಾಸದ ಚತುರ್ದಶಿಯಲ್ಲಿ ಉಪವಾಸವಿದ್ದು ಇಲ್ಲಿ ಶಿವನಿಗೆ ತುಪ್ಪದ ದೀಪವಿಟ್ಟು ತುಪ್ಪದ ಅಭಿಷೇಕಮಾಡಿ ತುಪ್ಪದೊಂದಿಗೆ ಬಿಲ್ವವನ್ನಿತ್ತು ಪ್ರದಕ್ಷಿಣೆ ಮಾಡಬೇಕು. ಘಂಟೆ ಆಭರಣಗಳಿಂದ ಕೂಡಿದ ಕಪಿಲೆಯನ್ನು ದಾನ ಮಾಡಬೇಕು. ಅದರಿಂದ ಪುನರ್ಜನ್ಮವಿಲ್ಲದಂತಾಗುವುದು. ಶಿವನಂತೆ ಎಲ್ಲ ಸುಖ ಅನುಭವಿಸುವಂತಾಗುವುದು. ಮಂಗಳವಾರ ಚೌತಿ ನವಮಿಗಳು ಬಂದಾಗ ಇಲ್ಲವೆ ಅಮಾವಾಸ್ಯೆಯ ದಿನ ಶಿವನಿಗೆ ತುಪ್ಪದ ಅಭಿಷೇಕಮಾಡಿ ಬ್ರಾಹ್ಮಣಭೋಜನ ಮಾಡಿದರೆ ಪುಷ್ಪಕ ವಿಮಾನದಿಂದ ಶಿವಲೋಕವನ್ನು ಸೇರಿ ಶಿವನಂತೆಯೇ ಅಕ್ಷಯ ಸುಖವನ್ನು ಪಡೆಯುವನು. ತಿರುಗಿ ಭೂಮಿಗೆ ಬಂದಾಗ ಬಲಿಷ್ಠ ಸುಂದರ ರಾಜನಾಗಿ ಹುಟ್ಟುವನು. ಋಷಿತೀರ್ಥವು ತೃಣಬಿಂದು ಋಷಿಯ ಶಾಪ ವಿಮೋಚನೆಯಾದ ಸ್ಥಳ. ಗಜೇಶ್ವರ ತೀರ್ಥದಲ್ಲಿ ಶ್ರಾವಣ ಕೃಷ್ಣಪಕ್ಷದ ಚತುರ್ದಶಿ ಸ್ನಾನ ಮಾಡಿದರೆ ರುದ್ರಲೋಕ ಪ್ರಾಪ್ತಿ. ಪಿತೃತರ್ಪಣದಿಂದ ಋಣತ್ರಯ ಹೊರಟು ಹೋಗುವುದು. ಗಂಗಾವದನ ಸ್ನಾನದಿಂದ ಸರ್ವಪಾಪ ಪರಿಹಾರ. ಅಲ್ಲಿ ಪರ್ವದಿನಗಳಲ್ಲಿ ಸ್ನಾನ ಪಿತೃತರ್ಪಣಗಳನ್ನು ಮಾಡಿದರೆ ಋಣತ್ರಯದಿಂದ ಮುಕ್ತಿ. ಅಲ್ಲಿಂದ ಪಶ್ಚಿಮಕ್ಕೆ ಹೋದರೆ ದಶಾಶ್ವಮೇಧಿಕ ತೀರ್ಥವಿದೆ. ಭಾದ್ರಪದ ಅಮಾವಾಸ್ಯೆಯಂದು ಉಪವಾಸವಿದ್ದು ಸ್ನಾನಮಾಡಿದರೆ ಶಿವಲೋಕ ಪ್ರಾಪ್ತಿ.

ಪರ್ವದಿನಗಳಲ್ಲಿ ಸ್ನಾನ ಪಿತೃತರ್ಪಣಗಳಿಂದ ಅಶ್ವಮೇಧ ಫಲವನ್ನು ಹೊಂದಬಹುದು. ಇಲ್ಲಿಂದ ಪಶ್ಚಿಮಕ್ಕೆ ಭೃಗುತೀರ್ಥವಿದೆ.

ಹಿಂದೆ ಭೃಗುಮುನಿ ಒಂದು ಸಾವಿರ ದಿವ್ಯವರ್ಷಗಳ ಕಾಲ ಶಿವನನ್ನು ಕುರಿತು ತಪಸ್ಸು ಮಾಡಿದ. ಅವನ ಮೈ ಮೇಲೆ ಹುತ್ತ ಬೆಳೆದು ಬಿಟ್ಟಿತ್ತು. ಅದನ್ನು ನೋಡಿದಾಗ ಪಾರ್ವತಿ ಆಶ್ಚರ್ಯದಿಂದ ಶಿವನನ್ನು ಕೇಳಿದಳು.

**ಪಾರ್ವತಿ :-** ನಾಥ ಇವನಾರು ತಪಸ್ಸು ಮಾಡುವವನು? ದೇವನೆ, ಇಲ್ಲವೆ ದಾನವನೆ?

**ಶಿವ :-** ಇವನು ಭೃಗು, ದೊಡ್ಡ ಮುನಿ. ಸಮಾಧಿಯಲ್ಲಿದ್ದು ನನ್ನನ್ನು ಧ್ಯಾನಿಸುತ್ತಿದ್ದಾನೆ. ವರ ಪಡೆಯುವ ಆಸೆ ಇದೆ ಅವನಿಗೆ.

**ಪಾರ್ವತಿ :-** ಹೊಗೆ ಉಗುಳುತ್ತ ಬೆಂಕಿಯ ಜ್ವಾಲೆ ಮೇಲೇಳುತ್ತಿದೆ. ಇನ್ನೂ ನೀನು ಸುಮ್ಮನಿರುವೆ ? ತೃಪ್ತಿಯಾಗಲಿಲ್ಲವೆ ? ಹಾಗಾದರೆ ನಿನ್ನನ್ನು ತೃಪ್ತಿ ಪಡಿಸುವುದು ಅಸಾಧ್ಯವೆ ಸರಿ.

**ಶಿವ :-** ದೇವಿ, ನಿನಗೊಂದೂ ತಿಳಿಯದು. ಈ ಮುನಿ ಕೋಪವನ್ನು ಬಿಟ್ಟಿಲ್ಲ. ಕೋಪಗೊಂಡಾಗ ಅವನು ಮಾಡುವ ಚೇಷ್ಟೆಯನ್ನೊಮ್ಮೆ ತೋರಿಸುವೆ ನೋಡು ಒಂದು ತಮಾಷೆಯನ್ನು.

ಹೀಗೆ ಹೇಳಿ ಶಿವನು ನಂದಿಯನ್ನು ನೆನೆದ. ಒಡನೆ ಆತ ಬಂದು ನಿಂತು ಕೇಳಿದ

**ನಂದಿ :-** ಪ್ರಭು ಏನಪ್ಪಣೆ ?

**ಶಿವ:-**ಈ ಹುತ್ತದೊಳಗೆ ಒಬ್ಬ ಮುನಿ ಇದ್ದಾನೆ. ಅವನನ್ನು ಹಾಯ್ದು ನೆಲಕ್ಕೆ ಕೆಡಹು.

ಯೋಗ ಸಮಾಧಿಯಲ್ಲಿ ಧ್ಯಾನಮಾಡುತ್ತಿದ್ದ ಮುನಿಯನ್ನು ನಂದಿ ನೆಲದ ಮೇಲೆ ಕೆಡವಿದನು. ಒಡನೆ ಕೋಪದಿಂದ ಮುನಿ ಹೊಡೆಯಲು ಕೈಯೆತ್ತಿದ. ನಂದಿ ಓಡತೊಡಗಿದಾಗ ಮುನಿ ಆರ್ಭಟಿಸಿದ.

**ಭೃಗು :-** ಪಾಪಿ, ಬಸವ, ಎಲ್ಲಿಗೆ ಓಡುತ್ತಿರುವೆ ? ನಿನ್ನನ್ನೀಗಲೆ ಹೊಡೆದು ಸಾಯಿಸುತ್ತೇನೆ.

ನಂದಿ ಆಗಸದೆತ್ತರಕ್ಕೆ ನೆಗೆದ. ಮುನಿಯೂ ಮೇಲೇರಿದ. ಶಿವ ಜೋರಾಗಿ ನಕ್ಕ. ಮುನಿ, ಅವನ ಮುಂದೆ ಸಾಕ್ಷಾತ್ ಶಿವನು ನಿಂತು ನಗುತ್ತಿರುವುದನ್ನು ಕಂಡು, ಭಯ ಭೀತನಾದ. ಮೂರನೆ ಕಣ್ಣನ್ನು ಕಂಡಾಗಲಂತೂ ನೆಲದ ಮೇಲೆ ಬಿದ್ದು ದಂಡಪ್ರಣಾಮ ಮಾಡಿ ಸ್ತೋತ್ರ ಮಾಡತೊಡಗಿದ.

ಹೇ ಭೂತನಾಥ, ನಿನ್ನ ಗುಣಗಳನ್ನು ಯಾರು ಹೊಗಳಬಲ್ಲರು ? ಆದರೂ ಭಕ್ತಿಯಿಂದ ನಾನು ನಿನ್ನನ್ನು ಹೊಗಳುತ್ತಿದ್ದೇನೆ ಕ್ಷಮಿಸು. ಸತ್ವ ರಜಸ ತಮಸ ಎಂಬ ಮೂರು ಗುಣಗಳಲ್ಲಿದ್ದು ಸೃಷ್ಟಿ ಸ್ಥಿತಿ ಲಯಗಳನ್ನು ಮಾಡುವ ದೇವತೆ ನಿನ್ನನ್ನು ಬಿಟ್ಟರೆ ಇನ್ನಿಲ್ಲ. ಯಮನಿಯಮಾದಿಗಳು, ವೇದಾಭ್ಯಾಸ, ಇವಾವುವೂ ನಿನ್ನ ಭಕ್ತಿಯ ಲೇಶಕ್ಕೂ ಸಮನಲ್ಲ. ನಿನ್ನ ಭಕ್ತರಿಗೆ ಉತ್ಕೃಷ್ಟ ರಸರಸಾಯನ ಅಂಜನ ಮುಂತಾದ ವಿದ್ಯೆಗಳಲ್ಲಿ ಸಿದ್ಧಿ ಈ ಜನ್ಮದಲ್ಲಿಯೆ ಕಂಡು ಬರುತ್ತಿದೆ. ಡಂಭಾಚಾರಕ್ಕಾಗಿಯಾದರೂ ನಿನ್ನನ್ನೊಮ್ಮೆ ನಮಿಸಿದರೆ ಅವನಿಗೆ ಪುಣ್ಯವನ್ನೇ ಕೊಡುವೆ. ಸಂಸಾರವನ್ನು ಕಳೆವ ಭಕ್ತಿಯನ್ನು ಕೊಡುವವನು ನೀನು.

**ಪರದಾರ ಪರಸ್ವರತಂ ಪರಿಭವ ಪರಿದುಃಖ ಶೋಕ ಸಂತಪ್ತಂ ।**
**ಪರವದನ ವೀಕ್ಷಣಪರಂ ಪರಮೇಶ್ವರ ಮಾಂ ಪರಿತ್ರಾಹಿ ॥**

ಪರಸತಿಯರಲ್ಲಿ ಪರಧನದಲ್ಲಿ ಆಶೆಪಟ್ಟು ಪರಿಭವಗೊಂಡು ದುಃಖಶೋಕ ಸಂತಪ್ತನಾದೆ. ದೈನ್ಯದಿಂದ ಪರರ ಮುಖವನ್ನು ನೋಡಿದೆ. ಪರಮೇಶ್ವರ, ನನ್ನನ್ನು ಕಾಪಾಡು.

**ತೃಷ್ಣಾಂ ಹರಸ್ವ ಶೀಘ್ರಂ ಲಕ್ಷ್ಮೀಂ ಮೇ ದೇಹಿ ಹೃದಯವಾಸಿನೀಂ ನಿತ್ಯಾಂ**
**ಛಿಂದಿ ಮದ ಮೋಹ ಪಾಶಾನುತ್ತಾರಯ ಮಾಂ ಮಹಾದೇವ ॥**

ಮಹಾದೇವ, ನನ್ನಲ್ಲಿರುವ ವಿಷಯ ಲಾಲಸೆಯನ್ನು ಹೋಗಲಾಡಿಸು. ನಿನ್ನೆದೆಯಲ್ಲಿ ನಿತ್ಯವಾಸಿಸುವ ಲಕ್ಷ್ಮಿಯನ್ನು ನನಗೆ ನೀಡು. ಮದಮೋಹಗಳ ಪಾಶವನ್ನು ಹರಿದೊಗೆದು ಸಂಸಾರದಿಂದ ನನ್ನನ್ನು ದಾಟಿಸು.

ಕರುಣಾಭ್ಯುದಯವೆಂಬ ಈ ಸ್ತೋತ್ರವು ದಿವ್ಯ ಹಾಗೂ ಸಕಲ ಸಿದ್ಧಿಪ್ರದ. ಇದನ್ನು ಭಕ್ತಿಯಿಂದ ಪಠಿಸಿದರೆ ಅವನು ಭೃಗುವಿನಂತೆಯೇ ಶಿವನೊಲಿಮೆಗೆ ಪಾತ್ರನಾಗುವನು.

**ಶಿವ :-** ಮುನಿಯೆ, ನಾನು ನಿನಗೊಲಿದಿದ್ದೇನೆ. ನಿನ್ನ ಅಭೀಷ್ಟವನ್ನು ಕೇಳು.

**ಭೃಗು :-** ದೇವೇಶ, ನೀನೊಲಿದಿರುವೆಯಾದರೆ ನಾನು ನಿನ್ನನ್ನು ಇನ್ನೂ ಹೆಚ್ಚು ತಿಳಿದುಕೊಳ್ಳುವಂತೆ ವರನೀಡು.

**ಶಿವ :-** ಹಾಗೆ ಆಗಲಿ.

ಅಂದಿನಿಂದ ಬ್ರಹ್ಮಾದಿದೇವತೆಗಳೂ ಶಿವನೊಲಿದ ಆ ಭೃಗುತೀರ್ಥದಲ್ಲಿಯೇ ತಪಸ್ಸು ಮಾಡುವರು. ಆ ತೀರ್ಥದ ದರ್ಶನದಿಂದಲೇ ಪಾಪ ಪರಿಹಾರವಾಗುವುದು. ಅಲ್ಲಿ ತಿಳಿದೊ ತಿಳಿಯದೆಯೊ ಪ್ರಾಣತ್ಯಾಗ ಮಾಡಿದವರಿಗೆ ಪರಮ ರಹಸ್ಯವಾದ ತತ್ವಜ್ಞಾನ ಲಭಿಸುವುದು. ಪುನರ್ಜನ್ಮವಿಲ್ಲದಂತಾಗುವುದು. ಅಲ್ಲಿ ಪಾದರಕ್ಷೆ ಛತ್ರಿ ಅನ್ನ ಸುವರ್ಣ ದಾನಗಳನ್ನು ಸೂರ್ಯಗ್ರಹಣ ಕಾಲದಲ್ಲಿ ಕೊಟ್ಟರೆ ಅಕ್ಷಯಫಲವಿದೆ. ವಿಷ್ಣುಮಾಯೆಯಿಂದ ಮೂಢರಾದವರು ಮಾತ್ರ ಈ ಭೃಗುತೀರ್ಥವನ್ನರಿಯರು. ಅದರ ಮಹಾತ್ಮೆಯನ್ನು ಒಮ್ಮೆ ಕೇಳಿದರೂ ಎಲ್ಲ ಪಾಪಗಳ ಪರಿಹಾರವಾಗುವುದು. ರುದ್ರಲೋಕ ಪ್ರಾಪ್ತಿಯಾಗುವುದು.

ಗೌತಮೇಶ್ವರ ಸ್ನಾನ ಉಪವಾಸಗಳಿಂದ ಬ್ರಹ್ಮಲೋಕ ಪ್ರಾಪ್ತಿಯಾಗುವುದು. ಧೌತಪಾಪ ತೀರ್ಥಸ್ನಾನದಿಂದ ಬ್ರಹ್ಮಹತ್ಯಾ ಪಾತಕವು ತೊಲಗುವುದು. ಅಲ್ಲಿ ಪ್ರಾಣತ್ಯಾಗ ಮಾಡಿದರೆ ರುದ್ರನಂತೆ ಚತುರ್ಭುಜ ತ್ರಿನೇತ್ರಾಕೃತಿಯಿಂದ ಅವನಂತೆ ಬಲಿಷ್ಠನಾಗಿ ಅನೇಕ ಕಲ್ಪಗಳ ಕಾಲವಿದ್ದು ಕೊನೆಗೆ ಭೂಮಿಯಲ್ಲಿ ಚಕ್ರವರ್ತಿಯಾಗಿ ಹುಟ್ಟುತ್ತಾನೆ. ಹಿರಣ್ಯದ್ವೀಪ ಸ್ನಾನದಿಂದ ಧನ, ರೂಪ, ಸಂಪತ್ತು ಲಭಿಸುವುದು. ಕನಖಲ ತೀರ್ಥದಲ್ಲಿ ಸ್ನಾನಮಾಡಿದರೆ ರುದ್ರಲೋಕ ಪ್ರಾಪ್ತಿ. ಅಲ್ಲಿ ಗರುಡನು ತಪಸ್ಸು ಮಾಡಿದನು. ಈಶ ತೀರ್ಥದಲ್ಲಿ ಈಶನು ಮುಕ್ತನಾಗಿ ಊರ್ಧ್ವಲೋಕವನ್ನು ಸೇರಿದನು. ಸಿದ್ಧಜನಾರ್ದನ ತೀರ್ಥದಲ್ಲಿ ಅಚಿಂತ್ಯನಾದ ಪರಮೇಶ್ವರನು ವರಾಹರೂಪದಿಂದ ನೆಲೆಸಿದ್ದಾನೆ. ಅಲ್ಲಿ ದ್ವಾದಶಿ ದಿನ ಸ್ನಾನ ಮಾಡಿದ್ದರೆ ವಿಷ್ಣು ಲೋಕಪ್ರಾಪ್ತಿ. ನರಕದರ್ಶನ ಎಂದೂ ಇರದು.

ರುದ್ರಕನ್ಯಾತೀರ್ಥದಲ್ಲಿ ಸ್ನಾನಮಾಡಿದರೆ ದೇವಿಯಲೋಕವನ್ನು ಸೇರಬಹುದು. ದೇವತೀರ್ಥಸ್ನಾನದಿಂದ ದೇವಲೋಕ ಪ್ರಾಪ್ತಿ. ಶಿಖಿತೀರ್ಥದಲ್ಲಿ ಕೊಡುವ ದಾನವೆಲ್ಲ ಕೋಟಿ ಫಲ ನೀಡುವುದು. ಅಮಾವಾಸ್ಯೆಯಲ್ಲಿ ಸ್ನಾನಮಾಡಿ ಒಬ್ಬ ಪಂಡಿತನನ್ನು ಉಣಿಸಿದರೆ ಕೋಟಿ ಬ್ರಾಹ್ಮಣ ಭೋಜನದ ಫಲಸಿಗುವುದು.

ಭೃಗುತೀರ್ಥ ಒಂದರಲ್ಲಿ ಕೋಟಿ ತೀರ್ಥಗಳಿವೆ. ತಿಳಿದೊ ತಿಳಿಯದೆಯೊ ಅಲ್ಲಿ ಸ್ನಾನಮಾಡಿದರೆ ಅಶ್ವಮೇಧದ ಫಲವಿದೆ. ಅದು ಭೃಗುಮುನಿ ಸಿದ್ಧಿ ಪಡೆದ ಸ್ಥಳ. ಶಿವನು ಅಲ್ಲಿ ಅವತರಿಸಿದ್ದಾನೆ.

**ನಾರದ ಉವಾಚ**

**ನಾರದ :-** ವಿಹಗೇಶ್ವರ ತೀರ್ಥದರ್ಶನ ಮಾತ್ರದಿಂದ ಸರ್ವಪಾಪ ಪರಿಹಾರ. ನರ್ಮದೇಶ್ವರ ಸ್ನಾನದಿಂದ ಸ್ವರ್ಗಲೋಕ ಲಾಭ. ಅಶ್ವತೀರ್ಥಸ್ನಾನದಿಂದ ಭೋಗವೃದ್ಧಿ. ಪಿತಾಮಹತೀರ್ಥವನ್ನು ಬ್ರಹ್ಮನೆ ನಿರ್ಮಿಸಿದ. ಅಲ್ಲಿ ಸ್ನಾನಮಾಡಿ ಪಿತೃಗಳಿಗೆ ಪಿಂಡ ತಿಲೋದಕಗಳನ್ನಿತ್ತರೆ ಎಲ್ಲವೂ ಅಕ್ಷಯವೆನಿಸುತ್ತದೆ. ಸಾವಿತ್ರಿ ತೀರ್ಥಸ್ನಾನದಿಂದ ಬ್ರಹ್ಮಲೋಕ ಪ್ರಾಪ್ತಿ. ಮನೋಹರತೀರ್ಥ ಸ್ನಾನದಿಂದ ಪಿತೃಲೋಕ ಪ್ರಾಪ್ತಿ. ಮಾನಸ ತೀರ್ಥಸ್ನಾನದಿಂದ ರುದ್ರಲೋಕ ಪ್ರಾಪ್ತಿ. ಕ್ರತುತೀರ್ಥ ಸ್ನಾನದಿಂದ ಸರ್ವಾಭೀಷ್ಟಸಿದ್ಧಿ, ದಶಕನ್ಯಾತೀರ್ಥ ಸ್ನಾನ ಶಿವಾರ್ಚನೆಗಳಿಂದ ಸರ್ವಪಾಪ ಪರಿಹಾರ. ಅಲ್ಲಿ ಕನ್ಯಾದಾನ ಮಾಡಿದರೆ ಕನ್ಯಾವೃದ್ಧಿ. ಅಲ್ಲಿ ಹಿಂದೆ ಋಷಿ ಕನ್ಯೆಯರು ಈಶ್ವರನು ತಮಗೆ ಪತಿಯಾಗಿ ದೊರೆಯಬೇಕೆಂದು ತಪಸ್ಸು ಮಾಡತೊಡಗಿದಾಗ ಆತ ಭೀಕರ ರೂಪ ತೋರಿದ. ವಿಕೃತ ವದನದಿಂದ ಅವರಿಗೆ ಭೀಭತ್ಸ ಉಂಟು ಮಾಡಿದ. ಸ್ವರ್ಗಬಿಂದು ಸ್ನಾನದಿಂದ ದುರ್ಗತಿ ಪರಿಹಾರ. ಅಪ್ಸರೇಶ ಸ್ನಾನದಿಂದ ನಾಗಲೋಕದಲ್ಲಿ ಅಪ್ಸರೆಯರೊಡನಾಟ. ನರಕತೀರ್ಥ ಸ್ನಾನದಿಂದ ನರಕವಾಸ ತಪ್ಪುವುದು. ಭಾರಭೂತತೀರ್ಥದಲ್ಲಿ ಉಪವಾಸವಿದ್ದು ವಿರೂಪಾಕ್ಷನನ್ನ ಅರ್ಚಿಸಿದರೆ ರುದ್ರಲೋಕ ಪ್ರಾಪ್ತಿ. ಅಲ್ಲಿ ಸ್ನಾನಮಾಡಿ ಪ್ರಾಣತ್ಯಾಗ ಮಾಡಿದರೆ ರುದ್ರಗಣಗಳಿಗೊಡೆಯನಾಗಬಹುದು. ಕಾರ್ತಿಕದಲ್ಲಿ ಇಲ್ಲಿ ಶಿವಾರ್ಚನೆ ಮಾಡಿದರೆ ಅಶ್ವಮೇಧಕ್ಕಿಂತ ನೂರು ಪಾಲು ಹೆಚ್ಚು ಫಲ. ನೂರು ತುಪ್ಪದ ದೀಪಗಳನ್ನು ದಾನ ಮಾಡಿದರೆ ಶಿವಲೋಕ ಪ್ರಾಪ್ತಿ, ಬಿಳಿ ಎತ್ತನ್ನು ದಾನ ಮಾಡಿದರೆ ವೃಷಭ ವಾಹನದಿಂದ ಶಿವಲೋಕ ಪ್ರಾಪ್ತಿ. ಅನ್ನದಾನ ಮಾಡಿದರೆ ಕೋಟಿ ಫಲ. ನರ್ಮದಾಜಲದಿಂದ ಶಿವನಿಗಭಿಷೇಕಮಾಡಿದರೆ ಎಂದೂ ದುರ್ಗತಿಯಾಗದು. ಇಲ್ಲಿ ಪ್ರಾಣತ್ಯಾಗ ಮಾಡಿದರೆ ಶಿವಲೋಕ ಪ್ರಾಪ್ತಿ. ಜಲ ಪ್ರವೇಶದಿಂದ ಹಂಸಯಾನದಲ್ಲಿ ರುದ್ರಲೋಕ ಪ್ರಾಪ್ತಿ. ಪ್ರಾಯೋಪವೇಶ ಮಾಡುವವನು ಚಂದ್ರ ಸೂರ್ಯ ಹಿಮಾಲಯ ಸಮುದ್ರ ಗಂಗಾದಿ ತೀರ್ಥಗಳಿರುವಷ್ಟು ಕಾಲ ಸ್ವರ್ಗದಲ್ಲಿರುತ್ತಾನೆ. ಅವನಿಗೆ ಪುನರ್ಜನ್ಮವಿಲ್ಲ. ಆಟವೀ ತೀರ್ಥ ಸ್ನಾನದಿಂದ ಇಂದ್ರನ ಅರ್ಧಾಸನ ದೊರೆಯುವುದು. ಶೃಂಗತೀರ್ಥ ಸ್ನಾನದಿಂದ ಗಣಗಳಿಗೊಡೆಯನಾಗಬಹುದು. ಏರಂಡೀ ಸಂಗಮ ಸ್ನಾನದಿಂದ ಬ್ರಹ್ಮಹತ್ಯಾ ನಿವೃತ್ತಿ.

ನರ್ಮದಾಸಾಗರ ಸಂಗಮದಲ್ಲಿ ಅನೇಕ ಯಜ್ಞಗಳನ್ನು ಮಾಡಿ ಇಂದ್ರನು ಇಂದ್ರ ಪದವಿಯನ್ನು ಪಡೆದ. ಅಲ್ಲಿ ಸ್ನಾನ ಮಾಡಿದರೆ ಅಶ್ವಮೇಧದ ಮೂರಷ್ಟು ಫಲ.

ಈ ತೀರ್ಥ ಮೋಕ್ಷಕ್ಕೆ ತೆರೆದ ಬಾಗಿಲು. ಅಲ್ಲಿ ದೇವತೆಗಳು ಗಂಧರ್ವರು ಋಷಿಗಳು ಸಿದ್ಧರು ಚಾರಣರು ಮೂರುಕಾಲದಲ್ಲಿಯೂ ವಿಮಲೇಶ್ವರ ನನ್ನ ಅರ್ಚಿಸುತ್ತಾರೆ. ಈ ತೀರ್ಥಕ್ಕೆ ಸಮನಾದುದು ಹಿಂದೆ ಇರಲಿಲ್ಲ. ಮುಂದೆಯೂ ಇಲ್ಲ. ಅಲ್ಲಿ ಉಪವಾಸಮಾಡಿ ವಿಮಲೇಶ್ವರ ದರ್ಶನ ಮಾಡಿದರೆ ರುದ್ರಲೋಕ ಪ್ರಾಪ್ತಿ. ಕೇಶಿನೀತೀರ್ಥ ಸ್ನಾನ ಉಪವಾಸಗಳಿಂದ ಬ್ರಹ್ಮಹತ್ಯಾ ನಿವೃತ್ತಿ.

ಸಾಗರೇಶ್ವರ ದರ್ಶನದಿಂದ ಸರ್ವತೀರ್ಥಸ್ನಾನ ಫಲ. ರುದ್ರಲೋಕ ಪ್ರಾಪ್ತಿ.

ಅಮರಕಂಟಕದಿಂದ ನರ್ಮದಾಸಾಗರದ ಸಂಗಮದವರೆಗೆ ಹತ್ತುಕೋಟಿ ತೀರ್ಥಗಳಿವೆ. ಕೋಟಿ ಋಷಿಗಳು ಅವುಗಳನ್ನು ಸೇವಿಸುತ್ತಾರೆ.

ಈ ಅಧ್ಯಾಯವನ್ನು ಪಠಿಸಿದರೆ ಇಲ್ಲವೆ ಕೇಳಿದರೆ ಸರ್ವತೀರ್ಥಸ್ನಾನದ ಫಲ ದೊರೆಯುತ್ತದೆ. ನರ್ಮದೆಯಂತೂ ಸಂತುಷ್ಟಳಾಗುವುದರಲ್ಲಿ ಸಂದೇಹವಿಲ್ಲ. ಶಿವನು ಸಂತುಷ್ಟನಾಗುತ್ತಾನೆ. ಮಾರ್ಕಂಡೇಯ ಮುನಿಯೂ ಪ್ರಸನ್ನನಾಗುತ್ತಾನೆ. ಆದರಿಂದ ಬಂಜೆ ಮಕ್ಕಳನ್ನು ಪಡೆಯುವಳು. ಸೌಭಾಗ್ಯವಿಲ್ಲದವಳು ಸೌಭಾಗ್ಯ ಪಡೆಯುವಳು. ಯಾರು ಏನು ಬಯಸುವರೋ ಅದು ಅವರಿಗೆ ಸಿಗುತ್ತದೆ. ಬ್ರಾಹ್ಮಣನು ವೇದವಿದ್ಯೆಯನ್ನೂ ಕ್ಷತ್ರಿಯನು ವಿಜಯವನ್ನು ವೈಶ್ಯನು ಧನಧಾನ್ಯವನ್ನು ಶೂದ್ರನು ಸದ್ಗತಿಯನ್ನೂ ಮೂರ್ಖನು ವಿದ್ಯೆಯನ್ನೂ ಪಡೆಯುವನು. ನರಕ ದರ್ಶನವಾಗದು. ಹೀನಯೋನಿಯಲ್ಲಿ ಜನ್ಮವೂ ಬರದು.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಸ್ವರ್ಗಖಂಡದಲ್ಲಿ*
*ನರಕ ತೀರ್ಥ ಎಂಬ ಏಳನೇಯ ಅಧ್ಯಾಯ ಮುಗಿದುದು*

—o—

## ವಿಪ್ರಮೋಹಿನಿ ಮತ್ತು ಗಂಧರ್ವ ಕನ್ಯೆಯರ ಇತಿಹಾಸ — ಅಧ್ಯಾಯ - ೮

**ನಾರದ ಉವಾಚ**

**ನಾರದ :-** ರಾಜನೆ, ಹಿಂದೆ ಗಂಧರ್ವ ಕನ್ಯೆಯರಿಗೆ ಬಂದ ಶಾಪವನ್ನು ಈ ನರ್ಮದಾ ನದಿಯ ನೀರಹನಿ ಬೆಂಕಿಯಂತೆ ಸುಟ್ಟಿತು. ಆದರಿಂದ ಆ ನದಿಯ ನೀರ ಹನಿ ಮಾನವನಿಗೆ ಮುಕ್ತಿ ಕೊಡಬಲ್ಲುದು.

**ಯುಧಿಷ್ಠಿರ :-** ಪೂಜ್ಯರೆ, ಆ ಗಂಧರ್ವ ಕನ್ಯೆಯರಿಗೆ ಶಾಪ ಯಾರಿಂದ ಹೇಗೆ ಬಂದಿತು ? ಅವರು ಯಾರ ಮಕ್ಕಳು ? ಹೆಸರೇನು ? ನರ್ಮದೆಯ ನೀರಹನಿಯಿಂದ ಶಾಪ ಮುಕ್ತರಾಗಿ ಎಲ್ಲಿ ಮಿಂದರು ? ಎಲ್ಲವನ್ನೂ ಹೇಳಿ. ನರ್ಮದೆಯ ತೀರ್ಥಗಳ ಮಹಿಮೆ ಚಮತ್ಕಾರವಾಗಿದೆ. ಕೇವಲ ಶ್ರವಣದಿಂದಲೆ ಪಾಪಗಳನ್ನು ತೊಳೆಯುತ್ತದೆ. 'ನರ್ಮದಾ' ಎಂಬ ಶಬ್ದವನ್ನು ಉಚ್ಚರಿಸಿದರೆ ಶಾಶ್ವತ ಮುಕ್ತಿ ದೊರೆಯುತ್ತದೆ. ನರ್ಮದೆಯ ಎಷ್ಟೋ ಮಹಿಮೆಗಳನ್ನು ಹೇಳಿರುವಿರಿ. ಆದರೂ ಇನ್ನೂ ಹೇಳಿ. ಒಳ್ಳೆಯ ಕಥೆಗಳನ್ನು ವಿವೇಕಿಗಳು ಕೇಳಬೇಕು. ಆದುದರಿಂದ ಗಂಧರ್ವಕನ್ಯೆಯರ ಚರಿತ್ರೆಯನ್ನೂ ಹೇಳಿ.

**ನಾರದ :-** ಯುಧಿಷ್ಠಿರ ಈ ಕಥೆಯೊಳಗೆ ಧರ್ಮವಡಗಿದೆ. ಅರಣಿಯಲ್ಲಿನ ಬೆಂಕಿಯಂತೆ ; ಧರ್ಮದಲ್ಲಿನ ಬ್ರಹ್ಮದಂತೆ. ಶುಕಸಂಗೀತನೆಂಬ ಗಂಧರ್ವರ ಮಗಳು ಪ್ರಮೋಹಿನಿ. ಸುಶೀಲನ ಮಗಳು ಸುಶೀಲೆ. ಸ್ವರವೇದಿಯ ಮಗಳು ಸುಸ್ವರೆ. ಚಂದ್ರಕಾಂತನ ಮಗಳು ಸುತಾರೆ. ಸುಪ್ರಭನ ಮಗಳು ಚಂದ್ರಿಕೆ. ಈ ಐವರು ಕುಮಾರಿಯರು ಅಕ್ಕತಂಗಿಯರಂತೆ ಅನ್ಯೋನ್ಯವಾಗಿದ್ದ ಗೆಳತಿಯರು. ಆಗ ತಾನೇ ವಯಸ್ಸಿಗೆ ಬಂದವರು. ಚಂದ್ರನಿಂದ ಹೊರಬಂದ ಚಂದ್ರಿಕೆಯಂತೆ, ಚಂದ್ರಕಾಂತ ಮಣಿಯಂತೆ ಉಜ್ವಲಶೋಭೆ ಉಳ್ಳವರು. ಚಂದ್ರನಂಥ ಮೊಗದವರು. ದೇವತೆಗಳು ಈ ವಿಲಾಸಿಯರನ್ನು ಕಂಡಾಗ ಬೆಳದಿಂಗಳನ್ನು ಕಂಡ ನೈದಿಲೆಗಳಂತಾಗುತ್ತಿದ್ದರು. ಅಂಥ ಲಾವಣ್ಯದ ಮುದ್ದೆಯಂಥ ದಿವ್ಯರೂಪಿನ ಮನೋಹರೆಯರು, ಅವರ ತಾವರೆ ಮೊಗ್ಗಿನಂಥ ಎದೆಗಳು ವಸಂತದಲ್ಲಿ ಕೇದಗೆಗಳಂತೆ ಎದ್ದು ಕಾಣುತ್ತಿದ್ದುವು. ನವಪಲ್ಲವಗಳನ್ನು ತೊಟ್ಟ ಬಳ್ಳಿಯಂತೆ ನವಯೌವನವನ್ನು ಹೊತ್ತು ಆ ಬಾಲೆಯರು ಮನಸೆಳೆಯುತ್ತಿದ್ದರು. ಬಂಗಾರದ ಮೈಯಮೇಲೆ ಬಂಗಾರದೊಡವೆ, ಬಂಗಾರದ ಸಂಪಿಗೆ ಮಾಲೆ, ಬಂಗಾರದ ಬಣ್ಣದ ಉಡುಪು. ಸ್ವರಗ್ರಾಮ ಮೂರ್ಛನಾಸಹಿತವಾಗಿ ಹಾಡುವುದರಲ್ಲಿ, ತಾಳವಾದ್ಯಗಳಲ್ಲಿ ವೀಣೆ ಕೊಳಲು ನುಡಿಸುವುದರಲ್ಲಿ, ಮೃದಂಗ ನಾದದೊಂದಿಗೆ ಲಾಸ್ಯವಾಡುವುದರಲ್ಲಿ, ಚಿತ್ರ ಬರೆವ ಕಲೆಯಲ್ಲಿ, ನಾನಾ ವಿನೋದಗಳಲ್ಲಿ, ಎಲ್ಲದರಲ್ಲಿಯೂ ನಿಪುಣೆಯರು.

ಇವರಿಗೆ ಆಟವಾಡುವ ಹುಚ್ಚು ಬಹಳ. ತಂದೆತಾಯಿಗಳೂ ಮುದ್ದುಮಾಡುವವರೆ. ಆದರಿಂದ ಅವರು ಯಕ್ಷಲೋಕದಲ್ಲಿ ಸ್ವಚ್ಛಂದವಾಗಿ ಓಡಾಡುತ್ತಿದ್ದರು.

ಒಮ್ಮೆ ಐವರೂ ವಸಂತದಲ್ಲಿ ಮಂದಾರದ ಹೂಗಳನ್ನು ಕೀಳುತ್ತ ವನದಿಂದ ವನಕ್ಕೆ ಓಡಾಡಿದರು. ಬಳಿಕ ಗೌರೀಪೂಜೆಗಾಗಿ ಅಚ್ಛೋದ ಸರೋವರದ ಬಳಿಗೆ ಬಂದರು. ಅಲ್ಲಿ ಬೆಳೆದ ಬಂಗಾರದ ಕಮಲಗಳನ್ನೂ ಉತ್ಪಲಗಳನ್ನೂ ಆಯ್ದು, ವೈಡೂರ್ಯ ಸ್ಫಟಿಕಮಯವಾದ ಸ್ನಾನದ ಘಟ್ಟಗಳಲ್ಲಿ ಮಿಂದು ಉಡುಪುಗಳನ್ನುಟ್ಟು ಮಣ್ಣಿನಿಂದ ಗೌರಿಯ ಪ್ರತಿಮೆಯನ್ನು ತಯಾರಿಸಿದರು. ಚಿನ್ನದ ಮುತ್ತಿನ ಆಭರಣಗಳಿಂದ ಸಿಂಗರಿಸಿದರು. ಚಂದನ ಗಂಧ ಕುಂಕುಮಗಳಿಂದ ಕಮಲದ ಹೂಗಳಿಂದ ನಾನಾ ಉಪಹಾರಗಳಿಂದ ಪೂಜಿಸಿ ಲಾಸ್ಯವಾಡುತ್ತ ಕುಣಿದರು. ಗಾಂಧಾರ ಸ್ವರದಿಂದ ಆ ಜಿಂಕೆಗಣ್ಣಿನವರು ಭಾವಪೂರ್ಣವಾಗಿ ರಸಭರಿತವಾಗಿ ಹಾಡಿದರು.

ಆಗ ಓರ್ವ ಮುನಿಕುಮಾರ ಸ್ನಾನಕ್ಕಾಗಿ ಅಲ್ಲಿಗೆ ಬಂದ. ಅಸದೃಶ ರೂಪಿನ ಅರಳಿದ ತಾವರೆಗಣ್ಣಿನ ಯುವಕ. ವಿಶಾಲವಾದ ಎದೆ, ನಿಡುದೋಳುಗಳು, ಅತಿ ಸುಂದರ ಶಾಮವರ್ಣ, ಎರಡನೆ ಮನ್ಮಥನಂತಿದ್ದನಾತ. ಬ್ರಹ್ಮಚಾರಿ, ಶಿಖಾಧಾರಿ, ದಂಡವನ್ನು ಹಿಡಿದು ಬಿಲ್ಲನ್ನೆತ್ತಿದ ಮನ್ಮಥನಂತೆ ಕಾಣುತ್ತಿದ್ದ. ಜಿಂಕೆಯ ತೊಗಲನ್ನುಟ್ಟು ಚಿನ್ನದ ಬಣ್ಣದ ಮೌಂಜಿಯನ್ನು ಬಿಗಿದುಕೊಂಡಿದ್ದ. ಅವನನ್ನು ಕಂಡೊಡನೆ ಆ ಗಂಧರ್ವಕನ್ಯೆಯರು ಮುಗ್ಧರಾದರು. ಅವರ ಗೀತ ನೃತ್ಯವೆಲ್ಲವೂ ನಿಂತಿತು. ಬಿಟ್ಟಗಣ್ಣಿಂದ ನೋಡತೊಡಗಿದರು. ಕಾಮಬಾಣಗಳಿಗೆ ಅವರು ವಶರಾಗಿ, ಬೇಡನ ಬಾಣಗಳಿಗೆ

ಬಲಿಯಾಗುವ ಹರಿಣಿಗಳಂತಾದರು. ನೋಡು ನೋಡೆಂದು ಒಬ್ಬರಿಂದೊಬ್ಬರಿಗೆ ಆ ಯುವಕನನ್ನು ತೋರಿಸುತ್ತ ಅವನು ಕಾಮನೇ ಇರಬೇಕೆಂದುಕೊಂಡರು. ತಮ್ಮ ನಯನಕಮಲಗಳಿಂದ ಅವನನ್ನು ಎಡೆಬಿಡದೆ ಅರ್ಚಿಸಿದರು. ತಮ್ಮೊಳಗೆ ಹೀಗೆ ಚರ್ಚಿಸಿದರು ಇವನು ಕಾಮನೇ ಆಗಿರುವ ಪಕ್ಷದಲ್ಲಿ ರತಿ ಎಲ್ಲಿಗೆ ಹೋದಳು ? ಅಶ್ವಿನಿ ಕುಮಾರರಲ್ಲೊಬ್ಬನಿವನೆಂದರೆ ಇನ್ನೊಬ್ಬನೆಲ್ಲಿ ? ಗಂಧರ್ವನೊ ಕಿಂನರನೊ ಆಗಿರಬಹುದೆ ? ಅಥವಾ ಕಾಮರೂಪಿಯಾದ ಸಿದ್ಧಪುರುಷನೆ ? ಋಷಿ ಪುತ್ರನೆ ? ಮನುಷ್ಯನೆ ? ಅಥವಾ ಬ್ರಹ್ಮನು ನಮಗಾಗಿಯೆ ಸೃಷ್ಟಿಸಿದ ಅಲೌಕಿಕ ವ್ಯಕ್ತಿಯೊಬ್ಬನಿರಬಹುದೆ ? ಭಾಗ್ಯವಂತರಿಗೆ ಅವರ ಪೂರ್ವ ಪುಣ್ಯವು ನಿಧಿಯನ್ನು ಸೃಷ್ಟಿಸುತ್ತದೆಯಂತೆ. ಗೌರೀಪೂಜೆಮಾಡುವ ಕುಮಾರಿಯರು ನಾವು. ಆ ದೇವಿ ಕರುಣಾಸಾಗರದ ಅಲೆಯಿಂದ ತೊಯ್ದ ಅಂತಃಕರಣದಿಂದ ನಮಗೆಂದೇ ತಂದುಕೊಟ್ಟ ವರನಿವನೆಂದು ಏಕೆ ತಿಳಿಯಬಾರದು ? ಇವನು ನನಗೆ ಬೇಕು, ನಿನಗೂ ಬೇಕು, ಅವಳಿಗೂ ಬೇಕು, ನಮಗೆಲ್ಲರಿಗೂ ಬೇಕು.

ಆ ಕನ್ಯೆಯರಾಡುವ ಮಾತುಗಳನ್ನೆಲ್ಲ ಕೇಳಿಸಿಕೊಂಡ ಆ ಮುನಿಕುಮಾರನು ಅಷ್ಟರಲ್ಲಿಯೇ ಮಾಧ್ಯಾಹ್ನಿಕ ಅನುಷ್ಠಾನಗಳನ್ನು ಮುಗಿಸಿದ್ದ. ಈಗ ನಾನೇನು ಮಾಡಿದರೆ ಯುಕ್ತವಾದೀತೆಂದು ವಿಚಾರಿಸತೊಡಗಿದ. ವಿಶ್ವಾಮಿತ್ರ ಪರಾಶರ ಕಂಡು ದೇವಲರಂಥ ಮಹಾಯೋಗಿಗಳೂ ಅಬಲೆಯರಿಗೆ ಸೋತರೆಂಬುದೊಂದು ಅದ್ಭುತವೆ ಸರಿ. ಲಲನೆಯರ ಹುಬ್ಬಿನ ಬಿಲ್ಲಿಗೆ ನಯನ ಕಟಾಕ್ಷದ ಬಾಣಗಳನ್ನು ಹೂಡಿ ಬಿಲ್ಲುಗಾರ ಮನ್ಮಥನು ಗುರಿಯಿಟ್ಟು ಎಸೆದನೆಂದರೆ ಯಾರ ಮನಸ್ಸು ಪತನ ಹೊಂದಲಾರದು ? ಲಲನೆಯ ಕುಡಿನೋಟದ ಮಧ್ಯದಿಂದ ಎಂದಿನವರೆಗೆ ಮತ್ತು ಬರುವುದಿಲ್ಲವೊ ಅಂದಿನವರೆಗೆ ನೀತಿ ಭಯ ಧೈರ್ಯ ತಪಸ್ಸು ಶಾಂತಿ ಕುಲಮರ್ಯಾದೆ ಎಲ್ಲವೂ ಇರಬಲ್ಲುದು. ಈ ವಿಲಾಸಿನಿಯರು ತಮ್ಮ ಮೋಹಕ ಬಿನ್ನಾಣಗಳಿಂದ ವಿರಾಗಿಗಳ ಮನಸ್ಸನ್ನು ಮುಗ್ಧಗೊಳಿಸುತ್ತಾರೆ. ಮದವೇರಿಸುತ್ತಾರೆ. ಮಾಂಸರಕ್ತಮಲ ಮೂತ್ರಮಯವಾದ ಅಪವಿತ್ರ ಸ್ತ್ರೀಶರೀರದಲ್ಲಿ ಕಾಮುಕರು ಮನೋಜ್ಞತೆಯನ್ನು ಕಲ್ಪಿಸಿಕೊಂಡು ಮೋಹಕ್ಕೊಳಗಾಗುತ್ತಾರೆ. ಅದರಿಂದಲೆ ತಿಳಿದವರು ಅಂಗನೆಯರನ್ನು ತುಂಬ ಅಪಾಯಕಾರಿಣಿಯರೆಂದು ಹೇಳಿದ್ದಾರೆ. ಈ ಅಂಗನೆಯರು ನನ್ನ ಬಳಿ ಬರುವುದರೊಳಗೆ ನಾನು ಮನೆ ಸೇರುವುದೇ ಲೇಸು. ಹೀಗೆ ಆಲೋಚಿಸಿ ಆ ಮುನಿಕುಮಾರ ವೈಷ್ಣವಶಕ್ತಿಯಿಂದ ಅಂತರ್ಧಾನ ಹೊಂದಿ ಹೊರಟುಹೋದ. ಬಾಲೆಯರು ಬೆಕ್ಕಸಬೆರಗಾದರು. ಭಯಚಕಿತವಾದ ಕಣ್ಣುಗಳಲ್ಲಿ ಕಾತರತೆ ತುಂಬಿತು. ಕಾತರಗೊಂಡ ಹೆಣ್ಣು ಜಿಂಕೆಗಳಂತೆ ಎಲ್ಲೆಡೆ ಶೂನ್ಯ ದೃಷ್ಟಿ ಬೀರುತ್ತ ನಿಂತರು. ಪರಸ್ಪರ ಹೇಳಿಕೊಂಡರು.

**ಕನ್ಯೆಯರು** :- ಇವನೇನು ಇಂದ್ರಜಾಲಿಕನೆ ? ಮಾಯಾವಿಯೆ ? ನೋಡುತ್ತಿದ್ದಂತೆ ಕಣ್ಮರೆಯಾದನಲ್ಲವೆ ?

ಸೊಂಪಾಗಿ ಬೆಳೆದುನಿಂತ ಕಾಡನ್ನು ಕಾಳ್ಗಿಚ್ಚು ಸೂರೆಗೊಳ್ಳುವಂತೆ ಅವರ ಹೃದಯದಲ್ಲಿ ಪ್ರಿಯನಗಲಿಕೆಯ ದಳ್ಳುರಿ ವ್ಯಾಪಿಸಿ ಸುಡತೊಡಗಿತು. ಅವರು ವಿಲಾಪ ಮಾಡಿದರು.

ಓ ಪ್ರಿಯ, ನಿನ್ನ ಇಂದ್ರಜಾಲಿಕ ವಿದ್ಯೆಯನ್ನೊಮ್ಮೆ ಸಾಕು ಮಾಡು. ಮೈದೋರು. ಮೊದಲ ನೋಟದಲ್ಲಿಯೇ ನಮಗೆ ವಿರಹದ ಬೇನೆಯೆ ? ಮೊದಲ ತುತ್ತಿನಲ್ಲಿ ನೊಣ ಸೇರಿಕೊಂಡಂತಾಯಿತು. ಹಾಯ್, ಆ ವಿಧಿ ನಿನ್ನನ್ನೇಕೆ ನಮಗೆ ತೋರಿಸಿದ ? ನಮಗೆ ಮಹಾದುಃಖ ಕೊಡಲೆಂದೇ ವಿಧಿ ನಿನ್ನನ್ನು ಹುಟ್ಟಿಸಿದನೆ ? ನಿನಗೊಂದಿಷ್ಟು ದಯೆಯಿಲ್ಲವೆ ? ನಮ್ಮಲ್ಲಿ ಹಗೆಯೆ ? ನೀನು ಅಷ್ಟು ಕ್ರೂರಿಯೆ ? ನಮ್ಮ ಮನಸ್ಸನ್ನೇಕೆ ಒಯ್ದೆ? ನಮ್ಮಲ್ಲಿ ವಿಶ್ವಾಸವಿಲ್ಲವೆ? ಅಥವಾ ನಮ್ಮನ್ನು ಸುಮ್ಮನೆ ಪರೀಕ್ಷಿಸುತ್ತಿರುವೆಯ? ನಮ್ಮಲ್ಲಿ ಕೋಪವೆ ? ಏಕೆ ? ನಾವೇನು ಅಪರಾಧ ಮಾಡಿದೆವು ? ಇನ್ನೊಬ್ಬರ ದುಃಖದ ಅರಿವು ನಿನಗಾಗುವುದಿಲ್ಲವೆ ? ಏಕೆ ಹೀಗೆ ನಮ್ಮನ್ನು ವಂಚಿಸುವೆ ? ನಿನ್ನನ್ನು ಕಾಣದೆ ಹೋದರೆ ನಾವು ಬದುಕಲಾರೆವು. ತಿರುಗಿ ಎಂದಾದರೂ ನಿನ್ನ ದರ್ಶನ ದೊರಕೀತೆ ಎಂಬಾಸೆಯಿಂದ ಜೀವ ಇಟ್ಟು ಕೊಂಡಿದ್ದೇವೆ. ನೀನು ದಯೆದೋರಿ ದರ್ಶನ ನೀಡು. ಸಜ್ಜನರೆಂದೂ ಒಬ್ಬರನ್ನು ಹೀಗೆ ಸರ್ವನಾಶ ಮಾಡುವುದಿಲ್ಲ.

ಹೀಗೆ ನಾನಾಬಗೆಯಿಂದ ವಿಲಾಪಮಾಡಿ ತಂದೆತಾಯಿಗಳು ಇದನ್ನು ತಿಳಿದರೆ ಏನನ್ನುವರೊ ಎಂಬ ಭಯದಿಂದ ಮನೆಗಳ ಕಡೆಗೆ ಹೊರಟರು. ಪ್ರೇಮದ ಬಂಧನ ಕ್ಕೊಳಗಾಗಿದ್ದುದರಿಂದ ಹೇಗೋ ಕಷ್ಟದಿಂದ ಮನೆ ಸೇರಿದರು. ಮನೆಯಲ್ಲಿ ತಾಯಂದಿರು ಕೇಳಿದರು 'ಇದೇನು ? ಏಕಿಷ್ಟು ತಡವಾಗಿ ಬರುತ್ತಿರುವಿರಿ ?' ಅವರೆಂದರು. 'ಅಮ್ಮ, ಕಿನ್ನರಿಯರ ಜೊತೆಯಲ್ಲಿ ಆಟವಾಡುತ್ತಿದ್ದರೆ ಸಮಯ ಕಳೆಯುವುದೇ ಗೊತ್ತಾಗದು. ಇಂದು ನಾವು ಅಚ್ಛೋದ ಸರೋವರದ ಬಳಿ ಆಡುತ್ತಿದ್ದೆವು. ತಡವಾಯಿತೆಂದು ಓಡುತ್ತ ಬಂದೆವು. ದಣಿವಿನಿಂದ ನಮ್ಮೆದೆ ಬೆಂದುಹೋಗುತ್ತಿದೆ, ಯಾರೊಂದಿಗೂ ಮಾತನಾಡದೆ ವಿಶ್ರಮಿಸಿಕೊಳ್ಳಬೇಕೆಂದಿರುವು.

ಹೀಗೆ ಹೇಳಿ ಆ ಕುಮಾರಿಯರು ಮಣಿ ಭೂಮಿಯಲ್ಲಿ ಮೈ ಚಾಚಿದರು. ನಿಜವನ್ನು ಮರೆಮಾಚಿ ಬೇರೇನಾದರೂ ಮಾತನಾಡುತ್ತಿದ್ದರು. ಅವರಿಗೀಗ ನವಿಲ ಕುಣಿತ ನೋಡಬೇಕಾಗಿಲ್ಲ. ಗಿಳಿಯ ಮಾತೂ ಕೇಳಬೇಕಾಗಿಲ್ಲ. ಮುಂಗುಸಿಯಾಟದಲ್ಲಿ ರಸವಿಲ್ಲ. ಸಾರಿಕೆಯ ನುಡಿಯಲ್ಲಿ ಸವಿಯಿಲ್ಲ. ಸಾರಸದಾಟದಲ್ಲಿ ಆನಂದವಿಲ್ಲ. ಹಾಸ್ಯ ಬೇಡ ವಿನೋದ ಬೇಡ. ಬಾಂಧವರೊಡನೆ ಮಾತುಕಥೆವ್ಯರ್ಥ. ವೀಣೆ ನುಡಿಸುವುದರಲ್ಲಿ ಉತ್ಸಾಹವಿಲ್ಲ. ಕಲ್ಪಲತೆಯ ಹೂ ಬೆಂಕಿಯಂತಾಗಿವೆ. ಮಧುರವಾದ ಮಧುವೂ ನೀರಸವಾಗಿದೆ. ಮಹಾಯೋಗಿನಿಯರಂತೆ ಮೂಗಿನ ತುದಿಯನ್ನೇ ದೃಷ್ಟಿಸುತ್ತ ಧ್ಯಾನಿಸಿದರು.[1] ಒಮ್ಮೆ ಚಂದ್ರಕಾಂತಮಣಿಯ ನೆಲದಲ್ಲಿ ಒಮ್ಮೆ ನೀರಲ್ಲಿ ಇನ್ನೊಮ್ಮೆ ವಾತಾಯನದಲ್ಲಿ ಮತ್ತೊಮ್ಮೆ ಜಲಯಂತ್ರ ಗೃಹದಲ್ಲಿ. ತಾವರೆಯೆಸಳಿನ ಹಾಸಿಗೆಯಲ್ಲಿ ಮೈಚಾಚಿ ಸಖಿಯರ ಕೈಯ ತಾವರೆ ಎಲೆಯಗಾಳಿ ಸೇವಿಸಿದರೂ ಹೀಗೆ ಎಲ್ಲಿ ಮಲಗಿದರೂ ಆ ರಾತ್ರಿಯನ್ನು ಕಳೆಯುವುದೇ ಕಷ್ಟವಾಯಿತು. ರಾತ್ರಿ ಯುಗಕ್ಕೆ ಸಮನಾಯಿತು. ಜ್ವರದಿಂದ ಕಂಗೆಟ್ಟವರಂತೆ ಆ ರಾತ್ರಿಯನ್ನು ಹೇಗೊ ಕಳೆದರು.

ಬೆಳಿಗ್ಗೆ ಸೂರ್ಯನುದಿಸಿದುದನ್ನು ಕಂಡಾಗ ಅವರಿಗೆ ಜೀವಬಂದಂತಾಯಿತು. ತಾಯಂದಿರಲ್ಲಿ ಗೌರೀಪೂಜೆಗೆ ಹೋಗುವವೆಂದು ಹೇಳಿ ಹೊರಟರು. ಸ್ನಾನಮಾಡಿ

ಎಂದಿನಂತೆ ಪುಷ್ಪ ಧೂಪಗಳಿಂದ ದೇವಿಯನ್ನರ್ಚಿಸಿದರು. ಹಾಡುತ್ತ ಕುಳಿತರು. ಅಷ್ಟರಲ್ಲಿ ಆ ಮುನಿಕುಮಾರ ಸ್ನಾನಕ್ಕಾಗಿ ಅಲ್ಲಿಗೆ ಬಂದ. ಉದಿಸುವ ಸೂರ್ಯನನ್ನು ಕಂಡು ತಾವರೆ ಅರಳುವಂತೆ ಆ ಕನ್ಯೆಯರ ಕಣ್ಣುಗಳರಳಿದುವು. ಎಲ್ಲರೂ ಅವನ ಬಳಿಗೋಡಿದರು. ಸುತ್ತುವರಿದು ಬಾಹುಪಾಶದಿಂದ ಬಿಗಿದು ಹೇಳಿದರು.

**ಕನ್ಯೆಯರು :-** ಪ್ರಿಯ, ನಿನ್ನೆ ತಪ್ಪಿಸಿಕೊಂಡು ಹೊರಟುಹೋದೆ. ಈ ದಿನ ನೀನು ಹೋಗುವ ಹಾಗೆ ಇಲ್ಲ. ನಾವೆಲ್ಲ ನಿನ್ನನ್ನೇ ವರಿಸಿದ್ದೇವೆ. ನೀನೇನೂ ವಿಚಾರಸಬೇಕಾಗಿಲ್ಲ.

**ಮುನಿಕುಮಾರ :-** ಬಹು ಚೆನ್ನಾಗಿದೆ ನೀವು ಹೇಳುವ ಮಾತು. ನಾನು ಬ್ರಹ್ಮಚಾರಿ. ಇನ್ನೂ ವಿದ್ಯಾಭ್ಯಾಸ ಮಾಡುತ್ತಿದ್ದೇನಷ್ಟೆ. ಅದು ಮುಗಿದಿಲ್ಲ. ಆಶ್ರಮಧರ್ಮವನ್ನು ನಾನು ಕಾಪಾಡಿಕೊಳ್ಳಬೇಡವೆ ? ಈ ವಿವಾಹ ಧರ್ಮವಾಗಲಾರದು.

**ಕನ್ಯೆಯರು :-** ಪ್ರಿಯ, ಹಾಗೆನ್ನಬೇಡ. ಧರ್ಮದ ಫಲ ಅರ್ಥ, ಅರ್ಥದ ಫಲ ಕಾಮ ಎಂದು ತಿಳಿದವರು ಹೇಳುತ್ತಾರೆ. ಈಗ ಆ ಕಾಮವೆ ನಿನ್ನೆದುರಿಗೆ ನಿಂತಿದೆ. ನೋಡು, ಈ ಪ್ರದೇಶ ಬಲು ಯೋಗ್ಯವಾಗಿದೆ. ಎಲ್ಲ ಭೋಗಗಳನ್ನು ಇಲ್ಲಿ ಅನುಭವಿಸೋಣ.

**ಮುನಿಕುಮಾರ :-** ನೀವು ಹೇಳುವುದು ನಿಜವೆ. ಆದರೂ ನನ್ನ ಗುರುಗಳ ಅನುಜ್ಞೆ ಪಡೆಯದೆ ಈ ವಿವಾಹಕ್ಕೊಪ್ಪುವುದು ಸರಿಯಲ್ಲ.

**ಕನ್ಯೆಯರು :-** ಓ ಚೆಲುವ, ನಿನಗೇನೂ ತಿಳಿಯದು. ಸಿದ್ಧೌಷಧ, ರಸಾಯನ, ನಿಧಿ, ಸತ್ಕುಲದಲ್ಲಿ ಹುಟ್ಟಿದ ಕನ್ನೆಯರು, ಮಂತ್ರ, ಸಿದ್ಧರಸ-ಇವು ತಾವಾಗಿ ಒಲಿದು ಬಂದಾಗ ಬೇಡವೆನ್ನಬಾರದು. ದೈವಾತ್ ಕಾರ್ಯಸಿದ್ಧಿಯಾಗಿರುವಾಗ ಅದನ್ನು ಉಪೇಕ್ಷಿಸಿದರೆ ಮತ್ತೆ ದೊರಕದು. ಅದರಿಂದ ವಿಲಂಬ ಯುಕ್ತವಲ್ಲ.

**ವಿಷಾದಪ್ಯಮೃತಂ ಗ್ರಾಹ್ಯಂ ಅಮೇಧ್ಯಾದಪಿ ಕಾಂಚನಂ ।**
**ನೀಚಾದಪ್ಯುತ್ತಮಾಂ ವಿದ್ಯಾಂ ಸ್ತ್ರೀ ರತ್ನ ದುಷ್ಕುಲಾದಪಿ ॥**

ಲಭ್ಯವಿರುವಾಗ ವಿಷದಿಂದಲೂ ಅಮೃತವನ್ನು ತೆಗೆದು ಸ್ವೀಕರಿಸಬೇಕು. ಚಿನ್ನ ಮಲದಲ್ಲಿದ್ದರೂ ಹೆಕ್ಕಿಕೊಳ್ಳಬೇಕು. ಉತ್ತಮ ವಿದ್ಯೆ ನೀಚನಲ್ಲಿದ್ದರೂ ಕಲಿತುಕೊಳ್ಳಬೇಕು. ಸ್ತ್ರೀರತ್ನವನ್ನು ಕೆಟ್ಟ ಕುಲದಿಂದಲೂ ತಂದುಕೊಳ್ಳಬಹುದು. ಬಿಡುವುದು ಯುಕ್ತವಲ್ಲ.

ಒಳ್ಳೆಯ ಕುಲದಲ್ಲಿ ಹುಟ್ಟಿ, ಪ್ರೇಮಾರ್ದ್ರಹೃದಯ, ಮಧುರನುಡಿ, ರೂಪ, ಯೌವನಗಳನ್ನು ಹೊಂದಿ, ಗಾಢಾನುರಾಗದಿಂದ ತಾವಾಗಿಯೆ ಒಲಿದು ಬರುವ ಹೆಣ್ಣುಗಳನ್ನು ಪುಣ್ಯವಂತರು ಮಾತ್ರ ಪಡೆಯಬಲ್ಲರು. ಈಗ ಸುರಸುಂದರಿಯರಾದ ನಾವೆಲ್ಲಿ ? ತಾಪಸರ ಹುಡುಗ ನೀನೆಲ್ಲಿ ? ನಮ್ಮನ್ನಿಲ್ಲಿ ಜೊತೆ ಸೇರಿಸಿದ ಆ ವಿಧಾತ ನಿಜವಾಗಿಯೂ ಅಘಟಿತಘಟನಾಪಟು. ಆದುದರಿಂದ ನೀನೇನೂ ಯೋಚಿಸಬೇಡ. ಒಲಿದು ಬಂದ ನಮ್ಮನ್ನು ಸ್ವೀಕರಿಸು. ಗಾಂಧರ್ವವಿವಾಹ ಮಾಡಿಕೊಳ್ಳು. ಇಲ್ಲದಿದ್ದರೆ ನಾವು ಬದುಕಲಾರೆವು.

**ಮುನಿಕುಮಾರ :-** ಓ ಜಿಂಕೆ ಕಣ್ಣಿನವರೆ, ಮನುಷ್ಯರಿಗೆ ಧರ್ಮವೇ ಸಂಪತ್ತು. ಅದನ್ನು ಹೇಗೆ ಬಿಡಲಾದೀತು ? ಧರ್ಮಅರ್ಥಕಾಮ ಮೋಕ್ಷ ಈ ನಾಲ್ಕು ಸೇರಿದರೆ.

ಮಾತ್ರ ಫಲಪ್ರದ. ಇಲ್ಲದಿದ್ದರೆ ಎಲ್ಲವೂ ನಿಷ್ಫಲ. ನನಗಿದು ಬ್ರಹ್ಮಚರ್ಯ ವ್ರತದ ಕಾಲ. ವಿವಾಹಕ್ಕೆ ಇದು ಕಾಲವಲ್ಲ. **"ನ ಕ್ರಿಯಾ ಫಲಮಾಪ್ನೋತಿ ಕ್ರಿಯಾ ಕಾಲಂ ನವೇತ್ತಿಯಃ"** ಕ್ರಿಯೆಯ ಕಾಲವನ್ನು ತಿಳಿಯದವ ಕ್ರಿಯೆಯ ಫಲವನ್ನು ಹೊಂದಲಾರ. ನನ್ನ ಮನಸ್ಸು ಧರ್ಮವಿಚಾರದಲ್ಲಿ ಆಸಕ್ತವಾಗಿರುವಾಗ ನಿಮ್ಮ ಸ್ವಯಂವರದ ಗೋಜಿಗೆ ಅದೆಂತು ಹೋದೀತು ? ನಾನು ಹೇಳುವುದನ್ನು ಕೇಳಿ.

ಕನ್ಯೆಯರು ಮುಖಮುಖ ನೋಡಿಕೊಂಡರು. ಪ್ರಮೋಹಿನಿ ಅವನ ಕಾಲುಗಳನ್ನು ಬಿಗಿಯಾಗಿ ಹಿಡಿದುಕೊಂಡಳು. ಸುಶೀಲೆ ಸುಸ್ವರೆಯರು ಅವನ ಎರಡು ಕೈಗಳನ್ನು ಹಿಡಿದುಕೊಂಡರು. ಸುತಾರೆ ಅಪ್ಪಿಕೊಂಡಳು ಚಂದ್ರಿಕೆ ಚುಂಬಿಸಿದಳು. ಮುನಿಕುಮಾರ ವಿಚಲಿತನಾಗಲಿಲ್ಲ. ಕೋಪ ತಡೆಯಲಾರದೆ ಪ್ರಲಯಾಗ್ನಿಯಂತಾಗಿ ಶಪಿಸಿದ. 'ಪಿಶಾಚಿಗಳಂತೆ ನನ್ನನ್ನು ಹಿಡಿದುಕೊಂಡ ನೀವು ಪಿಶಾಚಿಗಳೇ ಆಗಿರಿ.'

ಎಲ್ಲರೂ ಅವನ ಮೈ ಬಿಟ್ಟು ದೂರ ಸರಿದು ನಿಂತರು. 'ಓ ಪಾಪಿಯೆ, ಇದೇನು ಮಾಡಿದೆ ? ನಾವು ಅಂಥ ಅಪರಾಧವನ್ನೇನು ಮಾಡಿದೆವು ? ಪ್ರೀತಿಸಿದವರನ್ನು ದ್ವೇಷಿಸುವುದು ಯಾವ ಧರ್ಮ? ಧರ್ಮವನ್ನೇ ಕೊಲೆಮಾಡುವ ನಿನಗೆ ಧಿಕ್ಕಾರ! ಅನುರಕ್ತರಲ್ಲಿ, ಭಕ್ತರಲ್ಲಿ, ಮಿತ್ರರಲ್ಲಿ ದ್ರೋಹ ಬಗೆಯುವವನಿಗೆ ಇಹಪರ ಗಳೆರಡರಲ್ಲಿಯೂ ಸುಖವಿಲ್ಲವೆಂದು ಹೇಳುತ್ತಾರೆ. ಆದರಿಂದ ನೀನೂ ನಮ್ಮ ಶಾಪದಿಂದ ಪಿಶಾಚನಾಗು.' ಹೀಗೆ ಶಪಿಸಿಯೂ ಆ ಕನ್ಯೆಯರು ಕ್ರೋಧದಿಂದ ಬಿಸುಸಯ್ಯುತ್ತಿದ್ದರು.

ಯುಧಿಷ್ಠಿರ, ಆ ಕನ್ಯೆಯರೂ ಬ್ರಹ್ಮಚಾರಿಯೂ ಪಿಶಾಚಿಗಳಾಗಿ ದಾರುಣವಾಗಿ ಅಳುತ್ತ ಪೂರ್ವಾಜಿತ ಕರ್ಮವಿಪಾಕವನ್ನು ಸವೆಸತೊಡಗಿದರು. ಪೂರ್ವಕರ್ಮಗಳು ಕಾಲ ಬಂದಾಗ ನಮ್ಮ ಮೇಲೆ ಪ್ರಭುತ್ವ ತೋರತ್ತವೆ. ನೆರಳಿನಂತೆ ಬೆನ್ನು ಹತ್ತುವ ಆ ಕರ್ಮಗಳನ್ನು ದೇವತೆಗಳೂ ತಡೆಯಲಾರರು. ಇತ್ತ ಆ ಕನ್ಯೆಯರ ತಾಯಿ-ತಂದೆಗಳೂ ಬಂಧುಗಳೂ ಮಕ್ಕಳ ಈ ದುರಂತವನ್ನು ಕಂಡು ಕಣ್ಣೀರಿಟ್ಟರು. ಆ ಪಿಶಾಚಿಗಳು ಆಹಾರಕ್ಕಾಗಿ ಅಲ್ಲಿ ಇಲ್ಲಿ ಧಾವಿಸುತ್ತ ಆ ಸರೋವರದ ಬಳಿಯೇ ಇರುತ್ತಿದ್ದುವು.

**ನಾರದ ಉವಾಚ**

**ನಾರದ :-** ಹೀಗೆ ಬಹುಕಾಲ ಕಳೆಯಿತು. ಒಮ್ಮೆ ಲೋಮಶ ಮಹಾಮುನಿ ದೈವಾತ್ ಆ ಸರೋವರದ ಬಳಿ ಬಂದಾಗ ಹಸಿದಿದ್ದ ಆ ಪಿಶಾಚಿಗಳು ಅವನ ಬಳಿಗೋಡಿದವು. ಆದರೆ ಮುನಿಯ ತೀವ್ರ ತೇಜಸ್ಸಿನ ದೆಸೆಯಿಂದ ಅವು ದೂರ ನಿಲ್ಲಬೇಕಾಯಿತು. ಪೂರ್ವಕರ್ಮದ ಬಲದಿಂದ ಭಕ್ತಿ ತುಂಬಿ ಸಾಷ್ಟಾಂಗ ನಮಸ್ಕಾರ ಮಾಡಿ ಕೈ ಮುಗಿದು ಹೇಳಿದುವು.

**ಪಿಶಾಚ :-** ಮುನಿವರ್ಯ, ಮಹಾಭಾಗ್ಯೋದಯದ ಕಾಲದಲ್ಲಿಯೇ ಸಜ್ಜನರ ಸಂಗ ದೊರೆಯುವುದು. ಗಂಗಾದಿ ತೀರ್ಥಸ್ನಾನ ಮಾಡುವವನಿಗಿಂತಲೂ ಸಜ್ಜನರ ಸಂಗ ಮಾಡುವವನೇ ಮೇಲು. ಗುರುಗಳ ಸಮಾಗಮದಿಂದ ದೃಷ್ಟ-ಅದೃಷ್ಟ ಫಲಗಳೆರಡೂ ಲಭಿಸುವುವು. ಇವರು ಐವರೂ ಗಂಧರ್ವಕನ್ಯೆಯರು. ನಾನೊಬ್ಬ ಋಷಿಕುಮಾರ. ಪರಸ್ಪರರ ಶಾಪದಿಂದ ಪಿಶಾಚಿಗಳಾಗಿದ್ದೇವೆ. ದೀನರಾಗಿ ನಿನ್ನ ಮುಂದೆ ನಿಂತಿದ್ದೇವೆ. ನಿನ್ನ ದರ್ಶನದಿಂದ ನಮ್ಮ ಪಾಪ ತೊಲಗದಿದ್ದೀತೆ ? ಕತ್ತಲು ಎಷ್ಟು ದಟ್ಟವಾಗಿ ಹರಡಿದ್ದರೂ ಸೂರ್ಯೋದಯವಾದಾಗ ಅದು ಮಾಯವಾಗಬೇಕಲ್ಲವೆ ?

ಅವರ ಪೂರ್ವ ವೃತ್ತಾಂತವನ್ನೆಲ್ಲ ಕೇಳಿ ಮುನಿಯ ಮನಸ್ಸು ಕರಗಿತು.

**ಲೋಮಶ :-** ನನ್ನ ಅನುಗ್ರಹದಿಂದ ನಿಮಗೆ ಶಾಪ ವಿಮೋಚನೆಯಾಗುವುದು. ನೀವು ಒಂದು ಸತ್ಕರ್ಮವನ್ನು ಅನುಷ್ಠಾನ ಮಾಡಬೇಕು.

**ಪಿಶಾಚ :-** ಮಹಾಮುನಿಯೆ, ಆ ಸತ್ಕರ್ಮವೇನು ಹೇಳು. ಬೇಗ ಹೇಳು. ನಾವೀಗ ಒಂದಿಷ್ಟೂ ವಿಲಂಬವನ್ನು ಸಹಿಸಲಾರೆವು. ದಾರುಣವಾದ ಶಾಪಾಗ್ನಿ ಸುಡುತ್ತಿದೆ.

**ಲೋಮಶ :-** ನನ್ನ ಜತೆಗೆ ವಿಧಿವತ್ತಾಗಿ ನರ್ಮದಾಸ್ನಾನ ಮಾಡಿರಿ. ನರ್ಮದೆ ನಿಮ್ಮ ಶಾಪವನ್ನು ಕಳೆಯುತ್ತಾಳೆ. ಅದಕ್ಕೆ ಬೇರೆ ಉಪಾಯವಿಲ್ಲ. ಏಳು ಜನ್ಮಗಳ ಪಾಪವೂ ಬೆಂಕಿಗೆ ಸಿಲುಕಿದ ಹತ್ತಿಯ ರಾಶಿಯಂತೆ ನರ್ಮದಾ ಸ್ನಾನದಿಂದ ಸುಟ್ಟುಹೋಗುತ್ತದೆ. ಪ್ರಾಯಶ್ಚಿತ್ತವಿಲ್ಲದ ಪಾಪಕರ್ಮಕ್ಕೂ ನರ್ಮದಾಸ್ನಾನದಿಂದ ನಿವೃತ್ತಿಯಿದೆ. ಅದರಿಂದಲೆ ಜ್ಞಾನ, ಮೋಕ್ಷ ಲಭಿಸುತ್ತವೆ. ಯಮುನಾಸ್ನಾನ ಸೂರ್ಯಲೋಕವನ್ನು ಕೊಟ್ಟೀತು, ಸರಸ್ವತೀಸ್ನಾನ ಬ್ರಹ್ಮಲೋಕವನ್ನು ಕೊಟ್ಟೀತು. ನರ್ಮದಾ ಸ್ನಾನವು ವಿಷ್ಣುಲೋಕವನ್ನೂ ಮೋಕ್ಷವನ್ನೂ ಕೊಡಬಲ್ಲುದು. ನರ್ಮದಾ ಯಾತ್ರೆಮಾಡಲೂ ಪೂರ್ವಜನ್ಮದ ಪುಣ್ಯಬೇಕು. ದೇವತೆಗಳೂ ನರ್ಮದಾದರ್ಶನಕ್ಕಾಗಿ ಹಾತೊರೆಯುತ್ತಾರೆ. ವಿಧಾತನೊಮ್ಮೆ ದಾನ ತಪಸ್ಸು ಯಜ್ಞ ಕಠಿಣ ವ್ರತಗಳನ್ನೊಂದು ಕಡೆ ನರ್ಮದೆಯನ್ನೊಂದೆಡೆ ಇಟ್ಟು ತೂಗಿದನಂತೆ. ಆಗ ನರ್ಮದೆಯೇ ಶ್ರೇಷ್ಠವೆಂದು ತಿಳಿದುಬಂದಿತೆಂದು ಹೇಳುತ್ತಾರೆ.

ಇದನ್ನು ಕೇಳಿ ಪಿಶಾಚಿಗಳು ತಡಮಾಡದೆ ನರ್ಮದಾ ತೀರಕ್ಕೆ ಹೋದವು. ಆಗ ದೈವಾತ್ ಪ್ರವಾಹದ ಮೇಲಿಂದ ಬೀಸಿದ ಗಾಳಿ ನೀರಿನ ತುಂತುರುಗಳನ್ನು ಪಿಶಾಚಿಗಳ ಮೇಲೆ ಸಿಂಪಡಿಸಿತು. ಅಷ್ಟು ಮಾತ್ರದಿಂದಲೆ ಪಿಶಾಚತ್ವ ತೊಲಗಿತು. ದಿವ್ಯದೇಹ ಬಂದಿತು. ನರ್ಮದೆಯನ್ನೆಲ್ಲರೂ ಹೊಗಳಿದರು. ಲೋಮಶನ ಉಪದೇಶದಿಂದ ಮುನಿಕುಮಾರನು ಆ ಗಂಧರ್ವ ಕನ್ನೆಯರನ್ನು ನರ್ಮದಾ ತೀರದಲ್ಲಿ ಮದುವೆಯಾದ, ಅಲ್ಲಿಯೆ ಬಹುಕಾಲ ಸ್ನಾನಪಾನಗಳನ್ನುಮಾಡಿ ನರ್ಮದೆಯನ್ನು ಪೂಜಿಸಿದ. ಅದರಿಂದ ಅವರೆಲ್ಲರೂ ವಿಷ್ಣುಲೋಕವನ್ನು ಸೇರಿದರು.

ಈ ನರ್ಮದಾ ಮಾಹಾತ್ಮ್ಯವು ಶ್ರವಣ ಮಾತ್ರದಿಂದಲೆ ಪಾಪಹರವಾಗಿದೆ.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಸ್ವರ್ಗಖಂಡದಲ್ಲಿ ವಿಪ್ರಮೋಹಿನಿ ಮತ್ತು ಗಂಧರ್ವ ಕನ್ನೆಯರ ಇತಿಹಾಸ ಎಂಬ ಎಂಟನೇಯ ಅಧ್ಯಾಯ ಮುಗಿದುದು*

—o—

**ಯುಧಿಷ್ಠಿರ ಉವಾಚ**

**ಯುಧಿಷ್ಠಿರ :-** ನಾರದರೆ, ಶ್ರವಣಮಾತ್ರದಿಂದ ಪಾಪಹರವಾದ ವಸಿಷ್ಠೋಕ್ತ ತೀರ್ಥಗಳನ್ನು ವರ್ಣಿಸಿರಿ.

**ನಾರದ :-** ದಕ್ಷಿಣ ಸಮುದ್ರ ಸ್ನಾನದಿಂದ ಅಗ್ನಿಷ್ಟೋಮ ಫಲವಿದೆ. ಚರ್ಮಣ್ವತಿ ಯಿಂದಲೂ ಆ ಫಲ ದೊರೆಯಬಹುದು. ಹಿಮವಂತನ ಮಗನಾದ ಅರ್ಬುದವೆಂಬ ಬೆಟ್ಟದಲ್ಲಿ ಒಂದು ದಿನ ವಾಸಮಾಡಿದರೆ ಸಾವಿರ ಗೋದಾನದ ಫಲ. ಅಲ್ಲಿಯ ವಸಿಷ್ಠಾಶ್ರಮ ಮೂಲೋಕದಲ್ಲಿ ಪ್ರಸಿದ್ಧವಾಗಿದೆ. ಹಿಂದೆ ಅಲ್ಲಿ ಭೂಮಿಯಲ್ಲಿ ದೊಡ್ಡ ತಗ್ಗು ಇತ್ತು. ಗಂಗಾಜಲದಲ್ಲಿ ಆಚಮನಮಾಡಿರೆ ನೂರು ಕಪಿಲಾದಾನದ ಫಲ. ಪ್ರಸಿದ್ಧವಾದ ಪ್ರಭಾಸ ತೀರ್ಥಸ್ನಾನದಿಂದ ಅಗ್ನಿಷ್ಟೋಮ, ಅತಿರಾತ್ರ ಇವೆರಡರ ಫಲವನ್ನು ಹೊಂದಬಹುದು ದೇವತೆಗಳ ಮುಖದಂತಿರುವ ಸಾಕ್ಷಾತ್ ಅಗ್ನಿ ಅಲ್ಲಿರುತ್ತಾನೆ. ಸರಸ್ವತೀ ಸಾಗರ ಸಂಗಮ ಸ್ನಾನದಿಂದ ಸಾವಿರ ಗೋದಾನದ ಫಲ, ಸ್ವರ್ಗಪ್ರಾಪ್ತಿ, ಅಗ್ನಿಸಮಾನ ದೀಪ್ತಿ. ಅಲ್ಲಿ ಸ್ನಾನಮಾಡಿ ಪಿತೃದೇವತಾ ತರ್ಪಣಮಾಡುತ್ತ ಮೂರುದಿನ ವಾಸಮಾಡಿದರೆ ಚಂದ್ರನಂಥ ಕಾಂತಿ. ಅಶ್ವಮೇಧದ ಫಲ ವರದಾನ ತೀರ್ಥಸ್ನಾನದಿಂದ ಸಾವಿರ ಗೋದಾನದ ಫಲ. ವಿಷ್ಣು ದೂರ್ವಾಸನಿಗೆ ವರಕೊಟ್ಟುದ್ದು ಇಲ್ಲಿಯೆ. ದ್ವಾರವತಿಯಲ್ಲಿ ಇಂದಿಗೂ ಪದ್ಮದಾಕಾರದ ಮುದ್ರೆಗಳು ಕಾಣಸಿಗುತ್ತವೆ. ಅದೊಂದು ಅದ್ಭುತ. ಪದ್ಮಗಳಲ್ಲಿ ತ್ರಿಶೂಲದ ಚಿಹ್ನೆಯೂ ಇದೆ. ಮಹಾದೇವನ ಸನ್ನಿಧಾನ ಅಲ್ಲಿರುತ್ತದೆ. ಸಿಂಧುಸಾಗರ ಸಂಗಮ ಸ್ನಾನದಿಂದ ವರುಣ ಲೋಕಪ್ರಾಪ್ತಿ. ಶಂಕುಕರ್ಣೇಶ್ವರನ ಪೂಜೆಯಿಂದ ಅಶ್ವಮೇಧಕ್ಕಿಂತ ಹತ್ತರಷ್ಟು ಫಲಸಿಗುವುದೆಂದು ಬಲ್ಲವರು ಹೇಳುತ್ತಾರೆ. ಆ ತೀರ್ಥಕ್ಕೆ ಪ್ರದಕ್ಷಿಣೆ ಬಂದು ತಿಮಿತೀರ್ಥ ಸ್ನಾನಮಾಡಬೇಕು. ಶಿವಾರ್ಚನೆ ಮಾಡಬೇಕು. ಅದರಿಂದ ಹುಟ್ಟಿದಂದಿನಿಂದ ಮಾಡಿದ ಎಲ್ಲ ಪಾಪಗಳ ಪರಿಹಾರ. ಅಲ್ಲಿ ಇಂದ್ರಾದಿ ದೇವತೆಗಳು ಶಿವನನ್ನರ್ಚಿಸುತ್ತಾರೆ.

ವಸುಧಾರಾ ದರ್ಶನದಿಂದಲೇ ಅಶ್ವಮೇಧದ ಫಲ ಸಿಗುತ್ತದೆ. ಅಲ್ಲಿನ ಸ್ನಾನ ಪಿತೃದೇವತರ್ಪಣದಿಂದ ವಿಷ್ಣುಲೋಕ ಪ್ರಾಪ್ತಿ. ವಸುತೀರ್ಥಸ್ನಾನ ಪಾನಗಳಿಂದ ವಸುಗಳ ಅನುಗ್ರಹ ಲಭ್ಯವಾಗುವುದು. ಬ್ರಹ್ಮತುಂಗ ಸ್ನಾನದಿಂದ ಬ್ರಹ್ಮಲೋಕ ಪ್ರಾಪ್ತಿ. ರೇಣುಕಾತೀರ್ಥ ಸ್ನಾನದಿಂದ ಚಂದ್ರನಂಥ ಕಾಂತಿ. ಪಂಚನದತೀರ್ಥ ಸೇವನೆಯಿಂದ ಪಂಚಯಜ್ಞಗಳ ಫಲ. ಭೀಮಾಸ್ನಾನದಿಂದ ಪುನರ್ಜನ್ಮವಿಲ್ಲ ದಂತಾಗುವುದು. ಒಂದು ಲಕ್ಷ ಗೋದಾನದ ಫಲ ದೊರೆಯುವುದು. ಗಿರಿಕುಂಜದಲ್ಲಿ ಬ್ರಹ್ಮನನ್ನು ನಮಸ್ಕರಿಸಿದರೆ ಸಾವಿರ ಗೋದಾನದ ಫಲವಿದೆ. ವಿಮಲತೀರ್ಥ ಸ್ನಾನದಿಂದ ವಾಜಪೇಯದ ಫಲ, ಸರ್ವಪಾಪ ಪರಿಹಾರ, ಪರಗತಿ ಲಾಭ. ಅಲ್ಲಿ ಇಂದಿಗೂ ಚಿನ್ನದ ಬೆಳ್ಳಿಯ ಮೀನುಗಳು ಕಾಣಲು ಸಿಗುತ್ತವೆ.

ಕಾಶ್ಮೀರದ ವಿತಸ್ತಾತೀರ್ಥದಲ್ಲಿ ಸ್ನಾನಪಿತೃದೇವತಾ ತರ್ಪಣಗಳಿಂದ ವಾಜಪೇಯದ ಫಲವಿದೆ. ಅದು ತಕ್ಷಕನಾಗನ ವಾಸಸ್ಥಾನವೆಂದು ಪ್ರಸಿದ್ಧವಾಗಿದೆ. ಮಲದ ತೀರ್ಥದಲ್ಲಿ ಸಾಯಂ ಸಂಧ್ಯೆಯಲ್ಲಿ ಆಚಮನಮಾಡಿ ವಿಧಿವತ್ತಾಗಿ ಅಗ್ನಿಯಲ್ಲಿ ಚರುನಿವೇದನ ಮಾಡಿದರೆ ಒಂದು ಲಕ್ಷ ಗೋದಾನಕ್ಕಿಂತ ನೂರು ರಾಜಸೂಯಗಳಿಗಿಂತ, ಸಾವಿರಅಶ್ವಮೇಧಗಳಿಗಿಂತ ಹೆಚ್ಚಿನಫಲ ಸಿಗುವುದು. ಪಿತೃಗಳಿಗೆ ಕೊಟ್ಟ ದಾನ ಅಕ್ಷಯವೆನಿಸುವುದು ರುದ್ರಾಸ್ಪದದಲ್ಲಿ ಶಿವಾರ್ಚನೆ ಮಾಡಿದರೆ ಅಶ್ವಮೇಧದ ಫಲ. ಮಣಿಮಂತದಲ್ಲಿ ಒಂದು ದಿನ ವಾಸಮಾಡಿದರೆ ಅಗ್ನಿಷ್ಟೋಮ ಫಲ. ದೇವಿಕಾಸ್ನಾನ ಶಿವಾರ್ಚನೆಗಳಿಂದ ಸರ್ವಕಾಮಿತಾರ್ಥ ಲಾಭ. ಕಾಮತೀರ್ಥದಲ್ಲಿ ಸ್ನಾನ ಮಾಡಿದರೆ ಯಜನಯಾಜನಗಳ ಸಿದ್ಧಿ ಲಭಿಸುತ್ತದೆ.

ದೀರ್ಘಸತ್ರದ ದರ್ಶನದಿಂದಲೆ ರಾಜಸೂಯಾಶ್ವಮೇಧಗಳ ಫಲವಿದೆ. ಅಲ್ಲಿ ಬ್ರಹ್ಮಾದಿದೇವತೆಗಳೂ ಋಷಿಗಳೂ ಸಿದ್ಧರೂ ದೀರ್ಘಸತ್ರಗಳ್ನು ನಡೆಸುತ್ತಾರೆ. ಸರಸ್ವತಿ ನದಿ ವಿನಾಶನ ತೀರ್ಥದಲ್ಲಿ ಅಂತರ್ಧಾನ ಹೊಂದುತ್ತಾಳೆ. ಚಮಸೋದ್ಭೇದ ಶಿವೋದ್ಭೇದ ನಾಗೋದ್ಭೇದಗಳಲ್ಲಿ ದೃಶ್ಯಳಾಗುತ್ತಾಳೆ. ಇವುಗಳಲ್ಲಿ ಸ್ನಾನಮಾಡಿದರೆ ಕ್ರಮವಾಗಿ ಅಗ್ನಿಷ್ಟೋಮ ಫಲ, ಸಹಸ್ರ ಗೋದಾನ ಫಲ, ನಾಗಲೋಕ ಪ್ರಾಪ್ತಿ ಫಲಗಳು.

ಶಶಿಯಾನ ತೀರ್ಥದಲ್ಲಿ ಕಾರ್ತಿಕಹುಣ್ಣಿಮೆಯಂದು ಸ್ನಾನಮಾಡಿದರೆ ಶಿವನಂಥ ತೇಜಸ್ಸು ಸಾವಿರ ಗೋದಾನಗಳ ಫಲ. ಕುಮಾರ ಕೋಟಿಸ್ನಾನ ಪಿತೃ ದೇವತಾರ್ಚನೆಗಳಿಂದ ಹತ್ತು ಸಾವಿರ ಗೋದಾನದ ಫಲ, ಕುಲವೂ ಉದ್ಧೃತವಾಗುವುದು.

ರುದ್ರಕೋಟಿ ಸ್ನಾನದಿಂದ ಅಶ್ವಮೇಧದ ಫಲ. ಅಲ್ಲಿ ಹಿಂದೆ ಕೋಟಿ ಋಷಿಗಳು ಶಿವನ ದರ್ಶನಕ್ಕಾಗಿ ಯೋಗ ಧ್ಯಾನ ನಿರತರಾಗಿ ಕುಳಿತರು. ತಾನೆ ಮೊದಲು ರುದ್ರನನ್ನು ನೋಡುವೆನೆಂದು ಸ್ಪರ್ಧಿಗಿಳಿದರು. ರುದ್ರನು ಕೋಟಿ ರುದ್ರರನ್ನು ನಿರ್ಮಿಸಿ ಋಷಿಗಳಿಗೆ ತೋರಿದ, ಆಗ ಪ್ರತಿಯೊಬ್ಬನೂ ತಾನೆ ಮೊದಲು ರುದ್ರದರ್ಶನ ಪಡೆದವನೆಂದುಕೊಂಡು ಸಂತೋಷಪಟ್ಟರು, ರುದ್ರನೂ ಸಂತೋಷಪಟ್ಟು ಧರ್ಮವೃದ್ಧಿಯಾಗಲೆಂದು ಅವರಿಗೆ ವರವಿತ್ತ. ಆ ಸ್ಥಳವೇ **ರುದ್ರಕೋಟಿ ತೀರ್ಥ.**

ಲೋಕ ಪ್ರಸಿದ್ಧವಾದ ಸಂಗಮ ತೀರ್ಥಕ್ಕೆ ಹೋಗಿ ಅಲ್ಲಿ ಸರಸ್ವತಿ ನದಿಯಲ್ಲಿ ಜನಾರ್ದನನ್ನು ಅರ್ಚಿಸಬೇಕು. ಅಲ್ಲಿ ಚೈತ್ರ ಶುಕ್ಲಪಕ್ಷ ಚತುರ್ದಶಿ ಸ್ನಾನಮಾಡಿದರೆ ಸುವರ್ಣಲಾಭ, ಪಾಪಪರಿಹಾರ, ಶಿವಲೋಕಪ್ರಾಪ್ತಿ. ಅಲ್ಲಿಗೆ ಬ್ರಹ್ಮಾದಿ ದೇವತೆಗಳೂ ಬರುತ್ತಾರೆ. ಋಷಿಗಳು ಸತ್ರವನ್ನು ನಡೆಸುತ್ತಾರೆ.

ಕುರುಕ್ಷೇತ್ರದಲ್ಲಿ ಎಲ್ಲ ಪ್ರಾಣಿಗಳೂ ಪಾಪ ಮುಕ್ತರಾಗುವರು. ಕುರುಕ್ಷೇತ್ರಕ್ಕೆ ಹೋಗುವೆ, ಅಲ್ಲಿ ವಾಸಿಸುವೆ ಎಂದು ಹೇಳಿಕೊಂಡರೂ ಎಲ್ಲ ಪಾಪಗಳಿಂದ ಮುಕ್ತಿ ದೊರೆಯುವುದು. ಒಂದು ತಿಂಗಳ ಕಾಲ ಅಲ್ಲಿ ವಾಸಮಾಡಬೇಕು. ಬ್ರಹ್ಮಾದಿದೇವತೆಗಳು ಋಷಿಗಳು ಗಂಧರ್ವರು ಅಪ್ಸರೆಯರು ಯಕ್ಷರು ನಾಗರು ಚಾರಣರು ಎಲ್ಲರೂ ಅಲ್ಲಿರುತ್ತಾರೆ. ಅಲ್ಲಿಗೆ ಹೋಗುವಾಸೆಯಿಂದಲೂ ಪಾಪ ಪರಿಹಾರವಾಗುತ್ತದೆ. ಬ್ರಹ್ಮಲೋಕ ಪ್ರಾಪ್ತಿಯಾಗುತ್ತದೆ. ಶ್ರದ್ಧೆಯಿಂದ ಅಲ್ಲಿಗೆ ಹೋದರೆ ರಾಜಸೂಯ

ಅಶ್ವಮೇಧಗಳ ಫಲವಿದೆ. ಸತತವೆಂಬ ತೀರ್ಥದಲ್ಲಿ ಸ್ನಾನಮಾಡಿ ಮೂಲೋಕಕ್ಕೆ ಜನಕನಾದ ಹರಿಯ ದರ್ಶನ ಮಾಡಿದರೆ ಅಶ್ವಮೇಧದ ಫಲ, ವಿಷ್ಣುಲೋಕ ಪ್ರಾಪ್ತಿ. ಪಾರಿಪ್ಲವತೀರ್ಥ ಸೇವನೆಯಿಂದ ಅಗ್ನಿಷ್ಟೋಮ ಅತಿರಾತ್ರಗಳ ಫಲ. ಶಾಲ್ವಕಿನಿ ತೀರ್ಥದ ದಶಾಶ್ವಮೇಧ ಘಾಟಿನಲ್ಲಿ ಸ್ನಾನ ಮಾಡಿದರೂ ಆ ಫಲವಿದೆ.

ಸರ್ಪನೀವಿ ಎಂಬ ನಾಗರತೀರ್ಥದ ಸೇವನೆಯಿಂದ ಅಗ್ನಿಷ್ಟೋಮ ಫಲ, ನಾಗಲೋಕ ಪ್ರಾಪ್ತಿ. ಮತರ್ಣಕ ತೀರ್ಥದಲ್ಲಿ ಒಂದು ದಿನವಾಸಮಾಡಿದರೆ ಸಾವಿರ ಗೋದಾನದ ಫಲ. ಪಂಚನದದಲ್ಲಿ ಕೋಟಿ ತೀರ್ಥ ಸ್ನಾನದಿಂದ ಅಶ್ವಮೇಧ ಫಲ. ಅಶ್ವಿನೀತೀರ್ಥ ಸೇವನೆಯಿಂದ ರೂಪ ಸೌಂದರ್ಯಲಾಭ. ವಿಷ್ಣು ವರಾಹ ರೂಪದಿಂದ ನೆಲೆಸಿರುವ ವರಾಹ ತೀರ್ಥವಾಸದಿಂದ ಅಗ್ನಿಷ್ಟೋಮ ಫಲ. ಉಜ್ಜಯಿನಿಯಲ್ಲಿ ಸೋಮತೀರ್ಥ ಸ್ನಾನದಿಂದ ರಾಜಸೂಯದ ಫಲವಿದೆ. ಏಕಹಂಸಸ್ನಾನದಿಂದ ಸಾವಿರ ಗೋದಾನದ ಫಲ. ಕೃತಶೌಚತೀರ್ಥ ಸೇವನೆಯಿಂದ ಪುಂಡರೀಕಯಾಗದಫಲ. ಮುಂಜಾವಟದಲ್ಲಿ ಒಂದು ದಿನದ ವಾಸದಿಂದ ರುದ್ರಗಣಗಳೊಡೆತನ ಲಭ್ಯವಿದೆ. ಜಯಾಸ್ನಾನದಿಂದ ಸರ್ವಾಭೀಷ್ಟಸಿದ್ಧಿ. ಕುರುಕ್ಷೇತ್ರಕ್ಕೆ ಅದು ದ್ವಾರವೆಂದು ಪ್ರಸಿದ್ಧವಾಗಿದೆ. ಅದಕ್ಕೆ ಪ್ರದಕ್ಷಿಣೆಮಾಡಿ ರಾಮಹ್ರದಕ್ಕೆ ಹೋಗಬೇಕು. ಪರಶುರಾಮನು ಕ್ಷತ್ರಿಯರನ್ನೆಲ್ಲ ಸಂಹರಿಸಿ ಅವರ ನೆತ್ತರಿಂದ ಐದು ಮಡುಗಳನ್ನು ನಿರ್ಮಿಸಿದನೆಂದು ಹೇಳುತ್ತಾರೆ. ಅಲ್ಲಿ ಅವನು ಪಿತೃಗಳಿಗೆ ತರ್ಪಣವಿತ್ತಾಗ ಅವರು ಸಂತುಷ್ಟರಾಗಿ ಆಗಸದಲ್ಲಿ ನಿಂತು ಹೇಳಿದರಂತೆ 'ರಾಮ ನಿನ್ನ ಪಿತೃಭಕ್ತಿ ಪರಾಕ್ರಮಗಳನ್ನು ಕಂಡು ಸಂತುಷ್ಟರಾಗಿದ್ದೇವೆ ಬೇಕಾದ ವರವನ್ನು ಕೇಳು.' ಪರಶುರಾಮ ಕೈಮುಗಿದು ಹೇಳಿದ, 'ನೀವು ಸಂತುಷ್ಟರಾಗಿ ವರ ನೀಡುವಿರಾದರೆ ನನ್ನ ತಪಸ್ಸು ಹೆಚ್ಚಿ, ಕೋಪದಿಂದ ಕ್ಷತ್ರಿಯರನ್ನು ಕೊಂದ ಪಾಪ ತೊಲಗಲಿ. ಈ ಮಡುಗಳೂ ಪವಿತ್ರ ತೀರ್ಥವೆನಿಸಲಿ' ಪಿತೃಗಳು ಹೇಳಿದರು 'ನಿನ್ನ ತಪಸ್ಸು ವರ್ಧಿಸಲಿ. ಕೋಪದಿಂದ ಕ್ಷತ್ರಿಯರ ಸಂಹಾರಮಾಡಿದ ಪಾಪದಿಂದ ನೀನು ಮುಕ್ತನೆ ಇರುವೆ. ಅವರು ತಮ್ಮ ಪೂರ್ವಕರ್ಮದಿಂದಲೇ ಹತರಾದರು. ಈ ಮಡುಗಳಲ್ಲಿ ಸ್ನಾನ ತರ್ಪಣಗಳನ್ನು ಮಾಡಿದರೆ ಪಿತೃಗಳು ಪ್ರೀತರಾಗಿ ದುರ್ಲಭ ವರಗಳನ್ನು ಕೊಡುವರು. ಶಾಶ್ವತ ಸ್ವರ್ಗ ಲೋಕವನ್ನೂ ಕೊಡುವರು.' ಹೀಗೆ ಹೇಳಿ ಪಿತೃಗಳು ಅಂತರ್ಧಾನ ಹೊಂದಿದರು. ಹೀಗೆ ರಾಮಹ್ರದತೀರ್ಥ ಉತ್ಪನ್ನವಾಯಿತು. ಇಲ್ಲಿ ಸ್ನಾನಮಾಡಿ ಪರಶುರಾಮನನ್ನು ಪೂಜಿಸಿದರೆ ಬಹು ಸುವರ್ಣ ಲಾಭ.

ವಂಶಮೂಲ ತೀರ್ಥ ಸ್ನಾನದಿಂದ ವಂಶದುದ್ಧಾರ. ಕಾಯಶೋಧನ ತೀರ್ಥ ಸ್ನಾನದಿಂದ ಶರೀರಶುದ್ಧಿ, ಉತ್ತಮ ಲೋಕ ಪ್ರಾಪ್ತಿ. ಲೋಕೋದ್ಧಾರ ತೀರ್ಥ ಸ್ನಾನದಿಂದ ತನ್ನ ಲೋಕದುದ್ಧಾರ, ವಿಷ್ಣು ಇಲ್ಲಿ ಲೋಕಗಳನ್ನುದ್ಧರಿಸಿದ. ಶ್ರೀತೀರ್ಥಸ್ನಾನದಿಂದ ಸಂಪತ್ತು. ಕಪಿಲಾತೀರ್ಥಸ್ನಾನ ಪಿತೃದೇವತಾರ್ಚನೆ ಉಪವಾಸಗಳಿಂದ ಅಗ್ನಿಷ್ಟೋಮ ಫಲ. ಸೂರ್ಯಲೋಕಪ್ರಾಪ್ತಿ. ಗೋಭವನ ತೀರ್ಥಸ್ನಾನದಿಂದ ಸಾವಿರ ಗೋದಾನದ ಫಲ. ಬ್ರಹ್ಮಾವರ್ತ ತೀರ್ಥಸ್ನಾನದಿಂದ ಬ್ರಹ್ಮಲೋಕ ಪ್ರಾಪ್ತಿ. ಕಾಶೀಶ್ವರ ತೀರ್ಥಸ್ನಾನದಿಂದ ಸರ್ವವ್ಯಾಧಿ ಪರಿಹಾರ, ಸ್ವರ್ಗಪ್ರಾಪ್ತಿ. ಶೀತವನತೀರ್ಥ ದರ್ಶನದಿಂದಲೆ ಪಾಪ ಪರಿಹಾರ. ಅಲ್ಲಿ ತಲೆಕೂದಲು

ತೆಗೆಸಿದರೆ ಪಾವಿತ್ರ್ಯ ಉಂಟಾಗುವುದು. ಸ್ನಾತಲೋಕಾರ್ತಿಹ ತೀರ್ಥಸ್ನಾನದಿಂದ ಪರಗತಿಲಾಭ. ಸ್ವರ್ಗಲೋಮಾಪನಯನ ತೀರ್ಥದಲ್ಲಿ ಪ್ರಾಣಾಯಾಮದಿಂದ ಮನಃಶುದ್ಧಿ ಪರಗತಿಪ್ರಾಪ್ತಿ. ದಶಾಶ್ವಮೇಧಿಕ ತೀರ್ಥಸ್ನಾನದಿಂದಲೂ ಪರಗತಿಲಾಭ.

ಮಾನುಷ ತೀರ್ಥಸ್ನಾನದಿಂದ ಸರ್ವಪಾಪ ಪರಿಹಾರ, ಸ್ವರ್ಗಲೋಕ ಪ್ರಾಪ್ತಿ. ಹಿಂದೆ ಬೇಡನ ಬಾಣಗಳಿಗೆ ಬಲಿಯಾದ ಕೃಷ್ಣಮೃಗಗಳು ಆ ಕೊಳದ ನೀರಿನಲ್ಲಿ ಬಿದ್ದು ಮನುಷ್ಯರಾದವು. ಆಪಗಾ ಎಂಬ ನದಿ ಮಾನುಷ ತೀರ್ಥಕ್ಕೆ ಪೂರ್ವದಲ್ಲಿ ಒಂದು ಕ್ರೋಶ ದೂರದಲ್ಲಿ ಹರಿಯುತ್ತದೆ. ಅಲ್ಲಿ ದೇವತೆಗಳಿಗೂ ಪಿತೃಗಳನ್ನೂ ಉದ್ದೇಶಿಸಿ ಸಾಮೆ ಅಕ್ಕಿಯ ಅನ್ನವನ್ನು ನಿವೇದಿಸಿ ಒಬ್ಬ ಪಂಡಿತನನ್ನು ಉಣಿಸಿದರೆ ಕೋಟಿ ಬ್ರಾಹ್ಮಣರನ್ನುಣಿಸಿದಂತೆ. ಅಲ್ಲಿ ಸ್ನಾನ ಪಿತೃ ದೇವತಾರಾಧನೆ ಮಾಡುತ್ತ ಒಂದು ದಿನ ಉಪವಾಸ ಮಾಡಿದರೆ ಅಗ್ನಿಷ್ಟೋಮ ಫಲ.

ಬ್ರಹ್ಮಾನುಸ್ವರದಲ್ಲಿ ಸಪ್ತರ್ಷಿಕುಂಡ, ಕಪಿಲಕ್ಷೇತ್ರಸ್ನಾನಮಾಡಿ ಬ್ರಹ್ಮನನ್ನು ಪೂಜಿಸಿದರೆ ಸರ್ವಪಾಪ ಪರಿಹಾರ, ಬ್ರಹ್ಮಲೋಕ ಪ್ರಾಪ್ತಿ. ಕಪಿಸ್ಥಲ ಕ್ಷೇತ್ರಸೇವನೆಯಿಂದ ಅಂತರ್ಧಾನ ವಿದ್ಯೆ ಲಭಿಸುವುದು. ಕೃಷ್ಣಪಕ್ಷದ ಚತುರ್ದಶಿಯಂದು ಸರ್ವಕ ತೀರ್ಥದಲ್ಲಿ ಶಿವನನ್ನಾರಾಧಿಸಿದರೆ ಸರ್ವಾಭೀಷ್ಟ ಸಿದ್ಧಿ, ಸ್ವರ್ಗಲೋಕ ಪ್ರಾಪ್ತಿ. ಇಲಾಸ್ಪದ ತೀರ್ಥಸ್ನಾನ ಪಿತೃದೇವತಾರಾಧನೆಗಳಿಂದ ದುರ್ಗತಿ ತಪ್ಪುವುದು. ವಾಜಪೇಯ ಫಲ ಲಭಿಸುವುದು. ಕಿಂದಾನ, ಕಿಂಯಜ್ಞಗಳಲ್ಲಿ ಸ್ನಾನಮಾಡಿದರೆ ಅಪರಿಮಿತ ದಾನ ಯಜ್ಞಗಳ ಫಲವಿದೆ. ಕಲಶಿಯಲ್ಲಿ ಆಚಮನಮಾಡಿದರೆ ಅಗ್ನಿಷ್ಟೋಮ ಫಲ. ರಾಮಜನ್ಮತೀರ್ಥದಲ್ಲಿ ಸ್ನಾನ ಪ್ರಾಣತ್ಯಾಗಗಳಿಂದ ನಾರದರ ಅನುಗ್ರಹ ದುರ್ಲಭಲೋಕ ಪ್ರಾಪ್ತಿ.

ಶುಕ್ಲಪಕ್ಷ ದಶಮಿ ದಿನದಲ್ಲಿ ಪುಂಡರೀಕ ಸ್ನಾನದಿಂದ ಪುಂಡರೀಕ ಯಾಗದ ಫಲವಿದೆ. ತ್ರಿವಿಷ್ಟಪದಲ್ಲಿ ವೈತರಣಿ ನದೀಸ್ನಾನ ಶಿವಾರ್ಚನೆಗಳಿಂದ ಪಾಪಪರಿಹಾರ, ಪರಗತಿಲಾಭ. ಅಲ್ಲಿಂದ ಫಲಕೀವನಕ್ಕೆ ಯಾತ್ರೆ ಮಾಡಬೇಕು. ಅಲ್ಲಿ ದೇವತೆಗಳು ಫಲಕೀವನದಲ್ಲಿ ತಪಸ್ಸು ಮಾಡುತ್ತಾರೆ. ದೃಷತ್ಪಾನದಲ್ಲಿ ಸ್ನಾನ ದೇವತಾರ್ಚನೆಗಳಿಂದ ಅಗ್ನಿಷ್ಟೋಮ ಅತಿರಾತ್ರಗಳ ಫಲ. ಸರ್ವದೇವ ತೀರ್ಥಸ್ನಾನದಿಂದ ಸಾವಿರ ಗೋದಾನ ಫಲ. ಪಾಣಿಖ್ಯಾತ ತೀರ್ಥಸ್ನಾನ ದೇವತಾರಾಧನೆಗಳಿಂದ ರಾಜಸೂಯ ಫಲ, ಋಷಿಲೋಕಪ್ರಾಪ್ತಿ. ಮಿಶ್ರಕದಲ್ಲಿ ಎಲ್ಲ ತೀರ್ಥಗಳನ್ನೂ ಮುನಿಗಳಿಗಾಗಿ ವ್ಯಾಸರು ಮಿಶ್ರಿತಗೊಳಿಸಿದರೆಂದು ಹೇಳುತ್ತಾರೆ. ಅದರಿಂದ ಮಿಶ್ರಿಕಸ್ನಾನದಿಂದ ಎಲ್ಲ ತೀರ್ಥಗಳಲ್ಲಿ ಸ್ನಾನಮಾಡಿದಂತಾಗುತ್ತದೆ. ಅಲ್ಲಿಂದ ವ್ಯಾಸವನಕ್ಕೆ ಹೋಗಬಹುದು.

ಮನೋಜವತೀರ್ಥ ಸ್ನಾನದಿಂದ ಸಾವಿರ ಗೋದಾನದ ಫಲ. ಮಧುವನೀ ಸ್ನಾನ ಪಿತೃ ದೇವತಾರಾಧನೆಗಳಿಂದ ದೇವಿ ಪಾರ್ವತಿಯ ಅನುಗ್ರಹದಿಂದ ಸಾವಿರ ಗೋದಾನದ ಫಲ ಲಭಿಸುವುದು. ಕೌಶಿಕೀ ದೃಷದ್ವತೀ ಸಂಗಮ ಸ್ನಾನದಿಂದ ಸರ್ವಪಾಪ ಪರಿಹಾರ. ವ್ಯಾಸಸ್ಥಲಿಗೆ ಹೋದರೆ ಸಾವಿರ ಗೋದಾನದ ಫಲ. ಅಲ್ಲಿ ಹಿಂದೆ ವ್ಯಾಸರು ಪುತ್ರಶೋಕದಿಂದ ತಪ್ತರಾಗಿ ದೇಹತ್ಯಾಗ ಮಾಡಲು ನಿಶ್ಚಯಿಸಿದಾಗ ದೇವತೆಗಳು ತಡೆದು ನಿಲ್ಲಿಸಿದರು. ಋಣಾಂತ ಕೂಪದ ಬಳಿ ತಿಲದಾನ ಮಾಡಿದರೆ ಋಣಪರಿಹಾರ. ವೇದ

ತೀರ್ಥಸ್ನಾನದಿಂದ ಸಾವಿರ ಗೋದಾನದ ಫಲ. ಅಹಸ್ಸು ಮತ್ತು ಸುದಿನಗಳೆಂಬ ಸೂರ್ಯಲೋಕ ಪ್ರಾಪ್ತಿ. ಮೃಗಧೂಮದಲ್ಲಿ ಸ್ನಾನ ಶಿವಾರ್ಚನೆಗಳಿಂದ ಅಶ್ವಮೇಧ ಫಲ. ಕೋಟಿ ತೀರ್ಥಸ್ನಾನದಿಂದ ಸಾವಿರ ಗೋದಾನದ ಫಲ. ವಾಮನ ತೀರ್ಥದಲ್ಲಿ ಸ್ನಾನಮಾಡಿ ವಾಮನನ್ನರ್ಚಿಸಿದರೆ ವಿಷ್ಣು ಲೋಕಪ್ರಾಪ್ತಿ. ಕುಲಂಪುನ ಸ್ನಾನದಿಂದ ಕುಲವು ಪಾವನವಾಗುವುದು. ಪವನಹ್ರದದಲ್ಲಿ ಮರುತೀರ್ಥ ಸ್ನಾನಮಾಡಿದರೆ ವಾಯುಲೋಕ ಪ್ರಾಪ್ತಿ. ಅಮರಹ್ರದಲ್ಲಿ ಇಂದ್ರನನ್ನಾರಾಧಿಸಿದರೆ ಸ್ವರ್ಗಪ್ರಾಪ್ತಿ. ಶಾಲಿಹೋತ್ರನ ಶಾಲಿಸೂರ್ಯ ತೀರ್ಥದಲ್ಲಿ ಮಿಂದರೆ ಸಾವಿರ ಗೋದಾನದ ಫಲ. ಸರಸ್ವತೀ ನದಿಯ ಶ್ರೀ ಕುಂಜತೀರ್ಥದ ಸ್ನಾನದಿಂದ ಅಗ್ನಿಷ್ಟೋಮ ಫಲ. ನೈಮಿಷ ಕುಂಜ ಸ್ನಾನದಿಂದ ಸಾವಿರ ಗೋದಾನದ ಫಲ. ನೈಮಿಷದ ಋಷಿಗಳು ಕುರುಕ್ಷೇತ್ರಕ್ಕೆ ಹೋಗಿ ಅಲ್ಲಿ ಸರಸ್ವತೀ ನದಿಯಲ್ಲಿ ಈ ಕುಂಜವನ್ನು ನಿರ್ಮಿಸಿದರು.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಸ್ವರ್ಗಖಂಡದಲ್ಲಿ*
*ವಸಿಷ್ಠೋಕ್ತ ತೀರ್ಥ ಮಹಿಮೆವೆಂಬ ಒಂಬತ್ತನೇಯ ಅಧ್ಯಾಯ ಮುಗಿದುದು*



## ಕನ್ಯಾತೀರ್ಥ ಮಹಿಮೆ

**ಅಧ್ಯಾಯ - ೧೦**

**ನಾರದ ಉವಾಚ**

**ನಾರದ :-** ಕನ್ಯಾತೀರ್ಥದಲ್ಲಿ ಮಿಂದರೆ ಅಗ್ನಿಷ್ಟೋಮ ಫಲ ಸಿಗುವುದು. ಬ್ರಹ್ಮಸ್ಥಾನದಲ್ಲಿ ಬೇರೆ ಜಾತಿಯವರಿಗೆ ಬ್ರಾಹ್ಮಣ್ಯ ಲಭಿಸುವುದು. ಬ್ರಾಹ್ಮಣನು ಶುದ್ಧನಾಗಿ ಪರಗತಿ ಹೊಂದುವನು. ಸೋಮತೀರ್ಥ ಸ್ನಾನದಿಂದ ಸೋಮಲೋಕ ಪ್ರಾಪ್ತಿ. ಸಪ್ತ ಸಾರಸ್ವತ ತೀರ್ಥವು ಮಂಕಣಕ ಮಹರ್ಷಿಯ ಸ್ಥಳ.

ಹಿಂದೆ ಮಂಕಣಕನ ಕೈಗೆ ದರ್ಭೆಯ ತುದಿ ತಗುಲಿ ಗಾಯವಾಯಿತು. ಗಾಯದಿಂದ ತರಕಾರಿಯ ರಸ ಸುರಿಯತೊಡಗಿತು. ಆಶ್ಚರ್ಯದಿಂದ ಕಣ್ಣರಳಿಸಿ ಅದನ್ನು ನೋಡಿದ ಮುನಿ ಆನಂದದಿಂದ ಉಬ್ಬಿ ಕುಣಿದಾಡಿದ. ಅವನ ತೇಜಸ್ಸಿನ ಮೋಡಿಯಿಂದ ಎಲ್ಲ ಚರಾಚರ ಪ್ರಪಂಚವೇ ಅವನೊಂದಿಗೆ ಕುಣಿಯತೊಡಗಿತು. ಬ್ರಹ್ಮಾದಿ ದೇವತೆಗಳೂ ಋಷಿಗಳೂ ಮಹಾದೇವನಲ್ಲಿ ಮೊರೆಯಿಟ್ಟರು. ಅವನು ಕುಣಿಯದಂತೆ ಮಾಡೆಂದು ಬೇಡಿಕೊಂಡರು, ಶಿವನು ಮುನಿಯನ್ನು ನೋಡಿದ. ಆನಂದೋದ್ರೇಕದಿಂದ ಕುಣಿಯುತ್ತಿದ್ದಾನೆ.

**ಶಿವ :-** ಮಹರ್ಷಿಯೆ, ಏಕೆ ಕುಣಿಯುತ್ತಿರುವೆ ? ನಿನ್ನ ಆನಂದಕ್ಕೇನು ಕಾರಣ ?

**ಮಂಕಣ:-** ನಿನಗೆ ಕಾಣಿಸುತ್ತಿಲ್ಲವೆ ? ನೋಡು ನನ್ನ ತಪಃಸಿದ್ಧಿಯನ್ನು ಗಾಯದಿಂದ ಶಾಕರಸ ಸುರಿಯುತ್ತಿದೆ. ಅದನ್ನು ನೋಡಿ ಆನಂದದಿಂದ ಕುಣಿಯುತ್ತಿದ್ದೇನೆ.

**ಶಿವ :-** ಇದೇನೂ ದೊಡ್ಡ ಆಶ್ಚರ್ಯವೆಂದು ನನಗಿನಿಸುವುದಿಲ್ಲ. ನನ್ನನ್ನೊಮ್ಮೆ ನೋಡು.

ಹೀಗೆ ಹೇಳಿ ಶಿವ ತನ್ನ ಹೆಬ್ಬೆಟ್ಟನ್ನು ಬೆರಳಿಂದ ಹೊಡೆದ. ಒಡನೆ ಹಿಮದಂತೆ ಬಿಳಿಯಾದ ಭಸ್ಮ ಉದುರಿತು. ಮುನಿ ಅದನ್ನು ನೋಡಿ ನಾಚಿ ಶಿವನ ಕಾಲುಗಳಿಗೆ ಎರಗಿದ.

**ಮಂಕಣ :-** ರುದ್ರನಿಗಿಂತ ದೊಡ್ಡ ದೈವವನ್ನು ನಾನರಿಯೆ. ಹೇ ಶೂಲ ಪಾಣಿಯೆ, ಸುರಾಸುರ ಪ್ರಪಂಚಕ್ಕೆಲ್ಲ ನೀನೆ ಗತಿ. ಈ ಮೂಲೋಕವನ್ನೂ ಸೃಷ್ಟಿಸಿದವ ನೀನು. ಪ್ರಲಯಕಾಲದಲ್ಲಿ ಎಲ್ಲರೂ ಪ್ರವೇಶಿಸುವುದು ನಿನ್ನನ್ನು. ದೇವತೆಗಳೂ ನಿನ್ನನ್ನರಿಯಲಾರರು. ನಾನೆಷ್ಟರವನು ? ಲೋಕದಲ್ಲಿ ಎಲ್ಲ ಮಾಡುವವನೂ ಮಾಡಿಸುವವನೂ ನೀನೆ. ನಿನ್ನ ದಯೆಯಿಂದ ದೇವತೆಗಳೆಲ್ಲರೂ ಏನೂ ಭಯವಿಲ್ಲದೆ ಆನಂದದಿಂದ ಇದ್ದಾರೆ. ನಿನ್ನ ಅನುಗ್ರಹದಿಂದ ನನ್ನ ತಪಸ್ಸು ಕ್ಷೀಣಿಸದಂತಾಗಲಿ.

**ಶಿವ :-** ಮುನಿಯೆ, ನಿನ್ನ ತಪಸ್ಸು ಒಂದಕ್ಕೆ ಸಾವಿರದಷ್ಟು ವೃದ್ಧಿ ಹೊಂದಲಿ. ಈ ಆಶ್ರಮದಲ್ಲಿ ನಿನ್ನೊಂದಿಗೆ ನಾನಿರುವೆ. ಈ ಸಪ್ತಸಾರಸ್ವತತೀರ್ಥದಲ್ಲಿ ಸ್ನಾನಮಾಡಿ ನನ್ನನ್ನು ಪೂಜಿಸುವವರಿಗೆ ಇಹಪರಗಳಲ್ಲಿ ಅಲಭ್ಯವಾದುದಿಲ್ಲ. ಅವನು ಸಾರಸ್ವತಲೋಕವನ್ನು ಹೊಂದುತ್ತಾನೆ. ಇದರಲ್ಲಿ ಸಂಶಯವಿಲ್ಲ.

ಹೀಗೆ ಹೇಳಿ ಶಿವನು ಅಂತರ್ಧಾನ ಹೊಂದಿದ.

ಔಶನಸತೀರ್ಥದಲ್ಲಿ ಮೂರು ಸಂಧ್ಯೆಗಳಲ್ಲಿಯೂ ಬ್ರಹ್ಮಾದಿ ದೇವತೆಗಳೂ ಋಷಿಗಳೂ ಕಾರ್ತೀಕೆಯನೂ ಶುಕ್ರಾಚಾರ್ಯರ ಸಂತೋಷಕ್ಕಾಗಿ ಸನ್ನಿಹಿತರಾಗಿರುತ್ತಾರೆ.

ಕಪಾಲಮೋಚನ ತೀರ್ಥದ ಸ್ನಾನದಿಂದ ಸರ್ವಪಾಪ ಪರಿಹಾರ. ಅಗ್ನಿ ತೀರ್ಥಸ್ನಾನದಿಂದ ಬ್ರಾಹ್ಮಣ್ಯ ಲಾಭ. ಬ್ರಹ್ಮಯೋನಿ ತೀರ್ಥಸ್ನಾನದಿಂದ ಅಗ್ನಿಲೋಕ ಪ್ರಾಪ್ತಿ. ಕುಲವೂ ಉದ್ಧೃತವಾಗುವುದು. ವಿಶ್ವಾಮಿತ್ರ ತೀರ್ಥಸ್ನಾನದಿಂದ ಬ್ರಹ್ಮಲೋಕ ಪ್ರಾಪ್ತಿ. ಏಳು ಕುಲಗಳೂ ಪವಿತ್ರವಾಗುವುವು. ಪೃಥೂದಕ ಸ್ನಾನದಿಂದ ಎಲ್ಲ ಪಾಪಗಳ ಪರಿಹಾರ ಅಶ್ವಮೇಧದ ಫಲ, ಸ್ವರ್ಗಪ್ರಾಪ್ತಿ. ಕುರುಕ್ಷೇತ್ರವೇ ಆಪವನ. ಅದಕ್ಕಿಂತಲೂ ಸರಸ್ವತಿ, ಸರಸ್ವತಿಗಿಂತಲೂ ಪೃಥೂದಕ ಹೆಚ್ಚು ಪವಿತ್ರ. ಅಲ್ಲಿ ಜಪಮಾಡುತ್ತ ದೇಹತ್ಯಾಗ ಮಾಡುವವನಿಗೆ ಪುನರ್ಜನ್ಮವಿಲ್ಲ. ಸನತ್ಕುಮಾರ, ವ್ಯಾಸರೂ ಹಾಗೆ ಹೊಗಳಿದ್ದಾರೆ. ವೇದದಲ್ಲಿಯೂ ಹಾಗೇ ಹೇಳಿದೆ. ಮಧುಶ್ರವಸ್ನಾನದಿಂದ ಸಾವಿರ ಗೋದಾನಫಲ.

ಸರಸ್ವತಿ ಅರುಣಾ ಸಂಗಮ ಸ್ನಾನಮಾಡಿ ಮೂರು ದಿನ ಉಪವಾಸವಿದ್ದರೆ ಬ್ರಹ್ಮಹತ್ಯಾ ನಿವೃತ್ತಿ. ಅಗ್ನಿಷ್ಟೋಮ ರಾತ್ರಿಗಳ ಫಲ, ಏಳುಕುಲದ ಉದ್ಧಾರ, ಅವಕೀರ್ಣ ತೀರ್ಥ ಬ್ರಾಹ್ಮಣರ ಮೇಲಿನ ಅನುಕಂಪೆಯಿಂದ ದರ್ಭಿ ಮಹರ್ಷಿ ನಿರ್ಮಿಸಿದ ತೀರ್ಥ. ಇಲ್ಲಿ ವ್ರತ ಉಪನಯನ ಉಪವಾಸಗಳಿಂದ ಬ್ರಾಹ್ಮಣ್ಯಲಾಭ. ದರ್ಭಿಮುನಿ ಇಲ್ಲಿ ನಾಕು ಸಮುದ್ರಗಳ ಸನ್ನಿಧಾನವನ್ನು ತಂದಿರಿಸಿದುದರಿಂದ ಇಲ್ಲಿ ಸ್ನಾನಮಾಡಿದರೆ ಸಾವಿರ ಗೋದಾನದ ಫಲ. ಶತಸಹಸ್ರಕ ಸಾಹಸ್ರಕ ತೀರ್ಥಗಳ ಸ್ನಾನದಿಂದಲೂ ಸಾವಿರ ಗೋದಾನದ ಫಲ. ದಾನ ಉಪವಾಸಗಳು ಸಹಸ್ರಪಾಲು ವೃದ್ಧಿ ಹೊಂದುವುವು. ರೇಣುಕಾ ತೀರ್ಥಸ್ನಾನ ಪಿತೃ ದೇವತಾರಾಧನೆಗಳಿಂದ ಸರ್ವಪಾಪ ಪರಿಹಾರ, ಅಗ್ನಿಷ್ಟೋಮ ಫಲ. ವಿಮೋಚನದಲ್ಲಿ ಆಚಮನಮಾಡಿದರೆ ಪ್ರತಿಗ್ರಹ ಪಾಪದ ಪರಿಹಾರ. ಪಂಚವಟ ಸೇವನೆಯಿಂದ ಸ್ವರ್ಗಪ್ರಾಪ್ತಿ. ಅಲ್ಲಿ ಶಿವನನ್ನು ಅರ್ಚಿಸಿದರೆ ಅಭೀಷ್ಟ ಸಿದ್ಧಿ. ತೈಜಸತೀರ್ಥ ಸೇವನೆಯಿಂದ ದೀಪ್ತಿ ಉಂಟಾಗುವುದು. ಇಲ್ಲಿ ಹಿಂದೆ ಬ್ರಹ್ಮಾದಿದೇವತೆಗಳೂ ಋಷಿಗಳು ಷಣ್ಮುಖನನ್ನು ದೇವತೆಗಳ ಸೇನಾಧಿಪತ್ಯದಲ್ಲಿ ಅಭಿಷೇಕಮಾಡಿದ್ದರು.

ಕುರುತೀರ್ಥಸ್ನಾನದಿಂದ ಸರ್ವಪಾಪ ಪರಿಹಾರ ರುದ್ರಲೋಕ ಪ್ರಾಪ್ತಿ. ಸ್ವರ್ಗದ್ವಾರದಲ್ಲಿ ಅಗ್ನಿಷ್ಟೋಮ ಫಲ, ಬ್ರಹ್ಮಲೋಕ ಪ್ರಾಪ್ತಿ. ಅನರಕತೀರ್ಥ ಸ್ನಾನದಿಂದ ದುರ್ಗತಿ ತಪ್ಪುವುದು ರುದ್ರವೇದಿಯಲ್ಲಿ ಶಿವಾರ್ಚನೆಯಿಂದ ಸರ್ವಪಾಪ ಪರಿಹಾರ. ಪದ್ಮನಾಭನ ಅರ್ಚನೆಯಿಂದ ವಿಷ್ಣುಲೋಕ ಪ್ರಾಪ್ತಿ. ಸರ್ವದೇವ ತೀರ್ಥಸ್ನಾನದಿಂದ ಸರ್ವದುಃಖಪರಿಹಾರ, ಶಿವನಂಥ ತೇಜಸ್ಸು. ಅಸ್ಥಿಪುರದಲ್ಲಿ ಪಿತೃದೇವತಾರ್ಪಣದಿಂದ ಅಗ್ನಿಷ್ಟೋಮಫಲ ಗಂಗಾಹ್ರದಲ್ಲಿ ಮೂವತ್ತುಕೋಟಿ ತೀರ್ಥಗಳಿವೆ ಅಲ್ಲಿ ಸ್ನಾನಮಾಡಿದರೆ ಬ್ರಹ್ಮಲೋಕ ಪ್ರಾಪ್ತಿ. ಅಪಗಾಸ್ನಾನ ಶಿವಾರ್ಚನೆಗಳಿಂದ ಪರಗತಿಲಾಭ. ಕುಲವೂ ಉದ್ಧೃತವಾಗುವುದು. ಸ್ಥಾಣುವಟ ಸ್ನಾನಮಾಡಿ ಒಂದು ದಿನ ವಾಸಮಾಡಿದರೆ ರುದ್ರಲೋಕ ಪ್ರಾಪ್ತಿ. ಬದರೀವನದ ವಸಿಷ್ಠಾಶ್ರಮದಲ್ಲಿ ಹನ್ನೆರಡು ವರ್ಷ ಬದರೀಭಕ್ಷಣ ಮಾಡಿದರೆ ಮೂರುದಿನ ಉಪವಾಸ ಮಾಡಿದ ಫಲ. ಇಂದ್ರಮಾರ್ಗದಲ್ಲಿ ಒಂದು ದಿನ ಉಪವಾಸ ಮಾಡಿದರೆ ಸ್ವರ್ಗಪ್ರಾಪ್ತಿ. ಏಕರಾತ್ರದಲ್ಲಿ ಒಂದುದಿನ ವಾಸದಿಂದ ಬ್ರಹ್ಮಲೋಕ ಪ್ರಾಪ್ತಿ. ಆದಿತ್ಯತೀರ್ಥದಲ್ಲಿ ಸೂರ್ಯನಾಶ್ರಮವಿದೆ. ಅಲ್ಲಿ ಸ್ನಾನಮಾಡಿ ಸೂರ್ಯನನ್ನಾರಾಧಿಸಿದರೆ ಸೂರ್ಯಲೋಕಪ್ರಾಪ್ತಿ. ಕುಲವೂ ಉದ್ಧೃತವಾಗುತ್ತದೆ. ಸೋಮತೀರ್ಥ ಸ್ನಾನದಿಂದ ಸೋಮಲೋಕಪ್ರಾಪ್ತಿ. ದಧೀಚತೀರ್ಥವು ದಧೀಚಮುನಿ ಸಿದ್ಧಿಪಡೆದ ಸ್ಥಳ. ಅಲ್ಲಿ ಸ್ನಾನಮಾಡಿದರೆ ವಾಜಪೇಯ ಫಲ. ಕನ್ಯಾಶ್ರಮದಲ್ಲಿ ಬ್ರಹ್ಮಚರ್ಯದಿಂದ ಮೂರುದಿನ ವಾಸಮಾಡಿದರೆ ನೂರು ದಿವ್ಯ ಕನ್ಯೆಗಳ ಲಾಭ, ಬ್ರಹ್ಮಲೋಕಪ್ರಾಪ್ತಿ.

ಸನ್ನಿಹಿತೀ ತೀರ್ಥದಲ್ಲಿ ಬ್ರಹ್ಮಾದಿದೇವತೆಗಳೂ ಋಷಿಗಳೂ ಎಲ್ಲ ತೀರ್ಥಗಳೂ ಪ್ರತಿ ಅಮವಾಸ್ಯೆಗಳಲ್ಲಿ ಸನ್ನಿಹಿತರಾಗುತ್ತಾರೆ. ಸೂರ್ಯನಿಗೆ ರಾಹುಗ್ರಹಣವಾದಾಗ ಅಲ್ಲಿ ಆಚಮನಮಾಡಿದರೆ ನೂರು ಅಶ್ವಮೇಧಗಳ ಫಲ. ಸ್ನಾನ ಪಾನಗಳಿಂದ ಸ್ವರ್ಗಪ್ರಾಪ್ತಿ. ಅಮವಾಸ್ಯೆ ಮತ್ತು ಸೂರ್ಯಗ್ರಹಣಗಳಲ್ಲಿ ಸ್ನಾನದಿಂದ ಬ್ರಹ್ಮಲೋಕ ಪ್ರಾಪ್ತಿ. ಶ್ರಾದ್ಧ ಮಾಡುವದರಿಂದ ಸಾವಿರ ಅಶ್ವಮೇಧಗಳ ಫಲ.

ಕುರುಕ್ಷೇತ್ರಕ್ಕೆ ದ್ವಾರಪಾಲನಂತಿರುವ ಮಚಕ್ರುಕಕ್ಕೆ ನಮಸ್ಕರಿಸಿ ಅಲ್ಲಿ ತೀರ್ಥಸ್ನಾನ ಮಾಡಿ ಬ್ರಹ್ಮಚರ್ಯದಿಂದಿದ್ದರೆ ರಾಜಸೂಯಾಶ್ವಮೇಧಗಳ ಫಲ.

ಭೂಮಿಯಲ್ಲಿ ನೈಮಿಷ. ಅಂತರಿಕ್ಷದಲ್ಲಿ ಪುಷ್ಕರ ಪವಿತ್ರವೆನಿಸಿದರೆ ಕುರುಕ್ಷೇತ್ರವು ಮೂರುಲೋಕಗಳಲ್ಲಿ ಪವಿತ್ರ. ಅಲ್ಲಿ ಗಾಳಿಯಲ್ಲಿ ತೇಲಿಬರುವ ಧೂಳಿನ ಕಣಗಳೂ ಪಾಪಿಯನ್ನು ಪರಗತಿಗೊಯ್ಯುತ್ತವೆ. ಸರಸ್ವತಿಯ ಉತ್ತರ, ದಕ್ಷಿಣ ತೀರಗಳಲ್ಲಿ ಕುರುಕ್ಷೇತ್ರ ವಾಸಮಾಡುವುದೆಂದರೆ ಅದು ಸ್ವರ್ಗವಾಸ.

**ಕುರುಕ್ಷೇತ್ರಂ ಗಮಿಷ್ಯಾಮಿ ಕುರುಕ್ಷೇತ್ರೇವಸಾಮ್ಯಹಂ**
**ಆ ಪೇವಂ ವಾಚಮುತ್ಸೃಜ್ಯ ಸ್ವರ್ಗಲೋಕೇಮಹೀಯತೇ**

ಕುರುಕ್ಷೇತ್ರಕ್ಕೆ ಹೋಗುವೆ. ಅಲ್ಲಿ ವಾಸ ಮಾಡುವೆನೆಂದು ಹೇಳಿಕೊಂಡರೂ ಸ್ವರ್ಗಲೋಕದಲ್ಲಿ ಉತ್ತಮಸ್ಥಾನ ಲಭಿಸುವುದು.

ಬ್ರಹ್ಮವೇದಿಯಲ್ಲಿ ಪವಿತ್ರ ಕುರುಕ್ಷೇತ್ರವನ್ನು ಬ್ರಹ್ಮರ್ಷಿಗಳು ಸೇವಿಸುತ್ತಾರೆ. ಅಲ್ಲಿ ವಾಸ ಮಾಡುವವರಿಗೆಂದೂ ದುರ್ಗತಿಯಿಲ್ಲ. ತರಂಡಕ ಅರಂಡಕ ಮಚಕ್ರುಕ ರಾಮಹ್ರದ

ಇವುಗಳ ನಡುವೆ ಇರುವ ಕುರುಕ್ಷೇತ್ರ, ಸಮಂತಪಂಚಕ ಬ್ರಹ್ಮನ ಉತ್ತರ ವೇದಿಯೆನಿಸಿದೆ.

**ನಾರದ :-** ಅಲ್ಲಿಂದ ಧರ್ಮತೀರ್ಥಕ್ಕೆ ಹೋಗಿ ಸ್ನಾನಮಾಡಿದರೆ ಧರ್ಮವೃದ್ಧಿ. ಏಳುಕುಲಗಳ ಉದ್ಧಾರ ಅದು ಯಮಧರ್ಮನು ತಪಸ್ಸುಮಾಡಿ ನಿರ್ಮಿಸಿದ ಪವಿತ್ರ ತೀರ್ಥ. ಅಲ್ಲಿಂದ ಕಲಾಪವನಕ್ಕೆ ಹೋಗುವುದು ಬಹು ಕಷ್ಟವೆನಿಸಿದರೂ ಅಲ್ಲಿ ಸ್ನಾನ ಮಾಡಿದರೆ ಅಗ್ನಿಷ್ಟೋಮಫಲ, ವಿಷ್ಣುಲೋಕಪ್ರಾಪ್ತಿ. ಸೌಗಂಧಿಕವನದಲ್ಲಿ ಬ್ರಹ್ಮಾದಿದೇವತೆಗಳೂ ಋಷಿಗಳೂ ಗಂಧರ್ವಕಿನ್ನರ ಮುಂತಾದವರೂ ಇರುತ್ತಾರೆ. ಅಲ್ಲಿ ಪ್ರವೇಶ ಮಾಡಿದಾಗಲೆ ಎಲ್ಲ ಪಾಪ ಪರಿಹಾರವಾಗುತ್ತವೆ. ಪ್ಲಕ್ಷಾನದಿ ಮಹಾಪವಿತ್ರ. ಅದರ ನೀರು ಹುತ್ತದಿಂದ ಹರಿದು ಬರುತ್ತದೆ. ಅದರಲ್ಲಿ ಸ್ನಾನದಿಂದ ಸಾವಿರ ಕಪಿಲಾದಾನದ ಮತ್ತು ಅಶ್ವಮೇಧದ ಫಲ. ಸುಗಂಧಾ ಶತಕುಂಭಾ ಪಂಚಯಜ್ಞಗಳಿಗೆ ಹೋದರೆ ಸ್ವರ್ಗಪ್ರಾಪ್ತಿ. ತ್ರಿಶೂಲಪಾತಸ್ನಾನ ಪಿತೃದೇವಾರ್ಚನೆ ಅಲ್ಲಿ ದೇಹತ್ಯಾಗಗಳಿಂದ ರುದ್ರಗಣಗಳೊಡೆತನ ಲಭ್ಯವಾಗುವುದು.

ರಾಜಗೃಹ ದೇವಿ ಶಾಕಂಭರಿಯ ಸ್ಥಳ. ಅಲ್ಲಿ ಸಾವಿರ ದಿವ್ಯ ವರ್ಷಗಳ ಕಾಲ ದೇವಿ ಶಾಕಗಳಿಂದ ಆಹಾರ ನಿರ್ಮಿಸಿಕೊಟ್ಟಳು. ಋಷಿಗಳು ಭಕ್ತಿಯಿಂದ ಈ ಆತಿಥ್ಯವನ್ನು ಸ್ವೀಕರಿಸಿದರು. ಅಲ್ಲಿ ಮೂರು ದಿನ ಶಾಕಾಹಾರಿಯಾಗಿದ್ದರೆ ಹನ್ನೆರಡು ವರ್ಷ ಶಾಕಾಹಾರಿಯಾಗಿರುವುದರ ಫಲ ಸಿಗುತ್ತದೆ. ಸುವರ್ಣತೀರ್ಥದಲ್ಲಿ ಕೃಷ್ಣ, ರುದ್ರನನ್ನು ಆರಾಧಿಸಿ ದೇವತೆಗಳಿಗೆ ಅಲಭ್ಯವಾದ ಅನೇಕ ವರಗಳನ್ನು ಪಡೆದ. ಆಗ ಶಿವನು ಸಂತೋಷದಿಂದ ಹೇಳಿದ ಮಾತು - 'ಕೃಷ್ಣ ನನಗೆ ಅತ್ಯಂತ ಪ್ರಿಯವಾದ ನನ್ನಾತ್ಮನೆ ನೀನು. ನನ್ನ ಜಗತ್ತೆಲ್ಲವೂ ನೀನೆ.' ಈ ಸುವರ್ಣ ತೀರ್ಥದಲ್ಲಿ ಶಿವನನ್ನು ಪೂಜಿಸಿದರೆ ಅಶ್ವಮೇಧದ ಫಲ. ರುದ್ರಗಣಗಳೊಡೆತನವೂ ಲಭಿಸುತ್ತದೆ. ಧೂಮಾವತಿಯಲ್ಲಿ ಮೂರುದಿನ ವಾಸಮಾಡಿದರೆ ಸಕಲಾಭೀಷ್ಟ ಸಿದ್ಧಿ. ಈ ತೀರ್ಥದ ದಕ್ಷಿಣಭಾಗ ರಥಾವರ್ತ. ಅಲ್ಲಿ ಶಿವನ ಅನುಗ್ರಹದಿಂದ ಪರಗತಿಯನ್ನು ಪಡೆಯಬಹುದು. ಅಲ್ಲಿಗೆ ಪ್ರದಕ್ಷಿಣೆಮಾಡಿ ಧರಾತೀರ್ಥಸ್ನಾನ ಮಾಡಿದರೆ ಶೋಕಪರಿಹಾರ.

ಹಿಮಾಲಯವನ್ನು ನಮಸ್ಕರಿಸಿ ಸ್ವರ್ಗದ್ವಾರದಂತಿರುವ ಗಂಗಾದ್ವಾರಕ್ಕೆ ಬಂದು ಕೋಟಿತೀರ್ಥಸ್ನಾನಮಾಡಿದರೆ ಪುಂಡರೀಕಯಾಗದ ಫಲ. ಕುಲವೂ ಉದ್ಧೃತವಾಗುವದು. ಅಲ್ಲಿ ಒಂದು ರಾತ್ರಿ ಕಳೆದರೆ ಸಾವಿರಗೋದಾನದ ಫಲ. ಸಪ್ತಗಂಗ, ತ್ರಿಗಂಗ, ಶಕ್ರಾವರ್ತಗಳಲ್ಲಿ ದೇವಪಿತೃತರ್ಪಣದಿಂದ ಪುಣ್ಯಲೋಕ ಲಾಭ. ಕನಖಲದಲ್ಲಿ ಸ್ನಾನಮಾಡಿ ಮೂರು ರಾತ್ರಿ ಉಳಿದರೆ ಅಶ್ವಮೇಧ ಫಲ. ಸ್ವರ್ಗಪ್ರಾಪ್ತಿ. ಕಪಿಲಾವಟದಲ್ಲಿ ಒಂದು ರಾತ್ರಿ ಉಳಿದರೆ ಸಾವಿರ ಗೋದಾನದ ಫಲ. ಕಪಿಲಮುನಿಯ ನಾಗತೀರ್ಥದಲ್ಲಿ ಸ್ನಾನಮಾಡಿದರೆ ಸಾವಿರ ಕಪಿಲಾದಾನದ ಫಲ. ಶಂತನುವಿನ ಲಲಿತಾತೀರ್ಥದಲ್ಲಿ ಸ್ನಾನ ಮಾಡುವುದರಿಂದ ದುರ್ಗತಿ ತಪ್ಪುವುದು.

*ಇತಿ ಪದ್ಮ ಮಹಾಪುರಾಣ ಭಾಗ - ೨೮*

*ಸ್ವರ್ಗಖಂಡದಲ್ಲಿ ಕನ್ಯಾತೀರ್ಥ ಮಹಿಮೆ ಹತ್ತನೇಯ ಅಧ್ಯಾಯ ಮುಗಿದುದು*

## ಯಮುನಾತೀರ್ಥ ಮಹಿಮೆ

ಅಧ್ಯಾಯ - ೧೧

**ನಾರದ ಉವಾಚ**

**ನಾರದ :-** ಅಲ್ಲಿಂದ ಕಾಲಿಂದೀ ತೀರ್ಥಕ್ಕೆ ಹೋಗಿ ಅಲ್ಲಿ ಮಿಂದರೆ ಎಂದೂ ದುರ್ಗತಿಯುಂಟಾಗದು. ಪುಷ್ಕರ, ಕುರುಕ್ಷೇತ್ರ, ಬ್ರಹ್ಮಾವರ್ತ, ಪೃಥೂದಕ, ಅವಿಮುಕ್ತ, ಸುವರ್ಣತೀರ್ಥಗಳಲ್ಲಿ ಸಿಗುವ ಫಲ ಯಮುನೆಯಲ್ಲಿ ಸಿಗುತ್ತದೆ. ಸ್ವರ್ಗಭೋಗದಲ್ಲಿ ಆಯುರಾರೋಗ್ಯ ಸಂಪತ್ತಿನಲ್ಲಿ ರೂಪಯೌವನಗಳಲ್ಲಿ ಅತಿಯಾಸೆ ಉಳ್ಳವರು ಯಮುನಾ ಸ್ನಾನಮಾಡಲೇಬೇಕು. ನರಕಭಯ ದಾರಿದ್ರ್ಯ ದುರ್ಭಾಗ್ಯ ಪಾಪಭಯ ಉಳ್ಳವರಿಗೆ ಯಮುನಾಸ್ನಾನಕ್ಕಿಂತ ಬೇರೆ ಉಪಾಯವಿಲ್ಲ. ಬೇರೆ ಕಡೆ ಶ್ರದ್ಧೆಯಿಲ್ಲದೆ ಮಾಡಿದ ಕರ್ಮಕ್ಕೆ ಅರ್ಧಫಲ, ಇಲ್ಲಿ ಸ್ನಾನಮಾತ್ರ ಮಾಡಿದರೂ ಪೂರ್ಣಫಲ. ತಿಳಿದೊ ತಿಳಿಯದೆಯೊ ಯಮುನೆಯಲ್ಲಿ ಮಿಂದರೆ ಇಹಪರಗಳೆರಡರಲ್ಲಿಯೂ ದುಃಖವಿಲ್ಲ. ಅಲ್ಲಿ ಸ್ನಾನಮಾಡಿದರೆ ಕೃಷ್ಣಪಕ್ಷದ ಚಂದ್ರನಂತೆ ಪಾಪ ಕ್ಷೀಣಿಸುತ್ತದೆ. ಶುಕ್ಲಪಕ್ಷದ ಚಂದ್ರನಂತೆ ಪುಣ್ಯ ವೃದ್ಧಿಸುತ್ತದೆ. ಸಮುದ್ರದಲ್ಲಿ ತೆಗೆದಷ್ಟೂ ರತ್ನಗಳು ಸಿಗುವಂತೆ, ಕಾಮಧೇನುವನ್ನು ಬೇಡಿದರೆ ಆಯುಷ್ಯ ಸಂಪತ್ತು ಸ್ತ್ರೀಸುಖ ಹೆಚ್ಚುವಂತೆ, ಚಿಂತಾಮಣಿಯ ಉಪಾಸನೆಯಿಂದ ಬಯಸಿದುದೆಲ್ಲ ದೊರೆಯುವಂತೆ ಯಮುನಾಸ್ನಾನದಿಂದ ಅದೆಲ್ಲವೂ ದೊರೆಯುತ್ತದೆ.

ಕೃತಯುಗದಲ್ಲಿ ತಪಸ್ಸು, ತ್ರೇತಾಯುಗದಲ್ಲಿ ಜ್ಞಾನ ದ್ವಾಪರಯುಗದಲ್ಲಿ ಯಾಗ, ಕಲಿಯುಗದಲ್ಲಿ ದಾನ ಶ್ರೇಯಸ್ಕರವೆನಿಸಿದರೆ ಯಮುನೆ ಎಲ್ಲ ಯುಗಗಳಲ್ಲಿಯೂ ಶ್ರೇಯಸ್ಕರ. ಎಲ್ಲ ವರ್ಣ ಆಶ್ರಮದವರಿಗೂ ಯಮುನಾಸ್ನಾನ ವಿಹಿತವಾಗಿದೆ. ಕರ್ಮಭೂಮಿಯಾದ ಭಾರತದಲ್ಲಿ ಯಮುನೆಯಲ್ಲಿ ಮೀಯದವನ ಬಾಳು ವ್ಯರ್ಥ. ಅವನ ಸತ್ಕರ್ಮವೆಲ್ಲ ಅಮಾವಾಸ್ಯೆ ರಾತ್ರಿಯ ಚಂದ್ರನಂತೆ ಆಗುತ್ತದೆ. ಅವನ ವ್ರತದಾನ ತಪಸ್ಸು ಇವಾವುದೂ ಹರಿಗೆ ಪ್ರಿಯವೆನಿಸುವುದಿಲ್ಲ. ಸೂರ್ಯನ ತೇಜಸ್ಸಿಗೆ ಸಮನಾದ ತೇಜಸ್ಸು ಇಲ್ಲ. ಯಮುನಾ ಸ್ನಾನಕ್ಕೆ ಸಮನಾದ ಸತ್ಕರ್ಮವೂ ಇಲ್ಲ.

ಯಮುನಾಸ್ನಾನ ಮಾಡದವನು ತನ್ನ ಶರೀರ ಪೋಷಣೆಯನ್ನೆಷ್ಟು ಮಾಡಿದರೇನು ? ಅನಿತ್ಯವಾದ ಈ ಶರೀರ ಸ್ನಾಯುಗಳಿಂದ ಎಲುವುಗಳನ್ನು ಕಟ್ಟಿ ರಕ್ತ ಮಾಂಸಗಳನ್ನು ಮೆತ್ತಿ, ತೊಗಲಿನಿಂದ ಸುತ್ತಿಮಾಡಿದ ದುರ್ಗಂಧ ಪೂರ್ಣವಾದ ಮಲಮೂತ್ರ ಜರಾಶೋಕ ವಿಪತ್ತು ರೋಗ ಮುಂತಾದವುಗಳ ಮನೆ. ರಾಗದ್ವೇಷ ಪರದ್ರೋಹಗಳಂಥ ದೋಷಗಳಿಗಾಶ್ರಯ, ನೂರಾರು ಆಸೆಗಳನ್ನು ಹುಟ್ಟಿಸಿ ಅಧರ್ಮಮಾಡಿಸುತ್ತದೆ. ನರಕಕ್ಕೆ ಹೆಬ್ಬಾಗಿಲಿನಂತಿದೆ. ಒಂದು ದಿನ ಬೂದಿಯಾಗುವಂತಹುದು. ಇಂಥ ವ್ಯರ್ಥವಾದ ಶರೀರವನ್ನು ಯಮುನಾ ಸ್ನಾನ ಒಂದಿಲ್ಲದಿದ್ದರೆ ಏಕೆ ಹೊತ್ತು ಕೊಳ್ಳಬೇಕು ?

ಅವೈಷ್ಣವನಾದ ವಿಪ್ರ, ಪಿಂಡದಾನವಿಲ್ಲದ ಶ್ರಾದ್ಧ, ಬ್ರಾಹ್ಮಣನಲ್ಲಿ ಭಕ್ತಿಯಿಲ್ಲದ ಕ್ಷತ್ರಿಯ, ಆಚಾರವಿಲ್ಲದ ವೈಶ್ಯ, ಡಂಭಾಚಾರಕ್ಕೆ ಮಾಡುವ ಧರ್ಮಾಚರಣೆ, ಕೋಪವನ್ನು

ಕಳೆಯದ ತಪಸ್ಸು, ದಾರ್ಢ್ಯವಿಲ್ಲದ ಜ್ಞಾನ, ಕಾರ್ಯಕಾಲಕ್ಕೊದಗದ ಶಾಸ್ತ್ರಪಾಂಡಿತ್ಯ. ಪರಪುರುಷನಲ್ಲಿ ಆಸಕ್ತಳಾದ ಗೃಹಿಣಿ, ಸ್ತ್ರೀಸುಖವನ್ನು ಬಯಸುವ ಬ್ರಹ್ಮಚಾರಿ. ಜ್ವಲಿಸದ ಅಗ್ನಿಯಲ್ಲಿ ಮಾಡಿದ ಹೋಮ, ಕಪಟಭಕ್ತಿ, ಜೀವನೋಪಾಯವಾಗಿ ಬಳಸಲ್ಪಡುವ ಕನ್ಯೆ, ತನ್ನ ಉದರ ಪೂರ್ತಿಗಾಗಿ ಮಾಡಿದ ಅಡಿಗೆ, ಪಾಪಿಯ ಯೋಗಾಭ್ಯಾಸ, ಲೋಭಿಯ ಹಣ, ಅಭ್ಯಾಸಮಾಡದೆ ಪಡೆದ ವಿದ್ಯೆ, ವಿರೋಧ ಉಂಟುಮಾಡುವ ಬುದ್ಧಿಶಕ್ತಿ, ಜೀವನೋಪಾಯವಾದ ವಿದ್ಯೆ ವ್ರತಗಳು, ಅಸತ್ಯ ಚಾಡಿಕೋರತನಗಳಿಂದ ತುಂಬಿದ ಮಾತು, ಮಾರಣ ಮುಂತಾದ ಘಟಕರ್ಮದಲ್ಲಿ ಬಳಸಿದ ಮಂತ್ರವಿದ್ಯೆ, ಮನಸ್ಸಿನ ಏಕಾಗ್ರತೆಯಿಲ್ಲದ ಜಪ, ವೇದಾಭ್ಯಾಸವಿಲ್ಲದ ದ್ವಿಜನಿಗೆ ಕೊಟ್ಟದಾನ. ನಾಸ್ತಿಕನಾದ ಮಾನವ, ಶ್ರದ್ಧೆ ಇಲ್ಲದ ಮಾಡಿದ ಪರಲೋಕ ಸಾಧನೆಗಳು ಇವುಗಳಂತೆ ಯಮುನಾ ಸ್ನಾನದ ಭಾಗ್ಯದಿಂದ ವಂಚಿತನಾದವನು ಜನ್ಮವೂ ಹಾಳು.

ಪಾಪಗಳೆಲ್ಲವೂ ಯಮುನಾ ತೀರದಲ್ಲಿ ಭಯದಿಂದ ನಡುಗುತ್ತವೆ. ಏಕೆಂದರೆ ಸ್ನಾನಮಾಡುವಾಗ ಆ ನೀರು ಬೆಂಕಿಯಂತಾಗಿ ಪಾಪಗಳನ್ನು ಸುಡುತ್ತದೆ. ಪಾಪ ಮುಕ್ತನಾದ ಮನುಷ್ಯ ಮೋಡದ ಮರೆಯಿಲ್ಲದ ಚಂದ್ರನಂತೆ ಪ್ರಕಾಶಿಸುತ್ತಾನೆ. ಸ್ವರ್ಗವನ್ನು ಹೊಂದುತ್ತಾನೆ. ವಿಷ್ಣುಭಕ್ತಿಯಲ್ಲಿ ಹೇಗೆ ಎಲ್ಲ ಜಾತಿಯವರಿಗೂ ಅಧಿಕಾರವಿದೆಯೋ ಹಾಗೆ ಯಮುನಾ ಸ್ನಾನಕ್ಕಿಂತ ಮಿಗಿಲಾದ ಮಂತ್ರವಿಲ್ಲ, ತಪಸ್ಸಿಲ್ಲ. ಪ್ರಾಯಶ್ಚಿತ್ತ ಕರ್ಮವೂ ಇಲ್ಲ.

ಹಿಂದಿನ ಜನ್ಮದ ಸಂಸ್ಕಾರವಿದ್ದರೆ ಮಾತ್ರ ಆಧ್ಯಾತ್ಮವಿದ್ಯೆಯಲ್ಲಿ ನಿಪುಣತೆ ಬರುವಂತೆ ಯಮುನಾಸ್ನಾನದಲ್ಲಿ ಶ್ರದ್ಧೆಯುಂಟಾಗುವುದಕ್ಕೂ ಪೂರ್ವಜನ್ಮದ ಸಂಸ್ಕಾರ ಬೇಕು. ಮಧುರೆಯಲ್ಲಿ ಯಮುನಾಸ್ನಾನದಿಂದ ಮೋಕ್ಷವೇ ದೊರೆಯುತ್ತದೆ. ಬೇರೆಕಡೆ ಮಹಾಪಾತಕಗಳನ್ನೆಲ್ಲ ಪರಿಹರಿಸಬಲ್ಲ ಯಮುನೆ ಮಥುರೆಯಲ್ಲಿ ವಿಷ್ಣುಭಕ್ತಿಯನ್ನು ಕೊಡುವಳು. ಭಕ್ತಿಯಿಂದ ಸ್ನಾನಮಾಡಿದರೆ ಕೋಟಿಕಲ್ಪಗಳಕಾಲ ವಿಷ್ಣುಸನ್ನಿಧಿಯಲ್ಲಿ ವಾಸ ಮಾಡಿಸುವಳು. ಪಿತೃಗಳನ್ನೂ ನೂರಾರುಕಲ್ಪಗಳ ಕಾಲ ತೃಪ್ತಿಯಿಂದಿರಿಸುವಳು. ಯಮುನಾ ಜಲಪಾನ ಮಾಡಿದಮೇಲೆ ಸಾವಿರಸಲ ಪಂಚಗವ್ಯ ಪ್ರಾಶನ ಮಾಡಬೇಕಾಗಿಲ್ಲ. ಕೋಟಿಸಲ ತೀರ್ಥಸ್ನಾನ ಮಾಡಬೇಕಾಗಿಲ್ಲ. ಯಮುನಾತೀರದಲ್ಲಿ ಮಾಡಿದ ದಾನ ಹೋಮಗಳೂ ಕೋಟಿಫಲ ನೀಡಬಲ್ಲವು.

**ನಾರದ :-** ಯುಧಿಷ್ಠಿರ, ಈ ಯಮುನಾ ಸ್ನಾನ ಮಾಹಾತ್ಮ್ಯದ ವಿಷಯದಲ್ಲಿ ಒಂದು ಇತಿಹಾಸ ಉಂಟು. ಹಿಂದೆ ಕೃತಯುಗದಲ್ಲಿ ನಿಷಧನಗರದಲ್ಲಿ ಹೇಮ ಕುಂಡಲನೆಂಬೊಬ್ಬ ವೈಶ್ಯನಿದ್ದ. ಕುಬೇರನಂಥ ಶ್ರೀಮಂತಿಕೆಯ ಜೊತೆಗೆ ದೇವದ್ವಿಜಅಗ್ನಿಗಳಲ್ಲಿ ಭಕ್ತಿಯೂ ಅವನಲ್ಲಿತ್ತು. ಕೃಷಿವಾಣಿಜ್ಯಪಶುಪಾಲನೆಗಳಿಂದ ಎಂಟು ಕೋಟಿ ಸುವರ್ಣಗಳನ್ನು ಸಂಪಾದಿಸಿದ್ದ. ತಲೆ ಕೂದಲು ನೆರೆತು ಬೆಳ್ಳಗಾದಾಗ ಈ ಸಂಸಾರದ ಕ್ಷಣಿಕತೆಯನ್ನರಿತು ತನ್ನ ಐಶ್ವರ್ಯದ ಆರನೆಯ ಒಂದಂಶವನ್ನು ಧರ್ಮಕಾರ್ಯಗಳಿಗೆ ತೊಡಗಿಸಿದ. ವಿಷ್ಣುಶಿವಾಲಯಗಳು ಕೆರೆಬಾವಿಗಳು ಉಪವನ ತೋಟಗಳು ಇವನ್ನು ನಿರ್ಮಿಸಿದ. ಅನ್ನದಾನ ಮುಂತಾದ ಕಾರ್ಯಗಳನ್ನು ನಡೆಸಿದ. ದೇವಪೂಜೆ ಅತಿಥಿ ಸತ್ಕಾರಗಳನ್ನೂ ನಡೆಸಿದ. ಆಗ ಅವನಿಗಿಬ್ಬರು ಮಕ್ಕಳು ಹುಟ್ಟಿದರು.

ಶ್ರೀ ಕುಂಡಲ ವಿಕುಂಡಲ ಎಂಬ ಆ ಇಬ್ಬರು ಮಕ್ಕಳಿಗೆ ತನ್ನ ಆಸ್ತಿ ಪಾಸ್ತಿಗಳನ್ನು ವಹಿಸಿಕೊಟ್ಟು ಹೇಮಕುಂಡಲ ಕಾಡಿಗೆ ಹೋಗಿ ಹರಿಯನ್ನು ತಪಸ್ಸಿನಿಂದ ಆರಾಧಿಸಿದ. ಅವನೊಲಿಮೆ ಪಡೆದು ವಿಷ್ಣುಲೋಕವನ್ನು ಸೇರಿದ.

ಇತ್ತ ತರುಣರಾದ ಆ ಇಬ್ಬರು ಮಕ್ಕಳೂ ಐಶ್ವರ್ಯಮದದಿಂದ ಕೊಬ್ಬಿ ಹಿರಿಯರ ಮಾತುಗಳನ್ನೂ ಕಡೆಗಣಿಸಿ ದುಶ್ಚಟಗಳಿಗೆ ಬಲಿಯಾದರು. ಪರಸ್ತ್ರೀಯರನ್ನೂ ವೇಶ್ಯಯರನ್ನೂ ಸಂಸರ್ಗಮಾಡಿದರು. ಧರ್ಮಕಾರ್ಯಗಳನ್ನು ತ್ಯಜಿಸಿದರು. ದುಂದು ವೆಚ್ಚಮಾಡಿ ಎಲ್ಲ ಸಂಪತ್ತನ್ನೂ ಕಳೆದುಕೊಂಡರು. ಸತ್ಪಾತ್ರರಿಗೆ ಒಂದಿಷ್ಟೂ ದಾನಮಾಡದೆ ಎಲ್ಲವನ್ನೂ ಅಪಾತ್ರರಿಗೆ ಕೊಟ್ಟು ಬಂಜರುನೆಲದಲ್ಲಿ ಬೀಜ ಬಿತ್ತಿದಂತೆ ವ್ಯರ್ಥಗೊಳಿಸಿದರು. ಇದರ ಪರಿಣಾಮವಾಗಿ ಹೊಟ್ಟೆಗೆ ಹಿಟ್ಟಿಲ್ಲದಂತಾಯಿತು. ಬಂಧುಮಿತ್ರರು ಕೈಬಿಟ್ಟರು. ಬೇರೆ ಉಪಾಯವಿಲ್ಲದೆ ಕಳ್ಳತನವು ದರೋಡೆಗಳಿಗಿಳಿದು ರಾಜಭಯದಿಂದ ಕಾಡಿನಲ್ಲಿರತೊಡಗಿದರು. ಕಾಡಿನಲ್ಲಿಯೂ ಮೃಗಪಕ್ಷಿಗಳನ್ನು ಬೇಟೆಯಾಡುತ್ತ ಮಾಂಸಾಹಾರಿಗಳಾದರು. ಒಂದು ದಿನ ಅಣ್ಣನನ್ನು ಹುಲಿ ತಿಂದಿತು, ತಮ್ಮನನ್ನು ಹಾವು ಕಡಿಯಿತು. ಯಮದೂತರಿಬ್ಬರನ್ನೂ ಸೆಳೆದೊಯ್ದರು. ಯಮನ ಮುಂದೆ ನಿಲ್ಲಿಸಿ 'ಧರ್ಮರಾಜ ನಿನ್ನಾಜ್ಞೆಯಂತೆ ಈ ಪಾಪಿಗಳಿಬ್ಬರನ್ನೂ ತಂದಿದ್ದೇವೆ. ಮುಂದೇನು ಮಾಡಬೇಕು. ಆಜ್ಞಾಪಿಸು' ಎಂದರು. ಯಮನು ಚಿತ್ರಗುಪ್ತನೊಂದಿಗೆ ಸಮಾಲೋಚನೆಮಾಡಿ ಹೇಳಿದ, 'ದೂತರೆ, ಅಣ್ಣನನ್ನು ನರಕಕ್ಕೆ ತಳ್ಳಿ ತಮ್ಮನನ್ನು ಸ್ವರ್ಗಕ್ಕೊಯ್ಯಿರಿ' ಯಮನ ಅಣತಿಯಂತೆ ಅಣ್ಣನನ್ನು ನರಕ್ಕೊಯ್ದರು ಒಬ್ಬ ದೂತನು ತಮ್ಮನ ಬಳಿಗೆ ಬಂದು ಮೃದು ಮಧುರ ಮಾತಿನಿಂದ ವಿಕುಂಡಲ, ಸ್ವರ್ಗಕ್ಕೆ ಕರೆದೊಯ್ಯುವೆ, ಬಾ, ಅಲ್ಲಿ ದಿವ್ಯ ಭೋಗಗಳನ್ನು ಅನುಭವಿಸು.'

**ನಾರದ** :- ವಿಕುಂಡಲನಿಗೆ ಪರಮಾನಂದವಾಯಿತು. ಜತೆಗೆ ಆಶ್ಚರ್ಯವೂ ಉಂಟಾಯಿತು. ಸ್ವರ್ಗವನ್ನು ಪಡೆಯಲು ನಾನೇನು ಅಂಥ ಪುಣ್ಯ ಮಾಡಿದ್ದೇನೆ ಎಂದು ಆಲೋಚಿಸಿ ಬಗೆ ಹರಿಯದೆ, ದೂತನನ್ನೇ ಕೇಳಿದ.

**ವಿಕುಂಡಲ** :- ದೇವದೂತನೆ, ನನಗೊಂದು ದೊಡ್ಡ ಸಂದೇಹ. ನಾವಿಬ್ಬರು ಅಣ್ಣ ತಮ್ಮಂದಿರು ಒಂದೇ ಮನೆಯಲ್ಲಿ ಹುಟ್ಟಿದೆವು. ಒಂದೇ ರೀತಿ ಬಾಳಿದೆವು. ಇಬ್ಬರಿಗೂ ದುರ್ಮರಣವೆ ಒದಗಿತು. ಒಬ್ಬ ಯಮನ ಮುಂದೆ ನಾವಿಬ್ಬರೂ ಬಂದು ನಿಂತೆವು. ಅವನನ್ನು ನರಕಕ್ಕೆ ಎಸೆದರು. ನನ್ನನ್ನು ಸ್ವರ್ಗಕ್ಕೆ ಕರೆದೊಯ್ಯುತ್ತಿರುವೆ. ಏನು ಕಾರಣ, ಹೇಳು.

**ದೇವದೂತ** :- ತಾಯಿ ತಂದೆ ಮಗ ಹೆಂಡತಿ ಸೊಸೆ ಸೋದರ ಎನ್ನುವುದೆಲ್ಲ ಪೂರ್ವಕರ್ಮದ ಫಲವನ್ನನುಭವಿಸಲೆಂದು ಜನ್ಮವನ್ನಾಧರಿಸಿ ಇಟ್ಟ ಹೆಸರುಗಳು. ಒಂದು ಮರದಲ್ಲಿ ಒಟ್ಟು ಸೇರಿದ ಹಕ್ಕಿಗಳಂತೆ ಇವರೆಲ್ಲ ಬಂದು ಸೇರಿದವರು. ನಮಗೆ ಉಣಲು ಸಿಗುವುದು ನಮ್ಮ ಪೂರ್ವಾರ್ಜಿತ ಕರ್ಮವೊಂದೆ. ಇದು ನಾನು ನಿನಗೆ ಪ್ರೀತಿಯಿಂದ ಹೇಳುತ್ತಿರುವ ನಿಜ ಸಂಗತಿ. ಒಬ್ಬನು ಮಾಡಿದ ಕರ್ಮ ಅವನನ್ನು ಬಿಟ್ಟು ಇನ್ನೊಬ್ಬನಿಗೆ ಅಂಟಿಕೊಳ್ಳಲಾರದು. ನಿನ್ನ ಸೋದರ ಘೋರ ಪಾಪ ಮಾಡಿ ನರಕವನ್ನು ಸೇರಿದ. ನೀನು ಪುಣ್ಯಮಾಡಿ ಸ್ವರ್ಗಕ್ಕೆ ಹೋಗುತ್ತಿರುವೆ.

**ವಿಕುಂಡಲ** :- ಚಿಕ್ಕಂದಿನಿಂದಲೂ ನಾನು ಬರಿ ಪಾಪಕರ್ಮಗಳಲ್ಲಿಯೇ ಆಸಕ್ತನಾಗಿದ್ದವನು. ಒಂದೂ ಒಳ್ಳೆಯ ಕೆಲಸ ಮಾಡಿರುವುದನ್ನರಿಯೆ. ನೀನು ತಿಳಿದಿದ್ದರೆ ಹೇಳು. ನಾನೇನು ಪುಣ್ಯ ಕರ್ಮಮಾಡಿದ್ದೇನು ?

**ದೇವದೂತ** :- ನೀನು ಮಾಡಿದ ಪುಣ್ಯ ಕರ್ಮವೇನೆಂದು ನೀನು ತಿಳಿಯದಿದ್ದರೂ ನಾನು ತಿಳಿದಿದ್ದೇನೆ, ಹೇಳುವೆನು, ಕೇಳು. ಹರಿ ಮಿತ್ರನ ಮಗ ಸುಮಿತ್ರ, ವೇದಜ್ಞನಾದ ಒಬ್ಬ ಬ್ರಾಹ್ಮಣ. ಅವನ ಆಶ್ರಮ ಯಮುನೆಯ ದಕ್ಷಿಣ ತೀರದಲ್ಲಿತ್ತು. ನೀನು ಕಾಡಿನಲ್ಲಿದ್ದಾಗ ಅವನೊಂದಿಗೆ ಸ್ನೇಹ ಮಾಡಿದೆ. ಅದರಿಂದ ಎರಡು ಮಾಘ ಮಾಸಗಳಲ್ಲಿ ಯಮುನಾ ಸ್ನಾನ ಮಾಡಿದೆ. ಯಮುನೆಯ ಹೆಸರೆ ಪಾಪಹರ. ಅಂಥ ಯಮುನೆಯಲ್ಲಿ ಎರಡು ಮಾಘ ಮಾಸಗಳಲ್ಲಿ ನೀನು ಸ್ನಾನ ಮಾಡಿರುವದರಿಂದ ಒಂದು ಮಾಘ ಸ್ನಾನ ನಿನ್ನೆಲ್ಲ ಪಾಪಗಳನ್ನು ತೊಳೆಯಿತು. ಇನ್ನೊಂದು ಸ್ವರ್ಗವನ್ನೇ ತಂದುಕೊಟ್ಟಿತು. ನಿನ್ನಣ್ಣನು ಮಾತ್ರ ನರಕಯಾತನೆ ಹೊಂದುವನು. ಅವನನ್ನು ಅಲ್ಲಿ ಕತ್ತಿಯಿಂದ ಇರಿಯುತ್ತಾರೆ. ಮುದ್ಗರದಿಂದ ಹೊಡೆಯುತ್ತಾರೆ. ಕಲ್ಲಿನ ಮೇಲೆ ಎಸೆಯುತ್ತಾರೆ. ಉರಿವ ಕೆಂಡಗಳಲ್ಲಿ ಸುಡುತ್ತಾರೆ..

**ವಿಕುಂಡಲ** :- ಸಾಕು, ದೇವದೂತನೆ, ಏಳು ಹೆಜ್ಜೆ ಜತೆಯಲ್ಲಿ ನಡೆದರೆ ಮೈತ್ರಿ ಉಂಟಾಯಿತೆಂದು ಹೇಳುತ್ತಾರೆ. ಅದರಿಂದ ನೀನು ನನ್ನ ಮಿತ್ರನಾಗಿರುವೆ. ನನಗೊಂದು ಉಪಕಾರಮಾಡು. ನೀನು ತಿಳಿದವನು. ಯಮಲೋಕದರ್ಶನವಾಗದಂತೆ ಮಾಡಬಲ್ಲ ಕರ್ಮ ಯಾವುದು ? ಯಾವ ಕರ್ಮ ನರಕ ಸಾಧನ ಇದನ್ನು ನನಗೆ ಉಪದೇಶಿಸು.

**ದೇವದೂತ** :- ನಿನ್ನ ಪಾಪಗಳೆಲ್ಲ ದೂರವಾಗಿರುವುದರಂದ ನೀನೀ ಪ್ರಶ್ನೆ ಮಾಡುತ್ತಿರುವೆ.

**ವಿಶುದ್ಧೇ ಹೃದಯೇ ಪುಂಸಾಂ ಬುದ್ಧಿಃ ಶ್ರೇಯಸಿ ಜಾಯತೇ**

ಮನುಷ್ಯರ ಶುದ್ಧ ಹೃದಯದಲ್ಲಿ ಮಾತ್ರ ಶ್ರೇಯಸ್ಸಿನ ಕುರಿತು ಆಲೋಚನೆ ಮೂಡುತ್ತದೆ.

ನಾನು ನನ್ನ ಕರ್ತವ್ಯ ನಿರ್ವಹಣೆಯಲ್ಲಿ ವ್ಯಗ್ರನಾಗಿರುವುದರಿಂದ ನಿನಗೆ ಉಪದೇಶಮಾಡಲು ಅವಕಾಶವಿಲ್ಲ. ಆದರೂ ನಿನ್ನ ಸ್ನೇಹಕ್ಕೆ ವಶನಾಗಿ ಯಥಾಶಕ್ತಿ ಹೇಳುತ್ತೇನೆ ಕೇಳು. ತ್ರಿಕರಣಗಳಿಂದಲೂ ಪರರಿಗೆ ಪೀಡೆ ಉಂಟುಮಾಡದವನು ಯಮಲೋಕಕ್ಕೆ ಹೋಗಲಾರ. ಪ್ರಾಣಿಹಿಂಸೆ ಮಾಡುವವನು ಎಷ್ಟು ವೇದ ಓದಿದರೂ ಎಷ್ಟು ದಾನ ಮಾಡಿದರೂ ಯಾಗಯಜ್ಞ ತಪಸ್ಸುಗಳನ್ನು ನಡೆಸಿದರೂ ಸ್ವರ್ಗ ಪಡೆಯಲಾರ.

**ಅಹಿಂಸಾ ಪರಮೋಧರ್ಮೋ ಹ್ಯಹಿಂಸೈವ ಪರಂ ತಪಃ ।**
**ಅಹಿಂಸಾ ಪರಮಂ ದಾನಂ ಇತ್ಯಾಹುರ್ಮುನಯಃ ಸದಾ ॥**

ಮುನಿಗಳು ಸದಾ ಹೇಳುವ ಮಾತು ಒಂದೆ ಅಹಿಂಸೆ ಪರಮಧರ್ಮ, ಅದುವೆ ದೊಡ್ಡ ತಪಸ್ಸು. ಅದುವೆ ಮಹಾದಾನ.

ಎಲ್ಲ ಪ್ರಾಣಿಗಳನ್ನೂ ತನ್ನಂತೆ ತಿಳಿಯುತ್ತಾರೆ ದಯಾಳುಗಳು. ಪ್ರಾಣಿಹಿಂಸೆ ಮಾಡುವವರು ನರಕದಲ್ಲಿ ನೆತ್ತರು ಕೀವುಗಳನ್ನು ಕುಡಿಯುತ್ತಾರೆ ನಾಯಿ ಮಾಂಸ

ತಿನ್ನುತ್ತಾರೆ. ಪರಸ್ಪರ ದ್ವೇಷದಿಂದ ಕಾದಿ ಹರಿದು ತಿನ್ನುತ್ತಾರೆ. ಕ್ರೂರಯಾತನೆಯಿಂದ ಅಳುತ್ತ ಅನೇಕ ಕಲ್ಪಗಳಕಾಲ ಅಲ್ಲಿ ವಾಸಮಾಡುತ್ತಾರೆ. ಬಳಿಕ ಕ್ರಿಮಿಗಳಾಗಿ ಹುಟ್ಟುತ್ತಾರೆ. ಅನಂತರ ಮರಗಿಡಗಳಾಗಿ ತಿರ್ಯಕ್ ಜಂತುಗಳಾಗಿ ಹುಟ್ಟಿ ಕೊನೆಗೆ ಕುಂಟ ಕುರುಡ ಅಂಗವಿಕಲ ದರಿದ್ರ ಮಾನವರಾಗಿ ಹುಟ್ಟುತ್ತಾರೆ. ಪ್ರಾಣಹಿಂಸೆಯಿಂದ ಇಹಪರಗಳೆರಡರಲ್ಲಿಯೂ ಸುಖವಿಲ್ಲ.

**ಯೇ ನ ಹಿಂಸಂತಿ ಭೂತಾನಿ ನ ತೇ ಬಿಭ್ಯತಿ ಕುತ್ರಚಿತ್**
ಯಾರು ಪ್ರಾಣ ಹಿಂಸೆಮಾಡುವುದಿಲ್ಲವೊ ಅವರಿಗೆ ಎಲ್ಲಿಯೂ ಭಯವಿಲ್ಲ.

**ಪ್ರವಿಶಂತಿ ಯಥಾ ನದ್ಯಃ ಸಮುದ್ರ ಮೃಜುವಕ್ರಗಾಃ ।**
**ಸರ್ವೇ ಧರ್ಮಾ ಅಹಿಂಸಾಯಾಂ ಪ್ರವಿಶಂತಿ ತಥಾ ದೃಢಂ ॥**

ನದಿಗಳು ನೇರವಾಗಿಯೋ ಸುತ್ತಿ ಬಳಸಿಯೋ ಹೋಗಿ ಸೇರುವುದು ಸಮುದ್ರವನ್ನೇ. ಹಾಗೆಯೆ ಎಲ್ಲ ಧರ್ಮಗಳ ಗುರಿಯೂ ಅಹಿಂಸೆ ಒಂದೇ ಆಗಿದೆ.

ಶಾಸ್ತ್ರದ ವಿಧಿನಿಷೇಧಗಳನ್ನು ಪಾಲಿಸುವವರು ಯಮಲೋಕಕ್ಕೆ ಹೋಗುವುದಿಲ್ಲ. ವರ್ಣಾಶ್ರಮ ಧರ್ಮಾಚರಣೆಮಾಡುತ್ತ ಇಂದ್ರಿಯ ನಿಗ್ರಹಮಾಡಿಕೊಳ್ಳುವವರು. ಬ್ರಹ್ಮಲೋಕಕ್ಕೆ ಹೋಗುವರು. ಇಷ್ಟಾಪೂರ್ತಗಳು ಪಂಚಯಜ್ಞಗಳು, ಭೂತದಯೆ, ವಿಷಯವೈರಾಗ್ಯ, ವೇದಾಭ್ಯಾಸ ಅಗ್ನಿಪೂಜೆಗಳು ಸ್ವರ್ಗವನ್ನು ಹೊಂದಿಸುವುವು. ಶತ್ರುಗಳಿದಿರು ದೀನವದನವನ್ನು ತೋರದೆ ಶೌರ್ಯದಿಂದ ಕಾದಿ ಮಡಿದವರು ಸೂರ್ಯಲೋಕವನ್ನು ಸೇರುತ್ತಾರೆ. ಅನಾಥರು ಸ್ತ್ರೀಯರು ದ್ವಿಜರು ಶರಣಾಗತರು ಇವರಿಗಾಗಿ ಪ್ರಾಣತ್ಯಾಗಮಾಡುವವನೂ ಕುಂಟರು ಕುರುಡರು ಬಾಲಕರು ವೃದ್ಧರು ರುಗ್ಣರು ದರಿದ್ರರು ಇವರನ್ನು ಪೋಷಿಸುವವನೂ ಕೆಸರಲ್ಲಿ ಬಿದ್ದ ಹಸು, ರೋಗಬಿದ್ದ ದ್ವಿಜ ಇವರನ್ನು ರಕ್ಷಿಸುವವನೂ ಗೋವುಗಳನ್ನು ಹಿಂಸಿಸದೆ ಅವುಗಳ ಸೇವೆ ಮಾಡುವವನೂ ಬಾಯಾರಿದ ಗೋವುಗಳಿಗಾಗಿ ಒಂದು ಸಣ್ಣ ನೀರಿನ ಹೊಂಡವನ್ನು ಮಾಡುವವನೂ, ಪ್ರಾಣಿಗಳು ಸ್ವೇಚ್ಛೆಯಿಂದ ನೀರು ಕುಡಿವಂತೆ ಕೆರೆ ಬಾವಿಗಳನ್ನು ನಿರ್ಮಿಸುವವನೂ ಸ್ವರ್ಗಭಾಗಿಯಾಗುತ್ತಾನೆ.

ಪ್ರಾತಃ ಸ್ನಾನ ಬಾಹ್ಯ ಅಂತರ ಮಲಗಳೆರಡನ್ನೂ ಕಳೆಯಬಲ್ಲದು. ಸ್ನಾನ ಮಾಡದವ ಅಶುಚಿ, ಪಾಪಿ, ನರಕಭಾಗಿ, ಪಿತೃದೇವತೆಗಳು ಅವನಿಂದ ವಿಮುಖರಾಗುತ್ತಾರೆ. ಭೂ ಸುವರ್ಣ ಗೋದಾನ ಮುಂತಾದ ಷೋಡಶ ದಾನಗಳೂ ಸ್ವರ್ಗಸಾಧನ, ಪುಣ್ಯತಿಥಿಗಳಲ್ಲಿ ವ್ಯತೀಪಾತ ಸಂಕ್ರಮಣಗಳಲ್ಲಿ ಸ್ನಾನ ದಾನಗಳನ್ನು ಮಾಡುವವರಿಗೆ ನರಕ ಭಯವಿಲ್ಲ. ಇಹದಲ್ಲಿಯೂ ದುಃಖವಿಲ್ಲ. ಸತ್ಯವನ್ನಾಡುವುದು, ಹೆಚ್ಚು ಮಾತಾಡದಿರುವುದು, ಸವಿಮಾತು, ಜಂಭ ಕೊಚ್ಚಿಕೊಳ್ಳದಿರುವುದು, ಅಸೂಯೆ ಕೋಪಗಳನ್ನು ಮಾಡದಿರುವುದು, ಭೂತದಯೆ ಪರರ ಗುಣಗಳನ್ನು ಹೊಗಳುವುದು, ಮನಸ್ಸಿನಿಂದಲೂ ಪರದ್ರವ್ಯವನ್ನು ಅಪಹರಿಸದಿರುವುದು ಇವೆಲ್ಲವು ನರಕ ದರ್ಶನವನ್ನು ತಪ್ಪಿಸುವುವು. ಪರನಿಂದೆ, ನಾಸ್ತಿಕತೆ ಎಲ್ಲ ಪಾಪಗಳಿಗಿಂತ ಹೆಚ್ಚಿನವು. ಕಟುಮಾತುಗಳನ್ನಾಡುವವನು ನರಕಕ್ಕೆ ಹೋಗುವುದರಲ್ಲಿ ಸಂಶಯವಿಲ್ಲ.

**ನ ತೀರ್ಥೈರ್ನತಪೋಭಿಶ್ಚ ಕೃತಘ್ನಸ್ಯಾಸ್ತಿ ನಿಷ್ಕೃತಿಃ**

ಯಾವ ತೀರ್ಥಯಾತ್ರೆಯಿಂದಲೂ ತಪಸ್ಸಿನಿಂದಲೂ ಕೃತಘ್ನತೆ ಎಂಬ ಪಾಪಕ್ಕೆ ಪರಿಹಾರವಿಲ್ಲ. ತೀರ್ಥಸ್ನಾನ ಇಂದ್ರಿಯ ನಿಗ್ರಹಗಳಿಂದ ಯಮಲೋಕ ಪ್ರವೇಶ ಎಲ್ಲದಂತಾಗುವುದು. ತೀರ್ಥದಲ್ಲಿ ಪಾಪಾಚರಣೆ ಸಲ್ಲದು. ತೀರ್ಥವನ್ನು ಜೀವನೋಪಾಯವಾಗಿ ಬಳಸಿಕೊಳ್ಳಕೂಡದು. ತೀರ್ಥದಲ್ಲಿ ಪ್ರತಿಗ್ರಹ, ಧರ್ಮದ ವಿಕ್ರಯ ಇವೆರಡೂ ಸಲ್ಲದು. ಎಷ್ಟು ಪಾಪ ಮಾಡಿದರೂ ಒಮ್ಮೆ ಗಂಗಾಸ್ನಾನ ಮಾಡಿದರೆ ನರಕವಿಲ್ಲ. ಗಂಗಾ ಸ್ನಾನಕ್ಕೆ ಯಾವ ವ್ರತದಾನ ತಪಸ್ಸು ಯಜ್ಞಗಳೂ ಸಾಟಿಯಲ್ಲ. ಇತರ ತೀರ್ಥಗಳಂತೆ ಗಂಗೆಯೂ ಒಂದು ತೀರ್ಥವೆಂದು ಹೇಳುವವನು ರೌರವನರಕಕ್ಕೆ ಹೋಗುವನು.

**ಧರ್ಮದ್ರವಂ ಹ್ಯಪಾಂ ಬೀಜಂ ವೈಕುಂಠ ಚರಣಚ್ಯುತಂ**
**ಧೃತಂ ಮೂರ್ಧ್ನಿ ಮಹೇಶೇನ ಯದ್ ಗಾಂಗಮಮಲಂ ಜಲಂ ॥**
**ತದ್ ಬ್ರಹ್ಮೈವ ನ ಸಂದೇಹೋ ನಿರ್ಗುಣಂ ಪ್ರಕೃತೇಃ ಪರಂ**
**ತೇನ ಕಿಂ ಸಮತಾಂ ಗಚ್ಛೇದಪಿ ಬ್ರಹ್ಮಾಂಡ ಗೋಚರೇ ॥**

ಗಂಗಾಜಲವು ಪುಣ್ಯದ ದ್ರವರೂಪ, ಎಲ್ಲ ನೀರಿಗೂ ಮೂಲ. ಹರಿಯ ಪಾದದಿಂದಿಳಿದು ಶಿವನ ತಲೆಯಲ್ಲಿ ಧರಿಸಲ್ಪಟ್ಟ ಗಂಗಾಜಲವು ಪ್ರಕೃತಿಯನ್ನು ಮೀರಿದ, ಗುಣತ್ರಯ ರಹಿತನಾದ ಪರಬ್ರಹ್ಮನ ಪೂರ್ಣ ಸನ್ನಿಧಾನದಿಂದ ಕೂಡಿದೆ. ಬ್ರಹ್ಮಾಂಡದಲ್ಲಿ ಯಾವುದು ಅದಕ್ಕೆ ಸಮಾನವಾದೀತು ? ಗಂಗಾ ಗಂಗಾ ಎಂದು ನೂರಾರು ಯೋಜನಗಳ ದೂರದಲ್ಲಿ ನಾಮೋಚ್ಚಾರಣೆ ಮಾಡಿದರೂ ನರಕಭಯ ಇಲ್ಲದಂತಾಗುವುದಾದರೆ ಆ ಗಂಗೆಗೆ ಸಮಾನವೇನಿದ್ದೀತು ?

ಪ್ರತಿ ದಿನ ಹದಿನಾರು ಪ್ರಾಣಾಯಾಮಗಳನ್ನು ಮಾಡುವವನು ಬ್ರಹ್ಮಹತ್ಯಾಪಾತಕದಿಂದ ಮುಕ್ತನಾಗುತ್ತಾನೆ. ತಪಸ್ಸು ವ್ರತ ನಿಯಮ ಗೋದಾನಗಳೆಲ್ಲ ಒಂದು ಪ್ರಾಣಾಯಾಮಕ್ಕೆ ಸಮಾನ. ದರ್ಭೆಯ ತುದಿಯಿಂದ ತಿಂಗಳಿಗೊಂದು ನೀರ ಹನಿಯಂತೆ ಕುಡಿಯುತ್ತ ನೂರು ವರ್ಷವಿದ್ದರೂ ಅದು ಒಂದು ಪ್ರಾಣಾಯಾಮಕ್ಕೆ ಸಮಾನ. ಎಲ್ಲ ಮಹಾಪಾತಕ ಉಪಪಾತಕಗಳನ್ನು ಪ್ರಾಣಾಯಾಮವು ಒಂದು ಕ್ಷಣದಲ್ಲಿ ಸುಡಬಲ್ಲದು. ಪರಸ್ತ್ರೀಯರನ್ನು ತಾಯಿಯಂತೆ ಕಾಣುವವನೆಂದೂ ಯಮಯಾತನೆಯನ್ನು ಕಾಣಲಾರ. ಮನಸ್ಸಿನಲ್ಲಿಯೂ ಪರಸ್ತ್ರೀಯನ್ನು ಸೇವಿಸದವನು ತನ್ನ ಇಹಪರಗಳೆರಡನ್ನೂ ಕಾಪಾಡಿಕೊಂಡು ಭೂಮಿಯನ್ನೇ ಧರಿಸುತ್ತಾನೆ. ಆದರಿಂದ ಧರ್ಮನಿಷ್ಠರು ಪರಸ್ತ್ರೀ ಸಂಪರ್ಕವನ್ನು ತ್ಯಜಿಸಬೇಕು.

**ನಯಂತಿ ಪರದಾರಾಸ್ತು ನರಕಾನೇಕ ವಿಂಶತಿಂ**

ಪರಸ್ತ್ರೀಯು ಇಪ್ಪತ್ತೊಂದು ವಿಧದ ನರಕಗಳೆಲ್ಲಕ್ಕೂ ಒಬ್ಬನನ್ನು ಒಯ್ಯಬಲ್ಲಳು.

ಕೋಪಕ್ಕೆ ಕಾರಣವಿರುವಾಗಲೂ ಕೋಪಕ್ಕೆ ವಶನಾಗದವನು ಸ್ವರ್ಗ ಪಡೆಯುವನು. ತಂದೆತಾಯಿಗಳ ಸೇವೆಮಾಡುವ ಮಗನಿಗೆ ಮುಪ್ಪಿಗಿಂತ ಮೊದಲು ಮರಣ ಬರಲಾರದು. ಗುರುವನ್ನು ತಂದೆಗಿಂತಲೂ ಹೆಚ್ಚಾಗಿ ಆರಾಧಿಸುವವನಿಗೆ ಬ್ರಹ್ಮಲೋಕದಲ್ಲಿ ಆದರದ ಸತ್ಕಾರ ದೊರೆಯುವುದು.

ಶೀಲವನ್ನು ಕಾಪಾಡಿಕೊಳ್ಳುವ ಸ್ತ್ರೀಯರೇ ಧನ್ಯರು. ಶೀಲಕೆಟ್ಟರೆ ಯಮಲೋಕವು ದಾರುಣವೆನಿಸುವುದು. ಅದರಿಂದ ಸ್ತ್ರೀಯರು ದುಷ್ಟ ಸಂಸರ್ಗದಿಂದ ದೂರವಿದ್ದು ಶೀಲ ಉಳಿಸಿಕೊಳ್ಳಬೇಕು ಅದರಿಂದಲೆ ಅವರಿಗೆ ಸ್ವರ್ಗ.

ಶಾಸ್ತ್ರವಿಚಾರ, ವೇದಾಭ್ಯಾಸ, ಪುರಾಣಶ್ರವಣಪಠನಗಳು, ಧರ್ಮಪ್ರಚಾರ, ವೇದಾಂತ ಚಿಂತನ ಇವುಗಳನ್ನು ಮಾಡುವವರಿಂದಲೆ ಜಗತ್ತು ನಿಂತಿದೆ. ಅವರು ಬ್ರಹ್ಮಲೋಕಕ್ಕೆ ಹೋಗಬಲ್ಲರು. ವೇದಶಾಸ್ತ್ರಗಳನ್ನು ಅಜ್ಞರಿಗುಪದೇಶಿಸಿದರೆ ಅವನನ್ನು ವೇದವೆ ಆರಾಧಿಸುವುದು.

ಒಂದು ಅದ್ಭುತ ರಹಸ್ಯವನ್ನು ಹೇಳುತ್ತೇನೆ ಕೇಳು. ಇದು ಯಮಧರ್ಮನಿಗೆ ಸಮ್ಮತ. ಲೋಕಕ್ಕೆ ಅಮೃತಪ್ರಾಯ. ಅದೇನೆಂದರೆ ವೈಷ್ಣವರು ಯಮನನ್ನಾಗಲಿ ಅವನ ಲೋಕವನ್ನಾಗಲಿ ಅಲ್ಲಿರುವ ಭಯಂಕರ ಭೂತಗಳನ್ನಾಗಲಿ ಎಂದೂ ಕಾಣಲಾರರು ನಮಗೆ ಯಮನು ಯಾವಾಗಲೂ ಹೇಳುತ್ತಿರುತ್ತಾನೆ. 'ವೈಷ್ಣವರನ್ನು ಬಿಟ್ಟುಬಿಡಿ. ಅವರು ನನ್ನ ಬಳಿ ಬರತಕ್ಕವರಲ್ಲ.' ಪರಿಹಾಸದಿಂದಲಾದರೂ ಒಮ್ಮೆ ಕೇಶವನನ್ನು ಸ್ಮರಿಸಿದರೆ ಎಲ್ಲ ಪಾಪವೂ ಪರಿಹಾರವಾಗುವುದು. ವಿಷ್ಣುಲೋಕ ದೊರೆಯುವುದು. ದುರಾಚಾರಿಯೆ ಇರಲಿ. ಸದಾಚಾರಿಯೆ ಇರಲಿ ಹರಿಭಜನೆ ಮಾಡುವವನನ್ನು ನೀವು ಸದಾ ಪರಿತ್ಯಜಿಸಿ ಯಾರ ಮನೆಯಲ್ಲಿ ವೈಷ್ಣವರುಣ್ಣುತ್ತಾರೊ, ಯಾರು ವೈಷ್ಣವರೊಡನಾಟದಲ್ಲಿರುವರೊ ಅವರಿಗೆ ನೀವು ಪರಿವಾರದಂತಿರಿ. ಹೀಗೆ ಯಮನಾಜ್ಞೆ ಇದೆ. ಅದರಿಂದ ವೈಷ್ಣವರಿಗೆ ಯಮನ ರಾಜಧಾನಿ ದರ್ಶನವಿಲ್ಲ. ನರಕ ಸಾಗರವನ್ನು ದಾಟ ಪಾರಾಗಲು ವಿಷ್ಣುಭಕ್ತಿಯೆ ಹೊರತು ಬೇರೆ ಸಾಧನವಿಲ್ಲ.

ವೈಷ್ಣವೋ ವರ್ಣ ಬಾಹ್ಯೋಪಿ ಪುನಾತಿ ಭುವನತ್ರಯಂ
ವೈಷ್ಣವನು ಪಂಚಮನೆ ಇದ್ದರೂ ಅವನು ಮೂಲೋಕವನ್ನು ಪವಿತ್ರಗೊಳಿಸಬಲ್ಲ.

ಏತಾವತಾಲ ಮಘನಿರ್ಹರಣಾಯ ಪುಂಸಾಂ
ಸಂಕೀರ್ತನಂ ಭಗವತೋ ಗುಣಕರ್ಮನಾಮ್ನಾಂ
ವಿಕ್ರುಶ್ಯ ಪುತ್ರಮಘವಾನ್ ಯದಜಾಮಿಲೋಪಿ
ನಾರಾಯಣೇತಿ ಮ್ರಿಯಮಾಣ ಇಯಾಯ ಮುಕ್ತಿಂ

ಪಾಪ ಪರಿಹಾರಕ್ಕೆ ಭಗವಂತನ ಗುಣಕರ್ಮನಾಮಗಳ ಸಂಕೀರ್ತನೆಯೊಂದೆ ಸಾಕು. ಏಕೆಂದರೆ ಅಜಾಮಿಲನಂಥ ಪಾಪಿಯೂ ಸಾಯುವಾಗ ನಾರಾಯಣ ಎಂದು ಕೂಗಿದ ಮಾತ್ರಕ್ಕೆ ಆತ ಮುಕ್ತಿ ಪಡೆದನು.

ನರಕದಲ್ಲಿ ಬಹುಕಾಲವಿದ್ದವರೂ ಹರಿಯ ಉಪಾಸನೆಯಿಂದ ಸ್ವರ್ಗಕ್ಕೆ ಹೋಗಬಲ್ಲರು. ವೈಷ್ಣವನ ದಾಸರಾಗಿದ್ದು ಅವನ ಅನ್ನ ಉಣ್ಣುವವರು ಸ್ವರ್ಗಕ್ಕೆ ಹೋಗುವರು.

ಪ್ರಾರ್ಥಯೇದ್ ವೈಷ್ಣವಸ್ಯಾನ್ನಂ ಪ್ರಯತ್ನೇನ ವಿಚಕ್ಷಣಃ ।
ಸರ್ವಪಾಪವಿಶುದ್ಧ್ಯರ್ಥಂ ತದಭಾವೇ ಜಲಂ ಪಿಬೇತ್ ॥

ವಿವೇಕಿಯಾದವನು ಸರ್ವಪಾಪ ಪರಿಹಾರಕ್ಕೆ ವೈಷ್ಣವನ ಅನ್ನವನ್ನೇ ಬಯಸಬೇಕು. ಅದು ಸಿಗದಿದ್ದಲ್ಲಿ ನೀರು ಕುಡಿಯಬೇಕು.

ಗೋವಿಂದ ಎಂದು ಮಂತ್ರ ಜಪಮಾಡುತ್ತ ದೇಹತ್ಯಾಗ ಮಾಡುವವನು ಯಮನನ್ನು ನೋಡಲಾರ, ಅವನನ್ನು ನಾವೂ ನೋಡಲಾರೆವು. ಯಾರು ವಿಧಿವತ್ತಾಗಿ ದ್ವಾದಶಾಕ್ಷರ ಅಷ್ಟಾಕ್ಷರ ಮಂತ್ರಗಳನ್ನು ಜಪಿಸುವರೂ ಅವರ ದರ್ಶನದಿಂದ ಬ್ರಹ್ಮಹತ್ಯಾ ಪಾತಕಿಯೂ ಶುದ್ಧನಾಗಿ ವೈಷ್ಣವ ತೇಜಸ್ಸಿನಿಂದ ಹೊಳೆಯುವನು. ಅವರು ವಿಷ್ಣುವಿನಂತೆ ಶಂಖಚಕ್ರಧಾರಿಗಳಾಗಿ ಅವನೊಳಗೆ ಪ್ರವೇಶಿಸುವರು. ಹೃದಯ, ಸೂರ್ಯ, ಜಲ, ಪ್ರತಿಮೆ ಸ್ಥಂಡಿಲಗಳಲ್ಲಿ ಹರಿಯನ್ನು ಪೂಜಿಸುವವರು ವಿಷ್ಣುಲೋಕವನ್ನು ಸೇರುವರು. ಮೋಕ್ಷವನ್ನು ಬಯಸುವವರು ಸಾಲಗ್ರಾಮದಲ್ಲಿ ವಾಸುದೇವನನ್ನು ಸದಾ ಪೂಜಿಸಬೇಕು. ಅದರಿಂದ ಪ್ರತಿದಿನ ಸಾವಿರ ರಾಜಸೂಯದ ಫಲ ಸಿಗುವುದು. ಕಾಷ್ಠದಲ್ಲಿಯಾಗಾಗ್ನಿಯಂತೆ ಎಲ್ಲೆಡೆ ವ್ಯಾಪ್ತನಾದ ಹರಿ ಸಾಲಗ್ರಾಮದಲ್ಲಿ ವ್ಯಕ್ತನಾಗುತ್ತಾನೆ. ಪಾಪಾಚರಣದಿಂದ ಕರ್ಮದಲ್ಲಿ ಅಧಿಕಾರ ಕಳೆದುಕೊಂಡವನೂ ಸಾಲಗ್ರಾಮದ ಪೂಜೆ ಮಾಡಿದರೆ ಯಮಲೋಕಕ್ಕೆ ಹೋಗುವುದಿಲ್ಲ. ಹರಿಗೆ ಸಾಲಗ್ರಾಮ ವಾಸದಿಂದಾಗುವ ಆನಂದ ಲಕ್ಷ್ಮೀಯಿಂದಲೂ ದೊರೆಯಲಾರದು, ವೈಕುಂಠದಲ್ಲಿದ್ದರೂ ದೊರೆಯಲಾರದು. ಸಾಲಗ್ರಾಮದಲ್ಲಿ ಹರಿಯನ್ನರ್ಚಿಸಿದರೆ ಅಗ್ನಿಹೋತ್ರ ಮಾಡಿದಂತೆ, ಸಮಸ್ತ ಭೂಮಂಡಲವನ್ನೇ ದಾನ ಮಾಡಿದಂತೆ.

ಹನ್ನೆರಡು ಸಾಲಗ್ರಾಮಗಳನ್ನು ವಿಧಿವತ್ತಾಗಿ ಒಂದು ದಿನ ಪೂಜಿಸಿದರೆ ಬಂಗಾರದ ಕಮಲಗಳಿಂದ ಹನ್ನೆರಡುಕೋಟಿ ಲಿಂಗಗಳನ್ನು ಹನ್ನೆರಡು ವರ್ಷ ಪೂಜಿಸಿದ ಫಲ ಸಿಗುತ್ತದೆ. ನೂರು ಸಾಲಗ್ರಾಮಗಳನ್ನರ್ಚಿಸಿದರೆ ವಿಷ್ಣುಲೋಕದಲ್ಲಿ ವಾಸಮಾಡಿ ಚಕ್ರವರ್ತಿಯಾಗಿ ಹುಟ್ಟುತ್ತಾನೆ. ತೀರ್ಥಯಾತ್ರೆ ಬೇಡ, ದಾನ ಯಜ್ಞ ಧ್ಯಾನಗಳು ಬೇಕಾಗಿಲ್ಲ. ಸಾಲಗ್ರಾಮಾರ್ಚನೆಯೊಂದರಿಂದಲೇ ಮೋಕ್ಷ ಪಡೆಯಬಹುದು. ಸಾಲಗ್ರಾಮ ತೀರ್ಥದಲ್ಲಿ ಗಂಗೆ ಗೋದಾವರಿ ನರ್ಮದೆ ಮುಂತಾದ ಮೋಕ್ಷದಾಯಕವಾದ ತೀರ್ಥಗಳೆಲ್ಲದರ ಸನ್ನಿಧಾನವಿರುತ್ತದೆ. ಗಂಧ ಪುಷ್ಪ ಧೂಪ ದೀಪ ನೈವೇದ್ಯ ಗೀತ ವಾದ್ಯಸ್ತೋತ್ರಗಳಿಂದ ಸಾಲಗ್ರಾಮವನ್ನರ್ಚಿಸಿದರೆ ಅನಂತ ಕೋಟಿ ಕಲ್ಪಗಳವರೆಗೂ ವಿಷ್ಣುಲೋಕವಾಸ ಲಭಿಸುವುದು. ಸಾಲಗ್ರಾಮ ರೂಪದಿಂದ ಹರಿ ಇರುವಲ್ಲಿ ಎಲ್ಲ ದೇವತೆಗಳು ಯಜ್ಞಗಳೂ ಹದಿನಾಲ್ಕು ಲೋಕಗಳೂ ಇವೆ. ಅದರ ಬಳಿ ಶ್ರಾದ್ಧ ಮಾಡಿದರೆ ನೂರು ಕಲ್ಪಗಳ ಕಾಲ ಪಿತೃಗಳು ತೃಪ್ತಿಯಿಂದ ಇರುತ್ತಾರೆ. ಸಾಲಗ್ರಾಮ ತೀರ್ಥ ಪ್ರಾಶನ ಮಾಡಿದ ಮೇಲೆ ಸಾವಿರ ಪಂಚಗವ್ಯ ಪ್ರಾಶನ ಬೇಡ, ಕೋಟಿತೀರ್ಥ ಸ್ನಾನವೂ ಬೇಕಾಗಿಲ್ಲ. ಸಾಲಗ್ರಾಮದ ಬಳಿಯ ಮೂರು ಯೋಜನ ಸ್ಥಳವು ಪವಿತ್ರ ತೀರ್ಥವೆನಿಸುತ್ತದೆ. ಅಲ್ಲಿ ದಾನ ಹೋಮಗಳೆಲ್ಲವೂ ಕೋಟಿ ಫಲ ನೀಡಬಲ್ಲವು.

**ಸಾಲಗ್ರಾಮ ಶಿಲಾ ತೋಯಂ ಯಃ ಪಿಬೇದ್ ಬಿಂದುನಾ ಸಮಂ**
**ಮಾತುಃಸ್ತನ್ಯಂ ಪುನರ್ನೈವ ಸ ಪಿಬೇದ್ ವಿಷ್ಣುಭಾಜ್ನರಃ**

ಸಾಲಗ್ರಾಮ ತೀರ್ಥದ ಒಂದು ಹನಿಯನ್ನು ಸೇವಿಸಿದರೂ ವಿಷ್ಣುಲೋಕ ಲಭಿಸುವುದರಿಂದ ಮುಂದೆ ತಾಯಿಯ ಎದೆ ಹಾಲನ್ನು ಸೇವಿಸಬೇಕಾಗಿಲ್ಲ.

ಸಾಲಗ್ರಾಮದ ಬಳಿಯ ಒಂದು ಕ್ರೋಶ ಸ್ಥಳದಲ್ಲಿ ಒಂದು ಕೀಟವು ಸತ್ತರೂ ಅದು ವೈಕುಂಠವನ್ನು ಸೇರುವುದು. ಸಾಲಗ್ರಾಮವನ್ನು ದಾನ ಮಾಡಿದರೆ ಸಮಸ್ತ ಭೂಮಂಡಲವನ್ನೇ ದಾನಮಾಡಿದಂತೆ. ಸಾಲಗ್ರಾಮಕ್ಕೆ ಬೆಲೆಕಟ್ಟಿ ಕ್ರಯವಿಕ್ರಯ ಮಾಡುವವರು ನರಕ ಭಾಗಿಗಳು. ಪಾಪ ಭಯ ಉಳ್ಳವರೆಲ್ಲರೂ ವಾಸುದೇವನ ಸ್ಮರಣೆ ಮಾಡಬೇಕು. ಅವನನ್ನೊಮ್ಮೆ ನಮಿಸಿದರೆ ಕಾಡಿನಲ್ಲಿ ಘೋರತಪಸ್ಸು ಮಾಡಿದ ಫಲವೇ ಇದೆ. ಹರಿನಾಮ ಸಂಕೀರ್ತನೆಯಿಂದ ಎಲ್ಲ ತೀರ್ಥಕ್ಷೇತ್ರಗಳನ್ನೂ ಸೇವಿಸಿದ ಫಲ ಸಿಗುತ್ತದೆ. ಹರಿಯ ಪ್ರಪತ್ತಿಯನ್ನು ಮಾಡುವವರಿಗೆ ಯಮಲೋಕ ನರಕಗಳ ದರ್ಶನವಿಲ್ಲ.

ವೈಷ್ಣವನಾಗಿದ್ದು ಶಿವನಿಂದೆ ಮಾಡುವವನಿಗೆ ವಿಷ್ಣುಲೋಕವಿಲ್ಲ. ಮಹಾನರಕವೇ ಪ್ರಾಪ್ತವಾಗುತ್ತದೆ.

ಪ್ರಸಂಗವಶಾತ್ ಒಂದು ಏಕಾದಶಿ ಉಪವಾಸ ಮಾಡಿದರೂ ಯಮಯಾತನೆ ಇಲ್ಲದಂತಾಗುವುದು ಎಂದು ಲೋಮಶರು ಹೇಳುತ್ತಾರೆ. ಏಕಾದಶಿಗೆ ಸಮನಾದ ಪವಿತ್ರ ದಿನ ಬೇರೊಂದಿಲ್ಲ. ಏಕಾದಶಿ ದ್ವಾದಶಿ ಈ ಎರಡು ಹರಿದಿನಗಳೂ ಪಾಪ ಪರಿಹಾರಕ. ಈ ಶರೀರದಲ್ಲಿ ಪಾಪಗಳು ನೆಲೆಸಿರುವುದು ಏಕಾದಶಿ ಉಪವಾಸಮಾಡುವ ಮುನ್ನ, ಆಮೇಲೆ ಇಲ್ಲ.

**ಅಶ್ವಮೇಧ ಸಹಸ್ರಾಣಿ ರಾಜಸೂಯ ಶತಾನಿ ಚ**
**ಏಕಾದಶ್ಯುಪವಾಸಸ್ಯ ಕಲಾಂನಾರ್ಹಂತಿ ಷೋಡಶೀಂ**

ಸಾವಿರಾರು ಅಶ್ವಮೇಧಗಳು ನೂರಾರು ರಾಜಸೂಯಗಳು ಏಕಾದಶಿ ಉಪವಾಸದ ಹದಿನಾರನೆ ಒಂದು ಅಂಶಕ್ಕೂ ಸಮಾನವಲ್ಲ.

ಇಂದ್ರಿಯಗಳಿಂದ ಮಾಡಿದ ಪಾಪವೆಲ್ಲ ಏಕಾದಶಿ ಉಪವಾಸದಿಂದ ತೊಳೆದು ಹೋಗುತ್ತವೆ.

**ಏಕಾದಶೀ ಸಮಂ ಕಿಂಚಿತ್ ಪುಣ್ಯಂ ಲೋಕೇ ನವಿದ್ಯತೇ**

ಏಕಾದಶಿಗೆ ಸಮಾನವಾದ ಪುಣ್ಯವಸ್ತು ಲೋಕದಲ್ಲಿ ಒಂದೂ ಇಲ್ಲ. ಏಕಾದಶಿ ಉಪವಾಸದಿಂದ ಸ್ವರ್ಗ, ಮೋಕ್ಷಗಳೂ ದೊರೆಯುತ್ತವೆ. ಶರೀರದ ಆರೋಗ್ಯವೂ ಉಳಿಯುತ್ತದೆ ಸ್ತ್ರೀಸುಖವೂ ಲಭಿಸುತ್ತದೆ. ಸುತ್ಪುತ್ರರೂ ದೊರೆಯುತ್ತಾರೆ. ಗಂಗೆ, ಗಯೆ, ಕಾಶಿ, ಪುಷ್ಕರಗಳಂಥ ಯಾವ ತೀರ್ಥ ಕ್ಷೇತ್ರವೂ ಹರಿದಿನಕ್ಕೆ ಸಮಾನವಲ್ಲ. ಹರಿದಿನಗಳಲ್ಲಿ ಉಪವಾಸ ಮಾಡಿ ರಾತ್ರಿ ಜಾಗರಣ ಮಾಡಿದರೆ ಪಿತೃ, ಮಾತೃ, ಪತ್ನಿ ಈ ಮೂವರ ಕುಲಗಳಲ್ಲಿ ಹಿಂದಿನ ಹತ್ತು ಪೀಳಿಗೆಯವರೆಗೆ ಉದ್ಧಾರವಾಗುತ್ತದೆ.

ತ್ರಿಕರಣಗಳಿಂದಲೂ ಪ್ರಾಣಿಗಳಿಗೆ ದ್ರೋಹ ಬಗೆಯದಿರುವುದು. ಇಂದ್ರಿಯ ನಿಗ್ರಹ, ದಾನ, ಹರಿಸೇವೆ, ವರ್ಣಾಶ್ರಮ, ಧರ್ಮಗಳಾಚರಣೆ ಇವು ಸಂಕ್ಷೇಪವಾಗಿ ಸದ್ಗತಿ ಸಾಧನಗಳು. ಸ್ವರ್ಗವನ್ನು ಬಯಸುವವನು ತಾನು ಮಾಡಿದ ತಪಸ್ಸು ದಾನಗಳನ್ನು ಹೇಳಿಕೊಳ್ಳಬಾರದು. ಯಥಾಶಕ್ತಿ ದಾನಮಾಡಬೇಕು. ಇಹದಲ್ಲಿಯೆ ಆಗಲಿ ಪರದಲ್ಲಿಯೆ ಆಗಲಿ ನಾವು ಹಿಂದೆ ದಾನ ಕೊಡದಿರುವುದು ನಮಗೆ ಸಿಗುವುದಿಲ್ಲ. ವಿಕುಂಡಲ, ನಾನಿನ್ನು

ಹೆಚ್ಚೇನೂ ಹೇಳುವುದಿಲ್ಲ. ಅಧರ್ಮದಿಂದಲೆ ನರಕ, ಧರ್ಮದಿಂದಲೆ ಸ್ವರ್ಗ. ಆದರಿಂದ ಚಿಕ್ಕಂದಿನಿಂದಲೆ ಧರ್ಮಾಚರಣೆಯಲ್ಲಿ ತೊಡಗಬೇಕು.

**ವಿಕುಂಡಲ :-** ದೇವದೂತನೆ, ನಿನ್ನ ಉಪದೇಶವನ್ನು ಕೇಳಿ ನನ್ನ ಮನಸ್ಸು ಪ್ರಸನ್ನವಾಯಿತು. ಗಂಗಾಜಲವೂ, ಸಜ್ಜನರ ಉಪದೇಶವೂ ತತ್ಕ್ಷಣದಲ್ಲಿಯೇ ಪಾಪಹಾರಿಗಳು.

**ಉಪಕರ್ತುಂ ಪ್ರಿಯಂ ವಕ್ತುಂ ಗುಣೋ ನೈಸರ್ಗಿಕಃ ಸತಾಂ ।**
**ಶೀತಾಂಶುಃ ಕ್ರಿಯತೇ ಕೇನ ಶೀತಲೋಮೃತ ಮಂಡಲಃ ॥**

ಉಪಕಾರ ಮಾಡುವುದೂ ಸವಿಮಾತುಗಳನ್ನಾಡುವುದೂ ಸಜ್ಜನರ ಸ್ವಾಭಾವಿಕ ಗುಣಗಳು. ಚಂದ್ರಮಂಡಲವನ್ನು ತಂಪುಗೊಳಿಸಲು ಯಾರು ಹೊರಡುತ್ತಾರೆ ?

ಆದರಿಂದ ನನ್ನ ಇನ್ನೊಂದು ಪ್ರಶ್ನೆಯನ್ನೂ ಪರಿಹರಿಸು. ಈಗ ನರಕಕ್ಕೆ ಹೋಗಿರುವ ನನ್ನ ಅಣ್ಣನಿಗೇನು ಪರಿಹಾರ ?

**ದೇವದೂತ :-** ನೀನು ನಿನ್ನ ಹಿಂದಿನ ಎಂಟನೆ ಜನ್ಮದಲ್ಲಿ ಮಾಡಿದ ಪುಣ್ಯವನ್ನು ಅವನಿಗೆ ಧಾರೆಯೆರೆದು ಕೊಡು. ಅವನೂ ಸ್ವರ್ಗಕ್ಕೆ ಹೋಗುತ್ತಾನೆ.

**ವಿಕುಂಡಲ :-** ನನ್ನ ಆ ಎಂಟನೆಯ ಜನ್ಮ ಯಾವುದು ? ಅದರಲ್ಲೇನು ಪುಣ್ಯಕರ್ಮ ನಾನು ಮಾಡಿದ್ದೆ ?

**ದೇವದೂತ :-** ಹಿಂದೆ ಮಧುವನದಲ್ಲಿ ಶಾಕುನಿ ಎಂಬ ಮುನಿ ಇದ್ದ. ತೇಜಸ್ಸಿನಿಂದ ಬ್ರಹ್ಮನಂತೆ ಹೊಳೆಯುತ್ತಿದ್ದನಾತ. ಅವನ ಪತ್ನಿ ರೇವತಿಯಲ್ಲಿ ಒಂಬತ್ತು ಜನ ಮಕ್ಕಳು ಹುಟ್ಟಿದರು. ಅವರಲ್ಲಿ ಧ್ರುವ, ಶೀಲ, ಬುಧ, ತಾರ, ಜ್ಯೋತಿಷ್ಮಾನ್ ಎಂಬ ಐವರು ಗೃಹಸ್ಥರಾದರು. ನಿರ್ಮೋಹ, ಜಿತಕಾಮ, ಧ್ಯಾನಕೋಶ, ಗುಣಧಿಕ ಈ ನಾಲ್ವರು ಮಾತ್ರ ಸನ್ಯಾಸಿಗಳಾಗಿ ನಿಃಸಂಗರಾಗಿ ವಿಷ್ಣುಧ್ಯಾನಮಾಡುತ್ತ ಚರಾಚರಗಳಲ್ಲೆಲ್ಲ ಅವನನ್ನೇ ಕಾಣುತ್ತ ಸಂಚರಿಸಿದರು. ಆಹಾರ ನಿದ್ದೆಗಳನ್ನು ಗಾಳಿಮಳೆಗಳನ್ನು ಸಹಿಸಿಕೊಂಡರು. ಚಿನ್ನವನ್ನೂ ಕಲ್ಲುಮಣ್ಣುಗಳಂತೆ ಕಂಡರು. ತಮಗೆ ಸಿಕ್ಕಿದ ಅನ್ನ ಬಟ್ಟೆಗಳಿಂದಲೇ ತೃಪ್ತಿಹೊಂದಿದರು. ಸದಾ ಮೌನವಾಗಿದ್ದು ಪರಮಾತ್ಮನ ಧ್ಯಾನಮಾಡುತ್ತಿದ್ದರು.

ಆ ಸಮಯದಲ್ಲಿ ನಿನ್ನ ಹಿಂದಿನ ಎಂಟನೆಯ ಜನ್ಮ, ನೀನು ಮಧ್ಯ ದೇಶದಲ್ಲಿ ಒಬ್ಬ ಗೃಹಸ್ಥನಾಗಿದ್ದೆ. ನಿನ್ನ ಮನೆಗೆ ಈ ಸನ್ಯಾಸಿಗಳು ಮಧ್ಯಾಹ್ನದಲ್ಲಿ ಹಸಿದು ನೀರಡಿಸಿ ಬಂದರು. ಆಗ ತಾನೆ ವೈಶ್ವದೇವಮಾಡಿ ಮನೆಯಂಗಳದಲ್ಲಿ ನೀನು ನಿಂತಿದ್ದೆ. ಅವರನ್ನು ಕಂಡು ಆನಂದ ಬಾಷ್ಪಸುರಿಸಿ ಸಂಭ್ರಮದಿಂದ ದಂಡಪ್ರಣಾಮ ಮಾಡಿ ಕೈಮುಗಿದು ಗದ್ಗದ ಕಂಠದಿಂದ ಸ್ವಾಗತ ಮಾಡಿದೆ.

ಇಂದು ನನ್ನ ಜನ್ಮ ಸಾರ್ಥಕವಾಯಿತು. ಬಾಳು ಸಫಲವಾಯಿತು. ಹರಿಯ ಅನುಗ್ರಹ ನನಗಿಂದು ಲಭಿಸಿತು. ನಾನಿನ್ನು ಅನಾಥನಲ್ಲ. ನಾನೂ ನನ್ನ ಕುಟುಂಬವೂ ತಂದೆತಾಯಿಗಳೂ ಎಲ್ಲರೂ ಧನ್ಯರಾದೆವು. ಹರಿಯ ದರ್ಶನದಂತೆ ನಿಮ್ಮ ದರ್ಶನವೂ ಭಾಗ್ಯವಂತನಿಗೆ ಲಭಿಸಬಲ್ಲದು.

ಹೀಗೆ ಹೇಳಿ ಅವರ ಕಾಲು ತೊಳೆದು ಆ ನೀರನ್ನು ತಲೆಯಲ್ಲಿ ಧರಿಸಿದೆ. ಗಂಧ ಪುಷ್ಪಾಕ್ಷತೆ ಧೂಪ ದೀಪಗಳಿಂದ ಅರ್ಚಿಸಿ ಸುಂಗ್ರಾಸ ಭೋಜನವಿತ್ತು ತೃಪ್ತಿಪಡಿಸಿದ.

ಸಾಲಗ್ರಾಮದ ಬಳಿಯ ಒಂದು ಕ್ರೋಶ ಸ್ಥಳದಲ್ಲಿ ಒಂದು ಕೀಟವು ಸತ್ತರೂ ಅದು ವೈಕುಂಠವನ್ನು ಸೇರುವುದು. ಸಾಲಗ್ರಾಮವನ್ನು ದಾನ ಮಾಡಿದರೆ ಸಮಸ್ತ ಭೂಮಂಡಲವನ್ನೇ ದಾನಮಾಡಿದಂತೆ. ಸಾಲಗ್ರಾಮಕ್ಕೆ ಬೆಲೆಕಟ್ಟಿ ಕ್ರಯವಿಕ್ರಯ ಮಾಡುವವರು ನರಕ ಭಾಗಿಗಳು. ಪಾಪ ಭಯ ಉಳ್ಳವರೆಲ್ಲರೂ ವಾಸುದೇವನ ಸ್ಮರಣೆ ಮಾಡಬೇಕು. ಅವನನ್ನೊಮ್ಮೆ ನಮಿಸಿದರೆ ಕಾಡಿನಲ್ಲಿ ಘೋರತಪಸ್ಸು ಮಾಡಿದ ಫಲವೇ ಇದೆ. ಹರಿನಾಮ ಸಂಕೀರ್ತನೆಯಿಂದ ಎಲ್ಲ ತೀರ್ಥಕ್ಷೇತ್ರಗಳನ್ನೂ ಸೇವಿಸಿದ ಫಲ ಸಿಗುತ್ತದೆ. ಹರಿಯ ಪ್ರಪತ್ತಿಯನ್ನು ಮಾಡುವವರಿಗೆ ಯಮಲೋಕ ನರಕಗಳ ದರ್ಶನವಿಲ್ಲ.

ವೈಷ್ಣವನಾಗಿದ್ದು ಶಿವನಿಂದೆ ಮಾಡುವವನಿಗೆ ವಿಷ್ಣುಲೋಕವಿಲ್ಲ. ಮಹಾನರಕವೇ ಪ್ರಾಪ್ತವಾಗುತ್ತದೆ.

ಪ್ರಸಂಗವಶಾತ್ ಒಂದು ಏಕಾದಶಿ ಉಪವಾಸ ಮಾಡಿದರೂ ಯಮಯಾತನೆ ಇಲ್ಲದಂತಾಗುವುದು ಎಂದು ಲೋಮಶರು ಹೇಳುತ್ತಾರೆ. ಏಕಾದಶಿಗೆ ಸಮನಾದ ಪವಿತ್ರ ದಿನ ಬೇರೊಂದಿಲ್ಲ. ಏಕಾದಶಿ ದ್ವಾದಶಿ ಈ ಎರಡು ಹರಿದಿನಗಳೂ ಪಾಪ ಪರಿಹಾರಕ. ಈ ಶರೀರದಲ್ಲಿ ಪಾಪಗಳು ನೆಲೆಸಿರುವುದು ಏಕಾದಶಿ ಉಪವಾಸಮಾಡುವ ಮುನ್ನ, ಆಮೇಲೆ ಇಲ್ಲ.

**ಅಶ್ವಮೇಧ ಸಹಸ್ರಾಣಿ ರಾಜಸೂಯ ಶತಾನಿ ಚ**
**ಏಕಾದಶ್ಯುಪವಾಸಸ್ಯ ಕಲಾಂನಾರ್ಹಂತಿ ಷೋಡಶೀಂ**

ಸಾವಿರಾರು ಅಶ್ವಮೇಧಗಳು ನೂರಾರು ರಾಜಸೂಯಗಳು ಏಕಾದಶಿ ಉಪವಾಸದ ಹದಿನಾರನೆ ಒಂದು ಅಂಶಕ್ಕೂ ಸಮಾನವಲ್ಲ.

ಇಂದ್ರಿಯಗಳಿಂದ ಮಾಡಿದ ಪಾಪವೆಲ್ಲ ಏಕಾದಶಿ ಉಪವಾಸದಿಂದ ತೊಳೆದು ಹೋಗುತ್ತವೆ.

**ಏಕಾದಶೀ ಸಮಂ ಕಿಂಚಿತ್ ಪುಣ್ಯಂ ಲೋಕೇ ನವಿದ್ಯತೇ**

ಏಕಾದಶಿಗೆ ಸಮಾನವಾದ ಪುಣ್ಯವಸ್ತು ಲೋಕದಲ್ಲಿ ಒಂದೂ ಇಲ್ಲ. ಏಕಾದಶಿ ಉಪವಾಸದಿಂದ ಸ್ವರ್ಗ, ಮೋಕ್ಷಗಳೂ ದೊರೆಯುತ್ತವೆ. ಶರೀರದ ಆರೋಗ್ಯವೂ ಉಳಿಯುತ್ತದೆ ಸ್ತ್ರೀಸುಖವೂ ಲಭಿಸುತ್ತದೆ. ಸುತ್ಪುತ್ರರೂ ದೊರೆಯುತ್ತಾರೆ. ಗಂಗೆ, ಗಯೆ, ಕಾಶಿ, ಪುಷ್ಕರಗಳಂಥ ಯಾವ ತೀರ್ಥ ಕ್ಷೇತ್ರವೂ ಹರಿದಿನಕ್ಕೆ ಸಮಾನವಲ್ಲ. ಹರಿದಿನಗಳಲ್ಲಿ ಉಪವಾಸ ಮಾಡಿ ರಾತ್ರಿ ಜಾಗರಣ ಮಾಡಿದರೆ ಪಿತೃ, ಮಾತೃ, ಪತ್ನಿ ಈ ಮೂವರ ಕುಲಗಳಲ್ಲಿ ಹಿಂದಿನ ಹತ್ತು ಪೀಳಿಗೆಯವರೆಗೆ ಉದ್ಧಾರವಾಗುತ್ತದೆ.

ತ್ರಿಕರಣಗಳಿಂದಲೂ ಪ್ರಾಣಿಗಳಿಗೆ ದ್ರೋಹ ಬಗೆಯದಿರುವುದು. ಇಂದ್ರಿಯ ನಿಗ್ರಹ, ದಾನ, ಹರಿಸೇವೆ, ವರ್ಣಾಶ್ರಮ, ಧರ್ಮಗಳಾಚರಣೆ ಇವು ಸಂಕ್ಷೇಪವಾಗಿ ಸದ್ಗತಿ ಸಾಧನಗಳು. ಸ್ವರ್ಗವನ್ನು ಬಯಸುವವನು ತಾನು ಮಾಡಿದ ತಪಸ್ಸು ದಾನಗಳನ್ನು ಹೇಳಿಕೊಳ್ಳಬಾರದು. ಯಥಾಶಕ್ತಿ ದಾನಮಾಡಬೇಕು. ಇಹದಲ್ಲಿಯೆ ಆಗಲಿ ಪರದಲ್ಲಿಯೆ ಆಗಲಿ ನಾವು ಹಿಂದೆ ದಾನ ಕೊಡದಿರುವುದು ನಮಗೆ ಸಿಗುವುದಿಲ್ಲ. ವಿಕುಂಡಲ, ನಾನಿನ್ನು

ಹೆಚ್ಚೇನೂ ಹೇಳುವುದಿಲ್ಲ. ಅಧರ್ಮದಿಂದಲೆ ನರಕ, ಧರ್ಮದಿಂದಲೆ ಸ್ವರ್ಗ. ಆದರಿಂದ ಚಿಕ್ಕಂದಿನಿಂದಲೆ ಧರ್ಮಾಚರಣೆಯಲ್ಲಿ ತೊಡಗಬೇಕು.

**ವಿಕುಂಡಲ :-** ದೇವದೂತನೆ, ನಿನ್ನ ಉಪದೇಶವನ್ನು ಕೇಳಿ ನನ್ನ ಮನಸ್ಸು ಪ್ರಸನ್ನವಾಯಿತು. ಗಂಗಾಜಲವೂ, ಸಜ್ಜನರ ಉಪದೇಶವೂ ತತ್‌ಕ್ಷಣದಲ್ಲಿಯೇ ಪಾಪಹಾರಿಗಳು.

**ಉಪಕರ್ತುಂ ಪ್ರಿಯಂ ವಕ್ತುಂ ಗುಣೋ ನೈಸರ್ಗಿಕಃ ಸತಾಂ ।**
**ಶೀತಾಂಶುಃ ಕ್ರಿಯತೇ ಕೇನ ಶೀತಲೋಮೃತ ಮಂಡಲಃ ॥**

ಉಪಕಾರ ಮಾಡುವುದೂ ಸವಿಮಾತುಗಳನ್ನಾಡುವುದೂ ಸಜ್ಜನರ ಸ್ವಾಭಾವಿಕ ಗುಣಗಳು. ಚಂದ್ರಮಂಡಲವನ್ನು ತಂಪುಗೊಳಿಸಲು ಯಾರು ಹೊರಡುತ್ತಾರೆ ?

ಆದರಿಂದ ನನ್ನ ಇನ್ನೊಂದು ಪ್ರಶ್ನೆಯನ್ನೂ ಪರಿಹರಿಸು. ಈಗ ನರಕಕ್ಕೆ ಹೋಗಿರುವ ನನ್ನ ಅಣ್ಣನಿಗೇನು ಪರಿಹಾರ ?

**ದೇವದೂತ :-** ನೀನು ನಿನ್ನ ಹಿಂದಿನ ಎಂಟನೆ ಜನ್ಮದಲ್ಲಿ ಮಾಡಿದ ಪುಣ್ಯವನ್ನು ಅವನಿಗೆ ಧಾರೆಯೆರೆದು ಕೊಡು. ಅವನೂ ಸ್ವರ್ಗಕ್ಕೆ ಹೋಗುತ್ತಾನೆ.

**ವಿಕುಂಡಲ :-** ನನ್ನ ಆ ಎಂಟನೆಯ ಜನ್ಮ ಯಾವುದು ? ಅದರಲ್ಲೇನು ಪುಣ್ಯಕರ್ಮ ನಾನು ಮಾಡಿದ್ದೆ ?

**ದೇವದೂತ :-** ಹಿಂದೆ ಮಧುವನದಲ್ಲಿ ಶಾಕುನಿ ಎಂಬ ಮುನಿ ಇದ್ದ. ತೇಜಸ್ಸಿನಿಂದ ಬ್ರಹ್ಮನಂತೆ ಹೊಳೆಯುತ್ತಿದ್ದನಾತ. ಅವನ ಪತ್ನಿ ರೇವತಿಯಲ್ಲಿ ಒಂಬತ್ತು ಜನ ಮಕ್ಕಳು ಹುಟ್ಟಿದರು. ಅವರಲ್ಲಿ ಧ್ರುವ, ಶೀಲ, ಬುಧ, ತಾರ, ಜ್ಯೋತಿಷ್ಮಾನ್ ಎಂಬ ಐವರು ಗೃಹಸ್ಥರಾದರು. ನಿರ್ಮೋಹ, ಜಿತಕಾಮ, ಧ್ಯಾನಕೋಶ, ಗುಣಧಿಕ ಈ ನಾಲ್ವರು ಮಾತ್ರ ಸನ್ಯಾಸಿಗಳಾಗಿ ನಿಃಸಂಗರಾಗಿ ವಿಷ್ಣುಧ್ಯಾನಮಾಡುತ್ತ ಚರಾಚರಗಳೆಲ್ಲೆಲ್ಲ ಅವನನ್ನೇ ಕಾಣುತ್ತ ಸಂಚರಿಸಿದರು. ಆಹಾರ ನಿದ್ದೆಗಳನ್ನು ಗಾಳಿಮಳೆಗಳನ್ನು ಸಹಿಸಿಕೊಂಡರು. ಚಿನ್ನವನ್ನೂ ಕಲ್ಲುಮಣ್ಣುಗಳಂತೆ ಕಂಡರು. ತಮಗೆ ಸಿಕ್ಕಿದ ಅನ್ನ ಬಟ್ಟೆಗಳಿಂದಲೇ ತೃಪ್ತಿಹೊಂದಿದರು. ಸದಾ ಮೌನವಾಗಿದ್ದು ಪರಮಾತ್ಮನ ಧ್ಯಾನಮಾಡುತ್ತಿದ್ದರು.

ಆ ಸಮಯದಲ್ಲಿ ನಿನ್ನ ಹಿಂದಿನ ಎಂಟನೆಯ ಜನ್ಮ, ನೀನು ಮಧ್ಯದೇಶದಲ್ಲಿ ಒಬ್ಬ ಗೃಹಸ್ಥನಾಗಿದ್ದೆ. ನಿನ್ನ ಮನೆಗೆ ಈ ಸನ್ಯಾಸಿಗಳು ಮಧ್ಯಾಹ್ನದಲ್ಲಿ ಹಸಿದು ನೀರಡಿಸಿ ಬಂದರು. ಆಗ ತಾನೆ ವೈಶ್ವದೇವಮಾಡಿ ಮನೆಯಂಗಳದಲ್ಲಿ ನೀನು ನಿಂತಿದ್ದೆ. ಅವರನ್ನು ಕಂಡು ಆನಂದ ಬಾಷ್ಪಸುರಿಸಿ ಸಂಭ್ರಮದಿಂದ ದಂಡಪ್ರಣಾಮ ಮಾಡಿ ಕೈಮುಗಿದು ಗದ್ಗದ ಕಂಠದಿಂದ ಸ್ವಾಗತ ಮಾಡಿದೆ.

ಇಂದು ನನ್ನ ಜನ್ಮ ಸಾರ್ಥಕವಾಯಿತು. ಬಾಳು ಸಫಲವಾಯಿತು. ಹರಿಯ ಅನುಗ್ರಹ ನನಗಿಂದು ಲಭಿಸಿತು. ನಾನಿನ್ನು ಅನಾಥನಲ್ಲ. ನಾನೂ ನನ್ನ ಕುಟುಂಬವೂ ತಂದೆತಾಯಿಗಳೂ ಎಲ್ಲರೂ ಧನ್ಯರಾದೆವು. ಹರಿಯ ದರ್ಶನದಂತೆ ನಿಮ್ಮ ದರ್ಶನವೂ ಭಾಗ್ಯವಂತನಿಗೆ ಲಭಿಸಬಲ್ಲದು.

ಹೀಗೆ ಹೇಳಿ ಅವರ ಕಾಲು ತೊಳೆದು ಆ ನೀರನ್ನು ತಲೆಯಲ್ಲಿ ಧರಿಸಿದೆ. ಗಂಧ ಪುಷ್ಪಾಕ್ಷತೆ ಧೂಪ ದೀಪಗಳಿಂದ ಅರ್ಚಿಸಿ ಸುಂಗ್ರಾಸ ಭೋಜನವಿತ್ತು ತೃಪ್ತಿಪಡಿಸಿದ.

ಅವರು ತೃಪ್ತಿಹೊಂದಿ ಆ ರಾತ್ರಿ ನಿನ್ನ ಮನೆಯಲ್ಲಿ ವಿಶ್ರಾಂತಿ ಪಡೆದರು. ಪರಬ್ರಹ್ಮನನ್ನು ಧ್ಯಾನಿಸಿದರು. ಅವರಿಗೆ ನೀನಿತ್ತ ಆತಿಥಿಸತ್ಕಾರದ ಪುಣ್ಯವನ್ನು, ಸಾವಿರ ಮುಖಗಳನ್ನು ಪಡೆದರೂ ನಾನು ಹೇಳಲಾರೆ. ಪ್ರಾಣಿಗಳಲ್ಲೆಲ್ಲ ಮನುಷ್ಯನೇ ಶ್ರೇಷ್ಠ. ಮನುಷ್ಯರಲ್ಲಿ ಬ್ರಾಹ್ಮಣ, ಬ್ರಾಹ್ಮಣರಲ್ಲಿ ವಿದ್ವಾಂಸ, ವಿದ್ವಾಂಸರಲ್ಲಿ ಕರ್ಮನುಷ್ಠಾನ ಉಳ್ಳವ, ಕರ್ಮಾನುಷ್ಠಾನ ಮಾಡುವವರಲ್ಲಿಯೂ ಬ್ರಹ್ಮಜ್ಞಾನಿ ಶ್ರೇಷ್ಠ. ಅದರಿಂದ ಬ್ರಹ್ಮಜ್ಞಾನಿಗಳು ಮೂಲೋಕಕ್ಕೂ ಪೂಜ್ಯರು ಅವರು ಸಂತುಷ್ಟರಾಗಿ ಮನೆಯಲ್ಲಿ ವಿಶ್ರಾಂತಿ ಪಡೆಯುತ್ತ ಒಮ್ಮೆ ಆ ಗೃಹಸ್ಥನನ್ನು ನೋಡಿದರೆ ಹುಟ್ಟಿದಂದಿನಿಂದ ಅವರು ಮಾಡಿದ ಪಾಪವೆಲ್ಲವೂ ಸುಟ್ಟು ಹೋಗುವುದು. ಒಂದು ರಾತ್ರಿ ಅವರು ಅವನ ಮನೆಯಲ್ಲಿ ಉಳಿದರೆ ಅವನು ಜೀವನದುದ್ದಕ್ಕೂ ಮಾಡುವ ಪಾಪಗಳು ಪರಿಹಾರವಾಗುವುವು. ವಿಕುಂಡಲ, ನೀನು ಆ ಪುಣ್ಯವನ್ನು ನಿನ್ನಣ್ಣನಿಗೆ ಕೊಡು; ಅವನು ನರಕದಿಂದೆದ್ದು ಬರುತ್ತಾನೆ.

ದೇವದೂತನ ಈ ಮಾತನ್ನು ಕೇಳಿ ವಿಕುಂಡಲ ಆ ಪುಣ್ಯವನ್ನು ಪ್ರೀತಿಯಿಂದ ಅಣ್ಣನಿಗೆ ದಾನಮಾಡಿದ. ಒಡನೆ ಆತ ನರಕದಿಂದ ಹೊರಗೆ ಬಂದು ತಮ್ಮನನ್ನು ಕೂಡಿದ. ದೇವತೆಗಳು ಅವರಿಬ್ಬರ ಮೇಲೆ ಹೂ ಮಳೆಗರೆದರು. ಇಬ್ಬರೂ ಸ್ವರ್ಗಕ್ಕೆ ತೆರಳಿದರು. ದೇವದೂತನನ್ನು ಅದರದಿಂದ ಸತ್ಕರಿಸಿ ಬೀಳ್ಕೊಟ್ಟರು.

ಈ ಇತಿಹಾಸವನ್ನು ಪಠಿಸಿದರೆ, ಶ್ರವಣ ಮಾಡಿದರೆ ಸಾವಿರಗೋದಾನದ ಫಲ.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಸ್ವರ್ಗಖಂಡದಲ್ಲಿ*
*ಯಮುನಾತೀರ್ಥ ಮಹಿಮೆ ಎಂಬ ಹನ್ನೊಂದನೇಯ ಅಧ್ಯಾಯ ಮುಗಿದುದು*



## ಸುಗಂಧತೀರ್ಥ ಮಹಿಮೆ

**ಅಧ್ಯಾಯ - ೧೨**

**ನಾರದ ಉವಾಚ**

**ನಾರದ** :- ಯುಧಿಷ್ಠಿರ, ಸುಗಂಧ ತೀರ್ಥದಲ್ಲಿ ಎಲ್ಲ ಪಾಪಗಳನ್ನು ತೊಳೆದುಕೊಂಡು ಬ್ರಹ್ಮಲೋಕವನ್ನು ಪಡೆಯಬಹುದು. ರುದ್ರಾವರ್ತಸ್ನಾನದಿಂದ ಸ್ವರ್ಗಲೋಕ ದೊರೆಯುವುದು. ಗಂಗಾ ಸರಸ್ವತೀ ಸಂಗಮಸ್ನಾನದಿಂದ ಅಶ್ವಮೇಧ ಫಲ, ಸ್ವರ್ಗಪ್ರಾಪ್ತಿ. ಕರ್ಣಹ್ರದ ಸ್ನಾನ ಶಿವಾರ್ಚನಗಳಿಂದ ಸ್ವರ್ಗ ಪ್ರಾಪ್ತಿ. ಕುಬ್ಜಾಮ್ರಕ ಸ್ನಾನದಿಂದ ಸಾವಿರ ಗೋದಾನದ ಫಲ. ಸ್ವರ್ಗಪ್ರಾಪ್ತಿ. ಅರುಂಧತೀ ವಟದಲ್ಲಿ ಸಮುದ್ರ ಸ್ನಾನಮಾಡಿ ಮೂರುದಿನ ಉಪವಾಸವಿದ್ದರೆ ಸಾವಿರ ಗೋದಾನ ಫಲ, ಸ್ವರ್ಗಪ್ರಾಪ್ತಿ. ಯಮುನಾ ಪ್ರಭವಸ್ನಾನದಿಂದ ಅಶ್ವಮೇಧಫಲ, ಬ್ರಹ್ಮಲೋಕ ಪ್ರಾಪ್ತಿ. ದರ್ವೀಸಂಕ್ರಮಣ ಸ್ನಾನದಿಂದ ಅಶ್ವಮೇಧಫಲ. ಸ್ವರ್ಗಪ್ರಾಪ್ತಿ. ಸಿದ್ಧಗಂಧರ್ವ ಸೇವಿತವಾದ ಸಿಂಧುಪ್ರಭವದಲ್ಲಿ ಸ್ನಾನಮಾಡಿ ಐದು ದಿನ ಅಲ್ಲಿದ್ದು ಸುವರ್ಣ ದಾನ ಮಾಡಿದರೆ ಶುಕ್ರಲೋಕ ಪ್ರಾಪ್ತಿ. ಅಶ್ವಮೇಧ ಫಲ. ಋಷಿಕುಲ್ಯಾ ಸ್ನಾನ, ಶಾಕಾಹಾರದಲ್ಲಿ ಒಂದು ತಿಂಗಳ ವಾಸದಿಂದ ಋಷಿಲೋಕ ಪ್ರಾಪ್ತಿ. ಭೃಗುತುಂಗ ಸ್ನಾನದಿಂದ ಅಶ್ವಮೇಧ

ಫಲ. ವೀರಪ್ರಮೋಕ್ಷಸ್ನಾನದಿಂದ ಎಲ್ಲ ಪಾಪಗಳಿಂದ ಮುಕ್ತಿ. ಕಾರ್ತಿಕಮಾಘ ಸ್ನಾನದಿಂದ ಅಗ್ನಿಷ್ಟೋಮ ಅತಿರಾತ್ರ ಫಲ. ವಿದ್ಯಾತೀರ್ಥ ಸ್ನಾನದಿಂದ ಸರ್ವವಿದ್ಯಾ ಲಾಭ. ಮಹಾಶ್ರಮದಲ್ಲಿ ಒಪ್ಪೊತ್ತು ಉಪವಾಸದಿಂದ ಒಂದು ದಿನವಿದ್ದರೆ ಪುಣ್ಯಲೋಕ ಪ್ರಾಪ್ತಿ. ಒಂದು ತಿಂಗಳು ಇದ್ದರೆ ತಾನು ಸಂಸಾರದಿಂದ ಪಾರಾಗಿ ತನ್ನ ಕುಲದ ಹಿಂದಿನ ಹತ್ತು ಪೀಳಿಗೆಯನ್ನೂ ಮುಂದಿನ ಹತ್ತು ಪೀಳಿಗೆಯನ್ನು ಪಾರುಮಾಡಿಸುತ್ತಾನೆ. ಅಲ್ಲಿ ಶಿವನ ದರ್ಶನಮಾಡಿದರೆ ಮರಣಕ್ಕೆ ಅಂಜಬೇಕಾಗಿಲ್ಲ. ಬ್ರಹ್ಮನ ಸನ್ನಿಧಾನವಿರುವ ವೇತಸಿಕಾದಲ್ಲಿ ಅಶ್ವಮೇಧದ ಫಲ, ಪರಗತಿ ಲಾಭ. ಸಿದ್ಧರು ಸೇವಿಸುವ ಸುಂದರಿಕಾದಲ್ಲಿ ಸೌಂದರ್ಯ ಲಾಭವಾಗುವುದು. ಹಿಂದಿನವರ ಅನುಭವದಿಂದ ಸಿದ್ಧವಾಗಿದೆ. ಬ್ರಾಹ್ಮಣಿಕಾಲದಲ್ಲಿ ಬ್ರಹ್ಮಚರ್ಯದಿಂದಿದ್ದು ಬ್ರಹ್ಮಲೋಕವನ್ನು ಸಂಪಾದಿಸಬಹುದು. ನೈಮಿಷದಲ್ಲಿ ಋಷಿಗಳೂ ದೇವತೆಗಳೊಂದಿಗೆ ಬ್ರಹ್ಮನೂ ವಾಸಿಸುತ್ತಾರೆ. ಅಲ್ಲಿಗೆ ಹೋಗಬೇಕೆಂಬ ಸಂಕಲ್ಪದಿಂದಲೇ ಪಾಪದ ಅರ್ಧಾಂಶ ತೊಲಗುತ್ತದೆ. ಹೋದರೆ ಎಲ್ಲ ಪಾಪವೂ ದೂರವಾಗುತ್ತದೆ. ಅಲ್ಲಿ ಒಂದು ತಿಂಗಳು ವಾಸಮಾಡಿದರೆ ಉತ್ತಮ. ಪ್ರತಿ ದಿನ ರಾಜಸೂಯ ಫಲ ಲಾಭ. ಏಳು ಪೀಳಿಗೆಗೆ ಉದ್ಧಾರ. ಉಪವಾಸವಿದ್ದು ಪ್ರಾಣತ್ಯಾಗ ಮಾಡಿದರೆ ಸ್ವರ್ಗಪ್ರಾಪ್ತಿ.

ಗಂಗೋದ್ಭೇದದಲ್ಲಿ ಮೂರುದಿನ ಉಪವಾಸವಿದ್ದರೆ ವಾಜಪೇಯ ಫಲ. ಬ್ರಹ್ಮಪ್ರಾಪ್ತಿ. ಸರಸ್ವತಿಯಲ್ಲಿ ಪಿತೃದೇವತಾ ತರ್ಪಣಮಾಡಿದರೆ ಸಾರಸ್ವತ ಲೋಕಪ್ರಾಪ್ತಿ. ಬಾಹುದಾತೀರ್ಥದಲ್ಲಿ ಒಂದು ದಿನ ಉಳಿದರೆ ಸ್ವರ್ಗಪ್ರಾಪ್ತಿ. ದೇವಸತ್ರ ಯಜ್ಞಫಲ ಸಿಗುತ್ತದೆ.. ರಜನೀ ತೀರ್ಥದಲ್ಲಿ ಪಿತೃದೇವತಾರಾಧನೆಯಿಂದ ವಾಜಪೇಯಫಲ ಲಾಭ. ವಿಮಲಾ ಶೋಕಯಾತ್ರೆಯಿಂದ ಚಂದ್ರನಂಥ ಕಾಂತಿ. ಅಲ್ಲಿ ಒಂದು ದಿನ ಉಳಿಯುವುದಿರಂದ ಸ್ವರ್ಗಪ್ರಾಪ್ತಿ. ಸರಯೂ ನದಿಯ ಗೋಪ್ರತಾರತೀರ್ಥವು ಹಿಂದೆ ರಾಮನು ತನ್ನ ಪರಿವಾರ ಸೈನ್ಯವಾಹನಗಳೊಂದಿಗೆ ಸ್ವರ್ಗಕ್ಕೆ ಹೋದ ಸ್ಥಳ. ಅಲ್ಲಿ ಸ್ನಾನ ಮಾಡಿದರೆ ಸರ್ವಪಾಪ ಪರಿಹಾರ, ಸ್ವರ್ಗ ಪ್ರಾಪ್ತಿ. ಗೋಮತಿಯ ರಾಮತೀರ್ಥ ಸ್ನಾನದಿಂದ ಅಶ್ವಮೇಧ ಫಲ. ಕುಲವೂ ಉದ್ಧೃತವಾಗುತ್ತದೆ. ಶತಸಾಹಸ್ರಕ ಸ್ನಾನದಿಂದ ಸಾವಿರ ಗೋದಾನದ ಫಲ. ಅಲ್ಲಿಂದ ಊರ್ಧ್ವಸ್ಥಾನಕ್ಕೆ ಹೋಗಿ ಕೋಟಿತೀರ್ಥ ಸ್ನಾನ ಕಾರ್ತಿಕೇಯನ ಪೂಜೆಗಳನ್ನು ಮಾಡಿದರೆ ಸಾವಿರ ಗೋದಾನದ ಫಲ. ಒಳ್ಳೆಯ ತೇಜಸ್ಸು ವಾರಣಾಸಿಯಲ್ಲಿ ಶಿವನನ್ನರ್ಚಿಸಿ ಕಪಿಲಾ ಕುಂಡಸ್ನಾನ ಮಾಡಿದರೆ ರಾಜಸೂಯ ಫಲ. ಗಂಗಾಗೋಮತೀ ಸಂಗಮದ ಮಾರ್ಕಂಡೇಯ ತೀರ್ಥದಲ್ಲಿ ಸ್ನಾನ ಮಾಡಿದರೆ ಅಗ್ನಿಷ್ಟೋಮ ಫಲ. ಕುಲವೂ ಉದ್ಧೃತವಾಗುತ್ತದೆ.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಸ್ವರ್ಗಖಂಡದಲ್ಲಿ*
*ಸುಗಂಧತೀರ್ಥ ಮಹಿಮೆ ಎಂಬ ಹನ್ನೆರಡನೇಯ ಅಧ್ಯಾಯ ಮುಗಿದುದು*

—o—

**ಯುಧಿಷ್ಠಿರ ಉವಾಚ**

**ಯುಧಿಷ್ಠಿರ :-** ವಾರಾಣಸಿಯ ಮಾಹಾತ್ಮ್ಯವನ್ನು ಸಂಕ್ಷೇಪವಾಗಿ ಹೇಳಿರುವಿರಿ. ಅದನ್ನು ತಿರುಗಿ ವಿಸ್ತಾರವಾಗಿ ಹೇಳಿ ನನಗೆ ಸಂತೋಷ ಉಂಟುಮಾಡಿ.

**ನಾರದ :-** ಯುಧಿಷ್ಠಿರ ಈ ವಿಷಯದಲ್ಲಿ ಒಂದು ಇತಿಹಾಸವನ್ನು ಹೇಳುವೆನು, ಕೇಳು. ಅದರ ಶ್ರವಣ ಮಾತ್ರದಿಂದಲೆ ಬ್ರಹ್ಮಹತ್ಯಾ ಪಾತಕವು ಪರಿಹಾರವಾಗುತ್ತದೆ.

ಮೇರು ಶಿಖರದಲ್ಲಿ ಶಿವನನ್ನೊಮ್ಮೆ ಪಾರ್ವತಿ ಕೇಳಿದಳು.

**ಪಾರ್ವತಿ :-** ದೇವ, ನೀನು ಭಕ್ತರ ದುಃಖವನ್ನು ಪರಿಹರಿಸುವವ. ಅವರು ನಿನ್ನನ್ನು ಬೇಗನೆ ಕಾಣಲು ಏನು ಉಪಾಯವಿದೆ ? ತತ್ವಜ್ಞಾನವನ್ನು ಸಂಪಾದಿಸಿ, ಯೋಗಾಭ್ಯಾಸ, ಧ್ಯಾನ, ವೈದಿಕ ಕರ್ಮಗಳನ್ನು ಮಾಡುವುದೆಂದರೆ ಬಹುಶ್ರಮಪಟ್ಟರೆ ಮಾತ್ರ ಅದು ಸಾಧ್ಯ. ಯೋಗಿಗಳು ಕರ್ಮಠರು ಎನ್ನದೆ ಎಲ್ಲ ಜೀವಿಗಳಿಗೂ ಭಗವಂತನ ದರ್ಶನವಾಗುವ ರಹಸ್ಯವಾದ ಒಂದು ಉಪಾಯವನ್ನು ಹೇಳಿ ಎಲ್ಲರಿಗೂ ಹಿತ ಉಂಟು ಮಾಡು. ಮನಸ್ಸಿನ ರಾಗದ ಬೆಂಕಿಯನ್ನಾರಿಸು.

**ಶಿವ :-** ದೇವಿ, ಅಜ್ಞ ಜನರಿಗೂ ಸುಲಭವಾದ ಒಂದು ಉಪಾಯವನ್ನು ಮಹರ್ಷಿಗಳು ಹೇಳುತ್ತಾರೆ. ಅದನ್ನೇ ಹೇಳುವೆ ಕೇಳು. ವಾರಾಣಸಿ ಎಂಬುದು ನನ್ನ ಪರಮ ರಹಸ್ಯವಾದ ಸ್ಥಾನ. ಎಲ್ಲ ಪ್ರಾಣಿಗಳೂ ಸಂಸಾರದಿಂದ ಪಾರಾಗುವ ಸ್ಥಳ. ಅಲ್ಲಿ ಭಕ್ತಿಯಿಂದ ಅನೇಕ ಮಂದಿ ಮಹಾತ್ಮರು ವ್ರತನಿಯಮಗಳಿಂದ ನನ್ನನ್ನಾರಾಧಿಸುತ್ತಿದ್ದಾರೆ. ಅದು ಅವಿಮುಕ್ತಕ್ಷೇತ್ರ. ತೀರ್ಥಕ್ಷೇತ್ರಗಳಲ್ಲೆಲ್ಲ ಉತ್ತಮ. ಇಲ್ಲಿ ಸ್ಮಶಾನದಲ್ಲಿರುವ ತೀರ್ಥ ಮಂದಿರಗಳೆಲ್ಲವೂ ಪವಿತ್ರಗಳೇ. ನನ್ನ ಮಂದಿರ ಭೂಮಿಗೆ ತಾಗಿಕೊಂಡಿಲ್ಲ. ಅದು ಅಂತರಿಕ್ಷದಲ್ಲಿದೆ. ಅಲ್ಲಿ ಕಾಲರುದ್ರರೂಪದಿಂದ ನಾನು ಜಗತ್ತನ್ನು ಸಂಹರಿಸುವುದರಿಂದ ಅದು ಸ್ಮಶಾನ. ಅದು ನನಗೆ ಅತಿಪ್ರಿಯ. ನನ್ನ ಭಕ್ತರು ಅಲ್ಲಿ ನನ್ನೊಳಗೆ ಬಂದು ಸೇರುತ್ತಾರೆ. ಅಲ್ಲಿ ಮಾಡಿದ ದಾನ ಹೋಮ ಜಪತಪ ಎಲ್ಲವೂ ಅಕ್ಷಯಫಲ ಕೊಡುವುದು. ಜನ್ಮಾಂತರದ ಪಾಪಗಳೆಲ್ಲ ಅಲ್ಲಿ ಪರಿಹಾರವಾಗುವುವು. ಎಲ್ಲ ಜಾತಿಯ ಪುರುಷರೂ, ಸ್ತ್ರೀಯರೂ, ಮ್ಲೇಚ್ಛರೂ, ಪಾಪಿಷ್ಠರೂ, ಮೃಗಪಕ್ಷಿಕೀಟಗಳೂ ಅಲ್ಲಿ ಮರಣ ಹೊಂದಿದರೆ ನನ್ನ ಲೋಕದಲ್ಲಿ ಅವರು ನನ್ನಂತೆ ಚಂದ್ರಮೌಳಿ, ವೃಷಭವಾಹನರಾಗಿ ಸುಖಿಸುತ್ತಾರೆ. ಮೋಕ್ಷ ದುರ್ಲಭ, ಸಂಸಾರ ಭಯಂಕರವೆಂದು ತಿಳಿದವನು ವಾರಾಣಸಿಯಲ್ಲಿ ವಾಸಮಾಡಬೇಕು. ಬೇರೆ ಕಡೆ ತಪಸ್ಸಿಗೂ ಲಭ್ಯವಾಗದ ಸದ್ಗತಿ ಇಲ್ಲಿ ಎಲ್ಲಿ ಮರಣಹೊಂದಿದರೂ ಸಿಗುತ್ತದೆ. ಅದರಿಂದ ವಿವೇಕಿಯಾದವನು ಎಷ್ಟು ವಿಘ್ನಗಳು ಬಂದರೂ ಇಲ್ಲಿಯೇ ವಾಸಿಸುತ್ತಾನೆ. ಈ ಅವಿಮುಕ್ತಕ್ಷೇತ್ರ ಪರಮಮಂಗಳಕರ. ಇಲ್ಲಿ ಮರಣಪರ್ಯಂತ ವಾಸಿಸುವ ದೀಕ್ಷೆ ಉಳ್ಳವರಿಗೆ ಕೊನೆಯಲ್ಲಿ ತತ್ವಜ್ಞಾನವನ್ನೂ ಪರಮಪದವನ್ನೂ ಕೊಡುವೆನು. ಪ್ರಯಾಗ, ನೈಮಿಷಾರಣ್ಯ, ಶ್ರೀಶೈಲಗಳಂಥ

ಪುಣ್ಯಕ್ಷೇತ್ರಗಳಲ್ಲಿ ಮರಣಹೊಂದಿದ್ದರೂ ಕಾಶೀಮರಣದಿಂದ ಲಭಿಸುವಂತೆ ಅಲ್ಲಿ ಪರತತ್ವ ಲಭಿಸಲಾರದು. ಗಂಗೆ ಮೂರು ಲೋಕದಲ್ಲಿ ಹರಿದು ಎಲ್ಲರ ಪಾಪವನ್ನು ಪರಿಹರಿಸುತ್ತಿದ್ದರೂ ಇಲ್ಲಿ ವಿಶೇಷವಾಗಿ ನೂರಾರು ಜನ್ಮಾಂತರಗಳ ಪಾಪವನ್ನು ಪರಿಹರಿಸುವಳು. ಅದರಿಂದ ಇಲ್ಲಿ ಗಂಗಾಸ್ನಾನ ದಾನ ಜಪ ತಪಗಳು ದುರ್ಲಭ.

ವಾರಾಣಸಿಯಲ್ಲಿ ವಾಸಮಾಡಿದರೆ ನಿತ್ಯ ಜಪಹೋಮ ದೇವತಾರಾಧನೆ ಉಪವಾಸಗಳ ಫಲ ಸಿಗುತ್ತದೆ. ಇಲ್ಲಿ ಮಹಾದೇವನನ್ನರ್ಚಿಸಿದರೆ ಶಿವಗಣಗಳೊಡೆತನ ಲಭ್ಯವಾಗುತ್ತದೆ. ಬೇರೆ ಕಡೆ ಅನೇಕ ಸಹಸ್ರ ಜನ್ಮಗಳ ಯೋಗ ಜ್ಞಾನ ಸನ್ಯಾಸಗಳಿಂದ ಲಭ್ಯವಾಗುವ ಸ್ಥಾನ ಕಾಶೀವಾಸದಿಂದ ಒಂದು ಜನ್ಮದಲ್ಲಿಯೇ ಸಿಗುತ್ತದೆ.

ಈ ಕ್ಷೇತ್ರವನ್ನು ನಾನು ಬಿಡುವುದಿಲ್ಲ. ಅದರಿಂದ ಇದು ಅವಿಮುಕ್ತಕ್ಷೇತ್ರ.

**ಯತ್ರ ಸಾಕ್ಷಾತ್ ಮಹಾದೇವೋ ದೇಹಾಂತೇಸ್ವಯಮೀಶ್ವರಃ**
**ವ್ಯಾಚಷ್ಟೇ ತಾರಕಂ ಬ್ರಹ್ಮ ತತ್ರೈವಹ್ಯವಿಮುಕ್ತಕೇ**

ಅವಿಮುಕ್ತಕ್ಷೇತ್ರದಲ್ಲಿ ದೇಹಾವಸಾನ ಉಂಟಾದಾಗ ಸಾಕ್ಷಾತ್ ಈಶ್ವರನೆ ಮೋಕ್ಷದಾಯಕನಾದ ಪರಬ್ರಹ್ಮತತ್ವವನ್ನು ಉಪದೇಶಿಸುತ್ತಾನೆ.

ವರಣಾ ಮತ್ತು ಅಸೀ ನದಿಗಳ ನಡುವೆ ಈ ಅವಿಮುಕ್ತಕ್ಷೇತ್ರವಿರುವುದರಿಂದ ವಾರಣಾಸಿ ಎಂದು ಅದಕ್ಕೆ ಹೆಸರು.

**ವಾರಾಣಸ್ಯಾಃ ಪರಂಸ್ಥಾನಂ ನ ಭೂತಂ ನ ಭವಿಷ್ಯತಿ**
**ಯತ್ರ ನಾರಾಯಣೋದೇವೋ ಮಹಾದೇವೋ ದಿವೀಶ್ವರಃ**
**ತತ್ರ ದೇವಾಃ ಸಗಂಧರ್ವಾಃ ಸಯಕ್ಷೋರಗರಾಕ್ಷಸಾಃ**
**ಉಪಾಸತೇ ಯಂ ಸತತಂ ದೇವದೇವಃ ಪಿತಾಮಹಃ**

ವಾರಾಣಸಿಯಲ್ಲಿ ದೇವೋತ್ತಮನಾದ ಸರ್ವೇಶ್ವರ ನಾರಾಯಣನಿರುತ್ತಾನೆ. ಅವನನ್ನು ದೇವದೇವನಾದ ಬ್ರಹ್ಮನೂ ಎಲ್ಲ ದೇವತೆಗಳೂ ಗಂಧರ್ವರೂ ಯಕ್ಷರೂ, ರಾಕ್ಷಸರೂ ನಾಗರೂ ಉಪಾಸನೆಮಾಡುತ್ತಾರೆ. ಅದರಿಂದ ವಾರಣಸಿಗಿಂತ ಉತ್ತಮಸ್ಥಾನ ಹಿಂದೆ ಇರಲಿಲ್ಲ, ಮುಂದೆಯೂ ಇಲ್ಲ.

**ತಸ್ಮಾನ್ಮುಮುಕ್ಷುರ್ನಿಯತೋ ವಸೇದ್ವೈಮರಣಾಂತಕಂ**
**ವಾರಾಣಸ್ಯಾಂ ಮಹಾದೇವಾದ್ ಜ್ಞಾನಂ ಲಬ್ಧ್ವಾವಿಮುಚ್ಯತೇ**

ಮೋಕ್ಷವನ್ನು ಬಯಸುವವನು ಸಾಯುವವರೆಗೂ ನಿಯಮದಿಂದ ವಾರಾಣಸಿಯಲ್ಲಿ ವಾಸ ಮಾಡಬೇಕು. ಹಾಗೆ ಮಾಡಿದರೆ ಮಹಾದೇವನಿಂದ ಜ್ಞಾನೋಪದೇಶವನ್ನು ಪಡೆದು ಮೋಕ್ಷ ಹೊಂದಲು ಸಾಧ್ಯ.

ಆದರೆ ಆ ಸಮಯದಲ್ಲಿ ಪಾಪ ಮಾಡಿದರೆ ಜ್ಞಾನಸಂಪಾದನೆಗೆ ವಿಘ್ನ ಒದಗುವುದು. ಅದರಿಂದ ತ್ರಿಕರಣಗಳಿಂದಲೂ ಪಾಪ ಮಾಡಕೂಡದು. ಇದು ದೇವರಹಸ್ಯ, ಪುರಾಣಗಳ ರಹಸ್ಯ. ಇದನ್ನು ಯಾರೂ ಸರಿಯಾಗಿ ತಿಳಿದಿಲ್ಲ. ಹೀಗೆ ಶಿವನು ಪಾರ್ವತಿಗೆ ಉಪದೇಶಿಸುತ್ತಿದ್ದಾಗ ದೇವತೆಗಳೂ, ಋಷಿಗಳೂ ಕುಳಿತು ಕೇಳುತ್ತಿದ್ದರು.

**ಯಥಾನಾರಾಯಣಃ ಶ್ರೇಷ್ಠೋ ದೇವಾನಾಂ ಪುರುಷೋತ್ತಮಃ**
**ಯಥೇಶ್ವರಾಣಾಂ ಗಿರಿಶಃ ಸ್ಥಾನಾನಾಮೇತದುತ್ತಮಂ**

ದೇವರುಗಳಲ್ಲಿ ಪುರುಷೋತ್ತಮ ನಾರಾಯಣನು ಹೇಗೆ ಶ್ರೇಷ್ಠನೋ ಈಶ್ವರರಲ್ಲಿ ಶಿವನು ಹೇಗೆ ಶ್ರೇಷ್ಠನೋ ಹಾಗೆಯೇ ಕ್ಷೇತ್ರಗಳಲ್ಲಿ ವಾರಾಣಸಿ ಉತ್ತಮ.

ಪೂರ್ವ ಜನ್ಮದಲ್ಲಿ ಶಿವನನ್ನಾರಾಧಿಸಿದ್ದರೆ ಮಾತ್ರ ಕಾಶಿಯಲ್ಲಿ ಶಿವಾಲಯವನ್ನು ಹೊಂದಬಹುದು. ಯಾರು ನಿತ್ಯ ಕಾಶಿಯನ್ನು ಸ್ಮರಿಸಿ ನಾಮೋಚ್ಚಾರಣಮಾಡುತ್ತಾರೊ ಅವರ ಪಾಪಗಳು ದೂರವಾಗುತ್ತವೆ. ಜನರು ಏನೇ ಹೇಳಲಿ ತಂದೆತಾಯಿಗಳು ಗುರುಹಿರಿಯರು ಎಷ್ಟೇ ಭೋದಿಸಲಿ ಕಾಶೀಯಾತ್ರೆಯ ಬಯಕೆಯನ್ನು ಬಿಡಬಾರದು.

**ನಾರದ ಉವಾಚ**

**ನಾರದ :-** ಕಾಶಿಯಲ್ಲಿರುವ ಓಂಕಾರಲಿಂಗದ ಸ್ಮರಣ ಮಾತ್ರದಿಂದ ಎಲ್ಲ ಪಾಪ ಪರಿಹಾರವಾಗುವುದು. ಅದರಲ್ಲಿ ಪಂಚಾಯತನಮೂರ್ತಿಯಾಗಿ ಶಿವನೆಲೆಸಿ ಜೀವಿಗಳಿಗೆ ಮೋಕ್ಷವನ್ನು ತಂದು ಕೊಡುವನು. ಶಾಂತ್ಯತೀತಾ ಶಾಂತಿವಿದ್ಯಾ ಪ್ರತಿಷ್ಠಾ ನಿವೃತ್ತಿ ಈ ಐದು ಶಿವನ ಲಿಂಗಗಳು. ಪಂಚ ಆಯತನಗಳು. ಈ ರೂಪದಿಂದ ಶಿವನು ಓಂಕಾರವನ್ನು ಉಪದೇಶಿಸುತ್ತಾನೆ. ಕಾಶಿಯಲ್ಲಿ ಕೃತ್ತಿವಾಸೇಶ್ವರ, ಮಧ್ಯಮೇಶ್ವರ, ವಿಶ್ವೇಶ್ವರ, ಓಂಕಾರ, ಕಪರ್ದೀಶ್ವರ ಈಐದು ಲಿಂಗಗಳು ರಹಸ್ಯವಾಗಿದ್ದು ಶಿವನನುಗ್ರಹವಿಲ್ಲದೆ ಅವನ್ನು ಕಾಣಲು ಸಾಧ್ಯವಿಲ್ಲ.

ಹಿಂದೆ ಒಬ್ಬ ದೈತ್ಯನು ಆನೆಯ ರೂಪದಿಂದ ಶಿವನನ್ನು ಉಪಾಸನೆಮಾಡುತ್ತಿದ್ದ ಮುನಿಗಳನ್ನು ಕೊಲ್ಲಲು ಬಂದಾಗ ಶಿವನು ಲಿಂಗದಿಂದೆದ್ದು ಬಂದು ಶೂಲದಿಂದಿರಿದು ದೈತ್ಯನನ್ನು ಕೊಂದ. ಅವನ ಚರ್ಮವನ್ನುಟ್ಟ. ಮುನಿಗಳು ನಿರಾತಂಕವಾಗಿ ತಪಸ್ಸುಮಾಡಿ ಸಿದ್ಧಿ ಪಡೆದರು. ಸಾವಿರ ಜನ್ಮಗಳ ತಪಸ್ಸಿನಿಂದ ಲಭಿಸದ ಮೋಕ್ಷವೂ ಈ ಕೃತ್ತಿವಾಸೇಶ್ವರ ಲಿಂಗದಪೂಜೆಯಿಂದ ಒಂದು ಜನ್ಮದಲಿ ಲಭ್ಯವಾಗಬಹುದು. ಪ್ರತಿಯುಗದಲ್ಲಿಯೂ ವೇದಪಾರಂಗತರಾದ ಮುನಿಗಳು ಶತರುದ್ರಿಯವನ್ನು ಜಪಿಸುತ್ತ ಕೃತ್ತಿವಾಸೇಶ್ವರನನ್ನು ಸ್ತುತಿಸುತ್ತಾರೆ, ಧ್ಯಾನಿಸುತ್ತಾರೆ.

**ನಮೋ ಭವಾಯಾಮಲಯೋಗಧಾಮ್ನೇ ಸ್ಥಾಣುಂ ಪ್ರಪದ್ಯೇ ಗಿರಿಶಂ ಪುರಾಣಂ**
**ಸ್ಮರಾಮಿ ರುದ್ರಂ ಹೃದಯೇ ನಿವಿಷ್ಟಂ ಜಾನೇ ಮಹಾದೇವ ಮನೇಕ ರೂಪಂ**

ಶುದ್ಧವಾದ ಯೋಗಕ್ಕೆ ಆಶ್ರಯನಾದ ಶಿವನನ್ನು ನಮಿಸುವೆನು, ಕೈಲಾಸವಾಸಿ ಪುರಾಣಪುರುಷ ಸ್ಥಾಣುವನ್ನು ಶರಣುಹೊಂದುವೆನು. ಹೃದಯದಲ್ಲಿ ನೆಲೆಸಿದ ರುದ್ರನನ್ನು ಸ್ಮರಿಸುವೆನು. ಅನೇಕ ರೂಪವಾದ ಮಹಾದೇವನನ್ನು ಕಾಣುವೆನು.

ಕಪರ್ದೀಶ್ವರಲಿಂಗದ ಬಳಿ ಸ್ನಾನ, ಪಿತೃತರ್ಪಣಗಳಿಂದ ಭುಕ್ತಿ ಮುಕ್ತಿಗಳೆರಡೂ ಸಿಗುವುದು. ಪಿಶಾಚಮೋಚನ ತೀರ್ಥದಲ್ಲಿಯೂ ಶಿವನು ಎಲ್ಲ ಪಾಪಗಳನ್ನು ಪರಿಹರಿಸುವನು ಮುಕ್ತಿ ಕೊಡುವನು. ಹಿಂದೆ ಒಬ್ಬ ದೈತ್ಯನು ಹುಲಿಯ ವೇಷದಿಂದ ಒಂದು ಹೆಣ್ಣುಜಿಂಕೆಯನ್ನು ಬೆನ್ನಟ್ಟಿದಾಗ ಅದು ಹೆದರಿ ಕಪರ್ದೀಶ್ವರ ಲಿಂಗಕ್ಕೆ

ಪ್ರದಕ್ಷಿಣೆಯಾಗಿ ಸುತ್ತುತ್ತ ಓಡತೊಡಗಿತು. ದೈತ್ಯನು ಅದನ್ನು ಹಿಡಿದು ಉಗುರುಗಳಿಂದ ಸೀಳಿದ. ಬಳಿಕ ಅಲ್ಲಿ ಮುನಿಗಳಿರುವುದನ್ನು ಕಂಡು ನಿರ್ಜನಪ್ರದೇಶಕ್ಕೆ ಹೊರಟುಹೋದ. ಇತ್ತ ಮರಣ ಹೊಂದಿದ ಆ ಹೆಣ್ಣುಜಿಂಕೆ ಆಕಾಶದಲ್ಲಿ ಶಿವನಂತೆ ಮೂರು ಕಣ್ಣುಗಳು, ನೀಲಕಂಠ, ತಲೆಯಲ್ಲಿ ಚಂದ್ರ, ವೃಷಭವಾಹನ, ಸೂರ್ಯನಂತೆ ತೇಜಸ್ಸು, ಸುತ್ತಲೂ ಶಿವರೂಪದ ಗಣಗಳು ಹೀಗೆ ಹೊಳೆಯುತ್ತ ನಿಂತಿತು. ದೇವತೆಗಳು ನೋಡಿ ಆಶ್ಚರ್ಯದಿಂದ ಹೊಗಳಿದರು. ಹೂಮಳೆಗರೆದರು.

ಈ ಕಪರ್ದೀಶ್ವರಲಿಂಗವನ್ನರ್ಚಿಸಿದರೆ ಕಾಮ ಕ್ರೋಧ ಮುಂತಾಗಿ ಜ್ಞಾನಾರ್ಜನೆಯಲ್ಲಿ ಕಂಡುಬರುವ ವಿಘ್ನಗಳು ದೂರವಾಗುವುವು. ಇಲ್ಲಿ ಯೋಗಿಗಳು ಧ್ಯಾನಮಾಡಿದರೆ ಆರುತಿಂಗಳಲ್ಲಿ ಸಿದ್ಧಿ ಉಂಟಾಗುತ್ತದೆ.

ಹಿಂದೆ ಶಂಕುಕರ್ಣನೆಂಬ ತಪಸ್ವಿ ಪಿಶಾಚಮೋಚನಕ್ಷೇತ್ರದಲ್ಲಿ ಶಿವನನ್ನು ಪೂಜಿಸುತ್ತಿದ್ದ. ರುದ್ರಜಪ ಮಾಡುತ್ತಿದ್ದ. ಒಂದು ದಿನ ಒಂದು ಪ್ರೇತ ಅಲ್ಲಿಗೆ ಬಂದಿತು. ಅಸ್ಥಿಚರ್ಮ ಮಾತ್ರವಾಗಿದ್ದ ಆ ಪ್ರೇತ ಹಸಿದು ನಿಟ್ಟುಸಿರಿಡುತ್ತಿದ್ದುದನ್ನು ಕಂಡು ಮನಕರಗಿ ಮುನಿ ಕೇಳಿದ "ನೀನಾರು ? ಎಲ್ಲಿಂದ ಬಂದೆ ?" ಎಂದು.

**ಪ್ರೇತ :-** ನಾನು ಹಿಂದಿನ ಜನ್ಮದಲ್ಲಿ ಒಬ್ಬ ಬ್ರಾಹ್ಮಣನಾಗಿದ್ದೆ. ನನ್ನಲ್ಲಿ ಧನ ಧಾನ್ಯಸಂಪತ್ತು ಇತ್ತು. ಮಕ್ಕಳು ಮೊಮ್ಮಕ್ಕಳು ಇದ್ದರು. ಆದರೆ ಕುಟುಂಬ ಪೋಷಣೆಯನ್ನು ಬಿಟ್ಟರೆ ಇನ್ನೇನೂ ನಾ ಮಾಡಲಿಲ್ಲ. ಯಾವ ಪುಣ್ಯ ಕರ್ಮವನ್ನೂ ಆಚರಿಸಲಿಲ್ಲ. ಒಮ್ಮೆ ವಾರಾಣಸಿಯ ವಿಶ್ವೇಶ್ವರಲಿಂಗವನ್ನು ನೋಡಿ ಮುಟ್ಟಿ ನಮಸ್ಕರಿಸಿದ್ದೆ. ನಾನು ಸತ್ತಮೇಲೆ ಘೋರ ಯಮಸದನವನ್ನು ಮಾತ್ರ ನೋಡಲಿಲ್ಲ. ಆದರೂ ಹೀಗೆ ಹಸಿವು ನೀರಡಿಕೆಗಳಿಂದ ಬಳಲಿ ದಿಕ್ಕುಕಾಣದಂತಾಗಿದ್ದೇನೆ. ನನ್ನೀ ಪ್ರೇತಜನ್ಮವನ್ನು ಕಳೆಯಲು ಏನಾದರೊಂದು ಉಪಾಯವನ್ನು ಹೇಳು. ನಿನಗಿದೋ ನಮಸ್ಕಾರ, ನಿನಗೆ ಶರಣಾಗಿದ್ದೇನೆ.

**ಶಂಕುಕರ್ಣ :-** ನೀನು ವಿಶ್ವೇಶ್ವರನನ್ನು ನೋಡಿದೆ, ಮುಟ್ಟಿದೆ, ನಮಸ್ಕರಿಸಿದೆ. ಅಂದ ಮೇಲೆ ನಿನ್ನಂಥ ಪುಣ್ಯಶಾಲಿ ಲೋಕದಲ್ಲಿ ಇನ್ನಾರು ? ಅದರಿಂದಲೆ ನೀನೀ ಕ್ಷೇತ್ರಕ್ಕೆ ಬಂದಿರುವೆ. ಈಗ ನೀನೀ ಕುಂಡದಲ್ಲಿ ಭಕ್ತಿಯಿಂದ ಸ್ನಾನಮಾಡು, ನಿನ್ನ ಪಿಶಾಚ ಜನ್ಮ ತೊಲಗುತ್ತದೆ.

ಇದನ್ನು ಕೇಳಿ ಪಿಶಾಚವು ಕಪರ್ದೀಶ್ವರನನ್ನು ಸ್ಮರಿಸಿ ನೀರಲ್ಲಿ ಮುಳುಗಿಸುತ್ತಿತ್ತು. ಒಡನೆ ಚಂದ್ರಮೌಳಿಯಾಗಿ ರುದ್ರಗಣಗಳಿಂದೊಡಗೂಡಿ ಹೊಳೆಯುತ್ತ ವಾಲಖಿಲ್ಯಾದಿ ಮುನಿಸಮೇತನಾಗಿ ಉದಿಸುವ ಸೂರ್ಯನಂತೆ ಬೆಳಗಿತು. ದೇವತೆಗಳೂ ಸಿದ್ಧರೂ ಹೊಗಳಿದರು. ಅಪ್ಸರೆಯರು ಕುಣಿದರು, ಗಂಧರ್ವ ಕಿನ್ನರ ವಿದ್ಯಾಧರರೂ ಹೂಮಳೆಗರೆದರು. ಹೀಗೆ ಪಿಶಾಚವು ಮುಕ್ತಿಹೊಂದಿ ಶಿವಲೋಕವನ್ನು ಸೇರಿತು. ಶಂಕುಕರ್ಣನು ಆನಂದದಿಂದ ಕಪರ್ದೀಶ್ವರನನ್ನು ಸ್ತುತಿಸಿದ.

ಶಿವನೆ, ಯೋಗೇಶ್ವರನಾದ ಪುರಾಣ ಪುರುಷನಾದ ನಿನ್ನನ್ನು ಶರಣು ಹೊಂದುತ್ತೇನೆ. ನೀನು ಎಲ್ಲರ ಹೃದಯದಲ್ಲಿ ನೆಲೆಸಿರುವೆ. ಬ್ರಹ್ಮಮಯನಾದ ಮಹಾಮುನಿ ಆದಿಯೋಗಿ ನೀನಾಗಿರುವೆ. ನಿನ್ನನ್ನೆ ಮೊರೆಹೋಗುವೆನು.

**ಸಹಸ್ರ ಪಾದಾಕ್ಷಿ ಶಿರೋಭಿಯುಕ್ತಂ ಸಹಸ್ರರೂಪಂ ತಮಸಃ ಪರಸ್ತಾತ್**
**ತಂ ಬ್ರಹ್ಮಪಾರಂ ಪ್ರಣಮಾಮಿ ಶಂಭುಂ ಹಿರಣ್ಯಗರ್ಭಾಧಿಪತಿಂ ತ್ರಿನೇತ್ರಂ**

ಸಹಸ್ರಪಾದ ಅಕ್ಷಿ ಶಿರಸ್ಸುಗಳಿಂದ ಕೂಡಿ, ಸಹಸ್ರರೂಪ ಧರಿಸಿ, ಪ್ರಕೃತಿಯಿಂದಾಚೆಗಿರುವ ಬ್ರಹ್ಮನಿಗೂ ಒಡೆಯನಾದ, ವೇದಗಳ ಪರಮವೇದ್ಯನಾದ, ಮುಕ್ಕಣ್ಣನಾದ ಶಿವನನ್ನು ನಮಸ್ಕರಿಸುವೆನು.

ಪ್ರಪಂಚವನ್ನು ಸೃಷ್ಟಿಸಿ, ಅದರೊಳಗೆ ತುಂಬಿ, ಕೊನೆಗೆ ಸಂಹರಿಸುವ ಆ ಶಿವನನ್ನು ಮೊರೆಹೋಗುವೆನು. ನಿರ್ಬೀಜ ಸಮಾಧಿಯಲ್ಲಿರುವ ಯೋಗಿಗಳು, ವೇದವಾದಿಗಳು ಯಾರು ಅನೇಕ ರೂಪಗಳನ್ನು ಕಾಣುವರೊ ಹೊರಗಿನ ಕಣ್ಣಿಗೆ ಯಾರು ನೋಡಲು ಸಿಗಲಾರದೊ ಯಾರನ್ನು ದೇವತೆಗಳು ನಮಿಸುವರೊ ಆ ಇಂದು ಮೌಲಿಯನ್ನು ಶರಣು ಹೊಂದುವೆನು.

ಹೀಗೆ ಶಂಕುಕರ್ಣಮುನಿ ಶಿವನನ್ನು ಸ್ತುತಿಸಿ ಪ್ರಣವವನ್ನುಚ್ಚರಿಸಿ ದಂಡಪ್ರಣಾಮವನ್ನುಮಾಡಿದಾಗ ಜ್ಞಾನಾನಂದವನ್ನು ಕೋಟಿ ಜ್ವಾಲೆಗಳಿಂದ, ಬೆಂಕಿಯಂತೆ ಹೊಳೆವ ಶಿವಲಿಂಗ ಉದ್ಭವಿಸಿತು. ಅದರೊಳಗೆ ಮುನಿ ಲೀನನಾದ.

ಈ ಕಪರ್ದೀಶ್ವರ ಮಾಹಾತ್ಮ್ಯ ರಹಸ್ಯವಾದುದು. ವಿದ್ವಾಂಸರಿಗೂ ಇದು ತಿಳಿಯದು. ಇದನ್ನು ನಿತ್ಯ ಶ್ರವಣ ಮಾಡುವವರು ಪರಿಶುದ್ಧರಾಗಿ ಶಿವನ ಸಮೀಪಕ್ಕೆ ತೆರಳುವರು.

ಈ ಬ್ರಹ್ಮಪಾರ ಸ್ತೋತ್ರವನ್ನು ಬೆಳಿಗ್ಗೆ ಮತ್ತು ಮಧ್ಯಾಹ್ನ ಪಠಿಸಿದರೆ ಪರಯೋಗ ಲಭಿಸುವುದು.

**ನಾರದ ಉವಾಚ**

**ನಾರದ :-** ವಾರಾಣಸಿಯಲ್ಲಿ ಮಧ್ಯಮೇಶ್ವರಲಿಂಗವಿದೆ. ಇಲ್ಲಿ ಮಹಾದೇವನು ದೇವಿಯೊಡನೆ ರುದ್ರರಿಂದ ಪರಿವೃತನಾಗಿ ಸದಾ ಇದ್ದಾನೆ. ಅಲ್ಲಿ ಹಿಂದೆ ಕೃಷ್ಣನು ಒಂದು ವರ್ಷಕಾಲ ಮೈಯೆಲ್ಲ ಭಸ್ಮಧಾರಣ ಮಾಡಿಕೊಂಡು ಪಾಶುಪತರೊಂದಿಗೆ ಕುಳಿತು ರುದ್ರಾಧ್ಯಾಯವನ್ನು ಅಧ್ಯಯನ ಮಾಡಿದ. ಪಾಶುಪತವ್ರತವನ್ನಾಚರಿಸಿ ಶಿವನನ್ನಾರಾಧಿಸಿದ. ಅವನ ಶಿಷ್ಯರು ಅನೇಕಮಂದಿ ಅವನಿಂದ ಉಪದೇಶ ಪಡೆದು ಶಿವನನ್ನು ಸಾಕ್ಷಾತ್ಕರಿಸಿದರು. ಶಿವನೊಲಿದು ಮೈದೋರಿ ಕೃಷ್ಣನಿಗೆ ಅನೇಕ ವರಗಳನ್ನು ನೀಡಿದನು.

**ಶಿವ :-** ನನ್ನ ಭಕ್ತರಲ್ಲಿ ಯಾರು ವಿಧಿಪೂರ್ವಕವಾಗಿ ಗೋವಿಂದನನ್ನು ಅರ್ಚಿಸುವರೊ ಅವರಿಗೆ ಅವನ ತತ್ವಜ್ಞಾನ ಉದಿಸುವುದು. ನನ್ನ ಭಕ್ತರು ಅವನನ್ನು ಅರ್ಚಿಸಬೇಕು, ನಮಿಸಬೇಕು, ಧ್ಯಾನಿಸಬೇಕು. ಈ ಸ್ಥಳದಲ್ಲಿ ಯಾರು ನನ್ನ ದರ್ಶನ ಮಾಡುವರೊ ಅವರ ಬ್ರಹ್ಮಹತ್ಯೆಯಂಥ ಪಾಪಗಳೂ ತೊಲಗುವುವು. ಇಲ್ಲಿ ಪ್ರಾಣತ್ಯಾಗ ಮಾಡುವ ಪಾಪಿಗಳೂ ಉತ್ತಮ ಲೋಕವನ್ನು ಪಡೆಯುವರು. ಗಂಗೆಯಲ್ಲಿ ಮಿಂದು ಮಧ್ಯಮೇಶ್ವರನನ್ನು ಪೂಜಿಸುವವರೆ ಧನ್ಯರು. ಇಲ್ಲಿ ಮಾಡಿದ ಜ್ಞಾನ, ದಾನ, ತಪಸ್ಸು, ಶ್ರಾದ್ಧಕರ್ಮಗಳೆಲ್ಲವೂ ಏಳುಕುಲವನ್ನುದ್ಧರಿಸಬಲ್ಲವು. ಸೂರ್ಯನಿಗೆ ರಾಹು ಗ್ರಹಣದ ಕಾಲದಲ್ಲಿ ಸಂನಿಹಿತಿಯಲ್ಲಿ ಸ್ನಾನಮಾಡಿದರೆ ಸಿಗುವ ಫಲದ ಹತ್ತರಷ್ಟು ಇಲ್ಲಿ ಸಿಗುವುದು.

ಯುಧಿಷ್ಠಿರ, ಮಧ್ಯಮೇಶ್ವರನ ಈ ಮಹಿಮೆಯನ್ನು ಭಕ್ತಿಯಿಂದ ಶ್ರವಣ ಮಾಡಿದವನೂ ಪರಮಪದವನ್ನು ಹೊಂದುತ್ತಾನೆ.

**ನಾರದ ಉವಾಚ**

**ನಾರದ** :- ವಾರಾಣಸಿಯಲ್ಲಿ ಇನ್ನೂ ಅನೇಕ ಪವಿತ್ರ ತೀರ್ಥಗಳಿವೆ. ಪ್ರಯಾಗಕ್ಕಿಂತಲೂ ಉತ್ತಮವಾದ ಪ್ರಯಾಗತೀರ್ಥ ಇಲ್ಲಿದೆ. ವಿಶ್ವರೂಪ, ತಾಲ, ಆಕಾಶ, ಋಷಭ, ಸುನಿಲ, ಗೌರೀ, ಪ್ರಜಾಪತಿ, ಸ್ವರ್ಗದ್ವಾರ, ಜಂಬುಕೇಶ್ವರ, ಧರ್ಮ, ಗಯಾ, ಮಹಾನದೀ, ನಾರಾಯಣ, ವಾಯು, ಜ್ಞಾನ, ವರಾಹ, ಯಮ, ಸಂಮೂರ್ತಿ, ಅಗ್ನಿ, ಕಲೇಶ್ವರ, ನಾಗ, ಸೋಮ, ಸೂರ್ಯ, ಪರ್ವತ, ಮಣಿಕರ್ಣ್ಯ ಘಟೋತ್ಕಚ, ಶ್ರೀ, ಪಿತಾಮಹ, ಗಂಗಾ, ಯಯಾತಿ, ಕಪಿಲ, ಸೋಮೇಶ, ಬ್ರಹ್ಮತೀರ್ಥಗಳು ಪ್ರಸಿದ್ಧವಾಗಿವೆ.

ಬ್ರಹ್ಮತೀರ್ಥದಲ್ಲಿ ಹಿಂದೆ ಬ್ರಹ್ಮನು ಒಂದು ಶಿವಲಿಂಗವನ್ನು ತಂದು ಸ್ಥಾಪಿಸಬೇಕೆಂದಿರುವಾಗ ವಿಷ್ಣು ಅದನ್ನು ಸ್ಥಾಪಿಸಿದ. ಬ್ರಹ್ಮನು ಸ್ನಾನ ಮುಗಿಸಿ ಬಂದು ಅದನ್ನು ನೋಡಿ ಕೇಳಿದ, ''ನಾನು ತಂದ ಲಿಂಗವನ್ನು ನೀನೇಕೆ ಸ್ಥಾಪನೆ ಮಾಡಿದೆ ?'' ವಿಷ್ಣು ಹೇಳಿದ, 'ನಿನಗಿಂತಲೂ ನನಗೆ ರುದ್ರನಲ್ಲಿ ಭಕ್ತಿ ದೃಢವಾಗಿದೆ. ಅದರಿಂದ ನಾನೆ ಲಿಂಗವನ್ನು ಸ್ಥಾಪಿಸಿದೆ. ಅದರೂ ಹೆಸರು ನಿನ್ನದೆ ಇರಲಿ.'

ಭೂತೇಶ್ವರ, ಧರ್ಮಸಮುದ್ಭವ, ಗಂಧರ್ವ, ದೂರ್ವಾಸ, ವ್ಯೋಮ, ಚಂದ್ರ, ಚಿಂತಾಂಗದೇಶ್ವರ, ವಿದ್ಯಾಧರೇಶ್ವರ, ಕೇದಾರ, ಉಗ್ರ, ಕಾಲಂಜರ, ಸಾರಸ್ವತ, ಪ್ರಭಾಸ, ರುದ್ರಕರ್ಣ, ಕೋಕಿಲ, ಮಹಾಲಯ, ಹಿರಣ್ಯಗರ್ಭ, ಗೋಪ್ರೇಕ್ಷ, ಉಪಶಾಂತ, ಶಿವ, ವ್ಯಾಘ್ರೇಶ್ವರ, ತ್ರಿಲೋಚನ, ಲೋಕಾರ್ಕ, ಉತ್ತರ, ಕಪಾಲಮೋಚನ, ಶುಕ್ರೇಶ್ವರ, ಆನಂದಪುರ ಮುಂತಾದ ತೀರ್ಥಗಳು ವಾರಾಣಸಿಯಲ್ಲಿವೆ. ಅವನ್ನೆಲ್ಲ ವಿಸ್ತಾರವಾಗಿ ಹೇಳಲು ಹೊರಟರೆ ಕೋಟಿ ಕಲ್ಪಗಳೂ ಸಾಲವು.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಸ್ವರ್ಗಖಂಡದಲ್ಲಿ*
*ವಾರಾಣಸಿಯ ಮಹಾತ್ಮೆ ಎಂಬ ಹದಿಮೂರನೇಯ ಅಧ್ಯಾಯ ಮುಗಿದುದು*



## ನಾನಾ ವಿಧದ ತೀರ್ಥಗಳ ಕಥನ



**ನಾರದ ಉವಾಚ**

**ನಾರದ :-** ವಾರಾಣಸೀ ಮಹಾತ್ಮೆಯನ್ನೂ ಅಲ್ಲಿರುವ ತೀರ್ಥಗಳನ್ನು ಸಂಕ್ಷೇಪದಿಂದ ಹೇಳಿದ್ದಾಯಿತು. ಇನ್ನು ಬೇರೆ ತೀರ್ಥಗಳನ್ನು ವರ್ಣಿಸುವೆ, ಕೇಳು.

ಗಯಾಕ್ಕೆ ಹೋದರೆ ಆ ಪ್ರಯಾಣದಿಂದಲೆ ಅಶ್ವಮೇಧದ ಫಲಲಭಿಸುತ್ತದೆ. ಅಲ್ಲಿ ಅಕ್ಷಯ ವಟದ ಬಳಿ ಪಿತೃಗಳಿಗೆ ಕೊಟ್ಟದಾನ ಅಕ್ಷಯವೆನಿಸುತ್ತದೆ. ಮಹಾನದೀಸ್ನಾನ ಪಿತೃದೇವತಾ ತರ್ಪಣಗಳಿಂದ ಅಕ್ಷಯಪ್ರಾಪ್ತಿ, ಕುಲವೂ ಉದ್ಧೃತವಾಗುತ್ತದೆ. ಬ್ರಹ್ಮ ಸರಸ್ಸಿನಲ್ಲಿ ಪುಂಡರೀಕಯಾಗದ ಫಲ. ಅಲ್ಲಿ ಬ್ರಹ್ಮನು ನೆಟ್ಟಯೂಪಸ್ತಂಭವಿದೆ. ಅದಕ್ಕೆ ಪ್ರದಕ್ಷಿಣೆ ಬಂದರೆ ವಾಜಪೇಯ ಫಲ. ಧೇನುಕದಲ್ಲಿ ಒಂದು ದಿನವಿದ್ದು ತಿಲಧೇನು ದಾನಮಾಡಿದರೆ ಸರ್ವಪಾಪಪರಿಹಾರ, ಸೋಮಲೋಕ ಪ್ರಾಪ್ತಿ. ಅಲ್ಲಿ ಬೆಟ್ಟದ ಮೇಲೆ ಕಪಿಲೆ ಕರುವಿನೊಂದಿಗೆ ಸಂಚರಿಸಿದುದರ ಹೆಜ್ಜೆಯ ಗುರುತು ಈಗಲೂ ಕಾಣಿಸುತ್ತಿದೆ. ಅಲ್ಲಿ ಆಚಮನ ಸ್ನಾನಮಾಡಿದರೆ ಎಲ್ಲ ಪಾಪಗಳ ಪರಿಹಾರ.

ಗೃಧ್ರವಟವು ಶಿವಕ್ಷೇತ್ರ. ಅಲ್ಲಿ ಭಸ್ಮಸ್ನಾನಮಾಡಿ ಶಿವನ ದರ್ಶನಮಾಡಿದರೆ ಬ್ರಾಹ್ಮಣನು ದ್ವಾದಶ ವರ್ಷದ ವ್ರತದ ಫಲವನ್ನೂ ಇತರರು ಎಲ್ಲ ಪಾಪಗಳಿಂದ ಬಿಡುಗಡೆಯನ್ನು ಪಡೆಯುತ್ತಾರೆ. ಉದಯ ಪರ್ವತದಲ್ಲಿ ಸಾವಿತ್ರಿ ಪಾದಗಳ ಚಿಹ್ನೆ ಕಾಣಿಸುತ್ತದೆ. ಅಲ್ಲಿ ಸಂಧ್ಯಾವಂದನೆ ಮಾಡಿದರೆ ಹನ್ನೆರಡು ವರ್ಷದ ಸಂಧ್ಯಾವಂದನೆಯ ಫಲ ಒಮ್ಮೆಲೆ ಸಿಗುತ್ತದೆ. ಯೋನಿದ್ವಾರದಲ್ಲಿ ಗರ್ಭವಾಸ ದುಃಖದ ಪರಿಹಾರ. ಗಯಾದಲ್ಲಿ ಒಂದು ತಿಂಗಳು ವಾಸಮಾಡಿದರೆ ಏಳು ಪೀಳಿಗೆಯವರೆಗೆ ಕುಲ ಉದ್ಧೃತವಾಗುತ್ತದೆ.

**ಏಷ್ಟವ್ಯಾ ಬಹವಃ ಪುತ್ರಾಯದ್ಯಪ್ಯೇಕೋ ಗಯಾವ್ರಜೇತ್**
**ಯಜೇತವಾಶ್ವಮೇಧೇನ ನೀಲಂ ವಾವೃಷಮುತ್ಸೃಜೇತ್**

ಅನೇಕ ಮಂದಿ ಗಂಡುಮಕ್ಕಳನ್ನು ಪಡೆಯಲು ಆಶಿಸಬೇಕು. ಅವರಲ್ಲೊಬ್ಬನಾದರೂ ಗಯಾಯಾತ್ರೆ ಮಾಡಬಹುದು, ಅಥವಾ ಅಶ್ವಮೇಧಯಾಗವನ್ನು ಮಾಡಬೇಕು. ಇಲ್ಲದೆ ನೀಲ ವೃಷಭದ ಉತ್ಸರ್ಗ ಮಾಡಬೇಕು.

ಫಲ್ಗು ನದೀ ಸ್ನಾನದಿಂದ ಅಶ್ವಮೇಧದ ಫಲ. ಧರ್ಮಪೃಷ್ಠದಲ್ಲಿ ಧರ್ಮರಾಜನ ದರ್ಶನದಿಂದ ಅಶ್ವಮೇಧದ ಫಲ. ಬ್ರಹ್ಮತೀರ್ಥದಲ್ಲಿ ಬ್ರಹ್ಮನ ಪೂಜೆಮಾಡಿದರೆ ರಾಜಸೂಯ ಅಶ್ವಮೇಧಗಳ ಫಲ. ರಾಜಗೃಹ ತೀರ್ಥ ಸೇವನೆಯಿಂದ ಕಕ್ಷೀವಂತನಂತೆ ಸುಖಭೋಗ ಪಡೆಯಬಹುದು. ಯಕ್ಷಿಣೀ ತೀರ್ಥದಲ್ಲಿ ಅಗ್ನಿಯ ಎದುರಿನಲ್ಲಿ ನಿತ್ಯ ಕರ್ಮಗಳನ್ನು ಮಾಡಿದರೆ ಯಕ್ಷಿಣೀ ಪ್ರಸಾದದಿಂದ ಬ್ರಹ್ಮಹತ್ಯಾ ಪಾತಕವೂ ತೊಲಗುವುದು. ಮಣಿನಾಗಕ್ಕೆ ಹೋದರೆ ಸಾವಿರ ಗೋದಾನದ ಫಲ. ಅಲ್ಲಿ ನಿತ್ಯಕರ್ಮಗಳನ್ನು ಮಾಡಿದರೆ ಹಾವು ಕಡಿದ ವಿಷವೇರಲಾರದು. ಅಲ್ಲಿ ಒಂದು ರಾತ್ರಿ

ಕಳೆದರೆ ಎಲ್ಲ ಪಾಪ ಪರಿಹಾರ. ಗೌತಮ ವನದಲ್ಲಿ ಅಹಲ್ಯಾಹ್ರದ ಸ್ನಾನದಿಂದ ಪರಗತಿ ಲಾಭ. ಶ್ರೀತೀರ್ಥದಲ್ಲಿ ಐಶ್ವರ್ಯಲಾಭ. ಅಲ್ಲಿಯ ಉದಪಾನಸ್ನಾನದಿಂದ ಅಶ್ವಮೇಧ ಫಲ. ಜನಕರಾಜನ ಕುಂಡದಲ್ಲಿ ಸ್ನಾನ ಮಾಡಿದರೆ ವಿಷ್ಣುಲೋಕ ಪ್ರಾಪ್ತಿ. ವಿನಾಶನದಲ್ಲಿ ಎಲ್ಲ ಪಾಪಗಳೂ ತೊಲಗುತ್ತವೆ. ಅಶ್ವಮೇಧದ ಫಲ, ಸೋಮಲೋಕ ಪ್ರಾಪ್ತಿ.

ಗಂಡಕಿಯಲ್ಲಿ ಸರ್ವ ತೀರ್ಥಜಲವೂ ಉದ್ಭವಿಸುತ್ತದೆ. ಅಲ್ಲಿ ವಾಜಪೇಯ ಫಲ, ಸೂರ್ಯಲೋಕ ಪ್ರಾಪ್ತಿ. ಧ್ರುವ ತಪೋವನದಲ್ಲಿ ಯಕ್ಷಲೋಕ ಪ್ರಾಪ್ತಿ. ಕರ್ಮದಾನದೀ ಸ್ನಾನದಿಂದ ಪುಂಡರೀಕಯಾಗದ ಫಲ. ಸೋಮಲೋಕ ಪ್ರಾಪ್ತಿ. ವಿಶಾಲಾನದೀ ಸ್ನಾನದಿಂದ ಅಗ್ನಿಷ್ಟೋಮ ಫಲ, ಸ್ವರ್ಗಪ್ರಾಪ್ತಿ. ಮಾಹೇಶ್ವರೀ ಸ್ನಾನದಿಂದ ಅಶ್ವಮೇಧ ಫಲ, ಕುಲವೂ ಉದ್ಧೃತವಾಗುತ್ತದೆ. ದೇವಪುಷ್ಕರಿಣಿಯಲ್ಲಿ ವಾಜಪೇಯ ಫಲ, ದುರ್ಗತಿ ಪರಿಹಾರ. ಮಾಹೇಶ್ವರ ಪದಸ್ನಾನದಿಂದ ಅಶ್ವಮೇಧಫಲ. ಅಲ್ಲಿ ಕೋಟಿ ತೀರ್ಥಗಳಿವೆ. ಅವುಗಳನ್ನು ಆಮೆಯ ರೂಪದ ಅಸುರನೊಬ್ಬ ಅಪಹರಿಸುತ್ತಿದ್ದಾಗ ವಿಷ್ಣು ತಡೆದು ನಿಲ್ಲಿಸಿದ. ಆ ಕೋಟಿ ತೀರ್ಥದಲ್ಲಿ ಸ್ನಾನಮಾಡಿದರೆ ಪುಂಡರೀಕ ಫಲ, ವಿಷ್ಣುಲೋಕ ಪ್ರಾಪ್ತಿ.

ನಾರಾಯಣ ಕ್ಷೇತ್ರದಲ್ಲಿ ಹರಿಯ ಸನ್ನಿಧಾನವಿದೆ. ಬ್ರಹ್ಮಾದಿದೇವತೆಗಳೂ ಋಷಿಗಳೂ ಆದಿತ್ಯರೂ ವಸುಗಳೂ ರುದ್ರರೂ ಶಾಲಗ್ರಾಮ ವಿಗ್ರಹದಲ್ಲಿ ಆ ಜನಾರ್ಧನನನ್ನು ಉಪಾಸನೆ ಮಾಡುವರು. ಅವನ ದರ್ಶನದಿಂದ ಅಶ್ವಮೇಧ ಫಲ, ವಿಷ್ಣುಲೋಕ ಪ್ರಾಪ್ತಿ. ಅಲ್ಲಿ ಉದಪಾನಕುಂಡ ಎಲ್ಲ ಪಾಪಗಳನ್ನು ಪರಿಹರಿಸುವುದು. ನಾಲ್ಕು ಸಮುದ್ರಗಳ ಸನ್ನಿಧಾನ ಅಲ್ಲಿದೆ. ಅಲ್ಲಿ ಸ್ನಾನಮಾಡಿದರೆ ದುರ್ಗತಿ ಪರಿಹಾರ. ಮಹಾದೇವನಾದ ವಿಷ್ಣುವನ್ನು ಪೂಜಿಸಿದರೆ ಋಣಮುಕ್ತಿ.

ಜಾತಿಸ್ಮರ ಸ್ನಾನದಿಂದ ಪೂರ್ವಜನ್ಮದ ಸ್ಮರಣೆ. ವಟೇಶ್ವರಪುರದಲ್ಲಿ ಕೇಶವಾರಾಧನೆಯಿಂದ ಇಷ್ಟಲೋಕ ಪ್ರಾಪ್ತಿ. ಭರತಾಶ್ರಮದಲ್ಲಿ ಎಲ್ಲ ಪಾಪ ಪರಿಹಾರ. ವಾಮನ ಕ್ಷೇತ್ರದಲ್ಲಿಯೂ ಎಲ್ಲ ಪಾಪ ಪರಿಹಾರ. ಅಲ್ಲಿ ಹರಿ ನಮಸ್ಕಾರದಿಂದ ದುರ್ಗತಿ ಪರಿಹಾರ. ಕೌಶಿಕೀ ಸ್ನಾನದಿಂದ ಮಹಾಪಾತಕ ಪರಿಹಾರ, ರಾಜಸೂಯದ ಫಲ. ಚಂಪಕಾರಣ್ಯದಲ್ಲಿ ಒಂದು ರಾತ್ರಿ ಕಳೆದರೆ ಸಾವಿರ ಗೋದಾನ ಫಲ. ಗೋವಿಂದ ತೀರ್ಥದಲ್ಲಿ ಒಂದು ದಿನ ಉಪವಾಸ ಮಾಡಿದರೆ ಅಗ್ನಿಷ್ಟೋಮ ಫಲ. ಅಲ್ಲಿ ದೇವಿ ಸಮೇತನಾದ ವಿಶ್ವೇಶ್ವರನ ದರ್ಶನ ಮಾಡಿದರೆ ಮಿತ್ರಾವರುಣರ ಲೋಕ ಲಭಿಸುವುದು. ಕನ್ಯಾವಸಥದಲ್ಲಿ ನಿಯಮದಿಂದಿದ್ದರೆ ಮನು ಪ್ರಜಾಪತಿಯ ಲೋಕಗಳನ್ನು ಹೊಂದಬಹುದು. ಅಲ್ಲಿ ಕನ್ಯಾಮಾಸದಲ್ಲಿ ಸ್ವಲ್ಪ ದಾನಮಾಡಿದರೂ ಅಕ್ಷಯಫಲವಿದೆ. ನಿಷ್ಠಾವಾಸದಲ್ಲಿ ಅಶ್ವಮೇಧ ಫಲ, ವಿಷ್ಣುಲೋಕ ಪ್ರಾಪ್ತಿ. ನಿಷ್ಠಾಸಂಗಮದಲ್ಲಿ ದಾನ ಮಾಡಿದರೆ ಬ್ರಹ್ಮಲೋಕ ಪ್ರಾಪ್ತಿ. ಅಲ್ಲಿ ವಸಿಷ್ಠಾಶ್ರಮವಿದೆ. ಅಲ್ಲಿ ಸ್ನಾನ ಮಾಡಿದರೆ ವಾಜಪೇಯ ಫಲ.

ದೇವಕೂಟದಲ್ಲಿ ಅಶ್ವಮೇಧ ಫಲ, ಕುಲದ ಉದ್ಧಾರ. ಕೌಶಿಕನ ಕುಂಡದಲ್ಲಿ ಒಂದು ತಿಂಗಳ ವಾಸದಿಂದ ಅಶ್ವಮೇಧ ಫಲ. ಅಲ್ಲಿ ವಾಸಮಾಡಿದವರಿಗೆಂದೂ ದುರ್ಗತಿ ಇಲ್ಲ. ವಿಶ್ವಾಮಿತ್ರಮುನಿ ಸಿದ್ಧಿ ಪಡೆದ ಸ್ಥಳವೆ ಅದು. ವೀರಾಶ್ರಮದಲ್ಲಿ ಕುಮಾರನನ್ನು ಪೂಜಿಸಿದರೆ ಅಶ್ವಮೇಧ ಫಲ, ಇಂದ್ರಲೋಕ ಪ್ರಾಪ್ತಿ. ನಂದಿನೀಕುಂಡದಲ್ಲಿ ನರಮೇಧದ

ಫಲ. ಕಾಲಿಕಾ ಸಂಗಮದಲ್ಲಿ ಕೌಶಿಕೀ ಅರುಣಾಸ್ನಾನ, ಮೂರುದಿನ ಉಪವಾಸಗಳಿಂದ ಸರ್ವಪಾಪ ಪರಿಹಾರ. ಊರ್ವಶೀ ತೀರ್ಥ, ಸೋಮಾಶ್ರಮ, ಕುಂಭಕರ್ಣಾಶ್ರಮಗಳಲ್ಲಿ ಸ್ನಾನಮಾಡುವುದರಿಂದ ಭೂಮಿಯಲ್ಲಿ ಪೂಜ್ಯತಾ ಲಾಭ. ಕೋಕಾಮುಖ ಸ್ನಾನದಿಂದ ಪೂರ್ವಜನ್ಮಸ್ಮರಣೆ. ಸಕ್ರನ್ನದಿಯಲ್ಲಿ ಸ್ನಾನಮಾಡಿದರೆ ಧನ್ಯತೆ ಉಂಟಾಗುವುದು. ಎಲ್ಲ ಪಾಪಗಳೂ ತೊಲಗುವುವು. ಸ್ವರ್ಗ ಲಭಿಸುವುದು. ಋಷಭ ದ್ವೀಪ, ಸರಸ್ವತೀ, ಔದ್ಯಾನಕ ತೀರ್ಥಗಳಲ್ಲಿ ಸರ್ವಪಾಪ ಪರಿಹಾರ, ಬ್ರಹ್ಮತೀರ್ಥದಲ್ಲಿ ವಾಜಪೇಯ ಫಲ. ಚಂಪಾದಲ್ಲಿ ಗಂಗಾಸ್ನಾನ ಫಲ, ದಂಡಾರ್ಪಣದಲ್ಲಿ ಸಾವಿರ ಗೋದಾನಫಲ. ಲಾವಿಡಿಕಾದಲ್ಲಿ ವಾಜಪೇಯ ಫಲ, ವಿಮಾನಲಾಭ.

ಬಳಿಕ ಸಂಧ್ಯಾದಲ್ಲಿ ಸದ್ವಿದ್ಯಾತೀರ್ಥಾಚಮನದಿಂದ ವಿದ್ಯೆ ಲಭಿಸುವುದು. ಕರತೋಯಾ ನದೀ ತೀರದಲ್ಲಿ ಮೂರುದಿನ ಉಪವಾಸದಿಂದ ಅಶ್ವಮೇಧ ಫಲ, ಇಂದ್ರಲೋಕ ಪ್ರಾಪ್ತಿ. ಗಂಗಾಸಾಗರ ಸಂಗಮದಲ್ಲಿ ಅಶ್ವಮೇಧದ ಹತ್ತರಷ್ಟು ಫಲ ಗಂಗೆಯ ದ್ವೀಪದಲ್ಲಿ ಸ್ನಾನಮಾಡಿ ಮೂರು ದಿನ ಉಪವಾಸವಿದ್ದರೆ ಸರ್ವಾಭೀಷ್ಟಸಿದ್ಧಿ. ವೈತರಣೀನದಿಯಲ್ಲಿ ಪಾಪ ಪರಿಹಾರ. ಅದರ ವಿರಜತೀರ್ಥದಲ್ಲಿ ಚಂದ್ರನಂಥ ಕಾಂತಿಯ ಲಾಭ. ಪ್ರಭಾವದಲ್ಲಿ ಕುಲತೀರ್ಥ ಸ್ನಾನದಿಂದ ಸಾವಿರ ಗೋದಾನದ ಫಲ. ಕುಲವೂ ಶುದ್ಧವಾಗುವುದು.

ಶೋಣ ಜ್ಯೋತಿರಥೀ ಸಂಗಮದಲ್ಲಿ ವಾಸಮಾಡಿ ಪಿತೃದೇವತಾ ತರ್ಪಣಮಾಡಿದರೆ ಅಗ್ನಿಷ್ಟೋಮ ಫಲ. ಶೋಣನರ್ಮದಾ ಉದ್ಗಮಸ್ಥಳದಲ್ಲಿ ವಂಶಗುಲ್ಮ ತೀರ್ಥದಿಂದ ಆಚಮನ ಮಾಡಿದರೆ ಅಶ್ವಮೇಧಫಲ. ಕೋಶಲಾ ನದಿಯ ಋಷಭ ತೀರ್ಥದಲ್ಲಿ ಮೂರುದಿನ ಉಪವಾಸದಿಂದ ಅಶ್ವಮೇಧಫಲ. ಆ ನದಿಯ ಕಾಲತೀರ್ಥದ ಆಚಮನದಿಂದ ವೃಷಭದಾನದ ಹನ್ನೊಂದರಷ್ಟು ಫಲ. ಪುಷ್ಪವತೀಸ್ನಾನ, ಮೂರು ದಿನ ಉಪವಾಸದಿಂದ ಸಾವಿರಗೋದಾನಫಲ, ಕುಲದ ಉದ್ಧಾರ. ಬದರಿಕಾ ತೀರ್ಥಸ್ನಾನದಿಂದ ದೀರ್ಘಾಯುಷ್ಯ, ಸ್ವರ್ಗಪ್ರಾಪ್ತಿ.

ಪರಶುರಾಮನು ನೆಲೆಸಿರುವ ಮಹೇಂದ್ರ ಪರ್ವತದಲ್ಲಿ ರಾಮತೀರ್ಥಸ್ನಾನ ಮಾಡಿದರೆ ಅಶ್ವಮೇಧಫಲ. ಅಲ್ಲಿರುವ ಮತಂಗ ಕ್ಷೇತ್ರದಲ್ಲಿ ಸ್ನಾನಮಾಡಿದರೆ ಸಾವಿರ ಗೋದಾನಫಲ. ಶ್ರೀ ಪರ್ವತಕ್ಕೆ ಹೋಗಿ ನದೀತೀರದಲ್ಲಿ ಆಚಮನಮಾಡಿದರೆ ಅಶ್ವಮೇಧಫಲ, ಪರಮಸಿದ್ಧಿ. ಇಲ್ಲಿ ದೇವಿ ಸಮೇತನಾಗಿ ಮಹಾದೇವನೂ ದೇವತೆಗಳಿಂದ ಕೂಡಿದ ಬ್ರಹ್ಮನೂ ನೆಲೆಸಿದ್ದಾರೆ. ಇಲ್ಲಿ ದೇವಕುಂಡ ಸ್ನಾನದಿಂದಲೂ ಅಶ್ವಮೇಧ ಫಲ, ಪರಮಸಿದ್ಧಿ. ಋಷಭ ಪರ್ವತದಲ್ಲಿ ವಾಜಪೇಯ ಫಲ. ಸ್ವರ್ಗಪ್ರಾಪ್ತಿ. ಕಾವೇರಿ ಸ್ನಾನದಿಂದ ಸಾವಿರ ಗೋದಾನದ ಫಲ. ಸಮುದ್ರ ತೀರದ ಕನ್ಯಾತೀರ್ಥ ಸ್ನಾನದಿಂದ ಸರ್ವಪಾಪ ಪರಿಹಾರ.

ಸಮುದ್ರ ಮಧ್ಯದಲ್ಲಿ ಗೋಕರ್ಣವಿದೆ. ಮೂರುಲೋಕದಲ್ಲಿ ಪ್ರಸಿದ್ಧವಾದ ಈ ಕ್ಷೇತ್ರದಲ್ಲಿ ಬ್ರಹ್ಮಾದಿ ದೇವತೆಗಳೂ ಋಷಿಗಳೂ ಭೂತ ಯಕ್ಷ ಪಿಶಾಚ ಕಿನ್ನರ ನಾಗ ಸಿದ್ಧ ಚಾರಣ ಗಂಧರ್ವ ಮನುಷ್ಯ ನದೀ ಸಾಗರ ಪರ್ವತಗಳೂ ಉಮಾಪತಿಯನ್ನು

ಉಪಾಸನೆ ಮಾಡುತ್ತಾರೆ. ಅಲ್ಲಿ ಶಿವನನ್ನರ್ಚಿಸಿ ಮೂರು ದಿನ ಉಪವಾಸವಿದ್ದರೆ ಅಶ್ವಮೇಧದ ಹತ್ತರಷ್ಟು ಫಲ, ಶಿವಗಣಗಳೊಡೆತನ ಲಭಿಸುವುದು. ಹನ್ನೆರಡು ದಿನ ಉಪವಾಸದಿಂದ ಕೃತಾರ್ಥತ ಉಂಟಾಗುತ್ತದೆ. ಅಲ್ಲಿಯೆ ಪ್ರಸಿದ್ಧ ಗಾಯತ್ರೀಸ್ಥಾನವಿದೆ. ಮೂರು ದಿನ ಅಲ್ಲಿದ್ದರೆ ಸಾವಿರ ಗೋದಾನ ಫಲ. ಸಂವರ್ತ ಮಹರ್ಷಿಯ ಕುಂಡದಲ್ಲಿ ಸ್ನಾನ ಮಾಡಿದರೆ ರೂಪ ಸೌಭಾಗ್ಯ ಪ್ರಾಪ್ತಿ. ವೇಣಾದಲ್ಲಿ ಪಿತೃದೇವತಾ ತರ್ಪಣದಿಂದ ಮಯೂರ ಹಂಸಗಳು ಹೊರುವ ವಿಮಾನ ದೊರೆಯುವುದು.

ಗೋದಾವರಿ ಸ್ನಾನದಿಂದ ಹತ್ತು ಸಾವಿರ ಗೋದಾನ ಫಲ, ವಾಯುಲೋಕ ಪ್ರಾಪ್ತಿ. ವೇಣಾಸಂಗಮಸ್ನಾನದಿಂದ ವಾಜಪೇಯ ಫಲ. ವರದಾ ಸಂಗಮ ಸ್ನಾನದಿಂದ ಸಾವಿರ ಗೋದಾನ ಫಲ. ಬ್ರಹ್ಮಸ್ಥೂಣಾದಲ್ಲಿ ಮೂರು ದಿನ ಉಪವಾಸದಿಂದ ಸಾವಿರ ಗೋದಾನಫಲ, ಸ್ವರ್ಗಪ್ರಾಪ್ತಿ. ಕುಬ್ಜಾವನದಲ್ಲಿ ಬ್ರಹ್ಮಚರ್ಯದಿಂದಿದ್ದು ಮೂರು ದಿನ ಉಪವಾಸ ಮಾಡಿದರೆ ಸಾವಿರ ಗೋದಾನ ಫಲ. ದೇವಕುಂಡ, ಕೃಷ್ಣವೇಣಾ ಜಲೋದ್ಭವ, ಜ್ಯೋತಿರ್ಮಾತ್ರಕುಂಡ, ಕನ್ಯಾಶ್ರಮಗಳಲ್ಲಿ ಸ್ನಾನಮಾಡಿ ನೂರು ಯಾಗಗಳನ್ನೂ ಮಾಡಿ ಇಂದ್ರ ಸ್ವರ್ಗವಾಳಿದ. ಅಲ್ಲಿಗೆ ಹೋದರೆ ನೂರು ಅಗ್ನಿಷ್ಟೋಮಗಳ ಫಲ. ಸರ್ವದೇವ ಕುಂಡ ಸ್ನಾನದಿಂದ ಸಾವಿರ ಗೋದಾನ ಫಲ. ಜಾತಿಮಾತ್ರ ಕುಂಡ ಸ್ನಾನದಿಂದ ಪೂರ್ವಜನ್ಮ ಸ್ಮರಣೆ.

ಪಯೋಷ್ಣಿಯಲ್ಲಿ ಸ್ನಾನಮಾಡಿ ಪಿತೃದೇವಾರ್ಚನಮಾಡಿದರೆ ಸಾವಿರ ಗೋದಾನಫಲ. ದಂಡಕಾರಣ್ಯದಲ್ಲಿ ಆಚಮನಮಾಡಿದರೆ ಶರಭಂಗಾಶ್ರಮ ಶುಕಾಶ್ರಮಗಳ್ನು ಭೆಟ್ಟಿಮಾಡಿದರೆ ದುರ್ಗತಿ ಪರಿಹಾರ. ಕುಲವೂ ಪವಿತ್ರವಾಗುವುದು. ಜಮದಗ್ನಿ ವಾಸಮಾಡುತ್ತಿದ್ದ ಸೂರ್ಯಾರಕಕ್ಕೆ ಹೋಗಿ ರಾಮತೀರ್ಥ ಸ್ನಾನಮಾಡಿದರೆ ಸುವರ್ಣ ಲಾಭ. ಸಪ್ತ ಗೋದಾವರೀ ಸ್ನಾನದಿಂದ ಮಹಾಪುಣ್ಯ, ದೇವಲೋಕ ಪ್ರಾಪ್ತಿ. ದೇವಪಥದಲ್ಲಿ ದೇವಸತ್ರದ ಫಲ ಲಭಿಸುವುದು.

ತುಂಗಕಾರಣ್ಯದಲ್ಲಿ ಹಿಂದೆ ಸಾರಸ್ವತ ಮುನಿ ಶಿಷ್ಯರಿಗೆ ವೇದವನ್ನು ಉಪದೇಶಿಸಿದ. ಬಳಿಕ ವೇದಗಳು ಲುಪ್ತವಾದಾಗ ಅಂಗಿರಸಮುನಿ ಮಹರ್ಷಿಗಳ ಉತ್ತರೀಯದಲ್ಲಿ ಕುಳಿತು ವಿಧಿವತ್ತಾಗಿ ಓಂಕಾರವನ್ನುಚ್ಚರಿಸಿದಾಗ ಹಿಂದೆ ಅಭ್ಯಾಸ ಮಾಡಿದ ವೇದಗಳೆಲ್ಲವೂ ಸ್ಮರಣೆಗೆ ಬಂದವು. ಆಗ ದೇವತೆಗಳೂ ಋಷಿಗಳೂ ಭೃಗು ಮಹರ್ಷಿಯನ್ನು ಪುರೋಹಿತನನ್ನಾಗಿ ಮಾಡಿದರು. ಆತ ಎಲ್ಲ ಋಷಿಗಳಿಂದಲೂ ಪುನರಾರಾಧಾನ ಮಾಡಿಸಿ ಆಜ್ಯಭಾಗದಿಂದ ಅಗ್ನಿಯನ್ನು ತೃಪ್ತಿಗೊಳಿಸಿದ. ಬಳಿಕ ದೇವತೆಗಳೂ ಋಷಿಗಳೂ ತಮ್ಮ ಸ್ಥಾನಗಳಿಗೆ ತೆರಳಿದರು. ಈ ತುಂಗಕಾರಣ್ಯವನ್ನು ಪ್ರವೇಶಿಸಿದರೆ ಎಲ್ಲ ಪಾಪಗಳ ಪರಿಹಾರ. ಒಂದು ತಿಂಗಳು ವಾಸಮಾಡಿದರೆ ಬ್ರಹ್ಮಲೋಕ ಪ್ರಾಪ್ತಿ. ಕುಲವೂ ಪವಿತ್ರವಾಗುವುದು.

ಮೇಧಾವನದಲ್ಲಿ ಪಿತೃದೇವತಾ ತರ್ಪಣದಿಂದ ಅಗ್ನಿಷ್ಟೋಮ ಫಲ, ಸ್ಮೃತಿಮೇಧಾ ಲಾಭ. ಕಾಲಂಜರ ಬೆಟ್ಟದಲ್ಲಿ ಸಾವಿರ ಗೋದಾನ ಫಲ, ಸ್ವರ್ಗಲೋಕಪ್ರಾಪ್ತಿ. ಮಂದಾಕಿನೀ ಸ್ನಾನ ಪಿತೃದೇವಾರ್ಚನಗಳಿಂದ ಅಶ್ವಮೇಧ ಫಲ, ಪರಗತಿಲಾಭ. ಗುಹಸ್ಥಾನದಲ್ಲಿ ಅಭೀಷ್ಟ ಸಿದ್ಧಿ. ಕೋಟಿತೀರ್ಥ ಸ್ನಾನದಿಂದ ಸಾವಿರ ಗೋದಾನದ ಫಲ. ಅದಕ್ಕೆ ಪ್ರದಕ್ಷಿಣೆ ಬಂದು

ಶಿವಸ್ಥಾನಕ್ಕೆ ಹೋಗಬೇಕು. ಅಲ್ಲಿ ಶಿವನನ್ನರ್ಚಿಸಿದರೆ ಚಂದ್ರನಂಥ ಕಾಂತಿ ದೊರಕುವುದು. ಅಲ್ಲಿರುವ ಕುಂಡದಲ್ಲಿ ನಾಲ್ಕು ಸಮುದ್ರಗಳ ಸನ್ನಿಧಾನವಿದೆ. ಅಲ್ಲಿ ಸ್ನಾನ ಮಾಡಿ ಪ್ರದಕ್ಷಿಣೆ ಬರುವವನು ಪವಿತ್ರನಾಗಿ ಪರಗತಿ ಹೊಂದುವನು.

ಶೃಂಗವೇರಪುರದಲ್ಲಿ ರಾಮನು ಗಂಗೆಯನ್ನು ದಾಟಿದ. ಅಲ್ಲಿ ಸ್ನಾನ ಮಾಡಿದರೆ ಪಾಪಗಳನ್ನು ತೊಳೆದುಕೊಂಡು ವಾಜಪೇಯ ಫಲವನ್ನು ಹೊಂದಬಹುದು. ಮುಂಜವಟದಲ್ಲಿ ಶಿವನನ್ನರ್ಚಿಸಿ ಪ್ರದಕ್ಷಿಣೆ ಬಂದರೆ ಶಿವಗಣಗಳೊಡೆತನ ಲಭ್ಯವಾಗುವುದು. ಅಲ್ಲಿಂದ ಪ್ರಯಾಗಕ್ಕೆ ತೆರಳಬೇಕು. ಅಲ್ಲಿ ದೇವತೆಗಳೂ ಪಿತೃಗಳೂ ಋಷಿಗಳೂ ಸಿದ್ಧರೂ ಎಲ್ಲ ನದಿ ಸಮುದ್ರಗಳೂ ಸನ್ನಿಹಿತರಾಗಿದ್ದಾರೆ. ಬ್ರಹ್ಮನೊಂದಿಗೆ ಹರಿಯೂ ಇದ್ದಾನೆ. ಅಲ್ಲಿ ಮೂರು ಅಗ್ನಿಕುಂಡಗಳಿವೆ. ಎರಡರ ಮಧ್ಯೆ ಗಂಗೆ ಹರಿಯುತ್ತಾಳೆ. ಯಮುನೆ ಇಲ್ಲಿ ಗಂಗೆಯೊಡನೆ ಸೇರುತ್ತಾಳೆ. ಗಂಗಾ ಯಮುನಾ ನದಿಗಳ ಮಧ್ಯಭಾಗ ಭೂಮಿಯ ಜಘನದಂತೆ. ಪ್ರಯಾಗವು ಈ ಜಘನಭಾಗದ ಕೊನೆಯಲ್ಲಿದ್ದು ಉಪಸ್ಥದಂತಿದೆ. ಪ್ರಯಾಗ, ಪ್ರತಿಷ್ಠಾನ, ಕಂಬಲ, ಅಶ್ವತರ, ಭೋಗವತೀತೀರ್ಥಗಳು ಬ್ರಹ್ಮನಯಜ್ಞ ವೇದಿಕೆಗಳು, ಅಲ್ಲಿ ವೇದಗಳೂ ಯಜ್ಞಗಳೂ ಮೂರ್ತಿಮತ್ತಾಗಿ ಇರುತ್ತವೆ. ಬ್ರಹ್ಮನನ್ನು ಉಪಾಸನೆ ಮಾಡುತ್ತವೆ. ತಪಸ್ವಿಗಳಾದ ಋಷಿಗಳೂ ದೇವತೆಗಳೂ ಚಕ್ರವರ್ತಿಗಳೂ ಭಗವಂತನನ್ನು ಯಜ್ಞಗಳಿಂದಾರಾಧಿಸುತ್ತಿರುವರು. ಈ ಕ್ಷೇತ್ರಕ್ಕಿಂತ ಉತ್ತಮವಾದುದು ಮೂರು ಲೋಕದಲ್ಲಿಯೇ ಇಲ್ಲ. ಇದುವೆ ಎಲ್ಲ ತೀರ್ಥಗಳನ್ನು ಮೀರಿರುತ್ತದೆ. ಇದರ ನಾಮೋಚ್ಚಾರಣ ಮಾಡಿದರೂ ತಲೆಬಾಗಿ ನಮಿಸಿದರೂ ಎಲ್ಲ ಪಾಪ ಪರಿಹಾರವಾಗುವುದು. ಇಲ್ಲಿ ಸಂಗಮಸ್ನಾನ ಮಾಡಿದರೆ ರಾಜಸೂಯ ಅಶ್ವಮೇಧಗಳಫಲ. ಇದುವೆ ದೇವತೆಗಳ ಯಜ್ಞಭೂಮಿ. ಇಲ್ಲಿ ಸ್ವಲ್ಪ ದಾನ ಮಾಡಿದರೂ ಮಹತ್ತಾಗುತ್ತದೆ. ದೇವತೆಗಳೇನೆ ಹೇಳಲಿ, ಲೋಕವೂ ತಡೆಯಲಿ, ನೀನು ಮಾತ್ರ ಪ್ರಯಾಗ ಮರಣದಾಸೆಯನ್ನು ಬಿಡಬೇಡ. ಅರವತ್ತು ಕೋಟಿ, ಹತ್ತುಸಾವಿರ ತೀರ್ಥಗಳು ಇಲ್ಲಿವೆ. ನಾಲ್ಕು ವೇದಗಳನ್ನೋದಿ ಸತ್ಯನಿಷ್ಠನಾಗಿ ಪಡೆಯುವ ಪುಣ್ಯವನ್ನು ಪ್ರಯಾಗದಲ್ಲಿ ಗಂಗಾಯಮುನಾಸಂಗಮಸ್ನಾನದಿಂದಲೆ ಪಡೆಯಬಹುದು. ಇಲ್ಲಿ ವಾಸುಕಿಯ ಭೋಗವತೀ ತೀರ್ಥವಿದೆ. ಅದರಲ್ಲಿ ಸ್ನಾನ ಮಾಡಿದರೆ ಅಶ್ವಮೇಧ ಫಲ. ಇಲ್ಲಿಯೆ ಹಂಸಪ್ರಪತನ ತೀರ್ಥವೂ ಇದೆ. ಗಂಗೆಯ ತೀರದಲ್ಲಿ ದಶಾಶ್ವಮೇಧಿಕ ತೀರ್ಥವೂ ಇದೆ.

ಗಂಗೆಯಲ್ಲಿ ಎಲ್ಲಸ್ನಾನಮಾಡಿದರೂ ಕುರುಕ್ಷೇತ್ರಕ್ಕೆ ಸಮಾನವಾದ ಫಲವಿದೆ. ಕನಖಲದಲ್ಲಿ ಇನ್ನೂ ಹೆಚ್ಚಿನ ಫಲ. ಪ್ರಯಾಗದಲ್ಲಿ ಅದಕ್ಕಿಂತಲೂ ಹೆಚ್ಚಿನ ಫಲ. ಗಂಗೆಯ ನೀರು ನೂರಾರು ಪಾಪಗಳನ್ನು ಬೆಂಕಿಯಂತೆ ಸುಡುತ್ತದೆ. ಎಲ್ಲವೂ ಕೃತಯುಗದಲ್ಲಿ ಪವಿತ್ರ, ತ್ರೇತಾಯುಗದಲ್ಲಿ ಪುಷ್ಕರವು ಪವಿತ್ರ, ದ್ವಾಪರಯುಗದಲ್ಲಿ ಕುರುಕ್ಷೇತ್ರವು ಪವಿತ್ರ, ಕಲಿಯುಗದಲ್ಲಿಗಂಗೆ ಪವಿತ್ರ, ಪುಷ್ಕರದಲ್ಲಿ ತಪಸ್ಸು, ಮಹಾಲಯದಲ್ಲಿ ದಾನ, ಮಲಯದಲ್ಲಿ ಅಗ್ನ್ಯಾರೋಹಣ, ಭೃಗುತುಂಗದಲ್ಲಿ ಅನಶನ, ಪುಷ್ಕರ ಕುರುಕ್ಷೇತ್ರ ಗಂಗಾಸ್ನಾನ ಇವುಗಳಿಂದ ಏಳು ಪೀಳಿಗೆ ಜನರನ್ನು ಮುಕ್ತಿಗೆ ಒಯ್ಯಬಹುದು. ಎಷ್ಟುಕಾಲ ಮನುಷ್ಯನ ಅಸ್ಥಿಗಳು ಗಂಗಾಜಲ ಸ್ಪರ್ಶವನ್ನು ಹೊಂದುವುವೊ ಅಷ್ಟು ಕಾಲ ಅವನು ಸ್ವರ್ಗದಲ್ಲಿ ಸುಖದಿಂದಿರುತ್ತಾನೆ.

**ನ ಗಂಗಾ ಸದೃಶಂ ತೀರ್ಥಂ ನ ದೇವಃ ಕೇಶವಾತ್ ಪರಃ**
**ಬ್ರಾಹ್ಮಣೇಭ್ಯಃ ಪರಂ ನಾಸ್ತಿ ಏವಮಾಹ ಪಿತಾಮಹಃ**

ಗಂಗೆಗೆ ಸಮಾನವಾದ ತೀರ್ಥವಿಲ್ಲ. ವಿಷ್ಣುವನ್ನು ಮೀರುವ ದೇವರಿಲ್ಲ. ಬ್ರಹ್ಮಜ್ಞಾನಿಗಳಿಗಿಂತ ಶ್ರೇಷ್ಠ ಪ್ರಾಣಿಗಳಿಲ್ಲ. ಇದು ಬ್ರಹ್ಮನು ಹೇಳುವ ಮಾತು.

ಗಂಗೆ ಹರಿಯುವ ಪ್ರದೇಶವೆಲ್ಲ ಸಿದ್ಧಿಕ್ಷೇತ್ರವೆಂದು ತಿಳಿಯಬೇಕು. ತೀರ್ಥಗಳ ಈ ಮಹಾತ್ಮೆಯನ್ನು ದ್ವಿಜರಿಗೆ ಸಾಧುಗಳಿಗೆ ಮಿತ್ರರಿಗೆ ಆಶ್ರಿತರಿಗೆ ಕಿವಿಯಲ್ಲಿ ರಹಸ್ಯವಾಗಿ ಉಪದೇಶಿಸತಕ್ಕದ್ದು. ಅತ್ಯಂತ ಪವಿತ್ರ, ಸ್ವರ್ಗಸುಖಪ್ರದ, ಮಂಗಳಕರ, ಬುದ್ಧಿಶಕ್ತಿಯನ್ನು ಹೆಚ್ಚಿಸುವುದು. ಅಪುತ್ರರಿಗೆ ಪುತ್ರಾಸಂಪತ್ತನ್ನು ನೀಡುವುದು. ದರಿದ್ರರಿಗೆ ಧನಸಂಪತ್ತನ್ನೂ ಕೊಡುವುದು. ಬ್ರಾಹ್ಮಣನಿಗೆ ವಿದ್ಯೆ, ಕ್ಷತ್ರಿಯನಿಗೆ ರಾಜ್ಯ, ವೈಶ್ಯನಿಗೆ ಧನ, ಶೂದ್ರನಿಗೆ ಅಭೀಷ್ಟ ಸಿದ್ಧಿಗಳ್ಳೂ ನೀಡುವುದು. ನಿತ್ಯ ಶ್ರವಣ ಮಾಡುತ್ತಿದ್ದರೆ ಪೂರ್ವಜನ್ಮ ಸ್ಮರಣೆ ಉಂಟಾಗುವುದು. ಸ್ವರ್ಗಪ್ರಾಪ್ತಿಯಾಗುವುದು.

ಈ ತೀರ್ಥಗಳಲ್ಲಿ ಕೆಲವು ಅಗಮ್ಯವಾಗಿರಬಹುದು. ಅಂಥವುಗಳನ್ನು ಮನಸ್ಸಿನಿಂದಲಾದರೂ ಸೇವಿಸಿದರೆ ಸರ್ವತೀರ್ಥಗಳ ಪುಣ್ಯ ಸಿಗುವುದು.

ದಿಲೀಪ, ನೀನೂ ಈ ತೀರ್ಥಗಳನ್ನು ಸಂದರ್ಶಿಸು. '**ಪುಣ್ಯಂ ಪುಣ್ಯೇನ ವರ್ಧತೇ** ಪುಣ್ಯಕರ್ಮಗಳನ್ನು ಹೆಚ್ಚು ಹೆಚ್ಚಾಗಿ ಮಾಡುವ ಅವಕಾಶ ಸಾಮರ್ಥ್ಯಗಳು ಲಭಿಸಬೇಕಾದರೂ ಪುಣ್ಯಬೇಕು. ಈ ತೀರ್ಥಗಳನ್ನು ಮೊದಲು ಮನಸ್ಸಿನಲ್ಲಿ ಚಿಂತಿಸಬೇಕು. ಬಳಿಕ ಶ್ರದ್ಧೆಯಿಂದ ಹೆಚ್ಚಿನ ಮಹಿಮೆಯನ್ನು ಕೇಳಿ, ನೋಡಲು ಹೋಗಬೇಕು. ಪಾಪಿಯಾದ ಅಶುಚಿಯಾದ ಪುರುಷನು ತೀರ್ಥಸ್ನಾನ ಮಾಡಲು ಬಯಸುವುದಿಲ್ಲ. ನೀನು ಸದಾಚಾರದಿಂದಿದ್ದು ಪಿತೃಗಳ ಆರಾಧನೆಮಾಡಿದವನು. ದೇವತೆಗಳನ್ನು ಋಷಿಗಳನ್ನು ಸಂತೋಷಪಡಿಸಿದವನು. ನೀನು ಶಾಶ್ವತವಾದ ಕೀರ್ತಿಯನ್ನು ಪಡೆ. ಹೀಗೆ ಹೇಳಿ ವಸಿಷ್ಠ ಮುನಿ ಅದೃಶ್ಯರಾದರು.

ದಿಲೀಪನು ಶಾಸ್ತ್ರಜ್ಞಾನ, ವಸಿಷ್ಠರ ಉಪದೇಶಗಳಿಂದ ಎಲ್ಲ ತೀರ್ಥಯಾತ್ರೆಗಳನ್ನೂ ಮಾಡಿದ. ಹೀಗೆ ಭೂಪ್ರದಕ್ಷಿಣೆ ಮಾಡಿದರೆ ನೂರು ಅಶ್ವಮೇಧಗಳ ಫಲವಿದೆ. ಯುಧಿಷ್ಠಿರ, ನೀನೂ ದಿಲೀಪನಂತೆ ಎಲ್ಲ ತೀರ್ಥಗಳ ಯಾತ್ರೆಮಾಡು. ಎಲ್ಲೆಡೆಗಳಲ್ಲಿಯೂ ರಾಕ್ಷಸರಿರುತ್ತಾರೆ. ಆದರಿಂದ ನೀನೊಬ್ಬನೆ ಹೀಗೆ ಯಾತ್ರೆ ಮಾಡಲು ಶಕ್ಯ. ನಿನ್ನ ಜೊತೆಗೆ ಯಾತ್ರೆ ಮಾಡುವ ಅವಕಾಶಕ್ಕಾಗಿ ವಾಲ್ಮೀಕಿ, ಕಶ್ಯಪ, ಅತ್ರೇಯ, ಕೌಂಡಿನ್ಯ ವಿಶ್ವಾಮಿತ್ರ ಗೌತಮ ಅಸಿತ ದೇವಲ ಮಾರ್ಕಂಡೇಯ ಗಾಲವ ಭರದ್ವಾಜ ಉದ್ದಾಲಕ ಶೌನಕ ವ್ಯಾಸ ದೂರ್ವಾಸ ಜಾಬಾಲಿ ಮುಂತಾದ ಋಷಿಗಳು ಕಾದಿದ್ದಾರೆ. ಅವರನ್ನೂ ಜೊತೆಗೆ ಕರೆದೊಯ್ದು ಯಾತ್ರೆಮಾಡಿಸು. ಅವರಿಗಿಂತ ಎಂಟು ಪಾಲು ಹೆಚ್ಚು ಫಲ ನಿನಗೆ ದೊರೆಯುವುದು. ಮಹಾಭಿಷ ಯಯಾತಿ ಪುರೂರವ ಭಗೀರಥ ರಾಮರಂತೆ ನೀನು ಕೀರ್ತಿಶಾಲಿಯಾಗು. ದೇವೇಂದ್ರನಂತೆ ಶತ್ರುಗಳನ್ನು ನಾಶಪಡಿಸಿ ಪ್ರಜೆಗಳನ್ನಾಳು ಕಾರ್ತವೀರ್ಯಾರ್ಜುನನಂತೆ ಖ್ಯಾತಿಯನ್ನು ಪಡೆ. ಹೀಗೆ ನಾರದರು ಯುಧಿಷ್ಠಿರನಿಗೆ ಉಪದೇಶ ನೀಡಿ ಅದೃಶ್ಯರಾದರು.

ಯುಧಿಷ್ಠಿರನು ಎಲ್ಲ ಋಷಿಗಳೊಂದಿಗೆ ಎಲ್ಲ ತೀರ್ಥಗಳನ್ನು ಭಕ್ತಿಯಿಂದ ಸಂದರ್ಶಿಸಿದನು. ಈ ತೀರ್ಥಯಾತ್ರೆಯ ವರ್ಣನೆಯನ್ನು ಪಠಿಸಿದರೆ, ಕೇಳಿದರೆ ಎಲ್ಲ ಪಾಪಗಳೂ ಪರಿಹಾರವಾಗುತ್ತವೆ. ಋಷಿಗಳೆ, ನೀವು ಇನ್ನೇನನ್ನು ಕೇಳಬಯಸುವಿರಿ ? ನಿಮ್ಮಂಥ ಪುಣ್ಯವಂತರಾದ ಋಷಿಗಳಿಗೆ ನಾನು ಹೇಳಲಾಗದುದೇನಿದೆ ?

*ಇತಿ ಪದ್ಮ ಮಹಾಪುರಾಣ ಭಾಗ-೨ರ ಸ್ವರ್ಗಖಂಡದಲ್ಲಿ*
*ನಾನಾ ವಿಧದ ತೀರ್ಥಗಳ ಕಥನವೆಂಬ ಹದಿನಾಲ್ಕನೇಯ ಅಧ್ಯಾಯ ಮುಗಿದುದು*

—o—

## ಪ್ರಯಾಗತೀರ್ಥ ಮಹಿಮೆ

ಅಧ್ಯಾಯ - ೧೫

**ಸೂತ ಉವಾಚ**

**ಸೂತ :-** ನಾನು ಈಗ ಹೇಳಿದ ತೀರ್ಥಗಳೆಲ್ಲವೂ ವಿಷ್ಣುಪ್ರತಿಮೆಗಳು. ಇವುಗಳಲ್ಲಿ ಯಾವುದೊಂದನ್ನು ಸೇವಿಸಿದರೂ ಮುಕ್ತಿ ದೊರೆಯುವುದು. ಕಲಿಯುಗದಲ್ಲಿ ತೀರ್ಥಮಾಹಾತ್ಮ್ಯ ಶ್ರವಣ. ತೀರ್ಥಯಾತ್ರೆಗಳನ್ನು ಹೊರತು ಪಾಪ ಪರಿಹಾರಕ್ಕೆ ಬೇರೆ ಸಾಧನವಿಲ್ಲ. ತೀರ್ಥಸ್ಪರ್ಶಮಾಡುವೆ, ಅಲ್ಲೆ ವಾಸಮಾಡುವೆನೆಂದು ನಿತ್ಯ ಹೇಳುವವನೂ ಪರಗತಿ ಹೊಂದುವನು. ಯಾತ್ರೆಮಾಡುವವನು ಧನ್ಯನೆ ಸರಿ. ತೀರ್ಥ ಸೇವನೆಯಿಂದ ಜಗತ್ಕರ್ತ ನಾರಾಯಣನನ್ನೇ ಭಜಿಸಿದಂತಾಗುತ್ತದೆ.

**ಬ್ರಾಹ್ಮಣಸ್ತುಲಸೀಚೈವ ಅಶ್ವತ್ಥಸ್ತೀರ್ಥಸಂಚಯಃ**
**ವಿಷ್ಣುಶ್ಚ ಪರಮೇಶಾನಃ ಸೇವ್ಯ ಏವ ಸದಾ ನೃಭಿಃ**

ಬ್ರಹ್ಮಜ್ಞಾನಿ, ತುಲಸಿ, ಅಶ್ವತ್ಥ, ತೀರ್ಥಗಳು, ವಿಷ್ಣು, ಶಿವ ಇವರು ಮಾನವರಿಗೆ ಸದಾ ಸೇವ್ಯರು.

ತೀರ್ಥ ಸೇವನೆಗಿಂತಲೂ ಬ್ರಹ್ಮಜ್ಞಾನಿಯ ಸೇವೆಯೆ ಮೇಲು. ಅವನ ಪಾದಗಳಲ್ಲಿ ಎಲ್ಲ ತೀರ್ಥಗಳೂ ಇವೆ. ಅಶ್ವತ್ಥ ತುಲಸಿ ಗೋವುಗಳಿಗೆ ಪ್ರದಕ್ಷಿಣೆ ಬಂದರೂ ಎಲ್ಲ ತೀರ್ಥಗಳ ಯಾತ್ರೆ ಮಾಡಿದಂತೆ. ಪಾಪಗಳನ್ನು ತೀರ್ಥಯಾತ್ರೆಯಿಂದ ಪರಿಹರಿಸಿಕೊಳ್ಳದೆ ಹೋದಲ್ಲಿ ನರಕಕ್ಕೆ ಹೋಗಲೇಬೇಕಾಗುತ್ತದೆ. ಅಲ್ಲಿ ದುಃಖ ಅನುಭವಿಸಿ ಪಾಪ ಪರಿಹಾರ ಮಾಡಿಕೊಳ್ಳಬೇಕಾಗುತ್ತದೆ. ಅದರಿಂದ ವಿವೇಕಿಯಾದವನು ತೀರ್ಥಯಾತ್ರೆ ಮಾಡಬೇಕು.

**ಋಷಿಗಳು :-** ಸೂತನೆ, ಎಲ್ಲ ತೀರ್ಥಗಳನ್ನೂ ಪ್ರಯಾಗವನ್ನೂ ವರ್ಣಿಸಿರುವೆ, ಈಗ ಪ್ರಯಾಗ ಮಾಹಾತ್ಮ್ಯವನ್ನೇ ಇನ್ನೂ ವಿಸ್ತಾರವಾಗಿ ಕೇಳಲು ಬಯಸುತ್ತೇವೆ, ಹೇಳು.

**ಸೂತ :-** ಋಷಿಗಳೆ, ಹಿಂದೆ ಮಾರ್ಕಂಡೇಯ ಮುನಿ ಯುಧಿಷ್ಠಿರನಿಗೆ ಹೇಳಿದ ಪ್ರಯಾಗ ಮಾಹಾತ್ಮ್ಯವನ್ನೇ ನಿಮಗೆ ಹೇಳುವೆ. ಭಾರತಯುದ್ಧ ಮುಗಿದಿತ್ತು. ಯುಧಿಷ್ಠಿರನಿಗೆ ರಾಜ್ಯ ಲಭಿಸಿತ್ತು. ಆದರೆ ಅವನಿಗೆ ದುರ್ಯೋಧನ, ಅವನ ಹನ್ನೊಂದು ಅಕ್ಷೋಹಿಣಿ ಸೇನೆ, ದ್ರೋಣ, ಭೀಷ್ಮ, ಕರ್ಣ ಮುಂತಾದವರೆಲ್ಲ ಮಡಿದುದು ಕೆಡುಕೆನಿಸಿತು. ಅವರನ್ನೆಲ್ಲ ಕೊಂದು ನಾನೀ ರಾಜ್ಯದಿಂದೇನು ಸುಖ ಪಡೆಯಬೇಕಾಗಿದೆ ? ನಾನೇಕೆ ಬಾಳಬೇಕು ಎಂದುಕೊಂಡು ತುಂಬ ನಿರುತ್ಸಾಹದಿಂದ, ದುಃಖದಿಂದ ತಲೆ ತಗ್ಗಿಸಿ ಕುಳಿತ. ಈ ಪಾಪವನ್ನು

ನಾನು ಹೇಗೆ ಕಳೆಯಲಿ ಎಂದು ಚಿಂತಿಸತೊಡಗಿದ. ಯಾವ ತೀರ್ಥದಲ್ಲಿ ಮಿಂದರೆ ಪಾಪ ಕಳೆಯುತ್ತದೆ ? ವಿಷ್ಣುಲೋಕ ದೊರೆಯುತ್ತದೆ? ಕೃಷ್ಣನಲ್ಲಿ ಇದನ್ನು ಕೇಳೋಣವೆಂದರೆ ಈ ಹತ್ಯಾಕಾಂಡವನ್ನು ಮಾಡಿಸಿದವನೆ ಅವನು. ಧೃತರಾಷ್ಟ್ರನನ್ನು ಕೇಳಬಹುದಿತ್ತು. ಆದರೆ ಅವನೂ ಪುತ್ರಶೋಕದಿಂದ ಪರಿತಪಿಸುತ್ತಿದ್ದಾನೆ. ವೇದವ್ಯಾಸರೂ ಶರೀರದಲ್ಲಿ ತುಂಬ ಸೊರಗಿದ್ದಾರೆ. ಹೀಗೆ ಯುಧಿಷ್ಠಿರನು ಮಾತ್ರವೆ ಅಲ್ಲ, ಎಲ್ಲ ಪಾಂಡವರೂ ಕುಂತಿ ದ್ರೌಪದಿಯರೂ ಶೋಕಿಸುತ್ತ ಕುಳಿತರು.

ಆಗ ವಾರಾಣಸಿಯಲ್ಲಿದ್ದ ಮಾರ್ಕಂಡೇಯ ಮುನಿ ಈ ವೃತ್ತಾಂತವನ್ನು ತಿಳಿದು ಹಸ್ತಿನಾವತಿಗೆ ಬಂದು ಅರಮನೆಯ ಮಹಾದ್ವಾರದಲ್ಲಿ ನಿಂತ. ದ್ವಾರಪಾಲಕರು ಯುಧಿಷ್ಠಿರನಿಗೆ ಅವನಾಗಮನವನ್ನು ತಿಳಿಸಿದರು. ಯುಧಿಷ್ಠಿರನು ಒಡನೆ ಮುನಿಯ ಬಳಿಗೆ ಬಂದು ಸ್ವಾಗತಿಸಿದ.

**ಯುಧಿಷ್ಠಿರ :-** ಮಹಾಮುನಿಯೆ, ನಿನಗೆ ಸ್ವಾಗತ. ಇಂದು ನಿನ್ನ ದರ್ಶನದಿಂದ ನನ್ನ ಜನ್ಮ ಸಫಲವಾಯಿತು. ಕುಲವು ಪಾವನವಾಯಿತು. ಪಿತೃಗಳಿಗೆ ತೃಪ್ತಿಯಾಯಿತು.

ಹೀಗೆ ಹೇಳಿ ಮುನಿಯನ್ನು ಸಿಂಹಾಸನದಲ್ಲಿ ಕುಳ್ಳಿರಿಸಿ ಕಾಲುತೊಳೆದು ಸತ್ಕರಿಸಿದ. ಮುನಿಯು ಕೇಳಿದ.

**ಮಾರ್ಕಂಡೇಯ :-** ರಾಜನ್, ತುಂಬ ಕಳವಳಗೊಂಡಿರವೆ, ಏಕೆ ? ಹೇಳು.

**ಯುಧಿಷ್ಠಿರ :-** ಪೂಜ್ಯರೇ, ನಾವು ರಾಜ್ಯದ ಸಲುವಾಗಿ ಏನೆಲ್ಲ ಮಾಡಿದೆವು ಎನ್ನುವುದನ್ನು ತಿಳಿದೆ ಇಲ್ಲಿಗೆ ಬಂದಿರುವೆ.

**ಮಾರ್ಕಂಡೇಯ :-** ರಾಜನ್, ರಣರಂಗದಲ್ಲಿ ಯುದ್ಧ ಮಾಡುವವನು ಯಾರೆ ಇರಲಿ ಅವನಲ್ಲಿ ಪಾಪ ಅಂಟಿಕೊಳ್ಳುವುದಿಲ್ಲ ನೀನು ಕ್ಷತ್ರಿಯ, ಧರ್ಮದಿಂದಲೇ ಯುದ್ಧ ಮಾಡಿರುವೆ. ಇದನ್ನು ಮರೆಯಬೇಡ. ಪಾಪ ಸಂಭವಿಸಿತೆಂದು ತಿಳಿಯಬೇಡ.

**ಯುಧಿಷ್ಠಿರ :-**ಮುನಿಯೇ, ಪಾಪ ಪರಿಹಾರೋಪಾಯವನ್ನು ನನಗೆ ಉಪದೇಶಿಸು.

**ಮಾರ್ಕಂಡೇಯ :-** ಜ್ಞಾನ, ಕರ್ಮಯೋಗಗಳು, ತೀರ್ಥಯಾತ್ರೆ ಇವು ಪಾಪ ಪರಿಹಾರಕಗಳು. ಅದರಲ್ಲಿ ಪ್ರಯಾಗಯಾತ್ರೆಯು ಅತಿಶ್ರೇಷ್ಠವೆಂದು ಋಷಿಗಳೆಲ್ಲರೂ ಹೇಳುತ್ತಾರೆ.

**ಯುಧಿಷ್ಠಿರ ಉವಾಚ**

**ಯುಧಿಷ್ಠಿರ :-** ಪೂಜ್ಯರೇ, ಪ್ರಯಾಗಯಾತ್ರೆಯನ್ನು ಹೇಗೆ ಮಾಡಬೇಕು ? ಅಲ್ಲಿ ಸ್ನಾನ ಮಾಡಿದರೇನು ಫಲ ? ದೇಹತ್ಯಾಗ ಮಾಡಿದವರಿಗೇನು ಗತಿ ? ಅಲ್ಲಿ ವಾಸ ಮಾಡುವುದರಿಂದರೇನು ಲಾಭ ? ಇವೆಲ್ಲವನ್ನೂ ಹೇಳು. ಕೇಳುವಾಸೆ ನನಗಿದೆ.

**ಮಾರ್ಕಂಡೇಯ :-** ಮಗು, ಪ್ರಯಾಗದ ಮಹಿಮೆಯನ್ನು ಹಿಂದೆಯೆ ಋಷಿಗಳು ಹೇಳುತ್ತಿದ್ದುದನ್ನು ನಾನು ಕೇಳಿದ್ದೇನೆ. ಪ್ರಯಾಗ, ಆ ಪ್ರಯಾಗದಲ್ಲಿಯೂ ವಾಸುಕಿ ಕಂಬಲ ಅಶ್ವತರ ನಾಗರುಗಳ ತೀರ್ಥಗಳು ಪ್ರತಿಷ್ಠಾನ ಇವು ಬ್ರಹ್ಮನ ಯಾಗಶಾಲೆ ಎಂದು ಪ್ರಸಿದ್ಧವಾಗಿವೆ. ಇಲ್ಲಿ ಸ್ನಾನ ಮಾಡಿದರೆ ಸ್ವರ್ಗ, ಮಡಿದರೆ ಮೋಕ್ಷ. ಅಲ್ಲಿ ಬ್ರಹ್ಮಾದಿದೇವತೆಗಳು ಯಾತ್ರಿಕನನ್ನು ರಕ್ಷಿಸುತ್ತಾರೆ. ಅಲ್ಲಿರುವ ಎಲ್ಲ ತೀರ್ಥಗಳನ್ನು

ವರ್ಣಿಸಲು ನೂರಾರು ವರ್ಷಗಳೇ ಸಾಲವು. ಆದರಿಂದ ಸಂಕ್ಷೇಪವಾಗಿಯೆ ನಾನು ವರ್ಣಿಸುವೆ. ಅರವತ್ತು ಸಾವಿರ ಧನುಃ ಪ್ರಮಾಣದ ಜಾಹ್ನವಿಯನ್ನು ಎಲ್ಲ ದೇವತೆಗಳೂ ರಕ್ಷಿಸುತ್ತಾರೆ. ಯಮುನೆಯನ್ನು ಸೂರ್ಯನು ರಕ್ಷಿಸುತ್ತಾನೆ. ಪ್ರಯಾಗವನ್ನು ವಿಶೇಷವಾಗಿ ದೇವೇಂದ್ರನು ರಕ್ಷಿಸುತ್ತಾನೆ. ಮಂಡಲವನ್ನು ಹರಿ ರಕ್ಷಿಸುತ್ತಾನೆ. ವಟವನ್ನು ಶಿವನು ರಕ್ಷಿಸುತ್ತಾನೆ. ಪ್ರಯಾಗದ ಸ್ಮರಣ, ನಾಮೋಚ್ಚಾರಣ, ದರ್ಶನ, ಅಲ್ಲಿರುವ ಮಣ್ಣಿನಿಂದ ಮೈಗೆ ಲೇಪ, ಎಲ್ಲವೂ ಪಾಪಪರಿಹಾರ ಮಾಡುವಂಥವುಗಳು.

ಐದು ಕುಂಡಗಳು ಇಲ್ಲಿ ಇವೆ. ನಡುವೆ ಗಂಗೆ ಹರಿಯುತ್ತಾಳೆ. ಸಾವಿರ ಯೋಜನಗಳ ದೂರದಲ್ಲಿದ್ದುಕೊಂಡೆ ಗಂಗೆಯನ್ನು ಸ್ಮರಿಸಿದರೆ ಪಾಪಿಯೂ ಸದ್ಗತಿ ಪಡೆಯುವನು. ಪ್ರಯಾಗವನ್ನು ಪ್ರವೇಶಿಸಿದರೆ ಪಾಪ ಪರಿಹಾರಕ್ಕೆ ವಿಲಂಬವೆಲ್ಲಿ ? ಗಂಗಾ ಯಮುನೆಯರ ಮಧ್ಯೆ ಸ್ನಾನ ಮಾಡುವವನು ಪಾಪಮುಕ್ತನಾಗಿ ಎಲ್ಲ ಅಭೀಷ್ಟಗಳನ್ನೂ ಪಡೆಯುವನು. ಅಲ್ಲಿ ಬ್ರಹ್ಮಚರ್ಯದಿಂದ ಒಂದು ತಿಂಗಳ ಕಾಲ ಇದ್ದು ಪಿತೃದೇವತರ್ಪಣ ಮಾಡುತ್ತಿದ್ದರೆ ಅಭೀಷ್ಟಸಿದ್ಧಿ ಹೋದಲ್ಲೆಲ್ಲ ಕಂಡುಬರುವುದು. ಸಾಕ್ಷಾತ್ ಮಹೇಶ್ವರನು ನೆಲೆಸಿರುವ ಈ ಗಂಗಾಯಮುನಾಸಂಗಮವು ಮಾನವರಿಗೆ ದುಷ್ಪ್ರಾಪ್ಯವೆ ಸರಿ. ದೇವ ದಾನವ ಗಂಧರ್ವ ಋಷಿ ಸಿದ್ಧ ಚಾರಣರು ಅಲ್ಲಿ ಸ್ನಾನ ಮಾಡಿ ಸ್ವರ್ಗಕ್ಕೆ ಹೋಗುತ್ತಾರೆ.

**ಮಾರ್ಕಂಡೇಯ ಉವಾಚ**

**ಮಾರ್ಕಂಡೇಯ** :- ರಾಜನೆ, ಪ್ರಯಾಗ ಮಾಹಾತ್ಮ್ಯವನ್ನು ಇನ್ನೂ ಹೇಳುವೆ. ಏಕೆಂದರೆ ಅದು ಕೇಳಿದಷ್ಟೂ ಪಾಪಹರವೆನಿಸುವುದು. ದುಃಖ ದಾರಿದ್ರ್ಯಗಳಿಂದ ಬಳಲುವ ಪ್ರಯತ್ನಶಾಲಿಗಳಿಗೆ ಪ್ರಯಾಗದಂಥ ಅಕ್ಷಯಸ್ಥಾನ ಅದನ್ನು ಬಿಟ್ಟರೆ ಬೇರೆ ಇಲ್ಲ. ಅಲ್ಲಿ ದೇಹ ತ್ಯಾಗಮಾಡಿದವನು ಹೊಳೆವ ಚಿನ್ನದ ವಿಮಾನದಲ್ಲಿ ಕುಳಿತು ಗಂಧರ್ವ ಅಪ್ಸರೆಯರ ನಡುವೆ ಗಂಧರ್ವಲೋಕದಲ್ಲಿ ವಿಹರಿಸಬಲ್ಲ. ಅಭೀಷ್ಟ ವಸ್ತುಗಳನ್ನೆಲ್ಲ ಪಡೆಯಬಲ್ಲ. ಸುಂದರಾಂಗಿಯರಿಂದ ತುಂಬಿದ ರತ್ನಮಯ ಸುಂದರ ಗೃಹಗಳಲ್ಲಿ ಮಲಗಿ ಗೀತವಾದ್ಯರವಗಳಿಂದ ಎಚ್ಚತ್ತು ಸುಖಿಸಬಲ್ಲ, ಪುಣ್ಯಕ್ಷಯವಾದಾಗ ಸ್ವರ್ಗದಿಂದ ಚ್ಯುತನಾದರೂ ಭೂಮಿಯಲ್ಲಿ ಚಿನ್ನ ರತ್ನಗಳಿಂದ ತುಂಬಿ ಸಮೃದ್ಧವಾದ ಮನೆಯಲ್ಲಿ ಹುಟ್ಟುತ್ತಾನೆ. ತಿರುಗಿ ಪ್ರಯಾಗವನ್ನು ಸ್ಮರಿಸಿ ಅಲ್ಲಿಗೆ ಹೋಗುತ್ತಾನೆ.

ಕಾಡೆ ಇರಲಿ ನಾಡೆ ಇರಲಿ ಮನೆಯೆ ಇರಲಿ ವಿದೇಶವೆ ಇರಲಿ, ಪ್ರಯಾಗ ಸ್ಮರಣೆ ಮಾಡುತ್ತ ದೇಹತ್ಯಾಗ ಮಾಡಿದರೆ ಬ್ರಹ್ಮಲೋಕ ಪ್ರಾಪ್ತಿ. ಅಲ್ಲಿ ಎಲ್ಲ ಭೋಗವಸ್ತುಗಳಿಂದ ತುಂಬಿದ ಬಂಗಾರದ ನೆಲದಲ್ಲಿ ಹುಟ್ಟುತ್ತಾನೆ. ಋಷಿಮುನಿಗಳು ಸಿದ್ಧ ಪುರುಷರಿರುವ ಕಡೆ ವಾಸಿಸುತ್ತಾನೆ. ಸಾವಿರ ಸ್ತ್ರೀಯರಿಂದ ತುಂಬಿದ ಅಮರಗಂಗೆಯ ತಟಿಯಲ್ಲಿ ಋಷಿಗಳೊಂದಿಗೆ ವಿಹರಿಸುತ್ತಾನೆ. ದೇವ ಗಂಧರ್ವ ಸಿದ್ಧ ಚಾರಣರ ಸೇವೆಯನ್ನು ಸ್ವೀಕರಿಸುತ್ತಾನೆ. ಅಲ್ಲಿಂದ ಹಿಂತಿರುಗಿ ಭೂಮಿಗೆ ಬಂದಾಗಲೂ ಅಖಂಡ ಜಂಬೂ ದ್ವೀಪದಧಿಪತಿಯಾಗಿಯೇ ಹುಟ್ಟುತ್ತಾನೆ. ಸತ್ಕರ್ಮಗಳನ್ನು ಮಾಡುತ್ತಾನೆ.

ಗಂಗಾ ಯಮುನೆಯರ ನಡುವೆ ಸ್ವಕಾರ್ಯ ಪಿತೃಕಾರ್ಯ ದೇವತಾರ್ಚನೆಗಳಲ್ಲಿ ಚಿನ್ನ, ಮಣಿ ಮುತ್ತುಗಳನ್ನು ದಾನವಾಗಿ ತೆಗೆದುಕೊಂಡರೆ ಅದನ್ನು ಅನುಭವಿಸುವಷ್ಟು ಕಾಲ ಅವನಿಗೆ ಆ ತೀರ್ಥದ ಯಾತ್ರೆ ವ್ಯರ್ಥವಾಗುವುದು. ಈ ವಿಷಯದಲ್ಲಿ ಎಚ್ಚರದಿಂದಿರಬೇಕು.

ಪ್ರಯಾಗದಲ್ಲಿ ಕಪಿಲಾದಾನಮಾಡಬೇಕು. ಚಿನ್ನದಕೊಂಬು, ಬೆಳ್ಳಿಯ ಗೊರಸು, ಕೊರಳಲ್ಲಿ ಬಟ್ಟೆ. ಇಂಥ ಹಾಲುಕೊಡುವ ಕಪಿಲೆಯನ್ನು ಶ್ರೋತ್ರಿಯನೊಬ್ಬನಿಗೆ ಕೊಡಬೇಕು. ಬೆಲೆಬಾಳುವ ಬಟ್ಟೆಬರೆ ಮುತ್ತುರತ್ನಗಳನ್ನೂ ದಾನ ಮಾಡಬೇಕು. ಆಗ ಕಪಿಲೆಯ ಮೈಯ ರೋಮಗಳಷ್ಟು ಸಾವಿರ ವರ್ಷಗಳ ಕಾಲ ಸ್ವರ್ಗದಲ್ಲಿ ಸುಖಾನುಭವ. ಅಲ್ಲಿಂದ ಬಂದು ಭೂಮಿಯಲ್ಲಿ ಹುಟ್ಟುವಾಗ ಆ ಕಪಿಲೆಯೂ ಹುಟ್ಟಿ ಇವನಿಗೇ ದೊರಕುವುದು. ಉತ್ತರ ಕುರುದೇಶದಲ್ಲಿ ಅಕ್ಷಯಕಾಲ ಸುಖಪಡುವನು. ಒಂದು ಗೋವನ್ನು ದಾನಮಾಡಿದರೆ ಅದು ಹೆಂಡತಿ ಮಕ್ಕಳು ಪರಿವಾರ ಎಲ್ಲರನ್ನೂ ಮುಕ್ತಿ ಹೊಂದಿಸುತ್ತದೆ. ಗೋವು ಎಲ್ಲ ವಿಧದ ಘೋರ ಪಾಪಗಳಲ್ಲಿಯೂ ಮಾನವನನ್ನು ಕಾಪಾಡುತ್ತದೆ.

**ಯುಧಿಷ್ಠಿರ ಉವಾಚ**

**ಯುಧಿಷ್ಠಿರ :-** ಪೂಜ್ಯರೆ, ಪ್ರಯಾಗದ ಮಹಿಮೆಯನ್ನು ಕೇಳುತ್ತಿದ್ದಂತೆ ನನ್ನ ಪಾಪಗಳೆಲ್ಲ ಪರಿಹಾರವಾಗುವುದರಲ್ಲಿ ಸಂಶಯವಿಲ್ಲ. ಅಲ್ಲಿಗೆ ಹೋಗುವ ವಿಧಾನ ಅಲ್ಲಿ ಆಚರಿಸಬೇಕಾದ ಕರ್ಮಗಳನ್ನೆಲ್ಲ ನನಗೆ ಉಪದೇಶಿಸಿ.

**ಮಾರ್ಕಂಡೇಯ :-** ಎತ್ತಿನ ಗಾಡಿಯಲ್ಲಿ ಪ್ರಯಾಗ ಯಾತ್ರೆ ಮಾಡಕೂಡದು. ಅದು ನರಕ ಸಾಧನ. ಗೋವುಗಳ ಕೋಪ ಅಷ್ಟು ಅನರ್ಥಕಾರಿ. ಪಿತೃಗಳೂ ಅವನ ಕೈಯಿಂದ ನೀರು ಕುಡಿಯಲಾರರು. ಐಶ್ವರ್ಯವಿದೆಯೆಂದೂ, ವಾಹನ ಪ್ರಯಾಣದ ಮೋಹದಿಂದಲೋ ವಾಹನದಿಂದ ತೀರ್ಥಯಾತ್ರೆ ಮಾಡಿದರೆ ಅವನಿಗೆ ತೀರ್ಥ ವ್ಯರ್ಥವಾಗುವುದು.

ತೀರ್ಥಕ್ಕೆ ಹೋದಮೇಲೆ ಅಲ್ಲಿ ಯಥಾಶಕ್ತಿ ದಾನ ನೀಡಬೇಕು. ಮಕ್ಕಳನ್ನು ಮುದ್ದಿನಿಂದ ಸ್ನಾನಪಾನ ಮಾಡಿಸುವಂತೆ, ತಾನು ಅವುಗಳನ್ನು ಸೇವಿಸುವಂತೆ ವಿಪ್ರರನ್ನೂ ಹಾಗೆ ಶ್ರದ್ಧೆಯಿಂದ ದಾನವಿತ್ತು ತೃಪ್ತಿಪಡಿಸಬೇಕು. ಅದರಿಂದ ಪ್ರಳಯವರೆಗೂ ಸ್ವರ್ಗದಲ್ಲಿ ಸುಖಭೋಗ ಲಭಿಸುವುದು. ಇಲ್ಲಿ ಆರ್ಷವಿಧಿಯಿಂದ ಕನ್ಯಾದಾನ ಮಾಡಿದರೆ ಉತ್ತರಕುರು ದೇಶದಲ್ಲಿ ಅನಂತಕಾಲದವರೆಗೂ ಒಳ್ಳೆಯ ಹೆಂಡತಿ ಮಕ್ಕಳೊಂದಿಗೆ ಸುಖಿಸಬಹುದು.

ವಟ ಮೂಲದಲ್ಲಿ ದೇಹತ್ಯಾಗ ಮಾಡಿದರೆ ರುದ್ರಲೋಕ ಪ್ರಾಪ್ತಿ. ಪ್ರಳಯ ಕಾಲದ ದ್ವಾದಶಾದಿತ್ಯರ ತೇಜಸ್ಸಿನಲ್ಲಿ ಜಗತ್ತೆಲ್ಲ ಸುಟ್ಟು ಬೂದಿಯಾಗುವಾಗಲೂ ಈ ವಟಮೂಲ ಸುಟ್ಟು ಹೋಗುವುದಿಲ್ಲ. ಸೂರ್ಯಚಂದ್ರರಿಲ್ಲದ, ಗಾಳಿಯಿಲ್ಲದ ಬರೀ ಜಲಮಯವಾದ ಪ್ರಳಯಕಾಲದಲ್ಲಿ ವಿಷ್ಣು ಇಲ್ಲಿ ಆಲದೆಲೆಯ ಮೇಲೆ ಮಲಗುತ್ತಾನೆ.

ಇಲ್ಲಿ ಕಂಬಲ ಮತ್ತು ಅಶ್ವತರನಾಗರ ತೀರ್ಥಗಳು ಯಮುನೆಯ ದಕ್ಷಿಣ ತೀರದಲ್ಲಿವೆ. ಅಲ್ಲಿ ಸ್ನಾನಪಾನಗಳಿಂದ ಎಲ್ಲ ಪಾಪ ಪರಿಹಾರವಾಗುತ್ತದೆ. ಅಲ್ಲಿ ಮಹಾದೇವನನ್ನು ಅರ್ಚಿಸಿದರೆ ಕುಲದ ಹಿಂದಿನ ಮತ್ತು ಮುಂದಿನ ಹತ್ತು ಪೀಳಿಗೆಯ ಜನರನ್ನು ಉದ್ಧರಿಸಬಹುದು. ಅಲ್ಲಿ ಸ್ನಾನದಿಂದ ಅಶ್ವಮೇಧಫಲ ಲಭಿಸುತ್ತದೆ. ಸ್ವರ್ಗ ಸಿಗುವುದು. ಗಂಗೆಯ ಪೂರ್ವಪಾರ್ಶ್ವದಲ್ಲಿರುವ ಪ್ರತಿಷ್ಠಾನ ಕುಂಡದಲ್ಲಿ ಸಮುದ್ರಗಳ ಸನ್ನಿಧಾನವಿದೆ. ಅಲ್ಲಿ ಬ್ರಹ್ಮಚರ್ಯದಿಂದ ಮೂರು ರಾತ್ರಿಯಿದ್ದರೆ ಅಶ್ವಮೇಧ ಫಲ.

ಪ್ರತಿಷ್ಠಾನದ ಉತ್ತರಕ್ಕೆ ಭಾಗೀರಥಿಯ ಪೂರ್ವಕ್ಕೆ ಹಂಸಪ್ರಪತನ ತೀರ್ಥವಿದೆ. ಅಲ್ಲಿ ಸ್ನಾನದಿಂದ ಅಶ್ವಮೇಧ ಫಲ, ಸೂರ್ಯ ಚಂದ್ರರಿರುವಷ್ಟು ಕಾಲ ಸ್ವರ್ಗದಲ್ಲಿ ವಾಸ. ಹಂಸದಂತೆ ಬಿಳಿಯಾದ ಸುಂದರ ಊರ್ವಶೀ ಪುಲಿನದಲ್ಲಿ ಪಿತೃತರ್ಪಣ ಮಾಡಿದರೆ ಅರವತ್ತಾರು ಸಾವಿರ ವರ್ಷಕಾಲ ಪಿತೃಗಳೊಂದಿಗೆ ಸ್ವರ್ಗದಲ್ಲಿ ವಾಸ. ಅಲ್ಲಿ ಋಷಿ ಗಂಧರ್ವ ಕಿನ್ನರರಿಂದ ಆದರ ದೊರೆಯುವುದು. ಅಲ್ಲಿಂದ ಹಿಂತಿರುಗಿ ಭೂಮಿಗೆ ಬಂದಾಗ ಊರ್ವಶಿಯಂಥ ನೂರಾರು ಕನ್ನೆಯರನ್ನು ಪಡೆಯುತ್ತಾನೆ. ಲಕ್ಷ ಗೋಸಂಪತ್ತನ್ನು ಅನುಭವಿಸುತ್ತಾನೆ. ಪ್ರತಿದಿನ ಬೆಳಿಗ್ಗೆ ಕಾಂಚಿನೂಪುರಗಳ ಧ್ವನಿಯನ್ನು ಕೇಳುತ್ತಲೇ ಹಾಸಿಗೆ ಬಿಟ್ಟೇಳುತ್ತಾನೆ. ವಿಪುಲವಾದ ಭೋಗವನ್ನನುಭವಿಸಿ ತಿರುಗಿ ಊರ್ವಶೀಪುಲಿನಕ್ಕೆ ಬರುತ್ತಾನೆ.

ಅಲ್ಲಿ ದರ್ಭಾಸನದಲ್ಲಿ ಕುಳಿತು ಒಪ್ಪೊತ್ತು ಊಟ ಇಂದ್ರಿಯ ನಿಗ್ರಹಗಳಿಂದ ಒಂದು ತಿಂಗಳು ಇದ್ದರೆ ಚಿನ್ನದಾಭರಣಗಳಿಂದ ಶೋಭಿಸುವ ನೂರಾರು ನಾರಿಯರನ್ನು ಹೊಂದುತ್ತಾನೆ. ಸಮುದ್ರ ಪರಿವೃತ ಅಖಂಡ ಭೂಮಂಡಲದಲ್ಲಿಯ ಮಹಾಭೋಗಕ್ಕೆ ಅಧಿಪತಿಯಾಗುತ್ತಾನೆ. ಎಲ್ಲ ಭೋಗಗಳನ್ನನುಭವಿಸಿ ಕೊನೆಗೆ ಆ ತೀರ್ಥವನ್ನೆ ನೆನೆಯುತ್ತಾನೆ.

ವಟಮೂಲದಲ್ಲಿ ಬ್ರಹ್ಮಚರ್ಯ ಇಂದ್ರಿಯ ನಿಗ್ರಹಗಳಿಂದ ಕೂಡಿ ಉಪವಾಸ ಮಾಡುತ್ತ ಯೋಗಾಭ್ಯಾಸ ನಡೆಸಿದರೆ ಬ್ರಹ್ಮಜ್ಞಾನ ಲಭಿಸುವುದು. ಕೋಟಿತೀರ್ಥದಲ್ಲಿ ಪ್ರಾಣತ್ಯಾಗಮಾಡಿದರೆ ಅನೇಕ ಕೋಟಿ ವರ್ಷಗಳ ಕಾಲ ಸ್ವರ್ಗವಾಸ , ಅಲ್ಲಿಂದ ಭೂಮಿಗೆ ಬಂದು ಚಿನ್ನ ಮುತ್ತು ರತ್ನಗಳಿಂದ ತುಂಬಿದ ಮನೆಯಲ್ಲಿ ಸುಂದರ ರೂಪದಿಂದ ಹುಟ್ಟುತ್ತಾನೆ.

ವಾಸುಕಿಯ ಭೋಗವತೀ ತೀರ್ಥಕ್ಕೆ ಹೋಗಿ ಅಲ್ಲಿಂದ ಉತ್ತರಕ್ಕಿರುವ ದಶಾಶ್ವಮೇಧಕ ತೀರ್ಥದಲ್ಲಿ ಸ್ನಾನಮಾಡಿದರೆ ಅಶ್ವಮೇಧ ಫಲ ಶ್ರೀಮಂತ, ಸುಂದರ ಧಾರ್ಮಿಕ ಪುರುಷನಾಗಿ ಹುಟ್ಟುತ್ತಾನೆ. ನಾಲ್ಕು ವೇದಗಳ ಅಧ್ಯಯನ, ಸತ್ಯವಾಕ್ಯ, ಅಹಿಂಸೆ ಇವುಗಳಿಂದ ಬರುವ ಪುಣ್ಯವನ್ನು ಅಲ್ಲಿಗೆ ಹೋದರೆ ಅನಾಯಾಸವಾಗಿ ಪಡೆಯಬಹುದು.

ಗಂಗೆ ಎಲ್ಲ ಕಡೆಗಳಲ್ಲಿಯೂ ಕುರುಕ್ಷೇತ್ರಕ್ಕೆ ಸಮಾನ. ಸಾಗರ ಸಂಗಮದಲ್ಲಿ ಕುರುಕ್ಷೇತ್ರಕ್ಕಿಂತಲೂ ಹತ್ತರಷ್ಟು ಮಿಗಿಲು, ಅದು ಸಿದ್ಧಿಕ್ಷೇತ್ರ. ಭೂಮಿಯಲ್ಲಿ ಮನುಷ್ಯರನ್ನೂ ಪಾತಾಳದಲ್ಲಿ ನಾಗರನ್ನೂ ದೇವಲೋಕದಲ್ಲಿ ದೇವತೆಗಳನ್ನೂ ಮುಕ್ತಿಗೊಯ್ಯುವುದರಿಂದ ಗಂಗೆ **ತ್ರಿಪಥೆ** ಎನಿಸುವಳು. ಗಂಗಾದ್ವಾರ ಪ್ರಯಾಗ ಗಂಗಾ ಸಾಗರ ಸಂಗಮಗಳಲ್ಲಿ ಗಂಗೆ ದುರ್ಲಭ. ಅಲ್ಲಿ ಮಿಂದರೆ ಸ್ವರ್ಗ, ಮಡಿದರೆ ಮೋಕ್ಷ, ಗಂಗೆ ಪವಿತ್ರ ವಸ್ತುಗಳಲ್ಲೆಲ್ಲ ಪವಿತ್ರ, ಮಂಗಳಕರ ವಸ್ತುಗಳಲ್ಲೆಲ್ಲ ಮಹಾ ಮಂಗಳಕರ.

**ಮಾರ್ಕಂಡೇಯ :-** ರಾಜನ್ ಪ್ರಯಾಗ ಮಾಹಾತ್ಮ್ಯವನ್ನು ಇನ್ನೂ ಹೇಳುವೆನು, ಕೇಳು. ಅಲ್ಲಿ ಗಂಗೆಯ ಉತ್ತರದ ದಡದಲ್ಲಿ ಮಾನಸತೀರ್ಥವಿದೆ. ಅಲ್ಲಿ ಮೂರುದಿನ ಉಪವಾಸವಿದ್ದರೆ ಸರ್ವಾಭೀಷ್ಟಸಿದ್ಧಿ, ಅದರ ಸ್ಮರಣದಿಂದಲೆ ಗೋ, ಭೂ, ಹಿರಣ್ಯದಾನಗಳ ಫಲ ದೊರಕುತ್ತದೆ.

ತಿಳಿದೋ ತಿಳಿಯದೆಯೋ ಗಂಗೆಯಲ್ಲಿ ಮರಣ ಹೊಂದಿದ್ದರೆ ಸ್ವರ್ಗದಲ್ಲಿ ಹಂಸ ಸಾರಸಗಳು ಹೊರುವ ವಿಮಾನದಲ್ಲಿ ವಿಹರಿಸಬಹುದು. ಅಪ್ಸರೆಯರ ಗೀತಧ್ವನಿಕೇಳುತ್ತ ಹಾಸಿಗೆಯಿಂದೇಳಬಹುದು. ಅನೇಕ ಸಾವಿರ ವರ್ಷಗಲ ಕಾಲ ಸುಖವನ್ನನುಭವಿಸಿ ಭೂಮಿಗೆ ಬಂದು ಚಿನ್ನ ಮುತ್ತುರತ್ನಗಳಿಂದ ತುಂಬಿದ ಮನೆಯಲ್ಲಿ ಹುಟ್ಟಬಹುದು.

ಮಾಘ ಮಾಸದಲ್ಲಿ ಗಂಗಾ ಯಮುನಾ ಸಂಗಮದಲ್ಲಿ ಅರವತ್ತಾರು ಸಾವಿರ ತೀರ್ಥಗಳ ಸನ್ನಿಧಾನವಿರುತ್ತದೆ. ಆಗ ಮೂರುದಿನ ಸ್ನಾನಮಾಡಿದರೆ ಲಕ್ಷಗೋದಾನದ ಫಲ. ಇಲ್ಲಿ ಪಂಚಾಗ್ನಿ ಉಪಾಸನೆ ಮಾಡುವವನು ತನ್ನ ಮೈಯ ರೋಮಕೂಪಗಳಷ್ಟು ಸಾವಿರ ವರ್ಷ ಸ್ವರ್ಗಲೋಕದಲ್ಲಿ ವಾಸಿಸುತ್ತಾನೆ. ಸ್ವರ್ಗದಿಂದ ಹಿಂತಿರುಗಿ ಭೂಮಿಗೆ ಬಂದಾಗ ಜಂಬುದ್ವೀಪಕ್ಕೆಲ್ಲ ಅಧಿಪತಿಯಾಗಿ ಎಲ್ಲ ಸುಖಗಳನ್ನು ಅನುಭವಿಸಿ ತಿರುಗಿ ಆ ತೀರ್ಥಕ್ಕೆ ಯಾತ್ರೆ ಮಾಡುವನು.

ಸಂಗಮದಲ್ಲಿ ಜಲಪ್ರವೇಶ ಮಾಡುವವನು ಸೋಮಲೋಕದಲ್ಲಿ ಚಂದ್ರನಂತೆ ಹೊಳೆಯುತ್ತ ಅವನೊಂದಿಗೆ ವಿಹರಿಸುವನು. ಹಿಂತಿರುಗಿ ಭೂಮಿಗೆ ಬಂದಾಗ ಶ್ರೀಮಂತ ಮನೆತನದಲ್ಲಿ ಹುಟ್ಟುವನು ತಲೆಕೆಳಗೆ ಕಾಲುಮೇಲೆಮಾಡಿ ಬೆಂಕಿಯ ಜ್ವಾಲೆಯನ್ನು ಕುಡಿಯುತ್ತ ತಪಸ್ಸು ಮಾಡುವವನು ಲಕ್ಷ ವರ್ಷಗಳ ಕಾಲ ಸ್ವರ್ಗದಲ್ಲಿರುತ್ತಾನೆ. ಹಿಂತಿರುಗಿ ಭೂಮಿಗೆ ಬಂದಾಗ ಅಗ್ನಿಹೋತ್ರಿಯಾಗಿ ಹುಟ್ಟಿ ಸಮಸ್ತ ಭೋಗಗಳನ್ನನುಭವಿಸಿ ತಿರುಗಿ ಆ ತೀರ್ಥಕ್ಕೆ ಹೋಗುವನು. ಅಲ್ಲಿ ತನ್ನ ದೇಹವನ್ನೇ ಕೊಯ್ದು ಹಕ್ಕಿಗಳಿಗೆ ತಿನ್ನಿಸುವನು. ಲಕ್ಷವರ್ಷಗಳ ಕಾಲ ಸೋಮಲೋಕದಲ್ಲಿದ್ದು ಭೂಮಿಯಲ್ಲಿ ರೂಪಗುಣಗಳಿಂದ ಕೂಡಿದ ಧಾರ್ಮಿಕ ರಾಜನಾಗಿ ಹುಟ್ಟಿ ವಿಪುಲ ಭೋಗಗಳನ್ನು ಭೋಗಿಸಿ ತಿರುಗಿ ಆ ತೀರ್ಥಕ್ಕೆ ಹೋಗುವನು.

ಪ್ರಯಾಗದ ದಕ್ಷಿಣದಲ್ಲಿ, ಯಮುನೆಯ ಉತ್ತರದಡದಲ್ಲಿ ಋಣಪ್ರಮೋಚನ ತೀರ್ಥವಿದೆ. ಅಲ್ಲಿ ಒಂದು ದಿನ ಉಪವಾಸವಿದ್ದರೆ ಎಲ್ಲ ಋಣಗಳಿಂದ ಮುಕ್ತನಾಗಿ ಸೂರ್ಯಲೋಕವನ್ನು ಹೊಂದುತ್ತಾನೆ.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಸ್ವರ್ಗಖಂಡದಲ್ಲಿ*
*ಪ್ರಯಾಗ ತೀರ್ಥ ಮಹಿಮೆ ಎಂಬ ಹದಿನೈದನೇಯ ಅಧ್ಯಾಯ ಮುಗಿದುದು*

—o—

**ಯುಧಿಷ್ಠಿರ** :- ಪೂಜ್ಯರೇ, ನೀವು ಹೇಳಿದ ಈ ಪ್ರಯಾಗ ಮಹಿಮೆಯನ್ನು ಕೇಳಿ ನನ್ನ ಹೃದಯ ಪರಿಶುದ್ಧವಾಯಿತು. ಅಲ್ಲಿ ಉಪವಾಸ ವ್ರತವನ್ನು ಮಾಡಿದರೆ ಏನು ಫಲ, ಹೇಳಿ.

**ಮಾರ್ಕಂಡೇಯ** :- ರಾಜನೆ, ಪ್ರಯಾಗದಲ್ಲಿ ಉಪವಾಸ ವ್ರತವನ್ನು ಆಚರಿಸಿದರೆ ನಿರೋಗಿಯಾಗಿ ದೃಢಕಾಯನಾಗಿ ಇಂದ್ರಿಯಪಾಟವವನ್ನು ಪಡೆಯುತ್ತಾನೆ. ಅವನ ಹೆಜ್ಜೆಹೆಜ್ಜೆಗೂ ಅಶ್ವಮೇಧ ಫಲ. ಅವನ ಕುಲದ ಹಿಂದಿನ ಮತ್ತು ಮುಂದಿನ ಹತ್ತುಪೀಳಿಗೆಯವರು ಮುಕ್ತರಾಗುತ್ತಾರೆ. ಅವನೂ ಎಲ್ಲ ಪಾಪಗಳನ್ನು ತೊಳೆದುಕೊಂಡು ಪರಮಪದವನ್ನೈದುವನು.

**ಯುಧಿಷ್ಠಿರ** :- ಅನೇಕ ಅಶ್ವಮೇಧಗಳನ್ನು ವಿಜೃಂಭಣೆಯಿಂದ ಮಾಡಿದರೆ ಸಿಗುವ ಫಲ ಅಲ್ಪದಾನಗಳಿಂದ ಹೇಗೆ ಸಿಗುತ್ತದೆ ?

**ಮಾರ್ಕಂಡೇಯ** :- ಪ್ರಯಾಗದಲ್ಲಿ ಒಂದು ತಿಂಗಳು ವಾಸಮಾಡಿದರೆ ಎಲ್ಲ ಪಾಪಗಳೂ ಪರಿಹಾರವಾಗುತ್ತವೆ. ಶುಚಿಯಾಗಿದ್ದು ಶ್ರದ್ಧೆ ಅಹಿಂಸೆಗಳಿಂದ ಕೂಡಿದರೆ ಪರಮಪದವೇ ದೊರಕುವದು. ವಿಶ್ವಾಸದ್ರೋಹ ಮಾಡಿದವರು ಇಲ್ಲಿ ಮೂರು ಹೊತ್ತು ಸ್ನಾನ ಭಿಕ್ಷಾನ್ನ ಊಟಮಾಡುತ್ತ ಮೂರು ತಿಂಗಳು ಇರಬೇಕು. ಪಾಪಪರಿಹಾರ ವಾಗುವದು. ಕ್ಷೇತ್ರದ ಮಹಿಮೆಯನ್ನು ತಿಳಿದು ಜ್ಞಾನಪೂರ್ವಕವಾಗಿ ತೀರ್ಥಯಾತ್ರೆ ಮಾಡಿದರೆ ಸ್ವರ್ಗದಲ್ಲಿ ಎಲ್ಲ ಭೋಗವನ್ನು ಪಡೆಯಬಹುದು. ಪಿತೃಗಳು ನರಕದಲ್ಲಿದ್ದರೆ ಅವರನ್ನು ಪಾರು ಮಾಡಬಹುದು. ಇವೆಲ್ಲವೂ ರಹಸ್ಯ. ತಿರುಗಿ ತಿರುಗಿ ನೀನು ಕೇಳುವುದರಿಂದ ಹೇಳಿದೆ.

**ಯುಧಿಷ್ಠಿರ** :- ಪೂಜ್ಯರೇ, ನನ್ನ ಜನ್ಮ ಸಫಲವಾಯಿತು. ಕುಲವು ಉದ್ಧೃತವಾಯಿತು. ನಿನ್ನ ದರ್ಶನದಿಂದಲೇ ನನ್ನ ಪಾಪಗಳು ತೊಲಗಿದವು.

**ಮಾರ್ಕಂಡೇಯ** :- ತೀರ್ಥ ಮಹಿಮೆಯನ್ನು ಕೇಳಿದ ನಿನ್ನ ಜನ್ಮ ಸಫಲವಾಯಿತು. ಕುಲವೂ ಉದ್ಧೃತವಾಯಿತು.

**ಯುಧಿಷ್ಠಿರ** :- ಯಮುನೆಯಲ್ಲಿ ಯಾವ ಪುಣ್ಯ ಫಲ ಪಡೆಯಬಹುದು ? ಅದನ್ನೂ ಹೇಳಿ.

**ಮಾರ್ಕಂಡೇಯ** :- ಯಮುನೆಯ ಹೆಸರನ್ನು ಸಾವಿರ ಯೋಜನೆಗಳ ದೂರದಲ್ಲಿ ಉಚ್ಚರಿಸಿದರೂ ಪಾಪ ಪರಿಹಾರವಾಗುವದು. ಸ್ನಾನಪಾನಗಳಿಂದ ಪುಣ್ಯಶ್ರೇಯಸ್ಸು ಲಭಿಸುವದು. ಏಳು ಪೀಳಿಗೆಯವರೆಗಿನ ಜನರು ಪವಿತ್ರರಾಗುವರು. ಅಲ್ಲಿ ಪ್ರಾಣತ್ಯಾಗ ಮಾಡುವವನು ಪರಮಗತಿಯನ್ನು ಹೊಂದುವನು. ಯಮುನೆಯ ದಕ್ಷಿಣದಡದಲ್ಲಿ ಅಗ್ನಿತೀರ್ಥವಿದೆ. ಪಶ್ಚಿಮದಲ್ಲಿ ಧರ್ಮರಾಜ ತೀರ್ಥವಿದೆ. ಅಲ್ಲಿ ಸ್ನಾನ ಮಾಡಿದರೆ ಸ್ವರ್ಗ

ಮೋಕ್ಷಗಳೆರಡೂ ದೊರಕುವುವು. ಯಮುನೆಯ ದಕ್ಷಿಣ ದಡದಲ್ಲಿ ಸಾವಿರಾರು ತೀರ್ಥಗಳಿವೆ. ಉತ್ತರದಲ್ಲಿ ಆದಿತ್ಯನ ವಿರಜತೀರ್ಥ, ಅಲ್ಲಿ ಇಂದ್ರಾದಿ ದೇವತೆಗಳು ಪ್ರತಿದಿನ ಸಂಧ್ಯೋಪಾಸನೆಮಾಡುತ್ತಾರೆ. ಇನ್ನೂ ಅನೇಕ ತೀರ್ಥಗಳು ಸ್ವರ್ಗಮೋಕ್ಷಗಳನ್ನು ಕೊಡುವಂಥವುಗಳು ಇವೆ.

ಗಂಗೆ ಯಮುನೆಯರು ತುಲ್ಯ ಫಲ ಕೊಡುವವರು. ಗಂಗೆ ಹಿರಿಯಳೆಂದು ಎಲ್ಲೆಡೆ ಅವಳಿಗೆ ಪೂಜೆ.

ಈ ಯಮುನಾ ಮಾಹಾತ್ಮ್ಯವನ್ನು ಪ್ರಾತಃಕಾಲ ಪಠಿಸಿ ಕೇಳಿ ಸರ್ವಪಾಪ ಪರಿಹಾರವನ್ನು, ಸ್ವರ್ಗವನ್ನು ಪಡೆಯಬಹುದು.

**ಯುಧಿಷ್ಠಿರ :-** ಪುರಾಣಗಳಲ್ಲಿ ಸಾವಿರಾರು ತೀರ್ಥಗಳನ್ನು ವರ್ಣಿಸಿ ಅವೆಲ್ಲವೂ ಪವಿತ್ರ ಪರಗತಿದಾಯಕಗಳೆಂದು ಹೇಳುತ್ತಾರೆ. ಪೃಥ್ವಿಯಲ್ಲಿ ನೈಮಿಷವೆ ಶ್ರೇಷ್ಠ ಅಂತರಿಕ್ಷದಲ್ಲಿ ಪುಷ್ಕರ. ಲೋಕಗಳಲ್ಲಿಯೇ ಕುರುಕ್ಷೇತ್ರ ಎಂದೆಲ್ಲ ಹೇಳುತ್ತಾರೆ. ಅವೆಲ್ಲವನ್ನೂ ಬಿಟ್ಟು ಪ್ರಯಾಗ ಒಂದನ್ನೇ ಹೇಗೆ ಹೊಗಳುವೆ ? ಇದಕ್ಕೇನೂ ಆಧಾರವಿಲ್ಲ. ನಂಬಲರ್ಹವಲ್ಲ. ಪರಮಗತಿ, ಅಭೀಷ್ಟವಾದ ಭೋಗಗಳು ಇವೆಲ್ಲ ಅನಾಯಾಸವಾಗಿ ದೊರಕುವುದೆಂದು ಹೇಳುತ್ತಿರುವೆ. ಇದಕ್ಕೇನು ಆಧಾರ. ಏನು ಸಮಾಧಾನ, ಹೇಳು.

**ಮಾರ್ಕಂಡೇಯ :-** ಅನುಭವಸಿದ್ಧವಾದ ಈ ವಿಷಯಗಳನ್ನು ನಂಬಲರ್ಹವಲ್ಲ ವೆನ್ನುವಂತಿಲ್ಲ. ಶ್ರದ್ಧೆ ಉಳ್ಳವರಿಗೆ, ಹಿಂದಿನ ಪಾಪಗಳ ಕುರಿತು ಪಶ್ಚಾತ್ತಾಪ ಪಡುವವರಿಗೆ ಈ ತೀರ್ಥಫಲಗಳು ಪ್ರತ್ಯಕ್ಷವಾಗಿ ಗೋಚರಿಸುತ್ತವೆ. ಪ್ರಯಾಗದ ಮಹಿಮೆಗಳಲ್ಲಿ ಕೆಲವು ಕಂಡಿರುವವು. ಇನ್ನು ಕೆಲವು ಕಂಡವರು ಹೇಳಿರುವುದು. ಲೌಕಿಕ ವಿಷಯಗಳಲ್ಲಿ ಕೆಲವು ಪ್ರತ್ಯಕ್ಷ, ಕೆಲವು ಪರೋಕ್ಷ. ಎರಡನ್ನೂ ನಂಬುತ್ತೇವೆ. ಅಲೌಕಿಕದಲ್ಲಿಯೂ ಹೀಗೇ ನಂಬಬೇಕು. ಶಾಸ್ತ್ರ ಹೇಳುವುದರಲ್ಲಿ ಶ್ರದ್ಧೆಯಿಟ್ಟು ಅದರಂತೆ ನಡೆಯಬೇಕು. ಸಾವಿರ ಪೂರ್ವ ಜನ್ಮಗಳ ಸಾಧನೆಯಿಂದ ಈ ಯೋಗ ಲಭಿಸುತ್ತದೆ.

ಪ್ರಯಾಗದಲ್ಲಿ ಮರಣ ಹೊಂದಿದವನಿಗೆ ಸರ್ವೈಶ್ವರ್ಯ ದಾನಮಾಡಿದ ಫಲ ಹೇಗೆ ಸಿಗುತ್ತದೆ ಎಂಬುದು ನಿನ್ನ ಪ್ರಶ್ನೆ. ಶ್ರದ್ಧೆ ಉಳ್ಳವರಿಗೆ ಸಮಾಧಾನ ಹೇಳುತ್ತೇನೆ. ಎಲ್ಲ ಪ್ರಾಣಿಗಳಲ್ಲಿಯೂ ದೇವರಿದ್ದಾನೆ. ಕಣ್ಣಿಗೆ ಕಾಣಿಸುವುದಿಲ್ಲ. ಅಷ್ಟರಿಂದಲೆ ಇಲ್ಲವೆನ್ನುವಂತಿಲ್ಲ. ಆತ್ಮರು ಅನೇಕ ಇದ್ದರೂ ಅವುಗಳಲ್ಲೆಲ್ಲ ಪರಮಾತ್ಮನನ್ನೇ ಶ್ರೇಷ್ಠನೆಂದು ಪೂಜಿಸುವಂತೆ ಎಲ್ಲ ಲೋಕಗಳಲ್ಲಿಯೂ ಪ್ರಯಾಗ ಒಂದನ್ನೇ ವಿಶೇಷವಾಗಿ ಹೊಗಳುತ್ತಾರೆ ಬಲ್ಲವರು. ಏಕೆಂದರೆ ಅದು ತೀರ್ಥರಾಜ. ಬ್ರಹ್ಮನೂ ನಿತ್ಯ ಈ ಪ್ರಯಾಗ ತೀರ್ಥವನ್ನು ಸ್ಮರಿಸುತ್ತಾನೆ. ಅಲ್ಲಿಗೆ ಹೋದ ಮೇಲೆ ಇನ್ನಾವ ತೀರ್ಥವನ್ನೂ ಅವನು ಬಯಸುವುದಿಲ್ಲ. ದೇವತ್ವವನ್ನು ಪಡೆದ ಮೇಲೆ ಮನುಷ್ಯತ್ವಕ್ಕಾಗಿ ಆಸೆ ಪಡುವವರುಂಟೆ, ಹಾಗೆ ಯುಧಿಷ್ಠಿರ, ನೀನು ಇದರಿಂದ ಊಹಿಸಬಹುದು ಪ್ರಯಾಗ ಎಂಥ ಕ್ಷೇತ್ರವೆಂದು.

**ಯುಧಿಷ್ಠಿರ :-** ಕರ್ಮದಿಂದ ಸ್ವರ್ಗ ಪಡೆಯಲೂ ಯೋಗಬೇಕು. ಅದು ಜನ್ಮಾಂತರದ ಫಲವೆನ್ನುತ್ತಿರುವೆ. ಅದು ಹೇಗೆ ?

**ಮಾರ್ಕಂಡೇಯ :-** ಯಾವ ಕರ್ಮದಿಂದಲೂ ಗೋವು, ಅಗ್ನಿ, ಬ್ರಾಹ್ಮಣ, ಶಾಸ್ತ್ರ, ಚಿನ್ನ, ನೀರು, ಸ್ತ್ರೀಯರು, ತಾಯಿತಂದೆಗಳು ಇವರನ್ನು ನಿಂದಿಸುವವನಿಗೆ ಊರ್ಧ್ವಲೋಕ ಸಿಗಲಾರದೆಂದು ಬ್ರಹ್ಮನು ಹೇಳುತ್ತಾನೆ. ಆನೆ, ಕುದುರೆ, ಗೋವು, ಎತ್ತು, ಮಣಿ, ಮುತ್ತು ಚಿನ್ನಗಳನ್ನು ಪರೋಕ್ಷವಾಗಿ ಇನ್ನೊಬ್ಬರಿಂದ ಅಪಹರಿಸಿ ದಾನಮಾಡಿದರೆ ಸ್ವರ್ಗಸಿಗಲಾರದು. ನರಕಕ್ಕೆ ಬೀಳಬೇಕಾಗುವುದು. ಇದುವೆ ಯೋಗ, ಧರ್ಮ.

**ಮಾರ್ಕಂಡೇಯ :-** ರಾಜನೆ, ಪ್ರಯಾಗದ ಮಾಹಾತ್ಮ್ಯವನ್ನು ಇನ್ನೂ ಹೇಳುವೆ ಕೇಳು. ನೈಮಿಷ ಪುಷ್ಕರ ಗೋತೀರ್ಥ ಸಿಂಧು ಸಾಗರ ಕುರುಕ್ಷೇತ್ರ ಗಯಾ ಗಂಗಾಸಾಗರ ಮುಂತಾದ ಮೂವತ್ತು ಕೋಟಿ ಹತ್ತು ಸಾವಿರ ತೀರ್ಥಗಳು ಸದಾ ಪ್ರಯಾಗದಲ್ಲಿ ಸನ್ನಿಹಿತವಾಗಿರುತ್ತವೆ. ಮೂರು ಅಗ್ನಿ ಕುಂಡಗಳ ನಡುವೆ ಗಂಗೆ ಇಲ್ಲಿ ಹರಿಯುತ್ತಾಳೆ. ಯಮುನೆ ಇಲ್ಲಿ ಗಂಗೆಯನ್ನು ಸೇರುತ್ತಾಳೆ. ಅವರಿಬ್ಬರ ನಡುವೆ ಇರುವ ಭೂಮಿ ಪೃಥ್ವಿಯ ಜಘನಭಾಗವೆಂದು ಹೇಳುತ್ತಾರೆ. ಮೂರುವರೆ ಕೋಟಿ ತೀರ್ಥಗಳು ಮೂಲೋಕದಲ್ಲಿವೆ. ಅವೆಲ್ಲವೂ ಗಂಗೆಯಲ್ಲಿಯೇ ಇವೆ. ಪ್ರಯಾಗ, ಪ್ರತಿಷ್ಠಾನ, ಕಂಬಲ, ಅಶ್ವತರ, ಭೋಗವತಿ ಇವು ಬ್ರಹ್ಮನ ಯಜ್ಞವೇದಿಕೆಗಳು. ಅಲ್ಲಿ ದೇವತೆಗಳೂ ಯಜ್ಞಗಳೂ ಮೂರ್ತಿಮತ್ತಾಗಿ ಬ್ರಹ್ಮನನ್ನು ಆರಾಧಿಸುತ್ತಾರೆ. ಋಷಿಗಳು ದೇವತೆಗಳು ಚಕ್ರವರ್ತಿಗಳು ಇಲ್ಲಿ ಯಾಗ ಮಾಡುತ್ತಾರೆ. ಪ್ರಯಾಗಕ್ಕಿಂತ ಪುಣ್ಯಕರ ಕ್ಷೇತ್ರ ಇನ್ನಿಲ್ಲ ಗಂಗೆ ಹರಿವ ಪ್ರದೇಶವೇ ತಪೋವನ. ಅದುವೇ ಸಿದ್ಧಿಕ್ಷೇತ್ರ.

ಈ ಮಹಿಮೆಯನ್ನು ದ್ವಿಜರ, ಸಾಧುಗಳ, ಮಗನ, ಮಿತ್ರರ, ಶಿಷ್ಯನ, ಆಶ್ರಿತನ, ಕಿವಿಗಳಲ್ಲಿ ರಹಸ್ಯವಾಗಿ ಉಪದೇಶಿಸಬೇಕು. ಇದು ಧನ್ಯ, ಸ್ವರ್ಗಪ್ರದ, ಸೇವ್ಯ, ಶುಭ, ಪುಣ್ಯ, ರಮ್ಯ, ಪಾವನ, ಧರ್ಮ, ರಹಸ್ಯ, ಸರ್ವಪಾಪಹರ ಶ್ರವಣದಿಂದ ಪೂರ್ವಜನ್ಮಸ್ಮರಣೆ ತಂದು ಕೊಡುವಂತಹದು.

ಈ ತೀರ್ಥಗಳಲ್ಲಿ ಸ್ನಾನ ಮಾಡು. ವಕ್ರ ಬುದ್ಧಿ ನಿನಗೆ ಬೇಡ. ನೀನು ಕೇಳಿದುದನ್ನೆಲ್ಲ ಹೇಳಿದ್ದೇನೆ. ಅದರಿಂದ ನಿನ್ನ ಪಿತೃಗಳೂ ಉದ್ಧೃತರಾದರು. ಪ್ರಯಾಗ ಸ್ಮರಣೆಯಿಂದ ಇಹಪರಗಳೆರಡೂ ಸಿದ್ಧಿಸುವವು.

**ಯುಧಿಷ್ಠಿರ :-** ಮಹಾಮುನಿಯೇ, ಪ್ರಯಾಗದ ಮಹಿಮೆಯು ತಾರಕವೆನಿಸಿದೆ. ಅದನ್ನು ಪೂರ್ಣವಾಗಿ ಹೇಳು.

**ಮಾರ್ಕಂಡೇಯ :-** ಈ ಜಗತ್ತು ಬ್ರಹ್ಮ, ವಿಷ್ಣು, ಮಹೇಶ್ವರರ ಆಧೀನ. ಎಲ್ಲ ಚರಾಚರಗಳನ್ನೂ ಬ್ರಹ್ಮ ಸೃಜಿಸುತ್ತಾನೆ. ಅವುಗಳನ್ನು ಪರದೇವತೆ ವಿಷ್ಣು ಪಾಲಿಸುತ್ತಾನೆ. ಪ್ರಳಯಕಾಲದಲ್ಲಿ ರುದ್ರನು ಸಂಹರಿಸುತ್ತಾನೆ. ಪ್ರತಿಷ್ಠಾನದ ಉತ್ತರದಲ್ಲಿ ಬ್ರಹ್ಮನೂ ವಟದಲ್ಲಿ ಮಹೇಶ್ವರನೂ ಇದ್ದಾರೆ. ಅದರಿಂದ ದೇವತೆಗಳೂ ಗಂಧರ್ವರೂ, ಸಿದ್ಧರೂ, ಋಷಿಗಳೂ, ಈ ಪ್ರಯಾಗದಲ್ಲಿ ಜನರನ್ನು ಪಾಪದಿಂದ ರಕ್ಷಿಸುತ್ತಾರೆ.

**ಯುಧಿಷ್ಠಿರ :-** ತ್ರಿಮೂರ್ತಿಗಳು ಪ್ರಯಾಗದಲ್ಲಿ ಏಕೆ ನೆಲಸಿರುವರು ?

**ಮಾರ್ಕಂಡೇಯ :-** ಪಂಚಯೋಜನ ವಿಸ್ತೀರ್ಣವಾದ ಪ್ರಯಾಗದ ರಕ್ಷಣೆಗಾಗಿ ಅವರು ಅಲ್ಲಿ ನೆಲೆಸಿದ್ದಾರೆ. ಅಲ್ಲಿ ಸ್ವಲ್ಪ ಪಾಪಮಾಡಿದರೂ ನರಕಕ್ಕೆ ತಳ್ಳುತ್ತಾರೆ. ಬ್ರಹ್ಮನ

ಯಾಗ ಸ್ಥಳವಾದುದರಿಂದ ಇದು ಪ್ರಯಾಗ. ಯುಧಿಷ್ಠಿರ, ಭ್ರಾತೃವಧದ ಪಾಪಕ್ಕೆ ಚಿಂತಿಸದೆ ಸೋದರರೊಂದಿಗೆ ರಾಜ್ಯವಾಳು.

**ಸೂತ ಉವಾಚ**

**ಸೂತ :-** ಪಾಂಡವರು ಮುನಿಗಳಿಗೆ ನಮಸ್ಕರಿಸಿ ಗುರುದೇವತೆಗಳನ್ನು ಅರ್ಚಿಸಿದರು. ಕೃಷ್ಣನೂ ಆಗಲೆ ಬಂದು ಅವರಿಂದ ಸತ್ಕಾರ ಪಡೆದ. ಎಲ್ಲರೂ ಸೇರಿ ಯುಧಿಷ್ಠಿರ ಪಟ್ಟಾಭಿಷೇಕ ನಡೆಸಿದರು. ಮಾರ್ಕಂಡೇಯ ಮುನಿ ಸ್ವಸ್ತಿವಾಚನ ಮಾಡಿ ಮಹಾದಾನವನ್ನು ಪಡೆದ.

ಪ್ರಾತಃಕಾಲದಲ್ಲೆದ್ದು ಈ ಆಖ್ಯಾನವನ್ನು ಪಠಿಸಿ ಇಲ್ಲವೆ ಕೇಳಿ ಎಲ್ಲ ಪಾಪಗಳಿಂದ ಮುಕ್ತನಾಗಬಹುದು. ವಿಷ್ಣುಲೋಕವನ್ನು ಸೇರಬಹುದು.

**ಕೃಷ್ಣ :-** ಯುಧಿಷ್ಠಿರ, ನಾನು ಸ್ನೇಹದಿಂದ ಹೇಳುತ್ತೇನೆ. ಅದರಂತೆ ಮಾಡು. ಪ್ರಯಾಗದಲ್ಲಿ ನಿತ್ಯ ಯಜ್ಞನಿರತನಾಗು. ಪ್ರಯಾಗವನ್ನೇ ಸ್ಮರಿಸು. ನಮ್ಮೆಲ್ಲರ ಜೊತೆಗೆ ಪ್ರಯಾಗ ಯಾತ್ರೆ ಮಾಡು. ಅದರಿಂದ ಶಾಶ್ವತ ಸ್ವರ್ಗ ನಿನಗೆ ಲಭಿಸುವುದು. ಪ್ರತಿಗ್ರಹ ಮಾಡದಿರುವುದು. ಇದ್ದುದರಲ್ಲಿ ತೃಪ್ತಿ ಪಡುವುದು. ನಿಯಮ, ಶೌಚ, ಅಹಂಕಾರ ಕೋಪಗಳನ್ನು ತ್ಯಜಿಸುವುದು. ಸತ್ಯನುಡಿಯುವುದು, ಪ್ರಾಣಿಗಳನ್ನೆಲ್ಲ ತನ್ನಂತೆಯೆ ಕಾಣುವುದು, ಇವುಗಳಿಂದ ತೀರ್ಥಯಾತ್ರೆಯ ಫಲ ದೊರಕೀತು. ಋಷಿಗಳು ಹೇಳುವ ಯಜ್ಞಗಳೆಲ್ಲವೂ ದರಿದ್ರರಿಗೆ ಅಸಾಧ್ಯ. ಶ್ರೀಮಂತರು ಮಾತ್ರ ಮಾಡಬಹುದು. ದರಿದ್ರರೂ ತೀರ್ಥಯಾತ್ರೆ ಮಾಡಬಹುದು. ಯಜ್ಞಫಲವನ್ನೇ ಪಡೆಯಬಹುದು. ಇದು ಋಷಿಗಳೇ ಹೇಳುವ ರಹಸ್ಯ. ಮಹಾರಾಜ ನೆಮ್ಮದಿಯಿಂದಿರು. ನಿರಾತಂಕವಾಗಿ ರಾಜ್ಯವಾಳುತ್ತ ಸುಖಿಸು.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಸ್ವರ್ಗಖಂಡದಲ್ಲಿ ಉಪವಾಸ ವ್ರತದ ಮಹಿಮೆ ಎಂಬ ಹದಿನಾರನೇಯ ಅಧ್ಯಾಯ ಮುಗಿದುದು*



## ತೀರ್ಥಗಳ ದರ್ಶನದಿಂದ ಬರುವ ಫಲ

**ಅಧ್ಯಾಯ - ೧೭**

**ಋಷಯ ಉವಾಚ**

**ಋಷಿಗಳು :-** ಸೂತನೆ, ನಾವು ಕೇಳ ಬಯಸಿದುದನ್ನೆಲ್ಲ ಹೇಳಿರುವೆ. ಇನ್ನೂ ಒಂದು ವಿಷಯವನ್ನು ಹೇಳು. ಈ ಎಲ್ಲ ತೀರ್ಥಗಳ ಸೇವನೆಯಿಂದ ಬರುವ ಫಲವನ್ನು ಯಾವುದಾದರೂ ಒಂದು ಕರ್ಮದಿಂದ ಪಡೆಯಲು ಸಾಧ್ಯವೆ.

**ಸೂತ :-** **ಹರಿಭಕ್ತಿಃ ಕೃತಾಯೇನ ಮನಸಾವಪುಷಾಗಿರಾ**
**ಜಿತಂ ತೇನ ಜಿತಂ ತೇನ ಜಿತಮೇವ ನ ಸಂಶಯಃ**

ಮನೋವಾಕ್ ಕಾಯಗಳಿಂದ ಯಾರು ಹರಿಭಕ್ತಿ ಮಾಡುವನೋ ಅವನೇ ಗೆದ್ದ. ಇದರಲ್ಲಿ ಸಂಶಯವಿಲ್ಲ.

ಸರ್ವ ದೇವೇಶ್ವರನಾದ ಹರಿಯನ್ನೇ ಆರಾಧಿಸಬೇಕು. ಹರಿನಾಮ ಮಹಾಮಂತ್ರಕ್ಕೆ ಹೆದರಿ ಪಾಪ ಪಿಶಾಚ ತೊಲಗುತ್ತದೆ. ಒಮ್ಮೆಯಾದರೂ ಭಕ್ತಿಯಿಂದ ಹರಿಗೆ ಪ್ರದಕ್ಷಿಣೆ ಬಂದರೆ ಎಲ್ಲ ತೀರ್ಥಗಳಲ್ಲಿ ಸ್ನಾನ ಮಾಡಿದ ಫಲ.

**ಪ್ರತಿಮಾಂ ಚ ಹರೇರ್ದೃಷ್ಟ್ವಾ ಸರ್ವ ತೀರ್ಥ ಫಲಂ ಲಭೇತ**
**ವಿಷ್ಣು ನಾಮ ಪರಂ ಜಪ್ತ್ವಾ ಸರ್ವಮಂತ್ರ ಫಲಂ ಲಭೇತ್**

ಹರಿಯ ಪ್ರತಿಮೆಯನ್ನು ದರ್ಶನ ಮಾಡಿದರೆ ಎಲ್ಲ ತೀರ್ಥಗಳ ಫಲ. ಹರಿಯ ನಾಮ ಜಪಿಸಿದರೆ ಎಲ್ಲ ಮಂತ್ರ ಜಪಗಳ ಫಲ.

ವಿಷ್ಣುವಿಗೆ ನಿವೇದಿಸಿದ ತುಳಸಿಯನ್ನು ಆಘ್ರಾಣಿಸಿದರೆ ಯಮನ ಕ್ರೂರ ಕರಾಳ ಮುಖದ ದರ್ಶನ ಆಗುವುದಿಲ್ಲ. ಹರಿಗೊಮ್ಮೆ ನಮಿಸಿದವ ತಾಯಿಯ ಎದೆ ಹಾಲು ಉಣ್ಣಲಾರ. ಆದರಿಂದ ಹರಿಪಾದವನ್ನು ನೆನೆದವನಿಗೆ ನಿತ್ಯವೂ ನಮೋ ಎನ್ನಬೇಕು.

**ಪುಲ್ಕಸಃ ಶ್ವಪಚೋ ವಾಪಿ ಯೇ ಚಾನ್ಯೇ ಮ್ಲೇಚ್ಛ ಜಾತಯಃ**
**ತೇऽಪಿ ವಂದ್ಯಾ ಮಹಾಭಾಗಾ ಹರಿಪಾದೈಕ ಸೇವಕಾಃ**

ಯಾವ ಚಂಡಾಲರೇ ಇರಲಿ ಮ್ಲೇಚ್ಛ ಜಾತಿಯವರೇ ಇರಲಿ, ಹರಿಪಾದ ಒಂದನ್ನೇ ನಂಬಿದ್ದರೆ ಅವರು ಮಹಾತ್ಮರು. ವಂದನೆಗೆ ಅರ್ಹರು.

ವಿಷ್ಣುಭಕ್ತರಾದ ಋಷಿಗಳು ಚಕ್ರವರ್ತಿಗಳೂ ಎಷ್ಟು ಪವಿತ್ರರು ! ಹರಿಭಕ್ತಿ ಇದ್ದರೆ ಗರ್ಭವಾಸವಿಲ್ಲ. ಹರಿಯ ಮುಂದೆ ಗಟ್ಟಿಯಾಗಿ ಅವನ ನಾಮ ಸಂಕೀರ್ತನೆ ಮಾಡುವವನು ಗಂಗಾಜಲದಂತೆ ಭುವನ ಪಾವನನೆನಿಸುವನು. ಅವನ ದರ್ಶನ ಸ್ಪರ್ಶನ ಸಂಭಾಷಣಗಳಿಂದ ಬ್ರಹ್ಮಹತ್ಯೆಯಂಥ ಪಾಪವೂ ತೊಲಗುವುದು.

ಹರಿನಾಮ ಸಂಕೀರ್ತನ ಮಾಡುವವನು ಮಾಡುವ ಕರತಾಡನ ವಸ್ತುತಃ ಬ್ರಹ್ಮಹತ್ಯಾದಿ ಪಾತಕಗಳಿಗೆ ಮಾಡುವ ಕರತಾಡನ.

**ತೀರ್ಥಾನಾಂ ಚ ಪರಂ ತೀರ್ಥಂ ಕೃಷ್ಣನಾಮ ಮಹರ್ಷಯಃ**
**ತೀರ್ಥೀಕುರ್ವಂತಿ ಜಗತೀಂ ಗೃಹೀತಂ ಕೃಷ್ಣನಾಮ ಯೈಃ**

ಕೃಷ್ಣನಾಮವನ್ನು ಉಚ್ಚರಿಸುವವರು ಜಗತ್ತನ್ನೇ ತೀರ್ಥವನ್ನಾಗಿ ಮಾಡಬಲ್ಲರೆಂದರೆ ಆ ಕೃಷ್ಣನಾಮ ಎಂಬುದು ತೀರ್ಥಗಳಿಗೂ ಮಿಗಿಲಾದ ತೀರ್ಥ ಎನ್ನಬೇಕಲ್ಲವೆ ಮಹರ್ಷಿಗಳೆ ?

ವಿಷ್ಣುಪ್ರಸಾದ ನಿರ್ಮಾಲ್ಯವನ್ನು ಸೇವಿಸಿ ತಲೆಯಲ್ಲಿ ಧರಿಸಿಕೊಂಡವ ವಿಷ್ಣುವಿನಂತೆ ಜನರಿಗೆ ಯಮನ ಭಯವಿಲ್ಲದಂತೆ ಮಾಡುವನು.

**ಯೇ ಸಮಾನಂ ಪ್ರಪಶ್ಯಂತಿ ಹರಿಂ ವೈ ದೇವತಾಂತರಂ ।**
**ತೆಯಾಂತಿ ನರಕಾನ್ ಘೋರಾನ್ ನ ತಾಂಸ್ತು ಗಣಯೇದ್ ಹರಿಃ ॥**

ಯಾರು ಇತರ ದೇವತೆಗಳನ್ನು ಹರಿಗೆ ಸಮಾನನೆಂದು ತಿಳಿಯುತ್ತಾರೊ ಅವರು ಘೋರ ನರಕಕ್ಕೆ ಹೋಗುವರು. ಅವರನ್ನು ಹರಿ ತನ್ನವರೆಂದು ಬಗೆಯುವುದಿಲ್ಲ.

ಮೂರ್ಖ, ಪಂಡಿತ, ಬ್ರಾಹ್ಮಣ, ಚಂಡಾಲನೆನ್ನುವ ಭೇದವಿಲ್ಲದೆ ಎಲ್ಲ ಭಕ್ತರಿಗೂ ಮುಕ್ತಿಕೊಡುವ ಪ್ರಭು ನಾರಾಯಣ. ನಾರಾಯಣನಿಗಿಂತ ಬೇರೆ ಪಾಪಗಳನ್ನು ಸುಡುವ ಕಾಳ್ಗಿಚ್ಚು ಇಲ್ಲ. ತನಗಿಂತ ಹೆಚ್ಚಿನ ಶಕ್ತಿಯನ್ನು ತನ್ನ ನಾಮಕ್ಕೆ ಕೊಟ್ಟಿದ್ದಾನೆ ಆ ನಾರಾಯಣ; ಬೇರೆಡೆ ಆಯಾಸ ಕಡಿಮೆ, ಫಲ ಹೆಚ್ಚೆಂದು ಬಗೆದು ಈ ವಿಷಯದಲ್ಲಿ ಅಸಮ್ಮತಿ ತೋರುವವರು ನರಕಭಾಗಿಗಳು. ಅದರಿಂದ ಹರಿನಾಮ ಉಚ್ಚರಿಸುತ್ತ ಹರಿಭಕ್ತಿ ಮಾಡಬೇಕು, ಎಂದೂ ಅವನನ್ನು ಪರಿ ರಕ್ಷಿಸುತ್ತಾನೆ.

''ಹರಿನಾಮ ಮಹಾವಜ್ರಂ ಪಾಪಪರ್ವತ ದಾರಣೇ''
ಪಾಪಪರ್ವತವನ್ನೊಡೆಯುವ ಮಹಾವಜ್ರವೆ ಹರಿನಾಮ.

ಹರಿ ಸೇವೆಗಾಗಿ ಓಡಾಡುವ ಕಾಲುಗಳೆ ಸಾರ್ಥಕ. ಅವನ ಪೂಜೆಮಾಡುವ ಕೈಗಳೇ ಧನ್ಯ. ಅವನಿಗೆ ಬಾಗುವ ತಲೆಯೆ ಉತ್ತಮಾಂಗ. ಅವನನ್ನು ಹೊಗಳುವ ನಾಲಿಗೆಯೇ ನಿಜವಾದ ನಾಲಿಗೆ. ಅವನನ್ನು ನೆನೆವ ಮನಸ್ಸೇ ಧನ್ಯ. ಅವನ ನಾಮ ಶ್ರವಣದಿಂದೇಳುವ ರೋಮಗಳೇ ನಿಜವಾದ ರೋಮಗಳು. ಅವನ ಕಥೆ ಕೇಳಿ ಸುರಿವ ಕಣ್ಣೀರೇ ಕಣ್ಣೀರು. ಅವನ ನಾಮೋಚ್ಚಾರಣದಿಂದಲೇ ಮುಕ್ತಿಸಿಗುವಾಗ ಈ ಅವಕಾಶವನ್ನು ಉಪಯೋಗಿಸಿಕೊಳ್ಳದ ಜನ ನಿಜವಾಗಿಯೂ ಅದೃಷ್ಟ ಹೀನರು. ಸ್ತ್ರೀ ವರ್ಣನೆಯನ್ನು ಕೇಳಿದಾಗ ರೋಮಾಂಚನಗೊಳ್ಳವ ಈ ಮೂರ್ಖರು ಹರಿನಾಮಸಂಕೀರ್ತನೆಯನ್ನು ಕೇಳಿದಾಗ ಸುಮ್ಮನಿರುವರು. ನಾಲಿಗೆ ಇದ್ದೂ ಕೃಷ್ಣನಾಮ ಜಪಿಸಲಾರರು. ಮುಕ್ತಿ ಸೋಪಾನ ಸುಲಭವಾಗಿರಲೂ ಅದನ್ನೇರಲಾರರು. ಅದರಿಂದ ಕರ್ಮಯೋಗದ ಮೂಲಕ ವಿಷ್ಣುವಿನ ಅನುಗ್ರಹ ಪಡೆಯಬೇಕು. ಹಾಗೆ ಮಾಡುವವರೇ ಧನ್ಯರು. ಋಷಿಗಳೇ ನೀವೂ ಆ ಪರಮಮಂಗಳನಾದ ಕೃಷ್ಣನನ್ನೇ ಭಜಿಸಿರಿ.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಸ್ವರ್ಗಖಂಡದಲ್ಲಿ*
*ತೀರ್ಥಗಳ ದರ್ಶನದಿಂದ ಬರುವ ಫಲ ಎಂಬ ಹದಿನೇಳನೇಯ ಅಧ್ಯಾಯ ಮುಗಿದುದು*



## ಕರ್ಮಯೋಗ

ಅಧ್ಯಾಯ - ೧೮

**ಋಷಯ ಉವಾಚ**

**ಋಷಿಗಳು:**-ಸೂತನೆ, ಕರ್ಮಯೋಗದಿಂದ ಹರಿಯನ್ನು ಆರಾಧಿಸುವ ಬಗೆ ಹೇಗೆ?

**ಸೂತ :**- ಋಷಿಗಳೆ, ಹಿಂದೆ ಇದೇ ಪ್ರಶ್ನೆಯನ್ನು ಋಷಿಗಳು ವ್ಯಾಸರ ಮುಂದೆ ಕೇಳಿದಾಗ ಅವರು ಹೇಳಿದರು.

**ವ್ಯಾಸ :**- ಋಷಿಗಳೆ, ಮನುಪ್ರಜಾಪತಿ ಹಿಂದೆ ಋಷಿಗಳಿಗೆ ಮೋಕ್ಷಸಾಧನವಾದ ಕರ್ಮಯೋಗವನ್ನು ವರ್ಣಿಸಿದ್ದಾನೆ. ಅದನ್ನು ಹೇಳುತ್ತೇನೆ ಕೇಳಿ.

ಉಪನಯನವಾದ ಮೇಲೆ ದ್ವಿಜನು ವೇದ ಓದಬೇಕು. ದಂಡ ಮೇಖಲಾಸೂತ್ರ ಕೃಷ್ಣಾಜಿನ ಧರಿಸಿ ಭಿಕ್ಷಾನ್ನ ಉಣ್ಣುತ್ತ ತನ್ನ ಎಂಟನೇವಯಸ್ಸಿನಿಂದ

ಬ್ರಹ್ಮಚರ್ಯವನ್ನಾಚರಿಸಬೇಕು. ಉಪವೀತ ಶಿಖಾ ಬಿಳಿಬಟ್ಟೆ ಕೃಷ್ಣಾಜಿನ ಸದಾ ಧರಿಸಬೇಕು. ಉಪವೀತ ನಿವೀತ ಪ್ರಾಚೀನಾವೀತ ಎಂದು ಮೂರು ರೀತಿಯಿಂದ ಸೂತ್ರಧಾರಣೆ ಇದೆ. ಎಡ ಹೆಗಲಿನ ಮೇಲೆ ಸೂತ್ರವಿದ್ದರೆ ಅದು ಉಪವೀತ. ಬಲ ಹೆಗಲ ಮೇಲಿದ್ದರೆ ಪ್ರಾಚೀನವೀತ. ಮಾಲೆಯಂತೆ ಕೊರಳಲ್ಲಿ ಧರಿಸಿದರೆ ನಿವೀತ. ಅಗ್ನಿಶಾಲೆ, ಗೋಶಾಲೆ, ಹೋಮತರ್ಪಣ, ವೇದಾಧ್ಯಯನ, ಭೋಜನ, ಬ್ರಾಹ್ಮಣಸನ್ನಿಧಿ, ಗುರುಪೂಜೆ, ಸಂಧ್ಯಾವಂದನೆ, ಸಜ್ಜನರ ಭೆಟ್ಟಿ ಈ ಸಂದರ್ಭಗಳಲ್ಲಿ ಉಪವಿತವೇ ವಿಹಿತವಾಗಿದೆ. ಪಿತೃಕರ್ಮಗಳಲ್ಲಿ ಪ್ರಾಚೀನಾವೀತ. ಮೂರು ಹುರಿಯ ಮೌಂಜಿಯನ್ನು ಸೋದೆಹುಲ್ಲು ಇಲ್ಲವೆ ದರ್ಭೆಯಿಂದ ಮಾಡಿ ಧರಿಸಬೇಕು. ಬಿದಿರು ಇಲ್ಲವೆ ಮುತ್ತುಗದ ದಂಡ ಹಿಡಿದಿರಬೇಕು. ಎರಡು ಹೊತ್ತು ಸಂಧ್ಯಾವಂದನೆ ಮಾಡಬೇಕು. ಮಾಡದಿದ್ದರೆ ಪತಿತನಾಗುತ್ತಾನೆ. ಎರಡು ಹೊತ್ತು ಅಗ್ನಿಕಾರ್ಯಮಾಡಬೇಕು. ದೇವರ್ಷಿ ಪಿತೃತರ್ಪಣ, ದೇವಪೂಜೆ ಮಾಡಬೇಕು.

ಹಿರಿಯರಿಗೆ ಗೋತ್ರ ಪ್ರವರ ಮುಂತಾದುವನ್ನು ಹೇಳಿ ಅಭಿವಾದನ ಮಾಡುತ್ತಿರಬೇಕು. ಆಯುಷ್ಯವಂತನಾಗೆಂದು ಆಶೀರ್ವಾದ ಪಡೆಯಬೇಕು. ಇದರಿಂದ ಆಯುರಾರೋಗ್ಯ ಲಾಭವಿದೆ. ಆಶೀರ್ವಾದ ಮಾಡಲು ಅರಿಯದವನಿಗೆ ಅಭಿವಾದನ ಮಾಡಕೂಡದು. ಎಡಗೈಯಿಂದ ಗುರುವಿನ ಎಡಕಾಲನ್ನೂ ಬಲಗೈಯಿಂದ ಬಲಗಾಲನ್ನೂ ಮುಟ್ಟಬೇಕು. ಲೌಕಿಕ ವೈದಿಕ ಆಧ್ಯಾತ್ಮಿಕ ಜ್ಞಾನಗಳನ್ನು ಪಡೆವಾಗ ಗುರುವಿಗೆ ಮೊದಲು ಅಭಿವಾದನ ಮಾಡಬೇಕು.

**ಬ್ರಾಹ್ಮಣಂ ಕುಶಲಂ ಪೃಚ್ಛೇತ್ ಕ್ಷತ್ರಬಂಧು ಮನಾಮಯಂ**
**ವೈಶ್ಯಂ ಕ್ಷೇಮಂ ಸಮಾಗಮ್ಯ ಶೂದ್ರಮಾರೋಗ್ಯಮೇವ ಚ**

ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರರನ್ನು ಕ್ರಮವಾಗಿ ಕುಶಲ ಅನಾಮಯ ಕ್ಷೇಮ ಆರೋಗ್ಯಗಳ ಕುರಿತು ಮೊದಲು ಪ್ರಶ್ನಿಸಬೇಕು.

ಉಪಾಧ್ಯಾಯ, ತಂದೆ ಅಣ್ಣ, ಭಯದಿಂದ ರಕ್ಷಿಸಿದವ, ಸೋದರಮಾವ, ಹೆಣ್ಣು ಕೊಟ್ಟ ಮಾವ, ತಾಯಿಯ ತಂದೆ, ತಂದೆಯ ತಂದೆ, ಚಿಕ್ಕಪ್ಪ, ದೊಡ್ಡಪ್ಪ, ತನಗಿಂತ ಮೇಲು ಜಾತಿಯವ ಇವರೆಲ್ಲ ಪುರುಷ ವರ್ಗದಲ್ಲಿ ಗುರುಗಳು. ತಾಯಿ, ತಾಯಿಯ ತಾಯಿ, ತಂದೆಯ ತಾಯಿ, ಅತ್ತೆ, ಅಕ್ಕ, ದಾದಿ, ತಂದೆತಾಯಿಗಳ ಸೋದರಿಯರು ಇವರೆಲ್ಲರೂ ಸ್ತ್ರೀ ವರ್ಗದಲ್ಲಿ ಗುರುಗಳು. ತ್ರಿಕರಣಗಳಿಂದಲೂ ಅವರಿಗೆ ವಿಧೇಯನಾಗಿರಬೇಕು. ಇವರನ್ನು ಕಂಡಾಗ ಎದ್ದುನಿಂತು ಅಭಿವಾದನೆ ಮಾಡಿ ಕೈ ಮುಗಿಯಬೇಕು. ಇವರ ಸಮಕ್ಕೆ ಕುಳಿತುಕೊಳ್ಳಕೂಡದು. ಯಾವ ಕಾರಣದಿಂದಲೂ ಕಲಹ ಮಾಡಬಾರದು. ಉದ್ರೇಕದಿಂದ ಮಾತನಾಡಬಾರದು. ಅವರಿಗಿಂತ ಕೆಲವು ಗುಣಗಳಲ್ಲಿ ತಾನು ಉತ್ತಮನಿದ್ದರೂ ಅವರಲ್ಲಿ ತಿರಸ್ಕಾರ ತೋರಕೂಡದು.

. ಸ್ತ್ರೀ-ಪುರುಷ ವರ್ಗಗಳ ಗುರುಗಳ ಮೊದಲ ಐದು ಮಂದಿ, ಅವರಲ್ಲಿಯೂ, ಮೂರು ಮಂದಿ, ಅವರಲ್ಲಿಯೂ ತಾಯಿ ವಿಶೇಷವಾಗಿ ಪೂಜ್ಯಳು. ತಂದೆ ತಾಯಿ, ಉಪಾಧ್ಯಾಯ, ಅಣ್ಣ, ಸ್ವಾಮಿ, ಈ ಐವರನ್ನು ಸರ್ವಪ್ರಯತ್ನದಿಂದ ಪೂಜಿಸಬೇಕು. ಅವರಿಗಾಗಿ ಪ್ರಾಣಾರ್ಪಣೆಗೂ ಸಿದ್ಧನಿರಬೇಕು. ತಂದೆತಾಯಿಗಳ ಪ್ರೀತಿಯನ್ನು ಮೊದಲು

ಸಂಪಾದಿಸಬೇಕು. ಮಗನು ಆಗ ಎಲ್ಲ ಧರ್ಮಕಾರ್ಯವನ್ನೂ ಮಾಡಿದಂತಾಗುತ್ತದೆ. **'ನಾಸ್ತಿ ಮಾತೃಸಮು ದೈವಂ ನಾಸ್ತಿ ಪಿತೃಸಮೋ ಗುರುಃ ತಯೋಃ ಪ್ರತ್ಯುಪಕಾರೋಪಿನ ಕಥಂಚನ ವಿದ್ಯತೇ'** ತಾಯಿಗೆ ಸಮವಾದ ದೈವವಿಲ್ಲ. ತಂದೆಗೆ ಸಮನಾದ ಗುರುವಿಲ್ಲ. ಅವರ ಉಪಕಾರಕ್ಕೆ ಪ್ರತ್ಯುಪಕಾರ ಇಲ್ಲ. ಅವರಿಗೆ ತ್ರಿಕರಣಗಳಿಂದಲೂ ಸೇವೆಮಾಡಬೇಕು. ಅವರ ಅನುಜ್ಞೆ ಪಡೆಯದೆ ಯಾವ ಧರ್ಮಕಾರ್ಯವನ್ನೂ ಮಾಡಕೂಡದು. ಮುಕ್ತಿದಾಯಕವಾದ ನಿತ್ಯ ನೈಮಿತ್ತಿಕ ಕರ್ಮಗಳನ್ನಾಚರಿಸುವಾಗ ಮಾತ್ರ ಈ ನಿಯಮವಿಲ್ಲ.

ಉಪಾಧ್ಯಾಯನನ್ನು ಚೆನ್ನಾಗಿ ಸೇವೆಮಾಡಿ ಅವನನುಜ್ಞೆಪಡೆದು ಗುರುಕುಲದಿಂದ ಹಿಂತಿರುಗಿ ಬಂದರೆ ಆ ವಿದ್ಯೆ ಫಲಿಸುತ್ತದೆ. ಅಣ್ಣನು ತಂದೆಗೆ ಸಮಾನ. ಅವನನ್ನು ತಿರಸ್ಕರಿಸಿದರೆ ನರಕಪ್ರಾಪ್ತಿ. ಸ್ವಾಮಿಯನ್ನು ಸದಾ ಪೂಜಿಸಬೇಕು. ಈ ಗುರುಗಳನ್ನುಳಿದು ಇತರರನ್ನು ಅಭಿವಾದನ ಮಾಡಕೂಡದು. ಅವರು ಹೆಚ್ಚು ವಿದ್ಯಾವಂತರಿರಬಹುದು ಆದರೂ ಅಭಿವಾದನ ಸಲ್ಲದು ದ್ವಿಜರಿಗೆ ಅಗ್ನಿ ಎಲ್ಲ ವರ್ಣಗಳಿಗೂ ಬ್ರಾಹ್ಮಣ. ಸ್ತ್ರೀಗೆ ಪತಿ, ಎಲ್ಲರಿಗೂ ಮನೆಗೆ ಬಂದ ಅತಿಥಿ ಗುರು ಎನಿಸುವನು.

**ವಿದ್ಯಾ ಕರ್ಮವಯೋ ಬಂಧುರ್ವಿತ್ತಂ ಭವತಿ ಪಂಚಮಂ ।**
**ಮಾನ್ಯಸ್ಥಾನಾನಿ ಪಂಚಾಹುಃ ಪೂರ್ವಂ ಪೂರ್ವಂ ಗುರೂತ್ತರಾತ್ ॥**

ವಿದ್ಯೆ ಕರ್ಮ ವಯಸ್ಸು ಬಂಧುತ್ವ ಐಶ್ವರ್ಯ ಈ ಐದು ಇದ್ದಲ್ಲಿ ಮಾನ್ಯತೆ ಕೊಡಬೇಕು. ಇವುಗಳಲ್ಲಿ ಮೊದಲು ಮೊದಲನೆಯದು ಮುಂದಿನಕ್ಕಿಂತ ಮಿಗಿಲು. ಈ ಗುಣಗಳ ಸಂಖ್ಯೆ, ಪ್ರಮಾಣ ಹೆಚ್ಚಿದಂತೆಲ್ಲ ಮಾನ್ಯತೆ ಹೆಚ್ಚು.

ಪ್ರತಿದಿನ ಆಸ್ತಿಕರ ಮನೆಗಳಲ್ಲಿ ಭಿಕ್ಷೆ ಎತ್ತಿ ತಂದು ಗುರುಗಳಿಗೆ ನಿವೇದಿಸಿ ಅವರ ಆಜ್ಞೆಪಡೆದು ಉಣಬೇಕು. ಇದು ಉಪವಾಸಕ್ಕೆ ಸಮಾನ. ತಾಯಿ, ಸೋದರಿ, ಸೋದರತ್ತೆಯವರಲ್ಲಿ ಮೊದಲು ಭಿಕ್ಷೆ ಕೇಳಬೇಕು. ಪತಿತೆ ಮುಂತಾದವರಲ್ಲಿ ಭಿಕ್ಷೆ ಬೇಡಕೂಡದು. ಗುರುವಿನ ಮನೆಯಲ್ಲಿ ಜ್ಞಾತಿಗಳ ಮನೆಯಲ್ಲಿ ಭಿಕ್ಷೆ ಕೇಳಕೂಡದು. ಯಾರಾದರೊಬ್ಬರ ಅನ್ನವನ್ನೇ ಪ್ರತಿದಿನ ಉಣಕೂಡದು. ಅನ್ನವನ್ನು ನಿಂದಿಸದೆ ಮಿತವಾಗಿ ಉಣಬೇಕು. ಪೂರ್ವಾಭಿಮುಖವಾಗಿ ಇಲ್ಲವೆ ಸೂರ್ಯನಿಗಿದಿರಾಗಿ ಉಣಬೇಕು. ಉತ್ತರಾಭಿಮುಖವಾಗಿ ಉಣಕೂಡದು. ಊಟಕ್ಕೆ ಮೊದಲು ಕೈಕಾಲು ತೊಳೆದುಕೊಂಡು ಎರಡು ಸಲ ಆಚಮನ ಮಾಡಬೇಕು. ಉಂಡು ಎರಡು ಸಲ ಆಚಮನ ಮಾಡಬೇಕು.

**ವ್ಯಾಸ :-** ಅನ್ನಪಾನಗಳ ಸೇವನೆ, ನಿದ್ದೆ, ಸ್ನಾನ, ಪ್ರಯಾಣ, ತುಟಿಗಳನ್ನು ಮುಟ್ಟುವುದು, ಬಟ್ಟೆ ಉಡುವುದು, ರೇತಸ್ ಮಲಮೂತ್ರ ವಿಸರ್ಜನೆ, ಸುಳ್ಳು ಹೇಳುವುದು. ಉಗುಳುವುದು, ಕೆಮ್ಮುವುದು, ಸ್ಮಶಾನಕ್ಕೆ ಹೋಗುವುದು, ಚಂಡಾಲ ಮ್ಲೇಂಚ್ಛರೊಂದಿಗೆ ಮಾತನಾಡುವುದು, ಉಂಡು ಆಚಮನ ಮಾಡದವನನ್ನು ನೋಡುವುದು, ಮಾತನಾಡಿಸುವುದು, ಕಣ್ಣೀರಿಡುವುದು ಈ ಎಲ್ಲ ಪ್ರಸಂಗಗಳಲ್ಲಿ ಕೊನೆಗೆ ನಿರ್ಮಲವಾದ ತಣ್ಣೀರಿನಿಂದ ಆಚಮನ ಮಾಡಬೇಕು. ಸಂಧ್ಯಾವಂದನೆ ಅಧ್ಯಯನಗಳ ಆರಂಭದಲ್ಲಿಯೂ ಆಚಮನ ಮಾಡಬೇಕು. ಕೈಯ ಅಂಗುಷ್ಠ

ಮೂಲದಲ್ಲಿ ಬ್ರಾಹ್ಮಣತೀರ್ಥವಿದೆ. ಹೆಬ್ಬೆರಳು ತೋರುಬೆರಳುಗಳ ನಡುವೆ ಪಿತೃತೀರ್ಥ, ಕಿರುಬೆರಳಿನ ಮೂಲದಲ್ಲಿ ಪ್ರಾಜಪತ್ಯತೀರ್ಥ, ಬೆರಳುಗಳ ತುದಿ ದೇವತೀರ್ಥ. ಬೆರಳುಗಳ ಮಧ್ಯ ಅಗ್ನೇಯ, ಸೌಮಿಕ ತೀರ್ಥಗಳು, ಮೂಲದಲ್ಲಿ ಆರ್ಷ ತೀರ್ಥವಿದೆ. ಬ್ರಾಹ್ಮತೀರ್ಥದಿಂದಲೇ ಆಚಮನ ಮಾಡಬೇಕು. ಮೂರುಸಲ ನೀರು ಕುಡಿದು ಅಂಗುಷ್ಠ ಮೂಲದಿಂದ ಬಾಯಿಯನ್ನು ಒರೆಸಬೇಕು. ಹೆಬ್ಬೆರಳು ಉಂಗುರ ಬೆರಳುಗಳಿಂದ ಎರಡು ಕಣ್ಣುಗಳನ್ನು, ಹೆಬ್ಬೆರಳು ತೋರು ಬೆರಳುಗಳಿಂದ ಮೂಗಿನ ಹೊರಳೆಗಳನ್ನು, ಹೆಬ್ಬೆರಳು ಕಿರುಬೆರಳುಗಳಿಂದ ಎರಡು ಕಿವಿಗಳನ್ನು, ಎಲ್ಲ ಬೆರಳುಗಳಿಂದ ಅಥವಾ ಅಂಗೈಯಿಂದ ಎದೆಯನ್ನು ಹಾಗೇ ತಲೆಯನ್ನು ಹೆಬ್ಬೆರಳಿನಿಂದ ಎರಡು ಹೆಗಲುಗಳನ್ನು ಮುಟ್ಟಬೇಕು. ಮೂರು ಸಲ ನೀರು ಕುಡಿದರೆ ಬ್ರಹ್ಮ ವಿಷ್ಣು ಮಹೇಶ್ವರರು ಪ್ರೀತರಾಗುತ್ತಾರೆ. ಬಾಯಿಯನ್ನೊರೆಸುವುದರಿಂದ ಗಂಗೆ ಯಮುನೆಯರು, ಕಣ್ಣುಗಳ ಸ್ಪರ್ಶದಿಂದ ಚಂದ್ರ ಸೂರ್ಯರು, ಮೂಗಿನ ಹೊರಳೆಗಳ ಸ್ಪರ್ಶದಿಂದ ನಾಸತ್ಯ, ದಸ್ರರು, ಕಿವಿಗಳ ಸ್ಪರ್ಶದಿಂದ ವಾಯು ಅಗ್ನಿಗಳು. ಎದೆಯನ್ನು ಮುಟ್ಟುವುದರಿಂದ ಸರ್ವದೇವತೆಗಳೂ ತಲೆಯನ್ನು ಮುಟ್ಟುವುದರಿಂದ ಪರಮಪುರುಷ ನಾರಾಯಣನೂ ಪ್ರೀತರಾಗುತ್ತಾರೆ.

ಬಲಗಿವಿಗೆ ಬ್ರಹ್ಮಸೂತ್ರವನ್ನು ಸಿಕ್ಕಿಸಿಕೊಂಡು ಉತ್ತರಾಭಿಮುಖವಾಗಿ ಹಗಲಿನಲ್ಲಿ, ದಕ್ಷಿಣಾಭಿಮುಖವಾಗಿ ರಾತ್ರಿಯಲ್ಲಿ ಮಲಮೂತ್ರ ವಿಸರ್ಜನೆ ಮಾಡಬೇಕು. ಅದಕ್ಕೆ ಮೊದಲು ನೆಲದ ಮೇಲೆ ಎಲೆ ಹುಲ್ಲು ಕಾಷ್ಠ ಮುಂತಾದವುಗಳನ್ನು ಹರವಿ ತಲೆಯ ಮೇಲೆ ಬಟ್ಟೆ ಹೊದ್ದುಕೊಂಡಿರಬೇಕು. ಮರದ ನೆರಳು ಬಾವಿ ನದಿ ಗೋಶಾಲೆ ದಾರಿ ಸ್ಮಶಾನ ಮುಂತಾದ ಕಡೆ ಮಲಮೂತ್ರ ವಿಸರ್ಜಿಸಕೂಡದು. ಸ್ತ್ರೀಯರು ಗುರುಗಳು ಬ್ರಾಹ್ಮಣರು ಗೋವುಗಳು ದೇವಾಲಯ ಇವುಗಳೆದುರು ಸೂರ್ಯ ಚಂದ್ರ ಅಗ್ನಿಗಳನ್ನು ನೋಡುತ್ತ ಶೌಚಕ್ಕೆ ಕುಳಿತುಕೊಳ್ಳಕೂಡದು.

ಬಾವಿಯಿಂದ ಸೇದಿದ ನೀರು ಒಳ್ಳೆಯ ಮಣ್ಣು ಇವುಗಳಿಂದ ತೊಳೆದುಕೊಳ್ಳಬೇಕು. ಆಚಮನ ಮಾಡಬೇಕು.

**ವ್ಯಾಸ :-** ಹೀಗೆ ದಂಡಾದಿಧಾರಣಮಾಡಿ ಶೌಚಾಚಾರ ಯುಕ್ತನಾಗಿ ಅಧ್ಯಯನಕ್ಕೆ ತೊಡಗಬೇಕು. ಗುರುವಿನ ಅನುಜ್ಞೆ ಪಡೆದು ಬಳಿಯಲ್ಲಿ ಕುಳಿತುಕೊಳ್ಳಬೇಕು. ಗುರುವಿನೆದುರಿನಲ್ಲಿ ಮನಬಂದಂತೆ ಕುಳಿತುಕೊಳ್ಳಕೂಡದು. ಅವನ ಹೆಸರನ್ನು ಉಚ್ಚರಿಸಕೂಡದು. ಅವನ ನಡೆನುಡಿ ಚೇಷ್ಟೆಗಳನ್ನು ಅನುಸರಿಸಕೂಡದು. ಅವನ ನಿಂದೆ ಅಪವಾದಗಳು ನಡೆಯುವಲ್ಲಿ ಕಿವಿ ಮುಚ್ಚಿಕೊಳ್ಳಬೇಕು. ಇಲ್ಲವೆ ದೂರನಡೆಯಬೇಕು. ನೀರು ದರ್ಭೆ ಹೂ ಸಮಿತ್ತುಗಳನ್ನು ತಂದು ಕೊಡಬೇಕು. ಅವನ ಮೈತೊಳೆಯುವುದು, ಲೇಪಿಸುವುದು, ಇಂಥ ಸೇವೆಗಳನ್ನು ಮಾಡಬೇಕು. ಅವನ ಹಾಸುಗೆ ಪಾದರಕ್ಷೆ ಮುಂತಾದುವನ್ನು ದಾಟಕೂಡದು. ಅವನ ಅನುಜ್ಞೆ ಪಡೆಯದೆ ಎಲ್ಲಿಗೂ ಹೋಗಕೂಡದು. ಅವನೆದುರು ಕಾಲುನೀಡಿ ಕುಳಿತಿರಬಾರದು. ಆಕಳಿಸುವುದು ಜೋರಾಗಿ ನಗುವುದು ಮುಂತಾದುವನ್ನು ಮಾಡಕೂಡದು. ಮಧುರ ಹಿತ ಮಾತುಗಳನ್ನೇ ಆಡಬೇಕು. ಗಂಧ, ಮಾಲೆ, ಅಭ್ಯಂಜನ, ಅಂಜನ, ಪಾನ, ಪ್ರಾಣಿಹಿಂಸೆ ಕಾಮ, ಲೋಭ, ಭಯ, ನಿದ್ರಾ, ಗೀತ, ನೃತ್ಯ, ಸ್ತ್ರೀದರ್ಶನ, ಸ್ಪರ್ಶನ, ಪರದ್ರೋಹ, ಚಾಡಿಕೋರತನ ಇವನ್ನೆಲ್ಲ ಬಿಡಬೇಕು.

ನೀರು ಹೂ ದರ್ಭೆ ಮೃತ್ತಿಕೆ ಗೋಮಯ ಭಿಕ್ಷಾನ್ನ ತುಪ್ಪ ಉಪ್ಪು ಮುಂತಾದುವನ್ನು ಗುರುವಿಗೆ ತಂದುಕೊಡಬೇಕು. ಗುರುವನ್ನು ತ್ಯಾಗಮಾಡಲು ಬಯಸಬಾರದು. ತ್ಯಾಗ ಮಾಡಿದರೆ ಪತಿತನಾಗುತ್ತಾನೆ. ಅವನಿಗೆಂದೂ ದ್ರೋಹ ಬಗೆಯಕೂಡದು. ಅವನು ಮತ್ತನಾಗಿ ಕಾರ್ಯಾಕಾರ್ಯಗಳನ್ನರಿಯದೆ ದುರ್ಮಾರ್ಗಕ್ಕಿಳಿಯುತ್ತಿದ್ದರೆ ಮಾತ್ರ ಅವನನ್ನು ತ್ಯಾಗ ಮಾಡಬಹುದೆಂದು ಮನು ಹೇಳಿದ್ದಾನೆ.

ಗುರುವಿನ ಗುರು ಬಂದಾಗ ಅವನಲ್ಲಿಯೂ ಗುರುವಿನಂತೆಯೇ ನಡೆದುಕೊಳ್ಳಬೇಕು. ಗುರುವಿಗೆ ನಮಸ್ಕರಿಸಿ ಅವನ ಅನುಮತಿಯಿಂದ ತನ್ನ ಹಿರಿಯರಿಗೂ ನಮಸ್ಕರಿಸಬೇಕು. ಉಪಾಧ್ಯಾಯರುಗಳಲ್ಲಿಯೂ, ಹಿತೈಷಿಗಳಲ್ಲಿಯೂ, ತನ್ನ ಹಿರಿಯರಲ್ಲಿಯೂ ಗುರುಗಳಂತೆಯೇ ನಡೆದುಕೊಳ್ಳಬೇಕು. ಗುರುಪುತ್ರ, ಗುರುಪತ್ನಿ ಗುರುವಿನ ಬಂಧುಗಳು ಇವರಲ್ಲಿಯೂ ಹಾಗೇ ನಡೆದುಕೊಳ್ಳಬೇಕು. ಗುರುಪುತ್ರನಿಗೆ ಮೈತೊಳೆಯುವುದು, ಮೈ ಕೈ ಒತ್ತುವುದು, ಉಚ್ಛಿಷ್ಟವನ್ನುಣ್ಣುವುದು, ಕಾಲುತೊಳೆಯುವುದು ಇವನ್ನು ಮಾಡಬಾರದು. ಗುರುಪತ್ನಿಗೂ ಇವನ್ನು ಮಾಡಕೂಡದು. ಅವಳು ಯುವತಿಯಾಗಿದ್ದರೆ ಕಾಲು ಮುಟ್ಟಿ ಅಭಿವಾದನೆಯನ್ನು ಮಾಡಕೂಡದು, ನೆಲಮುಟ್ಟಿ ಗೋತ್ರ ಪ್ರವರಾದಿ ಉಚ್ಚರಿಸಿ ಅಭಿವಾದನ ಮಾಡಬೇಕು, ತಾಯಿ ತಂದೆಗಳ ಸೋದರಿಯರಲ್ಲಿಯೂ ಅತ್ತೆ ಅತ್ತಿಗೆ ಅಕ್ಕ ಇವರಲ್ಲಿಯೂ ಗುರುಪತ್ನಿಯಂತೆ ನಡೆದುಕೊಳ್ಳಬೇಕು.

ಹೀಗೆ ಆಚಾರವಂತನಾದ ಶಿಷ್ಯನಿಗೆ ವೇದ ಪುರಾಣ ಅಂಗಗಳ ಅಧ್ಯಾಪನವು ವಿಹಿತ. ಒಂದು ವರ್ಷ ಸೇವೆ ಮಾಡಿದ ಶಿಷ್ಯನಿಗೆ ಉಪದೇಶ ನೀಡದ ಗುರುವು ಶಿಷ್ಯನ ಎಲ್ಲ ಪಾಪವನ್ನೂ ಹೊತ್ತುಕೊಳ್ಳುವನು. ಶಿಷ್ಯನು ಆಚಮನಮಾಡಿ ಉತ್ತರಾಭಿಮುಖವಾಗಿ ಕುಳಿತು ಗುರುಗಳ ಕಾಲುಮುಟ್ಟಬೇಕು. 'ಈಗ ಅಧ್ಯಯನ ಮಾಡು' ಎಂದಾಗ ಅಧ್ಯಯನ ಆರಂಭಿಸಬೇಕು, 'ಸಾಕು' ಎಂದಾಗ ನಿಲ್ಲಿಸಬೇಕು. ದರ್ಭಾಸನದಲ್ಲಿ ಕುಳಿತು, ಕೈಗಳಲ್ಲಿ ದರ್ಭೆಯ ಪವಿತ್ರಗಳನ್ನು ಧರಿಸಿ ಮೂರು ಪ್ರಾಣಾಯಾಮಗಳನ್ನು ಮಾಡಿ ಓಂಕಾರವನ್ನುಚ್ಚರಿಸಬೇಕು. ಕೊನೆಯಲ್ಲಿಯೂ ಓಂಕಾರವನ್ನುಚ್ಚರಿಸಬೇಕು. ನಿತ್ಯ ವೇದಾಧ್ಯಯನ ಮಾಡಬೇಕು. ಅದನ್ನು ಬಿಟ್ಟರೆ ಬ್ರಾಹ್ಮಣತ್ವವೆ ತೊಲಗುವುದು.

ಋಗ್ವೇದಾಧ್ಯಯನ ಕಾಲದಲ್ಲಿ ದೇವತೆಗಳಿಗೆ ಕ್ಷೀರಾಹುತಿ ನೀಡಬೇಕು. ಯಜುರ್ವೇದಾಧ್ಯಯನದಲ್ಲಿ ದಧ್ಯಾಹುತಿ, ಸಾಮವೇದಾಧ್ಯಯನದಲ್ಲಿ ಘೃತಾಹುತಿ, ಅಥರ್ವಾಂಗಿರಸಾಧ್ಯಯನದಲ್ಲಿ ಮಧ್ವಾಹುತಿ, ಅಂಗಪುರಾಣ ಅಧ್ಯಯನದಲ್ಲಿ ಮಾಂಸಾಹುತಿ, ಬೆಳಿಗ್ಗೆ ಸಂಜೆ ನಿತ್ಯ ಕರ್ಮ ಮಾಡುತ್ತಿರಬೇಕು. ಕಾಡಿನಲ್ಲಿ ಸಾವಿರ ಅಥವಾ ನೂರು, ಕನಿಷ್ಠ ಪಕ್ಷದಲ್ಲಿ ಹತ್ತು ಸಲ ಗಾಯತ್ರೀ ಜಪ ಮಾಡಬೇಕು. ಒಂದೆಡೆ ಗಾಯತ್ರಿಯನ್ನು ಇನ್ನೊಂದೆಡೆ ಎಲ್ಲ ವೇದಗಳನ್ನು ಇಟ್ಟು ತೂಗಿದಾಗ ಅವೆರಡೂ ಸಮಾನವಾದುವಂತೆ, ಓಂಕಾರ ವ್ಯಾಹೃತಿಗಳನ್ನುಚ್ಚರಿಸಿ ಗಾಯತ್ರಿ ಜಪಿಸಬೇಕು. ಭೂ ರ್ಭುವ, ಸ್ವ, ಎಂಬ ಮೂರು ವ್ಯಾಹೃತಿಗಳು ಕ್ರಮವಾಗಿ ಪ್ರಧಾನಪುರುಷಕಾಲ, ಬ್ರಹ್ಮ ವಿಷ್ಣು ಮಹೇಶ್ವರ, ಸತ್ವರಜಸತಮಸ್ ಇವುಗಳನ್ನು ಪ್ರತಿಪಾದಿಸುತ್ತವೆ. ಓಂಕಾರವು ಪರಬ್ರಹ್ಮವಾಚಕ. ಗಾಯತ್ರಿ ವೇದಗಳ ಸಾರ ವೇದ ಮಾತೆ. ಅದರರ್ಥತಿಳಿದು ಪ್ರತಿದಿನ

ಜಪಿಸುವ ಬ್ರಹ್ಮಚಾರಿ ಪರಮ ಗತಿಯನ್ನೇ ಹೊಂದುವನು. **'ಗಾಯತ್ರ್ಯಾನ ಪರಂ ಜಪ್ಯಂ'** ಗಾಯತ್ರಿಗಿಂತ ಮಿಗಿಲಾದ ಮಂತ್ರ ಒಂದಿಲ್ಲ. ಆಷಾಢ ಶ್ರಾವಣ ಇಲ್ಲವೆ ಭಾದ್ರಪದ ಹುಣ್ಣಿಮೆ ದಿನ ವೇದೋಪಾಕರ್ಮ ಮಾಡಬೇಕು. ದಕ್ಷಿಣಾಯನದ ನಾಲ್ಕುವರೆ ತಿಂಗಳಕಾಲ ವೇದಾಧ್ಯಯನ ಬಳಿಕ ಪುಷ್ಯ ನಕ್ಷತ್ರದಲ್ಲಿ ಅಥವಾ ಮಾಘ ಮಾಸದಲ್ಲಿ ಶುಕ್ಲಪಕ್ಷದ ಪ್ರತಿಪತ್ತಿನಲ್ಲಿ ಪೂರ್ವಾಹ್ನ ವೇದೋತ್ಸರ್ಜನ. ಬಳಿಕ ವೇದಗಳನ್ನು ಶುಕ್ಲಪಕ್ಷದಲ್ಲಿಯೂ ಅಂಗಪುರಾಣಗಳನ್ನು ಕೃಷ್ಣಪಕ್ಷದಲ್ಲಿಯೂ ಅಧ್ಯಯನ ಮಾಡಬೇಕು. ಅನಧ್ಯಾಯ ಕಾಲದಲ್ಲಿ ಎಂದೂ ಅಧ್ಯಯನ ಮಾಡಕೂಡದು.

ಮಳೆಗಾಲದ ರಾತ್ರಿಯಲ್ಲಿ ಗಾಳಿ ಬೀಸುವ ಧ್ವನಿ ಕೇಳಿದರೆ, ಹಗಲಿನಲ್ಲಿ ಧೂಳು ಎಬ್ಬಿಸದ ಗಾಳಿ ಬೀಸುತ್ತಿದ್ದರೆ ಆಗ ಅನಧ್ಯಾಯ. ಮಿಂಚು ಗುಡುಗು ಮಳೆ ಉಲ್ಕಾಪಾತಗಳಿದ್ದರೆ ಅಕಾಲಿಕ ಅನಧ್ಯಾಯ. ಆ ಸಮಯ ಮತ್ತು ಮರುದಿನ ಅಧ್ಯಯನವಿಲ್ಲ. ಮಳೆಗಾಲದಲ್ಲಿ ಹೋಮಾಗ್ನಿಯನ್ನು ಉರಿಸುವ ಕಾಲ ಅಂದರೆ ಬೆಳಿಗ್ಗೆ ಮತ್ತು ಸಂಜೆ ಮಿಂಚು ಗುಡುಗು ಮಳೆ ಕಂಡು ಬಂದರೆ, ಬೇರೆ ಋತುಗಳಲ್ಲಿ ಮೋಡಗಳು ಕಂಡುಬಂದರೂ ಅನಧ್ಯಾಯ. ಬೆಳಿಗ್ಗೆ ಅವು ಕಂಡು ಬಂದರೆ ಹಗಲು ಅನಧ್ಯಾಯ. ಸಂಜೆ ಕಂಡುಬಂದರೆ ರಾತ್ರಿ ಅನಧ್ಯಾಯ. ಉತ್ಪಾತ ಧ್ವನಿ, ಭೂಕಂಪ, ಗ್ರಹಗಳ ತಿಕ್ಕಾಟವಿದ್ದಾಗ ಅಕಾಲಿಕ ಅನಧ್ಯಾಯ. ಪುಣ್ಯ ಸಂಪಾದನೆಯ ದೃಷ್ಟಿಯಿಂದ ವೇದಾಧ್ಯಯನ ಮಾಡುವವನಿಗೆ ಗ್ರಾಮ ನಗರಗಳಲ್ಲಿ ನಿತ್ಯ ಅನಧ್ಯಾಯ. ದುರ್ಗಂಧ ವಾತಾವರಣದಲ್ಲಿ ಜ್ಞಾನಾರ್ಜನೆಯ ದೃಷ್ಟಿಯಿಂದ ವೇದಾಭ್ಯಾಸ ಮಾಡುವವರಿಗೂ ಅನಧ್ಯಾಯವೆ. ಗ್ರಾಮದೊಳಗೆ ಮೃತರ ಶವವಿದ್ದರೆ, ಅಧಾರ್ಮಿಕರ ಬಳಿ ಅಳುವಿನ ಶಬ್ದ ಕೇಳಿಬರುತ್ತಿರುವಾಗ ಜನಜಂಗುಳಿ ನೆರೆದಿರುವಾಗ ಅನಧ್ಯಾಯ. ನೀರಿನ ಮಧ್ಯದಲ್ಲಿ, ಮಧ್ಯ ರಾತ್ರಿಯಲ್ಲಿ, ಮಲಮೂತ್ರ ವಿಸರ್ಜನೆಯ ಕಾಲದಲ್ಲಿ, ಉಂಡಮೇಲೆ ಬಾಯ್ತೊಳೆದು ಆಚಮನ ಮಾಡುವವರೆಗೆ, ಶ್ರಾದ್ಧಕ್ಕೆ ಆಮಂತ್ರಣ ಬಂದಮೇಲೆ ಶ್ರಾದ್ಧ ಭೋಜನದ ಒಂದು ದಿನ ಇಡಿ ವೇದಾಧ್ಯಯನ ಸರ್ವಥಾ ಮಾಡಕೂಡದು. ರಾಜನಿಗೆ ಬಂಧುಗಳ ಜನನ ಮರಣ ಪ್ರಯುಕ್ತ ಅಶೌಚ ಬಂದಾಗ, ಏಕೋದ್ದಿಷ್ಟ ಶ್ರಾದ್ಧಕ್ಕೆ ಆಮಂತ್ರಣ ಬಂದಾಗ, ಸೂರ್ಯ ಚಂದ್ರರಿಗೆ ಗ್ರಹಣ ಬಂದಾಗ, ಮೂರು ದಿನಗಳ ಅನಧ್ಯಾಯವನ್ನಾಚರಿಸಬೇಕು. ಏಕೋದ್ದಿಷ್ಟದ ಗಂಧ ಲೇಪ ಮೈಯಲ್ಲಿರುವಷ್ಟು ಕಾಲ ಅಧ್ಯಯನ ಕೂಡದು. ಮಲಗಿಕೊಂಡು, ಕಾಲುನೀಡಿ ಕುಳಿತು, ಮಾಂಸ ಅಥವಾ ಜನನ ಮರಣಶೌಚವಿರುವವರ ಅನ್ನ ಉಂಡು ಅಧ್ಯಯನ ಮಾಡಕೂಡದು. ಮಂಜು ಬೀಳುವುದು, ಬಾಣಶಬ್ದ ಕೇಳಿಬರುವುದು. ಪ್ರಾತಃ ಸಾಯಂ ಸಂಧ್ಯೆಗಳು, ಅಮವಾಸ್ಯೆ, ಚತುರ್ದಶಿ, ಹುಣ್ಣಿಮೆ, ತಿಥಿಗಳ ಈ ಎಲ್ಲ ಕಾಲದಲ್ಲಿ ಅಧ್ಯಯನ ಮಾಡಕೂಡದು. ಉಪಾಕರ್ಮ ಉತ್ಸರ್ಜನಗಳಲ್ಲಿ, ಪುಣ್ಯ ಸಂಪಾದನೆಗಾಗಿ ವೇದಾಧ್ಯಯನ ಮಾಡುವವನು ಮೂರುದಿನ ಅನಧ್ಯಾಯ ಆಚರಿಸಬೇಕು. ಜ್ಞಾನಾರ್ಜನೆಗಾಗಿ ಅಧ್ಯಯನ ಮಾಡುವವನಿಗೆ ಒಂದು ದಿನ ಅನಧ್ಯಾಯ. ಮಾಗಶೀರ್ಷ ಪುಷ್ಯ ಮಾಘಮಾಸಗಳ ಕೃಷ್ಣಪಕ್ಷದ ಅಷ್ಟಮಿ ತಿಥಿಗಳು ಮತ್ತು ಋತುಗಳ ಕೊನೆಯ ದಿನ ಇವೂ ಅನಾಧ್ಯಾಯ ದಿನಗಳು. ಒಂದೇ ವಿದ್ಯೆಯನ್ನು ಕಲಿಯುವವ ಅಥವಾ ಸಹಪಾಠಿ ಮರಣ ಹೊಂದಿದರೆ ಮೂರು ದಿನ

ಅನಧ್ಯಾಯ. ಚಳ್ಳೆ, ಬೂರುಗ, ಅತಿಮಧುರ ಕೆಂಗಾಂಚಾಳ, ಬೇಲದಮರಗಳ ನೆರಳಿನಲ್ಲಿ ಅಧ್ಯಯನ ಕೂಡದು. ಆದರೆ ನಿತ್ಯ ಬ್ರಹ್ಮಯಜ್ಞ ಸಂಧ್ಯಾವಂದನೆ, ಉಪಾಕರ್ಮ, ಉತ್ಸರ್ಜನ, ಹೋಮಗಳಲ್ಲಿಯೂ ವೇದಾಂಗ, ಇತಿಹಾಸ ಪುರಾಣ ಧರ್ಮಶಾಸ್ತ್ರಗಳಲ್ಲಿಯೂ ಅನಧ್ಯಯನವಿಲ್ಲ.

ವೇದ ಓದದೆ ಬೇರೆ ಕರ್ಮಗಳನ್ನು ಮಾಡುವವ ವೇದಬಾಹ್ಯ. ಅವನೊಂದಿಗೆ ಸಂಭಾಷಣೆಯೂ ಕೂಡದು. ಅರ್ಥ ತಿಳಿಯದೆ ವೇದಪಾಠ ಮಾಡುವವನು ಕೆಸರಲ್ಲಿ ಬಿದ್ದ ಹಸುವಿನಂತೆ ದುರ್ಗತಿಗೀಡಾಗುವನು. ಗುರುಕುಲದಲ್ಲಿ ಜೀವನವೆಲ್ಲ ಕಳೆಯಬೇಕೆನ್ನುವವನು ಶರೀರವಿರುವಷ್ಟು ಕಾಲ ಗುರುಶುಶ್ರೂಷೆ ಮಾಡಬೇಕು. ನಿತ್ಯ ವೇದಾಧ್ಯಯನ, ಗಾಯತ್ರೀಜಪ, ಶತರುದ್ರೀಯ ಪಾಠ, ವೇದಾಂತ ವಿಚಾರಗಳನ್ನು ಮಾಡುತ್ತಿರಬೇಕು. ಭಿಕ್ಷಾನ್ನವನ್ನು ಮಾತ್ರ ಉಣಬೇಕು. ಇವು ವೇದ ಪುರಾಣ ಧರ್ಮಶಾಸ್ತ್ರಗಳಲ್ಲಿ ಸಿದ್ಧವಾದ, ಸ್ವಾಯಂಭುವ ಮನುವು ಋಷಿಗಳಿಗೆ ಹೇಳಿದ ವೇದಾಧ್ಯಯನ ನಿಯಮಗಳು.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಸ್ವರ್ಗಖಂಡದಲ್ಲಿ*
*ಕರ್ಮಯೋಗವೆಂಬ ಹದಿನೆಂಟನೇಯ ಅಧ್ಯಾಯ ಮುಗಿದುದು*



## ಗೃಹಸ್ಥಧರ್ಮ

**ಅಧ್ಯಾಯ - ೧೯**

**ವ್ಯಾಸ ಉವಾಚ**

**ವ್ಯಾಸ :-** ದ್ವಿಜನು ಒಂದು ಎರಡು ಇಲ್ಲವೆ ಶಕ್ಯವಿದ್ದಷ್ಟು ವೇದಗಳನ್ನೂ ಅವುಗಳ ಅಂಗಗಳನ್ನೂ ಅರ್ಥಸಹಿತ ಅಧ್ಯಯನ ಮಾಡಿ ಗುರುವಿಗೆ ಕಾಣಿಕೆಕೊಟ್ಟ ಅವನನುಜ್ಞೆಯಿಂದ ಸ್ನಾತಕನಾಗಬೇಕು. ವೇಣುಯಷ್ಟಿ, ಅಂತರ್ವಸ್ತ್ರ, ಉತ್ತರೀಯ, ಎರಡು ಯಜ್ಞೋಪವೀತ, ನೀರುತುಂಬಿದ ಕಮಂಡಲ, ಛತ್ರಿ, ಮುಂಡಾಸು, ಪಾದರಕ್ಷೆಗಳು ಚಿನ್ನದ ಕರ್ಣಕುಂಡಲಗಳು, ಬಿಳಿಬಟ್ಟೆ, ಒಳ್ಳೆಯ ಗಂಧ ಇವನ್ನು ಧರಿಸಬೇಕು. ಕೂದಲು ಉಗುರುಗಳನ್ನು ಕತ್ತರಿಸಿಕೊಂಡು ಶುಚಿಯಾಗಿರಬೇಕು. ಶಕ್ತಿಇದ್ದಾಗ ಹಳೆಯ ಕೊಳಕಾದ ಬಟ್ಟೆ ಧರಿಸಕೂಡದು. ಕೆಂಪು ಅಥವಾ ಗಾಢವರ್ಣದ, ಇನ್ನೊಬ್ಬರು ಉಟ್ಟಿರುವ ಬಟ್ಟೆಗಳನ್ನೂ ಧರಿಸಕೂಡದು. ಇನ್ನೊಬ್ಬರ ಕುಂಡಲ, ಅಲಂಕಾರ, ಉಪವೀತ, ದರ್ಭಕೃಷ್ಣಾಜಿನ, ಪಾದರಕ್ಷೆಗಳನ್ನೂ ಬಳಸಬಾರದು.

ವಿಧಿಪೂರ್ವಕವಾಗಿ ಅನುರೂಪಳಾದ ರೂಪಲಕ್ಷಣಸಂಪನ್ನಳಾದ ಶೀಲಶೌಚವಿರುವ ಯೋನಿದೋಷವಿಲ್ಲದ ಸಾಪಿಂಡ್ಯವಿಲ್ಲದ ಬೇರೆಗೋತ್ರದ ಹೆಣ್ಣನ್ನು ಮದುವೆಯಾಗಬೇಕು. ಒಬ್ಬ ಮಗನು ಹುಟ್ಟುವವರೆಗೆ ಋತುಕಾಲದಲ್ಲಿ ನಿಷಿದ್ಧ ದಿನಗಳನ್ನು ಬಿಟ್ಟು ಅವಳನ್ನು ಕೂಡಬೇಕು. ಷಷ್ಠಿ ಅಷ್ಟಮಿ ದ್ವಾದಶಿ ಚತುರ್ದಶಿ ಹುಣ್ಣಿಮೆ ಅಮಾವಾಸ್ಯೆಗಳು ಜನ್ಮದಿನ ಇವು ನಿಷಿದ್ಧ ದಿನಗಳು. ವಿವಾಹಾಗ್ನಿಯನ್ನು ರಕ್ಷಿಸಿಕೊಂಡು

ಹೋಮಮಾಡುತ್ತಿರಬೇಕು. ವೇದೋಕ್ತಕರ್ಮಗಳನ್ನು ಮಾಡಬೇಕು. ಮಾಡದಿದ್ದರೆ ಪತಿತನಾಗುತ್ತಾನೆ. ವೇದಾಭ್ಯಾಸ ಮಹಾಯಜ್ಞ ಗೃಹ್ಯಕರ್ಮಗಳು ಸಂಧ್ಯಾವಂದನೆಗಳನ್ನೆಂದೂ ಬಿಡಕೂಡದು. ದೇವಾಲಯಗಳನ್ನು ಸಂದರ್ಶಿಸಬೇಕು. ಹೆಂಡತಿಯನ್ನು ಪೋಷಿಸಬೇಕು. ಮಾಡಿದ ಪುಣ್ಯಕಾರ್ಯವನ್ನು ಹೇಳಿಕೊಳ್ಳಕೂಡದು. ಪಾಪಕಾರ್ಯವನ್ನು ಮುಚ್ಚಿಡಕೂಡದು. ತನ್ನ ವಯಸ್ಸು, ಕರ್ಮ, ಸಂಪತ್ತು, ವಿದ್ಯೆ, ಕುಲಗಳಿಗೆ ಅನುಗುಣವಾಗಿ ನಡೆಯಬೇಕು.

ಶ್ರುತಿ ಸ್ಮೃತಿಗಳಲ್ಲಿ ಹೇಳಿದ, ಸಜ್ಜನರು ಆಚರಿಸುವ ಆಚಾರಗಳನ್ನು ಬಿಡಕೂಡದು. ತಂದೆತಾಯಿಗಳು ಕುಲದ ಪೂರ್ವಿಕರು ನಡೆದ ಹಾದಿಯಲ್ಲಿ ನಡೆಯಬೇಕು. ತಂದೆತಾಯಿಗಳ ಸೇವೆ, ಬ್ರಾಹ್ಮಣಹಿತದಲ್ಲಾಸಕ್ತಿ, ದಾನ, ಯಾಗ, ದೇವಭಕ್ತಿ, ಕ್ಷಮೆ, ದಯೆ ಇವು ಇದ್ದರೆ ಗೃಹಸ್ಥನೆನಿಸುತ್ತಾನೆ. ಮದುವೆಯಾದವನೆಂದ ಮಾತ್ರಕ್ಕೆ ಗೃಹಸ್ಥನೆನಿಸುವುದಿಲ್ಲ.

**ಕ್ಷಮಾ ದಯಾ ಚ ವಿಜ್ಞಾನಂ ಸತ್ಯಂ ಚೈವ ದಮಃ ಶಮಃ**
**ಅಧ್ಯಾತ್ಮ ನಿತ್ಯತಾ ಜ್ಞಾನಂ ಏತದ್ ಬ್ರಾಹ್ಮಣ ಲಕ್ಷಣಂ**

ಕ್ಷಮೆ, ದಯೆ, ವಿಜ್ಞಾನ, ಸತ್ಯ ದಮ, ಶಮ, ಆಧ್ಯಾತ್ಮನಿಷ್ಠೆ, ಜ್ಞಾನ ಇವು ಬ್ರಾಹ್ಮಣನ ಲಕ್ಷಣಗಳು.

ಕೋಪದಿಂದ ಉದ್ಭವಿಸುವ ಹಿಂಸೆ, ವಧೆ, ಬಂಧನ ಮುಂತಾದ ದೋಷಗಳನ್ನು ತಡೆದು ಕೊಳ್ಳುವುದೇ ಕ್ಷಮೆ. ಇತರರ ದುಃಖವನ್ನು ತನ್ನ ದುಃಖದಂತೆ ತಿಳಿದು ಸೌಹಾರ್ದದಿಂದಿರುವುದೆ ದಯೆ. ಧರ್ಮಕ್ಕೆ ಇದು ಸಾಕ್ಷಾತ್ ಸಾಧನ. ಚತುರ್ದಶ ವಿದ್ಯೆಗಳನ್ನು ಕಲಿತು ಹಣಸಂಪಾದಿಸಿ ಧರ್ಮಕಾರ್ಯಗಳನ್ನು ನಡೆಸುವುದೇ ವಿಜ್ಞಾನ, ಇದರಿಂದ ಧರ್ಮ ವೃದ್ಧಿಹೊಂದುವುದು. ಯಥಾರ್ಥ ಮತ್ತು ಪ್ರಮಾದರಹಿತ ವ್ಯವಹಾರವೇ ಸತ್ಯ. ಶರೀರೇಂದ್ರಿಗಳ ಮೇಲಿನ ಹತೋಟಿಯೇ ದಮೆ. ಪ್ರಸನ್ನ ಬುದ್ಧಿಯೇ ಶಮೆ. ಆಧ್ಯಾತ್ಮವೆಂದರೆ ಬ್ರಹ್ಮವಿದ್ಯೆ. ಸಾಕ್ಷಾತ್ ವಿಷ್ಣುವನ್ನು ಸೇರಲು ಸಾಧನವಾದ ವಿದ್ಯೆಯೇ ಜ್ಞಾನ.

ಧರ್ಮ ಸಾಧನವಾದ ಈ ಶರೀರವನ್ನು ಯತ್ನದಿಂದ ಕಾಪಾಡಿಕೊಳ್ಳಬೇಕು. ದೇಹದ ಸಹಾಯವಿಲ್ಲದೆ ವಿಷ್ಣುಪ್ರಾಪ್ತಿ ಅಶಕ್ಯ. ಧರ್ಮ, ಅದರಿಂದ ಯುಕ್ತವಾದ ಕಾಮ ಅರ್ಥಗಳಲ್ಲಿ ನಿತ್ಯ ಆಸಕ್ತನಾಗಿರಬೇಕು. ಧರ್ಮವನ್ನು ಆಚರಿಸುವಾಗ ಕಷ್ಟವೆನಿಸಿದರೂ ಅಧರ್ಮವನ್ನು ಪರಿಗ್ರಹಿಸಕೂಡದು. ಧರ್ಮವೊಂದೇ ಎಲ್ಲ ಪ್ರಾಣಿಗಳಿಗೂ ಗತಿ. ಪ್ರಾಣಿಗಳ ಹಿತವನ್ನೇ ಬಯಸಬೇಕು. ಪರದ್ರೋಹ ಮಾಡಕೂಡದು. ವೇದ ದೇವತೆಗಳ ನಿಂದೆಮಾಡಕೂಡದು. ನಿಂದಿಸುವವರೊಡನೆ ಸಹವಾಸ ಮಾಡಕೂಡದು.

ಈ ಧರ್ಮಾಧ್ಯಾಯವನ್ನು ಪಠಿಸುವವನೂ ಇತರರಿಗೆ ಬೋಧಿಸುವವನೂ ಬ್ರಹ್ಮಲೋಕವನ್ನು ಪಡೆಯುತ್ತಾನೆ.

**ವ್ಯಾಸ :-** ಯಾವ ಪ್ರಾಣಿಗಳನ್ನೂ ಹಿಂಸಿಸಕೂಡದು. ಸುಳ್ಳು ಹೇಳಬಾರದು. ಅಹಿತ ಅಪ್ರಿಯ ವಚನಗಳನ್ನಾಡಬಾರದು. ಕಳ್ಳತನಮಾಡಬಾರದು. ರಾಜ, ಶೂದ್ರ, ಪತಿತರಿಂದ ದಾನ ಪಡೆಯಕೂಡದು. ನಿತ್ಯ ಬೇಡುತ್ತಿರಬಾರದು. ಒಬ್ಬನನ್ನೇ ತಿರುಗಿ ಬೇಡಬಾರದು.

ದೇವಸ್ವ ಬ್ರಹ್ಮಸ್ವಗಳನ್ನಪಹರಿಸಬಾರದು. ಏಕೆಂದರೆ ಅವು ನಿಜವಾಗಿಯೂ ವಿಷ. ವಿಷವು ವಾಸ್ತವದಲ್ಲಿ ವಿಷವಲ್ಲ. ಯಾತ್ರೆಮಾಡುತ್ತ ದಾರಿಯಲ್ಲಿ ಹಸಿದಿರುವಾಗ ಒಂದುಮುಷ್ಟಿ ಪರರಧಾನ್ಯವನ್ನು ಎತ್ತಿಕೊಂಡರೆ ದೋಷವಿಲ್ಲ. ಪಾಪಮಾಡಿ ಅದನ್ನು ಮುಚ್ಚಿಟ್ಟು, ಡಂಭಾಚಾರಕ್ಕಾಗಿ ಧರ್ಮಾಚರಣ ಮಾಡಬಾರದು. ಬ್ರಹ್ಮಚಾರಿ, ಸನ್ಯಾಸಿ ಅಲ್ಲದವನು ಅವರಂತೆ ವೇಷಧರಿಸಿ ಹಣಕ್ಕಾಗಿ ವಂಚಿಸಿದರೆ ತಿರ್ಯಗ್ ಜಂತುವಾಗಿ ಹುಟ್ಟುತ್ತಾನೆ.

ದೇವದ್ರೋಹಕ್ಕಿಂತ, ಗುರುದ್ರೋಹ ಕೋಟಿಪಾಲು ಹೆಚ್ಚಿನದು. ಅದಕ್ಕಿಂತಲೂ ಜನಾಪವಾದಕ್ಕೆ ಗುರಿಯಾಗುವುದು, ನಾಸ್ತಿಕತೆ ಇವು ಹೆಚ್ಚಿನ ಪಾಪಗಳು. ಗೋವುಗಳು ದೇವರು ವಿಪ್ರರು ಕೃಷಿ ರಾಜಸೇವೆಗಳನ್ನು ಜೀವನೋಪಾಯವಾಗಿ ಬಳಸಿಕೊಂಡರೆ ಕುಲವು ಕೆಡುತ್ತದೆ. ಕೆಟ್ಟ ವಿಚಾರ, ಕರ್ಮಲೋಪ, ವೇದಾಧ್ಯಯನ ಮಾಡದಿರುವುದು, ಸುಳ್ಳು ಹೇಳುವುದು, ಪರಸ್ತ್ರೀಸಂಗ, ಅಭಕ್ಷ್ಯಭಕ್ಷಣ, ವೇದ ಓದದವನಿಗೆ ದಾನ ಮಾಡುವುದು, ಆಚಾರವಿಲ್ಲದವನಿಗೆ ದಾನ ಕೊಡುವುದು. ಇವುಗಳಿಂದ ಕುಲಕ್ಕೆ ಕಲಂಕ ಅಂಟುವುದು. ಅಧಾರ್ಮಿಕರಿರುವೆಡೆ ರೋಗ ಹರಡಿರುವ ಸ್ಥಳಗಳಲ್ಲಿ ವಾಸ ಮಾಡಕೂಡದು. ಹಿಮಾಲಯ ವಿಂಧ್ಯ ಪೂರ್ವಪಶ್ಚಿಮ ಸಮುದ್ರಗಳ ನಡುವಿನ ಭೂಮಿಯನ್ನು ಬಿಟ್ಟು ಬೇರೆಡೆ ವಾಸಮಾಡಬಾರದು. ಕೃಷ್ಣ ಮೃಗಗಳು ಸ್ವಾಭಾವಿಕವಾಗಿ ಸಂಚರಿಸುವ ಪ್ರದೇಶಗಳಲ್ಲಿ ಪವಿತ್ರ ಪ್ರಸಿದ್ಧ ನದಿಗಳಿರುವ ಕಡೆ ವಾಸ ಮಾಡಬಹುದು. ನದಿಯ ಇಕ್ಕಡೆಗಳಲ್ಲಿ ಅರ್ಧ ಕ್ರೋಶವನ್ನು ಬಿಟ್ಟು ಬೇರೆಡೆ ವಾಸಿಸಕೂಡದು. ಪತಿತ ಚಂಡಾಲ, ಮೂರ್ಖರ ಜೊತೆಗೆ ವಾಸಮಾಡಬಾರದು. ಅವರೊಡನೆ ಒಂದೇ ಹಾಸಿಗೆ ಆಸನ, ಪಂಕ್ತಿ, ಪಾತ್ರೆ, ಅಡಿಗೆ, ಭೋಜನ, ವಿವಾಹಸಂಬಂಧ, ವಿದ್ಯಾಭ್ಯಾಸ, ಯಾಗ ಮಾಡುವುದು, ಯಾಗ ಮಾಡಿಸುವುದು, ವಿದ್ಯಾಭ್ಯಾಸ ಮಾಡಿಸುವುದು ಹೀಗೆ ಹನ್ನೊಂದು ವಿಧದ ಸಾಂಕರ್ಯವಾಗದಂತೆ ನೋಡಿಕೊಳ್ಳಬೇಕು. ಅವರ ಸಮೀಪ ಕುಳಿತರೂ ಅವರ ಪಾಪ ನಮ್ಮಲ್ಲಿ ಸೇರಿಕೊಳ್ಳುವುದು. ಬೆಂಕಿ ಬೂದಿ, ನೀರು, ಗೆರೆ, ಬಾಗಿಲು, ಕಂಬಗಳ ನಡುವೆ ಇದ್ದರೆ ಆಗ ಏಕಪಂಕ್ತಿ ಎನಿಸುವುದಿಲ್ಲ.

ಬಹು ಜನರ ವಿರೋಧದಿಂದ ಕಲಹಗಳನ್ನು ಮಾಡಬಾರದು. ತನಗೆ ಅಹಿತವಾದುದನ್ನು ಇನ್ನೊಬ್ಬರಿಗೆ ಮಾಡಬಾರದು. ದೇವ ಗುರು ವಿಪ್ರರಿಗೆ ದಾನ ಸಿಗುವುದನ್ನು ತಡೆಯಬಾರದು. ಆತ್ಮಪ್ರಶಂಸೆಕೂಡದು. ಪರರನಿಂದೆಯೂ ಸಲ್ಲದು ದೇವತೆಗಳ ಋಷಿಗಳ ವೇದಗಳ ನಿಂದೆಮಾಡಬಾರದು. ಆ ನಿಂದೆಗೆ ಶಾಸ್ತ್ರದಲ್ಲಿ ಎಲ್ಲಿಯೂ ಪ್ರಾಯಶ್ಚಿತ್ತ ಹೇಳಿಲ್ಲ. ಅನೇಕ ಕೋಟಿ ಕಲ್ಪಗಳಕಾಲ ರೌರವ ನರಕ ವಾಸವನ್ನು ಮಾತ್ರ ಹೇಳಿದ್ದಾರೆ. ಆ ನಿಂದೆಯನ್ನು ಕೇಳಿದರೆ ಏನೂ ಹೇಳದೆ ಕಿವಿ ಮುಚ್ಚಿಕೊಂಡು ಹೊರಟು ಹೋಗಬೇಕು. ಅವನನ್ನು ತಿರುಗಿ ನೋಡಬಾರದು. ಇನ್ನೊಬ್ಬರ ರಹಸ್ಯ ದೋಷಗಳನ್ನು ಎತ್ತಿಹೇಳಬಾರದು. ಇನ್ನೊಬ್ಬರ ಮೇಲೆ ಸುಳ್ಳು ಅಪವಾದ ಹೊರಿಸಬಾರದು. ಬ್ರಹ್ಮಹತ್ಯೆಯಂಥ ಮಹಾಪಾತಕಗಳಿಗೆ ಪ್ರಾಯಶ್ಚಿತವಿದ್ದರೂ ಈ ಪಾಪಕ್ಕೆ ಪ್ರಾಯಶ್ಚಿತ್ತವಿಲ್ಲ. ಉದಯಾಸ್ತ ಕಾಲಗಳಲ್ಲಿ ಗ್ರಹಣ ಕಾಲದಲ್ಲಿ ನೀರಿನಲ್ಲಿ ಸೂರ್ಯಚಂದ್ರರನ್ನು ನೋಡಬಾರದು. ಆಕಾಶದ ಮಧ್ಯದಲ್ಲಿಯೂ ಅವರನ್ನು

ನೋಡಬಾರದು. ನಗ್ನರಾದ ಸ್ತ್ರೀಪುರುಷರನ್ನು ನೋಡಬಾರದು. ಮಲಮೂತ್ರ ಮೈಥುನಗಳನ್ನು ನೋಡಬಾರದು. ಅಶುಚಿಯಾಗಿ ಸೂರ್ಯಚಂದ್ರಗ್ರಹಗಳನ್ನು ನೋಡಬಾರದು. ಎಣ್ಣೆ ನೀರುಗಳಲ್ಲಿ ತನ್ನ ಮುಖ ನೋಡಬಾರದು. ಆತ್ಮನಿಂದೆ ಮಾಡಿಕೊಳ್ಳಕೂಡದು. ದೈನ್ಯ ತೋರಕೂಡದು. ಮ್ಲೇಚ್ಛಭಾಷೆಯನ್ನು ಕಲಿಯಕೂಡದು. ವ್ಯರ್ಥ ಚೇಷ್ಟೆ, ಹಾಡು, ಕುಣಿತ, ಲೌಕಿಕ ಸುತ್ತಿಗಳಿಂದ ದೇವರನ್ನು ಹೊಗಳುವುದು, ಎರಡು ಕೈಗಳಿಂದ ತಲೆ ತುರಿಸಿಕೊಳ್ಳುವುದು, ಜೂಜು, ಬೆತ್ತಲೆಯಾಗಿ ಸ್ನಾನಮಾಡುವುದು, ಹಲ್ಲಿನಿಂದ ತನ್ನ ಉಗುರು, ರೋಮಗಳನ್ನು ಕೀಳುವುದು. ಇನ್ನೊಬ್ಬರ ನಿದ್ದೆಗೆ ಭಂಗ ತರುವುದು, ಎಳೆ ಬಿಸಿಲು ಸೇವಿಸುವುದು. ಸ್ಮಶಾನದ ಹೊಗೆ ಸೇವಿಸುವುದು, ಶೂನ್ಯಗೃಹದಲ್ಲಿ ಮಲಗುವುದು. ನಿಷ್ಕಾರಣ ಉಗುಳುವುದು. ಈಜುತ್ತ ನದಿದಾಟುವುದು. ಕಾಲಿಂದಲೇ ಕಾಲನ್ನು ತೊಳೆಯುವುದು. ಕಾಲುಗಳನ್ನು ಬೆಂಕಿಯಲ್ಲಿ ಕಾಯಿಸಿಕೊಳ್ಳುವುದು. ದೇವರು ಬ್ರಾಹ್ಮಣರು ಗೋವುಗಳು ವಾಯ ,ಅಗ್ನಿ, ರಾಜ, ಸೂರ್ಯ, ಚಂದ್ರರೆದುರು ಕಾಲು ನೀಡಿ ಕುಳ್ಳಿರುವುದು. ಅಶುದ್ಧನಾಗಿ ನಿದ್ದೆ ಸ್ನಾನ ಪಾನ ಭೋಜನ ಅಧ್ಯಯನ, ಪ್ರಯಾಣಗಳನ್ನು ನಡೆಸುವುದು, ಸಂಧ್ಯಾಕಾಲ ಮಧ್ಯಾಹ್ನಗಳಲ್ಲಿ ಅವನ್ನು ನಡೆಸುವುದು. ಎಡಗೈಯಿಂದ ನೀರು ಕುಡಿಯುವುದು. ತುಟಿಗಳಿಂದ ಹೀರುತ್ತ ನೀರು ಕುಡಿಯುವುದು. ಪಶುಪಕ್ಷಿಗಳಲ್ಲಿ ಪರಸ್ಪರ ಕಾದಾಟ ಮಾಡಿಸುವುದು. ಕೊಟ್ಟ ಮಾತಿಗೆ ತಪ್ಪುವುದು. ಪರಸ್ತ್ರೀಯರೊಡನೆ ಸಂಭಾಷಣೆ ಮಾಡುವುದು, ದೇವಾಲಯವನ್ನು ಅಪ್ರದಕ್ಷಿಣೆಯಾಗಿ ಹೋಗುವುದು, ದೇವಾಲಯದಲ್ಲಿ ನಿದ್ದೆಮಾಡುವುದು, ಏಕಾಂಗಿಯಾಗಿ ಇಲ್ಲವೆ ಅಧಾರ್ಮಿಕ, ವ್ಯಾಧಿತ ಜನರೊಂದಿಗೆ ಪ್ರಯಾಣ ಮಾಡುವುದು. ದೇವ ವಿಪ್ರ ಗುರುಗಳ ಛಾಯೆಯನ್ನು ದಾಟುವುದು. ತನ್ನ ಛಾಯೆನ್ನು ಪತಿತ ವ್ಯಾಧಿತ ಮುಂತಾದವರು ದಾಟಲು ಬಿಡುವುದು. ಇದ್ದಿಲು, ಬೂದಿ, ಕೂದಲುಗಳ ಮೇಲೆ ನಿಲ್ಲುವುದು. ಪೊರಕೆಯ ಧೂಳನ್ನು ಸ್ಪರ್ಶಿಸುವುದು, ಅಭಕ್ಷ್ಯ ಭಕ್ಷಣ, ಅಪೇಯಪಾನ ಇವುಗಳನ್ನೆಲ್ಲ ವರ್ಜಿಸಬೇಕು.

ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರ ಅನ್ನವನ್ನು ಉಂಡು ಸಾಯುವಾಗ ಯಾರ ಅನ್ನ ಹೊಟ್ಟೆಯಲ್ಲಿ ಇರುವದೊ ಅವರ ಜನ್ಮ ಮುಂದೆ ಬರುವುದು. ರಾಜ, ನರ್ತಕ, ಷಂಡ, ಚಮ್ಮಾರ, ವೇಶ್ಯೆ, ಕುಂಬಾರ, ಅಗಸ, ಚೋರ, ಬಡ್ಡಿಯಿಂದ ಜೀವಿಸುವವ, ಪತಿತ ಸೊನ್ನೆಗಾರ, ನಟ, ಬೇಡ, ಬಂಜೆ, ರೋಗಿ, ವೈದ್ಯ, ವ್ಯಭಿಚಾರಿಣಿ, ನಾಸ್ತಿಕ, ಹೊಲೆಯ, ಕೃತಘ್ನ ಮುಂತಾದವರ ಅನ್ನವನ್ನು ಉಣಬಾರದು. ಗುರುವಿನ ಅನ್ನವನ್ನಾದರೂ ಸರಿಯಾದ ಸಂಸ್ಕಾರವಿಲ್ಲದಿದ್ದರೆ ಉಣಕೂಡದು. ಯಾರ ಅನ್ನವನ್ನು ಉಣ್ಣುತ್ತೇವೆಯೋ ಅವನ ಪಾಪ ನಮಗೆ ತಗಲುವುದು.

ಬದನೆಕಾಯಿ, ಈರುಳ್ಳಿ, ಬೆಳ್ಳುಳ್ಳಿ, ಅಣಬೆ, ಹಂದಿಗೆಡ್ಡೆ, ಕುಸುಬೆ, ಮಾದಲ, ಬೇಲ, ಬಸುರಿ, ಸವುತೆ, ಮೂಲಂಗಿ, ಅತ್ತಿ, ಕುಂಬಳ, ಸೋರೆ ಮುಂತಾದುವನ್ನು ತಿನ್ನಬಾರದು. ರಾತ್ರಿಯಲ್ಲಿ ಎಳ್ಳು ಮೊಸರು ತಿನ್ನಬಾರದು. ಕ್ರಿಮಿಕೀಟ ಮಣ್ಣುಗಳಿಂದ ಕೂಡಿದ ಅನ್ನ, ನಾಯಿಮೂಸಿದ ಅನ್ನ, ಚಂಡಾಲರು, ಮುಟ್ಟಾದವರು, ಪತಿತರು ಮುಂತಾದವರ ಸ್ಪರ್ಶ ಹೊಂದಿದ ಅನ್ನ, ಹಳಸಿದ ಅನ್ನ, ಕಾಗೆ, ಕೋಳಿಗಳು ಮುಟ್ಟಿದ ಅನ್ನ ಇವನ್ನು ತಿನ್ನಬಾರದು. ಕರು ಇಲ್ಲದ ಹಸುವಿನ ಹಾಲು ಕುಡಿಯಬಾರದು. ಉಡ, ಮೊಲ, ಆಮೆ,

ಖಡ್ಗಮೃಗ, ಶಲ್ಕವೆಂಬ ಹುಲ್ಲೆ ಜಾತಿ, ಮುಳ್ಳಿರುವ ಮೀನು, ನವಿಲು, ಪಾರಿವಾಳಗಳಂಥ ಹಕ್ಕಿಗಳು ಇವುಗಳ ಮಾಂಸವನ್ನು ಪ್ರಾಣಾಪಾಯಕಾಲದಲ್ಲಿ ಔಷಧಕ್ಕಾಗಿ ಮತ್ತು ವಿಧಿಗನುಸಾರವಾಗಿ ಯಜ್ಞಗಳಲ್ಲಿ ಮಾತ್ರ ತಿನ್ನಬೇಕು. ಮದ್ಯದ ದರ್ಶನ ಸ್ಪರ್ಶನ ದಾನ ಪಾನ ಎಲ್ಲವೂ ನಿಷಿದ್ಧ. ಕುಡಿದವನೊಂದಿಗೆ ಸಂಭಾಷಣೆಯೂ ಕೂಡದು.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಸ್ವರ್ಗಖಂಡದಲ್ಲಿ ಗೃಹಸ್ಥಧರ್ಮವೆಂಬ ಹತ್ತೊಂಬತ್ತನೇಯ ಅಧ್ಯಾಯ ಮುಗಿದುದು*



## ದಾನ ಧರ್ಮ ವರ್ಣನೆ

**ಅಧ್ಯಾಯ - ೨೦**

**ವ್ಯಾಸ ಉವಾಚ**

**ವ್ಯಾಸ :-** ಬ್ರಹ್ಮನು ಹಿಂದೆ ಋಷಿಗಳಿಗೆ ಹೇಳಿದ ದಾನಧರ್ಮವನ್ನೀಗ ವರ್ಣಿಸುವೆನು. ಸತ್ಪಾತ್ರರಿಗೆ ಶ್ರದ್ಧೆಯಿಂದ ದ್ರವ್ಯವನ್ನು ಕೊಡುವುದಕ್ಕೆ ದಾನವೆಂದು ಹೆಸರು. ಅದು ಭುಕ್ತಿ ಮುಕ್ತಿಗಳೆರಡನ್ನೂ ಕೊಡಬಲ್ಲದು. ದಾನ ಮಾಡದೆ ಕೂಡಿಟ್ಟ ಹಣ ಯಾರಿಗೋ ಸೇರಿ ಹೋಗುತ್ತದೆ. ದಾನವು ನಿತ್ಯ, ನೈಮಿತ್ತಿಕ, ಕಾಮ್ಯ, ವಿಮಲವೆಂದು ನಾಲ್ಕು ಬಗೆ. ಪ್ರತಿದಿನ ಯಾವ ಪ್ರತಿಫಲವನ್ನೂ ಬಯಸದೆ ಬ್ರಾಹ್ಮಣರಿಗೆ ಯತ್ ಕಿಂಚಿತ್ತು ದಾನಮಾಡುವುದೆ **ನಿತ್ಯದಾನ.** ಪಾಪ ಪರಿಹಾರಕ್ಕಾಗಿ ಕೊಡುವುದು **ನೈಮಿತ್ತಿಕ.** ಪುತ್ರಸಂಪತ್ತು ವಿಜಯ ಐಶ್ವರ್ಯ ಸುಖಗಳನ್ನು ಬಯಸಿ ಕೊಡುವುದು **ಕಾಮ್ಯ.** ಭಗವಂತನ ಪ್ರೀತಿಗಾಗಿ ಬ್ರಹ್ಮಜ್ಞಾನಿಗೆ ಕೊಡುವ ದಾನ **ವಿಮಲ.** ಕುಟುಂಬ ಪೋಷಣೆಗೆ ಬೇಕಾದುದಕ್ಕಿಂತ ಹೆಚ್ಚಿನದನ್ನು ಶ್ರೋತ್ರಿಯ ಕುಲೀನ ವಿನೀತ ತಪಸ್ವಿ ವ್ರತಸ್ಥ ದರಿದ್ರ ಬ್ರಾಹ್ಮಣನಿಗೆ ನೀಡಿದರೆ ಅದು ಸಫಲ.

ಭೂದಾನ ಅನ್ನದಾನಗಳು ಎಲ್ಲಕ್ಕಿಂತ ಮಿಗಿಲು. ಅದಕ್ಕಿಂತಲೂ ವಿದ್ಯಾದಾನ ಬಹುಶ್ರೇಷ್ಠ. ಧರ್ಮಶೀಲನಾದ ಶಾಂತನಾದ ಶುಚಿಯಾದ ಬ್ರಾಹ್ಮಣನಿಗೆ ವಿದ್ಯಾದಾನ ಮಾಡಿದರೆ ಬ್ರಹ್ಮಲೋಕ ಪ್ರಾಪ್ತಿ. ವೈಶಾಖ ಹುಣ್ಣಿಮೆ ದಿನ ಐದು ಅಥವಾ ಏಳು ಮಂದಿ ಬ್ರಾಹ್ಮಣರನ್ನು ಕರೆದು ಎಳ್ಳು ಜೇನುಗಳನ್ನು ದಾನವಿತ್ತರೆ, ಉಪವಾಸವಿದ್ದು ಧರ್ಮರಾಜನು ಪ್ರೀತನಾಗಲೆಂದು ಬೇಡಿಕೊಂಡರೆ, ಎಲ್ಲ ಪಾಪ ಪರಿಹಾರವಾಗುತ್ತದೆ. ಕೃಷ್ಣಾಜಿನ ಎಳ್ಳು ಜೇನುತುಪ್ಪ ಚಿನ್ನಗಳನ್ನು ಕೊಟ್ಟರೂ ಎಲ್ಲ ಪಾಪ ಪರಿಹಾರ. ತುಪ್ಪದ ಜಲಪಾತ್ರೆಗಳನ್ನು ವೈಶಾಖ ಹುಣ್ಣಿಮೆ ದಿನ ಕೊಟ್ಟರೆ ಧರ್ಮರಾಜ ಪ್ರೀತನಾಗುತ್ತಾನೆ. ಸುವರ್ಣತಿಲಯುಕ್ತ ಜಲಪಾತ್ರೆಗಳನ್ನು ಐದು ಅಥವಾ ಏಳು ಮಂದಿಗೆ ದಾನವಿತ್ತರೆ ಬ್ರಹ್ಮಹತ್ಯಾ ಪರಿಹಾರ. ಮಾಘ ಕೃಷ್ಣಪಕ್ಷ ದ್ವಾದಶಿ ಉಪವಾಸವಿದ್ದು ತಿಲಹೋಮದಾನ ಮಾಡಿದರೆ ಹುಟ್ಟಿದಂದಿನಿಂದ ಮಾಡಿದ ಪಾಪ ಪರಿಹಾರ. ಅಮಾವಾಸ್ಯೆದಿನ ವಿಷ್ಣುಪ್ರೀತಿಗಾಗಿ ಏನುದಾನ ಮಾಡಿದರೂ ಏಳು ಜನ್ಮಗಳ ಪಾಪಪರಿಹಾರ. ಕೃಷ್ಣಪಕ್ಷದ ಚತುರ್ದಶಿ ಶಿವನಾರಾಧನೆಮಾಡಿ ದಾನಮಾಡಿದರೆ ಪುನರ್ಜನ್ಮವಿಲ್ಲ. ಕೃಷ್ಣಪಕ್ಷದ ಅಷ್ಟಮಿಯಲ್ಲಿಯೂ ಹಾಗೆ ಮಾಡಿದರೆ ಸರ್ವಪಾಪ ಪರಿಹಾರ.

ಕೃಷ್ಣಪಕ್ಷದ ಚತುರ್ದಶಿ ಅಷ್ಟಮಿಗಳಲ್ಲಿಯೂ ಅಮಾವಾಸ್ಯೆಗಳಲ್ಲಿಯೂ ತ್ರಿವಿಕ್ರಮನನ್ನು ವಿಶೇಷವಾಗಿ ಪೂಜಿಸಬೇಕು. ಏಕಾದಶಿ ಉಪವಾಸವಿದ್ದು ದ್ವಾದಶಿ ಬ್ರಾಹ್ಮಣ ಮುಖದಿಂದ ಪುರುಷೋತ್ತಮನಾರಾಧನೆಮಾಡಿದರೆ ಪರಮಪದ. ಶಿವನನ್ನಾಗಲಿ ವಿಷ್ಣುವನ್ನಾಗಲಿ ಉದ್ದೇಶಿಸಿ ಅಂದು ಏನು ದಾನ ಮಾಡಿದರೂ ಅನಂತ ಫಲಕೊಡುವುದು. ಯಾವ ದೇವರನ್ನೂ ಬ್ರಾಹ್ಮಣ ಮುಖದಿಂದ ಆರಾಧಿಸಬಹುದು. ಏಕೆಂದರೆ ಆತನಲ್ಲಿ ಎಲ್ಲ ದೇವತೆಗಳೂ ಇರುತ್ತಾರೆ. ಆತ ದೊರೆಯದಿದ್ದಾಗ ಪ್ರತಿಮೆ ಮುಂತಾದವುಗಳಲ್ಲಿ ದೇವತಾರಾಧನೆ ಮಾಡಬಹುದು.

ಐಶ್ವರ್ಯಕ್ಕಾಗಿ ಇಂದ್ರನನ್ನು, ಬ್ರಹ್ಮವರ್ಚಸ್ಸು ಜ್ಞಾನಗಳಿಗಾಗಿ ಬ್ರಹ್ಮನನ್ನು ಆರೋಗ್ಯಕ್ಕೆ ಸೂರ್ಯನನ್ನು, ಧನಕ್ಕಾಗಿ ಅಗ್ನಿಯನ್ನು, ಕರ್ಮಸಿದ್ಧಿಗಾಗಿ ವಿನಾಯಕನನ್ನು, ಸುಖಭೋಗಕ್ಕೆ ಚಂದ್ರನನ್ನು, ಬಲಕ್ಕಾಗಿ ವಾಯುವನ್ನು, ಮೋಕ್ಷಕ್ಕಾಗಿ ಹರಿಯನ್ನು, ಭೋಗ ಮೋಕ್ಷಗಳೆರಡಕ್ಕೂ ಶಿವನನ್ನು ಪೂಜಿಸಬೇಕು.

ಜಲದಾನದಿಂದ ತೃಪ್ತಿ, ತೈಲದಾನದಿಂದ ಅಭೀಷ್ಟ ಸಂತತಿಲಾಭ, ಭೂಮಿದಾನದಿಂದ ಎಲ್ಲ ಅಭೀಷ್ಟಗಳ ಸಿದ್ಧಿ, ಸುವರ್ಣದಾನದಿಂದ ದೀರ್ಘಾಯುಷ್ಯ. ರಜತದಾನದಿಂದ ರೂಪಸೌಂದರ್ಯ ಲಾಭ, ವಸ್ತ್ರದಾನದಿಂದ ಚಂದ್ರಲೋಕ, ಅಶ್ವದಾನದಿಂದ ವಾಹನಲಾಭ, ಅನ್ನದಾನದಿಂದ ಬೇಕಾದ ಸಂಪತ್ತುಗಳು, ಗೋದಾನದಿಂದ ಸೂರ್ಯಲೋಕ, ಶಯ್ಯಾ ದಾನದಿಂದ ಭಾರ್ಯಾಲಾಭ, ಅಭಯದಾನದಿಂದ ಐಶ್ವರ್ಯ, ಧ್ಯಾನದಾನದಿಂದ ಶಾಶ್ವತಸೌಖ್ಯ, ಫಲಮೂಲ ಶಾಕ ಮುಂತಾದ ದಾನದಿಂದ ಸಂತೋಷಲಾಭ. ರೋಗಿಗಳಿಗೆ ಔಷಧ ಆಹಾರ ಸ್ನೇಹೋಪಚಾರಗಳನ್ನು ನೀಡಿದರೆ ಆರೋಗ್ಯ, ಸುಖ, ದೀರ್ಘಾಯುಷ್ಯ. ಛತ್ರಿ ಪಾದರಕ್ಷೆಗಳನ್ನಿತ್ತರೆ ಯಮಲೋಕ ಪ್ರಯಾಣ ಸುಗಮವಾಗುವುದು. ಲೋಕದಲ್ಲಿ ಜನ ಯಾವುದನ್ನು ಹೆಚ್ಚಾಗಿ ಬಯಸುವರೊ ಅದು ಮನೆಯಲ್ಲಿದ್ದರೆ ಯೋಗ್ಯಪಾತ್ರನಿಗೆ ಕೊಡಬೇಕು, ಅಕ್ಷಯಫಲವಿದೆ. ಅಯನ, ವಿಷುವ, ಚಂದ್ರ ಸೂರ್ಯಗ್ರಹಣ ಸಂಕ್ರಾಂತಿ ಮುಂತಾದವುಗಳಲ್ಲಿ ದಾನ ಅನಂತಫಲ ನೀಡಬಲ್ಲದು. ಪ್ರಯಾಗಾದಿ ತೀರ್ಥಗಳಲ್ಲಿ ಪವಿತ್ರ ದೇವಾಲಯಗಳಲ್ಲಿ ಕೊಟ್ಟಾದನವು ಅನಂತವಾಗುತ್ತದೆ.

ದಾನಕ್ಕಿಂತ ಮಿಗಿಲಾದ ಧರ್ಮವಿಲ್ಲ. ಪಾಪಪರಿಹಾರ ಸ್ವರ್ಗಮೋಕ್ಷ ಎಲ್ಲವೂ ಅದರಿಂದ ಸಿಗುತ್ತದೆ. ಅದಕ್ಕೆ ವಿಘ್ನತರುವವನು ತಿರ್ಯಗ್‌ಜಂತುವಾಗಿ ಹುಟ್ಟುತ್ತಾನೆ. ಯಾರು ಹಣ ಸಂಪಾದಿಸಿದರೂ ದಾನಮಾಡಲಾರರೊ ಅವರ ಸರ್ವಸ್ವವನ್ನು ಅಪಹರಿಸಿ ರಾಜನು ಅವರನ್ನು ಗಡಿಪಾರುಮಾಡಬೇಕು. ದುರ್ಭಿಕ್ಷಕಾಲದಲ್ಲಿ ಅನ್ನಾದಿದಾನ ಮಾಡದವನನ್ನು ರಾಜ ಮೈಗೆ ಬರೆಯೆಳೆದು ಗಡಿಪಾರು ಮಾಡಬೇಕು. ಓದುವವರಿಗೆ ವಿದ್ವಾಂಸರಿಗೆ ದಾನ ಮಾಡಿದರೆ ವಿಶೇಷ ಫಲ. ಅವರನ್ನು ಬಿಟ್ಟು ಮೂರ್ಖರಿಗೆ ದುರಾಚಾರಿಗಳಿಗೆ ದಾನ ಮಾಡಿದರೆ ಕುಲದ ಏಳು ಪೀಳಿಗೆಯ ಜನರು ನರಕದಲ್ಲಿ ಬೆಂದು ಹೋಗುತ್ತಾರೆ. ಶೀಲ ವಿದ್ಯೆಗಳಲ್ಲಿ ಶ್ರೇಷ್ಠರಾದ ಬ್ರಾಹ್ಮಣರು ಎಷ್ಟೇ ದೂರವಿರಲಿ ಅವರನ್ನು ಕರೆದು ದಾನನೀಡಬೇಕು. ಆಗ ದಾನ ಕೊಟ್ಟವನೂ ಸ್ವೀಕರಿಸಿದವನೂ ಸ್ವರ್ಗಕ್ಕೆ

ಹೋಗುವರು. ನಾಸ್ತಿಕನಿಗೆ ಪಾಖಂಡಿಗೆ ನೀರು ಕೊಡಕೂಡದು. ವಿದ್ವಾಂಸನಲ್ಲದವನು ಚಿನ್ನಬೆಳ್ಳಿ ಗೋವು ತಿಲ ಭೂಮಿ ಮುಂತಾದುವನ್ನು ದಾನಪಡೆದರೆ ಅವನು ಕಟ್ಟಿಗೆಯಂತೆ ಉರಿದುಹೋಗುತ್ತಾನೆ. 'ಅವಿದ್ವಾನ್ ಪ್ರತಿಗೃಹ್ಣೀಯಾತ್ ಭಸ್ಮೀಭವತಿ ಕಾಷ್ಠವತ್.'

ಹೆಚ್ಚು ಧನವನ್ನಪೇಕ್ಷಿಸಕೂಡದು. ಆದಷ್ಟು ಕಡಿಮೆ ಹಣದಿಂದ ಜೀವನ ನಡೆಸಬೇಕು. ಲೋಭದಿಂದ ಬ್ರಾಹ್ಮಣ್ಯತ್ವ ನಶಿಸುತ್ತದೆ. ಅಲ್ಪಧನದಿಂದ ತೃಪ್ತಿಯ ಜೀವನ ನಡೆಸುವುದಕ್ಕೆ ಲಭಿಸುವ ಫಲ ಎಷ್ಟು ವೇದ ಓದಿದರೂ ಯಜ್ಞಗಳನ್ನು ನಡೆಸಿದರೂ ಸಿಗಲಾರದು. ಅದರಿಂದ ದಾನ ಪಡೆಯುವಾಸೆಯನ್ನು ಹತ್ತಿಕ್ಕಬೇಕು. ಜೀವನ ನಿರ್ವಹಣೆಗೆ ಬೇಕಾದುದಕ್ಕಿಂತ ಹೆಚ್ಚು ದಾನ ಪಡೆಯುವ ಬ್ರಾಹ್ಮಣನು ಅಧೋಗತಿ ಹೊಂದುವನು. ಅವನು ಕಳ್ಳನಂತೆ ಎಲ್ಲರಿಗೂ ಭಯಕಾರಿ. ತನ್ನ ಗುರು, ದೇವತಾ, ಅಥಿತಿಗಳ ಪೂಜೆಗಾಗಿ ತನ್ನಾಶ್ರಿತರ ಪೋಷಣೆಗಾಗಿ ದಾನ ಪಡೆಯಬಹುದು. ಅದರಿಂದ ತನ್ನ ಸುಖವನ್ನು ಬಯಸಬಾರದು.

ಹೀಗೆ ಗೃಹಸ್ಥನು ದೇವತಾ ಅತಿಥಿ ಪೂಜಕನಾಗಿ ಬಾಳಿ ಪತ್ನಿಯನ್ನು ಪುತ್ರರ ವಂಶದಲ್ಲಿ ಬಿಟ್ಟು ಕಾಡಿಗೆ ಹೋಗಬೇಕು. ಅಲ್ಲಿ ಏಕಾಕಿಯಾಗಿ ವಿರಕ್ತಿಯಿಂದ ಸಂಚರಿಸಬೇಕು.

ಇದು ಗೃಹಸ್ಥರ ಧರ್ಮ. ಇದನ್ನು ತಿಳಿದು ತಾನೂ ಆಚರಿಸಬೇಕು. ಇತರರಿಗೂ ಬೋಧಿಸಬೇಕು. ಹೀಗೆ ಭಗವಂತನನ್ನರ್ಚಿಸಿದರೆ ಮೋಕ್ಷ ಲಭಿಸುತ್ತದೆ.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಸ್ವರ್ಗಖಂಡದಲ್ಲಿ*
*ದಾನ ಧರ್ಮ ವರ್ಣನೆ ಎಂಬ ಇಪ್ಪತ್ತನೇಯ ಅಧ್ಯಾಯ ಮುಗಿದುದು*



## ವಾನಪ್ರಸ್ಥಾಶ್ರಮ

**ಅಧ್ಯಾಯ - ೨೧**

**ವ್ಯಾಸ ಉವಾಚ**

**ವ್ಯಾಸ :-** ಹೀಗೆ ಆಯುಷ್ಯದ ಎರಡನೆ ಭಾಗವನ್ನು ಗೃಹಸ್ಥಾಶ್ರಮದಲ್ಲಿ ಕಳೆದು ವಾನಪ್ರಸ್ಥಾಶ್ರಮವನ್ನು ಪ್ರವೇಶಿಸಬೇಕು. ತನ್ನ ಮಗನಿಗೆ ಮಗನು ಹುಟ್ಟಿದ್ದನ್ನು ಕಂಡು, ಇಲ್ಲವೆ ತನ್ನ ಶರೀರ ಮುದಿತನದಿಂದ ಶಿಥಿಲಗೊಂಡಾಗ, ಮಗನಲ್ಲಿ ಪತ್ನಿಯನ್ನು ಬಿಟ್ಟು ಇಲ್ಲವೆ ಜತೆಗೆ ಕರೆದುಕೊಂಡು ಅಗ್ನಿ ಸಮೇತನಾಗಿ ವನಕ್ಕೆ ತೆರಳಬೇಕು. ಉತ್ತರಾಯಣದಲ್ಲಿ ಶುಕ್ಲಪಕ್ಷದ ಒಂದು ಪೂರ್ವಾಹ್ನದಲ್ಲಿ ಹೊರಟು ಕಾಡಿನಲ್ಲಿ ತಪಸ್ಸಿಗೆ ಪ್ರಾರಂಭಿಸಬೇಕು. ಪವಿತ್ರವಾದ ಫಲ ಮೂಲಗಳನ್ನು ತಂದು ಅವುಗಳಿಂದ ಪಿತೃ ದೇವತೆಗಳನ್ನೂ ಅತಿಥಿಗಳನ್ನೂ ಪೂಜಿಸಿ ತಿನ್ನಬೇಕು ಜಟಾಧಾರಿಯಾಗಿರಬೇಕು. ಉಗುರು ಕೂದಲುಗಳನ್ನು ಕತ್ತರಿಸಬಾರದು. ವೇದಾಧ್ಯಯನವನ್ನು ಸದಾ ಮಾಡಬೇಕು. ಬೇರೆ ವಿಷಯದಲ್ಲಿ ಮಾತನ್ನೇ ಆಡಬಾರದು. ಅಗ್ನಿಹೋತ್ರ, ಪಂಚಯಜ್ಞಗಳನ್ನು ಪವಿತ್ರ ಶಾಖ ಮೂಲ ಫಲಗಳಿಂದಲೇ ನಡೆಸಬೇಕು. ವಲ್ಕಲಧರಿಸಬೇಕು. ಮೂರು ಹೊತ್ತು ಸ್ನಾನ

ಮಾಡಬೇಕು. ಎಲ್ಲ ಪ್ರಾಣಿಗಳಲ್ಲಿ ಅನುಕಂಪತೊರಬೇಕು. ಯಾರಿಂದಲೂ ದಾನ ಪಡೆಯಕೂಡದು. ದರ್ಶಪೂರ್ಣಮಾಸ ಋತ್ವಿಷ್ಟಿ **ಆಗ್ರಯಣ** ಚಾತುರ್ಮಾಸ್ಯಗಳನ್ನು ನಡೆಸಬೇಕು. ಮದ್ಯಮಾಂಸಗಳನ್ನು ವರ್ಜಿಸಬೇಕು. ಗ್ರಾಮದಲ್ಲಿ ಜನರು ಬೆಳೆಸಿದ ಫಲ ಪುಷ್ಪಗಳನ್ನು ತರಕೂಡದು. ರಾತ್ರಿ ಏನೂ ಆಹಾರ ಸೇವಿಸಕೂಡದು. ಧ್ಯಾನಮಾಡುತ್ತಿರಬೇಕು. ಇಂದ್ರಿಯ ನಿಗ್ರಹದಿಂದಿರಬೇಕು. ಬ್ರಹ್ಮಚಾರಿಯಾಗಿರಬೇಕು. ತನ್ನ ಪತ್ನಿಯ ಜತೆಗೆ ಕೂಡಿಕೊಳ್ಳಬಾರದು. ಕೂಡಿಕೊಂಡರೆ ವ್ರತಲೋಪ ಉಂಟಾಗುತ್ತದೆ. ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕಾಗುತ್ತದೆ. ಆಗ ಹುಟ್ಟಿದ ಮಗನೂ ಅಸ್ಪೃಶ್ಯನಾಗುತ್ತಾನೆ. ಅವನಿಗೂ ಅವನ ವಂಶದವರಿಗೂ ವೇದಾಧಿಕಾರವಿರುವುದಿಲ್ಲ.

ನೆಲದ ಮೇಲೆ ಮಲಗಬೇಕು. ಸದಾ ಗಾಯತ್ರಿ ಜಪಿಸುತ್ತಿರಬೇಕು. ಕಾಡು, ಮೃಗಗಳೊಂದಿಗೆ ಇರಬೇಕು. ಬಂಡೆಗಲ್ಲಿನ ಮೇಲೆ ಇಲ್ಲವೆ ಮಳಲಿನ ಮೇಲೆ ಮಲಗಬೇಕು. ಕೇವಲ ಹಣ್ಣು ಗಡ್ಡೆಗಳು, ಕಾಡಿನಲ್ಲಿ ಸ್ವಾಭಾವಿಕವಾಗಿ ಸಿಗುವಂತಿದ್ದರೆ ಅವನ್ನು ತಿಂದು ಬದುಕಬೇಕು.

ಗ್ರೀಷ್ಮದಲ್ಲಿ ಪಂಚಾಗ್ನಿಗಳ ಮಧ್ಯೆ ತಪಸ್ಸು. ಮಳೆಗಾಲದಲ್ಲಿ ಮಳೆಯಲ್ಲಿ ನೆನೆಯುತ್ತ, ಚಳಿಗಾಲದಲ್ಲಿ ಒದ್ದೆ ಬಟ್ಟೆಯಲ್ಲಿ ತಪಸ್ಸಿನ ತೀವ್ರತೆಯನ್ನು ಕ್ರಮವಾಗಿ ಹೆಚ್ಚಿಸಬೇಕು. ಒಂದು ಕಾಲಲ್ಲಿ ನಿಂತು ಬಿಸಿಲು ಕುಡಿಯುತ್ತ ತಪಸ್ಸು ಮಾಡಬೇಕು. ಪಂಚಾಗ್ನಿಗಳ ಹೊಗೆಯನ್ನು ಕುಡಿಯಬೇಕು. ಮರದಿಂದುದುರಿದ ಒಣ ಎಲೆಯನ್ನು ತಿಂದು ಬದುಕಬೇಕು. ಯೋಗಾಭ್ಯಾಸ ರುದ್ರಾಧ್ಯಾಯ ಪಠನಮಾಡುತ್ತಿರಬೇಕು. ಅಥರ್ವ ಶಿರಸನ್ನಧ್ಯಯನ ಮಾಡಬೇಕು. ವೇದಾಂತ ವಿಚಾರಬೇಕು.

ಕೊನೆಗೆ ಅಗ್ನಿಯನ್ನು ತನ್ನಲ್ಲಿ ಸಮಾರೋಪಗೊಳಿಸಿ ಧ್ಯಾನಮಾಡುತ್ತ ನಿಂತಲ್ಲಿ ನಿಲ್ಲದೆ ಸನ್ಯಾಸಿಯಾಗಿ ಮೋಕ್ಷಸಾಧನೆಗೆ ತೊಡಗಬೇಕು. ತಪಸ್ಸಿನಲ್ಲಿರುವ ಮುನಿಗಳಲ್ಲಿಯೋ ಗೃಹಸ್ಥರಲ್ಲಿಯೋ ಭಿಕ್ಷೆ ಬೇಡಿ ಎಂಟು ತುತ್ತು ಉಣಬೇಕು. ಕೈಯ ಬೊಗಸೆಯಲ್ಲಿ ಅಥವಾ ಕಪಾಲದಲ್ಲಿ ಭಿಕ್ಷೆ ಪಡೆಯಬೇಕು. ರಹಸ್ಯವಾದ ಮಂತ್ರಗಳನ್ನು ಗಾಯತ್ರಿ ರುದ್ರಾಧ್ಯಾಯಗಳನ್ನೂ ಜಪಿಸುತ್ತಿರಬೇಕು. ಮಹಾಪ್ರಸ್ಥಾನಕ್ಕೆ ತೊಡಗಬೇಕು. ಇಲ್ಲವೇ ಪ್ರಾಯೋಪವೇಶ ಅಗ್ನಿ ಪ್ರವೇಶಗಳಂಥ ವಿಧಾನದಿಂದ ತನ್ನ ಜೀವನವನ್ನು ಬ್ರಹ್ಮಾರ್ಪಣಗೊಳಿಸಬೇಕು.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಸ್ವರ್ಗಖಂಡದಲ್ಲಿ ವಾನಪ್ರಸ್ಥಾಶ್ರಮ ಎಂಬ ಇಪ್ಪತ್ತೊಂದನೇಯ ಅಧ್ಯಾಯ ಮುಗಿದುದು*

—o—

**ವ್ಯಾಸ ಉವಾಚ**

**ವ್ಯಾಸ :-** ಹೀಗೆ ವಾನಪ್ರಸ್ಥಾಶ್ರಮದಲ್ಲಿ ಆಯುಷ್ಯದ ಮೂರನೆ ಭಾಗವನ್ನು ಕಳೆದು ನಾಲ್ಕನೆಯ ಭಾಗವನ್ನು ಸಂನ್ಯಾಸಾಶ್ರಮದಲ್ಲಿ ಕಳೆಯಬೇಕು. ಅಗ್ನಿಯನ್ನು ತನ್ನಲ್ಲಿ ಸ್ಥಾಪಿಸಿಕೊಂಡು ಸನ್ಯಾಸದೀಕ್ಷೆ ಪಡೆಯಬೇಕು. ಯೋಗಾಭ್ಯಾಸಮಾಡುತ್ತ ಸದಾ ಬ್ರಹ್ಮವಿದ್ಯೆಯನ್ನು ಧ್ಯಾನಿಸಬೇಕು. ಎಲ್ಲ ವಸ್ತುಗಳಲ್ಲಿಯೂ ವಿರಕ್ತಿ ಮೂಡಿದಾಗಲೇ ಸನ್ಯಾಸಪಡೆಯಬೇಕು. ಇಲ್ಲದಿದ್ದರೆ ಪತಿತನಾಗುತ್ತಾನೆ. ಪ್ರಾಜಾಪತ್ಯೇಷ್ಟಿಯನ್ನೋ ಅಗ್ನೇಯೀಷ್ಟಿಯನ್ನೋ ಮಾಡಿ ಸನ್ಯಾಸಾಶ್ರಮವನ್ನು ಪ್ರವೇಶಿಸಬೇಕು.

ಜ್ಞಾನಸನ್ಯಾಸಿಗಳು ವೇದಸನ್ಯಾಸಿಗಳು ಕರ್ಮಸನ್ಯಾಸಿಗಳೆಂದು ಮೂರು ವಿಧದ ಸನ್ಯಾಸಿಗಳಿದ್ದಾರೆ. ಕೇವಲ ಆತ್ಮಧ್ಯಾನದಲ್ಲಿ ನಿರತನಾದರೆ ಅವನು ಜ್ಞಾನಸನ್ಯಾಸಿ. ಸದಾ ವೇದಾಧ್ಯಯನದಲ್ಲಿ ನಿರತನಾದರೆ ಅವನು ವೇದಸನ್ಯಾಸಿ. ಪಂಚಯಜ್ಞಗಳನ್ನು ಸದಾ ಮಾಡುವವನಾದರೆ ಅವನು ಕರ್ಮಸನ್ಯಾಸಿ. ಇವರಲ್ಲಿ ಜ್ಞಾನಸನ್ಯಾಸಿ ಶ್ರೇಷ್ಠ. ಅವನು ಯಾವ ಕರ್ಮವನ್ನೂ ಮಾಡುವುದಿಲ್ಲ. ಯಾವ ವೇಷವನ್ನೂ ಧರಿಸುವುದಿಲ್ಲ. ಹರಿದು ಚಿಂದಿಯಾದ ಕೌಪೀನವನ್ನು ಮಾತ್ರ ಧರಿಸುವನು. ಇಲ್ಲವೆ ನಗ್ನನಾಗಿರುವನು. ಸದಾ ಧ್ಯಾನನಿರತನಾಗಿರುವನು. ಬ್ರಹ್ಮಚಾರಿಯಾಗಿ ಏಕಾಕಿಯಾಗಿ ಹಸಿವನ್ನು ಗೆದ್ದವ ಅವನು. ಒಣಗಿ ಬಿದ್ದ ಎಲೆಗಳನ್ನು ತಿಂದು ಬದುಕುವವನು. ಅವನಿಗೆ ಬದುಕಿನಲ್ಲಿ ಆಸೆಯಿಲ್ಲ. ಮರಣದಲ್ಲಿ ದ್ವೇಷವಿಲ್ಲ. ವೇತನಕ್ಕಾಗಿ ದುಡಿಯುವ ಸೇವಕನಂತೆ ಕಾಲಕಳೆಯುತ್ತಿರುವದನ್ನೇ ಇದಿರು ನೋಡುತ್ತಾನೆ. ಅಧ್ಯಯನ ಶ್ರವಣ ಮುಂತಾದುವನ್ನು ಬಿಟ್ಟು ಯೋಗ ಸಮಾಧಿಯಲ್ಲಿದ್ದು ಬ್ರಹ್ಮನನ್ನು ಸೇರುತ್ತಾನೆ.

ಕೆಲವರು ಒಂದು ಬಟ್ಟೆ ಉಟ್ಟಿರುತ್ತಾರೆ. ಇಲ್ಲವೆ ಬರಿ ಕೌಪೀನದಲ್ಲಿರುತ್ತಾರೆ. ತಲೆಯಲ್ಲಿ ಶಿಖೆ ಇರಬಹುದು. ಅಥವಾ ಪೂರ್ತಿ ಮುಂಡನ ಮಾಡಿಸಿಕೊಂಡಿರಬಹುದು. ಇವರು' ತ್ರಿದಂಡಿಗಳು. ಕಾವಿಬಣ್ಣದ ಬಟ್ಟೆ ಉಟ್ಟು ಗ್ರಾಮದ ಬಳಿಯ ಮರದ ಬುಡದಲ್ಲಿಯೋ ದೇವಾಲಯದಲ್ಲಯೋ ಇರುತ್ತಾರೆ. ಭಿಕ್ಷೆ ಬೇಡುತ್ತಾರೆ. ಒಬ್ಬರ ಅನ್ನವನ್ನೇ ನಿತ್ಯ ಉಣಲಾರರು. ಉಂಡರೆ ಅದಕ್ಕೆ ಪ್ರಾಯಶ್ಚಿತ್ತವಿಲ್ಲ. ರಾಗದ್ವೇಷಗಳನ್ನು ಗೆದ್ದು, ಶತ್ರು ಮಿತ್ರರಲ್ಲಿ ಮಾನಾಪಮಾನಗಳಲ್ಲಿ ಮಣ್ಣು ಬಂಗಾರಗಳಲ್ಲಿ ಭೇದವೆಣಿಸರು. ಪ್ರಾಣಿಹಿಂಸೆಯಾಗದಂತೆ ಜಾಗರೂಕರಾಗಿರುತ್ತಾರೆ. ದೃಷ್ಟಿಯಿಂದ ದಾರಿಯನ್ನು ಶೋಧಿಸಿ ಹೆಜ್ಜೆ ಇಡುತ್ತಾರೆ. ಬಟ್ಟೆಯಿಂದ ಶೋಧಿಸಿ ನೀರು ಕುಡಿಯುತ್ತಾರೆ. ಸತ್ಯದಿಂದ ಶೋಧಿಸಿ ಮಾತನಾಡುತ್ತಾರೆ. ಮನಸ್ಸಿನಿಂದ ಶೋಧಿಸಿ ಕರ್ಮಾನುಷ್ಠಾನ ಮಾಡುತ್ತಾರೆ. ಎಲ್ಲವೂ ಪ್ರಾಣಿ ಹಿಂಸೆಯ ಪರಿಹಾರಕ್ಕಾಗಿ. ಅವರು ಒಂದು ಕಡೆ ನಿಲ್ಲುವವರಲ್ಲ. ಬ್ರಹ್ಮಚರ್ಯ ಶೌಚಗಳಿಂದಿದ್ದು ಮೋಕ್ಷಶಾಸ್ತ್ರದಲ್ಲಿ ಆಸಕ್ತರಾಗಿರುತ್ತಾರೆ. ಸದಾ ಓಂಕಾರನ್ನು ಜಪಿಸುತ್ತಾರೆ. ಯಜ್ಞೋಪವೀತ ದರ್ಭೆಧರಿಸಿ

ಮೈಗೆ ಭಸ್ಮ ಲೇಪಿಸಿಕೊಂಡಿರುತ್ತಾರೆ. ವೇದಾಧ್ಯಯನ ಮಾಡುತ್ತಾರೆ. ಅಹಿಂಸೆ ಸತ್ಯ ಅಸ್ತೇಯ ಬ್ರಹ್ಮಚರ್ಯ ತಪಸ್ಸು ಕ್ಷಮೆ ದಯೆ ತೃಪ್ತಿ ಇವು ಇವರ ವ್ರತಗಳು.

ಇನ್ನು ಕೆಲವರು ವೇದಾಂತಜ್ಞಾನದಲ್ಲಿ ಆಸಕ್ತರಾಗಿದ್ದೇ ಪಂಚಯಜ್ಞ ನಿರತರಾಗಿರುತ್ತಾರೆ. ಹೋಮ ಮಂತ್ರಗಳನ್ನು ಜಪಿಸುತ್ತಾರೆ. ವೇದಾಧ್ಯಯನ ಮಾಡುತ್ತಾರೆ. ಗಾಯತ್ರೀ ಜಪವನ್ನು ಬೆಳಿಗ್ಗೆ ಸಂಜೆ ಮಾಡುತ್ತಾರೆ. ಏಕಾಂತದಲ್ಲಿ ಪರಮಾತ್ಮನ ಧ್ಯಾನ ಮಾಡುತ್ತಾರೆ. ಎರಡು ಬಟ್ಟೆ ಇಲ್ಲವೆ ಒಂದು ಬಟ್ಟೆಯಲ್ಲಿರುತ್ತಾರೆ. ಶಿಖಾ ಯಜ್ಞೋಪವೀತ ಕಮಂಡಲು ತ್ರಿದಂಡಧಾರಣ ಮಾಡುತ್ತಾರೆ, ಇವರೂ ಒಬ್ಬನ ಅನ್ನವನ್ನೇ ನಿತ್ಯ ಉಣ್ಣುವುದಿಲ್ಲ.

**ವ್ಯಾಸ :-** ಯತಿಗಳು ಸದಾ ಭಿಕ್ಷಾನ್ನವನ್ನೇ ಉಣಬೇಕು. ಇಲ್ಲವೆ ಫಲ ಮೂಲಗಳನ್ನೆ ತಿನ್ನಬೇಕು. ಒಂದು ಹೊತ್ತಿನಲ್ಲಿ ಮಾತ್ರ ಭಿಕ್ಷೆ ಬೇಡಬೇಕು. ಹೆಚ್ಚು ಸಮಯ ಭಿಕ್ಷಾಟನೆ ಮಾಡುತ್ತಿದ್ದರೆ ವಿಷಯಾಸಕ್ತಿ ಹೆಚ್ಚುವ ಭಯವಿದೆ. ಒಮ್ಮೆಗೆ ಏಳು ಮನೆಗಳಲ್ಲಿ ಭಿಕ್ಷೆ ಬೇಡಬೇಕು. ಅಲ್ಲಿ ಸಿಗದಿದ್ದರೆ ತಿರುಗಿ ಬೇರೆಡೆ ಭಿಕ್ಷೆ ಕೇಳಬಾರದು. ಪ್ರತಿ ಮನೆಯಲ್ಲಿಯೂ ಒಂದು ಹಸುವನ್ನು ಹಿಂಡುವಷ್ಟು ಕಾಲ ಮಾತ್ರ ತಲೆತಗ್ಗಿಸಿಕೊಂಡು ನಿಲ್ಲಬೇಕು. ಭಿಕ್ಷೆ ನೀಡಿರೆಂದು ಒಮ್ಮೆ ಹೇಳಿ ಸುಮ್ಮನಿರಬೇಕು, ಅವರು ಕೊಟ್ಟಾಗ ಅದನ್ನು ಸ್ವೀಕರಿಸಿ ಕೈಕಾಲು ತೊಳೆದು ಆಚಮನ ಮಾಡಿ ಆ ಅನ್ನವನ್ನು ಸೂರ್ಯನಿಗೆ ತೋರಿಸಿ ಪೂರ್ವಾಭಿಮುಖವಾಗಿ ಕುಳಿತು ಉಣಬೇಕು. ಮೊದಲು ಐದು ಪ್ರಾಣಾಹುತಿಗಳನ್ನಿತ್ತು ಎಂಟು ತುತ್ತು ಮಾತ್ರ ಉಣಬೇಕು. ಆಚಮನ ಮಾಡಿ ಪರಮಾತ್ಮನನನ್ನು ಧ್ಯಾನಿಸಬೇಕು. ಸೋರೆ ಬುರುಡೆ, ಮರದ ಪಾತ್ರೆ, ಮಣ್ಣಿನ ಪಾತ್ರೆ ಬಿದಿರಿನ ಪಾತ್ರೆ ಹೀಗೆ ನಾಲ್ಕು ವಿಧದ ಪಾತ್ರೆಗಳು ಯತಿಗಳಿಗೆ ವಿಹಿತವೆಂದು ಮನು ಹೇಳುತ್ತಾನೆ.

ಪೂರ್ವರಾತ್ರಿ ಮಧ್ಯರಾತ್ರಿ ಅಪರರಾತ್ರಿ ಪೂರ್ವಾಹ್ನ ಮಧ್ಯಾಹ್ನ ಅಪರಾಹ್ನಗಳಲ್ಲಿ ಹೃದಯ ಕಮಲದಲ್ಲಿ ವಿಶ್ವನಾಮಕ ಪರಮಾತ್ಮನನ್ನು ಧ್ಯಾನಿಸಬೇಕು. ಅವನು ಸರ್ವಾಧಾರ ಸರ್ವಕರ್ತ ಸರ್ವಾಂತರ್ಯಾಮಿ ಪ್ರಕೃತಿಯಿಂದಾಚೆ ಇರುವವ ಅವ್ಯಕ್ತ ಆನಂದರೂಪಿ ಜ್ಯೋತಿಸ್ವರೂಪಿ ಮಂಗಳಸ್ವರೂಪಿ ಪರಬ್ರಹ್ಮನೆಂದು ಚಿಂತಿಸಬೇಕು. ಅಥವಾ ಓಂಕಾರದ ಕೊನೆಯಲ್ಲಿ ಆತ್ಮನನ್ನು ಪರಮಾತ್ಮನಲ್ಲಿ ಸೇರಿಸಿ ಆಕಾಶದಲ್ಲಿ ಜಗದಾದಿ ಕಾರಣ ಆನಂದರೂಪಿ ಪುರಾಣಪುರುಷ ವಿಷ್ಣುವನ್ನು ಧ್ಯಾನಿಸಬೇಕು. ಅಥವಾ ಹೃದಯ ಗುಹೆಯೊಳಗಿನ ಆಕಾಶವು ಆದಿಕಾರಣ ಸರ್ವರಕ್ಷಕ ಸರ್ವಸಂಹಾರಕವೆಂದು ಚಿಂತಿಸಿ ಅದರ ಮಧ್ಯದಲ್ಲಿ ಸತ್ಯ ಜ್ಞಾನ ಅನಂತ ಬ್ರಹ್ಮಸ್ವರೂಪಿಯಾದ ಪರಮಾತ್ಮನನ್ನು ಧ್ಯಾನಿಸಬೇಕು.

ಯತಿಗಳು ಧ್ಯಾನಿಸುವ ಈ ಪರಮಾತ್ಮ ತತ್ವ ಅತಿರಹಸ್ಯವಾದುದು. ಹೀಗೆ ಧ್ಯಾನಮಾಡುತ್ತಿದ್ದರೆ ಯೋಗಸಿದ್ಧಿ ಲಭಿಸುತ್ತದೆ. ಮುಕ್ತಿ ದೊರೆಯುತ್ತದೆ. ಪರಮಾತ್ಮನನ್ನು ಎಲ್ಲ ವಸ್ತುಗಳಿಗಿಂತಲೂ ಭಿನ್ನ ವಿಲಕ್ಷಣ ಆನಂದ ಜ್ಞಾನರೂಪಿ ಎಂದು ಧ್ಯಾನಿಸಬೇಕು.

ಯತಿಗಳ ವ್ರತ ಭಂಗವಾದಾಗ ಪ್ರಾಯಶ್ಚಿತ್ತಗಳು ವಿಹಿತವಾಗಿವೆ. ಕಾಮದಿಂದ ಸ್ತ್ರೀಸಂಗ ಮಾಡಿದರೆ ಪ್ರಾಣಾಯಾಮ ಸಾಂತಪನಕೃಚ್ಛ್ರಗಳನ್ನಾಚರಿಸಬೇಕು. ಅನೃತ ಭಾಷಣಕ್ಕೆ ಒಂದು ದಿನ ಉಪವಾಸ ನೂರು ಪ್ರಾಣಾಯಾಮಗಳು ಪ್ರಾಯಶ್ಚಿತ್ತ. ಎಂಥ

ಆಪತ್ತಿನಲ್ಲಿಯೂ ಕಳವು ಮಾಡಕೂಡದು. ಅದಕ್ಕಿಂತ ಹೆಚ್ಚಿನ ಪಾಪ ಇನ್ನೊಂದಿಲ್ಲವೆಂದು ಹೇಳುತ್ತಾರೆ. ಏಕೆಂದರೆ ಜನರಿಗೆ ಹಣವೆಂದರೆ ಪ್ರಾಣ. ಅದನ್ನು ಅಪಹರಿಸಿದರೆ ಪ್ರಾಣವನ್ನು ಅಪಹರಿಸಿದಂತೆ. ಆಗ ವ್ರತವು ಕೆಡುತ್ತದೆ. ಆಕಸ್ಮಾತ್ ಈ ರೀತಿ ಒಬ್ಬನೆ ಹಿಂಸೆ ಮಾಡಿದರೆ ಕೃಚ್ಛ್ರ ಅತಿಕೃಚ್ಛ್ರ ಚಾಂದ್ರಾಯಣಗಳನ್ನಾಚರಿಸಬೇಕು. ಸ್ತ್ರೀಯನ್ನು ನೋಡಿ ಇಂದ್ರಿಯ ದೌರ್ಬಲ್ಯದಿಂದ ಸ್ಖಲನಹೊಂದಿದರೆ ಹದಿನಾರು ಪ್ರಾಣಾಯಾಮಗಳು. ಹಗಲು ಹೊತ್ತು ಹಾಗಾದರೆ ಮೂರು ದಿನ ನೂರು ಪ್ರಾಣಾಯಾಮಗಳನ್ನು ಮಾಡಬೇಕು. ಒಬ್ಬನ ಅನ್ನವನ್ನೇ ಅನೇಕ ದಿನ ಉಂಡರೆ ಮದ್ಯ ಮಾಂಸಗಳನ್ನು ಭಕ್ಷಿಸಿದರೆ ಪ್ರಾಜಾಪತ್ಯವೆಂಬ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು. ಸದಾ ಪರಮಾತ್ಮನ ಧ್ಯಾನಮಾಡುತ್ತಿದ್ದರೆ ಎಲ್ಲ ಪಾಪಗಳೂ ಪರಿಹಾರವಾಗುತ್ತವೆ. ಅದರಿಂದ ಯತಿಯು ಸದಾ ನಾರಾಯಣನನ್ನು ಧ್ಯಾನಿಸುತ್ತಿರಬೇಕು.

ಇದು ಯತಿಧರ್ಮ. ಬ್ರಹ್ಮನು ಹಿಂದೆ ಮುನಿಗಳಿಗೆ ಇದನ್ನು ವರ್ಣಿಸಿದ್ದ. ಮಗನಿಗೆ ಶಿಷ್ಯನಿಗೆ ಅಥವಾ ಯೋಗಿಗೆ ಇದನ್ನು ಹೇಳಬೇಕು. ಉಳಿದವರಿಗೆ ಹೇಳಲಾಗದು. ಇದನ್ನು ಆಚರಿಸುವವರಿಗೆ ಜನನಮರಣಗಳ ಭಯವಿಲ್ಲ.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಸ್ವರ್ಗಖಂಡದಲ್ಲಿ ಸಂನ್ಯಾಸಶ್ರಮ ಎಂಬ ಇಪ್ಪತ್ತೆರಡನೇಯ ಅಧ್ಯಾಯ ಮುಗಿದುದು*



## ವಿಷ್ಣು ಭಕ್ತಿಯ ವರ್ಣನೆ

ಅಧ್ಯಾಯ - ೨೩

**ಸೂತ ಉವಾಚ**

**ಸೂತ :-** ಹೀಗೆ ಹೇಳಿ ವ್ಯಾಸರು ಎಲ್ಲ ಮುನಿಗಳನ್ನು ಸಂತೈಸಿ ಹೊರಟು ಹೋದರು. ನೀವು ಅವರು ಹೇಳಿದ ವರ್ಣಾಶ್ರಮ ಧರ್ಮವನ್ನೇ ನನ್ನ ಮುಖದಿಂದ ಕೇಳಿದಿರಿ. ಅದನ್ನಾಚರಿಸಿದರೆ ವಿಷ್ಣು ಒಲಿಯುತ್ತಾನೆ ಎನ್ನುವುದರಲ್ಲಿ ಸಂದೇಹವಿಲ್ಲ. ಆದರೆ ಇಲ್ಲಿ ಒಂದು ರಹಸ್ಯವಿದೆ ಹೇಳುತ್ತೇನೆ ಕೇಳಿ. ಈ ವರ್ಣಾಶ್ರಮ ಧರ್ಮವೆಲ್ಲವೂ ಹರಿಭಕ್ತಿಯ ಹದಿನಾರನೆ ಒಂದು ಅಂಶದ ಅಂಶಕ್ಕೂ ಸಮಾನವಲ್ಲ. ಬೇರೆ ಯುಗದಲ್ಲಿ ಆ ಎಲ್ಲ ಧರ್ಮಗಳ ಅನುಷ್ಠಾನಮಾಡಬಹುದು. ಕಲಿಯುಗದಲ್ಲಿ ಹರಿಭಕ್ತಿಯೊಂದೇ ಜನರಿಗೆ ಸುಲಭೋಪಾಯ. ಅದನ್ನು ಸಂಪಾದಿಸಿದರೆ ಮೂಲೋಕವನ್ನೇ ಗೆದ್ದುಕೊಂಡಂತೆ. ಹರಿಭಕ್ತಿಸುಧೆಯನ್ನುಂಡವನಿಗೆ ಕಲಿಕಾಲಸರ್ಪ ಕಚ್ಚಿದರೆ ವಿಷವೇರಲಾರದು. ಹರಿನಾಮ ಒಂದಿದ್ದರೆ ಬೇರೆ ಜಪಬೇಡ. ಹರಿ ಪಾದೋದಕವನ್ನು ತಲೆಯಲ್ಲಿ ಧರಿಸಿದರೆ ಬೇರೆ ಸ್ನಾನ ಬೇಡ. ಹರಿಪಾದ ಕಮಲವನ್ನು ಎದೆಯಲ್ಲಿಟ್ಟುಕೊಂಡರೆ ಯಜ್ಞ ಒಂದೂ ಬೇಡ. ಹರಿಲೀಲೆಯನ್ನು ಭಕ್ತರ ಮುಂದೆ ವರ್ಣಿಸಿದರೆ ಬೇರೆ ದಾನವೊಂದೂ ಬೇಡ. ಅವನ ಗುಣಗಳನ್ನು ಕೇಳಿ ಆನಂದದಿಂದ ಉಬ್ಬಿದರೆ ಯೋಗ ಸಮಾಧಿಯಲ್ಲಿ ದೊರೆವ ಆನಂದಕ್ಕಿಂತ ಅದೇನೂ ಕಡಿಮೆಯಲ್ಲ.

ನಾರಿಯರ ಕಣ್ಣು ದೇವತೆಗಳನ್ನೂ ಕುಣಿಸಬಲ್ಲದು. ಅದನ್ನು ಗೆದ್ದವನು ನಿಜವಾದ ಹರಿಭಕ್ತ. ಮುನಿಗಳೂ ಸ್ತ್ರೀವರ್ಣನ ಲೋಲುಪರಾಗಿ ಅದರಲ್ಲಿ ಸುಖ ಕಾಣುತ್ತಾರೆ. ಆದರೆ ನಾರಿಯಲ್ಲಿ ಭಕ್ತಿ ಮಾಡುವವ ಹರಿಯಲ್ಲೇನು ಭಕ್ತಿ ಮಾಡಬಲ್ಲ ? ರಾಕ್ಷಸಿಯರು ಕಾಮಿನಿ ರೂಪದಿಂದ ಬಳಿಯಲ್ಲಿ ಸುಳಿಯುತ್ತಾರೆ. ಜನರ ವಿವೇಕವನ್ನೇ ಕಬಳಿಸುತ್ತಾರೆ. ವಿದ್ಯೆವಿವೇಕಪಾಂಡಿತ್ಯ ಜಪತಪ ತೀರ್ಥಯಾತ್ರೆ ಗುರುಹಿರಿಯರ ಸೇವೆ ದಾನ ಮಾಡುವ ಬುದ್ಧಿ, ಎಚ್ಚರ, ವಿವೇಕ ಸಜ್ಜನರೊಡನಾಟದ ಬಯಕೆ, ಪುರಾಣ ಶ್ರವಣದಲ್ಲಿ ಅಭಿರುಚಿ. ಈ ಎಲ್ಲ ಗುಣಗಳು ಕಾಮಿನಿಯ ಚಂಚಲ ನಯನದ ಏಟು ಬೀಳುವ ಮುನ್ನವೆ ಇರಬಲ್ಲುವು. ಆದರೆ ಹರಿಪಾದ ಕಮಲ ಮಧುವಿನ ಒಂದು ಲೇಶವನ್ನಾದರೂ ಕುಡಿದಿದ್ದರೆ ನಾರಿಯ ಕುಡಿನೋಟವೇನೂ ಮಾಡಲಾರದು.

ವಾಸ್ತವವಾಗಿ ಈ ಸ್ತ್ರೀ ಸೌಂದರ್ಯವೆಂಬುದೇನು ?. ವಸ್ತ್ರಭೂಷಣಗಳ ಥಳಕು ಬೆಳಕು ಬಿಟ್ಟರಿನ್ನೇನಿಲ್ಲ. ಸ್ನೇಹ ಆತ್ಮಜ್ಞಾನ ರಹಿತವಾದ ಸ್ತ್ರೀರೂಪು ಮಲಮೂತ್ರ ರಕ್ತಮಾಂಸಗಳ ಪಿಂಡ. ಅದರಲ್ಲೇನು ಸೌಂದರ್ಯವಿದೆ ? ಆ ಮಲಮೂತ್ರ ರಕ್ತಮಾಂಸ ಎಲ್ಲವು ಮುಂತಾದುವನ್ನೇ ಬೇರೆ ಬೇರೆಯಾಗಿ ಮುಟ್ಟಿ ಸ್ನಾನಮಾಡುವ ಜನರು ಅವುಗಳ ಪಿಂಡದಲ್ಲಿ ಸೌಂದರ್ಯವನ್ನು ಕಂಡುಕೊಳ್ಳುತ್ತಾರೆ. ಇದು ಎಂಥ ವಿಧಿವಿಪರ್ಯಾಸ !. ಉಬ್ಬಿದೆದೆಗಳನ್ನು ನೋಡಿ ಈಕೆ ಹೆಣ್ಣೆಂದು ಹಿಂಬಾಲಿಸುತ್ತಾರೆ. ವಿಚಾರಮಾಡಿದರೆ ಯಾರು ಹೆಣ್ಣು ? ಯಾರು ಗಂಡು ? ಆದುದರಿಂದ ಸ್ತ್ರೀಸಂಗವನ್ನು ಸರ್ವಥಾ ಬಿಟ್ಟು ಬಿಡಬೇಕು. ಅದರಿಂದ ಸಿದ್ಧಿ ಪಡೆದವ ಲೋಕದಲ್ಲಿ ಯಾರಿದ್ದಾನೆ ? ನರಕದುಃಖ ಬರುವುದಂತೂ ಪ್ರತ್ಯಕ್ಷ ಸಿದ್ಧ. ಮನುಷ್ಯ ಯಾವ ದಾರಿಯಿಂದ ಭೂಮಿಗೆ ಬರುವನೊ, ಎಲ್ಲಿ ಮೂತ್ರ ಸದಾ ಪ್ರವಹಿಸುವುದೊ ಅಲ್ಲಿ ಸುಖ ಕಾಣುವುದೆಂದರೆ ಎಂಥ ದೈವವಿಡಂಬನೆ ! ಎಂಥ ನಾಚಿಕೆಗೇಡು ! ಆದುದರಿಂದ ವಿವೇಕಿಯಾದವನು ಸ್ತ್ರೀಸಂಗದಲ್ಲಿ ದೋಷವನ್ನು ಚಿಂತಿಸಬೇಕು. ಸ್ತ್ರೀ ಸಂಗದಿಂದ ಶಕ್ತಿ ಉಡುಗುತ್ತದೆ. ನಿದ್ದೆ ಹೆಚ್ಚುತ್ತದೆ. ಜ್ಞಾನ ಮಂಕಾಗುತ್ತದೆ. ಆಯುಷ್ಯ ಕ್ಷೀಣಿಸುತ್ತದೆ. ಆದುದರಿಂದ ನಾರಿಯನ್ನು ಮೃತ್ಯುದೇವತೆ ಎಂದು ತಿಳಿಯಲು ಸರ್ವಪ್ರಯತ್ನ ಮಾಡಬೇಕು. ಹರಿಯ ಪಾದಕಮಲಗಳಲ್ಲಿ ಎಲ್ಲ ಸುಖವನ್ನೂ ಕಾಣಬೇಕು. ಅದರಿಂದ ಇಹಪರಗಳೆರಡರಲ್ಲಿಯೂ ಸುಖವಿದೆ. ಹರಿ ಪಾದಸೇವೆ ಪುನರ್ಜನ್ಮ ಕಳೆದೀತು. ಸ್ತ್ರೀಯೋನಿ ಸೇವೆ ಜನ್ಮಸಂಕಟ ತಂದೀತು. ತಿರುಗಿ ತಿರುಗಿ ಗರ್ಭವಾಸದ ದುಃಖ ಉಂಡರೂ ಅದನ್ನೇ ಬಯಸುವುದೆಂಥ ವಿಡಂಬನೆ! ಕೈಯೆತ್ತಿ ಸಾರಿ ಹೇಳುತ್ತಿದ್ದೇನೆ, ಕೇಳಿ. ಗೋವಿಂದನಲ್ಲಿ ಮನಸ್ಸನ್ನಿಡಿ, ಯಾತನೆ ತರುವ ಸ್ತ್ರೀಸಂಗವನ್ನು ಬಯಸಬೇಡಿ ಸ್ತ್ರೀಸಂಗವನ್ನು ಪರಿತ್ಯಜಿಸಿದವನು ಹೆಜ್ಜೆ ಹೆಜ್ಜೆಗೂ ಅಶ್ವಮೇಧಫಲವನ್ನು ಹೊಂದುತ್ತಾನೆ.

ದೈವಯೋಗದಿಂದ ಕುಲೀನಳಾದ ಪತಿವ್ರತೆಯಾದ ಕನ್ಯೆಯನ್ನು ಮದುವೆಯಾದರೆ ಅವಳಲ್ಲಿ ಪುತ್ರನನ್ನು ಪಡೆದ ಮೇಲೆ ಅವಳ ಸಂಗವನ್ನು ಬಿಡಬೇಕು. ಆಗ ಜಗದೊಡೆಯನೊಲಿಯುತ್ತಾನೆ. ಸ್ತ್ರೀಸಂಗವಿದ್ದರೆ ಹರಿಯಲ್ಲಿ ದೃಢಭಕ್ತಿ ಉಂಟಾಗದಿರುವುದರಿಂದ ಅದು ದುರ್ಜನ ಸಂಸರ್ಗದಂತೆಯೇ ಸರಿ.

ಸರ್ವಸಂಗ ಪರಿತ್ಯಾಗಮಾಡಿ ಹರಿಭಕ್ತಿಯನ್ನು ಸಂಪಾದಿಸಬೇಕು. ಆಗ ಧನ್ಯತೆ ಉಂಟಾಗುತ್ತದೆ. ಹರಿಯನ್ನೊಲಿಸುವ ಕರ್ಮವನ್ನೇ ಮಾಡಬೇಕು. ಅವನೊಲಿದರೆ ಜಗವೊಲಿವುದು. ಹರಿಭಕ್ತಿ ಇಲ್ಲದ ನರನ ಜನ್ಮ ವ್ಯರ್ಥ, ಬ್ರಹ್ಮರುದ್ರಾದಿ ದೇವತೆಗಳು ಯಾರ ಪ್ರೀತಿಗಾಗಿ ಯಜ್ಞಮಾಡುವರೋ ಆ ನಾರಾಯಣನನ್ನು ಯಾರು ಭಜಿಸದಿರಲಾರರು ? ಯಾರು ಹೃದಯದಲ್ಲಿ ಹರಿಯ ಪಾದಗಳನ್ನಿರಿಸಕೊಳ್ಳುವನೊ ಅವನನ್ನು ಹೆತ್ತವಳು ಮಹಾ ಭಾಗ್ಯವಂತೆ. ಹುಟ್ಟಿಸಿದವ ಮಹಾ ಅದೃಷ್ಟವಂತ.

'ಹೇ ಜನಾರ್ದನ ಲೋಕವಂದ್ಯ, ಶರಣಾಗತ ವತ್ಸಲ ! ಎಂದೆನ್ನುವವರಿಗೆಂದೂ ನರಕಭಯವಿಲ್ಲ.

ಬ್ರಹ್ಮಜ್ಞಾನಿಗಳು ಹರಿಯ ಅತ್ಯುತ್ತಮ ಪ್ರತಿಮೆಗಳು. ಅವರನ್ನು ಸತ್ಕರಿಸಿದರೆ ಹರಿ ಒಲಿಯುವನು. ಅವರಿಲ್ಲದೆ ಮಾಡಿದ ಕರ್ಮದಿಂದೇನೂ ಸಿದ್ಧಿಯಾಗುವುದಿಲ್ಲ. ಅವರ ಕಾಲ್ತೊಳೆದ ನೀರನ್ನು ಭಕ್ತಿಯಿಂದ ಸೇವಿಸಿ ತಲೆಯಲ್ಲಿ ಧರಿಸಿದರೆ ಪಿತೃಗಳು ತೃಪ್ತರಾಗುವರು. ತಾನೂ ಸಂಸಾರವನ್ನು ದಾಟುವನು. ಅವರಿಗೆ ಉಣಿಸಿದ ಅನ್ನ ಹರಿಗೆ ಉಣಿಸಿದಂತೆ, ಹರಿಯು ತಾನೆ ಅದನ್ನುಣ್ಣುತ್ತಾನೆ.

ಜನರು ಎಂಥ ಭಾಗ್ಯಹೀನರು ! ಪ್ರತ್ಯಕ್ಷ ಹರಿಯಂತಿರುವ ದ್ವಿಜನಿರುವಾಗ ಪ್ರತಿಮೆ ಮುಂತಾದವನ್ನು ಪೂಜಿಸುತ್ತಾರೆ! ಅವನಿಲ್ಲದಾಗ ಅವುಗಳ ಪೂಜೆ ಸಲ್ಲಬೇಕು, ಅವನಿರುವುದರಿಂದ ಭೂಮಾತೆ ಧನ್ಯೆ, ಅವನ ಕೈಯಲಿಟ್ಟುದು ಹರಿಯ ಕೈಲಿಟ್ಟಂತೆ. ಅವನಿಗೆ ಮಾಡುವ ನಮಸ್ಕಾರ ಪಾಪಗಳಿಗೆ ತಿರಸ್ಕಾರ. ಅವನಿಗೆ ವಂದಿಸಿದರೆ ಬ್ರಹ್ಮಹತ್ಯೆಯಂಥ ಪಾಪಗಳೂ ತೊಲಗುತ್ತವೆ. ಅವನು ಹಸಿದಾಗ ಏನು ಉಣಿಸಿದರೂ ಅದರಿಂದ ಪರಲೋಕದಲ್ಲಿ ಬಹುಕಾಲ ಅಮೃತದ ಧಾರೆಯನ್ನು ಸವಿಯಬಹುದು. ಅವನ ಮುಖವೆಂಬುದೊಂದು ಫಲವತ್ತಾದ ಹೊಲ. ಅಲ್ಲಿ ಏನು ಬಿತ್ತಿದರೂ ಒಳ್ಳೆಯ ಫಲ ಸಿಗುವುದು.

ದ್ವಿಜನನ್ನು ಇದಿರು ಕುಳ್ಳಿರಿಸಿ ದ್ವಿಜನು ಪುರಾಣ ಪ್ರವಚನ ಮಾಡುತ್ತಿದ್ದರೆ ಮಹಾಪಾತಕಗಳಿಗೆ ಕಾಳ್ಗಿಚ್ಚಿನಂತಿರುವ ಆ ಪ್ರವಚನವನ್ನು ಸದಾ ಕೇಳುತ್ತಿರಬೇಕು. ಎಲ್ಲ ತೀರ್ಥಗಳನ್ನೂ ಮೀರಿದ ಪವಿತ್ರ ತೀರ್ಥವೇ ಪುರಾಣ. ಅದರೊಳಗಿನ ಒಂದು ಸಾಲನ್ನು ಕೇಳಿದರೂ ಹರಿ ಮೆಚ್ಚುವನು. ಜಗತ್ತಿಗೆ ಬೆಳಕನ್ನು ನೀಡಲು ಸೂರ್ಯರೂಪದಿಂದ ತಿರುಗುವ ಹರಿಯೇ ಅಂತರಂಗವನ್ನು ಬೆಳಗಿಸಲು ಪುರಾಣಗಳ ರೂಪ ಧರಿಸಿದನು. ಅವನನ್ನೊಲಿಸಲು ಪುರಾಣ ಶ್ರವಣ ಮಾಡಬೇಕು.

ಸಾಕ್ಷಾತ್ ಹರಿಯೇ ವ್ಯಾಸರೂಪದಿಂದ ಎಲ್ಲ ವೇದಗಳ ಸಾರವನ್ನು ತೆಗೆದು ಪುರಾಣಗಳನ್ನು ಬರೆದನು. ಪುರಾಣಗಳಲ್ಲಿ ಸ್ಪಷ್ಟವಾಗಿ ನಿರೂಪಿಸಿರುವುದು ಧರ್ಮವನ್ನು. ಧರ್ಮವೂ ಸಾಕ್ಷಾತ್ ಹರಿಯ ರೂಪ. ಅದರಿಂದ ಪುರಾಣ ಶ್ರವಣ ಮಾಡಿದರೆ ಹರಿಯನ್ನೇ ಅರಿತುಕೊಳ್ಳಬಹುದು. ಅವನ ಸನ್ನಿಧಾನದಿಂದ ಪವಿತ್ರನಾದ ದ್ವಿಜನೂ ಪುರಾಣವೂ ಜತೆಗೆ ಸೇರಿದಾಗ ಕೇಳುವವನಲ್ಲಿಯೂ ಹರಿ ಸನ್ನಿಧಾನ ಉಂಟಾಗುತ್ತದೆ.

ಗಂಗೆಯಲ್ಲಿ ಮಿಂದು ಪಾಪಗಳನ್ನು ತೊಳೆದುಕೊಳ್ಳಬೇಕು. ಅಲ್ಲಿ ಹರಿಯು ನೀರಿನ ರೂಪದಿಂದ ಹರಿದು ನೆಲದ ಪಾಪವನ್ನು ತೊಳೆಯುತ್ತಿದ್ದಾನೆ. ಹರಿಯನ್ನು ಭಜಿಸಲು

ಬಯಸುವವ ಮೊದಲಿಗೆ ಗಂಗಾಸ್ನಾನಮಾಡಿ ಆ ದೇವಿಯ ಅನುಗ್ರಹದಿಂದ ವಿಷ್ಣುಭಕ್ತಿಯನ್ನು ಸಂಪಾದಿಸಿಕೊಳ್ಳಬೇಕು. ಬ್ರಾಹ್ಮಣ, ಪುರಾಣ, ಗಂಗೆ, ಗೋವು ಅಶ್ವತ್ಥಗಳಲ್ಲಿ ನಾರಾಯಣನನ್ನು ಆರಾಧಿಸಬೇಕು. ಕಲಿಕಾಲ ಸಾಗರವು ಅತಿ ಭಯಾನಕ. ಪಾಪಗಳೆಂಬ ಮೊಸಳೆಗಳು, ದುಷ್ಟಜನರೆಂಬ ಹಾವುಗಳು, ವಿಷಯಗಳೆಂಬ ಸುಳಿಗಳು ಅಜ್ಞಾನವೆಂಬ ನೊರೆ ಇವುಗಳಿಂದ ಕೂಡಿದ ಆ ಸಮುದ್ರವನ್ನು ದಾಟಲು ಹರಿಭಕ್ತಿ ನೌಕೆಯೊಂದೆ ಸಾಧನ. ಅದನ್ನು ಸಂಪಾದಿಸದ ಮನುಜನ ಜನ್ಮ ನಿಷ್ಫಲ.

ಹರಿಯ ಅದ್ಭುತ ಲೀಲೆಯನ್ನು ಕೇಳಿ ಆನಂದ ಪಡೆಯುವುದನ್ನು ಬಿಟ್ಟು ಬೇರೇನೋ ಕೇಳುತ್ತ ಕುಳಿತಿರುವುದರಲ್ಲೇನು ಸುಖವಿದೆ ? ಜನರಿಗೆ ವಿಷಯ ಸುಖ ಬೇಕೆನಿಸುವುದಾದರೆ ಅನೇಕ ವಿಷಯಗಳನ್ನೊಳಗೊಂಡ ಹರಿಯ ಸುಂದರ ಕಥೆಗಳನ್ನೇ ಕೇಳಬಹುದು. ನೂರಾರು ವಾಜಪೇಯಗಳಾಗಲಿ ಸಾವಿರಾರು ರಾಜಸೂಯಗಳಾಗಲಿ ಹರಿಯೊಲಿಮೆಯನ್ನು ತಂದುಕೊಡುವುದರಲ್ಲಿ ಹರಿಭಕ್ತಿಗೆ ಸಾಟಿಯಾಗಲಾರವು.

ವಿಷಯ ಲೋಲುಪರಾದ ಪಾಮರ ಜನರೇ. ನೀವು ನಿಮ್ಮನ್ನೇ ರೌರವ ನರಕದಲ್ಲೇಕೇ ಬೀಳಿಸುವಿರಿ ? ಹರಿ ಪಾದಸೇವೆಯನ್ನೇಕೇ ಒಲ್ಲಿರಿ ? ಅನಾಯಾಸವಾಗಿ ದುಃಖಗಳಿಂದ ಪಾರಾಗಲು ಮೋಕ್ಷದಾಯಕವಾದ ಆ ಹರಿ ಪಾದಗಳನ್ನೇ ಭಜಿಸಿರಿ. ಮಾನವನು ತಾನು ಎಲ್ಲಿಂದ ಬಂದೆ ಎಲ್ಲಿಗೆ ಹೋಗುತ್ತಿರುವೆನೆಂದು ಆಲೋಚಿಸಿ ವಿವೇಕ ತಾಳಿ ಧರ್ಮಾಚರಣೆ ಮಾಡಬೇಕು. ನಾನಾ ನರಕಗಳಲ್ಲಿ ಬೆಂದು ಅಲ್ಲಿಂದೆದ್ದು ಸ್ಥಾವರಗಳು ಕ್ರಿಮಿಕೀಟಗಳು ಪ್ರಾಣಿಗಳು ಮುಂತಾದ ಜನ್ಮಗಳನ್ನು ಪಡೆದು ಕೊನೆಗೆ ಯಾವುದೋ ಪುಣ್ಯದಿಂದ ಮನುಷ್ಯನಾಗಿ ಹುಟ್ಟುವಾಗಲೂ ಆ ಗರ್ಭವಾಸದ ದುಃಖ ಅಪಾರ. ಅಲ್ಲಿಂದ ಹೊರಗೆ ಬಂದರೂ ಬಾಲ್ಯದಲ್ಲಿ ಅನುಭವಿಸಲಿರುವ ದುಃಖವೇನೂ ಕಡಿಮೆಯದಲ್ಲ. ಯೌವನದಲ್ಲಿಯೂ ದಾರಿದ್ರ್ಯ ರೋಗ ಮುಂತಾದವುಗಳ ಪೀಡೆ ತಪ್ಪಿದ್ದಲ್ಲ. ಮುಪ್ಪಿನಲ್ಲಿ ಮನಸ್ಸಿನ ತುಯ್ದಾಟ ತೊಳಲಾಟಗಳಿಂದ ಅನಿರ್ವಚನೀಯ ವೇದನೆ, ಬಳಿಕ ವ್ಯಾಧಿ, ಮರಣ ಆ ದುಃಖವನ್ನು ಮೀರಿದ ದುಃಖ ಪ್ರಪಂಚದಲ್ಲಿಯೇ ಇಲ್ಲ. ಅನಂತರವೂ ಯಮಲೋಕದಲ್ಲಿ ಶಿಕ್ಷೆ ಕಾದಿರುತ್ತದೆ. ತಿರುಗಿ ಹುಟ್ಟು-ಸಾವು, ಹುಟ್ಟು-ಸಾವು ಹರಿಯ ಚರಣವನ್ನು ಭಜಿಸದವನ ಪಾಡು ಇದು.

**ಅನಾಯಾಸೇನ ಮರಣಂ ವಿನಾಯಾಸೇನ ಜೀವನಂ**
**ಅನಾರಾಧಿತ ಗೋವಿಂದ ಚರಣಸ್ಯ ನ ಜಾಯತೇ**

ಅನಾಯಾಸವಾದ ಮರಣ, ಅನಾಯಾಸವಾದ ಜೀವನ ಹರಿಚರಣಗಳ ನ್ನಾರಾಧಿಸದವನಿಗೆ ಉಂಟಾಗದು.

ಯಮದೂತರು ಬಂದು ಎಳೆವಾಗ ಮನೆಯೊಳಗೆ ಕೂಡಿಟ್ಟಿರುವ ಹಣ ಜೊತೆಗೆ ಬರಲಾರದು. ಆದುದರಿಂದ ಹಣವನ್ನು ಕೂಡಿಟ್ಟ ಮಾತ್ರಕ್ಕೆ ಅದರಿಂದ ಉಪಯೋಗವಿಲ್ಲ. ಸತ್ಕಾರ್ಯಗಳಲ್ಲಿ ವಿನಿಯೋಗಿಸಬೇಕು. ದಾನ ಸ್ವರ್ಗಕ್ಕೆ ಸೋಪಾನ, ದಾನ ಪಾಪನಿವಾರಣ, ಹರಿಭಜನೆಯಿಂದ ಪುಣ್ಯವರ್ಧನೆ. ಶರೀರದಲ್ಲಿ ಕಸುವಿರುವಾಗ ಅದನ್ನು ವ್ಯಥಾ ವ್ಯಯಿಸಬಾರದು. ಹರಿಯ ಮುಂದೆ ಹಾಡಿ ಕುಣಿಯಬೇಕು.

ತನ್ನಲ್ಲಿರುವುದನ್ನು ಕೃಷ್ಣನಿಗರ್ಪಿಸಬೇಕು. ಅವನಿಗರ್ಪಿತವಾದುದು ಸೌಖ್ಯ ತಂದೀತು. ಅನ್ಯರಿಗರ್ಪಿತವಾದುದು ದುಃಖ ತಂದೀತು.

ಕಣ್ಣಿನಿಂದ ಹರಿಯ ವಿಗ್ರಹ ನೋಡಬೇಕು. ಕಿವಿಯಿಂದ ಅವನ ಗುಣ ಕೇಳಬೇಕು. ನಾಲಿಗೆಯಿಂದ ಅವನ ಪಾದೋದಕದ ಸವಿಕಾಣಬೇಕು. ಮೂಗಿನಿಂದ ಅವನ ಪಾದಗಳಿಗೇರಿಸಿದ ತುಳಸೀದಳವನ್ನು ಆಘ್ರಾಣಿಸಬೇಕು. ತ್ವಚೆಯಿಂದ ಅವನ ಭಕ್ತನನ್ನು ಸ್ಪರ್ಶಿಸಬೇಕು. ಮನಸ್ಸಿನಿಂದ ಅವನ ಪಾದವನ್ನು ಧ್ಯಾನಿಸಬೇಕು. ಆಗ ಧನ್ಯತೆಯುಂಟಾಗುವುದು ಸಂಶಯವಿಲ್ಲ.

ಹರಿಯನ್ನೇ ಧ್ಯಾನಿಸುತ್ತಿದ್ದರೆ ಕೊನೆಗೆ ಹರಿಯನ್ನೇ ಸೇರುವುದು ನಿಶ್ಚಯ. ಮನಸ್ಸಿನಲ್ಲಿ ಚಿಂತಿಸಿದರೂ ಹರಿ ತನ್ನ ಲೋಕವನ್ನು ಕೊಡುತ್ತಿರುವಾಗ ಅವನ ಸೇವೆಯನ್ನು ಯಾರು ಮಾಡರು ? ಹರಿಯ ಚರಣಕಮಲವನ್ನು ನಮಿಸಿ, ಧ್ಯಾನಿಸಿ, ಅದರಲ್ಲೇ ಸುಖ ಕಂಡುಕೊಳ್ಳುವವನು ನಿಜವಾಗಿಯೂ ಲೋಕಪೂಜ್ಯನೆನಿಸುವನು.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಸ್ವರ್ಗಖಂಡದಲ್ಲಿ*
*ವಿಷ್ಣುಭಕ್ತಿಯ ವರ್ಣನೆ ಎಂಬ ಇಪ್ಪತ್ತಮೂರನೇಯ ಅಧ್ಯಾಯ ಮುಗಿದುದು*



## ಪುರಾಣರೂಪ, ಪಠನಫಲ

**ಅಧ್ಯಾಯ - ೨೪**

**ಸೂತ ಉವಾಚ**

**ಸೂತ :-** ಲೋಕವನ್ನು ಸಂಸಾರದಿಂದ ದಾಟಿಸುವ ಹರಿಯ ನಾನಾ ರೂಪಗಳಲ್ಲಿ ಪುರಾಣರೂಪವೂ ಒಂದು. ಆ ರೂಪದ ಶಿರಸ್ಸು ಬ್ರಹ್ಮಪುರಾಣ. ಹೃದಯ ಪದ್ಮಪುರಾಣ. ಬಲತೋಳು ವಿಷ್ಣುಪುರಾಣ, ಎಡತೋಳು ಶಿವಪುರಾಣ, ತೊಡೆಗಳೇ ಭಾಗವತ. ನಾಭಿ ನಾರದೀಯ, ಬಲಗಾಲು ಮಾರ್ಕಂಡೇಯ, ಎಡಗಾಲು ಆಗ್ನೇಯ, ಬಲದ ಮಂಡಿ ಭವಿಷ್ಯ, ಎಡದ ಮಂಡಿ ಬ್ರಹ್ಮವೈವರ್ತ, ಬಲಗಾಲಿನ ಗಂಟು ಲಿಂಗಪುರಾಣ, ಎಡಗಾಲಿನ ಗಂಟು ವರಾಹ ಪುರಾಣ, ಸ್ಕಾಂದವೆ ರೋಮಗಳು, ವಾಮನವೆ ಚರ್ಮ. ಕೂರ್ಮಪುರಾಣವು ಮಾಂಸ. ಮತ್ಸ್ಯಪುರಣವು ಮೇದಸ್ಸು ಗಾರುಡವು ಮಜ್ಜೆ, ಬ್ರಹ್ಮಾಂಡವು ಅಸ್ಥಿ. ಹೀಗೆ ಪುರಾಣ ವಿಗ್ರಹನಾದ ಹರಿಯ ಹೃದಯವೇ ಈ ಪದ್ಮಪುರಾಣ. ಇದರ ಒಂದು ಅಧ್ಯಾಯವನ್ನು ಹೇಳಿದರೂ ಎಲ್ಲ ಪಾಪಗಳ ಪರಿಹಾರವಾಗುತ್ತದೆ. ಅದರಲ್ಲಿ ಈ ಸ್ವರ್ಗ ಖಂಡವು ಇಡಿ ಪದ್ಮ ಮಹಾಪುರಾಣದ ಫಲವನ್ನು ಕೊಡುವುದರಲ್ಲಿ ಮೊದಲನೆಯದು. ಇದನ್ನು ಕೇಳಿದ ಮಾನವ ಪಾಪ ಮುಕ್ತನಾಗಿ ಪೊರೆಬಿಟ್ಟ ಹಾವಿನಂತಾಗುತ್ತಾನೆ. ಎಷ್ಟೇ ದುರಾಚಾರಿಯಿರಲಿ ಸರ್ವಧರ್ಮ ಬಹಿಷ್ಕೃತನೇ ಇರಲಿ ಈ ಸ್ವರ್ಗಖಂಡವನ್ನು ಕೇಳಿದರೆ ಅವನು ಎಲ್ಲ ಪುರಾಣವನ್ನು ಕೇಳಿದ ಫಲವನ್ನು ಪಡೆದು ಪವಿತ್ರನಾಗುವನು. ಪ್ರಯಾಗದಲ್ಲಿ ಮಾಘಮಾಸದ ಪ್ರತಿದಿನದಲ್ಲಿ ಸ್ನಾನ ಮಾಡಿದ ಫಲ ಈ ಖಂಡದ ಶ್ರವಣಕ್ಕಿದೆ. ಇದಕ್ಕೆ ಚಿನ್ನದಿಂದ ತುಲಾಭಾರ ಮಾಡಿಸಿದ ಫಲ. ಸಮಗ್ರ ಭೂದಾನಫಲ. ಅನವರತ ವಿಷ್ಣುಸಹಸ್ರನಾಮ ಪಠನದ ಫಲ. ಸರ್ವವೇದಾಧ್ಯಯನ ಫಲ. ಅಧ್ಯಾಪಕರನ್ನು

ವೇತನಕೊಟ್ಟು ನೇಮಿಸಿದ ಫಲ. ಅಭಯದಾನದ ಫಲ. ಮೇಷ ಮುಂತಾದ ನಾಲ್ಕು ತಿಂಗಳು ಜಲದಾನ ಮಾಡಿದ ಫಲ.

ಸ್ವರ್ಗಖಂಡ ಪಠನ ಶ್ರವಣಗಳಿಂದ ಸ್ವರ್ಗಸುಖ ದೊರೆಯುವುದು. ಸ್ವರ್ಗದ ಅರಮನೆಗಳಲ್ಲಿ ಅಂತಃಪುರ ನಾರಿಯರ ಕಾಲಕಿರುಗೆಜ್ಜೆಗಳ ನಾದವನ್ನು ಕೇಳುತ್ತ ಅವರ ಸವಿನುಡಿಗಳನ್ನಾಲಿಸುತ್ತ ಸುಖನಿದ್ರೆಯಿಂದೇಳುವನು. ಇಂದ್ರನ ಅರ್ಧಾಸನದಲ್ಲಿ ಚಿರಕಾಲ ಮಂಡಿಸುವನು. ಬಳಿಕ ಅಲ್ಲಿಂದ ಸೂರ್ಯ-ಚಂದ್ರ ಸಪ್ತರ್ಷಿ ಧ್ರುವಲೋಕಗಳನ್ನು ಕಂಡು ಬ್ರಹ್ಮಲೋಕದಲ್ಲಿ ಜ್ಞಾನವನ್ನು ಪಡೆದು ಮುಕ್ತನಾಗುವನು.

**ಸದ್ಭಿಃ ಸಹ ವಸೇದ್ಧೀಮಾನ್ ಸತ್ತೀರ್ಥೇ ಸ್ನಾನಮಾಚರೇತ್**
**ಕುರ್ಯಾದೇವ ಸದಾಲಾಪಂ ಸಚ್ಛಾಸ್ತ್ರಂ ಶೃಣುಯಾನ್ನರಃ**

ವಿವೇಕಿಯು ಸಜ್ಜನರ ಸಹವಾಸವನ್ನೇ ಮಾಡಬೇಕು. ಪವಿತ್ರ ತೀರ್ಥದಲ್ಲಿಯೇ ಸ್ನಾನ ಮಾಡಬೇಕು. ಒಳ್ಳೆಯ ಮಾತನ್ನೇ ಆಡಬೇಕು. ಸಚ್ಛಾಸ್ತ್ರವನ್ನೇ ಕೇಳಬೇಕು.

**ಭಜಧ್ವಂ ಗೋವಿಂದಂ ನಮಿತ ಹರಿಮೇಕಂ ಸುರವರಂ**
**ಗಮಿಷ್ಯಧ್ವ ಲೋಕಾನತಿ ವಿಮಲ ಭೋಗಾನತಿತರಾಂ ॥**

**ಶೃಣುಧ್ವಂ ಹೇ ಲೋಕಾ ವದತ ಹರಿನಾಮ್ಯೈಕ ಮತುಲಂ**
**ಯದೀಚ್ಛಾವೀಚೀನಾಂ ಸುಖ ತರಣಮಿಷ್ಟಾನಿ ಲಭತ ॥**

ಓ ಜನರೆ, ಕೇಳಿ, ಬಯಕೆಯ ಅಲೆಗಳ ಹೊಡೆತದಿಂದ ಸುಖವಾಗಿ ಪಾರಾಗ ಬಯಸುವಿರಾದರೆ ಗೋವಿಂದನನ್ನು ಭಜಿಸಿರಿ. ದೇವೋತ್ತಮನಾದ ಹರಿಯೊಬ್ಬನನ್ನೆ ನಮಿಸಿರಿ. ಅತಿ ನಿರ್ಮಲ ಸ್ವರೂಪಾನಂದ ಭೋಗಗಳನ್ನು ಕೊಡುವ ವಿಷ್ಣುಲೋಕಗಳನ್ನೇ ಸೇರಿರಿ. ಇವೆಲ್ಲಕ್ಕೂ ಮೊದಲು ಅನುಪಮವಾದ ಹರಿನಾಮ ಒಂದನ್ನೇ ಹೇಳುತ್ತಲಿರಿ.

*ಶ್ರೀ ವ್ಯಾಸಪ್ರಣೀತ ಪದ್ಮ ಮಹಾಪುರಾಣ ಭಾಗ - ೨ರ ಸ್ವರ್ಗಖಂಡದಲ್ಲಿನ ಪುರಾಣರೂಪ, ಪಠನಫಲ ಎಂಬ ಇಪ್ಪತ್ತನಾಲ್ಕನೇಯ ಅಧ್ಯಾಯ ಮುಗಿಯುವುದರೊಂದಿಗೆ*

***ಸ್ವರ್ಗಖಂಡ ಸಂಪೂರ್ಣವಾಯಿತು***

—o—

## ಪದ್ಮ ಮಹಾಪುರಾಣದ

# ಬ್ರಹ್ಮ ಖಂಡ

ವ್ಯಾಸ ಜೈಮಿನಿ ಸಂವಾದ

ಅಧ್ಯಾಯ - ೧

**ಶೌನಕ ಉವಾಚ**

**ಶೌನಕ :-** ಕಲಿಯುಗ ಬಂದಾಗ ಜನರು ಉದ್ಧಾರಕ್ಕಾಗಿ ಏನು ಮಾಡಬೇಕು ?

**ಸೂತ :-** ಮುನಿಶ್ರೇಷ್ಠನೆ, ನೀನು ಪುಣ್ಯಾತ್ಮನೆ ಸರಿ. ಎಲ್ಲ ಜನರ ಶುಭವನ್ನೆ ಕೋರುತ್ತಿರುವೆ. ನೀನೀಗ ಕೇಳಿದ ಪ್ರಶ್ನೆಯನ್ನೆ ಹಿಂದೆ ಜೈಮಿನಿಮುನಿ ಸರ್ವಜ್ಞರಾದ ವೇದವ್ಯಾಸರಲ್ಲಿ ಕೇಳಿದಾಗ ಅವರೇನೆಂದರೆಂಬುದನ್ನು ಹೇಳುವೆನು ಕೇಳು. ಜೈಮಿನಿ ಮಹರ್ಷಿಯು ದಂಡಪ್ರಣಾಮವನ್ನು ಮಾಡಿ ವ್ಯಾಸರಲ್ಲಿ ಹೀಗೆ ಕೇಳಿದನು.

**ಜೈಮಿನಿ :-** ಕಲಿಯುಗದಲ್ಲಿ ಮನುಷ್ಯರು ಅಲ್ಪಾಯುಷಿಗಳು. ಅವರಿಗೆ ಮೋಕ್ಷವನ್ನು ಯಾವ ಉಪಾಯದಿಂದ ಪಡೆಯಲು ಸಾಧ್ಯ ?

**ವ್ಯಾಸ :- ಸಾಧುಸಂಗಾತ್ ಭವೇದ್ವಿಪ್ರ ಶಾಸ್ತ್ರಾಣಾಂ ಶ್ರವಣಂ ಪ್ರಭೋ ।**
**ಹರಿ ಭಕ್ತಿರ್ಭವೇತ್ತಸ್ಮಾತ್ ತತೋ ಜ್ಞಾನಂ ತತೋ ಗತಿಃ ।**

ಮುನಿಯೆ, ಸಜ್ಜನರ ಒಡನಾಟದಿಂದ ಶಾಸ್ತ್ರಶ್ರವಣದ ಅವಕಾಶ ದೊರೆಯುವುದು. ಅದರಿಂದ ಹರಿಭಕ್ತಿ ಲಭಿಸುವುದು. ಅದರಿಂದಲೇ ತತ್ವಜ್ಞಾನ ಅದರಿಂದಲೇ ಮೋಕ್ಷ.

ಪಾಪಿಗಳಿಗೆ ಮಾತ್ರ ಹರಿಯ ಕಥೆ ರುಚಿಸುವುದಿಲ್ಲ. ಅದನ್ನು ಕೇಳಿದರೆ ವಿಷ್ಣು ಭಕ್ತನಿಗೆ ಆನಂದ ಉಂಟಾಗುತ್ತದೆ. ಹರಿಕಥೆ ಎಲ್ಲವೂ ಸುಳ್ಳೆಂದು ಹೇಳುವವ ಮಹಾಪಾಪಿ. ಅದು ಇರುವ ಕಡೆ ಹರಿ ಇರುವನು. ಅಲ್ಲಿಂದ ಅವನು ಎಲ್ಲಿಗೂ ಹೋಗಲಾರನು.

ಹರಿಕಥೆಗೆ ವಿಘ್ನಮಾಡುವವನಿಗೆ ನೂರು ಮನ್ವಂತರಗಳ ಕಾಲ ನರಕವಾಸ ತಪ್ಪಿದ್ದಲ್ಲ. ಅದಕ್ಕೆ ಪ್ರಾಯಶ್ಚಿತ್ತವಿಲ್ಲ. ಹರಿಕಥೆಯನ್ನು ಕೇಳಿ ಬಯಸಿದರೂ ಜನ್ಮಾಂತರದ ಪಾಪಗಳು ಪರಿಹಾರವಾಗುತ್ತವೆ. ಅದನ್ನು ನಿಂದಿಸುವ ಪರಿಹಾರಮಾಡುವ ಜನರಿಗೆ ನರಕ ಅವರ ಕೈಯಲ್ಲಿಯೇ ಇದೆ.

ಬ್ರಹ್ಮಹತ್ಯೆ ಸುರಾಪಾನಗಳಂಥ ಮಹಾಪಾತಕಗಳನ್ನು ಮಾಡಿಯೂ ಪಶ್ಚಾತ್ತಾಪದಿಂದ ಮುಂದೆ ಪಾಪಮಾಡಲಾರೆನೆಂದು ಸಂಕಲ್ಪಿಸಿ ಶ್ರೀ ಕೃಷ್ಣಚರಿತ್ರೆಯನ್ನು ಕೇಳಿದರೆ ಬೆಂಕಿ, ಅರಳೆಯ ರಾಶಿಯನ್ನು ಸುಡುವಂತೆ ಅವನ ಪಾಪಗಳನ್ನು ಅದು ಸುಡುತ್ತದೆ. ಶ್ರೀ ಕೃಷ್ಣಚರಿತ್ರೆಯ ಪುಸ್ತಕವು ಮನೆಯಲ್ಲಿದ್ದರೆ ಆ ಮನೆಯ ಬಳಿಗೆ ಯಮದೂತರೂ ಸುಳಿಯಲಾರರು.

**ಜೈಮಿನಿ :-** ವೈಷ್ಣವರೆಂದು ಯಾರನ್ನು ಕರೆಯುವರು ? ಗುರುವೇ, ವೈಷ್ಣವರ ಮಹಾತ್ಮೆಯನ್ನು ತಿಳಿಯುವಾಸೆಯಿದೆ. ಅದನ್ನು ಹೇಳು.

**ವ್ಯಾಸ :-** ಯಾರು ಭಕ್ತಿಯಿಂದ ತಲೆಯಲ್ಲಿ ಹರಿಪಾದೋದಕವನ್ನು ಧರಿಸುವನೊ ಅವನು ಯಾವ ತೀರ್ಥದಲ್ಲಿಯೂ ಸ್ನಾನ ಮಾಡಬೇಕಾದುದಿಲ್ಲ. ಸಜ್ಜನರ ಒಡನಾಟದಲ್ಲಿ ಒಂದು ಕ್ಷಣ ಇಲ್ಲವೆ ಅರ್ಧ ಕ್ಷಣವಾದರೂ ಇದ್ದರೆ ಬ್ರಹ್ಮಹತ್ಯಾಪಾತಕವೂ ಕಳೆಯುತ್ತದೆ. ಕುಲದಲ್ಲಿ ಒಬ್ಬ ವೈಷ್ಣವನು ಹುಟ್ಟಿದರೂ ಆ ಕುಲವಿಡೀ ಪಾಪ ಮುಕ್ತವಾಗಿ ಮೋಕ್ಷ ಹೊಂದುತ್ತದೆ. ಹಿಂಸೆ, ದಂಭಾಚಾರ, ಕಾಮ, ಕ್ರೋಧ, ಲೋಭ, ಮೋಹಗಳನ್ನು ಬಿಡುವವನೇ ವೈಷ್ಣವನೆನಿಸುತ್ತಾನೆ. ಪಿತೃಭಕ್ತಿ, ದಯೆ, ಸರ್ವಪ್ರಾಣಿಗಳ ಹಿತವನ್ನೇ ಚಿಂತಿಸುವುದು, ಮತ್ಸರಪಡದಿರುವುದು, ಸತ್ಯ ನುಡಿಯುವುದು, ವಿಪ್ರರಲ್ಲಿ ಭಕ್ತಿ, ಪರಸ್ತ್ರೀಯರಲ್ಲಿ ನಪುಂಸಕತನ, ಏಕಾದಶೀ ವ್ರತದಲ್ಲಿ ನಿಷ್ಠೆ, ಹರಿನಾಮ ಸಂಕೀರ್ತನೆ, ತುಳಸಿಯ ಮಾಲೆಯನ್ನು ಧರಿಸುವುದು ಹರಿ ಪಾದೋದಕ ಸ್ನಾನ. ತಲೆ ಕಿವಿಗಳಲ್ಲಿ ತುಳಸೀ ದಲಗಳನ್ನು ಧರಿಸುವುದು, ತುಳಸೀ ಗಿಡಗಳಿಗೆ ನೀರೆರೆಯುವುದು. ನಾಸ್ತಿಕರ ಸಂಗ ತ್ಯಜಿಸುವುದು. ವಿಪ್ರರ ದ್ವೇಷ ಮಾಡದಿರುವುದು. ಹರಿಯನ್ನು ತುಳಸಿಯಿಂದ ಅರ್ಚಿಸುವುದು, ಕನ್ಯಾದಾನ, ಅತಿಥಿಪೂಜೆ, ಹರಿಕಥಾಶ್ರವಣ, ಶಾಲಗ್ರಾಮಾರ್ಚನೆ, ವಿಷ್ಣು ಮಂದಿರವನ್ನು ಶುದ್ಧಿ ಗೊಳಿಸುವುದು, ಪಿತೃಯಜ್ಞ ನಡೆಸುವುದು, ದೀನ ಜನರಲ್ಲಿ ದಯೆ ದೋರುವುದು, ಪರದ್ರವ್ಯ ಬ್ರಹ್ಮಸ್ವಗಳನ್ನು ವಿಷವೆಂದು ಕಾಣುವುದು, ವೇದಶಾಸ್ತ್ರಗಳಲ್ಲಿ ಅಭಿರುಚಿ ರಾಷ್ಟಮೀವ್ರತದಲ್ಲಿ ಆಸಕ್ತಿ, ಶ್ರೀಕೃಷ್ಣನೆದುರಿನಲ್ಲಿ ದೀಪವಿಡುವುದು, ಪರನಿಂದೆ ಮಾಡದಿರುವುದು ವೈಷ್ಣವನ ಲಕ್ಷಣಗಳು.

**ಸೂತ :-** ಈ ಅಧ್ಯಾಯವನ್ನು ಶ್ರದ್ಧೆಯಿಂದ ಕೇಳಿದರೆ ಎಲ್ಲ ಪಾಪ ಪರಿಹಾರವಾಗುತ್ತವೆ. ವಿಷ್ಣುಲೋಕ ಪ್ರಾಪ್ತವಾಗುತ್ತದೆ.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಬ್ರಹ್ಮಖಂಡದಲ್ಲಿ ವ್ಯಾಸ ಜೈಮಿನಿ ಸಂವಾದದಲ್ಲಿ ಮೊದಲನೆಯ ಅಧ್ಯಾಯ ಮುಗಿದುದು*



**ಸೂತ :-** ಶೌನಕರೆ, ಜೈಮಿನಿ ಮಹರ್ಷಿಗಳಿಗೆ ವೇದವ್ಯಾಸರು ಉಪದೇಶಿಸಿದ ಇನ್ನು ಕೆಲವು ಧರ್ಮಗಳನ್ನು ಹೇಳುತ್ತೇನೆ, ಕೇಳಿ. ಆ ಸಂಭಾಷಣ ಹೀಗಿದೆ.

**ಜೈಮಿನಿ :-** ಗುರುಗಳೆ, ಪಾಪಿಯಾದವನೂ ಯಾವಕರ್ಮದಿಂದ ವಿಷ್ಣುಲೋಕವನ್ನು ಪಡೆಯಬಹುದು ?

**ವ್ಯಾಸ :-** ಶ್ರೀಕೃಷ್ಣ ಮಂದಿರದಲ್ಲಿ ಗೋಡೆ ನೆಲಗಳಿಗೆ ಲೇಪ ಹಚ್ಚುವವನು ಎಲ್ಲ ಪಾಪಗಳನ್ನು ಕಳೆದುಕೊಂಡು ವಿಷ್ಣುಲೋಕ ಸೇರುವನು. ನೀರು ಬಳಿದು ಶುದ್ಧಿ ಮಾಡುವವನು ಅಲ್ಲಿದ್ದ ಧೂಳಿನಕಣಗಳಷ್ಟು ಸಾವಿರ ಕಲ್ಪಗಳ ಕಾಲ ವಿಷ್ಣುಲೋಕದಲ್ಲಿರುವನು.

ಹಿಂದೆ ದಂಡಕನೆಂಬೊಬ್ಬ ಭಯಂಕರ ಕಳ್ಳನಿದ್ದ, ಬ್ರಹ್ಮಸ್ವಹರಣ, ಮಿತ್ರದ್ರೋಹ, ಅಸತ್ಯವಚನ, ಕ್ರೌರ್ಯ, ದುರಾಚರಣ, ಪರಸ್ತ್ರೀಗಮನ, ಗೋಮಾಂಸ ಭಕ್ಷಣ, ಸುರಾಪಾನ ನಾಸ್ತಿಕಸಂಗ ಮುಂತಾದ ಎಲ್ಲ ಪಾಪಗಳಿಗೂ ಆಶ್ರಯನೆನಿಸಿದ್ದ. ಒಮ್ಮೆ ಆತ ವಿಷ್ಣು ಮಂದಿರವನ್ನು ನುಗ್ಗಿ ಅಲ್ಲಿರುವ ಒಡವೆಗಳನ್ನು ಅಪಹರಿಸಬೇಕೆಂದು ಬಯಸಿದ. ಒಳಗೆ ಪ್ರವೇಶಿಸುತ್ತಿದ್ದಂತೆ ಕಾಲಿನ್ಲಲಿ ಹತ್ತಿದ್ದ ಕೆಸರನ್ನು ನೆಲಕ್ಕೊರಸಿ ಮುಂದೆ ನಡೆದ. ಅದರಿಂದ ಅಲ್ಲಿ ಗುಳಿಬಿದ್ದ ಜಾಗ ತುಂಬಿಕೊಂಡಿತು. ಕಬ್ಬಿಣದ ಸಲಾಕೆಯಿಂದ ಬೀಗ ಒಡೆದು ಗರ್ಭಗೃಹವನ್ನು ಪ್ರವೇಶಿಸಿದನಾತ. ಚಿನ್ನ ರತ್ನಗಳ ದೀಪ ಪ್ರಭೆ, ಸುವಾಸನೆ ಬೀರುವ ನಾನಾವಿಧದ ಹೂಗಳ ಸುಗಂಧ ತೈಲಗಳ ಕಂಪು, ನಯನ ಮನೋಹರವಾದ ಹಾಸಿಗೆಯಲ್ಲಿ ಪೀತಾಂಬರನಾದ ಹರಿ ರಾಧೆಯೊಂದಿಗೆ ಪವಡಿಸಿದ್ದುದನ್ನು ಕಂಡು ತಲೆಬಾಗಿದ. ಒಡನೆ ಅವನ ಪಾಪವೆಲ್ಲ ದೂರವಾಯಿತು. ವಿಗ್ರಹಕ್ಕೆ ತೊಡಿಸಿದ ಆಭರಣಗಳನ್ನು ಒಯ್ಯಲೆ ಬಿಡಲೆ ಎಂದೊಮ್ಮೆ ತನ್ನನ್ನೇ ಪ್ರಶ್ನಿಸಿಕೊಂಡ. ಕಳವಿನಿಂದ ಜೀವಿಸುವ ನಾನು ಉದ್ಯೋಗವನ್ನೇನೂ ಮಾಡಲಾರೆ. ಈ ಒಡವೆಗಳಿಂದಲೇ ನನಗೆ ಕಾರ್ಯಸಿದ್ಧಿ ಎಂದುಕೊಂಡು ಹರಿಗೆ ಉಡಿಸಿದ್ದ ಪೀತಾಂಬರವನ್ನು ಸೆಳೆದು ನೆಲದ ಮೇಲೆ ಹಾಸಿದ. ಎಲ್ಲ ಒಡವೆಗಳನ್ನು ಅದರಲ್ಲಿಟ್ಟು ಕಟ್ಟಿದ, ಎತ್ತಿಕೊಂಡು ಹೊರಟ. ಆದರೆ ಹರಿಯ ಮಾಯೆಯನ್ನು ಯಾರು ಬಲ್ಲರು ? ಅವನ ಕೈ ನಡುಗಿದುವು, ಆಭರಣದ ಗಂಟು ದೊಪ್ಪನೆ ಕೆಳಗೆ ಬಿದ್ದಿತು. ಆ ಸಪ್ಪಳವನ್ನು ಕೇಳಿ ಮಲಗಿ ನಿದ್ದೆ ಹೋಗಿದ್ದವರೆಚ್ಚೆತ್ತು ಧಾವಿಸಿ ಬಂದರು. ಜನರ ದೊಡ್ಡ ಸಮೂಹ ಸೇರಿತು, ದಂಡಕನು ಹೇಗೋ ಅವರ ಕಣ್ಣು ತಪ್ಪಿಸಿ ಪಲಾಯನ ಮಾಡಿದ. ಆದರೆ ಕೃಷ್ಣಸರ್ಪ ಬಂದು ಅವನನ್ನು ಕಚ್ಚಿತು. ಆತ ಅಸು ನೀಗಿದ. ಯಮನದೂತರು ಕೋರೆ ಹಲ್ಲುಗಳನ್ನು ತೋರುತ್ತಾ ಪಾಶ ಮುದ್ಗರಗಳನ್ನು ಹಿಡಿದು ಅವನೆಡೆಗೆ ಬಂದರು. ಪಾಶದಿಂದ ಕಟ್ಟಿ ದುರ್ಗಮವಾದ ದಾರಿಯಲ್ಲಿ ಎಳೆದೊಯ್ದರು. ಯಮನ ಮುಂದೆ ನಿಲ್ಲಿಸಿದರು. ಯಮಧರ್ಮರಾಜ ಅವನನ್ನು ನೋಡಿ ಚಿತ್ರಗುಪ್ತನನ್ನು ಕೇಳಿದ.

**ಯಮ :-** ಈತ ಮಾಡಿದ ಪುಣ್ಯ ಪಾಪಗಳಾವುವು ?

**ಚಿತ್ರಗುಪ್ತ :-** ಯಾವ ಯಾವ ಪಾಪಗಳನ್ನು ವಿಧಾತನು ಭೂಮಿಯಲ್ಲಿ ಸೃಷ್ಟಿಸಿರುವನೋ ಅವನ್ನೆಲ್ಲ ಈತ ಸಂಪಾದಿಸಿದ್ದಾನೆ. ಆದರೆ ಅವೆಲ್ಲವನ್ನು ನುಂಗುವ ಒಂದು ಪುಣ್ಯ ಕರ್ಮವನ್ನು ಮಾಡಿದ್ದಾನೆ.

**ಯಮ :-** ಅದೇನು ಹೇಳು. ಬಳಿಕ ಅವನಿಗೆ ಯೋಗ್ಯವಾದ ಸ್ಥಾನವನ್ನು ಕೊಡುವೆನು.

**ಚಿತ್ರಗುಪ್ತ :-** ಹರಿಯ ವಸ್ತು ಒಡವೆಗಳನ್ನಪಹರಿಸಲು ಅವನ ಮಂದಿರವನ್ನು ಪ್ರವೇಶಿಸುವಾಗ ಬಾಗಿಲ ಬಳಿ ಕಾಲಿನ ಕೆಸರನ್ನು ನೆಲಕ್ಕೊರಿಸಿದನು, ಈತ. ಆಗ ಈ ನೆಲದ ಗುಳಿ ಮುಚ್ಚಿತು. ಪುಣ್ಯದ ಪ್ರಭಾವದಿಂದ ಇವನ ಪಾಪವೆಲ್ಲ ಹೊರಟು ಹೋಯಿತು. ಈತನೀಗ ನಿನ್ನ ಶಿಕ್ಷೆಗೆ ಯೋಗ್ಯನಲ್ಲ. ವೈಕುಂಠಕ್ಕೆ ಹೋಗಬೇಕಾದವನು.

ಈ ಮಾತನ್ನು ಕೇಳಿದೊಡನೆ ಯಮನು ದಂಡಕನಿಗೆ ಸುವರ್ಣ ಸಿಂಹಾಸವಿತ್ತು ಕುಳ್ಳಿರಿಸಿ ಗೌರವಿಸಿದ, ತಲೆಬಾಗಿ ವಿನಯದಿಂದ ಹೇಳಿದ.

**ಯಮ :-** ನನ್ನ ಅರಮನೆಯಿಂದು ನಿನ್ನ ಪಾದಧೂಳಿಯಿಂದ ಪವಿತ್ರವಾಯಿತು. ನಾನು ಧನ್ಯನಾದೆ. ನೀನೀಗ ಜನನ ಮರಣಗಳಿಲ್ಲದ ನಾನಾ ಸುಖಭೋಗಗಳಿಂದ ತುಂಬಿದ ವಿಷ್ಣುಲೋಕವನ್ನು ಸೇರಬಹುದು.

ಹೀಗೆ ಹೇಳಿ ರಾಜಹಂಸಗಳು ಹೊರುವ ಚಿನ್ನದ ರಥದಲ್ಲಿ ಅವನನ್ನು ಕುಳ್ಳಿರಿಸಿ ಸಮಸ್ತ ಸುಖಗಳನ್ನೀವ ವಿಷ್ಣುಲೋಕಕ್ಕೆ ಕಳಿಸಿದ. ಹೀಗೆ ದಂಡಕನು ವಿಷ್ಣುಲೋಕವನ್ನು ಸೇರಿ ಬಹುಕಾಲ ಅಲ್ಲಿ ಸುಖದಿಂದಿದ್ದ. ಭಕ್ತಿಯಿಂದ ಹರಿಮಂದಿರಕ್ಕೆ ಲೇಪ ಬಳಿಯುವವರಿಗೆ ಏನು ಫಲ ದೊರಕೀತೆಂದು ನಾನು ಹೇಳಲರಿಯೆನು.

ಇದನ್ನು ಭಕ್ತಿಯಿಂದ ಓದುವವನು, ಕೇಳುವವನು ಕೋಟಿ ಜನ್ಮಗಳ ಪಾಪವನ್ನೂ ಕಳೆದುಕೊಳ್ಳುವುದರಲ್ಲಿ ಸಂದೇಹವಿಲ್ಲ.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಬ್ರಹ್ಮಖಂಡದಲ್ಲಿ ಹರಿಮಂದಿರಲೇಪನ ಮಾಹಾತ್ಮ್ಯವೆಂಬ ಎರಡನೆಯ ಅಧ್ಯಾಯ ಮುಗಿದುದು*



**ಶೌನಕ ಉವಾಚ**

**ಶೌನಕ :-** ಕಾರ್ತಿಕಮಾಸದ ಮಹಾತ್ಮೆಯನ್ನು ವರ್ಣಿಸು. ಆ ವ್ರತ ಮಾಡುವವನಿಗೇನು ಫಲ ? ಮಾಡದವನಿಗೇನು ಕೇಡುಂಟಾಗುವುದು ?.

**ಸೂತ :-** ಮುನಿಯೆ, ಹಿಂದೊಮ್ಮೆ ಜೈಮಿನಿಮುನಿ ವೇದವ್ಯಾಸರಲ್ಲಿ ಈ ಪ್ರಶ್ನೆಯನ್ನು ಕೇಳಿದಾಗ ಅವರು ಹೀಗೆ ಹೇಳಿದರು.

**ವ್ಯಾಸ :-** ಕಾರ್ತಿಕ ಮಾಸದಲ್ಲಿ ತಿಲ ತೈಲದ ಸೇವನೆ ಸ್ತ್ರೀ ಸಂಗಗಳನ್ನು ತ್ಯಜಿಸುವವನು ಬಹುಜನ್ಮಗಳ ಪಾಪಗಳನ್ನು ಕಳೆದುಕೊಂಡು ವಿಷ್ಣುಲೋಕವನ್ನು ಸೇರುವನು. ಮತ್ಸ್ಯ ಮೈಥುನಗಳನ್ನು ಬಿಡದವನು ಹಂದಿಯ ಜನ್ಮ ಪಡೆಯುವನು. ತುಳಸೀದಳಗಳಿಂದ ಹರಿಯನ್ನರ್ಚಿಸುವವನು ಪ್ರತಿಯೊಂದು ದಳಕ್ಕೂ ಅಶ್ವಮೇಧದ ಫಲವನ್ನೇ ಪಡೆಯುವನು. ಮತ್ತು ಪುಷ್ಪಗಳಿಂದ ಅವನನ್ನರ್ಚಿಸುವವನು ದೇವತೆಗಳಿಗೂ ದುರ್ಲಭವಾದ ಮೋಕ್ಷವನ್ನು ಪಡೆಯುವನು. ಮುನಿಶಾಕವನ್ನು ಭಕ್ಷಿಸುವವನು ಒಂದು ವರ್ಷದ ಪಾಪವನ್ನು ಒಂದು ಶಾಕಭಕ್ಷಣದಿಂದ ಕಳೆದುಕೊಳ್ಳುವನು. ಅದರ ಫಲವನ್ನು ಹರಿಗೆ ಸಮರ್ಪಿಸಿ ಸೇವಿಸುವವನು ಕೋಟಿ ಜನ್ಮಗಳ ಪಾಪವನ್ನು ಪರಿಹರಿಸಿಕೊಳ್ಳುವನು. ಕಮಲದ ಹೂವನ್ನು ಹರಿಗರ್ಪಿಸುವನೂ ಎಲ್ಲ ಪಾಪಗಳನ್ನು ಪರಿಹರಿಸಿಕೊಂಡು ವಿಷ್ಣುಲೋಕವನ್ನು ಸೇರುವನು. ಆಕಾಶದ ದೀಪವನ್ನುರಿಸುವವನು ಒಂದು ಮೂಹೂರ್ತ ಕಾಲವಾದರೂ ಉರಿಸಿ ಹರಿ ಪ್ರೀತನಾಗಲಿ ಎಂದರೆ ಹರಿ ಸದಾ ಸಂತುಷ್ಟನಾಗುವನು. ಬ್ರಹ್ಮಹತ್ಯೆಯಂಥ ಪಾಪವೂ ತೊಲಗುವುದು. ವಿಷ್ಣುಲೋಕ ಪ್ರಾಪ್ತಿಯೂ ಆಗುವುದು. ಮನೆಯೊಳಗೆ ಕೃಷ್ಣನಿಗೆ ತುಪ್ಪದ ದೀಪ ಹಚ್ಚಿಟ್ಟರೆ ಪ್ರತಿದಿನವೂ ಅಶ್ವಮೇಧದ ಫಲ ದೊರಕುವುದು.

ಕಾರ್ತಿಕ ದೀಪ ಮಹಾತ್ಮೆಯನ್ನು ಕುರಿತು ಒಂದು ಇತಿಹಾಸವನ್ನು ಹೇಳುವೆನು, ಕೇಳು. ತ್ರೇತಾಯುಗದಲ್ಲಿ ವೈಕುಂಠನೆಂಬೊಬ್ಬ ಬ್ರಾಹ್ಮಣ ಕಾರ್ತಿಕ ಮಾಸದಲ್ಲಿ ಹರಿಯ ಮುಂದೆ ತುಪ್ಪದ ದೀಪವನ್ನು ಹಚ್ಚಿಟ್ಟು ಮನೆಗೆ ಹೊರಟು ಹೋದನು. ಆಗ ಒಂದು ಇಲಿ ಬಂದು ತುಪ್ಪವನ್ನು ತಿನ್ನಲು ತೊಡಗಿತು. ಅದರ ಮೂತಿ ಬತ್ತಿಗೆ ತಗುಲಿದಾಗ ದೀಪ ದೊಡ್ಡದಾಗಿ ಉರಿಯತೊಡಗಿತು. ದೀಪವಿದ್ದಕ್ಕಿದ್ದಂತೆ ಪ್ರಜ್ವಲಿಸಿದಾಗ ಇಲಿ ಭಯದಿಂದೋಡಿತು. ಆದರೆ ಒಂದು ಹಾವು ಅದನ್ನು ಕಡಿದು ಕೊಂದಿತು. ಯಮದೂತರು ಬಂದು ಅದನ್ನು ಪಾಶದಿಂದ ಬಿಗಿದು ಎಳೆದೊಯ್ಯಲು ತೊಡಗಿದರು. ಆಗ ವಿಷ್ಣುದೂತರು ವಿಷ್ಣುವಿನಂತೆ ಚತುರ್ಭುಜಗಳಲ್ಲಿ ಶಂಖ ಚಕ್ರಾದಿಗಳನ್ನು ಧರಿಸಿ ಗರುಡಾರೂಢರಾಗಿ ಬಂದರು. ರಾಜಹಂಸಗಳು ಹೊರುವ ಚಿನ್ನದ ವಿಮಾನವನ್ನು ಜತೆಗೆತಂದಿದ್ದರು. ಅವರು ಯಮಪಾಶವನ್ನು ಹರಿದೊಗೆದು ದೂತರನ್ನು ಗದರಿ ಕೇಳಿದರು.

**ವಿಷ್ಣುದೂತರು:-** ಮೂರ್ಖರೆ, ಈ ವಿಷ್ಣು ಭಕ್ತನನ್ನೇಕೆ ಪಾಶದಿಂದ ಬಂಧಿಸಿದಿರಿ ? ಬದುಕುವಾಸೆ ಇದ್ದರೆ ಹೊರಟುಹೋಗಿ ಇಲ್ಲಿಂದ.

**ಯಮದೂತರು :-** ಈ ಮಹಾಪಾಪಿಯನ್ನು ವಿಷ್ಣುಲೋಕಕ್ಕೇಕೆ ಒಯ್ಯುವಿರಿ ? ಅವನು ಅಂಥ ಪುಣ್ಯ ಕೆಲಸವೇನು ಮಾಡಿರುತ್ತಾನೆ ?

**ವಿಷ್ಣುದೂತರು :-** ತುಪ್ಪ ತಿನ್ನಲು ಹೋಗಿ ಹರಿಯ ಮುಂದೆ ಹಚ್ಚಿದ್ದ ದೀಪವನ್ನು ಈತ ದೊಡ್ಡದಾಗಿ ಉರಿಯುವಂತೆ ಮಾಡಿದ್ದಾನೆ. ತಿಳಿಯದೆ ಹಾಗೆ ಮಾಡಿದರೂ ಅದರಿಂದ ಕೋಟಿ ಜನ್ಮಗಳ ಪಾಪ ನಿವಾರಣೆಯಾಗುವುದು. ಭಕ್ತಿಯಿಂದ ಕಾರ್ತಿಕದ ಹರಿದಿನದಲ್ಲಿ ಹರಿಮಂದಿರದಲ್ಲಿಟ್ಟ ದೀಪದ ಫಲವನ್ನು ಸಾಕ್ಷಾತ್ ಹರಿಯೇ ಎಷ್ಟೆಂದು ಹೇಳಬೇಕು, ಇತರರಿಂದ ಅದು ಶಕ್ಯವಲ್ಲ. ಭಕ್ತಿಯಿಂದ ತುಪ್ಪದ ದೀಪ ಹಚ್ಚಿಟ್ಟರೆ ಸಾವಿರ ಅಶ್ವಮೇಧಗಳನ್ನು ಮಾಡಬೇಕಾಗಿಲ್ಲ. ಅಶ್ವಮೇಧದಿಂದ ಕೇವಲ ಸ್ವರ್ಗ ದೊರಕೀತು. ದೀಪ ದಾನಮಾಡಿದರೆ ವಿಷ್ಣುಲೋಕ ಪ್ರಾಪ್ತಿಯಾಗುವುದು.

ಇದನ್ನು ಕೇಳಿ ಯಮದೂತರು ಹೊರಟು ಹೋದರು. ವಿಷ್ಣುದೂತರು ಆ ಇಲಿಯ ಆತ್ಮವನ್ನು ರಥದಲ್ಲಿ ವಿಷ್ಣುಲೋಕಕ್ಕೊಯ್ದರು. ಅಲ್ಲಿ ನೂರಾರು ಮನ್ವಂತರಗಳ ಕಾಲ ವಿಷ್ಣು ಸನ್ನಿಧಿಯಲ್ಲಿದ್ದು ಬಳಿಕ ಭೂಮಿಯಲ್ಲಿ ರಾಜಕುಮಾರಿಯಾಗಿ ಹುಟ್ಟಿ ಪುತ್ರ ಪೌತ್ರರನ್ನು ಪಡೆದು ಬಹುಕಾಲ ಸುಖವನ್ನು ಭೋಗಿಸಿ ಹರಿ ಸೇವೆಯಿಂದ ಗೋಲೋಕವನ್ನು ಪಡೆಯಿತು.

**ಸೂತ :-** ಈ ದೀಪ ಮಹಾತ್ಮೆಯನ್ನು ಭಕ್ತಿಯಿಂದ ಕೇಳುವವನು ಎಲ್ಲ ಪಾಪಗಳಿಂದ ಮುಕ್ತನಾಗಿ ವಿಷ್ಣುಲೋಕವನ್ನು ಸೇರುವನು.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಬ್ರಹ್ಮಖಂಡದಲ್ಲಿ ಕಾರ್ತಿಕಮಾಸದ ಮಹಾತ್ಮೆವೆಂಬ ಮೂರನೆಯ ಅಧ್ಯಾಯ ಮುಗಿದುದು*



## ಜಯಂತೀವ್ರತದ ಮಹಾತ್ಮೆ

ಅಧ್ಯಾಯ - ೪

**ಶೌನಕ ಉವಾಚ**

**ಶೌನಕ :-** ಜಯಂತೀವ್ರತದ ಮಹತ್ವವೇನು ? ಅದನ್ನು ಎಂದು ಆಚರಿಸುತ್ತಾರೆ ? ಹೇಳು ಸಂಸಾರ ಸಾಗರವನ್ನು ದಾಟುವುದರಲ್ಲಿ ನನಗೆ ನೀನು ನೌಕೆಯಂತಿರುವೆ.

**ಸೂತ :-** ಮಹರ್ಷಿಯೆ ಹಿಂದೆ ನಾರದರು ಬ್ರಹ್ಮನಲ್ಲಿ ಈ ಪ್ರಶ್ನೆಯನ್ನೇ ಕೇಳಿದರು.

**ನಾರದ :-** ಪಿತಾಮಹನೇ, ಜಯಂತೀವ್ರತದ ಮಹಿಮೆಯನ್ನು ಉಪದೇಶಿಸು. ಅದನ್ನು ಕೇಳಿ ನಾನು ವಿಷ್ಣುಲೋಕವನ್ನು ಪಡೆಯುವಂತಾಗಲಿ.

**ಬ್ರಹ್ಮ :-** ಮುನಿಯೆ, ಹೇಳುತ್ತೇನೆ, ಕೇಳು, ಜಯಂತೀ ಉಪವಾಸ ವಿಷ್ಣುಲೋಕವನ್ನು ತಂದು ಕೊಡುತ್ತದೆ. ಜಯಂತೀದಿನದ ಸ್ಮರಣೆ ನಾಮ ಸಂಕೀರ್ತನೆಗಳಿಂದಲೆ ಏಳು ಜನ್ಮದ ಪಾಪ ಸುಟ್ಟು ಹೋಗುವುದು. ಆ ದಿನ ಉಪವಾಸವಿದ್ದರೆ ಅದರ ಫಲವನ್ನೇನೆಂದು ಹೇಳಲಿ ? ಕೃಷ್ಣಜನ್ಮಾಷ್ಟಮಿ ಚೈತ್ರ ಶುದ್ಧ ನವಮೀ ಕುಂಭಮಾಸ ಬಹುಳ ಚತುರ್ದಶಿ, ಮೇಷ ಶುದ್ಧ ಚತುರ್ದಶಿ ಅಶ್ವಯುಜ ಶುದ್ದ ದುರ್ಗಾಷ್ಟಮೀ, ಶ್ರವಣದ್ವಾದಶಿ, ಇವು ಆರು ಜಯಂತೀದಿನಗಳು. ಇವುಗಳಲ್ಲಿ ಕೃಷ್ಣಜನ್ಮಾಷ್ಟಮಿ

ಕೋಟಿಯಜ್ಞಗಳಿಗೆ ಹತ್ತು ಸಾವಿರ ತೀರ್ಥಗಳಿಗೆ ಸಹಸ್ರ ಗೋದಾನಕ್ಕೆ ಸೂರ್ಯಗ್ರಹಣ ಕಾಲದಲ್ಲಿ ಕುರುಕ್ಷೇತ್ರದಲ್ಲಿ ಸಾವಿರ ಹೊನ್ನಿನ ಭಾರಗಳ ದಾನಕ್ಕೆ ಸಾವಿರ ಕೃಷ್ಣಾಜಿನ ನೂರು ತಿಲಧೇನುದಾನಕ್ಕೆ ಸಾವಿರ ಕೋಟಿ ಕನ್ಯಾದಾನಕ್ಕೆ, ಹೆಚ್ಚೇಕೆ ಸಮಸ್ತ ಭೂಮಂಡಲದ ದಾನಕ್ಕೆ ಸಮಾನವಾದುದು.

**ನಾರದ :-** ಹಿಂದೆ ಈ ವ್ರತವನ್ನು ಯಾರಾರು ಮಾಡಿರುವರು ?

**ಬ್ರಹ್ಮ :-** ಕಾರ್ತವೀರ್ಯ, ಕರ್ಣ, ಕುಮಾರ, ಸಗರ, ದಿಲೀಪ, ಕಾಕುತ್ಸ್ಥ, ಗೌತಮ ಗಾರ್ಗ್ಯ ಜಾಮದಗ್ನ್ಯ ವಾಲ್ಮೀಕ ದ್ರೌಪದೇಯ ಮುಂತಾದವರು ಇದನ್ನಾಚರಿಸಿರುವರು. ಭಾದ್ರಪದ ಅಷ್ಟಮೀ ರೋಹಿಣೀ ಸಹಿತವಾಗಿದ್ದರೆ ಎಲ್ಲ ಅಭೀಷ್ಟಗಳನ್ನು ಕೊಡಬಲ್ಲುದು. ಅಂದು ಉಪವಾಸವಿದ್ದು ರಾತ್ರಿ ಜಾಗರಣ ಮಾಡಿ ಗಂಧ ಪುಷ್ಪ ನೈವೇದ್ಯಗಳಿಂದ ಕೃಷ್ಣನ್ನು ಪೂಜಿಸಿದರೆ ಅದು ಜ್ಞಾನ ಪೂರ್ವಕವಾಗಿರಲಿ ಇಲ್ಲದಿರಲಿ ಕೋಟಿ ಜನ್ಮಗಳ ಪಾಪವನ್ನು ಅದು ಕಳೆಯುವುದು, ಅಂದು ಉಣ್ಣುವವನು ಮೂರು ಲೋಕದ ಎಲ್ಲ ಪಾಪಗಳನ್ನು ಹೊರ ಬೇಕಾಗುವುದು. ಅವನು ಕುಲವಿಡೀ ಘೋರ ನರಕದಲ್ಲಿ ಬೀಳುವುದು. ಜಯಂತೀ ದಿನ ಬುಧವಾರ ರೋಹಿಣೀ ಸಹಿತವಾಗಿ ಬಂದರೆ ಅತ್ಯುತ್ತಮ. ಬೇರೆ ಕೋಟಿ ವ್ರತಗಳನ್ನು ಮಾಡಬೇಕಾಗಿಲ್ಲ. ಜಾಗರಣೆಮಾಡುವಾಗ ಹರಿಯ ಪುರಾಣ ಕಥೆಗಳನ್ನು ಕೇಳಬೇಕು. ಕೋಟಿ ಜನ್ಮಗಳ ಪಾಪ ಒಂದು ಕ್ಷಣದಲ್ಲಿ ನಶಿಸಿ ಹೋಗುವುದು.

**ವಿಷ್ಣುಭಕ್ತಿ ಪರಾ ನಿತ್ಯಂ ಜಯಂತೀವ್ರತಮಾನಸಾಃ**
**ತೇಧನ್ಯಾಸ್ತೇ ಕುಲೀನಾಸ್ತ ಈಶ್ವರಾಸ್ತೇಚ ಪಂಡಿತಾಃ**
**ಯಾನಿ ಕಾನಿಚ ತೀರ್ಥಾನಿ ವ್ರತಾನಿ ನಿಯಮಾನಿ ಚ**
**ಜಯಂತೀ ವಾಸರಸ್ಯೈಕಕಲಾಂ ನಾರ್ಹಂತಿ ಷೋಡಶೀಂ**

ವಿಷ್ಣು ಭಕ್ತಿ ಭರಿತರಾಗಿ ಪ್ರತಿ ವರ್ಷ ಜಯಂತಿ ವ್ರತಮಾಡುವವರೆ ಧನ್ಯರು. ಕುಲೀನರು, ಸಂಪನ್ನರು, ಪಂಡಿತರು, ಎಲ್ಲ ತೀರ್ಥಗಳು ವ್ರತಗಳು ನಿಯಮಗಳು ಒಟ್ಟು ಸೇರಿದರೂ ಒಂದು ಜಯಂತೀ ದಿನಾಚರಣೆಯ ಹದಿನಾರನೆ ಒಂದಂಶಕ್ಕೆ ಅವು ಸಮಾನವಾಗಲಾರವು.

·ಭಾದ್ರಪದ ಮಾಸದ ಎರಡು ಪಕ್ಷಗಳಲ್ಲಿ ರಾಧಾಕೃಷ್ಣಾಷ್ಟಮಿಯನ್ನಾಚರಿಸುವವನು ಹರಿಸನ್ನಿಧಿಯನ್ನು ಹೊಂದುವನು. ಅವನಿಗೆ ಪುತ್ರಸಂಪತ್ತು ಐಶ್ವರ್ಯ ಮೋಕ್ಷ ಎಲ್ಲವೂ ದೊರಕುವುದು. ಜಯಂತಿಯನ್ನಾಚರಿಸುವ ಬಯಕೆಯಿಟ್ಟು ಕೊಂಡವರ ಬಳಿ ಸುಳಿಯಲು ಯಮನು ಭಯಪಡುವನು.

**ಸೂತ :-** ಹೀಗೆ ನಾರದರಿಗೆ ಬ್ರಹ್ಮನು ಉಪದೇಶಿಸಿದ್ದಾನೆ. ಈ ಜಯಂತೀವ್ರತ ಮಹಿಮೆಯನ್ನು ಕೇಳಿದರೂ ಎಲ್ಲ ಪಾಪಗಳು ಪರಿಹಾರವಾಗುತ್ತವೆ. ಮೋಕ್ಷ ಲಭಿಸುತ್ತದೆ. ಈ ವ್ರತವನ್ನಾಚರಿಸುವ ಪುರಾಣ ಹೇಳುವ ಜನರನ್ನು ಕಂಡರೂ ಸದ್ಗತಿ ದೊರೆಯುತ್ತದೆ.

*ಇತಿ ಪದ್ಮ ಮಹಾಪುರಾಣ ಭಾಗ-೨ರ ಬ್ರಹ್ಮಖಂಡದಲ್ಲಿ ಬ್ರಹ್ಮನಾರದ ಸಂವಾದದಲ್ಲಿ ಜಯಂತೀವ್ರತ ಮಹಾತ್ಮ್ಯವೆಂಬ ನಾಲ್ಕನೆಯ ಅಧ್ಯಾಯ ಮುಗಿದುದು*

**ಶೌನಕ ಉವಾಚ**

**ಶೌನಕ :-** ಜನರು ಪುತ್ರಸಂತತಿ ಹೀನರಾಗಲು ಕಾರಣವೇನು ? ಏನು ಮಾಡಿದರೆ ಪುತ್ರ ಲಾಭ ಉಂಟಾಗುವುದು ?

**ಸೂತ:-** ಈ ಪ್ರಶ್ನೆಯನ್ನು ನಾರದರು ಬ್ರಹ್ಮನಲ್ಲಿ ಕೇಳಿದ್ದರು. ಆ ಸಂಭಾಷಣೆಯನ್ನು ಹೇಳುತ್ತೇನೆ, ಕೇಳು.

**ನಾರದ :-** ಮಾನವನು ಪುತ್ರಹೀನನಾಗಲು ಏನು ಕಾರಣ ? ಸ್ತ್ರೀಯರು ಯಾವ ಪಾಪದಿಂದ ಬಂಜೆಯರಾಗುವರು? ಯಾವ ಕರ್ಮದಿಂದ ಹೆಣ್ಣು ಶಿಶುವಿನ ಜನನವಾಗುತ್ತದೆ. ? ನಪುಂಸಕನೇಕೆ ಹುಟ್ಟುತ್ತಾನೆ ? ಹುಟ್ಟಿದ ಶಿಶು ಏಕೆ ಸಾಯುತ್ತದೆ ? ತಿರುಗಿ ಪುತ್ರ ಲಾಭವಾಗುವಂತೆ ಯಾವ ಕರ್ಮವನ್ನಾಚರಿಸಬೇಕು ? ಎಲ್ಲವನ್ನು ಹೇಳು.

**ಬ್ರಹ್ಮ :-** ಎಲ್ಲವನ್ನೂ ಸಂಕ್ಷೇಪವಾಗಿ ಹೇಳುತ್ತೇನೆ, ಕೇಳು. ಕೇಳುವವರಿಗಾಶ್ಚರ್ಯ ಉಂಟುಮಾಡುವ ವಿಷಯವನ್ನೇ ಕೇಳುತ್ತಿರುವೆ. ಪೂರ್ವಜನ್ಮದಲ್ಲಿ ಯಾರು ಬ್ರಹ್ಮಸ್ವವನ್ನಪಹರಿಸಿರುವನೋ ಅಪಹಾರ ಮಾಡಿಸಿರುವನೋ ಅವನು ಈ ಜನ್ಮದಲ್ಲಿ ಪುತ್ರಹೀನನಾಗುತ್ತಾನೆ. ಅವನು ಪುರಾಣಶ್ರವಣ ಮಾಡಿದರೆ ಭೂದಾನ ಗೋದಾನ ಸುವರ್ಣ ಪ್ರತಿಮಾದಾನಗಳನ್ನು ಮಾಡಿದರೆ ಪುತ್ರಲಾಭ ಉಂಟಾಗುವುದು. ಹಿಂದಿನ ಜನ್ಮದಲ್ಲಿ ಅನ್ಯರ ಮಕ್ಕಳನ್ನು ಕಪಟದಿಂದ ಹಿಂಸಿಸಿದ ಸ್ತ್ರೀಯರು ಈ ಜನ್ಮದಲ್ಲಿ ಬಂಜೆಯರಾಗುತ್ತಾರೆ. ಅವರು ಪುರಾಣಶ್ರವಣ ಬ್ರಾಹ್ಮಣಪಾದೋದಕದ ಪಾನ ಸುವರ್ಣಪ್ರತಿಮಾದಾನಗಳನ್ನಿತ್ತರೆ ಮಕ್ಕಳಾಗುವರು. ನೀರಿನಲ್ಲಿ ಮುಳುಗುವ ಬಾಲಕನನ್ನು ಎತ್ತಿ ಕಾಪಾಡದವರು ಈ ಜನ್ಮದಲ್ಲಿ ಅಪುತ್ರರಾಗುತ್ತಾರೆ. ವೃಷಭ ಕೂಷ್ಮಾಂಡ ಸುವರ್ಣವಸ್ತ್ರದಾನಗಳಿಂದ ಆ ಪಾಪಪರಿಹಾರವಾಗುತ್ತದೆ. ಅತಿಥಿಯನ್ನು ನಿರಾಸೆಗೊಳಿಸಿದವರೂ ಪುತ್ರಹೀನರಾಗುತ್ತಾರೆ. ಅವರು ಬ್ರಾಹ್ಮಣ ಅತಿಥಿ ಪೂಜೆಗಳನ್ನು ಮಾಡಬೇಕು. ಅನ್ನ ಜಲದಾನ ನೀಡಬೇಕು. ದೇವಾಲಯಗಳನ್ನು ನಿರ್ಮಿಸಬೇಕು. ಪತಿಯೊಂದಿಗೆ ಹರಿದಿನದಲ್ಲಿ ಉಪವಾಸ ಮಾಡುವವಳು ಪ್ರತಿ ಜನ್ಮದಲ್ಲಿ ಸುಪುತ್ರವತಿಯೆನಿಸುವಳು.

ಹಿಂದೆ ತ್ರೇತಾಯುಗದಲ್ಲಿ ಶ್ರೀಧರನೆಂಬ ರಾಜ ಅವನ ರಾಣಿ ಹೇಮಪ್ರಭಾವತಿ ಪುತ್ರರಿಲ್ಲದೆ ಕೊರಗುತ್ತಿದ್ದರು. ಒಮ್ಮೆ ವೇದವ್ಯಾಸರಲ್ಲಿ ರಾಜ ತಾನೇಕೆ ಅಪುತ್ರನಾಗಿರುವೆನೆಂದು ಕೇಳಿದ. ಅವರನ್ನು ಸುವರ್ಣ ಸಿಂಹಾಸನದಲ್ಲಿ ಕುಳ್ಳಿರಿಸಿ ರಾಣಿಯೊಂದಿಗೆ ತಾನೂ ಅವರ ಕಾಲು ತೊಳೆದು ಆ ನೀರನ್ನು ಕುಡಿದು ವಿನಯದಿಂದ ಬಳಿಯಲ್ಲಿ ನಿಂತನು.

**ವ್ಯಾಸ :-** ರಾಜನೆ, ನೀನು ಪೂರ್ವಜನ್ಮದಲ್ಲಿ ಚಂದ್ರನೆಂಬ ರಾಜನಾಗಿದ್ದೆ. ನಿನ್ನ ಈ ರಾಣಿ ಶಂಕರಿ ಎಂಬ ಹೆಸರಿನಿಂದ ನಿನ್ನ ಮಡದಿಯಾಗಿದ್ದಳು. ಒಮ್ಮೆ ದಾರಿಯಲ್ಲಿ ನೀರಿನಲ್ಲಿ ಬಿದ್ದು ಸಾಯುತ್ತಿದ್ದ ಒಬ್ಬ ಸಣ್ಣ ಹುಡುಗನನ್ನು ನೋಡಿಯೂ ಅತ್ತ ಲಕ್ಷ್ಯ ಕೊಡದೆ ನೀವು ಹೊರಟು ಹೋದಿರಿ. ಹುಡುಗ ಸತ್ತು ಹೋದ. ನೀವೆಷ್ಟೂ ಪುಣ್ಯ

ಮಾಡಿದವರು. ಅದರಿಂದಲೆ ಈ ಜನ್ಮದಲ್ಲಿಯೇ ರಾಜರಾಣಿಯಾಗಿರುವಿರಿ. ಆದರೇ ಆ ಒಂದು ಪಾಪದಿಂದ ನಿಮಗೆ ಮಕ್ಕಳಾಗಲಿಲ್ಲ.

**ರಾಜ :-** ಈಗ ನಾನೇನು ಮಾಡಿದರೆ ಸತ್ಪುತ್ರನನ್ನು ಪಡೆಯಬಲ್ಲೆ? ಪುತ್ರನಿಲ್ಲದವನ ಬಾಳು ನಿರರ್ಥಕ ತಾನೆ !

**ವ್ಯಾಸ :-** ರಾಜನೆ, ವಸ್ತ್ರ, ಕೂಷ್ಮಾಂಡ, ವೃಷಭ, ಸುವರ್ಣ ದಾನಗಳನ್ನು ಕೊಡು ಬಾಲ ವ್ರತವನ್ನೂ ಮಾಡು. ಗೌರೀ ಕನ್ಯಾದಾನ ಮಾಡು. ಪುರಾಣ ಶ್ರವಣ ಮಾಡು. ನಿನಗೆ ಪುತ್ರನು ಲಭಿಸುತ್ತಾನೆ.

**ಬ್ರಹ್ಮ:-** ಮುನಿಯೆ, ವೇದವ್ಯಾಸರ ಉಪದೇಶದಂತೆ ನಡೆದು ಒಂದು ವರ್ಷದೊಳಗೆ ಒಬ್ಬ ಸುಂದರನಾದ ಕುಲದೀಪಕನಾದ ಪುತ್ರನನ್ನು ಪಡೆದನಾರಾಜ.

**ಸೂತ :-** ಈ ಕಥೆಯನ್ನು ಭಕ್ತಿಯಿಂದ ಕೇಳಿ ಅದರಂತೆ ದಾನ ಮಾಡುವವನು ಪುತ್ರವಂತನಾಗುತ್ತಾನೆ.

*ಇತಿ ಪದ್ಮ ಮಹಾಪುರಾಣ ಭಾಗ-೨ರ ಬ್ರಹ್ಮಖಂಡದಲ್ಲಿ ಬ್ರಹ್ಮನಾರದ ಸಂವಾದದಲ್ಲಿ ಕರ್ಮವಿಪಾಕ ಕಥನವೆಂಬ ಐದನೆಯ ಅಧ್ಯಾಯ ಮುಗಿದುದು*



## ವೈಕುಂಠ ಪ್ರಾಪ್ತಿ

**ಅಧ್ಯಾಯ - ೬**

**ಶೌನಕ ಉವಾಚ**

**ಶೌನಕ :-** ಸೂತನೆ, ಯಾವ ಪುಣ್ಯದಿಂದ ವೈಕುಂಠ ಪ್ರಾಪ್ತಿಯಾಗುತ್ತದೆ, ಹೇಳು.

**ಸೂತ :-** ಒಂದು ಮಣ್ಣಿನ ಗುಡಿಯನ್ನು ವಿಷ್ಣುವಿಗೆ, ಒಂದು ಮಣ್ಣಿನ ಮನೆಯನ್ನು ಬ್ರಾಹ್ಮಣನಿಗೆ ಕಟ್ಟಿಕೊಟ್ಟರೆ ಅವನು ವಿಷ್ಣುಲೋಕದಲ್ಲಿ ಸುವರ್ಣಸೌಧದಲ್ಲಿ ಮೆರೆಯುವನು. ಧೂಳಿನ ಕಣಗಳನ್ನು ಎಣಿಸಬಹುದು. ಮಳೆ ಹನಿಗಳನ್ನೂ ಎಣಿಸಬಹುದು, ಬ್ರಾಹ್ಮಣನಿಗೆ ಒಂದು ನೆಲೆಯನ್ನು ಕಲ್ಪಿಸಿದರೆ ಅದರ ಫಲವನ್ನು ವಿಧಾತನೂ ಎಣಿಸಿ ಹೇಳಲಾರ.

ಹಿಂದೆ ದ್ವಾಪರದಲ್ಲಿ ಚಂಚಲಾಪಾಂಗಿ ಎಂಬ ಒಬ್ಬ ವೇಶ್ಯೆ ಇದ್ದಳು. ಆಕೆ ತನ್ನ ಜಿಂಕೆ ಕಣ್ಣುಗಳಿಂದ, ಮೋಹಕ ನಗುಗಳಿಂದ ಜನರನ್ನು ಸೆಳೆದು ನರಕಕ್ಕೆ ಒಯ್ಯುತ್ತಿದ್ದಳು. ಹಣ ಸಂಪಾದನೆಗಾಗಿ ಒಂದು ದಿನ ಆಕೆ ದೇವಾಲಯದಲ್ಲಿ ಕುಳಿತು ತಾಂಬೂಲ ಮೆಲ್ಲುತ್ತಿದ್ದಳು. ಎಲೆಗೆ ಹಚ್ಚಿ ಮಿಕ್ಕಿದ ಸುಣವನ್ನು ಅಲ್ಲಿಯೇ ಗೋಡೆಗೊರಸಿದಳು. ಅದರಿಂದ ಅಲ್ಲಿ ಗುಳಿಬಿದ್ದಿದ್ದ ಜಾಗ ತುಂಬಿಕೊಂಡಿತು. ಆಕೆ ಅಲ್ಲಿಂದೆದ್ದು ವಿಟರನ್ನು ಬೇಟೆಯಾಡುತ್ತ ನಗರದಲ್ಲಿ ಸುತ್ತಾಡಿದಳು. ಒಬ್ಬ ಕಾಮುಕನಾಕೆಯ ಬಲೆಗೆ ಬಿದ್ದು ಸಂಕೇತ ಸ್ಥಾನಕ್ಕೆ ಬರಲೊಪ್ಪಿದ. ಕತ್ತಲಾದ ಮೇಲೆ ಕಾಡಿನಲ್ಲಿ ಒಂದು ಸ್ಥಳಕ್ಕೆ ಆತ ಬರಬೇಕಾಗಿತ್ತು. ವೇಶ್ಯೆ ಕಾದುಕುಳಿತಳು. ಆತ ಬರಲಿಲ್ಲ ಬಹಳ ಹೊತ್ತು ಕಾದು ಅವನೇನಾದರೂ ಹುಲಿಯ ಬಾಯಿಗೆ ಬಿದ್ದನೆ, ಇಲ್ಲವೆ ಹಾವು ಕಡಿಯಿತೆ ? ಅಥವಾ ಬೇರೊಬ್ಬ ವೇಶ್ಯೆ ಆತನಿಗೆ

ಗಂಟುಬಿದ್ದಳೆ ಎಂದೆಲ್ಲ ಯೋಚಿಸಿದಳು. ಹಿಂದೆ ತಿರುಗಿ ನಗರಕ್ಕೆ ಹೋಗಲು ನಗರ ರಕ್ಷಕರಾದ ಭಟರ ಭಯ ಅಡ್ಡಿ ಉಂಟುಮಾಡಿತು. ಆ ಹೊತ್ತಿನಲ್ಲಿ ಹಸಿದ ಹುಲಿಯೊಂದು ಸಾಕ್ಷಾತ್ ಮೃತ್ಯುದೇವತೆಯು ಕಳಿಸಿದಂತೆ ಅಲ್ಲಿಗೆ ಬಂದು ಅವಳನ್ನು ನುಂಗಿತು. ಪರ್ವತಾಕಾರದ ಕರಾಳರೂಪಿನ ಯಮಭಟ್ಟರು ಬಂದು ಅವಳನ್ನು ಪಾಶದಿಂದ ಬಿಗಿದುಕಟ್ಟಿದರು. ಆದರೇನು ? ತತ್‌ಕ್ಷಣದಲ್ಲಿ ವಿಷ್ಣುದೂತರು ಪ್ರತ್ಯಕ್ಷರಾದರು.

ಶಂಖಚಕ್ರಗದಾಪದ್ಮಗಳನ್ನೂ ದಿವ್ಯಕುಂಡಲವನಮಾಲೆಗಳನ್ನೂ ಧರಿಸಿದ್ದ, ಕರಿ ಮೋಡದಂಥ ಮೈಬಣ್ಣದಿಂದ ಹೊಳೆಯುತ್ತಿದ್ದ ಮಹಾಬಲಶಾಲಿಗಳಾದ ಆ ದೂತರನ್ನು ಭಕ್ತವತ್ಸಲನಾದ ಆ ದೇವದೇವನೆ ಕಳಿಸಿದ್ದ. ಯಾರು ನೀವು ? ವಿಷ್ಣುವಿನ, ಪ್ರೀತಿ ಪಾತ್ರಳಾದ ಈ ಮಹಾತ್ಮಳನ್ನು ಎಲ್ಲಿಗೆ ಎಳೆದೊಯ್ಯುವಿರಿ ? ಎಂದು ಅವರು ಗದರಿದಾಗ ಯಮದೂತರು ಭಯದಿಂದೋಡಿದರು. ಆದರೂ ಅವರನ್ನು ವಿಷ್ಣುದೂತರು ಹಿಂಬಾಲಿಸಿ ಚಕ್ರದಿಂದಲೂ ಬೇರೆ ಆಯುಧಗಳಿಂದಲೂ ಹೊಡೆದುಗಾಸಿಗೊಳಿಸಿದರು.

ಯಮನ ಮುಂದೆ ಅವನ ದೂತರು ಅಳುತ್ತ ಎಲ್ಲ ವೃತ್ತಾಂತವನ್ನೂ ಹೇಳಿದರು. ಯಮನು ಚಿತ್ರಗುಪ್ತರನ್ನು ಕೇಳಿದ.

**ಯಮ** :- ಆ ವೇಶ್ಯೆ ಮುಕ್ತಿ ಹೊಂದಲು ಏನು ಪುಣ್ಯ ಮಾಡಿದ್ದಳು ?

**ಚಿತ್ರಗುಪ್ತ** :- ಆಕೆ ಹುಟ್ಟಿದಂದಿನಿಂದ ಪಾಪವನ್ನೇ ಮಾಡಿದವಳು. ಆದರೂ ಒಂದು ಪುಣ್ಯವನ್ನು ಆಕೆ ಮಾಡಿರುವಳು. ಪುರಷರ ಬೇಟೆಯಾಡುತ್ತ ಆಕೆ ನಗರದಲ್ಲಿ ಸುತ್ತಾಡುತ್ತ ಒಂದು ದೇವಾಲಯದಲ್ಲಿ ಕುಳಿತು ತಾಂಬೂಲ ಮೆದ್ದಳು, ಎಲೆಗೆಹಚ್ಚಿ ಮಿಕ್ಕಿದ್ದ ಸುಣ್ಣವನ್ನು ಅಲ್ಲಿಯೇ ಗೋಡೆಗೆ ಒರೆಸಿದಳು. ಆ ಪುಣ್ಯ ಪ್ರಭಾವದಿಂದ ಪಾಪವನ್ನು ಕಳೆದುಕೊಂಡು ನಿನ್ನ ದಂಡನೆಯನ್ನೂ ತಪ್ಪಿಸಿಕೊಂಡು ವೈಕುಂಠಕ್ಕೆ ಹೋಗುತ್ತಿದ್ದಾಳೆ.

**ಸೂತ** :- ಇದನ್ನು ಕೇಳಿ ಯಮನೂ ಅವನ ದೂತರೂ ಆ ವೇಶ್ಯೆಯ ಗೊಡವೆಯನ್ನೇ ಬಿಟ್ಟರು. ಆಕೆ ವಿಷ್ಣುಲೋಕದಲ್ಲಿ ಭವ್ಯ ಸೌಧದಲ್ಲಿ ನಾನಾ ಸುಖಭೋಗಗಳನ್ನು ಪಡೆದಳು. ಹರಿಮಂದಿರಕ್ಕೆ ಭಕ್ತಿಯಿಂದ ಸುಣ್ಣಬಳಿಯುವವನ ಪುಣ್ಯವೆಷ್ಟೆಂದು ನಾನು ಹೇಳಲರಿಯೆನು. ಈ ಅಧ್ಯಾಯವನ್ನು ಭಕ್ತಿಯಿಂದ ಕೇಳಿದರೂ ವಿಷ್ಣುಲೋಕ ಲಭಿಸುವುದು.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಬ್ರಹ್ಮಖಂಡದಲ್ಲಿ ಬ್ರಹ್ಮ ನಾರದ ಸಂವಾದದಲ್ಲಿ ವೈಕುಂಠ ಪ್ರಾಪ್ತಿ ಎಂಬ ಆರನೆಯ ಅಧ್ಯಾಯ ಮುಗಿದುದು*

—o—

**ಶೌನಕ ಉವಾಚ**

**ಶೌನಕ :-** ಈ ದುಸ್ತರವಾದ ಸಂಸಾರ ಸಾಗರವನ್ನು ದಾಟಿ ಗೋಲೋಕಕ್ಕೆ ಹೋಗಲು ಯಾವ ಪುಣ್ಯ ಕರ್ಮವನ್ನಾಚರಿಸಬೇಕು ? ರಾಧಾಜನ್ಮಾಷ್ಟಮೀ ವ್ರತದ ಮಾಹಾತ್ಮ್ಯವೇನು ಹೇಳು.

**ಸೂತ :-** ಮುನಿಯೆ, ಈ ಪ್ರಶ್ನೆಯನ್ನು ಹಿಂದೆ ನಾರದರು ಬ್ರಹ್ಮನಲ್ಲಿ ಕೇಳಿದರು ಆ ವೃತ್ತಾಂತವನ್ನು ಹೇಳುವೆನು, ಕೇಳು.

**ನಾರದ :-** ತಾತ, ರಾಧಾಜನ್ಮಾಷ್ಟಮೀ ವ್ರತದ ಫಲವೇನು ? ಆ ವ್ರತವನ್ನು ಹಿಂದೆ ಯಾರು ಮಾಡಿದರು ? ಮಾಡದಿದ್ದರೆ ಏನು ಪಾಪ ತಗುಲಿಕೊಳ್ಳುವುದು ? ವ್ರತವನ್ನು ಎಂದು ಹೇಗೆ ಮಾಡಬೇಕು ? ರಾಧೆ ಯಾರಿಂದ ಜನಿಸಿದಳು ?

**ಬ್ರಹ್ಮ :-** ಮಗು ಕೇಳು, ರಾಧಾಜನ್ಮಾಷ್ಟಮೀ ವ್ರತದ ಫಲವನ್ನು ಸಂಕ್ಷೇಪವಾಗಿ ಹೇಳುತ್ತೇನೆ. ಪೂರ್ತಿಯಾಗಿ ಹೇಳಲು ಹರಿಯೊಬ್ಬನೇ ಸಮರ್ಥ. ಭಕ್ತಿಯಿಂದ ಈ ವ್ರತವನ್ನು ಮಾಡುವವರು ಕೋಟಿ ಜನ್ಮಗಳಲ್ಲಿ ಮಾಡಿರಬಹುದಾದ ಬ್ರಹ್ಮಹತ್ಯೆಯಂಥ ಎಲ್ಲ ಪಾಪಗಳನ್ನೂ ಕಳೆದುಕೊಳ್ಳುವರು. ಸಾವಿರ ಏಕಾದಶಿ ವ್ರತಗಳಿಗಿಂತ ನೂರುಮಡಿ ಹೆಚ್ಚು ಈ ವ್ರತ. ಇದಕ್ಕೆ ಸಾವಿರ ಕನ್ಯಾದಾನದ ಫಲವಿದೆ, ಗಂಗಾದಿಸರ್ವತೀರ್ಥ ಸ್ನಾನದ ಫಲವಿದೆ. ವಿಷ್ಣುಲೋಕವೂ ಲಭಿಸುತ್ತದೆ.

ಹಿಂದೆ ಕೃತಯುಗದಲ್ಲಿ ಲೀಲಾವತಿಯೆಂಬ ವೇಶ್ಯೆ ಇದ್ದಳು. ಜಿಂಕೆಗಣ್ಣಿನ ಮೋಹಕ ನಗುವಿನ ಆ ಸುಂದರಾಂಗಿ ಹಣದಾಸೆಯಿಂದ ಎಷ್ಟೋ ಮಹಾಪಾಪಗಳನ್ನು ಮಾಡಿದ್ದಳು. ಒಮ್ಮೆ ಹಣ ಸಂಪಾದನೆಗಾಗಿ ಒಂದು ನಗರದಲ್ಲಿ ಸುತ್ತಾಡುತ್ತಿದ್ದಾಗ ಅಲ್ಲಿಯ ಒಂದು ದೇವಾಲಯದಲ್ಲಿ ಅನೇಕರು ರಾಧಾಜನ್ಮಾಷ್ಟಮಿವ್ರತ ಮಾಡುತ್ತಿದ್ದುದನ್ನು ಕಂಡಳು. ಗಂಧ ಪುಷ್ಪ ಧೂಪ ದೀಪ ವಸ್ತ್ರ ಫಲಗಳಿಂದ ರಾಧೆಯ ವಿಗ್ರಹವನ್ನು ಅವರು ಪೂಜಿಸುತ್ತಿದ್ದರು, ಗಾಯನ, ನಾಟ್ಯ, ತಾಲವೇಣುಮೃದಂಗ ವಾದನಗಳಿಂದ ದೇವಿಯನ್ನಾರಾಧಿಸುತ್ತಿದ್ದರು. ಕುತೂಹಲದಿಂದ ವೇಶ್ಯೆ ಕೇಳಿದಳು.

**ಲೀಲಾವತಿ :-** ಪುಣ್ಯಾತ್ಮರೆ, ನೀವೀಗ ಮಾಡುತ್ತಿರುವ ವ್ರತವೇನು ? ಹೇಳಿ.

**ರಾಧಾವ್ರತಿಗಳು :-** ಭಾದ್ರಪದ ಶುದ್ಧ ಅಷ್ಟಮಿಯಂದು ಶ್ರೀರಾಧಾ ಹುಟ್ಟಿದ ದಿನ. ಇಂದು ಆ ದಿನ ಬಂದಿರುವುದರಿಂದ ವ್ರತವನ್ನಾಚರಿಸುತ್ತಿದ್ದೇವೆ. ಗೋಹತ್ಯೆ, ಬ್ರಹ್ಮಹತ್ಯೆ, ಸ್ತ್ರೀಹತ್ಯೆ ವಿಶ್ವಾಸದ್ರೋಹ ಪರಸ್ತ್ರೀ ಪರದ್ರವ್ಯಹರಣ ಗುರುತಲ್ಪಗಮನ ಈ ಎಲ್ಲ ಪಾಪಗಳೂ ಈ ವ್ರತಾಚರಣೆಯಿಂದ ನಶಿಸುವವು.

ಇದನ್ನು ಕೇಳಿ ಲೀಲಾವತಿ ತಾನೇಕೆ ಈ ವ್ರತವನ್ನು ಮಾಡಕೂಡದು ? ಎಂದು ಕೊಂಡಳು. ಅವರ ಜತೆಗೆ ತಾನೂ ಸೇರಿ ವ್ರತವನ್ನಾಚರಿಸಿದಳು. ಒಂದು ದಿನ ಆಕೆ ಹಾವು

ಕಡಿದು ಸತ್ತಾಗ ಯಮದೂತರು ಬಂದು ಪಾಶಗಳಿಂದ ಬಿಗಿದು ಎಳೆದರೂ ವಿಷ್ಣುದೂತರು ಅವರನ್ನು ತಡೆದರು. ಪಾಶಗಳನ್ನು ಹರಿದೊಗೆದರು. ರಾಜಹಂಸಗಳು ಹೊರುವ ದಿವ್ಯ ಸುವರ್ಣವಿಮಾನದಲ್ಲಿ ಅವಳನ್ನು ಗೋಲೋಕಕ್ಕೊಯ್ದು ರಾಧಾಕೃಷ್ಣರ ಸನ್ನಿಧಿಯಲ್ಲಿ ಬಿಟ್ಟರು.

ಈ ರಾಧಾಷ್ಟಮೀವ್ರತವನ್ನು ಮಾಡದವನು ಕೋಟಿ ಕಲ್ಪಗಳ ಕಾಲ ನರಕದಲ್ಲಿ ದುಃಖ ಅನುಭವಿಸಿದರೂ, ಅಲ್ಲಿಂದ ಅವನು ಪಾರಾಗಲಾರ. ಸ್ತ್ರೀಯರು ಈ ವ್ರತವನ್ನು ಆಚರಿಸದಿದ್ದಲ್ಲಿ ಬಹುಕಾಲ ನರಕದಲ್ಲಿದ್ದು ಭೂಮಿಯಲ್ಲಿ ಹುಟ್ಟುವಾಗಲೂ ವಿಧವೆಯರಾಗುತ್ತಾರೆ.

ಒಮ್ಮೆ ಭೂಮಿಯು ದುಷ್ಟಜನರ ಭಾರವನ್ನು ತಡೆಯಲಾರದೆ ಗೋರೂಪ ಧರಿಸಿ ದುಃಖದಿಂದ ನನ್ನಬಳಿ ಬಂದಳು. ಅಳುತ್ತ ತನ್ನ ಸಂಕಟವನ್ನೆಲ್ಲ ಹೇಳಿದಳು. ನಾನು ಅದನ್ನು ಕೇಳಿ ವಿಷ್ಣುವಿನ ಬಳಿಗೆ ಹೋದೆನು, ಭೂಮಿಯ ದುಃಸ್ಥಿತಿಯನ್ನು ವರ್ಣಿಸಿದೆನು. ಅವನು ಆಗ, 'ಬ್ರಹ್ಮನೆ, ನೀನೂ ದೇವತೆಗಳೂ ಭೂಮಿಯಲ್ಲಿ ಹುಟ್ಟಿರಿ. ನಾನೂ ನನ್ನ ಪರಿವಾರದೊಂದಿಗೆ ನಿಮ್ಮಲ್ಲಿಗೆ ಬರುತ್ತೇನೆ' ಎಂದ.

ನಾನು ದೇವತೆಗಳೊಂದಿಗೆ ಭೂಮಿಯನ್ನು ಸೇರಿದೆ. ಕೃಷ್ಣ ತನ್ನ ಪ್ರಾಣ ಪ್ರಿಯೆಯಾದ ರಾಧೆಯನ್ನು ಕರೆದು ಹೇಳಿದ, 'ದೇವಿ, ನಾನು ಭೂಭಾರ ನಾಶಕ್ಕಾಗಿ ಭೂಮಿಯಲ್ಲಿ ಅವತರಿಸುವೆನು. ನೀನೂ ಜತೆಗೆ ಬಾ.'

ವೃಷಭಾನು ಒಂದು ಯಜ್ಞವನ್ನು ಕೈಗೊಂಡು ಭೂ ಶೋಧನೆ ಮಾಡುತ್ತಿದ್ದಾಗ ರಾಧೆ ಶಿಶುರೂಪದಿಂದ ಅವನಿಗೆ ದೊರೆತಳು. ಅಂದು ಭಾದ್ರಪದ ಶುದ್ಧ ಅಷ್ಟಮಿ. ರಾಜನು ಆನಂದದಿಂದ ಆ ಶಿಶುವನ್ನು ರಾಣಿಯ ಕೈಯಲ್ಲಿಟ್ಟ. ಹೀಗೆ ರಾಧೆ ಅವತರಿಸಿದಳು.

ಈ ಎಲ್ಲ ವೃತ್ತಾಂತಗಳೂ ಬಲು ಗೋಪ್ಯವಾಗಿರುವಂಥವುಗಳು.

**ಸೂತ** :- ಮುನಿಯೆ, ಈ ಸಂಭಾಷಣೆಯನ್ನು ಭಕ್ತಿಯಿಂದ ಕೇಳುವವನು ಎಲ್ಲ ಪಾಪಗಳಿಂದ ಮುಕ್ತನಾಗಿ ವಿಷ್ಣುಲೋಕವನ್ನು ಸೇರುವನು.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಬ್ರಹ್ಮಖಂಡದಲ್ಲಿ ಬ್ರಹ್ಮನಾರದ ಸಂವಾದದಲ್ಲಿ ರಾಧಾಜನ್ಮಾಷ್ಟಮೀ ವ್ರತವೆಂಬ ಏಳನೆಯ ಅಧ್ಯಾಯ ಮುಗಿದುದು*

—o—

**ಶೌನಕ ಉವಾಚ**

**ಶೌನಕ :-** ಸೂತನೆ ಹಿಂದೆ ದೇವತೆಗಳು ಸಮುದ್ರಮಥನ ಮಾಡಿದರಂತೆ. ಅದು ಏಕೆ ? ಅದನ್ನು ತಿಳಿಯುವ ಕುತೂಹಲ ನನಗಿದೆ.

**ಸೂತ :-** ಈಶ್ವರಾಂಶನಾದ ದುರ್ವಾಸ ಮಹರ್ಷಿಯೊಮ್ಮೆ ಇಂದ್ರನನ್ನು ನೋಡಲು ಹೋದಾಗ ಅವನು ಆನೆಯ ಮೇಲೇರಿ ಬರುತ್ತಿದ್ದ. ಮುನಿ ಅವನಿಗೊಂದು ಪಾರಿಜಾತ ಪುಷ್ಪಗಳ ಹಾರವನ್ನಿತ್ತ. ಇಂದ್ರನದನ್ನು ಸ್ವೀಕರಿಸಿ ಆನೆಯ ತಲೆಯ ಮೇಲಿಟ್ಟ. ಆನೆ ಅದನ್ನು ಹರಿದು ನೆಲದ ಮೇಲೆಸೆಯಿತು. ಮುನಿಕ್ರುದ್ಧನಾಗಿ ಶಪಿಸಿದ, ''ದೇವರಾಜ, ಮೂಲೋಕದ ಎಲ್ಲ ಐಶ್ವರ್ಯ ನಿನ್ನಲ್ಲಿರುವುದರಿಂದ ಇಷ್ಟು ಕೊಬ್ಬಿರುವೆ. ಅವಮಾನಮಾಡುತ್ತಿರುವೆ. ನಿನ್ನ ಆ ಐಶ್ವರ್ಯವೆ ನಶಿಸಿಹೋಗಲಿ''. ಅಂದಿನಿಂದ ಇಂದ್ರನ ನಗರಿಯಲ್ಲಿ ಆ ಐಶ್ವರ್ಯದ ಅಧಿದೇವತೆ ಜಗನ್ಮಾತೆ ಮಹಾಲಕ್ಷ್ಮಿ ಅಂತರ್ಧಾನ ಹೊಂದಿದಳು. ಮೂರುಲೋಕವೂ ದಾರಿದ್ರ್ಯದಿಂದ ಬಳಲತೊಡಗಿತು. ಹಸಿವು ನೀರಡಿಕೆಗಳಿಂದ ಆಕ್ರಂದನ ಮಾಡಿತು. ಮಳೆಯಿಲ್ಲದೆ ಜಲಾಶಯಗಳೆಲ್ಲ ಬತ್ತಿ ಒಣಗಿಹೋದವು. ಮರಗಳೂ ಒಣಗಿ ಫಲಪುಷ್ಪ ನೀಡದಂತಾದವು. ದೇವತೆಗಳು, ಋಷಿಗಳು ಕಳವಳಗೊಂಡು ಬ್ರಹ್ಮನ ಬಳಿಗೆ ಬಂದರು. ಅವನು ಎಲ್ಲರನ್ನೂ ಕರೆದುಕೊಂಡು ಕ್ಷೀರಸಾಗರದ ಬಳಿ ಬಂದು, ವಿಷ್ಣುವನ್ನಾರಾಧಿಸಿದ. ಅಷ್ಟಾಕ್ಷರ ಮಂತ್ರವನ್ನು ಜಪಿಸಿ ಧ್ಯಾನಿಸಿದ.

ಆಗ ಶಂಖಚಕ್ರಗದೆಗಳನ್ನು ಧರಿಸಿ ಪಿತಾಂಬರಧಾರಿಯಾಗಿ ಗರುಡಾರೂಢನಾಗಿ ಹರಿ ಮೈದೋರಿ ನಿಂತ. ಶ್ರೀವತ್ಸ ಕೌಸ್ತುಭಗಳಿಂದೊಪ್ಪುವ ಎದೆಯವನು, ತಾವರೆಯಂಥ ಕಣ್ಣಿನವನು, ವನಮಾಲೆ ಧರಿಸಿದವನು ಭವಸಾಗರ ದಾಟಿಸುವ ನೌಕೆಯಂಥವನು ಇದಿರು ಬಂದು ನಿಂತಾಗ ಆನಂದಾಶ್ರುಗಳಿಂದ ಮಿಂದು ಎಲ್ಲರೂ ಜಯಕಾರ ಮಾಡಿದರು ಸ್ತೋತ್ರಮಾಡಿ ನಮಸ್ಕರಿಸಿದರು.

**ವಿಷ್ಣು :-** ದೇವತೆಗಳೆ, ಏನು ಬಂದಿರಿ ? ನಿಮ್ಮ ಅಭೀಷ್ಟವೇನು, ಹೇಳಿ ಪೂರೈಸುತ್ತೇನೆ.

**ದೇವತೆಗಳು :-** ಮುನಿಶಾಪದಿಂದ ಮೂರುಲೋಕವೂ ಸಂಪತ್ತು ಸಮೃದ್ಧಿಯನ್ನು ಕಳೆದುಕೊಂಡು ಹಸಿವು ನೀರಡಿಕೆಗಳಿಂದ ಕಂಗೆಟ್ಟಿದೆ. ಕಾಪಾಡು. ನಿನ್ನನ್ನೇ ಮೊರೆ ಹೊಕ್ಕಿರುವೆವು.

**ವಿಷ್ಣು :-** ಹೌದು, ಮುನಿಶಾಪದಿಂದ ಲಕ್ಷ್ಮಿ ಅಂತರ್ಧಾನ ಹೊಂದಿದಳು. ಅವಳ ಕಟಾಕ್ಷ ಒಂದಿದ್ದರೆ ಜಗತ್ತೇ ಐಶ್ವರ್ಯದಲ್ಲಿ ಓಲಾಡುವುದು. ಈಗ ನೀವೂ ದೈತ್ಯರೂ ಸೇರಿ ಮಂದರಪರ್ವತವನ್ನು ಕಿತ್ತುತಂದು ಕ್ಷೀರಸಾಗರದಲ್ಲಿಟ್ಟು ಕಡೆಯಿರಿ. ನಾಗರಾಜ ಅನಂತನು ನಿಮಗೆ ಕಡೆವ ನೇಣುವಾಗುವನು. ಹಾಗೆ ಕಡೆದಾಗ ಜಗನ್ಮಾತೆ ಲಕ್ಷ್ಮಿ ಉದಿಸುವಳು. ನಾನೇ ಆ ಚಿನ್ನದ ಬೆಟ್ಟವನ್ನು ಕೂರ್ಮರೂಪದಿಂದ ಹೊರುತ್ತೇನೆ.

ಹೀಗೆ ಹೇಳಿ ವಿಷ್ಣು ಅಂತರ್ಧಾನ ಹೊಂದಿದನು.

**ಸೂತ ಉವಾಚ**

**ಸೂತ :-** ದೇವದಾನವಗಂಧರ್ವರು ಮಂದರಪರ್ವತವನ್ನು ಕಿತ್ತು ತಂದು ಕ್ಷೀರಸಮುದ್ರದಲ್ಲಿಟ್ಟರು. ಅದನ್ನು ಹರಿ ಕೂರ್ಮರೂಪದಿಂದ ಬೆನ್ನಮೇಲೆ ಹೊತ್ತು ನಿಂತನು. ಅನಂತನನ್ನು ಬೆಟ್ಟಕ್ಕೆ ಸುತ್ತಿ ಸಮುದ್ರವನ್ನು ಕಡೆದರು. ಮೊದಲಿಗೆ ಏಕಾದಶಿ ದಿನ ಕಾಲಕೂಟವಿಷ ಉತ್ಪನ್ನವಾಯಿತು. ಎಲ್ಲರೂ ಕಂಗೆಟ್ಟು ಓಡತೊಡಗಿದರು. ಶಿವನು ಅದನ್ನು ಕಂಡು ಹೇಳಿದ, 'ದೇವತೆಗಳೇ, ವಿಷವನ್ನು ನನ್ನ ಕೈಗೆ ಕೊಡಿರಿ, ನಾನು ಅದನ್ನು ನೋಡಿಕೊಳ್ಳುತ್ತೇನೆ.

ಶಿವನು ಹೃದಯದಲ್ಲಿ ನಾರಾಯಣನನ್ನು ಧ್ಯಾನಿಸುತ್ತ ಮಹಾಮಂತ್ರವನ್ನು ಜಪಿಸಿದ. ವಿಷವನ್ನು ನುಂಗಿ ಅರಗಿಸಿಕೊಂಡ. ಅಚ್ಯುತ ಅನಂತ ಗೋವಿಂದ ಎಂಬ ನಾಮತ್ರಯಕ್ಕೆ ಆದ್ಯಂತಗಳಲ್ಲಿ ಪ್ರಣವ ನಮಃ ಪದಗಳನ್ನು ಸೇರಿಸಿ ಭಕ್ತಿಯಿಂದ ಜಪಿಸಿದರೆ ವಿಷ ರೋಗ ಅಗ್ನಿ ಮೃತ್ಯುಭಯಗಳಿರುವುದಿಲ್ಲ.

ದೇವತೆಗಳು ತಿರುಗಿ ಉತ್ಸಾಹದಿಂದ ಕಡೆದರು. ಈಗ ಅಲಕ್ಷ್ಮಿ ಹುಟ್ಟಿ ಬಂದಳು. ಕರಿಯ ಮುಖ, ಕೆಂಗಣ್ಣುಗಳು, ರೂಕ್ಷವಾದ ಪಿಂಗಳವರ್ಣದ ಕೂದಲುಗಳು, ಮುಪ್ಪಿನ ಶರೀರ, ಇದು ಆ ಜ್ಯೇಷ್ಠೆಯ ರೂಪ. 'ನಾನೇನು ಮಾಡಬೇಕು ?' ಎಂದು ಆಕೆ ದೇವತೆಗಳನ್ನು ಪ್ರಶ್ನಿಸಿದಳು. ದುಃಖಕ್ಕೆ ಭಾಜನಳಾದ ಆಕೆಗೆ ತಕ್ಕ ಸ್ಥಾನವನ್ನು ದೇವತೆಗಳು ನಿರ್ದೇಶಿಸಿದರು.

**ದೇವತೆಗಳು :-** ಭೂಲೋಕದಲ್ಲಿ ನಿತ್ಯ ಗೃಹಕಲಹ ಇರುವಲ್ಲೆಲ್ಲ ನೀನಿರು. ನಿಷ್ಠುರ ಅನೃತವಚನಗಳನ್ನಾಡುವ. ಸಂಧ್ಯಾಸಮಯದಲ್ಲಿ ಉಣ್ಣುವ, ಕಾಲು ತೊಳೆದುಕೊಳ್ಳದೆ ಉಣ್ಣುವ, ಮಳಲು ಉಪ್ಪು ಇದ್ದಿಲು ಚೂರುಗಳಿಂದ ಹಲ್ಲುಜ್ಜುವ ಸರ್ಪಾಕ್ಷಿ, ಬೇಲದಹಣ್ಣು, ಜಳ್ಳಾದಎಳ್ಳು, ಸೋರೆಕಾಯಿ, ಈರುಳ್ಳಿ, ಬೆಳ್ಳುಳ್ಳಿ ತಿನ್ನುವ ಗುರುದೇವ ಅತಿಥಿ ಪೂಜೆಮಾಡದ, ಜೂಜಾಡುವ, ಪರದ್ರವ್ಯ, ಪರಸ್ತ್ರೀಯರನ್ನು ಅಪಹರಿಸುವ ಜನರ ಮನೆಗಳಲ್ಲಿ ನೀನು ವಾಸವಾಗಿರು. ತಲೆಬುರುಡೆ, ಕೂದಲು, ಭಸ್ಮ, ಅಸ್ಥಿ ಧಾನ್ಯಗಳ ಹೊಟ್ಟು ಇದ್ದಿಲು ಇರುವಲ್ಲಿ, ವೇದಧ್ವನಿ ಇಲ್ಲದ ಕಡೆ ದಂಪತಿಗಳು ಕಲಹವಾಡುವ ಕಡೆ ವಿಪ್ರರಿಗೆ ಸಜ್ಜನರಿಗೆ ವೃದ್ಧರಿಗೆ ಗೌರವವಿಲ್ಲದ ಕಡೆ ನೀನಿದ್ದು ಪಾಪ ದಾರಿದ್ರ್ಯಗಳನ್ನುಂಟುಮಾಡುತ್ತಿರು, ಕಲಿವಲ್ಲಭೆಯಾಧ ಆ ಜ್ಯೇಷ್ಠೆಗೆ ಹೀಗೆ ದೇವತೆಗಳು ಆದೇಶ ನೀಡಿ ತಿರುಗಿ ಸಮುದ್ರ ಮಥನಕ್ಕಾರಂಭಿಸಿದರು.

**ಸೂತ ಉವಾಚ**

**ಸೂತ :-** ಐರಾವತ, ಉಚ್ಚೈಶ್ರವಸ್ಸು, ಧನ್ವಂತರಿ, ಪಾರಿಜಾತ, ಕಾಮಧೇನು ಅಪ್ಸರೆಯರು ಕ್ರಮವಾಗಿ ಕ್ಷೀರಸಮುದ್ರದಿಂದ ಉದಯಿಸಿ ಬಂದರು. ಮರುದಿನ ದ್ವಾದಶಿ ಪ್ರಾತಃಕಾಲ ಸೂರ್ಯೋದಯವಾದಾಗ ಎಲ್ಲ ಲಕ್ಷ್ಯಗಳಿಂದೊಪ್ಪುವ ಮಹಾಲಕ್ಷ್ಮಿ ಉದಯಿಸಿದಳು. ಶ್ರೀಕೃಷ್ಣನ ಹೃದಯದಲ್ಲಿ ವಾಸಿಸುವ ಲೋಕಮಾತೆಯಾದ ಮಹಾದೇವಿಯನ್ನು ಕಂಡು ಎಲ್ಲರೂ ಹರ್ಷಿತರಾದರು.

ಬಳಿಕ ಅಮೃತದೊಂದಿಗೆ ಚಂದ್ರನೂ ಉದಯಿಸಿದ. ಹರಿವಲ್ಲಭೆಯಾದ ತುಳಸಿಯೂ ಪ್ರಾದುರ್ಭವಿಸಿದಳು. ದೇವತೆಗಳು ಮಂದರ ಪರ್ವತವನ್ನು ಅದರ ಸ್ಥಾನದಲ್ಲಿಟ್ಟರು. ಕೃತಕೃತ್ಯರಾಗಿ ತಾಯಿಯ ಬಳಿ ಬಂದು ನಿಂತು ಸ್ತುತಿಸಿದರು. ಶ್ರೀ ಸೂಕ್ತವನ್ನು ಜಪಿಸಿದರು.

ದೇವಿ ಸಂತುಷ್ಟಳಾಗಿ ದೇವತೆಗಳೆ, ನಿಮ್ಮ ಅಪೇಕ್ಷೆ ಏನು ? ಕೇಳಿಕೊಳ್ಳಿ ಎಂದಳು. 'ದೇವಿ, ಎಲ್ಲರ ತಾಯಿ ನೀನಿಲ್ಲದೆ ಪ್ರಸಂಚವೆ ನಮಗೆ ಶೂನ್ಯವೆನಿಸಿತ್ತು. ಈಗ ನೀನು ಎಲ್ಲ ಜೀವಿಗಳನ್ನೂ ಕಾಪಾಡು' ಎಂದರು ದೇವತೆಗಳು. ದೇವಿ ಆಗಲಿ ಎಂದಳು. ಒಡನೆ ದೇವತೆಗಳು ಜಗದೊಡೆಯನಾದ ಹರಿಯನ್ನು ನಮಿಸಿ ಸ್ತುತಿಸಿದರು. ಆಗ ಶಂಖಚಕ್ರ ಗದಾಧಾರಿಯಾಗಿ ಆವಿರ್ಭೂತನಾದಾಗ ಆನಂದದಿಂದ ಗದ್ಗದಿತರಾಗಿ ಕೈಮುಗಿದು ಹೇಳಿದರು. 'ದೇವ ನಿನ್ನ ಪ್ರಿಯೆಯಾದ ಜಗನ್ಮಾತೆಯನ್ನು ಸ್ವೀಕರಿಸಿ ಲೋಕವನ್ನು ಕಾಪಾಡು.

ವಿಷ್ಣು ಅಸ್ತು ಎನ್ನುವುದಕ್ಕೆ ಮೊದಲೇ ಲಕ್ಷ್ಮಿ ನುಡಿದಳು. ನಾಥ, ಹಿರಿಯಳಾದ ಅಲಕ್ಷ್ಮಿ ಮದುವೆಯಾಗದಿರುವಾಗ ಕಿರಿಯಳಾದ ನನ್ನನ್ನು ಹೀಗೆ ಮದುವೆಯಾಗುವೆ ? ಇದನ್ನು ಕೇಳಿ ವಿಷ್ಣು ಅಲಕ್ಷ್ಮಿಯನ್ನು ಉದ್ದಾಲಕನಿಗೆ ಕೊಟ್ಟು ವೇದೋಕ್ತ ವಿಧಾನದಿಂದ ಮದುವೆ ಮಾಡಿದ. ಬಳಿಕ ತಾನು ಲಕ್ಷ್ಮಿಯನ್ನು ಮದುವೆಯಾದ. ದಂಪತಿಗಳನ್ನು ದೇವತೆಗಳು ನಮಸ್ಕರಿಸಿದರು. ಅಸುರರನ್ನೆಲ್ಲ ಹೊಡೆದೋಡಿಸಿ ವಿಷ್ಣುವಿನ ಅನುಜ್ಞೆಯಿಂದ ಅಮೃತ ಉಣ್ಣಲು ಸಾಲಾಗಿ ಕುಳಿತರು. ಆದರೆ ಅಮೃತವನ್ನು ಬಡಿಸಲು ಯಾರು ಸಮರ್ಥರು ? ನೀನು ನೀನೆಂದರು ಪರಸ್ಪರವಾಗಿ. ಅಲ್ಲ, ಅಲ್ಲ ಎಂದು ಉತ್ತರ ಬಂದಿತು. ಆಗ ವಿಷ್ಣು ಸ್ವಯಂ ಸ್ತ್ರೀರೂಪ ಧರಿಸಿ ಸುವರ್ಣಕಲಶದಲ್ಲಿ ತುಂಬಿದ್ದ ಅಮೃತವನ್ನು ಉಣಿಸಲು ತೊಡಗಿದಾಗ ಚಂದ್ರ ಸೂರ್ಯರೆಂದರು, ಇವನು ರಾಕ್ಷಸ ಎಲ್ಲರ ಕಣ್ಣು ತಪ್ಪಿಸಿ ಉಣಲು ಬಂದಿದ್ದಾನೆ. ಹರಿ ಕೋಪದಿಂದ ಅವನ ತಲೆಯನ್ನು ಕತ್ತರಿಸಿದಂದಿನಿಂದ ಆ ತಲೆಗೆ **ಕೇತು** ಎಂದು ಹೆಸರಾಯಿತು. ರಾಹು ಕೇತುಗಳು ಭಯದಿಂದೋಡಿದರು. ಇಂದಿಗೂ ಆ ದಿನ ಬಂದಾಗ ರಾಹು ಕೇತುಗಳು ಚಂದ್ರ ಸೂರ್ಯರೊಂದಿಗೆ ಕಾದಿ ಅವರನ್ನು ನುಂಗುವರು. ಆ ಕಾಲ ಅತ್ಯಂತ ದುರ್ಲಭ. ವಾಯಸ ತೀರ್ಥದಲ್ಲಿ ಆಗ ಸ್ನಾನಮಾಡಿದರೂ ಗಂಗಾಸ್ನಾನದ ಫಲವಿದೆ. ಎಲ್ಲ ತೀರ್ಥಗಳೂ ಗಂಗೆಗೆ ಸಮಾನ ಎಲ್ಲ ದ್ವಿಜರು ವೇದವ್ಯಾಸರಿಗೆ ಸಮಾನ. ಆಗ ಮಾಡಿದ ದಾನಕ್ಕೆ ಅಕ್ಷಯ ಫಲ. ಕೋಟಿ ಜನ್ಮಾರ್ಜಿತವಾದ ಪಾಪವೂ ಸಮೂಲವಾಗಿ ನಾಶ ಹೊಂದುತ್ತದೆ. ಆದಕ್ಕಾಗಿ ಕೋಟಿಯಜ್ಞಗಳನ್ನು ಮಾಡಬೇಕಾಗಿಲ್ಲ. ವಿದ್ಯಾರ್ಥಿಗೆ ವಿದ್ಯೆ, ಪುತ್ರಾರ್ಥಿಗೆ ಪುತ್ರರು, ಮೋಕ್ಷಾರ್ಥಿಗೆ ಮೋಕ್ಷ, ಸಾಧಕನಿಗೆ ಮಂತ್ರ ಸಿದ್ಧಿ ಎಲ್ಲವೂ ಸುಲಭವಾಗುವುದು.

*ಇತಿ ಪದ್ಮ ಮಹಾಪುರಾಣ ಭಾಗ-೨ರ ಬ್ರಹ್ಮಖಂಡದಲ್ಲಿ ಸಮುದ್ರ ಮಥನವೆಂಬ ಎಂಟನೇಯ ಅಧ್ಯಾಯ ಮುಗಿದುದು*

—o—

## ಸೌಭಾಗ್ಯವತಿ ವ್ರತ

ಅಧ್ಯಾಯ - ೯

**ಶೌನಕ ಉವಾಚ**

**ಶೌನಕ** :- ಸೂತನೆ, ಸಾಕ್ಷಾತ್ ಹರಿಸ್ವರೂಪಿ ವೇದವ್ಯಾಸರ ಪ್ರಿಯಶಿಷ್ಯ ನೀನು ನಿರಹಂಕಾರಿ. ಲೋಕಾನುಗ್ರಹಕಾರಿ. ನಾರಿ ಸೌಭಾಗ್ಯವತಿಯಾಗಿರಲು ಏನು ಮಾಡಬೇಕು ? ಏನು ಮಾಡಿದರೆ ಆಕೆ ಸೌಭಾಗ್ಯದಿಂದ ವಂಚಿತಳಾಗುವಳು ? ಯಾವ ಕರ್ಮದಿಂದ ಪತಿಯ ಪ್ರೀತಿ ಸಂಪಾದಿಸುವಳು ? ಕಣ್ಣಿಗೆ ಅಮೃತದಂತಿರುವ ರೂಪ ಸೌಂದರ್ಯವನ್ನು ಹೇಗೆ ಪಡೆಯಬಲ್ಲಳು ? ಹೇಳು.

**ಸೂತ** :- ಇದಕ್ಕೆ ಪರಮದುರ್ಲಭವಾದ ಪುಣ್ಯವ್ರತವೊಂದು ಇದೆ. ಅದನ್ನು ಹೇಳುತ್ತೇನೆ, ಕೇಳು. ಹಿಂದೆ ದ್ವಾಪರದಲ್ಲಿ ಸೌರಾಷ್ಟ್ರದೇಶದಧಿಪತಿ ಭದ್ರಶವ ಮತ್ತು ರಾಣಿ ಸುರತಿ ಚಂದ್ರಿಕೆಯರಿಗೆ ಏಳು ಜನ ಗಂಡುಮಕ್ಕಳು ಶ್ಯಾಮಬಾಲೆಯೆಂಬ ಒಬ್ಬಳು ಮಗಳೂ ಇದ್ದರು. ಶ್ಯಾಮಬಾಲೆ ಒಂದುದಿನ ಕದಂಬವೃಕ್ಷದ ಬುಡದಲ್ಲಿ ಚಿನ್ನದ ಉಸುಕಿನೊಳಗೆ ರತ್ನಗಳನ್ನು ಬಚ್ಚಿಡುತ್ತ ಸಖಿಯರೊಂದಿಗೆ ಆಟ ಆಡುತ್ತಿದ್ದಳು.

ಇತ್ತ ಅರಮನೆಯ ಬಾಗಿಲಿಗೆ ಲಕ್ಷ್ಮಿ, ವೃದ್ಧ ಬ್ರಾಹ್ಮಣ ಸ್ತ್ರೀರೂಪದಿಂದ ಬಂದಿದ್ದಳು. ಲೋಕಕ್ಕೆ ನೀತಿಯಪಾಠ ಒಂದನ್ನು ಹೇಳಿಕೊಡಲು ಆ ರೂಪ ಧರಿಸಿದ್ದಳಾಕೆ. ಒಂದು ದೇಶದ ರಾಜನ ಮನೆಯನ್ನು ಬಿಟ್ಟು ಯಾರೋ ಒಬ್ಬ ಸಾಮಾನ್ಯ ಮನುಷ್ಯನ ಮನೆಗೆ ಏಕೆ ಹೋಗಬೇಕು ? ಎಂದು ಬಗೆದು ಭದ್ರಶ್ರವನ ಅರಮನೆಯನ್ನೇ ತನ್ನ ಕಾರ್ಯಕ್ಕೆ ಆರಿಸಿಕೊಂಡಿದ್ದಳು. ವೃದ್ಧೆ ದ್ವಾರಪಾಲಿಕೆಯ ಬಳಿಗೆ ನಡೆದು 'ರಾಣಿಯನ್ನು ನೋಡಬೇಕೆಂದಿದ್ದೇನೆ, ಒಳಕ್ಕೆ ಬಿಡು' ಎಂದಳು. ರತ್ನದಂಡವನ್ನು ಹಿಡಿದು ನಿಂತಿದ್ದ ದ್ವಾರಪಾಲಿಕೆಯು ವೃದ್ಧೆಯ ಬಾಯಿಂದ ಕೋಗಿಲೆಯ ನುಡಿಯಂಥ ಈ ಮಾತುಗಳನ್ನು ಕೇಳಿ ಆನಂದಗೊಂಡಳು.

**ದ್ವಾರಪಾಲಿಕೆ** :- ವೃದ್ಧೆ, ನಿನ್ನ ಹೆಸರೇನು ? ನಿನ್ನ ಪತಿ ಯಾರು ? ಏಕೆ ಬಂದೆ ? ರಾಣಿಯನ್ನು ಏಕೆ ನೋಡಲು ಹೋಗುತ್ತಿರುವೆ ? ಹೇಳು, ಕುತೂಹಲದಿಂದ ಕೇಳುತ್ತಿದ್ದೇನೆ.

**ವೃದ್ಧೆ** :- ನನ್ನ ಹೆಸರು ಕಮಲೆ, ಪತಿಯು ಭುವನೇಶನೆಂದು ಪ್ರಸಿದ್ಧನಾದವನು, ದ್ವಾರಕೆ ನಮ್ಮ ನಗರ. ನಿಮ್ಮ ರಾಣಿ ಹಿಂದಿನ ಜನ್ಮದಲ್ಲಿ ವೈಶ್ಯ ಕುಲದಲ್ಲಿ ಹುಟ್ಟಿ ನಿತ್ಯ ದುಃಖ ಅನುಭವಿಸುತ್ತಿದ್ದಳು. ಒಂದುದಿನ ಪತಿಯಲ್ಲಿ ಕಲಹಮಾಡಿ ಹೊಡೆಸಿಕೊಂಡು ಅಳುತ್ತ ಮನೆಯಿಂದ ಹೊರಬಂದಾಗ ನಾನು ಅವಳ ಎಲ್ಲ ವೃತ್ತಾಂತವನ್ನು ಕೇಳಿ ತಿಳಿದು ಒಂದು ಉತ್ತಮ ವ್ರತವನ್ನು ಉಪದೇಶಿಸಿದೆ. ಅವಳು ಅದನ್ನಾಚರಿಸಿ ಪತಿಯೊಂದಿಗೆ ಸುಖದಿಂದಿದ್ದಳು. ದಂಪತಿಗಳ ಮರಣಕಾಲದಲ್ಲಿ ಅವರನ್ನು ಯಮದೂತರು ಪಾಶದಿಂದ ಕಟ್ಟಿ ಸೆಳೆದೊಯ್ಯತೊಡಗಿದಾಗ, ಲಕ್ಷ್ಮಿಯದೂತರು ಶಂಖಚಕ್ರಗದಾಪಾಣಿಗಳಾಗಿ ಬಂದು ಅವರನ್ನೋಡಿಸಿದರು. ರಾಜಹಂಸಗಳು ಹೊರುವ ವಿಮಾನದಲ್ಲಿ ದಂಪತಿಗಳನ್ನು ಕುಳ್ಳಿರಿಸಿ

ಲಕ್ಷ್ಮಿ ಲೋಕಕ್ಕೊಯ್ದರು. ಅವಳು ಎಷ್ಟು ವಾರಗಳಲ್ಲಿ ವ್ರತವನ್ನು ಮಾಡಿದ್ದಳೊ ಅಷ್ಟುಸಾವಿರ ಕಲ್ಪಗಳಕಾಲ ಅವರು ಅಲ್ಲಿ ಸುಖದಿಂದಿದ್ದು ಉಳಿದ ಪುಣ್ಯದ ಲೇಶವನ್ನು ಭೋಗಿಸಲು ಈಗ ರಾಜಮನೆತನದಲ್ಲಿ ಹುಟ್ಟಿದ್ದಾರೆ. ಐಶ್ವರ್ಯದ ಮದದಿಂದ ಕೊಬ್ಬಿ ಆ ಪುಣ್ಯವ್ರತವನ್ನೇ ಮರೆತಿದ್ದಾರೆ. ತಿರುಗಿ ಉಪದೇಶಿಸಲು ಈಗ ನಾನು ಬಂದಿದ್ದೇನೆ.

**ದ್ವಾರಪಾಲಿಕೆ :-** ಆ ವ್ರತವನ್ನು ಮಾಡುವ ವಿಧಾನವೇನು ? ಯಾವ ತಿಂಗಳಲ್ಲಿ ಮಾಡಬೇಕು ? ಯಾವ ದೇವತೆಯನ್ನು ಪೂಜಸಬೇಕು ? ಎಲ್ಲವನ್ನೂ ಹೇಳು.

**ಕಮಲೆ :-** ಮಾರ್ಗಶೀರ್ಷಮಾಸದ ಮೊದಲ ಗುರುವಾರ ಪೂರ್ವಾಹ್ಣದಲ್ಲಿ ನಾರಾಯಣನೊಂದಿಗೆ ಲಕ್ಷ್ಮಿಯನ್ನು ಪೂಜಿಸಬೇಕು. ನೆಲಗಡಲೆ ಮಿಷ್ಟಾನ್ನ ಪಾಯಸಗಳನ್ನು ನಿವೇದಿಸಬೇಕು. ಲಕ್ಷ್ಮೀಪ್ರಾರ್ಥನೆಯನ್ನು ಹೀಗೆ ಮಾಡಬೇಕು.

**ತ್ರೈಲೋಕ್ಯಪೂಜಿತೇ ದೇವಿ ಕಮಲೇ ವಿಷ್ಣುವಲ್ಲಭೇ**
**ಯಥಾ ತ್ವಮಚಲಾ ಕೃಷ್ಣೇ ತಥಾಭವ ಮಯಿಸ್ಥಿತಾ**
**ಈಶ್ವರೀ ಕಮಲೇ ದೇವಿ ಶರಣಂ ಚ ಭವಾನ ಘೇ**

ತ್ರಿಲೋಕವಂದಿತೆ, ವಿಷ್ಣುವಲ್ಲಭೆ, ದೇವಿ ಕಮಲೆ, ನೀನು ವಿಷ್ಣುವಿನಲ್ಲಿ ಹೇಗೆ ಸ್ಥಿರವಾಗಿ ನೆಲೆಸಿರುವಿಯೊ ಹಾಗೆ ನನ್ನಲ್ಲಿಯೂ ಸ್ಥಿರವಾಗಿ ನೆಲೆಸು. ದೇವಿ, ಜಗದೀಶ್ವರಿ, ಕಾಪಾಡು, ಹೀಗೆ ಶಾಸ್ತ್ರೋಕ್ತವಾಗಿ ದೇವಿಯನ್ನು ಅರ್ಚಿಸಿ ನೈವೇದ್ಯವನ್ನು ಒಳ್ಳೆಯ ಬ್ರಾಹ್ಮಣರಿಗೆ ಉಣಬಡಿಸಿ ಪತಿ, ಪುತ್ರ, ಸೇವಕರೊಡನೆ ತಾನೂ ಉಣಬೇಕು.

ಎರಡನೆ ಗುರುವಾರದಲ್ಲಿ ಹುರಿದ ಗೋದಿಯಿಂದ ಮಾಡಿದ ಭಕ್ಷ್ಯಗಳನ್ನೂ ಮೂರನೆ ಗುರುವಾರ ನೆಲೆಗಡಲೆ ಧಾನ್ಯಗಳನ್ನೂ ನಾಲ್ಕನೆ ಗುರುವಾರ ಸಾವೆ ಅನ್ನವನ್ನೂ ದೇವಿಗೆ ಸಮರ್ಪಿಸಿ ಕೊನೆಯಲ್ಲಿ ದ್ವಿಜರಿಗೆ ಅನ್ನವಸ್ತ್ರ ಆಭರಣಗಳನ್ನು ದಾನಮಾಡಬೇಕು.

**ದ್ವಾರಪಾಲಿಕೆ :-** ರಾಣಿಯನ್ನು ಕಂಡು ವಿಜ್ಞಾಪಿಸಿ ನಿನ್ನನ್ನು ಒಳಕ್ಕೆ ಬಿಡುವೆನು ಕೋಪಿಸಿಕೊಳ್ಳದೆ ಒಂದು ಕ್ಷಣ ಇಲ್ಲಿಯೆ ನಿಂತಿರು.

ಹೀಗೆ ಹೇಳಿ ದ್ವಾರಪಾಲಿಕೆ ರಾಣಿಯ ಬಳಿಗೆ ಹೋಗಿ ಕಮಲೆಯಾಡಿದ ಮಾತುಗಳನ್ನೆಲ್ಲ ಹೇಳಿದಳು. ರಾಣಿ ಕಮಲೆಯ ಬಳಿಗೆ ಬಂದು ಬಿಂಕದಿಂದ ನುಡಿದಳು.

**ರಾಣಿ :-** ವೃದ್ಧೆ, ನನಗೆ ನೀನು ಉಪದೇಶ ಮಾಡಲು ಬಂದೆಯ ? ಭಯಪಡಬೇಡ ಹೇಳು.

**ಕಮಲೆ:-** ನೀಚಳೆ, ನೀನೆಷ್ಟು ನೀತಿಗೆಟ್ಟವಳೆಂಬುದನ್ನು ಕಣ್ಣಾರೆ ಕಂಡು ಹೋಗಲೆಂದು ಬಂದೆ. ಪರಮದುರ್ಲಭವಾದ ಆ ವ್ರತವನ್ನು ನಿನಗೆ ಉಪದೇಶ ಮಾಡುವೆನು? ಚಂಡಾಲಳೆ, ಇಂದು ಲಕ್ಷ್ಮಿಯ ದಿನ. ನೀನು ವ್ರತವನ್ನು ಮಾಡುತ್ತಿಲ್ಲ. ಐಶ್ವರ್ಯದ ಮದದಿಂದ ನೀನೀಗ ಕೊಬ್ಬಿರುವೆ. ದುಷ್ಟೆ, ನೀನಿನ್ನು ಏನಾಗುವೆ, ನೋಡುತ್ತಿರು.

ಇದನ್ನು ಕೇಳಿ ರಾಣಿಯ ಕಣ್ಣುಗಳು ಕೋಪದಿಂದ ಕೆಂಪಾದವು, ವಯಸ್ಸಾದವಳು, ಬ್ರಾಹ್ಮಣಸ್ತ್ರೀ ಎಂಬುದನ್ನು ನೋಡದೆ ಅವಳು ಕಮಲೆಯನ್ನು ಚೆನ್ನಾಗಿ ಹೊಡೆದುಬಿಟ್ಟಳು. ಕಮಲೆ ಅಳುತ್ತ ಹೊರಬಂದಳು. ಹೊರಗೆ ಆಟ ಆಡುತ್ತಿದ್ದ

ರಾಜಕುಮಾರಿ ಅಳುವಿನ ಧ್ವನಿ ಕೇಳಿ ಕಮಲೆಯ ಬಳಿ ಬಂದು ಕೇಳಿದಳು. ವೃದ್ಧೆ ಏಕೆ ಅಳುತ್ತಿರುವೆ ?'

ಕಮಲೆ ನಡೆದ ವೃತ್ತಾಂತವನ್ನೆಲ್ಲ ತಿಳಿಸಿದಾಗ ರಾಜಕುಮಾರಿಗೆ ಅವಳು ಹೇಳಿದ ಗುರುವಾರವ್ರತದಲ್ಲಿ ಶ್ರದ್ಧೆ ಮೂಡಿತು. ಭಕ್ತಿಯಿಂದ ಶಾಸ್ತ್ರೋಕ್ತವಾಗಿ ಆ ವ್ರತವನ್ನು ಆಕೆ ಮಾಡಿದಳು. ಮೂರು ಗುರುವಾರಗಳಲ್ಲಿ ವ್ರತವು ಸಾಂಗವಾಗಿ ನಡೆಯಿತು. ಅದರ ಪ್ರಭಾವದಿಂದ ನಾಲ್ಕನೆ ಗುರುವಾರ ಸಿದ್ಧೇಶ್ವರರಾಜನ ಕುಮಾರ ಮಾಲಾಧರನು ರಾಜಕುಮಾರಿಯನ್ನು ಮದುವೆಯಾಗಿ ತನ್ನ ದೇಶಕ್ಕೆ ಕರೆದೊಯ್ದನು.

ಇತ್ತ ರಾಣಿ ಸುರತಿ ಚಂದ್ರಿಕೆಯ ಸಂಪತ್ತೆಲ್ಲವೂ ಕಣ್ಮರೆಯಾಯಿತು. ಅದು ಹೇಗೆ ಎಂಬುದು ಯಾರಿಗೂ ತಿಳಿಯಲಿಲ್ಲ. ಅನ್ನ ಬಟ್ಟೆಗಳೂ ದೊರಕದಂಥ ಪರಿಸ್ಥಿತಿ ಬಂದಿತು. ಆಗ ಕೆಲವರು ಒಂದು ಸಲಹೆ ಮಾಡಿದರು, 'ಮಗಳ ಮನೆಗೆ ಏಕೆ ಹೋಗಬಾರದು' ಎಂದು. ರಾಣಿ ಅದನ್ನೊಪ್ಪಿ ಪತಿಯನ್ನು ಮಗಳ ಮನೆಗೆ ಕಳಿಸಿದಳು. ಆತ ಮಾಲಾಧರನ ರಾಜ್ಯಕ್ಕೆ ಬಂದು ಅಲ್ಲಿ ಒಂದು ಸರೋವರದ ಬಳಿ ವಿಶ್ರಾಂತಿ ತೆಗೆದುಕೊಳ್ಳುತ್ತಿದ್ದಾಗ ರಾಜಕುಮಾರಿಯ ದಾಸಿಯರು ನೀರಿಗಾಗಿ ಅಲ್ಲಿಗೆ ಬಂದರು.

**ದಾಸಿಯರು :-** ಯಾರು ನೀನು ? ರಕ್ತಮಾಂಸಗಳಿಲ್ಲದ ಒಣಕಲು ದೇಹದಿಂದಿರುವೆ ? ಎಲ್ಲಿಂದ ಬಂದೆ, ಹೇಳು.

**ರಾಜ :-** ನಾನು ನಿಮ್ಮ ರಾಣಿ ಶ್ಯಾಮಬಾಲೆಯ ತಂದೆ. ಸೌರಾಷ್ಟ್ರದಿಂದ ಬಂದಿದ್ದೇನೆ. ರಾಣಿಗೆ ನನ್ನಾಗಮನವನ್ನು ತಿಳಿಸಿರಿ.

ದಾಸಿಯರು ಇದನ್ನು ಕೇಳಿ ಪರಸ್ಪರ ನೋಡಿ ನಕ್ಕರು. ಆದರೂ ಶ್ಯಾಮಬಾಲೆಯ ಬಳಿ ಎಲ್ಲವನ್ನೂ ತಿಳಿಸಿದರು. ಆಕೆ ಸಂಭ್ರಮದಿಂದ ತಂದೆಯನ್ನು ಅರಮನೆಗೆ ಬರಮಾಡಿಕೊಂಡು ಉಪಚರಿಸಿದಳು. ತುಪ್ಪದನ್ನದ ಸುಗ್ರಾಸ ಭೋಜನವಿತ್ತಳು. ನಾಲ್ಕು ದಿನ ಕಳೆಯಿತು.

ಮರುದಿನ ಒಂದು ಪಾತ್ರೆಯಲ್ಲಿ ಗುಪ್ತವಾಗಿ ಹಣವನ್ನಿಟ್ಟು ಕಟ್ಟಿ ತಂದೆಯ ಕೈಯಲ್ಲಿ ಕೊಟ್ಟು ಕಳಿಸಿದಳು ಶ್ಯಾಮಬಾಲೆ. ರಾಜ ತನ್ನ ಅರಮನೆಗೆ ಹಿಂತಿರುಗಿ ಬಂದು ಗಂಟನ್ನು ಬಿಚ್ಚಿ ನೋಡಿದಾಗ ಪಾತ್ರೆಯಲ್ಲಿ ಇದ್ದಿಲು ತುಂಬಿಕೊಂಡಿತ್ತು. ದುಃಖ ತಡೆಯಲಾರದೆ ರಾಜ ಅತ್ತುಬಿಟ್ಟ. ಈಗ ರಾಣಿಯು ತಾನೆ ಮಗಳ ಮನೆಗೆ ಹೊರಟು ಬಂದಳು. ಮಗಳು ಆನಂದದಿಂದ ಆಕೆಯನ್ನು ಬರಮಾಡಿಕೊಂಡು ಸತ್ಕರಿಸಿದಳು. ಆಗ ಲಕ್ಷ್ಮೀವ್ರತದ ಸಮಯ. ತಾನು ಮಾತ್ರವಲ್ಲದೆ ತಾಯಿಯ ಕೈಯಿಂದಲೂ ವ್ರತ ಮಾಡಿಸುವ ಆಸೆ ಅವಳಿಗೆ. ತಾಯಿಗಾದರೂ ಇನ್ನೂ ಆ ವಿಷಯದಲ್ಲಿ ಅನಾದರ. ಮೂರು ಗುರುವಾರಗಳು ಕಳೆದುವು. ನಾಲ್ಕನೆ ಗುರುವಾರ ಹೇಗೋ ಒತ್ತಾಯದಿಂದ ತಾಯಿಯ ಕೈಯಿಂದಲೂ ವ್ರತವನ್ನು ಮಾಡಿಸಿದಳು ಶ್ಯಾಮಬಾಲೆ.

ರಾಣಿ ತನ್ನ ಅರಮನೆಗೆ ಹಿಂತಿರುಗಿ ಬಂದಾಗ ಅಲ್ಲಿ ಸಂಪತ್ತು ತುಂಬಿಕೊಂಡಿತ್ತು. ಒಂದು ದಿನ ಮಗಳು ತಾಯಿಯನ್ನು ಕಾಣಲು ಬಂದಳು. ಆದರೆ ದೂರದಿಂದಲೆ ಮಗಳು ಬರುತ್ತಿರುವುದನ್ನು ಕಂಡು ರಾಣಿ ಅವಳ ಮುಖವನ್ನೇ ನೋಡಲಾರೆನೆಂದು ಹೇಳಿಕೊಂಡು ಒಂದೆಡೆ ಕುಳಿತುಬಿಟ್ಟಳು. ಮಗಳನ್ನಿದಿರುಗೊಳ್ಳಲಿಲ್ಲ.

ಮನೆಯೊಳಗೆ ಬಂದಳು ಶ್ಯಾಮಬಾಲೆ. ಯಾರಲ್ಲಿಯೂ ಏನೂ ಆಡದೆ ಒಂದಿಷ್ಟು ಉಪ್ಪು ಕೈಯಲ್ಲಿ ಎತ್ತಿಕೊಂಡು ತನ್ನ ಅರಮನೆಗೆ ನಡೆದಳು. ಮಾಲಾಧರನು ಆಕೆಯನ್ನು ಕೇಳಿದ.

**ಮಾಲಾಧರ :-** ಪ್ರಿಯೆ, ತವರಿಂದ ಏನು ತಂದೆ ?

**ಶ್ಯಾಮಬಾಲೆ :-** ರಾಜ್ಯದ ಸಾರವನ್ನೇ ತಂದಿದ್ದೇನೆ. ಭೋಜನ ಕಾಲದಲ್ಲಿ ಅದನ್ನು ತೋರಿಸುತ್ತೇನೆ.

ಮಾಲಾಧರ ಊಟಕ್ಕೆ ಕುಳಿತ. ಅಂದು ಉಪ್ಪಿಲ್ಲದ ಅಡಿಗೆ, ಏನೂ ರುಚಿಸಲಿಲ್ಲ. ಶ್ಯಾಮಬಾಲೆ ಇದುವೆ ರಾಜ್ಯಸಾರವೆಂದು ಹೇಳುತ್ತ ಉಪ್ಪು ಬಡಿಸಿದಳು. ಆಗ ಊಟ ರುಚಿಕರವಾಯಿತು. ಉಂಡು ತೃಪ್ತಿಯಿಂದ ಮಾಲಾಧಾರ ರಾಣಿಯನ್ನು ಹೊಗಳಿದ.

ಇದು ಗುರುವಾರ ವ್ರತದ ಮಹಿಮೆ, ಅದನ್ನು ಮಾಡದ ನಾರಿ ಜನ್ಮಜನ್ಮಕ್ಕೂ ದರಿದ್ರಳಾಗುವಳು, ದುಃಖಿನಿಯಾಗುವಳು. ಈ ಕಥೆಯನ್ನು ಕೇಳಿದರೂ ಎಲ್ಲ ಪಾಪ ಪರಿಹಾರವಾಗುತ್ತದೆ. ಲಕ್ಷ್ಮೀಲೋಕ ಪ್ರಾಪ್ತಿಯಾಗುತ್ತದೆ. ಕಥೆಯನ್ನು ಕೇಳಿ ತಿಳಿಯದೆ ವ್ರತ ಮಾಡಿದರೂ ಅದು ನಿಷ್ಫಲವಾಗುತ್ತದೆ.

*ಇತಿ ಪದ್ಮ ಮಹಾಪುರಾಣ ಭಾಗ-೨ರ ಬ್ರಹ್ಮಖಂಡದಲ್ಲಿ ಸೌಭಾಗ್ಯವತಿ ವ್ರತ ಒಂಬತ್ತನೇಯ ಅಧ್ಯಾಯ ಮುಗಿದುದು*



## ಬ್ರಾಹ್ಮಣಪಾಲನ — ಅಧ್ಯಾಯ - ೧೦

**ಶೌನಕ ಉವಾಚ**

**ಶೌನಕ:-** ವಿಷ್ಣುಲೋಕಕ್ಕೆ ಮಾನವನನ್ನೊಯ್ಯಬಲ್ಲ ಇನ್ನೊಂದು ಪುಣ್ಯಕರ್ಮವಿದ್ದರೆ ಅದನ್ನು ಹೇಳು.

**ಸೂತ:-** ಧನದಿಂದ, ಇಲ್ಲವೆ ಪ್ರಾಣವನ್ನಾದರೂ ಕೊಟ್ಟು ಒಬ್ಬ ಬ್ರಾಹ್ಮಣನನ್ನು ಉಳಿಸಿದರೆ ವಿಷ್ಣುಲೋಕ ಪ್ರಾಪ್ತಿಯಾಗುತ್ತದೆ. ಹಿಂದೆ ದ್ವಾಪರದಲ್ಲಿ ದೀನನಾಥನೆಂಬ ವಿಷ್ಣುಭಕ್ತನಾದ ಒಬ್ಬರಾಜನಿದ್ದ. ಅವನಿಗೆ ಮಕ್ಕಳಿರಲಿಲ್ಲ. ಅವನು ರಾಜಗುರು ಗಾಲವನನನ್ನು ಒಂದು ದಿನ ಹೀಗೆ ಕೇಳಿದ.

**ದೀನನಾಥ :-** ಗುರುವೆ, ಮಕ್ಕಳಾಗಲು ಯಾವ ಪುಣ್ಯಕರ್ಮವನ್ನು ಮಾಡಬೇಕು. ಮಕ್ಕಳಿಲ್ಲದವನ ಬಾಳು ನಿರರ್ಥಕ. ಅದರಿಂದ ನೀನು ಅಪ್ಪಣೆ ಮಾಡಿದರೆ ಅದರಂತೆ ಮಾಡುವೆನು.

**ಗಾಲವ :-** ರಾಜನೆ, ಒಳ್ಳೆಯ ಸಂತತಿಗಾಗಿ ನರಮೇಧವೆಂಬ ಒಂದು ಶ್ರೇಷ್ಠಯಾಗವಿದೆ. ಅದನ್ನು ಮಾಡು.

**ದೀನನಾಥ :-** ಆ ನರಮೇಧದಲ್ಲಿ ಎಂಥ ಮನುಷ್ಯನನ್ನು ಬಲಿಕೊಡಬೇಕು.

**ಗಾಲವ :-** ಸಮಸ್ತ ಶಾಸ್ತ್ರಗಳನ್ನರಿತ ಸುಂದರ ಸತ್ಕುಲ ಪ್ರಸೂತನಾದ ಮಾನವನು ಬೇಕು. ಅಂಗವಿಕಲನಾಗಿರಕೂಡದು. ಕರಿಯಬಣ್ಣದವನಾಗಿರಲೂ ಕೂಡದು.

ರಾಜನು ಇದನ್ನು ಕೇಳಿ ಯೋಗ್ಯ ಮನುಷ್ಯನೊಬ್ಬನನ್ನು ಹುಡುಕಿ ತರಲು ದೂತರ ಕೈಯಲ್ಲಿ ಹೇರಳ ಧನವನ್ನಿತ್ತು ಕಳಿಸಿದ. ಗಾಲವಮುನಿ ಮುಂತಾದವರನ್ನು ಯಜ್ಞಕ್ಕೆ ಋತ್ವಿಜರನ್ನಾಗಿ ಆಮಂತ್ರಿಸಿದ. ದೂತರು ಹಳ್ಳಿಪಟ್ಟಣಗಳಲ್ಲೆಲ್ಲ ಸುತ್ತಾಡಿ ಎಲ್ಲಿಯೂ ಯೋಗ್ಯ ಮನುಷ್ಯನನ್ನು ಕಾಣದೆ ಕೊನೆಗೆ ದಶಪುರಕ್ಕೆ ಬಂದರು. ಅಲ್ಲಿಯ ಬ್ರಾಹ್ಮಣರೆಲ್ಲರೂ ಒಳ್ಳೆಯ ಗುಣವಂತರು. ಸ್ತ್ರೀಯರೂ ಜಿಂಕೆ ಕಣ್ಣಿನವರು, ಚಂದ್ರಮುಖಿಯರು, ಪುರುಷರು ನೋಡಿ ಮೋಹಿಸುವಂಥ ರೂಪ ಅವರದು. ಆ ನಗರದಲ್ಲಿ ಕೃಷ್ಣದೇವನೆಂಬ ಒಬ್ಬ ದ್ವಿಜ. ಅವನಿಗೆ ಮೂರುಮಂದಿ ಗಂಡು ಮಕ್ಕಳು. ಶೀಲವತಿಯಾದ ಪತ್ನಿ. ನಿತ್ಯ ಅಗ್ನಿಹೋತ್ರ ವಿಷ್ಣುಪೂಜೆಗಳನ್ನು ಮಾಡುತ್ತ ಪಿತೃಭಕ್ತನಾಗಿದ್ದ. ಒಳ್ಳೆಯ ಮಾತುಗಳನ್ನೇ ಆಡುತ್ತಿದ್ದ.

ರಾಜದೂತರು ಅವನ ಬಳಿ ಬಂದು ಪ್ರಾರ್ಥಿಸಿದರು.

**ರಾಜದೂತರು :-** ದ್ವಿಜೋತ್ತಮ, ನಮ್ಮ ದೀನನಾಥ ಮಹಾರಾಜನಿಗೆ ಮಕ್ಕಳಿಲ್ಲ. ಅದಕ್ಕಾಗಿ ಒಂದು ನರಮೇಧ ಯಾಗಮಾಡಲು ದೀಕ್ಷೆ ಹೊಂದಿದ್ದಾನೆ. ನಿನ್ನ ಮಗನೊಬ್ಬನನ್ನು ಕೊಡು. ಆ ಮಹಾಯಜ್ಞದಲ್ಲಿ ಅವನನ್ನು ಬಲಿ ಕೊಡುವೆವು. ನಿನಗೆ ನಾಲ್ಕುಲಕ್ಷ ಸುವರ್ಣವನ್ನು ನೀಡುವೆವು. ನೀನು ವ್ಯಾಮೋಹದಿಂದ ಕೊಡಲೊಪ್ಪದಿದ್ದಲ್ಲಿ ನಾವೆ ಕೊಂಡೊಯ್ಯುವೆವು, ಇದು ರಾಜಾಜ್ಞೆ.

ಇದನ್ನು ಕೇಳಿ ಬ್ರಾಹ್ಮಣ ದಂಪತಿಗಳಿಗೆ ಪ್ರಾಣವೆ ಹೊರಟು ಹೋದಂತಾಯಿತು. 'ಇವರು ಕೊಡುವ ಸುವರ್ಣದಿಂದೇನಾಗಬೇಕು ? ಮಗನನ್ನು ಮಾರಿ ಏತಕ್ಕೆ ಬಾಳಬೇಕು ?' ಎಂದುಕೊಂಡು ದುಃಖದಿಂದ ತತ್ತರಿಸಿದರು.

**ಬ್ರಾಹ್ಮಣ :-** ದೂತರೆ, ನಮ್ಮ ದುಃಖಗಳನ್ನು ಕಳೆವ ಮಗನನ್ನು ಒಯ್ಯಲು ಬಂದಿರುವಿರಿ. ಭೂಮಿಯಲ್ಲಿ ಬಾಳುವವನು ರಾಜಾಜ್ಞೆಯನ್ನು ಉಲ್ಲಂಘಿಸಿ ಹೇಗೆ ಬದುಕಬಲ್ಲ ? ಆದರೆ ಮಗನನ್ನು ಬಿಡಿ. ನನ್ನನ್ನೇ ಕೊಂಡೊಯ್ಯಿರಿ.

ದೂತರು ಅವನ ಮಾತುಗಳನ್ನು ಕಿವಿಗೆ ಹಾಕಿಕೊಳ್ಳದೆ ಬಲತ್ಕಾರದಿಂದಲೆ ಸುವರ್ಣಗಳನ್ನು ಮನೆಯಲ್ಲಿ ಸುರಿದು ಹಿರಿಯ ಮಗನನ್ನು ಎಳೆದೊಯ್ಯತೊಡಗಿದರು, ಬ್ರಾಹ್ಮಣನು ಅಳುತ್ತ ಕೈಮುಗಿದು ಹೇಳಿದ.

**ಬ್ರಾಹ್ಮಣ :-** ದೂತರೆ, ಹಿರಿಯ ಮಗನನ್ನು ಮಾತ್ರ ಒಯ್ಯಲೇ ಬೇಡಿ. ಉಳಿದವರಲ್ಲೊಬ್ಬನನ್ನು ಒಯ್ಯಿರೆಂದು ಹೇಳಲು ನಾಲಿಗೆ ಕಟ್ಟಿಕೊಳ್ಳುತ್ತಿದೆ.

**ದೂತರು :-** ಹಾಗಿದ್ದರೆ ಕಿರಿಯ ಮಗನನ್ನು ಕೊಡು.

ಈ ಮಾತನ್ನು ಕೇಳಿದಾಗ ತಾಯಿ ಬಿರುಗಾಳಿಗೆ ಸಿಕ್ಕ ಬಾಳೆಯಗಿಡದಂತೆ ನೆಲದ ಮೇಲೆ ಬಿದ್ದಳು. ಒನಕೆಯನ್ನೆತ್ತಿ ತನ್ನ ತಲೆಗೆ ಹೊಡೆದುಕೊಂಡಳು. ಕಿರಿಯ ಮಗನನ್ನು ನಾನು ಸರ್ವಥಾ ಕೊಡಲಾರೆನೆಂದಳು.

ಆಗ ನಡುವಿನ ಮಗನು ಅಳುತ್ತ ತಂದೆ ತಾಯಿಗಳ ಕಾಲುಗಳಿಗೆರಗಿ ಹೇಳಿದನು.

**ಮಾತಾ ಯದಿ ವಿಷಂ ದದ್ಯಾತ್। ಪಿತ್ರಾ ವಿಕ್ರೀಯತೇ ಸುತಃ ॥**
**ರಾಜಾ ಹರತಿ ಸರ್ವಸ್ವಂ। ಕಸ್ತತ್ರ ಪಾಲಕೋ ಭವೇತ್ ॥**

ತಾಯಿ ಮಗನಿಗೆ ವಿಷವಿಕ್ಕಿದರೆ, ತಂದೆ ಮಾರಿದರೆ ರಾಜನು ಅವನ ಸರ್ವಸ್ವವನ್ನು ಅಪಹರಿಸಿದರೆ ಅವನನ್ನು ಕಾಪಾಡುವವರಾರು ?

ಹೀಗೆ ಹೇಳಿ ದೂತರೊಂದಿಗೆ ಹೊರಟು ಹೋದನು. ಬ್ರಾಹ್ಮಣ ದಂಪತಿಗಳು ಪುತ್ರವಿಯೋಗ ದುಃಖದಿಂದ ಬೆಂದರು. ಅತ್ತು ಅತ್ತು ಅವರ ಕಣ್ಣು ಕುರುಡಾದವು. ಇತ್ತ ದೂತರು ಬ್ರಾಹ್ಮಣ ಬಾಲಕನನ್ನೊಯ್ಯುತ್ತ ವಿಶ್ವಾಮಿತ್ರ ಮುನಿಯ ಆಶ್ರಮದ ದಾರಿಯಿಂದ ನಡೆದುಹೋದರು. ಮುನಿ ಪ್ರಶ್ನಿಸಿದನು.

**ವಿಶ್ವಾಮಿತ್ರ:-** ಯಾರು ನೀವು ? ಎಲ್ಲಿಗೆ ಹೋಗುತ್ತಿರುವಿರಿ ? ನಿಮ್ಮ ವೃತ್ತಿ ಏನು ?

**ರಾಜದೂತರು :-** ಮುನಿಯೆ, ನಮ್ಮ ದೀನನಾಥ ರಾಜನಿಗೆ ಮಕ್ಕಳಿಲ್ಲ. ಅದಕ್ಕಾಗಿ ನರಮೇಧ ಮಾಡುತ್ತಿದ್ದಾನೆ. ಈ ಬ್ರಾಹ್ಮಣ ಬಾಲಕನನ್ನು ಬಲಿಕೊಡಲು ಒಯ್ಯುತ್ತಿದ್ದೇವೆ.

ಮುನಿಗೆ ಬಾಲಕನನ್ನು ಕಂಡು ಕರುಣೆ ಮೂಡಿತು. ನನ್ನ ಪ್ರಾಣ ಹೋದರೂ ಸರಿಯೆ ಈತ ಸುಖವಾಗಿರಲಿ.

**ಬಾಲಕಾರ್ಥೆ ದ್ವಿಜಾರ್ಥೆ ಚ ಸ್ವಾಮ್ಯರ್ಥೆ ಯೇ ಜನಾಇಹ**
**ತ್ಯಜಂತಿ ತೃಣವತ್ ಪ್ರಾಣಾನ್ ತೇಷಾಂ ಲೋಕಾಃ ಸನಾತನಾಃ**

ಬಾಲಕರು, ದ್ವಿಜರು, ಸ್ವಾಮಿ, ಇವರಿಗಾಗಿ ಯಾರು ತಮ್ಮ ಪ್ರಾಣಗಳನ್ನೇ ಹುಲ್ಲು ಕಡ್ಡಿಯಂತೆ ಬಿಡಬಲ್ಲರೊ ಅವರಿಗೆ ನಿತ್ಯವಾದ ಲೋಕಗಳು ಲಭಿಸುತ್ತವೆ.

ಹೀಗೆ ಮನಸ್ಸಿನಲ್ಲಿ ಆಲೋಚಿಸಿ ಮುನಿ ನುಡಿದನು.

**ವಿಶ್ವಾಮಿತ್ರ :-** ದೂತರೆ, ಯಜ್ಞಕ್ಕೆ ಬಲಿಯೊಂದು ಬೇಕು, ನಿಜ. ಆದರೆ ಈ ಬಾಲಕನನ್ನು ಬಿಡಿ. ನನ್ನನ್ನೆ ಒಯ್ಯಿರಿ, ಅವನಿನ್ನೂ ಎಳೆ ಹುಡಗ. ಹುಟ್ಟಿದ ಮೇಲೆ ಏನೂ ಸುಖ ಕಂಡವನಲ್ಲ. ಇಷ್ಟು ಬೇಗನೆ ಏಕೆ ಸಾಯಬೇಕು ? ಅವನು ಮನೆ ಬಿಟ್ಟು ಬಂದ ಮೇಲೆ ಅಲ್ಲಿ ಅವನ ತಂದೆ ತಾಯಿಗಳು ದುಃಖದಿಂದ ಅಸುನೀಗಿರಬಹುದು.

**ರಾಜದೂತರು :-** ಮುನಿಯೆ, ರಾಜಾಜ್ಞೆ ಇಲ್ಲದೆ, ನಿನ್ನಂಥ ವೃದ್ಧನನ್ನು ನಾವೆಂತು ಒಯ್ಯಲಿ ?

ಹೀಗೆ ಹೇಳಿ ದೂತರು ಮುಂದೆ ನಡೆದರು. ಮುನಿ ಅವರನ್ನು ಹಿಂಬಾಲಿಸುತ್ತ ಯಾಗ ಶಾಲೆಯನ್ನು ಪ್ರವೇಶಿಸಿದ. ದೂತರು ಅವನು ಹೇಳಿದ ಮಾತನ್ನು ರಾಜನಲ್ಲಿ ಹೇಳಿದರು. ಆಗ ರಾಜನು ಮುನಿಗೆ ಹೇಳಿದ.

**ರಾಜ :-** ಮುನಿಯೆ, ಬಲಿಕೊಡದೆ ಯಾಗ ಮಾಡಿದರೂ ನನಗೆ ಮಗನೊಬ್ಬ ಹುಟ್ಟುವಂತಿದ್ದರೆ ನೀನೀ ಬಾಲಕನನ್ನು ಕರೆದೊಯ್ಯಬಹುದು.

**ಮುನಿ :-** ರಾಜನೆ, ಬಲಿಕೊಡದೆ ಯಾಗ ಮಾಡು ನಿನಗೆ ಒಳ್ಳೆಯ ಮಗನೆ ಹುಟ್ಟುತ್ತಾನೆ. ಸಂಶಯಪಡಬೇಡ.

ಇದನ್ನು ಕೇಳಿ ರಾಜನು ಸಂತೋಷದಿಂದ ಪೂರ್ಣಾಹುತಿ ಕೊಟ್ಟು ಯಜ್ಞವನ್ನು ಮುಗಿಸಿದ. ಮುನಿಯು ಬಾಲಕನನ್ನು ಕರೆದುಕೊಂಡು ದಶಪುರಕ್ಕೆ ನಡೆದ. ಬ್ರಾಹ್ಮಣನ ಮನೆಯಂಗಳದಲ್ಲಿ ನಿಂತು ನುಡಿದ.

**ಮುನಿ :-** ಬ್ರಾಹ್ಮಣ, ಮನೆಯೊಳಗೆ ಇರುವೆಯ ?

**ಬ್ರಾಹ್ಮಣ :-** ಇನ್ನೂ ಇದ್ದೇನೆ, ಆದರೂ ಸತ್ತಂತೆಯೆ ಸರಿ. ರಾಜನು ಬಲಾತ್ಕಾರದಿಂದ ನನ್ನ ಮಗನನ್ನೊಯ್ದನು. ನಾನೇನು ಮಾಡಲಿ ? ನೋಡು. ನಾವಿಬ್ಬರೂ ಇಲ್ಲಿ ಅತ್ತು ಅತ್ತು ಕಣ್ಣುಗಳ ದೃಷ್ಟಿಶಕ್ತಿಯನ್ನೇ ಕಳೆದುಕೊಂಡೆವು.

**ಮುನಿ :-** ಬ್ರಾಹ್ಮಣ, ನಿನ್ನ ಮಗನು ಹಿಂತಿರುಗಿ ಬಂದಿದ್ದಾನೆ, ಕರೆದುಕೊಳ್ಳು ನೋಡಿ ಆನಂದಿಸು.

ಇದನ್ನು ಕೇಳಿ ಬ್ರಾಹ್ಮಣ ದಂಪತಿಗಳು ಆನಂದದಿಂದ 'ಮಗನೆ ! ಎಂದು ಕೂಗಿ ಕರೆಯುತ್ತ ಹೊರಗೆ ಧಾವಿಸಿ ಬಂದರು. ಮುನಿಯ ವಾಕ್‌ಸಿದ್ಧಿಯ ಪ್ರಭಾವದಿಂದ ದಂಪತಿಗಳು ದೃಷ್ಟಿ ಶಕ್ತಿಯನ್ನು ತಿರುಗಿ ಪಡೆದು ಮಗನ ಮೊಗದಾವರೆಯನ್ನು ದುಂಬಿಯಂಥ ಕಣ್ಣುಗಳಿಂದ ನೋಡಿದರು. ಬಹುಹೊತ್ತು ನೋಡಿ ಆನಂದಿಸಿದರು. ಮುನಿಯನ್ನು ಬಾರಿಬಾರಿಗೂ ನಮಸ್ಕರಿಸುತ್ತ ಹೇಳಿದರು. 'ಮುನಿಯೆ, ನೀನು ನಮಗಿಂದು ಜೀವದಾನ ಮಾಡಿರುವೆ' ಅವರನ್ನಾಶೀರ್ವದಿಸಿ ಮುನಿ ತೆರಳಿದ. ಅವನಿಗೆ ವಿಷ್ಣುಲೋಕ ಕರಗತವಾಯಿತು. ಇನ್ನೂ ದೇವತೆಗಳಿಗೆ ಅಸಾಧ್ಯವಾದ ತಪಸ್ಸು ಮಾಡತೊಡಗಿದ.

ಇತ್ತ ಕೆಲಕಾಲದ ಬಳಿಕ ದೀನಾನಾಥನಿಗೆ ಕ್ಷೀರಸಾಗರದಿಂದ ಚಂದ್ರನು ಉದಯಿಸಿ ಬಂದಂತೆ ಒಬ್ಬ ಪುತ್ರನುದಿಸಿದ. ಪುತ್ರೋತ್ಸವದ ನಿಮಿತ್ತ ಅನೇಕ ದಾನಗಳನ್ನು ಮಾಡಿ ಭೂಮಿಯಲ್ಲಿ ದೇವತೆಯಂತೆ ಆನಂದವನ್ನು ಅನುಭವಿಸಿದ. ವಿಪ್ರರನ್ನುಳಿಸಲು ಧನವನ್ನೂ ಪ್ರಾಣವನ್ನೂ ಕೊಡಬಲ್ಲವನು ವಿಷ್ಣುಲೋಕವನ್ನು ಹೊಂದುವನು. ಈ ಕಥೆಯನ್ನು ಇಲ್ಲವೆ ಇದರ ಒಂದು ಶ್ಲೋಕವನ್ನಾದರೂ ಪಠಿಸುವವರೂ, ಕೇಳುವವರೂ ವಿಷ್ಣುಲೋಕವನ್ನು ಸೇರುವರು.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಬ್ರಹ್ಮಖಂಡದಲ್ಲಿ ಸೂತ ಶೌನಕ ಸಂವಾದದಲ್ಲಿ ಬ್ರಾಹ್ಮಣಪಾಲನವೆಂಬ ಹತ್ತನೇಯ ಅಧ್ಯಾಯ ಮುಗಿದುದು*



**ಶೌನಕ ಉವಾಚ**

**ಶೌನಕ :-** ಸೂತನೆ, ಕೃಷ್ಣ ಜನ್ಮಾಷ್ಟಮಿಯ ಮಹಿಮೆಯನ್ನು ವರ್ಣಿಸಿ ಸಂಸಾರ ಸಾಗರದಿಂದ ನಮ್ಮೆಲ್ಲರನ್ನೂ ಪಾರುಮಾಡು.

**ಸೂತ :-** ಕೃಷ್ಣಜನ್ಮಾಷ್ಟಮಿಯನ್ನು ಭಕ್ತಿಯಿಂದಾಚರಿಸಿದರೆ ವಿಷ್ಣುಲೋಕ ದೊರೆಯುವುದು. ಕುಲಕೋಟಿ ಉದ್ಧಾರ ಹೊಂದುವುದು. ಬುಧವಾರ ಇಲ್ಲವೆ ಸೋಮವಾರ ರೋಹಿಣಿ ನಕ್ಷತ್ರದೊಂದಿಗೆ ಅಷ್ಟಮಿ ಸೇರಿದರೆ ಕುಲಕೋಟಿಗೆ ಮುಕ್ತಿ ಕೊಡಬಲ್ಲದು. ಈ ವ್ರತವನ್ನು ಮಾಡದವನಿಗೆ ಇಹ ಪರಗಳೆರಡರಲ್ಲಿಯೂ ನರಕ ದುಃಖ. ಅಂದು ಊಟ ಮಾಡುವವನಿಗೆ ಮಹಾ ನರಕವಿದೆ. ಈ ವಿಷಯದಲ್ಲಿ ದಿಲೀಪ ವಶಿಷ್ಠರ ಪವಿತ್ರ ಸಂಭಾಷಣೆಯನ್ನು ಕೇಳಿ.

**ದಿಲೀಪ :-** ಭಾದ್ರಪದ ಕೃಷ್ಣಪಕ್ಷದ ಅಷ್ಟಮಿಯಂದು ನಡೆದ ಕೃಷ್ಣಾವತಾರದ ವೃತ್ತಾಂತವನ್ನು ಕೇಳಬಯಸುತ್ತೇನೆ. ದೇವಕಿಯ ಗರ್ಭದಲ್ಲಿ ದೇವನೆಂತು ಅವತರಿಸಿದ ? ಏಕೆ ?

**ವಶಿಷ್ಠ :-** ರಾಜನೆ, ಕೇಳು ಹಿಂದೆ ಕಂಸರಂಥ ದುಷ್ಟರಾಜರ ಆಳಿಕೆಯಲ್ಲಿ ಭೂದೇವಿ ಬಹು ಹಿಂಸೆ ಪಟ್ಟಳು. ಅಧಿಕಾರದರ್ಪದಿಂದ ಉನ್ಮತ್ತನಾದ ಕಂಸನೆಂಬ ದೈತ್ಯನೊಬ್ಬನು ಭೂದೇವಿಯನ್ನು ಹೊಡೆದಾಗ ಆಕೆ ಆಕ್ರಂದನಮಾಡುತ್ತ ಶಿವನ ಬಳಿಗೆ ಹೋಗಿ ಕಣ್ಣೀರು ಉದುರಿಸುತ್ತ ದೂರಿದಳು. 'ಪ್ರಭು, ನನ್ನನ್ನು ಕಂಸನು ಹೊಡೆಯುತ್ತಿದ್ದಾನೆ. ಅವಳ ಕಣ್ಣೀರ ಪ್ರವಾಹ, ಮುಖದ ವಿವರ್ಣತೆಗಳನ್ನು ಕಂಡು ಕೋಪದಿಂದ ಶಿವನ ತುಟಿಗಳದುರಿದುವು. ಎಲ್ಲ ದೇವತೆಗಳನ್ನೂ ಜತೆಯಲ್ಲಿ ಕರೆದುಕೊಂಡು ಬ್ರಹ್ಮನ ಬಳಿಗೆ ಹೋಗಿ ನೀನೂ ಹರಿಯೂ ಸೇರಿ ಕಂಸನ ವಧೆಗೊಂದು ಉಪಾಯವನ್ನು ಆಲೋಚಿಸಿರೆಂದು ನುಡಿದ. ಬ್ರಹ್ಮನು ಒಪ್ಪಿ ಎಲ್ಲರನ್ನೂ ಕರೆದುಕೊಂಡು ಕ್ಷೀರಸಮುದ್ರದಲ್ಲಿ ಶೇಷನ ಮೇಲೆ ಮಲಗಿದ್ದ ಹರಿಯ ಬಳಿಗೆ ಬಂದು ಸ್ತೋತ್ರ ಮಾಡಿದನು.

**ನಮಃ ಕಮಲನೇತ್ರಾಯ ಹರಯೇ ಪರಮಾತ್ಮನೇ**
**ಜಗತಃಪಾಲಯಿತ್ರೇ ಚ ಲಕ್ಷ್ಮೀಕಾಂತ ನಮೋಸ್ತುತೆ**

ಲಕ್ಷ್ಮೀರಮಣ, ಜಗತ್ತನ್ನು ಪಾಲಿಸುವವನಾದ ಕಮಲನಯನಾದ, ಪಾಪಗಳನ್ನು ಪರಿಹರಿಸುವ ಪರಮಾತ್ಮನಾದ ನಿನಗಿದೊ ನಮಸ್ಕಾರ.

ಇದನ್ನು ಕೇಳಿ ಹರಿ ಅವರನ್ನು ಏಕೆ ಬಂದಿರೆಂದು ಕೇಳಿದ. ಬ್ರಹ್ಮನೆಂದ ''ದೇವ ಜಗನ್ನಾಥ, ಕೇಳು. ಶಿವನ ವರಬಲದಿಂದ ಉನ್ಮತ್ತನಾದ ಕಂಸನೀಗ ಭೂದೇವಿಯನ್ನು ಹೊಡೆಯುತ್ತಿದ್ದಾನೆ. ತಂಗಿಯ ಮಕ್ಕಳನ್ನು ಬಿಟ್ಟು ಬೇರಾರಿಂದಲೂ ತನಗೆ ಮರಣ ಬರಕೂಡದೆಂದು ಕಂಸ ಶಿವನಿಂದ ವರ ಪಡೆದಿರುವುದರಿಂದ ನೀನೀಗ ಕಂಸನ ತಂಗಿ ದೇವಕಿಯ ಗರ್ಭದಲ್ಲಿ, ಅವತರಿಸಿ ಗೋಕುಲದಲ್ಲಿ ಬೆಳೆಯಬೇಕು. ಕಂಸನನ್ನು

ಕೊಲ್ಲಬೇಕು.'' ಹರಿ ಒಪ್ಪಿ ಶಿವನನ್ನು ಕುರಿತು ಹೇಳಿದ. ''ಪಾರ್ವತಿಯನ್ನು ನನ್ನ ಸಹಾಯಕ್ಕೆ ಕೊಡು ಒಂದು ವರ್ಷವಿದ್ದು ಆಕೆ ಹಿಂತಿರುಗಿ ಬರುವಳು.

ಬಳಿಕ ಯಶೋದೆಯ ಗರ್ಭದಲ್ಲಿ ಪಾರ್ವತಿ ಅವತರಿಸಿದಳು. ದೇವಕಿಯ ಗರ್ಭದಲ್ಲಿ ಹರಿ ಜನಿಸಿದ. ಭಾದ್ರಪದ ಕೃಷ್ಣಪಕ್ಷದ ಅಷ್ಟಮಿ ರೋಹಿಣಿ ನಕ್ಷತ್ರದಲ್ಲಿ ರಾತ್ರಿ ಗುಡುಗುವ ಕಾರ್ಮುಗಿಲು ಆಗಸವನ್ನು ಮುಚ್ಚಿದ್ದಾಗ ಕೃಷ್ಣನವತರಿಸಿದ. ತಾವರೆ ಗಣ್ಣಿನ ಆ ಸುಂದರ ಶಿಶುವನ್ನು ನೋಡುತ್ತ ವಸುದೇವ ಆನಂದದಿಂದ ಉಬ್ಬಿ ಹೋದ. ದೇವಕಿ ಎಚ್ಚರಿಸುತ್ತ ಹೇಳಿದಳು. ''ನಾಥ, ನಮ್ಮ ಶಿಶುವನ್ನು ಯಶೋದೆಯ ಮಡಿಲಲ್ಲಿಟ್ಟು ಅವಳ ಶಿಶುವನ್ನಿಲ್ಲಿ ತಂದಿಡು ಇಲ್ಲದಿದ್ದರೆ ಕಂಸನಿಂದ ಅಪಾಯವಿದೆ''

ವಸುದೇವನು ಒಡನೆ ದುಃಖದಿಂದ ಶಿಶುವನ್ನೆತ್ತಿ ಹೊರನಡೆದ. ತುಂಬಿ ಹರಿಯುತ್ತಿದ್ದ ಯಮುನೆಯನ್ನು ದಾಟುವುದೊಂದು ದೊಡ್ಡ ಸಮಸ್ಯೆಯಾಯಿತು. ನದಿಯ ಪ್ರವಾಹವನ್ನು ನೋಡುತ್ತ ದುಃಖದಿಂದ ನಿಂತುಬಿಟ್ಟ ವಸುದೇವ 'ಏನು ಮಾಡಲಿ ? ಎಲ್ಲಿಗೆ ಹೋಗಲಿ ? ದೈವ ನನ್ನನ್ನೇಕೆ ಹೀಗೆ ವಂಚಿಸುತ್ತಿದೆ ? ನಂದ ಗೋಪನ ಮನೆಗೆ ನಾನೆಂತು ಹೋಗಿ ಸೇರಲಿ' ಎಂದು ಚಿಂತಾಮಗ್ನನಾಗಿ ದಿಕ್ಕುತೋಚದೆ ಯಮುನೆಯನ್ನು ನೋಡುತ್ತಿದ್ದಂತೆ ಹರಿಯ ಮಾಯೆಯಿಂದ ನೀರ ಪ್ರವಾಹ ಇಳಿದು ಮಂಡಿಯಷ್ಟಕ್ಕೆ ಬಂದು ನಿಂತು ಅದನ್ನು ನೋಡಿ ಆನಂದದಿಂದ ನದಿಯನ್ನು ದಾಟಲಾರಂಭಿಸಿದ ವಸುದೇವ. ಆಗ ಕೈಯಿಂದ ಶಿಶು ಜಾರಿ ನೀರಿಗೆ ಬಿದ್ದಿತು. ಹರಿಯ ಮಾಯೆಯನ್ನರಿಯದ ವಸುದೇವ ಹಾಹಾಕಾರ ಮಾಡಿದ ''ಜಗನ್ನಾಥ, ಕಂಸನ ಕೈಯಿಂದ ಶಿಶುವನ್ನು ರಕ್ಷಿಸಲು ಯತ್ನಿಸಿದ ನನ್ನನ್ನು ವಿಧಿ ವಂಚಿಸುತ್ತಿದೆ ದೇವ, ಮಗುವನ್ನು ಕಾಪಾಡು'' ಎಂದು ಅಳುತ್ತ ಬೇಡಿದ. ತಂದೆ ಅಳುವುದನ್ನು ಕಂಡಾಗ ಕೃಷ್ಣ ದಯೆದೋರಿ ನೀರಾಟವಾಡುತ್ತಲೆ ಅವನ ಬಳಿ ಬಂದು ಸೇರಿದ. ಅಲ್ಲಿಂದ ನಂದಗೋಕುಲಕ್ಕೆ ಪ್ರಯಾಣ. ವಸುದೇವನು ಮಗುವನ್ನು ಯಶೋದೆಯ ಕೈಯಲ್ಲಿಟ್ಟು ಅವಳ ಮಗುವನ್ನು ತಂದು ದೇವಕಿಯ ಬಳಿಯಲ್ಲಿಟ್ಟ.

ಬೆಳಿಗ್ಗೆ ದೇವಕಿಯ ಪ್ರಸವ ವಾರ್ತೆ ಕಂಸನಿಗೆ ತಿಳಿಯಿತು. ಅವನಾಜ್ಞೆಯಿಂದ ದೂತರು ಬಂದು ವಸುದೇವ ದೇವಕಿಯರ ಬಳಿಯಿದ್ದ ಆ ಹೆಣ್ಣುಮಗುವನ್ನು ಬಲಾತ್ಕಾರದಿಂದ ಸೆಳೆದೊಯ್ದು ಕಂಸನ ಕೈಯಲ್ಲಿಟ್ಟರು. ಶುದ್ಧ ಬಂಗಾರದಂತೆ ಹೊಳೆವ ಮೈಮಿಂಚಿನಂತೆ ಹೊಳೆವ ಕಣ್ಣುಗಳು ಚಂದ್ರನಂಥ ಮುಖದ ಮೇಲೆ ಕುಣಿವ ನಗು. ಈ ಅದ್ಭುತ ಶಿಶುವನ್ನು ಕೈಯಲ್ಲಿ ಹಿಡಿದು ದಿಟ್ಟಿಸಿ ನೋಡಿದ ಕಂಸನಿಗೆ ಭಯವಾಯಿತು. ಬೇಗನೆ ದೂತರಿಗಾಜ್ಞಾಪಿಸಿದ, ಈ ಶಿಶುವನ್ನು ಬಂಡೆಗಲ್ಲಿನ ಮೇಲೆಸೆದು ಕೊಲ್ಲಿರಿ ದೂತರು ಹಾಗೆ ಮಾಡಲು ಯತ್ನಿಸಿದರು. ಆದರೆ ಗೌರಿ ಮಿಂಚಿನಂತೆ ಮೇಲೆ ಹಾರಿ ಶಿವನ ಬಳಿ ಸೇರಿದಳು. ಹೋಗುವಾಗ ಕಂಸನನ್ನು ಕುರಿತು ನುಡಿದಳು. ರಾಜನೆ, ನಿನ್ನ ಶತ್ರು ನಂದಗೋಕುಲದಲ್ಲಿ ಬೆಳೆಯುತ್ತಿದ್ದಾನೆ.

ಕಂಸನು ಇದನ್ನು ಕೇಳಿ ಸಂತಾಪಗೊಂಡು ತಂಗಿ ಪೂತನೆಯನ್ನು ಕರೆದು ಹೇಳಿದ ತಂಗಿ, ನೀನು ವೇಷಾಂತರದಿಂದ ನಂದನ ಮನೆಗೆ ಹೋಗಿ ಅವನ ಮಗನನ್ನು ಕೊಂದು ಬಾ, ನೀನು ಬಯಸುವುದನ್ನೆಲ್ಲ ನಾನು ಕೊಡುವೆ. ಪೂತನೆ ಒಪ್ಪಿದಳು. ಮಾಯೆಯಿಂದ ಸುಂದರಿಯಂತೆ ಕಾಣುತ್ತ ನಂದಗೋಪನ ಮನೆಗೆ ಹೋದಳು. ಎದೆಯಲ್ಲಿ ವಿಷವನ್ನು ತುಂಬಿಕೊಂಡು

ಮಗುವನ್ನೆತ್ತಿ ಎದೆ ಹಾಲು ಕೊಡುವಂತೆ ನಟಿಸಿದಳು. ಆದರೆ ತಾನೆ ಹತಳಾದಳು.

ಬಳಿಕ ಕೃಷ್ಣನ ಕೈಯಲ್ಲಿ ಶಕಟಾಸುರ ತೃಣಾವರ್ತರು ಮಡಿದರು. ಕಾಲಿಯನ ದಮನವೂ ಆಯಿತು. ಕಂಸನ ಸಂಹಾರವೂ ನಡೆಯಿತು. ಕಂಸನ ಮಲ್ಲರನ್ನೂ ಕೃಷ್ಣ ಯುದ್ಧದಲ್ಲಿ ಪರಾಭವ ಗೊಳಿಸಿದ.

ರಾಜನೆ, ಇದು ಕೃಷ್ಣ ಜನ್ಮದ ಕಥೆ. ಅದನ್ನು ಕೇಳಿದರೆ ಪಾಪ ಪರಿಹಾರವಾಗುವದು. ಆ ದಿನ ವ್ರತವನ್ನು ಆಚರಿಸಿದರೆ ಸಿಗುವ ಫಲವೆಷ್ಟೆಂದು ಹೇಳಲಿ ?

ತದಿಗೆ, ಷಷ್ಠಿ, ಅಷ್ಟಮಿ, ಏಕಾದಶಿಗಳು ಅವುಗಳ ಹಿಂದಿನ ತಿಥಿಗಳ ಸಂಪರ್ಕವಿರುವ ದಿನ ಉಪವಾಸಕ್ಕೆ ಯೋಗ್ಯವಲ್ಲ. ರೋಹಿಣಿ ನಕ್ಷತ್ರವಿಲ್ಲದಿದ್ದರೂ ಸರಿಯೆ, ನವಮಿಯ ಸಂಪರ್ಕವಿರುವ ಅಷ್ಟಮಿಯನ್ನು ವ್ರತಕ್ಕೆ ಸ್ವೀಕರಿಸಬೇಕು. ಸೂರ್ಯೋದಯ ಕಾಲದಲ್ಲಿ ಅಷ್ಟಮಿ ಅತ್ಯಲ್ಪವಿದ್ದು ದಿನವಿಡೀ ನವಮಿ ಇದ್ದರೂ ಒಂದು ಮುಹೂರ್ತಕಾಲ ರೋಹಿಣಿ ಇದ್ದರೆ ಆ ಅಷ್ಟಮಿ ಪೂರ್ತಿ ಇದ್ದಂತೆಯೆ ಸರಿ. ಅಷ್ಟಮಿಯು ಬುಧವಾರ ಇಲ್ಲವೆ ಸೋಮವಾರ ಬಂದಿದ್ದು, ರೋಹಿಣಿ ನಕ್ಷತ್ರವೂ ಸೇರಿದ್ದರೆ ಅಂದು ವ್ರತ ಮಾಡುವದು ಅತ್ಯುತ್ತಮ, ಬೇರೆ ಕೋಟಿ ವ್ರತಗಳನ್ನು ಮಾಡಬೇಕಾಗಿಲ್ಲ. ನವಮಿಯಂದು ಸೂರ್ಯೋದಯದಿಂದ ಸ್ವಲ್ಪ ಕಾಲವಾದರೂ ಅಷ್ಟಮಿ ಇದ್ದು, ಸೋಮವಾರ ಇಲ್ಲವೆ ಬುಧವಾರ ಕೂಡಿರುವುದು ಬಹು ದುರ್ಲಭ. ನೂರು ವರ್ಷಕ್ಕೊಮ್ಮೆಯಾದರೂ ಅದು ಸಿಗುವುದೊ ಇಲ್ಲವೊ ಹೇಳುವುದು ಕಷ್ಟ.

ಅಷ್ಟಮಿ ನವಮೀ ಯುಕ್ತವಾಗಿಲ್ಲದಿದ್ದರೆ ರೋಹಿಣಿ ನಕ್ಷತ್ರವಿಲ್ಲದಿದ್ದಾಗ ವ್ರತಕ್ಕೆ ಯೋಗ್ಯವಲ್ಲ. ಅಷ್ಟಮಿ, ಸಪ್ತಮಿಯ ಸಂಪರ್ಕ ಹೊಂದಿದ್ದರೂ ರೋಹಿಣಿ ನಕ್ಷತ್ರ ಕೂಡಿದರೆ ವ್ರತಕ್ಕೆ ಯೋಗ್ಯವೆನಿಸುವದು. ಸೋಮವಾರ ಬುಧವಾರಗಳು ಕೂಡಿದರೆ ಅಷ್ಟಮಿ ಕುಲಕೋಟಿಯನ್ನೇ ಉದ್ಧರಿಸೀತು. ನವಮಿ, ರೋಹಿಣಿ ನಕ್ಷತ್ರ ಸೋಮವಾರ, ಬುಧವಾರಗಳು ಇವಾವವೂ ಇಲ್ಲದಿರುವಾಗ ಅಷ್ಟಮಿಗೆ ಸಪ್ತಮಿಯ ಸಂಪರ್ಕವಿದ್ದರೆ ಗಂಗಾಜಲದ ಕಲಶದಲ್ಲಿ ಹೆಂಡದ ಒಂದು ಹನಿ ಸೇರಿದರೂ ಅಗ್ರಾಹ್ಯವೆನಿಸುವಂತೆ ಅಷ್ಟಮಿ ವ್ರತಕ್ಕೆ ಅಯೋಗ್ಯವೆನಿಸುವದು.

**ದಿಲೀಪ** :- ಹಿಂದೆ ಈ ವ್ರತವನ್ನು ಯಾರು ಮಾಡಿದರು ? ಅವರಿಗೇನು ಫಲ ದೊರಕಿತು ?

**ವಶಿಷ್ಠ** :- ಚಿತ್ರಸೇನ ಮಹಾರಾಜ ಈ ವ್ರತವನ್ನು ಮಾಡಿದ. ಮೊದಲಿಗೆ ಅವನು ಮಹಾಪಾಪಿಯಾಗಿದ್ದ. ಅಗಮ್ಯಾಗಮನ, ಸ್ವರ್ಣಸ್ತೇಯ ಬ್ರಹ್ಮಸ್ವಹರಣ ಸುರಾಪಾನ ಮಾಂಸಭಕ್ಷಣ, ಪ್ರಾಣಿವಧ, ಚಂಡಾಲ ಪತಿತರೊಡರೆ ಸಂಸರ್ಗ ಇವಾವುದನ್ನೂ ಆತ ಒಂದು ದಿನವೂ ಬಿಟ್ಟವನಲ್ಲ. ಕಾಡಿನಲ್ಲಿ ಒಂದು ಹುಲಿ ಕಾಣಿಸಿಕೊಂಡಾಗ ಅದನ್ನು ಬೇಟೆಯಾಡಲು ಹೊರಟು ಭಟರನ್ನು ಕರೆದು ನಾನೆ ಹುಲಿ ಕೊಲ್ಲುವೆ. ನೀವಾರೂ ಅದರ ಮೇಲೆ ಕೈಮಾಡಕೂಡದು, ಎಂದಾಜ್ಞಾಪಿಸಿದ. ಹುಲಿ ರಾಜನ ಕಣ್ಣ ಮುಂದೆಯೇ ಹೊರಟು ಹೋಯಿತು. ಇದರಿಂದ ಲಜ್ಜಿತನಾದ ರಾಜ ಹುಲಿಯನ್ನು ಹೇಗಾದರೂ ಬೇಟೆಯಾಡಲೇ ಬೇಕೆಂದು ಕಾಡಿನಲ್ಲೆಲ್ಲ ಓಡಾಡಿ ಬಳಲಿ ಬೆಂಡಾಗಿ ಹೋದ. ಹಸಿವು ನೀರಡಿಕೆಗಳು ಬಾಧಿಸಿದುವು. ಆಗ ಸಂಧ್ಯಾಕಾಲ ಯಮುನಾ ನದಿಯ ತೀರದಲ್ಲಿ ದೇವ

ಕನ್ನಿಕೆಯರು ಅಷ್ಟಮೀ ವ್ರತವನ್ನು ಬಹು ವೈಭವದಿಂದ ಮಾಡುತ್ತಿದ್ದರು. ನಾನಾ ಬಗೆಯ ಪೂಜಾ ಸಾಮಗ್ರಿಗಳು ಗಂಧ ಪುಷ್ಪ ಧೂಪ ದೀಪಗಳು ಬಗೆ ಬಗೆಯ ನೈವೇದ್ಯಗಳು ಕಣ್ಣ ಮುಂದೆ ಇದ್ದವು. ರಾಜನು ಆ ನೈವೇದ್ಯಗಳನ್ನು ಉಣ್ಣಲು ಬಯಸಿ ಬೇಡಿದ. ಅನ್ನವಿಲ್ಲದೆ ನನ್ನ ಪ್ರಾಣಗಳೆ ಹೋಗುತ್ತಿವೆ ಎಂದನು.

ರಾಜನೆ, ಇಂದು ಕೃಷ್ಣ ಜನ್ಮಾಷ್ಟಮಿ. ಏನನ್ನೂ ಉಣಕೂಡದು. ಉಂಡರೆ ಹದ್ದು, ಕಾಗೆ, ಕತ್ತೆ, ಗೋಮಾಂಸಗಳನ್ನು ಭಕ್ಷಿಸಿದಂತೆ. ಅದಕ್ಕೆ ಶಿಕ್ಷೆ ಯಮಲೋಕದಲ್ಲಿ ಸಿಗುತ್ತದೆ. ಅವನ ಕೈಯಿಂದ ಪಿತೃಗಳು ಏನನ್ನೂ ಸ್ವೀಕರಿಸಲೊಲ್ಲರು ಅವರೂ ನರಕದಲ್ಲಿ ಬೀಳುವರು ಎಂದರು ದೇವಕನ್ನಿಕೆಯರು. ಇದನ್ನು ಕೇಳಿ ರಾಜನು ತಾನೂ ವ್ರತವನ್ನು ಮಾಡಿದ. ಕೆಲವು ಹೂಗಳನ್ನು ಗಂಧ ವಸ್ತ್ರಗಳನ್ನು ತಂದು ಸಮರ್ಪಿಸಿದ. ತಿಥಿ ನಕ್ಷತ್ರಗಳ ಕೊನೆಯಲ್ಲಿ ವ್ರತದ ಪಾರಣವನ್ನೂ ಮಾಡಿದ. ಆದರಿಂದ ವಿಷ್ಣುಲೋಕ ಅವನಿಗೆ ಲಭ್ಯವಾಯಿತು. ದಿವ್ಯ ವಿಮಾನವನ್ನೇರಿ ಎಲ್ಲ ಪಿತೃಗಳೊಂದಿಗೆ ವಿಷ್ಣುಲೋಕಕ್ಕೆ ಆತ ಹೊರಟು ಹೋದ.

ಮಧುರೆಗೆ ಇಲ್ಲವೆ ದ್ವಾರಕೆಗೆ ಹೋಗಿ ಕೃಷ್ಣನ ಮುಖಾರವಿಂದದ ದರ್ಶನ ಮಾಡಿದ ಫಲ ಈ ವ್ರತದಿಂದ ದೊರೆಯುವುದು.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಬ್ರಹ್ಮ ಖಂಡದಲ್ಲಿ ಕೃಷ್ಣಜನ್ಮಾಷ್ಟಮೀವ್ರತವೆಂಬ ಹನ್ನೊಂದನೇಯ ಅಧ್ಯಾಯ ಮುಗಿದುದು*



## ಬ್ರಾಹ್ಮಣ ಮಹಿಮೆ

**ಅಧ್ಯಾಯ - ೧೨**

**ಶೌನಕ ಉವಾಚ**

**ಶೌನಕ** :- ಎಲ್ಲ ವರ್ಣಗಳಲ್ಲಿ ಶ್ರೇಷ್ಠನಾದ ಬ್ರಾಹ್ಮಣನ ಮಹಿಮೆಯನ್ನು ಬಿತ್ತರಿಸು. (ಬ್ರಾಹ್ಮಣ ಎಂದರೆ ಬ್ರಹ್ಮಜ್ಞಾನಿ ಎಂದು ಅರ್ಥ. ಇಲ್ಲಿ ಜಾತಿ ವಿವಕ್ಷಿತವಲ್ಲ).

**ಸೂತ** :- ಬ್ರಾಹ್ಮಣನು ಎಲ್ಲ ವರ್ಣಗಳಿಗೂ ಗುರು. ಎಲ್ಲ ದೇವತೆಗಳಿಗೂ ಆಶ್ರಯ ಸಾಕ್ಷಾತ್ ನಾರಾಯಣನಂತೆ ಇರುತ್ತಾನೆ. ಭಕ್ತಿಯಿಂದ ಆತನಿಗೆರಗಿದರೆ ಸಂಪತ್ತು ಮುಂತಾದವು ಹೆಚ್ಚುತ್ತವೆ. ಬ್ರಾಹ್ಮಣನನ್ನು ನೋಡಿ ಗರ್ವತಿರಸ್ಕಾರಗಳಿಂದ ನಮಿಸದವನಿಗೆ ಶಿರಚ್ಛೇದ ವಿಧಿಸಲು ಹರಿ ಬಯಸುತ್ತಾನೆ. ಬೇಡಿಬಂದ ಬ್ರಾಹ್ಮಣನನ್ನು ಕೋಪದಿಂದ ನೋಡುವವನ ಕಣ್ಣುಗಳಿಗೆ ಯಮನು ಕಾದಸೂಜಿಯ ಶಿಕ್ಷೆ ವಿಧಿಸುತ್ತಾನೆ. ಬ್ರಾಹ್ಮಣನನ್ನು ನಿಂದಿಸುವ ಬಾಯೊಳಗೆ ಯಮನು ಕಾದ ಕಬ್ಬಿಣವನ್ನು ತೂರಿಸುತ್ತಾನೆ. ಜ್ಞಾನಿಯು ಯಾರ ಮನೆಯಲ್ಲಿ ಉಣ್ಣುವನೊ ಅವನ ಮನೆಯಲ್ಲಿ ಕೃಷ್ಣನು ಉಣ್ಣುತ್ತಾನೆ. ಅವನ ಬ್ರಹ್ಮಹತ್ಯೆಯಂಥ ಪಾಪಗಳೆಲ್ಲವೂ ತೊಲಗುತ್ತವೆ. ಭಕ್ತಿಯಿಂದ ಜ್ಞಾನಿಯ ಕಾಲು ತೊಳೆದು ಒಂದುಹನಿ ನೀರು ಕುಡಿದರೂ ಎಲ್ಲ ಪಾಪಗಳೂ ಪರಿಹಾರವಾಗುತ್ತವೆ. ಬಂಜೆ ಪುತ್ರವತಿಯಾಗುತ್ತಾಳೆ. ಹುಟ್ಟಿದ ಮಕ್ಕಳು ಸಾಯದೆ ಉಳಿಯುತ್ತಾರೆ. ಲೋಕದ ಎಲ್ಲ

ತೀರ್ಥಗಳೂ ಸಾಗರದಲ್ಲಿ ಇರುವದಾದರೆ ಸಾಗರದಲ್ಲಿ ಎಲ್ಲ ತೀರ್ಥಗಳೂ ಜ್ಞಾನಿಯ ಪಾದಗಳಲ್ಲಿರುತ್ತವೆ. ಅವನ ಪಾದೋದಕ ಸೇವನೆಯಿಂದ ಸರ್ವತೀರ್ಥ ಸ್ನಾನದ ಫಲ.

ಹಿಂದೆ ದ್ವಾಪರದಲ್ಲಿ ಭೀಮನೆಂಬೊಬ್ಬ ಶೂದ್ರನು ವೈಶ್ಯವೃತ್ತಿ ನಿರತನಾಗಿ ವೈಶ್ಯ ಸ್ತ್ರೀಸಂಗದಲ್ಲಿ ಸುಖದಿಂದಿದ್ದ. ಸಾವಿರ ಬ್ರಹ್ಮಹತ್ಯೆಗಳನ್ನು ಆತ ಮಾಡಿದ್ದ. ಸದಾ ನಿಷ್ಠುರನಾಗಿದ್ದು ಗುರುತಲ್ಪಗಮನದಂಥ ಎಷ್ಟು ಪಾಪಗಳನ್ನು ಅವನು ಮಾಡಿದನೊ ಹೇಳಲು ಶಕ್ಯವಿಲ್ಲ ಒಂದು ದಿನ ಒಬ್ಬ ಜ್ಞಾನಿಯ ಮನೆಯಲ್ಲಿ ಕಳವು ಮಾಡಲು ಬಯಸಿ ಮನೆಬಾಗಿಲಲ್ಲಿ ನಿಂತು ಬಹು ದೈನ್ಯ ತೋರುತ್ತ ನುಡಿದ.

ಒಡೆಯ, ನೀನು ತುಂಬ ದಯಾಮಯನಂತೆ ಕಾಣುತ್ತಿರುವೆ ನಾನು ಹಸಿವಿನಿಂದ ಕಂಗೆಟ್ಟಿದ್ದೇನೆ. ಪ್ರಾಣ ಹೋಗುತ್ತಿದೆ ಅನ್ನ ನೀಡು.

**ಜ್ಞಾನಿ :-** ನೋಡು, ನನ್ನ ಮನೆಯಲ್ಲಿ ಇನ್ನಾರೂ ಇಲ್ಲ. ತಂದೆ ತಾಯಿಗಳಿಲ್ಲ, ಸೋದರರಿಲ್ಲ, ಮಡದಿಯಿಲ್ಲ. ಎಲ್ಲರೂ ನನ್ನನ್ನು ಬಿಟ್ಟು ಪರಲೋಕಕ್ಕೆ ಹೊರಟು ಹೋದರು. ನೀನೆ ಅಡಿಗೆ ಮಾಡು, ಉಣ್ಣು ಸುಖವಾಗಿರು. ನಾನು ಏಕಾಕಿ, ಭಾಗ್ಯಹೀನ. ಹರಿಯೊಬ್ಬನೆ ನನ್ನ ಜತೆಗೆ ಇಲ್ಲಿರುವನು ಅವನನ್ನು ಹೊರತು ಬೇರಾರನ್ನೂ ಅರಿಯೆ.

**ಭೀಮ :-** ವಿಪ್ರೋತ್ತಮ, ನನಗೂ ನನ್ನವರೆಂಬುವರು ಯಾರು ಇಲ್ಲ. ನಾನು ಶೂದ್ರ ನಿನ್ನ ಸೇವೆಮಾಡುತ್ತ ನಿನ್ನ ಮನೆಯಲ್ಲಿರುವೆ.

ಇದನ್ನು ಕೇಳಿ ಬ್ರಾಹ್ಮಣನು ಸಂತೋಷದಿಂದ ಅಡಿಗೆ ಮಾಡಿ ಉಣ ಬಡಿಸಿದ. ಭೀಮನೊ ಹಿಗ್ಗಿನಿಂದ ಅಲ್ಲಿಯೆ ಇದ್ದು ಬ್ರಾಹ್ಮಣನು ಮೆಚ್ಚುವಂತೆ ಸೇವೆ ಮಾಡ ತೊಡಗಿದ. ಇಂದೊ ನಾಳೆಯೊ ಈ ಬ್ರಾಹ್ಮಣನನ್ನು ಕೊಂದು ಹಣವನ್ನು ಅಪಹರಿಸುವೆನು. ಎಂದು ಮನಸ್ಸಿನಲ್ಲಿಯೇ ಹೇಳಿಕೊಳ್ಳುತ್ತ ಹೊರಗೆ ಭಕ್ತಿಯಿಂದ ಅವನ ಕಾಲು ತೊಳೆದು ನೀರನ್ನು ಕುಡಿಯುತ್ತಿದ್ದ, ತಲೆಯಲ್ಲಿ ಧರಿಸುತ್ತಿದ್ದ.

ಒಂದು ದಿನ ಒಬ್ಬ ಕಳ್ಳನು ಆ ಮನೆಗೆ ನುಗ್ಗಿದಾಗ ಭೀಮನು ಅವನನ್ನು ಹೊಡೆಯಲು ಕೋಲು ಹಿಡಿದು ನಿಂತ. ಆದರೆ ಕಳ್ಳನು ಅವನ ತಲೆಯನ್ನೊಡೆದು ಪರಾರಿಯಾದ. ಆಗ ಶಂಖ ಚಕ್ರಗದಾಧಾರಿಗಳಾದ ವಿಷ್ಣುದೂತರು ಬಂದು ಅವನನ್ನು ರಾಜಹಂಸಗಳು ಹೊರುವ ದಿವ್ಯ ವಿಮಾನದಲ್ಲಿ ಕುಳ್ಳಿರಿಸಿ ವಿಷ್ಣುಲೋಕಕ್ಕೊಯ್ದರು.

ಇದು ಬ್ರಾಹ್ಮಣ ಮಹಿಮೆ. ಭಕ್ತಿಯಿಂದ ಕೇಳಿದರೆ ಎಲ್ಲ ಪಾಪಗಳೂ ಪರಿಹಾರವಾಗುತ್ತವೆ.

*ಇತಿ ಪದ್ಮ ಮಹಾಪುರಾಣ ಭಾಗ-೨ರ ಸೂತಶೌನಕ ಸಂವಾದದಲ್ಲಿ*
*ಬ್ರಾಹ್ಮಣ ಮಹಾತ್ಮ್ಯವೆಂಬ ಹನ್ನೆರಡನೇಯ ಅಧ್ಯಾಯ ಮುಗಿದುದು*

—o—

**ಶೌನಕ ಉವಾಚಃ**

**ಶೌನಕ :-** ಏಕಾದಶೀ ವ್ರತದ ಮಹಿಮೆ ಏನು ? ಅದರ ಫಲವೇನು ? ಅದನ್ನು ಮಾಡದ್ದಿದರೆ ಏನು ಪಾಪವಿದೆ, ಹೇಳು.

**ಸೂತ :-** ಏಕಾದಶಿಯ ಮಹಿಮೆಯನ್ನು ಏನೆಂದು ಬಣ್ಣಿಸಲಿ ? ಅದರ ಹೆಸರನ್ನು ಕೇಳಿದರೆ ಭಯಂಕರ ಯಮದೂತರೂ ಅಂಜುವರು. ಎಲ್ಲ ವ್ರತಗಳಿಗಿಂತಲೂ ಶ್ರೇಷ್ಠವಾದುದು ಈ ಏಕಾದಶೀ ವ್ರತ. ಏಕಾದಶಿಯಂದು ಉಪವಾಸಮಾಡಿ ಜಾಗರಣ ಮಾಡಬೇಕು. ಹರಿಯನ್ನು ಪೂಜಿಸಬೇಕು. ತುಳಸೀ ದಳಗಳಿಂದ ಹರಿಪೂಜೆಮಾಡಿದರೆ ಒಂದೊಂದು ದಳಕ್ಕೂ ಕೋಟಿ ಯಜ್ಞಗಳ ಫಲವಿದೆ. ಆಗಮ್ಯಾಗಮನದ ಪಾಪವೂ ಏಕಾದಶಿ ಉಪವಾಸದಿಂದ ಪರಿಹಾರವಾಗುವುದು. ಹರಿದಿನದಲ್ಲಿ ಹರಿಗೆ ತುಪ್ಪದ ದೀಪವಿಟ್ಟರೆ ವಿಷ್ಣುಲೋಕ ಲಭಿಸುವುದು.

ಏಕಾದಶಿ ಮಹೋತ್ಸವವನ್ನಾಚರಿಸುವ ದೇಶವು ಧನ್ಯ. ಆ ದೇಶದ ರಾಜನೂ ಧನ್ಯ, ಯಮನು ತನ್ನ ದೂತರಿಗೆ ಹಗಲು ರಾತ್ರಿ ನೀಡುವ ಆಜ್ಞೆ ಒಂದೆ. ಅದು ಏನೆಂದರೆ ನಾರಾಯಣನ ಶಯನ ಪಾರ್ಶ್ವಪರಿವರ್ತನ ಪ್ರಬೋಧನಗಳ ಏಕಾದಶಿಗಳಲ್ಲಿ ನಿರಾಹಾರಿಗಳಾಗಿರುವವರನ್ನು ಪುಣ್ಯವಂತರನ್ನು ತನ್ನೆಡೆಗೆಂದೂ ತರಕೂಡದು. ಎಂದು ಏಕಾದಶಿಯಂದು ಉಣ್ಣುವವರ ಬಾಳಿಗೆ ಧಿಕ್ಕಾರ. ಅವರ ಸಂಪತ್ತಿಗೆ, ರೂಪ ಸೌಂದರ್ಯಕ್ಕೆ ಧಿಕ್ಕಾರ. ಅವರುಣ್ಣುವ ಅನ್ನ ಮಲಕ್ಕೆ ಸಮಾನ. ಆ ಅನ್ನದಲ್ಲಿ ಎಲ್ಲ ಪಾಪಗಳೂ ಸೇರಿಕೊಂಡಿರುತ್ತವೆ. ಅದನ್ನು ಉಂಡರೆ ಅಮಾವಾಸ್ಯೆಯಲ್ಲಿ ಸ್ತ್ರೀ ಸಂಗ ಮಾಡಿದ ಪಾಪ ಬರುತ್ತದೆ. ಶೋಕ ದಾರಿದ್ರ್ಯಗಳು ಮುತ್ತಿಕೊಳ್ಳುತ್ತವೆ.

**ಕುರ್ವತಾಂ ಸರ್ವಪಾಪಾನಿ ನರಕಾನ್ನಿಷ್ಕೃತಿರ್ಭವೇತ್**
**ನ ನಿಷ್ಕೃತಿರ್ಭವೇದನ ಭುಂಜತಾಂ ಚ ಹರೇರ್ದಿನೇ**

ಎಲ್ಲ ಪಾಪಗಳನ್ನು ಮಾಡುವವರಿಗೂ ನರಕದಿಂದ ಪರಿಹಾರವಿದೆ. ಹರಿದಿನದಲ್ಲಿ ಉಣ್ಣುವವರಿಗೆ ಮಾತ್ರ ಪರಿಹಾರವಿಲ್ಲ.

ಹರಿದಿನದಲ್ಲಿ ಉಣ್ಣುವ ಒಂದೊಂದು ಅಗುಳಿನಲ್ಲಿಯೂ ಕೋಟಿ ಬ್ರಹ್ಮಹತ್ಯಾಪಾತಕಗಳು ಸೇರಿಕೊಂಡಿರುತ್ತವೆ. ತಿರುಗಿ ತಿರುಗಿ ಒಂದೆ ಮಾತು ಹೇಳುತ್ತೇನೆ ಕೇಳಿ. ಹರಿದಿನದಲ್ಲಿ ಉಣಬೇಡಿ ಉಣಬೇಡಿ ಉಣಬೇಡಿ. ಏಕಾದಶಿ ಉಪವಾಸದಿಂದ ಸೂರ್ಯ ಚಂದ್ರರ ಗ್ರಹಣ ಕಾಲದಲ್ಲಿ ಗಂಗಾದಿ ಸಮಸ್ತ ತೀರ್ಥ ಸ್ನಾನಮಾಡಿದ ಫಲವಿದೆ. ಉತ್ಪಲಮಾಲೆಗಳಿಂದ ಹರಿಯನ್ನು ಆರಾಧಿಸಿ ವಿಧ್ಯುಕ್ತವಾಗಿ ಪಾರಣ ಮಾಡಿದರೆ ಪುನರ್ಜನ್ಮವಿಲ್ಲದಂತಾಗುವದು. ವಿಷ್ಣುಲೋಕ ದೊರೆಯುವುದು.

ತುಳಸಿಯಲ್ಲಿ ಭಕ್ತಿ, ಪರದ್ರವ್ಯದಲ್ಲಿ ಅರುಚಿ, ಇದ್ದುದರಲ್ಲಿ ತೃಪ್ತಿ, ದುರ್ಭಿಕ್ಷ ಕಾಲದಲ್ಲಿ ಅನ್ನದಾನ, ಗೋವು, ದ್ವಿಜರು, ಸ್ವಾಮಿ, ಸ್ತ್ರೀಯರಗಳ ರಕ್ಷಣೆಗಾಗಿ

ಪ್ರಾಣಕೊಡುವುದು ಇವೆಲ್ಲವೂ ವಿಷ್ಣುಲೋಕ ಪ್ರಾಪ್ತಿಗೆ ಸಾಧನಗಳು. ಹಾಗೆಯೆ ಏಕಾದಶಿ ವ್ರತವೂ ವಿಷ್ಣುಲೋಕ ಪ್ರಾಪ್ತಿ ಸಾಧನವಾಗಬಲ್ಲದು.

ಅರುಣೋದಯ ಕಾಲದಲ್ಲಿ ಏಕಾದಶಿಗೆ ದಶಮಿಯ ಸಂಪರ್ಕವಿದ್ದರೆ ಆ ಏಕಾದಶಿಯಲ್ಲಿ ವೈಷ್ಣವನು ಉಪವಾಸ ಮಾಡಕೂಡದು. ಆಗ ದ್ವಾದಶಿ ಉಪವಾಸ, ತ್ರಯೋದಶಿ ಪಾರಣ

**ಚತಸ್ರೋ ಘಟಿಕಾಃ ಪ್ರಾತರರುಣೋದಯ ಉಚ್ಯತೇ**
**ಯತೀನಾಂ ಸ್ನಾನಕಾಲೋಯಂ ಗಂಗಾಂಭಃ ಸದೃಶಃ ಸ್ಮೃತಃ**

ಸೂರ್ಯೋದಯಕ್ಕಿಂತ ಮೊದಲಿನ ನಾಲ್ಕು ಗಳಿಗೆಗಳ ಕಾಲಕ್ಕೆ ಅರುಣೋದಯ ವೆಂದು ಹೆಸರು. ಅದು ಯತಿಗಳಿಗೆ ಸ್ನಾನ ಕಾಲ. ಗಂಗಾಜಲದಂತೆ ಪವಿತ್ರವಾದ ಕಾಲ.

ಈ ಅರುಣೋದಯ ಕಾಲದಲ್ಲಿ ಅತ್ಯಲ್ಪ ದಶಿಮಿ ಸಂಪರ್ಕವಿದ್ದರೂ ಆ ಏಕಾದಶಿ ಹೆಂಡದ ಒಂದು ಹನಿಯಿಂದ ಕೂಡಿದ ತುಪ್ಪದ ಬಿಂದಿಗೆಯಂತಾಗುತ್ತದೆ. ಏಕಾದಶಿ ಪೂರ್ತಿ ಇದ್ದು ಮರುದಿನವೂ ಅದು ಅರುಣೋದಯ ಕಾಲದಲ್ಲಿದ್ದರೆ ಯತಿಗಳಿಗೆ ದ್ವಾದಶಿ ಉಪವಾಸ ಗೃಹಸ್ಥರಿಗೆ ಏಕಾದಶಿ ಉಪವಾಸ. ಏಕಾದಶಿ ಸ್ವಲ್ಪ ಮಾತ್ರವಿದ್ದು ಮರುದಿನ ದ್ವಾದಶಿ ಇಲ್ಲದಿದ್ದಲ್ಲಿ ತ್ರಯೋದಶಿಯಲ್ಲಿಯೇ ಪಾರಣ. ಹಾಗೆ ಮಾಡಿದರೆ ನೂರು ಯಜ್ಞಗಳ ಫಲವಿದೆ. ಏಕಾದಶಿ ಲುಪ್ತವಾಗಿದ್ದು ಮರುದಿನ ದ್ವಾದಶಿ ಮಾತ್ರವಿದ್ದರೆ ದ್ವಾದಶಿ ಉಪವಾಸ. ಏಕಾದಶಿ ಪೂರ್ತಿಯಿದ್ದು ಮರುದಿನ ಸುರ್ಯೋದಯ ಕಾಲದಲ್ಲಿಯೂ ಅದು ಇದ್ದರೆ ಮರುದಿನವೇ ಉಪವಾಸ.

**ಏಕಾದಶ್ಯಾಃ ಪರಂ ನಾಸ್ತಿ ಪರಲೋಕಸ್ಯ ಸಾಧನಂ**

ಏಕಾದಶಿ ಉಪವಾಸಕ್ಕಿಂತ ಉತ್ತಮವಾದ ಪರಲೋಕ ಸಾಧನವಿಲ್ಲ,

ಹಿಂದೆ ಕಾಂಚನವೆಂಬ ನಗರದಲ್ಲಿ ವಲ್ಲಭನೆಂಬೊಬ್ಬ ದೊಡ್ಡ ಧನಿಕನಿದ್ದ. ಅವನ ಮಡದಿ ಮಹಾ ರೂಪಸಿ, ಹೇಮಪ್ರಭೆ. ಆದರೆ ಕಲಿಯ ಸ್ವಭಾವ ಅವಳಲ್ಲಿ ಎದ್ದು ಕಾಣುತ್ತಿತ್ತು. ನಿತ್ಯ ಪತಿಯೊಡನೆ ಜಗಳವಾಡುತ್ತಿದ್ದಳು. ಗುರು ಹಿರಿಯರನ್ನು ಕೆಟ್ಟಮಾತುಗಳಿಂದ ಬೈಯ್ಯುತ್ತಿದ್ದಳು. ಅಡುಗೆಯ ಪಾತ್ರೆಯಲ್ಲಿಯೇ ಮೊದಲು ತಾನುಂಡು ಆ ಎಂಜಲನ್ನು ಗುರುಹಿರಿಯರಿಗೆ ಬಡಿಸುತ್ತಿದ್ದಳು. ಪರಪುರುಷರನ್ನು ಬಯಸಿ ತಾನು ಪತಿವ್ರತೆಯೆಂದು ಹೇಳಿಕೊಳ್ಳುತ್ತಿದ್ದಳು. ಪತಿಯ ಮನಸ್ಸಿಗೆ ಉದ್ವೇಗ ಉಂಟಾಗುವಂತೆ ನಡೆದುಕೊಳ್ಳುತ್ತಿದ್ದಳು. ಒಮ್ಮೆ ಅವಳ ಅನೀತಿಯನ್ನು ಕಂಡ ಪತಿ ಅವಳನ್ನು ಬೈದು ಹೊಡೆದನು. ಆಕೆ ಕೋಪದಿಂದ ಮನೆಬಿಟ್ಟು ಯಾರ ಕಣ್ಣಿಗೂ ಕಾಣಿಸದಂತೆ ಒಂದು ಶೂನ್ಯ ಗೃಹದಲ್ಲಿ ಅನ್ನ ನೀರು ಬಿಟ್ಟು ಮಲಗಿದಳು.

ದೈವವಶಾತ್ ಆ ದಿನ ಏಕಾದಶಿ, ವಿಷ್ಣುವಿನ ಪಾರ್ಶ್ವಪರಿವರ್ತನದ ದಿನ. ಮರುದಿನ ಶ್ರವಣ ದ್ವಾದಶಿ. ಆ ಎರಡು ದಿನ ಉಪವಾಸ ಮಾಡಿ ರಾತ್ರಿಯಲ್ಲಿ ಹೇಮಪ್ರಭೆ ಅಸು ನೀಗಿದಳು. ಯಮನಾಜ್ಞೆಯಂತೆ ಅವನ ಭಯಂಕರ ದೂತರು ಅವಳನ್ನು ಪಾಶದಿಂದ ಬಿಗಿದು ಒಯ್ಯತೊಡಗಿದರು. ಆದರೆ ಅಷ್ಟರಲ್ಲಿ ಶಂಖಚಕ್ರಗದಾಧಾರಿಗಳಾದ

ವಿಷ್ಣುದೂತರು ಬಂದು ಆಕೆಯ ಯಮಪಾಶವನ್ನು ಹರಿದೊಗೆದು ದಿವ್ಯ ರಥದಲ್ಲಿ ಅವಳನ್ನು ಕುಳ್ಳಿರಿಸಿ ವಿಷ್ಣುಲೋಕಕ್ಕೆ ಒಯ್ದರು.

ಇದು ಹರಿದಿನದ ಮಹಿಮೆ, ತಿಳಿಯದೆ ಈ ವ್ರತವನ್ನು ಮಾಡಿದರೂ ವಿಷ್ಣು ಲೋಕ ಲಭಿಸುತ್ತದೆ. ಏಕಾದಶಿಯಂತು ದೀಪ ಹಚ್ಚಿಡಲು ಹರಿಮಂದಿರಕ್ಕೆ ಹೋಗುವವನು ಹೆಜ್ಜೆ ಹೆಜ್ಜೆಗೂ ಅಶ್ವಮೇಧವನ್ನೂ ಮೀರಿದ ಫಲವನ್ನು ಹೊಂದುವನು.

ಹರಿದಿನದಲ್ಲಿ ಪುರಾಣಪಠನಶ್ರವಣಗಳನ್ನುಮಾಡಿದರೆ ಪ್ರತಿ ಅಕ್ಷರಕ್ಕು ಕಪಿಲದಾನದ ಫಲ ಲಭಿಸುತ್ತದೆ.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಬ್ರಹ್ಮಖಂಡದಲ್ಲಿ ಸೂತಶೌನಕ ಸಂವಾದದಲ್ಲಿ ಏಕಾದಶೀ ವ್ರತದ ಮಹಿಮೆಎಂಬ ಹದಿಮೂರನೇಯ ಅಧ್ಯಾಯ ಮುಗಿದುದು*



## ಪೌರ್ಣಮಾಸಿ ವಿಷ್ಣುಕಥನ

**ಅಧ್ಯಾಯ - ೧೪**

**ಶೌನಕ ಉವಾಚ**

**ಶೌನಕ :-** ಸೂತನೆ, ಪಾಪಗಳನ್ನು ಪರಿಹರಿಸಿ ಹರಿಯೊಲುಮೆಯನ್ನು ತಂದು ಕೊಡುವ ಪುಣ್ಯ ಕರ್ಮವನ್ನು ಉಪದೇಶಿಸು.

**ಸೂತ :-** ಹುಣ್ಣಿಮೆ ದಿನದಲ್ಲಿ ಭಕ್ತಿಯಿಂದ ಹರಿಯನ್ನು ಆರಾಧಿಸಿದರೆ ಕೋಟಿ ಜನ್ಮಗಳ ಪಾಪ ತೊಲಗುವುದು ಹರಿಕೃಪೆಯೂ ಹರಿದು ಬರುವುದು. ದ್ವಾದಶಿದಿನ ವಿಪ್ರರಿಗೆ ಅನ್ನದಾನ ಮಾಡಿದರೆ ಅರುಣೋದಯದಿಂದ ಕತ್ತಲೆ ಮಾಯವಾಗುವಂತೆ ಪಾಪಗಳು ಓಡಿಹೋಗುತ್ತವೆ. ಹರಿಗೆ ಪಂಚಾಮೃತಾಭಿಷೇಕಮಾಡಿದ ಫಲವೂ ದೊರಕುತ್ತದೆ. ಮಂತ್ರಪೂರ್ವಕವಾಗಿದ್ದರೆ ದಾನ ಸಫಲವಾಗುವುದು. ಅಮಂತ್ರಕವಾಗಿದ್ದರೆ ದಾನ ಮಾಡಿದ ಎಲ್ಲ ವಸ್ತುಗಳೂ ಕಲ್ಲಿನಂತೆಯೆ ಆಗುವುವು. ಶಾಸ್ತ್ರ ಓದದವನು ದಾನ ಸ್ವೀಕರಿಸಿದರೂ ಅದು ನರಕಕ್ಕೆ ಕಾರಣವಾಗುವುದು.

**ಯಥಾ ದಾರುಮಯೋ ಹಸ್ತೀ ಮೃಗಶ್ಚಿತ್ರಮಯೋ ಯಥಾ ।**
**ವಿದ್ಯಾಹೀನೋ ದ್ವಿಜೋ ವಿಪ್ರಸ್ತ್ರಯಸ್ತೇ ನಾಮಧಾರಕಾಃ ॥**

ಮರದ ಆನೆಯಂತೆ ಚಿತ್ರದ ಮೃಗದಂತೆ ಶಾಸ್ತ್ರ ಓದದ ದ್ವಿಜನಿರುತ್ತಾನೆ. ಈ ಮೂರು ಕೇವಲ ಹೆಸರಿಗೆ ಮಾತ್ರ.

ಮಾರ್ಗದಲ್ಲಿ ಬಿದ್ದಿರುವ ಕೊಳೆ ನೀರು ಗಾಳಿ ಬಿಸಿಲುಗಳಿಂದ ಶುದ್ಧವಾಗುವಂತೆ ಮನುಷ್ಯರ ಪಾಪಗಳೆಲ್ಲವೂ ವಿಷ್ಣು ಭಕ್ತರ ದರ್ಶನದಿಂದ ತೊಳೆದು ಹೋಗುತ್ತವೆ.

ಆಶ್ವಯುಜ ಮಾಸದ ಹುಣ್ಣಿಮೆ ದಿನ ಶ್ರೀಹರಿಗೆ ಅರಳು ತುಪ್ಪ ನಿವೇದಿಸಿ ಕ್ರೀಡೆಗಾಗಿ ತಾವರೇಕಾಯಿಗಳನ್ನು ಭಕ್ತಿಯಿಂದ ಸಮರ್ಪಿಸುವವನಿಗೆ ಶಾಶ್ವತವಾದ ವಿಷ್ಣುಲೋಕ ಸಿಗುವುದು. ಅದು ಎಷ್ಟು ತಾವರೆಕಾಯಿಗಳನ್ನು ಸಮರ್ಪಿಸುವನೋ ಅಷ್ಟು ದಿನಗಳ ಕಾಲ ವಿಷ್ಣುಲೋಕ ವಾಸ ದೊರಕುವುದು.

ಹಿಂದೆ ಕರವೀರಪುರದಲ್ಲಿ ಕಾಲದ್ವಿಜನೆಂಬ ಭಯಂಕರ ಪಾಪಿಯ ಮರಣಕಾಲದಲ್ಲಿ ಯಮದೂತರು ಅವನನ್ನೆಳೆದು ಯಮನ ಮುಂದೆ ತಂದು ನಿಲ್ಲಿಸಿದರು. 'ಚಿತ್ರಗುಪ್ತ, ಇವನ ಕರ್ಮಗಳಾವುವು ?' ಎಂದು ಯಮ ಕೇಳಿದಾಗ 'ಇವನು ದುರಾಚಾರಿ, ಪಾಪಿ, ಒಂದು ಅಣು ಮಾತ್ರವೂ ಪುಣ್ಯ ಮಾಡಿದವನಲ್ಲ. ನೂರು ಮನ್ವಂತರಗಳ ಕಾಲ ನರಕದಲ್ಲಿ ಬೆಂದು ಹೋಗತಕ್ಕವನು. ಮುಂದೆ ಅಷ್ಟು ಕಾಲ ಹಾವಾಗಿ ಬದುಕಿರಬೇಕು. ಎಂದು ಹೇಳಿದ ಚಿತ್ರಗುಪ್ತ. ಅದರಂತೆ ನೂರುಮನ್ವಂತರಗಳ ಕಾಲ ಕಾಲದ್ವಿಜನು ನರಕದಲ್ಲಿದ್ದು ಬಳಿಕ ಅಷ್ಟೇ ಕಾಲ ಹಾವಾಗಿ ಕಲ್ಲಿನೆಡೆಗಳಲ್ಲಿ ಬದುಕಿದ. ಒಮ್ಮೆ ಅವನು ಆಶ್ವಯುಜ ಮಾಸದ ಹುಣ್ಣಿಮೆ ದಿನ ಅರಳು ಮತ್ತು ತಾವರೆಕಾಯಿಗಳನ್ನು ಬಿಲದಿಂದ ಹೊರಗೆ ಹಾಕಿದಾಗ ಅವು ದೈವವಶಾತ್ ಅಲ್ಲಿ ಇದ್ದ ಹರಿಯ ವಿಗ್ರಹದ ಮುಂದೆ ಬಿದ್ದವು, ಹರಿಯು ದಯಾಳು. ಇನ್ನೊಬ್ಬರ ದುಃಖಗಳನ್ನು ನಿವಾರಿಸುವವ. ಅದರಿಂದ ಹಾವಾಗಿ ಜೀವಿಸುತ್ತಿದ್ದ ಕಾಲಧ್ವಜ ಸತ್ತಾಗ, ಯಮಪಟ್ಟಣಕ್ಕೆ ಅವನನ್ನೆಳೆಯಲು ಬಂದ ಯಮ ದೂತರನ್ನು ವಿಷ್ಣುದೂತರು ಓಡಿಸಿ ಯಮಪಾಶವನ್ನೂ ಹರಿದೊಗೆದು ದಿವ್ಯ ರಥದಲ್ಲಿ ಅವನನ್ನಿರಿಸಕೊಂಡು ವಿಷ್ಣುಲೋಕಕ್ಕೊಯ್ದರು. ಅವನು ತಿರುಗಿ ಸಂಸಾರಕ್ಕೆ ಬರಲೇ ಇಲ್ಲ.

ತಿಳಿಯದೆ ಮಾಡಿದ ಕರ್ಮಕ್ಕೆ ಇಂಥ ಫಲವಿದೆ ಎಂದ ಮೇಲೆ ಭಕ್ತಿಯಿಂದ ಅದನ್ನು ಮಾಡಿದರೆ ಎಷ್ಟು ಪುಣ್ಯ ದೊರಕೀತು ? ಈ ಅಧ್ಯಾಯವನ್ನು ಓದಿದರೂ ಕೇಳಿದರೂ ಪಾಪ ಪರಿಹಾರವಾಗುವುದು ವಿಷ್ಣುವಿನ ಅನುಗ್ರಹವೂ ದೊರೆಯುವುದು.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಬ್ರಹ್ಮಖಂಡದಲ್ಲಿ ಸೂತಶೌನಕ ಸಂವಾದದಲ್ಲಿ ಪೌರ್ಣಮಾಸಿ ವಿಷ್ಣುಕಥನವೆಂಬ ಹದಿನಾಲ್ಕನೇಯ ಅಧ್ಯಾಯ ಮುಗಿದುದು*



## ವಿಷ್ಣುಪಾದೋದಕ ಮಹಿಮೆ

**ಅಧ್ಯಾಯ - ೧೫**

**ಶೌನಕ ಉವಾಚ**

**ಶೌನಕ :-** ವಿಷ್ಣುಪಾದೋದಕದ ಮಹಿಮೆಯನ್ನು ಉಪದೇಶಿಸು.

**ಸೂತ :-** ವಿಷ್ಣುಪಾದೋದಕವು ಸಮಸ್ತ ಪಾತಕಗಳನ್ನು ಧ್ವಂಸಮಾಡಬಲ್ಲುದು. ಅದರ ಒಂದು ಹನಿಗೆ ಎಲ್ಲ ತೀರ್ಥಗಳ ಫಲ ನೀಡಬಲ್ಲ ಸಾಮರ್ಥ್ಯವಿದೆ. ಅಕಾಲ ಮರಣವನ್ನು ಅದು ತಡೆಗಟ್ಟಬಲ್ಲದು. ತುಲಸೀದಳದೊಂದಿಗೆ ಅದನ್ನು ತಲೆಯಲ್ಲಿ ಧರಿಸಿದರೆ ವಿಷ್ಣುಲೋಕ ದೊರೆಯುವುದು. ಮೇರುವಿನಷ್ಟು ಗಾತ್ರದ ಹೊನ್ನಿನ ರಾಶಿಯನ್ನು ಕೊಟ್ಟರೆ, ಸಾವಿರಕೋಟಿ ಗೋದಾನ ಮಾಡಿದರೆ, ಸಾವಿರಕೋಟಿ ಯಜ್ಞಗಳನ್ನು ಮಾಡಿದರೆ, ಕೋಟಿಕನ್ಯಾದಾನ ಮಾಡಿದರೆ, ಕೋಟಿಗಟ್ಟಲೆ ಗಜ ಅಶ್ವದಾನಗಳನ್ನು ಮಾಡಿದರೆ, ಸಪ್ತದ್ವೀಪಗಳಿಂದ ಕೂಡಿದ ಸಮಸ್ತ ಭೂಮಿಯನ್ನು ದಾನಮಾಡಿದರೆ ವಿಷ್ಣುಪಾದೋದಕ ಸ್ಪರ್ಶದ ಫಲ ಸಿಗಲಾರದು. ಹೆಚ್ಚೇಕೆ ವಿಷ್ಣುಪಾದೋದಕ ಸ್ಪರ್ಶದಿಂದ ಪಾಪಿಯೂ ವೈಕುಂಠಕ್ಕೆ ಹೋಗಬಲ್ಲನು.

**ಶೌನಕ :-** ವಿಷ್ಣು ಪಾದೋದಕ ಸ್ಪರ್ಶನ ಪಾನಗಳಿಂದ ವಿಷ್ಣುಲೋಕವನ್ನು ಹಿಂದೆ ಯಾರು ಪಡೆದರು ?

**ಸೂತ :-** ಹಿಂದೆ ತ್ರೇತಾಯುಗದಲ್ಲಿ ಸುದರ್ಶನನೆಂಬ ಒಬ್ಬ ಪಾಪಿ ಬ್ರಾಹ್ಮಣನಿದ್ದ. ಹರಿದಿನದಲ್ಲಿ ಆತನೆಂದೂ ಊಟ ಮಾಡದಿರುತ್ತಿರಲಿಲ್ಲ. ಶಾಸ್ತ್ರನಿಂದೆ. ವ್ರತನಿಂದೆಗಳನ್ನು ನಿತ್ಯ ಮಾಡುತ್ತಿದ್ದ. ತನ್ನ ಹೊಟ್ಟೆ ತುಂಬಿದರೆ ಸರಿ, ಇನ್ನೇನೂ ಅವನಿಗೆ ಬೇಡವಾಗಿತ್ತು. ಅವನು ಸತ್ತಾಗ ಯಮದೂತರು ಅವನನ್ನೆಳೆದೊಯ್ದು ಯಮನ ಮುಂದೆ ನಿಲ್ಲಿಸಿದಾಗ, ಯಮನು ಚಿತ್ರಗುಪ್ತನಲ್ಲಿ ಕೇಳಿದ. 'ಈ ಬ್ರಾಹ್ಮಣ ಪಾಪಿಯಂತೆ ಕಾಣುತ್ತಾನೆ. ಇವನು ಮಾಡಿದ ಪುಣ್ಯ, ಪಾಪ, ಕರ್ಮಗಳೇನು ? ಹೇಳು' - 'ಪ್ರಭು, ಪಾಪಕರ್ಮಗಳೇನೆಂದು ಮಾತ್ರ ಹೇಳುತ್ತೇನೆ ಕೇಳು. ಪುಣ್ಯ ಒಂದು ಅಣು ಮಾತ್ರವೂ ಇವನಲ್ಲಿಲ್ಲ. ಹರಿದಿನದಲ್ಲಿ ಉಂಡ ನರಾಧಮನೀತ ನರಕದಲ್ಲಿ ಮಲವನ್ನುಣ್ಣುವ ಶಿಕ್ಷೆಗೆ ಅರ್ಹ. ನೂರು ಮನ್ವಂತರಗಳ ಕಾಲ ನರಕವಾಸ. ಬಳಿಕ ಹಂದಿಯ ಜನ್ಮ ಇವನಿಗಾಗಲಿ'. ಎಂದ ಚಿತ್ರಗುಪ್ತ.

ಯಮನಾಜ್ಞೆಯಂತೆ ನೂರು ಮನ್ವಂತರಗಳಕಾಲ ಅವನು ನರಕದಲ್ಲಿದ್ದು ಬಳಿಕ ಹಂದಿಯಾಗಿ ಜನ್ಮವೆತ್ತಿದ. ಬಳಿಕ ಕಾಗೆಯಾಗಿ ಹುಟ್ಟಿದ. ಆಗ ಒಮ್ಮೆ ಹರಿಮಂದಿರದ ಬಾಗಿಲಲ್ಲಿದ್ದ ಹರಿಪಾದೋದಕವನ್ನು ಅವನು ಕುಡಿದು ಎಲ್ಲ ಪಾಪಗಳಿಂದ ಮುಕ್ತನಾದ. ಆ ದಿನ ದೈವವಶಾತ್ ಒಬ್ಬ ಬೇಡನ ಬಲೆಯಲ್ಲಿ ಬಿದ್ದು ಮರಣಹೊಂದಿ ರಾಜಹಂಸಗಳು ಹೊರುವ ದಿವ್ಯ ವಿಮಾನದಲ್ಲಿ ಹರಿಲೋಕಕ್ಕೆ ತೆರಳಿದ. ಹರಿಪಾದೋದಕದ ಮಹಿಮೆ ಇದು. ಶ್ರವಣಮಾತ್ರದಿಂದಲೇ ಪಾಪಗಳನ್ನು ಕಳೆಯುವಂತಹದು.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಬ್ರಹ್ಮಖಂಡದಲ್ಲಿ ಸೂತ ಶೌನಕ ಸಂವಾದದಲ್ಲಿ ವಿಷ್ಣುಪಾದೋದಕ ಮಹಿಮೆವೆಂಬ ಹದಿನೈದನೇಯ ಅಧ್ಯಾಯ ಮುಗಿದುದು*



## ಆಗಮ್ಯಾಗಮನ, ಅಭಕ್ಷ್ಯ ಭಕ್ಷಣ ಪ್ರಾಯಶ್ಚಿತ್ತ | ಅಧ್ಯಾಯ - ೧೬

**ಶೌನಕ ಉವಾಚ**

**ಶೌನಕ :-** ಆಗಮ್ಯಾಗಮನಮಾಡಿದವನಿಗೇನು ಪ್ರಾಯಶ್ಚಿತ್ತ ?

**ಸೂತ :-** ಬ್ರಾಹ್ಮಣನು ಚಂಡಾಲ ಸ್ತ್ರೀಸಂಗಮಾಡಿದರೆ ಮೂರು ದಿನ ಉಪವಾಸವಿದ್ದು ಪ್ರಾಜಾಪತ್ಯ ವ್ರತವನ್ನಾಚರಿಸಬೇಕು. ಶಿಖಾಸಹಿತ ವಪನಮಾಡಿಕೊಂಡು ಎರಡು ಗೋದಾನ ದಕ್ಷಿಣೆಗಳನ್ನು ನೀಡಬೇಕು. ಕ್ಷತ್ರಿಯ ವೈಶ್ಯರು ಆ ಪಾಪಕ್ಕೆ ಪ್ರಾಜಾಪತ್ಯವ್ರತ ಎರಡು ಗೋಮಿಥುನಗಳನ್ನು, ಶೂದ್ರನು ಪ್ರಾಜಾಪತ್ಯವ್ರತ ನಾಕು ಗೋಮಿಥುನ ದಾನಗಳನ್ನೂ ಮಾಡಬೇಕು.

ತಾಯಿ ಸೋದರಿ ಮಗಳು ಸೊಸೆ ಇವರ ಸಂಸರ್ಗ ಮಾಡಿದರೆ ಮೂರು ಪ್ರಾಜಾಪತ್ಯ ಮೂರು ಚಾಂದ್ರಾಯಣ ವ್ರತಗಳನ್ನೂ ಮೂರು ಗೋಮಿಥುನ ದಾನಗಳನ್ನೂ ಮಾಡಿ ಶಿಖಾಸಹಿತ ವಪನಮಾಡಿಸಿಕೊಂಡು ಪಂಚಗವ್ಯವನ್ನು ಸೇವಿಸಬೇಕು. ಅಗ್ನಿಯಲ್ಲಿ ಹೋಮಮಾಡಬೇಕು. ಮಲತಾಯಿ, ತಾಯಿಯ ಸೋದರಿ, ಗುರುಪತ್ನಿ ಅತ್ತೆ ಅತ್ತಿಗೆ

ಇವರ ಸಂಗಮಾಡಿದರೆ ಎರಡು ಪ್ರಾಜಾಪತ್ಯ ಮೂರು ಚಾಂದ್ರಾಯಣ ವ್ರತಗಳನ್ನೂ ಐದು ಗೋಮಿಥುನ ದಾನಗಳನ್ನೂ ಮಾಡಿ ದಕ್ಷಿಣೆ ನೀಡಬೇಕು. ಗೋವಿನ ಸಂಸರ್ಗ ಮಾಡಿದರೆ ಮೂರುದಿನ ಉಪವಾಸ. ಗೋದಾನ ಅನ್ನದಾನಗಳನ್ನು ಮಾಡಬೇಕು. ವೇಶ್ಯೆ ಕತ್ತೆ ಹಂದಿ ಕೋತಿ ಎಮ್ಮೆಗಳ ಸಂಗ ಮಾಡಿದರೆ ಕಂಠದವರೆಗೆ ಗೋಮಯ ನೀರನ್ನು ಹಚ್ಚಿಕೊಂಡು ಮೂರುದಿನ ಉಪವಾಸ ಮಾಡಬೇಕು. ಬ್ರಾಹ್ಮಣ ಸ್ತ್ರೀಸಂಗ ಮಾಡಿದರೆ ಮೂರು ಪ್ರಾಜಾಪತ್ಯ ಮೂರು ಚಾಂದ್ರಾಯಣಗಳನ್ನು ಮಾಡಿ ಮೂರು ಗೋದಾನ ಮಾಡಬೇಕು. ಪರಸ್ತ್ರೀ ಸಂಗ ಮಾಡಿದರೆ ಕೃಚ್ಛ್ರಸಾಂತಪನವನ್ನು ಮಾಡಬೇಕು. **"ಯಥಾರ್ಗಲಾ ತಥಾ ಯೋಷಿತ್ ತಸ್ಮಾತ್ತಾಂ ಪರಿವರ್ಜಯೇತ್".** ಪರಸ್ತ್ರೀ ಸಂಗವೆಂಬುದು ಶ್ರೇಯಸ್ಸಿನ ಬಾಗಿಲು ಮುಚ್ಚುವ ಕದದಂತೆ. ಅದರಿಂದ ಅದನ್ನು ದೂರವಿಟ್ಟರೆ ಮಾತ್ರ ಶ್ರೇಯಸ್ಸು ಲಭಿಸುವ ಸಾಧ್ಯತೆ ಇದೆ. ವರ್ಣ ಬಾಹ್ಯ ಅಥವಾ ನೀಚಸ್ತ್ರೀಯನ್ನು ಕೂಡಿದರೆ ಪ್ರಾಜಾಪತ್ಯ ವ್ರತವನ್ನು ಮಾಡಬೇಕು.

**ಅಂಗಾರ ಸದೃಶೀ ಯೋಷಿತ್ ಸರ್ಪಿಷ್ಕುಂಭಸಮಃಪುಮಾನ್**
**ತಸ್ಯಾಃ ಪರಿಸರೇ ಬ್ರಹ್ಮನ್ ನ ಸ್ಥಾತವ್ಯಂ ಕದಾಚನ ॥**

ಪರಸ್ತ್ರೀಯು ಉರಿವ ಕೆಂಡವಿದ್ದಂತೆ, ಪುರುಷನೆಂದರೆ ಅದೊಂದು ತುಪ್ಪದ ಬಿಂದಿಗೆ. ಅದು ಎಂದೂ ಪರಸ್ತ್ರೀಯರ ಬಳಿಯಲ್ಲಿರಬಾರದು.

ಪರಪುರುಷನ ಸಂಗದಿಂದ ಗರ್ಭವತಿಯಾಗುವ ಸ್ತ್ರೀಯನ್ನು ಸರ್ವಥಾ ತ್ಯಾಗಮಾಡಬೇಕು. ಪ್ರಾಜಾಪತ್ಯವ್ರತ, ಪಂಚಗವ್ಯ ಪ್ರಾಶನ, ಎರಡು ಗೋದಾನಗಳನ್ನು ಮಾಡಿದರೆ ಅವಳು ಶುದ್ಧಳಾಗುವಳು.

ತಿಳಿಯದೆ ಮಲಮೂತ್ರಗಳನ್ನು ಸೇವಿಸಿದರೆ, ಮದ್ಯವನ್ನು ಸ್ಪರ್ಶಿಸಿದರೆ, ಎರಡು ಪ್ರಾಜಾಪತ್ಯ ವ್ರತಗಳನ್ನು ಹನ್ನೊಂದು ಗೋದಾನಗಳನ್ನು ಮಾಡಿ ತೀರ್ಥಯಾತ್ರೆ ಮಾಡಬೇಕು. ಚಂಡಾಲನ ಅನ್ನ ನೀರು ಸೇವಿಸಿದರೆ, ಚಾಂದ್ರಾಯಣ ವ್ರತ. ಶಿಖಾಸಹಿತವಪನ, ಪಂಚಗವ್ಯ ಪ್ರಾಶನಗಳನ್ನೂ ಮಾಡಬೇಕು. ವೃಷಲಾನ್ನ, ಸೂತಕಾನ್ನ, ಅಭೋಜ್ಯಾನ್ನ, ನೀರು, ಸೇವಿಸಿದರೆ ಕ್ರಮವಾಗಿ ಒಂದು ಎರಡು ಮೂರು ನಾಕು ಗೋದಾನ ಮಾಡಬೇಕು. ಶೂದ್ರೋಚ್ಛಿಷ್ಟಭೋಜನ ಮಾಡಿದರೆ ಎರಡು ಪ್ರಾಜಾಪತ್ಯ, ಮೂರು ಚಾಂದ್ರಾಯಣವ್ರತ, ಎರಡು ಗೋದಾನ, ಪಂಚಗವ್ಯ ಪ್ರಾಶನ, ಅಗ್ನಿಯಲ್ಲಿ ಹೋಮ, ಪಂಡಿತ ಭೋಜನಗಳಿಂದ ಶುದ್ಧಿ. ಇಲಿಮುಂಗಸಿ ಬೆಕ್ಕುಗಳು ಅನ್ನವನ್ನು ತಿಂದರೆ ತಿಲದರ್ಭೋದಕಗಳಿಂದೆ ಪ್ರೋಕ್ಷಿಸಿದರೆ ಶುದ್ಧಿ. ಈರುಳ್ಳಿ, ಬೆಳ್ಳುಳ್ಳಿ, ನುಗ್ಗೆ, ಸೋರೆ, ಮಾಂಸ ಭಕ್ಷಣ ಮಾಡಿದರೆ ಚಾಂದ್ರಾಯಣ ವ್ರತವನ್ನು ಮಾಡಬೇಕು. ಮದ್ಯ ಮಾಂಸ ಪ್ರಿಯನಾದ ನೀಚಕರ್ಮಿ ಕ್ಷುದ್ರನನ್ನು ಪತಿತನಂತೆ ದೂರವಿಡಬೇಕು. ಮದ್ಯ ಮಾಂಸಗಳನ್ನು ಬಿಟ್ಟು ದ್ವಿಜಸೇವಾಸಕ್ತನಾದರೆ ಅವನು ಉತ್ತಮ ನರನೆನಿಸುವನು. ತಿಳಿಯದೆ ಸೂತಕ ಮೃತಕಗಳಲ್ಲಿ ಯೋಜನಮಾಡಿದರೆ, ಪಂಡಿತನು ಹತ್ತು ಸಾವಿರ ಗಾಯತ್ರಿ ಜಪಮಾಡಬೇಕು. ಕ್ಷತ್ರಿಯ ವೈಶ್ಯರು ಐದು ಸಾವಿರ ಜಪಮಾಡಬೇಕು. ಶೂದ್ರನು ಪಂಚಗವ್ಯ ಪ್ರಾಶನ ಮಾಡಬೇಕು. ನೀಚರ ಪಾತ್ರೆಯಲ್ಲಿ ನೀರು ತುಪ್ಪ

ಮೊಸರು ಸೇವಿಸಿದರೆ ಪ್ರಾಜಾಪತ್ಯ ವ್ರತಮಾಡಬೇಕು. ದಾನ ಹೋಮಗಳನ್ನು ನಡೆಸಬೇಕು. ಶೂದ್ರರಿಗೆ ಉಪವಾಸವಿಲ್ಲ, ದಾನದಿಂದಲೇ ಶುದ್ಧಿ. ನೀಚರಿಂದ ಹೊಡೆಸಿಕೊಂಡರೆ ಶಿಖಾಸಹಿತವಪನ ಒಂದುದಿನದ ಉಪವಾಸಗಳಿಂದ ಶುದ್ಧಿ. ಮದ್ಯಪಾನಮಾಡಿದವನನ್ನು ಕುಲದಿಂದಲೇ ಬಹಿಷ್ಕರಿಸಬೇಕು.

ಮೂರುದಿನ ಬೆಳಿಗ್ಗೆ ಮೂರುದಿನ ರಾತ್ರಿ ಮೂರುದಿನ ಆಯಾಚಿತವಾಗಿ ಸಿಗುವ ಅನ್ನ ಉಂಡು ಬಳಿಕ ಮೂರುದಿನ ಉಪವಾಸ ಮಾಡಿದರೆ ಅದು **ಪ್ರಾಜಾಪತ್ಯ ವ್ರತ**ವೆನಿಸುತ್ತದೆ. ಗೋಮೂತ್ರ ಗೋಮಯ ಹಾಲು ಮೊಸರು ತುಪ್ಪ ಕುಶೋದಕಗಳನ್ನು ಎರಡುದಿನ ಕುಡಿದು ಒಂದುದಿನ ಉಪವಾಸ ಮಾಡಿದರೆ **ಕೃಚ್ಛ್ರ ಸಾಂತಪನ** ವಾಗುತ್ತದೆ. ಮೂರುದಿನ ಬೆಳಿಗ್ಗೆ ಮತ್ತು ಮೂರುದಿನ ರಾತ್ರಿ ಒಂದು ತುತ್ತು ಅನ್ನ ಉಂಡು ಮೂರುದಿನ ಆಯಾಚಿತಾನ್ನ ಉಂಡು ಮೂರುದಿನ ಉಪವಾಸವಿದ್ದರೆ ಅದು **ಅತಿಕೃಚ್ಛ್ರ**ವೆನಿಸುವುದು. ಬಿಸಿನೀರು ಬಿಸಿಹಾಲು ಬಿಸಿತುಪ್ಪಗಳನ್ನು ಮೂರು ಮೂರುದಿನ ಕುಡಿದರೆ **ತಪ್ತಕೃಚ್ಛ್ರ**ವೆನಿಸುವದು. ಹನ್ನೆರಡುದಿನ ಪೂರ್ತಿ ಉಪವಾಸವಿದ್ದರೆ **ಪರಾಕ**ವೆಂಬ ಕೃಚ್ಛ್ರವಾಗುವುದು. ಶುಕ್ಲಪಕ್ಷದಲ್ಲಿ ಒಂದೊಂದು ತುತ್ತು ಅನ್ನವನ್ನು ಹೆಚ್ಚಿಸಿ ಕೃಷ್ಣಪಕ್ಷದಲ್ಲಿ ಒಂದೊಂದು ತುತ್ತು ಕಡಿಮೆ ಮಾಡಿ ಅಮವಾಸ್ಯೆ ಉಪವಾಸವಿದ್ದರೆ **ಚಾಂದ್ರಾಯಣವ್ರತ** ವೆನಿಸುವುದು. ಒಂದುತಿಂಗಳ ಕಾಲ ಬೆಳಿಗ್ಗೆ ನಾಲ್ಕು, ರಾತ್ರಿ ನಾಲ್ಕು ತುತ್ತು ಅನ್ನ ಉಂಡರೆ **ಶಿಶು ಚಾಂದ್ರಾಯಣ** ವೆನಿಸುವುದು.

ಕುಂಬಳಕಾಯಿಯನ್ನು ಸ್ತ್ರೀಯರು ಕುಯ್ದರೆ ಮೂರುದಿನ ಪಂಚಗವ್ಯ ಸೇವಿಸಬೇಕು. ಐದು ಕಂಬಳಕಾಯಿ, ಚಿನ್ನ ಬಟ್ಟೆಗಳನ್ನು ದಾನಮಾಡಬೇಕು. ಆಗ ಅವರ ಕೈಯಿಂದ ನೀರು ಅಡಿಗೆಗಳನ್ನು ಸ್ವೀಕರಿಸಬಹುದು.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಬ್ರಹ್ಮಖಂಡದಲ್ಲಿ ಅಗಮ್ಯಾಗಮನ, ಅಭಕ್ಷ್ಯ ಭಕ್ಷಣ ಪ್ರಾಯಶ್ಚಿತ್ತವೆಂಬ ಹದಿನಾರನೇಯ ಅಧ್ಯಾಯ ಮುಗಿದುದು*

—o—

**ಶೌನಕ ಉವಾಚ**

**ಶೌನಕ** :- ಅಜ್ಞಾನವೆಂಬ ಕತ್ತಲ ಬಾವಿಯಲ್ಲಿ ಕಪ್ಪೆಗಳಂತಿರುವ ಮಾನವರು ಯಾವ ಪುಣ್ಯಕರ್ಮದಿಂದ ಸಂಸಾರ ಸಾಗರವನ್ನು ದಾಟಬಲ್ಲರು ?.

**ಸೂತ** :- ರಾಧಾಕೃಷ್ಣರಿಗೆ ಪ್ರಿಯವಾದ ಕಾರ್ತೀಕ ಮಾಸದಲ್ಲಿ ಪ್ರಾತಃ ಸ್ನಾನಮಾಡಬೇಕು. ರಾಧಾದಾಮೋದರರನ್ನು ಭಕ್ತಿಯಿಂದ ಪೂಜಿಸಬೇಕು. ಮಾಂಸ ಮದ್ಯ ಮುಂತಾದುವನ್ನು ವರ್ಜಿಸಬೇಕು. ಹೀಗೆ ಮಾಡಿದರೆ ಹರಿಯ ಗೋಲೋಕ ಲಭ್ಯವಾಗುವುದು. ಪತಿಸೇವಾಪರಾಯಣಾಯರಾಗಿ ಕಾರ್ತೀಕದಲ್ಲಿ ರಾಧಾದಾಮೋದರರಿಗೆ ಧೂಪ ದೀಪ ಗಂಧ ಮಾಲ್ಯ, ನೈವೇದ್ಯಗಳನ್ನೂ ನೀಡುವ ಸ್ತ್ರೀಯರು ವಿಷ್ಣುಲೋಕವನ್ನು ಸೇರುವರು. ಈ ಮಾಸದಲ್ಲಿ ದ್ವಿಜರಿಗೆ ಏನು ದಾನಮಾಡಿದರೂ ಅಕ್ಷಯಫಲವಿದೆ.

ಕಾರ್ತೀಕದಲ್ಲಿ ಬೆಳಿಗ್ಗೆ ರಾಧಾದಾಮೋದರರನ್ನು ಪೂಜಿಸದವಳು ನರಕಕ್ಕೆ ಹೋಗುವಳು. ಬಳಿಕ ಭೂಮಿಯಲ್ಲಿ ಹುಟ್ಟಿದರೂ ವಿಧವೆಯಾಗುವಳು. ಇಲ್ಲವೆ ಪತಿಗೆ ಅಪ್ರಿಯಳೆನಿಸುವಳು. ಹಿಂದೆ ತ್ರೇತಾಯುಗದಲ್ಲಿ 'ಶಂಕರನೆಂಬ' ಶೂದ್ರನು ಸೌರಾಷ್ಟ್ರದಲ್ಲಿ ವಾಸಿಸುತ್ತಿದ್ದ. ಅವನ ಹೆಂಡತಿ ಕಲಿಪ್ರಿಯೆ. ಪತಿಯನ್ನು ತೃಣಕ್ಕೆ ಸಮಾನವಾಗಿ ಕಂಡು ಸದಾ ಪರಪುರುಷರನ್ನೇ ಬಯಸುತ್ತಿದ್ದಳು. ಈ ಪತಿ ನನಗೆ ಸರಿಯಾದವನಲ್ಲ ಎಂದು ಹೇಳಿಕೊಳ್ಳುತ್ತ ಅವನಿಗೆ ತನ್ನ ಎಂಜಲನ್ನೇ ಉಣಿಸುತ್ತಿದ್ದಳು. ದುಷ್ಟರ ಸಂಸರ್ಗದಿಂದ ಮದ್ಯ ಮಾಂಸ ಸೇವಿಸುತ್ತಿದ್ದಳು. ಪತಿಯನ್ನು ಸದಾ ಕೆಟ್ಟಮಾತುಗಳಿಂದ ಬೈಯುತ್ತಿದ್ದಳು. 'ಈ ಪಾಪಿ ಹಗ್ಗದಂತೆ ನನ್ನನ್ನು ಬಂಧಿಸಿದ್ದಾನೆ. ಏಕೆಸಾಯಲೊಲ್ಲ ? ಅವನು ಸತ್ತರೆ ನಾನು ಯಥೇಚ್ಛ ಸುಖಭೋಗಗಳನ್ನು ಅನುಭವಿಸಲ್ಲೆ.' ಹೀಗೆ ಅವಳ ಮನಸ್ಸಿನಲ್ಲಿ ಅಂದುಕೊಂಡು ಪರಪುರುಷನೊಬ್ಬನಿಗೆ 'ನಾವು ಬೇರೆ ಊರಿಗೆ ಹೋಗೋಣ'ವೆಂದು ಹೇಳಿ ಆ ಕಾರ್ಯಕ್ರಮವನ್ನು ಗುಟ್ಟಾಗಿ ಗೊತ್ತುಮಾಡಿಕೊಂಡಳು. ರಾತ್ರಿ ನಿದ್ದೆ ಹೋಗಿದ್ದ ಪತಿಯ ಶಿರಚ್ಛೇದಮಾಡಿ ಆ ಪರಪುರಷನ ಬಳಿಗೆ ಹೊರಟಳು. ಆದರೆ ಅಷ್ಟರಲ್ಲಿ ಅವನನ್ನು ಒಂದು ಹುಲಿ ತಿಂದಿತ್ತು. ಅದನ್ನು ತಿಳಿದು ಕಲಿಪ್ರಿಯೆ ಎಚ್ಚರದಪ್ಪಿ ಬಿದ್ದು ಸಾವರಿಸಿಕೊಂಡು ಅಳಲು ತೊಡಗಿದಳು. 'ಹಾ, ವಿಧಿ ನನ್ನನ್ನು ವಂಚಿಸಿತು ! ಈಗ ನಾನೇನು ಮಾಡಲಿ ? ಸ್ವಾಮಿಯನ್ನು ನಾನು ಕೊಂದೆ, ಪ್ರಿಯಕರನನ್ನು ಹುಲಿ ತಿಂದಿತು.'

ಮನೆಗೆ ಹಿಂತಿರುಗಿ ಪತಿಯ ರುಂಡಕ್ಕೆ ತನ್ನ ಮುಖವನ್ನೊತ್ತಿ ಅಳತೊಡಗಿದಳು ಕಲಿಪ್ರಿಯೆ. 'ನಾಥ, ನಾನೆಂಥ ಕ್ರೂರ ಕರ್ಮವನ್ನೇ ಮಾಡಿಬಿಟ್ಟೆ ! ನನಗಿನ್ನಾವ ಲೋಕ ಸಿಗಲಿದೆಯೋ ! ಒಂದಿಷ್ಟಾದರೂ ನನ್ನೊಡನೆ ಮಾತನಾಡು. ನಾನೆಷ್ಟು ಬೈದರೂ ಸುಮ್ಮನಿದ್ದೆ ನೀನು. ಇದು ಯಾರ ತಪ್ಪು, ಹೇಳು.' ಹೀಗೆನ್ನುತ್ತ ಪತಿಯ ಕಾಲುಗಳಿಗೆರಗಿ ಆ ಊರು ಬಿಟ್ಟು ಬೇರೆ ಊರಿಗೆ ಹೋದಳು.

ಆಗ ಕಾರ್ತೀಕ ಮಾಸ. ವಿಷ್ಣುಭಕ್ತರು ಆ ಊರಿನಲ್ಲಿ ಬೆಳಿಗ್ಗೆ ನರ್ಮದಾ ಸ್ನಾನ ಮಾಡಿ ರಾಧಾದಾಮೋದರರನ್ನರ್ಚಿಸುವುದನ್ನು ಕಲಿಪ್ರಿಯೆ ಕಂಡಳು. ಎಲ್ಲೆಡೆ ಶಂಖನಾದ ಕೇಳಿ ಬರುತ್ತಿತ್ತು. ಗಂಧ ಪುಷ್ಪ ಧೂಪ ದೀಪ ವಸ್ತ್ರ ಫಲ ಮುಂತಾದವುಗಳಿಂದ ಸ್ತ್ರೀ ಪುರುಷರೆಲ್ಲ ರಾಧಾದಾಮೋದರರಿಗೆ ಪೂಜೆ ಮಾಡುತ್ತಿದ್ದರು. ಇದೆಲ್ಲ ಏನೆಂದು ಕಲಿಪ್ರಿಯೆ ವಿನಯದಿಂದ ಕೇಳಿದಾಗ ಅವರೆಂದರು 'ತಾಯಿ, ಈ ಕಾರ್ತೀಕ ಮಾಸ ಮಾಸಗಳಲ್ಲೆಲ್ಲ ಉತ್ತಮ. ಎಲ್ಲ ಪಾಪಗಳನ್ನು, ಪರಿಹರಿಸುವ ರಾಧಾ ದಾಮೋದರರನ್ನು ಈ ಮಾಸದಲ್ಲಿ ನಾವೆಲ್ಲ ಪೂಜಿಸುತ್ತೇವೆ.

ಒಡನೆ ಕಲಿಪ್ರಿಯೆ ತಾನೂ ರಾಧಾದಾಮೋದರರ ಪೂಜೆ ಮಾಡಿ ಕೋಟಿ ಜನ್ಮಗಳ ಪಾಪವನ್ನು ಕಳೆದುಕೊಂಡು ವಿಷ್ಣುಲೋಕವನ್ನು ಸಂಪಾದಿಸಿ ಕೊಂಡಳು. ಹರಿದಿನದಲ್ಲಿ ಪೂಜೆಮಾಡಿ ಹುಣ್ಣಿಮೆಯಂದು ಅಸು ನೀಗಿದಳು. ಯಮಭಟರು ಆಕೆಯನ್ನು ಸೆಳೆದೊಯ್ಯತೊಡಗಿದಾಗ ಶಂಖಚಕ್ರಗದಾಪದ್ಮವನಮಾಲೆಗಳನ್ನು ಧರಿಸಿದ ವಿಷ್ಣುದೂತರು ಬಂದು ಅವರನ್ನೋಡಿಸಿ ರಾಜಹಂಸಗಳು ಹೊತ್ತ ದಿವ್ಯ ಸುವರ್ಣ ವಿಮಾನದಲ್ಲಿ ಅವಳನ್ನು ವಿಷ್ಣುಲೋಕಕ್ಕೊಯ್ದರು.

ಈ ಕಥೆಯನ್ನು ಭಕ್ತಿಯಿಂದ ಕೇಳುವ ಸ್ತ್ರೀ ಪುರುಷರೆಲ್ಲ ಕೋಟಿ ಜನ್ಮಗಳ ಪಾಪಗಳನ್ನು ಕಳೆದುಕೊಳ್ಳುವರು.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಬ್ರಹ್ಮಖಂಡದಲ್ಲಿ ಸೂತ ಶೌನಕ ಸಂವಾದದಲ್ಲಿ ರಾಧಾದಾಮೋದರ ಪೂಜಾಮಹಾತ್ಮೆವೆಂಬ ಹದಿನೇಳನೇಯ ಅಧ್ಯಾಯ ಮುಗಿದುದು*



## ಕಾರ್ತಿಕ ವ್ರತ

ಅಧ್ಯಾಯ - ೧೮

**ಶೌನಕ ಉವಾಚ**

**ಶೌನಕ** :- ಕಾರ್ತೀಕ ಮಾಸದಲ್ಲಿ ಅನುಷ್ಠಾನ ಮಾಡುವ ವಿಧಿನಿಯಮಗಳು ಏನೆಂಬುದನ್ನು ಹೇಳು.

**ಸೂತ** :- ಆಶ್ವಯುಜ ಹುಣ್ಣಿಮೆಯಿಂದ ಆರಂಭಿಸಿ ಕಾರ್ತೀಕ ಶುದ್ಧ ಏಕಾದಶಿ ಪರ್ಯಂತ ಕಾರ್ತೀಕ ವ್ರತವನ್ನಾಚರಿಸಬೇಕು. ಉತ್ತರಾಭಿಮುಖವಾಗಿ ರಾತ್ರಿ ಮೌನದಿಂದ ಮಲಮೂತ್ರ ವಿಸರ್ಜಿಸಬೇಕು. ದಾರಿ, ನೀರು, ಗೋಶಾಲೆ, ಸ್ಮಶಾನ, ಹುತ್ತಗಳಲ್ಲಿ ಉತ್ತಮ ಸ್ಥಾನಗಳಲ್ಲಿ ಮಲಮೂತ್ರ ವಿಸರ್ಜಿಸಕೂಡದು. ಮಣ್ಣು, ನೀರುಗಳಿಂದ ಶೌಚ ಮಾಡಿಕೊಳ್ಳಬೇಕು. ಮುಖತೊಳೆದು ಸ್ನಾನ ಸಂಕಲ್ಪಮಾಡಿ ಹೃದಯದಲ್ಲಿ ದಾಮೋದರನನ್ನು ಧ್ಯಾನಿಸಿ ಈ ಮಂತ್ರವನ್ನುಚ್ಚರಿಸಬೇಕು.

**ಕಾರ್ತೀಕೇಯಂ ಕರಿಷ್ಯಾಮಿ ಪ್ರಾತಃ ಸ್ನಾನಂ ಜನಾರ್ದನ**
**ದಾಮೋದರಸ್ಯ ಪ್ರೀತ್ಯರ್ಥಂ ರಾಧಯಾ ಪಾಪನಾಶನಂ**

**ನಮಃ ಪಂಕಜನಾಭಾಯ ಕೃಷ್ಣಾಯ ಜಲಶಾಯಿನೇ**
**ನಮಸ್ತೇ ರಾಧಯಾಸಾರ್ಧಂ ಗೃಹಾಣಾರ್ಘ್ಯಂ ಪ್ರಸೀದಮೇ**

ಹೇ ಜನಾರ್ದನ, ಕಾರ್ತೀಕ ಮಾಸದಲ್ಲಿ ರಾಧಾ ದಾಮೋದರರ ಪ್ರೀತಿಗಾಗಿ ಪಾಪಪರಿಹಾರಕವಾದ ಪ್ರಾತಃಸ್ನಾನಮಾಡುತ್ತೇನೆ. ಪದ್ಮನಾಭನೂ ಜಲಶಾಯಿಯೂ ಆದ ರಾಧಾಸಮೇತ ಕೃಷ್ಣನಿಗೆ ನಮಸ್ಕಾರ. ನಾನು ಕೊಡುವ ಅರ್ಘ್ಯವನ್ನು ಸ್ವೀಕರಿಸು, ಪ್ರಸನ್ನನಾಗು.

ಬಳಿಕ ಸ್ನಾನಮಾಡಿ ಊರ್ಧ್ವ ಪುಂಡ್ರಗಳನ್ನು ಧರಿಸಬೇಕು. ಊರ್ಧ್ವಪುಂಡ್ರ ಧರಿಸದವನು ಏನು ಕರ್ಮ ಮಾಡಿದರೂ ನಿಷ್ಫಲವೆ. ಅವನನ್ನು ನೋಡಲೂ ಬಾರದು. ನೋಡಿದರೆ ಸೂರ್ಯದರ್ಶನ ಮಾಡಬೇಕು, ಹಣೆಯಲ್ಲಿ ಮಣ್ಣಿನಿಂದ ಶುಭ್ರವಾದ ನಡುವೆ ಛಿದ್ರದಿಂದ ಕೂಡಿದ ಊರ್ಧ್ವ ಪುಂಡ್ರಧರಿಸಿದರೆ ಚಂಡಾಲನೂ ಶುದ್ಧನಾಗಿ ಪೂಜ್ಯನೆನಿಸುವನು. ಪ್ರಾತಃಕಾಲದ ಎಲ್ಲ ಕರ್ಮಗಳನ್ನೂ ಮುಗಿಸಿ ಹರಿಪ್ರಿಯೆಯಾದ ಪಾಪನಾಶಿನಿಯಾದ ತುಳಸಿಯನ್ನು ಭಕ್ತಿಯಿಂದ ಪೂಜಿಸಬೇಕು. ಪುರಾಣೋಕ್ತವಾದ ಹರಿಕಥೆಗಳನ್ನು ಶ್ರವಣಮಾಡಬೇಕು. ಪ್ರವಚನಮಾಡಿದ ಆ ಪಂಡಿತನನ್ನು ಭಕ್ತಿಯಿಂದ ಪೂಜಿಸಬೇಕು.

ಪರರ ಆಸನ ಅನ್ನ ಶಯ್ಯೆ ಸ್ತ್ರೀಯರನ್ನು ಸರ್ವದಾ ವಿಶೇಷವಾಗಿ, ಕಾರ್ತೀಕಮಾಸದಲ್ಲಿ ವರ್ಜಿಸಬೇಕು. ಬೋರೆಹಣ್ಣು, ಉದ್ದು, ಮಾಂಸ, ಜೇನು ನಿಂಬೆಹಣ್ಣು ಇವನ್ನು ಸೇವಿಸಬಾರದು. ತೈಲಾಭ್ಯಂಜನ ಮಾಡಿಕೊಳ್ಳಬಾರದು. ಸರ್ಷಾಕ್ಷಿ, ಹಿಂಗು, ಈರುಳ್ಳಿ, ಬೆಳ್ಳುಳ್ಳಿ, ಮೂಲಂಗಿ, ನುಗ್ಗೆ, ಸೋರೆ, ಬೇಲ, ಬದನೆ, ಕುಂಬಳಕಾಯಿ, ಕಂಚಿನ ಪಾತ್ರೆಯಲ್ಲಿ ಊಟ, ಎರಡುಸಲ ಬೇಯಿಸಿದ ವಸ್ತು, ಸೂತಕದವರ ಅನ್ನ, ಮೀನು ಹಾಸಿಗೆ, ರಜಸ್ವಲೆ, ಎರಡು ಮೂರು ಬಾರಿ ಊಟ, ಸ್ತ್ರೀಸಂಗ, ನೆಲ್ಲಿಕಾಯಿ, ಹೆಗ್ಗುಳ್ಳ, ಪಡವಲ, ಬೇವು, ತಾಳೆಹಣ್ಣು, ತೆಂಗಿನಕಾಯಿ ಇವನ್ನೂ ಬಿಡಬೇಕು. ಇನ್ನು ಯಾವುದಾದರೂ ಪ್ರಿಯವಾದ ಉತ್ತಮ ಭೋಜ್ಯ ಪದಾರ್ಥವನ್ನು ಶ್ರೀಹರಿಯ ಪ್ರೀತಿಗಾಗಿ ವ್ರತಕಾಲದಲ್ಲಿ ತ್ಯಜಿಸಿ ವ್ರತದ ಕೊನೆಯಲ್ಲಿ ಅದನ್ನು ಪಂಡಿತನಿಗೆ ದಾನಮಾಡಿ ತಾನೂ ಸೇವಿಸಬೇಕು. ವಿಧ್ಯುಕ್ತವಾಗಿ ಕಾರ್ತೀಕ ವ್ರತವನ್ನು ಮಾಡಿದರೆ ಅವನನ್ನು ಕಂಡು ಯಮದೂತರು, ಸಿಂಹವನ್ನು ಕಂಡ ಆನೆಗಳಂತೆ ಓಡಿ ಹೋಗುತ್ತಾರೆ.

ವಿಷ್ಣುವ್ರತದ ಹಿರಿಮೆ ಎಷ್ಟೆಂದರೆ ಅದಕ್ಕೆ ನೂರು ಯಜ್ಞಗಳೂ ಸಾಟಿಯಾಗಲಾರವು ಯಜ್ಞದಿಂದ ಸ್ವರ್ಗ ದೊರಕೀತು. ಕಾರ್ತೀಕ ವ್ರತದಿಂದ ವೈಕುಂಠವೇ ದೊರಕುವುದು ಅದರಿಂದ ಲಭಿಸುವ ಪುಣ್ಯವನ್ನು ನಾಲ್ಮೊಗದ ಬ್ರಹ್ಮನೂ ವರ್ಣಿಸಲಾರ. ಪಾಪಗಳಂತೂ ಹತ್ತು ದಿಕ್ಕುಗಳಿಗೆ ಓಡಿ ಹೋಗುವುವು. ಭಯದಿಂದ ಅವು ಎಲ್ಲಿಗೆ ಹೋಗಲಿ, ಎಲ್ಲಿರಲಿ ಎಂದು ಆತಂಕಗೊಳ್ಳುವುವು.

ಹುಣ್ಣಿಮೆದಿನ ಯಥಾಶಕ್ತಿ ಅನ್ನ ಬಟ್ಟೆಗಳನ್ನು ದಾನ ಮಾಡಬೇಕು. ಜ್ಞಾನಿಗಳಿಗೆ ಭೋಜನ ನೀಡಬೇಕು. ರಾತ್ರಿಯಲ್ಲಿ ಕುಣಿದು ಹಾಡಿ ಜಾಗರಣ ಮಾಡಬೇಕು.

ಈ ವ್ರತದ ವಿಧಾನವನ್ನು ಕೇಳಿದರೆ ಎಲ್ಲ ಪಾಪಗಳೂ ದೂರವಾಗುವುವು.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಬ್ರಹ್ಮಖಂಡದಲ್ಲಿ ಸೂತ ಶೌನಕ ಸಂವಾದದಲ್ಲಿ ಕಾರ್ತಿಕವ್ರತವಿಧಾನ ಕಥನವೆಂಬ ಹದಿನೆಂಟನೇಯ ಅಧ್ಯಾಯ ಮುಗಿದುದು*

**ಶೌನಕ ಉವಾಚ**

**ಶೌನಕ :-** ಕೇಳುವವರ ಪಾಪಗಳನ್ನು ಕಳೆವ ತುಳಸೀಮಹಾತ್ಮೆಯನ್ನು ಎಲ್ಲರ ಹಿತಕ್ಕಾಗಿ ಬಣ್ಣಿಸಿ ಹೇಳು.

**ಸೂತ :-** ಮನೆಯ ಬಳಿ ತುಳಸಿಯ ತೋಟವಿದ್ದರೆ ಮನೆಯು ಪವಿತ್ರವಾಗುವುದು. ಯಮದೂತರು ಅಲ್ಲಿಗೆ ಬರಲಾರರು. ತುಳಸಿಯ ತೋಟವನ್ನು ಬೆಳೆಸುವವರಿಗೆ ಯಮನ ದರ್ಶನವಾಗದು. ತುಳಸಿಯನ್ನು ಬೆಳೆಸಿ ಆರೈಕೆಮಾಡಿದರೆ ಪೂಜಿಸಿದರೆ ನೋಡಿದರೆ ಮುಟ್ಟಿದರೆ ಪಾಪವೆಲ್ಲವೂ ಮಾಯವಾಗುವುದು. ಎಳೆ ತುಳಸೀದಳಗಳಿಂದ ಹರಿಯನ್ನರ್ಚಿಸುವವರು ಯಮಲೋಕಕ್ಕೆ ಹೋಗರು. ಗಂಗೇ ಮುಂತಾದ ಶ್ರೇಷ್ಠ ನದಿಗಳೂ ಪುಷ್ಕರ ಮುಂತಾದ ಪವಿತ್ರ ಕ್ಷೇತ್ರಗಳೂ ವಿಷ್ಣು ಬ್ರಹ್ಮ ಮಹೇಶ್ವರರೂ ಎಲ್ಲ ದೇವತೆಗಳೂ ತುಳಸೀದಲದಲ್ಲಿರುತ್ತಾರೆ. ಪಾಪಿಯೂ ಮರಣಕಾಲದಲ್ಲಿ ತುಲಸೀ ದಲವನ್ನು ಧರಿಸಿದ್ದರೆ ವಿಷ್ಣುಲೋಕವನ್ನು ಸೇರುವುದರಲ್ಲಿ ಯಾವ ಸಂಶಯವೂ ಇಲ್ಲ. ತುಳಸೀ ಮೃತ್ತಿಕೆಯನ್ನು ಮೈಗೆ ಬಳಿದುಕೊಂಡು ಮರಣಹೊಂದಿದರೂ ವಿಷ್ಣುಲೋಕ ಸೇರುವರು, ನರಕ ಅವರ ಬಳಿಗೆ ಸುಳಿಯಲಾರವು. ತುಳಸಿಕಾಷ್ಠಮಾಲೆಯನ್ನು ಕೊರಳಲ್ಲಿ ಧರಿಸಿದರೆ ಎಂಥ ದುರಾಚಾರಿಯೂ ವೈಕುಂಠವನ್ನು ಪಡೆಯಬಲ್ಲನು.

ನೆಲ್ಲಿಕಾಯಿಮಾಲೆ, ತುಳಸಿಕಾಷ್ಠಮಾಲೆಗಳನ್ನು ಧರಿಸಿದರೆ ಭಗವಂತನ ಭಕ್ತನೆನಿಸುವನು. ವಿಷ್ಣುವಿಗೆ ಸಮರ್ಪಿಸಿದ ತುಳಸೀದಳಮಾಲೆಯನ್ನು ಧರಿಸಿದರೆ ಅವನಿಗೆ ದೇವತೆಗಳು ನಮಿಸುವರು. ಅವನು ಸಮರ್ಪಿಸುವ ಪ್ರತಿಯೊಂದು ಹೂವಿಗೆ ಹತ್ತುಸಾವಿರ ಗೋದಾನ ಫಲವಿದೆ.

ತುಳಸೀ ಮಾಲೆಯನ್ನು ಧರಿಸದವರು ಹರಿಯ ಕೋಪಾಗ್ನಿಯಲ್ಲಿ ಬೇಯುತ್ತ ನರಕದಲ್ಲಿಯೇ ವಾಸಿಸುವರು. ನೆಲ್ಲಿಯ ಮಾಲೆ ಎಷ್ಟು ರೋಮಗಳನ್ನು ಸ್ಪರ್ಶಿಸುವುದೋ ಅಷ್ಟು ಸಾವಿರ ವರ್ಷಗಳ ಕಾಲ ವೈಕುಂಠವಾಸ ಲಭಿಸೀತು.

ತುಳಸಿ ನೆಲ್ಲಿ ತೋಟಗಳ ನೆರಳಲ್ಲಿ ಪಿತೃಗಳಿಗೆ ಪಿಂಡಪ್ರದಾನಮಾಡಿದರೆ ಅವರು ಮುಕ್ತಿ ಹೊಂದುವರು. ಕೈ ತಲೆ ಕುತ್ತಿಗೆ ಕಿವಿ ಮುಖಗಳಲ್ಲಿ ನೆಲ್ಲಿಕಾಯಿ ಧರಿಸಿದರೆ ಅವನಲ್ಲಿ ಹರಿಸನ್ನಿಧಾನ ಲಭಿಸುವದು. ಎಲ್ಲ ಯಜ್ಞಗಳೂ ದೇವತೆಗಳೂ ಋಷಿಗಳೂ ಕಾರ್ತೀಕದಲ್ಲಿ ನೆಲ್ಲಿಮರದಲ್ಲಿರುತ್ತಾರೆ. ನೆಲ್ಲಿ ಅಥವಾ ತುಲಸಿಯ ಎಲೆಗಳನ್ನು ದ್ವಾದಶಿದಿನದಲ್ಲಿ ಕೀಳುವವನು ನರಕಭಾಗಿಯಾಗುವನು.

ನೆಲ್ಲಿಮರದ ನೆರಳಿನಲ್ಲಿ ಕಾರ್ತೀಕದಲ್ಲಿ ಭೋಜನಮಾಡಿದರೆ ಅನ್ನದ ಸಂಬಂಧದಿಂದ ವರ್ಷವಿಡೀ ಮಾಡಿದ ಪಾಪಗಳೂ ಪರಿಹಾರವಾಗುತ್ತವೆ. ತುಲಸಿಯ ಬುಡದ ನೀರನ್ನು ಭಕ್ತಿಯಿಂದ ತಲೆಯಲ್ಲಿ ಧರಿಸಿದರೆ, ತುಳಸಿಯ ಎಲೆಗಳಿಂದ ಬೀಳುವ

ನೀರನ್ನು ಪ್ರೋಕ್ಷಿಸಿಕೊಂಡರೆ ಎಲ್ಲ ತೀರ್ಥಸ್ನಾನದ ಫಲವನ್ನು ಹೊಂದಿ ವಿಷ್ಣುಲೋಕವನ್ನು ಸೇರಬಹುದು.

ಹಿಂದೆ ದ್ವಾಪರದಲ್ಲಿ ಪುಣ್ಯದ ತೇಜಸ್ಸಿನಿಂದ ಸೂರ್ಯನಂತೆ ಹೊಳೆಯುವ 'ಮಾರ್ತಂಡನೆಂಬೊಬ್ಬ' ಬ್ರಾಹ್ಮಣನು ಸ್ನಾನಮಾಡಿ, ತುಳಸಿಗೆ ನೀರೆರೆದು ಮನೆಗೆ ಹೊರಟು ಹೋದನು. ಅಷ್ಟರಲ್ಲಿ ಅಲ್ಲಿಗೆ ಬಾಯಾರಿದ ಒಂದು ನಾಯಿ ಬಂದು ತುಳಸಿಯ ಬುಡದ ನೀರು ಕುಡಿಯಿತು. ಅದರಿಂದ ಅದು ಎಲ್ಲ ಕಲ್ಮಷವನ್ನು ಕಳೆದುಕೊಂಡು ಪರಿಶುದ್ಧವಾಯಿತು. ಅಲ್ಲಿಗೊಬ್ಬ ಬೇಡನೂ ಧಾವಿಸುತ್ತ ಬಂದ. ಅವನ ಹೆಸರು 'ಅಸಿಮರ್ದನ'. ನಾಯಿಯನ್ನು ಕಂಡು ಕೋಪದಿಂದ 'ನನ್ನ ಅನ್ನವನ್ನು ತಿಂದು ಪಾತ್ರೆಯನ್ನು ಒಡೆದು ಇಲ್ಲಿಗೆ ಬಂದೆ ಏನು ?' ಎನ್ನುತ್ತ ಹೊಡೆದು ಕೊಂದ.

ಯಮಭಟರು ಬಂದು ಅದರಾತ್ಮವನ್ನೆಳೆದೊಯ್ಯಲೆಂದು ಪಾಶದಿಂದ ಬಿಗಿದರು. ಅಷ್ಟರಲ್ಲಿ ವಿಷ್ಣುದೂತರು ಬಂದು ಆ ಪಾಶವನ್ನು ಹರಿದೊಗೆದು ದಿವ್ಯ ವಿಮಾನದಲ್ಲಿ ಕುಳ್ಳಿರಿಸಿದರು. ಯಮದೂತರು ವಿನಯದಿಂದ ಕೇಳಿದರು. 'ಏಕೆ ಇವನನ್ನೊಯ್ಯುತ್ತಿರುವಿರಿ ? ಏನು ಪುಣ್ಯ ಮಾಡಿದ್ದಾನೆ ?'

**ವಿಷ್ಣುದೂತ** :- ಇವನು ಹಿಂದೆ ರಾಜನಾಗಿದ್ದ. ಅನೇಕ ಪುಣ್ಯಕರ್ಮಗಳನ್ನು ಮಾಡಿದ್ದ. ಆದರೆ ಓರ್ವ ಸುಂದರಿಯನ್ನು ಅಪಹಾರಮಾಡಿದ, ಆ ಪಾಪದಿಂದ ಯಮಲೋಕದಲ್ಲಿ ನೀವು ಕೊಟ್ಟ ನಾನಾ ಶಿಕ್ಷೆಗಳನ್ನು ಅನುವಿಸಿದ. ಕಾದ ಕಬ್ಬಿಣದ ಮಂಚದ ಮೇಲೆ ತಾಮ್ರದ ಹೆಣ್ಣಿನ ಬೊಂಬೆಯೊಡನೆ ಮಲಗುವ ಶಿಕ್ಷೆ. ಕಾದ ಕಬ್ಬಿಣದ ಕಂಬವನ್ನಾಲಿಂಗಿಸುವ ಶಿಕ್ಷೆ. ಸುಣ್ಣದ ನೀರಿನ ಅಭಿಷೇಕದ ಶಿಕ್ಷೆ. ಇನ್ನೂ ಅನೇಕ ವಿಧದ ಶಿಕ್ಷೆಗಳನ್ನನುಭವಿಸಿ ಹೀನಜನ್ಮಗಳನ್ನೂ ಪಡೆದು ತನ್ನ ಪಾಪ ಫಲಗಳನ್ನೆಲ್ಲ ಅನುಭವಿಸಿದ್ದಾನೆ ಈತ. ಈಗತಾನೆ ತುಳಸಿಯ ಬುಡದ ನೀರನ್ನು ಕುಡಿದುದರಿಂದ ವಿಷ್ಣುಲೋಕಕ್ಕೆ ಹೋಗುತ್ತಿದ್ದಾನೆ.

ಇದನ್ನು ಕೇಳಿ ಯಮದೂತರು ಬಂದ ದಾರಿ ಹಿಡಿದು ಹೊರಟು ಹೋದರು. ವಿಷ್ಣುದೂತರು ರಾಜನನ್ನು ತಮ್ಮ ಲೋಕಕೊಯ್ದರು.

ಇದು ತುಳಸಿಯ ಮಹಾತ್ಮೆ. ಭಕ್ತಿಯಿಂದ ತುಳಸಿ ಪೂಜೆ ಮಾಡುವವರಿಗೇನು ಫಲವೆಂದು ಹೇಳುವ ಸಾಮರ್ಥ್ಯ ನನ್ನಲ್ಲಿಲ್ಲ.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಬ್ರಹ್ಮಖಂಡದಲ್ಲಿ ಸೂತ ಶೌನಕ ಸಂವಾದದಲ್ಲಿ ತುಳಸೀಮಹಾತ್ಮೆ ಎಂಬ ಹತ್ತೊಂಬತ್ತನೇಯ ಅಧ್ಯಾಯ ಮುಗಿದುದು*

—o—

**ಶೌನಕ :-** ಕಾರ್ತೀಕ ಮಾಸದ ಕೊನೆಯ ಐದು ದಿನಗಳ ಮಹಿಮೆಯನ್ನು ಬಣ್ಣಿಸು.

**ಸೂತ :-** ವ್ರತಗಳಲ್ಲೆಲ್ಲ ವಿಷ್ಣು ಪಂಚಕ ವ್ರತವು ಶ್ರೇಷ್ಠವಾದುದು. ಆ ಐದು ದಿನಗಳಲ್ಲಿ ರಾಧಾದಾಮೋದರರನ್ನು ಗಂಧ ಪುಷ್ಪ ಧೂಪ ದೀಪ ವಸ್ತ್ರ ಫಲಗಳಿಂದ ಪೂಜಿಸಿದರೆ ಎಲ್ಲ ಪಾಪಗಳೂ ತೊಲಗುವವು. ವಿಷ್ಣುಲೋಕ ದೊರೆಯುವುದು. ಬ್ರಹ್ಮಚಾರಿಯಿರಲಿ, ಗೃಹಸ್ಥನಿರಲಿ, ವಾನಪ್ರಸ್ಥನೆ ಇರಲಿ ಅಥವಾ ಯತಿಯೆ ಇರಲಿ ವಿಷ್ಣುಪಂಚಕವ್ರತ ಮಾಡದೆ ಉತ್ತಮ ಲೋಕವನ್ನು ಪಡೆಯಲಾರ.

ವಿಷ್ಣುಪಂಚಕ ದಿನಗಳಲ್ಲಿ ಸ್ನಾನ ಮಾಡಿದರೆ ಎಲ್ಲ ತೀರ್ಥಗಳಲ್ಲಿ ಮಿಂದ ಫಲವಿದೆ, ತುಳಸಿಯ ಬಳಿಯಲ್ಲಿ ಹರಿಗೆ ತುಪ್ಪದ ದೀಪವಿಟ್ಟರೆ, ಆಕಾಶ ದೀಪವಿಟ್ಟು ಹರಿಗೆ ಅರ್ಪಿಸಿದರೆ ಎಂಥ ಪಾಪಿಯೂ ವಿಷ್ಣುಲೋಕವನ್ನು ಸೇರುವನು. ಇದು ಸತ್ಯ, ಜೇನು ಹಾಲು ತುಪ್ಪ ಮುಂತಾದವುಗಳಿಂದ ಹರಿಗೆ ಅಭಿಷೇಕ ಮಾಡಿದರೆ, ಪರಮಾನ್ನವನ್ನು ನಿವೇದಿಸಿದರೆ ಸಿಗುವ ಪುಣ್ಯವೆಷ್ಟೆಂದು ಹೇಳಲು ಚತುರ್ಮುಖ ಬ್ರಹ್ಮನಿಂದಲೂ ಶಕ್ಯವಾಗಲಾರದು.

ಏಕಾದಶಿ ದಿನ ಹರಿಪೂಜೆ ಮಾಡಿ ಮಂತ್ರ ಪೂರ್ವಕವಾಗಿ ಗೋಮಯ ಭಕ್ಷಣ ಮಾಡಬೇಕು. ದ್ವಾದಶಿ ಗೋಮೂತ್ರವನ್ನು ತ್ರಯೋದಶಿಯಲ್ಲಿ ಹಾಲನ್ನು ಚತುರ್ದಶಿಯಲ್ಲಿ ಮೊಸರನ್ನೂ ಮಂತ್ರಪೂರ್ವಕವಾಗಿ ಕುಡಿದು ಉಪವಾಸ ಮಾಡಬೇಕು. ಹುಣ್ಣಿಮೆದಿನ ಸ್ನಾನ ಕೇಶವಾರಾಧನೆಗಳನ್ನು ಮುಗಿಸಿ ಜ್ಞಾನಿಗಳಿಗೆ ಭೋಜನವಿಕ್ಕಿ ದಕ್ಷಿಣೆ ನೀಡಬೇಕು. ಬಹುಳ ರಾತ್ರಿಯಲ್ಲಿ ಮಂತ್ರ ಪೂರ್ವಕವಾಗಿ ಪಂಚಗವ್ಯ ಪ್ರಾಶನ ಮಾಡಬೇಕು. ಪೂರ್ತಿ ಉಪವಾಸಮಾಡಲು ಅಶಕ್ತರಾದವರು ಫಲ ಮೂಲಗಳನ್ನೂ ಇತರ ಪವಿತ್ರ ಹವಿಷ್ಯ ಪದಾರ್ಥಗಳನ್ನೂ ಸೇವಿಸಬಹುದು. ಹೀಗೆ ವಿಷ್ಣುಪಂಚಕವ್ರತವನ್ನು ಮಾಡಿ ತುಳಸೀದಳಗಳಿಂದ ವಿಷ್ಣುವನ್ನು ಪೂಜಿಸುವವನು ತಾನೆ ವಿಷ್ಣುವಿನ ಮೂರ್ತಿಯಾಗುವನು.

ಹಿಂದೆ ತ್ರೇತಾಯುಗದಲ್ಲಿ ದಂಡಕರನೆಂಬ ಶೂದ್ರನಿದ್ದ. ದರೋಡೆಯೇ ಅವನ ವೃತ್ತಿ. ಧರ್ಮನಿಂದೆ ಮಾಡುತ್ತಿದ್ದ. ಸುಳ್ಳು, ವಿಶ್ವಾಸದ್ರೋಹ ಸೂಳೆಯರ ಸಹವಾಸ, ಪರಸ್ತ್ರೀಯರನ್ನು ಕೆಡಿಸುವುದು, ಬ್ರಹ್ಮಸ್ವವನ್ನಪಹರಿಸುವುದು, ಮೊರೆ ಹೊಕ್ಕವರನ್ನು ಕೊಲ್ಲುವುದು, ನಾಸ್ತಿಕರೊಡನಾಟ, ಗೋಮಾಂಸಭಕ್ಷಣ, ಮದ್ಯಪಾನ, ಪರರನಿಂದೆ ಭಕ್ತದ್ರೋಹ ಮುಂತಾದ ಅನೇಕ ಪಾಪಗಳಲ್ಲಿ ಅಸಕ್ತನಾದ ಆ ದಂಡಕನನ್ನು ಒಂದು ದಿನ ಎಲ್ಲ ಬಂಧುಗಳೂ ಸೇರಿ ಆಕ್ಷೇಪಿಸಿದರು.

**ಬಂಧುಗಳು :-** ಮೂರ್ಖ, ದುರಾಚಾರಿ, ನಮ್ಮ ವಂಶದ ಹಿಂದಿನವರು ಸಂಪಾದಿಸಿದ ಕೀರ್ತಿ ಪ್ರತಿಷ್ಠೆಗಳನ್ನು ನೀನು ಹಾಳುಮಾಡುತ್ತಿರುವೆ.

ಕುಲಕ್ಕೆ ಅಪಕೀರ್ತಿ ಬರುವುದೆಂಬ ಭಯದಿಂದ ಅವರೆಲ್ಲರೂ ಅವನಿಗೆ ಕುಲದಿಂದ ಬಹಿಷ್ಕಾರ ಮಾಡಿದರು. ಬೇರೆ ಉಪಾಯಗಾಣದೆ ದಂಡಕರನು ಕಾಡಿಗೆ ಹೋಗಿ ದರೋಡೆಕೋರರ ಗುಂಪನ್ನು ಸೇರಿ ದಾರಿಗರನ್ನು ಸುಲಿಯತೊಡಗಿದ.

ಒಂದು ದಿನ ಅವರಾರಿಗೂ ಉಣಲು ಸಿಗಲಿಲ್ಲ. ಹಸಿವಿನಿಂದ ಕಂಗೆಟ್ಟು ಇನ್ನೊಂದು ಊರಿಗೆ ಹೋದರು. ಅಲ್ಲಿ ಕೆಲವರು ವೈಷ್ಣವರು ನೆಲ್ಲಿಮರದ ಬುಡದಲ್ಲಿ ಕುಳಿತಿರುವುದನ್ನು ಕಂಡು ದಂಡಕರನು ಅವರ ಬಳಿಯಲ್ಲಿ 'ಹಸಿವಿನಿಂದ ಪ್ರಾಣವೆ ಹೋಗುತ್ತಿದೆ ಏನಾದರೂ ತಿನ್ನಲು ಕೊಟ್ಟು ಕಾಪಾಡಿರಿ' ಎಂದು ಬೇಡಿದನು.' ಎಲ್ಲ ಪಾಪಗಳನ್ನು ಪರಿಹರಿಸುವ ಪ್ರಸಿದ್ಧ ವಿಷ್ಣುಪಂಚಕ ದಿನಗಳ ಪ್ರಾರಂಭ ಈದಿನ. ಇಂದು ಏಕಾದಶಿ ನೀನು ಮಾತ್ರ ಉಣಲು ಬಯಸುತ್ತಿರುವೆ. ಏನು ಕಾರಣ ? ನಿನ್ನ ಹೆಸರೇನು ? ಎಂದು ಆಶ್ಚರ್ಯದಿಂದ ಅವರು ಕೇಳಿದರು. 'ನಾನು ದಂಡಕರ ಮಹಾಪಾಪಿ. ನನ್ನ ಉದ್ಧಾರಕ್ಕೆ ಮಾರ್ಗವೇನು ?' 'ವ್ರತಗಳಲ್ಲೆಲ್ಲ ಶ್ರೇಷ್ಠವಾದ ಈ ವಿಷ್ಣು ಪಂಚಕವನ್ನೇ ಮಾಡು.'

ದಂಡಕರನು ಜ್ಞಾನಿಯ ಆದೇಶದಂತೆ ವಿಷ್ಣು ಪಂಚಕವನ್ನು ಮಾಡಿ, ಅಸುನೀಗಿ, ದಿವ್ಯ ವಿಮಾನದಲ್ಲಿ ಹರಿಲೋಕಕ್ಕೆ ತೆರಳಿದ. ಹರಿಯ ರೂಪವನ್ನು ಧರಿಸಿದ. ಪುನರ್ಜನ್ಮದ ಭಯವನ್ನು ಮೆಟ್ಟಿನಿಂತ.

ಈ ಕಥೆಯನ್ನು ಭಕ್ತಿಯಿಂದ ಕೇಳಿದರೆ ಆ ಕ್ಷಣದಲ್ಲಿಯೇ ಕೋಟಿ ಜನ್ಮಗಳ ಪಾಪಗಳೂ ತೊಲಗುವವು.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಬ್ರಹ್ಮಖಂಡದಲ್ಲಿ ಸೂತ ಶೌನಕ ಸಂವಾದದಲ್ಲಿ ವಿಷ್ಣು ಪಂಚಕವೆಂಬ ಇಪ್ಪತ್ತನೇಯ ಅಧ್ಯಾಯ ಮುಗಿದುದು*



## ದಾನಗಳ ಮಹಿಮೆ

**ಅಧ್ಯಾಯ - ೨೧**

**ಶಾನಕ ಉವಾಚ**

**ಶೌನಕ :-** ದಾನಗಳ ಮಹಿಮೆಯನ್ನೀಗ ವರ್ಣಿಸು.

**ಸೂತ :-** ಭೂದಾನವು ಎಲ್ಲ ದಾನಗಳಲ್ಲಿ ಉತ್ತಮ. ಎಲ್ಲ ದಾನಗಳ ಫಲ ಅದೊಂದಕ್ಕೇ ಇದೆ. ಸತ್ವಭರಿತವಾದ ಭೂಮಿಯನ್ನು ಜ್ಞಾನಿಗೆ ದಾನವಿತ್ತರೆ ಹದಿನಾಲ್ಕು ಮನ್ವಂತರಗಳ ಕಾಲ ವಿಷ್ಣುಲೋಕದಲ್ಲಿ ವಾಸ ದೊರಕುವದು. ಬಳಿಕ ಭೂಮಿಯಲ್ಲಿ ಹುಟ್ಟಿ ಸಾರ್ವಭೌಮನಾಗಿ ಮೆರೆದು ತಿರುಗಿ ವಿಷ್ಣುಲೋಕ ಸೇರಬಹುದು.

ನೂರು ದನಗಳೂ ಒಂದು ಎತ್ತೂ ಸ್ವೇಚ್ಛೆಯಿಂದ ತಿರುಗಾಡಲು ಸಾಲುವಷ್ಟು ಭೂಮಿಯನ್ನು ಬ್ರಾಹ್ಮಣನಿಗೆ ದಾನ ಮಾಡಿದರೆ ಎಲ್ಲ ಪಾಪಗಳೂ ಪರಿಹಾರವಾಗುವವು. ಭೂದಾನ ಮಾಡುವವನು, ಸ್ವೀಕರಿಸುವವನು ಈ ಇಬ್ಬರೂ ಸ್ವರ್ಗಪಡೆಯುವರು. ನೂರು ದಾನಗಳನ್ನೂ ಬಿಟ್ಟು ಭೂದಾನವನ್ನು ಮಾತ್ರ ಸ್ವೀಕರಿಸಲೇಬೇಕು. ತಿಳಿಯದೆ ಭೂದಾನವನ್ನು ನಿರಾಕರಿಸಿದರೆ ಪ್ರತಿಜನ್ಮದಲ್ಲಿಯೂ ದುಃಖ ಉಂಟಾಗುವುದು.

ಇನ್ನೊಬ್ಬರಿಂದ ಭೂಮಿಯನ್ನು ಪಡೆದು ಪಂಡಿತನಿಗೆ ದಾನ ಮಾಡಿದರೆ ಹರಿಯು ಪರಮಪದವನ್ನು ನೀಡುತ್ತಾನೆ. ಭೂಮಿಯನ್ನು ಅಪಹರಿಸಿದರೆ ಅವನಿಗೂ ಅವನ ಕುಲಕೋಟಿಗೂ ನರಕಪ್ರಾಪ್ತವಾಗುವುದು. ಇನ್ನೊಬ್ಬರು ಕೊಟ್ಟ ಭೂಮಿಯನ್ನು ರಕ್ಷಿಸುವ ರಾಜನಿಗೆ ಆ ದಾತೃಗಳಿಗೆ ಸಿಗುವ ಪುಣ್ಯಕ್ಕಿಂತ ಕೋಟಿಪಾಲು ಹೆಚ್ಚು ಪುಣ್ಯ ದೊರಕುವುದು.

ಗೋದಾನಕ್ಕೆ ಸಪ್ತದ್ವೀಪಗಳಿಂದ ಕೂಡಿದ ಭೂಮಿಯನ್ನು ದಾನಮಾಡಿದ ಫಲವಿದೆ. ಬಡವರಿಗೆ ಎತ್ತನ್ನು ದಾನಮಾಡಿದರೆ ಶಿವಲೋಕ ದೊರಕುವುದು. ಒಂದು ಎಳ್ಳುಕಾಳಿನಷ್ಟು ಚಿನ್ನವನ್ನು ಬ್ರಾಹ್ಮಣನಿಗಿತ್ತರೆ ಅವನಿಗೂ ಅವನ ಕುಲಕೋಟಿಗೂ ವಿಷ್ಣುಲೋಕ ಪ್ರಾಪ್ತವಾಗುವುದು. ಬೆಳ್ಳಿಯನ್ನು ದಾನ ಮಾಡಿದರೆ ಚಂದ್ರಲೋಕಕ್ಕೆ ಹೋಗಿ ಅಲ್ಲಿ ಅಮೃತಪಾನ ಮಾಡಬಹುದು. ಹವಳ ಮುತ್ತು ವಜ್ರ ಮಣಿಗಳನ್ನು ದಾನಮಾಡಿದರೆ ಸ್ವರ್ಗ ಸಿಗುವುದು.

ಶಾಲಗ್ರಾಮ ಶಿಲಾದಾನಕ್ಕೆ ಕೋಟಿ ತುಲಾಪುರುಷದಾನದಫಲವಿದೆ. ಸಪ್ತದ್ವೀಪಗಳಿಂದ ಕೂಡಿದ ಭೂಮಿಯನ್ನು ದಾನಮಾಡಿದ ಫಲವಿದೆ. ಹದಿನಾಲ್ಕು ಲೋಕಗಳನ್ನು ದಾನಮಾಡಿದ ಫಲವಿದೆ. ತುಲಾಪುರುಷದಾನದಿಂದ ಪುನರ್ಜನ್ಮವಿಲ್ಲ-ದಂತಾಗುತ್ತದೆ. ಸಾಲಂಕಾರ ಕನ್ಯಾದಾನದಿಂದ ಬ್ರಹ್ಮಲೋಕಪ್ರಾಪ್ತಿ, ಪುನರ್ಜನ್ಮ ನಿವೃತ್ತಿ.

**ಕನ್ಯಾವಿಕ್ರಯಿಣೋ ನಾಸ್ತಿ ನರಕಾನ್ನಿಷ್ಕೃತಿಃ ಪುನಃ**
**ಕನ್ಯಾದಾನ ಕೃತೋ ನಾಸ್ತಿ ಸ್ವರ್ಗಾದಾಗಮನಂ ಪುನಃ**

ಕನ್ಯಾಶುಲ್ಕವನ್ನು ಪಡೆಯುವವನು ನರಕವನ್ನು ಸೇರುತ್ತಾನೆ, ಹಿಂತಿರುಗಿ ಬರುವುದಿಲ್ಲ. ಕನ್ಯಾದಾನ ಮಾಡುವವನು ಸ್ವರ್ಗವನ್ನು ಸೇರುತ್ತಾನೆ, ಹಿಂತಿರುಗಿ ಬರುವುದಿಲ್ಲ.

ಮುದಿಯಾದ ಗೋವನ್ನು ಹಳೆಯ ಬಟ್ಟೆಯನ್ನು ಮೈನೆರೆತ ಕನ್ಯೆಯನ್ನು ದಾನಮಾಡುವವನು ನರಕಕ್ಕೆ ಹೋಗುತ್ತಾನೆ. ಕನ್ಯೆಯನ್ನು ಮಾರುವವನ ಮುಖವನ್ನು ನೋಡಬಾರದು. ತಿಳಿಯದೆ ನೋಡಿದರೂ ಸೂರ್ಯದರ್ಶನ ಮಾಡಿ ಆ ಪಾಪವನ್ನು ಪರಿಹರಿಸಿಕೊಳ್ಳಬೇಕು.

ವಿದ್ಯಾದಾನವೂ ಒಂದು ಉತ್ತಮದಾನ. ಅದರಿಂದ ವಿಷ್ಣುಲೋಕದಲ್ಲಿ ಮುನ್ನೂರು ಯುಗಗಳಕಾಲ ವಾಸ ಲಭಿಸುತ್ತದೆ. ಅಲ್ಲಿ ದುರ್ಲಭ ಜ್ಞಾನವನ್ನು ಪಡೆದು ಹರಿಯ ಕೃಪೆಯಿಂದ ಮೋಕ್ಷವನ್ನೂ ಹೊಂದಬಹುದು. ಅನಾಥ ದುಃಖಿ ಬ್ರಾಹ್ಮಣನನ್ನು ಓದಿಸಿದರೆ ವಿಷ್ಣುಲೋಕ ಪ್ರಾಪ್ತಿ. ಬಳಿಕ ಪುನರ್ಜನ್ಮವಿಲ್ಲ. ಭಕ್ತಿ ಶ್ರದ್ಧೆಗಳಿಂದ ಪುಸ್ತಕವನ್ನು ದಾನಮಾಡಿದರೆ ಅದರಲ್ಲಿರುವ ಪ್ರತಿಯೊಂದು ಅಕ್ಷರಕ್ಕೂ ಕೋಟಿ ಕಪಿಲಾದಾನದ ಫಲವಿದೆ.

ಜೇನು ಬೆಲ್ಲದಾನಗಳಿಂದ ಇಕ್ಷು ಸಮುದ್ರಲಾಭ. ಲವಣದಾನದಿಂದ ವರುಣಲೋಕ ಪ್ರಾಪ್ತಿ.

ಎಲ್ಲ ದಾನಗಳಿಗಿಂತ ಅನ್ನದಾನ ಮೇಲು ಎಂದು ಎಲ್ಲ ಮುನಿಗಳ ಅಭಿಮತವಿದೆ. ಅನ್ನ-ನೀರು ದಾನಮಾಡಿದರೆ ಭೂಮಿಯ ಮೇಲಿನ ಎಲ್ಲ ವಸ್ತುಗಳನ್ನೂ

ದಾನಮಾಡಿದಂತೆ. ಏಕೆಂದರೆ ಅನ್ನದಾನ ಮಾಡಿದರೆ ಪ್ರಾಣದಾನ ಮಾಡಿದಂತಾಗುತ್ತದೆ. ಹಸಿವು ನೀರಡಿಕೆಗಳ ದುಃಖ, ಸಮಾನ. ಆದುದರಿಂದ ಅವುಗಳನ್ನು ಪರಿಹರಿಸುವ ಅನ್ನ ನೀರುಗಳೂ ಪರಸ್ಪರ ಸಮಾನ. ಅನ್ನದಾನದಿಂದ ವಿಷ್ಣುಲೋಕ ಲಭಿಸುವುದು. ಎಷ್ಟು ಬಗೆಯ ಅನ್ನದಾನ ಮಾಡುವೆವೋ ಅಷ್ಟು ಬ್ರಹ್ಮಹತ್ಯಾಪಾತಕಗಳೂ ಕಳೆಯುವುವು. ಅನ್ನದಾನ ಮಾಡುವವನ ಪಾಪಗಳೆಲ್ಲ ಅದನ್ನು ಸ್ವೀಕರಿಸುವವನಲ್ಲಿ ಬಂದು ಸೇರಿಕೊಳ್ಳುವುದರಿಂದ ಪಾಪಿಗಳ ಕೈಯಿಂದ ಅನ್ನವನ್ನು ಸ್ವೀಕರಿಸಕೂಡದು. ಬಾವಿ ತೋಡಿಸಿ ಕುಡಿಯುವ ನೀರನ್ನೊದಗಿಸಿದರೆ ಎಲ್ಲ ಪಾಪಗಳ ಪರಿಹಾರವಾಗುವುದು ವಿಷ್ಣುಲೋಕವೂ ಲಭಿಸುವುದು.

**ಪ್ರಯತ್ನೇನ ದ್ವಿಜಶ್ರೇಷ್ಠ ಕರ್ತವ್ಯೋ ಧನಸಂಚಯಃ ।**
**ಸಂಚಿತಂ ಚ ಧನಂ ಬ್ರಹ್ಮನ್ ದಾನಕರ್ಮಣೀ ವಿಕ್ಷಿಪೇತ್ ॥**

ಪ್ರಯತ್ನಪಟ್ಟು ಹಣವನ್ನು ಕೂಡಿಡಬೇಕು. ಕೂಡಿಟ್ಟ ಹಣವನ್ನು ದಾನಕ್ಕೆ ವಿನಿಯೋಗಿಸಬೇಕು.

**ರಕ್ಷಂತಿ ಯೇ ಚ ಕಾರ್ಪಣ್ಯಾತ್ ಧನಂ ತೇ ಜಾತಿ ದುಃಖಿನಃ**
**ಅಂತೇ ಸರ್ವಧನಂ ತ್ಯಕ್ತ್ವಾ ನಿಃಸ್ವಾ ಗಚ್ಛಂತಿ ಭೋ ಮುನೇ ॥**

ಜಿಪುಣತನದಿಂದ ಹಣವನ್ನು ಕಾಪಾಡುತ್ತಿರುವುದೇ ಮಹಾ ದುಃಖ. ಕೊನೆಗೆ ಆ ಎಲ್ಲ ಹಣವನ್ನೂ ಬಿಟ್ಟು ದರಿದ್ರನಾಗಿ ಹೊರಟು ಹೋಗುವುದೂ ತಪ್ಪಿದ್ದಲ್ಲ.

**ಮಾನವಾ ಯೇ ಸದಾ ದಾನಂ ದತ್ವಾ ದತ್ವಾ ದರಿದ್ರತಿ**
**ದರಿದ್ರಾಸ್ತೇನ ವಿಜ್ಞೇಯಾ ನರಲೋಕೇ ಮಹೇಶ್ವರಾಃ**

ಸದಾ ದಾನವನ್ನು ಕೊಟ್ಟು ಕೊಟ್ಟು ದರಿದ್ರರಾಗುವವರನ್ನು ದರಿದ್ರರೆಂದು ತಿಳಿಯಕೂಡದು. ಅವರು ಮಾನವಲೋಕದಲ್ಲಿಯೇ ಅತ್ಯಂತ ಶ್ರೀಮಂತರು.

ಪರಲೋಕದಲ್ಲಿ ಈ ಬಂಧುಗಳು ಯಾರೂ ನಮ್ಮೊಡನಿರುವುದಿಲ್ಲ. **'ನ ದತ್ತಂ ನೋಪತಿಷ್ಠತೇ'** ದಾನಮಾಡದಿರುವುದು ನಮಗೆ ದೊರೆಯುವುದೂ ಇಲ್ಲ. ಆದ್ದರಿಂದ ಹಣವಿದ್ದೂ ತಾನುಣ್ಣದೆ ಪರರಿಗೂ ಕೊಡದಿರುವನು ದರಿದ್ರನಂತೆಯೆ ಎಂದು ತಿಳಿಯಬೇಕು.

ತಪಸ್ಸಿಗಿಂತಲೂ ದಾನವೆ ಉತ್ತಮ. ಪ್ರಯತ್ನಪಟ್ಟು ದಾನ ಮಾಡಬೇಕು.

ದಾನ ಕೊಟ್ಟಮೇಲೆ ಅದನ್ನು ನೆನೆಯಕೂಡದು. ಸ್ವೀಕರಿಸುವವನು ಅದನ್ನು ಬೇಡಬಾರದು. ಇಲ್ಲದಿದ್ದರೆ ನರಕವಾಸ, ಸೂರ್ಯಚಂದ್ರರಿರುವಷ್ಟು ಕಾಲ.

*ಇತಿ ಪದ್ಮ ಮಹಾಪುರಾಣ ಭಾಗ-೨ರ ಬ್ರಹ್ಮಖಂಡದಲ್ಲಿ ಸೂತಶೌನಕ ಸಂವಾದದಲ್ಲಿ ದಾನಗಳ ಮಹಿಮೆ ಎಂಬ ಇಪ್ಪತ್ತೊಂದನೇಯ ಅಧ್ಯಾಯ ಮುಗಿದುದು*

—o—

ಭಗವನ್ನಾಮ ಮಹಿಮೆ

ಅಧ್ಯಾಯ - ೨೨

**ಶೌನಕ ಉವಾಚ**

**ಶೌನಕ :-** ವಿಷ್ಣುವಿನ ಚರಿತ್ರೆ ಸಂಪತ್ತನ್ನು ನೀಡುವುದು. ಎಲ್ಲ ದುಃಖಗಳನ್ನೂ ಪಾಪಗಳನ್ನೂ ದುಷ್ಟಗ್ರಹಗಳನ್ನು ಕಳೆದು ವಿಷ್ಣುವಿನ ಸಾನ್ನಿಧ್ಯವನ್ನು ಕೊಡುವದು. ನಾಲ್ಕು ಪುರುಷಾರ್ಥಗಳನ್ನೂ ಭಕ್ತಿಯಿಂದ ಶ್ರವಣ ಮಾಡಿದರೆ ವಿಷ್ಣುಲೋಕವನ್ನೂ ಕೊಡುವದು. ಅವನ ನಾಮೋಚ್ಚಾರಣೆಗೂ ಅದ್ಭುತ ಮಹಿಮೆ ಇದೆ ಎಂದು ಕೇಳಿದ್ದೇವೆ. ಪರಮ ಪದವನ್ನೇ ಕೊಡಬಲ್ಲ ಹರಿನಾಮ ಸಂಕೀರ್ತನೆಯನ್ನು ಮಾಡುವ ವಿಧಾನವನ್ನು ಹೇಳು.

**ಸೂತ :-** ಈ ವಿಷಯದಲ್ಲಿ ನಾರದ ಸನತ್‌ಕುಮಾರರ ಸಂವಾದವನ್ನು ಹೇಳುತ್ತೇನೆ, ಕೇಳು. ಯಮುನಾ ತೀರದಲ್ಲಿ ಶಾಂತ ಚಿತ್ತನಾಗಿ ಸನತ್ಕುಮಾರರು ಕುಳಿತಿದ್ದರು. ನಾರದರು ಬಂದು ಕೈಮುಗಿದು ಕೇಳಿದರು.

**ನಾರದ :-** ಭಗವಾನ್ ಧರ್ಮಕ್ಕೆ ಮಾಡಿದ ಅಪಚಾರವೇನಾದರೂ ಇದ್ದರೆ ಅದಕ್ಕೆ ಪರಿಹಾರವೇನು ?

**ಸನತ್ಕುಮಾರ :-** ಎಲ್ಲ ಆಚಾರಗಳನ್ನು ಬಿಟ್ಟು ಲೋಕ ವಂಚಕ ಪಾಪಿ ಜನರೂ ಕೇವಲ ಹೆಂಡಿರು ಮಕ್ಕಳು ಸಂಪತ್ತು ಇವುಗಳಲ್ಲಿಯೇ ಆಸಕ್ತರಾದ ಸಾಮಾನ್ಯ ಜನರೂ ಶ್ರೀ ಗೋವಿಂದಪಾದಾರವಿಂದಗಳ ಶರಣು ಹೊಂದಿದರೆ ಶುದ್ಧರಾಗುವರು. ಅವರನ್ನು ಹರಿನಾಮವು ಪವಿತ್ರಗೊಳಿಸುವುದು. ಎಲ್ಲ ಅಪರಾಧಗಳಿಂದಲೂ ಮುಕ್ತಿ ಕೊಡುವವನು ಹರಿ. ಅವನಲ್ಲಿ ಅಪರಾಧ ಮಾಡುವವನು ಮನುಷ್ಯ ಜಾತಿಗೆ ಕಲಂಕನೆನಿಸುತ್ತಾನೆ. ಹರಿನಾಮವನ್ನೊಮ್ಮೆ ಉಚ್ಚರಿಸಿದರೆ ಎಂಥ ದುಃಖದಿಂದಲೂ ಪಾರಾಗಬಹುದು. ಎಲ್ಲರಿಗೂ ಹಿತಕಾರಿಯಾದ ಆ ಹರಿನಾಮಕ್ಕೆ ಅಪರಾಧವೆಸಗಿದರೆ ಅಧಃಪತನವೆ ಸರಿ.

**ನಾರದ :-** ಹರಿನಾಮಕ್ಕೆ ಯಾವ ಅಪರಾಧವನ್ನು ಮಾಡಿದರೆ ಪುರುಷಾರ್ಥ ಸಂಪಾದನೆಗೆ ಅಡ್ಡಿ, ಅನರ್ಥ ಪ್ರಾಪ್ತಿಗೆ ದಾರಿ ಉಂಟಾಗುವುದು.

**ಸನತ್ಕುಮಾರ :-** ಸಜ್ಜನರ ನಿಂದೆ ಮೊದಲನೆ ಅಪರಾಧ. ಗುಣ ನಾಮ ಮುಂತಾದವುಗಳೆಲ್ಲ ವಿಷ್ಣುವಿಗಿಂತ ಭಿನ್ನ. ಶಿವನು ಸ್ವತಂತ್ರನೆಂದು ತಿಳಿಯುವವನು ವಿಷ್ಣು ನಾಮದ ವಿಷಯದಲ್ಲಿ ಅಪರಾಧಿ ಎನಿಸುವನು.

ಹಿರಿಯರಲ್ಲಿ ತಿರಸ್ಕಾರ ಬುದ್ಧಿ, ವೇದಶಾಸ್ತ್ರಗಳನ್ನು ನಿಂದಿಸುವದು, ಹರಿನಾಮ ಮಹಿಮೆಗಳನ್ನು ಶಾಸ್ತ್ರದಲ್ಲಿ ಹೇಳಿದ್ದರೂ ಅದೆಲ್ಲ ಬರಿ ಪ್ರಶಂಸೆ ಎಂದು ತಿಳಿಯುವದು, ನಾಮ ಜಪಮಾಡಿದರೆ ಸಾಕೆಂದು ಸ್ವಧರ್ಮ ವ್ರತಗಳನ್ನು ತ್ಯಾಗಮಾಡುವದು, ಯಜ್ಞಗಳಂಥ ಎಲ್ಲ ಪುಣ್ಯ ಕರ್ಮಗಳಂತೆ ನಾಮ ಜಪವೂ ಒಂದು ಸಾಮಾನ್ಯವಾದ ಆಚಾರವೆಂದು ತಿಳಿಯುವುದು, ಶಾಸ್ತ್ರದ ಉಪದೇಶಗಳಲ್ಲಿ ಅಶ್ರದ್ಧೆ, ವಿಮುಖತೆ ಉಳ್ಳವನಿಗೆ ಉಪದೇಶಿಸುವದು, ಹರಿನಾಮ ಮಹಿಮೆಯನ್ನು ಕೇಳಿದರೂ ಏನು ಆನಂದ ಪಡದಿರುವದು, ನಾನು ನನ್ನದು ಎಂಬ ದುರಭಿಮಾನ, ಈ ಹತ್ತು ಅಪರಾಧಗಳನ್ನು

ತಿಳಿದೂ ಯಾರು ಬಿಡಲೊಲ್ಲರೋ ಅವರು ತಾಯಿಯ ಮೇಲಿನ ಕೋಪದಿಂದ ಉಣದೆ ಹಸಿವಿನಿಂದ ಬಳಲುವ ಬಾಲಕರಂತೆ ಬುದ್ಧಿ ಶೂನ್ಯರೆಂದು ತಿಳಿಯಬೇಕು.

ನಾರದ, ಶಿವನೇ ಈ ಹರಿನಾಮಾಪರಾಧಗಳನ್ನು ನನಗೂ ಮುನಿಗಳಿಗೂ ಉಪದೇಶಿಸಿರುವನು. ಅವುಗಳನ್ನು ಬಹು ಯತ್ನದಿಂದ ತ್ಯಾಗಮಾಡಿ ಶ್ರೀಹರಿಯ ನಾಮಗಳನ್ನು ಜಪಿಸು. ನಿನಗೆ ಅದರಿಂದಲೇ ಎಲ್ಲ ಅಭೀಷ್ಟಗಳ ಸಿದ್ಧಿಯಾಗುವದು. ಅದಕ್ಕೆ ಬೇರೆ ಉಪಾಯವಿಲ್ಲ.

**ನಾರದ :-** ಜ್ಞಾನಭಕ್ತಿ ವೈರಾಗ್ಯಗಳ ಅಭಾವದಿಂದ ನಾಮಾಪರಾಧಗಳನ್ನು ಮಾಡುವವರು ಅವುಗಳಿಂದ ಬಿಡುಗಡೆ ಹೊಂದುವ ಉಪಾಯವೇನು ?

**ಸನತ್ಕುಮಾರ :-** ತಿಳಿಯದೆ ನಾಮಾಪರಾಧವನ್ನೆಸಗಿದರೆ ಸದಾನಾಮ ಸಂಕೀರ್ತನೆ ಮಾಡಿಯೇ ಆ ಪಾಪವನ್ನು ತೊಳೆದುಕೊಳ್ಳಬೇಕು.

**ನಾಮಾಪರಾಧಯುಕ್ತಾನಾಂ ನಾಮಾನ್ಯೇವ ಹರಂತ್ಯಘಂ**

ನಾಮಗಳ ವಿಷಯದಲ್ಲಿ ಅಪರಾಧ ಮಾಡಿದವರ, ಪಾಪವನ್ನು ನಾಮಗಳೇ ಕಳೆಯಬೇಕು. ಬೇರಾವ ಉಪಾಯವೂ ಇಲ್ಲ.

ಒಂದೇ ಒಂದು ನಾಮವೂ ಅದನ್ನು ಮನಸ್ಸಿನಲ್ಲಿಯೋ ಶ್ರವಣೇಂದ್ರಿಯದಲ್ಲಿಯೋ ಇರಿಸಿಕೊಂಡರೆ ಮೋಕ್ಷವನ್ನೇ ತಂದು ಕೊಡಬಲ್ಲದು. ಆದರೆ ಅದನ್ನು ಶರೀರ ಧನ ವನಿತಾದಿ ಲೋಭದ ಮಧ್ಯದಲ್ಲಿರಿಸಿದರೆ ಏನೂ ಫಲ ಕೊಡಲಾರದು. ಎಲ್ಲ ಪುರಾಣಗಳೂ ನಾಮಮಹಾತ್ಮೆಯನ್ನು ವರ್ಣಿಸುವದರಿಂದ ಅವನ್ನು ಶ್ರದ್ಧೆಯಿಂದ ಕೇಳಿ ಶಿವ ವಿಷ್ಣುಗಳ ಮತ್ತು ಅವರ ಪರಿವಾರ ದೇವತೆಗಳ ಅನುಗ್ರಹ ಪಡೆಯಬೇಕು. ಪುಷ್ಕರ ಪ್ರಯಾಗ ಮುಂತಾದ ತೀರ್ಥಸ್ನಾನಕ್ಕಿಂತ ಎರಡು ಪಾಲು ಹೆಚ್ಚಿನ ಫಲ ಶ್ರದ್ಧೆಯಿಂದ ಪುರಾಣ ಶ್ರವಣಮಾಡಿದರೆ ಲಭಿಸುತ್ತದೆ. ಅದರ ಒಂದೊಂದಕ್ಷರಕ್ಕೂ ಕಪಿಲಾದಾನದ ಫಲವಿದೆ. ಪುತ್ರರಿಲ್ಲದವರಿಗೆ ಪುತ್ರ, ದರಿದ್ರಗೆ ಸಂಪತ್ತು, ವಿದ್ಯಾರ್ಥಿಗಳಿಗೆ ವಿದ್ಯೆ, ಮುಮುಕ್ಷುಗಳಿಗೆ ಮೋಕ್ಷ ದೊರಕುತ್ತದೆ. ಕೋಟಿ ಜನ್ಮಗಳ ಪಾಪ ಪರಿಹಾರವಾಗುವುದು, ವಿಷ್ಣುಲೋಕ ದೊರೆಯುವುದು.

ಪುರಾಣ ಹೇಳುವವನನ್ನು ಭಕ್ತಿಯಿಂದ ಪೂಜಿಸಬೇಕು. ಗೋ ಭೂ ಹಿರಣ್ಯ ವಸ್ತ್ರ ಗಂಧ ಪುಷ್ಪ ಮುಂತಾದವುಗಳನ್ನಿತ್ತು ಪುರಾಣವನ್ನು ಹೇಳಿಸಬೇಕು. ಪುರಾಣದ ಪುಸ್ತಕವನ್ನು ಭಕ್ತಿಯಿಂದ ದಾನಮಾಡಬೇಕು. ಆಗ ಅವನ ಹೆಸರನ್ನು ಚಿತ್ರಗುಪ್ತನು ತನ್ನ ಪುಸ್ತಕದಲ್ಲಿ ಭಕ್ತಿಯಿಂದ ಬರೆದಿಟ್ಟುಕೊಳ್ಳುತ್ತಾನೆ.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಬ್ರಹ್ಮ ಖಂಡದಲ್ಲಿ ಸೂತ ಶೌನಕ ಸಂವಾದದಲ್ಲಿ ಭಗವನ್ನಾಮ ಮಹಿಮೆ ಎಂಬ ಇಪ್ಪತ್ತೆರಡನೇಯ ಅಧ್ಯಾಯ ಮುಗಿದುದು*

—o—

**ಶೌನಕ ಉವಾಚ**

**ಶೌನಕ :-** ಕೊಟ್ಟ ಮಾತನ್ನು ತಪ್ಪದೆ ನಡೆಸಿದರೇನು ಪುಣ್ಯವಿದೆ ? ಬಲಗೈಯನ್ನಿತ್ತು ಭಾಷೆ ಕೊಟ್ಟ ಮೇಲೆ ಅದನ್ನು ಮರೆತರೆ ಏನು ಪಾಪವಿದೆ ?

**ಸೂತ :-** ಕೊಟ್ಟ ಭಾಷೆಯನ್ನು ನಡೆಸಿದರೆ ಕೋಟಿ ಗೋದಾನಗಳ ಫಲವಿದೆ. ಅದನ್ನು ಮರೆತರೆ ನೂರು ಮನ್ವಂತರಗಳ ಕಾಲ ನರಕವಾಸ. ಬಳಿಕ ದರಿದ್ರ ಕುಟುಂಬದಲ್ಲಿ ಜನ್ಮ, ಅನ್ನ ವಸ್ತ್ರಗಳಿಲ್ಲದೆ ನಿತ್ಯ ದುಃಖಾನುಭವ ಹೊಂದ ಬೇಕಾಗುವುದು.

ನಿಜ ಸಂಗತಿಯನ್ನು ತಿಳಿಸುವಾಗಲೂ ದೇವ ಅಗ್ನಿ ಗುರು ಸನ್ನಿಧಿಯಲ್ಲಿ ಆಣೆಯಿಡುವುದು ತಪ್ಪು. ಸುಳ್ಳು ಆಣೆಯಿಟ್ಟರೆ ಆಗುವ ಅನರ್ಥವನ್ನೇನು ಹೇಳಲಿ ? ನೂರು ಮನ್ವಂತರಗಳ ಕಾಲ ನರಕವಾಸವಂತೂ ತಪ್ಪಿದ್ದಲ್ಲ. ಶ್ರೀಹರಿಯ ನಿರ್ಮಾಲ್ಯವನ್ನು ಮುಟ್ಟಿ ನಿಜ ಸಂಗತಿಯಲ್ಲಿ ಆಣೆಯಿಟ್ಟರೂ ತನ್ನ ಜತೆಗೆ ಕುಲದ ಏಳು ಪೀಳಿಗೆಯವರನ್ನು ನರಕದಲ್ಲಿ ಎಸೆಯುವನು. ಬಳಿಕ ಭೂಮಿಯಲ್ಲಿ ಹುಟ್ಟಿದರೂ ಕುಷ್ಠರೋಗದಿಂದ ಬಳಲಬೇಕಾಗುವುದು ಸುಳ್ಳು ಸಂಗತಿಯಲ್ಲಿ ಆಣೆಯಿಟ್ಟರೆ ಪರಿಣಾಮವೇನಾದೀತು ? ಯಾರು ಬಲಗೈಯನ್ನು ಕೊಟ್ಟು ಶಪಥ ಮಾಡುವರೋ ಅವರು ಅದನ್ನು ನಡೆಸಿಕೊಡಬೇಕು. ಆಗ ವಿಷ್ಣುಲೋಕ ಪ್ರಾಪ್ತಿಯಾಗುವುದು. ನಡೆಸಿಕೊಡದಿದ್ದರೆ ಅವರಿಗೂ ಅವರ ಪಿತೃಗಳಿಗೂ ನರಕ ಉಂಟಾಗುವುದು.

**ಶೌನಕ :-** ಬಲಗೈಯನ್ನು ಕೊಟ್ಟು ಮಾಡಿದ ಶಪಥವನ್ನು ಈಡೇರಿಸಿ ವಿಷ್ಣುಲೋಕವನ್ನು ಹಿಂದೆ ಯಾರು ಪಡೆದರು ?

**ಸೂತ :-** ಹಿಂದೆ ವೀರ ವಿಕ್ರಮನೆಂಬ ಒಬ್ಬ ಸಭ್ಯನಾದ ಶೂದ್ರನಿದ್ದ. ಸುಂದರ, ಒಳ್ಳೆಯ ಮಾತುಗಾರ, ಐಶ್ವರ್ಯವಂತ, ವಿದ್ಯಾವಂತ, ಎಲ್ಲರಿಗೂ ಪ್ರಿಯನಾದವ. ಬ್ರಾಹ್ಮಣರನ್ನೂ ಅತಿಥಿಗಳನ್ನೂ ಸದಾ ಪೂಜಿಸುವವ, ಪಿತೃಭಕ್ತ. ಗುರು ಹಿರಿಯರ ಮಾತನ್ನು ನಡೆಸಿಕೊಡುವವ, ಹರಿಯ ಆರಾಧನೆ ಮಾಡುವವ. ಕೊಟ್ಟ ಮಾತಿಗೆ ತಪ್ಪದವ. ಒಂದು ದಿನ ಅವನ ಮನೆಗೊಬ್ಬ ಚಂಡಾಲ ಯುವಕ, ಬ್ರಾಹ್ಮಣವೇಶದಲ್ಲಿ ಬಂದು ಹೇಳಿದ.

**ಬ್ರಾಹ್ಮಣ :-** ನನ್ನ ಮಡದಿ ಮೃತಳಾದಳು. ನಾನಿನ್ನು ಏನು ಮಾಡಲಿ, ಎಲ್ಲಿಗೆ ಹೋಗಲಿ, ಹೇಳು. ನನ್ನಂಥ ಬ್ರಾಹ್ಮಣನಿಗೆ ಕನ್ಯಾದಾನಮಾಡಿದರೆ ಬೇರಾವ ದಾನಗಳನ್ನೂ ಮಾಡಬೇಕಾಗಿಲ್ಲ. ತೀರ್ಥಯಾತ್ರೆ,ಯಜ್ಞವ್ರತಗಳನ್ನು ಮಾಡಬೇಕಾಗಿಲ್ಲ.

**ವೀರವಿಕ್ರಮ :-** ಬ್ರಾಹ್ಮಣೋತ್ತಮನೇ, ನನಗೋರ್ವಳು ಮಗಳಿರುವಳು. ಅವಳನ್ನು ನಿನಗೆ ವಿಧಿ ಪೂರ್ವಕವಾಗಿ ಧಾರೆಯೆರೆದು ಕೊಡುವೆನು, ಇಗೋ ನನ್ನ ಬಲಗೈಯನ್ನಿತ್ತು ಭಾಷೆ ಕೊಡುತ್ತೇನೆ.

ಇದನ್ನು ಕೇಳಿ ಬ್ರಾಹ್ಮಣ ವೇಷದ ಚಂಡಾಲ ಸಂತೋಷದಿಂದ ಅವನ ಬಲಗೈಯನ್ನು ಹಿಡಿದು ಭಾಷೆಯನ್ನು ತೆಗೆದುಕೊಂಡ. ವಿಲಂಬಮಾಡಬೇಡ. ಬೇಗನೆ ಕನ್ಯಾದಾನ ಮಾಡಿಬಿಡು ಎಂದ. ಆಗಲಿ ನಾಳೆಯೆ ನಿನಗೆ ಕನ್ಯಾದಾನ ಮಾಡುವೆನೆಂದ ವೀರವಿಕ್ರಮ.

ಕೃಷ್ಣಶರ್ಮನೆಂಬ ಪುರೋಹಿತ ಬ್ರಾಹ್ಮಣನನ್ನು ಕರೆಸಿ ತನ್ನ ನಿಶ್ಚಯವನ್ನು ತಿಳಿಸಿದಾಗ ಅವನು ಆಕ್ಷೇಪಿಸಿದ.

**ಪುರೋಹಿತ :-** ಬ್ರಾಹ್ಮಣನೆ ಇರಲಿ ಶೂದ್ರನೆ ಇರಲಿ ಅವನ ಕುಲಗೋತ್ರವನ್ನರಿಯದೆ ಕನ್ಯಾದಾನ ಮಾಡುವುದು ಯುಕ್ತವಲ್ಲ.

ವೀರವಿಕ್ರಮನ ಬಂಧುಗಳೂ ಈ ಆಕ್ಷೇಪವನ್ನೇ ಸಮರ್ಥಿಸಿದರು. ಕುಲದೇಶ ಗೋತ್ರ ಧನ ಶೀಲ ವಯಸ್ಸುಗಳನ್ನು ಸರಿಯಾಗಿ ತಿಳಿದುಕೊಳ್ಳದೆ ಒಬ್ಬನಿಗೆ ಕನ್ಯಾದಾನ ಮಾಡಕೂಡದೆಂದು ತಂದೆ ತಾಯಿಗಳೂ ಹಿರಿಯರೂ ಬೋಧಿಸಿದರು. ಬಲಗೈಯನ್ನಿತ್ತು ಕೊಟ್ಟ ಭಾಷೆಗೆಂದೂ ನಾನು ತಪ್ಪಲಾರೆನೆಂದ ವೀರವಿಕ್ರಮ. ಅಂತೆಯೇ ಕನ್ಯಾದಾನಕ್ಕೂ ಅಣಿಯಾದ. ಬಂಧುಗಳೆಲ್ಲರೂ ಅಚ್ಚರಿಗೊಂಡರು. ಕೊಟ್ಟ ಮಾತಿಗೆ ತಪ್ಪದ ವೀರವ್ರತಕ್ಕೆ ಮೆಚ್ಚಿ ಸ್ವಯಂ ಶಂಖ ಚಕ್ರಗದಾಧಾರಿ, ಗುರುಡವಾಹನ ಹರಿ ಮೈದೋರಿ ನುಡಿದ.

**ಹರಿ :-** ನಿನ್ನ ವಂಶ ಧನ್ಯ, ನಿನ್ನ ತಂದೆ ತಾಯಿಗಳು ಧನ್ಯರು. ನಿನ್ನ ಸತ್ಯ ವಾಕ್ಯ ಕರ್ಮ ಜನ್ಮ ಎಲ್ಲವೂ ಧನ್ಯ. ಮೂರು ಲೋಕದಲ್ಲಿಯೇ ದುರ್ಲಭವಾದುವುಗಳು. ನೀನು ನಿನ್ನ ಕುಲವನ್ನೇ ಉದ್ಧಾರ ಮಾಡಿರುವೆ.

ಅಷ್ಟರಲ್ಲಿ ವಿಷ್ಣುದೂತರು ಒಂದು ಸುವರ್ಣ ವಿಮಾನವನ್ನು ತಂದರು. ವೀರ ವಿಕ್ರಮ, ಅವನ ಕುಲದವರು ಪುರೋಹಿತರು ಕನ್ಯೆಮದುವೆಗೆ ಎಲ್ಲರನ್ನು ಆ ಸುವರ್ಣ ವಿಮಾನದಲ್ಲಿ ಸ್ವಯಂ ಹರಿಯೇ ಕುಳ್ಳಿರಿಸಿ ವೈಕುಂಠಕ್ಕೆ ಕರೆದೊಯ್ದನು.

ಕೊಟ್ಟ ಮಾತಿಗೆ ತಪ್ಪುವವನಿಗೆ ನರಕಪ್ರಾಪ್ತಿ, ಅವನ ಕುಲದವರಿಗೂ ನರಕಪ್ರಾಪ್ತಿ. ಅವನ ಕೈಯಿಂದ ನೀರನ್ನು ಪಿತೃಗಳೂ ಸ್ವೀಕರಿಸರು. ಅವನ ಮನೆಯಿಂದ ಧರ್ಮ ದೇವತೆ ಹೆದರಿ ಪಲಾಯನ ಮಾಡುವಳು. ಈ ಖಂಡವನ್ನು ಕೇಳಿದರೆ ಜೀವನ್ಮುಕ್ತಿ ದೊರೆಯುವುದು. ಕೃಷ್ಣಮಯರಾಗುವರು.

*ಶ್ರೀ ವ್ಯಾಸಪ್ರಣೀತ ಪದ್ಮಮಹಾಪುರಾಣ ಭಾಗ - ೨ರ ಬ್ರಹ್ಮಖಂಡದಲ್ಲಿನ ಸೂತಶೌನಕ ಸಂವಾದದಲ್ಲಿ ಪ್ರತಿಜ್ಞಾಪಾಲನ ಎಂಬ ಇಪ್ಪತ್ತಮೂರನೇಯ ಅಧ್ಯಾಯ ಮುಗಿಯುವುದರೊಂದಿಗೆ*

**ಬ್ರಹ್ಮಖಂಡ ಮುಗಿದುದು**

—೦—

## ಪದ್ಮ ಮಹಾಪುರಾಣದ

# ಪಾತಾಳ ಖಂಡ

ಶೇಷ-ವಾತ್ಸ್ಯಾಯನ ಸಂವಾದ

ಅಧ್ಯಾಯ - ೧

**ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಂ**
**ದೇವೀಂ ಸರಸ್ವತೀಂ ವ್ಯಾಸಂ ತತೋ ಜಯಮುದೀರಯೇತ್**

ಪುರುಷೋತ್ತಮನಾದ ನಾರಾಯಣನನ್ನೂ ನರನನ್ನೂ ದೇವಿಸರಸ್ವತಿಯನ್ನೂ ವೇದವ್ಯಾಸರನ್ನೂ ನಮಸ್ಕರಿಸಿ ಬಳಿಕ ಅವರಿಗೆ ಜಯವಾಗಲೆಂದು ಘೋಷಿಸಬೇಕು.

**ಋಷಿಗಳು :-** ಸೂತನೆ, ಸುಂದರವಾದ ಬ್ರಹ್ಮಖಂಡವನ್ನು ಕೇಳಿದ್ದಾಯಿತು. ಮುಂದೆ ಶ್ರೀರಾಮನ ಚರಿತ್ರೆಯನ್ನು ಹೇಳು.

**ಸೂತ :-** ಋಷಿಗಳೆ, ಹಿಂದೊಮ್ಮೆ ಈ ಚರಿತ್ರೆಯನ್ನೇ ವಾತ್ಸ್ಯಾಯನನು ಶೇಷದೇವನಲ್ಲಿ ಕೇಳಬಯಸಿದನು.

**ವಾತ್ಸ್ಯಾಯನ :-** ಶೇಷದೇವ, ಜಗತ್ತಿನ ಸೃಷ್ಟಿ ಪ್ರಳಯ ಭೂಗೋಳ ಖಗೋಳ ಜ್ಯೋತಿಶ್ಚಕ್ರ ನಿರ್ಣಯಗಳ ಬಗ್ಗೆ ಎಲ್ಲವನ್ನೂ ಹೇಳಿರುವೆ. ಮಹದಾದಿ ತತ್ವಸೃಷ್ಟಿ, ಅನೇಕ ರಾಜರ ಚರಿತ್ರೆಗಳನ್ನೂ ಹೇಳಿರುವೆ. ಸೂರ್ಯವಂಶದ ರಾಜರ ಚರಿತ್ರೆ, ಅದರಲ್ಲಿಯೂ ಶ್ರೀರಾಮನು ಅಶ್ವಮೇಧವನ್ನಾಚರಿಸಿದ ಕಥೆ ಅದ್ಭುತ, ಪಾಪಹರ, ಅದನ್ನೂ ಸಂಕ್ಷೇಪವಾಗಿ ನಿನ್ನ ಮುಖದಿಂದ ಕೇಳಿದ್ದಾಯಿತು. ನೆನೆದ ಮಾತ್ರಕ್ಕೆ ಎಲ್ಲ ಪಾಪಗಳನ್ನು ಕಳೆದು ಎಲ್ಲ ಅಭೀಷ್ಟವನ್ನೀವ ಆ ಕಥೆಯನ್ನೂ ಇನ್ನೂ ವಿಸ್ತಾರವಾಗಿ ಕೇಳ ಬಯಸುತ್ತೇನೆ.

**ಶೇಷ :-** ಮುನಿಯೆ, ನೀನು ಧನ್ಯ. ಶ್ರೀರಾಮನ ಪದಕಮಲ ಮಕರಂದವನ್ನು ಆಶಿಸುವ ನಿನ್ನಂಥ ಸಾಧುಗಳ ಸಂಗ ನನಗೆ ಬೇಕು. ಪವಿತ್ರವಾದ ಶ್ರೀರಾಮನ ಕಥೆಯನ್ನು ನಾನು ಸ್ಮರಿಸುವಂತೆ ಮಾಡಿ ಅನುಗ್ರಹಿಸುತ್ತಿರುವ ನಿನಗೆ ಯಥಾಶಕ್ತಿ ಅದನ್ನು ವರ್ಣಿಸುವೆನು. ಸಮುದ್ರದಂತೆ ಅಪಾರವಾದ ರಾಮಕಥೆಯನ್ನು ಬ್ರಹ್ಮಾದಿ ದೇವತೆಗಳೂ ಅರಿಯಲಾರರು. ಅದರ ಮುಂದೆ ಸೊಳ್ಳೆಯಂಥ ನಾನೆಷ್ಟರವನು ? ನೂರು ಕೋಟಿ ಗ್ರಂಥದಷ್ಟು ವಿಸ್ತಾರವಾದ ಆ ಕಥೆಯಲ್ಲಿ ಎಷ್ಟು ತಿಳಿದಿದೆಯೊ ಅಷ್ಟು ಮಾತ್ರ ಹೇಳುವೆನು.

**ಪಕ್ಷಿಣಃ ಸ್ವಗತಿ ಪ್ರಾಯಂ ಖೇ ಗಚ್ಛಂತಿ ಸುವಿಸ್ತರೇ ।**
ಹಕ್ಕಿಗಳು ವಿಶಾಲ ಆಕಾಶದಲ್ಲಿ ತಮ್ಮ ಶಕ್ತಿಯಿದ್ದಷ್ಟು ಎತ್ತರಕ್ಕೆ ಹಾರುತ್ತವೆ.

ಸೀತಾದೇವಿಯ ಚರಿತೆಯೂ ಪಾವನವಾದುದು. ಅದನ್ನು ಹೇಳಿದರೆ ಬೆಂಕಿಯಲ್ಲಿ ಶೋಧಿಸಿದ ಚಿನ್ನದಂತೆ ನನ್ನ ಅಂತಃಕರಣ ಶುದ್ಧವಾಗುವುದು.

ಹೀಗೆ ಹೇಳಿ ಶೇಷನೊಂದು ಕ್ಷಣ ಧ್ಯಾನಿಸಿ ಜ್ಞಾನದೃಷ್ಟಿಯಿಂದ ಲೋಕೋತ್ತರವಾದ ಆ ರಾಮನ ಕಥೆಯನ್ನು ಕಂಡು ಆನಂದದಿಂದ ಪುಲಕಿತನಾದ. ಗದ್ಗದ ಕಂಠದಿಂದ ಹೀಗೆ ಹೇಳತೊಡಗಿದ.

**ಶೇಷ** :- ಅಪ್ಸರೆಯರ ಮುಖದ ಕಾಂತಿಯನ್ನು ಕಳೆದ ರಾವಣನು ಮಡಿದಾಗ ದೇವತೆಗಳಿಗಾನಂದವಾಯಿತು. ವಿಭೀಷಣನಿಗೆ ಲಂಕೆಯಲ್ಲಿ ಪಟ್ಟಾಭಿಷೇಕ ಮಾಡಿಸಿ ಶ್ರೀರಾಮನು ಸೀತೆಯೊಂದಿಗೆ ಪುಷ್ಪಕವಿಮಾನವನ್ನೇರಿದ. ಜೊತೆಗೆ ಲಕ್ಷ್ಮಣ, ಸುಗ್ರೀವ, ಹನುಮಂತರನ್ನೂ ಕುಳ್ಳಿರಿಸಿಕೊಂಡು ಲಂಕಾದರ್ಶನ ಮಾಡಿದ, ಮುರಿದುಬಿದ್ದ ಕೋಟೆ ಕೊತ್ತಲಗಳನ್ನು ಕಂಡ, ಅಶೋಕವನವನ್ನೂ, ಅಲ್ಲಿ ಸೀತೆಯಿದ್ದ ಸ್ಥಳವನ್ನೂ ನೋಡಿದಾಗ ರಾಮನಿಗೆ ಮೂರ್ಛೆ ಬಂದಂತಾಯಿತು.

ಲಂಕೆಯನ್ನೆಲ್ಲ ನೋಡಿದ ಶ್ರೀರಾಮ ಅಯೋಧ್ಯೆಗೆ ಹೊರಟ. ಆಗ ಬ್ರಹ್ಮಾದಿ ದೇವತೆಗಳು ನೆರೆದರು. ದೇವದುಂದುಭಿ ಮೊಳಗಿದುವು. ಅಪ್ಸರೆಯರು ಕುಣಿದರು. ವಿಭೀಷಣನು ಶ್ರೀರಾಮ ವಿರಹವನ್ನು ತಡೆಯಲಾರದೆ ತಾನೂ ಜತೆಗೆ ಹೊರಟು ನಿಂತ. ಎಲ್ಲರೂ ಪುಷ್ಪಕವನ್ನೇರಿ ಅಯೋಧ್ಯೆಯ ಕಡೆಗೆ ಪ್ರಯಾಣ ಬೆಳೆಸಿದರು.

ದಾರಿಯಲ್ಲಿ ಶ್ರೀರಾಮನು ಸೀತೆಗೆ ತಾವು ಹಿಂದೆ ನೋಡಿದ್ದ ರಮ್ಯ ಪ್ರದೇಶಗಳನ್ನೂ, ಪುಣ್ಯಾಶ್ರಮಗಳನ್ನೂ, ಅಲ್ಲಿರುವ ಮುನಿಗಳನ್ನೂ, ಮುನಿಪತ್ನಿಯರನ್ನೂ, ಮುನಿಕುಮಾರರನ್ನೂ ತೋರಿಸುತ್ತಿದ್ದ. ಪುಷ್ಪಕವು ಅಯೋಧ್ಯೆಯನ್ನು ಸಮೀಪಿಸಿದಾಗ ಅದರ ಬಳಿಯ ನಂದಿಗ್ರಾಮವನ್ನು ಶ್ರೀರಾಮ ದೂರದಿಂದ ಕಂಡ. ಅಲ್ಲಿ ಭರತನು ಅಣ್ಣನಾದ ರಾಮನ ವಿರಹ ದುಃಖದಿಂದ ಅವನನ್ನೆ ಧ್ಯಾನಿಸುತ್ತ ಧರ್ಮದಿಂದ ರಾಜ್ಯಪಾಲನೆ ಮಾಡುತ್ತಿದ್ದ. ಜಡೆ ನಾರುಮಡಿಗಳನ್ನು ಧರಿಸಿ ಬ್ರಹ್ಮಚರ್ಯದಿಂದಿದ್ದ. ಅನ್ನ ನೀರು ಬಿಟ್ಟಿದ್ದ. ಸದಾ ರಾಮಕಥೆಯಲ್ಲಾಸಕ್ತನಾಗಿದ್ದ. ಪ್ರತಿ ದಿನ ಸೂರ್ಯೋದಯವಾದೊಡನೆ ಆ ಭಗವಂತನಲ್ಲಿ ಮೊರೆಯಿಡುತ್ತಿದ್ದ.

'ದೇವ ಕ್ಷಮಿಸು, ನಾನು ಮಹಾಪಾಪಿ. ನನ್ನ ದೆಸೆಯಿಂದ ಜಗತ್ಪೂಜ್ಯನಾದ ರಾಮನಿಗೆ ವನವಾಸವಾಯಿತು. ಆ ಸೀತಾದೇವಿ, ಹೂವಿನ ಹಾಸಿಗೆಯಲ್ಲಿಯೂ, ಹೂವಿನ ತೊಟ್ಟಿನ ಸ್ಪರ್ಶವನ್ನು ತಡೆಯದಿದ್ದ ಕೋಮಲಾಂಗಿ, ಬಿಸಿಲಿನ ತಾಪವನ್ನೆಂದೂ ಅನುಭವಿಸದಿದ್ದವಳು, ಇಂದು ಘೋರಾರಣ್ಯದಲ್ಲಿ ಅಲೆಯುವಂತಾಯಿತು. ರಾಜ ಮಹಾರಾಜರುಗಳ ದೃಷ್ಟಿಗೆ ಬೀಳದಿದ್ದ ಆ ಮಹಾದೇವಿಯನ್ನಿಂದು ಅರಣ್ಯದಲ್ಲಿ ಕಿರಾತರಂಥ ಹೀನ ಜನರೂ ನೋಡುತ್ತಿರಬಹುದು. ಅರಮನೆಯ ಷಡ್ರಸಾನ್ನ ಉಂಡು ಹಸಿವನ್ನೆ ಕಂಡರಿಯದ ಬಾಲೆ ಈಗ ಕಾಡಿನ ಹಣ್ಣು ಹಂಪಲುಗಳನ್ನು ಬೇಡುತ್ತಿರುವಂತಾಯಿತು !'

ಸಚಿವರು ಎಷ್ಟೋ ಬಗೆಯಿಂದ ಅವನನ್ನು ಸಂತೈಸಲು ಯತ್ನಿಸಿದರು ಅದೊಂದೂ ಫಲಕಾರಿಯಾಗಲಿಲ್ಲ.

'ಅಮಾತ್ಯರೆ, ನಾನು ಪುರುಷಾಧಮ, ದೌರ್ಭಾಗ್ಯವಂತ. ನನಗೇಕೆ ನಿಮ್ಮ ಈ ಸಾಂತ್ವನ ವಚನಗಳು ? ನನ್ನ ಸಲುವಾಗಿಯೆ ಅಲ್ಲವೆ ನಮ್ಮಣ್ಣನಾದ ರಾಮ ಕಾಡಿಗೆ ಹೋಗಿ ಕಷ್ಟ ಪಡುತ್ತಿರುವುದು ? ನನ್ನ ಪಾಪಗಳ ಮಾರ್ಜನೆಗೀಗ ಅವಕಾಶ ಈ ಪಾಪಿಗೆ ದೊರಕಿದೆ. ಮಂತ್ರಿಗಳೆ, ನನ್ನನ್ನು ಬಿಟ್ಟುಬಿಡಿ. ಆ ರಾಮನ ಪಾದಗಳನ್ನು ಸ್ಮರಿಸುತ್ತ ನನ್ನ ಪಾಪಗಳನ್ನು ತೊಳೆದುಕೊಳ್ಳುವೆ. ಆ ಮಾತೆ ಸುಮಿತ್ರೆಯ ಧನ್ಯೆ; ವೀರಮಾತೆಯೆಂದರೆ ಆಕೆ. ರಾಮನ ಪಾದಗಳನ್ನು ಎಡೆಬಿಡದೆ ಸೇವಿಸುತ್ತಿರುವನಲ್ಲವೆ, ಅವಳ ಸುಪುತ್ರ ಲಕ್ಷ್ಮಣ ?'

ಹೀಗೆ ನಾನಾ ವಿಧವಾಗಿ ಪ್ರಲಾಪ ಮಾಡುತ್ತ ಅಣ್ಣನಿಗಾಗಿ ಅಳುತ್ತ ಭರತನಿದ್ದ ಗ್ರಾಮ ನಂದಿಗ್ರಾಮ. ಅದನ್ನು ರಾಮ ದೂರದಿಂದ ಕಂಡ.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಪಾತಾಳ ಖಂಡದಲ್ಲಿ ಶೇಷ-ವಾತ್ಸ್ಯಾಯನ ಸಂವಾದದಲ್ಲಿ ರಘುನಾಥನ ಭರತಾಧಿಷ್ಠಿತ ನಂದಿಗ್ರಾಮ ದರ್ಶನವೆಂಬ ಮೊದಲನೆ ಅಧ್ಯಾಯ ಮುಗಿದುದು*



## ರಾಮನ ನಂದಿಗ್ರಾಮ ದರ್ಶನ

## ಅಧ್ಯಾಯ - ೨

**ಶೇಷ ಉವಾಚ**

**ಶೇಷ :-** ನಂದಿಗ್ರಾಮವನ್ನು ಕಂಡೊಡನೆ, ಪ್ರೀತಿಯ ತಮ್ಮನ ನೆನಪಾಗಿ ಅವನನ್ನು ಕಾಣುವ ಉತ್ಕಂಠೆಯಿಂದ ರಾಮನು ಪರವಶನಾದ. ಚಂದ್ರನ ಕಾಂತಿಯನ್ನು ಸೂಸುವ ದಂತಪಂಕ್ತಿ ಹೊಳೆಯುತ್ತಿದ್ದಂತೆ ಹನುಮಂತನನ್ನು ಕರೆದು ಹೇಳಿದ.

**ಶ್ರೀರಾಮ :-** ವೀರನೆ, ನನ್ನ ವಿಯೋಗ ದುಃಖವನ್ನು ಬಹುಕಾಲದಿಂದ ಅನುಭವಿಸಿದ ಭರತನೀಗ ಹೇಗಿರುವನೊ ! ಎಷ್ಟು ಸೊರಗಿರುವನೊ ! ಜಡೆ ನಾರು ಮಡೆಗಳನ್ನುಟ್ಟು ಹಣ್ಣು ಹಂಪಲುಗಳನ್ನು ತಿನ್ನುತ್ತ ವಿಯೋಗ ದುಃಖಾಗ್ನಿ ಜ್ವಾಲೆಯಿಂದ ಬೇಯುತ್ತಿರಬಹುದು. ನೀನು ನನ್ನಾಗಮನ ಸಂದೇಶವನ್ನರುಹಿ ಅವನ ತಾಪವನ್ನು ಕಳೆ, ಪರಸ್ತ್ರೀಯರನ್ನು ಮಾತೆಯರಂತೆ, ಪರರ ಸೊತ್ತನ್ನು ಮಣ್ಣಿನಂತೆ ಪ್ರಜೆಗಳನ್ನು ಮಕ್ಕಳಂತೆ ಕಾಣುವ ಧರ್ಮಜ್ಞನಾದ ಬಂಧು ಭರತ. ಅವನ ಬಳಿಗೆ ಹೋಗು. ಸೀತಾಲಕ್ಷ್ಮಣ ಸಮೇತನಾಗಿ, ಸುಗ್ರೀವಾದಿ ಕಪಿಗಳನ್ನೂ, ವಿಭೀಷಣಾದಿ ರಾಕ್ಷಸರನ್ನೂ ಜತೆಗೆ ಕರೆದುಕೊಂಡು ಪುಷ್ಪಕ ವಿಮಾನವೇರಿ ರಾಮ ಬರುತ್ತಿದ್ದಾನೆ ಎಂದು ಹೇಳು. ಅವನಿಗೆ ಅದರಿಂದ ಆನಂದವಾಗುವುದು.

ರಘುವೀರನ ಈ ಮಾತನ್ನು ಕೇಳಿ ಹನುಮಂತನ ಹೊರಟು ನಂದಿಗ್ರಾಮವನ್ನು ಸೇರಿದ. ಅಲ್ಲಿ ವೃದ್ಧ ಅಮಾತ್ಯರಿಗೆ ರಾಮನ ಕಥೆಯನ್ನು ಹೇಳುತ್ತ ಅವನ ಪಾದ ಕಮಲಮಕರಂದಕ್ಕೆ ಹಾತೊರೆಯುತ್ತ ಕುಳಿತಿದ್ದ ಧರ್ಮಮೂರ್ತಿಯಾದ ಭರತನನ್ನು ಕಂಡು ನಮಸ್ಕರಿಸಿದ. ಭರತನೆದ್ದು ಕೈಮುಗಿದು ಸ್ವಾಗತಿಸಿ 'ವೀರನೆ, ರಾಮನು ಕುಶಲಿಯಾಗಿರುವನೆ, ಹೇಳು' ಎಂದ. ಆಗ ಅವನ ಬಲಭುಜ ಅದುರಿತು. ಎದೆಯಲ್ಲಿ

ದುಃಖವಾರಿತು. ಕಣ್ಣುಗಳಲ್ಲಿ ಆನಂದಬಾಷ್ಪ ತುಂಬಿತು. ಹನುಮಂತನೆಂದ, 'ಇಗೊ ಇಲ್ಲಿಯೆ ಸಮೀಪದಲ್ಲಿ ರಾಮ ಲಕ್ಷ್ಮಣರು ಬರುತ್ತಿದ್ದಾರೆ.'

ರಾಮಾಗಮನ ಸಂದೇಶದ ಅಮೃತದಿಂದ ತೊಯ್ದು ಹೋದ ಭರತನಿಗಾದ ಆನಂದದ ಹೊಳೆಯನ್ನು ಸಹಸ್ರಾಕ್ಷನಾದ ನಾನೆ ತಿಳಿಯಲಾರೆ.

'ವೀರನೆ ರಾಮಸಂದೇಶವನ್ನು ತಂದಿತ್ತ ನಿನಗೆ ಪ್ರತಿಯಾಗಿ ಕೊಡಲು ಯೋಗ್ಯವಾದುದೇನೂ ನನ್ನಲಿಲ್ಲ. ಜನ್ಮಪರ್ಯಂತ ನಾನೆ ನಿನ್ನದಾಸನಾಗಿರುವೆ' ಎಂದ ಭರತ.

ಒಡನೆ, ವಸಿಷ್ಠರ ಕೈಯಲ್ಲಿ ಅರ್ಘ್ಯೋದಕವನ್ನು ತೆಗೆಸಿಕೊಂಡು ಮಂತ್ರಿಗಳೊಂದಿಗೆ ರಾಮನನ್ನು ಇದಿರುಗೊಳ್ಳಲು ಹೊರಟರು. ಹನುಮಂತನು ಅವರಿಗೆ ದಾರಿ ತೋರಿಸಿದ. ಜಡೆ ನಾರುಮಡಿ ಕೌಪೀನಗಳನ್ನು ಧರಿಸಿ ಪಾದಚಾರಿಯಾಗಿ ತನ್ನನ್ನು ಇದಿರುಗೊಳ್ಳಲು ಬಂದ ಭರತನನ್ನು ಕಂಡು ರಾಮನು ಮರುಗಿದ. 'ರಾಜ ರಾಜನಾದ ದಶರಥನ ಮಗನಾಗಿದ್ದೂ ಜಡೆ ನಾರುಮಡಿ ಧರಿಸಿ ಬರಿಗಾಲಲ್ಲಿ ನಡೆದು ಬರುತ್ತಿದ್ದಾನೆ ಭರತ ! ನನ್ನ ವಿಯೋಗದಿಂದ ಅವನಿಗಾದ ದುಃಖ ಕಾಡಿನಲ್ಲಿಯೂ ನನಗೆಂದೂ ಆಗಿರಲಿಲ್ಲ. ನನಗೆ ಪ್ರಾಣಕ್ಕಿಂತ ಮಿಗಿಲು ಈ ನನ್ನ ತಮ್ಮ' ಎಂದು ಹೇಳುತ್ತ ಸಡಗರದಿಂದ ಪುಷ್ಪಕದಿಳಿದು ''ತಮ್ಮ, ತಮ್ಮ'' ಎಂದು ಪ್ರೀತಿಯಿಂದ ಕರೆದು ಭರತನನ್ನಾಲಿಂಗಿಸಿದ. ಭರತನು ದಂಡಪ್ರಣಾಮ ಮಾಡಿ ರಾಮನ ಪಾದಗಳನ್ನು ಬಲವಾಗಿ ಹಿಡಿದುಕೊಂಡ. ರಾಮನು ಅವನನ್ನೆಬ್ಬಿಸಿದರೂ ಆತನೇಳಲಿಲ್ಲ. ಕಣ್ಣೀರು ಸುರಿಸುತ್ತ ನುಡಿದ.

**ಭರತ :-** ರಾಮಚಂದ್ರ, ದಯೆದೋರು. ನಾನು ಪಾಪಿ, ದುಷ್ಟ. ನಿನ್ನೀ ಕೋಮಲ ಪಾದಗಳು ಸೀತೆಯ ಕರಸ್ಪರ್ಶವನ್ನೂ ತಡೆದುಕೊಂಡಿರಲಿಲ್ಲ. ಆದರೆ ನನ್ನ ದೆಸೆಯಿಂದ ಕಾಡಿನಲ್ಲಿ ಅಲೆದುವು.

ಹೀಗೆ ಹೇಳಿ ರಾಮನನ್ನು ಅನೇಕ ಬಾರಿ ಆಲಿಂಗಿಸಿಕೊಂಡು ಕೈಮುಗಿದು ನಿಂತ ಭರತ. ಸೀತೆಯನ್ನೂ ವಂದಿಸಿ ಕ್ಷಮೆ ಬೇಡಿದ.

ರಾಮನು ಮಂತ್ರಿಗಳಿಗೆ ನಮಸ್ಕರಿಸಿ ಕುಶಲ ಪ್ರಶ್ನೆ ಮಾಡಿದ. ಭರತನೊಂದಿಗೆ ತಿರುಗಿ ಪುಷ್ಪಕವನ್ನೇರಿ ಕುಳಿತು, ಅಯೋಧ್ಯೆಯ ಕಡೆಗೆ ಪ್ರಯಾಣ ಮಾಡಿದ.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಪಾತಾಳಖಂಡದಲ್ಲಿ ಶೇಷ-ವಾತ್ಸ್ಯಾಯನ ಸಂವಾದದಲ್ಲಿ ರಾಮನ ರಾಜಧಾನಿ ದರ್ಶನವೆಂಬ ಎರಡನೆ ಅಧ್ಯಾಯ ಮುಗಿದುದು*

—o—

ಶ್ರೀರಾಮನಪುರ ಪ್ರವೇಶ

ಅಧ್ಯಾಯ - ೩

**ಶೇಷ ಉವಾಚ**

**ಶೇಷ :-** ತನ್ನ ಪ್ರಜೆಗಳು ವಾಸ ಮಾಡುತ್ತಿರುವ ಅಯೋಧ್ಯೆಯನ್ನು ಬಹು ಕಾಲದಿಂದ ನೋಡಬಯಸಿದ್ದ ರಾಮನೀಗ ಅದನ್ನು ನೋಡಿ ಆನಂದಪಟ್ಟನು. ಭರತನು ಸುಮುಖನೆಂಬ ಒಬ್ಬ ಸಚಿವನನ್ನು ನಗರದಲ್ಲಿ ಉತ್ಸವ ಸಿದ್ಧತೆಯ ಏರ್ಪಾಡಿಗಾಗಿ ಕಳುಹಿಸಿಕೊಟ್ಟನು. ಭರತನಾಜ್ಞೆ ಹೀಗಿತ್ತು.

**ಭರತ :-** ಪ್ರಜೆಗಳೆಲ್ಲರೂ ರಾಮಾಗಮನದ ಉತ್ಸವವನ್ನಾಚರಿಸಬೇಕು. ಮನೆಗಳನ್ನು ಸಿಂಗರಿಸಿರಬೇಕು. ರಾಜಮಾರ್ಗದಲ್ಲಿ ಧೂಳು ಇರಕೂಡದು. ಚಂದನದ ನೀರು ಚಿಮುಕಿಸಿರಬೇಕು. ಹೂಗಳನ್ನು ಚೆಲ್ಲಿರಬೇಕು. ಜನರೆಲ್ಲರೂ ಸಂತೋಷದಿಂದಿರಬೇಕು. ನಾನಾವರ್ಣದ ಧ್ವಜಗಳಿಂದ ಚಿತ್ರಗಳಿಂದ ಹೊಳೆವ ಮನೆಯಂಗಳವನ್ನು ಕಪಿಗಳು ಕಂಡರೆ ಕಾಮನ ಬಿಲ್ಲೆಂದು ಭ್ರಮಿಸುವಂತಿರಬೇಕು. ಪ್ರತಿ ಮನೆಯಲ್ಲಿಯೂ ಅಗರು ಧೂಪವನ್ನು ಹಾಕಿ ಅದರ ಹೊಗೆಯನ್ನು ನವಿಲುಗಳು ಮೋಡವೆಂದು ಭ್ರಮಿಸಿ ಕುಣಿವಂತೆ ಮಾಡಬೇಕು. ಬೆಟ್ಟದಷ್ಟು ಗಾತ್ರದ ನನ್ನ ಆನೆಗಳನ್ನು ಗೈರಿಕಾದಿಧಾತುಗಳಿಂದ ಸಿಂಗರಿಸಬೇಕು. ಮನೋವೇಗದ ನನ್ನ ಕುದುರೆಗಳನ್ನು ಅಲಂಕರಿಸಿ ಅವುಗಳೋಟದ ಪ್ರದರ್ಶನವನ್ನೇರ್ಪಡಿಸಬೇಕು. ಅವುಗಳ ವೇಗವನ್ನು ಕಂಡು ದೇವಲೋಕದ ಕುದುರೆಗಳು ತಮ್ಮ ದರ್ಪವನ್ನು ಬಿಡುವಂತಾಗಬೇಕು. ಸಾವಿರಾರು ಸುಂದರ ಕನ್ಯೆಯರು ಎಲ್ಲ ಆಭರಣಗಳಿಂದ ಅಲಂಕರಿಸಿಕೊಂಡು ಆನೆಯ ಮೇಲೇರಿ ಕುಳಿತು ಎಲ್ಲ ಕಡೆ ಮುತ್ತುಗಳನ್ನು ಚೆಲ್ಲಬೇಕು. ಬ್ರಾಹ್ಮಣ ಸುವಾಸಿನಿಯರು ಗರಿಕೆ ಅರಿಶಿಣಗಳ ಪಾತ್ರೆಗಳನ್ನು ಹಿಡಿದು ಮಹಾರಾಜ ರಾಮಚಂದ್ರನಿಗಾರತಿ ಎತ್ತಬೇಕು. ಮಗನ ಆಗಮನದ ವಾರ್ತೆಯನ್ನು ಇನ್ನೂ ತಿಳಿಯದ ಕೌಸಲ್ಯಾಮಾತೆ ಅವನನ್ನು ಕಂಡು ಆನಂದಿಸುವಂತಾಗಬೇಕು.

ಅಮಾತ್ಯ ಸುಮುಖನು ಭರತನಾಜ್ಞೆಯನ್ನು ಪ್ರಜೆಗಳಿಗೆ ತಿಳಿಸಿದ. ಪ್ರಜೆಗಳಿಗಾನಂದವಾಯಿತು. ಬ್ರಾಹ್ಮಣರು ಮಡಿಯುಟ್ಟು ದರ್ಭಪಾಣಿಗಳಾಗಿ, ಶೂರರಾದ ಕ್ಷತ್ರಿಯರು ಧನುರ್ಬಾಣಧಾರಿಗಳಾಗಿ, ಶ್ರೀಮಂತ ವೈಶ್ಯರು ಮುದ್ರಾಧಾರಿಗಳಾಗಿ ದ್ವಿಜಭಕ್ತರಾದ ಶೂದ್ರರು ತಮ್ಮಲ್ಲಿರುವ ವಸ್ತುಗಳನ್ನು ಹಿಡಿದುಕೊಂಡು ರಾಮನನ್ನು ಇದಿರುಗೊಳ್ಳಲು ನಗರದ ದ್ವಾರಕ್ಕೆ ಬಂದರು. ಎಲ್ಲ ದೇವತೆಗಳೊಂದಿಗೆ ಶ್ರೀರಾಮನು ನಗರ ಪ್ರವೇಶ ಮಾಡಿದನು. ಹಿಂದಿನಿಂದ ಕಪಿಗಳು ಆಗಸಕ್ಕೆ ನೆಗೆಯುತ್ತ ಉತ್ಸಾಹದಿಂದ ಬಂದರು.

ಪಲ್ಲಕ್ಕಿಯನ್ನೇರಿ ಸೀತಾಸಮೇತನಾದ ಶ್ರೀರಾಮಚಂದ್ರ ಪುರಪ್ರವೇಶ ಮಾಡುತ್ತಿದ್ದಂತೆ ಪ್ರಜೆಗಳು 'ಶ್ರೀ ರಾಮನಿಗೆ ಜಯವಾಗಲಿ! ಸೂರ್ಯಕುಲರಾಮನಿಗೆ ಜಯವಾಗಲಿ! ದಶರಥ ಪುತ್ರನಿಗೆ ಜಯವಾಗಲಿ ! ಲೋಕ ನಾಯಕನಿಗೆ ಜಯವಾಗಲಿ !' ಎಂದು ಮುಂತಾಗಿ

ಆನಂದದಿಂದ ಘೋಷಿಸಿದರು. ವೀಣೆ ತಮಟೆ, ಭೇರಿ ಮೊದಲಾದ ವಾದ್ಯಗಳ ಮಂಗಳ ಘೋಷಗಳನ್ನು ಮಾಡಿದರು. ಸೂತ ಮಾಗಧ ವಂದಿಗಳು ಸ್ತೋತ್ರ ಮಾಡಿದರು.

ಚಂದನದ ನೀರು ಚಿಮುಕಿಸಿ ಹೂ, ಎಳೆ ತಳಿರುಗಳನ್ನು ಚೆಲ್ಲಿರುವ ರಾಜಮಾರ್ಗವನ್ನು ಶ್ರೀರಾಮನು ಪ್ರವೇಶಿಸಿದಾಗ ಪೌರ ಮಹಿಳೆಯರು ಮನೆಗಳ ಕಿಟಕಿಗಳಲ್ಲಿ ನಿಂತು ಅವನನ್ನು ಕಣ್ತುಂಬ ನೋಡಿ ಆನಂದಿಸಿದರು.

**ಪೌರಾಂಗನೆಯರು :-** ಕಾಡಿನಲ್ಲಿ ಈ ರಾಮನ ಮುಖ ಕಮಲವನ್ನು ತಮ್ಮ ಕಣ್ಣುಗಳಿಂದ ಕುಡಿವಂತೆ ನೋಡುವ ಮಹಾ ಭಾಗ್ಯವನ್ನು ಪಡೆದ ಭಿಲ್ಲಸ್ತ್ರೀಯರೆ ನಿಜವಾಗಿಯೂ ಅದೃಷ್ಟಶಾಲಿಗಳು. ವೀರತನದ ನೆಲೆಯಾಗಿರುವ ರಾಮನ ತಾವರೆಗಣ್ಣುಗಳ ಮುಖವನ್ನು ಮಹಾಭಾಗ್ಯಶಾಲಿಗಳೆನಿಸಿದ ಬ್ರಹ್ಮಾದಿ ದೇವತೆಗಳಿಗೂ ನೋಡುವ ಅವಕಾಶವಿಲ್ಲ. ನಾವೆ ಮಹಾಭಾಗ್ಯಶಾಲಿಗಳು. ಬನ್ನಿ : ನೋಡಿ ! ಮುಖದಲ್ಲಿ ಆ ನಗುವಿನ ಮೋಡಿ ! ತಲೆಯಲ್ಲಿ ಕಿರೀಟದ ಶೋಭೆ ! ಕೆಂಪು ದಾಸವಾಳದ ಹೂವನ್ನು ನಾಚಿಸುವ ತುಟಿಯ ರಂಗು ! ಉನ್ನತವಾವ ನಾಸಿಕದ ಆ ಅಂದ !'

ಪ್ರೀತಿಯಿಂದ ಹೀಗೆ ಮಾತನಾಡಿಕೊಳ್ಳುತ್ತಿದ್ದ ಆ ಹೆಂಗಳೆಯರನ್ನೂ ಗಾಢ ಪ್ರೇಮವನ್ನು ತೋರುತ್ತಿದ್ದ ಜನರನ್ನೂ ತಾವರೆ ಕಣ್ಣುಗಳ ನೋಟದಿಂದ ಆನಂದಗೊಳಿಸಿ ಮಾತೆಯನ್ನು ಕಾಣುವ ತವಕದಿಂದ ಅವಳ ನಿವಾಸಕ್ಕೆ ಹೋಗಲು ಬಯಸಿದನು ಶ್ರೀರಾಮ.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಪಾತಾಳಖಂಡದಲ್ಲಿ ಶೇಷ-ವಾತ್ಸ್ಯಾಯನ ಸಂವಾದದಲ್ಲಿ ಶ್ರೀರಾಮನ ಪುರಪ್ರವೇಶವೆಂಬ ಮೂರನೆ ಅಧ್ಯಾಯ ಮುಗಿದುದು*



## ಶ್ರೀರಾಮ ರಾಜ್ಯಭಿಷೇಕ — ಅಧ್ಯಾಯ - ೪

**ಶೇಷ ಉವಾಚ**

**ವಾತ್ಸ್ಯಾಯನ :-** ನಾಗರಾಜ, ಶ್ರೀರಾಮನು ವನವಾಸಕ್ಕೆ ತೆರಳಿದಂದಿನಿಂದ ಅವನ ತಾಯಿ ವಿರಹದುಃಖದಿಂದ ಬೆಂದಳು. ಮನಸ್ಸು ಶೂನ್ಯವಾಯಿತು. ಶರೀರ ಸೊರಗಿ ಹೋಯಿತು. ಅಮಾತ್ಯ ಸುಮುಖನ ಮುಖದಿಂದ ರಾಮಾಗಮನ ವಾರ್ತೆಯನ್ನು ಕೇಳಿದೊಡನೆ ಅವಳು ಹೇಗೆ ಆನಂದವನ್ನು ವ್ಯಕ್ತಪಡಿಸಿದಳು ? ಆ ಶುಭ ವಾರ್ತೆಯವನ್ನು ತಂದವನಿಗೆ ಅವಳೇನೆಂದಳು ? ಹೇಳು''.

**ಶೇಷ :-** ಆ ಶುಭ ಸಂದೇಶದ ಅಮೃತವನ್ನು ಕುಡಿಕುಡಿದು ಪರವಶಳಾಗಿ ನಿಶ್ಚೇಷ್ಟಳಾದಳು ಆ ತಾಯಿ. 'ಇದೇನು ಕನಸೆ ? ವಂಚನೆಯ ನುಡಿಗಳೆ ? ಅದೃಷ್ಟ ಹೀನೆಯಾದ ನನಗೂ ಮತ್ತೆ ರಾಮನ ದರ್ಶನವಿದೆಯೆ ? ಎಷ್ಟು ತಪಸ್ಸು ಮಾಡಿ ಈ ಮಗುವನ್ನು ಪಡೆದೆ! ಆದರೂ ಯಾವುದೊ ಒಂದು ಪಾಪದಿಂದ ಅವನು ನನ್ನನ್ನು ಅಗಲಿದ' ಹೀಗೆ ಅಂದುಕೊಂಡು, 'ಮಂತ್ರಿಯೆ, ರಾಮನು ಕ್ಷೇಮದಿಂದಿರುವನೆ? ಸೀತಾಲಕ್ಷ್ಮಣರೊಂದಿಗೆ ಕಾಡಿನಲ್ಲಿ ಸಂಚರಿಸುವಾಗಲೂ ನನ್ನನ್ನು ಜ್ಞಾಪಿಸಿಕೊಂಡನೆ ?' ಹೀಗೆ ರಾಮನನ್ನು ನೆನೆಸಿಕೊಂಡು ಗಟ್ಟಿಯಾಗಿ ಅತ್ತಳು ಮೂರ್ಛೆ ಹೋದಳು. ಮಂತ್ರಿ

ತನ್ನ ಬಟ್ಟೆಯ ತುದಿಯಿಂದ ಆಕೆಗೆ ಗಾಳಿ ಬೀಸಿದನು. ಅವಳೆಚ್ಚತ್ತೊಡನೆ ತಿರುಗಿ ರಾಮನಾಗಮನವನ್ನು ತಿಳಿಸಿ ಆನಂದವುಂಟು ಮಾಡಿದ. 'ತಾಯಿ, ರಾಮನು ಸೀತಾಲಕ್ಷ್ಮಣರೊಂದಿಗೆ ನಿನ್ನ ಮನೆಗೆ ಬಂದನೆಂದೆ ತಿಳಿ, ಹೋಗು, ನೋಡು, ಆಶೀರ್ವದಿಸು.'

ಇದನ್ನು ಕೇಳಿದ ಆ ತಾಯಿಗಾದ ಆನಂದವೆಷ್ಟೆಂದು ಊಹಿಸಲೂ ನಾನು ಸಮರ್ಥನಲ್ಲ. ಆಕೆಯ ಶರೀರವೆಲ್ಲ ರೋಮಾಂಚನವಾಯಿತು. ಆನಂದದಿಂದ ವಿಹ್ವಲಗೊಂಡಿತು. ಎದ್ದು ಮನೆಯಂಗಳಕ್ಕೆ ನಡೆದು ಬಾಷ್ಪ ತುಂಬಿದ ಕಣ್ಣುಗಳಿಂದ ರಾಮನು ಪಲ್ಲಕ್ಕಿಯೇರಿ ಬರುತ್ತಿದ್ದುದನ್ನು ಕಂಡಳು.

ರಾಮನು ಮೊದಲು ಕೈಕೇಯಿಯ ಮನೆಯ ಮುಂದೆ ಪಲ್ಲಕ್ಕಿಯಿಂದಿಳಿದು ಆಕೆಯ ಮುಂದೆ ಬಂದು ನಿಂತ. ಆಕೆ ಲಜ್ಜೆಯಿಂದ ಪಶ್ಚಾತ್ತಾಪದಿಂದ ತಲೆತಗ್ಗಿಸಿ ಏನೂ ಆಡದೆ ನಿಂತುಬಿಟ್ಟಳು. ರಾಮನು ಸಮಾಧಾನಪಡಿಸುತ್ತ ವಿನಯದಿಂದ ನುಡಿದ.

**ಶ್ರೀರಾಮ :-** ಅಮ್ಮ, ನಾನು ಕಾಡಿಗೆ ಹೋಗಿ ನೀನು ಹೇಳಿದಂತೆ ನಡೆದಿದ್ದೇನೆ. ಇನ್ನು ನಿನ್ನಾಜ್ಞೆ ಏನಿದೆ ಹೇಳು. ನೀನು ಹೇಳಿದುದನ್ನೊಂದನ್ನೂ ಬಿಡದೆ ನಡೆಸಿಕೊಟ್ಟಿದ್ದೇನೆ. ಆದರೂ ನನ್ನನ್ನೇಕೆ ನೋಡಲಾರೆ ? ಇಗೊ ನೋಡು, ಭರತನನ್ನೂ ನನ್ನನ್ನೂ ಆಶೀರ್ವದಿಸು.

ಈ ಮಾತುಗಳನ್ನು ಕೇಳಿಯೂ ಆಕೆ ತಲೆ ಎತ್ತದೆ ಮೆಲ್ಲನೆ ನುಡಿದಳು.

'ರಾಮ, ನೀನೀಗ ನಿನ್ನ ಮನೆಗೆ ಹೋಗು.'

ರಾಮನು ಆಕೆಗೆ ನಮಸ್ಕರಿಸಿ ಸುಮಿತ್ರೆಯ ಮನೆಗೆ ಹೋದನು. ಆಕೆ ಚಿರಂಜೀವಿಯಾಗು ಚಿರಂಜೀವಿಯಾಗು ಎಂದು ಬಾಯಿ ತುಂಬ ಹರಸಿದಳು. ರಾಮನು ಆ ತಾಯಿಯ ಕಾಲಿಗೆ ವಂದಿಸಿ ಸಂತೋಷದಿಂದಾಲಿಂಗಿಸಿ ನುಡಿದನು. 'ಅಮ್ಮ ನೀನು ರತ್ನಗರ್ಭೆ. ನನ್ನ ದುಃಖನಿವಾರಣೆಯನ್ನು ಈ ನನ್ನ ಪ್ರೀತಿಯ ತಮ್ಮ ಲಕ್ಷ್ಮಣನು ಮಾಡಿದಂತೆ ಇನ್ನಾರೂ ಮಾಡಿಲ್ಲ. ರಾವಣನು ಕದ್ದೊಯ್ದ ಸೀತೆಯನ್ನು ತಿರುಗಿ ನಾನು ಪಡೆದರೆ ಆ ಯಶಸ್ಸೆಲ್ಲವೂ ಲಕ್ಷ್ಮಣನದು.'

ಬಳಿಕ ಹೆತ್ತ ತಾಯಿಯಾದ ಕೌಸಲ್ಯೆಯ ನಿವಾಸಕ್ಕೆ ಹೋಗಿ ಪಲ್ಲಕ್ಕಿಯಿಂದಿಳಿದು ಅವಳ ಪಾದಗಳಿಗೆ ವಂದಿಸಿದ ಶ್ರೀರಾಮ. ಬಹುಕಾಲದಿಂದ ಮಗನನ್ನು ಕಾಣುವ ಉತ್ಕಂಠತೆಯಿಂದ ವಿಹ್ವಲಳಾಗಿದ್ದ ಆ ತಾಯಿ ಈಗ ಮಗನನ್ನು ಬಿಗಿದಪ್ಪಿ ರೋಮಾಂಚಗೊಂಡಳು. ಮಾತು ಗದ್ಗದವಾಯಿತು. ಆನಂದದ ಬಿಸಿಕಣ್ಣೀರು ಪ್ರವಹಿಸಿತು. ಇಷ್ಟು ಕಾಲ ತಾನು ದೂರವಿದ್ದುದಕ್ಕೆ ಕ್ಷಮೆ ಬೇಡಿದ ಶ್ರೀರಾಮ.

ಅಮ್ಮ, ನಿನ್ನ ಪಾದಸೇವೆಯನ್ನಿಷ್ಟುಕಾಲ ಬಿಟ್ಟಿದ್ದು ಅಪರಾಧ ಮಾಡಿದ್ದೇನೆ. ನಾನು ಭಾಗ್ಯಹೀನ, ಕ್ಷಮಿಸು. ನಾನೇನು ಮಾಡಲಿ. ತಂದೆಯಾಜ್ಞೆಯಂತೆ ದಂಡಕಾರಣ್ಯಕ್ಕೆ ಹೋದೆ. ಅಲ್ಲಿಯೂ ನಿನ್ನ ಕೃಪಾಕಟಾಕ್ಷದಿಂದ ಎಲ್ಲ ಆಪತ್ತುಗಳಿಂದಲೂ ಪಾರಾದೆ. ರಾವಣನು ಸೀತೆಯನ್ನು ಕದ್ದೊಯ್ದ. ನಿನ್ನ ಕೃಪೆಯಿಂದ ಅವನನ್ನೂ ಕೊಂದು ಸೀತೆಯನ್ನು ತಂದೆ. ಇಗೊ, ಸೀತೆ ನಿನ್ನ ಪಾದಗಳಿಗೆ ವಂದಿಸುತ್ತಿದ್ದಾಳೆ. ನಿನ್ನ ಪಾದಗಳನ್ನೆ ನಂಬಿದ್ದಾಳೆ ಆಕೆ. ಆಶೀರ್ವದಿಸು.

ಕೌಸಲ್ಯೆ ಸೀತೆಯನ್ನಾಶೀರ್ವದಿಸಿ ನುಡಿದಳು. 'ಸೀತೆ ಬಹುಕಾಲ ಪತಿಯೊಂದಿಗೆ ಸುಖವಾಗಿರು. ಇಬ್ಬರು ಮಕ್ಕಳನ್ನು ಪಡೆದು ಕುಲವನ್ನುದ್ಧರಿಸು. ಪತಿಯ ಕಷ್ಟ ಸುಖಗಳಲ್ಲಿ ಒಂದಾಗಿ ಸೇರಿ ಅವನನ್ನೆ ನಂಬಿ ಎಷ್ಟೊಂದು ಕಷ್ಟಗಳನ್ನು ಸಹಿಸಿರುವೆ ? ನಿನ್ನಂಥ ಪತಿವ್ರತೆಯರು ಮೂರೋಕದಲ್ಲಿಯೆ ಇಲ್ಲ. ಮನೆಯಲ್ಲಿ ಪತಿವ್ರತೆಯೊಬ್ಬಳಿದ್ದರೆ ಪತಿಯಾದವನು ಕೋಟಿ ಶತ್ರುಗಳನ್ನೂ ನಾಶಮಾಡಬಲ್ಲ. ನೀನು ರಾಮನ ಪಾದಕಮಲಗಳನ್ನೆ ಸೇವಿಸುತ್ತಿದ್ದು ನಿನ್ನ ಕುಲವನ್ನೆ ಪಾವನಗೊಳಿಸಿರುವೆ.' ಹೀಗೆ ಹೇಳಿ ಸುಮ್ಮನಾದಳು ಕೌಸಲ್ಯೆ. ಆದರೆ ಆನಂದದ ರೋಮಾಂಚನ ಇನ್ನೂ ಹಾಗೇ ಇತ್ತು.

ಬಳಿಕ ತಂದೆಯಿಂದ ಬಂದಿದ್ದ ರಾಜ್ಯವನ್ನು ಅಣ್ಣನಿಗೊಪ್ಪಿಸಿದ ಭರತ. ಮಂತ್ರಿಗಳು ಜ್ಯೋತಿಷಿಗಳಿಂದ ಒಳ್ಳೆಯ ಮುಹೂರ್ತವನ್ನು ಕೇಳಿ ತಿಳಿದು ಸಂಭ್ರಮದಿಂದ ರಾಮನಿಗೆ ಪಟ್ಟಾಭಿಷೇಕ ನಡೆಸಿದರು. ಒಂದು ಸುಂದರವಾದ ಹುಲಿಚರ್ಮದ ಮೇಲೆ ಸಪ್ತದ್ವೀಪಗಳಿಂದ ಕೂಡಿದ ಭೂಮಂಡಲದ ಚಿತ್ರವನ್ನು ಬರೆಸಿ ಅದರ ಮೇಲೆ ಕುಳಿತ ಶ್ರೀರಾಮಚಂದ್ರ ಮಹಾರಾಜ. ಅಂದಿನಿಂದ ಸಜ್ಜನರ ಮನಸ್ಸು ಉಲ್ಲಾಸಗೊಂಡಿತು. ದುಷ್ಟರ ಮನಸ್ಸಿನಲ್ಲಿ ಗ್ಲಾನಿ ಮೂಡಿತು. ಸ್ತ್ರೀಯರು ಪತಿವ್ರತ ಪರಾಯಣೆಯರಾಗಿದ್ದು ಮನಸ್ಸಿನಲ್ಲಿಯೂ ಪಾಪವೆಣಿಸದಿದ್ದವರು. ದೇವದಾನವ, ಯಕ್ಷ, ನಾಗ ಮೊದಲಾದವರೆಲ್ಲರೂ ನ್ಯಾಯಮಾರ್ಗದಲ್ಲೆ ಇದ್ದು ರಾಮನಾಜ್ಞೆಯನ್ನು ಶಿರಸಾವಹಿಸುತ್ತಿದ್ದರು. ಸ್ವಧರ್ಮಾಚರಣೆಯಲ್ಲಿ ಸುಖ ಕಾಣುತ್ತಿದ್ದರು. ಪರೋಪಕಾರ ನಿರತರಾಗಿದ್ದರು. ಹಗಲಿರುಳು ಶುಭವನ್ನೆ ಚಿಂತಿಸುತ್ತ ವಿದ್ಯಾವಿನೋದಗಳಲ್ಲಿ ಆಸಕ್ತಿ ತಳೆದಿದ್ದರು. ದಾರಿಗರ ಬಟ್ಟೆಯನ್ನು ಗಾಳಿಯೂ ಅಲ್ಲಾಡಿಸುತ್ತಿದ್ದಿಲ್ಲವೆಂದ ಮೇಲೆ ಕಳ್ಳತನದ ಮಾತೆಲ್ಲಿ ರಾಮನ ರಾಜ್ಯದಲ್ಲಿ ? ಏಕೆಂದರೆ ಪ್ರಜೆಗಳೇನು ಬೇಡಿದರೂ ಕೊಡುವ ಕುಬೇರನಂಥ ದೊರೆ ಶ್ರೀರಾಮನಿದ್ದ.

**ಶೇಷ :-** ರಾವಣಾಸುರನ ವಧೆಯಿಂದ ಸಂತುಷ್ಟರಾದ ದೇವತೆಗಳು ಪಟ್ಟಾಭಿಷಿಕ್ತನಾದ ಶ್ರೀರಾಮನಿಗೆ ಪ್ರಣಾಮ ಮಾಡಿ ಸ್ತೋತ್ರ ಮಾಡಿದರು.

**ದೇವತೆಗಳು :-** ದೇವತೆಗಳ ಕಷ್ಟಗಳನ್ನು ಪರಿಹರಿಸುವ ರಾಮನೆ, ನಿನಗೆ ಜಯವಾಗಲಿ ! ದೇವಾಂಗನೆಯರನ್ನು ಸೆಳೆದೊಯ್ಯುವ ದಾನವರ ಹುಟ್ಟಡಗಿಸುವ ರಾಮನೆ, ನಿನಗೆ ಜಯವಾಗಲಿ ! ನೀನು ಮಾಡಿದ ದಾನವ ಸಂಹಾರವನ್ನು ಅತ್ಯುತ್ಸಾಹದಿಂದ ಕವಿಗಳೇನೋ ವರ್ಣಿಸಲಿ. ಆದರೆ ಪ್ರಳಯ ಕಾಲದಲ್ಲಿ ಎಲ್ಲ ಲೋಕಗಳನ್ನೂ ಅನಾಯಾಸವಾಗಿ ನೀನು ನುಂಗುವವನಲ್ಲವೆ ? ಸೂರ್ಯವಂಶದಲ್ಲಿ ಅವತರಿಸಿದ ನೀನು ಜನನ ಮರಣ ವರ್ಜಿತನಾದುದರಿಂದಲ್ಲವೆ, ಅಚ್ಯುತನೆನಿಸಿರುವೆ ? ನಿನ್ನ ನಾಮೋಚ್ಚಾರಣೆಯು ಎಂಥ ಪಾಪಿಯನ್ನೂ ಪಾವನಗೊಳಿಸಬಲ್ಲುದು. ನಿನ್ನ ಪಾದಗಳನ್ನು ಬ್ರಹ್ಮಾದಿ ದೇವತೆಗಳು ಸ್ತುತಿಸುವರು. ಅವು ಬೇಡಿದುದನ್ನೆಲ್ಲ ಕೊಡಬಲ್ಲವು. ನಮ್ಮ ಹೃದಯದಲ್ಲಿ ಅವನ್ನಿಟ್ಟುಕೊಳ್ಳುವಾಸೆ ನಮಗೆ. ಮನ್ಮಥನ ಸೌಂದರ್ಯವನ್ನೂ ನಾಚಿಸುವ ಕಾಂತಿ ನಿನ್ನದು. ನೀನು ಅಭಯದಾನ ಮಾಡದಿರುತ್ತಿದ್ದರೆ ನಮಗೆಲ್ಲಿಯ ಸುಖ ? ಹೀಗೆ ದಾನವರ ಉಪಟಳ

ತನ್ನ ಬಟ್ಟೆಯ ತುದಿಯಿಂದ ಆಕೆಗೆ ಗಾಳಿ ಬೀಸಿದನು. ಅವಳೆಚ್ಚತ್ತೊಡನೆ ತಿರುಗಿ ರಾಮನಾಗಮನವನ್ನು ತಿಳಿಸಿ ಆನಂದವುಂಟು ಮಾಡಿದ. 'ತಾಯಿ, ರಾಮನು ಸೀತಾಲಕ್ಷ್ಮಣರೊಂದಿಗೆ, ನಿನ್ನ ಮನೆಗೆ ಬಂದನೆಂದೆ ತಿಳಿ, ಹೋಗು, ನೋಡು, ಆಶೀರ್ವದಿಸು.'

ಇದನ್ನು ಕೇಳಿದ ಆ ತಾಯಿಗಾದ ಆನಂದವೆಷ್ಟೆಂದು ಊಹಿಸಲೂ ನಾನು ಸಮರ್ಥನಲ್ಲ. ಆಕೆಯ ಶರೀರವೆಲ್ಲ ರೋಮಾಂಚನವಾಯಿತು. ಆನಂದದಿಂದ ವಿಹ್ವಲಗೊಂಡಿತು. ಎದ್ದು ಮನೆಯಂಗಳಕ್ಕೆ ನಡೆದು ಬಾಷ್ಪ ತುಂಬಿದ ಕಣ್ಣುಗಳಿಂದ ರಾಮನು ಪಲ್ಲಕ್ಕಿಯೇರಿ ಬರುತ್ತಿದ್ದುದನ್ನು ಕಂಡಳು.

ರಾಮನು ಮೊದಲು ಕೈಕೇಯಿಯ ಮನೆಯ ಮುಂದೆ ಪಲ್ಲಕ್ಕಿಯಿಂದಿಳಿದು ಆಕೆಯ ಮುಂದೆ ಬಂದು ನಿಂತ. ಆಕೆ ಲಜ್ಜೆಯಿಂದ ಪಶ್ಚಾತ್ತಾಪದಿಂದ ತಲೆತಗ್ಗಿಸಿ ಏನೂ ಆಡದೆ ನಿಂತುಬಿಟ್ಟಳು. ರಾಮನು ಸಮಾಧಾನಪಡಿಸುತ್ತ ವಿನಯದಿಂದ ನುಡಿದ.

**ಶ್ರೀರಾಮ** :- ಅಮ್ಮ, ನಾನು ಕಾಡಿಗೆ ಹೋಗಿ ನೀನು ಹೇಳಿದಂತೆ ನಡೆದಿದ್ದೇನೆ. ಇನ್ನು ನಿನ್ನಾಜ್ಞೆ ಏನಿದೆ ಹೇಳು. ನೀನು ಹೇಳಿದುದನ್ನೊಂದನ್ನೂ ಬಿಡದೆ ನಡೆಸಿಕೊಟ್ಟಿದ್ದೇನೆ. ಆದರೂ ನನ್ನನ್ನೇಕೆ ನೋಡಲಾರೆ ? ಇಗೊ ನೋಡು, ಭರತನನ್ನೂ ನನ್ನನ್ನೂ ಆಶೀರ್ವದಿಸು.

ಈ ಮಾತುಗಳನ್ನು ಕೇಳಿಯೂ ಆಕೆ ತಲೆ ಎತ್ತದೆ ಮೆಲ್ಲನೆ ನುಡಿದಳು.

'ರಾಮ, ನೀನೀಗ ನಿನ್ನ ಮನೆಗೆ ಹೋಗು.'

ರಾಮನು ಆಕೆಗೆ ನಮಸ್ಕರಿಸಿ ಸುಮಿತ್ರೆಯ ಮನೆಗೆ ಹೋದನು. ಆಕೆ ಚಿರಂಜೀವಿಯಾಗು ಚಿರಂಜೀವಿಯಾಗು ಎಂದು ಬಾಯಿ ತುಂಬ ಹರಸಿದಳು. ರಾಮನು ಆ ತಾಯಿಯ ಕಾಲಿಗೆ ವಂದಿಸಿ ಸಂತೋಷದಿಂದಾಲಿಂಗಿಸಿ ನುಡಿದನು. 'ಅಮ್ಮ ನೀನು ರತ್ನಗರ್ಭೆ. ನನ್ನ ದುಃಖನಿವಾರಣೆಯನ್ನು ಈ ನನ್ನ ಪ್ರೀತಿಯ ತಮ್ಮ ಲಕ್ಷ್ಮಣನು ಮಾಡಿದಂತೆ ಇನ್ನಾರೂ ಮಾಡಿಲ್ಲ. ರಾವಣನು ಕದ್ದೊಯ್ದ ಸೀತೆಯನ್ನು ತಿರುಗಿ ನಾನು ಪಡೆದರೆ ಆ ಯಶಸ್ಸೆಲ್ಲವೂ ಲಕ್ಷ್ಮಣನದು.'

ಬಳಿಕ ಹೆತ್ತ ತಾಯಿಯಾದ ಕೌಸಲ್ಯೆಯ ನಿವಾಸಕ್ಕೆ ಹೋಗಿ ಪಲ್ಲಕ್ಕಿಯಿಂದಿಳಿದು ಅವಳ ಪಾದಗಳಿಗೆ ವಂದಿಸಿದ ಶ್ರೀರಾಮ. ಬಹುಕಾಲದಿಂದ ಮಗನನ್ನು ಕಾಣುವ ಉತ್ಕಂಠತೆಯಿಂದ ವಿಹ್ವಲಳಾಗಿದ್ದ ಆ ತಾಯಿ ಈಗ ಮಗನನ್ನು ಬಿಗಿದಪ್ಪಿ ರೋಮಾಂಚಗೊಂಡಳು. ಮಾತು ಗದ್ಗದವಾಯಿತು. ಆನಂದದ ಬಿಸಿಕಣ್ಣೀರು ಪ್ರವಹಿಸಿತು. ಇಷ್ಟು ಕಾಲ ತಾನು ದೂರವಿದ್ದುದಕ್ಕೆ ಕ್ಷಮೆ ಬೇಡಿದ ಶ್ರೀರಾಮ.

ಅಮ್ಮ, ನಿನ್ನ ಪಾದಸೇವೆಯನ್ನಿಷ್ಟುಕಾಲ ಬಿಟ್ಟಿದ್ದು ಅಪರಾಧ ಮಾಡಿದ್ದೇನೆ. ನಾನು ಭಾಗ್ಯಹೀನ, ಕ್ಷಮಿಸು. ನಾನೇನು ಮಾಡಲಿ. ತಂದೆಯಾಜ್ಞೆಯಂತೆ ದಂಡಕಾರಣ್ಯಕ್ಕೆ ಹೋದೆ. ಅಲ್ಲಿಯೂ ನಿನ್ನ ಕೃಪಾಕಟಾಕ್ಷದಿಂದ ಎಲ್ಲ ಆಪತ್ತುಗಳಿಂದಲೂ ಪಾರಾದೆ. ರಾವಣನು ಸೀತೆಯನ್ನು ಕದ್ದೊಯ್ದ. ನಿನ್ನ ಕೃಪೆಯಿಂದ ಅವನನ್ನೂ ಕೊಂದು ಸೀತೆಯನ್ನು ತಂದೆ. ಇಗೊ, ಸೀತೆ ನಿನ್ನ ಪಾದಗಳಿಗೆ ವಂದಿಸುತ್ತಿದ್ದಾಳೆ. ನಿನ್ನ ಪಾದಗಳನ್ನೆ ನಂಬಿದ್ದಾಳೆ ಆಕೆ. ಆಶೀರ್ವದಿಸು.

ಕೌಸಲ್ಯೆ ಸೀತೆಯನ್ನಾಶೀರ್ವದಿಸಿ ನುಡಿದಳು. 'ಸೀತೆ ಬಹುಕಾಲ ಪತಿಯೊಂದಿಗೆ ಸುಖವಾಗಿರು. ಇಬ್ಬರು ಮಕ್ಕಳನ್ನು ಪಡೆದು ಕುಲವನ್ನುದ್ಧರಿಸು. ಪತಿಯ ಕಷ್ಟ ಸುಖಗಳಲ್ಲಿ ಒಂದಾಗಿ ಸೇರಿ ಅವನನ್ನೆ ನಂಬಿ ಎಷ್ಟೊಂದು ಕಷ್ಟಗಳನ್ನು ಸಹಿಸಿರುವೆ ? ನಿನ್ನಂಥ ಪತಿವ್ರತೆಯರು ಮೂಲೋಕದಲ್ಲಿಯೆ ಇಲ್ಲ. ಮನೆಯಲ್ಲಿ ಪತಿವ್ರತೆಯೊಬ್ಬಳಿದ್ದರೆ ಪತಿಯಾದವನು ಕೋಟಿ ಶತ್ರುಗಳನ್ನೂ ನಾಶಮಾಡಬಲ್ಲ. ನೀನು ರಾಮನ ಪಾದಕಮಲಗಳನ್ನೆ ಸೇವಿಸುತ್ತಿದ್ದು ನಿನ್ನ ಕುಲವನ್ನೆ ಪಾವನಗೊಳಿಸಿರುವೆ.' ಹೀಗೆ ಹೇಳಿ ಸುಮ್ಮನಾದಳು ಕೌಸಲ್ಯೆ. ಆದರೆ ಆನಂದದ ರೋಮಾಂಚನ ಇನ್ನೂ ಹಾಗೇ ಇತ್ತು.

ಬಳಿಕ ತಂದೆಯಿಂದ ಬಂದಿದ್ದ ರಾಜ್ಯವನ್ನು ಅಣ್ಣನಿಗೊಪ್ಪಿಸಿದ ಭರತ. ಮಂತ್ರಿಗಳು ಜ್ಯೋತಿಷಿಗಳಿಂದ ಒಳ್ಳೆಯ ಮುಹೂರ್ತವನ್ನು ಕೇಳಿ ತಿಳಿದು ಸಂಭ್ರಮದಿಂದ ರಾಮನಿಗೆ ಪಟ್ಟಾಭಿಷೇಕ ನಡೆಸಿದರು. ಒಂದು ಸುಂದರವಾದ ಹುಲಿಚರ್ಮದ ಮೇಲೆ ಸಪ್ತದ್ವೀಪಗಳಿಂದ ಕೂಡಿದ ಭೂಮಂಡಲದ ಚಿತ್ರವನ್ನು ಬರೆಸಿ ಅದರ ಮೇಲೆ ಕುಳಿತ ಶ್ರೀರಾಮಚಂದ್ರ ಮಹಾರಾಜ. ಅಂದಿನಿಂದ ಸಜ್ಜನರ ಮನಸ್ಸು ಉಲ್ಲಾಸಗೊಂಡಿತು. ದುಷ್ಟರ ಮನಸ್ಸಿನಲ್ಲಿ ಗ್ಲಾನಿ ಮೂಡಿತು. ಸ್ತ್ರೀಯರು ಪತಿವ್ರತ ಪರಾಯಣೆಯರಾಗಿದ್ದು ಮನಸ್ಸಿನಲ್ಲಿಯೂ ಪಾಪವೆಣಿಸದಿದ್ದವರು. ದೇವದಾನವ, ಯಕ್ಷ, ನಾಗ ಮೊದಲಾದವರೆಲ್ಲರೂ ನ್ಯಾಯಮಾರ್ಗದಲ್ಲೆ ಇದ್ದು ರಾಮನಾಜ್ಞೆಯನ್ನು ಶಿರಸಾವಹಿಸುತ್ತಿದ್ದರು. ಸ್ವಧರ್ಮಾಚರಣೆಯಲ್ಲಿ ಸುಖ ಕಾಣುತ್ತಿದ್ದರು. ಪರೋಪಕಾರ ನಿರತರಾಗಿದ್ದರು. ಹಗಲಿರುಳು ಶುಭವನ್ನೆ ಚಿಂತಿಸುತ್ತ ವಿದ್ಯಾವಿನೋದಗಳಲ್ಲಿ ಆಸಕ್ತಿ ತಳೆದಿದ್ದರು. ದಾರಿಗರ ಬಟ್ಟೆಯನ್ನು ಗಾಳಿಯೂ ಅಲ್ಲಾಡಿಸುತ್ತಿದ್ದಿಲ್ಲವೆಂದ ಮೇಲೆ ಕಳ್ಳತನದ ಮಾತೆಲ್ಲಿ ರಾಮನ ರಾಜ್ಯದಲ್ಲಿ ? ಏಕೆಂದರೆ ಪ್ರಜೆಗಳೇನು ಬೇಡಿದರೂ ಕೊಡುವ ಕುಬೇರನಂಥ ದೊರೆ ಶ್ರೀರಾಮನಿದ್ದ.

**ಶೇಷ :-** ರಾವಣಾಸುರನ ವಧೆಯಿಂದ ಸಂತುಷ್ಟರಾದ ದೇವತೆಗಳು ಪಟ್ಟಾಭಿಷಿಕ್ತನಾದ ಶ್ರೀರಾಮನಿಗೆ ಪ್ರಣಾಮ ಮಾಡಿ ಸ್ತೋತ್ರ ಮಾಡಿದರು.

**ದೇವತೆಗಳು :-** ದೇವತೆಗಳ ಕಷ್ಟಗಳನ್ನು ಪರಿಹರಿಸುವ ರಾಮನೆ, ನಿನಗೆ ಜಯವಾಗಲಿ ! ದೇವಾಂಗನೆಯರನ್ನು ಸೆಳೆದೊಯ್ಯುವ ದಾನವರ ಹುಟ್ಟಡಗಿಸುವ ರಾಮನೆ, ನಿನಗೆ ಜಯವಾಗಲಿ ! ನೀನು ಮಾಡಿದ ದಾನವ ಸಂಹಾರವನ್ನು ಅತ್ಯುತ್ಸಾಹದಿಂದ ಕವಿಗಳೇನೋ ವರ್ಣಿಸಲಿ. ಆದರೆ ಪ್ರಳಯ ಕಾಲದಲ್ಲಿ ಎಲ್ಲ ಲೋಕಗಳನ್ನೂ ಅನಾಯಾಸವಾಗಿ ನೀನು ನುಂಗುವವನಲ್ಲವೆ ? ಸೂರ್ಯವಂಶದಲ್ಲಿ ಅವತರಿಸಿದ ನೀನು ಜನನ ಮರಣ ವರ್ಜಿತನಾದುದರಿಂದಲ್ಲವೆ, ಅಚ್ಯುತನೆನಿಸಿರುವೆ ? ನಿನ್ನ ನಾಮೋಚ್ಚಾರಣೆಯು ಎಂಥ ಪಾಪಿಯನ್ನೂ ಪಾವನಗೊಳಿಸಬಲ್ಲುದು. ನಿನ್ನ ಪಾದಗಳನ್ನು ಬ್ರಹ್ಮಾದಿ ದೇವತೆಗಳು ಸ್ತುತಿಸುವರು. ಅವು ಬೇಡಿದುದನ್ನೆಲ್ಲ ಕೊಡಬಲ್ಲವು. ನಮ್ಮ ಹೃದಯದಲ್ಲಿ ಅವನ್ನಿಟ್ಟುಕೊಳ್ಳುವಾಸೆ ನಮಗೆ. ಮನ್ಮಥನ ಸೌಂದರ್ಯವನ್ನೂ ನಾಚಿಸುವ ಕಾಂತಿ ನಿನ್ನದು. ನೀನು ಅಭಯದಾನ ಮಾಡದಿರುತ್ತಿದ್ದರೆ ನಮಗೆಲ್ಲಿಯ ಸುಖ ? ಹೀಗೆ ದಾನವರ ಉಪಟಳ

ಉಂಟಾದಾಗಲೆಲ್ಲ ನೀನು ಅವತರಿಸಬೇಕಾಗುತ್ತದೆ. ಲೋಕಪಾವನವಾದ ಧವಳ ಕೀರ್ತಿಯನ್ನು ಎಲ್ಲೆಡೆ ಪಸರಿಸು. ನಾವು ಬೇಡಿದಾಗ ನಿಜಧಾಮಕ್ಕೆ ಹಿಂತಿರುಗು.

ಈ ಸ್ತೋತ್ರವನ್ನು ಕೇಳಿ ಮೆಚ್ಚಿದ ಶ್ರೀರಾಮನು ನುಡಿದನು.

**ಶ್ರೀರಾಮ :-** ದೇವತೆಗಳೆ, ನಿಮಗೇನು ವರಬೇಕು, ಕೇಳಿ. ಎಂಥ ದುರ್ಲಭವಾದ ವರವನ್ನೂ ಕೊಡುವೆ.

**ದೇವತೆಗಳು :-** ರಾವಣನನ್ನು ನೀನು ಕೊಂದ ಮೇಲೆ ನಮ್ಮೆಲ್ಲ ಅಭೀಷ್ಟವೂ ದೊರೆತಂತೆಯೆ. ಅಸುರರು ಭಾದಿಸುವಾಗಲೆಲ್ಲ ನೀನು ಹೀಗೆ ಅವರನ್ನು ನಾಶ ಮಾಡು.

**ಶ್ರೀರಾಮ :-** ಹಾಗೆ ಆಗಲಿ. ದೇವತೆಗಳೆ, ನೀವು ಈಗ ಮಾಡಿದ ಸ್ತೋತ್ರ ಅದ್ಭುತವಾದುದು. ಬೆಳಿಗ್ಗೆ ರಾತ್ರಿ ಒಮ್ಮೆ ಅದನ್ನು ಪಠಿಸಿದರೆ ವೈರಿಗಳಿಂದ ಪರಾಜಯ ವಿಲ್ಲದಂತಾಗುವುದು. ದಾರಿದ್ರ್ಯ ರೋಗಗಳು ದೂರವಾಗುವವು. ನನ್ನ ಪಾದಗಳಲ್ಲಿ ಉತ್ತಮ ಭಕ್ತಿಯೂ ಉಂಟಾಗುವುದು

ದೇವತೆಗಳು ರಾಮನ ಈ ಮಾತುಗಳನ್ನು ಕೇಳಿ ಸಂತೋಷದಿಂದ ತಮ್ಮ ಲೋಕಗಳಿಗೆ ಹಿಂತಿರುಗಿದರು.

ಶ್ರೀರಾಮನು ಪ್ರಜೆಗಳನ್ನು ಮಕ್ಕಳಂತೆ ಕಾಣುತ್ತಿದ್ದ. ವಿದ್ವಾಂಸರನ್ನು ಗೌರವಿಸುತ್ತಿದ್ದ. ಅಕಾಲ ಮರಣ, ರೋಗ, ಶತ್ರುಬಾಧೆಗಳು ಅವನ ರಾಜ್ಯದಲ್ಲಿರಲಿಲ್ಲ. ವೃಕ್ಷಗಳು ಸದಾ ಫಲ ನೀಡುತ್ತಿದ್ದುವು. ಭೂಮಿ ಯಥೇಚ್ಛವಾಗಿ ಧಾನ್ಯ ಬೆಳೆ ಕೊಡುತ್ತಿತ್ತು. ಮಕ್ಕಳು ಮೊಮ್ಮಕ್ಕಳ ಪರಿವಾರದಿಂದ ಕೂಡಿ ಇಷ್ಟಮಿತ್ರರೊಂದಿಗೆ ಜನರು ಸುಖದಿಂದ ಬಾಳುತ್ತಿದ್ದರು. ವಿರಹ ದುಃಖವೆಂಬುದು ಅವರಿಗಿರಲಿಲ್ಲ. ಸದಾ ಶ್ರೀರಾಮನ ಚರಣಾರವಿಂದಗಳ ಮಹಿಮೆಯನ್ನು ಕೊಂಡಾಡುವುದರಲ್ಲಿ ಅತ್ಯುತ್ಸಾಹ ಅವರಿಗಿತ್ತು. ಎಂದೂ ಪರನಿಂದೆ ಮಾಡುತ್ತಿರಲಿಲ್ಲ. ರಾಮನ ಕರಾಘಾತದ ಭಯದಿಂದ ಎಂಥ ದುಷ್ಟರೂ ಪಾಪ ಕರ್ಮವನ್ನು ಮನಸ್ಸಿನಲ್ಲಿಯೂ ಯೋಚಿಸುತ್ತಿರಲಿಲ್ಲ. ಶಿಲ್ಪಿಗಳು ಪಾಪಪುರುಷನ ವಿಗ್ರಹವನನು ಮನಸ್ಸಿನಲ್ಲಿಯೂ ಚಿಂತಿಸುತ್ತಿರಲಿಲ್ಲ. ಹಾಗೆ ಮಾಡಿದರೆ ರಾಮನ ಪವಿತ್ರ ಕರಕಮಲಗಳಿಗೆ ಆಘಾತವಾದೀತೆಂಬ ಭಯ ಅವರಿಗಿತ್ತು. ಜನರು ರಾಮನನ್ನು ನೋಡುವಾಗಲೆಲ್ಲ ಎವೆಯಿಕ್ಕದೆ ನೋಡುತ್ತಿದ್ದರು. ನಿತ್ಯ ಧರ್ಮಾಚರಣೆ ಮಾಡುತ್ತ ತಮ್ಮ ಪೋಷಣೆಯನ್ನು ತಾವೇ ಮಾಡಿಕೊಳ್ಳುತ್ತಿದ್ದರು. ಇದರಿಂದ ರಾಜ್ಯವು ಸಂಪತ್ ಸಮೃದ್ಧವೆನಿಸಿತು.

ಜನರಲ್ಲಿ ದಂಭವಿರಲಿಲ್ಲ. ನದಿಗಳಲ್ಲಿ ದಂಭ (ಆಳ) ಇತ್ತು. ಸಂಪತ್ತು ಕು-ಲೀನ (ಭೂಮಿಯೊಳಗೆ ಅಡಗಿದುದು) ಆಗಿರಲಿಲ್ಲ. ಜನರು ಕುಲೀನರಾಗಿದ್ದರು.ನಾರಿಯರಲ್ಲಿ ವಿಭ್ರಮ (ರಸಿಕತೆ) ಇತ್ತು. ವಿದ್ವಾಂಸರಲ್ಲಿ ವಿಭ್ರಮ (ಭ್ರಾಂತಿ) ಇರಲಿಲ್ಲ. ನದಿಗಳು ಕುಟಿಲಗಾಮಿಗಳು (ಸೊಟ್ಟುಸೊಟ್ಟಾಗಿ ಹರಿಯುವವು) ಪ್ರಜೆಗಳು ಕುಟಿಲ ಮಾರ್ಗವನ್ನು ಅನುಸರಿಸುತ್ತಿರಲಿಲ್ಲ. ಕೃಷ್ಣಪಕ್ಷದ ರಾತ್ರಿಗಳಲ್ಲಿ ತಮಸ್ಸು (ಕತ್ತಲೆ) ಇತ್ತು. ಪ್ರಜೆಗಳಿಗೆ ತಮಸ್ಸು (ಅವಿವೇಕ) ಇರಲಿಲ್ಲ. ಸ್ತ್ರೀಯರಲ್ಲಿ ರಜಸ್ಸು (ಮುಟ್ಟಾಗುವುದು) ಇತ್ತು. ಧಾರ್ಮಿಕ ಜನರಲ್ಲಿ (ಮನೋ ವಾಕ್ ಕಾಯಗಳ ಮಲ) ಇರಲಿಲ್ಲ. ಸಂಪತ್ತಿದ್ದರೂ

ಜನರು ಆದರದಿಂದ ಆನಂದರಾಗಿದ್ದರು. (ಅಂಧರಾಗಿರಲಿಲ್ಲ). ಊಟವು ಆನಂದ (ಅನ್ನ ಸಾಕಾಗದೆ ಹೋಗುವುದು) ಆಗಿರಲಿಲ್ಲ. ರಥಗಳು ಅನಯ (ಕಬ್ಬಿಣದಿಂದ ಮಾಡಿದ್ದಲ್ಲ). ರಾಜಭಟರು ಅನಯರು (ಅನ್ಯಾಯ ಮಾಡುವವರು) ಅಲ್ಲ. ಕೊಡಲಿ, ಗುದ್ದಲಿ, ಚಾಮರ, ಕೊಡೆಗಳಿಗೆ ದಂಡ (ಕಾವು) ಇರುತ್ತಿತ್ತು. ಜನಗಳಿಗೆ ದಂಡ (ಶಿಕ್ಷೆ) ಎನ್ನುವುದಿರಲಿಲ್ಲ. ಪಗಡೆ ಆಡುವವರಲ್ಲಿ ಪರಿದೇವನ (ಪಗಡೆಯಾಟ) ಇತ್ತು. ಉಳಿದವರಲ್ಲಿ ಪರಿದೇವನ (ದುಃಖಿಸುವುದು) ಇರಲಿಲ್ಲ. ಪಗಡೆ ಆಡುವವರೆ ಪಾಶ (ದಾಳ) ಹಿಡಿಯುತ್ತಿದ್ದರು. ಇನ್ನಾರೂ ಪಾಶ (ಹಗ್ಗದ ಪಾಶ) ಹಿಡಿದಿರಲಿಲ್ಲ. ನೀರಿನಲ್ಲಿ ಮಾತ್ರ ಜಾಡ್ಯ (ಜಲತ್ವ) ಇತ್ತು. ಜನರಲ್ಲಿ ಜಾಡ್ಯ (ಅಜ್ಞಾನ) ಇರಲಿಲ್ಲ. ಸ್ತ್ರೀಯರ ನಡು ದುರ್ಬಲವಾಗಿತ್ತು (ಸಣ್ಣಗಿರುವುದರಿಂದ) ಜನರು ದುರ್ಬಲರಾಗಿರಲಿಲ್ಲ. ಸ್ತ್ರೀಯರು ಕಠೋರ ಹೃದಯರು (ಬಿಗಿದ ಎದೆಗಳುಳ್ಳವರು) ಹೌದು. ಜನರು ಯಾರೂ ಕಠೋರ ಹೃದಯರು (ಕಲ್ಲು ಮನಸ್ಸಿನವರು) ಅಲ್ಲ. ಕುಷ್ಠವೆಂಬ ಶಬ್ದ ಒಂದು ಗಿಡ ಮೂಲಿಕೆಗೆ ಮಾತ್ರ ಇತ್ತು. ಮನುಷ್ಯರಲ್ಲಿ ಕುಷ್ಠವಿರಲಿಲ್ಲ. ಮಣಿಗಳಲ್ಲಿ ವೇಧ (ದಾರದಲ್ಲಿ ಪೋಣಿಸುವುದಕ್ಕಾಗಿ ತೂತು ಕೊರೆಯುವುದು) ಎಂಬುದಿತ್ತು. ಜನರಲ್ಲಿ ವೇಧ (ಹಿಂಸೆ) ಇರಲಿಲ್ಲ. ಮೂರ್ತಿಗಳ ಕೈಯಲ್ಲಿ ಶೂಲ (ತ್ರಿಶೂಲ) ಇತ್ತು. ಜನರಲ್ಲಿ ಶೂಲ (ವೇದನೆ) ಇರಲಿಲ್ಲ. ಜ್ವರವೆಂದರೆ ಕಾಮಜ್ವರವೆ ಹೊರತು ಬೇರೆ ಜ್ವರವಿರಲಿಲ್ಲ. ದಾರಿದ್ರ್ಯವೆಂದರೆ ಪಾಪದ ಅಭಾವವಿತ್ತೇ ಹೊರತು ಸಂಪತ್ತಿನ ಅಭಾವವಿರಲಿಲ್ಲ. ಮದಪಾತಾಲ ಖಂಡವೆಂದರೆ ಯುದ್ಧದ ಆನೆಗಳಿಗೆ ಮಾತ್ರ, ಜನರಿಗಿರಲಿಲ್ಲ. ವೀಚಿ ಎಂದರೆ ಜಲಾಶಯದಲ್ಲಿ ಅಲೆಗಳ ಹೊರತು, ಜನರಲ್ಲಿ ವೀಚಿ (ತಿರಸ್ಕಾರದ ಮಾತು) ಇರಲಿಲ್ಲ. ದಾನ ಹಾನಿ (ಮದ ಜಲ ಬತ್ತಿ ಹೋಗುವುದು) ಆನೆಗಳಲ್ಲಿ, ಜನರಲ್ಲಿ ದಾನಹಾನಿ (ದಾನಕ್ಕೆ ಕೊರತೆ) ಇರಲಿಲ್ಲ. ಮುಳ್ಳಿನಲ್ಲಿ ತೀಕ್ಷ್ಣತೆ ಇತ್ತು. ಜನರ ನಡೆನುಡಿಗಳಲ್ಲಿರಲಿಲ್ಲ. ಬಾಣಗಳಲ್ಲಿ ಗುಣವಿಶ್ಲೇಷ (ಬಿಲ್ಲಿನ ಹಗ್ಗದಿಂದ ದೂರ ಹೋಗುವುದು) ಇತ್ತು. ಜನರಲ್ಲಿ ಗುಣವಿಶ್ಲೇಷ (ಸದ್ಗುಣಗಳು ದೂರವಾಗುವುದು) ಇರಲಿಲ್ಲ. ಬಂಧ (ಸಾಹಿತ್ಯ ರಚನೆ) ಪುಸ್ತಕಗಳಲ್ಲಿತ್ತು. ಜನರಲ್ಲಿ ಬಂಧ (ಕಾರಾಗೃಹದಲ್ಲಿ ಬಂಧನ) ಇರಲಿಲ್ಲ. ಧಾನ್ಯದ ಕಣಗಳಲ್ಲಿ ಸ್ನೇಹತ್ಯಾಗವಿತ್ತು. ಬಂಧುಗಳಲ್ಲಿರಲಿಲ್ಲ.

ಹೀಗೆ ಪ್ರಜೆಗಳನ್ನು ಪ್ರೀತಿಯಿಂದ, ಧರ್ಮದಿಂದ ಹನ್ನೊಂದು ಸಾವಿರ ವರ್ಷಗಳ ಕಾಲ ಶ್ರೀರಾಮ ಕಾಪಾಡಿದನು. ಒಂದು ದಿನ ಒಬ್ಬ ನೀಚ ಅಗಸನು ಸೀತೆಯ ಬಗ್ಗೆ ಅಪವಾದದ ಮಾತುಗಳನ್ನಾಡಿದುದರಿಂದ ರಾಮನು ಅವಳನ್ನು ಪರಿತ್ಯಾಗ ಮಾಡಿದ, ಪೃಥಿವಿಯನ್ನು ಮಾತ್ರ ಪಾಲನೆ ಮಾಡತೊಡಗಿದ. ಈ ಸಮಯದಲ್ಲಿ ಒಮ್ಮೆ ಅಗಸ್ತ್ಯಮಹರ್ಷಿ ರಾಮನ ಆಸ್ಥಾನಕ್ಕೆ ಆಗಮಿಸಿದ. ಒಡನೆ ರಾಮನು ಅರ್ಘ್ಯ ಪಾದ್ಯ ಮುಂತಾದವುಗಳಿಂದ ಮುನಿಗೆ ಸ್ವಾಗತ ಸತ್ಕಾರಗಳನ್ನು ಸಲ್ಲಿಸಿ ಸುಖಾಸನದಲ್ಲಿ ಕುಳ್ಳಿರಿಸಿದ. ಕುಶಲ ಪ್ರಶ್ನೆಗಳನ್ನು ಮಾಡಿದ.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಪಾತಾಳಖಂಡದಲ್ಲಿ ಶೇಷ-ವಾತ್ಸ್ಯಾಯನ ಸಂವಾದದಲ್ಲಿ ರಾಮಾಶ್ವಮೇಧದಲ್ಲಿ ಅಗಸ್ತ್ಯ ಸಮಾಗಮವೆಂಬ ನಾಲ್ಕನೆ ಅಧ್ಯಾಯ ಮುಗಿದುದು*

—o—

**ಶೇಷ ಉವಾಚ**

**ಶೇಷ** :- ಸರ್ವಲೋಕಗಳಿಗೂ ಗುರುವೆನಿಸಿದ ವೀರನಾದ ರಾಮಚಂದ್ರನು ಅಗಸ್ತ್ಯಮುನಿಯಲ್ಲಿ ಕೇಳಿದನು.

**ಶ್ರೀರಾಮ** :- ತಪೋನಿಧಿಯೆ, ನಿನ್ನ ದರ್ಶನದಿಂದ ನಾವೆಲ್ಲರೂ ಪರಿಶುದ್ಧರಾದೆವು. ನಿನ್ನ ವೇದಶಾಸ್ತ್ರಮನನದ ಕಾರ್ಯ ನಿರ್ವಿಘ್ನವಾಗಿ ನಡೆಯುತ್ತಿದೆಯೆ ? ನಿನ್ನ ತಪಸ್ಸಿಗೂ ವಿಘ್ನ ಉಂಟುಮಾಡುವವರು ಯಾರಿದ್ದಾರೆ ಲೋಕದಲ್ಲಿ ? ನಿನ್ನ ಮಡದಿ ಲೋಪಾಮುದ್ರೆ ಮಹಾ ಪತಿವ್ರತೆ. ಅವಳ ಸಹಾಯದಿಂದ ನಿನ್ನ ಎಲ್ಲ ಕಾರ್ಯವೂ ಸುಖವಾಗಿ ನೆರವೇರುತ್ತದೆ. ನಿನಗೆ ಯಾವುದರಲ್ಲಿಯೂ ಆಶೆ ಇಲ್ಲ. ಇದ್ದರೆ ತಪೋಬಲದಿಂದ ಅದನ್ನು ಸುಲಭವಾಗಿ ಹೊಂದಬಲ್ಲೆ. ಆದರೂ ನನ್ನ ಮೇಲೆ ಕೃಪೆದೋರಿ ನಿನಗಾಗಿ ನಾನೇನು ಮಾಡಬೇಕೆನ್ನುವುದನ್ನು ಹೇಳು.

**ಅಗಸ್ತ್ಯ** :- ಪ್ರಭು, ನಿನ್ನ ದರ್ಶನ ದೇವತೆಗಳಿಗೂ ಅಲಭ್ಯವೆಂದು ಬಗೆದು ಬಂದೆ. ಲೋಕಕಂಟಕನಾದ ರಾವಣನನ್ನು ನೀನು ಕೊಂದಿರುವುದರಿಂದ ದೇವತೆಗಳಿಗೆ ಸುಖವಾಯಿತು. ವಿಭೀಷಣನಿಗೂ ರಾಜ್ಯ ದೊರೆಯಿತು. ಈಗ ನಿನ್ನ ದರ್ಶನದಿಂದ ನನ್ನ ಪಾಪವೆಲ್ಲ ತೊಳೆದುಹೋಯಿತು. ಮನಸ್ಸಿನ ಕ್ಲೇಶ ದೂರವಾಯಿತು. ಹೀಗೆ ಹೇಳಿ ಮುನಿಯು ರಾಮ ದರ್ಶನದಿಂದಾಗುವ ಆನಂದ ಪರವಶತೆಯಿಂದ ಮೂಕನಾಗಿ ಕುಳಿತ. ಶ್ರೀರಾಮ ತಿರುಗಿ ಕೇಳಿದ.

**ಶ್ರೀರಾಮ** :- ಮುನಿಯೆ, ನನ್ನ ಕೈಯಲ್ಲಿ ಹತರಾದ ಈ ರಾವಣ ಕುಂಭಕರ್ಣರು ಯಾರು? ಅವರ ಬಂಧುಗಳು ಯಾರು? ದೇವತೆಗಳೆ, ದೈತ್ಯರೆ, ಪಿಶಾಚಿಗಳೆ, ಇಲ್ಲ ಮಾನವರೆ? ನೀನು ತ್ರಿಕಾಲ ಜ್ಞಾನಿ, ಸರ್ವಜ್ಞ. ಎಲ್ಲವನ್ನೂ ವಿಸ್ತಾರವಾಗಿ ಹೇಳುವ ಕೃಪೆ ಮಾಡು.

**ಅಗಸ್ತ್ಯ** :- ರಾಜನೆ, ಸೃಷ್ಟಿಕರ್ತನಾದ ಬ್ರಹ್ಮನ ಮಗ ಪುಲಸ್ತ್ಯಮುನಿ. ಅವನ ಮಗ ವಿಶ್ರವಸ್. ಮಂದಾಕಿನಿ ಅವನ ಮೊದಲ ಹೆಂಡತಿ. ಅವಳಲ್ಲಿ ಕುಬೇರ ಜನಿಸಿದ. ಶಿವನ ಅನುಗ್ರಹದಿಂದ ಲಂಕೆಯಲ್ಲಿ ವಾಸಮಾಡುತ್ತಿದ್ದ. ವಿದ್ಯುನ್ಮಾಲಿಯ ಮಗಳು ಕೈಕಸಿ ಎರಡನೆ ಹೆಂಡತಿ. ಅವಳಲ್ಲಿ ಹುಟ್ಟಿದವರೆ ರಾವಣ, ಕುಂಭಕರ್ಣ, ವಿಭೀಷಣರು. ರಾಕ್ಷಸಿಯ ಹೊಟ್ಟೆಯಲ್ಲಿ ಹುಟ್ಟಿದವರು. ಅದರಲ್ಲಿಯೂ ಸಂಧ್ಯಾಕಾಲದಲ್ಲಿ ಹುಟ್ಟಿದ್ದವರು. ಆದುದರಿಂದ ಅಧರ್ಮ ಕಾರ್ಯದಲ್ಲಿ ಒಳ್ಳೆ ಪ್ರಸಿದ್ಧರಾದರು ರಾವಣ ಕುಂಭಕರ್ಣರು. ಒಂದು ದಿನ ರಾವಣನು ನೋಡುತ್ತಿದ್ದಂತೆ ಕುಬೇರನು ಬಂದು ವಿಶ್ರವಸ್ ಮಂದಾಕಿನಿಯರನ್ನು ನಮಿಸಿದ. ರಾವಣನು ಮೊದಲ ಬಾರಿಗೆ ಕುಬೇರನನ್ನು ಆಗ ಕಂಡ. ಚಿನ್ನದ ಅಲಂಕಾರ ಸಣ್ಣ ಗೆಜ್ಜೆಗಳಿಂದ ಸುಂದರವಾಗಿ ಕಾಣುವ ಪುಷ್ಪಕ ವಿಮಾನದಿಂದಿಳಿದು ಕುಬೇರ ನಡೆದು ಬರುವಾಗ ರತ್ನಾಭರಣಗಳಿಂದ ಮೆರೆಯುವ ಪರಿವಾರದವರು ಅವನನ್ನು ಸ್ತುತಿಸುತ್ತಿದ್ದರು. ತಂದೆತಾಯಿಗಳಿಗೆ ಆತ ಆನಂದದಿಂದ ವಂದಿಸಿ ರೋಮಾಂಚಿತನಾಗಿ

ಹೇಳಿದ. 'ಇಂದು ನಿಮ್ಮ ಪವಿತ್ರ ಪಾದಗಳ ದರ್ಶನದ ಮಹಾಲಾಭ ದೊರೆಯಿತು. ಇದು ನನಗೆ ಸುದಿನ' ಹೀಗೆ ಅನೇಕ ವಿಧದಿಂದ ಅವರನ್ನು ಸ್ತುತಿಸಿದ. ವಿಮಾನವೇರಿ ಹೊರಟು ಹೋದ. ಪ್ರೀತಿಯ ಮಗನನ್ನು ಕಂಡು ತಂದೆತಾಯಿಗಳು ಬಹು ಸಂತೋಷಪಟ್ಟರು. ಎಲ್ಲವನ್ನೂ ನೋಡಿದ ರಾವಣನಿಗೆ ಕುಬೇರನ ಸಂಪತ್ತು ಕಣ್ಣು ಕೋರೈಸಿತು. ತಾಯಿ ಕೈಕಸಿಯ ಬಳಿ ಕೇಳಿದ.

**ರಾವಣ :-** ಈತ ಯಾರು ? ದೇವತೆಯೊ, ಯಕ್ಷನೊ, ಮಾನವನೋ ? ಎಂಥ ಭಾಗ್ಯಶಾಲಿ ? ಎಷ್ಟು ದೊಡ್ಡ ಪರಿವಾರ ? ವಾಯುವೇಗದಿಂದ ಓಡುವ ಆ ವಿಮಾನ ! ಉದ್ಯಾನ ಆರಾಮಗಳ ಲೀಲಾವಿಲಾಸ ಅದರಲ್ಲಿ ಸಿಗುತ್ತದೆ. ಅದನ್ನು ಪಡೆಯಲು ಏನು ತಪಸ್ಸು ಮಾಡಿರಬಹುದು ಆತ !

ಈ ಮಾತನ್ನು ಕೇಳಿದಾಗ ಕೈಕಸಿಗೆ ಕೋಪ ತಡೆಯಲಾಗಲಿಲ್ಲ.

**ಕೈಕಸಿ :-** ಇವನು ನನ್ನ ಸವತಿಯ ಹೊಟ್ಟೆಯಿಂದ ಹುಟ್ಟಿ ಬಂದ ದೊಡ್ಡ ನಿಧಿ. ಅವಳ ಕುಲವನ್ನು ಬೆಳಗಿಸುತ್ತಿದ್ದಾನೆ. ನೀನೊ, ನನ್ನ ಹೊಟ್ಟೆಯಿಂದ ಹುಟ್ಟಿ ಬಂದ ಒಂದು ಕೀಟ. ಹೊಟ್ಟೆ ತುಂಬಿಸಿಕೊಂಡು ಕತ್ತೆಯಂತೆ ಬೆಳೆದಿರುವೆ. ಉಣ್ಣುವುದು, ಮಲಗುವುದು ಬಿಟ್ಟರೆ ಇನ್ನೇನೂ ಮಾಡುವವನಲ್ಲ. ಭ್ರಷ್ಟ, ನಿನ್ನ ಜನ್ಮಕ್ಕೆ ಇದು ವಿಫಲ. ಇವನು ಶಿವನನ್ನು ತಪಸ್ಸಿನಿಂದ ಒಲಿಸಿಕೊಂಡು ಲಂಕೆಯ ಸಮೃದ್ಧವಾದ ರಾಜ್ಯವನ್ನು ಪಡೆದ. ಮನೋವೇಗದ ವಿಮಾನವನ್ನೂ ಹೊಂದಿದ. ಅವನ ಹಡೆದ ತಾಯಿಯೆ ಧನ್ಯೆ, ಭಾಗ್ಯವಂತೆ.

**ರಾವಣ :-** ಅಮ್ಮ, ನಾನು ಹೆಮ್ಮೆಯಿಂದ ಹೇಳುತ್ತಿದ್ದೇನೆ, ನೀನೆ ರತ್ನಗರ್ಭೆ. ನಿನಗೆ ನಾವು ಮೂವರು ರತ್ನದಂಥ ಮಕ್ಕಳಿದ್ದೇವೆ. ಅವನೊಬ್ಬ ಕೀಟ, ಎಷ್ಟರವನು ? ಅವನ ತಪಸ್ಸೇನು ? ಆ ಲಂಕೆ, ಆ ರಾಜ್ಯವೆಲ್ಲ ಏನು ? ಬರಿ ಅಲ್ಪ, ಅಮ್ಮ ನನ್ನ ಪ್ರತಿಜ್ಞೆಯನ್ನು ಕೇಳು. ಇಂಥ ಪ್ರತಿಜ್ಞೆಯನ್ನು ಲೋಕದಲ್ಲಿ ಯಾರೂ ಮಾಡಿಲ್ಲ. ನೀನೆ ಭಾಗ್ಯವಂತೆ, ನಾನು ಅನ್ನ ನೀರು ಬಿಟ್ಟು, ನಿದ್ದೆ ವಿಹಾರಗಳನ್ನೂ ಮಾಡದೆ ಘೋರ ತಪಸ್ಸಿನಿಂದ ಬ್ರಹ್ಮನನ್ನು ಒಲಿಸಿ, ಸಮಸ್ತ ಜಗತ್ತನ್ನೆ ನನ್ನ ವಶಕ್ಕೆ ತಂದುಕೊಳ್ಳದೆ ಹೋದೆನಾದರೆ ಪಿತೃಲೋಕವನ್ನೇ ನಾಶ ಮಾಡಿದ ಪಾಪ ನನಗಾಗಲಿ.

ರಾವಣನ ಈ ಧೀರ ಪ್ರತಿಜ್ಞೆಯನ್ನು ಕೇಳಿ ಕುಂಭಕರ್ಣ ವಿಭೀಷಣರೂ ಅಂಥ ಪ್ರತಿಜ್ಞೆಗಳನ್ನೇ ಮಾಡಿದರು. ಬಳಿಕ ಮೂವರು ತಪಸ್ಸಿಗಾಗಿ ಅರಣ್ಯಕ್ಕೆ ಹೋದರು.

**ಅಗಸ್ತ್ಯ :-** ಬಳಿಕ ಅರಣ್ಯದಲ್ಲಿ ರಾವಣ, ಕುಂಭಕರ್ಣ, ವಿಭೀಷಣರು ಹತ್ತು ಸಾವಿರ ವರ್ಷಗಳ ಕಾಲ ಸೂರ್ಯನನ್ನೆ ದಿಟ್ಟಿಸಿ ನೋಡುತ್ತ ಒಂಟಿ ಕಾಲಿನ ಮೇಲೆ ನಿಂತು ಘೋರ ತಪಸ್ಸು ಮಾಡಿದರು. ಆಗ ಬ್ರಹ್ಮನೊಲಿದು ಮೈದೋರಿ ಮೂರು ಲೋಕ ಒಡೆತನವನ್ನೂ ದೇವದಾನವ ಸೇವಿತವಾದ ರಮ್ಯ ಶರೀರವನ್ನೂ ಅನುಗ್ರಹಿಸಿದ. ಅಂದಿನಿಂದ ರಾವಣನು ಧರ್ಮಬುದ್ಧಿಯುಳ್ಳ ಕುಬೇರನನ್ನು ಹಿಂಸಿಸಿದ. ಅವನಿಂದ ಬಲಾತ್ಕಾರವಾಗಿ ಲಂಕೆಯನ್ನೂ ಪುಷ್ಪಕ ವಿಮಾನವನ್ನೂ ಕಸಿದು ಕೊಂಡ. ಪ್ರಪಂಚವೆಲ್ಲವನ್ನೂ ತನ್ನ ಪರಾಕ್ರಮದಿಂದ ನಡುಗಿಸಿದ. ದೇವತೆಗಳನ್ನು ಸ್ವರ್ಗದಿಂದ ಓಡಿಸಿದ. ಋಷಿಮುನಿಗಳಿಗೆ ಹಿಂಸೆ ಕೊಟ್ಟ. ದೇವತೆಗಳೆಲ್ಲರೂ ಬ್ರಹ್ಮನಲ್ಲಿ ಮೊರೆಯಿಟ್ಟರು. ಬ್ರಹ್ಮನು ಅವರನ್ನೆಲ್ಲ ಕೈಲಾಸಕ್ಕೆ ಕರೆದುಕೊಂಡು ಹೋದನು. ಅವರು ಶಿವನನ್ನು ಸ್ತುತಿಸಿದರು.

**ನಮೋ ಭವಾಯ ಶರ್ವಾಯ ನೀಲಗ್ರೀವಾಯ ತೇ ನಮಃ ।**
**ನಮಃ ಸ್ಥೂಲಾಯ ಸೂಕ್ಷ್ಮಾಯ ಬಹುರೂಪಾಯ ತೇಽ ನಮಃ ॥**

ಭವ, ಶರ್ವ, ನೀಲಗ್ರೀವ ಮುಂತಾದ ಸ್ಥೂಲ ಸೂಕ್ಷ್ಮರೂಪಗಳನ್ನು ಧರಿಸುವ ಬಹುರೂಪಿಯಾದ ದೇವನಿಗೆ ನಮಸ್ಕಾರ.

ಈ ಸ್ತುತಿಯನ್ನು ಕೇಳಿ ಶಿವನು ನಂದಿಯನ್ನು ಕರೆದು ದೇವತೆಗಳನ್ನು ತನ್ನ ಬಳಿಗೆ ಕರೆತರಲು ಅಜ್ಞಾಪಿಸಿದ. ನಂದಿಯು ಅವರನ್ನು ಶಿವನ ಅಂತಪುರಕ್ಕೆ ಕರೆತಂದ. ಅಲ್ಲಿಯ ದೃಶ್ಯವನ್ನು ಕಂಡು ಅವರು ಆಶ್ಚರ್ಯಪಟ್ಟರು. ಬೆತ್ತಲೆ ವಕ್ರ ವಿಕಾರ ಮಲಿನ ರೂಪಿನ ಸಾವಿರಾರು ಕೋಟಿ ಗಣಗಳು ಅಲ್ಲಿ ಶಿವನನ್ನು ಓಲೈಸುತ್ತಿದ್ದರು. ಬ್ರಹ್ಮನೂ ಬಂದು ಈ ದೃಶ್ಯವನ್ನು ನೋಡಿದ. 'ಈ ದೇವತೆಗಳ ಅವಸ್ಥೆಯನ್ನು ನೋಡು. ಅವರಲ್ಲಿ ದಯೆದೋರು' ಎಂದ. ಆಗ ಶಿವನು ದೇವತೆಗಳನ್ನು ವಿಷ್ಣುವಿನ ಬಳಿಗೆ ಒಯ್ದನು. ಎಲ್ಲರೂ ವಿಷ್ಣುವನ್ನು ಸ್ತುತಿಸಿದರು.

**ಜಯ ಮಾಧವ ದೇವೇಶ ಜಯ ಭಕ್ತಜನಾರ್ತಿಹನ್ ।**
**ಕೃಪಾಂ ಕುರು ಮಹಾದೇವ ವಿಲೋಕಯ ಸ್ವಸೇವಕಾನ್ ॥**

ದೇವತೆಗಳೊಡೆಯನೂ, ಭಕ್ತಜನರ ದುಃಖಗಳನ್ನು ಕಳೆವವನೂ ಆದ ಲಕ್ಷ್ಮೀ ರಮಣನೆ ನಿನಗೆ ಜಯವಾಗಲಿ. ಮಹಾದೇವ, ನಿನ್ನ ಭಕ್ತರನ್ನು ನೋಡು. ದಯೆದೋರು.

ವಿಷ್ಣು ಮೇಘ ಗಂಭೀರ ಧ್ವನಿಯಿಂದ ಅವರನ್ನು ಸಂತೈಸುತ್ತ ನುಡಿದ.

**ವಿಷ್ಣು :-** ದೇವತೆಗಳೆ, ರಾವಣನಿಂದ ಉಂಟಾಗಿರುವ ಭಯವನ್ನು ನಾನು ಅರಿತಿದ್ದೇನೆ. ಅದನ್ನು ನಾನು ಭೂಮಿಯಲ್ಲಿ ಅವತರಿಸಿ ಕಳೆಯುತ್ತೇನೆ. ಭೂಮಿಯಲ್ಲಿ ರಘುವಂಶದ ರಾಜರು ದಾನ ಯಜ್ಞ ಮುಂತಾದ ಸತ್ಕಾರ್ಯಗಳನ್ನು ಮಾಡುತ್ತ ಅಯೋಧ್ಯೆಯನ್ನು ಆಳುತ್ತಿದ್ದಾರೆ. ಈಗ ದಶರಥನು ರಾಜನಾಗಿದ್ದಾನೆ. ಅವನಿಗೆ ಮಕ್ಕಳಿಲ್ಲ. ಋಷ್ಯಶೃಂಗನನ್ನು ಕರೆಸಿ ಪುತ್ರಕಾಮೇಷ್ಟಿಯನ್ನು ಆಚರಿಸಲಿದ್ದಾನೆ. ಹಿಂದೆಯೂ ತಪಸ್ಸು ಮಾಡಿ ಮಕ್ಕಳಿಗಾಗಿ ನನ್ನನ್ನು ಪ್ರಾರ್ಥಿಸಿದ್ದಾನೆ. ನಾನು ಅವನ ಮೂರು ಜನ ಪತ್ನಿಯರಲ್ಲಿ ನಾಲ್ಕು ಅಂಶಗಳಿಂದ ರಾಮ, ಲಕ್ಷ್ಮಣ, ಭರತ, ಶತ್ರುಘ್ನ ಎಂಬ ಹೆಸರಿನಿಂದ ಅವತರಿಸುತ್ತೇನೆ. ರಾವಣನನ್ನೂ ಅವನ ಪರಿವಾರವನ್ನೂ ನಾಶ ಮಾಡುತ್ತೇನೆ. ನೀವೂ ನಿಮ್ಮ ನಿಮ್ಮ ಅಂಶಗಳಿಂದ ಕಪಿ ಕರಡಿ ರೂಪಗಳಿಂದ ಅವತರಿಸಿರಿ.

ಇದನ್ನು ಕೇಳಿ ದೇವತೆಗಳು ಆನಂದ ಹೊಂದಿದರು. ಕಪಿ, ಕರಡಿ ರೂಪಗಳಿಂದ ಭೂಮಿಯಲ್ಲಿ ಅವತರಿಸಿದರು. ಹೀಗೆ ದೇವತೆಗಳ ಕಷ್ಟ ನಿವಾರಣೆಗಾಗಿ ಅವತರಿಸಿದ ಮಹಾವಿಷ್ಣುವೆ ನೀನು. ಭರತ, ಲಕ್ಷ್ಮಣ, ಶತ್ರುಘ್ನರೂ ನಿನ್ನ ಅಂಶಗಳು. ಪೂರ್ವಜನ್ಮದ ವೈರವನ್ನು ಸ್ಮರಿಸಿಕೊಂಡು ರಾವಣನು ಜಾನಕಿಯನ್ನು ಅಪಹರಿಸಿ, ನಿನ್ನ ಕೈಯಲ್ಲಿ ಹತನಾದ. ಆ ಬ್ರಹ್ಮರಾಕ್ಷಸನ ವಧೆಯಿಂದ ಋಷಿ ಮುನಿಗಳಿಗೆ ಸುಖ ಉಂಟಾಯಿತು. ಎಲ್ಲ ತೀರ್ಥಗಳೂ ಮಂಗಳಕರವಾದುವು. ಯಜ್ಞಯಾಗಗಳು ನಿರ್ವಿಘ್ನವಾಗಿ ನಡೆಯುವಂತಾದುವು.

ಇದನ್ನು ಕೇಳಿ ಶ್ರೀರಾಮನ ಕಣ್ಣುಗಳಿಂದ ನೀರು ಹರಿಯಲಾರಂಭಿಸಿತು. ಅವನು ಮೂರ್ಛೆಗೊಂಡು ನೆಲಕ್ಕೊರಗಿದನು.

*ಇತಿ ಶ್ರೀ ಪದ್ಮ ಮಹಾಪುರಾಣ-೨ರ ಶೇಷ-ವಾತ್ಸ್ಯಾಯನ ಸಂವಾದದಲ್ಲಿ ರಾವಣೋತ್ಪತ್ತಿ ಕಥನವೆಂಬ ಐದನೇ ಅಧ್ಯಾಯ ಮುಗಿದುದು*

**ಶೇಷ ಉವಾಚ**

**ಶೇಷ** :- ಶ್ರೀರಾಮನು ಮೂರ್ಛೆಗೊಂಡು ಬಿದ್ದುದನ್ನು ಕಂಡು ಅಗಸ್ತ್ಯಮುನಿ ಮೆಲ್ಲ ಮೆಲ್ಲನೆ ಕೈಯಿಂದ ಮೈ ಸವರುತ್ತ ಹೇಳಿದ.

**ಅಗಸ್ತ್ಯ** :- ರಾಮ, ಸುಧಾರಿಸಿಕೊಳ್ಳು, ಏಕೆ ಈ ದುಃಖ ? ದೈತ್ಯ ಕುಲವನ್ನು ನಾಶಮಾಡುವ ಮಹಾ ವಿಷ್ಣುವೆ ನೀನಲ್ಲವೆ ? ಈ ಚರಾಚರ ಪ್ರಪಂಚವು ಮೂರು ಕಾಲಗಳಲ್ಲಿಯೂ ನಿನ್ನನ್ನು ಬಿಟ್ಟಿರಲಾರದು.

ಇದನ್ನು ಕೇಳಿ ಶ್ರೀರಾಮನೆದ್ದು ಕಣ್ಣೀರು ಹರಿಸುತ್ತ ಲಜ್ಜೆಯಿಂದ ತಲೆತಗ್ಗಿಸಿ ನುಡಿದ.

**ಶ್ರೀರಾಮ** :- ಮುನಿಯೆ, ನಾನೆಂಥ ಅಜ್ಞಾನಿ ! ಎಂಥ ಮೂರ್ಖ ! ಎಂಥ ದುರಾತ್ಮ ! ಓರ್ವ ಸ್ತ್ರೀಯ ಸಲುವಾಗಿ ಬ್ರಾಹ್ಮಣ ವಂಶದಲ್ಲಿ ಜನಿಸಿದ ರಾವಣನನ್ನು ಕೊಂದೆನಲ್ಲ ! ವೇದಶಾಸ್ತ್ರವನ್ನು ತಿಳಿದ ನಾನು ಹಾಗೆ ಮಾಡಬಾರದಿತ್ತು. ಬ್ರಾಹ್ಮಣರಿಗೆ ಒಂದು ನಿಷ್ಟುರ ಮಾತನ್ನಾಡಲಾರದ ಇಕ್ಷ್ವಾಕು ಕುಲಕ್ಕೆ ನಾನೀಗ ಕಲಂಕ ಹಚ್ಚಿದಂತಾಯಿತು. ದಾನ ಸತ್ಕಾರ ಭೋಜನಗಳಿಂದ ಯಾರನ್ನು ಪೂಜಿಸಬೇಕೊ ಅವರನ್ನು ಬಾಣಗಳಿಂದ ಹೊಡೆದು ಸಾಯಿಸಿದೆನು. ಇದರಿಂದ ನನಗೆ ಯಾವ ಪರಲೋಕ ದೊರಕೀತು ! ಕುಂಭೀಪಾಕವೂ ನನಗೆ ಸಾಲದು. ನನ್ನನ್ನು ಶುದ್ಧೀಕರಿಸಬಲ್ಲ ತೀರ್ಥ ಲೋಕದಲ್ಲಿಯೆ ಇಲ್ಲ. ಬ್ರಾಹ್ಮಣ ದ್ರೋಹದ ಪಾಪವನ್ನು ಕಳೆಯಬಲ್ಲ ಯಜ್ಞ, ದಾನ, ತಪಸ್ಸು ಯಾವುದೂ ಇಲ್ಲ. ಎಲ್ಲ ವರ್ಣಾಶ್ರಮ ಧರ್ಮಗಳಿಗೂ ವೇದವು ಮೂಲ. ವೇದವೆಂಬ ವೃಕ್ಷಕ್ಕೆ ಬ್ರಾಹ್ಮಣರು ಮೂಲ. ಇಂಥ ಬ್ರಾಹ್ಮಣರಿಗೆ ನಾನು ದ್ರೋಹ ಬಗೆದ ಮೇಲೆ ನನಗೆ ಸುಖ ದೊರಕೀತೇ? ಈಗ ನಾನೇನು ಮಾಡಲಿ ?

**ಅಗಸ್ತ್ಯ** :- ರಾಜನ್, ನೀನು ದುಷ್ಟರನ್ನು ನಾಶ ಮಾಡಿರುವೆ. ಬ್ರಾಹ್ಮಣ ಹತ್ಯಾ ದೋಷ ನಿನಗಿಲ್ಲ. ನೀನು ಸಾಕ್ಷಾತ್ ಪರಮ ಪುರುಷ, ಪ್ರಕೃತಿಯಿಂದ ಆಚೆಗಿರುವವ. ನಿರ್ಗುಣ. ಸ್ವೇಚ್ಛೆಯಿಂದ ಗುಣಪೂರ್ಣ. ಸೃಷ್ಟಿ, ಸ್ಥಿತಿ, ಲಯಗಳನ್ನು ನೀನೆ ಮಾಡುವೆ. ಬ್ರಹ್ಮಹತ್ಯೆ, ಸುರಾಪಾನ, ಸ್ವರ್ಣಸ್ತೇಯಗಳಂಥ ಮಹಾಪಾಪಗಳೂ ನಿನ್ನ ನಾಮೋಚ್ಚಾರಣೆಯಿಂದ ದೂರ ತೊಲಗುವವು. ಈ ನಿನ್ನ ದೇವಿ ಜಾನಕಿಯು ಮಹಾವಿದ್ಯೆ. ಅವಳ ಸ್ಮರಣೆಯಿಂದಲೆ ಮುಕ್ತಿ ದೊರೆಯುವುದು. ರಾವಣನು ರಾಕ್ಷಸನಲ್ಲ. ವೈಕುಂಠದಲ್ಲಿ ಸೇವಕನಾಗಿದ್ದವ, ಋಷಿ ಶಾಪದಿಂದ ದೈತ್ಯನಾಗಿ ಹುಟ್ಟಿದ. ಅವನು ಬ್ರಾಹ್ಮಣನೂ ಆಗಿರಬಹುದು. ಆದರೆ ನೀನು ಅವನನ್ನು ಕೊಲ್ಲಲಿಲ್ಲ. ಅನುಗ್ರಹ ಮಾಡಿದೆ. ನೀನೇನೂ ಚಿಂತಿಸಬೇಡ.

**ಶ್ರೀರಾಮ** :- ಮುನಿಯೆ, ಪಾಪ ಎರಡು ವಿಧ. ತಿಳಿದು ಮಾಡಿದವುಗಳು ಕೆಲವು. ತಿಳಿಯದೆ ಮಾಡಿದವು ಕೆಲವು. ತಿಳಿಯದೆ ಮಾಡಿದ ಪಾಪವು ಪಶ್ಚಾತ್ತಾಪದಿಂದ ಸುಟ್ಟು

ಹೋಗುವದು. ತಿಳಿದು ಮಾಡಿದ ಪಾಪವನ್ನು ಅನುಭವಿಸಲೇಬೇಕು. ನಾನೀಗ ತಿಳಿದೂ ಬ್ರಹ್ಮಹತ್ಯೆ ಮಾಡಿದ್ದೇನೆ. ಅದನ್ನು ನೀನು ಹೊಗಳಿದ ಮಾತ್ರಕ್ಕೆ ದುಃಖ ತಪ್ಪುವುದಿಲ್ಲ. ಅದನ್ನು ತೊಳೆದುಕೊಳ್ಳಲು ಏನಾದರೂ ವ್ರತ, ದಾನ, ಯಜ್ಞಗಳಿದ್ದರೆ ಹೇಳು. ಪಾಪದಿಂದ ಕಲುಷಿತವಾಗಿ ನಿಷ್ಪ್ರಭವಾಗಿರುವ ನನ್ನ ಪರಲೋಕಗಳನ್ನು ವಿಪುಲ ಕೀರ್ತಿಯಿಂದ ತೊಳೆದುಕೊಳ್ಳಲು ಏನು ಉಪಾಯವಿದೆ, ಹೇಳು.

**ಅಗಸ್ತ್ಯ** :- ರಾಮ, ನೀನೊಂದು ಅಶ್ವಮೇಧ ಯಾಗವನ್ನು ಮಾಡು. ಅದರಿಂದೆಲ್ಲ ಪಾಪಗಳೂ ಪರಿಹಾರವಾಗುತ್ತವೆ. ಈ ಯಾಗವನ್ನು ಮಹಾ ಬಲಿಷ್ಠನಾದ ಐಶ್ವರ್ಯಶಾಲಿಯಾದ ನಿನ್ನಂಥ ರಾಜನು ಮಾತ್ರ ಮಾಡಬಲ್ಲ. ಹಿಂದೆ ನಿನ್ನ ವಂಶದಲ್ಲಿ ದಿಲೀಪ ಮಹಾರಾಜನು ಇಂಥ ಯಾಗವನ್ನು ಮಾಡಿದ್ದ. ನೂರು ಅಶ್ವಮೇಧ ಯಾಗಗಳನ್ನು ಮಾಡಿದ್ದರಿಂದಲೇ ಇಂದ್ರ ತನ್ನ ಪದವಿಯನ್ನು ಪಡೆದ. ಮನು, ಸಗರ, ಮರುತ್ತ, ಯಯಾತಿ ಇವರೆಲ್ಲ ಈ ಯಾಗವನ್ನು ಮಾಡಿಯೆ ಉತ್ತಮ ಲೋಕಗಳನ್ನು ಪಡೆದರು. ನೀನೂ ಈ ಯಾಗವನ್ನು ಮಾಡು. ನೀನು ಸಮರ್ಥ. ನಿನ್ನ ತಮ್ಮಂದಿರು ಒಬ್ಬೊಬ್ಬರೂ ಲೋಕಪಾಲಕರಂತೆ ಇದ್ದಾರೆ.

ಇದನ್ನು ಕೇಳಿ ಶ್ರೀರಾಮನು ಆ ಯಾಗದ ವಿಧಿ-ವಿಧಾನಗಳನ್ನು ತಿಳಿಯಬಯಸಿದ.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಪಾತಾಳ ಖಂಡದಲ್ಲಿ ಶೇಷ-ವಾತ್ಸ್ಯಾಯನ ಸಂವಾದದಲ್ಲಿ ಅಗಸ್ತ್ಯರ ಉಪದೇಶವೆಂಬ ಆರನೆ ಅಧ್ಯಾಯ ಮುಗಿದುದು*



## ಧರ್ಮ ನಿರೂಪಣೆ

**ಅಧ್ಯಾಯ - ೭**

**ರಾಮ ಉವಾಚ**

**ಶ್ರೀರಾಮ** :- ಅಶ್ವಮೇಧ ಯಾಗಕ್ಕೆ ಬೇಕಾಗುವ ಕುದುರೆ ಹೇಗಿರಬೇಕು ? ಅದನ್ನು ಪೂಜಿಸುವ ವಿಧಾನವೇನು ? ಯಾಗವನ್ನು ಹೇಗೆ ಮಾಡಬೇಕು ? ಯಾವ ವೈರಿಗಳನ್ನು ಜಯಿಸಬೇಕು ?

**ಅಗಸ್ತ್ಯ** :- ಅಶ್ವಮೇಧದ ಕುದುರೆ ಗಂಗಾಜಲದಂತೆ ಬಿಳಿಯಾಗಿರಬೇಕು. ಕಿವಿ ಕಪ್ಪು, ಮುಖ ಕೆಂಪು, ಬಾಲ ಹಳದಿಯಾಗಿರಬೇಕು. ಉಚ್ಚೈಶ್ರವದಂತೆ ಕಾಂತಿಯುಕ್ತವಾಗಿದ್ದು ಒಳ್ಳೆಯ ಲಕ್ಷಣಗಳಿಂದ ಕೂಡಿರಬೇಕು. ವೈಶಾಖ ಹುಣ್ಣಿಮೆದಿನ ಕುದುರೆಯನ್ನು ವಿಧಿವತ್ತಾಗಿ ಪೂಜಿಸಿ ಅದರ ಹಣೆಯ ಮೇಲೆ ತನ್ನ ಹೆಸರು ಸಾಮರ್ಥ್ಯ ಮುಂತಾದವುಗಳನ್ನು ತಿಳಿಸುವ ಒಂದು ಓಲೆಯನ್ನು ಕಟ್ಟಿ ಸಂಚರಿಸಲು ಬಿಡಬೇಕು. ಬೆಂಗಾವಲಿಗೆ ಸೇನೆಯನ್ನು ಕಳಿಸಿಕೊಡಬೇಕು. ಆ ಕುದುರೆ ಮನಬಂದಲ್ಲಿಗೆ ತಿರುಗುತ್ತಿರಬೇಕು. ಬಲ ವೀರ್ಯದರ್ಪವುಳ್ಳವನು ಯಾರಾದರೂ ಅದನ್ನು ಕಟ್ಟಿದರೆ ಬಲಾತ್ಕಾರದಿಂದಲೆ ಬಿಡಿಸಿಕೊಳ್ಳಬೇಕು. ಯಾಗ ಕರ್ತೃವು ಒಳ್ಳೆಯ ನಿಯಮದಿಂದಿದ್ದು ಬ್ರಹ್ಮಚರ್ಯವನ್ನು ಪಾಲಿಸಿಕೊಂಡು ದೀನದಲಿತರಿಗೆ ಅಂಗವಿಕಲರಿಗೆ ಅವರು ಬೇಡಿದುದನ್ನಿತ್ತು ಸಂತೋಷಪಡಿಸಬೇಕು. ಯಥೇಚ್ಛ ಅನ್ನದಾನ, ದ್ರವ್ಯದಾನ

ಮಾಡಬೇಕು. ಹೀಗೆ ಸಾಂಗವಾಗಿ ಯಾಗ ಮಾಡಲು ನೀನು ಸಮರ್ಥ. ಇದರಿಂದ ಕೀರ್ತಿ ಪಡೆದು ಇತರರನ್ನೂ ಪಾವನಗೊಳಿಸು.

**ಶ್ರೀರಾಮ** :- ಮುನಿಯೆ, ನನ್ನ ಅಶ್ವಶಾಲೆಗೆ ಒಮ್ಮೆ ಬಂದು ನೀನು ಹೇಳುವ ಲಕ್ಷಣಗಳುಳ್ಳ ಕುದುರೆ ಇದೆಯೊ ಇಲ್ಲವೊ ಎಂದು ನೋಡಿ ಹೇಳು.

ಅಗಸ್ತ್ಯ ಮುನಿ ಎದ್ದು ಶ್ರೀರಾಮನೊಡನೆ ಅಶ್ವಶಾಲೆಯನ್ನು ಪ್ರವೇಶಿಸಿ ಎಲ್ಲ ಕುದುರೆಗಳನ್ನೂ ಪರೀಕ್ಷಿಸಿದ. ಉಚ್ಚೈಶ್ರವಸ್ಸಿನ ವಂಶದ ಎಲ್ಲ ಕುದುರೆಗಳೂ ಅಲ್ಲಿ ಒಂದೆಡೆ ಇದ್ದಂತಿತ್ತು. ರಘುರಾಜರ ಕೀರ್ತಿಗಳೆಲ್ಲ ಇಲ್ಲಿಯೆ ಮೂರ್ತಿಮತ್ತಾಗಿರುವುವೊ, ಅಮೃತವೆಲ್ಲವೂ ಕುದುರೆಯ ರೂಪು ತಳೆದು ಇಲ್ಲಿ ನಿಂತಿದೆಯೊ ಎಂಬಂತಿತ್ತು. ಕೆಂಪು ಕಪ್ಪು ಹೊಂಬಣ್ಣ ಚಿತ್ರವರ್ಣಗಳ ಕುದುರೆಗಳೂ ಅಲ್ಲಿದ್ದವು. ಎಲ್ಲವನೂ ನೋಡಿ ವಿಸ್ಮಿತನಾದ ಮುನಿ. ಆದರೆ ಇನ್ನೊಂದೆಡೆ ಇನ್ನೂ ಹೆಚ್ಚಿನ ವಿಸ್ಮಯ ಅವನಿಗೆ ಕಾದಿತ್ತು. ಅಲ್ಲಿ ಕಪ್ಪು ಕಿವಿ, ಹಳದಿ ಬಾಲ, ಕೆಂಪು ಮುಖಗಳುಳ್ಳ ಸುಲಕ್ಷಣವಾದ ಬಿಳಿಕುದುರೆಗಳು ಅನೇಕ ಇದ್ದುವು. ಗಂಗಾಜಲದಂತೆ, ಶುದ್ಧಕೀರ್ತಿಯಂತೆ ಹೊಳೆವ, ವಾಯುವೇಗ-ಮನೋವೇಗಗಳಿಂದ ಓಡಬಲ್ಲ ವಿಚಿತ್ರ ಕುದುರೆಗಳು. ಅವುಗಳನ್ನು ನೋಡಿದ ಮುನಿಯ ಮುಖ ಕಣ್ಣುಗಳು ಆನಂದದಿಂದ ಹೊಳೆಯತೊಡಗಿದುವು. ಆತ ನುಡಿದ.

**ಅಗಸ್ತ್ಯ** :- ಅಶ್ವಮೇಧಕ್ಕೆ ಯೋಗ್ಯವಾದ ಉತ್ತಮ ಕುದುರೆಗಳನ್ನು ಇಷ್ಟೊಂದು ಸಂಖ್ಯೆಯಲ್ಲಿ ಒಂದು ಕಡೆ ನೋಡುತ್ತಿದ್ದೇನೆ. ಎಷ್ಟು ನೋಡಿದರೂ ನನ್ನ ಕಣ್ಣುಗಳಿಗೆ ತೃಪ್ತಿಯಾಗುತ್ತಿಲ್ಲ. ಮಹಾರಾಜ ರಾಮಚಂದ್ರ, ನೀನು ಈ ಯಾಗವನ್ನು ಅವಶ್ಯ ಮಾಡಲೇಬೇಕು. ವಿಜೃಂಭಣೆಯಿಂದ ಮಾಡು. ಇಂದ್ರನಂತೆ ಎಲ್ಲ ಯಾಗಗಳನ್ನೂ ಮಾಡು. ಸೂರ್ಯನಂತೆ ವೈರಿಗಳೆಂಬ ನೀರನ್ನು ಶೋಷಿಸು. ಭೂಮಿಯ ಮೇಲಿನ ಎಲ್ಲ ಸುಖಭೋಗಗಳನ್ನು ಸವಿದು ನೋಡು.

ಇದನ್ನು ಕೇಳಿ ಶ್ರೀರಾಮನು ಯಾಗಸಿದ್ಧತೆಗಳನ್ನೆಲ್ಲ ಮಾಡಿ ಅಗಸ್ತ್ಯನೊಂದಿಗೆ ಸರಯೂತೀರಕ್ಕೆ ಬಂದು ಚಿನ್ನದ ನೇಗಿಲಿನಿಂದ ಯಾಗ ಭೂಮಿಯನ್ನು ಶೋಧಿಸಿ ಅಲ್ಲಿ ಯಜ್ಞ ಮಂಟಪ ಅನೇಕ ರತ್ನಖಚಿತವಾದ ಯಜ್ಞಕುಂಡ ಮುಂತಾದುವನ್ನು ಸಿದ್ಧಪಡಿಸಿದ. ವಸಿಷ್ಠಮಹರ್ಷಿ ಎಲ್ಲವನ್ನೂ ವಿಧಿವತ್ತಾಗಿ ಮಾಡಿಸಿದ. ತನ್ನ ಶಿಷ್ಯರ ಮೂಲಕ ಎಲ್ಲ ಋಷಿಗಳನ್ನೂ ಕರೆಸಿದ. ನಾರದ, ಅಸಿತ, ಪರ್ವತ, ಕಪಿಲ, ಜಾತೂಕರ್ಣಿ, ಅಂಗಿರಸ್, ವ್ಯಾಸ, ಅರ್ಷ್ಟಿಷೇಣ, ಅತ್ರಿ, ಗೌತಮ, ಹಾರೀತ, ಯಾಜ್ಞವಲ್ಕ್ಯ, ಸಂವರ್ತ, ಶುಕ ಮುಂತಾದ ಮುನಿಗಳು ಬಂದು ಶ್ರೀರಾಮನಿಂದ ಅರ್ಘ್ಯ ಪಾದ್ಯ ಆಸನ ಗೋ ಭೂ ಹಿರಣ್ಯದಾನ ಮುಂತಾದ ಸತ್ಕಾರಗಳನ್ನು ಪಡೆದರು. 'ನಿಮ್ಮ ದರ್ಶನ ದೊರೆತಂದು ಒಂದು ದೊಡ್ಡ ಭಾಗ್ಯ'ವೆಂದು ಶ್ರೀರಾಮನು ಅವರನ್ನು ಗೌರವಿಸಿದ.

ಹೀಗೆ ಋಷಿಗಳೆಲ್ಲ ಒಂದೆಡೆ ಸೇರಿದ್ದರಿಂದ ವರ್ಣಾಶ್ರಮಧರ್ಮದ ಬಗ್ಗೆ ವಿಚಾರಗಳು ವ್ಯಕ್ತವಾದವು. ರಾಮನು ಅವನ್ನು ಕೇಳಲು ಬಯಸಿದುದರಿಂದ ಅವರು ಹೇಳಿದರು.

**ಋಷಿಗಳು** :- ಬ್ರಾಹ್ಮಣನು ಸದಾ ಯಜ್ಞ ಅಧ್ಯಾಪನ ಮುಂತಾದ ಕರ್ಮಗಳನ್ನು ಮಾಡುತ್ತಿರಬೇಕು. ವೇದಾಧ್ಯಯನವಾದ ಬಳಿಕ ಸನ್ಯಾಸ ಸ್ವೀಕರಿಸಬಹುದು ಅಥವಾ

ಗೃಹಸ್ಥನಾಗಬಹುದು. ನೀಚ ಸೇವೆ, ಶ್ವವೃತ್ತಿಗಳನ್ನು ಎಂಥ ಆಪತ್ತಿನಲ್ಲಿಯೂ ಮಾಡಕೂಡದು. ಋತು ಕಾಲದಲ್ಲಿ ಮಾತ್ರ ಸಂತತಿಯ ಇಚ್ಛೆಯಿಂದ ಅಥವಾ ಸ್ತ್ರೀಯರ ಸಂತೋಷಕ್ಕಾಗಿ ಅವರ ಸಂಸರ್ಗ ಮಾಡುತ್ತಿದ್ದು ಪರಸ್ತ್ರೀಯರನ್ನು ಬಯಸದಿದ್ದರೆ ಅದುವೆ ಗೃಹಸ್ಥಧರ್ಮ. ಗೃಹಸ್ಥಾಶ್ರಮದಲ್ಲಿ ಬ್ರಹ್ಮಚರ್ಯವೆಂದರೆ ಇದುವೆ. ಋತು ಕಾಲದಲ್ಲಿಯೂ ಹಗಲು, ಶ್ರಾದ್ಧದಿನ, ಪರ್ವದಿನಗಳು, ಮಘಾ, ಮೂಲಾ ನಕ್ಷತ್ರಗಳು ಇವೆಲ್ಲವೂ ವರ್ಜ್ಯ. ರಜೋದರ್ಶನದಿಂದಾರಂಭಿಸಿ ಹದಿನಾರು ದಿನಗಳು ಋತುಕಾಲ. ಅದರಲ್ಲಿಯೂ ಮೊದಲಿನ ನಾಲ್ಕುದಿನ ವರ್ಜ್ಯ. ಮುಂದೆ ಸಮಸಂಖ್ಯೆಯ ದಿನಗಳು ಪುತ್ರೋತ್ಪತ್ತಿಗೂ, ವಿಷಮ ಸಂಖ್ಯೆಯ ದಿನಗಳು ಕನ್ಯೋತ್ಪತ್ತಿಗೂ ಕಾರಣವಾಗುವುವು. ಅರ್ಷ ವಿವಾಹ ಪದ್ಧತಿಯಲ್ಲಿ ಎರಡು ಗೋದಾನ ಮಾಡಬೇಕು. ಕನ್ಯಾಶುಲ್ಕವನ್ನು ಸ್ವಲ್ಪವೂ ಸ್ವೀಕರಿಸಕೂಡದು. ವ್ಯಾಪಾರ, ರಾಜಸೇವೆ, ವೇದಾಧ್ಯಯನ ಮಾಡದಿರುವುದು. ವಿಧ್ಯುಕ್ತವಲ್ಲದ ವಿವಾಹ, ಸ್ವಕರ್ಮವನ್ನು ಬಿಡುವುದು ಇವೆಲ್ಲವುಗಳಿಂದ ಕುಲವೆ ಪತಿತವಾಗುವುದು. ಸತ್ಪಾತ್ರನಿಗೆ ಅನ್ನನೀರು, ಹಣ್ಣುಗಡ್ಡೆಗಳನ್ನು ಇತ್ತರೂ ಗೋದಾನ ಫಲವಿದೆ. ಅತಿಥಿಯನ್ನು ಸತ್ಕರಿಸದೆ ನಿರಾಸೆಗೊಳಿಸಿದರೆ ಹುಟ್ಟಿದಂದಿನಿಂದ ಮಾಡಿದ ಪುಣ್ಯವೆಲ ನಶಿಸುತ್ತದೆ. ದೇವ, ಪಿತೃ, ಅತಿಥಿಗಳಿಗೆ ನಿವೇದಿಸಿ ಉಂಡರೆ ಅಮೃತ ಉಂಡಂತೆ. ತಾನೊಬ್ಬನೆ ಉಂಡರೆ ಪಾಪ ಉಂಟಾಗುತ್ತದೆ. ಷಷ್ಠಿ, ಅಷ್ಟಮಿಗಳಲ್ಲಿ ಎಣ್ಣೆ ಮಾಂಸಗಳನ್ನೂ, ಚತುರ್ದಶಿ ಅಮಾವಾಸ್ಯೆಗಳಲ್ಲಿ ಕ್ಷೌರ, ಸ್ತ್ರೀಸಂಗಗಳನ್ನೂ ಬಿಡಬೇಕು. ರಜಸ್ವಲೆಯ ಸಂಗವನ್ನೆಂದೂ ಮಾಡಕೂಡದು. ಪತ್ನಿಯ ಜತೆಯಲ್ಲಿ ಒಂದೇ ಬಟ್ಟೆ ಧರಿಸಿ, ಎತ್ತರವಾದ ಆಸನದಲ್ಲಿ ಕುಳಿತು ಭೋಜನ ಮಾಡಬಾರದು. ಊಟ ಮಾಡುತ್ತಿರುವ ಸ್ತ್ರೀಯನ್ನೂ, ನಗ್ನಗಳಾಗಿರುವವಳನ್ನೂ ನೋಡಬಾರದು. ಬಾಯಿಯಿಂದ ಬೆಂಕಿಯನ್ನೂ ಊದಬಾರದು. ಕರು ಹಾಲು ಕುಡಿಯುತ್ತಿದ್ದರೆ ಬಿಡಿಸಬಾರದು. ಕಾಮನಬಿಲ್ಲನ್ನು ತೋರಿಸಬಾರದು. ಹಗಲು ಮಜ್ಜಿಗೆಯನ್ನೂ, ರಾತ್ರಿ ಮೊಸರನ್ನೂ ಸೇವಿಸಬಾರದು. ಬೆಂಕಿಯಲ್ಲಿ ಕಾಲುಗಳನ್ನು ಕಾಸಬಾರದು. ಅಶುಚಿ ಪದಾರ್ಥಗಳನ್ನು ಹಾಕಬಾರದು. ಪ್ರಾಣಿಹಿಂಸೆ ಮಾಡಬಾರದು. ಸಂಧ್ಯಾ ಕಾಲಗಳಲ್ಲಿ ಊಟ ಮಾಡಬಾರದು. ರಜಸ್ವಲೆಯನ್ನು ಅಭಿವಾದನ ಮಾಡಬಾರದು. ರಾತ್ರಿಯಲ್ಲಿ ಹೊಟ್ಟೆ ತುಂಬ ಉಣಬಾರದು. ನೃತ್ಯ, ಗೀತ, ವಾದ್ಯಗಳಲ್ಲಿ ವ್ಯಸನಿ ಆಗಿರಬಾರದು. ಇನ್ನೊಬ್ಬರ ಬಟ್ಟೆ, ಪಾದರಕ್ಷೆಗಳನ್ನು ಉಪಯೋಗಿಸಬಾರದು. ಮಲಗಿಕೊಂಡು ಊಟ ಮಾಡಬಾರದು. ಕಾಲು ಒದ್ದೆ ಇರುವಾಗ ಮಲಗಬಾರದು. ಊಟವಾದ ಮೇಲೆ ಬಾಯಿ, ಕೈಕಾಲು ತೊಳೆದುಕೊಳ್ಳದೆ ಎಲ್ಲಿಗೂ ಪ್ರಯಾಣ ಮಾಡಬಾರದು. ತಲೆ ಮುಟ್ಟಿಕೊಳ್ಳಕೂಡದು. ಮನುಷ್ಯರ ಸ್ತುತಿ, ಆತ್ಮನಿಂದೆ, ಪರರ ರಹಸ್ಯವನ್ನು ಬಯಲು ಮಾಡುವುದು ಇವನ್ನು ಬಿಡಬೇಕು. ಹೀಗೆ ಗೃಹಸ್ಥಧರ್ಮವನ್ನು ಆಚರಿಸಿ ಮುಂದೆ ಪತ್ನಿಯೊಡನೆ ಇಲ್ಲವೆ ಅವಳನ್ನು ಬಿಟ್ಟು ವಾನಪ್ರಸ್ಥಾಶ್ರಮವನ್ನು ಹೊಂದಬೇಕು. ಕೊನೆಗೆ ಸನ್ಯಾಸವನ್ನು ಸ್ವೀಕರಿಸಬೇಕು.

ಹೀಗೆ ಅನೇಕ ಧರ್ಮಾಚರಣೆಯ ರಹಸ್ಯಗಳನ್ನು ಶ್ರೀರಾಮನು ಮುನಿಗಳಿಂದ ಕೇಳಿ ತಿಳಿದನು.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಪಾತಾಳ ಖಂಡದಲ್ಲಿ ಶೇಷ-ವಾತ್ಸ್ಯಾಯನ ಸಂವಾದದಲ್ಲಿ*

*ಶ್ರೀ ರಾಮಾಶ್ವಮೇಧದಲ್ಲಿ ಧರ್ಮ ನಿರೂಪಣವೆಂಬ ಎಳನೆ ಅಧ್ಯಾಯ ಮುಗಿದುದು*

**ಶೇಷ ಉವಾಚ**

**ಶೇಷ :-** ಯಜ್ಞ ಯಾಗಗಳಿಗೆ ಯೋಗ್ಯವಾದ ವಸಂತಮಾಸ ಬರುವವರೆಗೆ ಶ್ರೀರಾಮನ ಸಮಕ್ಷಮದಲ್ಲಿ ಮುನಿಗಳು ಧರ್ಮಾಚರಣೆಯ ಬಗ್ಗೆ ವಿಚಾರವಿನಿಮಯ ಮಾಡಿದರು. ವಸಂತಮಾಸ ಪ್ರಾರಂಭವಾದೊಡನೆ ವಸಿಷ್ಠರು ಶ್ರೀ ರಾಮನಲ್ಲಿ ಹೇಳಿದರು.

**ವಸಿಷ್ಠ :-** ರಾಮಚಂದ್ರ ಯಾಗವನ್ನು ಪ್ರಾರಂಭಿಸಲು ಯೋಗ್ಯ ಸಮಯ ಬಂದಿದೆ. ಯಾಗದ ಕುದುರೆಯನ್ನು ಪೂಜಿಸಿ ತಕ್ಕ ರಕ್ಷಣೆಯೊಂದಿಗೆ ತಿರುಗಲು ಬಿಡತಕ್ಕ ಸಿದ್ಧತೆಗಳನ್ನು ಏರ್ಪಡಿಸಿ ಬ್ರಾಹ್ಮಣರನ್ನು ಕರೆಸಿ ಸತ್ಕಾರಮಾಡು. ದೀನ ಜನರಿಗೆ ಯಥೇಚ್ಛ ದಾನಮಾಡು. ಸುವರ್ಣಮಯ ಪತ್ನಿಯೊಂದಿಗೆ ದೀಕ್ಷೆ ಪಡೆ. ದೀಕ್ಷಾ ಕಾಲದಲ್ಲಿ ಭೂಶಯನ ಬ್ರಹ್ಮಚರ್ಯಗಳ ನಿಯಮವನ್ನಿಟ್ಟುಕೊಳ್ಳು. ಐಶ್ವರ್ಯ ಭೋಗವನ್ನು ಬಿಡು. ಜಿಂಕೆಯ ಕೊಂಬು, ಮೇಖಲೆ, ಅಜಿನ ದಂಡಗಳನ್ನು ಧರಿಸು.

ಇದನ್ನು ಕೇಳಿ ಶ್ರೀ ರಾಮನು ಲಕ್ಷ್ಮಣನನ್ನು ಕರೆದು ಯಾಗದ ಕುದುರೆಯನ್ನು ತರಲು ಅಜ್ಞಾಪಿಸಿದನು. ಲಕ್ಷ್ಮಣನು ಸೇನಾಪತಿಗೆ ಆಜ್ಞೆ ಮಾಡಿದನು.

**ಲಕ್ಷ್ಮಣ :-** ಯಾಗದ ಕುದುರೆಯ ರಕ್ಷಣೆಗಾಗಿ ಚತುರಂಗ ಸೇನೆಯನ್ನು ಸಜ್ಜುಗೊಳಿಸು. ಅದು ರಾಜರ ತಲೆಯ ಕಿರೀಟಗಳನ್ನು ಬಗ್ಗಿಸಲು ಸಮರ್ಥವಾಗಿರಬೇಕು. ಅಲೆಗಳಂತೆ ಲಲಿತವಾಗಿ ನಡೆವ ವಾಯುವೇಗದ ಕುದುರೆಗಳು. ಅವುಗಳಿಗೆ ಸಮರ್ಥರಾದ ಶಸ್ತ್ರಧಾರಿಗಳಾದ ಸವಾರರು, ಪರ್ವತಾಕಾರದ ಮದಿಸಿದ ಆನೆಗಳು. ಅವುಗಳ ಮೇಲೆ ಪ್ರಾಸ ಕುಂತಗಳನ್ನು ಧರಿಸಿದ ವೀರಮಾವುತರು, ಶಸ್ತ್ರಾಸ್ತ್ರಗಳಿಂದ ತುಂಬಿದ್ದು ಐಶ್ವರ್ಯ ಸಮೃದ್ಧಿಯಿಂದ ಹೊಳೆವ ರಥಗಳು, ಅವುಗಳನ್ನೊಯ್ಯಲು ವಾಯುವೇಗದ ಕುದುರೆಗಳು, ಶಸ್ತ್ರಧಾರಿಗಳಾದ ಕಾಲಾಳುಗಳು ಇವನ್ನೆಲ್ಲ ಸಿದ್ಧಪಡಿಸಿ ನನ್ನ ಬಳಿಗೆ ತಂದೊಪ್ಪಿಸು.

ಕಾಲಜಿತ್ ಎಂಬ ಸೇನಾಪತಿ ಲಕ್ಷ್ಮಣನ ಆಜ್ಞೆಯಂತೆ ಎಲ್ಲವನ್ನೂ ಸಿದ್ಧಪಡಿಸಿದನು.

ಯಾಗದ ಕುದುರೆ ಎಲ್ಲ ಲಕ್ಷಣಗಳಿಂದ ಒಪ್ಪುತ್ತಿತ್ತು. ಅದರ ಮೈಯಲ್ಲಿ ಹತ್ತು ಸುಳಿಗಳು. ಸಣ್ಣದಾಗಿ ಹೊಳೆಯುವ ರೋಮಗಳು, ಮುಖದಲ್ಲಿ ಉಜ್ವಲ ಕಾಂತಿ, ಸಣ್ಣದಾದ ಕಪ್ಪು ಕಿವಿಗಳು, ಕಡಿವಾಣದಿಂದ ಶೋಭಿಸುವ ಮುಖ, ಮೈತುಂಬ ಮುತ್ತುರತ್ನಗಳ ಮಾಲೆ, ಶ್ವೇತಚ್ಛತ್ರ ಬಿಳಿ ಚಾಮರ ಇವುಗಳಿಂದ ಅಲಂಕೃತವಾದ ಸುಂದರ ಅಶ್ವವು ಯಜ್ಞಮಂಟಪದ ಕಡೆಗೆ ಹೊರಟಿತು. ದೇವತೆಗಳು ಹರಿಯನ್ನು ಓಲೈಸುವಂತೆ ವೀರರು ಕುದುರೆಯನ್ನು ಅದರ ಮುಂದೆ, ಹಿಂದೆ ಮತ್ತು ಮಧ್ಯದಲ್ಲಿ ಮೂರು ಭಾಗವಾಗಿ ಸೇರಿ ಮುನ್ನಡೆಸಿದರು. ಆ ಚತುರಂಗ ಸೇನೆಯ ವೀರರ ಗರ್ಜನೆ ದುಂದುಭಿ ಘೋಷಗಳಿಂದ ಪರ್ವತಗಳೂ ಅಲ್ಲಾಡಿದುವು. ಆಗ ಎದ್ದ ದೂಳಿನಿಂದ ಜನರೆ ಕಾಣದಂತಾದರು. ಕಸ್ತೂರಿಯ ಅಂಗರಾಗವನ್ನು ಮೈಗೆ ಬಳಿದುಕೊಂಡು ಕಿರೀಟ, ಕಡಗ ಮೊದಲಾದ ಆಭರಣಗಳನ್ನೂ, ಹೂಮಾಲೆಗಳನ್ನೂ ಧರಿಸಿ ವೀರರು ಕುದುರೆಯನ್ನು ಯಜ್ಞಮಂಟಪಕ್ಕೆ ತಂದರು.

ರಾಮನು ಕುದುರೆಯನ್ನು ನೋಡಿ ಸಂತೋಷದಿಂದ ವಸಿಷ್ಠರಲ್ಲಿ ಮುಂದಿನ ಕಾರ್ಯಗಳನ್ನು ನಡೆಸಿಕೊಡಲು ಕೇಳಿಕೊಂಡನು. ವಶಿಷ್ಠರು ರಾಮನನ್ನು ಅವನ ಸ್ವರ್ಣಮಯ ಪತ್ನಿಯೊಡೆ ಕುಳ್ಳಿರಿಸಿ ಬ್ರಹ್ಮಹತ್ಯಾ ಪರಿಹಾರಕವಾದ ಅಶ್ವಮೇಧಯಾಗದ ಪ್ರಯೋಗವನ್ನು ಮಾಡಿಸಿದರು.

ಶ್ರೀರಾಮನ ಕುಲಗುರು ವಶಿಷ್ಠಮುನಿ ಆಚಾರ್ಯನಾದನು. ಅಗಸ್ತ್ಯನು ಬ್ರಹ್ಮನಾದನು. ವಾಲ್ಮೀಕಿ ಅಧ್ವರ್ಯು ಆದನು. ಕಣ್ವನು ದ್ವಾರರಕ್ಷಕನಾದನು. ಪೂರ್ವ ದ್ವಾರದಲ್ಲಿ ದೇವಲ ಅಸಿತ ಮುನಿಗಳು. ದಕ್ಷಿಣ ದ್ವಾರದಲ್ಲಿ ಕಶ್ಯಪ ಅತ್ರಿ ಮುನಿಗಳು, ಪಶ್ಚಿಮ ದ್ವಾರದಲ್ಲಿ ಜಾತೂಕರ್ಣ್ಯ-ಜಾಬಲಿ ಮುನಿಗಳು, ಉತ್ತರ ದ್ವಾರದಲ್ಲಿ ದ್ವಿತೀಕ ಏಕತ್ರ ಮುನಿಗಳು ಹೀಗೆ ದ್ವಾರಸಂಸ್ಕಾರಗಳನ್ನು ನಡೆಸಿದರು. ವಸಿಷ್ಠಮುನಿ ಯಾಗದ ಕುದುರೆಯನ್ನು ಅರ್ಚಿಸಿದರು. ಸುವಾಸಿನಿಯರು ಅರಿಶಿನ ಗಂಧ, ಅಕ್ಷತೆಗಳಿಂದ ಅಲಂಕರಿಸಿದರು. ಮುನಿಗಳ ಅಪ್ಪಣೆ ಪಡೆದು ವೇಶ್ಯೆಯರು ಧೂಪ, ದೀಪ ಆರತಿಗಳಿಂದ ಪೂಜಿಸಿದರು. ಶುಭ ಕೋರಿದರು.

ಕುದುರೆಯ ಹಣೆಯನ್ನು ಗಂಧ, ಕುಂಕುಮಗಳಿಂದ ಸಿಂಗರಿಸಿ ಅಲ್ಲಿ ಹೊಳೆವ ಚಿನ್ನದ ತಗಡನ್ನು ಕಟ್ಟಿದರು. ಅದರಲ್ಲಿ ಶ್ರೀರಾಮನ ಪ್ರತಾಪ ಬಲಗಳ ಕುರಿತು ಹೀಗೆ ಬರೆದಿತ್ತು. 'ಸೂರ್ಯವಂಶದ ಧ್ವಜದಂತಿರುವ, ಧನುರ್ಧಾರಿಗಳಲ್ಲೆ ಅಗ್ರಗಣ್ಯನಾದ, ದೇವಾಸುರ ವಂದ್ಯನಾದ ದಶರಥನ ಸುಪುತ್ರ ಶ್ರೀರಾಮಚಂದ್ರ, ಅವನು ವೀರಶಿರೋಮಣಿ. ವೀರರ ದರ್ಪವನ್ನಿಳಿಸುವವ ಅವನ ತಾಯಿ ಕೌಸಲ್ಯೆ ಅವಳ ಗರ್ಭದಿಂದುದಿಸಿದ ರತ್ನವೆ ಶ್ರೀರಾಮಚಂದ್ರ. ಅವನು ರಾವಣನೆಂಬ ಬ್ರಾಹ್ಮಣನನ್ನು ಕೊಂದ ಪಾಪದ ಪರಿಹಾರಕ್ಕಾಗಿ ಅಶ್ವಮೇಧ ಮಾಡಲು ಈ ಕುದುರೆಯನ್ನು ಬಿಟ್ಟಿರುವನು. ಅದರ ರಕ್ಷಣೆಗೆ ಅವನ ತಮ್ಮ ಶತ್ರುಘ್ನನು ಚತುರಂಗ ಸೇನೆಯೊಡನೆ ಹಿಂಬಾಲಿಸುತ್ತಿರುವನು. ಬಲದಲ್ಲಿ ಆ ರಾಮನಿಗಿಂತ ತಾವೇ ಶ್ರೇಷ್ಠರೆಂಬ ದರ್ಪ ಉಳ್ಳ ರಾಜರು ಈ ಕುದುರೆಯನ್ನು ಕಟ್ಟಿ ಹಾಕಲಿ. ಆಗ ರಾಮನ ಸೋದರನಾದ ಶತ್ರುಘ್ನನು ಅನಾಯಾಸವಾಗಿ ಅದನ್ನು ಬಿಡಿಸಿಕೊಳ್ಳುವನು.

ಹೀಗೆ ವಶಿಷ್ಠ ಮುನಿ ಶ್ರೀರಾಮನ ಭುಜಬಲ ಪ್ರತಾಪಗಳನ್ನು ಆ ಓಲೆಯಲ್ಲಿ ಬರೆಸಿದ್ದ. ವಾಯುವೇಗದಿಂದ ಭೂಮಿಯಲ್ಲಿ ಮಾತ್ರವಲ್ಲ ಪಾತಾಳದಲ್ಲಿಯೂ ಸಂಚರಿಸಬಲ್ಲ ಕುದುರೆ ಚಿನ್ನದ ಈ ಓಲೆಯನ್ನು ಹಣೆಯ ಮೇಲೆ ಹೊತ್ತು ಹೊರಟಿತು. ರಾಮನ ಆದೇಶದಂತೆ ಶತ್ರುಘ್ನನು ಅದನ್ನು ಹಿಂಬಾಲಿಸಿದ.

ಶತ್ರುಘ್ನನಿಗೆ ರಾಮನಿತ್ತ ಆದೇಶ ಹೀಗಿತ್ತು.

'ಶತ್ರುಘ್ನ, ಈ ಕುದುರೆಯನ್ನು ಹಿಂಬಾಲಿಸು. ನಿನಗೆ ಮಂಗಳವಾಗಲಿ. ನಿನ್ನ ಬಾಹುಗಳು ಶತ್ರುಗಳ ಮೇಲೆ ವಿಜಯ ಸಂಪಾದಿಸಲಿ. ಆದರೆ ನಿದ್ದೆ ಮಾಡುತ್ತಿರುವವರನ್ನು, ಓಡಿಹೋಗುತ್ತಿರುವವರನ್ನು, ಬೆತ್ತಲೆಯಾದವರನ್ನು, ಭಯಗೊಂಡವರನ್ನು, ನಮಿಸುತ್ತಿರುವವರನ್ನು, ಮಹಾಕಾರ್ಯವನ್ನು ಹೊಗಳದಿರುವ ಮೂರ್ಖರನ್ನು, ನಾವು ನಿನ್ನವರು ಎಂದು ಹೇಳುವವರನ್ನು ಹೊಡೆಯಬೇಡ. ನೀನು ರಥದಲ್ಲಿದ್ದು ರಥವಿಲ್ಲದವರೊಡೆ ಯುದ್ಧ ಮಾಡಬೇಡ. ಪರದ್ರವ್ಯ, ಪರಸ್ತ್ರೀ ಕಾಮನೆಯನ್ನು ಎಂದೂ

ಮಾಡಬೇಡ. ದೊಡ್ಡವರೊಡನೆ ಯುದ್ಧ ಮಾಡುವಾಗ ನೀನು ಮೊದಲು ಪ್ರಹಾರ ಮಾಡಬೇಡ. ಪೂಜ್ಯರಾದವರಿಗೆ ಮರ್ಯಾದೆ ಕೊಡಲು ತಪ್ಪಬೇಡ. ಗೋ-ಬ್ರಾಹ್ಮಣರನ್ನೂ ವೈಷ್ಣವರನ್ನೂ ವಂದಿಸಿ ಹೊರಡು. ಅದರಿಂದ ಸಿದ್ಧಿಯುಂಟಾಗುತ್ತದೆ. ಸರ್ವವ್ಯಾಪಕನೂ ಸರ್ವೇಶ್ವರನೂ ಆದ ವಿಷ್ಣುವನ್ನು ನೆನೆಯುತ್ತ ತನ್ನವ, ಪರಕೀಯ, ಶತ್ರು, ಮಿತ್ರ ಎಂಬ ಭೇದವೆಣಿಸದ ವೈಷ್ಣವರು ವಿಷ್ಣುವಿನಂತೆ ಪೂಜ್ಯರು, ಲೋಕಪಾವನರು.

**ಯೇಷಾಂ ಮುಖೇ ಹರೇರ್ನಾಮ ಹೃದಿ ವಿಷ್ಣುಃ ಸನಾತನಃ ।**
**ಉದರೇ ವಿಷ್ಣುನೈವೇದ್ಯಂ ಸ ಶ್ವಪಾಕೋಽಪಿ ವೈಷ್ಣವಃ ॥**

ಯಾರ ಮುಖದಲ್ಲಿ ಹರಿನಾಮ, ಹೃದಯದಲ್ಲಿ ವಿಷ್ಣು, ಉದರದಲ್ಲಿ ವಿಷ್ಣು ನೈವೇದ್ಯವಿರುವುದೊ ಅವನು ಚಂಡಾಲನೆ ಆಗಿದ್ದರೂ ವೈಷ್ಣವನೆನಿಸುವನು.

ವೇದಶಾಸ್ತ್ರದಲ್ಲಿ ಅದರ ಸಂಸಾರ ಸುಖದಲ್ಲಿ ಅನಾಸಕ್ತಿ, ತ್ರಿಮೂರ್ತಿಗಳಲ್ಲಿಯೂ ಗೌರಿ, ಗಂಗೆ, ಮಹಾಲಕ್ಷ್ಮಿಯರಲ್ಲಿಯೂ ಉತ್ತಮ, ನಿರ್ಮಲ ಭಕ್ತಿ. ಶರಣಾಗತರಲ್ಲಿ ಮಮತೆ, ದಾನಶೀಲತೆ ಇವೆಲ್ಲವೂ ವೈಷ್ಣವ ಲಕ್ಷಣಗಳು. ಮಹಾಪಾಪರಾಶಿಯನ್ನೆಲ್ಲ ದಹಿಸಬಲ್ಲ ನಾಮ ವಿಷ್ಣುವಿನದು. ಅವನ ಚರಣಗಳಲ್ಲಿ ಭಕ್ತಿ ಉಳ್ಳವನೆ ವೈಷ್ಣವ. ಇಂದ್ರಿಯ ನಿಗ್ರಹ ಮಾಡಿಕೊಂಡು ಹರಿಸ್ಮರಣೆ ಮಾಡುವವರನ್ನು ನಮಸ್ಕರಿಸಿದರೆ ಪವಿತ್ರತೆ ಉಂಟಾಗುವುದು. ಪರಸ್ತ್ರೀಯರನ್ನು ಕತ್ತಿಯಂತೆ ಅಪಾಯಕಾರಿಯೆಂದು ಬಗೆದು ಯಶಸ್ಸನ್ನು ಪಡೆ. ನನ್ನ ಆಜ್ಞೆಯೆಲ್ಲವನ್ನೂ ಪಾಲಿಸಿ ಉತ್ತಮ ಲೋಕವನ್ನು ಹೊಂದು.

**ಶೇಷ** :- ಭಗವಾನ್ ಶ್ರೀ ರಾಮಚಂದ್ರನು ಶತ್ರುಘ್ನನಿಗೆ ಹೀಗೆ ಅಪ್ಪಣೆ ಮಾಡಿ, ಆ ಶತ್ರುಘ್ನನಿಗೆ ಬೆಂಗಾವಲಾಗಿ ಹೋಗಲು ವೀಳೆಯವನ್ನು ತೆಗೆದುಕೊಳ್ಳುವವರಾರೆಂದು ವೀರರನ್ನು ಕೇಳಿದ. ಆಗ ಭರತನ ಮಗ ಪುಷ್ಕಲನು ಮುಂದೆ ಬಂದು 'ಪ್ರಭು, ನಿನ್ನ ಪ್ರತಾಪವೆ ಭೂತಲವನ್ನೆಲ್ಲ ಗೆಲ್ಲುತ್ತಿದೆ. ನಾವೆಲ್ಲ ನಿಮಿತ್ತ ಮಾತ್ರ. ನಿನ್ನ ಕೃಪೆಯಿಂದ ನಾನು ದೇವ, ದಾನವ, ಮಾನವರೆಲ್ಲ ಒಟ್ಟಾಗಿ ಬಂದರೂ ಇದಿರಿಸಬಲ್ಲೆ. ನನ್ನ ಪರಾಕ್ರಮವನ್ನು ನೀನು ನೋಡುವೆಯಂತೆ ವೀಳೆಯ ಕೊಡು' ಎಂದ. ಶ್ರೀರಾಮನು ಅವನಿಗೆ ವೀಳೆಯ ಕೊಟ್ಟು. ಹನುಮಂತನನ್ನು ಕರೆದು ಹೇಳಿದ, 'ವೀರನೆ, ನಿನ್ನಿಂದ ನನಗೀರಾಜ್ಯ ದೊರಕಿತು. ಸೀತೆ ದೊರಕಿದಳು. ಆ ಸಮುದ್ರವನ್ನು ದಾಟುವುದೂ ಸಾಧ್ಯವಾಯಿತು. ನಿನ್ನ ಬಲ ನನಗೆ ಗೊತ್ತು. ಈಗ ನನ್ನ ಸೇನೆಯನ್ನು ರಕ್ಷಿಸಲು ನೀನು ಹೋಗಬೇಕು. ಶತ್ರುಘ್ನನನ್ನು ಕಾಪಾಡಬೇಕು. ಅವನಿಗೆ ಕಾಲಕಾಲಕ್ಕೆ ಸರಿಯಾದ ಮಾರ್ಗದರ್ಶನ ಮಾಡುತ್ತಿರಬೇಕು.' ಹನುಮಂತನು ಆ ಆಜ್ಞೆಯನ್ನು ಶಿರಸಾವಹಿಸಿ ಪ್ರಣಾಮ ಮಾಡಿದನು.

ಬಳಿಕ ಶ್ರೀರಾಮನ ಆಜ್ಞೆಯಂತೆ ಜಾಂಬವಂತ, ಅಂಗದ, ಗವಯಿ, ಮೈಂದ ದಧಿಮುಖ, ಸುಗ್ರೀವ, ಶತಾವಳಿ, ಅಕ್ಷಿಕ, ನಲ, ನೀಲ ಮುಂತಾದ ಕಪಿವೀರರೂ ಕವಚ ಶಿರಸ್ತ್ರಾಣಗಳನ್ನು ಧರಿಸಿ ರಥಗಳನ್ನೇರಿ ಹೊರಡಲು ಸಿದ್ಧರಾದರು. ಸುಮಂತ್ರನ ಸಲಹೆಯಂತೆ ಪ್ರತಾಪಾಗ್ರ್ಯ, ನೀಲರತ್ನ, ಲಕ್ಷ್ಮೀನಿಧಿ, ರಿಪುತಾಪ, ಉಗ್ರಹಯ ಇವರೆಲ್ಲರಿಗೂ ತಮ್ಮ ತಮ್ಮ ಸೇನೆಯೊಂದಿಗೆ ಶತ್ರುಘ್ನನನ್ನು ಹಿಂಬಾಲಿಸಲು ರಾಮನು ಆದೇಶ ನೀಡಿದ. ಬಹುಕಾಲದಿಂದ ಯುದ್ಧಕ್ಕಾಗಿ ಹಾತೊರೆಯುತ್ತಿದ್ದ ಅವರಿಗೆ ಇದರಿಂದ

ಬಹು ಆನಂದವಾಯಿತು. ನೀಲರತ್ನರಾಜನು ಹತ್ತುಅಕ್ಷೋಹಿಣಿ ಸೇನೆಯನ್ನೂ, ಪ್ರತಾಪಾಗ್ರ್ಯನು ಇಪ್ಪತ್ತುಅಕ್ಷೋಹಿಣಿ ಬಲವನ್ನೂ ಕರೆದುಕೊಂಡು ಹೊರಟರು. ಲಕ್ಷ್ಮೀನಿಧಿ ಸೀತೆಯ ತಮ್ಮ. ಬ್ರಹ್ಮನನ್ನು ತಪಸ್ಸಿನಿಂದ ಒಲಿಸಿಕೊಂಡು ಬ್ರಹ್ಮಾಸ್ತ್ರ, ಪಾಶುಪತಾಸ್ತ್ರ, ಗರುಡಾಸ್ತ್ರ, ಸರ್ಪಾಸ್ತ್ರ, ಮಯೂರಾಸ್ತ್ರ, ನಕುಲಾಸ್ತ್ರ, ರೌದ್ರಾಸ್ತ್ರ, ವೈಷ್ಣವಾಸ್ತ್ರ, ವಾರುಣಾಸ್ತ್ರ, ವಾಯವ್ಯಾಸ್ತ್ರ, ಪರ್ವತಾಸ್ತ್ರ, ವಜ್ರಾಸ್ತ್ರ ಮುಂತಾದ ಅಸ್ತ್ರಗಳ ಪ್ರಯೋಗ ಉಪಸಂಹಾರಗಳನ್ನು ತಿಳಿದುಕೊಂಡವ. ಅವನು ತನ್ನ ಒಂದುಅಕ್ಷೋಹಿಣಿ ಸೇನೆಯೊಡನೆ ಶತ್ರುಘ್ನನ ಜತೆಯಲ್ಲಿ ಹೊರಟನು.

ಶ್ರೀರಾಮನು ಆಗ ಋಷಿಗಳಿಗೆ ಸತ್ಕಾರ ಮಾಡಿ ನಾನಾ ವಿಧದ ದಾನ ದಕ್ಷಿಣೆಗಳನ್ನಿತ್ತನು. ಆಚಾರ್ಯನಿಗೆ ಅರವತ್ತು ವರ್ಷದ ಒಂದು ಆನೆ. ರತ್ನಮಾಲೆಯಿಂದ ಅಲಂಕೃತವಾದ ಮನೋವೇಗದ ಒಂದು ಕುದುರೆ. ನಾಲ್ಕು ಕುದುರೆಗಳನ್ನು ಕಟ್ಟಿರುವ ಒಂದು ಚಿನ್ನದ ರಥ, ಒಂದುಲಕ್ಷ ಮಣಿಗಳು, ನೂರು ತೊಲೆ ಮುತ್ತು, ಸಾವಿರ ತೊಲೆ ಹವಳ, ಸಂಪದ್‌ಭರಿತವಾದ ಒಂದು ಗ್ರಾಮ, ಇವಿಷ್ಟನ್ನೂ ದಾನ ಮಾಡಿದನು. ಹೀಗೆ ಬ್ರಹ್ಮ, ಹೋತ್ರ, ಅಧ್ವರ್ಯ ಮುಂತಾದ ಋತ್ವಿಕ್ಕುಗಳಿಗೂ ದಾನ ದಕ್ಷಿಣೆಗಳನ್ನಿತ್ತು ಸತ್ಕರಿಸಿದ. ಅವರೆಲ್ಲರೂ 'ಮಹಾರಾಜ ರಾಮಚಂದ್ರ, ನೀನು ಚಿರಾಯುವಾಗು' ಎಂದು ಆಶೀರ್ವದಿಸಿದರು. ಕನ್ಯಾ, ಭೂಮಿ, ಗಜ, ಅಶ್ವ, ಸುವರ್ಣ, ತಿಲ, ಅನ್ನ, ಉದಕ, ಅಭಯ, ಮುಂತಾದ ಅನೇಕ ದಾನಗಳನ್ನು ಬ್ರಾಹ್ಮಣರಿಗೆ ಯಥೇಚ್ಛವಾಗಿ ಕೊಟ್ಟನು. 'ದಾನ ಕೊಡು, ಯಾರಿಗೂ ಇಲ್ಲವೆನ್ನಬೇಡ. ಅನ್ನ ಬಡಿಸು, ಯಥೇಚ್ಛವಾಗಿ ಬಡಿಸು' ಎಂದು ರಾಜನ ಪರಿವಾರವು ಪರಸ್ಪರ ಹೇಳಿಕೊಳ್ಳುತ್ತಿತ್ತು. ಹೀಗೆ ಶ್ರೀರಾಮನ ಯಜ್ಞಮಂಟಪ ಸಂತುಷ್ಟರಾದ ದ್ವಿಜರಿಂದ ತುಂಬಿಕೊಂಡಿತು. ಯಜ್ಞ ಸಾಂಗವಾಗಿ ನಡೆಯಿತು.

ಶತ್ರುಘ್ನನನು ತಾಯಿಯ ಅಪ್ಪಣೆ ಪಡೆಯಲು ಆಕೆಯ ಬಳಿಗೆ ಹೋಗಿ ನಮಸ್ಕರಿಸಿದ. 'ನಿನ್ನ ಕೃಪೆಯಿಂದ ಶತ್ರುಗಳನ್ನೆಲ್ಲ ಗೆದ್ದು ಕುದುರೆಯನ್ನು ಯಜ್ಞ ಮಂಟಪಕ್ಕೆ ನಿರಾತಂಕವಾಗಿ ಕರೆ ತಂದು ಕೀರ್ತಿವಂತನಾಗುತ್ತೇನೆ' ಎಂದ. ಆಕೆ ಹರಿಸಿದಳು. 'ಮಗು ಹೋಗು, ನಿನ್ನ ಪ್ರಯಾಣ ಸುಖಕರವಾಗಲಿ. ಎಲ್ಲ ವೈರಿಗಳನ್ನೂ ಗೆದ್ದು ಬಾ, ಪುಷ್ಕಲನಿನ್ನೂ ಹುಡುಗ. ಹುಡುಗತನವನ್ನು ತೋರಬಹುದು. ಅವನನ್ನು ಕಾಪಾಡಿಕೊಳ್ಳು. ನೀವಿಬ್ಬರೂ ಕ್ಷೇಮದಿಂದ ಹಿಂತಿರುಗಿ ಬಂದರೆ ನನಗೆ ಆನಂದ ಇಲ್ಲದಿದ್ದರೆ ನಾನು ದುಃಖಿನಿಯಾಗುವೆ.'

'ಅಮ್ಮ, ಪುಷ್ಕಲನನ್ನು ನನ್ನ ಶರೀರದ ಒಂದು ಅಂಗವೆಂದು ಬಗೆದು ಕಾಪಾಡುವೆನು. ನನ್ನ ಹೆಸರಿಗೆ ತಕ್ಕಂತೆ ಶತ್ರುಗಳನ್ನು ಕೊಂದು ಬರುವೆನು. ನಿನ್ನ ಪಾದಗಳನ್ನೆ ಸ್ಮರಿಸುತ್ತ ಅವನ್ನು ತಿರುಗಿ ಸೇವಿಸುವೆನು.

ಹೀಗೆ ಹೇಳಿ ಶತ್ರುಘ್ನನು ಯಜ್ಞಮಂಟಪಕ್ಕೆ ಹೋಗಿ ಅಲ್ಲಿ ಮುನಿಗಳ ಮಧ್ಯದಲ್ಲಿ ಮುನಿವೇಷದಿಂದ ಕುಳಿತಿದ್ದ ರಾಮನಲ್ಲಿ ಅನುಜ್ಞೆ ಬೇಡಿದ. ಶ್ರೀರಾಮನೆಂದ 'ಹೋಗು, ನಿನಗೆ ಶುಭವಾಗಲಿ, ಬಾಲಕರನ್ನೂ, ಸ್ತ್ರೀಯರನ್ನೂ, ಬುದ್ಧಿಭ್ರಮಣೆ ಹೊಂದಿದವರನ್ನೂ, ನಿರಾಯುಧರನ್ನೂ ಹೊಡೆಯಬೇಡ.'

ಹತ್ತಿರದಲ್ಲಿದ್ದ ಲಕ್ಷ್ಮೀನಿಧಿ ಇದನ್ನು ಕೇಳಿ ಪರಿಹಾಸಕ್ಕಾಗಿ ನಕ್ಕು ಕಣ್ಣುಗಳನ್ನು ಕುಣಿಸಿ ಹೇಳಿದ. 'ರಾಮಚಂದ್ರ, ಶತ್ರುಘ್ನನಿಗೆ ಚೆನ್ನಾಗಿ ಉಪದೇಶಿಸು. ಅವನು ತನ್ನ ಕುಲೋಚಿತವಾದ, ಸ್ವಯಂ ಅಣ್ಣಂದಿರು ಆಚರಿಸಿರುವ ಕರ್ಮಗಳನ್ನು ಮಾಡಿ ಪರಾಕ್ರಮಿಯೆನಿಸಲಿ. ಉತ್ತಮ ಲೋಕವನ್ನು ಪಡೆಯಲಿ. ಏಕೆಂದರೆ ತಂದೆ ಪಿತೃಭಕ್ತನಾದ ಬ್ರಾಹ್ಮಣನನ್ನು ಕೊಂದ. ಅಣ್ಣನಾದ ನೀನೂ ಬ್ರಹ್ಮಹತ್ಯೆ, ಸ್ತ್ರೀಹತ್ಯೆ ಮಾಡಿದವನೆ, ಇನ್ನೊಬ್ಬ ಅಣ್ಣನಂತೂ ರಾಕ್ಷಸಿಯೊಬ್ಬಳ ಕಿವಿಯನ್ನು ಕೊಯ್ದು ಹಿಂದಿನವರಾರೂ ಮಾಡದಿರುವ ಒಂದು ದೊಡ್ಡ ಪರಾಕ್ರಮದ ಕಾರ್ಯವನ್ನು ಮಾಡಿ ಬಿಟ್ಟಿದ್ದಾನೆ. ನಿನ್ನ ಉಪದೇಶವನ್ನು ಕೇಳಿ ಶತ್ರುಘ್ನನೂ ಇನ್ನು ಹಾಗೇ ಮಾಡುವನು. ಇಲ್ಲದಿದ್ದರೆ ಕುಲಮರ್ಯಾದೆಗೆ ಚ್ಯುತಿ ತಂದಂತಾದೀತು !'

ಶ್ರೀರಾಮನೂ ನಕ್ಕು ಸರಿಯಾದ ಉತ್ತರವನ್ನೆ ಕೊಟ್ಟ. 'ನೀವೆಲ್ಲ ಯೋಗಿಗಳು. ವಿರಕ್ತರು. ಸಂಸಾರ ಸಾಗರವನ್ನು ದಾಟುವುದು ಹೇಗೆಂಬುದು ನಿಮಗೆ ಗೊತ್ತು. ಆದರೆ ಯುದ್ಧ ನೀತಿ ಏನೆಂಬುದು ನಿಮಗೆ ಹೇಗೆ ತಿಳಿದೀತು ? ಶೂರರು ಬಿಲ್ಲುಗಾರರು. ಶಸ್ತ್ರಾಸ್ತ್ರ ಬಲ್ಲವರು ಇವರೆ ಅದನ್ನು ಬಲ್ಲರು.

**ಪರೋಪತಾಪಿನೋ ಯೇ ವೈ ಯೇ ಚೋತ್ಪಥವಿಸಾರಿಣಃ**
**ತೇ ಹಂತವ್ಯಾ ನೃಪೈಃ ಸರ್ವೈಃ ಸರ್ವಲೋಕ ಹಿತೈಷಿಭಿಃ ॥**

ಪರರಿಗೆ ಹಿಂಸೆ ಮಾಡುವವರನ್ನೂ, ಸನ್ಮಾರ್ಗವನ್ನು ಬಿಟ್ಟು ಸ್ವಚ್ಛಂದವಾಗಿ ನಡೆವವರನ್ನೂ, ಎಲ್ಲರ ಹಿತವನ್ನು ಕೋರುವ ರಾಜರು ದಂಡಿಸಲೇಬೇಕು.'

ಸಭಾಸದರೆಲ್ಲರೂ ನಕ್ಕರು. ಒಡನೆ ವಸಿಷ್ಠರು ಶ್ರೀರಾಮನಿಗೆ ಜಯವನ್ನು ಕೋರಿ ತನ್ನ ಕರಕಮಲವನ್ನು ಕುದುರೆಯ ಮೇಲಿಟ್ಟು ಈ ಮಂತ್ರವನ್ನು ಜಪಿಸಿದರು.

**ವಾಜಿನ್ ಗಚ್ಛ ಯಥಾಲೀಲಂ ಸರ್ವತ್ರ ಧರಣೀತಲೇ ।**
**ಯಾಗಾರ್ಥಂ ಮೋಚಿತೋ ಯೇನ ಪುನರಾಗಚ್ಛ ಸತ್ವರಃ ॥**

ಕುದುರೆಯೆ, ಅನಾಯಾಸವಾಗಿ ಭೂಮಂಡಲದಲ್ಲೆಲ್ಲ ಸಂಚರಿಸು. ಯಾಗಕ್ಕೋಸ್ಕರ ನಿನ್ನನ್ನು ಬಿಟ್ಟಿರುವುದರಿಂದ ಬೇಗನೆ ಬಂದು ಬಿಡು.

ಹೀಗೆ ಹೇಳಿ ಕುದುರೆಯನ್ನು ಬಿಟ್ಟರು. ಶಸ್ತ್ರಾಸ್ತ್ರಗಳಲ್ಲಿ ನುರಿತ ಭಟರು ಅದನ್ನು ಹಿಂಬಾಲಿಸಿದರು. ಮೊದಲಿಗೆ ಕುದುರೆ ಪೂರ್ವದಿಕ್ಕಿನಲ್ಲಿ ಸಂಚರಿಸತೊಡಗಿತು. ಸೇನೆಯ ಚಲನೆಯಿಂದ ನೆಲ ನಡುಗಿತು. ಆದಿಶೇಷನ ಹೆಡೆಯೂ ಸ್ವಲ್ಪ ತಗ್ಗಿತು. ದಿಕ್ಕುಗಳೆಲ್ಲ ಪ್ರಸನ್ನವಾದವು. ಭೂಮಿಯ ಮೇಲೆಲ್ಲ ಕಾಂತಿ ಹರಡಿತು. ಗಾಳಿ ಶತ್ರುಘ್ನನ ಹಿಂದಿನಿಂದ ಮೆಲ್ಲನೆ ಬೀಸಿತು. ಅವನ ಬಲತೋಳು ಅದುರಿ ಶುಭವನ್ನು ಸೂಚಿಸಿತು.

ಪುಷ್ಕಲನು ಹೊರಡುವ ಮುನ್ನ ಪತಿವ್ರತೆಯಾದ ತನ್ನ ಮಡದಿ ಕಾಂತಿಮತಿಯನ್ನು ಕಾಣಲು ಅಂತಃಪುರಕ್ಕೆ ಹೋದನು. ಅಲ್ಲಿ ಆಕೆ ಪತಿಯನ್ನು ಕಾಣುವ ತವಕದಿಂದ ಅವನನ್ನೆ ಇದಿರು ನೋಡುತ್ತಿದ್ದಳು. ಕರ್ಪೂರ ಮಿಶ್ರಿತವಾದ ತಾಂಬೂಲ ಮೆಲ್ಲುತ್ತಿದ್ದಳು. ತಾವರೆ ಮೊಗದ ಆ ಬಾಲೆಯ ಮೃಣಾಳ ಕೋಮಲವಾದ ಬಾಹುಗಳು

ಕಂಕಣಗಳಿಂದೊಪ್ಪುತ್ತಿದ್ದವು. ಬೇಲದ ಹಣ್ಣಿನಂಥ ಎದೆಗಳು. ಕಾಂಚಿಯಿಂದ ಶೋಭಿಸುವ ನಿತಂಬ. ಕೋಮಲ ಪಾದಗಳು. ಇಂಥ ಮಡದಿಯನ್ನು ಕಂಡು ಬಿಗಿದಪ್ಪಿದ ಪುಷ್ಕಲ. ಅವಳು ಗದ್ಗದ ಕಂಠದಿಂದ ಮಾತನಾಡಲು ಪ್ರಯತ್ನಿಸಿದಾಗ ಪುಷ್ಕಲನೆ ಹೇಳಿದ. 'ಪ್ರಿಯೆ, ಶತ್ರುಘ್ನನಿಗೆ ಅಂಗರಕ್ಷಕನಾಗಿ ಕುದುರೆಯನ್ನು ನೋಡಿಕೊಳ್ಳಲು ಹೋಗುತ್ತಿದ್ದೇನೆ. ನೀನು ನನ್ನ ತಾಯಿಯನ್ನು ಸೇವಿಸುತ್ತಿರು. ಅವರ ಕಾಲು ಒತ್ತುವುದು, ಅವರು ಉಂಡ ಮೇಲೆ ಉಣ್ಣುವುದು, ಅವರು ಹೇಳಿದಂತೆ ನಡೆಯುವುದು. ಹೀಗೆ ಅವರ ಸೇವೆ ಮಾಡು. ಲೋಪಾಮುದ್ರೆಯಂಥ ಪತಿವ್ರತೆಯರನ್ನೆಂದೂ ಅವಮಾನ ಪಡಿಸಬೇಡ. ಅವರಿಗೆ ಒಳ್ಳೆಯ ತಪೋಬಲವಿದೆ.'.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಪಾತಾಳಖಂಡದಲ್ಲಿ ಶೇಷ-ವಾತ್ಸ್ಯಾಯನ ಸಂವಾದದಲ್ಲಿ ಹಯಮೋಚನವೆಂಬ ಎಂಟನೆ ಅಧ್ಯಾಯ ಮುಗಿದುದು*



## ಕಾಮಕ್ಷುಪಾಖ್ಯಾನ

**ಅಧ್ಯಾಯ - ೯**

**ಶೇಷ ಉವಾಚ**

**ಶೇಷ :-** ಪುಷ್ಕಲನ ಈ ಮಾತನ್ನು ಕೇಳಿ ಪ್ರೇಮದಿಂದ ನೋಡುತ್ತ, ನಗುತ್ತ ಗದ್ಗದ ಕಂಠದಿಂದ ಕಾಂತಿಮತಿ ಹೇಳಿದಳು. 'ನಾಥ, ನೀನು ಹೋದಲ್ಲೆಲ್ಲ ಯುದ್ಧದಲ್ಲಿ ವಿಜಯ ದೊರಕಲಿ. ಶತ್ರುಘ್ನನಾಜ್ಞೆಯನ್ನು ಚೆನ್ನಾಗಿ ಪಾಲಿಸುತ್ತ ಕುದುರೆಯನ್ನು ರಕ್ಷಿಸು. ನಿನ್ನ ಚರಣದಾಸಿಯಾದ ನನ್ನನ್ನು ಮರೆಯಬೇಡ. ನಿನ್ನ ಮನಸ್ಸು ಬೇರೆಡೆಗೆ ಹೋಗದಿರಲಿ. ರಣರಂಗದಲ್ಲಿ ಮಾತ್ರ ನನ್ನನ್ನು ಮರೆಯಲೇಬೇಕು. ಆಗ ನಿನ್ನ ಮನಸ್ಸಿನಲ್ಲಿ ನನ್ನ ಧ್ಯಾನ ಇದ್ದರೆ ಜಯ ಸಿಗುವುದು ಸಂಶಯಾಸ್ಪದ. ನನ್ನ ಓರಗಿತ್ತಿಯರು ನನ್ನನ್ನೂ, ಊರ್ಮಿಳೆಯನ್ನೂ ನೋಡಿ ರಣರಂಗದಿದೋಡುವ ಹೇಡಿಗಳ ಹೆಂಡಿರು ಇವರೆಂದು ಕೈ ಚಪ್ಪಾಳೆ ಹೊಡೆದು ನಗುವಂತೆ ಮಾತ್ರ ಮಾಡಬೇಡ. ರಣರಂಗದಲ್ಲಿ ನೀನೆ ಮುಂದೆ ಇದ್ದು ಧನುಸ್ಸಿನ ಟಂಕಾರದಿಂದ ಎಲ್ಲ ವೀರರನ್ನೂ ಕಿವುಡರನ್ನಾಗಿಸು. ನೀನು ಕೈಯಿಂದ ಖಡ್ಗವನೆತ್ತುವ ಬಗೆಯನ್ನು ಕಂಡೇ ಶತ್ರುಗಳು ಭೀತರಾಗಬೇಕು. ಶತ್ರುವಿಜಯವನ್ನು ಸಂಪಾದಿಸಿ ಕುಲಕ್ಕೆ ನೀನೊಬ್ಬನು ಭೂಷಣನೆನಿಸಬೇಕು. ನಾಥ ಹೊರಡು. ನಿನಗೆ ಶ್ರೇಯಸ್ಸು ಆಗಲಿ. ಈ ಬಿಲ್ಲನ್ನೆತ್ತಿಕೊಳ್ಳು. ಇದರ ಧ್ವನಿಯೆ ವೈರಿಗಳೆದೆ ನಡುಗಿಸುತ್ತದೆ. ಇಗೊ ಎರಡು ಬತ್ತಳಿಕೆಗಳು. ಕೋಟಿಗಟ್ಟಲೆ ಶತ್ರುಗಳನ್ನೂ ಮರ್ದಿಸುವಷ್ಟು ಬಾಣಗಳು ಅವುಗಳಲ್ಲಿವೆ. ಈ ಹೊಳೆಯುವ ವಜ್ರ ಕವಚವನ್ನೂ, ಶಿರಸ್ತ್ರಾಣವನ್ನೂ ಧರಿಸು.

**ಪುಷ್ಕಲ :-** ಪ್ರಿಯೆ, ನೀನು ಹೇಳಿದಂತೆಯೆ ಎಲ್ಲವನ್ನೂ ಮಾಡಿ ವೀರಪತ್ನಿ ಕಾಂತಿಮಂತಿ ಎಂದು ಕೀರ್ತಿಯನ್ನು ನಿನಗೆ ತಂದು ಕೊಡುತ್ತೇನೆ.

ಹೀಗೆ ಹೇಳಿ ಕಾಂತಿಮಂತಿ ಕೊಟ್ಟ ಕವಚ. ಶಿರಸ್ತ್ರಾಣ, ಬಿಲ್ಲು-ಬತ್ತಳಿಕೆಗಳನ್ನು ಧರಿಸಿ, ವೀರಮಾಲೆ, ಕುಂಕುಮ, ಅಗರು, ಕಸ್ತೂರಿ, ಚಂದನ, ಹೂಮಾಲೆಗಳಿಂದ ಅಲಂಕೃತನಾಗಿ ಶೋಭಿಸಿದ ಪುಷ್ಕಲ. ಕಾಂತಿಮತಿ ಅವನ ಮೇಲೆ ಮುತ್ತುಗಳನ್ನೆರಚಿ ಆರತಿ ಮಾಡಿ,

ಕಣ್ಣೀರು ಸುರಿಸುತ್ತ ಅಪ್ಪಿಕೊಂಡಳು. ಆತನೂ ದೃಢವಾಗಿ ಅವಳನ್ನು ಆಲಿಂಗಿಸಿಕೊಂಡು ಸಂತೈಸಿದ. 'ವೀರಪತ್ನಿ, ಕಾಂತಿಮತಿ, ನೀನು ಈ ರೀತಿಯಲ್ಲಿ ಶೋಕ ಮಾಡುವುದು ಉಚಿತವಲ್ಲ. ಸಹಿಸಿಕೊಳ್ಳು, ಬೇಗನೆ ನಿನ್ನ ಬಳಿಗೆ ಬರುವೆ.' ಹೀಗೆ ಹೇಳಿ ರಥವನ್ನೇರಿದ. ಅವನು ಹೋಗುವುದನ್ನು ಎವೆ ಮುಚ್ಚದೆ ನೋಡುತ್ತ ನಿಂತಳು ಕಾಂತಿಮತಿ.

ಬಳಿಕ ಪುಷ್ಕಲನು ತನ್ನ ತಾಯಿ ತಂದೆಗಳನ್ನು ಕಾಣಲು ಹೋಗಿ ಅವರನ್ನು ನಮಸ್ಕರಿಸಿದ. ತಾಯಿ ಮಗನನ್ನು ಆಲಂಗಿಸಿಕೊಂಡು ತೊಡೆಯ ಮೇಲೆ ಕೂಡಿಸಿ ಕಣ್ಣೀರು ಸುರಿಸುತ್ತ 'ಒಳ್ಳೆಯದಾಗಲಿ' ಎಂದು ಹರಸಿದಳು.

'ಯಜ್ಞದೀಕ್ಷಿತನಾದ ರಾಮನನ್ನು ನೀನೂ, ಲಕ್ಷ್ಮಣನೂ ಕಾಪಾಡುತ್ತ ಇರಿ' ಎಂದು ಹೇಳಿದ ಭರತನಿಂದಲೂ ಅಪ್ಪಣೆ ಪಡೆದು ಶತ್ರುಘ್ನನ ಸೇನೆಯನ್ನು ಕೂಡಿಕೊಂಡ ಪುಷ್ಕಲ.

ಕುದುರೆ ಸಂಚರಿಸುತ್ತ ಪಾಂಚಾಲ, ಕುರು, ಉತ್ತರಕುರು, ದಶಾರ್ಣ ವಿಶಾಲ ದೇಶಗಳನ್ನು ಸಂದರ್ಶಿಸಿತು. ಎಲ್ಲೆಡೆಗಳಲ್ಲಿಯೂ ಜನರು ರಾಮನನ್ನೆ ಹೊಗಳುತ್ತಿದ್ದರು. 'ರಾವಣಾಸುರನನ್ನು ಕೊಂದು ಭಕ್ತರ ಭಯವನ್ನು ಪರಿಹರಿಸಿದವನು ಶ್ರೀರಾಮ. ಈಗ ಅಶ್ವಮೇಧದಂಥ ಮಹಾಕಾರ್ಯಗಳಿಂದ ಪಾವನವಾದ ತನ್ನ ಯಶಸ್ಸನ್ನು ಎಲ್ಲೆಡೆ ಪಸರಿಸಿ ಎಲ್ಲ ಲೋಕಗಳನ್ನು ಕಾಪಾಡುತ್ತಿದ್ದಾನೆ.' ಇಂಥ ಸ್ತುತಿಗಳನ್ನು ಕೇಳಿ ಸಂತೋಷದಿಂದ ಶತ್ರುಘ್ನನು ಹಾರ, ರತ್ನ, ಬೆಲೆ ಬಾಳುವ ವಸ್ತ್ರ ಮುಂತಾದುವನ್ನು ಜನರಿಗೆ ಕೊಡುತ್ತ ನಡೆದ. ಅವನ ಜತೆಗೆ ರಾಮನ ಮಂತ್ರಿ ಸುಮತಿಯೂ ಇದ್ದ. ಆತ ಸರ್ವ ವಿದ್ಯಾವಿಶಾರದ, ತೇಜಸ್ವಿ.

ಶ್ರೀರಾಮನ ಪ್ರತಾಪವನ್ನು ತಿಳಿದ ಯಾವ ರಾಜರೂ ಕುದುರೆಯನ್ನೂ ಕಟ್ಟಿಹಾಕಲಿಲ್ಲ. ಚತುರಂಗಸೇನೆ ಮುತ್ತು ಮಾಣಿಕ್ಯ ಮುಂತಾದವುಗಳನ್ನು ಶತ್ರುಘ್ನನಿಗೊಪ್ಪಿಸಿ 'ಈ ರಾಜ್ಯ, ಈ ಕೋಶ. ಈ ಪುತ್ರಪೌತ್ರಾದಿ ಬಾಂಧವರು ಎಲ್ಲವೂ ಶ್ರೀರಾಮಚಂದ್ರನದು ನನ್ನದಲ್ಲ' ಎಂದು ಹೇಳುತ್ತ ಮಣಿದರು. ಶತ್ರುಘ್ನನು ಆ ರಾಜ್ಯಗಳಲ್ಲಿ ತನ್ನಾಡಳಿತೆಯನ್ನು ಸ್ಥಾಪಿಸಿ ಆ ರಾಜರನ್ನು ಕರೆದುಕೊಂಡು ಮುನ್ನಡೆದ.

ಕುದುರೆ ಅಹಿಚ್ಛತ್ರ ನಗರಕ್ಕೆ ಬಂದಿತು. ಅಲ್ಲಿ ಸುವರ್ಣ ಖಚಿತವಾದ ಸ್ಫಟಿಕದ ಭವ್ಯ ಸೌಧಗಳಲ್ಲಿ ರಂಭೆಯನ್ನು ನಾಚಿಸುವ ಕಮಲಮುಖಿಯರು. ಆಚಾರಶೀಲರೂ ವಿಲಾಸಿಗಳೂ ಆದ ಕುಬೇರನ ಅನುಚರರಂಥ ಜನರು. ಒಳ್ಳೆಯ ಬಿಲ್ಲುಗಾರರಾದ ವೀರರು. ಅವರು ತಮ್ಮ ಸುಮದ ರಾಜನನ್ನು ಒಳ್ಳೆಯರಾಜನೆಂಬ ಕೀರ್ತಿಗೆ ಪಾತ್ರನೆಂದು ತೋರಿಸಿಕೊಟ್ಟಿದ್ದರು.

ನಗರದ ಹೊರವಲಯದಲ್ಲಿ ಸುಂದರವಾದ ಉದ್ಯಾನವಿತ್ತು. ನಾಗ ಪುನ್ನಾಗ ಚಂಪಕ ತಿಲಕ ದೇವದಾರು ಅಶೋಕ ನೇರಲೆ, ಮಾವು, ಮಂದಾರ ಕಂಚುವಾಳ ಕದಂಬ ಮತ್ತಿ ಹಲಸು ಸಾಲ ತಾಲ ತಮಾಲ ಮಲ್ಲಿಗೆ ಜಾಜಿ ಸೇವಂತಿಗೆ ಮುಂತಾದ ವೃಕ್ಷಲತೆಗಳಿಂದ ಶೋಭಿಸುವ ಆ ಉದ್ಯಾನವನವನ್ನು ಕುದುರೆ ಪ್ರವೇಶಿಸಿತು. ಸ್ವಲ್ಪ ದೂರದಲ್ಲಿಯೆ ಒಂದು ದೇವಾಲಯ ಕಾಣಿಸಿತು. ಇಂದ್ರನೀಲ ವೈಡೂರ್ಯ ಮರಕತ ಮಣಿಗಳಿಂದ ನಿರ್ಮಿತವಾದ ಅದ್ಭುತ ದೇವಾಲಯ ಅದು. ಅದರ ಕಂಬಗಳೆಲ್ಲ ಸುವರ್ಣಮಯ. ಆಕಾರ ಔನ್ನತ್ಯಗಳಲ್ಲಿ ಕೈಲಾಸವನ್ನು ಹೋಲುತ್ತಿತ್ತು. ಶತ್ರುಘ್ನನು ಆ ದೇವಾಲಯವನ್ನು ಕಂಡು ಅಮಾತ್ಯ ಸುಮತಿಯನ್ನು ಕೇಳಿದ. 'ಅಮಾತ್ಯ, ಇದು ಏನು ? ಯಾವ ದೇವತೆಯ ಗುಡಿ ? ಇಲ್ಲಿ ಏಕೆ ನಿರ್ಮಿಸಿದ್ದಾರೆ ?'

**ಸುಮತಿ :-** ಪ್ರಭು, ಇದು ದೇವಿ ಕಾಮಾಕ್ಷಿಯ ಗುಡಿ. ಆಕೆಯ ದರ್ಶನ ಮಾತ್ರದಿಂದಲೆ ಎಲ್ಲ ಅಭೀಷ್ಟಗಳೂ ನೆರವೇರುವುವು. ದೇವ ದಾನವರೆಲ್ಲರೂ ಅವಳನ್ನು ನಮಿಸಿ, ಸುತ್ತಿಸಿ ಸಂಪತ್ತುಗಳನ್ನು ಪಡೆದಿದ್ದಾರೆ. ಭಕ್ತರಲ್ಲಿ ಅನುಕಂಪ ಆಕೆಗಿದೆ. ಈ ಅಹಿಚ್ಛತ್ರ ನಗರಿಯ ಅರಸು ಸುಮದನು ಆಕೆಯನ್ನು ಪ್ರಾರ್ಥಿಸಿ ಇಲ್ಲಿ ನಿಲ್ಲಿಸಿಕೊಂಡಿದ್ದಾನೆ. ಅವಳಿಗೆ ನಮಸ್ಕರಿಸು. ದೇವ ದಾನವರುಗಳಿಗೆ ಅಲಭ್ಯವಾದ ವರವನ್ನೂ ಆಕೆ ನಿನಗೆ ಕೊಡಬಲ್ಲಳು.

**ಶತ್ರುಘ್ನ :-** ಈ ಸುಮದನು ಯಾರು ? ಜಗದಂಬೆಯನ್ನೊಲಿಸಲು ಅವನು ಏನು ತಪಸ್ಸು ಮಾಡಿದ್ದಾನೆ ? ಎಲ್ಲವನ್ನೂ ಹೇಳು.

**ಸುಮತಿ :-** ಹಿಂದೆ ಈ ಸುಮದನ ತಂದೆ ತಾಯಿಗಳನ್ನೂ, ಮಕ್ಕಳನ್ನೂ ಸಾಮಂತ ರಾಜರು ಕೊಂದರು. ಹೇಮಕೂಟದ ಒಂದು ಪವಿತ್ರ ತಪೋವನದಲ್ಲಿ ಅವನು ಜಗನ್ಮಾತೆಯನ್ನು ಕುರಿತು ಘೋರ ತಪಸ್ಸು ಮಾಡಿದನು. ಮೊದಲಿಗೆ ಮೂರು ವರ್ಷಗಳ ಕಾಲ ಒಂಟಿ ಕಾಲಿನಲ್ಲಿ ನಿಂತು ನಾಸಾಗ್ರವನ್ನೆ ದಿಟ್ಟಿಸುತ ಏಕಾಗ್ರತೆಯಿಂದ ತಪಸ್ಸು ಮಾಡಿದ. ಬಳಿಕ ಮೂರುವರ್ಷ ಚಳಿಗಾಲದಲ್ಲಿ ನೀರಲ್ಲಿ ನಿಂತು, ಬೇಸಗೆಯಲ್ಲಿ ಪಂಚಾಗ್ನಿಗಳ ಮಧ್ಯದಲ್ಲಿ ನಿಂತು. ಮಳೆಗಾಲದಲ್ಲಿ ಮಳೆಯಲ್ಲಿ ತೊಯ್ದುಕೊಂಡು ತಪಸ್ಸು ಮಾಡಿದ. ಬಳಿಕ ಮೂರು ವರ್ಷ ಶ್ವಾಸೋಚ್ಛ್ವಾಸಗಳನ್ನು ಸ್ತಂಭಿಸಿಕೊಂಡು ಹೊರಗೇನನ್ನೂ ಕಾಣದೆ ಒಳಗೆ ದೇವಿಯನ್ನು ಧ್ಯಾನಿಸಿದ. ಹೀಗೆ ಹನ್ನೆರಡು ವರ್ಷಗಳ ಉಗ್ರತಪಸ್ಸನ್ನು ಸುಮದ ರಾಜ ಮಾಡಿದಾಗ ದೇವೇಂದ್ರನು ಬೆದರಿದ. ಅವನ ಬಳಿಗೆ ಮನ್ಮಥನನ್ನೂ, ಅವನ ಪರಿವಾರವನ್ನೂ, ಅಪ್ಸರೆಯರನ್ನೂ ಕಳಿಸಿದ. ಬ್ರಹ್ಮ. ಇಂದ್ರರಂಥ ದೇವತೆಗಳನ್ನೂ ಗೆಲ್ಲ ಬಲ್ಲವ ತಾನೆಂಬ ಹೆಮ್ಮೆಯಿಂದ ಮನ್ಮಥನು 'ದೇವೇಂದ್ರ, ಈ ಸುಮದನು ಎಷ್ಟರವನು ? ನನ್ನ ಬಾಣಗಳಿಗೆ ತುತ್ತಾಗಿ ಚಂದ್ರನು ತಾರೆಯನ್ನು ಕೂಡಿದ, ನೀನೂ ಅಹಲ್ಯೆಯನ್ನು ಕೆಡಿಸಿದೆ. ವಿಶ್ವಾಮಿತ್ರನು ಮೇನಕೆಗೆ ಮರುಳಾದ. ನೀನೇನೂ ಚಿಂತಿಸಬೇಡ ದೇವರಾಜ, ನಿನ್ನ ಬಂಟ ನಾನಿರುವಾಗ ಏಕೆ ಚಿಂತೆ ?' ಎನ್ನುತ್ತ ಹೊರಟ.

ಒಡನೆ ಹೇಮಕೂಟದ ವನದಲ್ಲಿ ವಸಂತ ಅಡಿಯಿಟ್ಟ. ಮರಗಳಲೆಲ್ಲ ಹೂ ಹಣ್ಣು ಬಿಟ್ಟವು. ಕೋಗಿಲೆ ಕೂಗಿತು. ದುಂಬಿ ಝೇಂಕರಿಸಿತು. ಕೃತಮಾಲಾ ನದಿಯ ಮೇಲಿಂದ ತೆಂಕುದಿಕ್ಕಿಗೆ ತಂಪಾದ ಗಾಳಿ ಬೀಸಿತು. ಲವಂಗ ಕುಸುಮದ ಪರಿಮಳವನ್ನು ಹೊತ್ತು ಎಲ್ಲೆಡೆಗೂ ಹರಡಿತು.

ಆಗ ರಂಭೆ ಗೆಳತಿಯರೊಡನೆ ಹೊರಟು ಸುಮದರಾಜನ ಬಳಿಗೆ ಬಂದಳು. ಕಿನ್ನರ ಕಂಠದಿಂದ ಇಂಪಾಗಿ ಹಾಡಿದಳು. ಮೃದಂಗ ಪಣವ ಮುಂತಾದ ಅನೇಕ ವಾದ್ಯ ನುಡಿಸುವುದರಲ್ಲಿಯೂ ಆಕೆ ನಿಪುಣೆ. ರಂಭೆಯ ಮನಸೆಳೆವ ಗಾನ, ವಸಂತನಾಗಮನ, ಕೋಗಿಲೆಯ ಇಂಪಾದ ಕೂಗು ಇವು ರಾಜನು ಸುತ್ತಲೂ ಕಣ್ಣು ಹಾಯಿಸುವಂತೆ ಮಾಡಿದುವು. ಒಡನೆ ಮನ್ಮಥನು ಆತುರದಿಂದ ಅವನ ಬಳಿಗೋಡಿ ಹಿಂದೆನಿಂತು ಬಿಲ್ಲನ್ನು ಹೆದೆಯೇರಿಸಿ ನಿಂತ. ಒಬ್ಬ ಅಪ್ಸರೆ ರಾಜನ ಕಾಲು ಒತ್ತಿದಳು. ಇನ್ನೊಬ್ಬಳು ಕಡೆಗಣ್ಣನೋಟ ಬೀರಿದಳು. ಇನ್ನೊಬ್ಬಳು ಮಾಟವಾಗಿ ಮೈ ಅಲುಗಿಸಿದಳು. ಕಾಮನ ಈ ಕಾಟದಿಂದ ರಾಜನ ಮನಸ್ಸು

ಪರವಶಗೊಂಡಿತು. ಜಿತೇಂದ್ರಿಯ ಶಿರೋಮಣಿ, ವಿವೇಕಿ, ಆತ. 'ಈ ಅಪ್ಸರೆಯರನ್ನು ನನ್ನ ತಪೋವಿಘ್ನಕ್ಕೆಂದೇ ದೇವೇಂದ್ರ ಕಳಿಸಿರಬಹುದು. ಆದರಿಂದಲೇ ಅವರು ಏನೇನೋ ಚೇಷ್ಟೆ ಮಾಡುತ್ತಿದ್ದಾರೆ' ಎಂದನಿಸಿತು ರಾಜನಿಗೆ ಆತ ಕೇಳಿದ.

'ಯಾರು ನೀವು ? ಎಲ್ಲಿಯವರು ? ನಿಮಗೇನು ಬೇಕು ? ನೀವು ನನ್ನ ಕಣ್ಣಿಗೆ ಬೀಳುವುದೊಂದು ದೊಡ್ಡ ಅಚ್ಚರಿ. ಬೇಕೆಂದು ತಪಸ್ಸು ಮಾಡಿದರೆ ಸಿಗದ ನೀವು ತಪಸ್ಸಿಗೆ ಕುಳಿತ ಮಾತ್ರಕ್ಕೆ ನನ್ನ ಬಳಿ ಬಂದಿರುವಿರಿ.

**ಶೇಷ :-** ರಾಜನ ಈ ಮಾತನ್ನು ಕೇಳಿ ಕಾಮನ ಆ ಪಡೆಯವರು ಹೇಳಿದರು 'ಪ್ರಿಯ, ನಿನ್ನ ತಪಃಪ್ರಭಾವದಿಂದ ಈ ಎಲ್ಲ ಚೆಲುವೆಯರು ನಿನ್ನ ಬಳಿ ಬಂದಿದ್ದಾರೆ. ಅವರ ಯೌವನದ ಸಾರವ ಸವಿದು ನೋಡು. ನಿನ್ನ ತಪಸ್ಸಿಗೆ ಬೇರೆ ಫಲ ಬೇಕೆ ? ನೋಡು, ಚೆಲುವೆ ಘೃತಾಚಿ, ಸಂಪಿಗೆ ಮೈಯವಳು. ಉಬ್ಬಿದೆದೆಯವಳು. ಮನಸೆಳೆವ ಒಯ್ಯಾರಿ. ಕರ್ಪೂರದ ಪರಿಮಳ ಸೂಸುವ ಮೊಗದಿಂದ ನಿನ್ನ ಅಧರಾಮೃತಪಾನ ಮಾಡಲಿ. ನಿನ್ನ ಪುಣ್ಯದಿಂದ ಲಭಿಸಿದ್ದಾಳೆ, ಅನುಭವಿಸು, ದುಃಖಸಾಗರವನ್ನೆ ಮರೆತುಬಿಡು. ನಾನೂ ಬೆಲೆಬಾಳುವ ಈ ಒಡವೆಗಳಿಂದ ಹೇಗೆ ಚೆಲುವಾಗಿರುವೆನೊ ನೋಡು. ನನ್ನೆದೆಗೆ ಮಂದಾರಮಾಲೆ ಹೇಗೆ ಒಪ್ಪುವುದು ! ನಾನಾ ಬಗೆಯ ಪ್ರೇಮ ಕಥೆಗಳನ್ನೂ ಚೆನ್ನಾಗಿಯೆ ಹೇಳಬಲ್ಲೆ ನಾನು. ಬಿಗಿದಪ್ಪಿಕೊಳ್ಳು. ನನ್ನ ಅಧರರಸವನ್ನು ಸವಿದು ನೋಡು. ಪುಣ್ಯವಂತರಿಗೆ ಮಾತ್ರ ಲಭಿಸುವ ಮೇರುವಿನ ತುದಿಯ ಅರಮನೆಯೊಂದರಲ್ಲಿ ನನ್ನೊಡನೆ ಕುಳಿತು ತಪಸ್ಸಿನ ಫಲವನ್ನೆಲ್ಲ ಉಣ್ಣು. ರೂಪು, ಯೌವನಗಳಿಂದ ಕಣ್ಣು ಸೆಳೆಯುವ ಈ ತಿಲೋತ್ತಮ ಅಮೃತವನ್ನು ಸುರಿಸುವ ಗಂಗಾ ಪ್ರವಾಹದಂತೆ ಬಿಳಿಯಾದ ಚಾಮರಗಳನ್ನು ಬೀಸಿ ನಿನ್ನ ತಾಪಗಳನ್ನೆಲ್ಲ ಕಳೆಯಲಿ, ಹೃದಯಂಗಮವಾದ ಪ್ರೇಮ ಕಥೆಗಳನ್ನು ಕೇಳುತ್ತ, ದೇವತೆಗಳೂ ಹಾತೊರೆವ ಅಮೃತವನ್ನು ಪಾನಮಾಡುತ್ತ ನಂದನವನದಲ್ಲಿ ನಮ್ಮ ಜತೆಯಲ್ಲಿ ವಿಹಾರ ಮಾಡು.'

ರಂಭೆಯ ಈ ಮಾತನ್ನು ಕೇಳಿದೊಡನೆ ಬುದ್ಧಿವಂತನಾದ ರಾಜ ತನಗೆ ಹೇಳಿಕೊಂಡ. 'ಇದೆಲ್ಲಿಂದ ಬಂತು, ಈ ನನ್ನ ತಪಸ್ಸಿಗೆ ವಿಘ್ನ ! ಈಗೇನು ಮಾಡಲಿ ?' ಇದೊಂದು ದೊಡ್ಡ ಸಮಸ್ಯೆಯೆ ಆಯಿತು ರಾಜನಿಗೆ. ಆತ ಹೇಳಿದ.

'ನೀವೆಲ್ಲರೂ ನನ್ನದೆಯದಲ್ಲಿ ವಾಸ ಮಾಡುತ್ತಿರುವ ಆ ಜಗನ್ಮಾತೆಯ ಸ್ವರೂಪರು. ಆಕೆ ನಿಮ್ಮಿಂದ ಬೇರೆಯಲ್ಲ. ನೀವು ಹೊಗಳುವ ಆ ಸ್ವರ್ಗಸೌಖ್ಯವೂ ಒಂದು ತುಚ್ಛ ಪದಾರ್ಥ. ನನ್ನೊಡತಿಯಾದ ದೇವಿಯನ್ನು ಭಕ್ತಿಯಿಂದ ಆರಾಧಿಸಿದರೆ ಅದಕ್ಕಿಂತ ಮಿಗಿಲಾದುದನ್ನೇ ನೀಡಬಲ್ಲಳು. ಬ್ರಹ್ಮನಿಗೆ ಸತ್ಯಲೋಕ ದೊರೆತುದು ಆಕೆಯ ಕೃಪೆಯಿಂದ. ಆ ನಂದನವನ, ಆ ಮೇರು, ಆ ಅಮೃತ ಇವೆಲ್ಲ ಎಷ್ಟರದು ? ಸ್ವಲ್ಪ ಪುಣ್ಯ ಮಾಡಿದರೂ ಸಿಗುವಂಥಹದು !'

ಈ ಮಾತನ್ನು ಕೇಳಿದಾಗ ಮನ್ಮಥನ ಸಾಮರ್ಥ್ಯವೆಲ್ಲ ಉಡುಗಿತು. ನಾನಾ ಬಗೆಯ ಬಾಣಗಳನ್ನೆಸೆದರೂ ಯಾವೊಂದೂ ಫಲಕಾರಿಯಾಗಲಿಲ್ಲ. ಸುಂದರಿಯರ ಕಟಾಕ್ಷ ನೂಪುರಧ್ವನಿ ಆಲಿಂಗನಗಳಾವುವೂ ರಾಜನ ಮನಸ್ಸಿನಲ್ಲಿ ಮೋಹ ಕವಿಯುವಂತೆ

ಮಾಡಲು ಸಮರ್ಥವಾಗಲಿಲ್ಲ. ಬಂದದಾರಿಯಿಂದಲೆ ಹಿಂದೆ ಹೋದರು. ಕಾಮನಪಡೆಯವರು, ರಾಜನು ತುಂಬ ಧೈರ್ಯಶಾಲಿ ಎಂದು ಇಂದ್ರನ ಮುಂದೆ ಹೇಳಿದರು. ತನ್ನ ಪ್ರಯತ್ನವೆಲ್ಲ ವ್ಯರ್ಥವಾಯಿತೆಂದು ಇನ್ನಷ್ಟು ಭೀತನಾದ ದೇವೇಂದ್ರ.

ಇತ್ತ ಸುಮದನು ಜಿತೇಂದ್ರಿಯನಾಗಿ ತನ್ನ ಪಾದಕಮಲವನ್ನೆ ನಂಬಿರುವನೆಂದು ತಿಳಿದ ದೇವಿ ಪ್ರತ್ಯಕ್ಷಳಾದಳು. ಧನುಸ್ಸು ಬಾಣ ಪಾಶ ಅಂಕುಶಗಳನ್ನು ಹಿಡಿದು ಸಿಂಹದ ಬೆನ್ನೇರಿ ಬಂದ ಕೋಟಿ ಸೂರ್ಯರಂತೆ ಹೊಳೆಯುವ ಜಗತ್ಪಾವನಪಾವನೆಯಾದ ಆ ಮಾತೆಯನ್ನು ಕಂಡು ಆನಂದದಿಂದ ಅಡಿಗೆರಗಿದ ರಾಜ. ದೇವಿ ನಗುನುಗುತ್ತ ರಾಜನ ಮೈದಡವಿದಳು. ಆತನ ಮೈ ರೋಮಾಂಚಗೊಂಡಿತು. ಧ್ವನಿಗದ್ಗದವಾಯಿತು. ಭಕ್ತಿ ಉಕ್ಕೇರಿತು. ಆತ ಸ್ತೋತ್ರಮಾಡಿದ.

'ಜಯದೇವಿ ಮಹಾದೇವಿ ಭಕ್ತವೃಂದೈಕಸೇವಿತೇ
ಬ್ರಹ್ಮ ರುದ್ರಾದಿ ದೇವೇಂದ್ರಸೇವಿತಾಂಘ್ರಿಯುಗೇಽನಘೇ

ದೇವಿ, ಮಹಾದೇವಿ, ಭಕ್ತವೃಂದದ ಸೇವೆಯನ್ನು ಕೈಗೊಳ್ಳುವವಳೆ, ಬ್ರಹ್ಮ ರುದ್ರಾದಿ ದೇವಶ್ರೇಷ್ಠರು ಸೇವಿಸುವ ಪಾದಗಳುಳ್ಳವಳೆ, ನಿನಗೆ ಜಯವಾಗಲಿ.

ಈ ಚರಾಚರ ಪ್ರಪಂಚವೆಲ್ಲ ನಿನ್ನ ಒಂದಂಶದ ಬಲದಿಂದ ನಿಂತಿದೆ. ನಿನ್ನನ್ನು ಬಿಟ್ಟು ಏನೂ ಇರಲಾರದು. ಅಮ್ಮ, ನಿನಗೆ ವಂದನೆ. ನಿನ್ನಾಧಾರ ಶಕ್ತಿಯಿಂದ ಭೂಮಿ ಅಚಲವಾಗಿ ನಿಂತಿದೆ. ಸೂರ್ಯನು ಆಕಾಶದಲ್ಲಿ ಉರಿಯುತ್ತಿದ್ದಾನೆ. ನೀರನ್ನು ಹೀರಿ ಮಳೆಗರೆಯುತ್ತಿದ್ದಾನೆ. ಅಗ್ನಿ, ಪ್ರಾಣಿಗಳ ಒಳಗೂ ಹೊರಗೂ ವ್ಯಾಪಿಸಿದ್ದು ಸುಖ ನೀಡುತ್ತಿದ್ದಾನೆ. ಇದೆಲ್ಲವೂ ನಿನ್ನ ಪ್ರತಾಪ.

ತ್ವಂ ವಿದ್ಯಾ, ತ್ವಂ ಮಹಾಮಾಯಾ ವಿಷ್ಣೋ ರ್ಲೋಕೈಕ ಪಾವನೀ
ತ್ವಂ ಶಕ್ತ್ಯಾ, ಸೃಜ ಸೀದಂ ತ್ವಂ ಪಾಲಯಸ್ಯಪಿ ಮೋಹಿನೀ

ನೀನೇ ವಿದ್ಯೆ, ನೀನೆ ಲೋಕಪಾವನೆಯಾದ ವಿಷ್ಣುವಿನ ಮಹಾಮಾಯೆ. ನೀನು ಶಕ್ತಿಯಿಂದ ಪ್ರಪಂಚವನ್ನು ಸೃಜಿಸುವೆ. ನೀನೆ ಪಾಲಿಸುವೆ. ನೀನೆ ಮೋಹಗೊಳಿಸುವೆ. ನಿನ್ನಿಂದಲೆ ದೇವತೆಗಳಿಗೆ ಸಿದ್ಧಿ, ಸುಖ. ಅಮ್ಮ ನನ್ನನ್ನು ಕಾಪಾಡು. ನಿನ್ನ ಚರಣ ಕಮಲಗಳ ಸೇವಕನು ನಾನು. ನನ್ನ ಅಭೀಷ್ಟವನ್ನು ಕೊಡು.

ತಪಸ್ಸಿನಿಂದ ಸೊರಗಿ ಹೋಗಿದ್ದ ಸುಮದ ಈ ರೀತಿಯಿಂದ ಸ್ತುತಿಸಿದಾಗ ದೇವಿ ಸಂತುಷ್ಟಳಾಗಿ 'ಉತ್ತಮ ವರವನ್ನು ಕೇಳು' ಎಂದಳು. ಆತ ತನ್ನ ಕಳೆದು ಹೋದ ರಾಜ್ಯ ನಿಷ್ಕಂಟಕವಾಗಿ ದೊರಕಲೆಂದೂ, ಪರಮಾತ್ಮನಲ್ಲಿ ಭಕ್ತಿ ಸಂಸಾರ ಸಾಗರದಿಂದ ಮುಕ್ತಿ ಇವೂ ದೊರಕಲೆಂದೂ ಬೇಡಿಕೊಂಡ. ದೇವಿ ನುಡಿದಳು. 'ಸುಮದ, ನಿಷ್ಕಂಟಕವಾದ ರಾಜ್ಯ ನಿನ್ನದಾಗುವುದು. ರತ್ನದಂಥ ಮಡದಿಯರು ನಿನ್ನ ಪಾದಸೇವೆ ಮಾಡುವರು. ವೈರಿಗಳಿಂದ ನಿನಗೆಂದೂ ಅಪಜಯವಾಗಲಾರದು. ಶ್ರೀ ರಾಮನು ರಾವಣನನ್ನು ಕೊಂದು ಅಶ್ವಮೇಧ ಯಾಗವನ್ನು ಕೈಗೊಂಡಾಗ ಅವನ ತಮ್ಮ ಶತ್ರುಘ್ನನು ಸೈನ್ಯ ಸಮೇತನಾಗಿ ಕುದುರೆಯ ರಕ್ಷಣೆ ಮಾಡುತ್ತ ನಿನ್ನಲ್ಲಿಗೂ ಬರುವನು. ಆಗ ನಿನ್ನ ರಾಜ್ಯ ಸಂಪತ್ತುಗಳನ್ನು ಅವನಿಗರ್ಪಿಸಿ ಅವನ ಜತೆಯಲ್ಲಿ ಭೂಮಿಯಲ್ಲೆಲ್ಲ ಸಂಚರಿಸು. ಬಳಿಕ

ಶ್ರೀರಾಮನನ್ನು ನಮಸ್ಕರಿಸು. ಬ್ರಹ್ಮ. ಇಂದ್ರ ಮುಂತಾದವರಿಂದ ಸೇವಿತನಾಗಿರುವ ಅವನಿಂದ ನಿನಗೆ ಮುಕ್ತಿ ದೊರೆಯುವುದು. ಯೋಗಿಗಳು ಯೋಗಾಭ್ಯಾಸ ಮಾಡಿದರೂ ಸುಲಭವಾಗಿ ದೊರೆಯದ ಮುಕ್ತಿಯನ್ನಾತನು ಕೊಡುವನು. ಅಂದಿನವರೆಗೆ ನಾನು ನಿನ್ನ ಬಳಿಯೆ ಇರುವೆನು.'

ಹೀಗೆ ಹೇಳಿ ದೇವಿ ಅದೃಶ್ಯಳಾದಳು. ಸುಮದನು ಶತ್ರುಗಳನ್ನು ಗೆದ್ದು ಈ ಅಹಿಚ್ಛತ್ರಾನಗರಿಯಲ್ಲಿ ರಾಜನಾದನು. ಈತ ಸಮರ್ಥನಾಗಿದ್ದರೂ ಕುದುರೆಯನ್ನು ಹಿಡಿದುಕೊಳಲ್ಲಾರ. ಕುದುರೆ ಬಂದುದನ್ನು ತಿಳಿದರೆ ದೇವಿಯಾಜ್ಞೆಯಂತೆ ತನ್ನ ಸರ್ವಸ್ವವನ್ನೂ ನಿನಗೆ ಸಮರ್ಪಿಸುವನು.

ಸುಮತಿಯು ಹೇಳಿದ ಈ ಸುಮದ ರಾಜನ ಪೂರ್ವ ಚರಿತ್ರೆಯನ್ನು ಕೇಳಿ ಶತ್ರುಘ್ನನು ಸಂತೋಷಗೊಂಡ.

ಸುಮದನು ವೇದಜ್ಞರಾದ ಬ್ರಾಹ್ಮಣರ ಆಶೀರ್ವಾದವನ್ನು ಸ್ವೀಕರಿಸುತ್ತ ಧನ ಸಂಪನ್ನರಾದ ವೈಶ್ಯರಿಂದ ಆದರ ಹೊಂದುತ್ತ ತನ್ನ ಪರಿವಾರದೊಡನೆ ಆಸ್ಥಾನದಲ್ಲಿ ಕುಳಿತಿದ್ದಾಗ ಶ್ರೀರಾಮನ ಕುದುರೆ ನಗರದ ಸಮೀಪಕ್ಕೆ ಬಂದ ವೃತ್ತಾಂತವನ್ನು ಭಟರು ತಿಳಿಸಿದರು. ಒಡನೆ ರಾಜನು ಈ ರೀತಿ ಅಪ್ಪಣೆ ಮಾಡಿದ. 'ಪ್ರಜೆಗಳೆಲ್ಲರೂ ಮನೆಗಳನ್ನು ತೋರಣದಿಂದ ಸಿಂಗರಿಸಲಿ. ಸಾವಿರಾರು ಕನ್ಯೆಯರು ಒಳ್ಳೇ ಆಭರಣಗಳನ್ನು ತೊಟ್ಟು, ಆನೆಯ ಬೆನ್ನ ಮೇಲೇರಿ ಶತ್ರುಘ್ನನ ಬಳಿಗೆ ಹೋಗಲಿ'. ಹೀಗೆ ಶತ್ರುಘ್ನನ ಸತ್ಕಾರಕ್ಕೆ ಬೇಕಾದ ಎಲ್ಲ ಸಿದ್ಧತೆಗಳಿಗೂ ಆಜ್ಞೆ ಹೊರಡಿಸಿ ತಾನು ಪರಿವಾರದೊಂದಿಗೆ ಅವನ ಬಳಿಗೆ ಹೋದನು. ನಮಸ್ಕರಿಸಿ ಹೇಳಿದನು. 'ನಾನು ಧನ್ಯ, ಕೃತಕೃತ್ಯ, ನನ್ನನೀ ಸಮೃದ್ಧವಾದ ರಾಜ್ಯವನ್ನು ನಿನಗೊಪ್ಪಿಸುತ್ತಿದ್ದೇನೆ ಸ್ವೀಕರಿಸು. ನಾನು ಬಹು ಕಾಲದಿಂದ ಕುದುರೆಯ ಆಗಮನವನ್ನೆ ಎದುರು ನೋಡುತ್ತಿದ್ದೆ. ಇಂದಿಗೆ ದೇವಿ ಕಾಮಾಕ್ಷಿ ಹೇಳಿದಂತೆ ಆ ಮಹಾ ಅವಕಾಶ ನನಗೆ ಲಭಿಸಿದೆ. ನನ್ನ ನಗರವನ್ನೊಮ್ಮೆ ಸಂದರ್ಶಿಸಿ, ಪ್ರಜೆಗಳನ್ನು ಧನ್ಯರನ್ನಾಗಿಸು. ನನ್ನ ಕುಲವನ್ನು ಪಾವನಗೊಳಿಸು.

ಹೀಗೆ ಹೇಳಿ ಚಂದ್ರನಂತೆ ಬಿಳಿಯಾದ ಆನೆಯ ಮೇಲೆ ಶತ್ರುಘ್ನನನ್ನೂ ಪುಷ್ಕಲನನ್ನು ಕುಳ್ಳಿರಿಸಿ ತಾನೂ ಜತೆಯಲ್ಲಿ ಕುಳಿತ ಸುಮದ ರಾಜ. ಅವನ ಆಜ್ಞೆಯಂತೆ ಭೇರಿ, ಪಣವ, ತೂರ್ಯಗಳ ವೀಣೆ ಮುಂತಾದವುಗಳ ಮಂಗಳ ಧ್ವನಿ ಎಲ್ಲೆಡೆ ಹರಡಿತು. ಆನೆಗಳ ಬೆನ್ನ ಮೇಲೇರಿ ಬಂದ ಕನ್ಯೆಯರು ಶತ್ರುಘ್ನನ ಮೇಲೆ ಮುತ್ತುಗಳನ್ನೆರಚಿ ಗೌರವಿಸಿದರು. ಪ್ರಜೆಗಳು ಆನಂದದಿಂದ ಅವನನ್ನು ಬರಮಾಡಿಕೊಂಡು ಸತ್ಕರಿಸಿದರು. ರಾಜನು ಅರಮನೆಯಲ್ಲಿ ಅರ್ಘ್ಯಾದಿ ಸತ್ಕಾರಗಳನ್ನಿತ್ತು. ತನ್ನ ಸರ್ವಸ್ವವನ್ನೂ ಶ್ರೀರಾಮನಿಗೆಂದು ಸಮರ್ಪಿಸಿದನು.

*ಇತಿ ಪದ್ಮ ಮಹಾಪುರಾಣ ಭಾಗ-೨ರ ಪಾತಾಳ ಖಂಡದಲ್ಲಿ ಶೇಷ-ವಾತ್ಸ್ಯಾಯನ ಸಂವಾದದಲ್ಲಿ ಶ್ರೀ ರಾಮಾಶ್ವಮೇಧದಲ್ಲಿ ಕಾಮಕ್ಷ್ಯುಪಾಖ್ಯಾನವೆಂಬ ಒಂಬತ್ತನೆ ಅಧ್ಯಾಯ ಮುಗಿದುದು*

**ಶೇಷ ಉವಾಚ**

**ಶೇಷ :-** ಸುಮದ ರಾಜನು ನೀಡಿದ ಆದರಾತಿಥ್ಯಗಳಿಂದ ಸಂತುಷ್ಟನಾದ ಶತ್ರುಘ್ನ. ಬಳಿಕ ರಾಜನು ರಾಮನ ಬಗ್ಗೆ ಇನ್ನೂ ತಿಳಿವ ಆಸೆಯಿಂದ ಪ್ರಶ್ನಿಸಿದ.

**ಸುಮದ :-** ಭಕ್ತಿ ಪರಿಪಾಲನೆಗಾಗಿ ಅವತರಿಸಿದ ಶ್ರೀರಾಮನಿಗೆ ಕುಶಲವೆ? ಸರ್ವೋತ್ತಮನಾದ ಅವನು ಈಗ ನನಗೆ ಅನುಗ್ರಹ ಮಾಡುತ್ತಿದ್ದಾನೆ. ಅವನ ಸುಂದರ ಮುಖ ಕಮಲವನ್ನು ನಿತ್ಯವೂ ಕಣ್ಣುಗಳಿಂದ ಪಾನ ಮಾಡುವ ಆ ಅಯೋಧ್ಯೆಯ ಜನರಂತೆ ನಾನೂ ಸಪರಿವಾರನಾಗಿ ಅವನ ದರ್ಶನ ಪಡೆದು ಧನ್ಯನಾಗುತ್ತೇನೆ. ನನ್ನ ಸರ್ವಸ್ವವನ್ನರ್ಪಿಸಿ ಕೃತಾರ್ಥನಾಗುತ್ತೇನೆ. ದಯಾಮಯಿಯಾದ ತಾಯಿ ಕಾಮಾಕ್ಷಿ ನನಗೆ ಹಿಂದೆ ಮಾಡಿದ ಅನುಗ್ರಹವಿದು.

ಇದನ್ನು ಕೇಳಿ ಶತ್ರುಘ್ನನು ರಾಮನ ವೃತ್ತಾಂತವನ್ನು ಬಣ್ಣಿಸಿದನು. ಹೀಗೆ ಮೂರು ದಿನಗಳು ಕಳೆದುವು. ಶತ್ರುಘ್ನ, ಪುಷ್ಕಲರ ಅನುಮತಿ ಪಡೆದು ಸುಮದನು ತನ್ನ ಮಗನಿಗೆ ಪಟ್ಟ ಕಟ್ಟಿ ಶತ್ರುಘ್ನನ ಭಟರಿಗೆ ಯಥೇಚ್ಛ ಬಹುಮಾನಗಳನ್ನಿತ್ತು ಅವರೊಂದಿಗೆ ತಾನೂ ಕುದುರೆಯ ರಕ್ಷಣೆಗೆ ಹೊರಟನು.

ಹೀಗೆ ಶತ್ರುಘ್ನನು ಹೋದಲ್ಲೆಲ್ಲ ರಾಮನ ಪ್ರಶಂಸಯೇ ಕೇಳಿ ಬರುತ್ತಿತ್ತು.

**ಏಷ ಧೀಮಾನ್ ಹರಿರ್ಯಾತಿ ಹರಿಣಾ ಪರಿ ರಕ್ಷಿತಃ ।**
**ಹರಿಭಿರ್ಹರಿ ಭಕ್ತೈಶ್ಚ ಹರಿವರ್ಯಾನುಗೈರ್ಮುಹುಃ ॥**

ಈ ಹರಿಕುದುರೆ ಮುನ್ನಡೆಯುತ್ತಿದೆ. ಇದರ ರಕ್ಷಣೆಗೆ ಹರಿ (ವಿಷ್ಣುವಿನ ಅಂಶದಿಂದ ಜನಿಸಿದ ಶತ್ರುಘ್ನ) ಇದ್ದಾನೆ. ಹರಿಭಕ್ತರೂ ಹರಿವರ್ಯ (ಕಪಿ ಶ್ರೇಷ್ಠನಾದ ಸುಗ್ರೀವ)ನ ಅನುಚರರೂ ಆದ ಹರಿ (ಕಪಿ)ಗಳೂ ಅದರ ರಕ್ಷಣೆಯಲ್ಲಿ ನಿಯುಕ್ತರಾಗಿದ್ದಾರೆ.

ಹೀಗೆ ಪುಣ್ಯಾಶ್ರಮಗಳಲ್ಲೆಲ್ಲ ಮುನಿಗಳು ಹೊಗಳುವುದನ್ನು ಆಲಿಸುತ್ತ ಚ್ಯವನ ಮುನಿಯ ಆಶ್ರಮವನ್ನು ಕಂಡ ಶತ್ರುಘ್ನ. ಮಂಗಳ ವೇದಧ್ವನಿ, ಪವಿತ್ರವಾದ ಅಗ್ನಿಹೋತ್ರಧೂಮ, ಅನೇಕ ಯಾಗಗಳ ಯೂಪಸ್ತಂಭಗಳು, ಆಶ್ರಮಕ್ಕೆ ಶೋಭೆತಂದಿದ್ದವು. ಅಲ್ಲಿ ಹಸುವನ್ನೇ ಹುಲಿ ಕಾಪಾಡುತ್ತಿತ್ತು. ಬೆಕ್ಕುಗಳ ಭಯವಿಲ್ಲದಿದ್ದುದರಿಂದ ಇಲಿ ಬಿಲಗಳನ್ನು ತೋಡುತ್ತಲೆ ಇರಲಿಲ್ಲ. ಹಾವು ಮುಂಗುಸಿ ನವಿಲುಗಳೊಡನೆ ಆಡುತ್ತಿತ್ತು. ಆನೆ ಸಿಂಹದ ಜತೆಗೆ ಓಡಾಡುತ್ತಿತ್ತು. ಜಿಂಕೆಗಳಿಗೆ ಮುನಿಗಳು ರಕ್ಷಣೆ ನೀಡಿ ನೀವಾರ ತಿನ್ನಿಸುತ್ತಿದ್ದುದರಿಂದ ಅವುಗಳಿಗೆ ಯಮನ ಭಯವೂ ಇರಲಿಲ್ಲ. ಹಸುಗಳೆಲ್ಲವೂ ನಂದಿನಿಯಂತೆ ಬಿಂದಿಗೆಯಂಥ ಕೆಚ್ಚಲು ಹೊತ್ತು ಸಂಚರಿಸಿ ಪಾದಧೂಳಿಯಿಂದ ನೆಲವನ್ನು ಪಾವನಗೊಳಿಸುತ್ತಿದ್ದವು. ಕೈಯಲ್ಲಿ ಸಮಿತ್ತುಗಳನ್ನು ಹಿಡಿದು ಬರುತ್ತಿರುವ ಮುನಿಗಳನ್ನು ಕಂಡಾಗ ಈ ನೆಲ ಧರ್ಮಕಾರ್ಯಕ್ಕೆ ಯೋಗ್ಯವಾದ ತಪೋವನ ವಿರಬಹುದೆಂದನಿಸಿತು ಶತ್ರುಘ್ನನಿಗೆ. ಅಮಾತ್ಯ ಸುಮತಿಯನ್ನು ಕೇಳಿದನಾತ.

**ಶತ್ರುಘ್ನ :-** ಸುಮತಿ, ಇದು ಯಾವ ಋಷಿಯ ತಪೋವನ? ಋಷಿಗಳ ಚರಿತ್ರೆಯನ್ನು ಹೇಳಿದಷ್ಟು ಕೇಳಿದಷ್ಟು ಶರೀರ ಪಾವನವಾಗುತ್ತದೆ.

**ಸುಮತಿ :-** ಇದು ಚ್ಯವನ ಮುನಿಯಾಶ್ರಮ, ಸ್ವಾಯಂಭುವ ಮಹಾಯಜ್ಞದಲ್ಲಿ ಇಂದ್ರನ ಮಾನಭಂಗ ಮಾಡಿ ದೇವವೈದ್ಯರಿಗೂ ಆಹುತಿಯನ್ನು ನೀಡಿದ ಮಹಾಮುನಿ, ತಪಸ್ವಿ, ವೇದಮೂರ್ತಿ ಚ್ಯವನ ಮುನಿಯ ಪ್ರಭಾವವನ್ನು ಯಾರಿಂದಲೂ ವರ್ಣಿಸಲಾಗದು.

**ಶತ್ರುಘ್ನ :-** ಅಶ್ವಿನೀ ದೇವತೆಗಳಿಗೆ ಮುನಿಯು ಯಜ್ಞಭಾಗವನ್ನು ಎಂದು ಕೊಟ್ಟ? ಇಂದ್ರನು ಏನು ಮಾಡಿದ?

**ಸುಮತಿ :-** ಬ್ರಹ್ಮ ವಂಶದ ಭೃಗುಮುನಿ ಒಮ್ಮೆ ಸಂಜೆ ಸಮಿತ್ತುಗಳನ್ನು ತರಲು ಹೋಗಿದ್ದಾಗ ದಮನನೆಂಬ ಒಬ್ಬ ರಾಕ್ಷಸನು ಆಶ್ರಮವನ್ನು ಹೊಕ್ಕು ಭಯಂಕರವಾಗಿ ಗರ್ಜಿಸಿದ 'ಆ ಅಯೋಗ್ಯ ಮುನಿ ಎಲ್ಲಿ? ಅವನ ಮುಗ್ಧಪತ್ನಿ ಎಲ್ಲಿ? ಎಲ್ಲಿ? ಎಲ್ಲಿ?' ತಿರುತಿರುಗಿ ರೋಷದಿಂದ ಹೀಗೆ ಗರ್ಜಿಸುವುದನ್ನು ಕೇಳಿ ಅಗ್ನಿ 'ಇನ್ನು ತನಗೆ ಅಪಾಯ'ವೆಂದು ಬಗೆದು ಮುನಿಪತ್ನಿಯನ್ನು ತೋರಿಸಿದ. ಅವಳು ಆಗ ತುಂಬಿದ ಗರ್ಭಿಣಿ. ರಾಕ್ಷಸನು ಅವಳನ್ನೆತ್ತಿಕೊಂಡ. 'ನಾಥ, ರಕ್ಷಿಸು, ರಕ್ಷಿಸು'. ಎಂದು ಜಿಂಕೆಯಂತೆ ಮೊರೆಯಿಡುತ್ತ ಅತ್ತಳು ಆಕೆ. ರಾಕ್ಷಸನು ಬಲಾತ್ಕಾರದಿಂದ ಹೊತ್ತು ಹೊರಗೆ ನಡೆದ. ಕೆಟ್ಟಮಾತುಗಳನ್ನು ಆಡಿದ. ಭಯದಿಂದ ಆಕೆಯ ಗರ್ಭಜಾರಿತು. ಮಗು ಹುಟ್ಟುವಾಗಲೆ ಜ್ವಲಿಸುವ ಕಣ್ಣುಗಳು, ಸಾಕ್ಷಾತ್ ಅಗ್ನಿಯಂತಿದ್ದ ಆ ಮಗು. ರೂಪದಲ್ಲಿ ವನ್ಮಥನಂತೆಯೂ ಇದ್ದ. ಅವನು ರಾಕ್ಷಸನನ್ನು ತಡೆದು 'ದುಷ್ಟ, ಮುಂದೆ ಹೆಜ್ಜೆ ಇಡಬೇಡ. ಇಲ್ಲಿಯೆ ಬೂದಿಯಾಗು, ಪತಿವ್ರತೆಯನ್ನು ಬಲಾತ್ಕರಿಸಿ ಶ್ರೇಯಸ್ಸನ್ನು ಹೊಂದಲಾರೆ ಎಂದ. ಅಷ್ಟರಲ್ಲಿ ರಾಕ್ಷಸನು ಸುಟ್ಟು ಬೂದಿಯಾಗಿ ನೆಲದಲ್ಲಿ ಬಿದ್ದ. ತಾಯಿ ಮಗನನ್ನೆತ್ತಿಕೊಂಡು ಆಶ್ರಮಕ್ಕೆ ನಡೆದಳು.

ಇತ್ತ ಭೃಗುಮುನಿ ಆಶ್ರಮಕ್ಕೆ ಬಂದು ನಡೆದ ಎಲ್ಲ ವೃತ್ತಾಂತವನ್ನು ಅರಿತು ತೀವ್ರ ಕೋಪಗೊಂಡ. 'ದುಷ್ಟ, ವೈರಿಗೆ ನನ್ನ ಪತ್ನಿಯ ಇರವನ್ನು ಸೂಚಿಸಿದೆಯ? ನೀನು ಸರ್ವಭಕ್ಷಕನಾಗು' ಎಂದು ಅಗ್ನಿಗೆ ಶಾಪವಿತ್ತ. ಒಡನೆ ಅಗ್ನಿ ಮುನಿಯ ಕಾಲಿಗೆ ಬಿದ್ದು. 'ಸ್ವಾಮಿ, ದಯಾಸಾಗರ, ನನ್ನನ್ನು ಅನುಗ್ರಹಿಸು' ಎಂದು ಬೇಡಿಕೊಂಡ. 'ನಾನು ಹೇಗೆ ಸುಳ್ಳು ಹೇಳಲಿ ಎಂಬ ಭಯದಿಂದ ಹೇಳಿದೆನೇ ಹೊರತು, ಗುರುವಿಗೆ ದ್ರೋಹ ಮಾಡಬೇಕೆಂದಲ್ಲ. ಆದ್ದರಿಂದ ನೀನು ನನ್ನಲ್ಲಿ ಕೃಪೆಮಾಡು' ಎಂದು ಅಂಗಲಾಚಿದ. ಮುನಿಯ ಮನ ಕರಗಿತು. 'ಸರ್ವಭಕ್ಷಕನಾಗಿದ್ದೂ ಶುಚಿಯಾಗಿರು' ಎಂದು ವರವಿತ್ತ.

ಬಳಿಕ ಮಗುವಿಗೆ ವಿಧಿವತ್ತಾಗಿ ಜಾತ ಕರ್ಮ ಮುಂತಾದ ಸಂಸ್ಕಾರಗಳನ್ನು ಮಾಡಿದ. ಗರ್ಭದಿಂದ ಚ್ಯುತನಾಗಿ ಜಾರಿ ಬಿದ್ದುದರಿಂದ ಚ್ಯವನನೆಂದೆ ಹೆಸರು ಯುಕ್ತವೆಂದರು ಎಲ್ಲ ತಪಸ್ವಿಗಳು. ಶುಕ್ಲ ಪಕ್ಷದ ಪ್ರತಿಪದೆಯ ಚಂದ್ರನಂತೆ ಚ್ಯವನ ಪ್ರವರ್ಧಮಾನನಾದ. ನರ್ಮದೆಯ ತೀರದಲ್ಲಿ ತಪಸ್ವಿಗಳಾದ ಶಿಷ್ಯರೊಂದಿಗೆ ಕುಳಿತು ಹತ್ತು ಸಾವಿರ ವರ್ಷಗಳ ಕಾಲ ತಪಸ್ಸು ಮಾಡಿದ. ಸಮಾಧಿಯಲ್ಲಿದ್ದ ಅವನ ಮೈಗೆ ವನ್ಯ ಮೃಗಗಳು ಮೈ ಉಜ್ಜಿ ಕಡಿತ ತೀರಿಸಿಕೊಂಡರೂ ಅವನಿಗೇನೂ ತಿಳಿಯಲಿಲ್ಲ. ಕ್ರಮೇಣ ಮೈಯೆಲ್ಲ ಹುತ್ತ ಬೆಳೆಯಿತು. ಎರಡು ಹೆಗಲಿನ ಮೇಲೂ ಮುತ್ತುಗದ ಮರಗಳು ಬೆಳೆದವು.

ಆ ಸಮಯದಲ್ಲಿ ಶರ್ಯಾತಿ ಮಹಾರಾಜನೊಮ್ಮೆ ತೀರ್ಥಯಾತ್ರೆ ಮಾಡುತ್ತ ನರ್ಮದೆಯ ತೀರಕೆ ಬಂದಿದ್ದ. ಜತೆಗೆ ಹೆಂಡತಿ ಮಕ್ಕಳೂ, ದೊಡ್ಡ ಒಂದು ಸೇನೆಯೂ ಇತ್ತು. ರಾಜನು ನದೀ ಸ್ನಾನ ಮಾಡಿ, ಪಿತೃ ದೇವತಾತರ್ಪಣ ದಾನ ಧರ್ಮಗಳನ್ನೂ ಮಾಡಿ ವಿಷ್ಣುವನ್ನು ಆರಾಧಿಸಿದ. ಅವನ ಮಗಳು ಸುಕನ್ಯೆ ಸುಂದರಿ. ಚಿನ್ನದ ಆಭರಣಗಳನ್ನು ತೊಟ್ಟಿದ್ದಳು. ಗೆಳತಿಯರೊಂದಿಗೆ ವನವಿಹಾರ ಮಾಡುತ್ತ ಆ ಹುತ್ತವನ್ನು ಕಂಡಳು. ಅದರ ಮೇಲೆ ಎರಡು ದೊಡ್ಡ ಮರಗಳು. ನಡುವೆ ಮಿಣುಕದೆ ಸ್ಥಿರವಾಗಿ ಹೊಳೆವ ತೇಜಸ್ಸು. ಅದೇನೆಂದು ಪರೀಕ್ಷಿಸಲು ಸಲಾಕೆಯಿಂದ ಚುಚ್ಚಿದಳು. ರಕ್ತ ಹರಿಯತೊಡಗಿತು. ನೋಡಿ ದುಃಖಗೊಂಡಳು. ಭಯವೂ ಆಯಿತು. ಯಾರಿಗೂ ಹೇಳದೆ ಎಂಥ ಪಾಪ ಸಂಘಟಿಸಿತೆಂದು ತನ್ನಲ್ಲಿ ತಾನು ಅತ್ತಳು. ಅಷ್ಟರಲ್ಲಿ ನೆಲ ಅದುರಿತು. ಉಲ್ಕೆಗಳು ಉರಿದು ಬಿದ್ದುವು. ದಿಕ್ಕುಗಳೆಲ್ಲ ಹೊಗೆಬಣ್ಣದಿಂದ ಮಂಕಾದವು. ಸೂರ್ಯನು ಪರಿವೇಷಗೊಂಡ. ಸೇನೆಯ ಆನೆ ಕುದುರೆಗಳು ಒಂದೊಂದಾಗಿ ಸತ್ತುಬಿದ್ದವು. ಮುತ್ತು ರತ್ನಗಳು ಮಾಯವಾದವು. ಎಲ್ಲರೂ ಪರಸ್ಪರ ಜಗಳಾಡುಹತ್ತಿದರು. ಇದನ್ನೆಲ್ಲ ಕಂಡ ರಾಜನಿಗೆ ಭಯದಿಂದ ಮನಸ್ಸು ಉದ್ವೇಗಗೊಂಡಿತು. ಎಲ್ಲರನ್ನೂ ಕೇಳಿದ 'ನೀವು ಯಾರಾದರೂ ಮುನಿ ಜನಕೆಗೆ ಅಪರಾದ ಮಾಡಿದಿರಾ ?' ಎಂದು. ಕೊನೆಗೆ ಅವರಿವರ ಬಾಯಿಂದ ತನ್ನ ಮಗಳೆ ಅಥ ಒಂದು ಅಪರಾಧ ಮಾಡಿರುವಳೆಂದು ತಿಳಿದು ದುಃಖದಿಂದ ಚ್ಯವನನ ಬಳಿಗೆ ಬಂದ. ಮುನಿ ಇನ್ನೂ ಘೋರ ತಪಸ್ಸಿನಲ್ಲೆ ಇದ್ದ. ರಾಜ ಅವನನ್ನು ಸ್ತೋತ್ರ ಮಾಡಿ 'ಮುನಿವರ್ಯ, ದಯೆದೋರು' ಎಂದು ಬೇಡಿದ. ಮುನಿ ಸಂತುಷ್ಟನಾಗಿ ಹೇಳಿದ 'ರಾಜನ್, ನಿನ್ನ ಮಗಳ ಈ ಉತ್ಪಾತಗಳಿಗೆಲ್ಲ ಕಾರಣ. ಅವಳು ನನ್ನ ಕಣ್ಣನ್ನು ಚುಚ್ಚಿದಳು. ರಕ್ತ ಒಂದೇ ಸವನೆ ಹರಿಯುತ್ತಿದ್ದುದನ್ನು ಕಂಡೂ ಸುಮ್ಮನಿದ್ದಳು. ನಿನ್ನಲ್ಲಿ ಆ ಬಗ್ಗೆ ಒಂದು ಮಾತು ಆಡಲಿಲ್ಲ. ಅವಳನ್ನು ನನಗೆ ಧಾರೆಯೆರೆದು ಕೊಡು. ಎಲ್ಲವೂ ಸರಿಹೋಗುತ್ತದೆ.

ಹೊರಗಿನ ಕಣ್ಣು ಹೊರಟು ಹೋಗಿದ್ದರೂ ಒಳಗಿನ ಜ್ಞಾನದ ಕಣ್ಣು ಮುನಿಗಿದೆ ಎಂದು ಬಗೆದು ರಾಜನು ಕುಲ, ವಯಸ್ಸು, ರೂಪ, ಶೀಲ, ಲಕ್ಷಣಗಳಿಂದ ಒಪ್ಪುವ ತಾವರೆಗಣ್ಣಿನ ಕುಮಾರಿಯನ್ನು ಮುನಿಗೆ ಧಾರೆಯೆರೆದು ಕೊಟ್ಟೊಡನೆ ಎಲ್ಲ ಉತ್ಪಾತಗಳೂ ಶಮನ ಹೊಂದಿದವು. ತನ್ನ ಮುದ್ದಿನ ಮಗಳಿಗೆ ಎಂಥ ಅವಸ್ಥೆ ಬಂದಿತೆಂಬ ಕೊರಗನ್ನು ಮಾತ್ರ ಒಳಗಿಟ್ಟುಕೊಂಡು ರಾಜಧಾನಿಗೆ ಮರಳಿದ ಶರ್ಯಾತಿ ರಾಜ.

**ಸುಮತಿ :-** ಬಳಿಕ ಸುಕನ್ಯೆ ತಪೋನಿಧಿಯಾದ ಪತಿಯನ್ನು ಸಂತೋಷದಿಂದಲೆ ಇಷ್ಟದಾತ್ರಿಯಾದ ಕುಲದೇವತೆಯನ್ನು ಸೇವಿಸುವಂತೆ ಸೇವಿಸಿದಳು. ಅವನು ಕುರುಡ, ಮುಪ್ಪಿನಿಂದ ಜರ್ಜರಿತನಾದವ ಎಂದು ಬಗೆಯಲಿಲ್ಲ. ಶಚಿ ಇಂದ್ರನಲ್ಲಿ ಕಂಡಂಥ ಸುಖವನ್ನು ಆಕೆ ಚ್ಯವನನಲ್ಲಿ ಕಂಡುಕೊಂಡಳು. ಸುಂದರಾಂಗಿ ರಾಜಕುಮಾರಿ ಈಗ ತಪೋವನದ ಗುಡಿಸಲಿನಲ್ಲಿ ಹಣ್ಣು ಗಡ್ಡೆಗಳನ್ನು ತಿಂದು ಪತಿಯ ಪಾದ ಸೇವೆ ಮಾಡತೊಡಗಿದಳು. ಅವನಾಜ್ಞೆಯೊಂದನ್ನೂ ಬಿಡದೆ ಪಾಲಿಸುತ್ತ ಅವನಾರಾಧನೆಯಲ್ಲಿಯೆ ಕಾಲ ಕಳೆದಳು. ಕಾಮ ದಂಭ ದ್ವೇಷ ಲೋಭ ಭಯ ಮದ ಪ್ರಮಾದಗಳೆಲ್ಲವನ್ನೂ ಬಿಟ್ಟು ಪ್ರಯತ್ನಪಟ್ಟು ಪತಿಯನ್ನು ಸಂತೋಷಗೊಳಿಸಿದಳು. ಒಂದು ಸಾವಿರ ವರ್ಷಗಳ ಕಾಲ ತ್ರಿಕರಣ ಪೂರ್ವಕವಾಗಿ ಪತಿಸೇವೆ ಮಾಡಿದಳು.

ಒಂದುದಿನ ಮುನಿಯ ಆಶ್ರಮಕ್ಕೆ ದೇವಲೋಕದ ವೈದ್ಯರು ಅಶ್ವಿನಿ ದೇವತೆಗಳು ಬಂದಾಗ ಸುಕನ್ಯೆ ಅವರನ್ನು ಸ್ವಾಗತಿಸಿ ಆದರದ ಸತ್ಕಾರ ಮಾಡಿದಳು. ಅವರು ಸಂತುಷ್ಟರಾಗಿ 'ಅಮ್ಮ, ನಿನಗೇನು ವರಬೇಕು ಕೇಳು' ಎಂದರು. ಪತಿವ್ರತೆಯಾದ ಸುಕನ್ಯೆ 'ಪತಿಗೆ ಕಣ್ಣುಗಳನ್ನು ನೀಡಿರಿ' ಎಂದು ಕೇಳಿದಳು. 'ಆಗಲಿ ನಿನ್ನ ಪತಿಯಜ್ಞದಲ್ಲಿ ದೇವತೆಗಳಿಗೆ ಕೊಡುವ ಭಾಗವನ್ನು ನಮಗೂ ಕೊಡುವುದಾದರೆ ಅವನಿಗೆ ದೃಷ್ಟಿ ಶಕ್ತಿಯನ್ನು ನಾವು ತಂದು ಕೊಡುತ್ತೇವೆ.' ಎಂದರು ಅವರು, ಚ್ಯವನನೂ 'ಆಗಲಿ' ಎಂದ.

ಅಶ್ವಿನೀ ದೇವತೆಗಳಿಗೆ ಆನಂದವಾಯಿತು. ಮುನಿಯನ್ನು ಸಿದ್ಧಸರೋವರ ಒಂದರಲ್ಲಿ ಮುಳುಗಿ ಏಳು ಎಂದರು. ಆತ ಮುಳುಗಿದ. ಜತೆಗೆ ಇವರಿಬ್ಬರೂ ಮುಳುಗಿದರು. ಮರುಕ್ಷಣದಲ್ಲಿ ಚಿನ್ನದ ಹಾರ ಕುಂಡಲಗಳನ್ನು ಧರಿಸಿದ. ಒಳ್ಳೆ ಬಟ್ಟೆಯನ್ನುಟ್ಟು, ಸ್ತ್ರೀಯರನ್ನಾಕರ್ಷಿಸಬಲ್ಲ ಸುಂದರ ಆಕಾರದ ಮೂವರು ಯುವಕರು ಮೇಲೆದ್ದು ಬಂದರು. ಮೂವರಿಗೂ ಒಂದೆ ರೂಪು ! ಸೂರ್ಯನಂಥ ತೇಜಸ್ಸು ! ಅವರಲ್ಲಿ ತನ್ನ ಪತಿಯನ್ನು ಗುರುತಿಸುವುದೆ ಅಶಕ್ಯವೆನಿಸಿತು. ಸುಕನ್ಯೆಗೆ ಆಗ ಅವಳು ಅಶ್ವಿನಿ ದೇವತೆಗಳನ್ನು ಮೊರೆಹೊಕ್ಕಳು. ಸುಕನ್ಯೆಯ ಪಾತಿವ್ರತ್ಯಕ್ಕೆ ಮೆಚ್ಚಿದ ಅವರು ಚ್ಯವನನ್ನು ತೋರಿಸಿ ಅವನಲ್ಲಿ ತಾವು ಹೋಗಿ ಬರುವವೆಂದು ಹೇಳಿ ಹೊರಟರು. ಮುಂದೆ ನಡೆಯಲಿರುವ ಯಜ್ಞದಲ್ಲಿ ಮುನಿ ತಮಗೂ ಭಾಗ ನೀಡವನೆಂಬಾಸೆಯನ್ನು ಹೊತ್ತು ಸ್ವರ್ಗಕ್ಕೆ ಹೋದರು.

ಇದಾದ ಬಳಿಕ ಬಹುಕಾಲ ಕಳೆಯಿತು. ಸುಕನ್ಯೆ ಪತಿ ಸೇವೆಯಲ್ಲಿಯೆ ದೇಹವನ್ನು ಸೊರಗಿಸುತ್ತಿದ್ದಳು. ಮುನಿಗೆ ಇದನ್ನುಕಂಡು ದುಃಖವಾಯಿತು. ಒಮ್ಮೆ ಪ್ರೇಮಗದ್ಗದ ಕಂಠದಿಂದ ಹೇಳಿದ 'ಪ್ರಿಯೆ, ಎಷ್ಟು ಪತಿ ಸೇವೆ ಮಾಡುತ್ತಿರುವೆ ? ಭಕ್ತಿ ಪರವಶಳಾಗಿ ಸೇವೆ ಮಾಡುವಾಗ ಶರೀರ ಸೊರಗುತ್ತಿರುವುದನ್ನೂ ನೀನು ಲಕ್ಷಿಸುತ್ತಿಲ್ಲ. ಎಲ್ಲ ಜೀವಿಗಳಿಗೂ ಅವರವರ ಶರೀರ ಅವರಿಗೆ ಅತ್ಯಂತ ಪ್ರೀತ್ಯಾಸ್ಪದವಾದುದು. ಅದನ್ನು ನನಗಾಗಿ ಸವೆಸುತ್ತಿರುವೆ. ಇನ್ನು ಸಾಕು. ನಿನ್ನ ಸೇವೆಯಿಂದ ತೃಪ್ತಿ ಪಟ್ಟಿದ್ದೇನೆ. ನನ್ನ ತಪೋಬಲದಿಂದ ದಿವ್ಯ ಭೋಗವನ್ನು ನಿನಗೆ ಕೊಡುವೆನು. ಅನುಭವಿಸು. ಸುಕನ್ಯೆ ಸ್ವಲ್ಪ ನಾಚಿಕೆಯ ನೋಟ ಬೀರಿ ನಕ್ಕು ಹೇಳಿದಳು. 'ನಾಥ, ನೀನು ಮನಸ್ಸು ಮಾಡಿದರೆ ಅಸಾಧ್ಯವೇನಿದೆ ? ನಿನ್ನ ಅಂಗಸಂಗದ ಆಸೆ ಈಗ ಬಲಿತಿದೆ. ಅದಕ್ಕಾಗಿ ಒಂದು ಒಳ್ಳೆಯ ಭವ್ಯ ಮಂದಿರವನ್ನು ನಿರ್ಮಿಸಿಕೊಡು.'

ಪ್ರಿಯೆಯ ಮಾತನ್ನು ಕೇಳಿದೊಡನೆ ಮುನಿ ಯೋಗ ಸಾಮರ್ಥ್ಯದಿಂದ ಒಂದು ವಿಮಾನವನ್ನು ನಿರ್ಮಿಸಿದ. ಅಲ್ಲಿ ಎಲ್ಲ ಭೋಗ ವಸ್ತುಗಳೂ ಇದ್ದವು. ಎಲ್ಲ ಕಾಲಗಳಲ್ಲಿಯೂ ಸುಖ ಸಿಗುತ್ತಿತ್ತು. ವಿಚಿತ್ರ ಹೂಮಾಲೆಗಳಲ್ಲಿ ಮಧುರವಾಗಿ ಝೇಂಕರಿಸುವ ದುಂಬಿಗಳಿದ್ದವು. ಅದು ಅನೇಕ ಮಹಡಿಗಳ ಮನೆಯೆ ಆಗಿತ್ತು. ಅದರಲ್ಲಿ ಮಂಚ, ಹಾಸಿಗೆ ಬೀಸಣಿಗೆಗಳಿದ್ದವು. ಮರಕತ ಮಣಿಯ ನೆಲ, ಹವಳದ ವೇದಿಕೆಗಳು, ವಜ್ರದ ಗೋಡೆಗಳು. ವಿಚಿತ್ರ ಮೇಲ್ಕಟ್ಟಿನಿಂದ ಇಳಿಬಿಟ್ಟ ಮುತ್ತಿನ ಹಾರಗಳು, ಅವು ತಿನ್ನುವ ವಸ್ತುಗಳೆಂದು ಭ್ರಮಿಸಿ ಮೇಲೆ ಹಾರಿ ನಿರಾಸೆಯಿಂದ ಕೆಳಗಿಳಿದು ಕೂಗುವ ಹಂಸ ಪಾರಿವಾಳಗಳು, ಆಟದಸ್ಥಳ, ವಿಶ್ರಾಂತಿಸ್ಥಳ, ಶಯ್ಯಾಗಾರ, ಜಗಲಿ, ಅಂಗಳ ಇವೆಲ್ಲವುಗಳಿಂದ ಕೂಡಿದ್ದು ತನಗೇ ಆಶ್ಚರ್ಯ ಉಂಟು ಮಾಡುವಷ್ಟು ಅದ್ಭುತವಾದ ವಿಮಾನವನ್ನು ಚ್ಯವನಮುನಿ ನಿರ್ಮಿಸಿಕೊಟ್ಟಿದ್ದ.

ಇಂಥ ವಿಮಾನವನ್ನು ಕಂಡೂ ಮುನಿಗೆ ತೃಪ್ತಿಯೆನಿಸಲಿಲ್ಲ. ಎಲ್ಲ ಪ್ರಾಣಿಗಳ ಅಂತರಂಗವನ್ನರಿಯ ಬಲ್ಲವನಿಗೆ ಪ್ರಿಯೆಯ ಆಸೆ ಆಕಾಂಕ್ಷೆಗಳನ್ನರಿಯುವುದು ಕಷ್ಟವೆ ? ಆತ ಪ್ರಿಯೆಯನ್ನು ಕರೆದು ಹೇಳಿದ. 'ಈ ಕೊಳದಲ್ಲಿ ಮಿಂದು ಈ ಮಂದಿರಕ್ಕೆ ಬಾ.' ಆಕೆ ಆಗ ಕೊಳೆಯಾದ ಒಂದು ಸೀರೆ ಉಟ್ಟಿದ್ದಳು. ತಲೆಕೂದಲು ಜಡೆಯಾಗಿದ್ದವು. ಮೈ ಕೈಗಳಲ್ಲಿ ಕೊಳೆ ಅಂಟಿತ್ತು. ಎದೆ ಬಣ್ಣಗೆಟ್ಟಿತ್ತು.

ಮುನಿಯ ಆಜ್ಞೆಯಂತೆ ಆಕೆ ಆನಂದದಿಂದ ನೀರಿಗಿಳಿದಳು. ಮುಳುಗಿದಾಗ ನೀರೊಳಗೆ ಒಂದು ಮನೆ, ಅದರಲ್ಲಿ ಎಳೆ ವಯಸ್ಸಿನ ಕಮಲ ಗಂಧಿಯರಾದ ಸಾವಿರ ಕನ್ನೆಯರು ಕಂಡು ಬಂದರು. ಅವರು ಸುಕನ್ಯೆಯನ್ನು ಕಂಡೊಡನೆ ದಿಗ್ಗನೆದ್ದು ಕೈಮುಗಿದು ಹೇಳಿದರು. 'ನಾವು ನಿನ್ನ ಆಳುಗಳು. ನಾವೇನು ಮಾಡಲಿ, ಅಪ್ಪಣೆ ನೀಡು. ಹೀಗೆ ಹೇಳಿ ಆಕೆಗೆ ಉತ್ತಮ ಸ್ನಾನ ಮಾಡಿಸಿ ಹೊಸ ಪಟ್ಟೆಸೀರೆ ಉಡಿಸಿ ಬೆಲೆ ಬಾಳುವ ಒಳ್ಳೆಯ ಆಭರಣ ತೊಡಿಸಿ ಷಡ್ರಸಾನ್ನ ಬಡಿಸಿದರು. ಅಮೃತದಂಥ ಮಧುವನ್ನು ಕುಡಿಸಿದರು ಬಳಿಕ ಆಕೆ ಕನ್ನಡಿಯಲ್ಲಿ ತನ್ನ ರೂಪವನ್ನು ನೋಡಿ ಕೊಂಡಳು. ಕನ್ನೆಯರು ತನಗೆ ಮಾಡಿದ ಸಿಂಗಾರ ಎಷ್ಟು ಅದ್ಭುತ ಎಂಬುದನ್ನು ಕಂಡಳು. ಹಾರ, ಬಳೆ, ಒಡ್ಯಾಣ, ಕಾಲಗೆಜ್ಜೆ ಮುಂತಾದುವನ್ನು ಚೆನ್ನಾಗಿ ತೊಡಿಸಿದ್ದರು. ಹುಬ್ಬು, ದಂತಪಂಕ್ತಿ, ಶುಭ್ರಸ್ನಿಗ್ಧವಾದ ಕಡೆಗಣ್ಣು, ಮುಂಗುರುಳುಗಳಿಂದ ಶೋಭಿಸುವ ತನ್ನ ಮುಖವನ್ನು ನೋಡುತ್ತಿದ್ದಂತೆ ಆಕೆ ಪತಿಯನ್ನು ನೆನೆದಳು. ಅಷ್ಟರಲ್ಲಿ ಆಕೆ ಆ ಎಲ್ಲ ವಿದ್ಯಾಧರ ಕನ್ನೆಯರೊಂದಿಗೆ ಪತಿಯ ಬಳಿಯಲ್ಲಿದ್ದಳು. ಅವಳಿಗೊಂದು ಕ್ಷಣ ಇದೆಲ್ಲವೂ ಭ್ರಮೆಯೋ ಎಂಬ ಸಂಶಯ ಬಂದಿತು.

ಸ್ನಾನದಿಂದ ಎಲ್ಲ ಕೊಳೆಯನ್ನು ದೂರ ಮಾಡಿಕೊಂಡು ಅಪೂರ್ವ ಶೋಭೆಯನ್ನು ಪಡೆದು ತನ್ನ ನಿಜರೂಪದಿಂದಿದ್ದ ಸುಕನ್ಯೆ ಸಾವಿರ ವಿದ್ಯಾಧರ ಕನ್ನಿಕೆಯರ ಮಧ್ಯೆ ಹೊಳೆಯುತ್ತಿದ್ದುದನ್ನು ಮುನಿಯು ನೋಡಿ ರತ್ಯಾಸಕ್ತಿ ತಳೆದು ಅವಳನ್ನು ತಾನು ನಿರ್ಮಿಸಿದ ವಿಮಾನದೊಳಗೆ ಕರೆದೊಯ್ದ. ಆಕಾಶದಲ್ಲಿ ತೇಲುತ್ತಿದ್ದ ಆ ವಿಮಾನದಲ್ಲಿ ವಿದ್ಯಾಧರ ಕನ್ನೆಯರ ನಡುವೆ ಪ್ರೇಯಸಿಯೊಂದಿಗೆ ಕುಳಿತಿದ್ದ ಮುನಿ ನಕ್ಷತ್ರಗಳ ನಡುವೆ ಹೊಳೆಯುವ ಚಂದ್ರನಂತೆ ಕಾಣುತ್ತಿದ್ದ. ಎಂಟುಜನ ಲೋಕ ಪಾಲಕರು ವಿಹರಿಸುವ ಕುಲಪರ್ವತಗಳಲ್ಲಿ ವಸಂತ ಮಾರುತದ ಮೃದುಸ್ಪರ್ಶವನ್ನು ಸೇವಿಸುತ್ತ ಗಂಗಾ ಪ್ರವಾಹದ ಮಂಗಳಧ್ವನಿ, ಸಿದ್ಧ ಜನರ ಸ್ತುತಿಗಳನ್ನು ಕೇಳುತ್ತ ಆ ಲಲನೆಯರ ನಡುವೆ ಕುಬೇರನಂತೆ ಬಹುಕಾಲ ವಿಹಾರ ಮಾಡಿದ, ವೈಶ್ರಂಭಕ, ನಂದನ, ಪುಷ್ಪಭದ್ರಕ ಮಾನಸ ಚೈತ್ರರಥ್ಯ ಮುಂತಾದ ದಿವ್ಯವನಗಳಲ್ಲಿಯೂ ಅವನ ವಿಹಾರ ನಡೆದಿತ್ತು.

**ಸುಮತಿ :-** ಚ್ಯವನ ಮುನಿ ಸುಕನ್ಯೆಯೊಂದಿಗೆ ಭೂಮಂಡಲದಲ್ಲೆಲ್ಲ ನೂರಾರು ವರ್ಷಗಳ ಕಾಲ ವಿಹಾರ ಮಾಡಿದ. ಅಷ್ಟು ವರ್ಷಗಳುರುಳಿದುದು ಅವನಿಗೆ ತಿಳಿದಿರಲಿಲ್ಲ. ಕೊನೆಗೊಂದು ದಿನ ಪ್ರೇಯಸಿಯ ಮನೋರಥಗಳೆಲ್ಲ ಪೂರ್ತಿಗೊಂಡು ತೃಪ್ತಿಯ ಭಾವ ಮೂಡಿದುದನ್ನು ಕಂಡು ಪಯೋಷ್ಣೀ ನದೀತೀರದ ಒಂದು ಆಶ್ರಮದಲ್ಲಿ ತಪಸ್ಸಿಗೆ ಕುಳಿತ.

ಬಹುಕಾಲ ಕಳೆಯಿತು. ಶರ್ಯಾತಿ ರಾಜನೊಮ್ಮೆ ಒಂದು ಯಾಗ ಮಾಡಲು ಸಂಕಲ್ಪಿಸಿ ಚ್ಯವನ ಮುನಿಯನ್ನು ಕರೆತರಲು ದೂತರನ್ನು ಕಳಿಸಿದ. ಅವರು ರಾಜನ ಆಹ್ವಾನವನ್ನು ತಿಳಿಸಿ ಚ್ಯವನ ದಂಪತಿಗಳನ್ನು ಅರಮನೆಗೆ ಕರೆತಂದರು. ರಾಜನು ಮಗಳನ್ನು ಗುರುತಿಸಿದ ಮುನಿಯಲ್ಲಿ ಮಾತ್ರ ಗುರುತಿಸಲಾಗದಷ್ಟು ಬದಲಾವಣೆ ಆಗಿದ್ದುದರಿಂದ ಮಗಳು ನಮಸ್ಕರಿಸಿದಾಗ ಅವಳಿಗೆ ಆಶೀರ್ವಾದ ಮಾಡಲು ಹಿಂಜರಿದ. 'ಮಗಳೆ, ಇದೇನು ಮಾಡುತ್ತಿರುವೆ, ಜಗತ್ತಿಗೇ ಪೂಜ್ಯನಾದ ಆ ನಿನ್ನ ಪತಿಗೆ ವಂಚನೆ ಮಾಡುವೆಯ? ಮುದಿಗಂಡನನ್ನೊಲ್ಲದೆ ಇನ್ನೊಬ್ಬನ್ನಿಟ್ಟುಕೊಂಡೆಯ? ವಂಶಕ್ಕೆ ಕಳಂಕ ಹಚ್ಚುವ ಕಾರ್ಯ ಮಾಡುತ್ತಿರುವೆ. ನಿನ್ನ ವಿವೇಕವೆಲ್ಲಿಗೆ ಹೋಯಿತು? ನಾಚಿಕೆಯಿಲ್ಲವೆ ನಿನಗೆ? ಪರಪುರುಷನನ್ನಿಟ್ಟುಕೊಂಡು ಪಿತೃಕುಲ, ಪತಿಕುಲಗಳೆರಡನ್ನೂ ಅಧೋಗತಿ ಗೊಯ್ಯುವೆಯ?' ಎಂದು ಗೊಣಗಿದ. ಮಗಳು ನಗುತ್ತ ಹೇಳಿದಳು 'ಅಪ್ಪ, ಈತ ಬೇರಾರೂ ಅಲ್ಲ, ನಿನ್ನ ಅಳಿಯ ಚ್ಯವನಮಹರ್ಷಿ.' ಹಾಗಾದರೆ ಈ ವಯಸ್ಸು ರೂಪಗಳೆಲ್ಲಿಂದ ಬಂದಿತು ? ಮಗಳು ಎಲ್ಲವನ್ನೂ ವಿವರಿಸಿದಳು. ಆಗ ಆನಂದಾಶ್ಚರ್ಯಗಳಿಂದ ತಬ್ಬಿಕೊಂಡನಾತ.

ಮುಂದೆ ಸೋಮಯಾಗ ನಡೆಯಿತು. ಚ್ಯವನ ಮುನಿ ನಿರ್ಭೀತಿಯಿಂದ ಅಶ್ವಿನೀ ದೇವತೆಗಳಿಗೂ ಸೋಮಪಾನದಲ್ಲಿ ಭಾಗವನ್ನು ಕೊಟ್ಟ. ಪಂಕ್ತಿಬಾಹ್ಯರಾದ ದೇವ ವೈದ್ಯರನ್ನು ಪಂಕ್ತಿ ಪಾವನರಾದ ದೇವತೆಗಳೊಂದಿಗೆ ಸೋಮಪಾನ ಮಾಡಿಸಿದ. ಇದನ್ನು ಸಹಿಸಲಾರದೆ ದೇವೇಂದ್ರನು ವಜ್ರಾಯುಧದಿಂದ ಮುನಿಯನ್ನು ಹೊಡೆಯಲು ಕೈ ಎತ್ತಿದ. ಆದರೆ ಒಂದು ಹುಂಕಾರದಿಂದ ಆ ಎತ್ತಿದ ಕೈಯನ್ನು ಸ್ತಂಭಿಸಿ ನಿಲ್ಲಿಸಿದ ಮುನಿ. ಮಂತ್ರ ಬಲದಿಂದ ಸ್ತಂಭಿತವಾದ ನಾಗರಹಾವಿನಂತೆ ಕೋಪದಿಂದ ಭುಸುಗುಟ್ಟುತ್ತ ಹಾಗೇ ನಿಂತ ದೇವೇಂದ್ರ.ತಪೋನಿಧಿಯಾದ ಮುನಿಯ ಮುಂದೆ ಅವನ ಪರಾಕ್ರಮವೇನೂ ನಡೆಯಲಿಲ್ಲ. 'ಮುನಿಯೆ, ನನ್ನ ಅಪರಾಧವನ್ನು ಕ್ಷಮಿಸು. ಅಶ್ವಿನಿಗಳಿಗೆ ಸೋಮ ಭಾಗ ಕೊಡು, ನಾನು ಬೇಡವೆನ್ನುವುದಿಲ್ಲ' ಎಂದು ದೈನ್ಯದಿಂದ ಬೇಡಿದಾಗ ಅವನ ಕೈ ಮೊದಲಿನಂತಾಯಿತು. ಇದನ್ನೆಲ್ಲ ನೋಡಿದ ಜನರು ಆಶ್ಚರ್ಯದಿಂದ ದಿಙ್ಮೂಢರಾದರು. ಇಂಥ ಬ್ರಹ್ಮಬಲ ದೇವತೆಗಳಲ್ಲಿಯೂ ನೋಡಲು ಸಿಗಲಾರದು ಎಂದುಕೊಂಡರು. ಬಳಿಕ ರಾಜನು ಮುನಿಗಳಿಗೆ ಹೇರಳ ಧನವನ್ನಿತ್ತು ಅವಭೃಥ ಸ್ನಾನ ಮಾಡಿಯಾಗವನ್ನು ಸಮಾಪ್ತಿಗೊಳಿಸಿದ.

ಪ್ರಭು, ಆ ಚ್ಯವನಮುನಿಯ ಆಶ್ರಮವಿದು. ತಪಸ್ಸೆ ಮೂರ್ತಿಮತ್ತಾಗಿ ಅವನ ರೂಪದಿಂದಿದೆ. ಅವನನ್ನು ನಮಿಸಿ ಜಯದ ಆಶೀರ್ವಾದ ಪಡೆ. ಯಾಗಕ್ಕೆ ಅವನನ್ನೂ ಅವನ ಪತ್ನಿಯನ್ನೂ ಕಳುಹಿಸು.

ಹೀಗೆ ಅಮಾತ್ಯ ಸುಮತಿಯು ಚ್ಯವನನ ಚರಿತ್ರೆಯನ್ನು ಹೇಳುತ್ತಿದ್ದಂತೆ ಕುದುರೆ ಅವನ ಆಶ್ರಮವನ್ನು ಪ್ರವೇಶಿಸಿತು. ಅಲ್ಲಿ ದೂರ್ವೆಯ ಅಂಕುರಗಳನ್ನು ತಿನ್ನುತ್ತಿದ್ದ ಕುದುರೆ ಮುನಿಗಳಿಗೆ ದೃಷ್ಟಿ ಗೋಚರವಾಯಿತು. ಅಷ್ಟರಲ್ಲಿ ಶತ್ರುಘ್ನನು ಚ್ಯವನ ದಂಪತಿಗಳ ಬಳಿಗೆ ಬಂದು ಅವರ ಪಾದಗಳಿಗೆ ವಂದನೆ ಮಾಡಿದ. 'ನಾನು ಶತ್ರುಘ್ನ.

ಶ್ರೀರಾಮನ ಸೋದರ. ಅವನ ಯಾಗದ ಕುದುರೆಯ ರಕ್ಷಣೆಗಾಗಿ ಈ ದಾರಿಯಿಂದ ಬಂದಿದ್ದೇನೆ. ನಿಮಗಿದೊ ವಂದನೆಗಳು. ನಮ್ಮ ಪಾಪಗಳನ್ನೆಲ್ಲ ಪರಿಹರಿಸಿರಿ' ಎಂದು ಬೇಡಿದ. ಮುನಿ ಆಶೀರ್ವದಿಸಿ ನುಡಿದ.

'ಶತ್ರುಘ್ನ, ನಿನಗೆ ಕಲ್ಯಾಣವಾಗಲಿ ! ಯಾಗದ ಕುದುರೆಯನ್ನು ರಕ್ಷಿಸಿದ ಮಹಾ ಕೀರ್ತಿ ನಿನ್ನದಾಗಲಿ !'

ಬಳಿಕ ಮುನಿ ಬಳಿಯಲ್ಲಿದ್ದ ಶಿಷ್ಯರಿಗೆ ಹೀಗೆ ಹೇಳಿದ.

'ಇದೊಂದು ಆಶ್ಚರ್ಯ ನೋಡಿ, ಶ್ರೀರಾಮನೂ ಯಜ್ಞವನ್ನು ಮಾಡುತ್ತಾನಂತೆ. ಅವನ ನಾಮಸ್ಮರಣೆಯಿಂದ ಎಲ್ಲ ಪಾಪ ಪರಿಹಾರವಾಗುತ್ತದೆ. ಮಹಾಪಾತಕಿಗಳೂ ಪರಸ್ತ್ರೀಸಂಗ ಮಾಡುವವರೂ ಅನಾಯಾಸವಾಗಿ ಪರಗತಿಯನ್ನು ಹೊಂದುತ್ತಾರೆ. ಅವನ ಪಾದಕಮಲದ ದೂಳಿನ ಕಣವೂ ಕೂಡ ಕಲ್ಲಾಗಿ ಬಿದ್ದಿದ್ದ ಗೌತಮ ಪತ್ನಿಗೆ ಹಿಂದಿನ ಮೋಹಕವಾದ ರೂಪವನ್ನೆ ತಂದುಕೊಟ್ಟಿತು. ಅವನ ಮನೋಹರ ರೂಪವನ್ನು ರಣರಂಗದಲ್ಲಿ ಕಂಡ ದೈತ್ಯರೂ ನಿರ್ವಿಕಾರವಾದ ಸ್ವರೂಪವನ್ನು ಪಡೆದರು. ಯೋಗಿಗಳು ಯೋಗ ಸಮಾಧಿಯಲ್ಲಿ ಅವನನ್ನು ಧ್ಯಾನಮಾಡಿ ಸಂಸಾರ ಭಯವನ್ನು ನೀಗಿಕೊಂಡು ಪರಮಪದವನ್ನು ಹೊಂದಿದರು. ತಾವರೆಯೆಸಳಿನಂಥ ಕುಡಿ ನೋಟ ಸುಂದರವಾದ ಮೂಗು ಹುಬ್ಬುಗಳುಳ್ಳ ಆ ರಾಮಚಂದ್ರನ ಮುಖವನ್ನೊಮ್ಮೆ ನೋಡಿ ನಾನು ಧನ್ಯನಾಗುವೆ.

**ಸಾ ಜಿಹ್ವಾ ರಘುನಾಥಸ್ಯ ನಾಮಕೀರ್ತನಮಾದರಾತ್ ।**
**ಕರೋತಿ ವಿಪರೀತಾ ಯಾ ಫಣಿನೋ ರಸನಾಸಮಾ ॥**

ಆದರದಿಂದ ರಾಮನಾಮವನ್ನು ಉಚ್ಚರಿಸುವ ನಾಲಿಗೆಯೆ ನಾಲಿಗೆ. ಬೇರೆ ಎಲ್ಲ ಹಾವಿನ ನಾಲಿಗೆಯಂತೆ.

ಬ್ರಹ್ಮಾದಿ ದೇವತೆಗಳಿಗೂ ಅಲಭ್ಯವಾದ ಶ್ರೀರಾಮನ ಮುಖ ದರ್ಶನವನ್ನು ಪಡೆದು ನನ್ನ ಮನೋರಥವನ್ನು ಪೂರೈಸಿಕೊಳ್ಳುವೆನು. ನನ್ನ ತಪಸ್ಸಿನ ಪೂರ್ಣ ಫಲವನ್ನು ಹೊಂದುವೆನು. ಅವನ ಪಾದ ಧೂಳಿನಿಂದ ನನ್ನ ಶರೀರವನ್ನು ಪಾವನಗೊಳಿಸುವೆನು. ಅವನೊಡನೆ ಸಂಭಾಷಣೆ ಮಾಡಿ ನನ್ನ ನಾಲಿಗೆಯನ್ನು ಪವಿತ್ರಗೊಳಿಸುವೆನು.

ಹೀಗೆ ಮುನಿಯು ರಾಮಪಾದಸ್ಮರಣೆಯಿಂದುಂಟಾದ ಭಕ್ತಿಯ ಉದ್ರೇಕದಿಂದ ಕಣ್ಣಲ್ಲಿ ನೀರು ತುಂಬಿಕೊಂಡು ಗದ್ಗದ ಕಂಠದಿಂದ ನುಡಿದು ಬೇಡಿಕೊಂಡ.

**ಶ್ರೀರಾಮ ಚಂದ್ರ ರಘುಪುಂಗವ ಧರ್ಮಮೂರ್ತೆ ।**
**ಭಕ್ತಾನುಕಂಪಕ ಸಮುದ್ಧರ ಸಂಸೃತೇರ್ಮಾಂ ॥**

ಶ್ರೀ ರಾಮಚಂದ್ರ, ರಘುಪುಂಗವ, ಧರ್ಮಮೂರ್ತಿ, ಭಕ್ತಾನುಕಂಪಿ, ನನ್ನನ್ನು ಸಂಸಾರದಿಂದ ಮೇಲೆತ್ತಿಕೊಳ್ಳು.

ಹೀಗೆ ಹೇಳುತ್ತ ಮುನಿ ಧ್ಯಾನಾವಸ್ಥೆಗಿಳಿದ, ರಾಮನನ್ನುಳಿದು ಬೇರಾವುದನ್ನೂ ಚಿಂತಿಸಲಿಲ್ಲ. ಶತ್ರುಘ್ನನೆಂದ, 'ಸ್ವಾಮಿ, ರಾಮಚಂದ್ರನ ಯಜ್ಞ ಮಂಟಪವನ್ನು

ಪಾದಧೂಳಿಯಿಂದ ಪವಿತ್ರಗೊಳಿಸು. ನಿನ್ನ ಮನಸ್ಸಿನಲ್ಲಿ ರಾಮನಿರುವನೆಂದರೆ ಅದೊಂದು ಅವನ ಮಹಾಭಾಗ್ಯವೆ ಸರಿ.''

ಮುನಿಗೆ ಪರಮಾನಂದವಾಯಿತು. ತನ್ನೆಲ್ಲ ಶಿಷ್ಯ ಪರಿವಾರದೊಂದಿಗೆ ಎಲ್ಲ ಅಗ್ನಿಗಳೊಂದಿಗೆ ಹೊರಟು ಆಶ್ರಮದಿಂದ ಹೊರಗೆ ನಡೆದ. ಅಂಥ ರಾಮಭಕ್ತನು ಕಾಲು ನಡಿಗೆಯಿಂದ ಅಯೋಧ್ಯೆಯವರೆಗೆ ಹೋಗುವುದನ್ನು ನೋಡಿ ಹನುಮಂತನು ಶತ್ರುಘ್ನನಲ್ಲಿ ವಿನಯದಿಂದ ಕೇಳಿದ 'ಪ್ರಭು, ನಿನ್ನ ಅಪ್ಪಣೆಯಾದರೆ ಈ ಸುಂದರ ರಾಮಭಕ್ತನನ್ನು ನಾನೇ ಅಯೋಧ್ಯೆಗೆ ಕರೆದುಕೊಂಡು ಹೋಗುವೆ'. ಶತ್ರುಘ್ನನು ಒಪ್ಪಿದ. ಒಡನೆ ಹನುಮಂತನು ಮುನಿಯನ್ನೂ, ಅವರ ಪರಿವಾರವನ್ನೂ ಬೆನ್ನ ಮೇಲೆ ಹೊತ್ತು ಆಕಾಶದಲ್ಲಿ ಗಾಳಿಯಂತೆ ವೇಗದಿಂದ ಅಯೋಧ್ಯೆಗೆ ಹಾರಿದ.

ಶ್ರೀರಾಮನು ಮುನಿಯನ್ನು ಪ್ರೀತಿಯಿಂದ ಬರಮಾಡಿಕೊಂಡು ಅರ್ಘ್ಯ ಪಾದ್ಯಾದಿಗಳಿಂದ ಸತ್ಕರಿಸಿದ. 'ನಿನ್ನ ದರ್ಶನದಿಂದ ನಾನು ಧನ್ಯನಾದೆ. ನನ್ನ ಯಾಗವೂ ಪವಿತ್ರವಾಯಿತು' ಎಂದ. ಅದನ್ನು ಕೇಳಿ ರೋಮಾಂಚಗೊಂಡ ಮುನಿ ನುಡಿದ. 'ಪ್ರಭು ಬ್ರಾಹ್ಮಣನನ್ನು ದೇವತೆಯಂತೆ ಕಾಣುವ, ಧರ್ಮರಕ್ಷಕನಾದ ನಿನಗೆ ಈ ವಿಧವಾದ ಬ್ರಾಹ್ಮಣ ಸತ್ಕಾರ ಒಪ್ಪುತ್ತದೆ.'

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಪಾತಾಳಖಂಡದಲ್ಲಿ ಶೇಷ-ವಾತ್ಸ್ಯಾಯನ ಸಂವಾದದಲ್ಲಿ ರಾಮಾಶ್ವಮೇಧದಲ್ಲಿ ಚ್ಯವನಾಶ್ರಮಕ್ಕೆ ಹಯಾಗಮನವೆಂಬ ಹತ್ತನೆ ಅಧ್ಯಾಯ ಮುಗಿದುದು*



## ರತ್ನಗ್ರೀವನ ತೀರ್ಥಯಾತ್ರೆ

**ಅಧ್ಯಾಯ - ೧೧**

**ಶೇಷ ಉವಾಚ**

**ಶೇಷ :-** ಚ್ಯವನ ಮಹರ್ಷಿಯ ಅಚಿಂತ ತಪೋಬಲವನ್ನು ತಿಳಿದು 'ಸರ್ವಲೋಕವೂ ಆ ಬ್ರಾಹ್ಮಣನ ತಪಸ್ಸಿಗೆ ನಮೋ ಎನ್ನಬೇಕು. ಬ್ರಾಹ್ಮಣೋತ್ತಮನಾದ ಚ್ಯವನನ ಯೋಗಸಿದ್ಧಿಯನ್ನೆ ನೋಡಬಹುದು. ಒಂದು ಕ್ಷಣದಲ್ಲಿ ಆತ ಯಾರಿಗೂ ಲಭ್ಯವಲ್ಲದ ಉತ್ತಮವಾದ ವಿಮಾನವನ್ನು ನಿರ್ಮಿಸಿಕೊಂಡನಂತೆ.

**ಕ್ವ ಭೋಗ ಸಿದ್ಧಿರ್ಮಹತೀ ಮುನೀನಾಮಮಲಾತ್ಮನಾಂ ।**
**ಕ್ವ ತಪೋ ಬಲ ಹೀನಾನಾಂ ಭೋಗೇಚ್ಛಾ ಮನುಜಾತ್ಮನಾಂ ॥**

ರಾಗ ದ್ವೇಷಗಳಿಲ್ಲದ ನಿರ್ಮಲ ಮನಸ್ಸಿನ ಮುನಿಗಳು ನೆನೆದ ಮಾತ್ರಕ್ಕೆ ಸುಖ ಭೋಗವನ್ನು ಪಡೆಯುವ ಆ ಸಿದ್ಧಿ ಎಲ್ಲಿ ? ತಪೋಬಲವಿಲ್ಲದೆ ವ್ಯರ್ಥವಾಗಿ ಮಾನವರು ಕಾಣುವ ಸುಖ ಭೋಗದ ಕನಸೆಲ್ಲಿ ?'

ಹೀಗೆ ಅಂದುಕೊಂಡು ಒಂದು ಕ್ಷಣ ಆಶ್ರಮದಲ್ಲಿದ್ದು ನೀರು ಕುಡಿದು ತೃಪ್ತನಾದ ಶತ್ರುಘ್ನ. ಕುದುರೆಯೂ ಪಯೋಷ್ಣಿಯ ಪವಿತ್ರ ಜಲವನ್ನು ಕುಡಿದು ವಾಯುವೇಗದಿಂದ ಮುನ್ನಡೆಯಿತು. ಮುಂದೆ ವಿಮಲನೆಂಬ ರಾಜನ ರತ್ನಾತಟವೆಂಬ ನಗರ ಸಿಕ್ಕಿತು. ರಾಜನು

ಕುದುರೆಯ ಆಗಮನವನ್ನು ತಿಳಿದು ಆದರದಿಂದ ಶತ್ರುಘ್ನನನ್ನು ಬರಮಾಡಿಕೊಂಡ. ಎಪ್ಪತ್ತು ಬಿಳಿ ಆನೆಗಳನ್ನೂ, ಹತ್ತು ಸಾವಿರ ಕುದುರೆಗಳನ್ನೂ ಸಾವಿರ ಚಿನ್ನದ ರಥಗಳನ್ನೂ ತನ್ನೆಲ್ಲ ರಾಜ್ಯ, ಕೋಶಗಳನ್ನೂ ಅವನಿಗೊಪ್ಪಿಸಿ ಕಾಲಿಗೆ ನಮಸ್ಕರಿಸಿದ. ಶತ್ರುಘ್ನನು ಅವನನ್ನೆತ್ತಿ ದೃಢವಾಗಿ ಆಲಿಂಗಿಸಿದ, ಒಡನೆ ಮಗನಿಗೆ ಪಟ್ಟಾಭಿಷೇಕ ಮಾಡಿ ಸೇನೆಯೊಂದಿಗೆ ಶತ್ರುಘ್ನನ ಜೊತೆಯಲ್ಲಿ ಹೊರಟ ರಾಜ.

ಹೀಗೆ ರಾಜರೆಲ್ಲರೂ ಕಿವಿಗೆ ಇಂಪಾದ ರಾಮಚಂದ್ರನ ಹೆಸರನ್ನು ಕೇಳಿದೊಡನೆ ಕುದುರೆಗೆ ನಮಸ್ಕಾರ ಮಾಡಿ ತಮ್ಮ ಧನಸಂಪತ್ತನ್ನೆಲ್ಲ ಅರ್ಪಿಸುತ್ತಿದ್ದರು.

ಮುಂದೆ ಮಾರ್ಗದಲ್ಲಿ ಒಂದು ಪರ್ವತ ಎದುರಾಯಿತು. ಸ್ಫಟಿಕ ಚಿನ್ನ ಬೆಳ್ಳಿ ಗೈರಿಕ ಮುಂತಾದ ಧಾತುಗಳು ಸೀಸ ಇವೆಲ್ಲವೂ ಅಲ್ಲಿ ಹೇರಳವಾಗಿದ್ದುವು. ನೀರಿನ ಝರಿಗಳು, ಮಧುರವಾಗಿ ಕೂಗುವ ಹಂಸ ಗಿಳಿ ಮುಂತಾದ ಹಕ್ಕಿಗಳು, ಯಾವ ಭಯವೂ ಇಲ್ಲದೆ ವಿಹಾರ ಮಾಡುವ ಸಿದ್ಧ ದಂಪತಿಗಳು, ಗಂಧರ್ವರು, ಅಪ್ಸರೆಯರು, ನಾಗರು ಗಂಗೆಯ ಮೇಲಿಂದ ಬೀಸುವ ತಂಪಾದ ಗಾಳಿ ಇವೆಲ್ಲವುಗಳಿಂದ ಪರ್ವತವು ಶತ್ರುಘ್ನನಿಗೆ ಆಶ್ಚರ್ಯ ಉಂಟುಮಾಡಿತು.

ಅವನು ಸುಮತಿಯನ್ನು ಕೇಳಿದ 'ಇದು ಯಾವ ಬೆಟ್ಟ ? ಬಹು ಆಶ್ಚರ್ಯಕರವಾಗಿದೆ. ಇಲ್ಲಿ ದೇವಾಲಯವಿದೆಯೆ ? ದೇವತೆಗಳ ವಿಹಾರ ಸ್ಥಳವಿದೆಯೆ ? ಇದರ ಸೌಂದರ್ಯ, ಸಂಪತ್ತು ನನ್ನ ಮನಸ್ಸಿನಲ್ಲಿ ದಿಗ್ಭ್ರಮೆ ಉಂಟು ಮಾಡುವಂತಿದೆ.'

ಸುಮತಿ ಹೇಳತೊಡಗಿದ 'ಪ್ರಭು, ಇದು ನೀಲಪರ್ವತ. ಪಾಪಿಗಳ ಕಣ್ಣಿಗೆ ಇದು ಕಾಣಿಸಿಕೊಳ್ಳಲಾರದು. ಪರಸ್ತ್ರೀ ಸಂಗ ಮಾಡುವವರು, ವಿಷ್ಣುವಿನಲ್ಲಿ ಗುಣಗಳನ್ನು ಒಪ್ಪದ ನರಾಧಮರು, ಶ್ರುತಿ ಸ್ಮೃತ್ಯುಕ್ತವಾಗಿದ್ದು, ಸಜ್ಜನರ ಆಚರಣೆಯಲ್ಲಿಯೂ ಇರುವ ಧರ್ಮವನ್ನು ತಮ್ಮ ಬುದ್ಧಿ ಬಲದಿಂದ ಕಲ್ಪಿಸಿದ ನಾನಾತರ್ಕಗಳನ್ನು ಒಡ್ಡಿ ಅಲ್ಲಗಳೆಯುವವರು. ರಸವಿಕ್ರಯ ಮಾಡುವ ಬ್ರಾಹ್ಮಣರು, ಸುರಾಪಾನ ಮಾಡುವವರು, ಕನ್ಯಾ ವಿಕ್ರಯ ಮಾಡುವವರು, ಪತಿವ್ರತೆಯರನ್ನು ಕೆಡಿಸುವವರು, ಬಂಧುಗಳಿಗೆ ಕೊಡದೆ ತಾವೆ ಮಧುರ ವಸ್ತುಗಳನ್ನು ಉಣ್ಣುವವರು, ಮನೆಗೆ ಬಂದ ಅತಿಥಿಗಳಿಗೊಂದು ತಮಗೊಂದು ಹೀಗೆ ಬೇರೆ ಅಡಿಗೆ ಮಾಡಿ ಕೊಳ್ಳುವವರು, ಮಧ್ಯಾಹ್ನ ವೇಳೆಯಲ್ಲಿ ಹಸಿದು ಬಂದ ಅತಿಥಿಗಳನ್ನು ಅವಮಾನಿಸುವವರು, ವಿಶ್ವಾಸಘಾತ ಮಾಡುವವರು, ರಾಮನಲ್ಲಿ ಭಕ್ತಿ ಇಲ್ಲದವರು ಇವರಾರೂ ಈ ಪರ್ವತವನ್ನು ಕಾಣಲಾರರು.

ಇಲ್ಲಿ ಪುರುಷೋತ್ತಮನಾದ ನಾರಾಯಣನಿದ್ದಾನೆ. ದೇವತೆಗಳ ಕಿರೀಟಗಳು ಅವನ ಪಾದದ ಬಳಿ ಬಾಗಿರುತ್ತವೆ. ಪುಣ್ಯವನ್ನು ನೀಡುವ ಆ ದೇವನನ್ನು ಪುಣ್ಯವಂತರೆ ನೋಡಬಲ್ಲರು. ಶ್ರುತಿಗಳೂ ಅವನನ್ನು 'ನೇತಿ ನೇತಿ' ಎನ್ನುತ್ತ ಪೂರ್ತಿಯಾಗಿ ತಿಳಿಯಲಾರವು. ಅವನ ಪಾದಧೂಳಿಯ ಮಹಿಮೆಯನ್ನು ಇಂದ್ರಾದಿ ದೇವತೆಗಳೂ ತಿಳಿಯಲು ಪ್ರಯತ್ನಿಸುತ್ತಿದ್ದಾರೆ. ಜ್ಞಾನಿಗಳು ವೇದಾಂತ ಮೊದಲಾದ ಸಚ್ಛಾಸ್ತ್ರಗಳಿಂದ ಅವನನ್ನು ತಿಳಿದುಕೊಳ್ಳುತ್ತಾರೆ.

ಈ ಬೆಟ್ಟವನ್ನೇರಿ ದೇವನನ್ನು ನಮಸ್ಕರಿಸಿ, ಪೂಜೆ ಮಾಡಿ, ನೈವೇದ್ಯ ಭಕ್ಷಣ ಮಾಡಿದರೆ ಚತುರ್ಭುಜಾಕಾರ ಲಭಿಸುವುದು. ಈ ವಿಷಯದಲ್ಲಿ ಒಂದು ಪುರಾತನ ಇತಿಹಾಸವನ್ನು ಹೇಳುತ್ತಾರೆ.

ಕಾಂಚೀನಗರಿ ಹಿಂದೆ ಬಹು ಪ್ರಸಿದ್ಧವಾದ ಪಟ್ಟಣವಾಗಿತ್ತು. ಅಲ್ಲಿನ ಜನರು ಐಶ್ವರ್ಯವಂತರಾಗಿದ್ದರು. ಧಾರ್ಮಿಕರೂ ಆಗಿದ್ದರು. ವಿಪ್ರರು ಷಟ್ಕರ್ಮನಿರತರಾಗಿದ್ದು ಸರ್ವಭೂತದಯೆ ರಾಮಭಕ್ತಿ ಉಳ್ಳವರು ಆಗಿದ್ದರು. ಕ್ಷತ್ರಿಯರು ಯುದ್ಧರಂಗದಿಂದ ಎಂದೂ ಹಿಮ್ಮೆಟ್ಟದ ವೀರರು. ಪರದಾರ ಪರದ್ರವ್ಯ ಪರದ್ರೋಹ ಪರಾಙ್ಮುಖರು. ವೈಶ್ಯರು ವ್ಯಾಪಾರ, ಬಡ್ಡಿ ವ್ಯವಹಾರ, ಕೃಷಿ ಮುಂತಾದ ವಿಹಿತ ವೃತ್ತಿಯಲ್ಲಿದ್ದು ರಾಮಭಕ್ತಿ ಉಳ್ಳವರಾಗಿದ್ದರು. ಶೂದ್ರರು ಜ್ಞಾನಿಗಳ ಸೇವೆ ಮಾಡುತ್ತ ರಾಮ ರಾಮ ಎಂದು ಸದಾ ನಾಮೋಚ್ಚಾರಣ ಮಾಡುತ್ತಿದ್ದರು. ಪಾಮರ ಜನರೂ ಪಾಪವನ್ನು ಮನಸ್ಸಿನಲ್ಲಿ ಚಿಂತಿಸುತ್ತಿರಲಿಲ್ಲ. ದಾನ, ದಯಾ, ದಮ, ಪ್ರಿಯವಾಕ್ಯ, ಪರದ್ರವ್ಯದಲ್ಲಿ ಅಲೋಭ ಇಂಥ ಗುಣಗಳು ಅವರಲ್ಲಿದ್ದುವು. ಇವೆಲ್ಲಕ್ಕೂ ಕಾರಣ ರಾಜನಾದ ರತ್ನಗ್ರೀವನ ರಾಜ್ಯಭಾರ. 'ಅವನು ಪ್ರಜೆಗಳಿಂದ ಆರನೇ ಒಂದಂಶ ಸಂಪತ್ತನ್ನು ಸ್ವೀಕರಿಸುತ್ತಿದ್ದ. ಹೆಚ್ಚಿನದರಲ್ಲಿ ಲೋಭ ತೋರುತ್ತಿದ್ದಿಲ್ಲ.

ಅವನ ಪತ್ನಿ ವಿಶಾಲಕ್ಷಿ ಪತಿವ್ರತೆ, ಒಂದು ದಿನ ಅವಳ ಬಳಿಯಲ್ಲಿ ನುಡಿದ ರಾಜ 'ಪ್ರಿಯೆ, ಪ್ರಜಾಪಾಲನೆಯಲ್ಲಿ ಸಮರ್ಥರಾದ ಮಕ್ಕಳು ನಮಗಿದ್ದಾರೆ. ದೊಡ್ಡ ಪರಿವಾರವಿದೆ. ಚತುರಂಗ ಸೇನೆ ಇದೆ. ಮಹಾವಿಷ್ಣುವಿನ ಅನುಗ್ರಹದಿಂದ ನಿಮಗೇನೂ ಕಡಿಮೆಯಿಲ್ಲ, ಆದರೆ ಒಂದು ಮನೋರಥ ಅಪೂರ್ಣವಾಗಿಯೆ ಉಳಿದಿದೆ. ಏನೆಂದರೆ ನಾನೀಗ ಮುದುಕನಾಗಿದ್ದೇನೆ. ಮೈ ಸುಕ್ಕು ಹಿಡಿದಿದೆ ತಲೆ ನೆರೆತಿದೆ. ಆದರೆ ಇಂದಿಗೂ ಸಂಸಾರದಿಂದ ಬಿಡುಗಡೆ ಉಂಟು ಮಾಡಬಲ್ಲ ವಿಷ್ಣುಕ್ಷೇತ್ರ ಒಂದಕ್ಕೂ ಯಾತ್ರೆ ಮಾಡಲಾಗಲಿಲ್ಲ.

**ಯೋ ನರೋ ಜನ್ಮಪರ್ಯಂತಂ ಸ್ವೋದರಸ್ಯ ಪ್ರಪೂರಕಃ**
**ನ ಕರೋತಿ ಹರೇಃ ಪೂಜಾಂ ಸ ನರೋ ಗೋ ವೃಷಃ ಸ್ಮೃತಃ**

ಜನ್ಮ ಪರ್ಯಂತವೂ ತನ್ನ ಹೊಟ್ಟೆ ತುಂಬಿಕೊಳ್ಳುತ್ತಲೆ ಇದ್ದು ಹರಿಪೂಜೆಯನ್ನು ಮಾಡದ ಮಾನವನನ್ನು ಬಸವನೆಂದು ಅನ್ನುವರು.

ಅದರಿಂದ ಮಗನಿಗೆ ರಾಜ್ಯಭಾರವನ್ನು ವಹಿಸಿಕೊಟ್ಟು ತೀರ್ಥಯಾತ್ರೆಗೆ ಹೊರಡೋಣ.

ರಾಜನು ಹೀಗೆ ಸಂಕಲ್ಪಿಸಿ ಹರಿ ಧ್ಯಾನವನ್ನು ಮಾಡಿದ. ರಾತ್ರಿ ಕನಸ್ಸಿನಲ್ಲಿ ಒಬ್ಬ ಬ್ರಾಹ್ಮಣನನ್ನು ಕಂಡ. ಬೆಳಿಗ್ಗೆ ಎದ್ದು ಸಂಧ್ಯಾವಂದನಾದಿಗಳನ್ನು ಮಾಡಿ ಮಂತ್ರಿಗಳೊಂದಿಗೆ ಸಭೆಯಲ್ಲಿ ಕುಳಿತಿದ್ದಾಗ ಜಡೆನಾರುಡೆ ಕೌಪೀನ ದಂಡಗಳನ್ನು ಧರಿಸಿದ ಅನೇಕ ತೀರ್ಥಯಾತ್ರೆಯಿಂದ ಪವಿತ್ರವಾದ ಕೃಶ ಶರೀರ ಉಳ್ಳ ಓರ್ವ ತಪಸ್ವಿ ಅಸ್ಥಾನಕ್ಕೆ ಬಂದ. ರಾಜನು ಆತನಿಗೆ ತಲೆಬಾಗಿ ವಂದಿಸಿ ಅರ್ಘ್ಯಪಾದ್ಯ ಮುಂತಾದವುಗಳಿಂದ ಸತ್ಕರಿಸಿದ. 'ಮಹಾತ್ಮರೆ, ನಿಮ್ಮ ದರ್ಶನದಿಂದ ನಾನು ಪವಿತ್ರನಾದೆ. ಹೀಗೆ ದೀನರನ್ನು

ಕಾಪಾಡಲೆಂದೆ ನಿಮ್ಮಂಥ ಮಹಾತ್ಮರು ಮನೆಗೆ ಬರುತ್ತಾರೆ. ನಾನು ವೃದ್ಧ. ಸಂಸಾರದಿಂದ ಬಿಡುಗಡೆ ಹೊಂದುವ ಯತ್ನ ಮಾಡಬೇಕು, ಯಾವ ದೇವತೆಯನ್ನು ಯಾವ ತೀರ್ಥವನ್ನು ಇದಕ್ಕೆ ಸೇವಿಸಬೇಕು ? ತಾವು ಸಮಾಧಿಯಲ್ಲಿ ಧ್ಯಾನ ಮಾಡುವವರೂ ಹೌದು, ಎಲ್ಲ ತೀರ್ಥಯಾತ್ರೆಗಳನ್ನು ಮಾಡಿ ಪುಣ್ಯ ಸಂಪಾದಿಸಿದವರೂ ಹೌದು. ನಾನು ಶ್ರದ್ಧೆಯಿಂದ ತಮ್ಮಲ್ಲಿ ಕೇಳುತ್ತಿದ್ದೇನೆ, ತಾವು ಉಪದೇಶಿಸಬೇಕು.

**ಬ್ರಾಹ್ಮಣ :-** ರಾಜನೆ ಕೇಳು, ಸಂಸಾರ ತಾಪವನ್ನು ಕಳೆದುಕೊಳ್ಳಲು ಶ್ರೀರಾಮಚಂದ್ರನನ್ನೇ ಸೇವಿಸಬೇಕು. ಅವನು ಸಾಕ್ಷಾತ್ ಪುರುಷೋತ್ತಮ. ನಾನು ಅನೇಕ ತೀರ್ಥಕ್ಷೇತ್ರಗಳನ್ನು ಕಂಡಿದ್ದೇನೆ. ಅಯೋಧ್ಯೆ, ಸರಯೂ, ತಪತೀ, ಹರಿದ್ವಾರ, ಅವಂತಿ, ಕಾಂಚಿ ರೇವಾಸಾಗರ, ಸಂಗಮ, ಗೋಕರ್ಣ, ಧನುಷ್ಕೋಟಿ ಮಲ್ಲಿಕಾರ್ಜುನ ಬೆಟ್ಟ ಇವೆಲ್ಲವೂ ಮೋಕ್ಷದಾಯಕವಾಗಿವೆ. ಕಪ್ಪಾಗಿರಲಿ, ನಿರ್ಮಲವಾಗಿಯೆ ಇರಲಿ, ಎಲ್ಲಿಯ ನೀರು ಮೈಮೇಲೆ ತಾಗಿದ ಮಾತ್ರದಿಂದಲೆ ಪಾತಕವನ್ನು ಕಳೆಯುವುದೊ ಅಂಥ ತೀರ್ಥಗಳನ್ನು ನಾನು ಕಂಡಿದ್ದೇನೆ. ದ್ವಾರಾವತಿ ಅಂಥ ತೀರ್ಥಗಳಲ್ಲಿ ಒಂದು. ಗೋಮತೀ ನದಿ ಅಲ್ಲಿ ಹರಿಯುತ್ತದೆ. ಅಲ್ಲಿ ಮರಣ ಹೊಂದಿದರೆ ಮೋಕ್ಷ ದೊರೆಯುವುದೆಂದು ಶ್ರುತಿ ಹೇಳುತ್ತದೆ. ಅಲ್ಲಿ ವಾಸ ಮಾಡುವವರಿಗೆ ಕಲಿಯ ಬಾಧೆ ಇರುವುದಿಲ್ಲ. ಏಕೆಂದರೆ ಅಲ್ಲಿರುವ ಕಲ್ಲೂ ಚಕ್ರಚಿಹ್ನೆಯನ್ನು ಧರಿಸಿರುತ್ತದೆ. ಪಶುಪಕ್ಷಿ ಕೀಟಗಳೂ ಚಕ್ರಚಿಹ್ನೆ ಧರಿಸುತ್ತವೆ. ಮಾನವರೂ ಚಕ್ರಧಾರಿಗಳೆ. ಅಲ್ಲಿ ಸರ್ವಲೋಕ ಪಾಲಕನಾದ ತ್ರಿವಿಕ್ರಮನಿದ್ದಾನೆ. ಆ ಕ್ಷೇತ್ರವನ್ನು ಕಾಣಲು ನಾನು ಬಹು ಪುಣ್ಯ ಮಾಡಿರಬೇಕು. ನಾನು ಕುರುಕ್ಷೇತ್ರವನ್ನೂ ಕಂಡೆ. ಅಲ್ಲಿ ಎಲ್ಲ ಮಹಾ ಪಾಪಗಳನ್ನು ಕಳೆವ ಸ್ಯಮಂತ ಪಂಚಕವಿದೆ. ತಾರಕ ಮಂತ್ರವನ್ನು ಉಪದೇಶಿಸುವ ವಿಶ್ವನಾಥನ ವಾರಣಸಿಯನ್ನೂ ಕಂಡೆ. ಅಲ್ಲಿ ಮರಣ ಹೊಂದಿದ್ದರೆ ಕೈಲಾಸ ದೊರೆಯುವುದು. ಗಂಗೆ ಉತ್ತರವಾಹಿನಿಯಾಗಿರುವ ಮಣಿ ಕರ್ಣಿಕಾ ತೀರ್ಥವು ಮೋಕ್ಷದಾಯಕವಾಗಿದೆ. ಇಲ್ಲಿ ಜಡೆ, ಕುಂಡಲ, ಗಜ ಚರ್ಮಗಳನ್ನು ಧರಿಸಿದ ಶಿವಗಣಗಳಿವೆ. ಯಮನಿಗೆ ಶಾಸನವನ್ನು ಮಾಡುವ ಕಾಲಭೈರವನಿಲ್ಲಿದ್ದಾನೆ. ಅದರಿಂದ ಇಲ್ಲಿ ಮಾನವರ ಬಳಿಗೆ ಯಮನೆಂದೂ ಸುಳಿಯುವುದಿಲ್ಲ. ಹೀಗೆ ಅನೇಕ ತೀರ್ಥಗಳನ್ನು ನಾನು ಕಂಡಿದ್ದೇನೆ. ಆದರೆ ನೀಲಪರ್ವತದಲ್ಲಿ ನಾ ಕಂಡ ಅಚ್ಚರಿ ಇನ್ನೆಲೂ ಕಾಣಲು ಸಿಗಲಾರದು.

ನೀಲಪರ್ವತದಲ್ಲಿ ನಾನು ಕಂಡ ಅದ್ಭುತವನ್ನು ಹೇಳುತ್ತೇನೆ ಕೇಳು. ಗಂಗಾಸಾಗರ ಜಲದಿಂದ ಆ ಬೆಟ್ಟದ ಎದುರಿನ ನೆಲ ಪರಿಶುದ್ಧವಾಗಿದೆ. ಅಲ್ಲಿಯ ಬೇಡರಿಗೆ ನಾಲ್ಕು ಕೈಗಳಿದ್ದವು. ಧನುರ್ಧಾರಿಗಳಾಗಿದ್ದು ಹಣ್ಣುಗಡ್ಡೆಗಳನ್ನು ತಿಂದು ಬದುಕುತ್ತಿದ್ದರು. ಇದೇನು ವೈಕುಂಠ ಲೋಕದ ಪ್ರಜೆಗಳಂತೆ ಇವರೂ ಏಕೆ ನಾಲ್ಕು ಕೈಗಳಲ್ಲಿ ಶಂಖ, ಚಕ್ರ, ಗದಾ, ಶಾರ್ಙ್ಗಗಳನ್ನು ಹಿಡಿದು ವನಮಾಲೆ ಧರಿಸಿ ವಿಷ್ಣುಭಕ್ತರಾಗಿರುವರು? ಆಶ್ಚರ್ಯದಿಂದ ಅವರನ್ನೆ ಕೇಳಿದೆ 'ನಿಮಗೆ ಈ ನಾಲ್ಕು ತೋಳುಗಳು ಹೇಗೆ ಲಭಿಸಿದವು' ಎಂದು. ಅವರು ನನ್ನ ಅಜ್ಞಾನವನ್ನು ಕಂಡು ಪರಿಹಾಸ ಮಾಡತೊಡಗಿದರು. 'ಇವನು ಬ್ರಾಹ್ಮಣ ! ನೈವೇದ್ಯದ ಮಾಹಾತ್ಮ್ಯವೆ ಇವನಿಗಿನ್ನೂ ತಿಳಿದಿಲ್ಲ !' ನಾನು ತಿರುಗಿ ಕೇಳಿದೆ. 'ಅದು ಯಾವ ನೈವೇದ್ಯ ? ಯಾರ ನೈವೇದ್ಯ ?' ಅವರು ಹೇಳಿದರು.

**ಕಿರಾತರು :-** ಒಮ್ಮೆ ನಮ್ಮ ಒಬ್ಬ ಹುಡುಗ ನೇರಳೆ ಮುಂತಾದ ಹಣ್ಣುಗಳನ್ನು ತಿನ್ನುತ್ತ. ಆಟವಾಡುತ್ತ ಜತೆಯ ಹುಡುಗರೊಂದಿಗೆ ಸುಂದರವಾದ ಆ ಬೆಟ್ಟದ ತುದಿಯನ್ನೇರಿದ. ಅಲ್ಲಿ ಒಂದು ದೇವಸ್ಥಾನವಿದೆ. ಮರಕತ ಮಣಿ ಮುಂತಾದವುಗಳಿಂದಲೆ ನಿರ್ಮಿತವಾದುದರಿಂದ ಸೂರ್ಯನಂತೆ ಬೆಳಗುತ್ತ ಕತ್ತಲೆಯನ್ನು ಓಡಿಸುತ್ತಿದೆ. ಅಲ್ಲಿ ಏನಿರಬಹುದೆಂಬ ಕುತೂಹಲದಿಂದ ಹುಡುಗನು ಒಳಗೆ ಹೊಕ್ಕು ದೇವದಾನವರಿಂದ ಪೂಜಿಸಲ್ಪಡುತ್ತಿರುವ ಪುರುಷೋತ್ತಮನನ್ನು ಕಂಡ, ಕಿರೀಟ, ಹಾರ, ಕೇಯೂರ, ಕುಂಡಲ ಮುಂತಾದ ಒಡವೆಗಳನ್ನು ತೊಟ್ಟು, ಶಂಖ, ಚಕ್ರ, ಗದಾ, ಪದ್ಮ, ಶಾರ್ಙ್ಗ ಮುಂತಾದವುಗಳನ್ನು ಹಿಡಿದು ನಿಂತ ಆ ಪ್ರಭುವನ್ನು ನಾರದಾದಿ ಮುನಿಗಳು ಅರ್ಚಿಸುತ್ತಿದ್ದರು. ಸಂಕೀರ್ತನ ನೃತ್ಯಗಳಿಂದ ಆರಾಧಿಸುತ್ತಿದ್ದರು. ಆನಂದದಿಂದ ನಗುತ್ತಿದ್ದರು. ಅವರು ಧೂಪ ದೀಪ ನೈವೇದ್ಯ ನೀರಾಜನಗಳನ್ನು ಮಾಡಿ ಹೊರಟು ಹೋದರು. ಹುಡುಗನು ಎಲ್ಲವನ್ನೂ ಕಂಡು ದೈವಾತ್ ಅಲ್ಲಿ ಬಿದ್ದಿದ್ದ ನೈವೇದ್ಯದ ಒಂದು ಅಗುಳನ್ನು ಎತ್ತಿ ಭಕ್ಷಣ ಮಾಡಿದ. ಒಡನೆ ಶಂಖ ಚಕ್ರಾದಿಗಳನ್ನು ಧರಿಸಿದ ಚತುರ್ಭುಜಾಕಾರವನ್ನು ಪಡೆದ. ಇದನ್ನು ಕೇಳಿದಬಳಿಕ ನಾವೂ ಅವನಂತೆ ಬೆಟ್ಟದ ಮೇಲೆ ದೇವದೇವನ ದರ್ಶನ ನೈವೇದ್ಯ ಭಕ್ಷಣಗಳನ್ನು ಮಾಡಿ ಚತುರ್ಭುಜರಾದೆವು. ನೀನೂ ಹಾಗೆ ಮಾಡು, ಚತುರ್ಭುಜನಾಗು.

**ಬ್ರಾಹ್ಮಣ :-** ಬೇಡರ ಈ ಮಾತನ್ನು ಕೇಳಿ ಇದೊಂದು ಅದ್ಭುತ ಎಂದುಕೊಂಡು ಆನಂದಪಟ್ಟೆ. ಗಂಗಾಸಾಗರ ಸಂಗಮದಲ್ಲಿ ಸ್ನಾನ ಮಾಡಿ ಬೆಟ್ಟದ ಮೇಲೆ ಏರಿದೆ. ಅಲ್ಲಿ ದೇವಾದಿ ವಂದಿತನಾದ ಆ ದೇವನನ್ನು ವಂದಿಸಿ ನೈವೇದ್ಯ ಭಕ್ಷಣವನ್ನೂ ಮಾಡಿ ಚತುರ್ಭುಜನಾದೆ. ನನಗಿನ್ನು ಸಂಸಾರ ಭಯವಿಲ್ಲ. ರಾಜನೇ, ನೀನೂ ಆ ನೀಲಪರ್ವತದ ಮೇಲೇರಿ ಪುರುಷೋತ್ತಮನನ್ನು ಸಂದರ್ಶಿಸಿ ಧನ್ಯನಾಗು. ಗರ್ಭವಾಸ ದುಃಖವಿನ್ನಿಲ್ಲದಂತೆ ಮಾಡಿಕೊಳ್ಳು.

ಇದನ್ನು ಕೇಳಿ ರತ್ನಗ್ರೀವ ರಾಜನು ತೀರ್ಥಯಾತ್ರೆ ಮಾಡುವ ವಿಧಾನವನ್ನು ಕೇಳಿದ. ತೀರ್ಥಯಾತ್ರೆಯ ಸಂಪೂರ್ಣ ಫಲ ದೊರೆಯಲು ಅದನ್ನು ಹೇಗೆ ಆಚರಿಸಬೇಕು ? ಇದಕ್ಕೆ ಬ್ರಾಹ್ಮಣನು ಹೀಗೆ ಉತ್ತರಿಸಿದ.

**ಬ್ರಾಹ್ಮಣ :-** ಮೊದಲು ಮೈ ಸುಕ್ಕು ಹಿಡಿದ, ತಲೆ ಕೂದಲು ನರೆತ ಮುದುಕ ನಿರಲಿ, ಯೌವನದಿಂದ ಕೂಡಿದವನೆ ಇರಲಿ, ಮರಣ ಅನಿವಾರ್ಯ ಎಂಬುದನ್ನು ತಿಳಿದುಕೊಂಡು ಹರಿಯನ್ನು ಶರಣು ಹೋಗಬೇಕು. ಅವನ ಗುಣಕೀರ್ತನ ಶ್ರವಣವಂದನ ಅರ್ಚನಗಳಲ್ಲಿಯೆ ಮನಸ್ಸಿಡಬೇಕು. ಹೆಣ್ಣು, ಹೊನ್ನು ಮುಂತಾದವುಗಳಲ್ಲಿ ವಿರಕ್ತಿ ಹೊಂದಬೇಕು. ಅವೆಲ್ಲವೂ ನಶ್ವರ, ಕ್ಷಣಿಕ, ಅಲ್ಪ ಸುಖದೊಂದಿಗೆ ಬಹುದುಃಖವನ್ನೇ ಕೊಡುವಂತಹದು ಎಂದು ತಿಳಿಯಬೇಕು. ಸಾಧು ಜನರ ಸಂಗದಿಂದ ಪಾಪವನ್ನು ಕಳೆದುಕೊಂಡು ಹರಿಯನ್ನು ತಿಳಿಯಲು ಪ್ರಯತ್ನಿಸಬೇಕು. ತೀರ್ಥಕ್ಷೇತ್ರಗಳಲ್ಲಿ ಅಂಥ ಸಾಧು ಜನರು ರಾಮಭಕ್ತರು ಸಿಗುತ್ತಾರೆ. ಅವರ ದರ್ಶನವೆ ಪಾಪರಾಶಿಗಳನ್ನು ಬೆಂಕಿಯಂತೆ ಸುಡುತ್ತದೆ. ಅದಕ್ಕಾಗಿ ತೀರ್ಥಯಾತ್ರೆ ಮಾಡಬೇಕು.

ತೀರ್ಥಯಾತ್ರೆ ಮಾಡುವವನು ಮೊದಲಿಗೆ ಮೂರು ಹರದಾರಿಗಳಷ್ಟು ದೂರ ಪ್ರಯಾಣ ಮಾಡಿ ಪವಿತ್ರ ಜಲದಲ್ಲಿ ಸ್ನಾನ ಮಾಡಿ, ಕ್ಷೌರ ಮಾಡಿಸಿಕೊಳ್ಳಬೇಕು.

**ಮನುಷ್ಯಾಣಾಂ ಚ ಪಾಪಾನಿ ತೀರ್ಥಾಣಿ ಪ್ರತಿಗಚ್ಛತಾಂ ।**
**ಕೇಶಮಾಶ್ರಿತ್ಯ ತಿಷ್ಠಂತಿ ತಸ್ಮಾತ್ತದ್ವಪನಂ ಚರೇತ್ ॥**

ತೀರ್ಥಯಾತ್ರೆಗೆ ಹೊರಟವರ ಪಾಪಗಳು ಅವರ ತಲೆ ಕೂದಲನ್ನು ಆಶ್ರಯಿಸಿ ಕೊಂಡಿರುವುದರಿಂದ ಅವನ್ನು ಕತ್ತರಿಸಿಕೊಳ್ಳಬೇಕು.

ಬಳಿಕ ದಂಡ ಕಮಂಡಲು ಕೃಷ್ಣಾಜಿನ ಧರಿಸಬೇಕು. ಕೈಕಾಲುಗಳು, ಮನಸ್ಸು ವಿದ್ಯೆ, ತಪಸ್ಸು, ಕೀರ್ತಿ ಇವೆಲ್ಲವೂ ಉತ್ತಮವಾಗಿರಬೇಕು.

**ಹರೇ ಕೃಷ್ಣ ಹರೇ ಕೃಷ್ಣ ಭಕ್ತವತ್ಸಲ ಗೋಪತೇ ।**
**ಶರಣ್ಯ ಭಗವನ್ ವಿಷ್ಣೋ ಮಾಂ ಪಾಹಿ ಬಹುಸಂಸೃತೇಃ ॥**

ಹೇ ಹರಿಯೆ, ಕೃಷ್ಣ, ಭಕ್ತವತ್ಸಲ, ಗೋಪಾಲಕ, ಶರಣಾಗತ ರಕ್ಷಕ, ಭಗವಂತ, ವಿಷ್ಣು ಬಹುವಾದ ಈ ಸಂಸಾರದಿಂದ ನನ್ನನ್ನು ಕಾಪಾಡು.

ಹೀಗೆ ಹೇಳುತ್ತ ಹರಿಯನ್ನು ಸ್ಮರಿಸುತ್ತ ಕಾಲು ನಡಿಗೆಯಿಂದ ತೀರ್ಥಕ್ಷೇತ್ರಕ್ಕೆ ಹೋಗಬೇಕು.

ವಾಹನದಿಂದ ಯಾತ್ರೆ ಮಾಡಿದರೆ ಅರ್ಧ ಫಲ. ಪಾದರಕ್ಷೆ ತೊಟ್ಟಿದ್ದರೆ ಕಾಲು ಭಾಗ ಫಲ. ಎತ್ತಿನ ಬಂಡಿಯಲ್ಲಿ ಯಾತ್ರೆ ಮಾಡಿದರೆ ಗೋವಧೆಯ ಪಾಪ ತಗಲುವುದು. ವ್ಯಾಪಾರ ವ್ಯವಹಾರಗಳಿಗಾಗಿ ತೀರ್ಥಯಾತ್ರೆ ಮಾಡಿದರೆ ಮೂರನೆ ಒಂದಂಶ ಫಲ. ಇನ್ನೊಬ್ಬರ ಆಳಾಗಿ ಹೋದರೆ ಎಂಟನೆ ಒಂದಂಶ ಫಲ. ಇಚ್ಛೆಯಿಲ್ಲದೆ ಯಾತ್ರೆ ಮಾಡಿದರೆ ಅರ್ಧ ಫಲ. ತೀರ್ಥಯಾತ್ರೆಯನ್ನು ಯಾವ ವಿಧದಿಂದ ಮಾಡಿದರೂ ಪಾಪ ಪರಿಹಾರ ಆಗಿಯೆ ಆಗುತ್ತದೆ. ವಿಧಿವತ್ತಾಗಿ ಮಾಡಿದರೆ ವಿಶೇಷ ಫಲ. ತೀರ್ಥಕ್ಷೇತ್ರಕ್ಕೆ ಹೋದ ಮೇಲೆ ಸಾಧುಸಂತರನ್ನು ಕಂಡು ನಮಿಸಬೇಕು. ಅವರ ಸೇವೆ ಮಾಡಬೇಕು. ಅವರ ಮೂಲಕ ಪುರುಷೋತ್ತಮನಲ್ಲಿ ಭಕ್ತಿ ಲಭಿಸುತ್ತದೆ.

ಮಹಾರಾಜ, ನೀನೂ ಹೀಗೆ ವಿಧಿವತ್ತಾಗಿ ತೀರ್ಥಯಾತ್ರೆ ಮಾಡು. ಅದರಿಂದ ಹರಿ ಸಂತುಷ್ಟನಾಗಿ ಭಕ್ತಿಯನ್ನು ಕೊಡುವನು. ಆಗ ಕ್ಷಣ ಮಾತ್ರದಲ್ಲಿ ಸಂಸಾರ ಕಳೆಯುವುದು.

**ಸುಮತಿ :-** ಬ್ರಾಹ್ಮಣನ ಈ ಮಾತನ್ನು ಕೇಳಿ ರತ್ನಗ್ರೀವನು ಅವನ ಕಾಲುಗಳಿಗೆ ನಮಿಸಿ ತೀರ್ಥಯಾತ್ರೆ ಮಾಡಲು ಬಹು ಉತ್ಸುಕನಾದ. ಎಲ್ಲ ಪ್ರಜೆಗಳನ್ನೂ ತನ್ನೊಡನೆ ಕರೆದೊಯ್ಯಲು ಬಯಸಿದ. ಮಂತ್ರಿಯನ್ನು ಕರೆದು ಹೇಳಿದ 'ಅಮಾತ್ಯ, ನನ್ನಾಜ್ಞೆಯನ್ನು ಪ್ರಜೆಗಳಿಗೆ ತಿಳಿಸು. ಪುರುಷೋತ್ತಮನ ಪಾದಕಮಲ ದರ್ಶನಕ್ಕಾಗಿ ಎಲ್ಲರೂ ನನ್ನ ಜತೆಗೆ ಹೊರಟು ಬರಲಿ. ಈ ಆಜ್ಞೆಯನ್ನು ಉಲ್ಲಂಘಿಸುವ ಪಾಪಿಗಳಿಗೆ ಯಮನಂತೆ ಘೋರ ಶಿಕ್ಷೆ ನೀಡುತ್ತೇನೆ. ಆ ಪಾಪಿಗಳು ಮಕ್ಕಳೆ ಇರಲಿ ಬಂಧುಗಳೆ ಇರಲಿ, ಅವರು ನನಗೆ ಬೇಡ. ಅಮೇಧ್ಯ ತಿನ್ನುವ ಹಂದಿಗಳ ಜನ್ಮ ಅವರದು. ಆ ಪುರುಷೋತ್ತಮನ ನಾಮ ಮಾತ್ರವೂ ಎಲ್ಲರನ್ನೂ ಪವಿತ್ರಗೊಳಿಸುತ್ತದೆ.

ಇದನ್ನು ಕೇಳಿ ಮಂತ್ರಿಯು ಸಂತೋಷದಿಂದ ಆನೆಯ ಮೇಲೆ ತಮ್ಮಟೆ ಹೊಡೆಸಿ ರಾಜಾಜ್ಞೆಯ ಘೋಷಣೆ ಮಾಡಿಸಿದನು. ''ಪ್ರಜೆಗಳೆಲ್ಲರೂ ಮಹಾರಾಜನ ಜತೆಯಲ್ಲಿ ನೀಲಗಿರಿಯ ಪುರುಷೋತ್ತಮನ ದರ್ಶನ ಮಾಡಲು ಹೊರಡಿರಿ.

**ಕ್ರಿಯತಾಂ ಸರ್ವಸಂಸಾರ ಸಾಗರೋ ಗೋಷ್ಪದಂ ಪುನಃ ।**
**ಭೂಷ್ಯತಾಂ ಶಂಖ ಚಕ್ರಾದಿ ಚಿಹ್ನೈಃ ಸ್ವಸ್ವತನುರ್ನರೈಃ ॥**

ಮಾನವರು ತಮ್ಮ ತಮ್ಮ ಶರೀರಗಳನ್ನು ಶಂಖ ಚಕ್ರಾದಿ ಚಿಹ್ನೆಗಳಿಂದ ಅಲಂಕರಿಸಿಕೊಂಡು ಸಂಸಾರ ಸಾಗರವನ್ನು ದಾಟಲು ಅದನ್ನು ಹಸುವಿನ ಹೆಜ್ಜೆಯಷ್ಟು ಸಣ್ಣದಾಗಿ ಮಾಡಿಕೊಳ್ಳಿ.''

ಪ್ರಜೆಗಳು ಈ ಘೋಷಣೆಯನ್ನು ಕೇಳಿ ಸಂತೋಷದಿಂದ ಯಾತ್ರೆಗೆ ಹೊರಟು ನಿಂತರು. ಬ್ರಾಹ್ಮಣರು ರಾಜನನ್ನು ಆಶೀರ್ವದಿಸುತ್ತ ಶಿಷ್ಯ ಪರಿವಾರದೊಂದಿಗೆ ಹೊರಟರು. ಹಾಗೆಯೆ ಕ್ಷತ್ರಿಯರು ವೈಶ್ಯರು ಶೂದ್ರರು ಅಗಸರು ಮೋಚಿಗಳು ಚಂಡಾಲ ಕಿರಾತ ಮುಂತಾದವರೂ ರಾಜನನ್ನು ಹೊಗಳುತ್ತ ಹೊರಟರು. ರಾಜನು ಪ್ರಾತಃ ಸಂಧ್ಯಾದಿಕರ್ಮಗಳನ್ನು ಮುಗಿಸಿ ಆ ತಪಸ್ವಿ ಬ್ರಾಹ್ಮಣನನ್ನು ಕರೆಸಿಕೊಂಡು ಅವನನುಜ್ಞೆಪಡೆದು ರಾಜಧಾನಿಯಿಂದ ಹೊರಟನು. ಪ್ರಜಾಪರಿವಾರದೊಂದಿಗೆ ನಡೆಯುತ್ತಿದ್ದ ಅವನು ನಕ್ಷತ್ರಗಳ ನಡುವೆ ಹೊಳೆವ ಚಂದ್ರನಂತಿದ್ದನು. ಮೂರು ಹರಿದಾರಿ ನಡೆದು ವಿಧಿವತ್ತಾಗಿ ಕ್ಷೌರಮಾಡಿಸಿಕೊಂಡು, ದಂಡ ಕಮಂಡಲು ಕೃಷ್ಣಾಜಿನ ಧರಿಸಿ, ಕಾಮ ಕ್ರೋಧ ರಹಿತವಾದ ಮನಸ್ಸಿನಲ್ಲಿ ಹರಿಯನ್ನು ಧ್ಯಾನಿಸುತ್ತ, ದುಂದುಭಿ ಭೇರಿ ತಮಟೆ ಶಂಖವೀಣೆ ಮುಂತಾದವುಗಳ ಧ್ವನಿಯೊಂದಿಗೆ, 'ಪುರುಷೋತ್ತಮ, ದೇವತೆಗಳೊಡೆಯ, ನಿನಗೆ ಜಯವಾಗಲಿ ! ನಿನ್ನ ದರ್ಶನ ನೀಡು' ಎಂಬ ಜನರ ಪ್ರಾರ್ಥನೆಯೊಂದಿಗೆ, ನೀಲಪರ್ವತ ಯಾತ್ರೆಯನ್ನು ಕೈಗೊಂಡನು ಮಹಾರಾಜ ರತ್ನಗ್ರೀವ.

**ಸುಮತಿ :-** ಮಹಾ ಭಾಗ್ಯಶಾಲಿಗಳಾದ ವಿಷ್ಣುಭಕ್ತರು ಹಾಡುವ ಕೃಷ್ಣಗೀತೆಗಳನ್ನು ಆಲಿಸುತ್ತ, ದಾರಿಯಲ್ಲಿ ಸಿಕ್ಕಿದ ಅನೇಕ ತೀರ್ಥಗಳ ಮಹಿಮೆಯನ್ನು ಬ್ರಾಹ್ಮಣನ ಬಾಯಿಂದ ಕೇಳಿ ತಿಳಿಯುತ್ತ ದೀನದಲಿತರಿಗೆ ದಾನ ನೀಡುತ್ತ ಮಹಾರಾಜನು ಮುನ್ನಡೆದ, ಆಕರ್ಷಕ ಕೃಷ್ಣಕಥೆಗಳಿಂದಲೆ ದಾರಿಯಲ್ಲಿ ಅವನ ಮನಸ್ಸಿಗೆ ಉಲ್ಲಾಸ ಸಿಗುತ್ತಿತ್ತು.

ರಾಜನು ಮುಂದೆ ಹೋಗುತ್ತಿದ್ದಂತೆ ಪವಿತ್ರವಾದ ಗಂಡಕೀನದಿ ಸಿಕ್ಕಿತು. ಅದರ ನೀರು ಮುನಿಗಳ ಅಂತಃಕರಣದಂತೆ ನಿರ್ಮಲ. ಕಲ್ಲು ಚಕ್ರಚಿಹ್ನೆಯಿಂದ ಕೂಡಿದ ಶಾಲಗ್ರಾಮಶಿಲೆ. ತೀರವೂ ಅನೇಕ ಮುನಿಜನ ಸಮೂಹಗಳಿಂದ ಶೋಭಿಸುವ ನೆಲ. ಸಾರಸದಂಥ ಹಕ್ಕಿಗಳ ಕೂಗನ್ನು ಅಲ್ಲಿ ಕೇಳಬಹುದು. ರಾಜನು ಇದನ್ನೆಲ್ಲ ಕಂಡು ಅನೇಕ ತೀರ್ಥಗಳ ಪರಿಚಯವಿರುವ ಆ ಬ್ರಾಹ್ಮಣನಲ್ಲಿ ಕೇಳಿದ. 'ಇದು ಯಾವ ನದಿ ?' ಆತನೆಂದ, 'ಮಹಾರಾಜ, ಇದು ಪವಿತ್ರವಾದ ಗಂಡಕೀ ನದಿ. ಇದರ ದರ್ಶನದಿಂದಲೇ ಮಾನಸ ಪಾಪಗಳು ಪರಿಹಾರವಾಗುತ್ತವೆ. ಸ್ನಾನದಿಂದ ಕಾಯಿಕ ಕರ್ಮಜನ್ಯ ಪಾಪಗಳು ದೂರವಾಗುತ್ತವೆ. ಪಾನದಿಂದ ವಾಚಿಕ ಪಾಪಗಳು ಹಿಂಗುತ್ತವೆ. ಹಿಂದೆ ಪ್ರಜಾಪತಿಯು ತಾನು ಸೃಷ್ಟಿಸಿದ ಪ್ರಜೆಗಳೆಲ್ಲ ಪಾಪದಿಂದ ದೂರವಿದ್ದುದನ್ನು ಕಂಡು ತನ್ನ ಗಂಡ

(ಕಪೋಲ) ಜಲದಿಂದ ಈ ನದಿಯನ್ನು ಸೃಜಿಸಿದನಂತೆ, ಇದರ ಸ್ಪರ್ಶದಿಂದ ಗರ್ಭವಾಸ ಭಯ ದೂರವಾಗುತ್ತದೆ. ಇಲ್ಲಿಯ ಶಿಲೆಗಳು ಚಕ್ರಚಿಹ್ನೆಯಿಂದ ಅಲಂಕೃತವಾಗಿದ್ದು ಭಗವಂತನ ಪ್ರತೀಕಗಳೆನಿಸಿವೆ.

**ಶಿಲಾಂ ಸಂಪೂಜಯೇದ್ಯಸ್ತು ನಿತ್ಯಂ ಚಕ್ರಯುತಾಂ ನರಃ ।**
**ನ ಜಾತುಸ ಜನನ್ಯಾ ವೈ ಜಠರಂ ಸಮುಪಾವಿಶೇತ್ ॥**

ಯಾರು ನಿತ್ಯವೂ ಶಾಲಗ್ರಾಮ ಶಿಲೆಯನ್ನು ಪೂಜಿಸುವರೊ ಅವರು ಎಂದೂ ತಿರುಗಿ ಮಾತೃಗರ್ಭವನ್ನು ಪ್ರವೇಶಿಸುವುದಿಲ್ಲ. ಶಾಲಗ್ರಾಮ ಪೂಜೆಮಾಡುವವನು ಆಚಾರವಂತನಾಗಿರಬೇಕು. ದಂಭ, ಲೋಭಗಳನ್ನು ಬಿಟ್ಟಿರಬೇಕು. ಪರಸ್ತ್ರೀ ಪರದ್ರವ್ಯ ವಿಮುಖನಾಗಿರಬೇಕು. ದ್ವಾರಕೆಯ ಚಕ್ರಾಂಕ ಶಿಲೆ, ಗಂಡಕಿಯ ಶಾಲಗ್ರಾಮ ಶಿಲೆ ಇವೆರಡೂ ನೂರುಜನ್ಮಗಳ ಪಾಪವನ್ನು ಒಂದು ಕ್ಷಣದಲ್ಲಿ ಓಡಿಸುತ್ತವೆ. ಶಾಲಗ್ರಾಮತೀರ್ಥವನ್ನು ಸೇವಿಸಿದರೆ ಸಾವಿರ ಪಾಪಗಳನ್ನು ಮಾಡಿದ ಮನುಷ್ಯನೂ ಶುದ್ಧನಾಗುತ್ತಾನೆ.

**ಬ್ರಾಹ್ಮಣಃ ಕ್ಷತ್ರಿಯೋ ವೈಶ್ಯಃ ಶೂದ್ರೋ ವೇದಪಥಿ ಸ್ಥಿತಃ ।**
**ಶಾಲಗ್ರಾಮಂ ಪೂಜಯಿತ್ವಾ ಗೃಹಸ್ಥೋ ಮೋಕ್ಷಮಾಪ್ನುಯಾತ್ ॥**
**ನ ಜಾತು ವೈ ಸ್ತ್ರಿಯಾ ಕಾರ್ಯಂ ಶಾಲಗ್ರಾಮಸ್ಯ ಪೂಜನಂ ॥**

ವೇದಮಾರ್ಗದಲ್ಲಿರುವ ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರರು ಶಾಲಗ್ರಾಮ ಪೂಜೆಯಿಂದ ಮನೆಯಲ್ಲಿದ್ದೇ ಮೋಕ್ಷಸಾಧನೆ ಮಾಡಿಕೊಳ್ಳಬಹುದು. ಸ್ತ್ರೀಯರು ಎಂದೂ ಶಾಲಗ್ರಾಮಪೂಜೆ ಮಾಡಕೂಡದು.

ವಿಧವೆ ಇರಲಿ, ಸುಮಂಗಲಿಯೆ ಇರಲಿ ಸ್ತ್ರೀಯಾದವಳು ಮೋಹದಿಂದ ಶಾಲಗ್ರಾಮ ಸ್ಪರ್ಶ ಮಾಡಿದರೆ ಅವಳ ಪುಣ್ಯವೆಲ್ಲ ನಶಿಸುತ್ತದೆ. ನರಕ ಸಿಗುತ್ತದೆ. ಹೆಣ್ಣು ತನ್ನ ಕೈಯಿಂದ ಶಾಲಗ್ರಾಮ ಶಿಲೆಯ ಮೇಲೇರಿಸಿದ ಹೂ ಎಲ್ಲಕ್ಕಿಂತ ಹೆಚ್ಚಿನ ಪಾಪಕ್ಕೆ ಸಾಧನವಾಗುತ್ತದೆ. ಗಂಧ ವಿಷದಂತಾಗುತ್ತದೆ. ಕುಂಕುಮಕೇಸರಿ ವಜ್ರಾಯುಧ ದಂತಾಗುತ್ತದೆ. ನೈವೇದ್ಯ ಕಾಲಕೂಟದಂತಾಗುತ್ತದೆ.

**ತುಲಸೀ ಚಂದನಂ ವಾರಿ ಶಂಖೋ ಘಂಟಾಥ ಚಕ್ರಕಂ ।**
**ಶಿಲಾ ತಾಮ್ರಸ್ಯ ಪಾತ್ರಂ ತು ವಿಷ್ಣೋರ್ನಾಮ ಪದಾಮೃತಂ ॥**

**ಪದಾಮೃತಂ ತು ನವಭಿಃ ಪಾಪರಾಶಿ ಪ್ರದಾಹಕಂ ।**
**ವದಂತಿ ಮುನಯಃ ಶಾಂತಾಃ ಸರ್ವಶಾಸ್ತ್ರಾರ್ಥಕೋವಿದಾಃ ॥**

ತುಳಸಿ, ಗಂಧ, ನೀರು ಶಂಖ, ಘಂಟೆ, ಚಕ್ರಾಂಕ, ಶಾಲಗ್ರಾಮ, ತಾಮ್ರ ಪಾತ್ರೆ, ವಿಷ್ಣುನಾಮರೂಪವಾದ ಅಮೃತಮಯ ಶಬ್ದಗಳು ಇವು ಒಂಭತ್ತು ಸೇರಿದಾಗ ಸಿಗುವ ವಿಷ್ಣು ಪಾದದೋಕವು ಎಲ್ಲ ಪಾಪ ರಾಶಿಯನ್ನು ಸುಡಬಲ್ಲುದೆಂದು ವಿಷ್ಣುಭಕ್ತರಾದ ಸರ್ವ ಶಾಸ್ತ್ರಾರ್ಥ ಕೋವಿದರಾದ ಮುನಿಗಳು ಹೇಳುತ್ತಾರೆ.

ಶಾಲಗ್ರಾಮ ತೀರ್ಥದ ಒಂದೊಂದು ಬಿಂದುವಿನಿಂದಲೂ ಎಲ್ಲ ತೀರ್ಥಸ್ನಾನದ ಮತ್ತು ಎಲ್ಲ ಯಾಗಗಳ ಫಲ ದೊರಕುವುದು.

**ಶಾಲಗ್ರಾಮ ಶಿಲಾ ಯತ್ರ ಪೂಜ್ಯತೇ ಪುರುಷೋತ್ತಮೈಃ ।**
**ತತ್ರ ಯೋಜನಮಾತ್ರಂ ತು ತೀರ್ಥಕೋಟಿ ಸಮನ್ವಿತಂ ॥**

ಎಲ್ಲಿ ಮಹಾತ್ಮರು ಶಾಲಗ್ರಾಮ ಶಿಲೆಯನ್ನು ಪೂಜಿಸುವರೊ ಅಲ್ಲಿ ಯೋಜನ ದೂರದವರೆಗೂ ಕೋಟಿತೀರ್ಥಗಳಿವೆ.

**ಶಾಲಗ್ರಾಮಾಃ ಸಮಾಃ ಪೂಜ್ಯಾಃ ಸಮೇಷು ದ್ವಿತೀಯಂ ನಹಿ ।**
**ವಿಷಮಾ ಏವ ಪೂಜ್ಯಂತೆ ವಿಷಮೇಷು ತ್ರಯಂ ನಹಿ ॥**

ಶಾಲಗ್ರಾಮವನ್ನು ಸಮ ಸಂಖ್ಯೆಯಲ್ಲಿ ಪೂಜಿಸಬಹುದು. ಆದರೆ ಅದರಲ್ಲಿ ಎರಡನ್ನು ಪೂಜಿಸಬಾರದು. ವಿಷಮ ಸಂಖ್ಯೆಯಲ್ಲಿ ಪೂಜಿಸಬಹುದು. ಆದರೆ ಅದರಲ್ಲಿ ಮೂರನ್ನು ಪೂಜಿಸಬಾರದು.

**ದ್ವಾರಾವತೀ ಭವಂ ಚಕ್ರಂ ತಥಾ ವೈ ಗಂಡಕೀಭವಂ ।**
**ಉಭಯೋಃ ಸಂಗಮೋ ಯತ್ರ ತತ್ರ ಗಂಗಾ ಸಮುದ್ರಗಾ ॥**

ಎಲ್ಲಿ ದ್ವಾರಕೆಯ ಚಕ್ರಾಂಕ, ಗಂಡಕಿಯ ಶಾಲಗ್ರಾಮ, ಇವುಗಳೆರಡರ ಸಂಗಮವಿದೆಯೊ ಅಲ್ಲಿ ಗಂಗಾ ಸಾಗರ ಸಂಗಮವಿದ್ದಂತೆ.

**ರೂಕ್ಷಾಃ ಕುರ್ವಂತಿ ಪುರುಷಾನ್ ಆಯುಃ ಶ್ರೀ ಕೀರ್ತಿವರ್ಜಿತಾನ್ ।**
**ತಸ್ಮಾತ್ ಸ್ನಿಗ್ಧಾ ಮನೋಹಾರಿ ರೂಪಿಣೋ ದದತಿ ಶ್ರಿಯಂ ॥**

ದೊರಗುಮೈಯ ಶಾಲಗ್ರಾಮಗಳ ಪೂಜೆಯಿಂದ ಆಯುಸ್ಸು ಸಂಪತ್ತು ಕೀರ್ತಿಗಳು ನಶಿಸುತ್ತವೆ. ನುಣ್ಣಗೆ ಹೊಳೆವ ಸುಂದರಾಕಾರದ ಶಾಲಗ್ರಾಮ ಪೂಜೆಯಿಂದ ಸಂಪತ್ತು ಹೆಚ್ಚುವುದು.

ಮರಣಕಾಲದಲ್ಲಿ ನಾಲಗೆಯಲ್ಲಿ ಹರಿನಾಮ, ಎದೆಯಮೇಲೆ ಅಥವಾ ಬಳಿಯಲ್ಲಿ ಶಾಲಗ್ರಾಮ ಶಿಲೆ ಇವು ಪುಣ್ಯವಂತರಿಗೆ ಮಾತ್ರ ದೊರೆಯುತ್ತದೆ. ಮನಸ್ಸಿನಲ್ಲಿ ಶಾಲಗ್ರಾಮದ ಸ್ಮರಣೆ ಬಂದರೆ ಮುಕ್ತಿಯೆ ದೊರೆಯುತ್ತದೆ.

ಹಿಂದೆ ಭಗವಂತನು ಅಂಬರೀಷರಾಜನಿಗೆ ಹೇಳಿದ ಮಾತು -

**'ಬ್ರಾಹ್ಮಣಾಃ ನ್ಯಾಸಿನಃ ಸ್ನಿಗ್ಧಾ ಶಾಲಗ್ರಾಮ ಶಿಲಾಸ್ತಥಾ**
**ಸ್ವರೂಪ ತ್ರಿತಯಂ ಮಹ್ಯಂ ಏತದ್ಧಿ ಕ್ಷಿತಿ ಮಂಡಲೇ**

ಬ್ರಾಹ್ಮಣರು ಸನ್ಯಾಸಿಗಳು ನುಣ್ಣಗಿರುವ ಶಾಲಗ್ರಾಮಗಳು ಇವು ಮೂರು ನನಗೆ ಭೂಮಂಡಲದಲ್ಲಿರುವ ರೂಪಗಳು. ಪಾಪಿಗಳ ಪಾಪ ನಾಶಕ್ಕಾಗಿಯೆ ಈ ಮೂರು ರೂಪಗಳನ್ನು ನಾನು ಧರಿಸಿದ್ದೇನೆ. ಶಾಲಗ್ರಾಮ ಶಿಲೆಯನ್ನು ನಿಂದಿಸುವವರಿಗೆ ಕುಂಭೀಪಾಕ ನರಕ ಸಿಗುವುದು. ಶಾಲಗ್ರಾಮಾರ್ಚನೆಯನ್ನು ತಡೆಯುವ ಮೂರ್ಖನ ತಂದೆತಾಯಿಗಳೂ ಬಂಧುವರ್ಗದವರೂ ನರಕಭಾಗಿಗಳಾಗುವರು. ಶಾಲಗ್ರಾಮಾರ್ಚನೆ ಮಾಡೆಂದು ಬಂಧು ಮಿತ್ರರಿಗೆ ಹೇಳುವವನೂ ತನ್ನ ಪೂರ್ವಿಕರನ್ನು ವೈಕುಂಠಕ್ಕೆ ಕಳಿಸಬಲ್ಲನು.

ಶಾಲಗ್ರಾಮ ಮಹಿಮೆಯ ವಿಷಯದಲ್ಲಿ ಒಂದು ಇತಿಹಾಸವಿದೆ.

ಹಿಂದೆ ಕೀಟವೆಂಬ ಅಧರ್ಮಮಯವಾದ ದೇಶದಲ್ಲಿ ಶಬರನೆಂಬ ಒಬ್ಬ ಚಂಡಾಲನಿದ್ದ. ಆತ ಬಿಲ್ಲುಬಾಣಗಳನ್ನು ಹಿಡಿದು ಸಂಚರಿಸುತ್ತ ಯಾತ್ರಿಕರನ್ನು ಕೊಂದು ಅವರಸೊತ್ತನ್ನು ಅಪಹರಿಸುತ್ತಿದ್ದ. ವಿಷಯುಕ್ತವಾದ ಬಾಣಗಳಿಂದ ಅವನು ಕೊಂದ ಪ್ರಾಣಿಗಳ ಸಂಖ್ಯೆಗೆ ಮಿತಿಯಿಲ್ಲ. ಆದರೆ ತನಗೇ ಮೃತ್ಯು ಸಮೀಪಿಸಿದುದನ್ನು ಆತ ತಿಳಿಯಲಿಲ್ಲ. ಯಮದೂತರು ಕೆಂಪುಕೂದಲು ಉದ್ದಉಗುರು ಕೋರೆದಾಡೆ ಕಪ್ಪು ಬಣ್ಣಗಳಿಂದ ಭಯಂಕರರಾಗಿ ಕಾಣುತ್ತ ಕೈಯಲ್ಲಿ ಕಬ್ಬಿಣದ ಬೇಡಿ ಪಾಶ ಮುದ್ಗರಗಳನ್ನು ಹಿಡಿದುಬಂದರು. ಒಬ್ಬನು ಅವನ ನಾಲಗೆ ಕೊಯ್ಯುವೆನೆಂದ. ಇನ್ನೊಬ್ಬನು ಕಣ್ಣು ಕೀಳುವೆನೆಂದ. ಮತ್ತೊಬ್ಬನು ಕೈಗಳನ್ನು ಕಡಿವೆನೆಂದ. ಇನ್ನೊಬ್ಬ ಕಿವಿಗಳನ್ನು ಕೊಯ್ಯುವೆನೆಂದ. ಯಾರಿಗೂ ಉಪಕಾರಮಾಡದ ದುಷ್ಟನೀತ, ಪರದಾರ ಪರದ್ರವ್ಯ ಪರದ್ರೋಹ ಪರಾಯಣ, ಎಂದು ಹಲ್ಲುಕಡಿದು ಆಯುಧಗಳನ್ನೆತ್ತಿ ಸುತ್ತಲೂ ನಿಂತರು ಅವರು.

ಒಬ್ಬ ಯಮದೂತನು ಹಾವಾಗಿ ಅವನ ಕಾಲನ್ನು ಕಡಿದ. ಒಡನೆ ಅವನು ನೆಲಕ್ಕೊರಗಿದ. ಯಮದೂತರು ಮುತ್ತಿದರು. ಬೇಡಿಗಳನ್ನು ತೊಡಿಸಿ ಚಾವಟಿಯಿಂದ ಹೊಡೆಯ ತೊಡಗಿದರು. 'ಎಂದೂ ಪುಣ್ಯಕರ್ಮವನ್ನು ಮನಸ್ಸಿನಲ್ಲಿಯೂ ಯೋಚಿಸದವ ನೀನು. ನಿನ್ನನ್ನು ರೌರವ ನರಕಕ್ಕೆ ತಳ್ಳುವೆವು. ಅಲ್ಲಿ ನಿನ್ನ ಮಾಂಸವನ್ನು ಕ್ರೂರವಾದ ಕಾಗೆಗಳು ತಿನ್ನಲಿ. ಹುಟ್ಟಿದಂದಿನಿಂದ ಹರಿಯ ಸೇವೆ ಮಾಡಿಲ್ಲ. ಅವನನ್ನು ನೆನೆಯಲೂ ಇಲ್ಲ. ಪರದ್ರೋಹದಿಂದ ಹೆಂಡತಿ ಮಕ್ಕಳನ್ನು ಮಾತ್ರ ಪೋಷಿಸಿದೆ' ಎಂದು ಆಕ್ರೋಶಗೈದರು.

ಅಷ್ಟರಲ್ಲಿ ವಿಷ್ಣುಭಕ್ತನೊಬ್ಬನು ಆ ದಾರಿಯಿಂದ ಬರುತ್ತಿದ್ದ. ಅವನು ಚಂಡಾಲನ ಈ ದುರವಸ್ಥೆಯನ್ನು ಕಂಡು ಕನಿಕರಗೊಂಡು ಅವನ ಬಾಯಿಗೆ ತುಳಸೀ ದಳದಿಂದ ಕೂಡಿದ ಶಾಲಿಗ್ರಾಮ ತೀರ್ಥವನ್ನು ಎರೆದನು. ಕಿವಿಯಲ್ಲಿ ರಾಮನಾಮವನ್ನು ಜಪಿಸಿದನು. ತಲೆಯ ಮೇಲೆ ತುಳಸಿಯನ್ನೂ, ಎದೆಯ ಮೇಲೆ ಶಾಲಗ್ರಾಮವನ್ನು ಇಟ್ಟು ಹೇಳಿದನು -

**ಗಚ್ಛಂತು ಯಮದೂತಾ ವೈ ಯಾತನಾಸು ಪರಾಯಣಾಃ ।**
**ಶಾಲಗ್ರಾಮಶಿಲಾಸ್ಪರ್ಶೋ ದಹತಾತ್ ಪಾತಕಂ ಮಹತ್ ॥**

'ಯಾತನೆ ಕೊಡುವ ಯಮದೂತರು ಹೊರಟು ಹೋಗಲಿ. ಶಾಲಗ್ರಾಮ ಶಿಲೆಯ ಸ್ಪರ್ಶದಿಂದ ಮಹಾಪಾತಕಗಳು ಉರಿದು ಹೋಗಲಿ.'

ಒಡನೆ ಅಲ್ಲಿಗೆ ಶಂಖ ಚಕ್ರ ಗದಾ ಪದ್ಮಧಾರಿಗಳಾದ, ಪೀತಾಂಬರ ಉಟ್ಟ ವಿಷ್ಣುದೂತರು ಬಂದು ಆ ಚಂಡಾಲನನ್ನು ಯಮಪಾಶದಿಂದ ಬಿಡಿಸಿದರು. 'ಯಾರು ನೀವು ? ವಿಷ್ಣುಭಕ್ತನನ್ನು ಏಕೆ ಕಟ್ಟಿದಿರಿ ?' ಎಂದು ಆಕ್ಷೇಪಿಸಿದರು. 'ನಾವು ಯಮದೂತರು. ಈತನು ಮಹಾಪಾಪಿ. ಮನಸ್ಸಿನಲ್ಲೂ ಪ್ರಾಣಿಗಳಿಗೆ ಉಪಕಾರ ಬಗೆದವನಲ್ಲ. ಯಾತ್ರಿಕರನ್ನು ಸುಲಿಯುವವ. ಪರಸ್ತ್ರೀಯರನ್ನು ಕೆಡಿಸುವವ. ಆಕಸ್ಮಾತ್ತಾಗಿ ಬಂದು ಏಕೆ ಈತನನ್ನು ಬಿಡಿಸಿದಿರಿ ?' ಎಂದರು ಯಮದೂತರು. ವಿಷ್ಣುದೂತರು ಹೇಳಿದರು. 'ಬ್ರಹ್ಮಹತ್ಯೆಯಂಥ ಪಾಪಗಳೆಷ್ಟೆ ಇರಲಿ. ಕೋಟಿ ಪ್ರಾಣಿಹತ್ಯೆ ಮಾಡಿರಲಿ. ಶಾಲಗ್ರಾಮ ಶಿಲಾಸ್ಪರ್ಶವು ಅದನ್ನೆಲ್ಲ ಒಂದು ಕ್ಷಣದಲ್ಲಿ ಸುಡುತ್ತದೆ.

ರಾಮನಾಮವು ಕಿವಿಗೆ ಬಿದ್ದೊಡನೆ ಬೆಂಕಿಯ ಕಿಡಿಯು ಹತ್ತಿಯ ರಾಶಿಯನ್ನು ಸುಡುವಂತೆ ಎಲ್ಲ ಪಾಪವನ್ನೂ ಸುಡುತ್ತದೆ.

**ತುಲಸೀ ಮಸ್ತಕೇ ಯಸ್ಯ ಶಿಲಾ ಹೃದಿ ಮನೋಹರಾ ।**
**ಮುಖೇ ಕರ್ಣೇಽಥವಾಥವಾ ರಾಮ ನಾಮ ಮುಕ್ತಸ್ತದೈವ ಸಃ ॥**

ಯಾರ ತಲೆಯಲ್ಲಿ ತುಳಸಿ, ಎದೆಯಲ್ಲಿ ಶಾಲಗ್ರಾಮ, ಬಾಯಿ ಅಥವಾ ಕಿವಿಯಲ್ಲಿ ರಾಮನಾಮ ಇದೆಯೊ ಅವನು ಆಗಲೆ ಮುಕ್ತನಾಗುವನು. ಈ ಚಂಡಾಲನು ಪಾಪಿಯೆ ಇರಬಹುದು. ಆದರೆ ತಲೆಯಲ್ಲಿ ತುಳಸಿ ಇದೆ. ಕಿವಿಗೆ ರಾಮನಾಮ ಧ್ವನಿ ಬಿದ್ದಿದೆ. ಎದೆಯಲ್ಲಿ ಶಾಲಿಗ್ರಾಮ ಇದೆ. ಅದರಿಂದ ಪರಮ ಪದ ಯೋಗ್ಯನೀತ. ಅಲ್ಲಿ ಎಲ್ಲ ಸುಖವನ್ನುಂಡು ಕಾಶಿಯಲ್ಲಿ ಹುಟ್ಟಿ ಜಗದ್ಗುರು ವಿಶ್ವನಾಥನನ್ನು ಆರಾಧಿಸಿ ತಿರುಗಿ ಪರಮಪದವನ್ನೆ ಹೊಂದಲಿರುವನು. ಶಾಲಗ್ರಾಮ ಶಿಲೆಯ ಮಹಿಮೆಯನ್ನು ಬ್ರಹ್ಮನೂ ಪೂರ್ತಿ ತಿಳಿದಿಲ್ಲ. ಯಮದೂತರು ಇದನ್ನು ಕೇಳಿ ಯಮನ ಬಳಿಗೋಡಿ ಎಲ್ಲವನ್ನೂ ಹೇಳಿದರು. ರಾಮಭಕ್ತನಾದ ಯಮನೂ ಇದರಿಂದ ಸಂತೋಷಗೊಂಡ.

ಇತ್ತ ಚಂಡಲಾನನ್ನೊಯ್ಯಲು ದೇವಲೋಕದಿಂದ ದಿವ್ಯ ವಿಮಾನ ಬಂದಿತು. ಅವನು ಅದನ್ನೇರಿ ಸ್ವರ್ಗಕ್ಕೆ ಹೋಗಿ ವಿಪುಲ ಭೋಗಗಳನ್ನು ಅನುಭವಿಸಿ ಕಾಶಿಯಲ್ಲಿ ಪವಿತ್ರ ಬ್ರಾಹ್ಮಣ ಕುಲದಲ್ಲಿ ಜನಿಸಿದ. ವಿಶ್ವೇಶನ ಆರಾಧನೆಯಿಂದ ಪರಮಪದವನ್ನು ಹೊಂದಿದ.

ರಾಜನೆ, ಈ ಶಾಲಗ್ರಾಮ ಮಹಿಮೆಯನ್ನು ಕೇಳಿದರೂ ಎಲ್ಲ ಪಾಪಗಳೂ ಪರಿಹಾರವಾಗುತ್ತವೆ. ಭೋಗ ಮೋಕ್ಷಗಳೆರಡೂ ಲಭಿಸುತ್ತವೆ.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಪಾತಾಳಖಂಡದಲ್ಲಿ ಶೇಷ-ವಾತ್ಸ್ಯಾಯನ ಸಂವಾದದಲ್ಲಿ ರಾಮಾಶ್ವಮೇಧದಲ್ಲಿ ರತ್ನಗ್ರೀವನ ತೀರ್ಥಯಾತ್ರೆವೆಂಬ ಹನ್ನೊಂದನೆ ಅಧ್ಯಾಯ ಮುಗಿದುದು*



## ನೀಲಪರ್ವತ ವರ್ಣನೆ

**ಅಧ್ಯಾಯ - ೧೨**

**ಸುಮತಿರುವಾಚ**

**ಸುಮತಿ :-** ರತ್ನಗ್ರೀವ ಮಹಾರಾಜನು ಗಂಡಕಿಯ ಮಹಿಮೆಯನ್ನು ಕೇಳಿ ತಾನು ಧನ್ಯನಾದೆನೆಂದುಕೊಂಡು ನದಿಯಲ್ಲಿ ಸ್ನಾನ ಮಾಡಿ ಪಿತೃತರ್ಪಣ ಮಾಡಿ ಇಪ್ಪತ್ನಾಲ್ಕು ಶಾಲಗ್ರಾಮಗಳನ್ನು ಎತ್ತಿಕೊಂಡು ಭಕ್ತಿಯಿಂದ ಪೂಜಿಸಿದನು. ದೀನದಲಿತರಿಗೆ ದಾನಗಳನ್ನೂ ಕೊಟ್ಟನು.

ಮುಂದೆ ಗಂಗಾ ಸಾಗರ ಸಂಗಮ ಸಿಕ್ಕಿತು. ರಾಜನು "ಈಗ ನೀಲಪರ್ವತ ಎಷ್ಟು ದೂರದಲ್ಲಿದೆ ? ಎಂದು ಕೇಳಿದನು.

ಬ್ರಾಹ್ಮಣನು ಆಶ್ಚರ್ಯದಿಂದ 'ರಾಜನ್, ಇದುವೆ ನೀಲಪರ್ವತ. ನಿನಗೇಕೆ ಕಾಣಿಸುತ್ತಿಲ್ಲ? ನಾನಿಲ್ಲಿಯೆ ಸ್ನಾನಮಾಡಿದೆ. ಇಲ್ಲಿಯೆ ಬೇಡರನ್ನೂ ಕಂಡೆ. ಈ ದಾರಿಯಿಂದಲೆ ಬೆಟ್ಟವನ್ನೇರಿದೆ. ನಿನಗೇಕೆ ಬೆಟ್ಟವು ಕಾಣಿಸುವುದಿಲ್ಲ ?' ಎಂದ.

ರಾಜನಿಗೆ ಬಹು ವ್ಯಥೆಯಾಯಿತು. ಬೆಟ್ಟವನ್ನು ನೋಡಬೇಕೆಂಬ ಉತ್ಕಂಠೆಯಿಂದ ಬಂದಿದ್ದನಾತ. ಅದು ಕಾಣಿಸುತ್ತಿಲ್ಲ. 'ಈಗೇನು ಮಾಡಲಿ? ಬ್ರಾಹ್ಮಣೋತ್ತಮ ಪುರುಷೋತ್ತಮನ ದರ್ಶನ ಸಿಗಲು ಏನು ಮಾಡಬೇಕು? ಬೆಟ್ಟವನ್ನು ನಾನೆಂತು ನೋಡಲಿ ?'

'ರಾಜನೆ, ನೀನೀಗ ಈ ಗಂಗಾಸಾಗರ ಸಂಗಮದಲ್ಲಿ ಸ್ನಾನಮಾಡು. ಆ ಪುರುಷೋತ್ತಮನನ್ನೆ ಧ್ಯಾನಮಾಡುತ್ತ ಬೆಟ್ಟಕಾಣುವವರೆಗೂ ಕುಳಿತಿರು. ಭಕ್ತವತ್ಸಲನೆಂಬ ಬಿರುದು ಹೊತ್ತ ಆ ಪ್ರಭು ಬೇಗನೆ ದಯೆದೋರುತ್ತಾನೆ, ಭಕ್ತರನ್ನು ಆತ ಕೈ ಬಿಡುವುದಿಲ್ಲ. ಹಿಂದೆ ಅನೇಕ ಭಕ್ತರನ್ನು ಆತ ಕಾಪಾಡಿದ್ದಾನೆ. ಅವನನ್ನು ಹಾಡಿಹೊಗಳು.' ಎಂದ ಬ್ರಾಹ್ಮಣ.

ರಾಜನು ಇದನ್ನು ಕೇಳಿ ಸಂಗಮಸ್ನಾನಮಾಡಿ ''ಪುರುಷೋತ್ತಮನು ದರ್ಶನವಿತ್ತರೆ ಆಗ ಪೂಜೆ ಮಾಡಿ ಉಣ್ಣುವೆನು. ಇಲ್ಲದಿದ್ದರೆ ಉಣಲಾರೆ' ಎಂದು ನಿಯಮವನ್ನು ಸ್ವೀಕರಿಸಿ ಹರಿಯನ್ನು ಕೊಂಡಾಡುತ್ತ ಉಪವಾಸ ಮಾಡಿದನು.

'ದೀನದಯಾಳುವಾದ ಪ್ರಭುವೆ. ನಿನಗೆ ಜಯವಾಗಲಿ. ಮಂಗಳಕರವಾದ ನಾಮ ಉಳ್ಳವನೆ, ದುಷ್ಟರನ್ನು ನಾಶಮಾಡಿ ಭಕ್ತರ ದುಃಖ ಪರಿಹರಿಸಲೆಂದು ಅವತರಿಸುವವನೆ, ನಿನಗೆ ಜಯವಾಗಲಿ. ಅಂಬರೀಷ ಮಹಾರಾಜ ವಿಪ್ರಶಾಪದಿಂದ ಎಲ್ಲವನ್ನೂ ಕಳೆದುಕೊಂಡು ದುಃಖಕ್ಕೀಡಾಗಿದ್ದಾಗ ನಿನ್ನ ಸುದರ್ಶನ ಚಕ್ರದಿಂದ ಅವನನ್ನು ರಕ್ಷಿಸಿ ಗರ್ಭವಾಸ ದುಃಖವಿಲ್ಲದಂತೆ ಮಾಡಿದೆ. ಪ್ರಹ್ಲಾದನಿಗೆ ತಂದೆ ಹಿರಣ್ಯಕಶಿಪು ಶೂಲ, ಪಾಶ, ಜಲ, ವಹ್ನಿಗಳಿಂದ ಹಿಂಸೆ ಕೊಟ್ಟಾಗ ನೃಸಿಂಹ ರೂಪದಿಂದ ಬಂದು ರಕ್ಷಿಸಿದೆ. ಗಜರಾಜನು ಮೊಸಳೆಯ ಬಾಯಿಗೆ ಸಿಕ್ಕಾಗ ದಯಾಪರವಶನಾಗಿ ಆತುರದಿಂದ ಗರುಡನನ್ನೂ ಬಿಟ್ಟು ತಾನೇ ಓಡಿಬಂದು ಚಕ್ರದಿಂದ ಅವನನ್ನು ಕಾಪಾಡಿದೆ.

**ಯತ್ರ ಯತ್ರ ತವ ಸೇವಕಾರ್ದನಂ**
**ತತ್ರ ತತ್ರ ಬತ ದೇಹಧಾರಿಣಾ ।**
**ಪಾಲತೇಽತ್ರ ಭವತಾ ತ್ವಯಾ ನಿಜಃ**
**ಪಾಪಹಾರಿ ಚರಿತ್ರೈರ್ಮನೋಹರೈಃ ॥**

ನಿನ್ನ ಭಕ್ತರಿಗೆ ಸಂಕಟ ಒದಗಿದಾಗಲೆಲ್ಲ ನೀನು ಅವತರಿಸಿ ಶ್ರವಣ ಮಾತ್ರದಿಂದ ಪಾಪ ಪರಿಹರಿಸುವ ಸುಂದರ ಲೀಲೆಗಳನ್ನು ತೋರಿ ಕಾಪಾಡುವೆ.

**ದೀನನಾಥ ಸುರಮೌಳಿಹೀರಕೋ-**
**ದೃಷ್ಟಪಾದತಳ ಭಕ್ತವಲ್ಲಭ ।**
**ಪಾಪಕೋಟಿ ಪರಿದಾಹಕ ಪ್ರಭೋ**
**ದರ್ಶಯಸ್ವ ಮಮ ಪಾದಪಂಕಜಂ ॥**

ದೀನರ ರಕ್ಷಕನೆ, ದೇವತೆಗಳ ಕಿರೀಟ ಮಣಿಗಳಿಂದ ಒರೆಸಲ್ಪಟ್ಟ ಪಾದತಲ ಉಳ್ಳವನೆ, ಭಕ್ತವತ್ಸಲನೆ, ಕೋಟಿ ಪಾಪಗಳನ್ನು ಸುಡುವವನೆ, ಸ್ವಾಮಿ. ನನಗೆ ನಿನ್ನ

ಪಾದ ಕಮಲವನ್ನು ತೋರು. ಪಾಪಿಯಾದ ನನ್ನಲ್ಲಿ ದಯೆದೋರುವಿಯಾದರೆ ದರ್ಶನ ನೀಡು. ನಾವು ನಿನ್ನವರು.

ರಾಜನು ಹೀಗೆ ಅನೇಕ ಬಗೆಯಿಂದ ರಾತ್ರಿ ಹಗಲು ಎನ್ನದೆ ಭಗವಂತನ ಗುಣ ಗಾನ ಮಾಡುತ್ತ ಒಂದು ಕ್ಷಣವೂ ವಿಶ್ರಾಂತಿ ಪಡೆಯಲಿಲ್ಲ. ಸುಖವನ್ನು ಬಯಸಲಿಲ್ಲ. ನಿದ್ದೆ ಮಾಡಲಿಲ್ಲ. ಹೀಗೆ ಐದು ದಿನಗಳು ಕಳೆದವು. ಆಗ ಹರಿ ಪ್ರಸನ್ನನಾಗಿ ಸನ್ಯಾಸಿ ವೇಷದಿಂದ ರಾಜನ ಬಳಿಗೆ ಬಂದ. ರಾಜನು ಅವನನ್ನು ಕಂಡೊಡನೆ **'ಓಂ ನಮೋ ವಿಷ್ಣುವೆ'** ಎಂದು ಹೇಳಿ ನಮಸ್ಕರಿಸಿ ಅರ್ಘ್ಯಪಾದ್ಯಾದಿಗಳಿಂದ ಸತ್ಕರಿಸಿದ. 'ನಿನ್ನ ದರ್ಶನ ದೊರೆತುದು ನನ್ನ ಮಹಾಭಾಗ್ಯ ಇನ್ನು ಮುಂದೆ ಭಗವಂತನು 'ನನಗೆ ದರ್ಶನ ನೀಡುವನು' ಎಂದ. ಸಂನ್ಯಾಸಿ ನುಡಿದ 'ರಾಜನೆ, ನಾನು ತ್ರಿಕಾಲ ಜ್ಞಾನಿ. ಆದುದರಿಂದ ನಾನು ಹೇಳುವುದನ್ನು ಕೇಳು. ನಾಳೆ ಮಧ್ಯಾಹ್ನ ಶ್ರೀಹರಿಯು ಬ್ರಹ್ಮನಿಗೂ ದುರ್ಲಭವಾದ ತನ್ನ ದರ್ಶನವನ್ನು ನಿನಗೆ ನೀಡುವನು. ನೀನು, ನಿನ್ನ ಮಂತ್ರಿ, ನಿನ್ನ ಪತ್ನಿ, ಬ್ರಾಹ್ಮಣ ತಾಪಸ, ನಿನ್ನ ನಗರದಲ್ಲಿ ವಾಸಿಸುವ ಕರಂಬನೆಂಬ ನೆಯ್ಗೆಯವ ಈ ಐದು ಜನರೂ ನೀಲಪರ್ವತ ದರ್ಶನ ಮಾಡಿ ಪರಮಪದವನ್ನು ಹೊಂದುವರಿ.' ಹೀಗೆ ಹೇಳಿ ಆ ಸಂನ್ಯಾಸಿ ಅದೃಶ್ಯನಾದ.

ರಾಜನು ಆಶ್ಚರ್ಯಗೊಂಡು ಬ್ರಾಹ್ಮಣನಲ್ಲಿ ಕೇಳಿದ. 'ಸ್ವಾಮಿ, ಈಗ ತಾನೆ ಬಂದು ನನ್ನೊಡನೆ ಮಾತನಾಡಿದ ಸಂನ್ಯಾಸಿ ಯಾರು? ಅದೃಶ್ಯನಾಗಿ ಎಲ್ಲಿಗೆ ಹೊರಟು ಹೋದ?' ಬ್ರಾಹ್ಮಣನೆಂದ 'ರಾಜನೆ, ನಿನ್ನ ಭಕ್ತಿಗೆ ವಶನಾಗಿ ಬಂದ ಪುರುಷೋತ್ತಮನೆ ಆ ಸಂನ್ಯಾಸಿ. ನಾಳೆ ಮಧ್ಯಾಹ್ನ ನಿನಗೆ ಗಿರಿಯ ದರ್ಶನವಾಗುವುದು. ಅದನ್ನೇರಿ ಹರಿಯನ್ನು ಕಂಡು ಕೃತಾರ್ಥನಾಗುವೆ.'

ಅಮೃತದಂಥ ಈ ಮಾತ್ನು ಕೇಳಿದಾಗ ರಾಜನ ಮನೋವ್ಯಥೆ ಮಾಯವಾಯಿತು. ಅವನಿಗಾದ ಆನಂದವನ್ನು ತಿಳಿಯುವುದು ಬ್ರಹ್ಮನಿಗೂ ಅಶ್ಯಕ. ಹರಿಯನ್ನು ಹಾಡಿ ಕೊಂಡಾಡಿ ಕುಣಿದಾಡಿ ನಕ್ಕನಾತ.

**ಸುಮತಿ :-** ಹರಿ ಸ್ಮರಣ. ಕೀರ್ತನೆಗಳಿಂದ ಆ ದಿನವನ್ನೆಲ್ಲ ಕಳೆದು, ರಾತ್ರಿ ಮಲಗಿ ನಿದ್ದೆಹೋದ ರತ್ನಗ್ರೀವ ರಾಜ. ಕನಸಿನಲ್ಲಿ ಆತ ತಾನು ಚತುರ್ಭುಜನಾಗಿ ಕೈಗಳಲ್ಲಿ ಶಂಖ ಚಕ್ರ ಗದಾ ಪದ್ಮ ಶಾಂರ್ಙ್ಗ ಕೋದಂಡಧಾರಿಯಾಗಿ, ರುದ್ರಾದಿ ದೇವತೆಗಳ ವಿಷ್ವಕ್‌ಸೇನಾದಿ ಗಣಗಳ ಮತ್ತು ಮೂರ್ತಿಮತ್ತಾಗಿ ಸೇವಿಸುವ, ಶಂಖ ಚಕ್ರಾದಿಗಳ ಜೊತೆಗೆ ಹರಿಯ ಮುಂದೆ ಕುಣಿಯುತ್ತಿದ್ದಂತೆ ಕಂಡು ಆಶ್ಚರ್ಯಪಟ್ಟ. ಬೆಳಿಗ್ಗೆ ಎದ್ದು ಬ್ರಾಹ್ಮಣನ ಮುಂದೆ ಈ ಸ್ವಪ್ನ ವೃತ್ತಾಂತವನ್ನು ತಿಳಿಸಿದಾಗ ಅವನೆಂದ 'ರಾಜನೆ, ನೀನು ಪುರುಷೋತ್ತಮನಿಂದ ಶಂಖ ಚಕ್ರಾದಿ ಚಿಹ್ನೆಯಿಂದ ಕೂಡಿದ ಶರೀರವನ್ನು ಪಡೆವೆ ಎಂದು ಸ್ವಪ್ನವು ಸೂಚಿಸುತ್ತದೆ.'

ರಾಜನು ಇದನ್ನು ಕೇಳಿ ದೀನರಿಗೆ ದಾನಗಳನ್ನಿತ್ತು. ಸಂಗಮದಲ್ಲಿ ಸ್ನಾನ ಮಾಡಿ ಪಿತೃ ದೇವತಾತರ್ಪಣ ಮಾಡಿ ಹರಿಯ ಗುಣಗಾನ ಮಾಡುತ್ತ ನೀಲ ಪರ್ವತದ ದರ್ಶನವನ್ನೆ ಎದುರು ನೋಡುತ್ತಲಿದ್ದ. ಮಧ್ಯಾಹ್ನವಾಯಿತು. ದೇವ ದುಂದುಭಿ ಮೊಳಗಿದವು. ರಾಜನ ತಲೆಯ ಮೇಲೆ ಪುಷ್ಪವೃಷ್ಟಿಯಾಯಿತು. 'ಮಹಾರಾಜ, ನೀನು ಧನ್ಯ. ನೀಲಪರ್ವತ ಕಾಣಿಸಿಕೊಳ್ಳುತ್ತಿದೆ ನೋಡು' ಎಂದರು ದೇವತೆಗಳು.

ರಾಜನ ಕಣ್ಣಮುಂದೆ ಕೋಟಿ ಸೂರ್ಯರಂತೆ ಬೆಳಗುವ ಅದ್ಭುತವಾದ ನೀಲ ಮಹಾಪರ್ವತ ಗೋಚರಿಸಿತು. ಬೆಳ್ಳಿ ಚಿನ್ನಗಳ ಶಿಖರದಿಂದ ಹೊಳೆವ ಬೆಟ್ಟವದು. ಇದೇನು ಉರಿಯುವ ಬೆಂಕಿಯೆ ? ಇನ್ನೊಬ್ಬ ಸೂರ್ಯನೆ ? ಅಕಸ್ಮಾತ್ ಸ್ಥಿರತೆಯನ್ನು ಪಡೆದ ಮಿಂಚಿನ ರಾಶಿಯೊ ? ಎನ್ನುವಂತಿತ್ತು ಆ ಬೆಟ್ಟ. ಬ್ರಾಹ್ಮಣ ತಾಪಸನು ಅದನ್ನು ನೋಡಿ 'ಇದುವೆ ನೀಲ ಪರ್ವತ' ಎಂದು ರಾಜನಿಗೆ ತಿಳಿಸಿದ. ರಾಜನು ಅದನ್ನು ನೋಡಿ ನಮಿಸಿ 'ಧನ್ಯನಾದೆ. ಕೃತಕೃತ್ಯನಾದೆನೆಂದುಕೊಂಡ. ಒಡನೆ ಐದೂ ಜನರೂ ಬೆಟ್ಟವನ್ನೇರಿ ಶಿಖರದ ಮೇಲಿನ ಸುವರ್ಣ ದೇವಾಲಯವನ್ನು ಪ್ರವೇಶಿಸಿದರು. ಅಲ್ಲಿ ಸದಾ ಬ್ರಹ್ಮನು ಬಂದು ಪುರುಷೋತ್ತಮನನ್ನು ಆರಾಧಿಸುವನು. ರಾಜನು ಆ ದೇವನನ್ನು ಕಂಡು ನಮಿಸಿ ವೇದಮಂತ್ರಗಳಿಂದ ಅಭಿಷೇಕಮಾಡಿ ಅರ್ಘ್ಯ ಪಾದ್ಯಾದಿಗಳನ್ನು ಭಕ್ತಿಯಿಂದ ಸಮರ್ಪಿಸಿದ. ಗಂಧವನ್ನು ಲೇಪಿಸಿದ. ವಸ್ತ್ರಗಳನ್ನುಡಿಸಿದ. ಧೂಪಾರತಿ ನೈವೇದ್ಯಗಳನ್ನು ಸಮರ್ಪಿಸಿ ಸ್ತೋತ್ರಮಾಡಿದ.

'ಪ್ರಕೃತಿಯಿಂದಾಚೆಗಿರುವ ಪುರುಷನೆಂದರೆ ನೀನೊಬ್ಬನೆ. ಕಾರ್ಯಕಾರಣ ಪ್ರಪಂಚಕ್ಕಿಂತ ವಿಲಕ್ಷಣ. ಮಹತ್ತತ್ವಾದಿ ಅಭಿಮಾನಿಗಳಿಂದ ಪೂಜಿತನಾಗಿರುವೆ. ನಿನ್ನ ನಾಭೀ ಕಮಲದಿಂದ ಸೃಷ್ಟಿಕರ್ತನಾದ ಬ್ರಹ್ಮನು ಉದಿಸಿದ. ನಿನ್ನ ಕಣ್ಣಿನಿಂದ ಸಂಹಾರ ಕರ್ತನಾದ ಶಿವನು ಹುಟ್ಟಿದ. ನಿನ್ನಾಜ್ಞೆಯಿಂದ ಪ್ರಪಂಚ ವ್ಯಾಪಾರವನ್ನು ಅವರು ನಡೆಸುವರು. ನಿನಗೆ ಮಾತ್ರ ಜನನ ಮರಣಗಳೆಂಬುದಿಲ್ಲ. ಭಕ್ತರಕ್ಷಣೆಗಾಗಿ ಧರ್ಮಸ್ಥಾಪನೆಗಾಗಿ ಅವತರಿಸುವೆ, ಮತ್ಸ್ಯಾವತಾರದಲ್ಲಿ ಶಂಖಾಸುರನನ್ನು ಕೊಂದು ವೇದಗಳನ್ನು ಕಾಪಾಡಿದೆ. ನಿನ್ನ ಮಹಿಮೆಯನ್ನು ಶೇಷ ಸರಸ್ವತಿ ಮುಂತಾದವರೂ ತಿಳಿಯದಿರುವಾಗ ನಿಲುಕದ ನಿನ್ನನ್ನು ನಾನೆಂತು ಸ್ತುತಿಸಲಿ, ಹೇಳು.'

ಹೀಗೆ ಸ್ತುತಿಸಿ ತಲೆಬಾಗಿ ನಮಿಸಿದ. ರಾಜ. ಅವನ ಸ್ವರ ಗದ್ಗದವಾಗಿತ್ತು. ಮೈ ಪುಳಕಿತವಾಗಿತ್ತು. ಪುರುಷೋತ್ತಮನಿಗೆ ಸಂತೋಷ ಉಂಟಾಯಿತು. ಆತನೆಂದ 'ರಾಜನೆ, ನನ್ನ ನೈವೇದ್ಯವನ್ನು ಭಕ್ಷಿಸು. ಮನೋಹರವಾದ ಚತುರ್ಭುಜ ರೂಪವನ್ನು ಪಡೆದು ನನ್ನ ಪದವನ್ನೈದುವೆ. ನೀನು ಮಾಡಿದ ಸ್ತೋತ್ರದಿಂದ ಯಾರು ನನ್ನನ್ನು ಸ್ತುತಿಸುವರೋ ಅವರಿಗೂ ದರ್ಶನವಿತ್ತು ಭುಕ್ತಿ ಮುಕ್ತಿಗಳನ್ನು ಕೊಡುವೆನು.'

ರಾಜನೂ ಅಮಾತ್ಯ ಮುಂತಾದವರೂ ನೈವೇದ್ಯ ಭಕ್ಷಣಮಾಡಿ ಚತುರ್ಭುಜ ರೂಪುತಳೆದು ಅಪ್ಸರೆಯರಿಂದ ತುಂಬಿದ ದಿವ್ಯ ವಿಮಾನವನ್ನೇರಿ ವೈಕುಂಠಕ್ಕೆ ತೆರಳಿದರು. ಆ ವಿಮಾನಗಳನ್ನು ಪ್ರಜೆಗಳು ಕಂಡರು. ದುಂದುಭಿ ನಾದವನ್ನು ಕೇಳಿದರು. ಮಹಾ ಆಶ್ಚರ್ಯವಿದೆಂದು ಹೊಗಳಿದರು. ಗಂಗಾಸಾಗರ ಸಂಗಮದಲ್ಲಿ ಸ್ನಾನಮಾಡಿ ತಮ್ಮ ಪಟ್ಟಣಕ್ಕೆ ತೆರಳಿದರು. ಮಹಾರಾಜ ರತ್ನಗ್ರೀವ ಭಾಗ್ಯವಂತ. ಈ ದೇಹದಿಂದಲೆ ವಿಷ್ಣುವಿನ ಪರಮಪದವನ್ನು ಹೊಂದಿದವನು.

ಹೀಗೆ ಪುರುಷೋತ್ತಮನ ಪ್ರೀತಿಪಾತ್ರವಾದ ಬೆಟ್ಟವೆ ಈ ನೀಲ ಪರ್ವತ. ಇದರ ದರ್ಶನದಿಂದಲೆ ವೈಕುಂಠ ಲಭಿಸುತ್ತದೆ, ಏಕೆ, ಈ ಮಹಿಮೆಯನ್ನು ಹೇಳುವ ಕೇಳುವ ಜನರೂ, ವೈಕುಂಠವನ್ನು ಪಡೆಯಬಲ್ಲರು. ಅವರು ಇದನ್ನು ಸ್ಮರಿಸಿದರೆ ದುಃಸ್ವಪ್ನವಿಲ್ಲ ಸಂಸಾರ ಭಯವಿಲ್ಲ.

ಈ ನೀಲಪರ್ವತದಲ್ಲಿ ನೆಲೆಸಿದ ಪುರುಷೋತ್ತಮನೇ ರಾಮ, ಎಲ್ಲಕ್ಕೂ ಮೂಲಕಾರಣಳೆನಿಸಿದ ಮಹಾಲಕ್ಷ್ಮಿಯೆ ಸೀತೆ. ಯಾರ ಹೆಸರು ಬ್ರಹ್ಮಹತ್ಯಾ ಪಾತಕಕ್ಕೆ ಪ್ರಾಯಶ್ಚಿತ್ತವೆನಿಸಿದೆಯೋ ಆ ರಾಮನೀಗ ಅಶ್ವಮೇಧಯಾಗವನ್ನು ಮಾಡುತ್ತಿದ್ದಾನೆ. ಲೋಕವನ್ನು ಪಾವನಗೊಳಿಸುತ್ತಿದ್ದಾನೆ.

''ರಾಜನೆ, ಈಗ ನಿನ್ನ ಕುದುರೆ ನೀಲಪರ್ವತಕ್ಕೆ ಬಂದಿದೆ. ಆ ಪುರುಷೋತ್ತಮನನ್ನು ನಮಿಸು.''

ಶತ್ರುಘ್ನನಿದನ್ನು ಕೇಳಿ ಗಂಗಾಸಾಗರ ಸಂಗಮಸ್ನಾನ ಪುರುಷೋತ್ತಮ ದರ್ಶನಗಳನ್ನು ಮಾಡಿ ತಾನು ಧನ್ಯನಾದೆನೆಂದುಕೊಂಡ.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಪಾತಾಳ ಖಂಡದಲ್ಲಿ ಶೇಷ-ವಾತ್ಸ್ಯಾಯನ ಸಂವಾದದಲ್ಲಿ ರಾಮಾಶ್ವಮೇಧದಲ್ಲಿ ನೀಲಗಿರಿಮಹಿಮ ವರ್ಣನವೆಂಬ ಹನ್ನೆರಡನೆ ಅಧ್ಯಾಯ ಮುಗಿದುದು*



## ಶತ್ರುಘ್ನ-ಸುಬಾಹು ಸಮಾಗಮ

**ಅಧ್ಯಾಯ - ೧೩**

**ಶೇಷ ಉವಾಚ**

**ಶೇಷ :-** ಕುದುರೆ ಒಂದು ಕ್ಷಣ ನಿಂತು ಹುಲ್ಲು ಮೇದು ಹೊರಟಿತು. ಶತ್ರುಘ್ನ ಲಕ್ಷ್ಮೀನಿಧಿ, ಪುಷ್ಕಲ, ಪ್ರತಾಪಾಗ್ರ್ಯರು ಹಿಂಬಾಲಿಸಿದರು.

ಸುಬಾಹು ಮಹಾರಾಜನ ಚಕ್ರಾಂಶ ಪುರಿಯ ಬಳಿಯಲ್ಲಿ ಬೇಟೆಯಾಡುತ್ತಿದ್ದ ರಾಜಕುಮಾರ ದಮನನು ಕುದುರೆಯನ್ನು ಕಂಡು ಅದರ ಬಳಿಗೆ ಭಟರನ್ನು ಅಟ್ಟಿದ. ಕುದುರೆಯನ್ನು ಹಿಡಿದು ತಂದರು. ರಾಜಕುಮಾರ ಕುದುರೆಯ ಹಣೆಯಲ್ಲಿ ಕಟ್ಟಿದ್ದ ಪತ್ರವನ್ನು ಓದಿದ. 'ಅಯೋಧ್ಯಾಧಿಪತಿ ದಶರಥ ಮಹಾರಾಜನ ಪುತ್ರನು ರಾಮಚಂದ್ರ. ಸರ್ವಶೂರ ಶಿರೋಮಣಿ. ಅವನಿಗೆ ಸಮನಾದ ಬಿಲ್ಲುಗಾರರು ಭೂಮಿ ಮೇಲಿಲ್ಲ. ಅವನು ಬಿಟ್ಟ ಕುದುರೆಯಿದು. ಇದರ ರಕ್ಷಣೆಗೆ ಎಲ್ಲ ವೀರರನ್ನೂ ಸದೆಬಡಿವ ಶತ್ರುಘ್ನನಿದ್ದಾನೆ. ಯಾರಿಗೆ ತಾವೇ ಶೂರರು, ವೀರರು, ಬಿಲ್ಲುಗಾರರು ಎಂಬ ದರ್ಪವಿದೆಯೊ ಅವರು ಈ ಕುದುರೆಯನ್ನು ಕಟ್ಟಬಹುದು. ಶತ್ರುಘ್ನನು ಬಿಡಿಸಿಕೊಳ್ಳುವನು. ಅಂಥ ದರ್ಪವಿಲ್ಲದವರು ಅವನ ಕಾಲಿಗೆ ಬೀಳಬಹುದು.'

ರಾಜಕುಮಾರನು ಅಂದುಕೊಂಡ 'ರಾಮನೊಬ್ಬನೆ ಬಿಲ್ಲುಗಾರನಂತೆ! ನಾವು ಕ್ಷತ್ರಿಯರೆ ಅಲ್ಲ ! ನನ್ನ ತಂದೆ ಭೂಮಿಯಲ್ಲಿರುವಾಗ ಇಂಥ ದರ್ಪವೂ ಇರಬಲ್ಲುದೆ ? ಈ ದರ್ಪಕ್ಕೆ ನನ್ನ ಬಾಣಗಳು ಸರಿಯಾದ ಫಲ ನೀಡಲಿ. ಶತ್ರುಘ್ನನ ದೇಹವನ್ನು ಗಾಯಗೊಳಿಸಿ ಹೂ ಬಿಟ್ಟ ಮುತ್ತುಗದ ಮರದಂತಾಗಲಿ. ಅವನ ಆನೆ, ಕುದುರೆಗಳು ನೆತ್ತರ ಹೊಳೆಯಲ್ಲಿ ಕೊಚ್ಚಿ ಹೋಗಲಿ. ಯೋಗಿನಿಯರು ನೆತ್ತರ ಕುಡಿಯಲಿ ನರಿಗಳು ಮಾಂಸ ತಿನ್ನಲಿ. ನನ್ನ ಬಾಹುಬಲ ಎಲ್ಲರಿಗೂ ತಿಳಿಯಲಿ. ಕುದುರೆಯನ್ನು ರಾಜಧಾನಿಗೆ ಕಳಿಸಿ, ಸೇನಾಪತಿಯನ್ನು ಕರೆದು ಸೇನೆಯನ್ನು ಸಜ್ಜುಗೊಳಿಸಲು ಅಜ್ಞಾಪಿಸಿದ.

ಇತ್ತ ಕುದುರೆಯ ಬೆಂಗಾವಲಿನವರು ಕುದುರೆಯನ್ನು ಹುಡುಕುತ್ತಿದ್ದಂತೆ ಸುಬಾಹುವಿನ ಸೇನೆಯನ್ನು ಕಂಡರು. 'ಇವನೆ ಕುದುರೆಯನ್ನು ಹಿಡಿದವನು. ಇಲ್ಲದಿದ್ದರೆ ಹೀಗೇಕೆ ಸೈನ್ಯ ಸಮೇತನಾಗಿ ಎದುರು ನಿಲ್ಲುವನು ?' ಎಂದರು. ಪ್ರತಾಪಾಗ್ರ್ಯನು ಒಬ್ಬ ಭಟನನ್ನು ಸುಮದನ ಬಳಿಗೆ ಕಳಿಸಿದ. 'ರಾಮನ ಪ್ರತಾಪವನ್ನರಿಯದೆ ಯಾರು ? ಏಕೆ ಕುದುರೆಯನ್ನು ಕಟ್ಟಿದರು ? ಶರಣಾಗತರಾಗದೆ ಹೋದರೆ ಆ ಯಮನ ಸೇನೆ ಕೋಪಗೊಂಡು ನುಂಗಿ ಬಿಟ್ಟೀತು !'

ದೂತನ ಈ ಮಾತಿಗೆ ದಮನನು ಹೆದರಿಲಿಲ್ಲ. 'ಕುದುರೆಯನ್ನು ಕಟ್ಟಿದವನು ನಾನು. ಶೂರರಾದವರು ಬಂದು ಬಿಡಿಸಿಕೊಳ್ಳಿರಿ' ಎಂದನಾತ.

ಪ್ರತಾಪಾಗ್ರ್ಯನು ಕನಲಿ ದಮನನೊಂದಿಗೆ ಯುದ್ಧಕ್ಕೆ ನಿಂತನು. ಅವನ ಕೋಟಿ ವೀರರ ಸೇನೆಗಿದಿರಾಗಿ ದಮನನು ಮುನ್ನುಗ್ಗಿದ ಆನೆಗಳ ಹಿಂಡಿನ ಮೇಲೆ ಬೀಳುವ ಸಿಂಹದಂತೆ. ಅವನ ಸೈನಿಕರೂ ಯುದ್ಧ ವಿದ್ಯೆಯಲ್ಲಿ ನುರಿತವರು. ಕ್ಷಣಮಾತ್ರದಲ್ಲಿ ನೆತ್ತರ ಹೊಳೆ ಹರಿಯಿತು.

ಪ್ರತಾಪಾಗ್ರ್ಯನು ದಮನನನ್ನು ಮೂದಲಿಸಿದ 'ಮಗು, ಏಕೆ ಕುದುರೆಯನ್ನು ಕಟ್ಟಿದೆ? ರಾಮನ ಪ್ರತಾಪ ನಿನಗೆ ತಿಳಿಯದು. ದೈತ್ಯರಾಜನಾದ ರಾವಣನೂ ಅದನ್ನು ಸಹಿಸಲು ಶಕ್ತನಾಗಲಿಲ್ಲ. ಅಂಥ ರಾಮನ ಕುದುರೆಯನ್ನು ಹಿಡಿದು ಊರಿಗೆ ಕಳಿಸಿದೆಯಲ್ಲ! ನಾನಾರು ಗೊತ್ತೇ ? ಕಾಲಯಮ ! ಮಗು, ಕುದುರೆಯನ್ನು ಬಿಡು. ಮಕ್ಕಳಾಟ ಆಡು. ನೀನು ಯಾರ ಮಗ ? ಎಲ್ಲಿಯವ ? ಮುಂದಾಲೋಚನೆ ಒಂದಿಷ್ಟೂ ಇಲ್ಲದೆ ಹೇಗೆ ಕುದುರೆಯನ್ನು ಹಿಡಿದೆ ? ಮಗು, ನಿನ್ನಲ್ಲಿ ನನಗೆ ಕನಿಕರ ಮೂಡುತ್ತಿದೆ !'

ದಮನನಿದನ್ನುಕೇಳಿ ನಕ್ಕು ನುಡಿದ 'ಕುದುರೆಯನ್ನು ನಾನೆ ಕಟ್ಟಿದೆ. ಪ್ರಾಣವಿರುವ ವರೆಗೂ ಬಿಡಲಾರೆ. ಯುದ್ಧ ಮಾಡು. ನೀನು ಹೇಳಿದಂತೆ ಆಟ ಆಡುತ್ತೇನೆ. ಈ ರಣರಂಗದಲ್ಲಿ. ನೀನು ನೋಡುವಿಯಂತೆ.

ಹೀಗೆ ಹೇಳುತ್ತಿದ್ದಂತೆ ದಮನನು ಪ್ರತಾಪಾಗ್ರ್ಯನೆದೆಗೆ ಒಮ್ಮೆಲೆ ನೂರು ಬಾಣಗಳನ್ನೆಸೆದ. ಪ್ರತಾಪಾಗ್ರ್ಯನು ಅವನ್ನು ತುಂಡರಿಸಿದ. ಹತ್ತು ಬಾಣಗಳನ್ನು ದಮನನ ಹಣೆಗೆ ಗುರಿಯಿಟ್ಟ. ಆತ ಮುನ್ನೂರು ಬಾಣಗಳನ್ನು ಪ್ರತಿಯಾಗಿ ಎಸೆದ. ಪ್ರತಾಪಾಗ್ರ್ಯನು ಈಗ ದಮನನ ರಥ ಕುದುರೆ ಸಾರಥಿಗಳನ್ನು ಕೆಡವಿ ಅವನ ಬಿಲ್ಲನ್ನೂ ಕಡಿದ. ದಮನನು ಬೇರೊಂದು ರಥವನ್ನೇರಿ ಪ್ರತಾಪಾಗ್ರ್ಯನ ರಥ ಕುದುರೆ ಸಾರಥಿಗಳನ್ನು ಕೆಡವಿ ಅವನೆದೆಗೆ ಬಾಣವನ್ನೆಸೆದ. ಅದು ಅರ್ಧದಲ್ಲಿಯೆ ಕಡಿದುಬಿದ್ದಾಗ ಬೆಂಕಿಯನ್ನುಗುಳುವ ಭಯಂಕರ ಬಾಣವೊಂದನ್ನೆತ್ತಿ 'ಈ ಬಾಣದಿಂದ ನಿನ್ನನ್ನು ಕೆಡವದಿದ್ದರೆ ತರ್ಕಬಲದಿಂದ ವೇದನಿಂದೆ ಮಾಡುವವರ ಪಾಪ ನನಗುಂಟಾಗಲಿ' ಎಂದು ಪ್ರತಿಜ್ಞೆ ಮಾಡಿ ಗುರಿಯಿಟ್ಟ. ಪ್ರತಾಪಾಗ್ರ್ಯನು ಅದನ್ನು ಕಡಿಯಲು ಬಾಣಗಳನ್ನೆಸೆದರೂ ಅವು ತಾವೆ ಕಡಿದುಬಿದ್ದುವು. ಅವನೆದೆಗೆ ಬಾಣ ತಗುಲಿತು. ಆತ ಮೂರ್ಛಿತನಾದ. ಶತ್ರುಘ್ನನ ಸೇನೆಯಲ್ಲಿ ಹಾಹಾಕಾರವೆದ್ದಿತು. ದಮನನು ಶತ್ರುಘ್ನನನ್ನಿದಿರು ನೋಡುತ್ತನಿಂತ.

**ಶೇಷ :-** ಶತ್ರುಘ್ನನು ಕೋಪದಿಂದ ಹಲ್ಲು ಕಡಿಯುತ್ತ ತುಟಿಯನ್ನು ನಾಲಿಗೆಯಿಂದ ಸವರಿಕೊಳ್ಳುತ್ತ ಯಾರು ಕುದುರೆಯನ್ನು ಒಯ್ದವನು ? ಯಾರು ಪ್ರತಾಪಾಗ್ರ್ಯನನ್ನು

ಸೋಲಿಸಿದವನು ? ಎಂದು ಕೇಳತೊಡಗಿದ. ಭಟರ ಮಾತಿನಿಂದ ಎಲ್ಲವನ್ನು ತಿಳಿದು ತಾನೆ ಯುದ್ಧಭೂಮಿಯ ಕಡೆಗೆ ತೆರಳಿ ಅಲ್ಲಿ ರಕ್ತದ ನದಿಯಲ್ಲಿ ಬೆಟ್ಟದಂಥ ಆನೆಗಳು ತಲೆ ಒಡೆದು ಬಿದ್ದಿರುವುದನ್ನು ಕಂಡ. ಕುದುರೆಗಳು ತಮ್ಮ ಸವಾರರೊಂದಿಗೆ ಮಡಿದು ಬಿದ್ದಿದ್ದುವು. ರಥಗಳು ಮುರಿದು ಪುಡಿಪುಡಿ ಆಗಿದ್ದುವು. ತನ್ನ ಸೇನೆಯನ್ನು ಹುಲ್ಲಿಗೆ ಸಮನಾಗಿ ಕಾಣುತ್ತಿದ್ದ ದಮನನ ಸೊಕ್ಕು ಅಡಗಿಸುವವನು ಯಾರು ನಮ್ಮಲ್ಲಿ ?' ಎಂದ. ಒಡನೆ ಪುಷ್ಕಲನು ಮುಂದೆ ಬಂದು ನುಡಿದ. ಈ ದಮನ ಎಷ್ಟರವನು ! ನಾನು ಯುದ್ಧಕ್ಕೆ ನಿಂತಿರುವಾಗ ಯಾರು ತಾನೆ ಕುದುರೆಯನ್ನು ಒಯ್ಯಬಲ್ಲರು ? ಶ್ರೀರಾಮನ ಪ್ರತಾಪ ಎಲ್ಲವನ್ನೂ ಸುಗಮಗೊಳಿಸುತ್ತದೆ. ಕೇಳು ನನ್ನ ಪ್ರತಿಜ್ಞೆಯನ್ನು, ನಾನು ದಮನನನ್ನು ಗೆಲ್ಲದಿದ್ದರೆ ರಾಮಚಂದ್ರ ಪಾದಾರವಿಂದ ಮಕರಂದ ಪಾನ ವಿಮುಖರಿಗೆ ಬರುವ ಪಾಪ ನನಗೆ ಬರಲಿ. ತಾಯಿಗಿಂತ ಬೇರೆ ಪವಿತ್ರ ವಸ್ತುವಿದೆ ಎಂದು ತಿಳಿದು ಅವಳಲ್ಲಿ ವಿರೋಧ ಮಾಡುವ ಮಗನಿಗೆ ಬರುವ ಪಾಪ ನನಗೆ ಬರಲಿ.'

ಇದನ್ನು ಕೇಳಿ ಶತ್ರುಘ್ನನು ಮನದಲ್ಲಿ ಸಂತೋಷಪಟ್ಟು ಪುಷ್ಕಲನನ್ನು ಹೋರಾಟಕ್ಕಿಳಿಯಲು ಅಜ್ಞಾಪಿಸಿದ.

ಪುಷ್ಕಲನು ಯುದ್ಧ ಸನ್ನದ್ಧನಾಗಿ ಬಂದುದನ್ನು ಕಂಡು ದಮನನು ಸ್ವಾಗತಿಸಿದ. ಇಬ್ಬರೂ ರಥದಲ್ಲಿ ಕುಳಿತು ಎದುರಾದಾಗ ಯುದ್ಧರಂಗದಲ್ಲಿ ಇದಿರು ನಿಂತ ಇಂದ್ರ ವೃತ್ರರಂತೆ ಕಂಡರು. ಅವರ ಬಾಣಗಳು ಆಕಾಶದಲ್ಲಿ ತುಂಬಿ ಸೂರ್ಯನನ್ನು ಮರೆ ಮಾಡಿದವು. ಆನೆಗಳ ಗಂಡಸ್ಥಲದಲ್ಲಿ ನೆಟ್ಟು ಧಾತು ರಾಗದಿಂದ ಚಿತ್ರ ಬರೆದಂತೆ ಶೋಭಿಸಿದವು. ಪುಷ್ಕಲನು ಅಗ್ನೇಯಾಸ್ತ್ರವನ್ನು ಎಸೆದಾಗ ಎದ್ದ ಉರಿನಾಲಿಗೆ ಪ್ರಳಯಾಗ್ನಿಯಂತೆ ಆಕಾಶವನ್ನು ನೆಕ್ಕಿತು. ಚಂದ್ರನಂತೆ ಹೊಳೆಯುತ್ತಿದ್ದ ಶ್ವೇತಛತ್ರಗಳು ಹೊತ್ತಿಕೊಂಡು ಉರಿದು ಹೊಂಬಣ್ಣ ತಳೆದವು. ದಮನನೆಸೆದ ಬಾಣಗಳೂ ಉರಿದು ಬೂದಿಯಾದವು. ದಮನ ಕೋಪದಿಂದ ವಾರುಣಾಸ್ತ್ರವನ್ನು ಪ್ರಯೋಗಿಸಿದ. ಆಗ ಸೇನೆ ಎಲ್ಲವೂ ನೀರಿನಿಂದ ತೊಯ್ದು ಹೋಯಿತು. ಅಗ್ನಿಬಾಧೆ ಶಾಂತಿಯಾಯಿತು. ಅಗ್ನೇಯಾಸ್ತ್ರ ತಣ್ಣಗಾಯಿತು. ಶತ್ರುಸೇನೆಯಲ್ಲಿ ಮಾತ್ರ ತಣ್ಣೀರ ಅಭಿಷೇಕವಾದೊಡನೆ ನಡುಕ ಉಂಟಾಯಿತು. ಸೀನು ಬರಲಾರಂಭಿಸಿತು. ಆಲಿಕಲ್ಲು ಚಳಿ ಗಾಳಿ ಪೀಡಿಸತೊಡಗಿದವು. ಪುಷ್ಕಲನು ಇದನ್ನು ಕಂಡು ವಾಯವ್ಯಾಸ್ತ್ರವನ್ನು ಹೂಡಿದನು. ಆಗ ಮೋಡಗಳೆಲ್ಲೋ ಹಾರಿ ಹೋದವು. ಆನೆ ಕುದುರೆಗಳು ಒಂದಕ್ಕೊಂದು ವೇಗವಾಗಿ ತಗುಲಿ ಬಿದ್ದವು. ಸೈನಿಕರು ಕೆದರಿದ ತಲೆ ಕೂದಲು ಕಾಂತಿಹೀನ ಮುಖಗಳಿಂದ ಭೇತಾಳಗಳಂತೆ ಭೂಗತರಾದರು. ದಮನನು ಪರ್ವತಾಸ್ತ್ರವನ್ನೆಸೆದ. ಆಗ ಶತ್ರುಸೇನೆಯ ಮೇಲೆ ಬೆಟ್ಟಗಳು ಬಿದ್ದವು. ಅದರ ಮನೆಯಲ್ಲಿ ದಮನನ ಸೇನೆ ಗಾಳಿಯಿಂದ ಸುರಕ್ಷಿತವಾಯಿತು. ಪುಷ್ಕಲನು ವಜ್ರಾಸ್ತ್ರವನ್ನು ಪ್ರಯೋಗಿಸಿದ. ಆ ಅಸ್ತ್ರವು ಭಯಂಕರವಾಗಿ ಗುಡುಗಿ, ಬೆಟ್ಟಗಳನ್ನು ತುಂಡರಿಸಿ, ಆನೆಗಳನ್ನು ಪುಡಿಮಾಡಿ, ದಮನನ ಎದೆಯಲ್ಲಿ ನೆಟ್ಟಿತು. ಅವನು ಮೂರ್ಛೆಗೊಂಡ. ಸಾರಥಿಯು ಅವನನ್ನು ಒಂದು ಕ್ರೋಶದಷ್ಟು ದೂರಕ್ಕೊಯ್ದ. ಅವನ ಸೈನಿಕರು ಭಯದಿಂದದೋಡಿ ಸುಬಾಹು ರಾಜನ ಬಳಿಯಲ್ಲಿ ಎಲ್ಲವನ್ನೂ ಹೇಳಿದರು.

ಶತ್ರುಘ್ನನ ಸೇನೆಯಲ್ಲಿ ದುಂದುಭಿ ಮೊಳಗಿತು. ಜಯಘೋಷ ಕೇಳಿಸಿತು. ಭಲೆ ಭಲೆ ಎಂದರು ವೀರರು. ಪುಷ್ಕಲನ ವಿಜಯಕ್ಕೆ ಶತ್ರುಘ್ನನೂ ಅವನ ಮಂತ್ರಿಗಳೂ ಹೆಮ್ಮೆ ಪಟ್ಟುಕೊಂಡರು.

**ಶೇಷ :-** ಸುಬಾಹು ತನ್ನ ಭಟರಿಂದ ದಮನ ಪರಾಜಯ ವೃತ್ತಾಂತವನ್ನು ಕೇಳಿ ಶೋಕ ಕೋಪದಿಂದ ಪರ್ವಕಾಲದ ಸಮುದ್ರದಂತಾದ. ನಡಗುವ ತುಟಿಗಳನ್ನು ನಾಲಿಗೆಯಿಂದೊರೆಸುತ್ತ ಹಲ್ಲು ಕಚ್ಚಿ ಸೇನಾಪತಿಗಾಜ್ಞೆಯಿತ್ತ 'ಸೇನೆಯನ್ನು ಅಣಿಮಾಡು. ಮಗನನ್ನು ಗಾಯಗೊಳಿಸಿದ ರಾಮನ ಭಟರೊಂದಿಗೆ ಹೋರಾಡುವೆನು, ಪರಮೇಶ್ವರನೆ ಅವರನ್ನು ರಕ್ಷಿಸಿದರೂ ನಾನು ಬಿಡೆನು.'

ಸೇನಾಪತಿ ಯಮನ ಪಡೆಯಂಥ ಆ ಸೇನೆಯನ್ನು ಸಜ್ಜುಗೊಳಿಸಿ ರಣರಂಗಕ್ಕೆ ಕಳಿಸಿದಾಗ ಅದರ ಭಾರವನ್ನು ತಡೆಯಲಾರದೆ ನೆಲ ಹೊಯ್ದಾಡಿತು. ರಾಜನೊಂದಿಗೆ ಅವನ ತಮ್ಮ ಸುಕೇತುವೂ ಮಕ್ಕಳು ಚಿತ್ರಾಂಗದ ವಿಚಿತ್ರರೂ ಹೊರಟರು. ರಥದಲ್ಲಿ ಮೂರ್ಛಿತನಾಗಿ ಮಲಗಿದ್ದ ದಮನನನ್ನು ಕಂಡು ಸುಬಾಹು ದುಃಖದಿಂದ ನೀರು ಚಿಮುಕಿಸಿ ಗಾಳಿ ಬೀಸಿ ಕೈಯಿಂದ ಮೃದುವಾಗಿ ಮೈದಡವಿದ. ಒಡನೆ ಆತನೆಚ್ಚತ್ತು. 'ಎಲ್ಲಿ ನನ್ನ ಧನುಸ್ಸು? ಪುಷ್ಕಲನೆಲ್ಲಿ ? ಎಂದು ಗರ್ಜಿಸತೊಡಗಿದ. ಸುಬಾಹು ಆನಂದದಿಂದ ತಬ್ಬಿಕೊಂಡಾಗ ಅವನನ್ನು ಕಂಡು ನಾಚಿಕೆಯಿಂದ ತಲೆಬಾಗಿ ಪಾದವಂದನೆಮಾಡಿದ.

ಸುಬಾಹು ಸೇನಾಪತಿಯನ್ನು ಕರೆದು ಕ್ರೌಂಚವ್ಯೂಹವನ್ನು ರಚಿಸಲಾಜ್ಞಾಪಿಸಿದ. ಒಡನೆ ಮುಖದಲ್ಲಿ ಸುಕೇತು, ಕತ್ತಿನಲ್ಲಿ ಚಿತ್ರಾಂಗ, ಎರಡು ರೆಕ್ಕೆಗಳಲ್ಲಿ ಇಬ್ಬರು ರಾಜಕುಮಾರರು ಬಾಲದಲ್ಲಿ ರಾಜ ಹೀಗೆ ವ್ಯೂಹರಚನೆ ಆದೊಡನೆ ರಾಜ ಯುದ್ಧಕ್ಕೆ ತೊಡಗಿದ.

**ಶೇಷ :-** ಸಮುದ್ರದಲೆಯಂತೆ ಭೋರ್ಗರೆಯುತ್ತ ಬರುವ ಸುಬಾಹುವಿನ ಸೇನೆಯನ್ನು ಕಂಡು ಶತ್ರುಘ್ನನು ಸುಮತಿಯನ್ನು ಕೇಳಿದ 'ಇದು ಯಾರ ಸೇನೆ ? ಯುದ್ಧಕ್ಕೆ ನಾವು ಯಾರನ್ನು ಕಳಿಸಬೇಕು ?

**ಸುಮತಿ :-** ರಾಜನೆ, ದಮನನು ಪರಾಜಿತನಾದುದನ್ನು ತಿಳಿದು ಅವನ ತಂದೆ ಸುಬಾಹುರಾಜ ತಾನೆ ಬರುತ್ತಿದ್ದಾನೆ. ಅವನು ಧರ್ಮಿಷ್ಠ. ಸ್ವಧರ್ಮನಿರತ. ಪರಸ್ತ್ರೀಯರನ್ನು ನೋಡದವ. ಕಿವಿಗೆ ಹರಿಕೀರ್ತನೆಯನ್ನುಳಿದು ಬೇರೇನನ್ನೂ ಬೀಳಿಸಿಕೊಳ್ಳದವ. ರಾಜನಿಗೆ ಸೇರಬೇಕಾದ ಆರನೆ ಒಂದಂಶಕ್ಕಿಂತ ಹೆಚ್ಚು ಧನವನ್ನು ಪ್ರಜೆಗಳಿಂದ ಬಯಸುವವನಲ್ಲ. ವಿಷ್ಣು ಪಾದಾರವಿಂದದಲ್ಲಿ ದುಂಬಿಯಂತಿರುವವ. ಸ್ವಧರ್ಮನಿರತ ಪರಧರ್ಮವನ್ನು ಆಶ್ರಯಿಸುವವನಲ್ಲ. ಇವನ ಬಲಕ್ಕೆ ಯಾವ ವೀರರ ಬಲವೂ ಸಮಾನವಲ್ಲ. ಅದರೂ ನಿನ್ನ ಕಡೆಯ ಲಕ್ಷ್ಮೀನಿಧಿ ಮುಂತಾದ ವೀರರೂ ಯಾರಿಗೂ ಕಡಿಮೆಯಲ್ಲ. ಅವರನ್ನು ಯುದ್ಧಕ್ಕೆ ಕಳಿಸು.

ಶತ್ರುಘ್ನನು ತನ್ನ ವೀರರ ಮುಂದೆ ಹೇಳಿದ. 'ಸುಬಾಹುವಿನ ಸೇನೆ ಕ್ರೌಂಚವ್ಯೂಹವನ್ನು ರಚಿಸಿಕೊಂಡಿದೆ. ಮುಖ ರೆಕ್ಕೆಗಳಲ್ಲಿ ನಿಂತ ವೀರರನ್ನು ಗೆಲ್ಲುವವರು ನಿಮ್ಮಲ್ಲಿ ಯಾರು ? ಅವರು ವೀಳೆಯವನ್ನು ತೆಗೆದುಕೊಳ್ಳಿರಿ.'

ಲಕ್ಷ್ಮೀನಿಧಿ ಮುಂದೆ ಬಂದು ವೀಳೆಯ ಪಡೆದು ಹೇಳಿದ. 'ಹಿಂದೆ ಪರಶುರಾಮನೊಬ್ಬ ಕ್ರೌಂಚವ್ಯೂಹವನ್ನು ಭೇದಿಸುತ್ತಿದ್ದ. ಈಗ ನಾನು ಭೇದಿಸುತ್ತೇನೆ.' ಹೀಗೆ ಹೇಳಿ ಹೊರಟ ಲಕ್ಷ್ಮೀನಿಧಿಯನ್ನು ಪುಷ್ಕಲ, ನೀಲರತ್ನ, ಉಗ್ರರು ಹಿಂಬಾಲಿಸಿದರು. ಎಲ್ಲರ ಹಿಂದೆ ಶತ್ರುಘ್ನನು ರಥವನ್ನೇರಿ ಹೊರಟ. ಎರಡು ಸೇನೆಗಳು ಒಂದಕ್ಕೊಂದು ಇದಿರಾಗಿ ಪ್ರಳಯ ಸಮುದ್ರಗಳಂತೆ ಮಲೆತು ನಿಂತವು. ರಣಭೇರಿ, ವೀರಗರ್ಜನೆಗಳು ಪ್ರತಿಧ್ವನಿಸಿದವು.

ವ್ಯೂಹದ ಮುಖದಲ್ಲಿ ನಿಂತಿದ್ದ ಸುಕೇತುವಿನ ಇದಿರನಲ್ಲಿ ಲಕ್ಷ್ಮೀನಿಧಿ ನಿಂತು ನುಡಿದ 'ನಾನು ಜನಕ ಮಹಾರಾಜನ ಮಗ ಲಕ್ಷ್ಮೀನಿಧಿ ಸರ್ವಶಸ್ತ್ರಾಸ್ತ್ರ ಕುಶಲ. ಯುದ್ಧ ವಿದ್ಯಾವಿಶಾರದ. ರಾಮನ ಕುದುರೆಯನ್ನು ಬಿಟ್ಟುಬಿಡು. ಇಲ್ಲದಿದ್ದರೆ ನನ್ನ ಬಾಣಗಳೇಟಿಗೆ ತುತ್ತಾಗಿ ಯಮನ ಬಳಿಗೆ ಹೋಗುವೆ.' ಸುಕೇತುವಿನೆದೆಗೆ ಬಾಣಗಳನ್ನೆಸೆದ. ಹೀಗೆ ಇಬ್ಬರೂ ಬಾಣಗಳೇಟನಿಂದ ರಕ್ತದಲ್ಲಿ ಮಿಂದು ಹೂ ಬಿಟ್ಟ ಮುತ್ತಗದ ಮರಗಳಂತೆ ಕಂಡರು. ಬಾಗಿದ ಬಿಲ್ಲು, ಬಾಣಗಳ ಸುರಿಮಳೆಗಳಿಂದ ಅವರಿಬ್ಬರೂ ಕಾಮನಬಿಲ್ಲು, ಜಡಿ ಮಳೆಗಳಿಂದ ಇಂದ್ರನಾಣತಿಯಂತೆ ನಡೆವ ಮಳೆಗಾಲದ ಮೋಡಗಳಂತೆ ಕಂಡರು. ಬಾಣಗಳನ್ನು ಹೂಡುವುದು ಬಿಡುವುದೊಂದೂ ಕಾಣಿಸುತ್ತಿದ್ದಿಲ್ಲ. ಒಂದೇಸಮನೆ ಆನೆ ಕುದುರೆಗಳ, ಯೋಧರ ತಲೆಗಳುರುಳುವುದು. ಮಾತ್ರ ಕಾಣಿಸುತ್ತಿತ್ತು. ರಣರಂಗದಲ್ಲೆಲ್ಲ ಧನುರ್ಬಾಣಗಳನ್ನು ಧರಿಸಿ ರೋಷದಿಂದ ಹಲ್ಲುಮುಡಿ ಕಚ್ಚಿದ ಭಟರೆ ಕಾಣಿಸುತ್ತಿದ್ದರು. ದೇವತೆಗಳೂ ಅಚ್ಚರಿಪಡುವಂಥ ಘೋರಯುದ್ಧ. ಬಾಣಗಳು ಆಕಾಶದಲ್ಲಿ ಒಂದಿಷ್ಟೂ ಎಡೆ ಕಾಣಿಸದಂತೆ ಹರಡಿದ್ದವು.

ಸುಕೇತುವಿನ ರಥದ ಕುದುರೆಗಳು, ಸಾರಥಿ, ಧ್ವಜ, ಬಿಲ್ಲು, ಹೆದೆ ಎಲ್ಲವನ್ನೂ ನಾಶಪಡಿಸಿ ಅವನೆದೆಗೂ ಬಾಣದಿಂದ ಹೊಡೆದ ಲಕ್ಷ್ಮೀನಿಧಿ. ಎಲ್ಲವೂ ಒಮ್ಮೆಲೆ ಎಸೆದ ಎಂಟು ಬಾಣಗಳಿಂದ ನಡುಗಿದವು. ಈ ಅದ್ಭುತವನ್ನು ಕಂಡು ವೀರರು ವಿಸ್ಮಯಗೊಂಡರು. ಸುಕೇತು ರಥದಿಂದಿಳಿದು ಗದೆಯನ್ನೆತ್ತಿಕೊಂಡ. ಲಕ್ಷ್ಮೀನಿಧಿಯೂ ವಜ್ರಾಯುಧದಂಥ ಮಹಾಗದೆಯನ್ನು ಬೀಸಿ ಸುಕೇತುವಿನೆದೆಗೆ ಹೊಡೆದ. ಮದಿಸಿದಾನೆಗೆ ಮಕ್ಕಳು ಹೂ ಮಾಲೆಯಿಂದ ಹೊಡೆದಂತಾಯಿತು, ಅದು. ಆದರೆ ಸುಕೇತುವಿನ ಗದೆಯೇಟು ಲಕ್ಷ್ಮೀನಿಧಿಯ ಹಣೆಗೆ ಬಿದ್ದಾಗ ಅವನು ನೆತ್ತರು ಕಕ್ಕಿದನು. ಹೀಗೆ ತಲೆ, ಹಣೆ, ಎದೆ ಎಲ್ಲವೂ ರಕ್ತದಿಂದ ತೊಯ್ದವು. ಬಳಿಕ ಬಾಹು ಯುದ್ಧ ಪ್ರಾರಂಭವಾಯಿತು. ವಜ್ರ ಮುಷ್ಟಿಗಳಿಂದ, ಹಲ್ಲು, ಉಗುರುಗಳಿಂದ ಮೈ ನವಿರು ಏಳುವಂತೆ ತುಮುಲ ಯುದ್ಧ ನಡೆಸಿದರು. ಒಬ್ಬರನ್ನೊಬ್ಬರು ಎತ್ತಿ ಹಿಡಿದು ಗರಗರನೆ ತಿರುಗಿಸಿದರು. ಕಾಲಿಗೆ ಕಾಲು, ಕೈಗೆ ಕೈ, ಎದೆಗೆ ಎದೆ, ಮುಖಕ್ಕೆ ಮುಖ ಕೊಟ್ಟು ಒಂದೇ ಸವನೆ ಯುದ್ಧ ಮಾಡಿ ಕೊನೆಗೆ ಇಬ್ಬರೂ ಮೂರ್ಛೆ ಹೊಂದಿದರು. ಲಕ್ಷ್ಮೀನಿಧಿಯೂ ಧನ್ಯ, ಸುಕೇತುವೂ ಧನ್ಯ ಎಂದರು ವೀರರು.

**ಶೇಷ** :- ಕ್ರೌಂಚವ್ಯೂಹದ ಕತ್ತಿನಲ್ಲಿದ್ದ ಚಿತ್ರಾಂಗನು ಶತ್ರು ಸೇನೆಯೊಳಗೆ ಮುಳುಗಿ, ಸಾಗರದಲ್ಲಿ ಮುಳುಗಿದ ವರಾಹ ಮೂರ್ತಿಯ ಲೀಲೆಯನ್ನು ತೋರಿದ. ಬಿಲ್ಲ ಹಗ್ಗವನಳೆದ ಸಿಡಿಲಿನ ಧ್ವನಿಯನ್ನು ಹೊರಡಿಸಿದ. ಅವನ ಬಾಣದೇಟಿಗೆ ಮೈಯೆಲ್ಲ

ಗಾಯ ಹೊಂದಿ ಹಲ್ಲು ಕಚ್ಚಿಕೊಂಡು ನೆಲಕ್ಕೊರಗಿದರು ವೀರರು. ಅವನೊಂದಿಗೆ ಪುಷ್ಕಲನು ಯುದ್ಧಕ್ಕೆ ನಿಂತ. ಷಣ್ಮುಖ ತಾರಕರು ಹೋರಾಟಕ್ಕೆ ಇಳಿದಂತಾಯಿತು. ಬಾಣವನ್ನು ಎತ್ತಿಕೊಳ್ಳುವುದು. ಹೂಡುವುದು. ಎಸೆಯುವುದು ಒಂದೂ ಕಾಣಸುತ್ತಿರಲಿಲ್ಲ. ವೃತ್ತಾಕಾರವಾಗಿ ಬಾಗಿದ ಬಿಲ್ಲುಗಳು ಮಾತ್ರ ಕಾಣಸುತ್ತಿದ್ದವು.

ಪುಷ್ಕಲನ ಭ್ರಾಮಕಾಸ್ತ್ರದಿಂದ ಚಿತ್ರಾಂಗನ ರಥ ಕುದುರೆಗಳೊಂದಿಗೆ ಆಕಾಶದಲ್ಲಿ ಮೇಲೇರಿ ಅಲ್ಲಿ ಗರ್ರನೆ ತಿರುಗಿತು. ಒಂದು ಮುಹೂರ್ತ ಕಾಲ ತಿರುಗಿ ಬಹು ಕಷ್ಟದಿಂದ ನಿಂತಿತು. ಚಿತ್ರಾಂಗನೆಂದ 'ಒಂದು ಕ್ಷಣ ಕುದುರೆಗಳ ಸಮೇತರಾಗಿ ನನ್ನ ರಥವನ್ನು ಅಂತರಿಕ್ಷದಲ್ಲಿ ತಿರುಗಿಸಿದ ನಿನ್ನ ಕೌಶಲ್ಯ ಮೆಚ್ಚುವಂತಹುದು. ಆದರೆ ನನ್ನ ಪರಾಕ್ರಮವನ್ನೂ ನೋಡು. ನೀನೀಗ ಗಗನ ಸಂಚಾರಿಯಾಗಿ ಅಲ್ಲಿಯೆ ದೇವತೆಗಳ ಅತಿಥಿ ಸತ್ಕಾರ ಪಡೆಯಲಿರುವೆ.' ಹೀಗೆ ಹೇಳಿ ಒಂದು ಅಸ್ತ್ರವನ್ನು ಪ್ರಯೋಗಿಸಿದ.' ಪುಷ್ಕಲನ ರಥ ಮೇಲೇರಿ ಆಕಾಶದಲ್ಲಿ ಹಕ್ಕಿಯಂತೆ ತಿರುಗಿತು. ಸುತ್ತಿ ಸುತ್ತಿ ತಿರುಗಿ ನಿಲ್ಲುವಷ್ಟರಲ್ಲಿ ಚಿತ್ರಾಂಗನ ಇನ್ನೊಂದು ಬಾಣದಿಂದ ತಿರುಗಿ ಸುತ್ತಲು ಪ್ರಾರಂಭಿಸಿತು. ಪುಷ್ಕಲನ ರಥ ಮೇಲೇರಿ ಆಕಾಶದಲ್ಲಿ ಹಕ್ಕಿಯಂತೆ ತಿರುಗಿತು. ಸುತ್ತಿ ಸುತ್ತಿ ತಿರುಗಿ ನಿಲ್ಲುವಷ್ಟರಲ್ಲಿ ಚಿತ್ರಾಂಗನ ಇನ್ನೊಂದು ಬಾಣದಿಂದ ತಿರುಗಿ ಸುತ್ತಲು ಪ್ರಾರಂಭಿಸಿತು. ಪುಷ್ಕಲನು ಹೇಗೊ ನೆಲೆಗೆ ನಿಂತು ಚಿತ್ರಾಂಗನ ರಥವನ್ನು ಮುರಿದ. ಚಿತ್ರಾಂಗನು ಇನ್ನೊಂದು ರಥವನ್ನೇರಿ ಬರುವಷ್ಟರಲ್ಲಿ ಅದನ್ನೂ ಮುರಿದ ಪುಷ್ಕಲ. ಹೀಗೆ ಹತ್ತು ರಥಗಳು ಮುರಿದು ಬಿದ್ದವು. ಪುಷ್ಕಲನು ಬಿಲ್ಲಿಗೆ ಒಂದು ಬಾಣವನ್ನು ಹೂಡಿ ಪ್ರತಿಜ್ಞೆ ಮಾಡಿದ 'ನಿನ್ನನೀಗ ಈ ಬಾಣದಿಂದ ಕೊಲ್ಲದಿದ್ದರೆ ಪತಿವ್ರತೆಯನ್ನು ಕೆಡಿಸದ ಪಾಪ ನನಗುಂಟಾಗಲಿ.' ಚಿತ್ರಾಂಗನೂ ಪ್ರತಿಜ್ಞೆ ಮಾಡಿದ 'ನಿನ್ನ ಆ ಬಾಣವನ್ನು ನಾನು ನಡುವಿನಲ್ಲಿಯೆ ಕತ್ತರಿಸದಿದ್ದರೆ ತೀರ್ಥಯಾತ್ರೆಗೆ ಹೊರಟವನ ಮನೋನಿರ್ಧಾರವನ್ನು ಬದಲಿಸಿದ ಪಾಪ ನನಗೆ ಬರಲಿ. ಏಕಾದಶೀ ವ್ರತಕ್ಕಿಂತ ಹೆಚ್ಚಿನ ವ್ರತ ಬೇರೆ ಇದೆ ಎಂದು ತಿಳಿಯುವವನ ಪಾಪ ನನಗೆ ಬರಲಿ.' ಪುಷ್ಕಲನೆಂದ 'ರಾಮನ ಪಾದಗಳನ್ನು ಇಂದಿನ ವರೆಗೂ ಕಪಟವಿಲ್ಲದೆ, ಶುದ್ಧ ಮನಸ್ಸಿನಿಂದ ಸೇವಿಸಿದೆನಾದರೆ ನನ್ನ ಪ್ರತಿಜ್ಞೆ ದಿಟವೆನಿಸಲಿ. ಪರಸ್ತ್ರೀಯನ್ನು ಮನಸ್ಸಿನಿಂದಲೂ ಸ್ಮರಿಸದೆ ಇರುವೆನಾದರೆ ನನ್ನ ಶಪಥ ಈಡೇರಲಿ.' ಹೀಗೆ ಹೇಳಿ ಆ ಬಾಣವನ್ನು ಎಸೆದ. ಕಾಲಾಗ್ನಿಯಂತೆ ಜ್ವಲಿಸುತ್ತಿದ್ದ ಆ ಬಾಣವನ್ನು ಚಿತ್ರಾಂಗನು ತನ್ನ ಬಾಣದಿಂದ ನಡುವಿನಲ್ಲಿಯೆ ತುಂಡರಿಸಿದ. ಆದರೆ ಹಿಂದಿನ ಭಾಗ ಮಾತ್ರ ನೆಲದಲ್ಲಿ ಬಿದ್ದಿತು. ಮುಂಭಾಗ ನೇರವಾಗಿ ಹೋಗಿ ಚಿತ್ರಾಂಗನ ಕೊರಳನ್ನು ಕತ್ತರಿಸಿತು ಕಮಲದ ನಾಳವನ್ನು ಕಡಿದಂತೆ. ಕಿರೀಟ ಕುಂಡಲಗಳಿಂದ ಒಪ್ಪುತ್ತಿದ್ದ ರಾಜಕುಮಾರನ ಶಿರಸ್ಸು ಕಡಿದು ಉರುಳಿದಾಗ ಚಂದ್ರಬಿಂಬವು ಅಂತರಿಕ್ಷದಿಂದ ನೆಲಕ್ಕೆ ಉರುಳಿದಂತಾಯಿತು. ಒಡನೆ ಪುಷ್ಕಲನು ಕ್ರೌಂಚವ್ಯೂಹವನ್ನು ಪ್ರವೇಶಿಸಿದ.

**ಶೇಷ :-** ಚಿತ್ರಾಂಗನು ಮಡಿದು ಬಿದ್ದುದನ್ನು ಕಂಡ ಸುಬಾಹು ಪುತ್ರಶೋಕದಿಂದ ವಿಲಾಪ ಮಾಡತೊಡಗಿದನು. ಕೈಗಳಿಂದ ತಲೆಯನ್ನು ಹೊಡೆದುಕೊಂಡನು. ನಡುಗಿದನು. ಕಣ್ಣೀರಿಟ್ಟನು. ಚಂದ್ರನಂತೆ ಹೊಳೆಯುತ್ತಿದ್ದ ಮಗನ ಮುಖವೀಗ ಪುಷ್ಕಲನ ಬಾಣದೇಟಿನಿಂದ ರಕ್ತಮಯವಾಗಿದ್ದು. ಗಂಟಿಕ್ಕಿದ ಹುಬ್ಬುಗಳು, ಕಚ್ಚಿಹಿಡಿದ ಕೆಂಪು

ತುಟಿಗಳಿಂದ ರೋಷಪೂರ್ಣವಾಗಿ ಕಾಣುತ್ತಿತ್ತು. ಅದನ್ನು ಕೈಗಳಿಂದೆತ್ತಿ ಮುಖ ಕಮಲದಿಂದ ಮುದ್ದಿಸಿ ವಿಲಾಪಗೈದನು ರಾಜ. 'ಮಗು, ಏಕೆ ನನ್ನನ್ನು ನೋಡಲಾರೆ ? ಅಷ್ಟೊಂದು ಕೋಪವೆ ನನ್ನಲ್ಲಿ ? ಏಕೆ ಮಾತನಾಡುತ್ತಿಲ್ಲ ? ಏಕೆ ನಗು ಇಲ್ಲ ? ಅಮೃತದಂತೆ ಮಧುರವಾದ ಮಾತುಗಳಿಂದ ನನಗೆ ಆನಂದ ನೀಡುತ್ತಿದ್ದೆಯಲ್ಲ ! ಏಳು, ಶತ್ರುಘ್ನನ ಕುದುರೆಯನ್ನು ಹಿಡಿದುಕೊಳ್ಳು. ನೋಡು ಪ್ರತಾಪಾಗ್ರ್ಯ ಪುಷ್ಕಲ ಮುಂತಾದವರು ಬಿಲ್ಲು ಹಿಡಿದು ನಿಂತಿದ್ದಾರೆ. ನಿನ್ನ ತೀಕ್ಷ್ಣಬಾಣಗಳಿಂದ ಅವರ ಸೊಕ್ಕನ್ನು ನಿಲ್ಲಿಸು. ರಣರಂಗದ ಮಧ್ಯದಲ್ಲಿ ಏಕೆ ಮಲಗಿರುವೆ ? ನಮ್ಮ ಚತುರಂಗ ಸೇನೆಯನ್ನು ನೋಡು. ನೀನೆ ಅದನ್ನು ಕಾಪಾಡಬೇಕು. ಶತ್ರುಘ್ನನ ತೀಕ್ಷ್ಣ ಬಾಣಗಳನ್ನು ನೀನಲ್ಲದೆ ಇನ್ನಾರು ತಡೆಯಬಲ್ಲರು ? ನೀನಿಲ್ಲದಿದ್ದರೆ ಯಾರು ನನ್ನನ್ನು ಕಾಪಾಡುವರು ? ನೀನು ನಿದ್ದೆ ತಿಳಿದೆದ್ದರೆ ನನಗೆ ಜಯ.' ಹೀಗೆ ಎದೆ ಬಡಿದುಕೊಂಡು ಅತ್ತನು.

ವಿಚಿತ್ರ, ದಮನರು ಬಂದು ತಂದೆಯನ್ನು ಸಾಂತ್ವನಗೊಳಿಸತೊಡಗಿದರು. 'ಅಪ್ಪ, ನಾವು ಬದುಕಿರುವಾಗ ನಿನಗೇಕೆ ಈ ದುಃಖ ? ರಣರಂಗದಲ್ಲಿ ಸಾವನ್ನಪ್ಪುವುದು ವೀರರ ದೊಡ್ಡ ಬಯಕೆ. ವೀರ ಭೂಮಿಯಲ್ಲಿ ಹಲ್ಲು ಮುಡಿ ಕಚ್ಚಿಕೊಂಡು ಮಲಗಿ ಶೋಭಿಸುತ್ತಿದ್ದಾನೆ ಚಿತ್ರಾಂಗ. ನಿಜವಾಗಿಯೂ ಧನ್ಯ ! ಈಗ ಹೇಳು ನಾವೇನು ಮಾಡಬೇಕು ? ಶತ್ರುಘ್ನನ ಸೇನೆಯನ್ನು ನಾವಿಬ್ಬರೂ ಸೇರಿ ನಾಶಮಾಡುತ್ತೇವೆ. ಸೋದರನನ್ನು ಕೊಂದ ಆ ಪುಷ್ಕಲನ ತಲೆಯನ್ನು ತುಂಡರಿಸಿ ಕೆಳಗೆ ಎಸೆಯುತ್ತೇವೆ. ದುಃಖವನ್ನು ಬಿಡು. ಅದು ನಿನ್ನಂಥವನಿಗೆ ಶೋಭಿಸುವುದಿಲ್ಲ. ಯುದ್ಧದಲ್ಲಿ ಉತ್ಸಾಹ ತೋರು. ನಮಗೆ ಸರಿಯಾದ ಆಜ್ಞೆ ನೀಡು.

ರಾಜನು ತಮ್ಮ ಈ ಮಾತಿನಿಂದ ಸಮಾಧಾನ ತಂದುಕೊಂಡುದನ್ನು ಕಂಡು ವಿಚಿತ್ರ-ದಮನರು ಶತ್ರು ಸೇನೆಯೊಳಗೆ ನುಗ್ಗಿದರು. ದಮನನು ರಿಪುತಾಪವನನ್ನೂ, ವಿಚಿತ್ರನು ನೀಲರತ್ನನನ್ನೂ ತಡೆದರು. ಸುಬಾಹು ಶತ್ರುಘ್ನನ ಕಡೆಗೆ ರಥವನ್ನು ಓಡಿಸಿದ. ಪುತ್ರವಧದಿಂದ ಕೋಪಗೊಂಡು ಇಡಿ ಸೇನೆಯನ್ನೆ ನಾಶ ಮಾಡುತ್ತ ಬರುವ ಸುಬಾಹುವನ್ನು ಹನುಮಂತನು ಕಂಡು ಸಿಡಿಲಿನಂಥ ಗರ್ಜನೆ ಮಾಡುತ್ತ ಅಡ್ಡ ಬಂದು ನಿಂತ. ಅವನು ಕೋಪದ ಕಣ್ಣಿಂದ ನೋಡುತ್ತ ಹೇಳಿದ 'ಎಲ್ಲಿ ಆ ಪುಷ್ಕಲ ? ನನ್ನ ಮಗನನ್ನು ಕೊಂದು ಎಲ್ಲಿಗೆ ಹೋದ ? ಅವನ ತಲೆಯನ್ನು ಈಗಲೆ ಉರುಳಿಸುತ್ತೇನೆ. ಆ ಶತ್ರುಘ್ನನೆಲ್ಲಿ ? ರಾಮನೆಲ್ಲಿ ? ವೀರಭಟರು ಎಲ್ಲಿ ? ಇದೊ, ನಾನು ಬಂದಿದ್ದೇನೆ. ಎಲ್ಲರ ಪ್ರಾಣ ತೆಗೆಯುತ್ತೇನೆ.' ಹನುಮಂತನೆಂದ, 'ಲವಣಾಂತಕನಾದ ಶತ್ರುಘ್ನನು ಸೇನಾನಾಯಕನಾಗಿ ಇಲ್ಲಿಯೆ ಇದ್ದಾನೆ. ಆದರೆ ಅವನ ಬಂಟನಾದ ನಾನು ಮುಂದೆ ನಿಂತಿರುವಾಗ ಅವನೇಕೆ ಯುದ್ಧಕ್ಕೆ ನಿಲ್ಲುತ್ತಾನೆ ? ನನ್ನನ್ನು ಮೊದಲು ಗೆಲ್ಲು ಬಳಿಕ ಅವನೆಡೆಗೆ ಹೋಗುವಿಯಂತೆ !

ಒಡನೆ ಸುಬಾಹು ಹತ್ತು ಬಾಣಗಳನ್ನು ಒಮ್ಮೆಲೆ ಎಸೆದನು. ಹನುಮಂತನು ಪರ್ವತದಂತೆ ನಿಂತು ಆ ಬಾಣಗಳನ್ನೆಲ್ಲ ಕೈಯಿಂದ ಹಿಡಿದು ಪುಡಿಮಾಡಿದನು. ಸಿಡಿಲಿನಂತೆ ಗರ್ಜಿಸುತ್ತ ಬಾಲದಿಂದ ರಥವನ್ನು ಬಿಟ್ಟುಬಿಟ್ಟ. ಆದರೆ ಮೈಯೆಲ್ಲ ಬಾಣದೇಟಿನಿಂದ

ರಕ್ತಮಯವಾದಾಗ ರೋಷಗೊಂಡು ರಥವನ್ನೂ ಕುದುರೆಗಳನ್ನೂ ಹಿಡಿದು ಹಲ್ಲುಗಳಿಂದ ಪುಡಿ ಮಾಡಿದ.

ಸುಬಾಹು ಇನ್ನೊಂದು ರಥವನ್ನೇರಿ ಯುದ್ಧಕ್ಕೆನಿಂತ. ಶರಸಂಧಾನ ಕೋವಿದನಾದ ಅವನ ಬಾಣಗಳಿಂದ ಹನುಮಂತನ ಬಾಲ ಮುಖ ಎದೆ ಕೈ ಕಾಲು ಎಲ್ಲವೂ ಗಾಯಗೊಂಡವು. ಕೋಪದಿಂದ ಹಾರಿ ಅವನೆದೆಗೆ ಬಲವಾಗಿ ಒದ್ದುಬಿಟ್ಟ, ಹನುಮಂತ. ಸುಬಾಹು ಅದನ್ನು ತಡೆದುಕೊಳ್ಳಲಾರದೆ ವೇಗವಾಗಿ ಉಸಿರು ಬಿಡುತ್ತ ರಕ್ತವನ್ನು ಕಕ್ಕಿ ಮೈಮರೆತು ಬಿದ್ದ.

ಅತ್ತ ಪುಷ್ಕಲನ ಬಾಣದೇಟುಗಳು, ಇತ್ತ ಹನುಮಂತನು ಕೋಪದಿಂದ ಸೇನೆಯನ್ನೆಲ್ಲ ಪುಡಿ ಮಾಡುತ್ತಿದ್ದ. ಸುಬಾಹುವಿನ ಸೇನೆ ಕಂಗೆಟ್ಟು ಓಡತೊಡಗಿತು. ಅದನ್ನು ದಮನನು ತಡೆದು ನಿಲ್ಲಿಸಿದ, ಸೇತುವು ಸಮುದ್ರವನ್ನು ತಡೆದು ನಿಲ್ಲಿಸುವಂತೆ.

ಸುಬಾಹು ಮೂರ್ಛೆಯಲ್ಲಿಯೂ ಒಂದು ಕನಸನ್ನು ಕಂಡ. ಶ್ರೀರಾಮನು ಅಯೋಧ್ಯೆಯಲ್ಲಿಯ ಸರಯೂತೀರದಲ್ಲಿ ಯಾಜ್ಞಿಕರಾದ ಬ್ರಾಹ್ಮಣರ ನಡುವೆ ಕುಳಿತಿದ್ದ. ಬ್ರಹ್ಮಾದಿ ದೇವತೆಗಳು ಕೈಮುಗಿದು ಸ್ತೋತ್ರಮಾಡುತ್ತಿದ್ದರು. ನಾರದಾದಿ ಮುನಿಗಳು ವೀಣೆ ನುಡಿಸುತ್ತ ಹಾಡುತ್ತಿದ್ದರು. ಘೃತಾಚಿ ಮೇನಕೆ ಮೊದಲಾದ ಅಪ್ಸರೆಯರು ಕುಣಿಯುತ್ತಿದ್ದರು. ವೇದಗಳು ಮೂರ್ತಿಮತ್ತಾಗಿ ಬಂದು ಸ್ತೋತ್ರ ಮಾಡುತ್ತಿದ್ದವು. ಶ್ರೀರಾಮನು ಬಯಸಿದುದನ್ನೆಲ್ಲ ದಾನಮಾಡುತ್ತ ಭಕ್ತರನ್ನಾನಂದಗೊಳಿಸುತ್ತ ಮೆರೆಯುತ್ತಿದ್ದ.

ಹೀಗೆ ಸ್ವಪ್ನವನ್ನು ಕಂಡು ಎಚ್ಚೆತ್ತು ಕಾಲ್ನಡೆಯಿಂದ ಶತ್ರುಘ್ನನ ಬಳಿಗೆ ಹೊರಟ ಸುಬಾಹು. ಅಂದಿನವರೆಗೆ ಮುನಿ ಶಾಪದಿಂದ ಅವನ ಜ್ಞಾನ ಮರೆಯಾಗಿತ್ತು. ಈಗ ಸುಕೇತು ವಿಚಿತ್ರ ದಮನರನ್ನ ತಡೆದು ಹೇಳಿದ 'ತಮ್ಮ ನಿಲ್ಲು, ಮಕ್ಕಳೆ ನಿಲ್ಲಿರಿ. ಯುದ್ಧ ಮಾಡಬೇಡಿರಿ. ದಮನ, ನೀನು ಶ್ರೀರಾಮನ ಕುದುರೆಯನ್ನು ಹಿಡಿದುದು ಮಹಾಪರಾಧವಾಯಿತು. ಈ ರಾಮನು ಪರಬ್ರಹ್ಮ. ಕಾರ್ಯ ಕಾರಣಗಳಿಗಿಂತ ಉತ್ತಮ. ಚರಾಚರ ಜಗತ್ತಿಗೆ ಒಡೆಯ. ಮಾನವನಲ್ಲ. ನನಗೀಗ ಜ್ಞಾನೋದಯವಾಯಿತು. ಹಿಂದೆ ಅಸಿತಾಂಗನ ಶಾಪದಿಂದ ಆ ಜ್ಞಾನ ಮರೆಯಾಗಿತ್ತು. ತೀರ್ಥಯಾತ್ರೆ ಮಾಡುತ್ತ ಅನೇಕ ಮುನಿ ಜನರ ಬಳಿ ತತ್ವ ವಿಚಾರ ಮಾಡುತ್ತಿದ್ದಾಗ ಈ ಅಸಿತಾಂಗ ಮುನಿ ನನ್ನ ಮೇಲೆ ದಯೆಯಿಂದ ಹೀಗೆ ಉಪದೇಶಿಸತೊಡಗಿದ. 'ಅಯೋಧ್ಯಾಧಿಪತಿ ಶ್ರೀ ರಾಮನೆ ಪರಬ್ರಹ್ಮ. ದೇವಿ ಜಾನಕಿಯೆ ಲಕ್ಷ್ಮಿ. ಯೋಗಿಗಳು ಯಮನಿಯಮ ಮುಂತಾದವುಗಳಿಂದ ರಾಮನನ್ನು ಉಪಾಸನೆ ಮಾಡಿ ದುಸ್ತರ ಅಪಾರ ಸಂಸಾರ ಸಾಗರವನ್ನು ದಾಟುವರು. ಸ್ಮರಣ ಮಾತ್ರದಿಂದಲೆ ಮಹಾ ಪಾಪಗಳನ್ನು ಪರಿಹರಿಸುವ ಗರುಡ ಧ್ವಜನೆ ಆ ರಾಮ. ಅವನನ್ನು ಸೇವಿಸುವ ಜ್ಞಾನಿ ಸಂಸಾರವನ್ನು ದಾಟುವನು.' ನಾನು ಇದನ್ನು ಕೇಳಿ ನಕ್ಕೆ. 'ಮಾನವನಾದ ಈ ರಾಮನಾರು ? ಸುಖ ದುಃಖಗಳನ್ನು ಉಣ್ಣುವ ಜಾನಕಿ ಯಾರು ? ಜನ್ಮವಿಲ್ಲದವನು ಹೇಗೆ ಹುಟ್ಟಿದ ? ಏನೂ ಮಾಡದವನಿಗೆ ಇಲ್ಲೇನು ಕೆಲಸ ? ಮುನಿಯೆ, ಜನ್ಮ ದುಃಖ ಜರೆಗಳಿಲ್ಲದುದೇನಾದರೂ ಇದ್ದರೆ ಅದನ್ನು ಹೇಳು' ಎಂದು ಪರಿಹಾಸ ಮಾಡಿದೆ. ಮುನಿ ಕೋಪದಿಂದ ನನ್ನನ್ನು ಶಪಿಸಿದ.

'ಅಧಮ, ರಾಮನ ಸ್ವರೂಪದ ಪರಿಜ್ಞಾನವಿಲ್ಲದೆ ಅವನನ್ನು ನಿಂದಿಸುವೆಯಾ? ಸಾಮಾನ್ಯ ಮಾನವೆಂದು ಹಾಸ್ಯ ಮಾಡುವೆಯ ? ನಿನ್ನ ತತ್ವಜ್ಞಾನ ನಶಿಸಲಿ. ಬರೀ ಹೊಟ್ಟೆ ತುಂಬಿಸಿಕೊಳ್ಳುತ್ತ ಬದುಕಿರು.'

ಒಡನೆ ನಾನವನ ಕಾಲುಗಳನ್ನು ಹಿಡಿದು ಬೇಡಿದೆ. ಮನಒಲಿಸಿದೆ. ಅವನೆಂದ, 'ನೀನು ರಾಮನ ಯಜ್ಞಕ್ಕೆ ವಿಘ್ನ ಉಂಟು ಮಾಡಿದಾಗ ಹನುಮಂತನು ನಿನ್ನೆದೆಗೆ ಬಲವಾಗಿ ಒದೆಯುವನು. ಆಗ ನಿನಗೆ ಜ್ಞಾನೋದಯ. ಇಲ್ಲದಿದ್ದರೆ ನಿನ್ನ ಬುದ್ಧಿ ಬಲದಿಂದ ನೀನೇನೂ ತಿಳಿಯಲಾರೆ.' ಅದರಂತೆ ಈಗ ಹನುಮಂತನು ನನ್ನೆದೆಗೆ ಒದ್ದಾಗ ನಾನು ಮೂರ್ಛೆಹೊಂದಿ ಕನಸಿನಲ್ಲಿ ರಾಮನಾರೆಂಬುದನ್ನು ತಿಳಿದೆ. ಆದ್ದರಿಂದ ಕುದುರೆಯನ್ನು ತನ್ನಿ. ಅದನ್ನೂ, ಜತೆಗೆ ನನ್ನೆಲ್ಲ ರಾಜ್ಯವನ್ನು ಸಂಪತ್ತನ್ನು ರಾಮನಿಗರ್ಪಿಸುತ್ತೇನೆ. ಯಜ್ಞದಲ್ಲಿ ಅವನ ದರ್ಶನ ಪಡೆದು ಕೃತಾರ್ಥನಾಗುತ್ತೇನೆ.'

**ಶೇಷ :-** ತಂದೆಯ ಈ ಮಾತನ್ನು ಕೇಳಿ ಮಕ್ಕಳು ಸಂತೋಷದಿಂದ ನುಡಿದರು. 'ನಿನ್ನ ಪಾದಗಳನ್ನು ಹೊರತು ಬೇರಾವುದನ್ನು ಅರಿಯೆವು. ಆದ್ದರಿಂದ ನಿನ್ನ ಮನಸ್ಸಿನಲ್ಲಿದ್ದಂತೆಯೆ ಆಗಲಿ. ಈ ಯಾಗದ ಕುದುರೆ, ರಾಜ್ಯಕೋಶ, ಚತುರಂಗಬಲ, ದಾಸದಾಸಿಯರು, ಮುತ್ತುರತ್ನಗಳು, ಬೆಲೆ ಬಾಳುವ ಎಲ್ಲ ವಸ್ತುಗಳು ಎಲ್ಲವನ್ನು ರಾಮನಿಗೆ ಅರ್ಪಿಸು. ನಿನ್ನ ಮಕ್ಕಳು ನಾವು ನಿನ್ನ ಸೇವಕರು. ನಮ್ಮನ್ನೂ ಅವನಿಗರ್ಪಿಸಬಹುದು. ಸಿಂಹಾಸನ ನಿನ್ನದಾಗಿರುವಾಗ ಏನೂ ಮಾಡಬಹುದು. ಏಕೆ ಅನುಮಾನ?

ಸುಬಾಹು ಸಂತೋಷದಿಂದ ಕುದುರೆಯನ್ನು ಚತುರಂಗ ಸೇನೆಯನ್ನು ತರಲು ಮಕ್ಕಳಿಗಾದೇಶ ನೀಡಿದ. ಅವರು ಕುದುರೆಯನ್ನು ತಂದೊಡನೆ ಶತ್ರುಘ್ನನೆಡೆಗೆ ಕಾಲುನಡೆಯಿಂದ ಹೊರಟ. ಆಸಕ್ತಿ ಇಟ್ಟುಕೊಂಡವರಿಗೆ ಸಂಪತ್ತು ಎಂದಿಗೂ ದುಃಖವನ್ನೆ ಕೊಡುವುದು. ಅದು ನಶ್ವರವೂ ಹೌದು. ಇದನ್ನು ತಿಳಿದ ರಾಜ ತನ್ನೆಲ್ಲ ಸಂಪತ್ತನ್ನೂ ಸದ್ವಿನಿಯೋಗ ಮಾಡಲು ಬಯಸಿದ. ಎದುರಿಗೆ ಶ್ವೇತಚ್ಛತ್ರದ ನೆರಳಲ್ಲಿ ಬೀಸುವ ಚಾಮರಗಳ ನಡುವೆ ಶತ್ರುಘ್ನ ನಿಂತಿದ್ದ. ಭಯವೆಂದರೆ ಏನೆಂದೆ ಅರಿಯದವ. ಕೋಟಿ ವೀರರು ಸುತ್ತಲೂ ನಿಂತು ಅವನ ಕಟಾಕ್ಷ ತಮ್ಮ ಮೇಲೆ ಬೀಳಲೆಂದು ಹಾತೊರೆಯುತ್ತಿದ್ದರು. ಸುಬಾಹು ಅವನ ಕಾಲಿಗೆ ಬಿದ್ದು ತಾನು ಧನ್ಯನಾದನೆಂದುಕೊಂಡ. ಶತ್ರುಘ್ನನು ಅವನನ್ನೆತ್ತಿ ಆಲಿಂಗಿಸಿಕೊಂಡ. ಸಂತೋಷದಿಂದ ನಡುಗುವ ಧ್ವನಿಯಲ್ಲಿ ಸುಬಾಹು ನುಡಿದ.

**ಸುಬಾಹು :-** ಈಗ ನಾನು ಧನ್ಯನಾದೆ. ನನ್ನ ಮಕ್ಕಳು, ಪರಿವಾರ ಎಲ್ಲರೂ ಧನ್ಯರಾದರು. ಕೋಟಿ ರಾಜರುಗಳ ಸ್ತುತಿಗೆ ಪಾತ್ರವಾದ ನಿನ್ನ ಪಾದಗಳ್ನು ನಾವು ಕಂಡೆವು. ಅಜ್ಞಾನದಿಂದ ದಮನನು ನಿನ್ನ ಕುದುರೆಯನ್ನು ಹಿಡಿದುಕೊಂಡ. ರಾಮನು ಲೀಲೆಯಿಂದ ಜಗತ್ತಿನ ಸೃಷ್ಟಿ, ಸ್ಥಿತಿ, ಲಯಗಳನ್ನು ಮಾಡುವ ದೇವಾಧಿದೇವನೆಂದು ಅವನು ತಿಳಿದಿಲ್ಲ. ಕ್ಷಮಿಸು, ಈ ರಾಜ್ಯ, ಈ ಚತುರಂಗ ಸೇನೆ, ಸಂಪತ್ತಿನಿಂದ ಸಮೃದ್ಧವಾದ ಈ ನನ್ನ ಕೋಶ, ಈ ಮಕ್ಕಳು, ಪರಿವಾರ ಎಲ್ಲವನ್ನೂ ಪರಿಗ್ರಹಿಸು. ನಾವು ರಾಮನ ಸೇವಕರು, ನಿನ್ನಾಜ್ಞಾಧಾರಕರು. ಆ ಹನುಮಂತನೆಲ್ಲಿ ? ರಾಮನಡಿದಾವರೆಗಳ ದುಂಬಿಯಾದ ಅವನ ಅನುಗ್ರಹದಿಂದ ನಾನು ರಾಮನ ದರ್ಶನ ಪಡೆಯುವೆ. '**ಸಾಧೂನಾಂ ಸಂಗಮೇ ಕಿಂ ಕಿಂ**

ರಕ್ತಮಯವಾದಾಗ ರೋಷಗೊಂಡು ರಥವನ್ನೂ ಕುದುರೆಗಳನ್ನೂ ಹಿಡಿದು ಹಲ್ಲುಗಳಿಂದ ಪುಡಿ ಮಾಡಿದ.

ಸುಬಾಹು ಇನ್ನೊಂದು ರಥವನ್ನೇರಿ ಯುದ್ಧಕ್ಕೆನಿಂತ. ಶರಸಂಧಾನ ಕೋವಿದನಾದ ಅವನ ಬಾಣಗಳಿಂದ ಹನುಮಂತನ ಬಾಲ ಮುಖ ಎದೆ ಕೈ ಕಾಲು ಎಲ್ಲವೂ ಗಾಯಗೊಂಡವು. ಕೋಪದಿಂದ ಹಾರಿ ಅವನೆದೆಗೆ ಬಲವಾಗಿ ಒದ್ದುಬಿಟ್ಟ, ಹನುಮಂತ. ಸುಬಾಹು ಅದನ್ನು ತಡೆದುಕೊಳ್ಳಲಾರದೆ ವೇಗವಾಗಿ ಉಸಿರು ಬಿಡುತ್ತ ರಕ್ತವನ್ನು ಕಕ್ಕಿ ಮೈಮರೆತು ಬಿದ್ದ.

ಅತ್ತ ಪುಷ್ಕಲನ ಬಾಣದೇಟುಗಳು, ಇತ್ತ ಹನುಮಂತನು ಕೋಪದಿಂದ ಸೇನೆಯನ್ನೆಲ್ಲ ಪುಡಿ ಮಾಡುತ್ತಿದ್ದ. ಸುಬಾಹುವಿನ ಸೇನೆ ಕಂಗೆಟ್ಟು ಓಡತೊಡಗಿತು. ಅದನ್ನು ದಮನನು ತಡೆದು ನಿಲ್ಲಿಸಿದ, ಸೇತುವು ಸಮುದ್ರವನ್ನು ತಡೆದು ನಿಲ್ಲಿಸುವಂತೆ.

ಸುಬಾಹು ಮೂರ್ಛೆಯಲ್ಲಿಯೂ ಒಂದು ಕನಸನ್ನು ಕಂಡ. ಶ್ರೀರಾಮನು ಅಯೋಧ್ಯೆಯಲ್ಲಿಯ ಸರಯೂತೀರದಲ್ಲಿ ಯಾಜ್ಞಿಕರಾದ ಬ್ರಾಹ್ಮಣರ ನಡುವೆ ಕುಳಿತಿದ್ದ. ಬ್ರಹ್ಮಾದಿ ದೇವತೆಗಳು ಕೈಮುಗಿದು ಸ್ತೋತ್ರಮಾಡುತ್ತಿದ್ದರು. ನಾರದಾದಿ ಮುನಿಗಳು ವೀಣೆ ನುಡಿಸುತ್ತ ಹಾಡುತ್ತಿದ್ದರು. ಘೃತಾಚಿ ಮೇನಕೆ ಮೊದಲಾದ ಅಪ್ಸರೆಯರು ಕುಣಿಯುತ್ತಿದ್ದರು. ವೇದಗಳು ಮೂರ್ತಿಮತ್ತಾಗಿ ಬಂದು ಸ್ತೋತ್ರ ಮಾಡುತ್ತಿದ್ದವು. ಶ್ರೀರಾಮನು ಬಯಸಿದುದನ್ನೆಲ್ಲ ದಾನಮಾಡುತ್ತ ಭಕ್ತರನ್ನಾನಂದಗೊಳಿಸುತ್ತ ಮೆರೆಯುತ್ತಿದ್ದ.

ಹೀಗೆ ಸ್ವಪ್ನವನ್ನು ಕಂಡು ಎಚ್ಚೆತ್ತು ಕಾಲ್ನಡೆಯಿಂದ ಶತ್ರುಘ್ನನ ಬಳಿಗೆ ಹೊರಟ ಸುಬಾಹು. ಅಂದಿನವರೆಗೆ ಮುನಿ ಶಾಪದಿಂದ ಅವನ ಜ್ಞಾನ ಮರೆಯಾಗಿತ್ತು. ಈಗ ಸುಕೇತು ವಿಚಿತ್ರ ದಮನರನ್ನ ತಡೆದು ಹೇಳಿದ 'ತಮ್ಮ ನಿಲ್ಲು, ಮಕ್ಕಳೆ ನಿಲ್ಲಿರಿ. ಯುದ್ಧ ಮಾಡಬೇಡಿರಿ. ದಮನ, ನೀನು ಶ್ರೀರಾಮನ ಕುದುರೆಯನ್ನು ಹಿಡಿದುದು ಮಹಾಪರಾಧವಾಯಿತು. ಈ ರಾಮನು ಪರಬ್ರಹ್ಮ. ಕಾರ್ಯ ಕಾರಣಗಳಿಗಿಂತ ಉತ್ತಮ. ಚರಾಚರ ಜಗತ್ತಿಗೆ ಒಡೆಯ. ಮಾನವನಲ್ಲ. ನನಗೀಗ ಜ್ಞಾನೋದಯವಾಯಿತು. ಹಿಂದೆ ಅಸಿತಾಂಗನ ಶಾಪದಿಂದ ಆ ಜ್ಞಾನ ಮರೆಯಾಗಿತ್ತು. ತೀರ್ಥಯಾತ್ರೆ ಮಾಡುತ್ತ ಅನೇಕ ಮುನಿ ಜನರ ಬಳಿ ತತ್ತ್ವ ವಿಚಾರ ಮಾಡುತ್ತಿದ್ದಾಗ ಈ ಅಸಿತಾಂಗ ಮುನಿ ನನ್ನ ಮೇಲೆ ದಯೆಯಿಂದ ಹೀಗೆ ಉಪದೇಶಿಸತೊಡಗಿದ. 'ಅಯೋಧ್ಯಾಧಿಪತಿ ಶ್ರೀ ರಾಮನೆ ಪರಬ್ರಹ್ಮ. ದೇವಿ ಜಾನಕಿಯೆ ಲಕ್ಷ್ಮಿ. ಯೋಗಿಗಳು ಯಮನಿಯಮ ಮುಂತಾದವುಗಳಿಂದ ರಾಮನನ್ನು ಉಪಾಸನೆ ಮಾಡಿ ದುಸ್ತರ ಅಪಾರ ಸಂಸಾರ ಸಾಗರವನ್ನು ದಾಟುವರು. ಸ್ಮರಣ ಮಾತ್ರದಿಂದಲೆ ಮಹಾ ಪಾಪಗಳನ್ನು ಪರಿಹರಿಸುವ ಗರುಡ ಧ್ವಜನೆ ಆ ರಾಮ. ಅವನನ್ನು ಸೇವಿಸುವ ಜ್ಞಾನಿ ಸಂಸಾರವನ್ನು ದಾಟುವನು.' ನಾನು ಇದನ್ನು ಕೇಳಿ ನಕ್ಕೆ. 'ಮಾನವನಾದ ಈ ರಾಮನಾರು ? ಸುಖ ದುಃಖಗಳನ್ನು ಉಣ್ಣುವ ಜಾನಕಿ ಯಾರು ? ಜನ್ಮವಿಲ್ಲದವನು ಹೇಗೆ ಹುಟ್ಟಿದ ? ಏನೂ ಮಾಡದವನಿಗೆ ಇಲ್ಲೇನು ಕೆಲಸ ? ಮುನಿಯೆ, ಜನ್ಮ ದುಃಖ ಜರೆಗಳಿಲ್ಲದುದೇನಾದರೂ ಇದ್ದರೆ ಅದನ್ನು ಹೇಳು' ಎಂದು ಪರಿಹಾಸ ಮಾಡಿದೆ. ಮುನಿ ಕೋಪದಿಂದ ನನ್ನನ್ನು ಶಪಿಸಿದ.

'ಅಧಮ, ರಾಮನ ಸ್ವರೂಪದ ಪರಿಜ್ಞಾನವಿಲ್ಲದೆ ಅವನನ್ನು ನಿಂದಿಸುವೆಯ ? ಸಾಮಾನ್ಯ ಮಾನವೆಂದು ಹಾಸ್ಯ ಮಾಡುವೆಯ ? ನಿನ್ನ ತತ್ವಜ್ಞಾನ ನಶಿಸಲಿ. ಬರೀ ಹೊಟ್ಟೆ ತುಂಬಿಸಿಕೊಳ್ಳುತ್ತ ಬದುಕಿರು.'

ಒಡನೆ ನಾನವನ ಕಾಲುಗಳನ್ನು ಹಿಡಿದು ಬೇಡಿದೆ. ಮನಒಲಿಸಿದೆ. ಅವನೆಂದ, 'ನೀನು ರಾಮನ ಯಜ್ಞಕ್ಕೆ ವಿಘ್ನ ಉಂಟು ಮಾಡಿದಾಗ ಹನುಮಂತನು ನಿನ್ನೆದೆಗೆ ಬಲವಾಗಿ ಒದೆಯುವನು. ಆಗ ನಿನಗೆ ಜ್ಞಾನೋದಯ. ಇಲ್ಲದಿದ್ದರೆ ನಿನ್ನ ಬುದ್ಧಿ ಬಲದಿಂದ ನೀನೇನೂ ತಿಳಿಯಲಾರೆ.' ಅದರಂತೆ ಈಗ ಹನುಮಂತನು ನನ್ನೆದೆಗೆ ಒದ್ದಾಗ ನಾನು ಮೂರ್ಛೆಹೊಂದಿ ಕನಸಿನಲ್ಲಿ ರಾಮನಾರೆಂಬುದನ್ನು ತಿಳಿದೆ. ಆದ್ದರಿಂದ ಕುದುರೆಯನ್ನು ತನ್ನಿ. ಅದನ್ನೂ, ಜತೆಗೆ ನನ್ನೆಲ್ಲ ರಾಜ್ಯವನ್ನು ಸಂಪತ್ತನ್ನು ರಾಮನಿಗರ್ಪಿಸುತ್ತೇನೆ. ಯಜ್ಞದಲ್ಲಿ ಅವನ ದರ್ಶನ ಪಡೆದು ಕೃತಾರ್ಥನಾಗುತ್ತೇನೆ.'

**ಶೇಷ :-** ತಂದೆಯ ಈ ಮಾತನ್ನು ಕೇಳಿ ಮಕ್ಕಳು ಸಂತೋಷದಿಂದ ನುಡಿದರು. 'ನಿನ್ನ ಪಾದಗಳನ್ನು ಹೊರತು ಬೇರಾವುದನ್ನು ಅರಿಯೆವು. ಆದ್ದರಿಂದ ನಿನ್ನ ಮನಸ್ಸಿನಲ್ಲಿದ್ದಂತೆಯೆ ಆಗಲಿ. ಈ ಯಾಗದ ಕುದುರೆ, ರಾಜ್ಯಕೋಶ, ಚತುರಂಗಬಲ, ದಾಸದಾಸಿಯರು, ಮುತ್ತುರತ್ನಗಳು, ಬೆಲೆ ಬಾಳುವ ಎಲ್ಲ ವಸ್ತುಗಳು ಎಲ್ಲವನ್ನು ರಾಮನಿಗೆ ಅರ್ಪಿಸು. ನಿನ್ನ ಮಕ್ಕಳು ನಾವು ನಿನ್ನ ಸೇವಕರು. ನಮ್ಮನ್ನೂ ಅವನಿಗರ್ಪಿಸಬಹುದು. ಸಿಂಹಾಸನ ನಿನ್ನದಾಗಿರುವಾಗ ಏನೂ ಮಾಡಬಹುದು. ಏಕೆ ಅನುಮಾನ?

ಸುಬಾಹು ಸಂತೋಷದಿಂದ ಕುದುರೆಯನ್ನು ಚತುರಂಗ ಸೇನೆಯನ್ನು ತರಲು ಮಕ್ಕಳಿಗಾದೇಶ ನೀಡಿದ. ಅವರು ಕುದುರೆಯನ್ನು ತಂದೊಡನೆ ಶತ್ರುಘ್ನನೆಡೆಗೆ ಕಾಲುನಡೆಯಿಂದ ಹೊರಟ. ಆಸಕ್ತಿ ಇಟ್ಟುಕೊಂಡವರಿಗೆ ಸಂಪತ್ತು ಎಂದಿಗೂ ದುಃಖವನ್ನೆ ಕೊಡುವುದು. ಅದು ನಶ್ವರವೂ ಹೌದು. ಇದನ್ನು ತಿಳಿದ ರಾಜ ತನ್ನೆಲ್ಲ ಸಂಪತ್ತನ್ನೂ ಸದ್ವಿನಿಯೋಗ ಮಾಡಲು ಬಯಸಿದ. ಎದುರಿಗೆ ಶ್ವೇತಚ್ಛತ್ರದ ನೆರಳಲ್ಲಿ ಬೀಸುವ ಚಾಮರಗಳ ನಡುವೆ ಶತ್ರುಘ್ನ ನಿಂತಿದ್ದ. ಭಯವೆಂದರೆ ಏನೆಂದೆ ಅರಿಯದವ. ಕೋಟಿ ವೀರರು ಸುತ್ತಲೂ ನಿಂತು ಅವನ ಕಟಾಕ್ಷ ತಮ್ಮ ಮೇಲೆ ಬೀಳಲೆಂದು ಹಾತೊರೆಯುತ್ತಿದ್ದರು. ಸುಬಾಹು ಅವನ ಕಾಲಿಗೆ ಬಿದ್ದು ತಾನು ಧನ್ಯನಾದನೆಂದುಕೊಂಡ. ಶತ್ರುಘ್ನನು ಅವನನ್ನೆತ್ತಿ ಅಲಿಂಗಿಸಿಕೊಂಡ. ಸಂತೋಷದಿಂದ ನಡುಗುವ ಧ್ವನಿಯಲ್ಲಿ ಸುಬಾಹು ನುಡಿದ.

**ಸುಬಾಹು :-** ಈಗ ನಾನು ಧನ್ಯನಾದೆ. ನನ್ನ ಮಕ್ಕಳು, ಪರಿವಾರ ಎಲ್ಲರೂ ಧನ್ಯರಾದರು. ಕೋಟಿ ರಾಜರುಗಳ ಸ್ತುತಿಗೆ ಪಾತ್ರವಾದ ನಿನ್ನ ಪಾದಗಳ್ನು ನಾವು ಕಂಡೆವು. ಅಜ್ಞಾನದಿಂದ ದಮನನು ನಿನ್ನ ಕುದುರೆಯನ್ನು ಹಿಡಿದುಕೊಂಡ. ರಾಮನು ಲೀಲೆಯಿಂದ ಜಗತ್ತಿನ ಸೃಷ್ಟಿ, ಸ್ಥಿತಿ, ಲಯಗಳನ್ನು ಮಾಡುವ ದೇವಾಧಿದೇವನೆಂದು ಅವನು ತಿಳಿದಿಲ್ಲ. ಕ್ಷಮಿಸು, ಈ ರಾಜ್ಯ, ಈ ಚತುರಂಗ ಸೇನೆ, ಸಂಪತ್ತಿನಿಂದ ಸಮೃದ್ಧವಾದ ಈ ನನ್ನ ಕೋಶ, ಈ ಮಕ್ಕಳು, ಪರಿವಾರ ಎಲ್ಲವನ್ನೂ ಪರಿಗ್ರಹಿಸು. ನಾವು ರಾಮನ ಸೇವಕರು, ನಿನ್ನಾಜ್ಞಾಧಾರಕರು. ಆ ಹನುಮಂತನೆಲ್ಲಿ ? ರಾಮನಡಿದಾವರೆಗಳ ದುಂಬಿಯಾದ ಅವನ ಅನುಗ್ರಹದಿಂದ ನಾನು ರಾಮನ ದರ್ಶನ ಪಡೆಯುವೆ. **'ಸಾಧೂನಾಂ ಸಂಗಮೇ ಕಿಂ ಕಿಂ**

**ಪ್ರಾಪ್ಯತೇ ನ ಮಹೀತಳೇ.'** ಸಜ್ಜನರ ಬಳಿ ಸೇರಿದರೆ ಈ ಭೂಮಿಯಲ್ಲಿ ಅಲಭ್ಯವೆನಿಸುವ ವಸ್ತು ಏನಿರಬಲ್ಲುದು ? ಬ್ರಾಹ್ಮಣ ಶಾಪದಿಂದ ಈವರೆಗೆ ಮೂಢನಾಗಿದ್ದ ನನಗೆ ಹನುಮಂತನ ಅನುಗ್ರಹದಿಂದ ಜ್ಞಾನೋದಯವಾಯಿತು. ಈಗ ಆ ತಾವರೆಗಣ್ಣನ ರಾಮಚಂದ್ರ ಮಹಾರಾಜನನ್ನು ಕಂಡು ಜನ್ಮ ಸಾಫಲ್ಯವನ್ನು ಪಡೆವೆನು. ನನ್ನ ಆಯುಸ್ಸಿನ ಬಹುಪಾಲು ರಾಮನನ್ನು ನೋಡದೆಯೆ ಕಳೆದುಹೋಯಿತು. ಇನ್ನುಳಿದ ಸ್ವಲ್ಪ ಆಯುಸ್ಸಿನಲ್ಲಿ ನಾನು ಅವನನ್ನೆಂತು ಕಾಣುವೆನೊ ? ಶತ್ರುಘ್ನ, ನನಗೆ ರಾಮದರ್ಶನ ಮಾಡಿಸು. ಕಲ್ಲಾಗಿ ಬಿದ್ದಿದ್ದ ಋಷಿಪತ್ನಿಯನ್ನು ಪಾದಧೂಳಿಯಿಂದ ಪವಿತ್ರಗೊಳಿಸಿದವ ಶ್ರೀರಾಮ. ಬಾಣದೇಟಿನಿಂದ ಕಾಗೆಗೆ ಸದ್ಗತಿಯನ್ನಿತ್ತವ ಶ್ರೀರಾಮ. ಯುದ್ಧರಂಗದಲ್ಲಿ ತನ್ನ ಮುಖದರ್ಶನ ಮಾತ್ರದಿಂದ ಅನೇಕ ವೀರರಿಗೆ ಸದ್ಗತಿ ನೀಡಿದವ ಶ್ರೀರಾಮ.

**ಯೇ ತ್ವಸ್ಯ ರಘುನಾಥಸ್ಯ ನಾಮಗೃಹ್ಣಂತಿ ಸಾದರಾಃ**
**ತೇಯಾಂತಿ ಪರಮಂ ಸ್ಥಾನಂ ಯೋಗಿ ಬಿರ್ಯದ್ವಿಚಿಂತ್ಯತೇ ॥**

ಆದರದಿಂದ ರಾಮನ ನಾಮವನ್ನು ಉಚ್ಚರಿಸುವವರು ಯೋಗಿಗಳು ಚಿಂತಿಸುವ ಪದವನ್ನೆ ಹೊಂದುತ್ತಾರೆ.

ರಾಮನ ಮೊಗದಾವರೆಯನ್ನು ಕಣ್ಣುಗಳ ಬೊಗಸೆಯಿಂದೆತ್ತಿ ಕುಡಿದು ಆನಂದ ಪಡುವ ಅಯೋಧ್ಯೆಯ ಜನರೆ ಧನ್ಯರು. ಹೀಗೆ ಹೇಳಿ ಶತ್ರುಘ್ನನಿಗೆ ತನ ಸರ್ವಸ್ವವನ್ನು ಅರ್ಪಿಸಿ ಅವನ ಆಜ್ಞೆಗೆ ಇದಿರು ನೋಡುತ್ತ ನಿಂತ ಸುಬಾಹು ಶತ್ರುಘ್ನನೆಂದ.

**ಶತ್ರುಘ್ನ** :- ರಾಜನೆ, ಇದೇನು ನೀನು ಹೀಗನ್ನುವೆ ? ನೀನು ವೃದ್ಧ. ನನಗೆ ಪೂಜ್ಯನಾಗಿರುವವ. ನಿನ್ನ ರಾಜ್ಯವೆಲ್ಲವೂ ನಿನ್ನದೆ. ದಮನನು ಅದನ್ನು ನೋಡಿಕೊಳ್ಳಲಿ. ಯುದ್ಧ ಮಾಡುವುದರಲ್ಲೇನೂ ತಪ್ಪಿಲ್ಲ. ಅದು ಕ್ಷಾತ್ರ ಧರ್ಮ ನೀನೀಗ ಕೊಟ್ಟ ರಾಜ್ಯ. ಕೋಶ ಎಲ್ಲವನ್ನೂ ಹಿಂತಿರುಗಿಸುವೆನು. ನನಗೆ ರಾಮನು ಹೇಗೆ ತ್ರಿಕರಣಗಳಿಂದಲೂ ಪೂಜ್ಯನೊ ಹಾಗೆ ನೀನೂ ಪೂಜ್ಯನೆನಿಸುವೆ. ನೀನು ಕುದುರೆಯನ್ನು ಹಿಂಬಾಲಿಸಲು ಸಿದ್ಧನಾಗು.

ಇದನ್ನು ಕೇಳಿ ಸುಬಾಹು ದಮನನಿಗೆ ಪಟ್ಟಾಭಿಷೇಕ ಮಾಡಿ ರಣರಂಗದಲ್ಲಿ ಮಡಿದ ಮಗನಿಗೆ ವಿಧಿವತ್ತಾಗಿ ಸಂಸ್ಕಾರವನ್ನು ಮಾಡಿದ ಕ್ಷಣಕಾಲ ಲೋಕದೃಷ್ಟಿಗನುಗುಣವಾಗಿ ಶೋಕಿಸಿದರೂ ಮರುಕ್ಷಣದಲ್ಲಿಯೆ ತತ್ವಜ್ಞಾನದ ಬಲದಿಂದ ದುಃಖವನ್ನು ತಡೆದುಕೊಂಡ. ರಾಮನನ್ನು ಸ್ಮರಿಸಿ ಎಲ್ಲವನ್ನೂ ಮರೆತ. ದೊಡ್ಡ ಸೇನೆಯೊಡನೆ ಸಿದ್ಧನಾಗಿ ಶತ್ರುಘ್ನನ ಬಳಿಗೆ ಬಂದ.

ಕುದುರೆಯನ್ನು ಬಿಟ್ಟು ಎಲ್ಲರೂ ಅದನ್ನು ಹಿಂಬಾಲಿಸಿದರು. ಅದು ಎಡಕ್ಕೆ ತಿರುಗಿ ಅನೇಕ ಪೂರ್ವ ದೇಶಗಳಲ್ಲಿ ಸಂಚರಿಸಿತು. ಎಲ್ಲ ರಾಜರೂ ಅದನ್ನು ನಮಸ್ಕರಿಸಿ ಗೌರವಿಸಿದರು. ರಾಜ್ಯ ಸಂಪತ್ತು ಬಟ್ಟೆಬರೆಗಳನ್ನಿತ್ತು ಆದರಿಸಿದರು.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಪಾತಾಳ ಖಂಡದಲ್ಲಿ ಶೇಷ-ವಾತ್ಸ್ಯಾಯನ ಸಂವಾದದಲ್ಲಿ ರಾಮಾಶ್ವಮೇಧದಲ್ಲಿ ಶತ್ರುಘ್ನ-ಸುಬಾಹು ಸಮಾಗಮವೆಂಬ ಹದಿಮೂರನೆ ಅಧ್ಯಾಯ ಮುಗಿದುದು*

—o—

**ಶೇಷ ಉವಾಚ**

**ಶೇಷ :-** ಕುದುರೆ ತೇಜಃಪುರಕ್ಕೆ ಹೋಯಿತು. ಅದನ್ನು ಆಳುವ ದೊರೆ ಸತ್ಯವಂತನೆಂಬವನು. ಸುತ್ತಲೂ ಸುಂದರವಾದ ಪ್ರಾಕಾರ ಸುವರ್ಣ ಕಲಶಗಳು, ಒಳಗೆ ಎಲ್ಲೆಡೆ ಶೋಭಿಸುವ ಸಾವಿರಾರು ದೇವಾಲಯಗಳು, ಯತಿಗಳಿಂದ ತುಂಬಿದ ಮಠಗಳು, ಅಗ್ನಿಹೋತ್ರದ ಪವಿತ್ರಧೂಮವನ್ನು ಎಲ್ಲೆಡೆ ಪಸರಿಸುವ ಬ್ರಾಹ್ಮಣರ ಮನೆಗಳು. ಹಂಸ ಬಕಗಳಿಂದಲೂ ಮುನಿಜನರಿಂದಲೂ ಸೇವಿಸಲ್ಪಡುವ ಗಂಗಾನದಿ ಅಲ್ಲಿ ಹರಿಯುತ್ತದೆ. ಆ ನಗರವನ್ನು ನೋಡಿ ಆನಂದ, ಆಶ್ಚರ್ಯಗಳಿಂದ ತುಂಬಿದ ಶತ್ರುಘ್ನನು ಅಮಾತ್ಯ ಸುಮತಿಯನ್ನು ಕೇಳಿದ.

**ಶತ್ರುಘ್ನ :-** ಸುಮತಿ, ಎದುರಿಗೆ ಕಾಣುವ ನಗರ ಯಾವುದು ? ನೋಡಿದರೆ ಮನಸ್ಸಿಗೆ ಆಹ್ಲಾದ ಉಂಟು ಮಾಡುತ್ತಿದೆ. ಅದನ್ನು ಆಳುವ ದೊರೆ ಧರ್ಮದಿಂದ ಅದನ್ನು ಆಳುತ್ತಿದ್ದಾನೆ.

**ಸುಮತಿ :-** ಪ್ರಭು ಹೇಳುತ್ತೇನೆ ಕೇಳು. ವಿಷ್ಣುಭಕ್ತರ ಪುಣ್ಯ ಚರಿತ್ರೆಯನ್ನು ಕೇಳಿದರೆ ಬ್ರಹ್ಮಹತ್ಯೆಯಂಥ ಪಾತಕಗಳೂ ಪರಿಹಾರವಾಗುತ್ತವೆ. ಈ ನಗರದ ದೊರೆ ಸತ್ಯವಂತನು. ರಾಮನ ಅಡಿದಾವರೆಗಳಲ್ಲಿ ದುಂಬಿಯಂತಿರುವವನು. ಜೀವನ್ಮುಕ್ತ. ಯಜ್ಞಯಾಗಗಳನ್ನು ಚೆನ್ನಾಗಿ ತಿಳಿದು ಮಾಡುವವ. ಇವನ ತಂದೆ ಋತುಂಭರ ರಾಜ, ಪರಮ ಧಾರ್ಮಿಕ. ಕಾಮಧೇನುವನ್ನು ಒಲಿಸಿಕೊಂಡು ಇವನನ್ನು ಮಗನನ್ನಾಗಿ ಪಡೆದ.

**ಶತ್ರುಘ್ನ :-** ಋತುಂಭರ ರಾಜನಾರು? ಅವನು ಕಾಮಧೇನುವನ್ನೇಕೆ ಆರಾಧಿಸಿದ ? ವಿಷ್ಣುಭಕ್ತನಾದ ಮಗನನ್ನು ಹೇಗೆ ಪಡೆದ ?

**ಸುಮತಿ :-** ಋತುಂಭರನಿಗೆ ಮೊದಲು ಮಕ್ಕಳಿರಲಿಲ್ಲ. ಬಹಳ ಜನ ಹೆಂಡರಿದ್ದರು. ಒಮ್ಮೆ ಅವನ ಬಳಿಗೆ ಜಾಬಾಲಿಮುನಿ ಬಂದಾಗ ತನಗೆ ಮಕ್ಕಳಾಗಲು ಏನು ಮಾಡಬೇಕೆಂದು ಕೇಳಿದ.

**ಋತುಂಬರ :-** ಮುನಿಯೆ, ನನಗೆ ಮಕ್ಕಳಿಲ್ಲ. ವಂಶೋದ್ಧಾರಕನಾದ ಪುತ್ರನನ್ನು ಪಡೆಯಲು ಏನು ಮಾಡಬೇಕು ? ದಾನವೆ, ವ್ರತವೆ, ತೀರ್ಥಯಾತ್ರೆಯೆ, ಯಜ್ಞವೆ, ನೀನೇನು ಹೇಳಿದರೂ ಅದನ್ನು ಮಾಡುವೆ.

**ಜಾಬಾಲಿ :-** ಪುತ್ರ ಪ್ರಾಪ್ತಿ ಸಾಧನಗಳು ಮೂರು. ವಿಷ್ಣುವಿನ ಅನುಗ್ರಹ ಗೋವಿನ ಅನುಗ್ರಹ ಮತ್ತು ಶಿವನ ಅನುಗ್ರಹ. ನೀನೀಗ ಗೋ ಸೇವೆ ಮಾಡು. ಗೋವಿನ ಬಾಲ ಮುಖ ಕೊಂಬು ಬೆನ್ನು ಈ ಎಲ್ಲ ಅಂಗಗಳಲ್ಲಿ ದೇವತೆಗಳು ನೆಲೆಸಿರುತ್ತಾರೆ. ಆಕೆ ಬೇಗನೆ ಒಲಿದು ಬಯಸಿದುದನ್ನೆಲ್ಲ ಕೊಡುತ್ತಾಳೆ.

**ಯೋ ವೈ ನಿತ್ಯಂ ಪೂಜಯತಿ ಗಾಂ ಗೇಹೇ ಯವಸಾದಿಭಿಃ ।**
**ತಸ್ಯ ದೇವಾಶ್ಚ ಪಿತರೋ ನಿತ್ಯಂ ತೃಪ್ತಾಂ ಭವಂತಿ ಹಿ ॥**

ಯಾರು ನಿತ್ಯವೂ ಮನೆಯಲ್ಲಿ ಹುಲ್ಲು ಮುಂತಾದವುಗಳಿಂದ ಗೋವನ್ನು ಪೂಜಿಸುವನೊ ಅವನ ವಿಷಯದಲ್ಲಿ ದೇವತೆಗಳೂ ಪಿತೃಗಳೂ ನಿತ್ಯ ತೃಪ್ತರಾಗಿರುತ್ತಾರೆ.

**ಯೋ ವೈ ಗವಾಹ್ನಿಕಂ ದದ್ಯಾನ್ನಿಯಮೇನ ಶುಭವ್ರತಃ ।**
**ತೇನ ಸತ್ಯೇನ ತಸ್ಯಸ್ಯುಃ ಸರ್ವೇ ಪೂರ್ಣಾ ಮನೋರಥಾಃ ।**

ಯಾರು ವ್ರತನಿಷ್ಠನಾಗಿ ತಪ್ಪದೆ ಹಸುವಿಗೆ ತಿನಿಸು ನೀಡುವನೊ ಅವನೆಲ್ಲ ಮನೋರಥಗಳೂ ಆ ಸತ್ಯದ ಬಲದಿಂದ ಪೂರೈಸುವವು.

**ತೃಷಿತಾ ಗೌರ್ಗೃಹೇ ಬದ್ಧಾ ಗೇಹೇ ಕನ್ಯಾ ರಜಸ್ವಲಾ ।**
**ದೇವತಾಶ್ಚ ಸನಿರ್ಮಾಲ್ಯಾ ಹಂತಿ ಪುಣ್ಯಂ ಪುರಾಕೃತಂ ॥**

ಬಾಯಾರಿದ ಗೋವು, ರಜಸ್ವಲೆಯಾದ ಕನ್ಯೆ, ಪೂಜೆಯಿಲ್ಲದೆ ನಿರ್ಮಾಲ್ಯದಿಂದ ಕೂಡಿದ ದೇವರ ಪ್ರತಿಮೆಗಳು ಮನೆಯಲ್ಲಿದ್ದರೆ ಪೂರ್ವಜನ್ಮದ ಪುಣ್ಯವನ್ನು ಕಳೆಯುತ್ತವೆ.

**ಯೋ ವೈ ಗಾಂ ಪ್ರತಿಷಿಧ್ಯೇತ ಚರಂತೀಂ ಸ್ವಂ ತೃಣಂ ನರಃ ।**
**ತಸ್ಯ ಪೂರ್ವೇಚ ಪಿತರಃ ಕಂಪಂತೇ ಪತನೋನ್ಮುಖಾಃ ॥**

ಹುಲ್ಲು ಮೇಯುತ್ತಿರುವ ಹಸುವನ್ನು ಓಡಿಸಿದರೆ ಅವನ ಪಿತೃಗಳು ನರಕಕ್ಕೆ ಬೀಳತೊಡಗಿ ಭಯದಿಂದ ನಡುಗುತ್ತಾರೆ.

**ಯೋವೈ ತಾಡಯತೇ ಯಷ್ಟ್ಯಾ ಧೇನುಂ ಮರ್ತ್ಯೋಽವಿಮೂಢಧಿಃ ।**
**ಧರ್ಮರಾಜಸ್ಯ ನಗರೇ ಸಯಾತಿ ಕರ ವರ್ಜಿತಃ ॥**

ಕೋಲಿನಿಂದ ಹಸುವನ್ನು ಹೊಡೆಯುವ ಮುರ್ಖನು ಕೈಗಳಿಲ್ಲದೆ ಯಮಪಟ್ಟಣಕ್ಕೆ ಹೋಗಬೇಕಾಗುತ್ತದೆ.

**ಯೋವೈದಂಶಾನ್‌ವಾರಯತಿ ಸತ್ಯಂಪೂರ್ವೆ ಕೃತಾರ್ಥಕಾಃ ।**
**ನೃತ್ಯಂತ್ಯತ್ಯುತ್ಸವಾದ ಸ್ಮಾನ್ ತಾರಯಿಷ್ಯತಿ ಭಾಗ್ಯವಾನ್ ॥**

ಹಸುವಿನ ಮೈಯಿಂದ ನೊಣಗಳನ್ನೋಡಿಸಿದರೆ ಅವನ ಪೂರ್ವಿಕರು ಕೃತಾರ್ಥರಾಗಿ ಬಹು ಆನಂದದಿಂದ ಕುಣಿಯುತ್ತಾರೆ. ಭಾಗ್ಯವಂತನಾದ ಈತನು ನಮ್ಮನ್ನು ನರಕದಿಂದ ಪಾರಮಾಡುತ್ತಾನೆ ಎಂದು.

ಗೋವಿನ ಮಹಿಮೆಯ ಬಗ್ಗೆ ಒಂದು ಪ್ರಾಚೀನ ಇತಿಹಾಸವನ್ನು ಹೇಳುವುದುಂಟು. ಜನಕ ಮಹಾರಾಜನೊಂದುದಿನ ಯೋಗದಿಂದ ಶರೀರ ತ್ಯಾಗಮಾಡಿ ದಿವ್ಯ ವಿಮಾನವನ್ನೇರಿದ. ವಿಮಾನವು ಯಮಪುರಿಯ ಮಾರ್ಗವಾಗಿ ಹೋಯಿತು. ಆಗ ನರಕದಲ್ಲಿ ಯಾತನೆಪಡುತ್ತಿದ್ದ ಪಾಪಿಗಳಿಗೆ ಜನಕನ ಅಂಗಸಂಗ ಹೊಂದಿದ ಗಾಳಿ ಬೀಸಿ ಸೌಖ್ಯ ಉಂಟುಮಾಡಿತು. ಬಾಯಾರಿಕೆ ಶಾಂತವಾಯಿತು. ಜನಕನ ವಿಮಾನ ಮುಂದುವರಿದುದನ್ನು ಕಂಡು ಆ ಪಾಪಿಗಳು ಅಳತೊಡಗಿದರು. ದೈನ್ಯದಿಂದ ಬೇಡಿದರು. 'ಓ ಪುಣ್ಯಾತ್ಮನೆ, ನಿಲ್ಲು. ಹೊರಟು ಹೋಗಬೇಡ. ನಿನ್ನಂಗಸಂಗ ಪಡೆದ ಗಾಳಿ ನಮಗೆ ಹಿತವಾಗಿರುತ್ತದೆ.'

ಜನಕನಿಗೆ ಕರುಣೆ ಉಕ್ಕಿತು. 'ನನ್ನಿಂದ ಈ ಜೀವಿಗಳಿಗೆ ಸೌಖ್ಯವಾಗುವುದಾದರೆ ನಾನಿಲ್ಲೆ ಇರುವೆ. ನನಗಿದುವೆ ಸ್ವರ್ಗ.' ಎಂದುಕೊಂಡು ಅವನು ಅಲ್ಲಿಯೆ ನಿಂತುಬಿಟ್ಟ.

ಯಮಧರ್ಮನು ಬಂದು ನಗುತ್ತ ಕೇಳಿದ. 'ರಾಜನೆ, ನೀನೇಕೆ ಇಲ್ಲಿಗೆ ಬಂದೆ ? ನೀನು ಧಾರ್ಮಿಕ ಶಿರೋಮಣಿ. ನಿಮ್ಮಂಥವರು ಇಲ್ಲಿಗೆ ಬರಕೂಡದು. ಇದು ಪಾಪಿಗಳ, ದುಷ್ಟರ, ಪ್ರಾಣಘಾತಿಗಳ ಸ್ಥಳ. ಪರ ದ್ರೋಹಿಗಳು, ಪರನಿಂದಕರು, ಪರದ್ರವ್ಯಾಪಹಾರಿಗಳು, ಪತಿವ್ರತೆಯಾದ ಮಡದಿಯನ್ನು ವಿನಾಕಾರಣ ಪರಿತ್ಯಜಿಸುವವರು, ಹಣದಾಸೆಯಿಂದ ಮಿತ್ರರನ್ನು ವಂಚಿಸುವವರು, ಯಾವ ಬಗೆಯಿಂದಲೂ ರಾಮಸ್ಮರಣೆ ಮಾಡದ ಮೂಢರು ಇವರನ್ನೆಲ್ಲ ನಾನು ಇಲ್ಲಿ ಇಟ್ಟುಕೊಂಡು ಕ್ರೂರ ಶಿಕ್ಷೆಯನ್ನು ನೀಡುತ್ತೇನೆ.

**ತಾವತ್ ಪಾಪಂ ಮನುಷ್ಯಾಂಣಾ ಅಂಗೇಷು ನೃಪ ತಿಷ್ಠತಿ**
**ಯಾವದ್ ರಾಮಂ ರಸನಯಾ ನ ಗೃಹ್ಣಾತಿ ಸುದುರ್ಮತಿಃ**

ಮನುಷ್ಯರು ಎಂದಿನವರೆಗೆ ರಾಮನಾಮವನ್ನು ನಾಲಿಗೆಯಿಂದ ಉಚ್ಚರಿಸುವುದಿಲ್ಲವೊ ಅಂದಿನವರೆಗೂ ಅವರ ಮೈಯಲ್ಲಿ ಪಾಪಗಳು ನೆಲೆಸಿರುತ್ತವೆ.

ಈ ಪಾಪಿಗಳನ್ನು ನನ್ನ ಭಟರು ಇಲ್ಲಿಗೆ ಎಳೆದುತರುತ್ತಾರೆ, ನಿನ್ನಂಥವರನ್ನು ಮಾತ್ರ ಕಣ್ಣೆತ್ತಿಯೂ ನೋಡುವುದು ಅವರಿಂದಾಗದು. ನೀನು ಇಲ್ಲಿಂದ ಹೊರಟು ಹೋಗು. ನೀನು ಗಳಿಸಿದ ಪುಣ್ಯದ ಫಲವನ್ನು ಭೋಗಿಸು.'

**ಜನಕ** :- ಇಲ್ಲ, ನಾ ಹೋಗಲಾರೆ. ಈ ಜೀವಿಗಳ ದುಃಖವನ್ನು ಕಂಡರೆ ನನ್ನ ಮನಸ್ಸಿಗೆ ವೇದನೆಯಾಗುತ್ತದೆ. ನನ್ನ ಅಂಗ ಸ್ಪರ್ಶ ಪಡೆದ ಗಾಳಿಯಿಂದ ಅವರಿಗೆ ಸುಖ ಸಿಗುತ್ತಿದೆಯಂತೆ ಧರ್ಮರಾಜ, ನೀವಿವರನ್ನು ಬಿಟ್ಟುಬಿಡುವೆಯಾದರೆ ನಿಶ್ಚಿಂತೆಯಿಂದ ನಾನು ಸ್ವರ್ಗಕ್ಕೆ ಹೋಗುವೆ.

**ಧರ್ಮರಾಜ** :- ರಾಜನೆ, ನಾನಿವರನ್ನು ಹೇಗೆ ಬಿಡಲಾದೀತು ? ನೋಡು, ಇವನು ಸ್ನೇಹಿತನ ಹೆಂಡತಿಯನ್ನು ಕೆಡಿಸಿದವನು. ಈಗಾಗಲೆ ಹತ್ತು ಸಾವಿರ ವರ್ಷಗಳಕಾಲ ಕಬ್ಬಿಣದ ಸಲಾಕೆಯಲ್ಲಿ ಸುಟ್ಟಿದ್ದೇನೆ. ಇನ್ನು ಮುಂದ ಹಂದಿಯ ಜನ್ಮ. ಬಳಿಕ ಮನುಷ್ಯನಾಗಿ ಹುಟ್ಟಿಯೂ ಷಂಢನಾಗಿರಬೇಕು. ಇವನು ಪರಸ್ತ್ರೀಯನ್ನು ಬಲಾತ್ಕಾರದಿಂದ ಅನೇಕ ಬಾರಿ ಕೆಡಿಸಿದವನು. ರೌರವ ನರಕದಲ್ಲಿ ನೂರುವರ್ಷಗಳಕಾಲ ಬೇಯಬೇಕು. ಇವನು ಪರದ್ರವ್ಯವನ್ನು ಕದ್ದು ಸುಖಭೋಗಿಸಿದವನು. ಇವನು ಕೈಗಳನ್ನು ಕಡಿದು ಪೂಯಶೋಣಿತ ನರಕದಲ್ಲಿ ಬೇಯಿಸುತ್ತೇನೆ. ಇವನು ಸಾಯಂಕಾಲದಲ್ಲಿ ಹಸಿದು ಬಂದ ಅತಿಥಿಗೆ ಬಾಯಿಂದಲೂ ಉಪಚಾರದ ಮಾತನ್ನಾಡಲಿಲ್ಲ. ತಾಮಿಸ್ರ ನರಕದ ಕತ್ತಲಲ್ಲಿ ದುಂಬಿಗಳಿಂದ ಕಡಿಸಿಕೊಂಡು ನೂರುವರ್ಷಗಳನ್ನೀತ ಕಳೆಯಬೇಕು. ಇವನು ಪರನಿಂದೆ ಮಾಡಿದವ, ಇವನು ಮಾಡಿಸಿ ಕೇಳಿದವ, ಇವರಿಬ್ಬರನ್ನೂ ಕತ್ತಲಿನ ಬಾವಿಯಲ್ಲಿಡಲಿದ್ದೇನೆ. ಇವನೊಬ್ಬ ಮಿತ್ರದ್ರೋಹಿ. ರೌರವ ನರಕದಲ್ಲಿ ಶಿಕ್ಷೆ ಅನುಭವಿಸಬೇಕು. ಹೀಗೆ ಈ ಪಾಪಿಗಳಿಗೆ ಶಿಕ್ಷೆಕೊಟ್ಟು ಬಳಿಕ ಬಿಡುತ್ತೇನೆ. ನೀನು ಪುಣ್ಯಗಳನ್ನೆ ಮಾಡಿದವ. ಹೊರಟು ಹೋಗು.

**ಜನಕ** :- ಇವರಿಗೆ ನರಕದಿಂದ ಬಿಡುಗಡೆ ಹೇಗಾದೀತು ಹೇಳು.

**ಧರ್ಮರಾಜ** :- ಹೇಗಾದೀತು? ಇವರೇನೂ ವಿಷ್ಣುವಿನ ಆರಾಧನೆ ಮಾಡಿದವರಲ್ಲ. ಅವನ ಕಥೆಯನ್ನು ಶ್ರವಣ ಮಾಡಲೂ ಇಲ್ಲ. ಈ ಮಹಾಪಾಪಿಗಳನ್ನು ಬಿಡಿಸಿಕೊಳ್ಳಲೇ

ಬೇಕೆನಿಸಿದರೆ ನೀನು ಬೆಳಿಗ್ಗೆ ಹಾಸಿಗೆಯಿಂದೆದ್ದು ಶುದ್ಧ ಮನಸ್ಸಿನಿಂದ ಶ್ರೀರಾಮನನ್ನು ನೆನೆದು ರಾಮ ರಾಮ ಎನ್ನುವಿಯಲ್ಲ. ಒಂದುದಿನ ಹಾಗೆ ಮಾಡಿದ ಪುಣ್ಯವನ್ನು ಇವರಿಗೆ ಕೊಟ್ಟು ಬಿಡು. ನಾನು ಇವರನ್ನು ಬಿಡುಗಡೆ ಮಾಡುವೆ.

**ಜನಕ :-** ಒಂದು ದಿನದ ಪುಣ್ಯವೆ ಏಕೆ ? ನಾನು ಹುಟ್ಟಿದಂದಿನಿಂದ ಮಾಡಿದ ಶ್ರೀರಾಮನ ಆರಾಧನೆಯ ಪುಣ್ಯವೆಲ್ಲವನ್ನೂ ಕೊಟ್ಟುಬಿಡುವೆನು. ಎಲ್ಲರಿಗೂ ನರಕದಿಂದ ಬಿಡುಗಡೆಯಾಗಲಿ.

ಜನಕನು ಈ ರೀತಿ ಹೇಳುತ್ತಿದ್ದಂತೆ ಪಾಪಿಗಳೆಲ್ಲರೂ ನರಕದಿಂದ ಮೇಲೇರಿ ದಿವ್ಯ ಶರೀರ ಧರಿಸಿ 'ರಾಜನೆ, ನಿನ್ನ ಅನುಗ್ರಹದಿಂದ ಒಂದು ಕ್ಷಣದಲ್ಲಿ ನರಕದಿಂದ ಬಿಡುಗಡೆ ಆಯಿತು. ಇನ್ನು ಹಿರಿಯ ಪರಮ ಪದವನ್ನು ಹೊಂದುತ್ತೇವೆ' ಎಂದರು. ಭೂತ ದಯೆಯಿಂದ ತುಂಬಿದ ರಾಜನು ಅವರನ್ನು ಕಂಡು ಸಂತೋಷಪಟ್ಟ. ಅವರು ಸೂರ್ಯನಂತೆ ಬೆಳಗಿ ದಯಾನಿಧಿ ಜನಕನೆಂದು ಹೊಗಳುತ್ತ ದೇವಲೋಕಕ್ಕೆ ಹೊರಟು ಹೋದರು.

**ಜಾಬಾಲಿ :-** ನರಕದಲ್ಲಿ ಇದ್ದವರು ಅಲ್ಲಿಂದ ಹೊರಟು ಹೋದೊಡನೆ ಜನಕನು ಯಮಧರ್ಮನಲ್ಲಿ ಪ್ರಶ್ನೆ ಮಾಡಿದ.

**ಜನಕ** :- ಧರ್ಮರಾಜ, ಪಾಪಿಗಳು ಮಾತ್ರ ನಿನ್ನ ಲೋಕಕ್ಕೆ ಬರುತ್ತಾರೆ ಎಂದೆ ನೀನು. ನಾನು ಯಾವ ಪಾಪದಿಂದ ನಿನ್ನ ಬಳಿಗೆ ಬಂದೆ ಹೇಳು.

**ಧರ್ಮರಾಜ :-** ರಾಜನೆ, ನೀನು ಮಹಾ ಪುಣ್ಯಶಾಲಿ. ರಘುನಾಥನ ಪಾದಾರವಿಂದ ಮಕರಂದವನ್ನು ಹೀರಿರುವ ಭ್ರಮರ ನೀನು. ಇಷ್ಟು ಪುಣ್ಯವನ್ನು ಭೂತಳದಲ್ಲಿ ಯಾರೂ ಮಾಡಿಲ್ಲ. ನಿನ್ನ ಕೀರ್ತಿ ಎಲ್ಲ ಪಾಪಿಗಳನ್ನು ಶುದ್ಧಗೊಳಿಸುತ್ತದೆ. ಆದರೆ ಒಂದೇ ಒಂದು ಸಣ್ಣ ಪಾಪದಿಂದ ನನ್ನ ಸಂಯಮಿನಿ ಈ ನಗರಿಯ ಪಾರ್ಶ್ವಕ್ಕೆ ಬಂದಿರುವೆ. ಅದೇನೆಂದರೆ ನೀನೊಮ್ಮೆ ಹುಲ್ಲು ಮೇಯುತ್ತಿದ್ದ ಒಂದು ಗೋವನ್ನು ತಡೆದೆ. ಅದರಿಂದ ನಿನಗೀ ನರಕದ್ವಾರ ದರ್ಶನವಾಯಿತು. ಆ ಪಾಪದಿಂದ ಬಿಡುಗಡೆಯೂ ಆಯಿತು. ಇನ್ನು ನೀನು ಪುಣ್ಯಫಲಗಳನ್ನು ಭೋಗಿಸು. ಆ ರಾಮನು ದಯಾಸಾಗರ. ನರಕದಲ್ಲಿ ಬಿದ್ದಿದ್ದ ಆ ಜೀವಿಗಳ ಮೇಲಿನ ಕರುಣೆಯಿಂದ ವಿಷ್ಣು ಭಕ್ತನಾದ ನಿನ್ನನ್ನು ಈ ದಾರಿಯಲ್ಲಿ ಕರೆದೊಯ್ದ. ನೀನು ಹೀಗೆ ಬಾರದಿರುತ್ತಿದ್ದರೆ ಅವರಿಗೆ ಹೇಗೆ ಬಿಡುಗಡೆಯಾಗುತ್ತಿತ್ತು ? ನಿನ್ನಂಥ ದಯಾಳುಗಳು ಪರರ ದುಃಖದಿಂದ ನೊಂದು ಅವರ ದುಃಖ ಪರಿಹಾರ ಮಾಡಿಯೆ ಮಾಡುತ್ತಾರೆ.

ಜನಕನು ಇದನ್ನು ಕೇಳಿ ಯಮಧರ್ಮನನ್ನು ನಮಿಸಿ ಅಪ್ಸರೆಯರಿಂದ ಶೋಭಿಸುವ ತನ್ನ ದಿವ್ಯ ವಿಮಾನವನ್ನೇರಿ ಸ್ವರ್ಗಕೆ ಹೊರಟು ಹೋದ.

ಆದ್ದರಿಂದ ಗೋವುಗಳನ್ನು ಸದಾ ಪೂಜಿಸಬೇಕು. ಮನಸ್ಸಿನಲ್ಲಿಯೂ ಅವುಗಳನ್ನು ತಿರಸ್ಕರಿಸಕೂಡದು. ಹಾಗೆ ಮಾಡಿದರೆ ಹದಿನಾಲ್ಕು ಮನ್ವಂತರಗಳ ಕಾಲ ನರಕವಾಸ ಪ್ರಾಪ್ತವಾಗುವುದು. ರಾಜನೆ, ನೀನೂ ಗೋ ಸೇವೆ ಮಾಡು. ಆಕೆ ಒಲಿದು ಬೇಗನೆ ನಿನಗೊಬ್ಬ ಧಾರ್ಮಿಕನಾದ ಪುತ್ರನನ್ನು ಕರುಣಿಸುವಳು.

**ಸುಮತಿ :-** ಇದನ್ನು ಕೇಳಿ ಋತುಂಭರ ರಾಜನು ಗೋ ಸೇವಾ ವಿಧಾನವನ್ನು ತಿಳಿಯಬಯಸಿದ. ಜಾಬಾಲಿ ಮುನಿ ಅದನ್ನು ವರ್ಣಿಸಿದ.

**ಜಾಬಾಲಿ :-** ರಾಜನೆ, ನೀನು ವ್ರತವನ್ನು ಕೈಗೊಂಡು ಪ್ರತಿ ದಿನ ಹಸುವನ್ನು ಕಾಡಿಗೆ ಕರೆದೊಯ್ದು ಮೇಯಿಸು. ಯವವನ್ನು ತಿನ್ನಿಸಿ ಅವು ಸಗಣಿಯಲ್ಲಿ ಬಂದಾಗ ಆರಿಸಿಕೊಂಡು ತಿನ್ನು. ಹಸು ನೀರು ಕುಡಿದ ಮೇಲೆ ನೀನು ನೀರು ಕುಡಿಯಬೇಕು. ಅದು ಮೇಲೆ ನಿಂತಿದ್ದರೆ ನೀನು ಕೆಳಗೆ ನಿಲ್ಲಬೇಕು. ಸದಾ ಮೈಮೇಲಿಂದ ನೊಣಗಳನ್ನು ಓಡಿಸಬೇಕು. ಹುಲ್ಲನ್ನು ತಂದು ನೀಡಬೇಕು. ಹೀಗೆ ಮಾಡಿದರೆ ನಿನಗೆ ಧರ್ಮಿಷ್ಠನಾದ ಮಗನು ಹುಟ್ಟುತ್ತಾನೆ.

ಋತುಂಭರನು ಹೀಗೆ ಗೋ ಸೇವೆ ಮಾಡತೊಡಗಿದ. ಒಂದು ದಿನ ಕಾಡಿನಲ್ಲಿ ನಿಶ್ಚಿಂತೆಯಿಂದ ಹುಲ್ಲು ಮೇಯುತ್ತಿದ್ದ ಹಸುವನ್ನು ಸಿಂಹ ಬಂದು ಕೊಂದಿತು. ಅಂದು ರಾಜನು ಕಾಡಿನ ಸೊಬಗನ್ನು ನೋಡುತ್ತ ಸಂಚರಿಸುತ್ತಿದ್ದು. ಹಸುವಿನ ಆಕ್ರಂದನವನ್ನು ಕೇಳಿ ತಿರುಗಿ ನೋಡಿದ. ಹಸು ಸತ್ತು ಬಿದ್ದಿತ್ತು. ದುಃಖ ತಡೆಯಲಾರದೆ ಅತ್ತುಬಿಟ್ಟ ರಾಜ. ಜಾಬಾಲಿ ಮುನಿಯ ಬಳಿಗೆ ಬಂದು ತನ್ನ ಅಸವಧಾನತೆಯಿಂದಾದ ಗೋವಿನ ಮರಣಕ್ಕೇನು ಪ್ರಾಯಶ್ಚಿತವೆಂದು ಕೇಳಿದ. ಎಲ್ಲಿಂದಲೊ ಕಾಣದಂತೆ ಒಂದು ಸಿಂಹ ಬಂದು ಹಸುವನ್ನು ಕೊಂದಿತೆಂದು ತಿಳಿಸಿದ. ಮುನಿ ಅದಕ್ಕೆ ಪರಿಹಾರ ಸೂಚಿಸಿದ.

**ಜಾಬಾಲಿ :-** ರಾಜನೆ, ಬ್ರಹ್ಮಹತ್ಯೆ, ಕೃತಘ್ನತೆ, ಸುರಾಪಾನ ಮುಂತಾದ ಪಾಪಗಳನ್ನು ಕೃಚ್ಛ್ರ ಚಾಂದ್ರಾಯಣ ವ್ರತನಿಯಮ ದಾನಗಳಿಂದ ಪರಿಹರಿಸಿಕೊಳ್ಳಬಹುದು. ಆದರೆ,

**ದ್ವಯೋರ್ವೈನಿಷ್ಕೃತಿರ್ನಾಸ್ತಿ ಪಾಪಪುಂಜ ಕೃತೋಸ್ತಯೋಃ**
**ಮತ್ಯಾ ಗೋವಧಕರ್ತುಶ್ಚ ನಾರಾಯಣ ವಿನಿಂದಿತುಃ**

ಬುದ್ಧಿ ಪೂರ್ವಕವಾಗಿ ಗೋವಧೆ ಮಾಡುವವನಿಗೂ ನಾರಾಯಣನನ್ನು ನಿಂದಿಸುವವನಿಗೂ ಪ್ರಾಯಶ್ಚಿತ್ತವಿಲ್ಲ.

ಗೋವುಗಳಿಗೆ ಮನಸ್ಸಿನಲ್ಲಿ ಕೇಡೆಣಿಸುವವನು ಅತ್ಯಂತ ಅಧಮ, ಅವನಿಗೆ ಹದಿನಾಲ್ಕು ಮನ್ವಂತರಗಳ ಕಾಲ ನರಕವಾಸವಿದೆ. ಒಮ್ಮೆ ಹರಿನಿಂದೆ ಮಾಡುವವನೂ ದುರ್ಭಾಗ್ಯಶಾಲಿ, ಅವನು ಪುತ್ರಪೌತ್ರರಿಂದ ಕೂಡಿಕೊಂಡೆ ನರಕಕ್ಕೆ ಹೋಗುತ್ತಾನೆ. ಆದ್ದರಿಂದ ಬುದ್ಧಿಪೂರ್ವಕ ಹರಿನಿಂದೆ ಗೋ ಹಿಂಸೆ ಮಾಡುವವನಿಗೆ ನರಕದಿಂದ ಬಿಡುಗಡೆಯೆ ಇಲ್ಲ.

ತಿಳಿಯದೆ ಮಾಡಿದ ಗೋಹತ್ಯೆಗೆ ಮಾತ್ರ ಪ್ರಾಯಶ್ಚಿತ್ತವಿದೆ. ಅದಕ್ಕಾಗಿ ರಾಮಭಕ್ತನೂ ಜ್ಞಾನಿಯೂ ಆದ ಋತುಪರ್ಣ ರಾಜನ ಬಳಿಗೆ ಹೋಗು. ಅವನು ಶತ್ರುಮಿತ್ರರೆಂಬ ಭೇದವೆಣಿಸದವನು. ಈ ಗೋವಧೆಗೆ ಪ್ರಾಯಶ್ಚಿತ್ತವೇನೆಂದು ಹೇಳುವನು, ನೀನು ಹಿಂದೆ ಅವನ ದೇಶವನ್ನಾಕ್ರಮಿಸಲು ಹೋಗಿ ಸೋತು ಹಿಮ್ಮೆಟ್ಟಿರುವೆ. ಆ ವೈರವನ್ನು ಮಾತ್ರ ಮರೆತುಬಿಡು. ಅವನು ಹೇಳುವಂತೆ ಮಾಡು.

ಇದನ್ನು ಕೇಳಿ ಋತುಂಭರ ರಾಜನು ಋತುಪರ್ಣನ ಬಳಿಗೆ ಹೋಗಿ ಪ್ರಮಾದವಶಾತ್ ತನ್ನಿಂದಾದ ಗೋವಧೆಯನ್ನು ತಿಳಿಸಿ ಅದಕ್ಕೆ ಪ್ರಾಯಶ್ಚಿತ್ತವೇನೆಂದು ಕೇಳಿದ. ಅವನು ನಕ್ಕುನುಡಿದ.

**ಋತುಪರ್ಣ :-** ಜಾಬಾಲಿ ಮುನಿಗಳಂಥ ಶಾಸ್ತ್ರಜ್ಞರ ಮುಂದೆ ನಾನಾರು ? ನಾನೊಬ್ಬನು ನನ್ನನ್ನೆ ವಿದ್ವಾಂಸನೆಂದು ತಿಳಿದುಕೊಂಡ ಮೂರ್ಖ. ಅವರನ್ನೆಲ್ಲ ಬಿಟ್ಟು ನನ್ನ ಬಳಿಗೇಕೆ ಬಂದೆ ? ನನ್ನಲ್ಲಿ ಅಷ್ಟೊಂದು ಶ್ರದ್ಧೆ ಇದ್ದರೆ ಹೇಳುತ್ತೇನೆ. ಕೇಳು. ಯಾವ ಕಪಟವಿಲ್ಲದೆ ತ್ರಿಕರಣಗಳಿಂದಲೂ ಶ್ರೀರಾಮನನ್ನು ಸೇವೆಮಾಡಿ ಒಲಿಸಿಕೊಳ್ಳು. ಅವನೊಲಿದರೆ ನೀನು ಬಯಸಿದುದನ್ನೆಲ್ಲ ಕೊಡುವವನು. ತಿಳಿಯದೆ ಮಾಡಿದ ಗೋಹತ್ಯಾಪಾಪವನ್ನು ಕಳೆಯುವನು. ರಾಮಸ್ಮರಣೆಯಿಂದ ಪರಿಶುದ್ಧನಾಗಿ ಒಳ್ಳೇಯ ಬ್ರಾಹ್ಮಣನಿಗೆ ಗೋದಾನ ಮಾಡು. ಯಥೋಕ್ತವಾಗಿ ತಕ್ಕ ಸುವರ್ಣ ದಾನವನ್ನೂ ಮಾಡು. ಆಗ ನಿನ್ನ ಪಾಪವು ತೊಲಗುತ್ತದೆ.

ಇದನ್ನು ಕೇಳಿ ಋತುಂಭರನು ರಾಮಸ್ಮರಣೆ ಮಾಡುತ್ತ ಗೋದಾನ ಮಾಡಿದ. ಕಾಡಿನಲ್ಲಿ ಹಸುವನ್ನು ಮೇಯಿಸುತ್ತ ಹಿಂದಿನಂತೆ ವ್ರತವನ್ನೂ ಮಾಡಿದ. ಸದಾ ರಾಮ ಸ್ಮರಣೆ, ಸರ್ವಪ್ರಾಣಿಗಳ ಹಿತಕಾಮನೆ. ಹೀಗೆ ರಾಜನು ಮಾಡಿದ ಸೇವೆಯಿಂದ ಸಂತುಷ್ಟಳಾದ ಕಾಮಧೇನು ಒಂದುದಿನ ಮೈದೋರಿ ರಾಜನೆ ''ನಿನ್ನ ಅಭೀಷ್ಟವೇನು, ಕೇಳಿಕೊಳ್ಳು'' ಎಂದಳು. ರಾಜನು ಬೇಡಿಕೊಂಡ. 'ದೇವಿ, ರಾಮಭಕ್ತನೂ ಪಿತೃಭಕ್ತನೂ ಧರ್ಮಿಷ್ಠನೂ ಆದ ಸುಂದರನಾದ ಒಬ್ಬ ಮಗನನ್ನು ಕರುಣಿಸು.' ಕಾಮಧೇನು ಆ ವರವನ್ನಿತ್ತು ಅದೃಶ್ಯಳಾದಳು.

ಕಾಲಕ್ರಮೇಣ ರಾಜನಿಗೆ ಪುತ್ರೋತ್ಸವವಾಯಿತು. ಅವನೆ ಈ ಸತ್ಯವಂತ. ರಾಮ ಭಕ್ತ, ಪಿತೃ ಭಕ್ತ, ಇಂದ್ರನಂಥ ಪರಾಕ್ರಮಿ. ಋತಂಭರನು ಆನಂದದಿಂದ ಅವನಿಗೆ ರಾಜ್ಯವನ್ನು ಒಪ್ಪಿಸಿ, ತಪಸ್ಸಿಗಾಗಿ ಕಾಡಿಗೆ ತೆರಳಿದ. ಅಲ್ಲಿ ಹೃಷೀಕೇಶನನ್ನು ಭಕ್ತಿಯಿಂದ ಆರಾಧಿಸಿ ಸಶರೀರನಾಗಿ ಹರಿಪದವನ್ನೈದಿದ.

**ಸುಮತಿ :-** ಈ ಸತ್ಯವಂತ ರಾಜನೂ ತನ್ನ ಧರ್ಮದಲ್ಲಿ ತಾನಿದ್ದು ರಾಮನನ್ನು ಸಂತೋಷ ಪಡಿಸಿದವ. ಯಜ್ಞಯಾಗಗಳ ಕೋಟಿ ಪುಣ್ಯಗಳಿಂದಲೂ ಗಳಿಸಲಾಗದ ಅಚಂಚಲ ರಾಮಭಕ್ತಿಯನ್ನು ಅವನೊಲಿಮೆಯಿಂದಲೆ ಪಡೆದವ. ಪ್ರಜೆಗಳ ಮೇಲಿನ ದಯೆಯಿಂದ ನಿತ್ಯವೂ ಅವರಿಗೆ ರಾಮಚರಿತ್ರೆಯನ್ನು ಕೇಳಿಸಿ ಅವರನ್ನು ಪಾವನಗೊಳಿಸುತ್ತಿರುವವ. ರಾಮ ರೂಪಿನ ರಮಾಪತಿಯನ್ನು ಪೂಜಿಸದ ಜನರಿಗೆ ಸಾಕ್ಷಾತ್ ಯಮನು ನೋಡಿದರೆ ಭಯಪಡುವಂಥ ದಂಡಗಳಿಂದ ಶಿಕ್ಷೆ ಕೊಡುತ್ತಾನೆ ಈತ. ಎಂಟು ವರ್ಷಗಳ ಮೇಲೆ ಎಂಬತ್ತು ವರ್ಷಗಳ ವರೆಗಿನ ಎಲ್ಲ ಪ್ರಜೆಗಳೂ ಏಕಾದಶಿ ವ್ರತವನ್ನು ಮಾಡಬೇಕು ಈತನ ರಾಜ್ಯದಲ್ಲಿ. ಇವನಿಗೆ ತುಳಸಿಯಲ್ಲಿ ಬಲು ಆದರ. ರಾಮನಿಗರ್ಪಿಸಿದ ತುಳಸಿಯ ಮಾಲೆ ಸದಾ ಇವನ ಕೊರಳಲ್ಲಿ ಇರುತ್ತದೆ. ಋಷಿಗಳೂ ಇವನನ್ನು ಗೌರವಿಸುತ್ತಾರೆಂದರೆ ಉಳಿದವರ ಪಾಡೇನು ? ಕುದುರೆಯನ್ನು ನೋಡಿ ಅದು ರಾಮನದೆಂದು ತಿಳಿದರೆ ಅವನು ತನ್ನ ರಾಜ್ಯವನ್ನು ನಿನಗೊಪ್ಪಿಸುವುದರಲ್ಲಿ ಸಂಶಯವಿಲ್ಲ.

ಸುಮತಿಯು ಶತ್ರುಘ್ನನಿಗೆ ಹೀಗೆ ಹೇಳುತ್ತಿದ್ದಂತೆ ಅತ್ತ ಕುದುರೆ ತೇಜಃಪುರವನ್ನು ಪ್ರವೇಶಿಸಿತು. ಅಲ್ಲಿಯ ಜನರು ಅದನ್ನು ಕಂಡು ರಾಜನ ಬಳಿ ನಿವೇದಿಸಿದರು. 'ಗಂಗಾಜಲದಂತೆ ಬಿಳಿಯಾದ ಕುದುರೆಯೊಂದು ನಮ್ಮ ನಗರಕ್ಕೆ ಬಂದಿದೆ. ಅದರ

ಹಣೆಯಲ್ಲಿ ಚಿನ್ನದ ತಗಡಿನಲ್ಲಿ ಬರೆದ ಓಲೆಯೊಂದಿದೆ.' 'ಅದು ಯಾರ ಕುದುರೆ ಎಂದು ತಿಳಿದುಬನ್ನಿ' ಎಂದ ಸತ್ಯವಂತ. ಅವರು ಬಂದು ಹೇಳಿದರು 'ಅದು ರಾಮನ ಕುದುರೆ. ಶತ್ರುಘ್ನನ ರಕ್ಷಣೆಯಲ್ಲಿದೆ.'

ರಾಮ ಎಂಬ ಮಧುರವಾದ ಎರಡಕ್ಷರವನ್ನು ಕೇಳಿದೊಡನೆ ರಾಜನ ಮನದಲ್ಲಿ ಆನಂದ ತುಂಬಿತು. ಕಂಠ ಗದ್ಗದವಾಯಿತು. 'ನಾನು ಸದಾ ಯಾವ ರಾಮನನ್ನು ಹೃದಯದಲ್ಲಿರಿಸಿಕೊಂಡಿರುವನೊ ಅವನ ಕುದುರೆ ಶತ್ರುಘ್ನನೊಂದಿಗೆ ನನ್ನ ನಗರಕ್ಕೆ ಬಂದಿದೆಯೆ ? ರಾಮನ ಪಾದ ಸೇವೆ ಮಾಡುತ್ತ ಎಂದೂ ಅವನನ್ನು ಮರೆಯದ ಆ ಹನುಮಂತನೂ ಈಗ ಬಂದಿರಬಹುದು. ಶತ್ರುಘ್ನ, ಹನುಮಂತ ಮತ್ತು ಇತರ ರಾಮಭಕ್ತರು ಇರುವೆಡೆಗೆ ನಾನೂ ಹೋಗುವೆ' ಎಂದನಾತ. ಬಳಿಕ ಮಂತ್ರಿಗಳನ್ನು ಕರೆದು ಹೇಳಿದ 'ನೀವೆಲ್ಲರೂ ನನ್ನ ಜತೆಗೆ ಬನ್ನಿ. ಎಲ್ಲ ರಾಜ್ಯವನ್ನೂ ಧನವನ್ನೂ ರಾಮನಿಗೆ ಅರ್ಪಿಸಿ ಅವನ ಕುದುರೆಯನ್ನು ರಕ್ಷಿಸಲು ಅದನ್ನು ಹಿಂಬಾಲಿಸುವೆ ಇಲ್ಲವೆ ದುರ್ಲಭವಾದ ರಾಮಪಾದಸೇವೆಯನ್ನೆ ಮಾಡುತ್ತಿರುವೆ.'

ಹೀಗೆ ಹೇಳಿ ಸೈನ್ಯಸಮೇತನಾಗಿ ರಾಜನು ಹೊರಡುವಷ್ಟರಲ್ಲಿ ಶತ್ರುಘ್ನನೂ ಭಟರೊಂದಿಗೆ ಅಲ್ಲಿಗೆ ಬಂದ. ವೀರಗರ್ಜನೆ, ರಥಧ್ವನಿ, ಜಯಘೋಷ, ಶಂಖನಾದ ವೀಣೆಯ ಇಂಚರಗಳು ಎಲ್ಲೆಡೆ ತುಂಬಿದವು. ರಾಜನು ಮಂತ್ರಿಗಳೊಡನೆ ಬಂದು ಶತ್ರುಘ್ನನ ಕಾಲಿಗೆ ಎರಗಿ, ರಾಜ್ಯವನ್ನೂ ಸಂಪತ್ತನ್ನೂ ಒಪ್ಪಿಸಿದ. ಹನುಮಂತನನ್ನೂ ಸುಬಾಹುವನ್ನೂ, ಇತರ ರಾಮಭಕ್ತರನ್ನೂ ಆಲಿಂಗಿಸಿ ತಾನು ಕೃತಾರ್ಥನಾದೆನೆಂದು ಕೊಂಡು ಆನಂದಭರಿತನಾದ. ಶತ್ರುಘ್ನನು ರಾಜ್ಯವನ್ನು ರಾಜಕುಮಾರ ರುಕ್ಮನಿಗೆ ವಹಿಸಿಕೊಟ್ಟು ತನ್ನ ಜತೆಗೆ ರಾಜನನ್ನು ಕರೆದುಕೊಂಡು ಕುದುರೆಯನ್ನು ಹಿಂಬಾಲಿಸಿದ.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಪಾತಾಳಖಂಡದಲ್ಲಿ ಶೇಷ-ವಾತ್ಸ್ಯಾಯನ ಸಂವಾದದಲ್ಲಿ ರಾಮಾಶ್ವಮೇಧದಲ್ಲಿ ಸತ್ಯವಂತನ ಸಮಾಗಮವೆಂಬ ಹದಿನಾಲ್ಕನೆ ಅಧ್ಯಾಯ ಮುಗಿದುದು*



## ವಿದ್ಯುನ್ಮಾಲಿ ರಾಕ್ಷಸ ಪರಾಜಯ

ಅಧ್ಯಾಯ - ೧೫

**ಶೇಷ ಉವಾಚ**

**ಶೇಷ :-** ಕುದುರೆ ಮುಂದೆ ನಡೆಯುತ್ತಿದ್ದಂತೆ ಅಕಸ್ಮಾತ್ತಾಗಿ ದಾರಿಯಲ್ಲಿ ಕಗ್ಗತ್ತಲು ಹಬ್ಬಿಕೊಂಡಿತು. ವೀರರಿಗೆ ಇವರು ನಮ್ಮವರು ಪರರು ಎಂಬ ಭೇದವೆ ಕಾಣದಂತಾಯಿತು. ಆಕಾಶದಲ್ಲೆಲ್ಲ ಧೂಳು ತುಂಬಿತು. ಮಿಂಚು ಗುಡುಗುಗಳು ತಲೆದೋರಿದವು. ಮೋಡಗಳಿಂದ ನೆತ್ತರು ಕೀವು ಮಲ ಮುಂತಾದವು ಸುರಿದವು. ಎಲ್ಲರಿಗೂ ಭಯ. ಏನಿದು ? ಏನು ? ಜನರ ಕಣ್ಣೊಳಗೂ ಕತ್ತಲು.

ಇದೆಲ್ಲವೂ ವಿದ್ಯುನ್ಮಾಲಿಯ ಮಾಯೆ. ಅವನು ರಾಕ್ಷಸ. ರಾವಣನ ಮಿತ್ರ. ಪಾತಾಳದಲ್ಲಿ ಅವನ ವಾಸ. ರಾಕ್ಷಸರ ದೊಡ್ಡ ಪರಿವಾರ ಅವನಿಗಿತ್ತು. ಬಯಸಿದಲ್ಲೆಲ್ಲ ಸಂಚರಿಸಬಲ್ಲ ಕಬ್ಬಿಣದ ವಿಮಾನದಲ್ಲಿ ಬಂದು ಭಟರಿಗೆ ಭಯವನ್ನು ಹುಟ್ಟಿಸಿ

ಕುದುರೆಯನ್ನು ಹಾರಿಸಿಕೊಂಡು ಒಯ್ದನಾತ. ಎಲ್ಲವೂ ಒಂದು ಮುಹೂರ್ತ ಕಾಲದಲ್ಲಿ ನಡೆದು ಹೋಗಿತ್ತು. ಅನಂತರ ಕತ್ತಲು ಮಾಯವಾಯಿತು. ಆಕಾಶ ನಿರ್ಮಲವಾಗಿ ಪ್ರಕಾಶಿಸಿತು. ಆದರೆ ಕುದುರೆ ಎಲ್ಲಿ ? ಶತ್ರುಘ್ನ ಮೊದಲಾದವರು ಒಬ್ಬರನ್ನೊಬ್ಬರು ನೋಡಿ ಕೇಳತೊಡಗದಿರು. ಎಲ್ಲೂ ಕಾಣದಿರಲು ಹಾಹಾಕಾರ ಎದ್ದಿತು. 'ಕುದುರೆ ಎಲ್ಲಿ ? ಯಾವ ದುರ್ಮಾತನು ಅಪಹರಿಸಿದ ?' ಎನ್ನುತ್ತಲೆ, ವೀರರು ವಿಮಾನದಲ್ಲಿ ಕುಳಿತಿದ್ದ ರಾಕ್ಷಸನನ್ನು ಕಂಡರು. ಅವನ ಬಳಿಯಲ್ಲಿ ಕ್ರೂರ, ಕರಾಳ ಮುಖದ ಕೋರದಾಡೆಯ ಭಯಂಕರ ರಾಕ್ಷಸರು ಸೇನೆಯನ್ನು ನುಂಗಲು ಸನ್ನದ್ಧರಾಗಿ ನಿಂತಿದ್ದರು. ಸೈನಿಕರಿಗೀಗ ತಿಳಿಯಿತು. ವಿಮಾನದಲ್ಲಿ ಕುಳಿತ ರಾಕ್ಷಸನೆ ಕುದುರೆ ಕದ್ದವನು. ಕತ್ತಲಿನಿಂದ ನಮ್ಮನ್ನು ಕಂಗೆಡಿಸಿ ನಮ್ಮ ಬಳಿಗೆ ಬಂದು ಕುದುರೆಯನ್ನು ಒಯ್ದ ನೀತ ಎಂದರು ಶತ್ರುಘ್ನನ ಮುಂದೆ. ಶತ್ರುಘ್ನನು ಕೋಪಗೊಂಡು ನುಡಿದ 'ಯಾರು ಈ ರಾಕ್ಷಸ ? ನನ್ನ ಬಾಣಗಳೇಟಿಗೆ ಅವನ ವಿಮಾನ ಕೆಳಗೆ ಬೀಳಲಿದೆ ! ಅವನ ತಲೆ ಕಡಿದು ಉರುಳಿ ಬೀಳಲಿದೆ! ನಮ್ಮ ರಥಗಳೆಲ್ಲವೂ ಶಸ್ತ್ರಾಸ್ತ್ರಗಳಿಂದ ತುಂಬಿ ಯುದ್ಧಕ್ಕೆ ಸಿದ್ಧವಾಗಲಿ. ಸೈನಿಕರು ಶತ್ರುಗಳ ಮೇಲೆರಗಲಿ.'

ಶತ್ರುಘ್ನನ ಕಣ್ಣುಗಳು ಕೋಪದಿಂದ ಕೆಂಪಾಗಿದ್ದವು. ಅಮಾತ್ಯ ಸುಮತಿಯನ್ನು ಕರೆದು ಕೇಳಿದನಾತ 'ಮಂತ್ರಿ, ಈ ರಾಕ್ಷಸನ ಸಂಹಾರಕ್ಕೆ ನಮ್ಮವರಲ್ಲಿ ಯಾರನ್ನು ಕಳಿಸಲಿ?'

ಮಂತ್ರಿ ಹೇಳಿದ 'ಪ್ರಭು, ರಾಕ್ಷಸನೊಡನೆ ಯುದ್ಧಕ್ಕೆ ಪುಷ್ಕಲನೂ, ಲಕ್ಷ್ಮೀನಿಧಿಯೂ ಹೋಗಲಿ. ಅವನ ವಿಮಾನವನ್ನು ಮುರಿಯಲಿ. ಹನುಮಂತನು ಮುಖಬಾಲಗಳಿಂದ ರಾಕ್ಷಸರನ್ನು ಸಂಹರಿಸಲಿ. ವಾನರವೀರರು ಯುದ್ಧದಲ್ಲಿ ನುರಿತವರು. ಅವರೆಲ್ಲರೂ ಹೋಗಲಿ. ಸುಮದ, ಸುಬಾಹು, ಪ್ರತಾಪಾಗ್ರ್ಯರೊಂದಿಗೆ ನೀನೂ ಹೊರಡು. ಸಮರ್ಥರಾದ ಇಷ್ಟು ಮಂದಿ ವೀರರು ಹೋದರೆ ಸಾಕು. ಉಳಿದವರು ಬೇಡ.' ಇದನ್ನು ಕೇಳಿ ಶತ್ರುಘ್ನನು ಪುಷ್ಕಲ ಮುಂತಾದ ವೀರರನ್ನು ಕರೆದು ಹೇಳಿದ 'ವೀರರೆ, ರಾಕ್ಷಸರ ಮರ್ದನಕ್ಕೆ ನೀವು ನಿಮ್ಮ ಪರಾಕ್ರಮಕ್ಕೆ ತಕ್ಕಂತೆ ಪ್ರತಿಜ್ಞೆ ಮಾಡಿ ಸೈನ್ಯದೊಂದಿಗೆ ಹೊರಡಿರಿ.'

ಒಡನೆ ಪುಷ್ಕಲನು ಉತ್ಸಾಹದಿಂದ ಮುಂದೆ ಬಂದು ಪ್ರತಿಜ್ಞೆ ಮಾಡಿದ.

**ಪುಷ್ಕಲ :-** ರಾಜನೆ, ನಾನು ಎಲ್ಲ ವೀರರ ಸಮಕ್ಷಮದಲ್ಲಿ ಅದ್ಭುತವಾದ ಪ್ರತಿಜ್ಞೆಯನ್ನು ಮಾಡುವೆನು. ಕೇಳು. ನಾನು ಆ ರಾಕ್ಷಸನನ್ನು ಬಾಣಗಳಿಂದ ಹೊಡೆದು ಮೂರ್ಛೆ ಬೀಳಿಸದಿದ್ದರೆ ಕನ್ಯಾದ್ರವ್ಯವನ್ನು ಭೋಗಿಸುವವನ ಪಾಪ, ದೇವನಿಂದಕನ ಪಾಪಗಳು ನನಗೆ ಬರಲಿ. ಮಹಾ ಬಲಶಾಲಿಗಳಾದ ರಾಕ್ಷಸ ಸೈನಿಕರನ್ನು ಬಾಣಗಳಿಂದ ಹೊಡೆದು ಕೆಡವದಿದ್ದರೆ ಶಿವ ವಿಷ್ಣುಗಳಲ್ಲಿ, ಶಿವಶಕ್ತಿಯರಲ್ಲಿ ಭೇದವೆಣಿಸಿದ ಪಾಪ ನನಗೆ ಬರಲಿ. ರಘುನಾಥನ ಚರಣ ಕಮಲದಲ್ಲಿರುವ ನನ್ನ ಅಚಲ ಭಕ್ತಿ ನನ್ನ ಪ್ರತಿಜ್ಞೆಗಳನ್ನೀಡೇರಿಸಿ ಕೊಡುವುದು.

**ಲಕ್ಷ್ಮೀನಿಧಿ :-** ನಾನು ಯುದ್ಧ ವಿಮುಖನಾದರೆ ಯಾರು ವೇದನಿಂದನೆಯನ್ನು ಕೇಳಿಯೂ ಸುಮ್ಮನಿದ್ದು ಅಂತರಂಗದಲ್ಲಿ ಅದನ್ನು ಬಯಸುತ್ತ ಸರ್ವಧರ್ಮ

ಬಹಿಷ್ಕೃತನಾಗಿರುವನೊ, ಯಾರು ಬ್ರಾಹ್ಮಣನಾಗಿದ್ದು ದುರಾಚಾರಿಯಾಗಿರುವನೊ ಇಲ್ಲವೆ ಹಣದಾಸೆಯಿಂದ ಹಸುವನ್ನೊ ಅಥವಾ ಹಾಲು ಮೊಸರು ಮುಂತಾದುವನ್ನು ಮಾರುವನೊ ಇಲ್ಲವೆ ಮ್ಲೇಚ್ಛರ ಬಾವಿ ನೀರನ್ನು ಕುಡಿದು ಪ್ರಾಯಶ್ಚಿತ್ತ ಮಾಡಿಕೊಳ್ಳದಿರುವನೊ ಅವನ ಪಾಪ ನನಗಾಗಲಿ.

**ಹನುಮಂತ** :- ನನ್ನ ಪ್ರಭು ಅಯೋಧ್ಯಾಧಿಪತಿ ಶ್ರೀರಾಮನು ಲೋಕಪಾಲಕರಿಂದ ಪೂಜಿಸಲ್ಪಡುವವನು. ದೇವದಾನವರೆಲ್ಲರಿಗೂ ವಂದ್ಯನು. ಯೋಗಿಗಳು ತಮ್ಮ ಹೃದಯದಲ್ಲಿ ಸದಾ ಅವನನ್ನೆ ಇರಿಸಿಕೊಳ್ಳುವರು. ಇಂಥ ಪ್ರಭುವಿನ ಸ್ಮರಣೆ ಮಾಡಿ ನಾನು ಮಾಡುವ ಪ್ರತಿಜ್ಞೆ ಸತ್ಯವಾಗಿಯೆ ತೀರುವದು. ರಾಜನೆ, ಈ ದುರ್ಬಲನಾದ ಅಲ್ಪ ರಾಕ್ಷಸನೆಷ್ಟರವನು ? ನಾನೊಬ್ಬನೆ ನಿಂತು ಮಾಡಬೇಕಾದ ವೀರಕಾರ್ಯವೇನಿದ್ದರೂ ಹೇಳು, ದೇವೇಂದ್ರನಿಂದ ಸಮೇತವಾಗಿ ಮೇರು ಪರ್ವತವನ್ನೆ ನನ್ನ ಬಾಲದ ತುದಿಯಿಂದ ತೂಗಲೆ? ಸಮುದ್ರವನ್ನು ಶೋಷಿಸಲೆ? ಸಂವರ್ತಕ ಮೇಘದ ಜಲಧಾರೆಯನ್ನೆ ಕುಡಿಯಲೆ ಶ್ರೀ ಸೀತಾರಾಮರ ಅನುಗ್ರಹದಿಂದ ಭೂತಲದಲ್ಲಿ ನನಗೆ ಅಸಾಧ್ಯವೆಂಬುದು ಎಂದೂ ಇಲ್ಲ. ಈ ನನ್ನ ಮಾತು ಸುಳ್ಳಾದರೆ ನಾನು ರಾಮಭಕ್ತಿ ಶೂನ್ಯನಾಗುವೆ. ಹಾಲಿಗೋಸ್ಕರ ಕಪಿಲೆಯನ್ನು ಸಾಕುವ ಶೂದ್ರನಂತೆ ಪಾಪಿ ಎನಿಸುವೆ. ಕಾಮಾಂಧನಾಗಿ ಬ್ರಾಹ್ಮಣಸ್ತ್ರೀಯೊಡನೆ ಕೂಡುವ ಶೂದ್ರನಂತೆ ಪಾಪಿಯಾಗುವೆ. ಮೂಸಿದರೂ ಮುಟ್ಟಿದರೂ ನರಕ ಸಾಧನವಾಗಬಲ್ಲ ಹೆಂಡವನ್ನು ಜಿಹ್ವಾಚಾಪಲ್ಯದಿಂದ ಕುಡಿವವನ ಪಾಪವು ನನಗಾಗಲಿ.

ಹೀಗೆ ವೀರರೆಲ್ಲರೂ ದೊಡ್ಡ ದೊಡ್ಡ ಪ್ರತಿಜ್ಞೆಗಳನ್ನು ಮಾಡಿದರು. ಶತ್ರುಘ್ನನು ಅವರನ್ನೆಲ್ಲ ಹೊಗಳಿ ಹುರಿದುಂಬಿಸಿ ತಾನೂ ಪ್ರತಿಜ್ಞೆಗೈದನು.

**ಶತ್ರುಘ್ನ** :- ನಾನು ಬಾಣಗಳಿಂದ ಅವನ ತಲೆ ಕಡಿದು ಉರುಳಿಸದಿದ್ದರೆ ಸುಳ್ಳು ಸಾಕ್ಷ್ಯನೀಡಿದ, ಚಿನ್ನ ಕದ್ದ, ಬ್ರಾಹ್ಮಣ ನಿಂದೆ ಮಾಡಿದ ಪಾಪಗಳು ನನಗೆ ಬರಲಿ.

**ವೀರರು** :- ಶ್ರೀರಾಮನ ಸೋದರನೆ, ನೀನು ಧನ್ಯ. ನಿನ್ನಗಾರು ಎಣೆ? ದೇವದಾನವರಿಗೆ ಪೀಡೆ ಕೊಡುತ್ತಿದ್ದ ಮಧುಪುತ್ರ ಲವಣನನ್ನು ಕೊಂದವನು ನೀನು. ಈ ರಾಕ್ಷಸನು ಎಷ್ಟರವನು ? ಒಂದು ಕ್ಷಣದಲ್ಲಿ ನೀನು ಅವನನ್ನು ಇನ್ನಿಲ್ಲವೆನಿಸಬಲ್ಲೆ. ಹೀಗೆ ಎಲ್ಲ ವೀರರೂ ಪ್ರತಿಜ್ಞೆ ಮಾಡಿ ಅದನ್ನು ನೆರವೇರಿಸಲು ಉತ್ಸಾಹದಿಂದ ಹೊರಟರು.

**ಶೇಷ** :- ಎಲ್ಲ ಶಸ್ತ್ರಾಸ್ತ್ರಗಳಿಂದ ತುಂಬಿದ ರತ್ನಖಚಿತವಾದ ಸುಂದರ ರಥಗಳಲ್ಲಿ ಆ ವೀರರು ಬರುವುದನ್ನು ಕಂಡು ವಿಮಾನದಲ್ಲಿದ್ದ ರಾಕ್ಷಸನು ಗಂಭೀರ ಮೇಘ ಧ್ವನಿಯಿಂದ ನುಡಿದ.

**ವಿದ್ಯುನ್ಮಾಲಿ** :- ನನ್ನೊಡನೆ ಹೋರಾಟಕ್ಕೆ ಬರಬೇಡಿ, ಮನೆಗೆ ಹಿಂತಿರುಗಿ, ಸುಮ್ಮನೆ ಸಾಯಬೇಡಿ. ನಾನು ಕುದುರೆಯನ್ನು ಬಿಡುವವನಲ್ಲ. ವಿದ್ಯುನ್ಮಾಲಿ ಎಂಬ ರಾವಣನ ಆಪ್ತಮಿತ್ರ ನಾನು. ಸತ್ತ ಆ ನನ್ನ ಸ್ನೇಹಿತನ ತೃಪ್ತಿಗಾಗಿ ಸೇಡು ತೀರಿಸಲು ಬಂದಿದ್ದೇನೆ. ಅವನನ್ನು ಕೊಂದ ಆ ರಾಮನೆಲ್ಲಿ ? ಅವನ ತಮ್ಮ ಲಕ್ಷ್ಮಣನೆಲ್ಲಿ ? ಅವರಿಬ್ಬರನ್ನೂ ಕೊಂದು ಅವರ ಕಂಠನಾಳದಿಂದ ಹೊರಡುವ ನೆತ್ತರ ಬುಗ್ಗೆಯನ್ನು ಕುಡಿದರೆ ಸ್ನೇಹಿತನ ಋಣದಿಂದ ನನಗೆ ಮುಕ್ತಿ.

**ಪುಷ್ಕಲ :-** ಒಳ್ಳೆಯ ವೀರರು ರಣರಂಗದಲ್ಲಿ ಬರಿ ಬೂಟಾಟಿಕೆ ಮಾಡುತ್ತಿರುವುದಿಲ್ಲ. ಶಸ್ತ್ರಾಸ್ತ್ರಗಳ ಸುರಿಮಳೆಯಿಂದ ತಮ್ಮ ಪರಾಕ್ರಮವನ್ನು ತೋರುತ್ತಾರೆ. ಕಾರಣ, ಅವನ ಬಂಧು ಬಳಗ ಸೈನ್ಯವಾಹನಗಳನ್ನೆಲ್ಲ ಧ್ವಂಸ ಮಾಡಿದ ಆ ರಾಮನ ಕುದುರೆಯನ್ನು ಹಿಡಿದುಕೊಂಡು ಎಲ್ಲಿಗೆ ಹೋಗುವೆ, ಮೂರ್ಖ ? ಶತ್ರುಘ್ನನ ಬಾಣಗಳಿಂದ ನೀನು ಸಾಯುವೆ. ನಿನ್ನ ಹೆಣ ನರಿಗಳ ಪಾಲಾಗುತ್ತದೆ. ಸುಮ್ಮನೆ ಬೊಬ್ಬಿಡಬೇಡ. ರಾಮನ ಕಿಂಕರನಾದ ನಾನು ನಿನ್ನ ಮುಂದೆ ನಿಂತಿದ್ದೇನೆ. ಈ ನಮ್ಮ ವೀರರು ನಿನ್ನವರನ್ನು ಗೆದ್ದು ಗರ್ಜಿಸುತ್ತಾರೆ.

ಪುಷ್ಕಲನು ಹೀಗೆ ಹೇಳುತ್ತಿದ್ದಂತೆ ರಾಕ್ಷಸನು ಅವನೆದೆಗೆ ಶಕ್ತ್ಯಾಯುಧವನ್ನೆಸೆದ. ಅದನ್ನು ತನ್ನ ಬಾಣಗಳಿಂದ ಮೂರಾಗಿ ಕಡಿದು ಬೀಳಿಸಿದ, ಪುಷ್ಕಲ. ಅವು ವಿಷ್ಣುವಿನ ಮೂರು ಶಕ್ತಿಗಳಂತಿದ್ದವು. ಬಳಿಕ ರಾಕ್ಷಸನ ತ್ರಿಶೂಲವನ್ನು ಮುರಿದು ಅವನೆದೆಗೆ ತೀಕ್ಷ್ಣ ಬಾಣಗಳನ್ನೆಸೆದ. ವಿಷ್ಣುಭಕ್ತನ ಹೃದಯದಲ್ಲಿ ವಿಷ್ಣುವಿನ ಆಕರ್ಷಕವಾದ ಗುಣಗಳು ಹೊಕ್ಕರೆ ಅವನಲ್ಲಿ ಅನುರಾಗ ಹುಟ್ಟಿಸುವಂತೆ ಪುಷ್ಕಲನೆಸೆದ ಬಾಣಗಳು ರಾಕ್ಷಸನೆದೆಗೆ ನಾಟಿ ಅಲ್ಲಿ ಕೆಂಬಣ್ಣ ತರಿಸಿದುವು. ವಿದ್ಯುನ್ಮಾಲಿ ಈಗ ಕೋಪದಿಂದ ಮುದ್ಗರವನ್ನೆತ್ತಿ ಪುಷ್ಕಲನೆದೆಗೆ ಎಸೆದ. ಪುಷ್ಕರನು ಅದನ್ನು ತಾಳಲಾರದೆ ನಡುಗಿ ಮೂರ್ಛೆ ಹೊಂದಿದ. ಮರುಕ್ಷಣದಲ್ಲಿಯೆ ಎದ್ದು 'ರಾಕ್ಷಸನೆ, ನೀನೊಳ್ಳೆಯ ಪರಾಕ್ರಮಿಯೆ ಸರಿ. ಈಗ ನೋಡು. ನಾನು ಪ್ರತಿಜ್ಞೆ ಮಾಡುವೆನು. ನನ್ನ ಬಾಣಗಳಿಂದ ನಿನ್ನನ್ನು ವಿಮಾನದಿಂದ ಕೆಡವಿ ನೆಲದಲ್ಲಿ ಮಲಗಿಸುತ್ತೇನೆ.' ಎನ್ನುತ್ತ ಬೆಂಕಿಯಂತೆ ಜ್ವಲಿಸುವ ಬಾಣವೊಂದನ್ನೆಸೆದು ರಾಕ್ಷಸನನ್ನು ನೆಲಕ್ಕೆ ಕೆಡವಿದ. ಆತ ಮೂರ್ಛಿತನಾಗಿ ಬಿದ್ದ.

ಅವನನ್ನು ಅವನ ತಮ್ಮ ಉಗ್ರದಂಷ್ಟ್ರನು ವಿಮಾನದೊಳಕ್ಕೊಯ್ದು ಪುಷ್ಕಲನನ್ನು ಇದಿರಿಸಿದ. 'ನಮ್ಮಣ್ಣನನ್ನು ಹೊಡೆದು ಕೆಡವಿ ಎಲ್ಲಿಗೆ ಹೋಗುವೆ ? ನನ್ನನ್ನು ಗೆದ್ದರೆ ನೀನು ವಿಜಯಿ ಎನಿಸುವೆ. ನಾನಿರುವಾಗ ನಿನಗೆಲ್ಲಿಯ ಜಯದಾಸೆ ?' ಎನ್ನುತ್ತ ಹಲ್ಲು ಕಡಿದು ಮುಷ್ಟಿಯಿಂದ ಪುಷ್ಕಲನೆದೆಗೆ ಬಲವಾಗಿ ಗುದ್ದಿದ. ಅದೇನು ವಜ್ರಾಯುಧದೇಟೊ ಎನ್ನುವಂತಿತ್ತು ಆ ಏಟು. ಆದರೂ ಪುಷ್ಕಲನು ಅಲ್ಲಾಡಲಿಲ್ಲ. ಮಹಾ ತೀಕ್ಷ್ಣವಾದ ವಜ್ರದಂತಹ ಬಾಣಗಳನ್ನು ರಾಕ್ಷಸನೆದೆಗೆ ಎಸೆದ. ಅದರಿಂದ ವ್ಯಥೆಗೊಂಡ ರಾಕ್ಷಸನು ತ್ರಿಶೂಲವನ್ನೆತ್ತಿ ಪುಷ್ಕಲನ ಎದೆಗೆ ಇರಿದ. ಆಗ ಆತ ಮೂರ್ಛೆಗೊಂಡು ರಥದಲ್ಲಿ ಒರಗಿದ. ಇದನ್ನು ಕಂಡ ಹನುಮಂತನು 'ದುಷ್ಟನೆ, ಎಲ್ಲಿಗೆ ಹೋಗುವೆ ? ನಿಲ್ಲು, ಕುದುರೆ ಕಳ್ಳನನ್ನೀಗಲೆ ಒದ್ದು ಕೊಲ್ಲುವೆ' ಎನ್ನುತ್ತ ಆಕಾಶಕ್ಕೆ ಹಾರಿ ವಿಮಾನದಲ್ಲಿದ್ದ ರಾಕ್ಷಸರನ್ನೆಲ್ಲ ಉಗುರಿನಿಂದ ಸೀಳಿದ. ಬಾಲದಿಂದ ಹೊಡೆದ. ಕಾಲಿಂದ ಒದ್ದ. ಎತ್ತಿ ನೆಲಕ್ಕಪ್ಪಳಿಸಿದ. ಮುಷ್ಟಿಯಿಂದ ತಿವಿದ. ಕೆಲವರು ಸತ್ತರು. ಕೆಲವರು ಮೂರ್ಛೆಗೊಂಡರು. ಕೆಲವರು ಭಯದಿಂದ ಓಡಿದರು. ಭಯಂಕರ ರಾಕ್ಷಸರು ಹನುಮಂತನ ಕೈಗೆ ಸಿಕ್ಕಿ ಸೀಳಾಗಿ ಹೋದರು. ಅವರ ವಿಮಾನದ ಬಾಗಿಲು ಗೋಡೆಗಳೆಲ್ಲವೂ ಮುರಿದವು. ರಾಕ್ಷಸರ ಪಡೆ ಹಾಹಾಕಾರ ಮಾಡಿತು. ಹನುಮಂತನು ಒಮ್ಮೆ ನೆಲದಲ್ಲಿದ್ದರೆ ಇನ್ನೊಮ್ಮೆ ಆಕಾಶದಲ್ಲಿದ್ದ. ಬಯಸಿದಲ್ಲೆಲ್ಲ ಓಡಾಡುವ ರಾಕ್ಷಸರ ವಿಮಾನವೂ ಅಲ್ಲಿ ಇಲ್ಲಿ ಸಂಚರಿಸುತ್ತಿತ್ತು. ಅದು ಹೋದಲ್ಲೆಲ್ಲ ಹನುಮಂತನು ಬಿಡದೆ ಕಾಣಿಸಿಕೊಳ್ಳುತ್ತಿದ್ದ. ಮನ ಬಂದಂತೆ ರೂಪಗಳನ್ನು ಧರಿಸಿ ರಾಕ್ಷಸರನ್ನು ಹೊಡೆದು ಕೊಲ್ಲುತ್ತಿದ್ದ.

ವಿಮಾನದಲ್ಲಿ ರಾಕ್ಷಸರೆಲ್ಲರೂ ಭಯದಿಂದ ಕಂಗೆಟ್ಟರು. ಆಗ ಉಗ್ರದಂಷ್ಟ್ರನು ಹನುಮಂತನನ್ನಿದಿರಿಸಿ 'ಕಪಿಯೆ, ವೀರರನ್ನೆಲ್ಲ ಕೊಂದು ನೀನೊಳ್ಳೆ ಪರಾಕ್ರಮವನ್ನ ತೋರಿಸಿರುವೆ. ಈಗ ಒಂದು ಕ್ಷಣ ನನ್ನ ಮುಂದೆ ನಿಲ್ಲು. ನಿನ್ನ ಪ್ರಾಣ ತೆಗೆಯುವೆನು' ಎನ್ನುತ್ತ ಉರಿವ ಬೆಂಕಿಯಂಥ ತ್ರಿಶೂಲ ಒಂದನ್ನು ಎಸೆದ. ಹನುಮಂತನು ಅದನ್ನು ಹಲ್ಲಿನಿಂದ ಕಚ್ಚಿ ಪುಡಿ ಮಾಡಿ ಅವನ ಕಪಾಳಕ್ಕೆ ಹೊಡೆದ. ಮೈ ಕೈಯೆಲ್ಲ ಸೀಳಿದ. ರಾಕ್ಷಸನು ಕೋಪದಿಂದ ಮಾಯೆಯನ್ನು ಸೃಷ್ಟಿಸಿದ. ಎಲ್ಲೆಡೆಗೂ ದಟ್ಟವಾದ ಕತ್ತಲು ಹಬ್ಬಿತು. ಒಬ್ಬರನ್ನೊಬ್ಬರು ನೋಡಿ ಗುರುತಿಸಲಾರದಂಥ ಕತ್ತಲು. ವೀರರ ಮೇಲೆ ಪರ್ವತಶಿಖರಗಳಷ್ಟು ಗಾತ್ರದ ಕಲ್ಲುಗಳ ಸುರಿಮಳೆ. ಮಿಂಚು ಗುಡುಗುಗಳ ಅಬ್ಬರ. ಕೀವು ರಕ್ತ ಮಲಗಳ ಧಾರೆ ಬೀಳತೊಡಗಿತು. ತಲೆಯಿಲ್ಲದ ಮುಂಡಗಳು. ಕಡಿದ ರುಂಡಗಳು ಒಂದೇ ಸಮನೆ ಬಿದ್ದವು. ಬೆತ್ತಲೆಯಾಗಿ ತಲೆಗೂದಲು ಕೆದರಿಕೊಂಡು ವಿಕಾರವಾಗಿ ಕಾಣುವ ಕ್ರೂರ ಭಯಂಕರ ರಾಕ್ಷಸರು ಎಲ್ಲೆಡೆ ತುಂಬಿಕೊಂಡರು. ಇದೊಂದು ಮಹಾ ಉತ್ಪಾವಿರಬಹುದೆಂದು ಬಗೆದು ಸೈನಿಕರು ಭಯಗ್ರಸ್ತರಾಗಿ ಓಡತೊಡಗಿದರು. ಆಗ ಶತ್ರುಘ್ನನು ಅಲ್ಲಿಗೆ ಬಂದ. ಶ್ರೀರಾಮನನ್ನು ಸ್ಮರಿಸಿ ಮೋಹನಾಸ್ತ್ರವನ್ನು ಪ್ರಯೋಗಿಸಿದ. ಒಡನೆ ಮಾಯೆ ಎಲ್ಲೊ ದೂರ ಸರಿಯಿತು. ಶತ್ರುಘ್ನನ ಬಾಣಗಳ ಮಳೆಯೊಂದೆ ಆಕಾಶವನ್ನೆಲ್ಲ ತುಂಬಿತು. ಮೋಡಗಳು ಕಣ್ಮರೆಯಾದವು. ಗುಡುಗು ಮಿಂಚುಗಳು ನಿಂತವು. ದಿಕ್ಕುಗಳು ಪ್ರಸನ್ನವಾದವು. ರಾಕ್ಷಸನ ವಿಮಾನ ಎದುರಿಗೆ ಗೋಚರವಾಯಿತು. 'ಕಡಿ' 'ತುಂಡರಿಸು' ಎಂಬ ಮಾತುಗಳು ಎಲ್ಲೆಲ್ಲೂ ಕೇಳಿ ಬರತೊಡಗಿತು. ನೂರಾರು ಸಾವಿರಾರು ಬಾಣಗಳು ಆ ವಿಮಾನದ ಮೇಲೆ ಬಿದ್ದವು. ಆಗ ಅದು ಒಡೆದು ಕೆಳಗೆ ಬಿದ್ದಿತು. ರಾಕ್ಷಸನ ನಗರದ ಒಂದು ಭಾಗದಂತಿತ್ತು ಆ ವಿಮಾನ. ಅದು ಒಡೆದು ಬಿದ್ದಾಗ ಅವನು ಕೋಪದಿಂದ ಶತ್ರುಘ್ನನೊಡನೆ ಹೋರಾಟಕ್ಕೆ ನಿಂತ.

ಶತ್ರುಘ್ನನ ವಾಯುವ್ಯಾಸ್ತ್ರಕ್ಕೆ ಸಿಲುಕಿ ರಾಕ್ಷಸರು ಎಲ್ಲರೂ ತಲೆ ಕೆದರಿಕೊಂಡು ಆಕಾಶದಲ್ಲಿ ಭೂತ ಬೇತಾಳಗಳಂತೆ ತೇಲ ತೊಡಗಿದರು. ರಾಕ್ಷಸನು ಪಾಶುಪತಾಸ್ತ್ರವನ್ನು ಪ್ರಯೋಗಿಸಿದ. ಒಡನೆ ಭೂತ ಪ್ರೇತ ಪಿಶಾಚ ಭೇತಾಳಗಳು ಎಲ್ಲೆಡೆ ಕಾಣಿಸಿಕೊಂಡವು. ಕಪಾಲಗಳಿಂದ ಮೊಗೆದುರಕ್ತ ಕುಡಿದವು, ಕೈಯಲ್ಲಿ ಕತ್ತರಿಹಿಡಿದು ಜೀವಂತ ಸೈನಿಕರ ಕತ್ತನ್ನೆ ಕತ್ತರಿಸಿ ರಕ್ತ ಹೀರಿದವು. ಒಡನೆ ಶತ್ರುಘ್ನನು ನಾರಾಯಣಾಸ್ತ್ರದಿಂದ ಅವುಗಳನ್ನು ನಾಶಪಡಿಸಿದನು. ರಾಕ್ಷಸನು ತ್ರಿಶೂಲವನ್ನೆತ್ತಿದಾಗ ಅವನ ತೋಳುಗಳನ್ನೆ ಕಡಿದನು. ಆದರೂ ರಾಕ್ಷಸನು ತಲೆಯಿಂದಲೆ ಹೋರಾಡಲು ಮುಂದೆ ಬಂದು 'ಶತ್ರುಘ್ನ, ನೀನೀಗಲೆ ಸಾಯುವೆ. ನಿನ್ನನ್ನು ಯಾರು ಕಾಪಾಡುವರು ?' ಎಂದ. ಒಡನೆ ಶತ್ರುಘ್ನನು ಅವನ ತಲೆಯನ್ನೆ ತುಂಡರಿಸಿದ. ಇದನ್ನು ಕಂಡು ಮುಷ್ಟಿಯಿಂದ ತಿವಿಯಲು ಬಂದ ಉಗ್ರದಂಷ್ಟ್ರನ ತಲೆಯನ್ನೂ ಕತ್ತರಿಸಿದ. ಅಳಿದುಳಿದ ರಾಕ್ಷಸರು ಶರಣಾಗಿ ಕುದುರೆಯನ್ನು ತಂದೊಪ್ಪಿಸಿದರು. ವೀಣೆ ಶಂಖಗಳ ಧ್ವನಿ ವೀರರ ಜಯಶಬ್ದಗಳು ಕೇಳಿ ಬಂದವು.

*ಇತಿ ಶ್ರೀ ಪದ್ಮಮಹಾಪುರಾಣ - ೨ರ ಪಾತಾಳ ಖಂಡದಲ್ಲಿ ಶೇಷ-ವಾತ್ಸ್ಯಾಯನ ಸಂವಾದದಲ್ಲಿ ರಾಮಾಶ್ವಮೇಧದಲ್ಲಿ ವಿದ್ಯುನ್ಮಾಲಿ ರಾಕ್ಷಸ ಪರಾಜಯ ಕಥನವೆಂಬ ಹದಿನೈದನೆ ಅಧ್ಯಾಯ ಮುಗಿದುದು*

**ಶೇಷ ಉವಾಚ**

**ಶೇಷ :-** ಕಳೆದುಹೋದ ಕುದುರೆ ತಿರುಗಿ ಲಭಿಸಿದುದರಿಂದ ಶತ್ರುಘ್ನ ಪುಷ್ಕಲರು ಆನಂದಪಟ್ಟರು. ಲಕ್ಷ್ಮೀನಿಧಿ ಮತ್ತು ಇತರ ವೀರರು ರಕ್ತದಿಂದ ತೊಯ್ದು ಹೋಗಿದ್ದರೂ ಅವರ ಉತ್ಸಾಹ ಸ್ವಲ್ಪವೂ ಅಡಗಿರಲಿಲ್ಲ. ಅವರೆಲ್ಲರೂ ಶತ್ರುಘ್ನನನ್ನು ಪ್ರಶಂಸಿಸಿದರು. ದೇವತೆಗಳೂ ಭೀತಿಯನ್ನು ತೊರೆದು ನೆಮ್ಮದಿ ಪಡೆದರು. ನದಿಗಳು ನಿರ್ಮಲವಾಗಿ ಹರಿದವು. ಸೂರ್ಯನೂ ನಿರ್ಮಲವಾಗಿ ಬೆಳಗಿದ. ಗಾಳಿಯೂ ಧೂಳನ್ನು ಬಿಟ್ಟು ಸುಗಂಧ ಯುಕ್ತವಾದ ನೀರ ಹನಿಗಳನ್ನೇಹೊತ್ತು ಬೀಸಿತು. ಜಯಲಕ್ಷ್ಮಿಯನ್ನು ಪಡೆದ ಆ ವೀರರೆಲ್ಲರೂ ಮುಂದಿನ ಪ್ರಯಾಣಕ್ಕೆ ಸನ್ನದ್ಧರಾಗಿ ಹೇಳಿದರು.

**ವೀರರು :-** ಪ್ರಭು, ಮಹಾ ಬಲಿಷ್ಠನಾದ ವಿದ್ಯುನ್ಮಾಲಿಗೆ ದೇವತೆಗಳೂ ಭಯಪಡುತ್ತಿದ್ದರು. ಅವರನ್ನು ಸ್ವರ್ಗದಿಂದಲೆ ಹೊರಗೆ ಅಟ್ಟಿದ್ದನಾತ. ಅಂಥ ರಾಕ್ಷಸನನ್ನು ನೀನು ಸಂಹರಿಸಿದುದು ಸಂತೋಷದ ಸಂಗತಿ. ಈಗ ಕುದುರೆ ದೊರತುದು ಮತ್ತು ಹೀಗೆಯೆ ಎಲ್ಲಕಡೆ ನಿನಗೆ ಜಯ ಲಭಿಸುತ್ತಿರುವುದು ಸಂತೋಷದ ಸಂಗತಿಗಳು, ಪ್ರಭು. ಇನ್ನು ಕುದುರೆಯನ್ನು ಬಿಟ್ಟುಬಿಡು. ವಿಲಂಬ ಬೇಡ.

ಶತ್ರುಘ್ನನು ಈ ಮಾತನ್ನು ಕೇಳಿ ಸಂತೋಷದಿಂದ ಕುದುರೆಯನ್ನು ಬಿಟ್ಟ. ಅದು ಉತ್ತರ ದಿಕ್ಕಿನಲ್ಲಿ ಸಂಚರಿಸತೊಡಗಿತು. ಅದು ರೇವಾನದೀ ತೀರಕ್ಕೆ ಬಂದಾಗ ಅಲ್ಲಿ ನೀಲರತ್ನದ ರಸವೊ ಎಂಬಂತೆ ಕಾಣುವ ಆ ನದೀ ನೀರಿನ ಅಲೆಗಳಿಂದ ಪಾವನವಾದ ಅನೇಕ ಆಶ್ರಮಗಳನ್ನು ಶತ್ರುಘ್ನನು ಸಂದರ್ಶಿಸಿ ಮುನಿಗಳನ್ನು ವಂದಿಸಿದ ಮುತ್ತುಗದಲೆಯಿಂದ ನಿರ್ಮಿತವಾದ ಒಂದು ಹಳೆಯ ಆಶ್ರಮವನ್ನು ಕಂಡು ಅಮಾತ್ಯ ಸುಮತಿಯನ್ನು ಕೇಳಿದ. 'ಇದು ಯಾರ ಆಶ್ರಮ ?' ಆತನೆಂದ.

**ಸುಮತಿ :-** ಇದು ಅರಣ್ಯಕ ಮುನಿಯು ಆಶ್ರಮ. ಅವನನ್ನು ಕಂಡು ನಮ್ಮ ಪಾಪಗಳನ್ನು ಕಳೆದುಕೊಳ್ಳೋಣ. ಸರ್ವಶಾಸ್ತ್ರ ಪಾರಂಗತನಾತ. ರಾಮ ಪಾದಾರವಿಂದದಿಂದ ಮಕರಂದವನ್ನು ಆಸ್ವಾದಿಸಲು ಸದಾ ಹಾತೊರೆಯುವವ. ಅವನನ್ನು ನೀನು ನಮಸ್ಕರಿಸಿ ಕೇಳಿದರೆ ಎಲ್ಲ ತತ್ವವನ್ನೂ ಉಪದೇಶಿಬಲ್ಲ.

ಶತ್ರುಘ್ನನು ಇದನ್ನು ಕೇಳಿ ಕೆಲವೆ ಮಂದಿ ವೀರರೊಡನೆ ಹನುಮಂತ, ಪುಷ್ಕಲ ಸುಮತಿ ಲಕ್ಷ್ಮೀನಿಧಿ ಪ್ರತಾಪಾಗ್ರ್ಯ ಸುಬಾಹು ಸುಮದರನ್ನು ಕರೆದುಕೊಂಡು ಆಶ್ರಮಕ್ಕೆ ತೆರಳಿದ, ಮುನಿಗೆ ನಮಸ್ಕರಿಸಿದ. ಅವನು ಎಲ್ಲರಿಗೂ ಅರ್ಘ್ಯಪಾದ್ಯಾದಿಗಳನ್ನಿತ್ತು ಫಲ ಮೂಲ ಮುಂತಾದವುಗಳಿಂದ ಸತ್ಕರಿಸಿದ. 'ನೀವೆಲ್ಲ ರಾಜರುಗಳು ಎಲ್ಲಿ ಒಟ್ಟು ಸೇರಿದಿರಿ? ಇಲ್ಲಿಗೆ ಹೇಗೆ ಬಂದಿರಿ ?' ಎಂದು ಕೇಳಿದ. ಸುಮತಿ ಹೇಳಿದ, 'ರಘುನಾಥನು ಅಶ್ವಮೇಧಯಾಗವನ್ನು ಮಾಡುವನು. ಅವನ ಕುದುರೆಯನ್ನು ನಾವೆಲ್ಲರೂ ರಕ್ಷಿಸುತ್ತಿದ್ದೇವೆ.'.

ಇದನ್ನು ಕೇಳಿ ಮುನಿಯು ದಂತಕಾಂತಿಯಿಂದ ಕತ್ತಲನ್ನೋಡಿಸುವನಂತೆ ನುಡಿದ.

**ಅರಣ್ಯಕ :-** ಸಂಭ್ರಮದಿಂದ ನಾನಾವಿಧದ ಯಾಗಗಳನ್ನು ಮಾಡಿದರೂ ಫಲವಿಲ್ಲ. ಅದರಿಂದ ದೊರೆಯುವುದು ಅಲ್ಪ ಪುಣ್ಯ. ನಶ್ವರ ಲೋಕಗಳು. ಶಾಶ್ವತವಾದ ಉತ್ತಮ ಲೋಕಗಳನ್ನು ನೀಡಬಲ್ಲವನು ರಾಮರೂಪಿನ ರಮಾನಾಥನೊಬ್ಬನೆ. ಅವನನ್ನು ಬಿಟ್ಟು ಬೇರೆಯವರನ್ನು ಪೂಜಿಸುವವನು ಮೂಢ. ಸ್ಮರಣ ಮಾತ್ರದಿಂದ ಬೆಟ್ಟದಂಥ ಪಾಪರಾಶಿಗಳನ್ನು ಪರಿಹರಿಸಬಲ್ಲ ಅವನನ್ನು ಬಿಟ್ಟು ಯೋಗಾಭ್ಯಾಸ ಯಾಗಯಜ್ಞಗಳು ವ್ರತ ನಿಯಮಗಳು ಇವುಗಳಿಂದ ವ್ಯಥಾಕ್ಲೇಶ ಪಡುವವನು ಮೂರ್ಖನೆ ಸರಿ.

ಹಿಂದೆ ನಾನು ತತ್ವಜ್ಞಾನದ ಸಲುವಾಗಿ ಬಲ್ಲವರನ್ನು ಅರಸುತ್ತ ಅನೇಕ ತೀರ್ಥ ಕ್ಷೇತ್ರಗಳನ್ನು ಸುತ್ತಿದೆ. ಯಾರೂ ಸಿಗಲಿಲ್ಲ. ಕೊನೆಗೊಂದು ದಿನ ನನ್ನ ಅದೃಷ್ಟದಿಂದ ಲೋಮಶ ಮುನಿಯನ್ನು ಕಂಡೆ. ಅವನು ತೀರ್ಥಯಾತ್ರೆಗಾಗಿ ಸ್ವರ್ಗದಿಂದ ಇಳಿದು ಬಂದಿದ್ದ. ದೊಡ್ಡ ದೊಡ್ಡ ಯೋಗಿಗಳು ಅವನ ಕಾಲಿಗೆರಗುವರು. ನಾನು ಅವನಿಗೆ ನಮಸ್ಕರಿಸಿ ಕೇಳಿದೆ. 'ಸ್ವಾಮಿ, ದುರ್ಲಭವಾದ ಈ ಅದ್ಭುತ ಮನುಷ್ಯ ಜನ್ಮವನ್ನು ಹೊಂದಿ ಸಂಸಾರ ಸಾಗರವನ್ನು ದಾಟಿ ಪಾರಾಗಲು ಏನು ಮಾಡಬೇಕು ? ನೀನು ಯೋಗವನ್ನು ಬಲ್ಲವ. ಸರ್ವಶಾಸ್ತ್ರ ಪಾರಂಗತ. ಯಾವ ವ್ರತದಾನ ಜಪಯಜ್ಞಗಳನ್ನು ಮಾಡಿದರೆ ಯಾವ ದೇವತೆಯನ್ನಾರಾಧಿಸಿದರೆ ಸಂಸಾರವನ್ನು ದಾಟಬಹುದು. ಹೇಳು'.

ಮುನಿಯು ಹೀಗೆ ಉಪದೇಶಿಸಿದ 'ಸ್ವರ್ಗ ಸಂಪಾದಿಸಬೇಕೆಂದರೆ ದಾನ, ವ್ರತ, ನಿಯಮ, ಯಮ ತೀರ್ಥಯಾತ್ರೆ ಯೋಗಾಭ್ಯಾಸ ಯಜ್ಞ ಯಾಗಗಳು ಹೀಗೆ ಅನೇಕ ಉಪಾಯಗಳಿವೆ. ಆದರೆ ಒಂದು ರಹಸ್ಯವನ್ನು ಹೇಳುತ್ತೇನೆ. ಸಂಸಾರ ಸಾಗರವನ್ನು ದಾಟಲು ಬೇರೆಯೆ ಒಂದು ಉಪಾಯವಿದೆ. ಅದನ್ನು ನಾಸ್ತಿಕನಿಗೆ, ಶ್ರದ್ಧೆ ಇಲ್ಲದವನಿಗೆ, ನಿಂದಕನಿಗೆ, ಭಕ್ತಿಯನ್ನು ದ್ವೇಷಿಸುವವನಿಗೆ ಹೇಳಕೂಡದು. ಕಾಮ ಕ್ರೋಧಗಳನ್ನು ಬಿಟ್ಟು ಶಾಂತನಾದ ರಾಮಭಕ್ತನಿಗೆ ಮಾತ್ರ ಹೇಳಬೇಕಾದುದು, ಎಲ್ಲ ದುಃಖವನ್ನೂ ಕಳೆಯುವಂಥಹದು ಅದು. ಅದೇನೆಂದರೆ.

**ರಾಮಾನ್ನಾಸ್ತಿ ಪರೋ ದೇವೋ ರಾಮಾನ್ನಾಸ್ತಿ ಪರಂ ವ್ರತಂ ।**
**ನ ಹಿ ರಾಮಾತ್ ಪರೋ ಯೋಗೋ ನ ಹಿ ರಾಮಾತ್ ಪರೋ ಮಖಃ ॥**

ರಾಮನಿಗಿಂತ ಮಿಗಿಲಾದ ದೇವನಿಲ್ಲ. ರಾಮನನ್ನು ಬಿಟ್ಟು ಅನ್ಯರನ್ನು ಒಲಿಸಲು ಮಾಡುವ ವ್ರತ ನಿಯಮಗಳು, ಯೋಗಾಭ್ಯಾಸ, ಯಾಗ ಯಜ್ಞಗಳು ಇವೆಲ್ಲವೂ ವ್ಯರ್ಥ. ಅವು ಸಂಸಾರದಿಂದ ನಮ್ಮನ್ನು ದಾಟಿಸಲಾರವು.

ರಾಮನ ಸ್ಮರಣೆ, ಜಪ, ಪೂಜೆಗಳಿಂದ ಐಹಿಕ ಅಮುಷ್ಮಿಕವೆಂದು ಎರಡು ಬಗೆಯ ಸಂಪತ್ತನ್ನೂ ಪಡೆಯಬಹುದು. ಸಂಸಾರ ಸಾಗರವನ್ನು ದಾಟಿಸುವ ಪರಮಭಕ್ತಿಯನ್ನು ಸಂಪಾದಿಸಬಹುದು.

**ಶ್ವಪಾಕೋಪಿ ಸಂಸ್ಮೃತ್ಯ ರಾಮಂ ಯಾತಿ ಪರಾಂ ಗತಿಂ ।**

ಚಂಡಾಲನೂ ಕೂಡ ರಾಮ ಸ್ಮರಣೆಯ ಬಲದಿಂದ ಪರಗತಿ ಹೊಂದಬಲ್ಲ.

ವೇದಶಾಸ್ತ್ರ ನಿರತರಾದ ನಿನ್ನಂಥವರಿಗೆ ಏನು ಕಷ್ಟವಿದೆ ? ಎಲ್ಲ ವೇದ ಶಾಸ್ತ್ರಗಳ ರಹಸ್ಯವನ್ನೆ ನಿನಗೆ ಹೇಳಿದ್ದೇನೆ. ಇನ್ನು ನೀನು ವಿಚಾರಿಸಿ ನಿನಗೆ ಸರಿದೋರಿದುದನ್ನು ಅನುಷ್ಠಾನ ಮಾಡು.

**ಏಕೋ ದೇವೋ ರಾಮಚಂದ್ರೋ ವ್ರತಮೇಕಂ ತದರ್ಚನಂ ।**
**ಮಂತ್ರೋಽಪ್ಯೇಕಶ್ಚ ತನ್ನಾಮ ಶಾಸ್ತ್ರಂ ತದ್ಧ್ಯೇವ ತತ್ ಸ್ತುತಿಃ ॥**

ರಾಮಚಂದ್ರನೆ ಉತ್ತಮ ದೇವತೆ. ಅವನ ಪೂಜೆಯೆ ಉತ್ತಮ ವ್ರತ. ಅವನ ನಾಮವೆ ಉತ್ತಮವಾದ ಮಂತ್ರ. ಯಾವುದು ಅವನನ್ನು ಸ್ತುತಿಸುವುದೊ ಅದುವೆ ಶಾಸ್ತ್ರ.

**ತಸ್ಮಾತ್ ಸರ್ವಾತ್ಮನಾ ರಾಮಚಂದ್ರಂ ಭಜ ಮನೋಹರ ।**
**ಯಥಾ ಗೋಷ್ಪದವತ್ತುಚ್ಛೋ ಭವೇತ್ ಸಂಸಾರ ಸಾಗರಃ ॥**

ಆದ್ದರಿಂದ ಮನೋಹರನಾದ ರಾಮಚಂದ್ರನನ್ನೆ ಎಲ್ಲ ಬಗೆಯಿಂದಲೂ ಸೇವಿಸು. ಅದರಿಂದ ಸಂಸಾರ ಸಾಗರವು ಗೋಪಾದದಷ್ಟೆನಿಸಿ ಅಲ್ಪವಾಗುತ್ತದೆ.'

ಈ ಉಪದೇಶವನ್ನು ಕೇಳಿ ತಿರುಗಿ ಪ್ರಶ್ನೆ ಮಾಡಿದೆ. 'ಅವನನ್ನು ಹೇಗೆ ಧ್ಯಾನಿಸಬೇಕು? ಹೇಳು. ಅದೊಂದನ್ನು ತಿಳಿದರೆ ನಾನು ಕೃತಾರ್ಥನೆನಿಸುವೆ.' ಮುನಿಯ ಒಂದು ಕ್ಷಣ ಧ್ಯಾನ ಮಾಡಿ ನುಡಿದ 'ಅಯೋಧ್ಯಾ ನಗರದಲ್ಲಿ ಒಂದು ಕಲ್ಪವೃಕ್ಷ. ಅದರ ಬುಡದಲ್ಲಿ ಸುಂದರವಾದ ಮಂಟಪ. ಅದರಲ್ಲಿ ಸುವರ್ಣಮರಕತನೀಲ ಮುಂತಾದವುಗಳಿಂದ ನಿರ್ಮಿತವಾಗಿದ್ದು ತನ್ನ ಕಾಂತಿಯಿಂದ ಕತ್ತಲವನ್ನು ಓಡಿಸುವ ಮನೋಹರವಾದ ಸಿಂಹಾಸನ. ಅದರಲ್ಲಿ ಕುಳಿತಿದ್ದಾನೆ ದೂರ್ವೆಯ ದಳದಂತೆ ಶ್ಯಾಮಲಕಾಂತಿಯಿಂದ ಹೊಳೆವ ಮನೋಹರವಾದ ರಘುರಾಜ ಶ್ರೀರಾಮಚಂದ್ರ. ದೇವೇಂದ್ರನಿಂದ ಪೂಜಿಸಲ್ಪಡುವ ದೇವ. ಹುಣ್ಣಿಮೆಯ ಚಂದ್ರನನ್ನು ನಾಚಿಸುವ ಮುಖ ಅವನದು. ಅಷ್ಟಮಿಯ ಚಂದ್ರನಂಥ ಹಣೆ. ಕಪ್ಪಾದ ಕೂದಲುಗಳು. ಮಣಿಖಚಿತವಾದ ಕಿರೀಟ. ಸುಂದರವಾದ ಮಕರ ಕುಂಡಲ. ಜಪಾ ಕುಸುಮದಂಥ ಮಧುರವಾದ ನಾಲಿಗೆಯಲ್ಲಿ ಋಗ್ವೇದ ಮುಂತಾದ ಶಾಸ್ತ್ರಗಳು ಸದಾ ನೆಲೆಸಿರುತ್ತವೆ. ಶಂಖದಂತೆ ಮನೋಹರವಾದ ಕಂಠ, ಸಿಂಹದಂತೆ ಎತ್ತರವಾಗಿದ್ದು ಪುಷ್ಟವಾದ ಹೆಗಲು, ಭುಜಕೀರ್ತಿ ಕಂಕಣ ವಜ್ರದುಂಗುರಗಳಿಂದ ಒಪ್ಪುವ ಅಜಾನು ಬಾಹುಗಳು. ಲಕ್ಷ್ಮಿಯ ವಾಸಸ್ಥಾನವಾದ ಶ್ರೀವತ್ಸದಿಂದ ಶೋಭಿಸುವ ವಿಸ್ತಾರವಾದ ಎದೆ. ಮನೋಹರವಾದ ಉದರ, ನಾಭಿ, ಕಟಿಯಲ್ಲಿ ಮಣಿಮಯವಾದ ಕಾಂತಿಯಿಂದ ಬಂದ ವಿಲಕ್ಷಣ ಸೌಂದರ್ಯ. ಕಾಂತಿಯುಕ್ತವಾದ ಊರುಜಾನಗಳು ವಜ್ರ, ಯಮ, ಅಂಕುಶ ರೇಖೆಗಳಿಂದ ಕೂಡಿದ, ಯೋಗಿಗಳು ಧ್ಯಾನಿಸುವ ಕೋಮಲ ಪಾದಗಳು. ಇಂಥ ಶ್ರೀರಾಮನನ್ನು ಧ್ಯಾನಿಸಿದರೆ, ಸ್ಮರಿಸಿದರೆ ಸಂಸಾರ ಸಾಗರವನ್ನು ದಾಟಬಲ್ಲೆ. ಅವನನ್ನೆ ನಿತ್ಯ ಗಂಧ ಪುಷ್ಪಾದಿಗಳಿಂದ ಭಕ್ತಿಪೂರ್ವಕವಾಗಿ ಆರಾಧಿಸಿದರೆ ಇಹಪರಗಳೆರಡರಲ್ಲೂ ಉತ್ತಮವಾದ ಸಂಪತ್ತನ್ನು ಪಡೆಯಬಲ್ಲೆ.

**ಶೇಷ** :- ಶ್ರೀರಾಮಧ್ಯಾನದ ಪ್ರಕಾರವನ್ನು ಕೇಳಿದ ಅರಣ್ಯಕ ಮುನಿ ತಿರುಗಿ ಲೋಮಶ ಮುನಿಯನ್ನು ಬೇಡಿದ.

**ಅರಣ್ಯಕ :-** ಮುನಿವರ್ಯ, ಶ್ರೀರಾಮನ ಚರಿತ್ರೆಯನ್ನೂ ನನಗೆ ಉಪದೇಶಿಸು. ನಿನ್ನಂಥ ದಯಾಳುಗಳಾದ ಗುರುಗಳು ಶಿಷ್ಯರೇನು ಕೇಳಿದರೂ ಹೇಳುವರು. ಈ ರಾಮನು ಯಾರು ? ಅವನ ಚರಿತ್ರೆಯೇನು ? ಅವನೇಕೆ ಅವತರಿಸಿದ ?ಮನುಷ್ಯತ್ವವನ್ನು ಹೊಂದಲೇನು ಕಾರಣ ? ಎಲ್ಲವನ್ನೂ ಹೇಳಿ ನನ್ನ ಸಂಶಯಗಳನ್ನು ಪರಿಹರಿಸು.

**ಲೋಮಶ :-** ಲೋಕವೆಲ್ಲ ನರಕಭಾಗಿಯಾಗುತ್ತಿರುವುದನ್ನು ಕಂಡ ಯೋಗೇಶ್ವರ ಚಕ್ರವರ್ತಿಯಾದ ಶ್ರೀಹರಿ, ತನ್ನ ಕೀರ್ತಿಯನ್ನು ಲೋಕದಲ್ಲಿ ಹರಡಿ ಸಂಸಾರದಿಂದ ಅವರನ್ನು ಪಾರುಮಾಡಲು ನಾಲ್ಕು ರೂಪದಿಂದ ಅವತರಿಸಿದ. ತ್ರೇತಾಯುಗದಲ್ಲಿ ಸೂರ್ಯವಂಶವನ್ನು ಬೆಳಗಿಸಿದ ತಾವರೆಗಂಗಳ ಈ ಶ್ರೀರಾಮನು ತಂದೆಯ ಮಾತಿನಂತೆ ಲಕ್ಷ್ಮಣ ಸಮೇತನಾಗಿ ಬಿಲ್ಲು ಬಾಣಗಳನ್ನು ಹಿಡಿದು ವಿಶ್ವಾಮಿತ್ರ ಮುನಿಯ ಯಜ್ಞ ರಕ್ಷಣೆಗೆ ಅವನ ಹಿಂದೆ ಹೊರಟ. ದಾರಿಯಲ್ಲಿ ಅಡ್ಡನಿಂತ ತಾಟಕೆಯನ್ನು ಬಾಣದಿಂದ ಹೊಡೆದು ಯಮಪಟ್ಟಣಕ್ಕೆ ಕಳಿಸಿದ. ಇಂದ್ರನ ಸಂಗಮಾಡಿ ಪತಿ ಶಾಪದಿಂದ ಕಲ್ಲಾಗಿದ್ದ ಗೌತಮನ ಪತ್ನಿ ಅಹಲ್ಯೆಗೆ ತನ್ನ ಪಾದ ಸ್ಪರ್ಶದಿಂದ ತಿರುಗಿ ನಿಜರೂಪವನ್ನಿತ್ತ. ವಿಶ್ವಾಮಿತ್ರನ ಯಜ್ಞಕಾಲದಲ್ಲಿ ಮಾರೀಚ ಸುಬಾಹುಗಳನ್ನು ಬಾಣಗಳಿಂದ ಹೊಡೆದ. ಜನಕನ ಅರಮನೆಯಲ್ಲಿ ಶಿವಧನುಸ್ಸನ್ನು ಮುರಿದು ಸೀತೆಯನ್ನು ಮದುವೆಯಾದ. ಆಗ ಅವನಿಗೆ ಹದಿನೈದು ವರ್ಷ ವಯಸ್ಸು. ಸೀತೆ ಆರು ವರ್ಷ ವಯಸ್ಸಿನವಳು. ಅಯೋನಿಜೆ, ಸುಂದರಿ. ಅವಳನ್ನು ಪಡೆದು ರಾಮ ಕೃತಕೃತ್ಯನಾದ. ಹನ್ನೆರಡು ವರ್ಷಗಳ ಕಾಲ ಅವಳೊಂದಿಗೆ ಸುಖವಾಗಿದ್ದ. ಬಳಿಕ ಇಪ್ಪತ್ತೇಳು ವಯಸ್ಸಿನ ಶ್ರೀರಾಮನಿಗೆ ಯುವರಾಜ ಪಟ್ಟಾಭಿಷೇಕದ ಸಿದ್ಧತೆಗಳು ನಡೆಯುತ್ತಿದ್ದಾಗ ಕೈಕೇಯಿ ರಾಜನಲ್ಲಿ ಎರಡು ವರಗಳನ್ನು ಕೇಳಿದಳು. 'ಒಂದು ವರದಿಂದ ಸೀತಾಲಕ್ಷ್ಮಣ ಸಮೇತನಾದ ಶ್ರೀರಾಮನು ಹದಿನಾಲ್ಕು ವರ್ಷಗಳ ಕಾಲ ಜಟಾಧಾರಿಯಾಗಿ ವನವಾಸ ಮಾಡಲಿ. ಇನ್ನೊಂದು ವರದಿಂದ ಭರತನು ಯುವರಾಜನಾಗಲಿ' ಎಂದು. ರಾಜನು ಅದರಂತೆ ಸೀತಾಲಕ್ಷ್ಮಣರೊಂದಿಗೆ ರಾಮನನ್ನು ದೇಶದಿಂದ ಹೊರಗೆ ಕಳಿಸಿದ. ಮೂರು ದಿನ ಬರಿ ನೀರು, ನಾಲ್ಕನೆ ದಿನ ಹಣ್ಣು ಸೇವಿಸಿದ್ದು ಐದನೆ ದಿನ ಚಿತ್ರಕೂಟದಲ್ಲಿ ಆಶ್ರಮವನ್ನು ಕಟ್ಟಿಕೊಂಡ ಶ್ರೀರಾಮ.

ಹದಿಮೂರನೆ ವರ್ಷದಲ್ಲಿ ಪಂಚವಟಿಯಲ್ಲಿ ಶೂರ್ಪಣಖೆಯೆಂಬ ರಾಕ್ಷಸಿಯನ್ನು ವಿರೂಪಗೊಳಿಸಿದ. ಬಳಿಕ ಒಂದುದಿನ ಮಾಘ ಬಹುಳ ಅಷ್ಟಮಿಯಂದು ವೃಂದವೆಂಬ ಮುಹೂರ್ತದಲ್ಲಿ ರಾವಣನು ಸೀತೆಯನ್ನು ಕದ್ದೊಯ್ದ. ಆಗ ರಾಮ ಲಕ್ಷ್ಮಣರ್ಬಿಬರೂ ಆಶ್ರಮದಲ್ಲಿರಲಿಲ್ಲ. ರಾವಣನ ಪಾಪವೂ ಪರಿಪಕ್ವವಾಗಿತ್ತು. ಆತ ಸೀತೆಯನ್ನೊಯ್ಯುತ್ತಿದ್ದಾಗ, 'ರಾಮ, ರಾಮ, ನನ್ನನ್ನು ಕಾಪಾಡು, ಕಾಪಾಡು. ರಾಕ್ಷಸನೊಯ್ಯುತ್ತಿದ್ದಾನೆ, ಎಂದು ಹುಲ್ಲೆಯಂತೆ ಗೋಳಿಟ್ಟಳು. ಆದರೂ ಕಾಮ ಪರವಶನಾದ ರಾವಣನು ಅವಳನ್ನು ಎತ್ತಿಕೊಂಡು ಹೋದ, ಹಸಿದ ಗಿಡುಗನು ಕೂಗುವ ಕುರವಕ ಹಕ್ಕಿಯನ್ನೊಯ್ಯುವಂತೆ. ದಾರಿಯಲ್ಲಿ ಜಟಾಯುವೆಂಬ ಪಕ್ಷಿರಾಜನು ರಾವಣನೊಂದಿಗೆ ಕಾದು ಮಡಿದ. ಇದಾದ ಬಳಿಕ ಹತ್ತನೆ ತಿಂಗಳಿನಲ್ಲಿ ಮಾರ್ಗಶಿರ ಶುದ್ಧ ನವಮಿಯಂದು ಸಂಪಾತಿಯು ರಾವಣನ ಮನೆಯಲ್ಲಿ ಸೀತೆ ಇರುವುದನ್ನು ಕಪಿಗಳಿಗೆ ತಿಳಿಸಿದ.

ಏಕಾದಶಿ ದಿನ ಹನುಮಂತನು ಮಹೇಂದ್ರಪರ್ವತದಿಂದ ಹಾರಿ ನೂರು ಯೋಜನ ಸಮುದ್ರವನ್ನು ದಾಟಿ ಲಂಕೆಯಲ್ಲಿಳಿದ. ರಾತ್ರಿಯೆಲ್ಲ ಅಲ್ಲಿ ಸೀತೆಯನ್ನು ಹುಡುಕಿ ಬೆಳಗಿನ ಜಾವದಲ್ಲಿ ಕಂಡ. ದ್ವಾದಶಿ ದಿನವೆಲ್ಲ ಶಿಂಶುಪಾ ವೃಕ್ಷದಲ್ಲಿದ್ದು ರಾತ್ರಿಯಲ್ಲಿ ಸೀತೆಗೆ ನಂಬಿಕೆ ಉಂಟಾಗುವಂತೆ ಅವಳೊಡನೆ ಸಂಭಾಷಣೆ ನಡೆಸಿದ. ತ್ರಯೋದಶಿದಿನ ಅಕ್ಷ ಮೊದಲಾದ ರಾಕ್ಷಸರೊಡನೆ ಯುದ್ಧ. ಚತುರ್ದಶಿದಿನ ಇಂದ್ರಜಿತ್ತಿನ ಬ್ರಹ್ಮಾಸ್ತ್ರಕ್ಕೆ ಕಟ್ಟುಬಿದ್ದು ಬಾಲಕ್ಕೆ ಹಚ್ಚಿದ ಬೆಂಕಿಯಿಂದ ಲಂಕೆಯನ್ನು ಸುಟ್ಟುದು. ಹುಣ್ಣಿಮೆದಿನ ಮಹೇಂದ್ರ ಪರ್ವತಕ್ಕೆ ಹಿಂತಿರುಗಿದುದು. ಮಾರ್ಗಶಿರ ಬಹುಳ ಪ್ರತಿಪದೆಯಿಂದ ಐದು ದಿನಗಳ ಕಾಲ ಪ್ರಯಾಣ, ಆರನೆದಿನ ಮಧುವನ ಧ್ವಂಸ. ಸಪ್ತಮಿಯ ದಿನ ರಾಮನಿಗೆ ಸೀತೆಯ ಪ್ರತ್ಯಭಿಜ್ಞಾನವನ್ನಿತ್ತು ಎಲ್ಲವನ್ನೂ ಹೇಳಿದುದು. ಅಷ್ಟಮಿದಿನ ಉತ್ತರಾ ನಕ್ಷತ್ರ ಮಧ್ಯಾಹ್ನ ಕಾಲ ವಿಜಯವೆಂಬ ಮುಹೂರ್ತದಲ್ಲಿ ರಾಮನು ಹೊರಟ.

ಸಾಗರವನ್ನು ದಾಟಿ ರಾಕ್ಷಸ ಚಕ್ರವರ್ತಿಯನ್ನು ಕೊಲ್ಲುವೆನೆಂದು ಪ್ರತಿಜ್ಞೆ ಮಾಡಿ ದಕ್ಷಿಣ ದಿಕ್ಕಿನಲ್ಲಿ ಸುಗ್ರೀವನೊಂದಿಗೆ ಪ್ರಯಾಣ ಬೆಳೆಸಿದ. ಏಳು ದಿವಸಗಳಲ್ಲಿ ಸಮುದ್ರತೀರಕ್ಕೆ ಬಂದು ಬೀಡುಬಿಟ್ಟ. ಪುಷ್ಯ ಶುದ್ಧ ಪ್ರತಿಪದೆಯಿಂದ ತೃತೀಯಾದಿನ ಪರ್ಯಂತ ಅಲ್ಲಿಯೆ ಇದ್ದ. ಚತುರ್ಥಿಯದಿನ ವಿಭೀಷಣನು ರಾಮನನನ್ನು ಆಶ್ರಯಿಸಿದ. ಪಂಚಮಿಯಂದು ಸಮುದ್ರ ದಾಟಲು ಮಂತ್ರಾಲೋಚನೆ, ಬಳಿಕ ನಾಲ್ಕುದಿನಗಳ ಕಾಲ ಪ್ರಾಯೋಪವೇಶ ನಡೆಸಿ ಸಮುದ್ರ ರಾಜನಿಂದ ವರವನ್ನು ಪಡೆದುದು. ಅವನ ಸೂಚನೆಯಂತೆ ಸೇತುವೆ ಕಟ್ಟಿದುದು. ದಶಮಿಯಿಂದ ತ್ರಯೋದಶಿಪರ್ಯಂತ ಇದು ನಡೆಯಿತು. ಚತುರ್ದಶಿದಿನ ಸುವೇಲ ಪರ್ವತಕ್ಕೆ ಸೈನ್ಯವನ್ನು ತಂದು ಪೌರ್ಣಮಿಯಿಂದ ದ್ವಿತೀಯೆವರೆಗೂ ಸೈನ್ಯವನ್ನು ದಾಟಿಸಿದುದು. ದಶಮಿಯವರೆಗೆ ಲಂಕೆಯಲ್ಲಿ ಶಿಬಿರ ಹೂಡಿದುದು. ಏಕಾದಶಿಯಂದು ಶುಕಸಾರಣರು ಬಂದುದು, ರಾವಣನಿಗೆ ಅವರು ಪುಷ್ಯಬಹುಳ ದ್ವಾದಶಿದಿನ ಕಪಿ ಸೈನ್ಯದ ಗಣನೆಮಾಡಿ ಹೇಳಿದರು. ಶಾರ್ದೂಲನೆಂಬ ಗೂಢಾಚಾರನೂ ಕಪಿಸೇನೆಯ ಅಧಿಪತಿಗಳ ಬಲವನ್ನು ರಾವಣನ ಮುಂದೆ ವರ್ಣಿಸಿದು. ತ್ರಯೋದಶಿಯಿಂದ ಅಮಾವಾಸ್ಯೆಯವರೆಗೂ ಮೂರು ದಿನಗಳ ಕಾಲ ರಾವಣನ ಸೇನೆಯಲ್ಲಿ ಯುದ್ಧ ಸಿದ್ಧತೆಗಳು ನಡೆದುವು. ಮಾಘ ಶುದ್ಧ ಪ್ರತಿಪದೆಯಲ್ಲಿ ಅಂಗದನ ದೌತ್ಯ, ಸೀತೆಯ ಮುಂದೆ ರಾವಣನು ಮಾಯೆಯಿಂದ ರಾಮನ ರುಂಡವನ್ನು ತೋರಿಸಿದುದು. ಮಾಘಶುದ್ಧ ದ್ವಿತೀಯೆಯಿಂದ ಅಷ್ಟಮಿವರೆಗೆ ಏಳುದಿನಗಳ ಕಾಲ ಕಪಿಗಳಿಗೂ ರಾಕ್ಷಸರಿಗೂ ಯುದ್ಧ.

ಮಾಘಶುದ್ಧ ನವಮಿರಾತ್ರಿಯಲ್ಲಿ ಇಂದ್ರಜಿತ್ತು ರಾಮಲಕ್ಷ್ಮಣರನ್ನು ನಾಗಪಾಶದಿಂದ ಕಟ್ಟಿಹಾಕಿದ. ಕಪಿವೀರರು ದಿಕ್ಕೆಟ್ಟು ಸುಮ್ಮನಿದ್ದರು. ಆಗ ವಾಯು ರಾಮನ ಕಿವಿಯಲ್ಲಿ ಅವನ ಸ್ವರೂಪವನ್ನು ಉಸುರಿದನು. ಒಡನೆ ರಾಮನು ಗರುಡನನ್ನು ನೆನೆದ, ಗರುಡನು ಬಂದು ನಾಗಪಾಶವನ್ನು ಕಳೆದು ಇದು ಏಕಾದಶಿದಿನ ನಡೆಯಿತು. ದ್ವಾದಶಿದಿನ ಧೂಮ್ರಾಕ್ಷವಧೆ. ತ್ರಯೋದಶಿದಿನ ಕಂಪನವಧೆ, ಮಾಘಶುದ್ಧ ಚತುರ್ದಶಿಯಿಂದ ಮಾಘಬಹುಳ ಪಾಡ್ಯದವರೆಗೆ ನೀಲ-ಪ್ರಹಸ್ತರ ಯುದ್ಧ, ಪ್ರಹಸ್ತವಧ. ಬಿದಿಗೆಯಿಂದ ಚೌತಿಯವರೆಗೆ ರಾಮ ರಾವಣರ ಯುದ್ಧ, ರಾವಣನ ಪಲಾಯನ. ಪಂಚಮಿಯಿಂದ ಅಷ್ಟಮಿವರೆಗೆ ಕುಂಭಕರ್ಣನನ್ನೆಬ್ಬಿಸುವ ಪ್ರಯತ್ನ.

ಅವನೆದ್ದು ಉಂಡು ಆರುದಿನಗಳ ಕಾಲ ಯುದ್ಧಮಾಡಿ ಅನೇಕ ಕಪಿಗಳನ್ನು ನುಂಗಿ ಕೊನೆಗೆ ರಾಮನ ಬಾಣಗಳಿಂದ ಮಡಿದ. ಅಮಾವಾಸ್ಯೆಯಂದು ಶೋಕದಿಂದ ಯುದ್ಧವಿರಾಮ.

ಫಾಲ್ಗುಣ ಶುದ್ಧ ಪ್ರತಿಪತ್ತಿನಿಂದ ಚತುರ್ಥಿವರೆಗೆ ನಾಲ್ಕುದಿನಗಳಲ್ಲಿ ಬಿಸತಂತು ಮೊದಲಾದ ಐದುಜನ ರಾಕ್ಷಸರು ಮಡಿದರು. ಪಂಚಮಿಯಿಂದ ಸಪ್ತಮಿವರೆಗೆ ಅತಿಕಾಯವಧೆ. ಅಂದಿನಿಂದ ದ್ವಾದಶಿವರೆಗೆ ಕುಂಬನಿಕುಂಭರ ವಧೆ, ಬಳಿಕ ಮೂರು ದಿನಗಳಲ್ಲಿ ಮಕರಾಕ್ಷ ವಧೆ. ಫಾಲ್ಗುಣ ಬಹುಳ ಬಿದಿಗೆದಿನ ಇಂದ್ರಜಿತ್ತು ಜಯಶಾಲಿಯಾದ. ತದಿಗೆಯಿಂದ ಸಪ್ತಮಿವರೆಗೂ ಐದುದಿನಗಳ ಕಾಲ ಔಷಧಿ ತರುವುದಕ್ಕಾಗಿ ಯುದ್ಧಕ್ಕೆ ವಿರಾಮವಿತ್ತು. ಬಳಿಕ ತ್ರಯೋದಶಿವರೆಗೆ ಐದುದಿನ ಇಂದ್ರಜಿತ್ತು ಯುದ್ಧಮಾಡಿ ತನ್ನ ಬಲಪೌರುಷಗಳನ್ನು ತೋರಿ ಲಕ್ಷ್ಮಣನಿಂದ ಹತನಾದ. ಚತುರ್ದಶಿ ದಿನ ಯುದ್ಧವಿರಾಮ. ಅಮಾವಾಸ್ಯೆಯ ದಿನ ರಾವಣನು ಯುದ್ಧಕ್ಕೆ ಹೊರಟ ಚೈತ್ರಶುದ್ಧ ಪಂಚಮಿಯವರೆಗೆ ಬಹುಜನ ರಾಕ್ಷಸರು ಸತ್ತರು. ಷಷ್ಠಿಯಿಂದ ಅಷ್ಟಮಿಯವರೆಗೆ ಮಹಾಪಾರ್ಶ್ವ ಮುಂತಾದವರ ವಧೆ. ನವಮಿ ದಿನ ಲಕ್ಷ್ಮಣನು ರಾವಣನ ಶಕ್ತ್ಯಾಯುಧದಿಂದ ಮೂರ್ಛೆ ಹೊಂದಿದ್ದು. ಕೋಪಾವೇಶದಿಂದ ರಾಮನು ರಾವಣನನ್ನು ಹೊಡೆದೋಡಿಸಿದುದು. ಲಕ್ಷ್ಮಣನನ್ನು ಮೂರ್ಛೆಯಿಂದ ಎಬ್ಬಿಸಲು ಔಷಧಕ್ಕಾಗಿ ಹನುಮಂತನು ದ್ರೋಣ ಪರ್ವತವನ್ನು ತಂದುದು. ದಶಮಿ ದಿನ ಯುದ್ಧಕ್ಕೆ ವಿರಾಮ.

ಏಕಾದಶಿ ದಿನ ಇಂದ್ರನಾಜ್ಞೆಯಂತೆ ಮಾತಲಿಯು ರಥವನ್ನು ತಂದು ಭಕ್ತಿಯಿಂದ ರಾಮನಿಗೆ ಅರ್ಪಿಸಿದ. ದ್ವಾದಶಿಯಿಂದ ಚೈತ್ರಬಹುಳ ಚತುರ್ದಶಿವರೆಗೆ ಹದಿನೆಂಟು ದಿನಗಳ ಕಾಲ ರಾಮ ರಾವಣರಿಗೆ ತುಮುಲ ಯುದ್ಧ. ರಾವಣ ವಧೆ. ರಾಮನಿಗೆ ಜಯ. ಮಾಘ ಶುದ್ಧ ಬಿದಿಗೆಯಿಂದ ಚೈತ್ರ ಬಹುಳ ಚತುರ್ದಶಿವರೆಗಿನ ಎಂಬತ್ತೇಳು ದಿನಗಳಲ್ಲಿ ಹದಿನೈದುದಿನ ಯುದ್ಧವಿರಾಮ ಇದ್ದುದರಿಂದ ಎಪ್ಪತ್ತೆರಡು ದಿನ ಯುದ್ಧ ನಡೆದಿತ್ತು. ಚೈತ್ರ ಬಹುಳ ಅಮಾವಾಸ್ಯ ದಿನ ರಾವಣ ಮುಂತಾದವರ ಅಂತ್ಯ ಸಂಸ್ಕಾರ ನಡೆಯಿತು.

ವೈಶಾಖಶುದ್ಧ ಪ್ರತಿಪದೆಯಲ್ಲಿ ರಾಮನು ರಣಭೂಮಿಯಲ್ಲಿ ಇದ್ದನು. ಬಿದಿಗೆಯದಿನ ವಿಭೀಷಣನಿಗೆ ಲಂಕಾರಾಜ್ಯದಲ್ಲಿ ಪಟ್ಟಾಭಿಷೇಕ. ತದಿಗೆಯದಿನ ಸೀತೆಯ ಶುದ್ಧಿ. ದೇವತೆಗಳಿಂದ ವರಪ್ರಾಪ್ತಿ. ರಾಮನು ಸೀತೆಯನ್ನು ಪರಿಗ್ರಹಿಸಿದ. ಚೌತಿಯದಿನ ಸಂತೋಷದಿಂದ ಪುಷ್ಪಕ ವಿಮಾನವನ್ನೇರಿ ಆಕಾಶಮಾರ್ಗವಾಗಿ ಅಯೋಧ್ಯೆಗೆ ಹೊರಟ. ಅಂದಿಗೆ ಹದಿನಾಲ್ಕು ವರ್ಷಗಳು ಪೂರ್ಣವಾದವು.

ಪಂಚಮಿದಿನ ಭಾರಧ್ವಾಜ ಆಶ್ರಮದಲ್ಲಿ ರಾಮನು ತಂಗಿದ. ಷಷ್ಠಿದಿನ ನಂದಿ ಗ್ರಾಮದಲ್ಲಿ ಭರತನ ಸಮಾಗಮ. ಸಪ್ತಮಿದಿನ ಅಯೋಧ್ಯೆಯಲ್ಲಿ ಶ್ರೀರಾಮನಿಗೆ ಪಟ್ಟಾಭಿಷೇಕ. ಸೀತೆಯು ರಾವಣನ ಮನೆಯಲ್ಲಿದ್ದು ಹದಿನಾಲ್ಕು ತಿಂಗಳು ಹನ್ನೊಂದುದಿನ ಕಾಲ ರಾಮನ ವಿಯೋಗ ಹೊಂದಿದ್ದಳು. ರಾಮನಿಗೆ ಪಟ್ಟಾಭಿಷೇಕ ಕಾಲದಲ್ಲಿ ನಲವತ್ತೆರಡು ವರ್ಷ ವಯಸ್ಸು. ಸೀತೆಗೆ ಮೂವತ್ತಮೂರು ವರ್ಷ ವಯಸ್ಸು.

ರಾಮನು ತಮ್ಮಂದಿರೊಡನೆ ರಾಜ್ಯಭಾರ ಮಾಡುತ್ತಿದ್ದಾಗ ಅಗಸ್ತ್ಯ ಮುನಿ ಬರುವನು. ಅವನ ಸಲಹೆಯಂತೆ ರಾಮನು ಅಶ್ವಮೇಧಯಾಗ ಮಾಡುವನು. ಆ ಯಾಗದ ಕುದುರೆ ನಿನ್ನ ಆಶ್ರಮಕ್ಕೆ ಬರುವುದು. ಅದರ ರಕ್ಷಣೆಗಿರುವ ವೀರರು ನಿನ್ನನ್ನು ಕಾಣಲು

ಬರುತ್ತಾರೆ. ಅವರ ಮುಂದೆ ರಾಮನ ಚರಿತ್ರೆಯನ್ನು ಹೇಳಿ ಅವರೊಂದಿಗೆ ಅಯೋಧ್ಯೆಗೆ ಹೋಗುವೆ. ಅಲ್ಲಿ ತಾವರೆಗಣ್ಣಿನ ಆ ರಾಮನನ್ನು ಕಂಡು ಸಂಸಾರ ಸಾಗರದಿಂದ ಪಾರಾಗುವೆ.' ಹೀಗೆ ಲೋಮಶ ಮುನಿ ನನಗೆ ಅದ್ಭುತವಾದ ರಾಮಚರಿತ್ರೆಯನ್ನು ಉಪದೇಶಿಸಿದ. ನಾನೆಂದೆ 'ಮುನಿಯೆ, ನಿನ್ನ ದಯೆಯಿಂದ ಅದ್ಭುತವಾದ ರಾಮಚರಿತ್ರೆಯನ್ನೆಲ್ಲ ತಿಳಿದೆ. ಇನ್ನು ರಾಮಪಾದಾರವಿಂದದ ದರ್ಶನವನ್ನೂ ಪಡೆಯುವಂತೆ ನನ್ನನ್ನು ಅನುಗ್ರಹಿಸು.' ಹೀಗೆ ಹೇಳಿ ವಂದಿಸಿದೆ. ಬಳಿಕ ಮುನಿಯು ಎಲ್ಲಿಗೊ ಹೊರಟು ಹೋದನು.

ಅವನ ಅನುಗ್ರಹದಿಂದ ನಾನು ಸದಾ ರಾಮನ ಪಾದಗಳನ್ನೆ ಆರಾಧಿಸುತ್ತೇನೆ, ಸ್ಮರಿಸುತ್ತೇನೆ. ಅವನ ಚರಿತ್ರೆಯನ್ನೆ ಹಾಡುತ್ತೇನೆ. ಆ ಹಾಡಿನಿಂದ ಬೇರೆ ಜನರನ್ನೂ ಪಾವನಗೊಳಿಸುತ್ತೇನೆ. ಆ ಮುನಿಯ ಉಪದೇಶವನ್ನು ನೆನೆನೆನೆದು ಆನಂದ ಪಡುತ್ತೇನೆ. ನಾನು ಧನ್ಯ, ಕೃತಕೃತ್ಯ, ಭಾಗ್ಯವಂತ, ಏಕೆಂದರೆ ರಾಮಚಂದ್ರರ ಪಾದಾರವಿಂದಗಳ ದರ್ಶನ ನನಗಾಗಲಿದೆ.

ಆದ್ದರಿಂದ ಸಂಸಾರ ಸಾಗರವನ್ನು ದಾಟಬೇಕಾದರೆ ರಾಮನನ್ನೆ ಎಲ್ಲ ವಿಧದಿಂದಲೂ ಭಜಿಸಬೇಕು, ನಮಸ್ಕರಿಸಬೇಕು.

ಈಗ ನೀವೇಕೆ ಬಂದಿರಿ ? ಈ ಅಶ್ವಮೇಧ ಯಾಗವನ್ನು ಮಾಡುವ ರಾಜನು ಯಾರು ? ಎಂಬುದನ್ನು ನನಗೆ ಹೇಳಿ ಕುದುರೆಯ ರಕ್ಷಣೆಗೆ ಹೊರಡಿ, ಸದಾ ರಾಮನ ಪಾದಗಳನ್ನೆ ಸ್ಮರಿಸುತ್ತಿರಿ.'

ಅರಣ್ಯಕ ಮುನಿಯ ಈ ಮಾತುಗಳನ್ನು ಕೇಳಿ ಶತ್ರುಘ್ನ ಮುಂತಾದವರು ವಿಸ್ಮಿತರಾದರು.

**ಶೇಷ :-** ಅರಣ್ಯಕ ಮುನಿಯಿಂದ ರಾಮನ ಚರಿತ್ರೆಯನ್ನು ಕೇಳಿ ತಾವು ಧನ್ಯರು ಭಾಗ್ಯವಂತರು ಎಂದುಕೊಂಡರು ಶತ್ರುಘ್ನ ಮುಂತಾದವರು. ಬಳಿಕ ಮುನಿಯ ಮುಂದೆ ಹೇಳಿದರು. 'ರಾಮನ ಕಥೆಯಿಂದ ಎಲ್ಲರನ್ನು ಪಾವನಗೊಳಿಸುವ ನಿನ್ನ ದರ್ಶನ ನಮ್ಮನ್ನು ಪವಿತ್ರರನ್ನಾಗಿ ಮಾಡಿತು. ಆ ರಾಮನ ಯಾಗದ ಕುದುರೆಯನ್ನು ಹಿಂಬಾಲಿಸುತ್ತ ನಾವು ಇಲ್ಲಿಗೆ ಬಂದಿದ್ದೇವೆ. ಅಗಸ್ತ್ಯ ಮುನಿಯ ಸಲಹೆಯಂತೆ ಶ್ರೀರಾಮನು ಬ್ರಹ್ಮಹತ್ಯಾ ಪರಿಹಾರಕ್ಕಾಗಿ ಸಂಭ್ರಮದಿಂದ ಅಶ್ವಮೇಧ ಯಾಗವನ್ನು ಮಾಡುತ್ತಿದ್ದಾನೆ.

ಇದನ್ನು ಕೇಳಿದಾಗ ರಾಮಭಕ್ತನಾದ ಆ ಮುನಿಗೆ ಆದ ಆನಂದಕ್ಕೆ ಪಾರವಿರಲಿಲ್ಲ. 'ಇಂದು ನನ್ನ ಮನೋರಥ ಫಲಿಸಿತು. ನನ್ನ ತಾಯಿ ನನ್ನನ್ನು ಪಡೆದುದು ಇಂದು ಸಾರ್ಥಕವಾಯಿತು. ನಿಷ್ಕಂಟಕವಾದ ಒಂದು ರಾಜ್ಯವೆ ನನಗೆ ದೊರೆತಂತಾಯಿತು. ತುಂಬಿದ ಬೊಕ್ಕಸವೊಂದು ಸಿಕ್ಕಿದಂತಾಯಿತು. ಎಲ್ಲ ದೇವತೆಗಳ ಅನುಗ್ರಹವನ್ನು ಸಂಪಾದಿಸಿದಂತಾಯಿತು. ಅಗ್ನಿಹೋತ್ರದ ಫಲ ಲಭಿಸಿತು. ಇನ್ನು ನಾನು ಶ್ರೀರಾಮಚಂದ್ರನ ಪಾದಾರವಿಂದಗಳನ್ನು ಕಾಣುವೆ. ನಾನು ನಿತ್ಯ ಹೃದಯದಲ್ಲಿ ಧ್ಯಾನಿಸುವ ಅಯೋಧ್ಯಾಧಿಪತಿಯಾದ ಪ್ರಭು ನನ್ನ ಕಣ್ಣಿಗೆ ಗೋಚರನಾಗುವನು. ಹನುಮಂತನು ನನ್ನನ್ನಾಲಿಂಗಿಸಿ ಕುಶಲ ಪ್ರಶ್ನೆ ಮಾಡುವನು. ನನ್ನ ಭಕ್ತಿಗೆ ಮೆಚ್ಚುವನು, ಎಂದ.

ಹನುಮಂತನು ಇದನ್ನು ಕೇಳಿ ಒಡನೆ ಮುನಿಯ ಪಾದಗಳನ್ನು ಮುಟ್ಟಿ ನಮಸ್ಕರಿಸಿದನು. 'ಸ್ವಾಮಿ, ನಾನೆ ಹನುಮಂತ ನಿಮ್ಮ ಸೇವಕ. ರಾಮಭಕ್ತರ ಪಾದಧೂಳಿ ನಾನು.' ಎಂದ. ಆಗ ಮುನಿ ಪರಮಾನಂದದಿಂದ ಅವನನ್ನಾಲಂಗಿಸಿ ಕೊಂಡ. ಇಬ್ಬರೂ ಅನ್ಯೋನ್ಯ ಪ್ರೇಮ ಸುಧೆಯಲ್ಲಿ ಮಿಂದು ಒಂದಾಗಿ ಅಲುಗಾಡದೆ ಚಿತ್ರದ ಗೊಂಬೆಗಳಂತಾದರು.

ಬಳಿಕ ಇಬ್ಬರೂ ಕುಳಿತು ರಘುನಾಥನ ಪಾದಾರವಿಂದ ಭಕ್ತಿಯಿಂದ ತುಂಬಿದ ಮನಸ್ಸಿನಿಂದ ಸರಸವಾದ ಸಂಭಾಷಣೆ ಮಾಡಿದರು ಹನುಮಂತನು ಮುನಿಗೆ ಶತ್ರುಘ್ನ ಪುಷ್ಕಲ ಮುಂತಾದವರ ಪರಿಚಯವನ್ನು ಮಾಡಿಸಿದ.

'ಸ್ವಾಮಿ, ಇವನು ದಶರಥನ ಕುಲದ ವಜ್ರದಂಥ ಅಂಕುರ. ರಾಮನ ಸೋದರ, ಮಹಾಶೂರ, ಶತ್ರುಘ್ನ, ನಮಸ್ಕರಿಸುತ್ತಿದ್ದಾನೆ. ಸರ್ವಲೋಕ ಭಯಂಕರನಾದ ಲವಣಾಸುರನನ್ನು ಕೊಂದು ತಪಸ್ವಿಗಳಾದ ಮುನಿಗಳಿಗೆ ನೆಮ್ಮದಿ ತಂದು ಕೊಟ್ಟವನು ಇವನೆ. ಇವನು ಪುಷ್ಕಲ, ತಮಗೆ ನಮಸ್ಕರಿಸುತ್ತಿದ್ದಾನೆ. ಈಗ ದೊಡ್ಡ ದೊಡ್ಡ ವೀರರನ್ನೆಲ್ಲ ಗೆದ್ದಿದ್ದಾನೆ. ಇವನು ರಾಮನಿಗೆ ಪ್ರಾಣದಂತಿರುವ ಅಮಾತ್ಯ ಎಲ್ಲವನ್ನೂ ತಿಳಿದವ, ಧರ್ಮಜ್ಞ. ಮಹಾಬಲಶಾಲಿ, ಇವನು ಸುಬಾಹು. ಶತ್ರುಗಳ ಕುಲಕ್ಕೆ ಕಾಳ್ಗಿಚ್ಚಿನಂತಿದ್ದು ರಾಮನ ಪಾದಕಮಲಗಳಲ್ಲಿ ಭ್ರಮರದಂತಿದ್ದಾನೆ. ತಮ್ಮನ್ನು ನಮಸ್ಕರಿಸುತ್ತಿದ್ದಾನೆ. ಇವನು ಸುಮದ. ಪಾರ್ವತಿಯು ಅನುಗ್ರಹಿಸಿದ ರಾಮಭಕ್ತಿಯ ಬಲದಿಂದ ಸಂಸಾರ ಸಾಗರವನ್ನು ದಾಟುತ್ತಿದ್ದಾನೆ. ಇವನು ಸತ್ಯವಂತ. ರಾಮನ ಕುದುರೆ ಎಂದು ತಿಳಿದೊಡನೆ ತಾನೆ ಬಂದು ರಾಜ್ಯವನ್ನೆಲ್ಲ ಸಮರ್ಪಿಸಿದ್ದಾನೆ. ಅವನು ತಮ್ಮನ್ನು ನಮಸ್ಕರಿಸುತ್ತಿದ್ದಾನೆ.'

ಇದನ್ನು ಕೇಳಿ ಮುನಿಯು ಅವರನ್ನೆಲ್ಲ ಪ್ರೀತಿಯಿಂದಾಲಂಗಿಸಿ ಫಲಮೂಲ ಮುಂತಾದವುಗಳನ್ನಿತ್ತು ಸತ್ಕರಿಸಿದ. ಎಲ್ಲರೂ ಸಂತೋಷದಿಂದ ಅವನಾಶ್ರಮದಲ್ಲಿ ಆ ರಾತ್ರಿಯನ್ನು ಕಳೆದು ಬೆಳಿಗ್ಗೆ ನರ್ಮದೆಯಲ್ಲಿ ನಿತ್ಯಕರ್ಮಗಳನ್ನು ಮಾಡಿದರು. ಶತ್ರುಘ್ನನು ಮುನಿಯನ್ನು ಅವನ ಶಿಷ್ಯರೊಂದಿಗೆ ಪಲ್ಲಕ್ಕಿಯಲ್ಲಿ ಕೂರಿಸಿ ಅಯೋಧ್ಯೆಗೆ ಕಳಿಸಿದ, ಆದರೆ ಅಯೋಧ್ಯೆಯನ್ನು ದೂರದಲ್ಲಿ ಕಂಡೊಡನೆ ಮುನಿ ಕೆಳಗಿಳಿದು ಕಾಲುನಡಿಗೆಯಿಂದ ವೇಗವಾಗಿ ರಾಮನೆಡೆಗೆ ತೆರಳಿದ. ಅಲ್ಲಿ ಸರಯೂ ತೀರದ ಯಾಗ ಮಂಟಪದಲ್ಲಿ ಯಜ್ಞ ದೀಕ್ಷಿತನಾಗಿ ಜಿಂಕೆಯ ಕೊಂಬನ್ನು ನಡುವಿಗೆ ಕಟ್ಟಿಕೊಂಡು ವ್ಯಾಸಾದಿ ಮಹರ್ಷಿಗಳು ಭರತ ಲಕ್ಷ್ಮಣ ಮುಂತಾದ ವೀರರು ಇವರೆಲ್ಲರ ನಡುವೆ ಕುಳಿತು ದೀನರಿಗೆ ಅವರು ಬಯಸಿದುದನ್ನೆಲ್ಲ ಕೊಡುತ್ತಿದ್ದ ಶ್ರೀರಾಮನನ್ನು ನೋಡಿ ತಾನು ಕೃತಾರ್ಥನಾದೆನೆಂದು ಕೊಂಡ ಆರಣ್ಯಕ ಮುನಿ.

ಶ್ರೀರಾಮನೂ ಮುನಿಯನ್ನು ಕಂಡು ತೇಜಸ್ಸಿನಿಂದ ಜ್ವಲಿಸುತ್ತಿರುವ ಈತನು ಮೂರ್ತಿ ಮತ್ತಾಗಿ ಬಂದ ತಪಸ್ಸೆ ಎಂದು ಬಗೆದು ಎದ್ದು ಸ್ವಾಗತಿಸಿ ಕಾಲಿಗೆ ನಮಸ್ಕರಿಸಿದ. 'ಮುನಿಯೆ ನಿನ್ನ ಪಾದ ಸ್ಪರ್ಶದಿಂದ ನನ್ನ ಶರೀರ ಪವಿತ್ರವಾಯಿತು' ಎಂದ. ಮುನಿಯು ಒಡನೆ ರಾಮನನ್ನು ಆಲಿಂಗಿಸಿಕೊಂಡ. ಬಳಿಕ ರಾಮನು ಮುನಿಯನ್ನು ಮಣಿಖಚಿತವಾದ ಉನ್ನತ ಆಸನದಲ್ಲಿ ಕುಳ್ಳಿರಿಸಿ ಕಾಲು ತೊಳೆದು ಆ ನೀರನ್ನು ತಲೆಯಲ್ಲಿ ಧರಿಸಿದ. 'ಈಗ ನಾನು ಕುಟುಂಬ ಪರಿವಾರ ಸಮೇತನಾಗಿ ಪವಿತ್ರನಾದೆ' ಎಂದ. ಮುನಿಯ ಮೈಗೆ ಚಂದನವನ್ನು ಪೂಸಿ ಒಳ್ಳೆಯ ಹಾಲು ಕೊಡುವ ಹಸುವನ್ನು ದಾನ ಮಾಡಿದ. 'ಸ್ವಾಮಿ,

ನಾನೊಂದು ಅಶ್ವಮೇಧಯಾಗ ಮಾಡುತ್ತಿದ್ದೇನೆ. ಅದು ತಮ್ಮ ಆಗಮನದಿಂದ ಪೂರ್ಣವೆನಿಸುತ್ತದೆ. ನನ್ನ ಬ್ರಹ್ಮಹತ್ಯಾ ಪಾಪವನ್ನು ಕಳೆಯುತ್ತದೆ' ಎಂದ.

ಮುನಿಯು ನಗುತ್ತ ನುಡಿದ 'ಪ್ರಭು, ಬ್ರಾಹ್ಮಣಪ್ರಿಯನಾದ ನಿನಗಿಂಥ ಮಾತು ಒಪ್ಪುತ್ತದೆ. ವೇದವನ್ನು ಬಲ್ಲ ಬ್ರಾಹ್ಮಣರೆಂದರೆ ನಿನ್ನ ಮೂರ್ತಿಗಳೆ ತಾನೆ ? ನೀನು ಬ್ರಾಹ್ಮಣರನ್ನು ಪೂಜಿಸಿದರೆ ಮಿಕ್ಕ ರಾಜರೂ ಪೂಜಿಸುವರು. ಬ್ರಹ್ಮಹತ್ಯಾ ಪರಿಹಾರಕ್ಕಾಗಿ ಯಾಗ ಮಾಡುವೆನೆಂಬ ನಿನ್ನ ಮಾತು ಮಾತ್ರ ಹಾಸ್ಯಸ್ಪದವೆ ಸರಿ. ಯಾವ ಶಾಸ್ತ್ರಜ್ಞಾನವೂ ಇಲ್ಲದ ಮೂಢನು ನಿನ್ನ ನಾಮಸ್ಮರಣೆಯಿಂದ ಎಲ್ಲ ಪಾಪಗಳನ್ನೂ ಪರಿಹರಿಸಿಕೊಂಡು ಪರಮ ಪದವನ್ನೈದುವನು. ರಾಮ ನಾಮ ಸ್ಮರಣೆ ಎಲ್ಲ ಪಾಪಗಳನ್ನು ಕಳೆಯುತ್ತದೆ ಎನ್ನುವುದು ಎಲ್ಲ ವೇದ ಇತಿಹಾಸಗಳ ಸಾರ. ನಿನ್ನ ರಾಮಚಂದ್ರ ಎಂಬ ನಾಮದ ಉಚ್ಚಾರಣೆಯಾಗದ ತನಕ ಬ್ರಹ್ಮಹತ್ಯಾದಿ ಪಾಪಗಳು ಗರ್ಜಿಸುತ್ತಿರಬಹುದು ಆ ನಾಮವು ಒಮ್ಮೆ ಗರ್ಜಿಸಿತೆಂದರೆ ಪಾಪಗಳೆಲ್ಲ ಓಡಿ ಅಡಗಿ ಕುಳಿತುಕೊಳ್ಳಲು ಸ್ಥಳವನ್ನು ಹುಡುಕಲು ತೊಡಗುತ್ತವೆ. ಆದ್ದರಿಂದ ನಿನಗೆ ಎಲ್ಲಿಯ ಬ್ರಹ್ಮಹತ್ಯಾಪಾತಕ ? ಹಿಂದೆ ಕೃತಯುಗದಲ್ಲಿ ಗಂಗಾತೀರದ ಮುನಿಗಳು ಹೇಳುತ್ತಿದ್ದ ಒಂದು ಮಾತನ್ನು ಕೇಳಿದ್ದೇನೆ.

**ತಾವತ್ ಪಾಪ ಭಯಃ ಪುಂಸಾಂ ಕಾತರಾಣಾಂ ಸುಪಾಪಿನಾಂ ।**
**ಯಾವನ್ನ ವದತೇ ವಾಚಾ ರಾಮನಾಮ ಮನೋಹರಂ ॥**

ಮನೋಹರವಾದ ರಾಮನಾಮವನ್ನುಚ್ಚರಿಸದ ತನಕ ಪಾಪಿಗಳಿಗೆ ಪಾಪ ಭಯವಿರಲು ಸಾಧ್ಯ.

ಆದ್ದರಿಂದ ನಾನು ಧನ್ಯ, ರಾಮಚಂದ್ರ, ನಿನ್ನ ದರ್ಶನದಿಂದ ನನ್ನ ಸಂಸಾರ ಅನಾಯಾಸವಾಗಿ ತೊಲಗುವುದು. ಆ ಸಮಯದಲ್ಲಿ ಒಂದು ಅದ್ಭುತ ನಡೆಯಿತು. ಆರಣ್ಯಕ ಮುನಿ ತಾನು ಅಂದಿನವರೆಗೆ ರಾಮನ ಯಾವ ರೂಪವನ್ನು ಧ್ಯಾನಿಸುತ್ತಿದ್ದನೊ ಆ ರೂಪವೇ ಎದುರಿಗೆ ಇರುವುದನ್ನು ಕಂಡು ಆನಂದವನ್ನು ತಡೆಯಲಾರದೆ ಎಲ್ಲ ಮುನಿಗಳನ್ನು ಕರೆದು ಹೇಳಿದ, 'ಮಹರ್ಷಿಗಳೆ, ನಾನು ಹೇಳುವುದನ್ನು ಕೇಳಿ. ನನ್ನಂಥ ಭಾಗ್ಯಶಾಲಿ ಈ ಭೂಮಿಯಲ್ಲಿ ಯಾರಿದ್ದಾನೆ. ನನಗೆ ಸಮಾನನಿಲ್ಲ, ಹಿಂದೆ ಇದ್ದಿಲ್ಲ, ಮುಂದೆ ಬರಲಾರ. ಏಕೆಂದರೆ ರಾಮಚಂದ್ರ ನನ್ನನ್ನು ನಮಸ್ಕರಿಸಿ ಸ್ವಾಗತ ಹೇಳಿದ. ಯಾರ ಪಾದಧೂಳಿ ಶ್ರುತಿಗಳಿಗೂ ಅಗೋಚರವಾಗಿರುವುದೊ ಅವನು ನನ್ನ ಕಾಲು ತೊಳೆದು ಆ ನೀರನ್ನು ಕುಡಿದು ತಾನು ಪವಿತ್ರನಾದೆ ಎನ್ನುತ್ತಿದ್ದಾನೆ !'

ಮುನಿ ಹೀಗೆ ಹೇಳುತ್ತಿದ್ದಂತೆ ಅವನ ತಲೆ ಬ್ರಹ್ಮರಂಧ್ರದಲ್ಲಿ ಒಡೆಯಿತು. ಅಲ್ಲಿಂದ ಒಂದು ತೇಜಸ್ಸು ಹೊರಬಂದು ರಾಮನಲ್ಲಿ ಲೀನವಾಯಿತು. ಸರಯೂ ತೀರದ ಯಾಗ ಮಂಟಪದಲ್ಲಿ ಲೋಕವೆಲ್ಲ ನೋಡುತ್ತಿದ್ದಂತೆ ಯೋಗಿಗಳಿಗೆ ದುರ್ಲಭವಾದ ಸಾಯುಜ್ಯ ಮುಕ್ತಿಯನ್ನು ಆರಣ್ಯಕ ಮುನಿ ಪಡೆದ. ಅಂತರಿಕ್ಷದಲ್ಲಿ ದುಂದುಭಿ ಮೊಳಗಿತು. ವೀಣೆಯ ಧ್ವನಿಕೇಳಿಸಿತು. ಹೂಮಳೆಯಾಯಿತು. ಮುನಿಗಳು ಬಾಯಿತುಂಬ ಹೊಗಳಿದರು. 'ಈ ಮುನಿವರ್ಯನು ರಾಮನ ಶರೀರದಲ್ಲಿ ಲೀನನನಾಗಿ ಕೃತಾರ್ಥನಾದ.'

*ಇತಿ ಶ್ರೀ ಪದ್ಮ ಮಹಾಪುರಾಣ - ೨ರ ಪಾತಾಳ ಖಂಡದಲ್ಲಿ ಶೇಷ-ವಾತ್ಸ್ಯಾಯನ ಸಂವಾದದಲ್ಲಿ ರಾಮಾಶ್ವಮೇಧದಲ್ಲಿ ಆರಣ್ಯಕ ಮುನಿಯ ಸಾಯುಜ್ಯ ಮುಕ್ತಿ ಕಥನವೆಂಬ ಹದಿನಾರನೆಯ ಅಧ್ಯಾಯ ಮುಗಿದುದು*

ಜಲಮಧ್ಯದಿಂದ ಯಜ್ಞಾಶ್ವಪ್ರಾಪ್ತಿ

ಅಧ್ಯಾಯ - ೧೭

**ವ್ಯಾಸ ಉವಾಚ**

**ವ್ಯಾಸ :-** ಈ ಕಥೆಯನ್ನು ಕೇಳಿ ಆನಂದಪಟ್ಟು ವಾತ್ಸ್ಯಾಯನನು ತಿರುಗಿ ಶೇಷನಲ್ಲಿ ಪ್ರಶ್ನೆ ಮಾಡಿದನು.

**ವಾತ್ಸ್ಯಾಯನ:-** ನಾಗರಾಜ, ಭಕ್ತರ ದುಃಖಗಳನ್ನು ಕಳೆವ ರಘುನಾಥನ ಕಥೆ ಎಷ್ಟು ಕೇಳಿದರೂ ತೃಪ್ತಿಯೆನಿಸುವುದಿಲ್ಲ. ಆ ರಾಮನ ದರ್ಶನ ಮಾಡಿ ದೇಹತ್ಯಾಗ ಮಾಡಿದ ಆ ಅರಣ್ಯಕಮುನಿಯೆ ಧನ್ಯ. ಮುಂದೆ ಯಾಗದ ಕುದುರೆ ಎಲ್ಲಿ ಹೋಯಿತು ? ಯಾರು ಕಟ್ಟಿದರು ? ಅಲ್ಲಿ ರಾಮನ ಕೀರ್ತಿ ಹೇಗೆ ಹರಡಿತು ? ಇವೆಲ್ಲವನ್ನೂ ಹೇಳು. ನೀನು ಸರ್ವವನ್ನು ತಿಳಿದವನಲ್ಲವೆ ?

**ಶೇಷ :-** ರಾಮನ ಗುಣಗಳನ್ನು ಎಷ್ಟು ಕೇಳಿದರೂ ಏನೂ ಕೇಳದವರಂತೆ ಇನ್ನೂ ಕೇಳುವಾಸೆ ತೋರುತ್ತಿರುವೆ. ಸರಿ, ಮುಂದಿನ ಕಥೆ ಹೇಳುವೆನು ಕೇಳು. ನರ್ಮದೆಯ ತೀರದಲ್ಲಿ ಕುದುರೆ ಮುನ್ನಡೆಯುತ್ತಿದ್ದಂತೆ ಒಂದು ಆಳವಾದ ಮಡವಿನಲ್ಲಿ ಇಳಿದು ಮುಳುಗಿ ಹೋಯಿತು. ಸೈನಿಕ ವೀರರು ಆಶ್ಚರ್ಯದಿಂದ ಒಂದು ಕ್ಷಣ ನೋಡಿದರು. ಕುದುರೆ ಮೇಲೆ ಬರಲಿಲ್ಲ. ಅದನ್ನೆತ್ತುವರಾರು ? ಯಾರು ಯಾರೆಂದು ಪರಸ್ಪರ ಕೇಳಿಕೊಂಡರು. ಅಷ್ಟರಲ್ಲಿ ಶತ್ರುಘ್ನನೂ ಅಲ್ಲಿಗೆ ಬಂದು 'ಏನಾಯಿತು ? ಏಕೆ ಇಲ್ಲಿ ಗುಂಪು ಕೂಡಿ ನಿಂತಿರಿ ? ಕುದುರೆ ಎಲ್ಲಿ ಹೋಯಿತು ? ನೀರಲ್ಲಿ ಮುಳುಗಿತೆ ? ಯಾರಾದರೂ ಅಪಹರಿಸಿದರೆ ?' ಎಂದು ಕೇಳಿದ.

'ಪ್ರಭು, ಕುದುರೆ ಮಡುವಿನಲ್ಲಿ ಮುಳುಗಿತು. ಒಂದು ಮುಹೂರ್ತ ಕಳೆದರೂ ಅದಿನ್ನು ಮೇಲೆ ಬರುತ್ತಿಲ್ಲ. ತಾವೆ ಅದನ್ನು ಮೇಲೆ ತರಲು ಸಮರ್ಥರು ತಮ್ಮ ಹಿಂದೆ ನಾವೆಲ್ಲರೂ ಬರುತ್ತೇವೆ ಎಂದರು ಸೈನಿಕರು, ಶತ್ರುಘ್ನನು ಸುಮತಿಯನ್ನು ಕೇಳಿದ 'ನೀರಲ್ಲಿ ಕುದುರೆಯನ್ನರಸಲು ಯಾರನ್ನು ಕಳಿಸಲಿ ? ಯಾರು ಸಮರ್ಥರು ?' ಆತನೆಂದ 'ಪ್ರಭು, ನಿನ್ನ ಶಕ್ತಿ ಅದ್ಭುತವಾದುದು. ನೀರಲ್ಲಿ ಇಳಿದು ಪಾತಾಳಕ್ಕೆ ಹೋಗಲು ನೀನು ಸಮರ್ಥ. ಹಾಗೆ ಪುಷ್ಕಲ ಹನುಮಂತರೂ ಹೋಗಬಲ್ಲರು. ಈಗ ನೀವು ಮೂವರೂ ನೀರಿಗಿಳಿದು ಕುದುರೆಯನ್ನು ತರಲುಯತ್ನಿಸಿರಿ.

ಶತ್ರುಘ್ನ, ಪುಷ್ಕಲ, ಹನುಮಂತ ಈ ಮೂವರೂ ನೀರನ್ನು ಹೊಕ್ಕರು. ಆಗ ಅವರಿಗೊಂದು ಸುಂದರವಾದ ನಗರ ಕಾಣಿಸಿಕೊಂಡಿತು. ದೊಡ್ಡ ನಗರ, ಅನೇಕ ಉದ್ಯಾನಗಳು. ಮಾಣಿಕ್ಯ ಖಚಿತವಾದ ಸ್ವರ್ಣಸ್ತಂಭ ಒಂದಕ್ಕೆ ಕುದುರೆಯನ್ನೂ ಅಲ್ಲಿ ಕಟ್ಟಿದ್ದರು. ಬಳಿಯ ಮಂಚದ ಮೇಲೆ ಸುಖಾಸೀನಳಾದ ಓರ್ವ ಸುಂದರಿಯನ್ನು ಅನೇಕ ಸ್ತ್ರೀಯರು ಓಲೈಸುತ್ತಿದ್ದರು. ಅವರು ಶತ್ರುಘ್ನ ಮುಂತಾದವರನ್ನು ಕಂಡು, 'ಒಡತಿ ನೋಡು, ಹೃಷ್ಟ ಪುಷ್ಟಕಾಯದ ಮೂವರು ವೀರರು ಬರುತ್ತಿದ್ದಾರೆ. ಒಳ್ಳೆಯ

ಊಟವೊಂದು ದೊರೆತಂತಾಯಿತು. ಅವರ ನೇತ್ರರು ರುಚಿಯಾಗಿರಬಹುದು' ಎಂದರು. ಆಕೆ ಹುಬ್ಬು ಹಾರಿಸಿ ನಕ್ಕಳು.

ವೀರರು ಆ ಚೆಲುವೆಯರನ್ನು ಕಂಡು ವಿಸ್ಮಿತರಾದರು. ಅವರ ನಾಯಕಿ ಕೇಳಿದಳು. 'ಯಾರು ನೀವು ? ಧನುರ್ಧಾರಿಗಳಾಗಿ ಏಕೆ ಬಂದಿರಿ ? ಈ ಸ್ಥಳ ದೇವತೆಗಳಿಗೂ ಅಗಮ್ಯ. ಬಂದವರಿಗೆ ಬುದ್ಧಿಯಲ್ಲಿ ಮೋಹ ಕವಿಯುವುದು. ಅವರು ಹಿಂತಿರುಗಿ ಎಲ್ಲಿಗೂ ಹೋಗಲಾರರು. ಮೊದಲಿಗೆ ಈ ಕುದುರೆ ಯಾವ ರಾಜನದು. ಅದಕ್ಕೇಕೆ ಚಾಮರ, ಏಕೆ ಹಣೆಯಲ್ಲಿ ಚಿನ್ನದ ತಗಡು ಎಂಬುದನ್ನು ಹೇಳಿರಿ.' ಭಯವನ್ನೆಂದೂ ಅರಿಯದ ಹನುಮಂತ ಈ ಮಾತುಗಳನ್ನು ಕೇಳಿ ನಕ್ಕು ಹೇಳಿದ. 'ನಾವು ತ್ರಿಲೋಕ ಪೂಜ್ಯನಾದ ಸರ್ವದೇವ ಶಿರೋಮಣಿಯೆನಿಸಿದ ಮಹಾರಾಜ ರಾಮಚಂದ್ರನ ಭೃತ್ಯರು. ಇದು ಅವನ ಅಶ್ವಮೇಧಯಾಗದ ಕುದುರೆ ಬಿಟ್ಟುಬಿಡು. ಇಲ್ಲದಿದ್ದರೆ ಬಲಾತ್ಕಾರದಿಂದ ಬಿಡಿಸಿಕೊಳ್ಳುವೆವು. ಎಲ್ಲ ಶಸ್ತ್ರಾಸ್ತ್ರಗಳಲ್ಲಿ ನುರಿತವರು ನಾವು.'

ಆಕೆಯೂ ನಕ್ಕು ಹೇಳಿದಳು. 'ನಾನು ತಂದಿರುವ ಕುದರೆಯನ್ನು ಯಾವೊಬ್ಬನೂ ಬಿಡಿಸಿಕೊಳ್ಳಲಾರ. ಹತ್ತು ಸಾವಿರ ವರ್ಷಗಳ ಕಾಲ ಹೋರಾಡಿದರೂ ಫಲವಿಲ್ಲ. ಕೋಟಿಗಟ್ಟಲೆ ಬಾಣಗಳನ್ನು ಎಸೆದರೂ ಫಲವಿಲ್ಲ. ಆದರೆ ನಾನೂ ರಾಮಚಂದ್ರನ ಪಾದಕಮಲಗಳ ಸೇವಕಿ. ಅವನ ಕುದುರೆಯನ್ನು ನಾನು ಕಟ್ಟಿಹಾಕಲಾರೆ. ಈಗ ನಾನು ದೊಡ್ಡ ಅಪರಾಧ ಮಾಡಿದಂತಾಯಿತು. ಭಕ್ತವತ್ಸಲನಾದ ರಾಮಚಂದ್ರನು ಕ್ಷಮಿಸಬೇಕು. ನೀವು ಈ ಕುದುರೆಯ ರಕ್ಷಣೆಗಾಗಿ ಬಹು ಕಷ್ಟಪಟ್ಟಿರಿ. ನನ್ನ ಸಲುವಾಗಿ. ಅದರಿಂದ ನಾನೀಗ ನಿಮಗೆ ದೇವತೆಗಳಿಗೂ ಲಭ್ಯವಾಗದ ವರಗಳನ್ನು ನೀಡಲು ಬಯಸಿದ್ದೇನೆ ಕೇಳಿ. ಸಂಕೋಚಪಡದೆ ಕೇಳಿ.'

ಹನುಮಂತನೆಂದ, 'ರಾಮನ ಅನುಗ್ರಹದಿಂದ ನಮಗೆ ಯಾವುದರ ಕೊರತೆಯೂ ಇಲ್ಲ. ಆದರೆ ಒಂದು ದೊಡ್ಡ ವರವನ್ನು ಕೇಳುತ್ತಿದ್ದೇನೆ, ಜನ್ಮ ಜನ್ಮದಲ್ಲಿಯೂ ರಘುನಾಥನೆ ನಮ್ಮೊಡೆಯ, ನಾವು ಅವನ ಕಿಂಕರರು ಎಂದಾಗಲಿ.'

ಆಕೆ ನಕ್ಕು ಹೇಳಿದಳು. 'ಈ ವರವು ದೇವತೆಗಳಿಗೂ ಅಲಭ್ಯವೆ ಸರಿ. ಆದರೂ ಅದು ನಿಮ್ಮದಾಗುವುದರಲ್ಲಿ ಸಂದೇಹ ಇಲ್ಲ. ಈಗ ರಾಮನಲ್ಲಿ ನಾನು ಮಾಡಿದ ಅಪರಾಧದ ಮಾರ್ಜನೆಗಾಗಿ ನಿಮಗೆ ಇನ್ನೊಂದು ವರವನ್ನು ಕೊಡುತ್ತೇನೆ ಮುಂದೆ ವೀರಮಣಿ ಎಂಬ ರಾಜ ನಿಮ್ಮ ಕುದುರೆಯನ್ನು ಕಟ್ಟಿಹಾಕುವನು. ಅವನಿಗೆ ಶಿವನಿಂದ ರಕ್ಷಣೆ ದೊರೆತಿರುವುದರಿಂದ ಒಂದು ಮಹಾ ಅಸ್ತ್ರ ನಿಮಗೆ ಬೇಕು. ಅದನ್ನು ನಾನು ಕೊಡುತ್ತೇನೆ. ಶತ್ರುಘ್ನ, ನೀನು ಈ ಅಸ್ತ್ರವನ್ನು ಅವನ ಮೇಲೆ ಪ್ರಯೋಗಿಸು. ಅವನು ಪರಿಶುದ್ಧನಾಗಿ ರಾಮನ ಸ್ವರೂಪವನ್ನು ತಿಳಿದು ಕುದುರೆಯನ್ನು ಹಿಂತಿರುಗಿಸುವನು, ಕಾಲಿಗೆ ಬೀಳುವನು, ಈಗ ನೀನು ಆ ಅಸ್ತ್ರವನ್ನು ಪರಿಗ್ರಹಿಸು.'

ಶತ್ರುಘ್ನನು ಉತ್ತರಾಭಿಮುಖವಾಗಿ ಕುಳಿತು ಆ ಯೋಗಿನಿಯಿಂದ ಸಂಮೋಹನಾಸ್ತ್ರವನ್ನು ಪಡೆದನು. ವೈರಿ ಭಯಂಕರನಾದನು. ಆಕೆಗೆ ನಮಸ್ಕರಿಸಿ ಕುದುರೆಯನ್ನು ಹಿಡಿದುಕೊಂಡು ನೀರಿನಿಂದ ಹೊರಗೆ ಬಂದನು.

ಸೈನಿಕರು ನೋಡಿ ಆಶ್ಚರ್ಯಪಟ್ಟರು. ಕುದುರೆಯನ್ನು ತಂದ ಬಗೆಯನ್ನು ಕುತೂಹಲದಿಂದ ಕೇಳ ಬಯಸಿದರು. ಹನುಮಂತನು ಕುದುರೆ ದೊರೆತುದನ್ನು ಜೊತೆಗೆ ಸಂಮೋಹನಾಸ್ತ್ರ ಲಭಿಸಿದುದನ್ನೂ ವರ್ಣಿಸಿದಾಗ ಅವರೆಲ್ಲರೂ ಆನಂದ ಭರಿತರಾದರು.

*ಇತಿ ಶ್ರೀ ಪದ್ಮ ಮಹಾಪುರಾಣ - ೨ರ ಪಾತಾಳಖಂಡದಲ್ಲಿ ಶೇಷ-ವಾತ್ಸ್ಯಾಯನ ಸಂವಾದದಲ್ಲಿ ರಾಮಾಶ್ವಮೇಧದಲ್ಲಿ ಜಲಮಧ್ಯದಿಂದ ಯಜ್ಞಾಶ್ವ ಪ್ರಾಪ್ತಿಯೆಂಬ ಹದಿನೇಳನೆ ಅಧ್ಯಾಯ ಮುಗಿದುದು*



## ಶ್ರೀರಾಮ ಸಮಾಗಮ

**ಅಧ್ಯಾಯ - ೧೮**

**ಶೇಷ ಉವಾಚ**

**ಶೇಷ :-** ಮೃದಂಗ ವೀಣೆಗಳ ನಿನಾದದೊಂದಿಗೆ ಯಜ್ಞಾಶ್ವ ಅಲ್ಲಿಂದ ಹೊರಟು ದೇವಪುರವನ್ನು ಸೇರಿತು. ದೇವನಿರ್ಮಿತವಾದ ಆ ನಗರದಲ್ಲಿ ಸ್ಫಟಿಕ ಮಣಿಯ ಗೋಡೆಗಳುಳ್ಳ, ವಿಂಧ್ಯಪರ್ವತವನ್ನೆ ನಾಚಿಸುವ ಉನ್ನತ ಸೌಧಗಳು ಬೆಳ್ಳಿಯ ಮನೆಗಳಂತೆ ಕಾಣುತ್ತಿದ್ದುವು. ಬಗೆಬಗೆಯ ಮಣಿಗಳಿಂದ ಖಚಿತವಾದ ಮಾಣಿಕ್ಯದ ಗೋಪುರಗಳು ಮನೆಗಳಿಗೆ ಶೋಭೆ ತರುತ್ತಿದ್ದವು. ನೆಲಕ್ಕೆ ಪದ್ಮರಾಗ ಮಣಿಯ ಕಲ್ಲುಗಳನ್ನೆ ಹಾಸಿದ್ದರು. ಆದರಿಂದ ನೆಲದ ಕಾಂತಿ ಜನರ ತುಟಿಯ ರಂಗನ್ನೂ ನಾಚಿಸುವಂತಿತ್ತು. ಪ್ರತಿ ಮನೆಗೂ ತಾವರೆಕೊಳಗಳು. ಅಲ್ಲಿ ಜನರ ಮುಖಗಳನ್ನೆ ಹೋಲುವ ಚೆಲುವಾದ ತಾವರೆಗಳು ನೀಲಮಣಿಯಿಂದ ನಿರ್ಮಿತವಾದ ಆಟದ ಬೆಟ್ಟಗಳು. ಅವನ್ನು ಕಂಡರೆ ನವಿಲುಗಳು ಮೋಡಗಳೆಂದು ಭ್ರಮಿಸುತ್ತಿದ್ದುವು. ಮನೆಯೊಳಗೆ ಸ್ಫಟಿಕದ ಕೊಳದಲ್ಲಿ ಹಂಸಗಳು ಮೋಡದ ಭಯವಿಲ್ಲದೆ ಮಾನಸಕ್ಕೆ ಹೋಗುವ ಹಂಬಲವೂ ಇಲ್ಲದೆ ಸುಖವಾಗಿದ್ದುವು. ಎಲ್ಲೆಲ್ಲೂ ಶಿವಾಲಯಗಳು. ಶಿವನ ತಲೆಯಲ್ಲಿರುವ ಚಂದ್ರನ ಬೆಳದಿಂಗಳ ದೆಸೆಯಿಂದ ಜನರಿಗೆ ಶುಕ್ಲ ಕೃಷ್ಣಪಕ್ಷಗಳ ಭೇದವೆ ತಿಳಿಯದಂತಾಗಿತ್ತು.

ಇಂಥ ಸಮೃದ್ಧವಾದ ರಾಜ್ಯವನ್ನು ಧಾರ್ಮಿಕನಾದ ವೀರಮಣಿ ಆಳುತ್ತಿದ್ದ. ಅವನ ಮಗ ರುಕ್ಮಾಂಗದ ಮಹಾಶೂರ. ಅವನೊಮ್ಮೆ ಸುಂದರ ವನಿತೆಯರೊಡನೆ ವನಕ್ರೀಡೆಗೆ ತೆರಳಿದ, ಅವರ ಕಾಲುಬಳೆ ಕೈಬಳೆಗಳನಾದ ಮಾಧುರ್ಯಕ್ಕೆ ಕಾಮನೆ ಮನ ಸೋಲುತ್ತಿದ್ದನೆಂದರೆ ಉಳಿದವರ ಪಾಡೇನು ? ಆ ವನವೂ ಒಳ್ಳೆಯ ಹೂಬಿಟ್ಟ ಮರಗಳಿಂದ ಶೋಭಿಸುತ್ತಿತ್ತು. ಆರು ಋತುಗಳೂ ಅಲ್ಲಿ ಸದಾ ಇರುತ್ತಿದ್ದು, ಅರಳಿದ ಸಂಪಿಗೆ ಮೊಗ್ಗುಗಳು ವಿರಹಿಗಳ ಎದೆಯಲ್ಲಿ ಆಂದೋಲನ ಉಂಟು ಮಾಡುತ್ತಿದ್ದುವು. ಮಾವಿನ ಮರಗಳಲ್ಲಿ ಕೋಗಿಲೆಗಳ ಕೂಗು, ಮಲ್ಲಿಗೆಗಳಲ್ಲಿ ದುಂಬಿಗಳ ಝೇಂಕಾರ ಸದಾ ಕೇಳಿ ಬರುತ್ತಿದ್ದುವು. ನಾಗ ಪುನ್ನಾಗ ಸಾಲ ತಾಲ ತಮಾಲ ದಾಡಿಮ ಕರ್ಣಿಕಾರ ಮುಂತಾದ ವೃಕ್ಷಗಳೂ ಫಲ ಪುಷ್ಪಭಾರದಿಂದ ಬಾಗಿರುತ್ತಿದ್ದುವು. ಇಂಥ ಸುಂದರ ವನದಲ್ಲಿ ಸುಂದರ ಯುವತಿಯರೊಡನೆ ಆನಂದದಿಂದ ಹಾಡುತ್ತ ನಿರ್ಭೀತಿಯಿಂದ ವಿಹರಿಸಿದ, ರುಕ್ಮಾಂಗದ. ನೃತ್ಯಕಲೆಯಿಂದ ಕೆಲವರು. ಸಂಗೀತ ಮಾಧುರ್ಯದಿಂದ ಕೆಲವರು, ಮಾತಿನ ಮೋಡಿಯಿಂದ ಕೆಲವರು, ಹುಬ್ಬು ಕುಣಿಸುವ ಚಾತುರ್ಯದಿಂದ ಕೆಲವರು, ಆಲಿಂಗನ

ಕೌಶಲ್ಯದಿಂದ ಕೆಲವರು, ಹೀಗೆ ಎಲ್ಲ ಯುವತಿಯರೂ ರಾಜಕುಮಾರನನ್ನು ಬಳಸಿ ಓಲೈಸಿ ರಮಿಸಿದರು. ಆತನೂ ಸಾಕ್ಷಾತ್ ಮನ್ಮಥನಂಥವನು. ಅವರನ್ನು ಹೂಗಳಿಂದ ಸಿಂಗರಿಸಿ ಮೃದುಮಧುರ ಮಾತುಗಳಿಂದ ಹೊಗಳಿ ಆನಂದಗೊಳಿಸಿದ. ಆ ಸಮಯದಲ್ಲಿ ಯಜ್ಞಾಶ್ವವು ಆ ವನವನ್ನು ಪ್ರವೇಶಿಸಿತು.

ಗಂಗೆಯಂತೆ ಬಿಳಿ, ಕುಂಕುಮ ಕೇಸರದ ಲೇಪ, ಹಣೆಯಲ್ಲಿ ಚಿನ್ನದ ಪಟ್ಟಿ. ಆಶ್ಚರ್ಯಕರವಾದ ಆ ಸುಂದರ ಕುದುರೆಯನ್ನು ಸ್ತ್ರೀಯರು ಕಂಡು 'ಪ್ರಿಯ, ಇದು ಯಾರ ಕುದುರೆ ? ಬಹು ಸುಂದರವಾಗಿದೆ. ನಿನ್ನ ಬಾಹುಬಲದಿಂದ ಹಿಡಿದುಕೊಳ್ಳು' ಎಂದರು.

ರುಕ್ಮಂಗದನು ಒಂದು ಕೈಯಿಂದ ಅನಾಯಾಸವಾಗಿ ಕುದುರೆಯನ್ನು ಹಿಡಿದು ತಂದನು. ಅದರ ಹಣೆಯ ಮೇಲೆ ಕಟ್ಟಿದ್ದ ಪತ್ರಿಕೆಯನ್ನೋದಿ, ಒಮ್ಮೆ ನಕ್ಕು ಆ ರಮಣಿಯರ ನಡುವೆ ಹೇಳಿದನು.

**ರುಕ್ಮಾಂಗದ :-** ಈ ಭೂಮಿಯ ಮೇಲೆ ನನ್ನ ತಂದೆಯಲ್ಲಿರುವ ಪರಾಕ್ರಮ ಸಂಪತ್ತು ಇನ್ನಾರಲ್ಲೂ ಇಲ್ಲ. ಹೀಗಿರುವಾಗ ರಾಮನು ಹೇಗೆ ಇಷ್ಟೊಂದು ದರ್ಪ ತೋರುತ್ತಿದ್ದಾನೆ ? ನನ್ನ ತಂದೆಯನ್ನು ಸಾಕ್ಷಾತ್ ಶಿವನೆ ಸದಾ ರಕ್ಷಿಸುತ್ತಿದ್ದಾನೆ. ದೇವ ದಾನವ ಯಕ್ಷರೂ ಅವನನ್ನು ನಮಿಸುತ್ತಾರೆ ಎಂದ ಮೇಲೆ ಅವನು ಅಶ್ವಮೇಧವನ್ನು ಮಾಡಲು ಯೋಗ್ಯ. ಈ ಕುದುರೆಯನ್ನು ನಮ್ಮ ಭಟರು ಒಯ್ದು ಅಶ್ವಶಾಲೆಗೆ ಸೇರಿಸಲಿ.

ಈ ಮಾತನ್ನು ಕೇಳಿ ಲಲನೆಯರು ಆನಂದದಿಂದ ಉಬ್ಬಿ ಅವನನ್ನು ಅಪ್ಪಿಕೊಂಡರು. ಮಹಾ ಉತ್ಸಾಹದಿಂದ ಆತ ಕುದುರೆಯನ್ನು ರಾಜಧಾನಿಗೆ ತಂದು ಮೃದಂಗ ಧ್ವನಿ, ವಂದಿಗಳ ಸ್ತುತಿಗಳೊಡನೆ ಸಂಭ್ರಮದಿಂದ ನಗರಪ್ರವೇಶ ಮಾಡಿದ. 'ಶತ್ರುಘ್ನ ಮತ್ತು ಅವನ ದೊಡ್ಡ ಸೇನೆಯ ರಕ್ಷಣೆಯಲ್ಲಿ ಸ್ವಚ್ಛಂದವಾಗಿ ತಿರುಗುತ್ತಿದ್ದ ರಾಮನ ಅಶ್ವಮೇಧದ ಕುದುರೆಯನ್ನು ನಾನು ತಂದೆನೆಂದು ತಂದೆಯ ಮುಂದೆ ತನ್ನನ್ನು ಪ್ರಶಂಸೆ ಮಾಡಿಕೊಂಡ. ತಂದೆ ವೀರಮಣಿ ಮಾತ್ರ ಈ ಕಾರ್ಯವನ್ನು ಒಪ್ಪಲಿಲ್ಲ. ಇದೊಂದು ಕಳ್ಳತನವೆಂದೆ ಬಗೆದನಾತ. ತನ್ನ ಅಳಿಯನಾದ ಶಿವನೊಂದಿಗೆ ಮಗನ ಈ ಅಲ್ಪ ಕಾರ್ಯದ ಅನರ್ಥ ಪರಿಣಾಮವನ್ನು ಸಮಾಲೋಚನೆ ಮಾಡತೊಡಗಿದ.

**ಶಿವ :-** ರಾಜನೆ, ಈಗ ದೇವ ದಾನವರೆಲ್ಲರನ್ನೂ ದಿಗ್ಭ್ರಮೆಗೊಳಿಸುವ ಯುದ್ಧ ನಡೆಯುವುದು ಅನಿವಾರ್ಯವೆ ಸರಿ. ನಾನು ಸದಾ ಯಾರನ್ನು ಧ್ಯಾನಿಸುತ್ತೇನೊ ಯಾರ ನಾಮವನನು ಜಪಿಸುತ್ತಿರುವೆನೊ ಆ ರಾಮನ ಕುದುರೆಯನ್ನು ನಿನ್ನ ಮಗ ಅಪಹರಿಸಿದ್ದಾನೆ. ಆದರೆ ಇದರಿಂದ ಒಂದು ಮಹಾಲಾಭ ನಮಗಾಗಲಿದೆ. ಮಹಾ ಪ್ರಯತ್ನದಿಂದ ಕುದುರೆಯನ್ನು ನಾವು ರಕ್ಷಿಸಿದರೆ, ಬಲಾತ್ಕಾರದಿಂದ ಅದನ್ನೊಯ್ಯಲು ಸ್ವಯಂ ಶ್ರೀರಾಮನೆ ಬರುತ್ತಾನೆ. ಆಗ ಅವನ ಪಾದಕಮಲಗಳ ದರ್ಶನ ನಮಗೆ ದೊರಕುತ್ತದೆ. ರಾಜ್ಯವನ್ನೂ ಕುದುರೆಯನ್ನೂ ಅವನಿಗೆ ಒಪ್ಪಿಸಿ, ಅವನ ಪಾದಗಳ ದರ್ಶನವನ್ನು ಪಡೆಯೋಣ.

**ವೀರಮಣಿ :-** ಹೌದು, ಕ್ಷತ್ರಿಯರ ಧರ್ಮದಂತೆ ನಾವೀಗ ಯುದ್ಧ ಮಾಡುವುದೆ ಸರಿ. ಶ್ರೀ ರಾಮನು ಅಶ್ವಮೇಧದ ನೆಪದಿಂದ ಎಲ್ಲ ರಾಜ್ಯಗಳನ್ನೂ ಆಕ್ರಮಿಸುತ್ತಿರುವಾಗ

ಕ್ಷತ್ರಿಯರಾದ ನಾವು ನಮ್ಮ ಪರಾಕ್ರಮವನ್ನು ತೋರದಿದ್ದರೆ ಅಭಿಮಾನ ಶೂನ್ಯರಾಗಿ ಬಿಡುತ್ತೇವೆ. ಇದರಿಂದ ಶ್ರೀರಾಮ ಕುಪಿತನಾಗುವುದು ನಿಜ. ಆದರೆ ಅಕಸ್ಮಾತ್ತಾಗಿ ಭಯದಿಂದ ಶತ್ರುವಿನ ಕಾಲಿಗೆ ಬೀಳುವುದು ಕ್ಷಾತ್ರ ಧರ್ಮವಲ್ಲ. ಆದುದರಿಂದ 'ಕ್ಷುದ್ರ', 'ನೀಚ', 'ಅಂಜುಬುರುಕ'ನೆಂದು ವೈರಿ ರಾಜರಿಂದ ಅನಿಸಿಕೊಳ್ಳುವ ಪ್ರಸಂಗ ಉಂಟಾಗದಂತೆ, ಈ ಶರೀರ ಬೀಳುವವರೆಗೂ ನಾನು ಹೋರಾಡುವೆನು. ಭಕ್ತನಾದ ನನ್ನನ್ನು ರಕ್ಷಿಸುವ ಹೊಣೆ ನಿನ್ನದು. ನೀನು ವಿಚಾರಮಾಡಿ ಯುಕ್ತವಾದುದನ್ನು ಮಾಡು. ಆದರೆ ಕುಪಿತನಾದ ರಾಮನೊಂದಿಗೆ ನನಗೆ ಸಂಧಿಮಾಡಿಸು.

**ಶಿವ** :- ರಾಜನೆ, ಮೂವತ್ತೂರು ಕೋಟಿ ದೇವತೆಗಳು ಯತ್ನಿಸಿದರೂ ನಿನ್ನಿಂದ ಬಲಾತ್ಕಾರವಾಗಿ ಕುದುರೆಯನ್ನು ಒಯ್ಯಲಾರರು. ರಾಮನು ಬಂದು ಮೈದೋರಿದರೆ ಮಾತ್ರ ನಾನು ಆತನ ಕೋಮಲ ಪಾದಗಳಿಗೆ ನಮಿಸುವೆನು. ಆ ಪ್ರಭುವಿನೊಡನೆ ಯುದ್ಧಕ್ಕೆ ನಿಲ್ಲುವುದು ದೊಡ್ಡ ಅಪರಾಧವಾಗುತ್ತದೆ. ಬೇರೆ ವೀರರೆಲ್ಲರೂ ನನಗೆ ತೃಣಪ್ರಾಯ. ಆದ್ದರಿಂದ ನೀನು ಯುದ್ಧ ಮಾಡು. ನಾ ನಿನ್ನ ರಕ್ಷಣೆಗಿರುವಾಗ ಮೂರು ಲೋಕ ಒಟ್ಟಾಗಿ ಬಂದರೂ ಕುದುರೆಯನ್ನು ಬಲಾತ್ಕಾರದಿಂದ ಒಯ್ಯಲಾಗದು.

ಈ ಮಾತನ್ನು ಕೇಳಿ ರಾಜ ವೀರಮಣಿ ಸಂತೋಷಗೊಂಡು ಯುದ್ಧಮಾಡಲು ಉತ್ಸುಕನಾದ.

**ಶೇಷ** :- ಇತ್ತ ಶತ್ರುಘ್ನನ ಸೇನೆ ಕುದುರೆಯನ್ನು ಕಾಣದೆ 'ಯಾರು ಕುದುರೆಯನ್ನೊಯ್ದರು ? ಯಾರಿಗೆ ಯಮ ಪಟ್ಟಣವನ್ನು ನೋಡುವ ಕುತೂಹಲ ಉಂಟಾಯಿತು ? ಯಾರು ಆ ಮೂರ್ಖ ?' ಎಂದುಕೊಳ್ಳುತ್ತ ಕುದುರೆಯನ್ನರಸುತ್ತಿತ್ತು. ಅಷ್ಟರಲ್ಲಿ ಶತ್ರುಘ್ನನೂ ಬಂದು 'ಕುದುರೆ ಎಲ್ಲಿ ?' ಎಂದು ಕೇಳಿದ. ಸೈನಿಕರೆಂದರು. 'ಪ್ರಭು, ಯಾರೊ ಅಪಹರಿಸಿದ್ದಾರೆ. ತಿರುಗಿ ಪಡೆಯಲು ನಾವು ಪ್ರಯತ್ನ ಪಡಬೇಕಾಗಬಹುದು.'

ಶತ್ರುಘ್ನನು ಮಹಾಮಂತ್ರಿ ಸುಮತಿಯನ್ನು ಕೇಳಿದ.

**ಶತ್ರುಘ್ನ** :- ಈ ದೇಶದ ರಾಜನು ಯಾರು ? ಅವನೆ ಕುದುರೆಯನ್ನು ಹಿಡಿದಿರಬಹುದು ? ಅವನ ಸೇನಾ ಬಲ ಎಷ್ಟು ? ಕುದುರೆಯನ್ನು ಹೇಗೆ ಪಡೆಯೋಣ.

**ಸುಮತಿ** :- ಪ್ರಭು, ದೇವತೆಗಳಿಂದ ನಿರ್ಮಿತವಾಗಿದ್ದು ವೈರಿಗಳೆಷ್ಟು ಮಂದಿ ಕೂಡಿದರೂ ದುರ್ಗಮವಾದ ದೇವಪುರವಿದು. ಇಲ್ಲಿ ವೀರಮಣಿಯು ರಾಜ. ಒಳ್ಳೆಯ ಪ್ರತಾಪಿ, ಶೂರ. ಧರ್ಮದಿಂದ ರಾಜ್ಯಭಾರ ಮಾಡುತ್ತಿದ್ದಾನೆ. ಅವನಿಗೆ ಶಿವನೊಲಿದು ವಶನಾಗಿದ್ದಾನೆ. ಅವನ ರಕ್ಷಣೆಯ ಬಲವಿರುವುದರಿಂದ ಅವನೇನಾದರೂ ಕುದುರೆಯನ್ನು ಹಿಡಿದಿದ್ದರೆ ಘೋರ ಕದನವೆ ಉಂಟಾಗುವುದು. ಸೈನ್ಯವನ್ನ ಜಾಗರೂಕತೆಯಿಂದ ನಾವು ರಕ್ಷಿಸಕೊಂಡಿರಬೇಕು.

ಶತ್ರುಘ್ನನು ಮಂತ್ರಿಯ ಸಲಹೆಯಂತೆ ಸೇನಾವ್ಯೂಹವನ್ನು ರಚಿಸಿ ಯುದ್ಧ ಸನ್ನದ್ಧನಾದನು. ಮಂತ್ರಿಯೊಡನೆ ಆತ ಮಂತ್ರಾಲೋಚನೆ ಮಾಡುತ್ತ ಕುಳಿತಿದ್ದಾಗ ದೇವರ್ಷಿನಾರದರು ಬಂದರು. ಶತ್ರುಘ್ನನು ಅವರನ್ನು ಸ್ವಾಗತಿ ಆಸನ ಮಧುಪರ್ಕ ಮುಂತಾದವುಗಳಿಂದ ಸತ್ಕರಿಸಿ ಕೇಳಿದ,

**ಶತ್ರುಘ್ನ** :- ಮುನಿಯೆ, ನನ್ನ ಕುದುರೆ ಎಲ್ಲಿದೆ, ಹೇಳು. ನನ್ನ ಭಟರು ಎಷ್ಟು ಹುಡುಕಿದರೂ ಅದು ಸಿಗುತ್ತಿಲ್ಲ. ಯಾರು ಒಯ್ದರು? ಹೇಗೆ ಅದನ್ನು ನಾವು ಪಡೆಯಬೇಕು?

ವೀಣೆ ನುಡಿಸುತ್ತ ರಾಮಕಥೆಯನ್ನು ಹಾಡುತ್ತಿದ್ದಂತೆ ನಾರದರು ಹೇಳಿದರು.

**ನಾರದ** :- ಇದು ದೇವಪುರ. ಇಲ್ಲಿಯ ವೀರಮಣಿರಾಜನ ಕುಮಾರ ಕುದುರೆಯನ್ನು ಕಟ್ಟಿಹಾಕಿದ್ದಾನೆ. ನಿನಗೆ ಈಗೊಂದು ಮಹಾಯುದ್ಧವೇ ಕಾದಿದೆ. ಶೂರರಾದ ನಿನ್ನ ವೀರಭಟರೆಲ್ಲರೂ ಈ ಯುದ್ಧದಲ್ಲಿ ಮಡಿಯುವರು. ನೀನು ಬಹುಪ್ರಯತ್ನ ಪಡಬೇಕಾಗುತ್ತದೆ. ವೈರಿಸೈನಿಕರಿಗೆ ದುರ್ಗಮವಾದ ಸೇನಾವ್ಯೂಹವನ್ನು ನೀನು ರಚಿಸಬೇಕು. ಕಷ್ಟದಿಂದ ಕೊನೆಗೆ ಜಯ ನಿನಗೆ ಲಭಿಸುವುದು. ಆ ರಾಮನನ್ನು ಯುದ್ಧದಲ್ಲಿ ಪರಾಜಯ ಗೊಳಿಸುವವನು ಯಾರಿದ್ದಾನೆ ಲೋಕದಲ್ಲಿ ?

ಹೀಗೆ ಹೇಳಿ ನಾರದರು ಮಾಯವಾಗಿ ಆಗಸದಲ್ಲಿ ನಿಂತರು. ಮುಂದೆ ನಡೆಯಲಿರುವ ಮಹಾಯುದ್ಧವನ್ನು ದೇವದಾನವರೊಳಗೆ ನಡೆವಂಥ ಘೋರ ಕದನವನ್ನು ವೀಕ್ಷಿಸಲು ಕುತೂಹಲವಿತ್ತು ಅವರಿಗೆ.

ಇತ್ತ ವೀರಮಣಿ ತನ್ನ ಸೇನಾಪತಿ ರಿಪುವಾರನನ್ನು ಕರೆಸಿ ರಣಭೇರಿಯನ್ನು ಹೊಡೆಸಲಾಜ್ಞಾಪಿಸಿದನು. ಅದರಂತೆ ಬೀದಿಗಳಲ್ಲೆಲ್ಲ ರಣಭೇರಿ ಪ್ರತಿಧ್ವನಿಸಿತು. ವೀರಭಟರೆಲ್ಲರೂ ರಣರಂಗಕ್ಕೆ ಧುಮುಕಬೇಕೆಂಬ ಆಜ್ಞೆಯಾಯಿತು. ಆಜ್ಞೆ ಉಲ್ಲಂಘಿಸಿದವರಿಗೆ ಮರಣದಂಡನೆ, ವೀರರೆಲ್ಲ ಸ್ವಲ್ಪವೂ ವಿಳಂಬ ಮಾಡದೆ ಶಿರಸ್ತ್ರಾಣ ಕವಚಗಳನ್ನು ಧರಿಸಿ, ಚಿನ್ನ ರತ್ನಗಳಿಂದ ಶೋಭಿಸುವ ರಥಗಳನ್ನೂ ಆನೆ ಕುದುರೆಗಳನ್ನೂ ಏರಿ ಹೊರಟರು. ರುಕ್ಮಾಂಗದ, ಅವನ ತಮ್ಮ ಶುಭಾಂಗದ, ರಾಜ ಸೋದರ ವೀರಸಿಂಹ, ರಾಜನ ಭಾವಮೈದುನ ಬಲಮಿತ್ರ ಇವರೆಲ್ಲ ಯುದ್ಧಕ್ಕೆ ಅಣಿಯಾಗಿ ನಿಂತರು. ಸೇನಾಪತಿ ರಿಪುವಾರನು ಸೇನೆಯನ್ನು ಸಜ್ಜುಗೊಳಿಸಿ ಅದನ್ನು ರಾಜನಲ್ಲಿ ಅರಿಕೆ ಮಾಡಿದಾಗ ರಾಜನು ಮಣಿಮಯವಾದ ಉತ್ತಮ ರಥವೊಂದನ್ನು ಏರಿದನು.

ವೀರರ ಸಿಂಹನಾದ, ಶಂಖಘೋಷ, ಎಲ್ಲೆಡೆ ಕೇಳಿ ಬಂತು. ಭೇರೀ ಧ್ವನಿಯೂ ಪಸರಿಸಿತು. ಎಲ್ಲ ವೀರರೂ ಸ್ವಸ್ತಿವಾಚನ ಮಾಡಿಸಿಕೊಂಡು ಶಸ್ತ್ರಾಸ್ತ್ರಗಳನ್ನು ಧರಿಸಿ ರಣರಂಗವನ್ನು ಪ್ರವೇಶಿಸಿದರು. ತಿರುಗಿ ಭೇರಿ ಶಂಖಗಳ ನಾದ. ಸ್ವರ್ಗದಲ್ಲಿ ಕುಳಿತಿದ್ದ ದೇವತೆಗಳನ್ನು ಕರೆತರಲು ಹೊರಟಂತಿತ್ತು. ಅಂತರಿಕ್ಷದಲ್ಲೆಲ್ಲ ವ್ಯಾಪಿಸಿದ ಆ ಮಹಾಧ್ವನಿ ಉತ್ಸಾಹದಿಂದ ವೀರಮಣಿ ರಣರಂಗದಲ್ಲಿ ಕಾಲಿಟ್ಟ.

ಇದಿರಿನಲ್ಲಿ ಬರುತ್ತಿದ್ದ ಆ ಸೇನಾ ಸಮುದ್ರವನ್ನು ಕಂಡು ಸುಮತಿಯನ್ನು ಕೇಳಿದ.

**ಶತ್ರುಘ್ನ** :- ಕುದುರೆಯನ್ನು ಕಟ್ಟಿಹಾಕಿದ ವೀರಮಣಿ ರಾಜನೀಗ ಬರುತ್ತಿದ್ದಾನೆ. ದೊಡ್ಡ ಚತುರಂಗ ಸೇನೆಯನ್ನೆ ತಂದಿದ್ದಾನೆ. ಈಗ ನಾವು ಹೇಗೆ ಯುದ್ಧ ಮಾಡಬೇಕು ? ಯಾರು ಯಾರೊಡನೆ ಹೋರಾಡಬೇಕು ? ಜಯ ಹೇಗೆ ದೊರಕೀತು ?

**ಸುಮತಿ** :- ಪ್ರಭು, ಪುಷ್ಕಲ ನೀಲರತ್ನ ಮುಂತಾದವರು ಈಗ ಹೋರಾಟಕ್ಕೆ ಇಳಿಯಲಿ. ಶಿವನೊಂದಿಗೆ, ವೀರಮಣಿಯೊಂದಿಗೆ ನೀನೆ ಕಾದಬೇಕು. ಆಗ ನಮಗೆ ಜಯ ದೊರಕುವುದು. ಇನ್ನು ನಿನಗೆ ಸರಿದೋರುವಂತೆ ನೀನು ನಿರ್ಧಾರಗಳನ್ನು ಕೈಗೊಳ್ಳಬಹುದು.

ಶತ್ರುಘ್ನ ಇದನ್ನು ಕೇಳಿ ಭಟರನ್ನು ಯುದ್ಧ ಮಾಡಲು ಅಜ್ಞಾಪಿಸಿದ. ರಾಮನಿಗಾಗಿ ಎಲ್ಲ ಪ್ರಯತ್ನಗಳನ್ನು ಮಾಡಿ ಜಯವನ್ನು ತಂದುಕೊಡಬೇಕೆಂದು ಹುರಿದುಂಬಿಸಿದ.

**ಶೇಷ :-** ಯುದ್ಧ ಪ್ರಾರಂಭವಾಯಿತು. ಶತ್ರುಘ್ನನ ಭಟರು ಧನುರ್ಬಾಣಗಳನ್ನು ಹಿಡಿದು ಮುನ್ನುಗ್ಗಿ ಅನೇಕ ಆನೆ, ಕುದುರೆ, ರಥಗಳನ್ನು ಕೆಡವಿದುರು. ರುಕ್ಮಾಂಗದನು ಅಕ್ಷಯ ಬತ್ತಳಿಕೆಗಳನ್ನು ಧರಿಸಿ ಬಿಲ್ಲಿಗೆ ಬಾಣಗಳನ್ನು ಹೂಡಿ ಕೋಪದಿಂದ ಕೆಂಗಣ್ಣನಾಗಿ ಶತ್ರುಘ್ನನ ವೀರರ ಮೇಲೆ ಮುನ್ನುಗಿದ. ಸಾವಿರಾರು ವೀರರನ್ನು ಕೆಡಹಿ ಹಾಹಾಕಾರವನ್ನು ಎಬ್ಬಿಸಿದ. ಶತ್ರುಘ್ನ ಪುಷ್ಕಲನನ್ನು ಯುದ್ಧಕ್ಕೆ ಕಳಿಸಿದ. ಪುಷ್ಕಲನು ತೀಕ್ಷ್ಣ ಬಾಣಗಳನ್ನೆಸೆದ. ಪುಷ್ಕಲನೆದೆಗೆ ರುಕ್ಮಾಂಗದ ಬಾಣಗಳನ್ನೆಸೆದ. ಅವರಿಬ್ಬರ ಹೋರಾಟ ತಾರಕಾಸುರ ಕುಮಾರಸ್ವಾಮಿಗಳ ಯುದ್ಧದಂತೆಯೆ ಕಾಣುತ್ತಿತ್ತು. ಪುಷ್ಕಲನು ರುಕ್ಮಾಂಗದನ ರಥವನ್ನು ಮುರಿದು ಸಾರಥಿಯನ್ನೂ ಕುದುರೆಗಳನ್ನೂ ಕೊಂದು, ಧ್ವಜವನ್ನೂ ಮುರಿದ. ಎದೆಗೂ ಬಾಣವನ್ನು ಎಸೆದ. ಈ ನೈಪುಣ್ಯವನ್ನು ಕಂಡು ವೀರರೆಲ್ಲ ಆನಂದಿಸಿದರು.

ರುಕ್ಮಾಂಗದನು ಅಸಹನೀಯ ಕೋಪದಿಂದ ಇನ್ನೊಂದು ರಥವನ್ನೇರಿ ನುಡಿದ. 'ಪುಷ್ಕಲ, ದೊಡ್ಡ ಪರಾಕ್ರಮವನ್ನೆ ತೋರಿರುವೆ. ಆದರೆ ನೀನೆಲ್ಲಿಗೆ ಹೋಗುವೆ ? ನನ್ನ ಪರಾಕ್ರಮವನ್ನು ನೋಡು. ಗಟ್ಟಿಯಾಗಿ ನಿಂತುಕೊಳ್ಳು. ನಿನ್ನ ರಥವನ್ನೀಗ ಆಕಾಶಕ್ಕೆ ಹಾರಿಸುತ್ತೇನೆ.' ಹೀಗೆ ಹೇಳಿ ಒಂದು ಭ್ರಾಮಕಾಸ್ತ್ರವನ್ನು ಹೂಡಿದ. ಆ ಪುಷ್ಕಲನ ರಥ ಒಂದು ಯೋಜನದೆತ್ತರಕ್ಕೆ ಹಾರಿ ಗರಗರನೆ ತಿರುಗುತ್ತ ಭೂಮಿಗಿಳಿಯಿತು. ಸಾರಥಿ ಹೇಗೋ ಪ್ರಯತ್ನದಿಂದ ರಥವನ್ನು ನಿಯಂತ್ರಿಸಿದ್ದ.

ಪುಷ್ಕಲನು ಬಾಣವನ್ನು ಹೂಡುತ್ತ ಹೇಳಿದ. 'ವೀರ ಶಿರೋಮಣಿ, ನಿನ್ನಂಥ ವೀರರು ಭೂಮಿಯ ಮೇಲಿರುವುದು ಸರಿಯಲ್ಲ. ಸ್ವರ್ಗವೆ ಯೋಗ್ಯವಾದ ಸ್ಥಾನ. ನಿನ್ನನ್ನೀಗ ಅಲ್ಲಿಗೆ ಕಳಿಸುವೆನು ನೋಡು.' ಹೀಗೆ ಹೇಳಿ ಒಂದು ಮಹಾಸ್ತ್ರವನ್ನೆಸೆದ. ರುಕ್ಮಾಂಗದನ ರಥವು ಆಗ ಆಕಾಶದಲ್ಲಿ ಮೇಲೆ ಮೇಲೆ ಏರಿ ಮೇಲಿನ ಎಲ್ಲ ಲೋಕಗಳನ್ನು ದಾಟಿ ಸೂರ್ಯ ಮಂಡಲದ ಬಳಿಗೆ ಹೋದಾಗ ಸೂರ್ಯನ ಜ್ವಾಲೆಯಲ್ಲಿ ರಥ ಕುದುರೆ ಸಾರಥಿ ಎಲ್ಲರೂ ಸುಟ್ಟು ಹೋದರು. ರುಕ್ಮಾಂಗದನು ಮಾತ್ರ ಶಿವನನ್ನು ಸ್ಮರಿಸುತ್ತಿದ್ದುದರಿಂದ ಸಾಯಲಿಲ್ಲ. ಆದರೆ ದೇಹವೆಲ್ಲ ಬೆಂದುಹೋಗಿತ್ತು. ಮೂರ್ಛೆಗೊಂಡು ಆತ ಕೆಳಗೆ ಬಿದ್ದ. ಆಗ ವೀರಮಣಿಯ ಸೇನೆಯಲ್ಲಿ ಹಾಹಾಕಾರ ಎದ್ದಿತು. ಭಯದಿಂದ ಅದು ಓಡತೊಡಗಿತ್ತು. ಶತ್ರುಘ್ನನ ಸೇನೆಗೆ ಜಯಲಕ್ಷ್ಮಿ ಒಲಿದಳು.

ವೀರಮಣಿ ಇದೆಲ್ಲವನ್ನೂ ತಿಳಿದು ಕೋಪದಿಂದ ಪುಷ್ಕಲನನ್ನು ಎದುರಿಸಿ ನಿಂತ. ಆಗ ಭೂಮಿಪರ್ವತ ಅರಣ್ಯ ಎಲ್ಲವೂ ಕಂಪಿಸಿತು. ವೀರರಿಗುತ್ಸಾಹ, ಹೇಡಿಗಳಿಗೆ ಭಯ ಉಂಟಾಯಿತು. ಒಂದು ಮಹಾಧನುಸ್ಸು ಎರಡು ಅಕ್ಷಯಬತ್ತಳಿಕೆಗಳನ್ನು ಹೊತ್ತು ರೋಷದಿಂದ ನಿಟ್ಟುಸಿರು ಬಿಡುತ್ತ ಪುಷ್ಕಲನನ್ನು ಯುದ್ಧಕ್ಕೆ ಆಹ್ವಾನಿಸಿದ ವೀರಮಣಿ ರಾಜ.

**ಶೇಷ :-** ವೀರಮಣಿ ರಾಜನು ಪುಷ್ಕಲನನ್ನು ಯುದ್ಧಕ್ಕೆ ಆಹ್ವಾನಿಸುತ್ತಿರುವುದನ್ನು ಕಂಡು ಹನುಮಂತನು ಅವನೆಡೆಗೆ ಧಾವಿಸಿದ. ಮಹಾಕಾಯದ ಹನುಮಂತನು ಬಾಲವನ್ನೆತ್ತಿ ಗುಡುಗಿನಂಥ ಧ್ವನಿ ಮಾಡುತ್ತ ವೀರಮಣಿಯ ಮೇಲೇರಿ ಬರುವುದನ್ನು ಕಂಡ ಪುಷ್ಕಲನು ಅವನನ್ನು ತಡೆದು ಹೇಳಿದ.

**ಪುಷ್ಕಲ :-** ವೀರನೆ, ಈ ರಾಜನ ಬಲವೆಷ್ಟರದು ? ಅವನೊಡನೆ ಕಾದಲು ನಿನ್ನಂಥ ವೀರನು ಬರಬೇಕೆ ? ಮೂಲೋಕವೂ ಒಟ್ಟಾಗಿ ನಿನ್ನಲ್ಲಿ ಕಾದಲು ಬಂದು ನಿಂತರೆ,

ಆಗಲೂ 'ಇದೇನು ಮಹಾ ! ಎಂದುಕೊಂಡು ಯುದ್ಧಕ್ಕೆ ಹೊರಡುವಿಯೊ, ಇಲ್ಲವೊ, ಹೇಳುವುದು ಕಷ್ಟ. ಈಗ ಇಂಥ ಅಲ್ಪನ ಬಳಿ ಹೋರಾಟಕ್ಕೆ ನೀನು ಬರುವುದು ಉಚಿತವಲ್ಲ. ರಾಮನ ಕೃಪೆಯಿಂದ ನನಗೂ ಏನೂ ಅಪಾಯವಾಗಲಾರದು. ನೀನು ಚಿಂತಿಸಬೇಡ. ನೀನು ಹಿಂದೆ ರಾಕ್ಷಸಸೇನಾ ಸಮುದ್ರವನ್ನೆ ರಾಮನ ಅನುಗ್ರಹ ಬಲದಿಂದ ದಾಟ ಬಂದವನು. ನಾನು ಹಾಗೆಯೇ ಈ ಯುದ್ಧದಲ್ಲಿ ವಿಜಯಿಯಾಗಿ ಬರುತ್ತೇನೆ. ರಾಮಸ್ಮರಣೆಯಿಂದ ದುಃಖದ ಸಾಗರವನ್ನೆ ಬತ್ತಿಸಲು ಸಾಧ್ಯವಿದೆ. ಆದುದರಿಂದ ನೀನು ಶತ್ರುಘ್ನನ ಬಳಿಯಲ್ಲಿರು. ನಾನೀತನನ್ನು ಗೆದ್ದು ಬರುತ್ತೇನೆ.

**ಹನುಮಂತ :-** ಮಗು, ವೀರಮಣಿಯ ವಿಷಯದಲ್ಲಿ ನೀನಿಂಥ ಸಾಹಸ ಮಾಡಬೇಡ. ನೀನಿನ್ನೂ ಹುಡುಗ. ಅವನು ವಯಸ್ಸಾದವ, ಎಲ್ಲ ಶಸ್ತ್ರಾಸ್ತ್ರಗಳಲ್ಲಿ ನುರಿತವ, ಮಹಾಶೂರ ವೀರರನ್ನೆಲ್ಲ ಯುದ್ಧದಲ್ಲಿ ಸೋಲಿಸಿದವ. ಇನ್ನೊಂದು ವಿಷಯವನ್ನು ನೀನು ತಿಳಿದಿರಬೇಕು. ಈತನ ಬಳಿಯಲ್ಲಿದ್ದು ಸದಾರಕ್ಷಣೆ ಮಾಡುತ್ತಿದ್ದಾನೆ ಅವನ ಭಕ್ತಿಗೊಲಿದುಬಂದ ಶಿವ. ಇದನ್ನೆಲ್ಲ ಯೋಚಿಸಿ ನಾನೆ ಅವನನು ಎದುರಿಸಲು ಬಂದೆ. ನೀನು ಬೇರೆ ವೀರರನ್ನು ಸೋಲಿಸಿ ಕೀರ್ತಿ ಸಂಪಾದಿಸು.

**ಪುಷ್ಕಲ :-** ಶಿವನನ್ನು ಒಲಿಸಿ ತನ್ನ ಬಳಿಯಲ್ಲೆ ನಿಲ್ಲಿಸಿಕೊಂಡಿರಬಹುದು ವೀರಮಣಿ. ನಾನಾದರೊ ರಾಮನನ್ನು ನನ್ನ ಹೃದಯದಲ್ಲಿಯೆ ಇಟ್ಟುಕೊಂಡಿರುವೆನು. ಅವನ ಹೃದಯದಲ್ಲಿ ಶಿವನಿರುವುದಿಲ್ಲ. ನನ್ನ ಹೃದಯವನ್ನು ಬಿಟ್ಟು ರಾಮನೆಲ್ಲಿಗೂ ಹೋಗುವುದಿಲ್ಲ. ಆದ್ದರಿಂದ ನೀನು ಬೇರೆ ಕಡೆಗೆ ಹೋಗು. ನಾನೆ ಈತನನ್ನು ಗೆಲ್ಲುವೆ. ನನ್ನ ವಿಷಯದಲ್ಲಿ ನೀನೇನೂ ಚಿಂತೆ ಮಾಡಬೇಡ.

ಹನುಮಂತನು ಇದನ್ನು ಕೇಳಿ ವೀರಸಿಂಹನೊಂದಿಗೆ ಯುದ್ಧ ಮಾಡಲು ಹೊರಟು ಹೋದ. ಲಕ್ಷ್ಮೀನಿಧಿ ವೀರಸಿಂಹನ ಮಗ ಶುಭಾಂಗನೊಂದಿಗೆ ಯುದ್ಧಕ್ಕೆ ನಿಂತ. ಸುಮದ ರಾಜನು ಬಲಪುತ್ರನೊಂದಿಗೆ ಹೋರಾಡತೊಡಗಿದ. ತನ್ನನ್ನು ಆಹ್ವಾನಿಸುತ್ತಿರುವ ವೀರಮಣಿಯ ಇದಿರಿನಲ್ಲಿ ಪುಷ್ಕಲನು ನಿಂತ.

**ವೀರಮಣಿ :-** ಹುಡುಗನೆ, ಚಂಡಕೋಪಿಯಾದ ನನ್ನೊಂದಿಗೆ ಯುದ್ಧಕ್ಕೆ ನಿಲ್ಲಬೇಡ. ಹೋಗು. ಎಲ್ಲಿಯಾದರೂ ಪ್ರಾಣ ಉಳಿಸಿಕೊಳ್ಳು. ನನ್ನಂಥ ರಾಜರು ಮಕ್ಕಳ ಮೇಲೆ ಎಂದೂ ಕೈ ಮಾಡುವುದಿಲ್ಲ. ನಿನ್ನನ್ನು ಕಣ್ಣಾರೆ ನೋಡುವವರೆಗೆ ಮಹಾವೀರನೊಬ್ಬನನ್ನು ಇದಿರಿಸಿ ಕಾದುವಾಸೆ ಬಲವಾಗಿತ್ತು. ಈಗ ನಿನ್ನನ್ನು ನೋಡಿದ ಮೇಲೆ ಎಳೆ ಹುಡುಗನ ಮೇಲೆ ಕೈ ಮಾಡಲು ಮನಸ್ಸು ಒಪ್ಪುತ್ತಿಲ್ಲ. ನೀನೇನೋ ನನ್ನ ಮಗನ ಮೇಲೆ ಬಾಣಗಳನ್ನೆಸೆದು ಮೂರ್ಛೆಗೊಳಿಸಿದೆ. ಆದರೂ ಅದನ್ನೆಲ್ಲ ನೀನು ಎಳೆ ಹುಡುಗನೆಂದು ಕ್ಷಮಿಸಬಿಟ್ಟಿದ್ದೇನೆ ಹೋಗು.

**ಪುಷ್ಕಲ :-** ನಾನು ಹುಡುಗ, ನೀನು ವಯಸ್ಸಾದವ. ಆದರೆ ಕ್ಷತ್ರಿಯರ ವಾಡಿಕೆಯಲ್ಲಿ ಹೆಚ್ಚು ಬಲವುಳ್ಳವರೆ ವೃದ್ಧರು. ಹೆಚ್ಚು ವಯಸ್ಸಾದುದರಿಂದ ಏನೂ ಪ್ರಯೋಜನವಿಲ್ಲ. ನಾನೀಗ ನಿನ್ನ ಮಗನನ್ನು ಮೂರ್ಛೆಗೊಳಿಸಿದ್ದೇನೆ. ನಿನ್ನನ್ನು ಕೊಂದೇ ಬಿಡುತ್ತೇನೆ. ತಯಾರಾಗಿ ನಿಲ್ಲು. ರಾಮಭಕ್ತನಾದ ನನ್ನನ್ನು ಸ್ವಯಂ ದೇವೇಂದ್ರನೂ ಗೆಲ್ಲಲಾರ.

ಇದನ್ನು ಕೇಳಿ ವೀರಮಣಿ ಒಮ್ಮೆ ನಕ್ಕು ಕೋಪ ತಾಳಿದ ಪುಷ್ಕಲನು ಆಗ ಅವನೆದೆಗೆ ಒಮ್ಮೆಲೆ ಇಪ್ಪತ್ತು ಬಾಣಗಳನ್ನು ಎಸೆದ. ಅವನ್ನು ಮಧ್ಯದಲ್ಲಿಯೆ ತನ್ನ ಬಾಣಗಳಿಂದ ವೀರಮಣಿ ತುಂಡರಿಸಿದ. ಪುಷ್ಕಲನ ಮೂರು ಬಾಣಗಳು ವೀರಮಣಿಯ ಹಣೆಯಲ್ಲಿ ನಾಟಿಕೊಂಡವು. ವೀರಮಣಿಯ ಒಂಭತ್ತು ಬಾಣಗಳು ಕ್ರುದ್ಧ ಸರ್ಪಗಳಂತೆ ಪುಷ್ಕಲನೆದೆಯಲ್ಲಿ ಚುಚ್ಚಿಕೊಂಡವು. ವೀರಮಣಿಯ ಕವಚ ಕಿರೀಟಗಳನ್ನು, ರಥ ಧನುಸ್ಸುಗಳನ್ನು ಪುಷ್ಕಲನ ನೂರು ಬಾಣಗಳು ಪುಡಿ ಮಾಡಿದವು.

ವೀರಮಣಿ ಇನ್ನೊಂದು ರಥವನ್ನೇರಿ ನುಡಿದ, 'ರಾಮಭಕ್ತನಾದ ವೀರನೆ, ನೀನು ಧನ್ಯ ನನ್ನ ರಥವನ್ನು ಮುರಿದ ನೀನು ಮಹಾಕಾರ್ಯವನ್ನೆ ಮಾಡಿದಂತಾಯಿತು. ಈಗ ನಾನು ಯುದ್ಧಮಾಡುವೆ. ನೀನು ನಿನ್ನ ಪ್ರಾಣಗಳನ್ನು ಕಾಪಾಡಿಕೊಳ್ಳು. ಅದು ಸುಲಭವಲ್ಲ. ಕಾಲ ಯಮನಂತೆ ನಾ ನಿಂತಿದ್ದೇನೆ, ನೋಡು.

ಹೀಗೆ ಹೇಳಿ ಅಸಂಖ್ಯ ಬಾಣಗಳನ್ನೆಸೆದ ವೀರಮಣಿರಾಜ. ಭೂಮಿ ಅಂತರಿಕ್ಷಗಳಲ್ಲೆಲ್ಲಿ ನೋಡಿದರೂ ಅವನ ಬಾಣಗಳ ಹೊರತು ಬೇರೇನೂ ಕಾಣುತ್ತಿರಲಿಲ್ಲ. ಆನೆ ಕುದುರೆ ರಥಗಳೆಲ್ಲ ಧ್ವಂಸವಾದವು. ರಕ್ತದ ಹೊಳೆ ಹರಿಯಿತು. ಆ ಹೊಳೆಯಲ್ಲಿ ಆನೆಗಳ ಮೃತದೇಹಗಳೆ ಬೆಟ್ಟದ ಶಿಖರಗಳು. ಮಡಿದ ವೀರರ ತಲೆಕೂದಲುಗಳೆ ಪಾಚಿ. ಅವರ ರುಂಡಗಳೆ ಆಮೆಗಳು. ಮಾಂಸವೆ ಕೆಸರು. ಕಡಿದು ಬಿದ್ದ ತೋಳುಗಳೆ ಸರ್ಪಗಳು. ಇಂಥ ರಕ್ತದ ಹೊಳೆಯನ್ನು ಕಂಡು ಯೋಗಿನಿಯರಿಗೆ ಹಬ್ಬವಾಯಿತು. ನೆತ್ತರು ಕುಡಿದರು, ಮಾಂಸತಿಂದರು, ತಿರುಗಿ ನೆತ್ತರ ಕುಡಿದರು, ತಿರುಗಿ ಮಾಂಸತಿಂದರು. ಉನ್ಮಾದಗೊಂಡು ಕುಣಿದರು. ಅಟ್ಟಹಾಸಗೈದರು. ಪಿಶಾಚಿಗಳೂ ತಲೆಬುರುಡೆಗಳನ್ನು ಹಿಡಿದು ತಾಳ ವಾದ್ಯದಂತೆ ಬಾರಿಸುತ್ತ ಜೋರಾಗಿ ಹಾಡುತ್ತ ಉನ್ಮತ್ತತೆಯಿಂದ ಕುಣಿದವು, ನರಿಗಳೂ ಮಾಂಸವನ್ನು ತಿಂದು ವಿಕಾರವಾಗಿ ಕೂಗಿದವು. ಇದರಿಂದ ರಣಹೇಡಿಗಳು ಇನ್ನಷ್ಟು ಭಯಗೊಂಡು ಮಡಿದ ಆನೆಗಳ ದೇಹದೆಡೆಗಳಲ್ಲಿ ಮರೆಯಾಗಿರಲು ಯತ್ನಿಸಿದರು. ಆದರೇನು ? ಯೋಗಿನಿಯರು ಅವರನ್ನು ಹಿಡಿದು ತಿಂದರು. 'ಪಾಪಿನಾಂ ಕ್ವಾಪಿ ನ ಸ್ಥಿತಿಃ' ಪಾಪಿಗಳಿಗೆ ಎಲ್ಲಿಯೂ ಕ್ಷೇಮವಿಲ್ಲ.

ಪುಷ್ಕಲನೂ ಶತ್ರುಸೇನೆಯ ಆನೆಗಳನ್ನು ಹೊಡೆದು ಅವುಗಳ ಕುಂಭಸ್ಥಳದ ಮುತ್ತುಗಳನ್ನು ಉದುರಿಸಿದ. ಕೂದಲುಗಳೆಲ್ಲೆಲ್ಲೊ ಹರಿಡಕೊಂಡಿದ್ದವು. ಹೀಗೆ ರಕ್ತದ ನದಿ ತಾಮ್ರಪರ್ಣಿಯೆ ಆಯಿತು. ವೀರರೆಲ್ಲ ಮಡಿದರು. ರಕ್ತದಲ್ಲಿ ಮಿಂದರು. ಅಂಗಹೀನರಾದರು. ಮುತ್ತುಗದ ಮರಗಳಂತೆ ಕಂಡರು. ವೀರಮಣಿಯ ಕವಚವೂ ಪುಡಿಯಾಯಿತು. ಮೈಯೆಲ್ಲ ಗಾಯಗೊಂಡಿತು.

ವೀರಮಣಿಯ ಬಾಣಗಳು ಪುಷ್ಕಲನ ಕವಚವನ್ನು ಭೇದಿಸಿ ಶರೀರದಲ್ಲೆಲ್ಲ ಚುಚ್ಚಿಕೊಂಡವು. ಪುಷ್ಕಲನೀಗ ಶರಪಂಜರದೊಳಗಿರುವಂತಾಯಿತು, ಬಾಣಗಳನ್ನೆತ್ತಿ ಕೊಳ್ಳುವುದಾಗಲಿ ಬಿಲ್ಲಿಗೆ ಹೂಡುವುದಾಗಲಿ ಅಶಕ್ಯವೆನಿಸಿತು. ಆದರೂ ರಾಮನನ್ನು ಧ್ಯಾನಿಸಿ ತೀಕ್ಷ್ಣವಾದ ಬಾಣಗಳನ್ನು ಪ್ರಯೋಗಿಸಿ ತನ್ನ ಮೈಯಲ್ಲಿ ನೆಟ್ಟಿದ್ದ ಬಾಣಗಳನ್ನು ತೆಗೆದ, ಶಂಖ ಊದಿ ನಿರ್ಭೀತಿಯಿಂದ ನುಡಿದ.

**ಪುಷ್ಕಲ :-** ವೀರನೆ, ನನ್ನನ್ನು ಶರಪಂಜರದೊಳಗೆ ಬಂಧಿಸಿದುದು ನಿಜವಾಗಿಯೂ ಒಂದು ದೊಡ್ಡ ಕಾರ್ಯವೇ ಸರಿ. ನೀನು ವೃದ್ಧ, ನನಗೆ ಮಾನ್ಯ, ಈಗ ನನ್ನ ಪರಾಕ್ರಮವನ್ನು ನೋಡಲಿರುವೆ, ಕೇಳು, ನನ್ನ ಪ್ರತಿಜ್ಞೆಯನ್ನು, ಮೂರು ಬಾಣಗಳಿಂದ ನಿನ್ನನ್ನು ಮೂರ್ಛೆಗೊಳಿಸದಿದ್ದರೆ ಗಂಗೆಯು ಬಳಿಯಲ್ಲಿದ್ದೂ ಅದನ್ನು ನಿಂದಿಸುತ್ತ ಸ್ನಾನಮಾಡಲೊಲ್ಲದ ಮಹಾಪಾಪಿ ಮೂರ್ಖ ಶಿರೋಮಣಿಗಾಗುವ ಪಾಪ ನನಗೆ ಉಂಟಾಗಲಿ. ವೀರಮಣಿಯೆ. ಸನ್ನದ್ಧನಾಗಿ ನಿಲ್ಲು.

ಈ ಮಾತನ್ನು ಕೇಳಿ ವೀರಮಣಿ ಕುಪಿತನಾಗಿ ಪುಷ್ಕಲನೆದೆಗೆ ತೀಕ್ಷ್ಣ ಬಾಣಗಳನ್ನೆಸೆದ. ಆದರೆ ರಾಮಭಕ್ತಿ ಶೂನ್ಯರಾದವರು ಅಧಃಪತನ ಹೊಂದುವಂತೆ ಆ ಬಾಣಗಳೆಲ್ಲ ಕೆಳಗೆ ಬಿದ್ದವು.

ಪುಷ್ಕಲನೀಗ ಬೆಂಕಿಯಂತೆ ಜ್ವಲಿಸುವ ಒಂದು ಬಾಣವನ್ನು ವೀರಮಣಿಯ ವಿಶಾಲವಾದ ಎದೆಗೆ ಗುರಿಯಿಟ್ಟು ಹೊಡೆದನು. ಆದರೆ ಅದು ವೀರಮಣಿಯ ಬಾಣದಿಂದ ಮುಗಿದು, ಜ್ವಲಿಸುವ ಭೂಮಂಡಲದಂತೆ ಉರಿಯುತ್ತ ಬಿದ್ದಿತು. ಪುಷ್ಕಲನು ತನ್ನ ಮಾತೃಭಕ್ತಿಯ ಪುಣ್ಯವನ್ನಿಟ್ಟು ಇನ್ನೊಂದು ಬಾಣವನ್ನೆಸೆದ. ಅದೂ ಮಧ್ಯದಲ್ಲಿಯೆ ಕಡಿದು ಬಿದ್ದಿತು. ಖಿನ್ನವಾಗಿ ಏನುಮಾಡಲಿ ಎಂದು ಒಂದು ಕ್ಷಣ ಚಿಂತಿಸಿ ರಾಮನ ಸ್ಮರಣೆ ಮಾಡುತ್ತ ಸೂರ್ಯನಂತೆ ಜ್ವಲಿಸುವ ಇನ್ನೊಂದು ಬಾಣವನ್ನು ಎಸೆದ ಪುಷ್ಕಲ. ಅದು ಸರ್ಪದಂತೆ ವೀರಮಣಿಯ ಹೃದಯದಲ್ಲಿ ನೆಟ್ಟುಕೊಂಡು ಅವನನ್ನು ಮೂರ್ಛೆಗೊಳಿಸಿತು. ರಾಜ ಮೈಮರೆತು ಬಿದ್ದ, ಪುಷ್ಕಲ ಗೆದ್ದ.

**ಶೇಷ :-** ಇತ್ತ ಹನುಮಂತನು ವೀರ ಸಿಂಹನನ್ನು ಅಡ್ಡಗಟ್ಟಿ ನಿಂತು 'ವೀರನೆ, ಎಲ್ಲಿಗೆ ಹೋಗುವೆ ? ನಿಲ್ಲು, ಒಂದು ಕ್ಷಣದಲ್ಲಿ ನಿನ್ನನ್ನು ಗೆಲ್ಲುವೆ'. ಎಂದು ನುಡಿದಾಗ ವೀರಸಿಂಹನು ಕುಪಿತನಾಗಿ ಬಿಲ್ಲ ಹಗ್ಗವನ್ನೆಳೆದ. ಒಮ್ಮೆಲೆ ಸಿಡಿಲು ಮೊಳಗಿದಂತಾಯಿತು. ಆಷಾಢದ ಧಾರಾಕಾರವಾದ ಜಡಿಮಳೆಯಂತೆ ಬಾಣಗಳ ಸುರಿಮಳೆಯಾಯಿತು. ಹನುಮಂತನು ವಜ್ರ ಮುಷ್ಟಿಯಿಂದ ಅವನೆದೆಗೆ ಹೊಡೆದ, ಆತ ಮೂರ್ಛೆಗೊಂಡು ಬಿದ್ದ. ಇದನ್ನು ನೋಡಿ ಶುಭಾಂಗದನೂ, ಆಗ ತಾನೆ ಮೂರ್ಛೆ ತಿಳಿದು ಎದ್ದು ಬಂದಿದ್ದ ರುಕ್ಮಾಂಗದನೂ ಹನುಮಂತನ ಮೇಲೆ ಬಾಣಗಳ ಮಳೆ ಸುರಿದರು. ಹನುಮಂತನು ಅವರನ್ನು ರಥಸಮೇತವಾಗಿ ಬಾಲದಿಂದ ಬಿಗಿದು ಎತ್ತಿ ನೆಲಕ್ಕಪ್ಪಳಿಸಿದ. ಅವರು ಮೂರ್ಛೆಗೊಂಡು ರಕ್ತದ ಮಡುವಿನಲ್ಲಿ ಬಿದ್ದರು. ಅತ್ತ ಬಲಮಿತ್ರನು ಸುಮದನೊಂದಿಗೆ ಕಾದಿ ಅವನನ್ನು ಮೂರ್ಛೆಗೊಳಿಸಿದರೂ ಪುಷ್ಕಲನ ಬಾಣಗಳೇಟಿಗೆ ಸಿಲುಕಿ ಕ್ಷಣ ಮಾತ್ರದಲ್ಲಿ ತಾನೂ ಮೂರ್ಛೆಗೊಂಡು ಬಿದ್ದ. ಹೀಗೆ ಶತ್ರುಘ್ನನ ಸೇನೆ ಜಯ ಗಳಿಸಿತು.

ಅಷ್ಟರಲ್ಲಿ ಶಿವನು ರಥವನ್ನೇರಿ ಧನುಷ್ಟಂಕಾರ ಮಾಡುತ್ತ ಶತ್ರುಘ್ನನ ಸೇನೆಯ ಕಡೆಗೆ ಮುನ್ನುಗ್ಗಿದ. ತನ್ನ ಭಕ್ತನಾದ ವೀರಮಣಿಯ ಕಡೆಯವರೆಲ್ಲರೂ ಮೂರ್ಛೆ ಬಿದ್ದಿರುವುದನ್ನು ಕಂಡು ತನ್ನೆಲ್ಲ ಗಣಗಳೊಂದಿಗೆ ಭೂಮಿಯನ್ನು ನಡುಗಿಸುತ್ತ ರಣರಂಗಕ್ಕೆ ಕಾಲಿಟ್ಟಿದ್ದ ಶಿವ. ತ್ರಿಪುರಸಂಹಾರ ಕಾಲದ ಆ ಉಗ್ರ ಪ್ರಳಯಕಾರಕ ರೂಪವನ್ನು ತೋರುತ್ತ ಶಿವ ಬರುತ್ತಿದ್ದುದನ್ನು ಕಂಡು ಶತ್ರುಘ್ನನು ಇದಿರು ಬಂದುನಿಂತ. ಶಿವನೆಂದ, 'ರಾಮಭಕ್ತನಾದ ಪುಷ್ಕಲ ನನ್ನ ಭಕ್ತನನ್ನು ಮೂರ್ಛೆಗೊಳಿಸಿ ಒಂದು ಮಹಾ

ಕಾರ್ಯವನ್ನೆ ಸಾಧಿಸಿದ್ದಾನೆ. ಅವನೆಲ್ಲಿ ? ನನ್ನ ಭಕ್ತನನ್ನು ಹೊಡೆದ ಆತನನ್ನು ಕೊಂದರೆ ಮಾತ್ರ ನನಗೆ ಮನಃಸಮಾಧಾನ.'

ಹೀಗೆ ಹೇಳಿ ಶಿವನು ವೀರಭದ್ರನನ್ನು ಪುಷ್ಕಲನೆಡೆಗೆ. ನಂದಿಯನ್ನು ಹನುಮಂತನೆಡೆಗೆ, ಪ್ರಚಂಡನನ್ನು ಕುಶ ಧ್ವಜನಮೇಲೆ, ಭೃಂಗಿಯನ್ನು ಸುಬಾಹುವಿನ ಮೇಲೆ, ಚಂಡನನ್ನು ಸುಮದನ ಬಳಿಗೆ ಯುದ್ಧಕ್ಕೆ ಕಳಿಸಿದನು. ಪುಷ್ಕಲನು ವೀರಭದ್ರನನ್ನು ಎದುರಿಸಿ ಕಾದಲು ತೊಡಗಿದನು. ಅವನ ತ್ರಿಶೂಲವನ್ನು ಬಾಣಗಳಿಂದ ಕತ್ತರಿಸಿ ಸಿಂಹಗರ್ಜನೆ ಮಾಡಿದನು. ವೀರಭದ್ರನು ಖಟ್ವಾಂಗವನ್ನೆತ್ತಿ ಪುಷ್ಕಲನ ತಲೆಯ ಮೇಲೆ ಹೊಡೆದಾಗ ಆತ ಒಂದು ಕ್ಷಣ ಮೂರ್ಛೆಗೊಂಡು ತಿರುಗಿ ಎದ್ದು ಆ ಖಟ್ವಾಂಗವನ್ನು ಮುರಿದುಹಾಕಿದನು. ವೀರಭದ್ರನು ಕೋಪದಿಂದ ಪುಷ್ಕಲನ ರಥವನ್ನು ಮುರಿದ. ಪುಷ್ಕಲನೀಗ ಪದಾತಿಯಾಗಿ ವೀರಭದ್ರನನ್ನು ಮುಷ್ಟಿಯಿಂದ ತಿವಿದ. ಮುಷ್ಟಿಗೆ ಮುಷ್ಟಿ. ತೊಡೆಗೆ ತೊಡೆ. ಮಂಡೆಗೆ ಮಂಡಿ, ಹೀಗೆ ನಾಲ್ಕುದಿನಗಳ ಕಾಲ ಹಗಲು ರಾತ್ರಿ ಯುದ್ಧ ನಡೆಯಿತು. ಯಾರೂ ಸೋಲಲಿಲ್ಲ. ಯಾರೂ ಗೆಲ್ಲಲಿಲ್ಲ. ಐದನೆ ದಿನ ವೀರಭದ್ರ ಪುಷ್ಕಲನನ್ನೆತ್ತಿ ಆಕಾಶಕ್ಕೆ ನೆಗೆದ. ಅಲ್ಲಿ ಇಬ್ಬರೂ ದೇವದಾನವರು ದಂಗು ಪಡುವಂತೆ ಹೋರಾಡಿದರು. ಪುಷ್ಕಲನಿಗೆ ಈಗ ಕೋಪ ತಡೆಯಲಾಗಲಿಲ್ಲ. ವೀರಭದ್ರನನ್ನು ಕತ್ತಿನಲ್ಲಿ ಹಿಡಿದು ನೆಲಕ್ಕೊಗೆದುಬಿಟ್ಟ. ವೀರಭದ್ರನು ಆ ಏಟಿನಿಂದ ನೊಂದು ಪುಷ್ಕಲನನ್ನು ಕಾಲಿನಲ್ಲಿ ಹಿಡಿದು ಎತ್ತಿ ನೆಲಕ್ಕೊಗೆದ. ಒಡನೆ ತ್ರಿಶೂಲನದಿಂದ ಅವನ ತಲೆಯನ್ನು ತುಂಡರಿಸಿ ಗರ್ಜಿಸಿದ. ಈ ದೃಶ್ಯವನ್ನು ಕಂಡ ವೀರರೆಲ್ಲ ನಡುಗಿದರು, ಹಾಹಾಕಾರ ಮಾಡಿದರು.

ಪುಷ್ಕಲನು ಮಡಿದ ವಾರ್ತೆಯನ್ನು ಕೇಳಿದ ಶತ್ರುಘ್ನನು ಶೋಕವನ್ನು ತಡೆಯಲಾರದೆ ಕಂಪಿಸಿದ. ಅದನ್ನು ನೋಡಿ ಶಿವನೆಂದ.

**ಶಿವ :-** ವೀರನೆ, ರಣರಂಗದಲ್ಲಿ ನಿಂತು ನೀನು ಶೋಕಿಸಬಾರದು. ಯುದ್ಧದಲ್ಲಿ ಹೋರಾಡಿ ಮಡಿದರೆ ವೀರರಿಗೆ ಕೀರ್ತಿ. ಪುಷ್ಕಲನು ವೀರ. ಮಹಾಪ್ರಳಯಕಾರಿಯಾದ ವೀರಭದ್ರನೊಡನೆ ಐದು ದಿನಗಳ ಕಾಲ ಹೋರಾಡಿದನೆಂದರೇನು ಸಾಮಾನ್ಯವೆ ? ನನ್ನನ್ನು ಅಪಮಾನಗೊಳಿಸಿದ ದಕ್ಷನು ಒಂದು ಕ್ಷಣದೊಳಗೆ ಅವನ ಕೈಯಲ್ಲಿ ಮಡಿದ. ತ್ರಿಪುರರ ಸೇನೆಯ ಎಲ್ಲ ದೈತ್ಯರೂ ಒಂದು ಕ್ಷಣದಲ್ಲಿ ವೀರಭದ್ರನಿಂದ ನಾಶವಾದರು. ಪುಷ್ಕಲನು ನಿಜವಾಗಿಯೂ ಧನ್ಯನೆಂದು ಹೇಳಬೇಕು. ನೀನು ಶೋಕ ಮಾಡಬೇಡ. ಯುದ್ಧ ಮಾಡು. ನಾನು ನಿನಗೆ ಇದಿರಾಗಿ ನಿಂತಿದ್ದೇನೆ.

ಇದನ್ನು ಕೇಳಿ ಶತ್ರುಘ್ನ ಬಾಣಗಳನ್ನೆಸೆದು ಶಿವನ ಶರೀರವನ್ನು ಕ್ಷತ ವಿಕ್ಷತಗೊಳಿಸಿದ. ನೋಡುವವರಿಗೆ ಇದೊಂದು ದೊಡ್ಡ ಆಶ್ಚರ್ಯವೆನಿಸಿತು. ಅವರಿಬ್ಬರ ಬಾಣಗಳು ಆಕಾಶದಲ್ಲೆಲ್ಲ ತುಂಬಿ ಮೇಲೆ ನಿಂತು ನೋಡುವ ನಾರದ ಮಹರ್ಷಿಯನ್ನು ಅಚ್ಚರಿಗೊಳಿಸಿದವು. ಲೋಕಸಂಹಾರಕಾರಕವಾದ ಪ್ರಲಯದಂತಿತ್ತು. ಆ ಯುದ್ಧ. ಒಬ್ಬನು ಮೂಲೋಕಕ್ಕೆ ಪ್ರಳಯಕಾರಿ. ಇನ್ನೊಬ್ಬ ರಾಮಚಂದ್ರ ಮಹಾರಾಜನ ಒಡಹುಟ್ಟಿದ ತಮ್ಮ. ಇಬ್ಬರಲ್ಲಿ ಯಾರು ಗೆಲ್ಲುವರು ? ಯಾರು ಸೋಲುವರು ? ಏನೂ ತಿಳಯದಾಯಿತು.

ಹನ್ನೊಂದು ದಿನ ಯುದ್ಧ ಎಡೆಬಿಡದೆ ನಡೆಯಿತು. ಹನ್ನೆರಡನೆ ದಿನ ಯುದ್ಧ ಎಡೆಬಿಡದೆ ನಡೆಯಿತು. ಹನ್ನೆರಡನೆ ದಿನ ಶತ್ರುಘ್ನನು ಬ್ರಹ್ಮಾಸ್ತ್ರವನ್ನು ಬಿಟ್ಟ. ಶಿವನು ಅದನ್ನು ನುಂಗಿದ. ಬ್ರಹ್ಮಶಿರೋಸ್ತ್ರವನ್ನು ಎಸೆದ. ಶಿವನು ಅದನ್ನೂ ನಗುತ್ತ ನುಂಗಿದ.

ಶತ್ರುಘ್ನನು ಇದನ್ನು ನೋಡಿ ಆಶ್ಚರ್ಯದಿಂದ ದಿಙ್ಮೂಢನಾಗಿ ನಿಂತುಬಿಟ್ಟ. ಶಿವನ ಒಂದು ಅಸ್ತ್ರವು ಅವನ ಎದೆಯಲ್ಲಿ ನೆಟ್ಟು ಮೂರ್ಛೆತಂದಿತು. ಸೈನ್ಯದಲ್ಲಿ ಹಾಹಾಕಾರವೆದ್ದಿತು. ಶಿವನ ಗಣಗಳು ಇದಿರಿಗೆ ಸಿಕ್ಕವರನ್ನೆಲ್ಲ ನಾಶ ಮಾಡಿದವು. ಸುಬಾಹು ಸುಮದ ಮುಂತಾದ ವೀರರು ಶತ್ರುಘ್ನನ್ನೂ ಪುಷ್ಕಲನನ್ನೂ ರಥದಲ್ಲಿಟ್ಟುಕೊಂಡು ಅವರ ರಕ್ಷಣೆಗೆ ನಿಂತರು.

ಹನುಮಂತನು ಆಗ ಶ್ರೀರಾಮ ಸ್ಮರಣೆ ಮಾಡುತ್ತ ಬಾಲವನ್ನು ಕುಣಿಸುತ್ತ ವೀರರನ್ನು ಹುರಿದುಂಬಿಸಿ ಸಂಹಾರಕಾರಕನಾದ ರುದ್ರನ ಮುಂದೆ ಬಂದು ಯುದ್ಧಕ್ಕೆ ನಿಂತನು.

**ಶೇಷ** :- ಹನುಮಂತನು ಶಿವನು ಮಾಡುತ್ತಿರುವ ಯುದ್ಧವನ್ನು ಆಕ್ಷೇಪಿಸಿದನು.

**ಹನುಮಂತ** :- ಶಿವನೆ, ನೀನೀಗ ಧರ್ಮಕ್ಕೆ ವಿರುದ್ಧವಾಗಿ ನಡೆಯುತ್ತಿರುವೆ. ರಾಮಭಕ್ತರನ್ನು ಕೊಲ್ಲುತ್ತಿರುವ ನಿನಗೆ ತಕ್ಕ ಶಾಸ್ತಿ ಮಾಡಬೇಕಾಗಿದೆ. ನೀನು ಸದಾ ರಾಮ ಪಾದಗಳನ್ನು ಸ್ಮರಿಸುವವನೆಂದು ವೇದ ಋಷಿಗಳು ಹೇಳುವುದನ್ನು ಬಹುಬಾರಿ ಕೇಳಿದ್ದೇನೆ. ಆದರೆ ಅದೆಲ್ಲವೂ ಈಗ ಸುಳ್ಳಾಯಿತು. ಪುಷ್ಕಲನನ್ನು ಕೊಂದೆ, ಶತ್ರುಘ್ನನನ್ನು ಮೂರ್ಛೆಗೊಳಿಸಿದೆ. ಮೂಲೋಕವನ್ನೆ ಪ್ರಳಯ ಮಾಡಲು ಹೊರಟರೂ ನಿನ್ನನ್ನು ನಾನು ಬಿಡಲಾರೆ, ಈಗಲೆ ಕೊಲ್ಲುವೆ. ರಾಮನ ಭಕ್ತಿ ಇಲ್ಲದವ ನೀನು, ಸಿದ್ಧನಾಗು.

**ಶಿವ** :- ವೀರನೆ, ನೀನು ಹೇಳುವುದು ಸುಳ್ಳಲ್ಲ. ಶ್ರೀ ರಾಮಚಂದ್ರನು ನನಗೆ ಸ್ವಾಮಿಯಾಗಿರುವನು. ಆದರೂ ಅವನ ಕುದುರೆಯನ್ನು ನನ್ನ ಭಕ್ತನಾದ ವೀರಮಣಿಯ ಮಗ ಕಟ್ಟಿಹಾಕಿದ್ದಾನೆ. ವೀರಮಣಿಯ ಭಕ್ತಿಗೆ ವಶನಾಗಿರುವವ ನಾನು. ಹೇಗಾದರೂ ಆ ನನ್ನ ಭಕ್ತನನ್ನು ರಕ್ಷಿಸುವುದು ನನ್ನ ಹೊಣೆ. ಪರಿಸ್ಥಿತಿ ಹೀಗೆ ಇರುವುದರಿಂದ ಆ ರಾಮಚಂದ್ರನು ಕೃಪೆದೋರಿ ನಿಷ್ಠುರವಾದ ಈ ಭಕ್ತನನ್ನು ಸ್ವಲ್ಪ ಕೋಪದಿಂದಲೆ ನೋಡಲಿ.

ಯುದ್ಧ ಪ್ರಾರಂಭವಾಯಿತು. ಹನುಮಂತನು ದೊಡ್ಡ ಬಂಡೆ ಕಲ್ಲನ್ನೆತ್ತಿ ಶಿವನ ರಥದ ಮೇಲೆಸೆದು ಅದನ್ನು ಪುಡಿ ಮಾಡಿದ. ಆಕಾಶದಲ್ಲಿ ನೆರೆದು ನಿಂತು ನೋಡುತ್ತಿದ್ದ ದೇವತೆಗಳು ಈ ವೀರತನವನ್ನು ಬಾಯಿ ತುಂಬ ಹೊಗಳಿದರು. ಶಿವನ ರಥ ಮುರಿದು ಬಿದ್ದುದನ್ನು ಕಂಡು ನಂದಿ ಅವನ ಬಳಿಗೋಡಿ ಬಂದ. ತನ್ನ ಬೆನ್ನ ಮೇಲೇರುವಂತೆ ಕೇಳಿಕೊಂಡ. ಶಿವನು ಆತನ ಬೆನ್ನ ಮೇಲೆ ಕುಳಿತುದನ್ನು ಕಂಡ ಹನುಮಂತನು ಒಂದು ಸಾಲ ವೃಕ್ಷವನ್ನು ಕಿತ್ತಿ ಅವನ ಎದೆಗೆ ಹೊಡೆದ. ಶಿವನು ಬೆಂಕಿಯಂತೆ ಜ್ವಲಿಸುವ ತ್ರಿಶೂಲವನ್ನು ಎಸೆದರೆ ಅದನ್ನು ಹನುಮಂತ ಕೈಯಲ್ಲಿ ಹಿಡಿದು ಪುಡಿಪುಡಿ ಮಾಡಿದ. ಶಿವನು ಎಸೆದ ಶಕ್ತ್ಯಾಯುಧವು ಮಾತ್ರ ಹನುಮಂತನ ಎದೆಯಲ್ಲಿ ಚುಚ್ಚಿಕೊಂಡು ಕ್ಷಣಕಾಲ ಮೈ ಮರೆಯುವಂತೆ ಮಾಡಿತು. ಆದರೂ ಸಾವರಿಸಿಕೊಂಡು ಇನ್ನೊಂದು ದೊಡ್ಡ ಮರವನ್ನು ಕಿತ್ತಿ ಶಿವನೆದೆಗೆ ಹೊಡೆದನಾತ. ಒಡನೆ ಶಿವನೆದೆಯಲ್ಲಿದ್ದ ಹಾವುಗಳೆಲ್ಲ ಎಟು ತಿಂದು ಚದುರಿ ಪಾತಾಳದೊಳಗೆ ಸೇರಿಕೊಂಡವು. ತನ್ನೆದೆ

ಬರಿದಾದುದನ್ನು ಕಂಡ ಶಿವ ಕೋಪದಿಂದ ಎರಡು ಕೈಯಲ್ಲಿ ಮುಸಲಾಯುಧವನ್ನೆತ್ತಿ 'ಹಾಳು ಕೋತಿಯೆ, ನೀನೀಗ ಸತ್ತೆ. ಓಡು. ಇಲ್ಲದಿದ್ದರೆ ಈ ಮುಸಲದಿಂದ ಒಂದೇ ಕ್ಷಣದಲ್ಲಿ ನಿನ್ನ ಪ್ರಾಣ ತೆಗೆಯುತ್ತೇನೆ' ಎಂದ.

ಹನುಮಂತನು ರಾಮನನ್ನು ನೆನೆದು ಆ ಮಹಾಮುಸಲವನ್ನು ಮುರಿದು ಎಸೆದು ಬಿಟ್ಟ. ಅದು ಭೂಮಿಯನ್ನು ಸೀಳಿ ಪಾತಾಳಕ್ಕೆ ಹೋಗಿ ಬಿದ್ದಿತು. ಹನುಮಂತನೊಂದು ಪರ್ವತವನ್ನೆತ್ತಿ ಶಿವನ ಎದೆಯ ಮೇಲೆಸೆದ. ಶಿವನು ಆ ಪರ್ವತವನ್ನು ಭೇದಿಸಬೇಕೆಂದು ಪ್ರಯತ್ನಿಸುವಷ್ಟರಲ್ಲಿ ಒಂದು ದೊಡ್ಡ ಸಾಲವೃಕ್ಷದೇಟು, ಅದನ್ನು ತಡೆಯುವ ಯತ್ನ ಮಾಡುತ್ತಿದ್ದಂತೆ ಬಂಡೆ ಗಲ್ಲುಗಳ ಸುರಿಮಳೆ. ಮರ ಪರ್ವತಗಳೇಟು. ಬಾಲದಿಂದಲೂ ಸುತ್ತುತ್ತ ಹೊಡೆಯುತ್ತಿದ್ದ ಹನುಮಂತ. ಬಂಡೆಗಲ್ಲು ಪರ್ವತ ಮರಗಳ ಸುರಿಮಳೆ ಬಾಲದೇಟುಗಳಿಗೆ ಬೆದರಿ ನಂದಿಯೂ ಓಡಿಹೋದ, ಶಿವನ ತಲೆಯಲ್ಲಿದ್ದ ಚಂದ್ರನೂ ಪುಡಿಪುಡಿಯಾದ. ಕ್ಷಣಕ್ಷಣಕ್ಕೂ ಹೆಚ್ಚಿತು ಹನುಮಂತನ ಆಕ್ರಮಣ. ಶಿವನು ಅತ್ಯಂತ ವಿಹ್ವಲನಾಗಿ ನುಡಿದ.

**ಶಿವ :-** ರಾಮನ ಬಂಟನೆ, ನೀನು ಧನ್ಯ. ನಿನ್ನ ಅಸಾಧಾರಣ ಬಲವನ್ನು ಕಂಡು ನಾನು ಮಾರುಹೋಗಿದ್ದೇನೆ. ಸಾಧಾರಣ ದಾನ ಯಜ್ಞ ತಪಸ್ಸುಗಳಿಗೆ ಒಲಿಯದವ ನಾನು ಈಗ ನಿನಗೊಲಿದಿದ್ದೇನೆ. ನನ್ನಿಂದೇನಾದರೂ ವರವನ್ನು ಕೇಳು.

**ಹನುಮಂತ :-** ಶ್ರೀರಾಮನ ಅನುಗ್ರಹದಿಂದ ನನಗೆ ಬೇಕಾದುದೆಲ್ಲ ನನ್ನಲ್ಲೆ ಇದೆ. ಆದರೂ ನನ್ನ ಯುದ್ಧ ಸಾಮರ್ಥ್ಯಕ್ಕೆ ನೀನು ಮೆಚ್ಚಿರುವುದರಿಂದ ಒಂದು ವರವನ್ನು ಕೇಳುತ್ತೇನೆ. ಯುದ್ಧದಲ್ಲಿ ಮಡಿದ ಪುಷ್ಕರ, ಮೂರ್ಛೆಗೊಂಡ ಶತ್ರುಘ್ನ ಮತ್ತು ಮೂರ್ಛಿತರೋ ಮೃತರೋ ಆಗಿ ಬಿದ್ದಿರುವ ನಮ್ಮೆಲ್ಲ ವೀರರನ್ನು ನೀನೂ ನಿನ್ನ ಗಣಗಳೂ ಕಾಪಾಡಿಕೊಂಡಿರಬೇಕು. ಭೂತ ಭೇತಾಳ ಪಿಶಾಚಿಗಳೂ ನರಿ ಗೂಬೆ ಮುಂತಾದವುಗಳೂ ಅವರನ್ನು ಹರಿದು ತಿನ್ನದಂತೆ ನೋಡಿಕೊಳ್ಳಬೇಕು. ನಾನು ಬೇಗನೆ ಇಂದ್ರನನ್ನು ಯುದ್ಧದಲ್ಲಿ ಪರಾಭವಗೊಳಿಸಿ ಸಂಜೀವಿನಿ ಔಷಧಗಳಿಂದ ತುಂಬಿದ ದ್ರೋಣ ಪರ್ವತವನ್ನೆತ್ತಿ ತರುತ್ತೇನೆ. ಆ ಔಷಧಗಳಿಂದ ಎಲ್ಲರನ್ನೂ ಬದುಕಿಸುತ್ತೇನೆ. ಅಷ್ಟುಕಾಲ ನೀನೂ ನಿನ್ನ ಗಣಗಳೂ ಅವರನ್ನು ನೋಡಿಕೊಂಡಿರಬೇಕು.

ಶಿವನು 'ಅಸ್ತು' ಎಂದೊಡನೆ ಹನುಮಂತನು ದ್ರೋಣ ಪರ್ವತಕ್ಕೆ ಹಾರಿ ಅದನ್ನು ಬಾಲದಿಂದ ಸುತ್ತಿ ಎತ್ತಿಕೊಂಡ. ಪರ್ವತವು ಆಗ ಕಂಪಿಸಿತು. ಅದರ ರಕ್ಷಣೆ ಮಾಡುತ್ತಿದ್ದ ದೇವತೆಗಳು ಹನುಮಂತನನ್ನು ತಡೆದರು. ಶಸ್ತ್ರಾಸ್ತ್ರಗಳನ್ನೆಸೆದರು. ಹನುಮಂತನು ಕೋಪಗೊಂಡು ಅವರನ್ನು ಕಾಲು ಕೈ ಬಾಲಗಳಿಂದ ಹೊಡೆದೋಡಿಸಿದ. ಕೆಲವರನ್ನು ಅಲ್ಲಿಯೆ ಕೆಡಹಿದ. ಭಯದಿಂದೋಡಿದವರು ಇಂದ್ರನಲ್ಲಿ ದೂರುಕೊಟ್ಟರು. 'ಕಪಿರೂಪದ ಯಾವನೊ ಒಬ್ಬನು ದ್ರೋಣಪರ್ವತವನ್ನೆತ್ತಿ ಒಯ್ಯತೊಡಗಿದಾಗ ನಾವು ತಡೆದೆವು. ಆದರೆ ಅವನು ಮಹಾ ಬಲಶಾಲಿ. ನಮ್ಮವರೆಲ್ಲರೂ ಏಟು ತಿಂದು ಬಿದ್ದಿರುವರು. ನಾವು ಗಾಯಗೊಂಡು ಹೇಗೊ ಪುಣ್ಯದಿಂದ ಇಲ್ಲಿಯವರೆಗೆ ಬಂದಿದ್ದೇವೆ' ಎಂದರು.

ಇಂದ್ರನು ಎಲ್ಲ ದೇವತೆಗಳನ್ನು ಕರೆದು ಕಪಿಯನ್ನು ಕಟ್ಟಿ ಎಳೆದು ತರಲು ಅಜ್ಞಾಪಿಸಿದ. ಅವರೆಲ್ಲರೂ ಬಂದು ಶೂಲ, ಪರಶು, ಖಡ್ಗ ಮುಸಲ ಮುಂತಾದ ಎಲ್ಲ

ಶಸ್ತ್ರಾಸ್ತ್ರಗಳನ್ನು ಎಸೆದರು. ಆದರೆ ಹನುಮಂತನೆಸೆದ ಬಂಡೆಕಲ್ಲುಗಳ ಏಟನ್ನು ತಾಳಲಾರದೆ ತಿರುಗಿ ಇಂದ್ರನ ಬಳಿಗೆ ಓಡಿದರು. ಇಂದ್ರನು ಬೃಹಸ್ಪತ್ಯಾಚಾರ್ಯರ ಬಳಿಯಲ್ಲಿ 'ಇದು ಯಾವ ಕಪಿ ? ವೀರ ದೇವತೆಗಳನ್ನೂ ಹೊಡೆದೋಡಿಸಿ ದ್ರೋಣ ಪರ್ವತವನ್ನೆತ್ತಿ ಕೊಂಡೊಯುತ್ತಿದೆ !' ಎಂದನು. ಬೃಹಸ್ಪತಿ ಭಯಗೊಂಡ ಇಂದ್ರನನ್ನು ಸಂತೈಸುತ್ತ ನುಡಿದ.

**ಬೃಹಸ್ಪತಿ** :- ದೇವೇಂದ್ರ, ಈ ಕಪಿ ಬೇರೆ ಯಾರೂ ಅಲ್ಲ. ರಾವಣ ಕುಂಭಕರ್ಣರಂಥ ರಾಕ್ಷಸರನ್ನೆಲ್ಲ ಪುಡಿಗೈದ ಶ್ರೀರಾಮನ ಬಂಟ ಹನುಮಂತನೆ ಈತ. ಬಾಲದ ಬೆಂಕಿಯಿಂದ ಲಂಕಾನಗರಿಯನ್ನೆ ಸುಟ್ಟವ. ಅಕ್ಷಕುಮಾರನನ್ನು ಕೊಂದವ. ಈಗ ಶ್ರೀರಾಮನು ಅಶ್ವಮೇಧಕ್ಕೆ ತೊಡಗಿದ್ದಾನೆ. ಅವನ ಕುದುರೆಯನ್ನು ಶಿವಭಕ್ತ ವೀರಮಣಿ ರಾಜನು ಅಪಹರಿಸಿದುದರಿಂದ ದೊಡ್ಡ ಯುದ್ಧ ನಡೆದಿದೆ. ಶಿವನ ಕೈಯಲ್ಲಿ ಹತರಾದ, ಗಾಯಗೊಂಡ ವೀರರನ್ನು ಬದುಕಿಸಲು ಸಂಜೀವನಯಂಥ ಔಷಧಿಗಳಿಗಾಗಿ ದ್ರೋಣಪರ್ವತವನ್ನು ಒಯ್ಯುತ್ತಿದ್ದಾನೆ ಹನುಮಂತ. ನೀನು ಎಷ್ಟು ನೂರು ವರ್ಷಗಳ ಕಾಲ ಹೋರಾಡಿದರೂ ಅವನನ್ನು ಜಯಿಸಲಾರೆ. ಅವನನ್ನು ಸಮಾಧಾನ ಪಡಿಸು. ಆ ಪರ್ವತದಲ್ಲಿರುವ ಔಷಧಿಗಳನ್ನು ಅವನ ಕೈಗೆ ಕೊಡು.

**ಶೇಷ** :- ರಾಮ ಕಾರ್ಯಕ್ಕಾಗಿ ಬಂದವನು ಈ ಹನುಮಂತನೆಂದು ತಿಳಿದ ಮೇಲೆ ಇಂದ್ರನ ಭಯ ದೂರವಾಯಿತು. ಮನಸ್ಸು ಸಂತೋಷಗೊಂಡಿತು. ಆದರೂ ದ್ರೋಣಪರ್ವತವನ್ನು ಎತ್ತಿಕೊಂಡು ಹೋದರೆ ಮುಂದೆ ದೇವತೆಗಳಿಗೇನು ಗತಿ ? ಈ ಪ್ರಶ್ನೆಗೆ ಬೃಹಸ್ಪತಿಯು ಹೇಳಿದರು 'ಈಗ ಹೇಗಾದರೂ ಹನುಮಂತನನ್ನು ಸಮಾಧಾನಗೊಳಿಸು. ಇದರಿಂದ ರಾಮನಿಗೆ ಸಂತೋಷವಾದರೆ ದೇವತೆಗಳಿಗೇನೂ ತೊಂದರೆ ಇಲ್ಲ.

ಹೀಗೆ ಹೇಳಿ ಇಂದ್ರನ ಅಪೇಕ್ಷೆಯಂತೆ ಎಲ್ಲ ದೇವತೆಗಳನ್ನೂ ಕರೆದುಕೊಂಡು ಹನುಮಂತನ ಬಳಿಗೆ ಹೋಗಿ ಅವನ ಕಾಲಿಗೆ ಬಿದ್ದ.

**ಬೃಹಸ್ಪತಿ** :- ದೇವತೆಗಳು ತಿಳಿಯದೆ ಮಾಡಿದ ತಪ್ಪನ್ನು ಮನ್ನಿಸು. ರಾಮನ ಬಂಟ ನೀನೆಂಬುದು ಅವರಿಗೆ ತಿಳಿದಿರಲಿಲ್ಲ. ಈಗ ನೀನು ಏತರ ಸಲುವಾಗಿ ಬಂದೆ ಹೇಳು. ನೀನು ಹೇಳಿದಂತೆ ನಾವೆಲ್ಲರೂ ಮಾಡುವೆವು. ಕೋಪವನ್ನು ಬಿಡು. ಕೃಪೆದೋರು, ದೇವೇಂದ್ರನ ಮೇಲೆ ಕೃಪಾಕಟಾಕ್ಷ ಬೀರು.

**ಹನುಮಂತ** :- ವೀರಮಣಿ ರಾಜನೊಡನೆ ನಡೆದ ಯುದ್ಧದಲ್ಲಿ ಶಿವನು ನಮ್ಮ ವೀರರನ್ನು ಕೊಂದಿದ್ದಾನೆ. ಅವರನ್ನು ಬದುಕಿಸಲು ಸಂಜೀವನಿ ಔಷಧಿಗಳು ಬೇಕು. ಅದಕ್ಕಾಗಿ ದ್ರೋಣಪರ್ವತವನ್ನು ಒಯ್ಯುತ್ತಿದ್ದೇನೆ. ನೀವು ದರ್ಪದಿಂದ ನನ್ನನ್ನು ತಡೆದರೆ ನಾಶ ಹೊಂದುವಿರಿ. ಪರ್ವತವನ್ನು ಕೊಡಿ, ಇಲ್ಲವೆ ನನಗೆ ಬೇಕಾಗಿರುವ ಆ ಔಷಧಿಗಳನ್ನು ಕೊಡಿರಿ.

ಇದನ್ನು ಕೇಳಿ ದೇವತೆಗಳು ಸಂಜೀವಿನಿ ಔಷಧವನ್ನು ಕಿತ್ತಿ ತಂದು ಹನುಮಂತನಿಗೆ ಒಪ್ಪಿಸಿದರು. ಹನುಮಂತನು ಅದನ್ನು ತಂದು ಮೊದಲಿಗೆ ಪುಷ್ಕಲನ ಎದೆಯ ಮೇಲಿಟ್ಟು ತಲೆಯನ್ನು ಶರೀರಕ್ಕೆ ಜೋಡಿಸಿ 'ನಾನು ಸದಾ ತ್ರಿಕರಣಗಳಿಂದಲೂ ರಾಮನನ್ನೆ

ಸ್ವಾಮಿಯೆಂದು ನಂಬಿರುವೆನಾದರೆ ಈ ಔಷಧದಿಂದ ಪುಷ್ಕಲನು ಬದುಕಿ ಎದ್ದೇಳಲಿ' ಎಂದು ಹೇಳಿದ. ಒಡನೆ ಪುಷ್ಕಲನು ಎದ್ದು ರೋಷದಿಂದ ಹಲ್ಲು ಕಡಿಯುತ್ತ 'ಎಲ್ಲಿ ವೀರಭದ್ರ ? ಎಲ್ಲಿ ನನ್ನ ಧನುಸ್ಸು ?' ಎನ್ನ ತೊಡಗಿದ.

ಹನುಮಂತನೆಂದ, 'ರಣರಂಗದಲ್ಲಿ ತಿರುಗಿ ಮೊಲಿನಂತೆ ಹೀಗೆ ಗರ್ಜಿಸುತ್ತಿರುವ ನೀನು ಧನ್ಯ. ವೀರಭದ್ರನು ನಿನ್ನನ್ನು ಕೊಂದಿದ್ದ. ಈಗ ರಾಮನ ಅನುಗ್ರಹದಿಂದ ತಿರುಗಿ ಬದುಕಿ ಬಂದಿರುವೆ. ಈಗ ನನ್ನ ಜತೆಗೆ ಬಾ. ಅಲ್ಲಿ ಶತ್ರುಘ್ನನೂ ಮೂರ್ಛಿತನಾಗಿ ಬಿದ್ದಿದ್ದಾನೆ. ಹೋಗೋಣ' ಶತ್ರುಘ್ನನ ಬಳಿಗೆ ಹೋಗಿ ಅವನೆದೆಯಲ್ಲಿ ಔಷಧವನ್ನಿಟ್ಟು ಹೇಳಿದ, ಹನುಮಂತ. 'ಶತ್ರುಘ್ನ, ಏಳು, ಏಕೆ ಮೈಮರೆತು ಬಿದ್ದಿರುವೆ ? ಮಹಾಪರಾಕ್ರಮಿ, ನೀನು. ನಾನು ಅಜನ್ಮ ಬ್ರಹ್ಮಚಾರಿಯಾಗಿರುವುದು ನಿಜವಾದರೆ ನೀನು ಒಂದುಕ್ಷಣದಲ್ಲಿ ಎದ್ದು ನಿಲ್ಲಬೇಕು.' ಒಡನೆ ಶತ್ರುಘ್ನನೆದ್ದು 'ಎಲ್ಲಿ ಶಿವ ?' ಎಂದು ಅರ್ಭಟಿಸಿದ. ಹೀಗೆ ಎಲ್ಲ ವೀರರೂ ಚೇತರಿಸಿಕೊಂಡು ಎದ್ದರು. ತಮ್ಮ ತಮ್ಮ ರಥಗಳನ್ನೇರಿ ಯುದ್ಧಕ್ಕೆ ಅಣಿಯಾದರು.

ಪುಷ್ಕಲನು ವೀರಭದ್ರನೊಂದಿಗೆ ಹೋರಾಟಕ್ಕಿಳಿದ. ಕುಶಧ್ವಜನು ಚಂಡನೊಡನೆ, ಹನುಮಂತನು ನಂದಿಯೊಡನೆ, ಶತ್ರುಘ್ನನು ಶಿವನೊಡನೆ ಹೋರಾಡತೊಡಗಿದರು ವೀರಮಣಿರಾಜ ಶತ್ರುಘ್ನನ ಬಳಿಗೆ ಬಂದು ತಾನೆ ಆತನೊಂದಿಗೆ ಯುದ್ಧಕ್ಕಿಳಿದ. ಕ್ಷಣಮಾತ್ರದಲ್ಲಿ ಶತ್ರುಘ್ನನ ರಥಗಳನ್ನು ಮುರಿದ. ಅವನ ಆಗ್ನೇಯಾಸ್ತ್ರಕ್ಕೆ ಪ್ರತಿಯಾಗಿ ವಾರುಣಾಸ್ತ್ರವನ್ನೆಸೆದ. ಅದಕ್ಕೆ ವಾಯವ್ಯಾಸ್ತ್ರವನ್ನು ಶತ್ರುಘ್ನ ಪ್ರಯೋಗಿಸಿದ. ವೀರಮಣಿ ಪರ್ವತಾಸ್ತ್ರವನ್ನೆಸೆದ, ಶತ್ರುಘ್ನ ವಜ್ರಾಸ್ತ್ರವನ್ನೆಸೆದ. ತಿರುಗಿ ವೀರಮಣಿ ಬ್ರಹ್ಮಾಸ್ತ್ರವನ್ನೆಸೆದ. ಶತ್ರುಘ್ನ ಯೋಗಿನೀದತ್ತವಾದ ಸಂಮೋಹನಾಸ್ತ್ರವನ್ನೆಸೆದ. ಅದು ಬ್ರಹ್ಮಾಸ್ತ್ರವನ್ನು ತುಂಡರಿಸಿ ವೀರಮಣಿಯ ಎದೆಯಲ್ಲಿ ನೆಟ್ಟು ಮೂರ್ಛೆ ತಂದಿತು.

ಬಳಿಕ ಶತ್ರುಘ್ನನು ವೀರಮಣಿಯ ವೀರರನ್ನೆಲ್ಲ ತನ್ನ ಬಾಣಪ್ರಯೋಗದಿಂದ ಮೂರ್ಛೆಗೊಳಿಸಿ ಶಿವನ ಗಣಗಳನ್ನೂ ಶಿವನ ಕಾಲಿನ ಬಳಿಯಲ್ಲಿ ನೆಲಕ್ಕೆ ಒರಗುವಂತೆ ಮಾಡಿದ. ಒಡನೆ ಶಿವ ಶತ್ರುಘ್ನರಿಗೆ ಘೋರ ಕದನ ನಡೆಯಿತು. ಮೇಲೆ ನಿಂತು ನೋಡುತ್ತಿದ್ದ ದೇವತೆಗಳೂ ಬೆದರಿದರು. ಕೊನೆಗೆ ಶತ್ರುಘ್ನನು ವ್ಯಾಕುಲಗೊಂಡು ಹನುಮಂತನ ಉಪದೇಶದಿಂದ ಶ್ರೀರಾಮನನ್ನು ಮನದಲ್ಲಿ ಚಿಂತಿಸಿ ಬೇಡಿದ ''ಅಣ್ಣಾ ಶ್ರೀರಾಮ, ಕರುಣಾನಿಧೇ, ಶಿವನು ಧನುರ್ಧಾರಿಯಾಗಿ ನನ್ನ ಮುಂದೆ ನಿಂತು ನನ್ನ ಪ್ರಾಣ ತೆಗೆಯುತ್ತಿದ್ದಾನೆ. ಕಾಪಾಡು. ನಿನ್ನ ನಾಮಸ್ಮರಣೆಯ ಬಲದಿಂದ ಅನೇಕರು ಆಪತ್ತುಗಳನ್ನು ಧೈರ್ಯದಿಂದ ಇದಿರಿಸಿದ್ದಾರೆ.''

ಒಡನೆ ದೀಕ್ಷಿತನಾದ ಶ್ರೀರಾಮ ಜಿಂಕೆಯ ಕೊಂಬನ್ನು ಹಿಡಿದೆ ರಣರಂಗದಲ್ಲಿ ಕಾಣಿಸಿಕೊಂಡ. ಶತ್ರುಘ್ನನು ನೋಡಿ ವಿಸ್ಮಯ ಹೊಂದಿದ.

**ಶೇಷ :-** ಶ್ರೀರಾಮನನ್ನು ಕಂಡೊಡನೆ ಶತ್ರುಘ್ನನ ದುಗುಡ ಪರಿಹಾರವಾಯಿತು. ಹನುಮಂತನೂ ಸಂಭ್ರಮದಿಂದ ಓಡಿಬಂದು ಕಾಲಿಗೆರಗಿದ. 'ಸ್ವಾಮಿ, ಭಕ್ತರನ್ನು ಪರಿಪಾಲನೆ ಮಾಡುವ ಕಾರ್ಯ ನಿನಗೊಬ್ಬನಿಗೇ ಯುಕ್ತವಾದದು. ರಣರಂಗದಲ್ಲಿ

ಶಿವನಿಂದ ಆಗುತ್ತಿದ್ದ ಅಪಾಯದಿಂದ ನಮ್ಮ ವೀರರನ್ನು ಬಿಡುಗಡೆ ಮಾಡಿರುವೆ. ನಿನ್ನ ಪಾದದರ್ಶನವನ್ನು ಪಡೆದ ನಾವೇ ಧನ್ಯರು. ನಿನ್ನ ಅನುಗ್ರಹದಿಂದ ಒಂದು ಕ್ಷಣದಲ್ಲಿ ವೈರಿಗಳನ್ನು ಗೆಲ್ಲುವೆವು' ಎಂದ.

ಶಿವನೂ ರಾಮನ ಪಾದಗಳಿಗೆ ನಮಿಸಿ ಹೇಳಿದ 'ನೀನು ಅದ್ವಿತೀಯ, ಸಾಕ್ಷಾತ್ ಪುರುಷರೂಪಿ. ಪ್ರಕೃತಿಗಿಂತ ವಿಲಕ್ಷಣ. ಒಂದು ನಿನ್ನ ಅಂಶದಿಂದ ನೀನು ಜಗತ್ತಿನ ಸೃಷ್ಟಿಸ್ಥಿತಿ ಲಯಗಳನ್ನು ಮಾಡುವೆ. ಪ್ರಾಕೃತ ರೂಪರಹಿತನಾಗಿದ್ದರೂ ಒಬ್ಬನೆ ಮೂರು ರೂಪವನ್ನು ಮಾಯೆಯಿಂದ ಸ್ವೀಕರಿಸಿ ಎಲ್ಲಕ್ಕೂ ಕಾರಣನೆನಿಸಿಸುವೆ. ಬ್ರಹ್ಮರೂಪದಿಂದ ಸೃಷ್ಟಿಗೆ ಕಾರಣನೆನಿಸುವೆ. ವಿಷ್ಣುರೂಪದಿಂದ ಸ್ಥಿತಿ ಕಾರಣನೆನಿಸುವೆ. ನನ್ನಲ್ಲಿ ಕುಳಿತು ಶಿವನೆನಿಸಿ ಪ್ರಳಯ ಕಾರಣನಾಗುವೆ. ಪರಮೇಶ್ವರನಾದ ನೀನು ಬ್ರಹ್ಮಹತ್ಯಾಪಾತಕದ ಪರಿಹಾರಕ್ಕಾಗಿ ಅಶ್ವಮೇಧಯಾಗ ಮಾಡುವುದೊಂದು ಅದ್ಭುತವಾದ ವಿಡಂಬನೆ. ನಿನ್ನ ಪಾದೋದಕವಾದ ಗಂಗೆಯನ್ನು ತಲೆಯಲ್ಲಿ ಧರಿಸಿ ನಾನು ನನ್ನ ಪಾಪಗಳನ್ನು ತೊಳೆದುಕೊಳ್ಳುತ್ತಿರುವಾಗ ನಿನಗೆ ಪಾಪವೆಂದರೇನು ? ನಾನು ನನ್ನ ಭಕ್ತನಿಗಾಗಿ ಈ ಯುದ್ಧವನ್ನು ಮಾಡಿರುವುದು ನಿನಗೆ ಗೊತ್ತು. ದಯಾಳುವಾದ ನೀನು ಕ್ಷಮಿಸು. ಈ ವೀರಮಣಿ ಹಿಂದೆ ಉಜ್ಜಯಿನಿಯಲ್ಲಿ ಸಿಪ್ರಾನದೀ ಸ್ನಾನ ಮಾಡಿ ಘೋರ ತಪಸ್ಸಿನಿಂದ ನನ್ನನ್ನು ಒಲಿಸಿಕೊಂಡ. ಅದ್ಭುತವಾದ ರಾಜ್ಯವೊಂದನ್ನು ಬೇಡಿದ. ನಾನೆಂದೆ 'ದೇವಪುರದೊಡೆತನ ನಿನ್ನದಾಗುವುದು. ರಾಮನ ಅಶ್ವಮೇಧದ ಕುದುರೆ ನಿನ್ನಲ್ಲಿಗೆ ಬರುವವರೆಗೂ ನಾನು ನಿನ್ನಲ್ಲೆ ಇದ್ದು ಕಾಪಾಡುವೆ. ಶ್ರೀರಾಮ, ನಾನು ಹೀಗೆ ವರವನ್ನು ಕೊಟ್ಟಮೇಲೆ ಏನು ಮಾಡಲಿ. ಸತ್ಯಕ್ಕೆ ಕಟ್ಟುಬಿದ್ದು ನಿನ್ನ ಸೇನೆಯೊಂದಿಗೆ ಕಾದಿದೆ. ಈಗ ನನಗೆ ಲಜ್ಜೆ ಉಂಟಾಗಿದೆ. ಈ ರಾಜನೂ ತನ್ನ ಎಲ್ಲ ಪರಿವಾರದೊಂದಿಗೆ ಬಂದು ಕುದುರೆಯನ್ನು ಒಪ್ಪಿಸಿ ನಿನ್ನ ಪಾದಸೇವೆ ಮಾಡುತ್ತಾನೆ.

ಶ್ರೀರಾಮ ಇದನ್ನು ಕೇಳಿ ದಯೆದುಂಬಿದ ಕಣ್ಣುಗಳಿಂದ ನೋಡುತ್ತ ನುಡಿದ.

**ಶ್ರೀರಾಮ :-** ಭಕ್ತರಕ್ಷಣೆ ದೇವತೆಗಳಿಗೊಂದು ಧರ್ಮ. ನೀನು ಅದನ್ನೆ ಮಾಡಿರುವೆ. ಇದರಲ್ಲಿ ತಪ್ಪಿಲ್ಲ. ನನ್ನ ಹೃದಯದಲ್ಲಿ ನೀನು, ನಿನ್ನ ಹೃದಯದಲ್ಲಿ ನಾನು. ಹೀಗೆ ಪ್ರೀತಿಯಿಂದಿರುವವರಲ್ಲಿ ಭೇದವೆಣಿಸುವುದ ಮೂರ್ಖತನ. ಅದರಿಂದ ಸಾವಿರ ಕಲ್ಪಗಳ ಕಾಲ ಕುಂಭೀಪಾಕ ನರಕವಾಸ ಉಂಟಾಗುವುದು. ಏಕೆಂದರೆ ನನ್ನ ಭಕ್ತರೆ ನಿನ್ನ ಭಕ್ತರು ನಿನ್ನ ಭಕ್ತರೆ ನನ್ನ ಭಕ್ತರು.

ಇದನ್ನು ಕೇಳಿ ಶಿವನು ವೀರಮಣಿಯನ್ನೂ, ಅವನ ಮಕ್ಕಳನ್ನೂ, ಪರಿವಾರವನ್ನೂ ತನ್ನ ಕರಸ್ಪರ್ಶದಿಂದ ಬದುಕಿಸಿದ. ಅವರೆಲ್ಲರಿಂದಲೂ ರಾಮನಿಗೆ ನಮಸ್ಕಾರ ಮಾಡಿಸಿ ಧನ್ಯರನ್ನಾಗಿಸಿದ. ಯೋಗಿಗಳಿಗೂ ಅಗಮ್ಯನಾದ ಆ ರಾಮನನ್ನು ಅವರು ನೋಡಿ ಸ್ತೋತ್ರ ಮಾಡಿದರು. ಶಿವನ ಮಾತಿನ ಮೇರೆಗೆ ಕುದುರೆಯನ್ನೂ ರಾಜ್ಯವನ್ನೂ ಪಶು-ಪುತ್ರಾದಿ ಸಂಪತ್ತನ್ನೂ ರಾಮನಿಗೊಪ್ಪಿಸಿದ ವೀರಮಣಿರಾಜ. ಒಡನೆ ರಾಮನು ಮಣಿಮಯ ರಥದಲ್ಲಿ ಕುಳಿತು ಅಂತರ್ಧಾನ ಹೊಂದಿದನು. ಎಲ್ಲರೂ ವಿಸ್ಮಯಪಟ್ಟರು. ಆದರೆ ರಾಮನು ಮನಷ್ಯನಲ್ಲ. ಎಲ್ಲೆಡೆ ಅಂತರ್ಯಾಮಿಯಾಗಿರುವ ಲೋಕೈಕವಂದ್ಯನಾದ ಪರಮಾತ್ಮನೆ ಶ್ರೀರಾಮ.

ವೀರರೆಲ್ಲರೂ ಆನಂದದಿಂದ ಒಬ್ಬರನ್ನೊಬ್ಬರು ಆಲಿಂಗಿಸಿಕೊಂಡು ಮಂಗಲ ವಾದ್ಯಗಳಿಂದ ಉತ್ಸವವನ್ನು ಆಚರಿಸಿದರು. ಕುದುರೆ ಮುಂದೆ ನಡೆಯಿತು. ಶಿವನು ಕೊಟ್ಟ ಮಾತಿಗೆ ತಪ್ಪದೆ ಅಂದಿನವರೆಗೆ ವೀರಮಣಿಯನ್ನು ಕಾಪಾಡಿ 'ಇನ್ನು ಮುಂದೆ ಲೋಕದಲ್ಲಿ ದುರ್ಲಭವಾದ ರಾಮಸೇವೆಯನ್ನು ಮಾಡುತ್ತಿರೆಂದು' ಹೇಳಿ ಅಂತರ್ಧಾನನಾದ. ವೀರಮಣಿ ರಾಮನ ಪಾದಗಳನ್ನು ಧ್ಯಾನಿಸುತ್ತ ತನ್ನ ಸೇನೆಯೊಂದಿಗೆ ಶತ್ರುಘ್ನನ ಜೊತೆಯಲ್ಲಿ ಹೊರಟ.

ಈ ರಾಮ ಚರಿತ್ರೆಯನ್ನು ಕೇಳುವವರಿಗೆ ಎಂದೂ ಸಂಸಾರ ದುಃಖವಿಲ್ಲ.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಪಾತಾಳಖಂಡದಲ್ಲಿ ಶೇಷ-ವಾತ್ಸ್ಯಾಯನ ಸಂವಾದದಲ್ಲಿ ರಾಮಾಶ್ವಮೇಧದಲ್ಲಿ ಶ್ರೀರಾಮಸಮಾಗಮವೆಂಬ ಹದಿನೆಂಟನೆ ಅಧ್ಯಾಯ ಮುಗಿದುದು*



## ಹಯಮುಕ್ತಿ

ಅಧ್ಯಾಯ - ೧೯

**ಶೇಷ ಉವಾಚ**

**ಶೇಷ :-** ಯಾಗದ ಕುದುರೆ ಹೇಮಕೂಟವನ್ನು ಸೇರಿತು. ಹತ್ತು ಸಾವಿರ ಯೋಜನ ಉದ್ದಗಲದ ಈ ಬೆಟ್ಟದಲ್ಲಿ ಚಿನ್ನ, ಬೆಳ್ಳಿ ಹೇರಳವಾಗಿದೆ. ಸಾಲ, ತಾಲ, ತಮಾಲ, ಕರ್ಣಿಕಾರ, ಹಿಂತಾಲ, ನಾಗ, ಪುನ್ನಾಗ, ಕಂಚುವಾರ, ಬಿಲ್ವ, ಸಂಪಿಗೆ, ಮದನ, ಕುಟಜ, ಗಿರಿಮಲ್ಲಿಗೆ, ದಾಸವಾಳ, ನವಮಾಲಿಕೆ, ಮಾವು, ದಾಳಿಂಬೆ ವೃಕ್ಷಗಳಿಂದಲೂ, ಪಕ್ಷಿ, ಭ್ರಮರ ಮಯೂರಗಳ ಧ್ವನಿಯಿಂದಲೂ ಕೂಡಿ ಶೋಭಿಸುವ ಒಂದು ಉದ್ಯಾನವನ್ನು ಕುದುರೆ ಪ್ರವೇಶಿಸಿದೊಡನೆ, ಅದರ ಶರೀರವು ಸ್ತಂಭಿತವಾಯಿತು. ಮನೋವೇಗದಿಂದೋಡಬಲ್ಲ ಕುದುರೆ ಈಗ ಹೇಮಕೂಟ ಪರ್ವತದಂತೆಯೆ ಅಚಲವಾಗಿ ನಿಂತಿತು. ಚಾವಟಿಯಿಂದ ಎಷ್ಟು ಹೊಡೆದರೂ ಅದು ಚಲಿಸಲಿಲ್ಲ. ಎಲ್ಲರಿಗೂ ಆಶ್ಚರ್ಯ. ಶತ್ರುಘ್ನನೂ ಆಶ್ಚರ್ಯದಿಂದ ನೋಡುತ್ತ ನಿಂತ. ಪುಷ್ಕಲನು ಕೈಯಿಂದ ಕುದುರೆಯ ಕಾಲನ್ನು ಎತ್ತಲು ಪ್ರಯತ್ನಿಸಿ ವಿಫಲನಾದ. ಹನುಮಂತನೂ ಬಾಲದಿಂದ ಕುದುರೆಯನ್ನು ಕಟ್ಟಿ ಎಳೆದ. ಅದು ಅಲ್ಲಾಡಲಿಲ್ಲ. ದ್ರೋಣ ಪರ್ವತವನ್ನು ಅನಾಯಾಸವಾಗಿ ಕಿತ್ತಿದ್ದರು. ಈ ಸಣ್ಣಕುದುರೆಯನ್ನು ಅಲ್ಲಾಡಿಸಲಾಗಲಿಲ್ಲ ಎಂದರೆ ಏನೋ ದೈವ ಪ್ರಭಾವವಿರಬಹುದೆಂದು ಹನುಮಂತ ನುಡಿದ. ಶತ್ರುಘ್ನನು ಸುಮತಿಯನ್ನು ಕೇಳಿದ 'ಅಮಾತ್ಯ, ಕುದುರೆ ಏಕೆ ಸ್ತಂಭಿತವಾಗಿದೆ ? ಈಗ ನಾವೇನು ಮಾಡೋಣ ?' ಅವನೆಂದ "ಸರ್ವಜ್ಞರಾದ ಮುನಿಗಳು ಯಾರಾದರೂ ಇಲ್ಲಿರಬಹುದು. ಅವರನ್ನು ಕೇಳೋಣ. ಅತೀಂದ್ರಿಯ ವಸ್ತುಗಳನ್ನು ತಿಳಿಯುವ ಸಾಮರ್ಥ್ಯ ನನ್ನಲ್ಲಿಲ್ಲ."

ಸುಮತಿಯ ಸಲಹೆಯಂತೆ ಮುನಿಗಳನ್ನು ಹುಡುಕಲು ಆಜ್ಞಾಪಿಸಿದ ಶತ್ರುಘ್ನ. ಒಬ್ಬ ಅನುಚರನಿಗೆ ಪೂರ್ವ ದಿಕ್ಕಿನಲ್ಲಿ ಒಂದು ಪುಣ್ಯಾಶ್ರಮ ಕಾಣಿಸಿಕೊಂಡಿತು. ಅಲ್ಲಿ ಮೃಗಗಳು ಪರಸ್ಪರ ವೈರವನ್ನು ಮರೆತು ಓಡಾಡುತ್ತಿದ್ದವು. ತಪಸ್ವಿಗಳು ಗಂಗಾ ಸ್ನಾನ ಮಾಡಿ ಘೋರ ತಪಸ್ಸು ಮಾಡುತ್ತಿದ್ದರು. ಕೆಲವರು ನೆಲಕ್ಕೆ ತಲೆಯೂರಿ ನಿಂತು ಹೊಗೆಯನ್ನೊ

ಗಾಳಿಯನ್ನೊ ಕುಡಿಯುತ್ತ ತಪಸ್ಸು ಮಾಡುತ್ತಿದ್ದರು. ಹೋಮಾಗ್ನಿಯಿಂದೆದ್ದ ಧೂಮವು ಆಶ್ರಮವನ್ನೆಲ್ಲ ತುಂಬಿಕೊಂಡಿತ್ತು. ಅದರಿಂದ ಆ ಪ್ರದೇಶ ಸದಾ ಪವಿತ್ರವಾಗಿತ್ತು. ಎಲೆ ಉದುರಿಸಿ ನಿಂತ ಬಳ್ಳಿಗಳಂತೆ ಅನೇಕ ಮಂದಿ ತಪಸ್ವಿಗಳು ತುಂಬಿಕೊಂಡಿದ್ದರು ಆಶ್ರಮದಲ್ಲಿ. ಅದು ಮಹರ್ಷಿ ಶೌನಕಾಶ್ರಮ ಎಂದು ತಿಳಿದೊಡನೆ ಆ ಅನುಚರನು ಬೇಗನೆ ಶತ್ರುಘ್ನ ಬಳಿಗೆ ಬಂದು ನಿವೇದಿಸಿದ. ಆಗ ಎಲ್ಲರೂ ಮುನಿಯ ಬಳಿ ಬಂದು ದಂಡಪ್ರಣಾಮ ಮಾಡಿದರು. ಮುನಿಯೂ ಅವರನ್ನು ಅರ್ಘ್ಯಪಾದ್ಯ ಮುಂತಾದವುಗಳಿಂದ ಸತ್ಕರಿಸಿ ಸಂತೋಷದಿಂದ ನುಡಿದ.

**ಶೌನಕ :-** ರಾಜನ್, ನಿಮ್ಮಂಥವರು ಹೀಗೆ ದೇಶಸಂಚಾರ ಮಾಡಿದರೆ ನಮಗೆ ತುಂಬ ಉಪಕಾರವಿದೆ. ಇಲ್ಲದಿದ್ದರೆ ದುಷ್ಟರು ಸಜ್ಜನರನ್ನು ಬಾಧಿಸುತ್ತಲೆ ಇರುತ್ತಾರೆ. ಇರಲಿ, ನೀವೀಗ ನಮ್ಮಲ್ಲಿಗೆ ಬರಲು ಏನು ಕಾರಣ ?

**ಶತ್ರುಘ್ನ :-** ಅಕಸ್ಮಾತ್ತಾಗಿ ಶ್ರೀರಾಮನ ಅಶ್ವಮೇಧದ ಕುದುರೆ ನಿಮ್ಮ ಆಶ್ರಮದ ಸಮೀಪದಲ್ಲಿ ಸ್ತಂಭಿತವಾಗಿ ನಿಂತು ಬಿಟ್ಟಿದೆ. ವೀರರೆಲ್ಲರೂ ಸೇರಿ ತಮ್ಮೆಲ್ಲ ಬಲವನ್ನು ಪ್ರಯೋಗಿಸಿಯೂ ಕುದುರೆಯನ್ನು ಅಲ್ಲಾಡಿಸಲು ಸಾಧ್ಯವಾಗಲಿಲ್ಲ. ಇದು ನಮ್ಮನ್ನು ಅಪಾರ ದುಃಖ ಸಮುದ್ರದಲ್ಲಿ ಮುಳುಗಿಸಿದೆ. ಅದನ್ನು ದಾಟಲು ನೌಕೆಯಂತಿರುವ ನೀನು ದೈವಾತ್ ನಮಗೆ ಲಭಿಸಿರುವೆ. ಮುನಿಯೆ, ಕುದುರೆಗೆ ಏನಾಯಿತು ಹೇಳು.

ಇದನ್ನು ಕೇಳಿ ಮುನಿಯು ಒಂದು ಕ್ಷಣ ಧ್ಯಾನಿಸಿ ಎಲ್ಲವನ್ನೂ ತಿಳಿದುಕೊಂಡು ತಾನೆ ಅಚ್ಚರಿಗೊಂಡು ಹೇಳಿದ.

**ಶೌನಕ :-** ರಾಜನೆ, ಗೌಡ ದೇಶದಲ್ಲಿ ಹಿಂದೆ ಸಾತ್ವಿಕನೆಂಬ ಒಬ್ಬ ಬ್ರಾಹ್ಮಣ ಘೋರ ತಪಸ್ಸು ಮಾಡುತ್ತಿದ್ದ. ಒಂದು ದಿನ ನೀರು, ಒಂದು ದಿನ ಗಾಳಿ, ಇನ್ನೊಂದು ದಿನ ಯಾವ ಆಹಾರವೂ ಇಲ್ಲ. ಹೀಗೆ ನಿಯಮದಿಂದ ಇದ್ದು ಆತನು ಒಂದು ದಿನ ಸರ್ವಭಕ್ಷಕನಾದ ಮೃತ್ಯುವಿನ ದವಡೆಯಲ್ಲಿ ಸಿಲುಕಿ ಮರಣ ಹೊಂದಿದ. ಬಳಿಕ ದಿವ್ಯ ವಿಮಾನವನ್ನೇರಿ ಮೇರು ಶಿಖರಕ್ಕೆ ಹೋಗಿ ಜಂಬೂವೃಕ್ಷದ ಬಳಿ ಹರಿಯುವ ಜಾಂಬುವತಿ ಎಂಬ ಚಿನ್ನದ ನೀರಿನ ಹೊಳೆಯಲ್ಲಿ ಇವನಂತೆ ಅನೇಕ ಮಂದಿ ಮುನಿಗಳೂ ವಿಹರಿಸುತ್ತಿದ್ದರು. ಇವನು ಮಾತ್ರ ಮದೋದ್ಧತನಾಗಿ ಎಲ್ಲರಿಗೂ ಕಿರುಕುಳಕೊಟ್ಟು 'ರಾಕ್ಷಸನಾಗೆಂ'ದು ಶಾಪವನ್ನು ಹೊಂದಿದ. ಪಶ್ಚಾತ್ತಾಪಗೊಂಡು ಕ್ಷಮೆ ಬೇಡಿದ. ಅವರೆಂದರು 'ನೀನು ಎಂದು ಶ್ರೀ ರಾಮನ ಯಾಗದ ಕುದುರೆಯನ್ನು ಸ್ತಂಭನಗೊಳಿಸಿ, ರಾಮಕಥೆಯನ್ನು ಶ್ರವಣ ಮಾಡುವೆ. ಆಗ ನೀನಗೀಶಾಪದಿಂದ ಬಿಡುಗಡೆ.'

ಆ ರಾಕ್ಷಸನೀಗ ಕುದುರೆಯನ್ನು ಸ್ತಂಭನಗೊಳಿಸಿದ್ದಾನೆ. ಅವನಿಗೆ ರಾಮ ಕಥೆಯನ್ನು ಶ್ರವಣ ಮಾಡಿಸು. ಆಗ ಕುದುರೆ ಅಲ್ಲಿಂದ ಕದಲುವುದು.

**ಶೇಷ :-** ಶೌನಕ ಮುನಿಯ ಈ ಮಾತನ್ನು ಕೇಳಿ ಶತ್ರುಘ್ನನು ವಿಸ್ಮಯಗೊಂಡು ಹೇಳಿದನು.

**ಶತ್ರುಘ್ನ :-** ಕರ್ಮದ ವಿಷಯ ಬಹು ಗಹನವಾದುದು. ಸಾತ್ವಿಕನು ಅಷ್ಟು ದೊಡ್ಡ ತಪಸ್ಸು ಮಾಡಿ ಸ್ವರ್ಗಕ್ಕೆ ಹೋದರೂ ಕರ್ಮದ ಪ್ರಭಾವದಿಂದ ರಾಕ್ಷಸನು

ಆಗಬೇಕಾಯಿತು. ಮುನಿಯೆ ಯಾವ ಪಾಪ ಕರ್ಮದಿಂದ ಯಾವ ನರಕವಾಗುವುದೆಂಬುದನ್ನು ನಮಗೆ ಉಪದೇಶಿಸು.

**ಶೌನಕ :-** ಶತ್ರುಘ್ನ, ನೀನು ಧನ್ಯ. ಧರ್ಮ ವಿಚಾರದಲ್ಲಿ ನಿನಗೆ ಎಷ್ಟೊಂದು ಆಸಕ್ತಿ ! ನಿನಗೆ ಇದೆಲ್ಲ ತಿಳಿದಿದ್ದರೂ ಲೋಕದ ಹಿತಕ್ಕಾಗಿ ಹೀಗೆ ಪ್ರಾರ್ಥನೆ ಮಾಡುತಿರುವೆ ಎಂಬುದು ನನಗೆ ಗೊತ್ತು. ಹೇಳುತ್ತೇನೆ ಕೇಳು. ಪರದ್ರವ್ಯ, ಪರಸ್ತ್ರೀ, ಪರರ ಮಕ್ಕಳು ಇವುಗಳ ಅಪಹಾರದಿಂದ ಸಾವಿರ ವರ್ಷಗಳ ಕಾಲ ನರಕವಾಸ ಪ್ರಾಪ್ತಿ. ಬಳಿಕ ಹಂದಿಯಾಗಿ ಹುಟ್ಟಿ ಕಷ್ಟ ಪಡಬೇಕು. ಬಳಿಕ ಮನುಷ್ಯನಾಗಿ ಹುಟ್ಟಿದರೂ ರೋಗ ಮುಂತಾದವುಗಳಿಂದ ದುಃಖ ತಪ್ಪಿದ್ದಲ್ಲ. ಪರದ್ರೋಹ ಮಾಡಿದರೆ ಅಂಧತಾಮಿಸ್ರ ನರಕಪ್ರಾಪ್ತಿ. ಪ್ರಾಣಿವಧೆಯನ್ನು ವ್ಯರ್ಥವಾಗಿ ಮಾಡುವವರಿಗೆ ರೌರವ ನರಕಪ್ರಾಪ್ತಿ. ಪಿತೃದ್ರೋಹ, ಬ್ರಾಹ್ಮಣದ್ರೋಹದಿಂದ ಕಾಲಸೂತ್ರ ನರಕಪ್ರಾಪ್ತಿ. ಗೋ ದ್ವೇಷದಿಂದ ಆ ಹಸುವಿನ ಮೈಯ ರೋಮಗಳೆಷ್ಟಿವೆಯೋ ಅಷ್ಟು ಸಾವಿರ ವರ್ಷಗಳ ಕಾಲ ನರಕವಾಸ. ನಿರಪರಾಧಿಗಳನ್ನೂ ಪಂಡಿತರನ್ನೂ ದಂಡಿಸುವ ರಾಜನಿಗೆ ಹಂದಿ ಮೋರೆಯ ಕ್ರೂರ ಯಮಭಟರು ಪೀಡೆ ಕೊಟ್ಟು ಹೀನ ಜನ್ಮಕ್ಕೆ ತಳ್ಳುತ್ತಾರೆ. ಬ್ರಹ್ಮಸ್ವಾಪಹಾರಿಗೆ ಅಂಧಕೂಪ ನರಕ ಪ್ರಾಪ್ತಿಯಾಗುವುದು. ಯಾರಿಗೂ ಕೊಡದೆ ತಾನೊಬ್ಬನೆ ಉಣ್ಣುವವ ಕ್ರಿಮಿಭೋಜನ ನರಕದಲ್ಲಿ ಬೀಳುತ್ತಾನೆ. ಆಪತ್ಕಾಲ ಹೊರತು ಬೇರೆ ಸಮಯದಲ್ಲಿ ಕಳವು ಮಾಡಿದರೆ ಸಂದಂಶ ನರಕ, ತನ್ನ ದೇಹ ಪೋಷಣೆ ಬಿಟ್ಟು ಬೇರೇನೂ ಮಾಡದವನಿಗೆ ಕುಂಭೀಪಾಕ ನರಕ. ಆಗಮ್ಯಾಗಮನ ಮಾಡಿದರೆ ಕಾದ ಪ್ರತಿಮೆಯಾಲಿಂಗನದ ಶಿಕ್ಷೆಯಿದೆ. ವೇದಧರ್ಮ ನಾಶ ಮಾಡುವವ ವೈತರಿಣಿಯಲ್ಲಿ ಬೀಳುತ್ತಾನೆ. ಶೂದ್ರ ಸ್ತ್ರೀಯೊಡನೆ ಸಂಸಾರ ಮಾಡಿದರೆ ಪೂಯೋದ ನರಕ ಪ್ರಾಪ್ತಿ. ಸವರ್ಣ ಸ್ತ್ರೀಯನ್ನು ಕೆಡಿಸಿದರೆ ರೇತಸ್ಸಿನ ಪ್ರವಾಹದಲ್ಲಿ ಮುಳುಗುತ್ತಾನೆ. ಕಳವು, ಬೆಂಕಿ ಹಚ್ಚುವುದು, ವಿಷವಿಕ್ಕುವುದು, ಊರನ್ನು ಲೂಟಿ ಮಾಡುವುದು ಇವನ್ನು ಮಾಡಿದರೆ ಸಾರಮೇಯಾದನವೆಂಬ ನರಕಪ್ರಾಪ್ತಿ. ಸುಳ್ಳು ಸಾಕ್ಷಿ, ದರೋಡೆಗಳಿಂದ ಅವೀಚಿ ಎಂಬ ನರಕದಲ್ಲಿ ತಲೆ ಕೆಳಗಾಗಿ ಬಿದ್ದು ಮಹಾದುಃಖವನ್ನು ಅನುಭವಿಸಿ ಹೀನಜನ್ಮ ಪಡೆಯಬೇಕಾಗುವುದು. ಹೆಂಡ ಕುಡಿದರೆ ಕರಗಿದ ಕಬ್ಬಿಣ ರಸದಲ್ಲಿ ಬೀಳಬೇಕಾಗುತ್ತದೆ. ಗುರುಗಳಿಗೆ ಅವಮಾನ ಮಾಡಿದರೆ ಕ್ಷಾರನರಕದಲ್ಲಿ ತಲೆಕೆಳಗಾಗಿ ಬೀಳಬೇಕಾಗುತ್ತದೆ. ವಿಶ್ವಾಸಘಾತ ಮಾಡಿದರೆ ಶೂಲಪ್ರೋತವೆಂಬ ನರಕ ಪ್ರಾಪ್ತಿ. ಚಾಡಿ ಹೇಳಿ ಪರರಿಗೆ ಉದ್ವೇಗ ಉಂಟು ಮಾಡಿದರೆ ದಂದಶೂಕ ನರಕದಲ್ಲಿ ಹಾವುಗಳಿಂದ ಕಚ್ಚಿಸಿಕೊಳ್ಳಬೇಕಾಗುತ್ತದೆ. ಈ ಎಲ್ಲ ಪಾಪಗಳಿಗಿಂತಲೂ ಶ್ರೀರಾಮನ ಕಥೆಯನ್ನು ಕೇಳದಿರುವುದು ಮತ್ತು ಪರೋಪಕಾರ ಮಾಡದಿರುವುದು ಇವೇ ದೊಡ್ಡ ಪಾಪಗಳು. ಈ ಪಾಪಗಳಿಗೆ ಮೇಲೆ ಹೇಳಿದ ಎಲ್ಲ ನರಕ ಶಿಕ್ಷೆಗಳೂ ಲಭಿಸುತ್ತವೆ. ಇಲ್ಲಿ ಯಾರು ಸುಖವಾಗಿರುತ್ತಾರೊ ಅವರು ಸ್ವರ್ಗ ಕಂಡವರು. ಯಾರು ದುಃಖದಲ್ಲಿರುವರೂ ಅವರು ನರಕ ಅನುಭವಿಸಿದವರು.

ಇದನ್ನು ಕೇಳಿ ಶತ್ರುಘ್ನನು ತಿರುಗಿ ಪಾಪದ ಚಿಹ್ನೆಗಳನ್ನೂ ಕೇಳ ಬಯಸಿದನು. ಆಗ ಶೌನಕಮುನಿ ಹೇಳಿದನು.

**ಶೌನಕ :-** ಹೆಂಡ ಕುಡುಕನು ನರಕವಾಸವನ್ನು ಅನುಭವಿಸಿ ಭೂಮಿಯಲ್ಲಿ ಹುಟ್ಟಿದರೆ ಅವನ ಹಲ್ಲುಗಳು ಕಪ್ಪಾಗಿರುತ್ತವೆ. ಅಭಕ್ಷ್ಯ ಭಕ್ಷಣ ಮಾಡಿದವನಿಗೆ ಉದರಶೂಲೆ ಇರುತ್ತದೆ. ಮುಟ್ಟಾದವಳನ್ನು ನೋಡಿ ಅನ್ನವುಂಡವನಿಗೆ ಹೊಟ್ಟೆ ಹುಳದ ಬಾಧೆ. ನಾಯಿ, ಬೆಕ್ಕು ಮುಟ್ಟಿದ್ದನ್ನು ತಿಂದರೆ ಮೈಯಲ್ಲಿ ದುರ್ಗಂಧ. ದೇವರಿಗೆ ನೈವೇದ್ಯ ಮಾಡದೆ ಉಂಡರೆ ಹೊಟ್ಟೆನೋವು ಮತ್ತು ಮಹಾರೋಗಗಳು. ಇನ್ನೊಬ್ಬರು ಉಣ್ಣುವ ಅನ್ನಕ್ಕೆ ವಿಘ್ನ ಉಂಟು ಮಾಡಿದರೆ ಅಜೀರ್ಣ ರೋಗ. ಶ್ರೀಮಂತನಾಗಿದ್ದೂ ಹಾಳು ಅನ್ನದಾನ ಮಾಡಿದರೆ ಅಗ್ನಿಮಾಂದ್ಯ. ವಿಷವಿಕ್ಕಿದರೆ ವಾಂತಿರೋಗ. ಮಾರ್ಗವನ್ನು ಹಾಳು ಮಾಡಿದರೆ ಕಾಲು ನೋವು. ಚಾಡಿ ಹೇಳಿದರೆ ಗೂರಲು ಉಬ್ಬಸ ರೋಗಗಳು. ಧೂರ್ತತನದಿಂದ ಅಪಸ್ಮಾರ. ಪರರಿಗೆ ಕಷ್ಟಕೊಟ್ಟರೆ ಶೂಲರೋಗ. ಕಾಡಿಗೆ ಬೆಂಕಿ ಹಚ್ಚುವುದರಿಂದ ರಕ್ತಭೇದಿ. ದೇವಸ್ಥಾನ, ಕೆರೆ, ಬಾವಿಗಳಲ್ಲಿ ಹೇಸಿಗೆ ಮಾಡಿದರೆ ಗುದರೋಗ. ಗರ್ಭಪಾತ ಮಾಡಿಸಿದರೆ ಯಕೃತ್ತು ಪ್ಲೀಹ ರೋಗಗಳೂ, ಜಲೋದರ ರೋಗವೂ ಬರುತ್ತದೆ. ಪ್ರತಿಮೆಗಳನ್ನು ಒಡೆದರೆ ನೆಲೆಯಿಲ್ಲದಂಥ ಪರಿಸ್ಥಿತಿ ಬರುತ್ತದೆ. ಕೆಟ್ಟ ಮಾತಿನಿಂದ ಕುಂಟತನ, ಪರನಿಂದೆಯಿಂದ ಬೊಕ್ಕತಲೆ, ಸಭೆಯಲ್ಲಿ ಪಕ್ಷಪಾತ ವರ್ತನೆಯಿಂದ ಪಾರ್ಶ್ವವಾಯು, ಪರರ ಮಾತನ್ನು ಗೇಲಿ ಮಾಡಿದರೆ ಕುರುಡುತನ, ಚಿನ್ನ ಕದ್ದರೆ ಹುಳುಕು ಉಗುರು, ತಾಮ್ರ ಕದ್ದರೆ ದಪ್ಪಹೊಟ್ಟೆ, ಕಂಚು ಕದ್ದರೆ ತೊನ್ನು, ಹಿತ್ತಾಳೆ ಕದ್ದರೆ ಕೆಂಪು ತಲೆಗೂದಲು, ಸೀಸ ಕದ್ದರೆ ತಲೆನೋವು. ತುಪ್ಪ ಕದ್ದರೆ ಕಣ್ಣುನೋವು, ಚರ್ಮ ಕದ್ದರೆ ಕೊಬ್ಬು ಹೆಚ್ಚುವುದು, ಜೇನು ಕದ್ದರೆ ಹೊಟ್ಟೆಯಲ್ಲಿ ದುರ್ಗಂಧ. ಕಬ್ಬಿಣ ಕದ್ದರೆ ದದ್ದು, ಎಣ್ಣೆ ಕದ್ದರೆ ತುರಿಕಜ್ಜಿ, ಬೇಯಿಸದ ಆಹಾರ ಪದಾರ್ಥವನ್ನು ಕದ್ದರೆ ಹಲ್ಲಿಲ್ಲದಂತಾಗುವುದು. ಬೇಯಿಸಿದ ಅನ್ನ ಕದ್ದರೆ ನಾಲಿಗೆಯಲ್ಲಿ ನೋವು, ತಾಯಿಯ ಸಂಗ ಮಾಡಿದರೆ ಲಿಂಗವಿಲ್ಲದಂತಾಗುವುದು. ಗುರು ಪತ್ನೀ ಗಮನದಿಂದ ಮೂತ್ರಕೃಚ್ಛ್ರ, ಮಗಳ ಸಂಗ ಮಾಡಿದರೆ ತೊನ್ನು. ಸೋದರಿಯ ಸಂಗದಿಂದ ಬಿಳಿ ತೊನ್ನು, ಸೋದರ ಪತ್ನಿಯ ಸಂಗದಿಂದ ಗುಲ್ಮ ಕುಷ್ಠ, ಸ್ವಾಮಿಯ ಸ್ತ್ರೀಯಲ್ಲಿ ಸಂಗ ಮಾಡಿದರೆ ದದ್ರುಕುಷ್ಠ, ನಂಬಿದವನ ಪತ್ನಿಯಲ್ಲಿ ಸಂಗಮಾಡಿದರೆ ಆನೆಕಾಲು ರೋಗ, ಸೋದರತ್ತೆಯ ಸಂಗದಿಂದ ಶರೀರದ ಬಲಭಾಗದಲ್ಲಿ ಹುಣ್ಣುಗಳು. ಸೋದರ ಮಾವನ ಹೆಂಡತಿಯ ಸಂಗದಿಂದ ಎಡಭಾಗದಲ್ಲಿ ಹುಣ್ಣು, ತಂದೆಯ ಸೋದರರ ಹೆಂಡರಲ್ಲಿ ಸಂಗ ಮಾಡಿದರೆ ಕಟಿಕುಷ್ಠ. ಸ್ನೇಹಿತನ ಮಡದಿಯ ಸಂಗದಿಂದ ಪತ್ನಿಯ ಸಾವು. ಸ್ವಗೋತ್ರ ಸ್ತ್ರೀ ಸಂಗದಿಂದ ಭಗಂದರ. ತಪಸ್ವಿನಿಯರ ಸಂಗದಿಂದ ಪ್ರಮೇಹ, ಶ್ರೋತ್ರಿಯ ಸ್ತ್ರೀ ಸಂಗದಿಂದ ಮೂಗಿನಲ್ಲಿ ಹುಣ್ಣು, ದೀಕ್ಷಿತನ ಸ್ತ್ರೀಯ ಸಂಗದಿಂದ ರಕ್ತದೋಷ, ಸ್ವಜಾತಿ ಸ್ತ್ರೀಯ ಸಂಗದಿಂದ ಎದೆಯಲ್ಲಿ ಹುಣ್ಣು. ಉನ್ನತ ಜಾತಿಯ ಸ್ತ್ರೀ ಸಂಗದಿಂದ ತಲೆಯಲ್ಲಿ ಹುಣ್ಣು. ಪಶುಸಂಗದಿಂದ ಮೂತ್ರಘಾತ. ಹೀಗೆ ಆಯಾ ಪಾಪ ಆಚರಣೆ ಮಾಡಿದವರು ನರಕವನ್ನು ಅನುಭವಿಸಿ ಭೂಮಿಯಲ್ಲಿ ಹುಟ್ಟಿದಾಗ ಮೇಲೆ ಹೇಳಿದ ರೋಗರುಜಿನಗಳಿಗೆ ಈಡಾಗುವರು. ಸ್ತ್ರೀಯರಿಗೂ ಪರಪುರುಷ ಸಂಗದಿಂದ ಈ ಚಿಹ್ನೆಗಳು ಕಾಣಿಸಿಕೊಳ್ಳುತ್ತವೆ.

ದಾನ, ತೀರ್ಥಯಾತ್ರೆ, ರಾಮಕಥಾ ಶ್ರವಣ ಇಲ್ಲವೆ ತಪಸ್ಸು ಈ ಪಾಪಗಳನ್ನು ಪರಿಹರಿಸಬಲ್ಲುದು.

**ಸರ್ವೇಷಾಮಪ್ಯುಪಾಯಾನಾಂ ಹರಿಕೀರ್ತಿಧುನೀ ನೃಣಾಂ ।**
**ಕ್ಷಾಲಯೇತ್ ಪಾಪಿನಾಂ ಪಾಪಂ ನಾತ್ರ ಕಾರ್ಯಾ ವಿಚಾರಣಾ ॥**

ಮಾನವರ ಪಾಪಗಳನ್ನು ಪರಿಹರಿಸುವ ಉಪಾಯಗಳೆಲ್ಲೆಲ್ಲ ಹರಿಕೀರ್ತನ ನದಿಯೊಂದೆ ಶ್ರೇಷ್ಠವಾದುದು. ಅದು ಎಲ್ಲ ಪಾಪಿಗಳ ಪಾಪವನ್ನು ತೊಳೆಯುವುದು. ಇದರಲ್ಲಿ ಸಂದೇಹ ಬೇಡ.

**ಯಶ್ಚಾವ ಮನ್ಯೇತ ಹರಿಂ ತಂ ಗಂಗಾ ನ ಪುನಾತಿ ಹಿ**
**ತೀರ್ಥಾಣ್ಯಪಿ ಸುಪುಣ್ಯಾನಿ ಪಾವಿತುಂ ನ ಕ್ಷಮಾಣಿ ತಂ ॥**

ಹರಿಯನ್ನು ಅವಮಾನಿಸುವವನು ಗಂಗೆಯಲ್ಲಿ ಮುಳುಗಿ ಪ್ರಯೋಜನವಿಲ್ಲ. ಅವನನ್ನು ಯಾವ ಪುಣ್ಯ ತೀರ್ಥವೂ ಶುದ್ಧೀಕರಿಸಲಾರದು.

ಹರಿ ಕೀರ್ತನೆ ನಡೆಯುತ್ತಿರುವಾಗ ಅದನ್ನು ಅಪಹಾಸ ಮಾಡುವುದು ಮೂರ್ಖತನ. ಕಲ್ಪಾಂತರದಲ್ಲಿಯೂ ಅವನಿಗೆ ನರಕದಿಂದ ಮುಕ್ತಿಯಾಗಲಾರದು. ಶತ್ರುಘ್ನ ನೀನು ಕುದುರೆಯ ಬಳಿಯಲ್ಲಿ ಹರಿಕೀರ್ತನೆಯನ್ನು ನಡೆಸು. ಆಗ ಕುದುರೆ ನಡೆಯಲಾರಂಭಿಸುವುದು.

ಶೌನಕ ಮುನಿಯ ಈ ಉಪದೇಶವನ್ನು ಕೇಳಿ ಸಂತೋಷದಿಂದ ಅವನಿಗೆ ನಮಿಸಿ ಕುದುರೆಯ ಬಳಿಗೆ ನಡೆದ ಶತ್ರುಘ್ನ. ಅಲ್ಲಿ ಹನುಮಂತನು ಶ್ರೀ ರಾಮನ ಕಥೆಯನ್ನು ವರ್ಣಿಸಿದ. 'ರಾಕ್ಷಸನೆ, ನೀನೀಗ ಶ್ರೀರಾಮನ ಕಥೆಯನ್ನು ಕೇಳಿರುವೆ. ಆ ಪುಣ್ಯದಿಂದ ಈ ಕೆಟ್ಟ ರಾಕ್ಷಸ ಜನ್ಮವನ್ನು ಕಳೆದುಕೊಂಡು ದೇವವಿಮಾನವನ್ನು ಏರು' ಎಂದ ಶತ್ರುಘ್ನ. ಒಡನೆ ದೇವವಿಮಾನ ಒಂದು ಕಾಣಿಸಿಕೊಂಡಿತು. ಅದರಲ್ಲಿ ಕುಳಿತು ಸಾತ್ವಿಕನು 'ರಾಜನೆ, ಶ್ರೀ ರಾಮನ ಚರಿತ್ರೆಯನ್ನು ಕೇಳಿ ನಾನು ಪುನೀತನಾದೆ. ನಿನ್ನ ಆಜ್ಞೆಯಿಂದ ನಾನೀಗ ನನ್ನ ಲೋಕಕ್ಕೆ ತೆರಳುತ್ತಿದ್ದೇನೆ' ಎಂದ. ಅವನು ಹೀಗೆ ಹೇಳಿ ಹೋಗುವುದನ್ನು ಕಂಡ ಶತ್ರುಘ್ನನ ಪರಿವಾರದವರೆಲ್ಲರೂ ಆಶ್ಚರ್ಯಪಟ್ಟರು. ಕುದುರೆ ಅಲ್ಲಿಂದ ಹೊರಟಿತು. ಪಕ್ಷಿಗಳು ತುಂಬಿರುವ ಆ ವನದಲ್ಲೆಲ್ಲ ಓಡಾಡಿತು.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಪಾತಾಳ ಖಂಡದಲ್ಲಿ ಶೇಷ-ವಾತ್ಸ್ಯಾಯನ ಸಂವಾದದಲ್ಲಿ ರಾಮಾಶ್ವಮೇಧದಲ್ಲಿ ಹಯಮುಕ್ತಿ ಎಂಬ ಹತ್ತೊಂಬತ್ತನೆ ಅಧ್ಯಾಯ ಮುಗಿದುದು*

—o—

**ಶೇಷ ಉವಾಚ**

**ಶೇಷ :-** ಕುದುರೆ ಭಾರತ ವರ್ಷದಲ್ಲೆಲ್ಲ ಸಂಚರಿಸಿತು. ರಾಜರೆಲ್ಲರೂ ಅದನ್ನು ಪೂಜಿಸಿ ಶತ್ರುಘ್ನ ಪರಿವಾರದಲ್ಲಿ ಸೇರಿಕೊಂಡರು. ಅಂಗ ವಂಗ ಕಳಿಂಗ ಮೊದಲಾದ ಎಲ್ಲ ದೇಶಗಳನ್ನೂ ಏಳು ತಿಂಗಳಲ್ಲಿ ಸುತ್ತಿ ಸುರಥ ರಾಜನ ಕುಂಡಲ ನಗರದ ಬಳಿಗೆ ಬಂದಿತು. ಆ ನಗರದ ಜನರು ರಾಮಭಕ್ತರು. ಅಶ್ವತ್ಥ ತುಳಸೀ ಪೂಜೆಯನ್ನು ನಿತ್ಯ ಮಾಡುವವರು. ಸುಂದರ ದೇವಾಲಯಗಳಲ್ಲಿ ರಾಮ ಪ್ರತಿಮೆಗಳನ್ನು ಕಪಟವಿಲ್ಲದ ಶುದ್ಧ ಮನಸ್ಸಿನಿಂದ ಸದಾ ಅರ್ಚನೆ ಮಾಡುತ್ತಿದ್ದರು. ಅವರು ಎಂದೂ ಧರ್ಮವನ್ನು ಮೀರುತ್ತಿರಲಿಲ್ಲ. ಬಾಯಿಯಲ್ಲಿ ರಾಮನಾಮ ಹೊರತು ಬೇರೆ ಜಗಳದ ಮಾತಿಲ್ಲ. ಎದೆಯಲ್ಲಿ ರಾಮಧ್ಯಾನ ಹೊರತು ವಿಷಯ ಭೋಗದ ಆಸೆಯಿಲ್ಲ. ರಾಮನ ಕಥೆಯನ್ನು ಕೇಳುವುದೊಂದೆ ಹವ್ಯಾಸ. ಜೂಜು ಮುಂತಾದ ಸಪ್ತವ್ಯಸನಗಳೆಂಬುವಿರಲಿಲ್ಲ. ''ಇದಕ್ಕೆಲ್ಲ ಕಾರಣ ಸುರಥ ಮಹಾರಾಜ. ಆತನು ಧರ್ಮಾತ್ಮ, ಸತ್ಯನಿಷ್ಠ, ಪರಾಕ್ರಮಿ, ವಿಶೇಷವಾಗಿ ಶ್ರೀರಾಮ ಸ್ಮರಣೆಯಿಂದ ಸದಾ ಸಂತುಷ್ಟಚಿತ್ತನಾಗಿದ್ದು ಎಲ್ಲರನ್ನೂ ಸಂತೋಷಗೊಳಿಸುತ್ತಿದ್ದ. ಅವನ ಸದ್ಗುಣವನ್ನು ಏನೆಂದು ವರ್ಣಿಸಲಿ? ಇಷ್ಟು ಮಾತ್ರ ಹೇಳಬಹುದು. ಅವನ ಎಲ್ಲ ಗುಣಗಳೂ ಭೂಮಂಡಲದಲ್ಲೆಲ್ಲ ವ್ಯಾಪಿಸಿ ಎಲ್ಲರನ್ನೂ ಪುನೀತರನ್ನಾಗಿಸುತ್ತಿದ್ದವು.

ಕುದುರೆ ನಗರದ ಬಳಿಗೆ ಬಂದೊಡನೆ ರಾಜಭಟರು ನೋಡಿ ವಿಸ್ಮಿತರಾದರು. ಹಣೆಯಲ್ಲಿ ಕಟ್ಟಿದ ಓಲೆಯನ್ನು ಓದಿ ರಾಮನ ಅಶ್ವಮೇಧದ ಕುದುರೆ ಇದು ಎಂದು ತಿಳಿದು ರಾಜನ ಮುಂದೆ ಬಿನ್ನವಿಸಿದರು. 'ಪ್ರಭು, ಅಯೋಧ್ಯೆಯೆಂಬ ನಗರಿ ಇದೆಯಂತೆ. ಅದನ್ನು ಆಳುವವ ರಾಘವನಂತೆ. ಅವನ ಅಶ್ವಮೇಧದ ಕುದುರೆ ಸಂಚರಿಸುತ್ತ ನಮ್ಮ ನಗರದ ಬಳಿ ಬಂದಿದೆ. ಸುಂದರವಾಗಿದೆ. ಅದನ್ನು ಪ್ರಭುಗಳು ಹಿಡಿದುಕೊಳ್ಳಬೇಕು.

ಇದನ್ನು ಕೇಳಿ ಸುರಥನಿಗಾದ ಆನಂದಕ್ಕೆ ಪಾರವಿರಲಿಲ್ಲ. ಅವನು ವೀರರ ಮುಂದೆ ನುಡಿದ.

**ಸುರಥ :-** ಇಂದಿನಿಂದ ನಾವೆಲ್ಲ ಧನ್ಯರು. ನಮಗೆ ರಾಮನ ದರ್ಶನ ಆಗಲಿದೆ. ಎಷ್ಟೆ ವೀರರು ಕುದುರೆಯ ರಕ್ಷಣೆಗಿರಲಿ, ನಾನು ಅದನ್ನು ಕಟ್ಟಿಹಾಕುವೆನು. ಆ ರಾಮನು ಈ ಭಕ್ತನ ಬಳಿಗೆ ಬಂದಾಗ ಅದನ್ನು ಬಿಟ್ಟುಬಿಡುವೆನು. ಹೀಗೆ ಹೇಳಿ ಭಟರಿಗೆ ಅಜ್ಞಾಪಿಸಿದ.

'ಭಟರೆ, ಆ ಕುದುರೆ ಕಣ್ಣಿಗೆ ಬಿದ್ದರೆ ಬಿಡಲೇಬೇಡಿ. ಬಲಾತ್ಕಾರದಿಂದ ಹಿಡಿದು ತನ್ನಿ. ಇದರಿಂದ ಬ್ರಹ್ಮದೇವೇಂದ್ರರಂಥವರಿಗೂ ದುರ್ಲಭವೆನಿಸಿರುವ ಶ್ರೀ ರಾಮನ ಪಾದದರ್ಶನದ ಮಹಾಲಾಭ ನಮಗೆ ಉಂಟಾಗುವುದು. ಈ ಸಂದರ್ಭದಲ್ಲಿ ರಾಮನನ್ನು ಕಾಣುವವನೆ ಧನ್ಯ. ಆದ್ದರಿಂದ ಆ ಕುದುರೆಯನ್ನು ತಂದು ನಮ್ಮ ಅಶ್ವಶಾಲೆಯಲ್ಲಿ ಕಟ್ಟಿಹಾಕಿರಿ.'

ಭಟರು ರಾಜಾಜ್ಞೆಯಂತೆ ಕುದುರೆಯನ್ನು ಹಿಡಿದು ತಂದರು.

ವಾತ್ಸ್ಯಾಯನ, ಸುರಥರಾಜನು ರಾಮನ ಕುದುರೆಯನ್ನು ಹಿಡಿದುಕೊಳ್ಳಲು ಇನ್ನೊಂದು ಕಾರಣವಿತ್ತು. ಅವನು ತನ್ನ ರಾಜ್ಯದಲ್ಲಿ ಅಧರ್ಮ ಸುಳಿಯಲೂ ಅವಕಾಶ ಕೊಟ್ಟಿರಲಿಲ್ಲ. ಪಾಪಿಗಳನ್ನು ದೇಶದಿಂದಲೆ ಹೊರಗೆ ಓಡಿಸುತ್ತಿದ್ದ. ಅವನ ಆಜ್ಞೆಯಂತೆ ಪ್ರಜೆಗಳೆಲ್ಲರೂ ಏಕಪತ್ನೀವ್ರತಸ್ಥರಾಗಿ ಪರದ್ರವ್ಯವನ್ನು ಆಶಿಸದೆ ಶ್ರೀ ರಾಮನಾಮಸ್ಮರಣೆ ಧ್ಯಾನಗಳನ್ನೆ ಮಾಡುತ್ತಿದ್ದರು. ಇದರಿಂದ ಅವರು ಮರಣಾ ನಂತರ ಸ್ವರ್ಗವನ್ನೆ ಸೇರುತ್ತಿದ್ದರು. ಯಮಭಟರಿಗೆ ಸುರಥನ ರಾಜ್ಯದಲ್ಲಿ ಪ್ರವೇಶ ಇರಲಿಲ್ಲ. ಒಮ್ಮೆ ಯಮನು ಜಡೆ ನಾರುಡೆಗಳನ್ನು ಧರಿಸಿ ಮುನಿರೂಪದಿಂದ ಸುರಥನ ಓಲಗಕ್ಕೆ ಬಂದ. ಅಲ್ಲಿ ರಾಜನು ತಲೆಯಲ್ಲಿ ತುಳಸಿ, ನಾಲಿಗೆಯಲ್ಲಿ ಹರಿನಾಮ ಸೇವಿಸುತ್ತ ತನ್ನ ಪರಿವಾರದವರಿಗೆ ಧರ್ಮದ ಬಗ್ಗೆ ಉಪದೇಶ ಮಾಡುತ್ತಿದ್ದ. ಮುನಿರೂಪದಿಂದ ಬಂದ ಯಮನನ್ನು ಆತ ವಂದಿಸಿ ಅರ್ಘ್ಯ ಪಾದ್ಯ ಮುಂತಾದವುಗಳಿಂದ ಸತ್ಕರಿಸಿದ. 'ಮುನಿಯೆ, ಇಂದು ನನ್ನ ಜನ್ಮ ಸಾರ್ಥಕವಾಯಿತು. ನನ್ನ ಮನೆ ಪಾವನವಾಯಿತು. ಶ್ರೀ ರಾಮನ ಪುಣ್ಯ ಚರಿತ್ರೆಯನ್ನು ನನಗೆ ಉಪದೇಶಿಸು. ಅದರಿಂದ ನನ್ನ ಪಾಪಗಳು ದೂರಾಗಲಿ' ಎಂದು ಬೇಡಿದ.

ಮುನಿ ಏಕೋ ನಗಲು ತೊಡಗಿದ. ಹಲ್ಲು ಕಾಣುವಂತೆ ನಕ್ಕು ಕೈ ಚಪ್ಪಾಳೆ ಹೊಡೆದ. 'ಮುನಿಯೆ, ಏಕೆ ನಗುವೆ ?' ಎಂದ ರಾಜ. ಮುನಿ ನುಡಿದ 'ರಾಜನೆ, ರಾಮನ ಚರಿತ್ರೆಯನ್ನು ಹೇಳೆಂದು ಬೇಡುತ್ತಿರುವೆಯಲ್ಲ? ಅವನು ಯಾರು ? ಎಲ್ಲರೂ ಕರ್ಮಕ್ಕೆ ಅಧೀನರಾಗಿರುವವರು. ಕರ್ಮದಿಂದಲೆ ಸ್ವರ್ಗ, ಕರ್ಮದಿಂದಲೆ ನರಕ. ಕರ್ಮದಿಂದಲೆ ಪುತ್ರಪೌತ್ರಾದಿ ಸಂಪತ್ತು. ದೇವೇಂದ್ರನೂ ನೂರು ಯಾಗಗಳನ್ನು ಮಾಡಿಯೇ ಸ್ವರ್ಗದ ಸಿಂಹಾಸನವನ್ನೇರಿದ. ಬ್ರಹ್ಮನೂ ಕರ್ಮಾಚರಣೆಯಿಂದಲೆ ಸತ್ಯಲೋಕವನ್ನು ಪಡೆದ. ಮರುತ್ತು ಮುಂತಾದ ದೇವತೆಗಳೆಲ್ಲರೂ ಯಜ್ಞಗಳನ್ನು ನಡೆಸಿ ಈಗ ಅಪ್ಸರೆಯರೊಂದಿಗೆ ಸುಖಭೋಗಗಳನ್ನು ಅನುಭವಿಸುತ್ತಿದ್ದಾರೆ. ನೀನೂ ಯಜ್ಞ ಯಾಗಗಳಿಂದ ದೇವತೆಗಳನ್ನು ಆರಾಧಿಸು. ನಿನ್ನ ಕೀರ್ತಿ ಭೂಮಂಡಲದಲ್ಲೆಲ್ಲ ಪಸರಿಸಲಿ.'

ಇದನ್ನು ಕೇಳಿ ತಡೆಯಲಾರದ ಕೋಪ ಬಂದಿತು ರಾಜನಿಗೆ.

'ಮುನಿಯೆ, ನೀನು ಕರ್ಮದ ಮಾತನ್ನು ಮಾತ್ರ ಎತ್ತಬೇಡ. ನಶ್ವರ ಸುಖವನ್ನೀವ ಆ ಕರ್ಮಗಳನ್ನೆ ನೀನು ಹೊಗಳುವಿಯಾದರೆ ನನ್ನ ನಗರದಿಂದ ಹೊರಗೆ ಹೋಗು. ನಿನ್ನಂಥ ಅಯೋಗ್ಯರನ್ನು ನಾವು ನಗರದಲ್ಲಿಟ್ಟುಕೊಳ್ಳುವುದಿಲ್ಲ. ಇಂದ್ರನಂತೆ ! ಬ್ರಹ್ಮನಂತೆ! ಅವರೆಲ್ಲರೂ ಒಂದು ಕಾಲದಲ್ಲಿ ತಮ್ಮ ಪದವಿಯನ್ನು ಕಳೆದು ಕೊಳ್ಳುವವರೆ. ರಾಮನ ಸೇವಕರಿಗೆ ಯಾವ ಭಯವೂ ಇಲ್ಲ. ನೋಡು, ಧ್ರುವ, ಪ್ರಹ್ಲಾದ, ವಿಭೀಷಣರನ್ನು ! ರಾಮನಿಂದಕರನ್ನು ಯಮಕಿಂಕರರು ಕಬ್ಬಿಣದ ದೊಣ್ಣೆಗಳಿಂದ ಸದೆಬಡಿಯುತ್ತಾರೆ. ಪಾಶಗಳಿಂದ ಬಿಗಿಯುತ್ತಾರೆ. ಬ್ರಾಹ್ಮಣಾಧಮ, ನೀನು ಬ್ರಾಹ್ಮಣನಾದುದರಿಂದ ಹೊಡೆಯದೆ ಬಿಟ್ಟಿದ್ದೇನೆ. ಹೊರಡು ಇಲ್ಲಿಂದ. ನನ್ನ ಕಣ್ಣ ಮುಂದೆ ಇರಬೇಡ' ಎಂದ ರಾಜ. ಭಟರು ಮುನಿಯನ್ನು ಹಿಡಿದು ಹೊರಗೆ ತಳ್ಳಲು ತೊಡಗಿದರು.

ಆಗ ಯಮನು ಮುನಿ ವೇಷವನ್ನು ತೊರೆದು ನಿಜರೂಪದಲ್ಲಿ ಕಾಣಿಸಿಕೊಂಡ. 'ರಾಜನೆ, ನಿನ್ನ ಹರಿಭಕ್ತಿಯನ್ನು ಕಂಡು ಸಂತೋಷಗೊಂಡೆ. ಬೇಕಾದ ವರವನ್ನು ಕೇಳು.

ನಾನೆಷ್ಟು ಹೇಳಿದರೂ ಪ್ರಲೋಭನೊಳಗಾಗದೆ ರಾಮಭಕ್ತಿಯಲ್ಲಿ ಅಚಲವಾದ ನಿಷ್ಠೆಯನ್ನೆ ತೋರಿರುವೆ' ಎಂದೆ.

'ಧರ್ಮರಾಜ, ನನಗೆ ರಾಮನು ಕಾಣುವವರೆಗೂ ಮರಣಭಯ ಇಲ್ಲದಂತಾಗಲಿ. ಇಷ್ಟೆ ನಾನು ನಿನ್ನಲ್ಲಿ ಕೇಳಿಕೊಳ್ಳುವೆನು.'

'ಹಾಗೆ ಆಗಲಿ, ನಿನ್ನೆಲ್ಲ ಅಭೀಷ್ಟಗಳನ್ನು ರಾಮನೆ ಪೂರೈಸುತ್ತಾನೆ.' ಹೀಗೆ ಹೇಳಿ ಯಮನು ತನ್ನ ಲೋಕಕ್ಕೆ ತೆರಳಿದ.

ಈಗ ರಾಮನನ್ನು ಕಾಣುವ ಅವಕಾಶ ದೊರೆತಿರುವುದರಿಂದ ಕುದುರೆಯನ್ನು ಬಿಟ್ಟು ಬಿಡಲು ರಾಜನು ಸಿದ್ಧನಿರಲಿಲ್ಲ. ಆತ ಸೇವಕರನ್ನು ಕರೆದು ಯುದ್ಧಕ್ಕೆ ಅಣಿಯಾಗಿರಲು ಅಜ್ಞಾಪಿಸಿದ. ಚಂಪಕ, ಮೋಹಕ, ರಿಪುಂಜಯ, ದುರ್ವಾರ, ಪ್ರತಾಪೀ ಬಲಮೋದಕ, ಹರ್ಯಕ್ಷ, ಸಹದೇವ, ಭೂರಿದೇವ, ಅಸುತಾಪನ ಹೀಗೆ ಹತ್ತುಮಂದಿ ರಾಜಕುಮಾರರೊಂದಿಗೆ ತಾನೂ ಯುದ್ಧ ಸನ್ನದ್ಧನಾಗಿ ಚಿನ್ನದ ರಥವನ್ನು ಏರಿ ಕುಳಿತ. ಉತ್ಸಾಹದಿಂದ ಸೇನೆ ಹೊರಟಿತು.

**ಶೇಷ :-** ಇತ್ತ ಶತ್ರುಘ್ನನು 'ಕುದುರೆ ಎಲ್ಲಿ ?' ಎಂದು ಭಟರನ್ನು ಕೇಳಿದಾಗ ಅವರೆಂದರು 'ಪ್ರಭು, ಯಾರೊ ಕೆಲವು ವೀರಭಟರು ಬಂದು ಬಲಾತ್ಕಾರದಿಂದ ಎಳೆದೊಯ್ದರು, ಈಗ ನಾವೇನು ಮಾಡಬೇಕು, ಅಪ್ಪಣೆ ಕೊಡಿ.'

ಶತ್ರುಘ್ನನು ಕೋಪದಿಂದ ಹಲ್ಲು ಕಡಿಯುತ್ತ 'ಯಾರವನು ? ನನ್ನ ಕುದುರೆಯನ್ನು ಹಿಡಿದು ಎಲ್ಲಿಗೆ ಹೋಗುವನು ? ಅವನನ್ನೂ ಅವನ ಊರವರನ್ನೂ ನನ್ನ ಬಾಣಗಳಿಂದ ನೆಲಕ್ಕೆ ಉರುಳಿಸುವೆನು' ಎನ್ನುತ್ತ ಅಮಾತ್ಯ ಸುಮತಿಯನ್ನು ಕೇಳಿದ 'ಇದು ಯಾವ ಪಟ್ಟಣ? ನನ್ನ ಕುದುರೆಯನ್ನು ಅಪಹರಿಸಿದ ರಾಜನು ಯಾರು ?

ಸುಮತಿ ಎಂದ 'ಇದು ಕುಂಡಲನಗರ. ಧರ್ಮಾತ್ಮನೂ ಮಹಾ ಪರಾಕ್ರಮಿಯೂ ಆದ ಸುರಥರಾಜ ಇಲ್ಲಿರುವನು. ಹನುಮಂತನಂತೆ ತ್ರಿಕರಣಗಳಿಂದಲೂ ರಾಮನನ್ನು ಭಜಿಸುವವನು. ಅವನೇನಾದರೂ ಕುದುರೆಯನ್ನು ಹಿಡಿದುಕೊಂಡಿದ್ದರೆ ದೊಡ್ಡ ಯುದ್ಧವೆ ನಡೆದೀತು.'

'ಹಾಗಾದರೆ ಈಗ ಏನು ಮಾಡಬೇಕು ? ಅವನು ಕುದುರೆಯನ್ನು ಹಿಡಿದಿದ್ದರೂ. ನಮ್ಮ ಪ್ರಬಲವಾದ ಸೇನೆಯೊಂದಿಗೆ ಯುದ್ಧಕ್ಕೆ ಬರದೆ ಇದ್ದರೆ ?'

ಮಹಾರಾಜ, ಒಬ್ಬ ದೂತನನ್ನು ಕಳಿಸಿಕೊಡು. ಯುದ್ಧದ ಆಹ್ವಾನವನ್ನು ಅವನು ಮುಟ್ಟಿಸಲಿ. ಆಗ ಸೇನಾಸಮೇತನಾಗಿ ಆ ರಾಜನು ಯುದ್ಧಕ್ಕೆ ಬಂದೇ ಬರುತ್ತಾನೆ. ಇಲ್ಲವೆ ಅವನಿಗರಿವಾಗದಂತೆ ಪ್ರಜೆಗಳು ಯಾರಾದರೂ ಕುದುರೆಯನ್ನು ಕಟ್ಟಿದ್ದರೆ, ಅವನು ಕುದುರೆಯನ್ನು ನಮಗೊಪ್ಪಿಸುತ್ತಾನೆ. ಅವನು ಒಳ್ಳೆಯವನು.'

ಇದನ್ನು ಕೇಳಿ ಶತ್ರುಘ್ನನು ಅಂಗದನನ್ನು ಕರೆದು ಹೇಳಿದ.

ಅಂಗದ ರಾಜನ ಬಳಿಗೆ ದೂತನಾಗಿ ಹೋಗಿ ಹೇಳು - 'ತಿಳಿದೊ, ತಿಳಿಯದೆಯೊ ನೀನು ಕಟ್ಟಿ ಹಾಕಿರುವ ರಾಮನ ಅಶ್ವಮೇಧದ ಕುದುರೆಯನ್ನು ಈಗಲೆ ಒಪ್ಪಿಸು ಇಲ್ಲವೆ

ಯುದ್ಧ ಮಾಡು ಎಂದು. ಹಿಂದೆ ರಾವಣನಲ್ಲಿ ರಾಮದೂತನಾಗಿ ಕಾರ್ಯನಿರ್ವಹಿಸಿದಂತೆ ಈಗಲೂ ಯಶಸ್ವಿಯಾಗಿ ಕಾರ್ಯ ನಿರ್ವಹಿಸು. ನೀನು ಬಲಶಾಲಿ, ಬುದ್ಧಿವಂತ.'

'ಆಗಲಿ' ಎಂದು ಹೇಳಿ ಅಂಗದನು ಸುರಥ ರಾಜನ ಬಳಿಗೆ ತೆರಳಿದ. ತನ್ನ ಭಟರ ಮುಂದೆ ರಾಮನ ಚರಿತ್ರೆಯನ್ನು ಹೇಳುತ್ತಿದ್ದ ರಾಜ ಅಂಗದನನ್ನು ಕಂಡು 'ಏನು ಕಾರಣ ಬಂದೆ ?' ಎಂದು ಕೇಳಿದ. ತಲೆಯಲ್ಲಿ ತುಳಸಿಯ ಮಂಜರಿಯನ್ನು ಇಟ್ಟುಕೊಂಡು ರಾಮನಾಮವನ್ನು ನಾಲಿಗೆಯಿಂದ ಉಚ್ಚರಿಸುವ ಆ ರಾಮಭಕ್ತನನ್ನು ಕಂಡು ಅಂಗದ ಆಶ್ಚರ್ಯಗೊಂಡ.

'ರಾಜನೆ, ನಾನು ವಾಲಿಯ ಪುತ್ರ. ಶತ್ರುಘ್ನನ ದೂತ. ನಿನ್ನ ಭಟರು ನಮ್ಮ ಕುದುರೆಯನ್ನು ಹಿಡಿದಿದ್ದಾರೆ. ಏನೂ ತಿಳಿಯದೆ ಸಾಹಸಕೃತ್ಯಕ್ಕೆ ಕೈ ಹಾಕಿದ್ದಾರೆ. ನೀನೂ ನಿನ್ನ ಮಕ್ಕಳೂ ಸೇರಿ ಆ ಕುದುರೆಯನ್ನೂ ನಿನ್ನ ರಾಜ್ಯವನ್ನೂ ಶತ್ರುಘ್ನನಿಗೆ ಒಪ್ಪಿಸಿ ಅವನ ಕಾಲಿಗೆ ಬೀಳು. ಇಲ್ಲದಿದ್ದರೆ ಅವನ ಬಾಣಗಳಿಗೆ ತುತ್ತಾಗುವೆ, ನೆಲಕ್ಕೊರಗುವೆ.'

'ದೂತನೆ, ನೀನು ಹೇಳುವುದೆಲ್ಲ ಸರಿಯೆ. ಆದರೆ ನಾನು ಕುದುರೆಯನ್ನು ಶತ್ರುಘ್ನನ ಭಯದಿಂದ ಎಂದೂ ಬಿಡುವವನಲ್ಲ. ಸ್ವಯಂ ರಾಮನೆ ಬಂದು ದರ್ಶನವಿತ್ತರೆ ನಾನು ನನ್ನ ಮಕ್ಕಳೊಂದಿಗೆ ಅವನ ಕಾಲಿಗೆ ಬಿದ್ದು ನನ್ನೆಲ್ಲ ರಾಜ್ಯ, ಪರಿವಾರ, ಧನ ಧಾನ್ಯ ಸಂಪತ್ತು, ಸೇನೆ ಎಲ್ಲವನ್ನೂ ಒಪ್ಪಿಸುತ್ತೇನೆ. ಸ್ವಾಮಿಯೊಂದಿಗಾದರೂ ಯುದ್ಧ ಮಾಡುವುದು ಕ್ಷತ್ರಿಯರ ಧರ್ಮ. ಅದರಲ್ಲಿಯೂ ರಾಮನ ದರ್ಶನಕ್ಕಾಗಿ ಧರ್ಮದಿಂದ ಯುದ್ಧ ಮಾಡುತ್ತೇನೆ. ರಾಮನೊಂದು ವೇಳೆ ಬಾರದಿದ್ದರೆ ಶತ್ರುಘ್ನ ಮುಂತಾದ ವೀರರನ್ನೆಲ್ಲ ಗೆದ್ದು ಬಂಧಿಸಿಡುತ್ತೇನೆ.'

'ರಾಜನ್, ಶತ್ರುಘ್ನನನ್ನು ಧಿಕ್ಕರಿಸುವ ನಿನಗೆ ಬುದ್ಧಿಯಿಲ್ಲ. ಮುದಿತನದಿಂದ ನೀನು ಹೀಗೆ ಬುದ್ಧಿಹೀನನಾಗಿರಬಹುದು. ಮಾಂಧಾತೃ ರಿಪುವೆನಿಸಿದ ಲವಣಾಸುರನನ್ನು ಅನಾಯಾಸವಾಗಿ ಕೊಂದವನು ಶತ್ರುಘ್ನ. ಎಲ್ಲೆಡೆಯಲ್ಲೂ ಸಂಚರಿಸಬಲ್ಲ ವಿಮಾನವನ್ನು ಹೊಂದಿದ್ದ ವಿದ್ಯುನ್ಮಾಲಿಯನ್ನೂ ಕೊಂದವ ಶತ್ರುಘ್ನ. ಅವನ ಅಣ್ಣನ ಮಗ ಪುಷ್ಕಲನು ಶಿವಗಣಗಳೊಂದಿಗೆ ಹೋರಾಡಿದವ. ವೀರಭದ್ರನನ್ನು ಯುದ್ಧದಲ್ಲಿ ಸಂತೋಷಪಡಿಸಿದವ. ಅವನ ಪರಾಕ್ರಮ ವರ್ಣನೆಗೆ ನಿಲುಕಲಾರದುದು. ಈ ಭೂಮಿಯ ಮೇಲೆ ಎಲ್ಲೂ ಕಾಣಲು ಸಿಗಲಾರದ ಬಲ ಯಶಸ್ಸು ಸಂಪತ್ತು ಆತನದು. ರಾಮನ ಪದಕಮಲಗಳಲ್ಲಿ ನೆಟ್ಟ ಮನಸ್ಸಿನವ ಹನುಮಂತ. ತ್ರಿಕೂಟ ಸಹಿತವಾದ ಲಂಕೆಯನ್ನೇ ಒಂದು ಕ್ಷಣದಲ್ಲಿ ಸುಟ್ಟವ. ರಾಕ್ಷಸ ಚಕ್ರವರ್ತಿ ರಾವಣನ ಮಗನಾದ ಅಕ್ಷನನ್ನು ಕೊಂದವ. ರಣರಂಗದಲ್ಲಿ ಮಡಿದ ಸೈನಿಕರನ್ನು ಬದುಕಿಸಲು ದೇವತೆಗಳ ವಾಸಸ್ಥಾನವಾದ ದ್ರೋಣ ಪರ್ವತವನ್ನೇ ಬಾಲದಿಂದ ಕಿತ್ತಿ ತಂದವ. ಅವನ ಮಹಿಮೆಯನ್ನು ಆ ರಾಮನೊಬ್ಬನೆ ತಿಳಿಯಬಲ್ಲ. ಆದ್ದರಿಂದ ಅವನು ಒಂದು ಕ್ಷಣವೂ ಆತನನ್ನು ಮರೆಯಲಾರ. ಸುಗ್ರೀವ ಮುಂತಾದ ಕಪಿ ವೀರರು ಇಡಿ ಭೂಮಿಯನ್ನೆ ನುಂಗಬಲ್ಲರು. ಇವರೆಲ್ಲರಿಗೆ ಪ್ರಭುವಾದ ಶತ್ರುಘ್ನನನ್ನು ನೀನು ಬಂಧಿಸಬಲ್ಲೆಯಾ ? ಇನ್ನು ಕುಶಧ್ವಜ, ನೀಲರತ್ನ, ರಿಪುತಾಪ ಪ್ರತಾಪಾಗ್ರ್ಯ, ಸುಬಾಹು, ವಿಮಲ, ಸುಮನ,

ನಾನೆಷ್ಟು ಹೇಳಿದರೂ ಪ್ರಲೋಭನೊಳಗಾಗದೆ ರಾಮಭಕ್ತಿಯಲ್ಲಿ ಅಚಲವಾದ ನಿಷ್ಠೆಯನ್ನೆ ತೋರಿರುವೆ' ಎಂದೆ.

'ಧರ್ಮರಾಜ, ನನಗೆ ರಾಮನು ಕಾಣುವವರೆಗೂ ಮರಣಭಯ ಇಲ್ಲದಂತಾಗಲಿ. ಇಷ್ಟೆ ನಾನು ನಿನ್ನಲ್ಲಿ ಕೇಳಿಕೊಳ್ಳುವೆನು.'

'ಹಾಗೆ ಆಗಲಿ, ನಿನ್ನೆಲ್ಲ ಅಭೀಷ್ಟಗಳನ್ನು ರಾಮನೆ ಪೂರೈಸುತ್ತಾನೆ.' ಹೀಗೆ ಹೇಳಿ ಯಮನು ತನ್ನ ಲೋಕಕ್ಕೆ ತೆರಳಿದ.

ಈಗ ರಾಮನನ್ನು ಕಾಣುವ ಅವಕಾಶ ದೊರೆತಿರುವುದರಿಂದ ಕುದುರೆಯನ್ನು ಬಿಟ್ಟು ಬಿಡಲು ರಾಜನು ಸಿದ್ಧನಿರಲಿಲ್ಲ. ಆತ ಸೇವಕರನ್ನು ಕರೆದು ಯುದ್ಧಕ್ಕೆ ಅಣಿಯಾಗಿರಲು ಅಜ್ಞಾಪಿಸಿದ. ಚಂಪಕ, ಮೋಹಕ, ರಿಪುಂಜಯ, ದುರ್ವಾರ, ಪ್ರತಾಪೀ ಬಲಮೋದಕ, ಹರ್ಯಕ್ಷ, ಸಹದೇವ, ಭೂರಿದೇವ, ಅಸುತಾಪನ ಹೀಗೆ ಹತ್ತುಮಂದಿ ರಾಜಕುಮಾರರೊಂದಿಗೆ ತಾನೂ ಯುದ್ಧ ಸನ್ನದ್ಧನಾಗಿ ಚಿನ್ನದ ರಥವನ್ನು ಏರಿ ಕುಳಿತ. ಉತ್ಸಾಹದಿಂದ ಸೇನೆ ಹೊರಟಿತು.

**ಶೇಷ :-** ಇತ್ತ ಶತ್ರುಘ್ನನು 'ಕುದುರೆ ಎಲ್ಲಿ ?' ಎಂದು ಭಟರನ್ನು ಕೇಳಿದಾಗ ಅವರೆಂದರು 'ಪ್ರಭು, ಯಾರೊ ಕೆಲವು ವೀರಭಟರು ಬಂದು ಬಲಾತ್ಕಾರದಿಂದ ಎಳೆದೊಯ್ದರು, ಈಗ ನಾವೇನು ಮಾಡಬೇಕು, ಅಪ್ಪಣೆ ಕೊಡಿ.'

ಶತ್ರುಘ್ನನು ಕೋಪದಿಂದ ಹಲ್ಲು ಕಡಿಯುತ್ತ 'ಯಾರವನು ? ನನ್ನ ಕುದುರೆಯನ್ನು ಹಿಡಿದು ಎಲ್ಲಿಗೆ ಹೋಗುವನು ? ಅವನನ್ನೂ ಅವನ ಊರವರನ್ನೂ ನನ್ನ ಬಾಣಗಳಿಂದ ನೆಲಕ್ಕೆ ಉರುಳಿಸುವೆನು' ಎನ್ನುತ್ತ ಅಮಾತ್ಯ ಸುಮತಿಯನ್ನು ಕೇಳಿದ 'ಇದು ಯಾವ ಪಟ್ಟಣ? ನನ್ನ ಕುದುರೆಯನ್ನು ಅಪಹರಿಸಿದ ರಾಜನು ಯಾರು ?

ಸುಮತಿ ಎಂದ 'ಇದು ಕುಂಡಲನಗರ. ಧರ್ಮಾತ್ಮನೂ ಮಹಾ ಪರಾಕ್ರಮಿಯೂ ಆದ ಸುರಥರಾಜ ಇಲ್ಲಿರುವನು. ಹನುಮಂತನಂತೆ ತ್ರಿಕರಣಗಳಿಂದಲೂ ರಾಮನನ್ನು ಭಜಿಸುವವನು. ಅವನೇನಾದರೂ ಕುದುರೆಯನ್ನು ಹಿಡಿದುಕೊಂಡಿದ್ದರೆ ದೊಡ್ಡ ಯುದ್ಧವೆ ನಡೆದೀತು.'

'ಹಾಗಾದರೆ ಈಗ ಏನು ಮಾಡಬೇಕು ? ಅವನು ಕುದುರೆಯನ್ನು ಹಿಡಿದಿದ್ದರೂ. ನಮ್ಮ ಪ್ರಬಲವಾದ ಸೇನೆಯೊಂದಿಗೆ ಯುದ್ಧಕ್ಕೆ ಬರದೆ ಇದ್ದರೆ ?'

ಮಹಾರಾಜ, ಒಬ್ಬ ದೂತನನ್ನು ಕಳಿಸಿಕೊಡು. ಯುದ್ಧದ ಆಹ್ವಾನವನ್ನು ಅವನು ಮುಟ್ಟಿಸಲಿ. ಆಗ ಸೇನಾಸಮೇತನಾಗಿ ಆ ರಾಜನು ಯುದ್ಧಕ್ಕೆ ಬಂದೇ ಬರುತ್ತಾನೆ. ಇಲ್ಲವೆ ಅವನಿಗರಿವಾಗದಂತೆ ಪ್ರಜೆಗಳು ಯಾರಾದರೂ ಕುದುರೆಯನ್ನು ಕಟ್ಟಿದ್ದರೆ, ಅವನು ಕುದುರೆಯನ್ನು ನಮಗೊಪ್ಪಿಸುತ್ತಾನೆ. ಅವನು ಒಳ್ಳೆಯವನು.'

ಇದನ್ನು ಕೇಳಿ ಶತ್ರುಘ್ನನು ಅಂಗದನನ್ನು ಕರೆದು ಹೇಳಿದ.

ಅಂಗದ ರಾಜನ ಬಳಿಗೆ ದೂತನಾಗಿ ಹೋಗಿ ಹೇಳು - 'ತಿಳಿದೊ, ತಿಳಿಯದೆಯೊ ನೀನು ಕಟ್ಟಿ ಹಾಕಿರುವ ರಾಮನ ಅಶ್ವಮೇಧದ ಕುದುರೆಯನ್ನು ಈಗಲೆ ಒಪ್ಪಿಸು ಇಲ್ಲವೆ

ಯುದ್ಧ ಮಾಡು ಎಂದು. ಹಿಂದೆ ರಾವಣನಲ್ಲಿ ರಾಮದೂತನಾಗಿ ಕಾರ್ಯನಿರ್ವಹಿಸಿದಂತೆ ಈಗಲೂ ಯಶಸ್ವಿಯಾಗಿ ಕಾರ್ಯ ನಿರ್ವಹಿಸು. ನೀನು ಬಲಶಾಲಿ, ಬುದ್ಧಿವಂತ.'

'ಆಗಲಿ' ಎಂದು ಹೇಳಿ ಅಂಗದನು ಸುರಥ ರಾಜನ ಬಳಿಗೆ ತೆರಳಿದ. ತನ್ನ ಭಟರ ಮುಂದೆ ರಾಮನ ಚರಿತ್ರೆಯನ್ನು ಹೇಳುತ್ತಿದ್ದ ರಾಜ ಅಂಗದನನ್ನು ಕಂಡು 'ಏನು ಕಾರಣ ಬಂದೆ ?' ಎಂದು ಕೇಳಿದ. ತಲೆಯಲ್ಲಿ ತುಳಸಿಯ ಮಂಜರಿಯನ್ನು ಇಟ್ಟುಕೊಂಡು ರಾಮನಾಮವನ್ನು ನಾಲಿಗೆಯಿಂದ ಉಚ್ಚರಿಸುವ ಆ ರಾಮಭಕ್ತನನ್ನು ಕಂಡು ಅಂಗದ ಆಶ್ಚರ್ಯಗೊಂಡ.

'ರಾಜನೆ, ನಾನು ವಾಲಿಯ ಪುತ್ರ. ಶತ್ರುಘ್ನನ ದೂತ. ನಿನ್ನ ಭಟರು ನಮ್ಮ ಕುದುರೆಯನ್ನು ಹಿಡಿದಿದ್ದಾರೆ. ಏನೂ ತಿಳಿಯದೆ ಸಾಹಸಕೃತ್ಯಕ್ಕೆ ಕೈ ಹಾಕಿದ್ದಾರೆ. ನೀನೂ ನಿನ್ನ ಮಕ್ಕಳೂ ಸೇರಿ ಆ ಕುದುರೆಯನ್ನೂ ನಿನ್ನ ರಾಜ್ಯವನ್ನೂ ಶತ್ರುಘ್ನನಿಗೆ ಒಪ್ಪಿಸಿ ಅವನ ಕಾಲಿಗೆ ಬೀಳು. ಇಲ್ಲದಿದ್ದರೆ ಅವನ ಬಾಣಗಳಿಗೆ ತುತ್ತಾಗುವೆ, ನೆಲಕ್ಕುರುಳುವೆ.'

'ದೂತನೆ, ನೀನು ಹೇಳುವುದೆಲ್ಲ ಸರಿಯೆ. ಆದರೆ ನಾನು ಕುದುರೆಯನ್ನು ಶತ್ರುಘ್ನನ ಭಯದಿಂದ ಎಂದೂ ಬಿಡುವವನಲ್ಲ. ಸ್ವಯಂ ರಾಮನೆ ಬಂದು ದರ್ಶನವಿತ್ತರೆ ನಾನು ನನ್ನ ಮಕ್ಕಳೊಂದಿಗೆ ಅವನ ಕಾಲಿಗೆ ಬಿದ್ದು ನನ್ನೆಲ್ಲ ರಾಜ್ಯ, ಪರಿವಾರ, ಧನ ಧಾನ್ಯ ಸಂಪತ್ತು, ಸೇನೆ ಎಲ್ಲವನ್ನೂ ಒಪ್ಪಿಸುತ್ತೇನೆ. ಸ್ವಾಮಿಯೊಂದಿಗಾದರೂ ಯುದ್ಧ ಮಾಡುವುದು ಕ್ಷತ್ರಿಯರ ಧರ್ಮ. ಆದರಲ್ಲಿಯೂ ರಾಮನ ದರ್ಶನಕ್ಕಾಗಿ ಧರ್ಮದಿಂದ ಯುದ್ಧ ಮಾಡುತ್ತೇನೆ. ರಾಮನೊಂದು ವೇಳೆ ಬಾರದಿದ್ದರೆ ಶತ್ರುಘ್ನ ಮುಂತಾದ ವೀರರನ್ನೆಲ್ಲ ಗೆದ್ದು ಬಂಧಿಸಿಡುತ್ತೇನೆ.'

'ರಾಜನ್, ಶತ್ರುಘ್ನನನ್ನು ಧಿಕ್ಕರಿಸುವ ನಿನಗೆ ಬುದ್ಧಿಯಿಲ್ಲ. ಮುದಿತನದಿಂದ ನೀನು ಹೀಗೆ ಬುದ್ಧಿಹೀನನಾಗಿರಬಹುದು. ಮಾಂಧಾತೃ ರಿಪುವೆನಿಸಿದ ಲವಣಾಸುರನನ್ನು ಅನಾಯಾಸವಾಗಿ ಕೊಂದವನು ಶತ್ರುಘ್ನ. ಎಲ್ಲೆಡೆಯಲ್ಲೂ ಸಂಚರಿಸಬಲ್ಲ ವಿಮಾನವನ್ನು ಹೊಂದಿದ್ದ ವಿದ್ಯುನ್ಮಾಲಿಯನ್ನೂ ಕೊಂದವ ಶತ್ರುಘ್ನ. ಅವನ ಅಣ್ಣನ ಮಗ ಪುಷ್ಕಲನು ಶಿವಗಣಗಳೊಂದಿಗೆ ಹೋರಾಡಿದವ. ವೀರಭದ್ರನನ್ನು ಯುದ್ಧದಲ್ಲಿ ಸಂತೋಷಪಡಿಸಿದವ. ಅವನ ಪರಾಕ್ರಮ ವರ್ಣನೆಗೆ ನಿಲುಕಲಾರದುದು. ಈ ಭೂಮಿಯ ಮೇಲೆ ಎಲ್ಲೂ ಕಾಣಲು ಸಿಗಲಾರದ ಬಲ ಯಶಸ್ಸು ಸಂಪತ್ತು ಆತನದು. ರಾಮನ ಪದಕಮಲಗಳಲ್ಲಿ ನೆಟ್ಟ ಮನಸ್ಸಿನವ ಹನುಮಂತ. ತ್ರಿಕೂಟ ಸಹಿತವಾದ ಲಂಕೆಯನ್ನೇ ಒಂದು ಕ್ಷಣದಲ್ಲಿ ಸುಟ್ಟವ. ರಾಕ್ಷಸ ಚಕ್ರವರ್ತಿ ರಾವಣನ ಮಗನಾದ ಅಕ್ಷನನ್ನು ಕೊಂದವ. ರಣರಂಗದಲ್ಲಿ ಮಡಿದ ಸೈನಿಕರನ್ನು ಬದುಕಿಸಲು ದೇವತೆಗಳ ವಾಸಸ್ಥಾನವಾದ ದ್ರೋಣ ಪರ್ವತವನ್ನೇ ಬಾಲದಿಂದ ಕಿತ್ತಿ ತಂದವ. ಅವನ ಮಹಿಮೆಯನ್ನು ಆ ರಾಮನೊಬ್ಬನೆ ತಿಳಿಯಬಲ್ಲ. ಆದ್ದರಿಂದ ಅವನು ಒಂದು ಕ್ಷಣವೂ ಆತನನ್ನು ಮರೆಯಲಾರ. ಸುಗ್ರೀವ ಮುಂತಾದ ಕಪಿ ವೀರರು ಇಡಿ ಭೂಮಿಯನ್ನೆ ನುಂಗಬಲ್ಲರು. ಇವರೆಲ್ಲರಿಗೆ ಪ್ರಭುವಾದ ಶತ್ರುಘ್ನನನ್ನು ನೀನು ಬಂಧಿಸಬಲ್ಲೆಯಾ ? ಇನ್ನು ಕುಶಧ್ವಜ, ನೀಲರತ್ನ, ರಿಪುತಾಪ ಪ್ರತಾಪಾಗ್ರ್ಯ, ಸುಬಾಹು, ವಿಮಲ, ಸುಮನ,

ವೀರಮಣಿ, ಸತ್ಯವಾನ್ ಮುಂತಾದ ಅನೇಕ ರಾಜರೂ ಶತ್ರುಘ್ನನ ಭಟರು. ಹೀಗೆ ಶತ್ರುಘ್ನ ಸೇನೆ ಎಂದರೆ ವೀರಭಟರ ಸಮುದ್ರ. ಅವರೊಡನೆ ಕಾದಲು ಸೊಳ್ಳೆಯಂಥ ನೀನು ಎಷ್ಟರವನು ? ಶತ್ರುಘ್ನನು ದಯಾಳು. ನೀನು ಅವನಿಗೆ ಶರಣಾಗು. ಕುದುರೆಯನ್ನು ಒಪ್ಪಿಸಿ ರಾಮನ ಬಳಿಗೆ ಹೋಗು. ಅವನನ್ನು ನೋಡು. ನಿನ್ನ ಕಣ್ಣುಗಳನ್ನು ಸಾರ್ಥಕಗೊಳಿಸು. ಜನ್ಮ ಸಾಫಲ್ಯವನ್ನೂ ಪಡೆ.'

'ದೂತನೆ, ಈ ವೀರರನ್ನೆಲ್ಲ ಒಮ್ಮೆ ನನಗೆ ತೋರಿಸುವೆಯಂತೆ ಅವರೊಬ್ಬರನ್ನೂ ನಾನು ಕಂಡಿಲ್ಲ. ಹನುಮಂತನ ಬಲವನ್ನು ನೀನು ಎಷ್ಟು ಬಣ್ಣಿಸಿದರೂ ಅದು ನನ್ನ ಬಲಕ್ಕೆ ಸಮಾನವಾಗಲಾರದು. ಅವನೇನಿದ್ದರೂ ರಾಮನನ್ನು ಬಿಟ್ಟು ಕುದುರೆಯ ಹಿಂದೆ ತಿರುಗುತ್ತಿದ್ದಾನೆ. ನಾನು ತ್ರಿಕರಣಪೂರ್ವಕವಾಗಿ ರಾಮನನ್ನು ಭಜಿಸುತ್ತಿರುವುದು ನಿಜವಾದರೆ ರಾಮನು ನನಗೆ ಮೈದೋರಬೇಕು. ಇಲ್ಲದಿದ್ದರೆ ಹನುಮಂತ ಮುಂತಾದ ವೀರರು ನನ್ನನ್ನು ಕಟ್ಟಿ ಕುದುರೆಯನ್ನು ಬಿಡಿಸಿಕೊಂಡು ಹೋಗಲಿ. ಈ ಮಾತನ್ನು ನೀನು ಶತ್ರುಘ್ನನಲ್ಲಿ ಹೇಳು. ಅವನ ವೀರರು ಯುದ್ಧಕ್ಕೆ ಸಿದ್ಧರಾಗಲಿ. ನಾನು ಬರುತ್ತೇನೆ.'

ಅಂಗದನು ಈ ಮಾತನ್ನು ಕೇಳಿ ನಕ್ಕು ಶತ್ರುಘ್ನನ ಬಳಿಯಲ್ಲಿ ಎಲ್ಲವನ್ನೂ ತಿಳಿಸಿದರು.

ರಣಭೂಮಿಯಲ್ಲಿ ಶತ್ರುಘ್ನ ಸೇನೆಯ ಭೇರಿ ತಮಟೆಗಳ ಧ್ವನಿ ವೀರರ ಗರ್ಜನೆ, ರಥಗಳ ಚೀತ್ಕಾರ, ಆನೆಗಳ ಬೃಂಹಿತಗಳು ತುಂಬಿ ಲೋಕವನ್ನೆಲ್ಲ ವ್ಯಾಪಿಸಿತು. ದೇವಲೋಕವನ್ನು ಮುಟ್ಟಿತು. ಅಷ್ಟರಲ್ಲಿ ಸುರಥನ ಸೇನಾಸಮುದ್ರವೂ ಶಂಖನಾದ ಜಯಶಬ್ದಗಳನ್ನು ಮಾಡುತ್ತ ಅಲ್ಲಿಗೆ ಬಂದಿತು. ಸುಮತಿಯ ಸಲಹೆಯಂತೆ ಹನುಮಂತನು ಸುರಥ ರಾಜನೊಂದಿಗೂ, ಪುಷ್ಕಲ ಮುಂತಾದವರು ಉಳಿದ ವೀರರೊಂದಿಗೂ ಹೋರಾಟಕ್ಕೆ ಇಳಿದರು. ಪುಷ್ಕಲ-ಚಂಪಕ, ಲಕ್ಷ್ಮೀನಿಧಿ-ಮೋಹಕ, ವಿಮಲ-ರಿಪುಂಜಯ, ಸುಬಾಹು-ದುರ್ವಾರ, ಪ್ರತಾಪಾಗ್ರ್ಯ-ಪ್ರತಾಪಿ, ಅಂಗದ-ಬಲಮೋದ, ನೀಲರತ್ನ- ಹರ್ಯಕ್ಷ, ಸತ್ಯವಂತ-ಸಹದೇವ, ವೀರಮಣಿ-ಭೂರಿದೇವ, ಉಗ್ರಾಶ್ವ-ಅಸಂತಾಪ ಹೀಗೆ ದ್ವಂದ್ವ ಯುದ್ಧ ನಡೆಯಿತು.

ಪುಷ್ಕಲನು ರಾಜಕುಮಾರ ಚಂಪಕನ ಮುಂದೆ ನಿಂತು 'ರಾಜಕುಮಾರ ನಿನ್ನ ಹೆಸರೇನು? ನನ್ನೊಡನೆ ಯುದ್ಧ ಮಾಡುವ ಅವಕಾಶ ಸಿಕ್ಕಿರುವುದರಿಂದ ನೀನು ಧನ್ಯ. ಬಾ, ಇನ್ನು ಮುಂದೆ ನೀ ಬದುಕಿ ಉಳಿಯಲಾರೆ' ಎಂದ. ಚಂಪಕನೂ ಅಷ್ಟೇ ಹೆಮ್ಮೆಯಿಂದ ಉತ್ತರಿಸಿದ. 'ಹೆಸರು ಕುಲಗಳಿಂದ ಯುದ್ಧ ನಡೆಯುವುದಿಲ್ಲ. ಆದರೂ ನನ್ನ ಹೆಸರು ಪ್ರತಾಪಗಳೆಲ್ಲವನ್ನೂ ಹೇಳುವೆನು ಕೇಳು.

**ಮಮಮಾತಾ ರಘೋರ್ನಾಥೋ ಮತ್ಪಿತಾ ರಾಘವಃ ಸ್ಮೃತಃ**
**ಮಮ ಬಂಧೂ ರಾಮಚಂದ್ರಃ ಸ್ವಜನೋ ಮಮ ರಾಘವಃ**
**ಮನ್ನಾಮ ರಾಮದಾಸೋಸ್ಮಿ ಸದಾ ರಾಮಸ್ಯ ಸೇವಕಃ ।**

ನನ್ನ ತಾಯಿ ತಂದೆ ಬಂಧು ಸ್ವಜನ ಎಲ್ಲವೂ ರಾಮನೆ. ನಾನು ರಾಮನ ಸೇವಕ. ನನ್ನ ಹೆಸರು ರಾಮದಾಸ.

ಇನ್ನು ಲೋಕ ರೀತಿಯಿಂದ ಹೇಳುವುದಾದರೆ ನಾನು ಸುರಥ ಮಹಾರಾಜನ ಪುತ್ರ. ನನ್ನ ತಾಯಿ ವೀರವತಿ. ನನ್ನ ಹೆಸರಿನ ಒಂದು ಹೂವು ವಸಂತದಲ್ಲಿ ವನಗಳಿಗೆಲ್ಲ ಶೋಭ ತರುತ್ತದೆ. ಆದರ ಬಳಿಗೆ ದುಂಬಿಗಳು ಬರುವುದಿಲ್ಲ. ಚಿನ್ನದ ಬಣ್ಣ. ಮಧ್ಯದಲ್ಲಿ ಲಿಂಗಾಕಾರವಿದೆ. ಆದರಿಂದ ನನ್ನ ಸುಂದರವಾದ ಹೆಸರನ್ನು ನೀನೆ ಊಹಿಸಿಕೊಳ್ಳು. ಯುದ್ಧ ಮಾಡು. ನನ್ನ ಪರಾಕ್ರಮವನ್ನು ನೋಡು.'

ಇದನ್ನು ಕೇಳಿ ಪುಷ್ಕಲನು 'ಈತ ಸಾಮಾನ್ಯ ವೀರನಲ್ಲ. ಒಳ್ಳೆಯ ಯುದ್ಧ ಮಾಡುವವನೆಂದುಕೊಂಡು ಮನದಲ್ಲಿಯೇ ಹಿಗ್ಗಿ ಕೋಟಿಗಟ್ಟಲೆ ಬಾಣಗಳನ್ನು ಎಸೆಯತೊಡಗಿದ. ಚಂಪಕನ ಬಾಣಗಳೂ ಪುಷ್ಕಲನೆದೆಯಲ್ಲಿ ನೆಟ್ಟು ನೆತ್ತರನ್ನು ಕುಡಿದವು. ಇಬ್ಬರೂ ಎದುರಾಳಿಗಳನ್ನು 'ಭಲೆ! ಭಲೆ!' ಎಂದು ಹೊಗಳಿದರು. ಬಾಣಗಳ ಮಳೆಗರೆದರು. ಪುಷ್ಕಲನ ಬ್ರಹ್ಮಾಸ್ತ್ರಕ್ಕೆ ಪ್ರತಿಯಾಗಿ ಚಂಪಕನೂ ಬ್ರಹ್ಮಾಸ್ತ್ರವನ್ನೇ ಎಸೆದ. ಒಂದೇ ರೀತಿಯ ತೇಜಸ್ಸು. ಎರಡು ಕಡೆಯಿಂದ ಬಂದು ಜಗತ್ ಪ್ರಳಯದ ಭೀತಿಯನ್ನು ಹುಟ್ಟಿಸಿ ಒಂದರಲ್ಲಿ ಇನ್ನೊಂದು ಲೀನವಾಗಿ ಶಾಂತವಾಯಿತು. ಬಳಿಕ ಚಂಪಕನು ರಾಮಾಸ್ತ್ರವನ್ನು ಪ್ರಯೋಗಿಸಿದಾಗ ಪುಷ್ಕಲನು ಆ ಅಸ್ತ್ರಕ್ಕೆ ಕಟ್ಟುಬಿದ್ದ. ಸೇನೆ ಕಂಗೆಟ್ಟು ಓಡತೊಡಗಿತು. ಶತ್ರುಘ್ನ ಇದನ್ನು ಕಂಡು ಹನುಮಂತನನ್ನು ಕಳಿಸಿದ. ಅವನು ಚಂಪಕನ ಬಾಣಗಳನ್ನೆಲ್ಲ ಮುರಿದು ಸಾಲವೃಕ್ಷ ಬಂಡೆಕಲ್ಲುಗಳನ್ನು ಎಸೆದ. ಅವುಗಳನ್ನು ಹಿಡಿದು ಆಕಾಶದ ಮೇಲೇರಿದ. ಅಲ್ಲಿಯೂ ಚಂಪಕನ ಬಾಹು ಯುದ್ಧ ತೀವ್ರವಾಗಿತ್ತು. ಕೋಪದಿಂದ ಅವನ ಕಾಲುಗಳನ್ನು ಹಿಡಿದು ನೆಲಕ್ಕಪ್ಪಳಿಸಿದ ಹನುಮಂತ. ಕ್ಷಣದಲ್ಲಿ ಚಂಪಕನೆದ್ದು ಬಾಲದಲ್ಲಿ ಹನುಮಂತನನ್ನು ಹಿಡಿದೆತ್ತಿ ಗರ್ರನೆ ತಿರುಗಿಸಿದ. ಹನುಮಂತನು ರಾಜಕುಮಾರನ ಪೌರುಷವನ್ನು ಕಂಡು ಒಮ್ಮೆ ನಕ್ಕು ಅವನನ್ನು ಕಾಲುಗಳಲ್ಲಿ ಹಿಡಿದೆತ್ತಿ ನೂರು ಬಾರಿ ಗರ್ರನೆ ತಿರುಗಿಸಿ ಆನೆಯ ಮೇಲೆ ಅಪ್ಪಳಿಸಿದ. ಆಗ ಅವನು ಮೂರ್ಛೆಗೊಂಡ. ಸೈನ್ಯ ಹಾಹಾಕಾರ ಮಾಡಿತು. ಪುಷ್ಕಲನನ್ನು ಹನುಮಂತ ಬಿಡಿಸಿದನು.

**ಶೇಷ** :- ಚಂಪಕನು ಮೂರ್ಛೆಗೊಂಡು ಬಿದ್ದುದನ್ನು ಕಂಡು ಸುರಥ ಮಹಾರಾಜನು ಪುತ್ರ ಶೋಕದಿಂದ ತಪ್ತನಾಗಿ ಕೋಪದಿಂದ ಭುಸುಗುಟ್ಟುತ್ತ ಹನುಮಂತನ ಇದಿರು ನಿಂತು ನುಡಿದ.

**ಸುರಥ** :- ಕಪಿವರ್ಯ, ನೀನು ಧನ್ಯ. ರಾಕ್ಷಸ ರಾಜಧಾನಿಯಲ್ಲಿ ಪೌರುಷದಿಂದ ರಾಮಕಾರ್ಯವನ್ನು ನಡೆಸಿದ ಬಂಟ. ನನ್ನ ಮಗನನ್ನು ಕೆಡವಿರುವೆ. ಈಗ ನಾನು ನಿನ್ನನ್ನು ಕಟ್ಟಿ ನನ್ನ ರಾಜಧಾನಿಗೆ ಒಯ್ಯುವೆ.

**ಹನುಮಂತ** :- ನೀನು ರಾಮ ಸ್ಮರಣೆ ಮಾಡುವವ. ನಾವೂ ರಾಮಭಕ್ತರು. ನೀನು ನನ್ನನ್ನು ಕಟ್ಟಿದ್ದರೆ ನನ್ನ ಪ್ರಭು ಬಿಡಿಸಿಕೊಳ್ಳುವನು. ನೀನು ನಿನ್ನ ಪ್ರತಿಜ್ಞೆಯನ್ನು ಈಡೇರಿಸಿಕೊಳ್ಳು.

**ರಾಮಂ ಸ್ಮರನ್ನ ವೈ ದುಃಖಂ ಯಾತಿ ವೇದಾ ವದಂತ್ಯದಃ**

ರಾಮಸ್ಮರಣೆ ಮಾಡುವವನು ದುಃಖವನ್ನು ಹೊಂದುವುದಿಲ್ಲ. ಇದನ್ನು ವೇದಗಳು ಹೇಳುತ್ತವೆ.

ಸುರಥನು ಬಾಣಗಳನ್ನು ಎಸೆದನು. ಅವನ್ನು ಲೆಕ್ಕಿಸದೆ ಹನುಮಂತನು ಧನುರ್ಬಾಣಗಳನ್ನೆ ಕಿತ್ತಿ ಪುಡಿ ಮಾಡಿ ಗರ್ಜಿಸಿದನು. ವೀರರನ್ನು ಬೆದರಿಸಿ ಉಗುರಿನಿಂದ ಸೀಳಿದನು. ಉಸುರಥನು ಬೇರೆ ಧನುರ್ಬಾಣಗಳನ್ನು ಎತ್ತಿದರೆ ಅದನ್ನೂ ಕಿತ್ತಿ ಮುರಿದನು. ಹೀಗೆ ಎಂಭತ್ತು ಧನುಸ್ಸುಗಳನ್ನು ಆತ ತುಂಡರಿಸಿದ. ರಾಜನು ಶಕ್ತ್ಯಾಯುಧವನ್ನೆಸೆದಾಗ ಒಂದು ಕ್ಷಣ ಬಿದ್ದು ತಿರುಗಿ ಮೇಲೆದ್ದು ಅವನ ರಥವನ್ನೆ ಎತ್ತಿ ಸಮುದ್ರದೆಡೆಗೆ ಹಾರಿದ. ರಾಜನು ಇದನ್ನು ನೋಡಿ ಪರಿಘದಿಂದ ಎದೆಗೆ ಹೊಡೆದ. ಹನುಮಂತ ರಥವನ್ನು ಬಿಟ್ಟ. ಅದು ಕೆಳಗೆ ಬಿದ್ದು ಮುರಿಯಿತು. ರಾಜ ಇನ್ನೊಂದು ರಥವನ್ನು ಏರಿದ. ಅದನ್ನು ಹನುಮಂತ ಮುರಿದ. ಹೀಗೆ ನಲವತ್ತೊಂಬತ್ತು ರಥಗಳು ಪುಡಿಯಾದವು. ರಾಜನು ಪಾಶುಪತಾಸ್ತ್ರವನ್ನು ಹೂಡಿದ. ಭೂತ ಬೇತಾಳ ಪಿಶಾಚಿ ಯೋಗಿನಿ ಮುಂತಾದ ರುದ್ರಗಣಗಳು ಒಮ್ಮೆಲೆ ಕಾಣಿಸಿಕೊಂಡು ಹನುಮಂತನನ್ನು ಹೆದರಿಸಲು ಬಂದವು. ಅವನು ಅಸ್ತ್ರಕ್ಕೆ ಕಟ್ಟುಬಿದ್ದುದನ್ನು ಕಂಡು ಸೇನೆ ಹಾಹಾಕಾರ ಮಾಡಿತು. ಆದರೆ ರಾಮನನ್ನು ಸ್ಮರಿಸಿ ಒಂದು ಕ್ಷಣದಲ್ಲಿ ಅಸ್ತ್ರದ ಬಂಧನವನ್ನು ಹರಿದೊಗೆದು ಸುರಥನ ಮೇಲೆ ಹರಿಹಾಯ್ದ ಹನುಮಂತ. ಅವನು ಎಸೆದ ಬ್ರಹ್ಮಾಸ್ತ್ರವನ್ನೂ ನುಂಗಿದ. ಇದನ್ನು ಕಂಡು ಸುರಥ ರಾಮನನ್ನು ಸ್ಮರಿಸಿ ರಾಮಾಸ್ತ್ರವನ್ನು ಹೂಡಿದ. ಹನುಮಂತನೀಗ ಕಟ್ಟುಬಿದ್ದು ನುಡಿದ.

'ರಾಜನೆ, ನಾನೇನು ಮಾಡಲಿ, ಹೇಳು. ನನ್ನ ಸ್ವಾಮಿಯ ಅಸ್ತ್ರ ನನ್ನನ್ನು ಕಟ್ಟಿದೆ, ಬೇರಾವ ಸಾಮಾನ್ಯ ಪಾಶವಲ್ಲ. ಅದರಿಂದ ನಾನದನ್ನು ಗೌರವಿಸುವೆ. ನೀನು ನನ್ನನ್ನು ಒಯ್ಯಬಹುದು. ಸ್ವಾಮಿಯೆ ಬಂದು ಬಿಡಿಸಿಕೊಳ್ಳುವನು.'

ಅಷ್ಟರಲ್ಲಿ ಪುಷ್ಕಲನು ಬಂದು ರಾಜನನ್ನು ತಡೆದ. ಒಂದು ಕ್ಷಣದಲ್ಲಿ ಜಗತ್ತಿನಲ್ಲೆಲ್ಲ ಬಾಣಗಳೆ ತುಂಬಿದವು. ಅದನ್ನು ನೋಡಿ ದೇವತೆಗಳಿಗೆ ದಿಗ್ಭ್ರಮೆಯಾಯಿತು. ಹುಲ್ಲು ಮಾನವರ ಪಾಡೇನು ? ವೀರರಿಗೆ ರೋಮಾಂಚ ಉಂಟು ಮಾಡಿದ ತುಮುಲ ಯುದ್ಧ ಅದು. ಕೊನೆಗೆ ಪುಷ್ಕಲನು ರಾಜನ ಬಾಣದೇಟಿಗೆ ಮೂರ್ಛೆ ಹೋದನು.

ಅಷ್ಟರಲ್ಲಿ ಶತ್ರುಘ್ನನು ಬಂದು ಸುರಥನೆದುರಿಗೆ ನಿಂತು ನುಡಿದ.

**ಶತ್ರುಘ್ನ :-** ನೀನು ಹನುಮಂತನನ್ನು ಕಟ್ಟಿಹಾಕಿದುದು ಸಾಹಸ ಕಾರ್ಯವೆ ಸರಿ. ಪುಷ್ಕಲನಂಥ ವೀರರನ್ನೂ ಸೋಲಿಸಿದೆ. ಈಗ ನಿಲ್ಲು ನನ್ನ ಬಾಣಗಳನ್ನು ಸಹಿಸಕೊಳ್ಳು.

**ಸುರಥ :-** ಹನುಮಂತನನ್ನು ಕಟ್ಟಿಹಾಕಿದೆ. ಉಳಿದ ವೀರರನ್ನು ಸೋಲಿಸಿದೆ. ಇನ್ನು ನಿನ್ನನ್ನು ಕೆಡುವುತ್ತೇನೆ. ರಾಮನನ್ನು ಸ್ಮರಿಸು. ಅವನು ನಿನ್ನನ್ನು ರಕ್ಷಿಸುವನು. ಇಲ್ಲಿದಿದ್ದರೆ ನನ್ನೆದುರಿಗೆ ನೀನು ಜೀವದಿಂದ ಇರಲಾರೆ.

ಹೀಗೆ ಹೇಳಿ ಶತ್ರುಘ್ನನ ಮೇಲೆ ಸಾವಿರಾರು ಬಾಣಗಳನ್ನು ಎಸೆದು ಅವನನ್ನು ಶರಪಂಜರದೊಳಗಿರಿಸಿದ ಸುರಥರಾಜ. ಅವನ ಅಗ್ನೇಯಾಸ್ತ್ರವನ್ನೂ ತನ್ನ ವಾರುಣಾಸ್ತ್ರದಿಂದ ಶಮನ ಮಾಡಿದ. ಯೋಗಿನಿದತ್ತವಾದ ಸಂಮೋಹಾಸ್ತ್ರಕ್ಕೂ ಸುರಥ ಮಣಿಯಲಿಲ್ಲ.

**ಮೋಹಿತಸ್ಯ ಮಮ ಶ್ರೀ ಮದ್ರಾಮಸ್ಯ ಸ್ಮರಣೇನ ಹ ।**
**ನಾನ್ಯನ್ಮೋೀಹನಮಾಭಾತಿ ಮಾಯಾಪಿ ಭಯಮಾಪ ಮೇ ॥**

ಶ್ರೀರಾಮಸ್ಮರಣೆಯ ಸಂಮೋಹನ ಶಕ್ತಿಗೊಳಗಾಗಿರುವ ನನ್ನ ಮೇಲೆ ಬೇರಾವ ಮೋಹಿನೀ ಶಕ್ತಿಯೂ ಪ್ರಭಾವ ತೋರಲಾರದು. ಮಾಯೆಯೂ ನನ್ನ ಭಯದಿಂದ ನಡುಗುವುದು.

ಹೀಗೆ ಹೇಳಿ ತನ್ನ ಒಂದು ಬಾಣದಿಂದ ಕಡಿದು ಚೆಲ್ಲಿದನು. ಶತ್ರುಘ್ನನು ಲವಣಾಸುರನನ್ನು ಕೊಲ್ಲಲು ಪ್ರಯೋಗಿಸಿದ್ದ ಕಾಲಾಗ್ನಿ ಸದೃಶವಾದ ಬಾಣವನ್ನು ಹೂಡಿದ. ಸುರಥನೆಂದ 'ದುಷ್ಟ ರಾಕ್ಷಸರೆದೆಗೆ ಈ ಬಾಣ ಸರಿ ಹೊಂದುತ್ತದೆ. ರಾಮಭಕ್ತರ ಎದುರಿನಲ್ಲಿ ಅದರಾಟ ನಡೆಯದು'. ಅಷ್ಟರಲ್ಲಿ ಆ ಬಾಣ ಸುರಥನ ಎದೆಯಲ್ಲಿ ನೆಟ್ಟು ಮೂರ್ಛೆ ತಂದಿತು. ಮರಕ್ಷಣದಲ್ಲಿ ಅವನೆದ್ದು ಬೆಂಕಿ ಉಗುಳುವ ಒಂದು ಬಾಣವನ್ನು ಪ್ರಯೋಗಿಸಿದ. ಶತ್ರುಘ್ನನು ಅದನ್ನು ಮಧ್ಯದಲ್ಲಿಯೆ ಕತ್ತರಿಸಿದರೂ ಅದರ ತುದಿ ಅವನೆದೆಗೆ ತಾಗಿ ಮೂರ್ಛೆ ತಂದಿತು. ಸೈನ್ಯದಲ್ಲಿ ಹಾಹಾಕಾರ ಎದ್ದಿತು. ರಾಮಭಕ್ತನಾದ ಸುರಥನಿಗೆ ಜಯ ಲಭಿಸಿತು. ಅವನ ಹತ್ತು ಮಂದಿ ಮಕ್ಕಳಿಂದ ಶತ್ರುಘ್ನನ ಪಡೆಯ ಹತ್ತು ಮಂದಿ ವೀರರೂ ಮೂರ್ಛಿತರಾಗಿ ಅಲ್ಲಲ್ಲಿ ಒರಗಿದ್ದರು.

**ಶೇಷ :-** ಸುಗ್ರೀವನು ತನ್ನ ಸೇನೆ ಕಂಗೆಟ್ಟು ಓಡಿದುದನ್ನೂ, ಶತ್ರುಘ್ನನು ಮೂರ್ಛೆ ಹೊಂದಿದುದನ್ನು ಕಂಡು ಸುರಥನೊಡನೆ ಯುದ್ಧಕ್ಕೆ ನಿಂತನು. ಅವನು ಮರ, ಕಲ್ಲು, ಬೆಟ್ಟಗಳನ್ನೆತ್ತಿ ರಾಜನ ಮೇಲೆ ಎಸೆದ. ಉಗುರುಗಳಿಂದ ಸೀಳಿದ. ಆದರೂ ರಾಮಾಸ್ತ್ರಕ್ಕೆ ಕಟ್ಟು ಬಿದ್ದು, ಕಬ್ಬಿಣದ ಸರಪಣಿಯಿಂದ ಕಾಲನ್ನು ಬಿಗಿದು ಕಟ್ಟಿರುವಾಗ ಚಡಪಡಿಸುವ ಆನೆಯಂತಾದ. ಸುರಥನೀಗ ಶತ್ರುಘ್ನ ಸೇನೆಯ ಎಲ್ಲ ವೀರರನ್ನೂ ಗೆದ್ದಂತಾಯಿತು. ಎಲ್ಲರನ್ನೂ ರಥದಲ್ಲಿಟ್ಟುಕೊಂಡು ತನ್ನ ರಾಜಧಾನಿಗೆ ಮರಳಿದ. ಸಭೆ ಸೇರಿಸಿ ಅಲ್ಲಿಗೆ ಹನುಮಂತನನ್ನು ಕರೆಸಿ 'ರಾಮನನ್ನು ನೆನೆ. ಅವನು ಬಂದು ನಿನ್ನನ್ನು ಬಿಡಿಸಿಕೊಳ್ಳಲಿ. ಇಲ್ಲದಿದ್ದರೆ ಹತ್ತು ಸಾವಿರ ವರ್ಷಗಳ ಕಾಲ ನೀನು ಹೀಗೇ ಇರಬೇಕಾದೀತು' ಎಂದ.

ಹನುಮಂತ ತಾನು ಬಂಧನದಲ್ಲಿರುವುದನ್ನೂ, ಉಳಿದ ವೀರರು ಮೂರ್ಛಿತರಾಗಿರುವುದನ್ನೂ ಕಂಡು ಶ್ರೀ ರಾಮನನ್ನು ಸ್ಮರಿಸಿದ 'ಪ್ರಭು, ಶ್ರೀರಾಮ, ಭಕ್ತರ ದುಃಖವನ್ನು ಕಳೆವವನು ನೀನು. ನನ್ನನ್ನು ಬಂಧನದಿಂದ ಬಿಡಿಸು. ನೀನು ಹಿಂದೆ ಗಜರಾಜನನ್ನು ಮೊಸಳೆಯ ಬಾಯಿಯಿಂದ ಬಿಡಿಸಿದವನು. ದಾನವ ಕುಲವೆಂಬ ಬೆಂಕಿಯಲ್ಲಿ ಬೇಯುತ್ತಿದ್ದ ದೇವತೆಗಳನ್ನು ಉದ್ಧರಿಸಿದವನು. ದಾನವ ಸ್ತ್ರೀಯರ ತುರುಬನ್ನು ಬಿಡಿಸಿದವನು. ನೀನು ಅಲ್ಲಿ ಯಾಗಕರ್ಮನಿರತನಾಗಿ ಮುನಿಗಳೊಂದಿಗೆ ಧರ್ಮವಿಚಾರ ಮಾಡುತ್ತಿರುವೆ. ನಾನಿಲ್ಲಿ ಸುರಥನ ಪಾಶದಿಂದ ಬದ್ಧನಾಗಿರುವೆ. ದೇವ ಬೇಗನೆ ಬಂದು ಬಿಡಿಸು. ನೀನು ಬಿಡಿಸದಿದ್ದರೆ ಲೋಕ ನಿನ್ನನ್ನು ಕಂಡು ನಗುತ್ತದೆ. ಆದುದರಿಂದ ವಿಲಂಬ ಮಾಡಬೇಡ. ಬೇಗನೆ ಬಿಡಿಸು.'

ಜಗತ್ಪತಿ ಶ್ರೀ ರಾಮಚಂದ್ರ ಈ ಮೊರೆಯನ್ನು ಕೇಳಿ ಲಕ್ಷ್ಮಣ-, ಭರತರಿಂದೊಡಗೂಡಿ, ವ್ಯಾಸಾದಿ ಮುನಿಗಳನ್ನೂ ಜೊತೆಯಲ್ಲಿ ಕರೆದುಕೊಂಡು ಪುಷ್ಪಕ ವಿಮಾನದಲ್ಲಿ ಸುರಥ ರಾಜನ ಆಸ್ಥಾನಕ್ಕೆ ಆಗಮಿಸಿದ. ಹನುಮಂತನು ನೋಡಿ 'ರಾಜನೆ, ಭಕ್ತನನ್ನು ಬಿಡಿಸಿಕೊಳ್ಳಲು ಕೃಪೆಯಿಂದ ಬಂದ ಹರಿಯನ್ನು ನೋಡು. ಹೀಗೆ ಹಿಂದೆಯೂ

ಸ್ಮರಣ ಮಾತ್ರದಿಂದ ಅನೇಕ ಭಕ್ತರನ್ನು ದುಃಖದಿಂದ ಪಾರು ಮಾಡಿದ್ದಾನೆ' ಎಂದ. ಸುರಥರಾಜನು ಒಡನೆ ಭಕ್ತಿಯಿಂದ ನೂರು ನಮಸ್ಕಾರಗಳನ್ನು ಮಾಡಿದ. ಶ್ರೀರಾಮ ಅವನನ್ನು ನಾಲ್ಕು ತೋಳುಗಳಿಂದ ಬಿಗಿದಪ್ಪಿ ಆನಂದಾಶ್ರುವಿನಿಂದ ಅವನ ತಲೆಗೆ ಅಭಿಷೇಕ ಮಾಡಿದ. 'ರಾಜನೆ, ನೀನು ಧನ್ಯ. ಎಲ್ಲರಿಗಿಂತ ಬಲಿಷ್ಠನಾದ ಹನುಮಂತನನ್ನೂ ಬಂಧಿಸಿ ನೀನು ಮಹಾಕಾರ್ಯವನ್ನೆ ಸಾಧಿಸಿರುವೆ' ಎಂದ. ಬಳಿಕ ಹನುಮಂತನನ್ನು ಬಿಡಿಸಿ ಮೂರ್ಛಿತರಾದ ಎಲ್ಲ ವೀರರನ್ನೂ ದೃಷ್ಟಿಮಾತ್ರದಿಂದ ಏಳುವಂತೆ ಮಾಡಿದನು. ಅವರೆದ್ದು ಎದುರಿಗೆ ಶ್ರೀರಾಮನು ನಿಂತಿರುವುದನ್ನು ಕಂಡು ನಮಿಸಿದರು. ಸುರಥ ರಾಜನು 'ನನ್ನ ಅಪರಾಧವನ್ನು ಕ್ಷಮಿಸು' ಎನ್ನುತ್ತ ತನ್ನ ರಾಜ್ಯವನ್ನೂ ಯಾಗದ ಕುದುರೆಯನ್ನೂ ಅರ್ಪಿಸಿದ. ಶ್ರೀರಾಮನು 'ಕ್ಷತ್ರಿಯರಿಗೆ ಸ್ವಾಮಿಯೊಡನೆ ಯುದ್ಧ ಮಾಡುವುದೂ ಧರ್ಮವೆ. ರಣರಂಗದಲ್ಲಿ ನೀನು ಒಳ್ಳೆಯ ಪರಾಕ್ರಮ ತೋರಿಸಿರುವೆ. ವೀರರಿಗೆ ಆನಂದ ಉಂಟು ಮಾಡಿರುವೆ. ನಿನ್ನಲ್ಲಿ ಏನೂ ತಪ್ಪಿಲ್ಲ' ಎಂದ.. ಮೂರು ದಿನಗಳ ಕಾಲ ಸುರಥ ರಾಜನ ಆತಿಥ್ಯವನ್ನು ಪಡೆದು ಅವನ ಬಳಿಯೆ ಇದ್ದ. ಬಳಿಕ ಪುಷ್ಪಕ ವಿಮಾನವನ್ನೇರಿ ಯಜ್ಞ ಮಂಟಪಕ್ಕೆ ತೆರಳಿದ.

ಸುರಥನು ಚಂಪಕನಿಗೆ ರಾಜ್ಯಾಭಿಷೇಕ ಮಾಡಿ ಶತ್ರುಘ್ನನೊಂದಿಗೆ ತಾನೂ ಹೊರಟ. ಭೇರಿ ಶಂಖಗಳ ಧ್ವನಿ ಎಲ್ಲೆಡೆ ಪಸರಿಸುತ್ತಿದ್ದಂತೆ ಕುದುರೆ ಮುಂದೆ ನಡೆಯಿತು. ಮುಂದೆ ಯಾವ ರಾಜರೂ ಅದನ್ನು ಕಟ್ಟಿಹಾಕಲಿಲ್ಲ. ಅದು ಸಂಚಾರ ಮಾಡುತ್ತ ಗಂಗಾನದೀತೀರದಲ್ಲಿರುವ ವಾಲ್ಮೀಕಿ ಮುನಿಯಾಶ್ರಮಕ್ಕೆ ಬಂದಿತು.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಪಾತಾಳ ಖಂಡದಲ್ಲಿ ಶೇಷ-ವಾತ್ಸಾಯನ ಸಂವಾದದಲ್ಲಿ ರಾಮಾಶ್ವಮೇಧದಲ್ಲಿ ಸುರಥವಿಜಯವೆಂಬ ಇಪ್ಪತ್ತನೆ ಅಧ್ಯಾಯ ಮುಗಿದುದು*



## ಸೀತಾಪರಿತ್ಯಾಗ, ಕುಶಲವರ ಜನನ ಸೀತಾರಾಮರ ಸಮಾಗಮ

**ಅಧ್ಯಾಯ - ೨೧**

**ಶೇಷ ಉವಾಚ**

**ಶೇಷ :-** ಸೀತೆಯ ಮಗ ಲವನು ಮುನಿ ಕುಮಾರರೊಡನೆ ಪ್ರಾತಃ ಕರ್ಮಗಳನ್ನು ಮಾಡಿ ಹೋಮಕ್ಕೆ ಬೇಕಾಗುವ ಸಮಿತ್ತುಗಳನ್ನು ಆರಿಸಿಕೊಳ್ಳುತ್ತಿದ್ದಾಗ ರಾಮನ ಕುದುರೆಯನ್ನು ಕಂಡು ಕುತೂಹಲದಿಂದ ಅದನ್ನು ಮುನಿಕುಮಾರರಿಗೆ ತೋರಿಸುತ್ತ ನುಡಿದ. 'ಇದು ಯಾರ ಕುದುರೆ ? ದೈವಾತ್ ನಮ್ಮಾಶ್ರಮಕ್ಕೆ ಬಂದಿದೆ. ಬನ್ನಿ, ನೋಡೋಣ ಭಯಪಡಬೇಡಿರಿ.' ಹೀಗೆ ಹೇಳಿ ಕುದುರೆಯ ಬಳಿ ಹೋಗಿ ನಿಂತ. ಧನುರ್ಬಾಣ ಧಾರಿಯಾಗಿ ಕುದುರೆಯ ಬಳಿ ನಿಂತ ಬಾಲಕ ಲವ ಇಂದ್ರನಕುಮಾರ ಜಯಂತನಂತೆ ಕಾಣುತ್ತಿದ್ದ. ಅವನು ಕುದುರೆಯ ಹಣೆಯಲ್ಲಿ ಕಟ್ಟಿದ್ದ ಪತ್ರಿಕೆಯನ್ನೋದಿ

ಹೇಳಿದ. 'ಪ್ರಸಿದ್ಧವಾದ ಸೂರ್ಯವಂಶದಲ್ಲಿ ಅದಕ್ಕೆ ಧ್ವಜದಂತೆ ಮೆರೆದ ದಶರಥ ಮಹಾರಾಜ ಬಿಲ್ಲಾಳುಗಳಿಗೆಲ್ಲ ಗುರು. ಸಕಲ ಸುರಾಸುರರ ಮಣಿ ಕಿರೀಟಗಳು ಅವನ ಪಾದಗಳನ್ನು ಸ್ಪರ್ಶಿಸುತ್ತಿದ್ದುವು. ಅವನ ಪುತ್ರ ರಾಮಚಂದ್ರನೂ ಅಷ್ಟೇ ಮಹಾನುಭಾವನಾಗಿರುವವನು. ಸರ್ವಶೂರ ಶಿರೋಮಣಿ. ಅವನ ತಾಯಿ ಕೋಸಲ ರಾಜಪುತ್ರಿ. ಅವಳ ಉದರದಲ್ಲಿ ಜನಿಸಿದ ರತ್ನವೆ ಶತ್ರು ಭಯಂಕರನಾದ ರಾಮ. ರಾವಣನೆಂಬ ಬ್ರಾಹ್ಮಣನನ್ನು ಕೊಂದ ಪಾಪದ ಪರಿಹಾರಕ್ಕಾಗಿ ಅಶ್ವಮೇಧಯಾಗ ಮಾಡುತ್ತಿದ್ದಾನೆ. ಅವನ್ನು ಬಿಟ್ಟ ಈ ಕುದುರೆಯನ್ನು ಅವನ ತಮ್ಮನಾದ ಲವಣಾಂತಕ ಶತ್ರುಘ್ನನು ರಕ್ಷಿಸುತ್ತಿದ್ದಾನೆ. ಬಿಲ್ಲುಗಾರರಲ್ಲೆಲ್ಲ ತಾನೆ ಶ್ರೇಷ್ಠನೆಂಬ ದರ್ಪಉಳ್ಳ ರಾಜರು ಇದನ್ನು ಹಿಡಿದುಕೊಳ್ಳಬಹುದು. ಅವರನ್ನು ಶತ್ರುಘ್ನನು ಅನಾಯಾಸವಾಗಿ ಕೊಂದು ಕುದುರೆಯನ್ನು ಬಿಡಿಸಿಕೊಳ್ಳುವನು. ಕ್ಷತ್ರಿಯ ಕನ್ಯೆಯರಲ್ಲಿ ಜನಿಸಿದ ಕ್ಷತ್ರಿಯರು ಯಾರೆ ಇರಲಿ ಅವರು ಕುದುರೆಯನ್ನು ಹಿಡಿದುಕೊಳ್ಳಬಹುದು. ಉಳಿದವರು ರಾಮನಿಗೆ ಮಣಿದು ರಾಜ್ಯವನ್ನೊಪ್ಪಿಸಬೇಕು.'

ಲವನು ಇದನ್ನು ಸಹಿಸಲಾರದೆ ಕೋಪದಿಂದ ನಡಗುವ ಧ್ವನಿಯಲ್ಲಿ ನುಡಿದ. 'ಏನುದರ್ಪ, ಈ ಕ್ಷತ್ರಿಯನಿಗೆ! ನೋಡಿರಿ, ಕುದುರೆಯ ಹಣೆಯ ಮೇಲೆ ತನ್ನ ಪ್ರತಾಪದ ಬಣ್ಣನೆಯೋಲೆಯನ್ನು ಕಟ್ಟಿ ಊರೆಲ್ಲ ಮೆರೆಸುತ್ತಿದ್ದಾನೆ. ಯಾರು ಈ ರಾಮ ? ಯಾರು ಶತ್ರುಘ್ನ ? ಈ ದುರ್ಬಲ ಕೀಟಗಳು ಮಾತ್ರ ಕ್ಷತ್ರಿಯ ಕುಲದಲ್ಲಿ ಜನಿಸಿದವರು. ನಾವಲ್ಲವಂತೆ! ಅವರ ತಾಯಿ ವೀರಮಾತೆಯಂತೆ! ಅರಣಿ ಅಗ್ನಿಯನ್ನು ಉತ್ಪಾದಿಸುವಂತೆ ಕುಶನೆಂಬ ಪುತ್ರರತ್ನವನ್ನು ಹೆತ್ತ ಆ ತಾಯಿ ಜಾನಕಿ ವೀರಮಾತೆಯಲ್ಲವೆ ? ಇವರ ಕ್ಷತ್ರಿಯತ್ವವನ್ನು ನಾನು ಬಯಲು ಮಾಡುತ್ತೇನೆ. ಕ್ಷತ್ರಿಯಳ ಹೊಟ್ಟೆಯಲ್ಲಿ ಹುಟ್ಟಿದವನಾದರೆ ಶತ್ರುಘ್ನನು ನಾನು ಹಿಡಿದ ಕುದುರೆಯನ್ನು ಬಿಡಿಸಿಕೊಳ್ಳಲಿ. ಇಲ್ಲದಿದ್ದರೆ ದರ್ಪವನ್ನು ಬಿಟ್ಟು ಕುಶನ ಪಾದ ಸೇವೆ ಮಾಡಲಿ. ಮುನಿಕುಮಾರರೆ, ಈಗ ನನ್ನ ಬಾಣಗಳಿಂದ ಅವನೂ ಅವನ ಕಡೆಯ ವೀರರೂ ರಣರಂಗದಲ್ಲಿ ಮಲಗುವಂತೆ ಮಾಡುತ್ತೇನೆ.'

ಹೀಗೆ ಹೇಳುತ್ತ ಲವನು ಕುದುರೆಯನ್ನು ಹಿಡಿದುಕೊಂಡ. ಅವನ ದೃಷ್ಟಿಯಲ್ಲಿ ರಾಜರೆಲ್ಲರೂ ತೃಣಸಮಾನರು. ತನ್ನ ಬಿಲ್ಲುಬಾಣಗಳ ಮೇಲೆ ಅಮಿತ ವಿಶ್ವಾಸ ಆತನಿಗೆ. ಆದರೆ ಮುನಿ ಕುಮಾರರು ಹೇಳಿದರು.

'ಅಯ್ಯೋಧ್ಯಾಧಿಪತಿ ರಾಮನೆಂದರೆ ಮಹಾಬಲ ಪರಾಕ್ರಮಿ. ಅವನ ಕುದುರೆಯನ್ನು ಇಂದ್ರನೂ ಹಿಡಿದುಕೊಳ್ಳಲಾರ. ನಾವು ನಿನ್ನ ಹಿತಕ್ಕಾಗಿ ಹೇಳುತ್ತಿದ್ದೇವೆ. ಕುದುರೆಯನ್ನು ಬಿಟ್ಟು ಬಿಡು.'

'ನೀವು ಬ್ರಾಹ್ಮಣ ಪುತ್ರರು. ಕ್ಷತ್ರಿಯರ ಬಲಪರಾಕ್ರಮಗಳ ಪರಿಚಯ ನಿಮಗಿಲ್ಲ. ಕ್ಷತ್ರಿಯರು ಪರಾಕ್ರಮಿಗಳು. ಬ್ರಾಹ್ಮಣರು ಒಳ್ಳೆಯ ಊಟ ಮಾಡಬಲ್ಲರು. ನೀವು ಮನೆಗೆ ಹೋಗಿ ತಾಯಿ ಬಡಿಸುವ ಅನ್ನವನ್ನು ಊಟಮಾಡಿರಿ.' ಎಂದ ಲವ.

ಮುನಿಕುಮಾರರು ಸುಮ್ಮನಾದರು. ಲವನ ಪರಾಕ್ರಮವನ್ನು ನೋಡೋಣ ಎಂದು ದೂರದಲ್ಲಿ ನಿಂತರು. ಅಷ್ಟರಲ್ಲಿ ಶತ್ರುಘ್ನನ ಭಟರು ಲವನ ಬಳಿಗೆ ಬಂದು

'ಕುದುರೆಯನ್ನು ಕಟ್ಟಿದವನಾರು ? ಯಾರು ಯಮನ ಕೋಪಕ್ಕೆ ತುತ್ತಾಗುವವನು ? ಯಾರು ಶರಪಂಜರದಲ್ಲಿ ಸಿಲುಕಿ ವ್ಯಥೆಪಡಲು ಬಯಸಿದವನು ?' ಎಂದು ಗದರಿದರು. ಲವನೆಂದ, 'ನಾನು ಕುದುರೆಯನ್ನು ಕಟ್ಟಿದೆ. ಬಿಡಿಸಿಕೊಳ್ಳಲು ಬರುವವರು ಕುಶನ ಕೋಪಕ್ಕೆ ತುತ್ತಾಗುವರು. ಯಮನು ಬಂದರೇನು ಮಾಡಬಲ್ಲ ? ಬಾಣಗಳ ಸುರಿಮಳೆ ಕಂಡು ಸಂತೋಷಪಟ್ಟು ನಮಿಸಿ ನಿಲ್ಲದೆ ಹೊರಟುಹೋಗುತ್ತಾನೆ' ಭಟರು ಇದನ್ನು ಕೇಳಿಯೂ ಇವನೊಬ್ಬ ಬಾಲಕನೆಂದು ಅಲಕ್ಷ್ಯಮಾಡಿ ಕುದುರೆಯನ್ನು ಬಿಡಿಸಿಕೊಳ್ಳಲು ಹೋದರು. ಒಂದು ಕ್ಷಣದೊಳಗೆ ಅವರೆಲ್ಲರ ತೋಳುಗಳು ಲವನ ಬಾಣಗಳಿಂದ ಕಡಿದು ಬಿದ್ದುವು. ಶತ್ರುಘ್ನನ ಬಳಿಗೆ ಹೋಗಿ ಅವರು ಎಲ್ಲ ವೃತ್ತಾಂತವನ್ನು ತಿಳಿಸಿದರು.

**ವ್ಯಾಸ ಉವಾಚ**

**ವ್ಯಾಸ :-** ಬಲಶಾಲಿಯಾದ ಲವನ ಈ ರಮ್ಯವಾದ ವೃತ್ತಾಂತವನ್ನು ಕೇಳಿ ಮುನಿಯು ಒಂದು ಸಂಶಯವನ್ನು ಮುಂದಿಟ್ಟನು.

**ವಾತ್ಸ್ಯಾಯನ :-** ದೇವ, ಜಾನಕಿಗೆ ಮಕ್ಕಳೆಲ್ಲಿ ಹುಟ್ಟಿದರು ? ಅವರ ವಿದ್ಯಾಭ್ಯಾಸವೆಲ್ಲಿ ನಡೆಯಿತು ?

**ಶೇಷ :-** ರಾಮನು ತಮ್ಮಂದಿರೊಡನೆ ಅಯೋಧ್ಯೆಯಲ್ಲಿ ರಾಜ್ಯಭಾರ ಮಾಡುತ್ತಿದ್ದ. ಸೀತೆ ಗರ್ಭ ಧರಿಸಿದಳು. ಐದು ತಿಂಗಳು ತುಂಬಿದಾಗ ಆಕೆ ತನ್ನೊಳಗೆ ಪರಮಪುರುಷನನ್ನಿಟ್ಟುಕೊಂಡಿರುವ ವೇದವಿದ್ಯೆಯಂತೆ ಶೋಭಿಸಿದಳು. ಒಮ್ಮೆ ರಾಮನು ರಹಸ್ಯದಲ್ಲಿ ಆಕೆಯ ಬಯಕೆ ಏನೆಂದು ಕೇಳಿದ. ಲಜ್ಜೆಯಿಂದ ನಡುಗುವ ಧ್ವನಿಯಲ್ಲಿ ಅಮೃತದಂಥ ಮಾತನ್ನಾಡಿದಳು ಆಕೆ.

**ಸೀತೆ :-** ಪ್ರಿಯ, ನಿನ್ನ ಕೃಪೆಯಿಂದ ನಾನೆಲ್ಲ ಸುಖವನ್ನೂ ಉಂಡಿದ್ದೇನೆ. ಉಣಲಿದ್ದೇನೆ. ಇನ್ನಾವ ಬಯಕೆಯೂ ನನ್ನ ಮನಸ್ಸಿನಲ್ಲಿ ಇಲ್ಲ. ದೇವತೆಗಳಿಂದಲೂ ಸ್ತುತ್ಯನಾದ ನೀನು ನನ್ನ ನಾಥನಾಗಿರುವಾಗ ನನಗೇನು ಕಡಿಮೆ ? ಬಲವಂತ ಮಾಡುವಿಯಾದರೆ ಒಂದು ಅಪೇಕ್ಷೆಯನ್ನು ಹೇಳುತ್ತೇನೆ. ಲೋಪಾಮುದ್ರೆಯರಂಥ ಪತಿವ್ರತೆಯರನ್ನು ಕಂಡು ಬಹು ದಿನಗಳಾದವು. ಅವರನ್ನು ನೋಡಬೇಕೆಂಬ ಆಸೆ. ನಿನ್ನ ಪಟ್ಟದ ರಾಣಿಯಾಗಿ ಸಿಂಹಾಸವನ್ನೇರಿದ ಮೇಲೆ ಒಮ್ಮೆಯೂ ನಾನು ಅವರನ್ನು ಕಂಡು ನಮಸ್ಕರಿಸಲಿಲ್ಲ. ಇದು ಕೃತಘ್ನತೆ ಎನಿಸದೆ ? ನಾನು ಅವರಲ್ಲಿಗೆ ಹೋಗಿ ಬಟ್ಟೆ ಬರೆಗಳನ್ನೂ, ಮುತ್ತು ರತ್ನ ಮುಂತಾದುವನ್ನೂ ಕೊಟ್ಟು ಸಂತೋಷಪಡಿಸಿ ಅವರ ಆಶೀರ್ವಾದವನ್ನು ಪಡೆಯಬೇಕೆಂದಿದ್ದೇನೆ.

**ರಾಮ :-** ಜಾನಕಿ, ನೀನು ಧನ್ಯೆ. ನಾಳೆ ಬೆಳಿಗ್ಗೆ ಹೋಗಿ ಆ ತಪಸ್ವಿನಿಯರನ್ನು ಕಂಡು ಕೃತಾರ್ಥಳಾಗಿ ಬರುವಿಯಂತೆ.

ಸೀತೆಗೆ ಸಂತೋಷವಾಯಿತು. ನಾಳೆ ಬೆಳಿಗ್ಗೆ ತಾಪಸಿಯರ ದರ್ಶನ ದೊರೆಯುವುದೆಂದು ಆಕೆ ಹಿಗ್ಗಿದಳು. ಆ ದಿನ ರಾತ್ರಿಯಲ್ಲಿ ಚಾರರು ಎಂದಿನಂತೆ ರಾಮನ ಆಡಳಿತದ ಬಗ್ಗೆ ಪ್ರಜೆಗಳ ಅಭಿಪ್ರಾಯ ಹೇಗಿದೆ ಎಂದು ತಿಳಿಯಲು ಗುಪ್ತ ವೇಷದಿಂದ ಸಂಚರಿಸಿದರು. ಎಲ್ಲ ಮನೆಗಳಲ್ಲಿಯೂ ಶ್ರೀರಾಮಚಂದ್ರನ ಗುಣಗಾನವನ್ನೆ

ಪ್ರೀತಿಯಿಂದ ಮಾಡುತ್ತಿದ್ದರು ಪ್ರಜೆಗಳು. ಮಗುವಿಗೆ ಮೊಲೆಯುಣಿಸುವ ತಾಯಿಯೂ ಹೇಳುವಳು. 'ಮಗು, ನಿನಗೆ ತೃಪ್ತಿಯೆನಿಸುವಷ್ಟು ಎದೆ ಹಾಲನ್ನು ಈಗಲೆ ಕುಡಿ. ಮುಂದೆ ಅದು ನಿನಗೆ ಸಿಗಲಾರದು. ನಮ್ಮ ದೇಶದ ಪ್ರಭು ಶ್ರೀರಾಮ. ಅವನ ಪ್ರಜೆಗಳಿಗೆ ಮುಂದೆ ಜನನ ಮರಣಗಳಿಲ್ಲ ಜನನವಿಲ್ಲದಿದ್ದರೆ ತಾಯಿಯ ಎದೆ ಹಾಲು ಕುಡಿವ ಅವಕಾಶ ಎಲ್ಲಿ?

**ಯೇ ಶ್ರೀರಾಮಂ ಸ್ಮರಿಷ್ಯಂತಿ ಧ್ಯಾಸ್ಯಂತಿ ಚ ವದಂತಿ ಚ ।**
**ತೇಷಾ ಮಪಿ ಪಯಃ ಪಾನಂ ನ ಭವಿಷ್ಯತಿ ಜಾತುಚಿತ್ ॥**

ಶ್ರೀರಾಮನ ಸ್ಮರಣ ಧ್ಯಾನ ನಾಮೋಚ್ಚಾರಣಗಳನ್ನು ಮಾಡುವವರಿಗೆ ತಾಯಿಯ ಎದೆ ಹಾಲನ್ನು ಕುಡಿವ ಪ್ರಸಂಗವೆಂದೂ ಬರುವುದಿಲ್ಲ.

ಪ್ರಣಯಿಗಳ ಪ್ರಣಯ ಸನ್ನಿವೇಶದಲ್ಲಿಯೂ ರಾಮನ ಗುಣಗಾನವಿರುತ್ತಿತ್ತು. ಪ್ರಿಯನು ಪ್ರೀತಿಯಿಂದ ಕೊಟ್ಟ ತಾಂಬೂಲವನ್ನು ಮೆಲ್ಲುತ್ತ ಅವನೊಡನೆ ಮಂಚದ ಮೇಲೆ ಕುಳಿತ ಸುಂದರಿಯೋರ್ವಳು 'ನಾಥ, ನೀನು ಆ ರಾಮನಂತೆಯೆ ಸುಂದರ ಕೋಮಲ ಶರೀರಿ. ಕಮಲದಂಥ ಕಣ್ಣುಗಳು, ವಿಶಾಲವಾದ ಮೋಹಕವಾದ ಎದೆ, ತೋಳ್ಬಳೆಯಿಂದ ಒಪ್ಪುವ ಭುಜಗಳು ಎಲ್ಲವೂ ರಾಮನಂತೆ' ಎನ್ನುವಳು. ಆತನೆನ್ನುವನು 'ಪ್ರಿಯೆ, ನಿನ್ನಂಥ ಪತಿವ್ರತೆಗೆ ಪತಿಯಾದವನು ರಾಮನಂತೆ ಮನೋಹರನಾಗಿ ಕಂಡರೆ ಅದು ಯುಕ್ತವೆ. ಆದರೆ ಈ ಮಂದಭಾಗ್ಯನೆಲ್ಲಿ, ಆ ರಾಮನೆಲ್ಲಿ ? ನಾನು ಕೀಟ. ಅವನು ಬ್ರಹ್ಮಾದಿ ವಂದ್ಯ. ನಾನು ಶಲಭ, ಅವನು ಸೂರ್ಯ. ನಾನು ಮೊಲ, ಅವನು ಸಿಂಹ. ರಸ್ತೆಯಲ್ಲಿ ಹರಿಯುವ ನೀರು ನಾನು. ಅವನು ಗಂಗಾಜಲ. ನಾನು ಗುಲಗಂಜಿ, ಅವನು ಮೇರು. ಪಾದದೂಳಿಯಿಂದ ಕಲ್ಲನ್ನೂ ಸುಂದರ ರಮಣಿಯನ್ನಾಗಿ ಪರಿವರ್ತಿಸಿದ ಅವನೆಲ್ಲಿ ನಾನೆಲ್ಲಿ ?' ಬಳಿಕ ಆಕೆ ಪ್ರಿಯನನ್ನು ಆಲಿಂಗಿಸಿಕೊಳ್ಳುವಳು.

ಇನ್ನೊಂದುಕಡೆ ಪ್ರೇಯಸಿಯೋರ್ವಳು, 'ಪ್ರಿಯ, ಬಾ, ಈ ಹೂವಿನ ಹಾಸಿಗೆಯನ್ನೇರು. ಈ ಎಲ್ಲ ಸಂಪತ್ತು ನಿನ್ನಂಥ ರಾಮಭಕ್ತರಿಗೆ ಮಾತ್ರ ಒಪ್ಪುವುದು. ನನ್ನಂಥ ಮಡದಿ ಈ ಚಂದನ, ಹೂವಿನ ಹಾಸಿಗೆ ಇವೆಲ್ಲವನ್ನು ಅನುಭವಿಸು. ರಾಮನನ್ನು ಭಜಿಸದವರಿಗೆ ಈ ಸಂಪತ್ತು ದೊರಕದು. ಅವರು ಅನ್ನ ಬಟ್ಟೆಗಳನ್ನು ಸಂಪಾದಿಸಿಕೊಳ್ಳಲಾರರು.' ಎನ್ನುವಳು. ಪ್ರಿಯನು. 'ನೀನು ಹೇಳುವುದು ನಿಜ. ಇದೆಲ್ಲವೂ ರಾಮನ ಅನುಗ್ರಹ' ಎನ್ನುವನು.

ಮತ್ತೊಂದು ಕಡೆ, ಪ್ರೇಯಸಿಯೋರ್ವಳು ಪ್ರಿಯಕರನೊಂದಿಗೆ ಮಂಚದ ಮೇಲೆ ಕುಳಿತು ವೀಣೆ ನುಡಿಸುತ್ತ ರಾಮನ ಗುಣಗಾನ ಮಾಡುವಳು. ಬಳಿಕ 'ನಮಗೆ ಶ್ರೀರಾಮನು ರಾಜನಾಗಿ ದೊರಕಿರುವುದರಿಂದ ನಾವೆ ಧನ್ಯರು. ಪ್ರಜೆಗಳನ್ನು ಮಕ್ಕಳಂತೆ ನೋಡಿಕೊಳ್ಳುತ್ತಾನೆ ಆತ. ಎಂಥ ಮಹಾಕಾರ್ಯಗಳನ್ನು ಮಾಡಿದ್ದಾನೆ ! ಸಮುದ್ರ ರಾಜನನ್ನು ನಿಗ್ರಹಿಸಿ ಸೇತುವೆಯನ್ನು ಕಟ್ಟುವುದೆಂದರೇನು ಸಾಮಾನ್ಯವೆ ? ಕಪಿಗಳ ಸಹಾಯದಿಂದ ಲಂಕೆಯನ್ನು ಪುಡಿಗೈದು ರಾವಣನನ್ನು ಕೊಂದು ಜಾನಕಿಯನ್ನು ತರುವುದೆಂದರೆ ಅದೇನು ಸಾಮಾನ್ಯರು ಮಾಡುವ ಕೆಲಸವೆ ?' ಎನ್ನುವಳು. ಪ್ರಿಯನೂ ಅದನ್ನೆ ಹೇಳುವನು, 'ಸುಂದರಿ, ಈ ರಾವಣವಧೆಯಾಗಲಿ ಸಮುದ್ರರಾಜನನ್ನು

ನಿಗ್ರಹಿಸಿದುದಾಗಲಿ ರಾಮನಿಗೆ ದೊಡ್ಡ ಕೆಲಸವೇನಲ್ಲ. ಕೇವಲ ಲೀಲೆಯಿಂದ ಬ್ರಹ್ಮಾದಿ ದೇವತೆಗಳ ಪ್ರಾರ್ಥನೆಯಂತೆ ಭೂಮಿಗೆ ಬಂದು ಶ್ರವಣಮಾತ್ರದಿಂದ ಪಾಪ ಕಳೆವ ಉತ್ತಮ ಕಾರ್ಯಗಳನ್ನು ಮಾಡುತ್ತಿದ್ದಾನೆ. ಸೃಷ್ಟಿಸ್ಥಿತಿ ಲಯಕಾರಿಯಾದ ಆ ಪರಮಾತ್ಮ. ಅವನು ಮನುಷ್ಯನೆಂದು ತಿಳಿಯಬೇಡ. ಲೀಲೆಯಿಂದ ಮನುಷ್ಯರೂಪು ತಳೆದಿದ್ದಾನೆ. ಅಷ್ಟೆ. ಬ್ರಹ್ಮಾದಿ ದೇವತೆಗಳೂ ಅವನ ಮುಖದರ್ಶನಕ್ಕಾಗಿ ಹಾತೊರೆಯುತ್ತಿರುವಾಗ ನಾವು ಅನಾಯಾಸವಾಗಿ ಅದನ್ನು ಪಡೆದಿದ್ದೇವೆ. ನಾವೆ ಧನ್ಯರು ಪುಣ್ಯವಂತರು' ಎನ್ನುವರು.

ಇನ್ನೊಂದು ಕಡೆ ಪತಿಯೊಡನೆ ಪಗಡೆಯಾಡಿ ಗೆದ್ದ ಮಡದಿ 'ನಾಥ, ನೀನು ಪಣವಾಗಿಟ್ಟ ಎಲ್ಲ ವಸ್ತುಗಳನ್ನು ನಾನು ಗೆದ್ದೆ' ಎನ್ನುತ್ತ ಅವನನ್ನು ಪರಿಹಾಸಮಾಡುತ್ತ ಆಲಿಂಗಿಸಿಕೊಳ್ಳುವಳು. ಅವನು 'ಪ್ರಿಯೆ, ನಾನೆ ಗೆಲ್ಲುವೆನು ನೋಡು. ರಾಮನನ್ನು ಸ್ಮರಿಸುತ್ತಿರುವ ನನಗೆಲ್ಲಿಯ ಪರಾಜಯ ? ಅವನ ಸ್ಮರಣೆಯ ಬಲದಿಂದಲೆ ದೇವತೆಗಳು ಅಸುರರ ಮೇಲೆ ವಿಜಯ ಸಂಪಾದಿಸಿದರು.' ಎನ್ನುತ್ತ ದಾಳಗಳನ್ನು ಹಾಕಿದನು. ಆಗ ಅವನಿಗೆ ಜಯ ಉಂಟಾಯಿತು. 'ಪ್ರಿಯೆ, ನಾನು ಹೇಳಿದುದು ನಿಜವಾಯಿತು. ರಾಮ ಸ್ಮರಣೆ ಮಾಡುವವನಿಗೆಂದೂ ಶತ್ರುಗಳ ಭಯವಿಲ್ಲ.' ಎಂದ ನಾತ. ಬಳಿಕ ಇಬ್ಬರೂ ಪ್ರೇಮದಿಂದ ಬಲವಾಗಿ ಅಪ್ಪಿಕೊಂಡರು.

ಒಂದು ಕಡೆ ಮಾತ್ರ ಒಬ್ಬ ಅಗಸನು ಕೋಪದಿಂದ ತನ್ನ ಮಡದಿಯನ್ನು ಕಾಲಿಂದ ಒದ್ದು ಬೈಯುತ್ತಿದ್ದ 'ಹೋಗು ನನ್ನ ಮನೆಯಲ್ಲಿ ಇರಬೇಡ. ಹಗಲೆಲ್ಲ ಅವನ ಮನೆಯಲ್ಲಿದ್ದು ಹಾಳಾದ ನಿನ್ನನ್ನು ನಾನು ಇಟ್ಟುಕೊಳ್ಳಲಾರೆ. ಅವನ ಮನೆಗೆ ಹೋಗು'. ಅವನ ತಾಯಿ ಮಗನಿಗೆ ಉಪದೇಶ ಮಾಡಿದಳು 'ಮನೆಗೆ ಬಂದಿರುವವಳನ್ನು ಹೊರಗೆ ಅಟ್ಟಬೇಡ. ಅವಳೇನೂ ತಪ್ಪು ಮಾಡಿಲ್ಲ, ಕೆಟ್ಟಿಲ್ಲ' ಅವನೆಂದ 'ಪರಗೃಹದಲ್ಲಿ ವಾಸ ಮಾಡಿದ ಹೆಂಡತಿಯನ್ನು ನಾನು ರಾಮನಂತೆ ಸೇರಿಸಿಕೊಳ್ಳಲಾರೆ. ಅವನೇನೋ ರಾಜ. ಏನು ಮಾಡಿದರೂ ಸರಿಯೆ. ನಾನು ಹಾಗೆ ಮಾಡಲಾರೆ. ಪರಗೃಹದಲ್ಲಿ ವಾಸ ಮಾಡಿದ ಸೀತೆಯನ್ನು ಅವನು ಸ್ವೀಕರಿಸಿರಬಹುದು. ನಾನು ಹಾಗೆ ಮಾಡಲಾರೆ. ನಾನು ರಾಜನಲ್ಲ.' ಹೀಗೆ ತಿರುಗಿ ತಿರುಗಿ ಹೇಳುತ್ತಿದ್ದ. ಅದನ್ನು ಕೇಳುತ್ತಿದ್ದ ಒಬ್ಬ ಗೂಢಚಾರನು ಸಿಟ್ಟಾಗಿ ಅವನನ್ನು ಕತ್ತಿಯಿಂದ ಇರಿಯಬೇಕೆಂದುಕೊಂಡರೂ 'ತನ್ನ ಯಾವ ಪ್ರಜೆಯನ್ನೂ ಕೊಲ್ಲಕೂಡದೆಂಬ ರಾಮಾಜ್ಞೆಯನ್ನು ನೆನೆದು ಕೋಪವನ್ನು ತಡೆದುಕೊಂಡ.

ಗೂಡಚಾರರು ಪರಸ್ಪರ ಮಂತ್ರಾಲೋಚನೆ ಮಾಡಿ ಸಜ್ಜನರು ಮಾಡುತ್ತಿರುವ ಪ್ರಶಂಸೆಯನ್ನು ಮಾತ್ರ ರಾಮನಿಗೆ ತಿಳಿಸುವುದೆಂದೂ ದುಷ್ಟ ಅಗಸನ ಮಾತನ್ನು ಹೇಳಕೂಡದೆಂದೂ ತೀರ್ಮಾನಿಸಿದರು.

**ಶೇಷ ಉವಾಚ**

**ಶೇಷ :-** ಶ್ರೀರಾಮನು ಪ್ರಾತರ್ವಿಧಿಗಳನ್ನು ಪೂರೈಸಿ ಬ್ರಾಹ್ಮಣರಿಗೆ ದಾನ ದಕ್ಷಿಣೆಗಳನ್ನಿತ್ತು ಸಂತೋಷ ಪಡಿಸಿ ಎಂದಿನಂತೆ ಆಸ್ಥಾನವನ್ನು ಅಲಂಕರಿಸಿದನು. ತುಂಬಿದ ಸಭೆಯಲ್ಲಿ ಪ್ರಜೆಗಳು ರಾಜನನ್ನು ಓಲೈಸಿದರು. ಮಕ್ಕಳಂತೆ ಅವರನ್ನು ಕಾಪಾಡುವ ರಾಮನನ್ನು ನಮಸ್ಕರಿಸಿದರು. ಲಕ್ಷ್ಮಣನು ಸ್ವಯಂ ಶ್ವೇತಛತ್ರವನ್ನು ಹಿಡಿದನು. ಭರತ

ಶತ್ರುಘ್ನರು ಚಾಮರ ಬೀಸಿದರು. ವಶಿಷ್ಠರಂಥ ಮಹರ್ಷಿಗಳಿಂದ ಅಲಂಕೃತವಾದ ಆ ಸಭೆಯಲ್ಲಿ ಸುಮಂತ್ರ ಮೊದಲಾದ ಮಹಾಮಂತ್ರಿಗಳು ನ್ಯಾಯ ನಿರ್ಣಯ ಮಾಡುತ್ತಿದ್ದರು. ಆಗ ಗೂಢಚಾರರು ರಾಮನ ಬಳಿಗೆ ಬಂದರು. ಅವರೇನೋ ಹೇಳಲಿರುವರೆಂದು ತಿಳಿದು ರಹಸ್ಯ ಕೋಣೆಯೊಳಗೆ ಅವರನ್ನು ಕೇಳಿದನು ಶ್ರೀರಾಮ 'ಗೂಢಚಾರರೆ, ನಿಜಸ್ಥಿತಿಯನ್ನು ನನ್ನ ಮುಂದೆ ಹೇಳಿರಿ. ಜನರು ನನ್ನ ಬಗ್ಗೆ, ರಾಣೀವಾಸದ ಬಗ್ಗೆ, ಮಂತ್ರಿಗಳ ಬಗ್ಗೆ, ಏನೆಲ್ಲ ಹೇಳಿಕೊಳ್ಳುತ್ತಿದ್ದಾರೆ ಹೇಳಿರಿ.'

ಆಗ ಆ ಚಾರರೆಲ್ಲರೂ ಹೇಳಿದರು 'ಪ್ರಭು, ನಿನ್ನ ಕೀರ್ತಿ ಲೋಕದ ಎಲ್ಲ ಜನರನ್ನೂ ಪಾವನಗೊಳಿಸುತ್ತಿದೆ. ಮನೆ ಮನೆಗಳಲ್ಲಿ ಸ್ತ್ರೀಪುರುಷರೆಲ್ಲರೂ ನಿನ್ನ ಕೀರ್ತಿಯನ್ನೆ ಕೊಂಡಾಡುತ್ತಿದ್ದುದನ್ನು ಕೇಳಿದೆವು. ನಿನ್ನಿಂದ ಸೂರ್ಯವಂಶ ಬೆಳಗಿತು. ನಿನ್ನ ಪೂರ್ವಿಕರಾದ ಸಗರ ಚಕ್ರವರ್ತಿ ಮುಂತಾದವರೂ ಈಗ ಕೃತಾರ್ಥರಾದರು, ಇಂಥ ಕೀರ್ತಿಯನ್ನು ಅವರಾರಿಂದಲೂ ಗಳಿಸಲಾಗಲಿಲ್ಲ. ನಿನ್ನನ್ನು ರಾಜನಾಗಿ ಪಡೆದ ಪ್ರಜೆಗಳೂ ಕೃತಾರ್ಥರಾದರು. ಅವರಿಗೀಗ ಅಕಾಲ ಮರಣವಿಲ್ಲ. ರೋಗಾದಿ ಉಪದ್ರವಗಳೂ ಇಲ್ಲ. ಚಂದ್ರನಂತೆ ನಿನ್ನ ಕೀರ್ತಿ ಬೆಳಗುತ್ತಿದೆ. ಗಂಗೆಯಂತೆ ಭೂಮಿಯನ್ನಲಂಕರಿಸುತ್ತಿದೆ. ಬ್ರಹ್ಮಾದಿ ದೇವತೆಗಳೂ ನಿನ್ನ ಕೀರ್ತಿಯನ್ನು ಕಂಡು ನಾಚುತ್ತಾರೆ. ಇಂಥ ಮಹಾರಾಜನ ಸೇವೆ ಮಾಡುತ್ತಿರುವ ನಾವೆ ಧನ್ಯರು. ಪ್ರತಿಕ್ಷಣದಲ್ಲಿಯೂ ನಿನ್ನ ಸುಂದರ ಮುಖವನ್ನು ನಾವು ನೋಡುತ್ತಿರುವೆವು.'

ಗೂಢಚಾರರೆಲ್ಲರೂ ಹೀಗೆ ಹೇಳುತ್ತಿದ್ದರೂ. ಒಬ್ಬನ ಮುಖವು ಮಾತ್ರ ವಿಲಕ್ಷಣವಾಗಿರುವುದನ್ನು ಕಂಡು ರಾಮನು ನುಡಿದ. 'ನಿಜ ಹೇಳು. ಪ್ರಜೆಗಳ ಬಾಯಿಂದ ನೀನೇನು ಕೇಳಿದೆಯೊ ಅದನ್ನೆ ಹೇಳು. ಮರೆ ಮಾಚಿದರೆ ನಿನಗೆ ಪಾಪ ಬರುವುದು.' ಚಾರನು ಸುಮ್ಮನಿದ್ದ. ಮತ್ತೆ ಮತ್ತೆ ರಾಮನು ಆಗ್ರಹಪಡಿಸಿದರೂ ಅವನು ಸುಮ್ಮನೆ ನಿಂತ. 'ಸತ್ಯದ ಆಣೆ ಇಡುತ್ತೇನೆ ಎಲ್ಲವನ್ನೂ ಮರೆಮಾಚದೆ ಹೇಳು' ಎಂದ ಶ್ರೀರಾಮ. ಆಗ ಅವನು ಮೆಲ್ಲ ಮೆಲ್ಲನೆ ಹೇಳತೊಡಗಿದ.

**ಗೂಢಚಾರ** :- ಪ್ರಭು, ಒಬ್ಬ ಅಗಸನು ಆಡಿದ ಮಾತು ಇದೆ. ಅದನ್ನು ಹೇಳಬಾರದು. ಆದರೂ ಹೇಳುತ್ತೇನೆ. ತನ್ನ ಮಡದಿ ಪರಗೃಹದಲ್ಲಿದ್ದು ಬಂದವಳೆಂದು ತಿಳಿದು ಒಂದು ರಾತ್ರಿ ಅವನು ಅವಳನ್ನು ಹೊಡೆದು ಬೈಯುತ್ತಿದ್ದ. ಅವನ ತಾಯಿ ಕೇಳಿದಳು, 'ಏಕೆ ಅವಳನ್ನು ಹೊಡೆಯುವೆ. ಏಕೆ ಬೈಯುವೆ ? ಅವಳೇನೂ ತಪ್ಪು ಮಾಡಿಲ್ಲ.' ಆಗ ಅವನೆಂದ 'ರಾಕ್ಷಸನ ಮನೆಯಲ್ಲಿದ್ದ ಸೀತೆಯನ್ನು ರಾಮನು ಕರೆದುಕೊಂಡಿರಬಹುದು. ನಾನೇನೂ ರಾಮನಲ್ಲ.

**ಸರ್ವಂ ರಾಜ್ಞಃ ಕೃತಂ ಕರ್ಮ ನೀತಿಮದ್ಭವತಿ ಪ್ರಭೋಃ ।**
**ಅನ್ಯೇಷಾಂ ಪುಣ್ಯ ಕರ್ತೄಣಾಮಪಿ ಕೃತ್ಯಮನೀತಿಮತ್ ॥**

ಅಧಿಕಾರದಲ್ಲಿರುವ ರಾಜನು ಏನು ಮಾಡಿದರೂ ಅದು ನೀತಿಯಾಗುತ್ತದೆ. ಮಿಕ್ಕವರು ಒಳ್ಳೆಯ ಕೆಲಸ ಮಾಡಿದರೂ ಅದು ನೀತಿ ಎನಿಸುವುದಿಲ್ಲ. ನಾನು ರಾಮನಂತೆ ರಾಜನಾಗಿಲ್ಲ.'

ಹೀಗೆ ಒಂದೇ ಸವನೆ ಹೇಳತೊಡಗಿದಾಗ ಅವನ ತಲೆಯನ್ನು ಕಡಿದುರುಳಿಸಲೆ ಎಂದುಕೊಂಡೆ ಕೋಪದಿಂದ. ಆದರೆ ಪ್ರಭುಗಳ ಆಜ್ಞೆಯನ್ನು ನೆನೆದು ಸುಮ್ಮನಾದೆ. ಶ್ರೀರಾಮನೆಲ್ಲಿ ? ಈ ಅಗಸನೆಲ್ಲಿ ? ಎಂದು ಸಮಾಧಾನ ತಂದುಕೊಂಡೆ. ಪ್ರಭು, ಅವನು ದುಷ್ಟ. ಅವನು ಹೇಳುತ್ತಿರುವುದು ಸುಳ್ಳು. ಅಪ್ಪಣೆಯಾದರೆ ಅವನನ್ನೀಗಲೆ ಕಡಿದು ಚೆಲ್ಲುವೆನು. ನೀನು ಆಗ್ರಹಪಡಿಸಿದೆಯಾದ್ದರಿಂದ ಹೇಳಬಾರದುದನ್ನು ಹೇಳಿದ್ದೇನೆ. ಇನ್ನು ಪ್ರಭುಗಳ ಚಿತ್ತ.

ಶ್ರೀರಾಮನಿಗೆ ಈ ಮಾತನ್ನು ಕೇಳಿದಾಗ ಸಿಡಿಲೆರಗಿದಂತಾಯಿತು. ಬಲವಾಗಿ ನಿಟ್ಟುಸಿರು ಬಿಟ್ಟು ಮೂರ್ಛೆಗೊಂಡು ಬಿದ್ದನಾತ. ಚಾರರು ಒಡನೆ ಬಟ್ಟೆಯ ಸೆರಗಿನಿಂದ ಗಾಳಿ ಬೀಸಿದರು. ಒಂದು ಮುಹೂರ್ತ ಕಾಲ ಮೂರ್ಛೆಯಲ್ಲಿದ್ದು ಬಳಿಕ ಎಚ್ಚತ್ತ ಶ್ರೀರಾಮ. ಭರತನನ್ನು ಬರಹೇಳಿರೆಂದು ಚಾರರಿಗೆ ಅಜ್ಞಾಪಿಸಿದ. ಭರತನು ಬಂದು ರಾಮನ ಅವಸ್ಥೆಯನ್ನು ಕಂಡು ಭಯಗೊಂಡ. ಇದೇನು ಕೋಪವೆ ? ದುಃಖವೆ ? ತಿಳಿಯಲಿಲ್ಲ. 'ಪ್ರಭು, ಏಕೆ ಮುಖ ತಗ್ಗಿಸಿ ಕುಳಿತಿರುವೆ ? ಏಕೆ ಕಣ್ಣೀರು ? ರಾಹು ಗ್ರಹಣ ಹೊಂದಿದ ಚಂದ್ರನಂತಿದೆ ನಿನ್ನ ಮುಖ ! ಏನು ಕಾರಣ, ಮರೆಮಾಚದೆ ಹೇಳು. ನಾನೀಗ ಏನು ಮಾಡಬೇಕು ? ದುಃಖವನ್ನು ಬಿಡು' ಎಂದನಾತ ಕಂಪಿಸುವ ಧ್ವನಿಯಲ್ಲಿ.

ಶ್ರೀರಾಮನೆಂದ 'ತಮ್ಮ ಕೇಳು, ನನ್ನ ದುಃಖಕ್ಕೆ ಕಾರಣವನ್ನು ಹೇಳುತ್ತೇನೆ. ನೀನು ಇದನ್ನು ಪರಿಹರಿಸಬೇಕು. ಸೂರ್ಯವಂಶದಲ್ಲಿ ಯಾವ ರಾಜರಿಗೂ ಇಂದಿನವರೆಗೆ ಅಪಕೀರ್ತಿ ಬಂದಿಲ್ಲ. ಈಗ ನನ್ನ ಕೀರ್ತಿಗೆ ಕಲಂಕ ಬಂದಿದೆ. ಗಂಗೆ ಯಮುನೆಯೊಂದಿಗೆ ಸೇರಿದಂತಾಗಿದೆ.

**ಯೇಷಾಂ ಯಶೋ ನೃಣಾಂ ಭೂಮೌ ತೇಷಾ ಮೇವ ಸುಜೀವಿತಂ।**
**ಅಪಕೀರ್ತಿಕ್ಷತಾನಾಂ ತು ಜೀವಿತಂ ಮೃತಕೈಃ ಸಮಂ ॥**

ಯಾರ ಕೀರ್ತಿ ಭೂತಲದಲ್ಲಿ ಹರಡಿರುತ್ತದೊ ಅವರ ಬಾಳು ಉತ್ತಮ. ಅಪಕೀರ್ತಿಯ ಅಘಾತವಾಗಿದ್ದೂ ಬದುಕುವವರ ಬಾಳು ಮರಣಕ್ಕೆ ಸಮಾನ.

ಈಗ ನನ್ನ ಕೀರ್ತಿಗಂಗೆ ಕಲುಷಿತವಾಗಿದೆ. ಸೀತೆಯ ಕುರಿತು ಒಬ್ಬ ಅಗಸನೂ ಒಂದು ಕೆಟ್ಟ ಮಾತು ಆಡುವಂತಾದರೆ ನಾನೇನು ಮಾಡಲಿ ಹೇಳು. ಪ್ರಾಣ ಬಿಡಲೆ, ಇಲ್ಲ ಜಾನಕಿಯನ್ನು ಬಿಡಲೆ ? ಈ ಎರಡರಲ್ಲಿ ನಾನೇನು ಆರಿಸಿಕೊಳ್ಳಲಿ ?'

ಹೀಗೆ ಅನ್ನುತ್ತ, ಕಣ್ಣೀರು ಸುರಿಸುತ್ತ ನಡುಗಿ ನೆಲಕ್ಕೆ ಒರಗಿದ ಶ್ರೀರಾಮ. ಭರತನು ಮೆಲ್ಲನೆ ಗಾಳಿ ಬೀಸಿದ. ಅವನು ಎಚ್ಚರಗೊಂಡಾಗ ಹೀಗೆ ಸಂತೈಸಿದ.

**ಭರತ** :- ಯಾರು ಆ ಅಗಸ ? ಜಾನಕಿಯ ಬಗ್ಗೆ ಆಡಿಕೊಳ್ಳುವ ಅವನ ನಾಲಗೆಯನ್ನು ಕತ್ತರಿಸಿ ಹಾಕುತ್ತೇನೆ. ಅವನೇನು ಹೇಳಿದ ?

ರಾಮನು ಗೂಢಚಾರರಿಂದ ತಾನು ತಿಳಿದುಕೊಂಡ ಅಗಸನ ಮಾತುಗಳನ್ನೆಲ್ಲ ಭರತನಿಗೆ ಹೇಳಿದ.

**ಭರತ** :- ಜಾನಕಿ ಪರಿಶುದ್ಧಳೆಂಬುದು ಅಂದೇ ಲಂಕೆಯಲ್ಲಿ ಅಗ್ನಿಪರೀಕ್ಷೆಯಿಂದ ಸಿದ್ಧವಾಗಿದೆ. ಸಾಕ್ಷಾತ್ ಬ್ರಹ್ಮನೆ ಆಕೆ ಶುದ್ಧಳೆಂದು ಹೇಳಿದ್ದಾನೆ. ತಂದೆ ದಶರಥನೂ ಬಂದು

ಹಾಗೆ ಹೇಳಿದ್ದಾನೆ. ಅಗಸನೊಬ್ಬನು ಏನೋ ಹೇಳಿದನೆಂದು ಲೋಕವಂದ್ಯೆ ಎನಿಸಿದ ಜಾನಕಿಯನ್ನು ಬಿಡುವುದುಂಟೆ? ಬ್ರಹ್ಮಾದಿ ದೇವತೆಗಳು ಹೊಗಳುವ ಲೋಕಪಾವನವಾದ ನಿನ್ನ ಕೀರ್ತಿ ಅಗಸನ ಮಾತಿನಿಂದ ಕಲುಷಿತವಾಗಿ ಬಿಡುವುದೆ ? ಜಾನಕಿಗೆ ಅಪವಾದ ಬಂದಿತೆಂದು ತಿಳಿದು ದುಃಖಿಸಬೇಡ. ಗರ್ಭಿಣಿಯಾದ ಆ ಸೌಭಾಗ್ಯವತಿಯೊಂದಿಗೆ ನೀನು ರಾಜ್ಯಭಾರ ಮಾಡು. ಈ ಶರೀರವನ್ನೆ ಬಿಡುವೆನೆಂದು ಹೇಗೆ ಮನಸ್ಸು ಮಾಡಿದೆ ? ನೀನಿಲ್ಲದಿದ್ದರೆ ನಾವು ಬದುಕಿರುತ್ತೇವೆಯೆ? ನಿನ್ನನ್ನು ಬಿಟ್ಟು ಒಂದು ಕ್ಷಣವಾದರೂ ಸೀತೆ ಬದುಕಲಾರಳು. ಆ ಪತಿವ್ರತೆಯೂ ನಿನ್ನೊಡಿಗೆ ಸುಖವಾಗಿರಲಿ.

**ರಾಮ :-** ತಮ್ಮ, ನೀನು ಹೇಳುವುದು ನಿನಗೆ ಧರ್ಮಸಮ್ಮತವಾಗಿ ಕಾಣಬಹುದು. ಆದರೆ ನನ್ನ ಆಜ್ಞೆಯನ್ನು ನೀನು ಪಾಲಿಸಬೇಕು. ನನ್ನ ಸೀತೆ ವಹ್ನಿಶುದ್ಧಳು. ಪವಿತ್ರಳು, ಲೋಕವಂದಿತಳು ಎಂಬುದು ನನಗೆ ಗೊತ್ತು. ಆದರೆ ಲೋಕಾಪವಾದದ ಭಯದಿಂದ ಅವಳನ್ನು ಬಿಡುತ್ತಿದ್ದೇನೆ. ಆದ್ದರಿಂದ ಹರಿತವಾದ ಕ್ರೂರ ಖಡ್ಗವನ್ನೆತ್ತಿ ನನ್ನ ತಲೆಯನ್ನು ಕಡಿ ಇಲ್ಲವೆ ಜಾನಕಿಯನ್ನು ಕಾಡಿನಲ್ಲಿ ಬಿಟ್ಟು ಬಿಡು.

ಈ ಮಾತನ್ನು ಕೇಳಿದೊಡನೆ ಭರತನು ಕಣ್ಣೀರು ನಡುಗುತ್ತ ಮೂರ್ಛೆಗೊಂಡು ನೆಲಕ್ಕೆ ಒರಗಿದ.

**ವಾತ್ಸ್ಯಾಯನ :-** ಜಾನಕಿಯ ಕೀರ್ತಿ ಲೋಕಪಾವನವಾಗಿರುವಾಗ ಇಂಥ ಕೆಟ್ಟ ಮಾತು ಹೇಗೆ ಬಂದಿತು ? ದೇವ ಹೇಳು. ನಿನ್ನ ಮುಖದಿಂದ ಬರುವ ಅಮೃತದಂಥ ಮಾತುಗಳನ್ನು ಕೇಳಿದಷ್ಟೂ ತೃಪ್ತಿ ಉಂಟಾಗುವದಿಲ್ಲ.

**ಶೇಷ :-** ಜನಕ ಮಹಾರಾಜ ಮಿಥಿಲೆ ಎಂಬ ಮಹಾನಗರಿಯಲ್ಲಿ ಧರ್ಮದಿಂದ ಪ್ರಜೆಗಳನ್ನು ಸಂತೋಷ ಪಡಿಸುತ್ತ ರಾಜ್ಯಭಾರ ಮಾಡುತ್ತಿದ್ದ. ಅವನೊಮ್ಮೆ ಯಾಗಭೂಮಿಯನ್ನು ಉಳುವಾಗ ರತಿಯಂತೆ ಕಾಣುವ ಸುಂದರವಾದ ಹೆಣ್ಣು ಮಗುವನ್ನು ಪಡೆದ. ಮೋಹಕವಾದ ಸೌಂದರ್ಯದಿಂದ ಕೂಡಿದವಳು. ಸಾಕ್ಷಾತ್ ಲಕ್ಷ್ಮಿ ಆಕೆ. ಜನಕನು ಅವಳಿಗೆ ಸೀತೆ ಎಂದು ಹೆಸರಿಟ್ಟ. ಅವಳೊಮ್ಮೆ ಉದ್ಯಾನವನದಲ್ಲಿ ಆಟವಾಡುತ್ತಿದ್ದಾಗ ಅಂದವಾದ ಎರಡು ಗಿಳಿಗಳು ಮಾತಾಡುವುದನ್ನು ಕಂಡಳು. ಅವು ಆನಂದದಿಂದ ಅನ್ಯೋನ್ಯ ಪ್ರೇಮದಿಂದ ಇಂಪಾಗಿ ಮಾತನಾಡಿಕೊಳ್ಳುತ್ತ ವಿಹಾರ ಮಾಡುತ್ತಿದ್ದವು. ಆಕಾಶದಲ್ಲಿ ವೇಗವಾಗಿ ಹಾರಿ ಬಂದು ಸಮೀಪದ ಮರದ ಮೇಲೆ ಕುಳಿತು ಹೇಳತೊಡಗಿದವು.

'ಭೂಮಿಯಲ್ಲಿ ರಾಮನೆಂಬ ಒಬ್ಬ ಸುಂದರನಾದ ರಾಜನು ಹುಟ್ಟುತ್ತಾನೆ. ಅವನಿಗೆ ಸೀತೆ ಎಂಬವಳು ರಾಣಿಯಾಗುತ್ತಾಳೆ. ಅವನು ಆಕೆಯೊಂದಿಗೆ ಹನ್ನೊಂದು ಸಾವಿರ ವರ್ಷಗಳ ಕಾಲ ರಾಜ್ಯಭಾರ ಮಾಡುತ್ತಾನೆ. ಶತ್ರು ರಾಜರನ್ನು ತುಳಿಯುತ್ತಾನೆ. ಆ ಸೀತೆ. ಆ ರಾಮ ಇಬ್ಬರೂ ಧನ್ಯರು. ಒಳ್ಳೆಯ ಜೋಡಿ. ಆನಂದದಿಂದ ವಿಹರಿಸುತ್ತಾರೆ.'

ಈ ಮಾತನ್ನು ಕೇಳಿ ಸೀತೆ. 'ಇವರಾರೊ ದೇವತೆಗಳಿರಬಹುದು. ನನ್ನ ವಿಷಯವಾಗಿಯೆ ಎಷ್ಟು ಮುದ್ದಾಗಿ ಮಾತನಾಡುತ್ತಿವೆ ಈ ಗಿಳಿಗಳು ! ಅವನ್ನು ಹಿಡಿದು ಎಲ್ಲವನ್ನು ಕೇಳಿ ತಿಳಿದುಕೊಳ್ಳುವೆ.' ಎಂದುಕೊಂಡು ತನ್ನ ಸಖಿಯರನ್ನು ಕರೆದಳು.

'ಮೆಲ್ಲಗೆ ಈ ಮುದ್ದಾದ ಗಿಳಿಗಳನ್ನು ಹಿಡಿದು ತನ್ನಿ' ಎಂದಳು. ಅವರು ಹಿಡಿದು ತಂದರು. ಸೀತೆ ಅವುಗಳನ್ನು ಸಮಾಧಾನಪಡಿಸುತ್ತ ಹೇಳಿದಳು.

**ಸೀತೆ :-** ಏನೂ ಭಯಪಡಬೇಡಿ. ಎಷ್ಟು ಮುದ್ದಾಗಿರುವಿರಿ ? ನೀವು ಯಾರು ? ಎಲ್ಲಿಂದ ಬಂದಿರಿ ? ಯಾರು ರಾಮ ? ಯಾರು ಸೀತೆ ? ಅವರ ಬಗ್ಗೆ ನೀವು ಹೇಗೆ ತಿಳಿದಿರಿ ? ಎಲ್ಲವನ್ನೂ ಹೇಳಿ. ಬೇಗಹೇಳಿ. ನನ್ನಿಂದ ನಿಮಗೆ ಏನೂ ಭಯವಿಲ್ಲ.

**ಗಿಳಿಗಳು :-** ವಾಲ್ಮೀಕಿ ಎಂಬ ಮುನಿ ಇದ್ದಾನೆ. ನಾವು ಅವನಾಶ್ರಮದಲ್ಲಿರುತ್ತೇವೆ. ಮುಂದೆ ನಡೆಯಲಿರುವ ರಾಮನ ಚರಿತ್ರೆಯನ್ನು ಶಿಷ್ಯರ ಬಾಯಿಯಿಂದ ಹಾಡಿಸುತ್ತಿದ್ದಾನೆ ಆ ಮುನಿ. ಬಾರಿ ಬಾರಿಗೂ ಶಿಷ್ಯರು ಹಾಡುವುದಿರಂದ ಅದನ್ನು ಕೇಳಿ ನಾವೂ ಕಲಿತೆವು. ಇನ್ನು ರಾಮನು ಯಾರು ? ಸೀತೆ ಯಾರು ? ಅವಳಿಗೆ ಮುಂದೇನಾಗಲಿದೆ ? ಎಲ್ಲವನ್ನು ಹೇಳುತ್ತೇವೆ ಕೇಳು. ಋಷ್ಯಶೃಂಗನ ಯಾಗದಿಂದ ಶ್ರೀಹರಿ ನಾಲ್ಕು ರೂಪಗಳಿಂದ ಅವತರಿಸಿ ದೇವತಾಸ್ತ್ರೀಯರು ಹಾಡುವಂಥ ಅದ್ಭುತ ಲೀಲೆಗಳನ್ನು ತೋರುವನು. ಅವನು ಧನುರ್ಧಾರಿಯಾಗಿ ತಮ್ಮನೊಂದಿಗೆ ವಿಶ್ವಾಮಿತ್ರರನ್ನು ಹಿಂಬಾಲಿಸಿ ಮಿಥಿಲೆಗೆ ಹೋಗುತ್ತಾನೆ. ಬೇರೆ ರಾಜರಿಗೆ ಅಸಾಧ್ಯವಾದ ಒಂದು ಧನುಸ್ಸನ್ನು ಮುರಿದು ಸುಂದರಿಯಾದ ಸೀತೆಯನ್ನು ಮದುವೆಯಾಗುತ್ತಾನೆ. ಅವಳೊಂದಿಗೆ ರಾಜ್ಯಭಾರ ಮಾಡುತ್ತಾನೆ. ಹೀಗೆ ಅನೇಕ ವಿಷಯಗಳನ್ನು ನಾವು ಅಲ್ಲಿ ಕೇಳಿದ್ದೇವೆ. ಅದನ್ನು ನಾವು ಹೇಳಿದೆವಲ್ಲವೆ ? ಈಗ ನಮ್ಮನ್ನು ಬಿಡು, ನಾವು ಹೋಗುವೆವು.

**ಸೀತೆ :-** ಆ ರಾಮನೆಲ್ಲಿದ್ದಾನೆ ? ಯಾರ ಪುತ್ರ ? ಅವನು ಸೀತೆಯನ್ನು ಹೇಗೆ ಪರಿಗ್ರಹಿಸುತ್ತಾನೆ ? ಅವನ ರೂಪ ಹೇಗಿದೆ ? ಎಲ್ಲವನ್ನು ಹೇಳಿ. ಬಳಿಕ ನಿಮಗೆ ಇಷ್ಟವೆನಿಸಿದುದನ್ನೆಲ್ಲ ನಾನು ಮಾಡುತ್ತೇನೆ.

ಸೀತೆಯ ಈ ಅತುರವನ್ನು ಕಂಡಾಗ ಹೆಣ್ಣುಗಿಳಿಗೆ ಅರಿವಾಯಿತು. 'ಈಕೆ ಸೀತೆಯೆ ಇರಬೇಕು ಈಗಲೆ ರಾಮನಲ್ಲಿ ಅನುರಕ್ತಳಾಗಿದ್ದಾಳೆ' ಎಂದು. ಅದು ಅವಳೆದುರಿನಲ್ಲಿ ನಿಂತು ಹೇಳಿತು.

'ಸೂರ್ಯವಂಶಕ್ಕೆ ಧ್ವಜದಂತಿರುವ ದಶರಥನೆಂಬ ರಾಜನೊಬ್ಬ ಹುಟ್ಟುತ್ತಾನೆ. ಅವನ ಸಹಾಯದಿಂದ ದೇವತೆಗಳು ದಾನವರನ್ನು ಗೆಲ್ಲುತ್ತಾರೆ. ಅವನಿಗೆ ಇಂದ್ರನನ್ನೆ ಮರಳು ಮಾಡಬಲ್ಲ ಮೂರು ಜನ ಮಡದಿಯರಿರುತ್ತಾರೆ. ಅವರಲ್ಲಿ ನಾಲ್ಕು ಜನ ಬಲಿಷ್ಠರಾದ ಮಕ್ಕಳು ಹುಟ್ಟುತ್ತಾರೆ. ಅವರಲ್ಲಿ ಎಲ್ಲರಿಗಿಂತ ಹಿರಿಯವನು ರಾಮ. ಬಳಿಕ ಭರತ, ಲಕ್ಷ್ಮಣ ಮತ್ತು ಶತ್ರುಘ್ನರು. ರಾಮನಿಗೆ ರಘುನಾಥ ಮುಂತಾದ ಅನಂತ ನಾಮಗಳುಂಟಾಗುತ್ತವೆ. ಅವನು ಮುಖ ತಾವರೆಯಂತೆ, ಕಣ್ಣುಗಳು ಅದರದಳಗಳಂತೆ. ಮೂಗು ಎತ್ತರವಾಗಿದ್ದು ಸುಂದರವಾಗಿರುತ್ತದೆ. ಹುಬ್ಬುಗಳೂ ಮನೋಹರ. ಆಜಾನು ಬಾಹು, ಕಂಬುಕಂಠ, ವಿಸ್ತಾರವಾದ ಎದೆ. ಸುಂದರ ತೊಡೆಗಳು, ನಡುವೂ ಮನೋಹರ. ಭಕ್ತರೆಲ್ಲರೂ ಸದಾ ಸೇವಿಸುವ ತಾವರೆಯ ಹೂವಿನಂಥ ಪಾದಗಳು. ಹೀಗಿವೆ ಅವನ ರೂಪ. ಅದನ್ನು ನೂರುಮುಖವಿದ್ದರೂ ವರ್ಣಿಸುವುದು ಅಸಾಧ್ಯ. ನನ್ನಂಥ ಪಕ್ಷಿಗಳು ಏನು ವರ್ಣಿಸಬಲ್ಲುವು ? ಆ ರೂಪವನ್ನು ನೋಡಿ ಲಲಿತ ಮಹೋರ ಶರೀರವುಳ್ಳ ಲಕ್ಷ್ಮಿಯೆ

ಮರುಳಾದಳೆಂದರೆ ಉಳಿದ ಹೆಣ್ಣುಗಳ ಪಾಡೇನು ? ಮೋಹಕವಾದ ರೂಪ ಮಹಾಬಲ ವೀರ್ಯ ಐಶ್ವರ್ಯ ಮುಂತಾದ ಅವನ ಎಲ್ಲ ಗುಣಗಳನ್ನು ನಾನು ಏನೆಂದು ವರ್ಣಿಸಲಿ, ಹೇಳು. ಅವನೊಂದಿಗೆ ಹತ್ತು ಸಾವಿರ ವರ್ಷಗಳ ಕಾಲ ವಿಹಾರ ಮಾಡುವ ಆ ಸುಂದರಿ ಸೀತೆಯೆ ಧನ್ಯೆ. ಈಗ ನೀನು ಯಾರು ಹೇಳು. ನಿನ್ನ ಹೆಸರೇನು ? ರಾಮನ ಬಗ್ಗೆ ಕೇಳಲು ಅಷ್ಟು ಕುತೂಹಲವೇಕೆ ?' ಸೀತೆ ಆ ಗಿಳಿಗಳಿಗೆ ತನ್ನ ಪರಿಚಯವನ್ನು ಹೇಳಿದಳು.

'ನೀವು ಹೇಳಿದ ಆ ಸೀತೆ ನಾನೆ. ಜನಕರಾಜನ ಮಗಳು. ನೀವು ಹೇಳಿದಂತೆ ಆ ರಾಮನು ಬಂದು ನನ್ನನ್ನು ಮದುವೆಯಾದ ಮೇಲೆ ನಾನು ನಿಮ್ಮನ್ನು ಬಿಡುತ್ತೇನೆ ನನ್ನ ಮನೆಯಲ್ಲಿಯೆ ಇದ್ದು ರುಚಿಯಾದ ಹಣ್ಣುಗಳನ್ನು ತಿನ್ನಿ. ಆಟವಾಡುತ್ತ ಸುಖವಾಗಿರಿ.'

ಸೀತೆಯ ಈ ಮಾತನ್ನು ಕೇಳಿ ಗಿಳಿಗಳಿಗೆ ಭಯವಾಯಿತು. 'ಅಮ್ಮ. ನಾವು ಹಕ್ಕಿಗಳು ಕಾಡಿನಲ್ಲಿ ಮರಗಳ ಮೇಲಿರುವವರು. ಮನಬಂದೆಡೆಗೆ ಹಾರುಡುತ್ತಿರಬೇಕು. ಮನೆಯೊಳಗಿದ್ದರೆ ನಮಗೆ ಸುಖವಿಲ್ಲ. ಆದರೂ ನಾನೀಗ ಬಸುರಿಯಾದುದರಿಂದ ನಮ್ಮ ಸ್ಥಾನಕ್ಕೆ ಹೋಗಿ ಮರಿಗಳಾದಡೊನೆ ನಿನ್ನ ಬಳಿಗೇ ಬರುವೆನು. ನನ್ನ ಮಾತು ನಿಜ.'

ಸೀತೆ ಇನ್ನೂ ಎಳೆ ವಯಸ್ಸಿನ ಹುಡುಗಿ. ಅದ್ದರಿಂದ ಅವಳು ಗಿಳಿಯನ್ನು ಬಿಡಲಿಲ್ಲ. ಗಂಡುಗಿಳಿ ಆಕೆಯನ್ನು ಬೇಡತೊಡಗಿತು. 'ಸೀತೆ, ನನ್ನ ಮಡದಿಯನ್ನು ಬಿಟ್ಟು ಬಿಡು. ನಾವು ಕಾಡಿನಲ್ಲಿ ಸ್ವಚ್ಛಂದವಾಗಿ ಹಾರುತ್ತ ಸುಖ ಪಡುವೆವು. ನಿನ್ನಲ್ಲಿಗೆ ಬರಲೇಬೇಕೆಂದಿದ್ದರೆ ಮಡದಿಯ ಪ್ರಸವವಾದ ಮೇಲೆ ಬರುವೆವು.' ಸೀತೆ ನುಡಿದಳು 'ನೀನು ಹೋಗು. ನಿನ್ನ ಮಡದಿ ಮಾತ್ರ ಇಲ್ಲೆ ಇರಲಿ. ನನ್ನ ಬಳಿಯಲ್ಲಿಟ್ಟು ಸಾಕುತ್ತೇನೆ. ಅವಳು ನನಗಿಷ್ಟ.' ಗಿಳಿಗೆ ದುಃಖ ತಡೆಯಲಾಗಲಿಲ್ಲ. ಕೋಪದಿಂದ ಹೇಳಿತು 'ಯೋಗಿಗಳು ಹೇಳುವ ಮಾತು ಸುಳ್ಳಲ್ಲ.

**ನ ವಕ್ತವ್ಯಂ ನ ವಕ್ತವ್ಯಂ ಮೌನಮಾಶ್ರಿತ್ಯ ತಿಷ್ಠತು ।**
**ನೋ ಚೇತ್ ಸ ವಾಕ್ಯದೋಷೇಣ ಪ್ರಾಪ್ನೋತ್ಯಾಲಾನಮುನ್ಮದಃ ॥**

ಮಾತನಾಡಬಾರದು, ಆಡಲೇಬಾರದು. ಮೌನವಾಗಿರಬೇಕು. ಸಂತೋಷಗೊಂಡು ಮಾತನಾಡತೊಡಗಿದರೆ ಆ ತಪ್ಪಿನಿಂದ ಬಂಧನಕ್ಕೊಳಗಾಗಬೇಕಾಗುತ್ತದೆ.

ನಾವೀಗ ಮರದ ಮೇಲೆ ಕುಳಿತು ಮಾತನಾಡದಿರುತ್ತಿದ್ದರೆ ಈ ಬಂಧನ ಹೇಗೆ ಉಂಟಾಗುತ್ತಿತ್ತು? ಸೀತೆ, ಮಡದಿಯನ್ನು ಬಿಟ್ಟು ನಾನು ಬದುಕಲಾರೆ. ಇಬ್ಬರನ್ನೂ ಬಿಟ್ಟುಬಿಡು.'

ಹೀಗೆ ನಾನಾವಿಧದಿಂದ ಬೇಡಿಕೊಂಡರೂ ಸೀತೆ ಬಿಡಲಿಲ್ಲ. ಕೊನೆಗೆ ಹೆಣ್ಣು ಗಿಳಿ ಕೋಪ ದುಃಖಗಳನ್ನು ತಡೆಯಲಾರದೆ ಶಾಪ ಕೊಟ್ಟಿತು. 'ಗರ್ಭಿಣಿಯಾದ ನನ್ನನ್ನು ಪತಿಯಿಂದ ಆಗಲಿಸುವೆ. ನೀನೂ ಗರ್ಭಿಣಿಯಾಗಿರುವಾಗ ರಾಮನಿಂದ ವಿಯೋಗ ಪಡೆ.'

ಹೀಗೆ ಹೇಳಿ ತಡೆಯಲಾರದ ಪತಿ ದುಃಖದಿಂದ ಪ್ರಾಣಬಿಟ್ಟಿತು. ಸಾಯುವಾಗ ರಾಮ ರಾಮ ಎನ್ನುತ್ತಿತ್ತು. ಅದರಿಂದ ದಿವ್ಯ ವಿಮಾನವನ್ನೇರಿ ಸ್ವರ್ಗಕ್ಕೆ ಹೊರಟು ಹೋಯಿತು ಆ ಗಿಳಿ.

ಗಂಡು ಗಿಳಿಯೂ ದುಃಖ ಕೋಪಗಳನ್ನು ತಡೆಯಲಾರದೆ ಗಂಗೆಯಲ್ಲಿ ಬಿದ್ದು ಸತ್ತಿತ್ತು. ಸಾಯುವಾಗ ಹೇಳಿತು 'ಮುಂದೆ ರಾಮನ ನಗರದಲ್ಲಿ ಹುಟ್ಟಿ ಕೆಟ್ಟ ಮಾತಿನಿಂದ ಸೀತೆಯನ್ನು ರಾಮನಿಂದ ಅಗಲಿಸುವೆನು.' ಗಂಗೆಯಲ್ಲಿ ಬಿದ್ದು ಶರೀರ ತ್ಯಾಗ ಮಾಡಿದರೂ ಆ ಕಾಲದಲ್ಲಿ ಸೀತೆಯ ಮೇಲಿನ ಕೋಪ ದುಃಖ ಅಪಮಾನಗಳಿಂದ ತುಂಬಿದುದರಿಂದ ಮುಂದೆ ಅಗಸರ ಜಾತಿಯಲ್ಲಿ ಕ್ರೋಧನನೆಂಬ ಹೆಸರಿನಿಂದ ಹುಟ್ಟಿದ.

**ಯಃ ಕ್ರೋಧಾಚ್ಚ ಸ್ವಕಾನ್ ಪ್ರಾಣಾನ್ ಮಹತಾಂ ದುಷ್ಟಮಾಚರನ್ ।**
**ಸಂತ್ಯಜೇತ್ ಸ ಮೃತೋ ಯಾತಿ ಅಂತ್ಯಜತ್ವಂ ದ್ವಿಜೋತ್ತಮ ॥**

ಮಹಾತ್ಮರಿಗೆ ಕೇಡು ಬಗೆದು ಕೋಪದಿಂದ ಪ್ರಾಣ ತ್ಯಾಗ ಮಾಡುವವನು ಅಂತ್ಯಜನಾಗಿ ಹುಟ್ಟುತ್ತಾನೆ.

ಹೀಗೆ ಗಿಳಿಯ ಶಾಪ, ರಜಕನು ಹೊರಿಸಿದ ಅಪವಾದ ಇವುಗಳಿಂದ ಸೀತೆ ಪತಿವಿಯೋಗ ಹೊಂದಿ ಕಾಡಿಗೆ ಹೋದಳು.

**ಶೇಷ :-** ಭರತನು ಮೂರ್ಛಿತನಾದುದನ್ನು ಕಂಡು ರಾಮನು ಪ್ರತಿಹಾರಿಯನ್ನು ಕರೆದು 'ಶತ್ರುಘ್ನನನ್ನು ಬರಹೇಳು' ಎಂದ. ಆತನು ಒಂದು ಕ್ಷಣದಲ್ಲಿ ಶತ್ರುಘ್ನನನ್ನು ಕರೆತಂದ. ಭರತನು ಮೂರ್ಛೆ ರಾಮನ ಶೋಕಗಳನ್ನು ಕಂಡು 'ಏನು ವಿಪತ್ತು ಬಂದೊದಗಿತು ?' ಎಂದ ಶತ್ರುಘ್ನ, ರಾಮನು ಅಗಸನಾಡಿದ ಕೆಟ್ಟ ಮಾತನ್ನು ತಿಳಿಸಿ ತಲೆ ತಗ್ಗಿಸಿ ನಡುಗುವ ದೀನ ಗದ್ಗದ ಧ್ವನಿಯಿಂದ ಹೇಳಿದ 'ತಮ್ಮ, ನನ್ನ ಮಾತನ್ನು ನಡೆಸಿಕೊಡು. ಭೂಮಿಗೆ ಬಂದಿಳಿದ ಗಂಗೆಯಂತೆ ನನ್ನ ಕೀರ್ತಿ ನಿರ್ಮಲವಾಗಿರಬೇಕಾದರೆ ನಾನೀಗ ಅಗಸನು ಹೇಳಿದಂತೆ ಸೀತೆಗೆ ದೊಡ್ಡ ಲೋಕಾಪವಾದ ಬಂದಿರುವುದನ್ನು ಕೇಳಿದ ಮೇಲೆ ನನ್ನ ಶರೀರವನ್ನೆ ಬಿಡಬೇಕು ಇಲ್ಲವೆ ಸೀತೆಯನ್ನು ಬಿಡಬೇಕು.'

ಈ ಮಾತವನ್ನು ಕೇಳಿದೊಡನೆ ಶತ್ರುಘ್ನನು ನಡುಗಿ ಮೈಮರೆತು ಬಿದ್ದ. ಒಂದು ಮುಹೂರ್ತ ಕಾಲದ ಮೇಲೆ ಎಚ್ಚೆತ್ತು ಹೇಳಿದ.

**ಶತ್ರುಘ್ನ :-** ಪ್ರಭು, ಇದೇನು ಜಾನಕಿಯ ಬಗ್ಗೆ ಇಷ್ಟೊಂದು ಕ್ರೂರ ನಿರ್ಧಾರ ಮಾಡಿಬಿಟ್ಟೆ ? ನಾಸ್ತಿಕರು, ದುಷ್ಟಬುದ್ಧಿಯವರು, ಎಲ್ಲ ಧರ್ಮಗಳನ್ನು ಬಿಟ್ಟವರು ವೇದವನ್ನು ನಿಂದಿಸುತ್ತಾರೆಂದು ಬ್ರಾಹ್ಮಣನು ಅದನ್ನು ಬಿಡುವುದುಂಟೆ? ಎಲ್ಲ ಲೋಕಗಳ ಪಾಪಗಳನ್ನು ಕಳೆವ ಗಂಗೆಯನ್ನು ಪಾಪಿಗಳು ಮುಟ್ಟರೆಂದು ಸಜ್ಜನರೂ ಅಸ್ಪೃಶ್ಯವೆನ್ನುವರೆ ? ಲೋಕವನ್ನು ಬೆಳಗಲು ಉದಯಿಸುವ ಸೂರ್ಯನು ಗೂಬೆಗಳಿಗೆ ಬೇಡವೆನಿಸಿದರೆ ಅದರಿಂದೇನು ಹಾನಿಯಾಗುತ್ತದೆ ? ಆದ್ದರಿಂದ ನಿರಪರಾಧಿಯಾದ ಸೀತೆಯನ್ನು ಪರಿತ್ಯಜಿಸಬೇಡ. ಶ್ರೀರಾಮಭದ್ರ ದಯೆದೋರಿ ನನ್ನ ಪ್ರಾರ್ಥನೆಯನ್ನು ಮನ್ನಿಸು.

ಶ್ರೀರಾಮನು ಮಾತ್ರ ಭರತನಿಗೆ ಹೇಳಿದಂತೆ ತಿರುಗಿ ತಿರುಗಿ ಅದೇ ಮಾತನ್ನು ಹೇಳತೊಡಗಿದ. ಅದನ್ನು ಕೇಳಿ ದುಃಖವನ್ನು ತಡೆಯಲಾರದೆ ಬುಡಕಡಿದ ಮರದಂತೆ ಬಿದ್ದು ಮೂರ್ಛೆ ಹೊಂದಿದ ಶತ್ರುಘ್ನ, ಶ್ರೀರಾಮನು ಪ್ರತೀಹಾರಿಯನ್ನು ಕರೆದು ಲಕ್ಷ್ಮಣನನ್ನು ಬರ ಹೇಳಿದ. ಆತ ಲಕ್ಷ್ಮಣನ ಬಳಿಗೆ ಹೋಗಿ 'ಪ್ರಭು, ಶ್ರೀರಾಮನು ತಮ್ಮನ್ನು ಬೇಗನೆ ಬರಲು ಹೇಳಿದ್ದಾನೆ', ಎಂದ. ಒಡನೆ ಲಕ್ಷ್ಮಣನು ಧಾವಿಸಿ ಬಂದು

ಭರತ ಶತ್ರುಘ್ನರು ಮೂರ್ಛಿತರಾಗಿ ಬಿದ್ದಿರುವುದನ್ನೂ ರಾಮನು ದುಃಖಿಸುತ್ತ ಕುಳಿತಿರುವುದನ್ನೂ ಕಂಡು, 'ರಾಜನೆ, ಇದೇನು ಭಯಂಕರವಾದ ಮೂರ್ಛೆ, ಶೋಕ, ನಡುಕಗಳು ? ಏನುಕಾರಣ, ಹೇಳು.' ಎಂದ.

ಶ್ರೀರಾಮನು ಅವನಿಗೆ ಸೀತೆಯನ್ನು ಪರಿ ತ್ಯಾಗಮಾಡಬೇಕಾಗಿ ಬಂದ ಪರಿಸ್ಥಿತಿಯನ್ನು ಹೇಳಿದ. ಒಡನೆ ಲಕ್ಷ್ಮಣನು ನಿಟ್ಟುಸಿರಿಟ್ಟು ಜೋರಾಗಿ ಶ್ವಾಸ ಎಳೆದು ಗರಬಡಿದವನಂತೆ ಸುಮ್ಮನೆ ನಿಂತುಬಿಟ್ಟ. ಆಗಾಗ ನಡುಗತೊಡಗಿದ. ಶ್ರೀರಾಮ ಇದನ್ನು ನೋಡಿ ತನಗೆ ತಾನೆ ಗಟ್ಟಿಯಾಗಿ ಹೇಳಿಕೊಂಡ. 'ಅಪಯಶಸ್ಸು ಬಂದ ಮೇಲೆ ನಾನು ಭೂಮಿಯಲ್ಲಿದ್ದೇನು ಪ್ರಯೋಜನ ? ಶರೀರ ತ್ಯಾಗವನ್ನೆ ಮಾಡುತ್ತೇನೆ. ನನ್ನ ತಮ್ಮಂದಿರು ಸಮರ್ಥರಾಗಿದ್ದು ಯಾವಾಗಲೂ ನನ್ನ ಮಾತನ್ನು ನಡೆಸುತ್ತಿದ್ದರು. ಈಗ ದುರ್ದೈವದಿಂದ ಅವರೂ ನನಗೆ ಅವಿಧೇಯರಾಗಿದ್ದಾರೆ. ಏನು ಮಾಡಲಿ, ಎಲ್ಲಿಗೆ ಹೋಗಲಿ ? ರೂಪವಂತರೆದುರಿನಲ್ಲಿ ಕುಷ್ಠರೋಗಿಯಂತೆ ಅಪಕೀರ್ತಿಯನ್ನು ಹೊಂದಿದ ನಾನು ಬೇರೆ ರಾಜರುಗಳ ಅಪಹಾಸಕ್ಕೆ ಗುರಿಯಾಗದಿರುವೆನೆ ? ನಮ್ಮ ಮನು ಕುಲದ ರಾಜರೆಲ್ಲ ಹಿಂದೆ ಒಬ್ಬರಿಗಿಂತ ಒಬ್ಬರು ಹೆಚ್ಚು ಗುಣವಂತರೆಂದು ಕೀರ್ತಿಗಳಿಸಿದರು, ನಾನು ಹುಟ್ಟಿದ ಮೇಲೆ ಅದು ತಿರುವು ಮುರುವು ಆಯಿತು.'

ಲಕ್ಷ್ಮಣನು ಇದನ್ನು ಕೇಳಿ ಕಣ್ಣೀರಿನ ಪ್ರವಾಹವನ್ನು ತಡೆಹಿಡಿದುಕೊಂಡು ತಗ್ಗಿದ ಧ್ವನಿಯಲ್ಲಿ ನುಡಿದ 'ಪ್ರಭು, ದುಃಖಿಸಬೇಡ. ನಿನ್ನ ವಿವೇಕ ಎಲ್ಲಿಗೆ ಹೋಯಿತು ? ನಿರಪರಾಧಿನಿಯಾದ ಸೀತೆಯನ್ನು ಬಿಡುವೆ ಎನ್ನುತ್ತಿರುವೆಯಲ್ಲ ? ನಾನೀಗ ಆ ಅಗಸನನ್ನೆ ಕರೆಸಿ ಕೇಳುತ್ತೇನೆ. ಸ್ತ್ರೀಯರಿಗೆಲ್ಲ ಆದರ್ಶಪ್ರಾಯಳಾದ ಸೀತೆಯ ಮೇಲೆ ಅಪವಾದ ಹೊರಿಸಿದೆ ಎಂದು. ನಿನ್ನ ರಾಜ್ಯದಲ್ಲಿ ಎಂಥ ಅಲ್ಪನನ್ನೂ ಬಲಾತ್ಕಾರದಿಂದ ಪೀಡಿಸಕೂಡದು ತಾನೆ ! ಆದ್ದರಿಂದ ಅವನಿಗೇ ಮನವರಿಕೆಯಾಗುವಂತೆ ಮಾಡು. ಪತಿವ್ರತೆಯಾದ ಸೀತೆಯನ್ನು ಮಾತ್ರ ಬಿಡಬೇಡ. ಮನಸ್ಸಿನಿಂದಾಗಲಿ ಮಾತಿನಿಂದಾಗಲಿ ಅನ್ಯರನ್ನು ಚಿಂತಿಸಿದವಳಲ್ಲ ಸೀತೆ. ಅವಳನ್ನು ಪರಿಗ್ರಹಿಸು, ಬಿಡಬೇಡ. ದಯೆಯಿಟ್ಟು ನಾನು ಹೇಳಿದಂತೆ ಮಾಡು.'

ರಾಮನ ನಿರ್ಧಾರ ಅಚಲವಾಗಿತ್ತು. ದುಃಖದಿಂದ ಲಕ್ಷ್ಮಣನಿಗೆ ಧರ್ಮವನ್ನುಪದೇಶಿಸಿದಾತ. 'ತಮ್ಮ, ಸೀತೆ ನಿರಪರಾಧಿನಿ. ಅವಳನ್ನು ಬಿಡಬೇಡ ಎನ್ನುತ್ತಿರುವೆಯಲ್ಲ ? ಅವಳು ಪಾಪರಹಿತಳೆಂಬುದು ನನಗೆ ಗೊತ್ತು. ಲೋಕಾಪವಾದಕ್ಕೆ ಹೆದರಿ ಅವಳನ್ನು ಬಿಡುತ್ತಿದ್ದೇನೆ. ಲೋಕನಿಂದಿಸ ತೊಡಗಿದರೆ ನನ್ನ ಶರೀರವನ್ನೆ ತೊರೆಯಲು ಸಿದ್ಧನಿದ್ದೇನೆ. ತಮ್ಮನಾದ ನಿನ್ನನ್ನೂ ಬಿಡಲು ಹಿಂಜರಿಯಲಾರೆ. ಒಳ್ಳೆಯ ಕೀರ್ತಿಯನ್ನು ಉಳಿಸಿಕೊಳ್ಳುವ ಸಲುವಾಗಿ ಮನೆ ಮಕ್ಕಳು ಸ್ನೇಹಿತರು ಸಂಪತ್ತು ಎಲ್ಲವನ್ನೂ ತ್ಯಾಗ ಮಾಡಬಲ್ಲೆ. ಸೀತೆಯೊಬ್ಬಳ ವಿಷಯದಲ್ಲಿ ಇನ್ನೇನು ? ನನಗೆ ನನ್ನ ನಿರ್ಮಲವಾದ ಕೀರ್ತಿಯ ಮುಂದೆ ಸೋದರನಾಗಲಿ ಮಡದಿಯಾಗಲಿ, ಬಂಧುವಾಗಲಿ ಯಾರೂ ಹೆಚ್ಚಿನ ಮಹತ್ವವನ್ನು ಪಡೆದಿಲ್ಲ. ಈಗ ಅಗಸನನ್ನೇನೂ ಕೇಳಬೇಕಾಗಿಲ್ಲ. ಸ್ವಲ್ಪ ಕಾಲದ ಮೇಲೆ ಲೋಕಕ್ಕೆ ಸಮಾಧಾನವಾಗುತ್ತದೆ. ರೋಗವು ಅಮಾವಾಸ್ಯೆಯಲ್ಲಿರುವಾಗ

ಅದಕ್ಕೆ ಬೃಂಹಣ ಚಿಕಿತ್ಸೆ ಮಾಡುವುದು ಅಶಾಸ್ತ್ರೀಯ. ಸ್ವಲ್ಪ ಕಾಲ ಕಳೆದ ಮೇಲೆ ಆಮವಿಲ್ಲದ ಪಕ್ವಾವಸ್ಥೆಯಲ್ಲಿ ಆ ಚಿಕಿತ್ಸೆ ಮಾಡಬೇಕು. ಹಾಗೆ ಈಗಲೆ ಅಗಸನನ್ನು ಸಮಾಧಾನ ಪಡಿಸಿ ಪ್ರಯೋಜನವಿಲ್ಲ. ಸ್ವಲ್ಪ ಕಾಲ ಕಳೆಯಲಿ. ಸಾಧ್ವಿಯಾದರೂ ಲೋಕದ ಅಸಮಾಧಾನಕ್ಕೆ ಕಾರಣಳಾದ ಸೀತೆಯನ್ನು ಕಾಡಿನಲ್ಲಿ ಬಿಟ್ಟುಬಿಡು. ಇಲ್ಲದಿದ್ದಲ್ಲಿ ಇಗೋ ಈ ಖಡ್ಗದಿಂದ ನನ್ನನ್ನಿರಿದು ಕೊಲ್ಲು.'

ಇದನ್ನು ಕೇಳಿ ಲಕ್ಷ್ಮಣನು ಕ್ಷಣಕಾಲ ದುಃಖದಿಂದ ಚಿಂತಾಮಗ್ನನಾದ. 'ತಂದೆಯಾಜ್ಞೆಗೆ ಮಣಿದು ಪರಶುರಾಮನು ತಾಯಿಯನ್ನೆ ಕೊಂದ. ಹಿರಿಯರ ಆಜ್ಞೆಯುಕ್ತವೆ ಆಗಲಿ ಆಯುಕ್ತವೆ ಆಗಲಿ ಅದನ್ನು ಪಾಲಿಸಲೇಬೇಕು. ಆದ್ದರಿಂದ ಸೀತೆಯನ್ನು ಕಾಡಿನಲ್ಲಿ ಬಿಟ್ಟು ಬರುವೆನು. ರಾಮನಿಗೆ ಮನಃ ಸಮಾಧಾನ ಉಂಟಾಗಲಿ.' ಹೀಗೆ ಆಲೋಚಿಸಿ ಹೇಳಿದ 'ಮಾಡಬಾರದುದನ್ನೂ ಮಾಡಬೇಕಾಗುತ್ತದೆ. ಹಿರಿಯರ ಆಜ್ಞೆಯನ್ನು ಮೀರಲಾಗದು. ಆದ್ದರಿಂದ ನೀನು ಹೇಳಿದಂತೆ ಮಾಡುವೆ.'

ಶ್ರೀರಾಮನೆಂದ 'ತಮ್ಮ, ನನಗೀಗ ಮನಃಸಮಾಧಾನವಾಯಿತು. ಇಂದು ರಾತ್ರಿ ಜಾನಕಿಯು ತಾಪಸಿಯರನ್ನು ನೋಡಬೇಕಂತೆ. ಈ ದೋಹದದ ನೆಪದಿಂದ ಅವಳನ್ನು ಈಗಲೆ ರಥದಲ್ಲಿ ಕುಳ್ಳಿರಿಸಿ ಕಾಡಿನಲ್ಲಿ ಬಿಟ್ಟು ಬಂದುಬಿಡು.'

ಲಕ್ಷ್ಮಣನು ಮೋರೆ ಒಣಗಿತು. ಕಣ್ಣುಗಳಿಂದ ನೀರು ಕೋಡಿಯಾಗಿ ಹರಿಯಿತು. ಅವನು ತನ್ನ ನಿವಾಸಕ್ಕೆ ಬಂದು ಸುಮಂತ್ರನನ್ನು ಕರೆದು ಹೇಳಿದ 'ನನ್ನ ರಥವನ್ನು ಸಿದ್ಧಪಡಿಸು. ಒಳ್ಳೆಯ ಕುದುರೆಗಳನ್ನು ಹೂಡು.' ಒಡನೆ ರಥಸಿದ್ಧವಾಯಿತು. ಅದನ್ನೇರಿ ನಿಟ್ಟುಸಿರು ಬಿಡುತ್ತ ಅಣ್ಣನ ಅಂತಃಪುರಕ್ಕೆ ಹೋಗಿ ಸೀತೆಯನ್ನು ಕರೆದ. ಅಣ್ಣನ ಸೇವೆ ಇದು ಎಂದುಕೊಳ್ಳುತ್ತ ಹೇಳಿದ 'ಅಮ್ಮ ಸೀತೆ ರಾಮನು ನನ್ನನ್ನು ಕಳಿಸಿದ. ತಾಪಸಿಯರನ್ನು ನೋಡಲು ಹೋಗಬೇಕಂತೆ. ನಿನ್ನ ಬಯಕೆಯನ್ನು ಪೂರೈಸಿಕೊಳ್ಳು ಬಾ.' ಸೀತೆ ಆನಂದದಿಂದ ನುಡಿದಳು. 'ಶ್ರೀರಾಮನ ಚರಣದಾಸಿಯಾದ ನಾನು ಧನ್ಯೆ. ಲಕ್ಷ್ಮಣನನ್ನೆ ಕಳಿಸಿಕೊಟ್ಟಿದ್ದಾನೆ ರಾಮ. ನಾನು ಈಗಲೇ ಪತಿವ್ರತೆಯರಾದ ತಾಪಸಿಯರನ್ನು ಕಂಡು ನಮಸ್ಕರಿಸಿ ಬಟ್ಟೆ ಮುಂತಾದವುಗಳನ್ನಿತ್ತು ಸಂತೋಷಪಡಿಸುವೆ. ನನ್ನ ದೋಹದವನ್ನು ತೀರಿಸಿಕೊಳ್ಳುವೆ.' ಸಂಭ್ರಮದಿಂದ ಬಟ್ಟೆ-ಬರೆಗಳನ್ನೂ, ಒಡವೆಗಳನ್ನೂ, ಮುತ್ತು-ರತ್ನಗಳನ್ನೂ, ಕರ್ಪೂರ ಮುಂತಾದ ಸುಗಂಧ ದ್ರವ್ಯಗಳನ್ನೂ ದಾಸಿಯರ ಕೈಯಿಂದ ರಥದಲ್ಲಿ ಇಡಿಸಿದಳು. ತಾನೂ ಹೊರಟು ಲಕ್ಷ್ಮಣನ ಬಳಿಗೆ ಬರುವಾಗ ಹೊಸಲನ್ನು ಎಡವಿದಳು. ಆತುರದಿಂದ ಅದನ್ನು ಗಮನಿಸದೆ 'ಲಕ್ಷ್ಮಣ, ರಥವೆಲ್ಲಿ ?' ಎನ್ನುತ್ತ ಅಲ್ಲಿಯೆ ಸಜ್ಜಾಗಿ ನಿಂತಿದ್ದ ಚಿನ್ನದ ರಥವನ್ನೇರಿದಳು. ಲಕ್ಷ್ಮಣನೂ ಜತೆಯಲ್ಲಿ ಕುಳಿತು 'ಸುಮಂತ್ರ, ರಥವನ್ನು ಹೊರಡಿಸು' ಎಂದ. ಸುಮಂತ್ರನು ಕುದುರೆಗಳಿಗೆ ಚಾವಟಿಯಿಂದ ಹೊಡೆದ. ಆದರೆ ಅವು ಬಿದ್ದು ಬಿಟ್ಟವು. ಪ್ರಭು, ಕುದುರೆಗಳು ಏಕೋ ಚಲಿಸುತ್ತಿಲ್ಲ. ಏನು ಮಾಡಲಿ ? ಅವು ಬೀಳಲು ಕಾರಣವೇನೆಂದೂ ಗೊತ್ತಾಗಲಿಲ್ಲ' ಎಂದ. ಲಕ್ಷ್ಮಣನು ನಡುಗುವ ಧ್ವನಿಯಲ್ಲಿ ಹೇಳಿದ 'ಚೆನ್ನಾಗಿ ಹೊಡೆ.' ಕೊನೆಗೆ ಸುಮಂತ್ರ ಬಹುಕಷ್ಟದಿಂದ ಕುದುರೆಗಳನ್ನು ಎಬ್ಬಿಸಿ ರಥವನ್ನು ಹೊರಡಿಸಿದ. ಆಗಲೆ ಸೀತೆಯ

ಬಲಗಣ್ಣು ಅದುರಿತು. ಎದೆಯಲ್ಲಿ ಅವ್ಯಕ್ತ ಶೋಕ ಆವರಿಸಿತು. ಗರುಡನಂಥ ಶುಭ ಪಕ್ಷಿಗಳು ಅಪ್ರದಕ್ಷಿಣವಾಗಿ ಸುತ್ತಿ ಹೋದವು. 'ಇದೆಲ್ಲವನ್ನೂ ನೋಡಿ ಸೀತೆ ಅಧೀರಳಾದಳು. 'ಲಕ್ಷ್ಮಣ, ತಾಪಸಿಯರನ್ನು ನೋಡಲು ಹೋಗುವ ನನಗೇಕೆ ಈ ಅಶುಭ ಶಕುನಗಳಾಗುತ್ತಿವೆ ? ರಾಮನಿಗೆ ಒಳ್ಳೆಯದಾಗಲಿ, ಭರತನಿಗೆ ಒಳ್ಳೆಯದಾಗಲಿ, ಪ್ರಜೆಗಳಿಗೂ ಏನೂ ಕೆಡುಕಾಗದಿರಲಿ'. ಲಕ್ಷ್ಮಣನೂ ಏನೂ ಮಾತಡಲಿಲ್ಲ. ಸುಮ್ಮನೆ ನೋಡಿ. ಅವನ ಕಣ್ಣುಗಳಲ್ಲಿ ನೀರು ತುಂಬಿತ್ತು. ಗಂಟಲು ಕಟ್ಟಿ ಕೊಂಡಿತ್ತು.

ರಥವು ಮುಂದೆ ಹೋಗುತ್ತಿದ್ದಂತೆ ಮೃಗಗಳು ಎಡಕ್ಕೆ ಹೋಗುವುದನ್ನೂ ಕಂಡಳು ಸೀತೆ. 'ಶ್ರೀರಾಮನ ಪಾದಗಳನ್ನು ಬಿಟ್ಟು ನಾನು ದೂರ ಹೋಗುತ್ತಿರುವೆನು. ಮೃಗಗಳು ಎಡಕ್ಕೆ ತಿರುಗುವುದು ಯುಕ್ತವೆ. **'ಮಹಿಳಾನಾಂ ಪರೋ ಧರ್ಮಃ ಸ್ವಭರ್ತೃ ಚರಣಾರ್ಚನಂ'** ಸ್ತ್ರೀಯರಿಗೆ ಪತಿಯಪಾದ ಸೇವೆಯೊಂದೆ ಉತ್ತಮ ಧರ್ಮ. ಅದನ್ನು ಬಿಟ್ಟು ನಾನು ಬೇರೆಡೆಗೆ ಹೋಗುವಾಗ ಅಶುಭಶಕುನ ತೋರುವುದರಲ್ಲೇನು ತಪ್ಪಿದೆ ?' ಎಂದುಕೊಂಡಳು.

ಅಷ್ಟರಲ್ಲಿ ರಥವು ಗಂಗಾ ನದೀ ತೀರಕ್ಕೆ ಬಂದಿತ್ತು. ಹಾಲಿನಂತೆ ಬೆಳ್ಳಗಿರುವ ನೀರಿನ ಅಲೆಗಳು ಸ್ವರ್ಗದ ಸೋಪಾನಗಳಂತೆ ಕಾಣುತ್ತಿದ್ದವು. ಆ ನೀರಿನ ಹನಿಯ ಸ್ಪರ್ಶವಾಯಿತೆಂದರೆ ಪಾಪ ರಾಶಿಯು ಎಲ್ಲಿಯೂ ನಿಲ್ಲಲಾರದೆ ಪಲಾಯನ ಮಾಡುತ್ತದೆ. ಲಕ್ಷ್ಮಣನು ಕಣ್ಣೀರು ಸುರಿಸುತ್ತ ಸೀತೆಯನ್ನು ನೋಡಿ ಬಾ ತಾಯಿ, ನದಿಯನ್ನು ದಾಟೋಣ ಎಂದು ಹೇಳಿ ಕೈಹಿಡಿದು ರಥದಿಂದ ಇಳಿಸಿದ. ಮುಳ್ಳಿನ ದಾರಿಯಲ್ಲಿ ನಿಂತು ನಿಂತು ಅವನನ್ನು ಹಿಂಬಾಲಿಸಿದಳು ಸೀತೆ.

**ಶೇಷ** :- ಇಬ್ಬರೂ ದೋಣಿಯನ್ನೇರಿ ಗಂಗೆಯ ಆಚೆದಡಕ್ಕೆ ಹೋದರು. ಲಕ್ಷ್ಮಣನು ಸೀತೆಯನ್ನು ಕೈಹಿಡಿದು ಕಾಡಿನೊಳಗೆ ಕರೆದೊಯ್ದು. ಆಗಲೆ ಸೀತೆಯ ಮುಖ ಒಣಗಿ ಹೋಗಿತ್ತು. ಮುಳ್ಳು ಕಲ್ಲುಗಳ ಮೇಲೆ ಹೆಜ್ಜೆ ಇಡುತ್ತ ಎಡವುತ್ತ ಘೋರ ಅರಣ್ಯವನ್ನು ಪ್ರವೇಶಿಸಿದಳು. ಅಲ್ಲಿ ಗೊಬ್ಬಳಿ, ಕಗ್ಗಲಿ, ಬೂರಗ, ಚೊಳ್ಳಿ ಮುಂತಾದ ನಾನಾ ಬಗೆಯ ಮರಗಳು ಕಾಳ್ಗಿಚ್ಚಿನಿಂದ ಅರ್ಧಬೆಂದು ಒಣಗಿದ್ದವು. ಪೊಟರೆಗಳಲ್ಲಿ ಸರ್ಪಗಳು ಕೋಪದಿಂದ ಬುಸ್ಸೆನ್ನುತ್ತಿದ್ದವು. ಭಯಂಕರ ಗೂಗೆಗಳು ಘೂ ಎನ್ನುತ್ತಿದ್ದವು. ಕ್ರೂರವಾದ ಹುಲಿ, ಸಿಂಹ, ನರಿ, ಚಿರತೆಗಳು ಮನುಷ್ಯರನ್ನು ತಿನ್ನಲು ಕಾದಿದ್ದವು. ಮದಿಸಿದ ಕಾಡುಕೋಣ ಕಾಡುಹಂದಿಯಂಥ ಮೃಗಗಳು ಎಲ್ಲ ಪ್ರಾಣಿಗಳಿಗೂ ಭಯ ಹುಟ್ಟಿಸುತ್ತಿದ್ದವು.

ಈ ಘೋರ ಅರಣ್ಯವನ್ನು ಕಂಡ ಸೀತೆ ಭಯದಿಂದ ತಲ್ಲಣಿಸಿದಳು. ಮೈಯಲ್ಲಿ ಜ್ವರದ ಕಾವೇರಿತು. 'ಲಕ್ಷ್ಮಣ, ಇದೇನು ಋಷಿ ಮುನಿಗಳ ಸುಂದರ ಪ್ರಶಾಂತ ಆಶ್ರಮ ಒಂದೂ ಕಾಣಿಸುತ್ತಿಲ್ಲ. ಋಷಿ ಪತ್ನಿಯರ ಸುಳಿವಿಲ್ಲ. ಬರಿ ಒಣಗಿದ ಮರಗಳು. ಭಯಂಕರ ಕ್ರೂರ ಪಕ್ಷಿಗಳು. ಎಲ್ಲೆಡೆ ಹರಡಿರುವ ಕಾಳ್ಗಿಚ್ಚು. ನೀನೂ ಕಣ್ಣಲ್ಲಿ ನೀರು ತುಂಬಿಕೊಂಡು ದುಃಖಿಸುತ್ತಿರುವೆ. ಹೆಜ್ಜೆಹೆಜ್ಜೆಗೂ ಅಪಶಕುನಗಳು. ಹೇಳು ಲಕ್ಷ್ಮಣ, ರಾಮನು ನನ್ನನ್ನು ತೊರೆದು ಬಿಟ್ಟನೆ ? ಏಕೆ ? ಬೇಗ ಹೇಳು' ಎಂದಳು. ಲಕ್ಷ್ಮಣನೇನೂ ಹೇಳದೆ ಸುರಿವ ಕಣ್ಣೀರ ಪ್ರವಾಹವನ್ನು ತಡೆದುಕೊಂಡು ತನ್ನೊಳಗೇ ಶೋಕದಿಂದ ಬೆಂದ.

ಇಬ್ಬರೂ ಮುಂದೆ ನಡೆದರು. ಸೀತೆ ತಿರುಗಿ ಲಕ್ಷ್ಮಣನಲ್ಲಿ ಅದೇ ಪ್ರಶ್ನೆ ಮಾಡಿದಳು. ಶೋಕದಿಂದ ಉದ್ವಿಗ್ನವಾದ ಅವನ ಮುಖವನ್ನು ನೋಡಿದಳು. ಆತ ಬೇರೇನನ್ನೋ ನೋಡುವವನಂತೆ ಸುಮ್ಮನೆ ನಿಂತ. ಸೀತೆ ಬಿಡಲಿಲ್ಲ. ತಿರುಗಿ ತಿರುಗಿ ಕೇಳಿದಳು. ಆಗ್ರಹ ಪಡಿಸಿದಳು. ಕೊನೆಗೆ ಆತ ಗದ್ಗದ ಧ್ವನಿಯನ್ನು ತಡೆ ತಡೆದು ಬಿಕ್ಕುತ್ತ ರಾಮನು ಅವಳನ್ನು ಪರಿತ್ಯಾಗ ಮಾಡಿದ ಸಂಗತಿಯನ್ನು ಹೇಳಿಬಿಟ್ಟ. ವಜ್ರದಂತೆ ಕಠೋರವಾದ ಈ ಮಾತನ್ನು ಕೇಳಿ ಬುಡ ಕಿತ್ತಿದ ಎಳೆಬಳ್ಳಿಯಂತೆ ಸೀತೆ ಮೂರ್ಛೆಗೊಂಡು ಬಿದ್ದಳು. ನಿರಪರಾಧಿನಿಯಾದ ಸೀತೆಯನ್ನು ರಾಮ ಪರಿತ್ಯಾಗ ಮಾಡಿದನೆಂದರೆ ಅದು ನಂಬಲಾಗದ ಮಾತೆಂದು ಬಗೆದೂ ಭೂದೇವಿಯೂ ಸುಮ್ಮನಿದ್ದಳೊ ಏನೊ ! ಇಲ್ಲದಿದ್ದರೆ ಪ್ರೀತಿಯ ಮಗಳನ್ನು ಆಕೆ ಆಗಲೆ ತನ್ನ ಮಡಿಲಿಗೆ ಸೇರಿಸಿಕೊಂಡಿರುತ್ತಿದ್ದಳು.

ಲಕ್ಷ್ಮಣನು ಚಿಗುರೆಲೆಗಳಿಂದ ಗಾಳಿ ಬೀಸಿ ಸೀತೆಯನ್ನು ಎಬ್ಬಿಸಿದ. ಅವಳು ಎಚ್ಚತ್ತು 'ಮೈದುನ ಲಕ್ಷಣ, ಪರಿಹಾಸ ಬೇಡ. ನಿಜ ಹೇಳು. ನಾನೇನು ತಪ್ಪು ಮಾಡಿದೆ ? ರಾಮನೇಕೆ ನನ್ನನ್ನು ತೊರೆದ ?' ಎಂದು ಒಂದೇ ಸಮನೆ ಬಡಬಡಿಸಿ, ಲಕ್ಷ್ಮಣನು ನಿಜವಾಗಿಯೂ ಶೋಕಿಸುವುದನ್ನು ಮನವರಿಕೆ ಮಾಡಿಕೊಂಡು ತಿರುಗಿ ಮೂರ್ಛೆಗೊಂಡಳು. ಒಂದು ಮುಹೂರ್ತ ಕಾಲ ಕಳೆಯಿತು. ಸೀತೆ ಎಚ್ಚತ್ತು ರಾಮನ ಪಾದಗಳನ್ನು ಸ್ಮರಿಸಿ ನುಡಿದಳು. 'ರಾಮನು ಎಲ್ಲ ತಿಳಿದವನು. ನನ್ನನ್ನು ಅವನು ಹೇಗೆ ಪರಿತ್ಯಾಗ ಮಾಡುವನು ? ನನಗಾಗಿ ಕಪಿಸೇನೆಯನ್ನು ಕಟ್ಟಿಕೊಂಡು ಸಮುದ್ರವನ್ನೇ ದಾಟಿ ಬಂದವನು ಅವನು. ನಿರಪರಾಧಿನಿ ಎಂದು ತಿಳಿದೂ ಅಗಸನ ಮಾತಿಗೆ ಬೆಲೆ ಕೊಟ್ಟು ನನ್ನನ್ನು ಬಿಡುವನೆಂದರೆ ಅದು ಹೇಗೆ ? ಎಲ್ಲವೂ ನನ್ನ ದುರ್ದೈವ ಅಷ್ಟೆ.' ಇಷ್ಟು ಹೇಳಿ ತಿರುಗಿ ಮೂರ್ಛೆ ಹೊಂದಿದಳು. ಲಕ್ಷ್ಮಣನಿದನ್ನು ಸಹಿಸಲಾಗಲಿಲ್ಲ. ಗಟ್ಟಿಯಾಗಿ ಅತ್ತುಬಿಟ್ಟನಾತ.

ಸೀತೆ ತಿರುಗಿ ಎಚ್ಚತ್ತು ಲಕ್ಷ್ಮಣನ ವ್ಯಥೆಯನ್ನು ಕಂಡು ಹೇಳಿದಳು. 'ಲಕ್ಷ್ಮಣ ಹೋಗು. ಧರ್ಮಮೂರ್ತಿಯಾದ ರಾಮನ ಮುಂದೆ ತಪಸ್ವಿಗಳ ಸಮಕ್ಷಮದಲ್ಲಿ ನನ್ನ ಒಂದು ಮಾತನ್ನು ಮಾತ್ರ ಹೇಳಿಬಿಡು. ನಿರಪರಾಧಿನಿ ಎಂದು ತಿಳಿದೂ ನನ್ನನ್ನು ಪರಿತ್ಯಜಿಸಿರುವುದು ನಿನ್ನ ಕುಲಕ್ಕೆ ಯೋಗ್ಯವೆನಿಸುವುದೆ ? ಎಲ್ಲ ಶಾಸ್ತ್ರವನ್ನು ತಿಳಿದುದಕ್ಕೆ ಇದು ಫಲವೆ ? ನಿನ್ನ ಪಾದಗಳಲ್ಲಿಯೆ ಸದಾ ಅನುರಾಗವಿಟ್ಟು, ನೀನು ಭೋಗಿಸಿ ಉಳಿದ ವಸ್ತುಗಳನ್ನೆ ಸ್ವೀಕರಿಸುತ್ತಿದ್ದ ನನ್ನನ್ನು ನೀನು ಬಿಡುವೆ ಎಂದರೆ ಇದಕ್ಕೆಲ್ಲ ಕಾರಣ ನನ್ನ ದುರದೃಷ್ಟವೆ ಸರಿ. ನಿನಗೆ ಎಲ್ಲೆಡೆಯೂ ಶುಭವಾಗಲಿ. ನಾನು ನಿನ್ನನ್ನೆ ನೆನೆಯುತ್ತ ಜೀವ ಹಿಡಿದುಕೊಂಡಿರುತ್ತೇನೆ. ತ್ರಿಕರಣಗಳಿಂದಲೂ ನೀನೆ ನನಗೆ ಆರಾಧ್ಯನಾಗಿರುವೆ. ಜನ್ಮ ಜನ್ಮಕ್ಕೂ ನೀನೆ ನನಗೆ ಪತಿಯಾಗು. ನಾನು ನಿನ್ನ ಪಾದಗಳ ಸ್ಮರಣೆಯಿಂದ ಪಾಪಗಳನ್ನು ಕಳೆದುಕೊಂಡು ಪತಿವ್ರತೆಯಾಗಿ ಬಾಳುವಂತಾಗಲಿ' ಎಂದು. ಅತ್ತೆಯವರಿಗೆ ಹೀಗೆ ಹೇಳು 'ರಾಮನು ನನ್ನನ್ನು ಘೋರಾರಣ್ಯದಲ್ಲಿ ಬಿಟ್ಟಿದ್ದಾನೆ. ನಾನು ನಿರಪರಾಧಿನಿ, ಗರ್ಭಿಣಿ. ಕಾಡಿನಲ್ಲಿ ಮೃಗಗಳ ನಡುವೆ ಇದ್ದು ನಿಮ್ಮ ಪಾದಗಳನ್ನು ಸ್ಮರಿಸುತ್ತಿರುವೆನು' ಎಂದು. ಲಕ್ಷ್ಮಣ, ನಿನಗೊಂದು ಮಾತು 'ರಾಮನಿಗೆ ಒಳ್ಳೆಯದಾಗಲಿ. ನಾನೀಗ ಗರ್ಭಿಣಿಯಾಗಿರುವುದರಿಂದ ಪ್ರಾಣತ್ಯಾಗವನ್ನಂತೂ ಮಾಡಿಕೊಳ್ಳಲಾರೆ. ನೀನು ರಾಮನ ಆಜ್ಞೆಯಂತೆ ನಡೆಯುವವನು, ಪರಾಧೀನ. ರಾಮನ ಪಾದಸೇವೆ ಮಾಡುತ್ತಿರುವ ನೀನು ಹೀಗೆ

ಮಾಡಿದುದೂ ಯುಕ್ತವೆ. ನಿನಗೆ ಒಳ್ಳೆಯದಾಗಲಿ. ರಾಮನ ಬಳಿಗೇ ಹೋಗು. ಸುಖವಾಗಿ ಹೋಗಿ ಸೇರು. ನನ್ನ ಮೇಲೆ ಮಾತ್ರ ಕೃಪೆ ಇರಲಿ, ಎಂದೂ ನನ್ನನ್ನು ಮರೆಯಬೇಡ.

ಇಷ್ಟು ಹೇಳಿ ತಿರುಗಿ ಮೂರ್ಛೆ ಹೋದಳು. ಲಕ್ಷ್ಮಣನು ಬಟ್ಟೆಯ ಸೆರಗಿನಿಂದ ಗಾಳಿ ಬೀಸಿದ. ಅವಳು ಎಚ್ಚತ್ತೊಡನೆ ಕಾಲಿಗೆ ಎರಗಿ ಸವಿ ನುಡಿಗಳಿಂದ ಸಾಂತ್ವನಗೊಳಿಸುತ್ತ ಹೇಳಿದ 'ನಾನು ರಾಮನ ಬಳಿಗೆ ಹೋಗಿ ಎಲ್ಲವನ್ನೂ ತಿಳಿಸುತ್ತೇನೆ. ಇಲ್ಲಿಯೇ ಸಮೀಪದಲ್ಲಿ ವಾಲ್ಮೀಕಿ ಮುನಿಗಳ ದೊಡ್ಡ ಆಶ್ರಮವಿದೆ.

ಲಕ್ಷ್ಮಣನು ತನಗೆ ಪ್ರದಕ್ಷಿಣೆ ಬಂದು ದುಃಖದಿಂದ ಕಣ್ಣೀರು ಸುರಿಸುತ್ತ ರಾಮನ ಬಳಿಗೆ ಹೊರಟು ಹೋಗುತ್ತಿರುವುದನ್ನು ಕಂಡೂ ಸೀತೆಗೆ ಅನುಮಾನ. 'ಮೈದುನನಿನ್ನೂ ಪರಿಹಾಸ ಮಾಡುತ್ತಿರಬಹುದೆ ?' ಎಂದು. 'ತನಗೆ ಪ್ರಾಣಕ್ಕಿಂತ ಮಿಗಿಲಾದ ಪತಿವ್ರತೆಯಾದ ನನ್ನನ್ನು ರಾಮನು ಬಿಡುವನೆ ?' ಎವೆಯಿಕ್ಕದೆ ಲಕ್ಷ್ಮಣನು ಹೊರಟು ಹೋಗುವುದನ್ನೆ ನೋಡಿದಳು ಸೀತೆ. ಅವನು ಗಂಗೆಯನ್ನು ದಾಟಿ ಆಚೆದಡಕ್ಕೆ ಕಾಲಿಟ್ಟುದನ್ನು ಕಂಡ ಮೇಲೆ ನಿರಾಸೆಯಾಯಿತು. ತಾನಿನ್ನು ಬದುಕಿ ಉಳಿಯುವುದೆ ಸಂದೇಹವೆನಿಸಿತು. ಮೂರ್ಛಿತಳಾಗಿ ಅಲ್ಲಿಯೆ ಒರಗಿದಳು. ಹಂಸಗಳು ತಮ್ಮ ರೆಕ್ಕೆಗಳಲ್ಲಿ ನೀರ ಹನಿಗಳನ್ನು ತಂದು ಆಕೆಯ ಮೈಮೇಲೆ ಸಿಂಪಡಿಸಿದವು. ಹೂವಿನ ಸುಗಂಧವನ್ನು ಹೊತ್ತ ಗಾಳಿ ಅವಳ ಮೇಲೆ ಸುಖವಾಗಿ ಬೀಸಿತು. ಆನೆಗಳು ಸೊಂಡಲಿನಲ್ಲಿ ನೀರು ತಂದು ಅವಳನ್ನು ಮೀಯಿಸಿದವು. ಎಲ್ಲ ಮೃಗಗಳೂ ಆಶ್ಚರ್ಯದಿಂದ ಸುತ್ತುವರಿದು ನಿಂತವು. ವಸಂತಋತು ಇಲ್ಲಿ ದಿದ್ದರೂ ಆಗಲೆ ಮರಗಳು ಹೂ ಬಿಟ್ಟವು. ಸೀತೆ ಎಚ್ಚತ್ತು ಸುತ್ತಲೂ ನೋಡಿ ಅಳತೊಡಗಿದಳು. 'ಹಾ ರಾಮ ರಾಮ, ನಾಥ, ದೀನಬಂಧೂ, ಕರುಣಸಾಗರ, ನಾನೇನೂ ತಪ್ಪು ಮಾಡದಿರುವಾಗ ಹೇಗೆ ನನ್ನನ್ನು ಪರಿತ್ಯಜಿಸಿದೆ ?'

ಸೀತೆಯ ಕರುಣಾಕ್ರಂದನದ ಧ್ವನಿ ಸಮೀಪದಲ್ಲಿದ್ದ ವಾಲ್ಮೀಕಿ ಮಹರ್ಷಿಗೆ ಕೇಳಿಸಿತು. ಅವರು ಶಿಷ್ಯರನ್ನು ಕರೆದು 'ಕಾಡಿನ ನಡುವೆ ಯಾರೊ ದುಃಖದಿಂದ ಅಳುವಂತಿದೆ ನೋಡಿ ಬನ್ನಿ' ಎಂದರು. ಶಿಷ್ಯರು ಸೀತೆಯ ಬಳಿಗೆ ಬಂದು ನೋಡಿದರು. 'ರಾಮ, ರಾಮ' ಎನ್ನುತ್ತ ಕಣ್ಣೀರು ಸುರಿಸುತ್ತಿದ್ದಾಳೆ ಓರ್ವ ಹೆಂಗಸು ಎಂದು ತಿಳಿದು ಮುನಿಯ ಬಳಿಗೆ ಬಂದು ತಿಳಿಸಿದರು. ಆಗ ಅವರು ಸೀತೆಯ ಬಳಿಗೆ ಆಗಮಿಸಿದರು.

ಸೀತೆ ಆ ತಪೋನಿಧಿಯನ್ನು ಕಂಡು 'ವೇದಮೂರ್ತಿಯಾದ ಮುನಿಯೆ ನಿನಗೆ ನಮಸ್ಕಾರ' ಎಂದಳು. ಆತ ಆಶೀರ್ವದಿಸಿದ. 'ಪತಿಯೊಡನೆ ಚಿರ ಕಾಲ ಬಾಳು. ಇಬ್ಬರು ಸತ್ಪುತ್ರರನ್ನು ಪಡೆ. ಅಮ್ಮ, ನೀನಾರು ? ಈ ಭಯಂಕರವಾದ ಕಾಡಿಗೆ ಏಕೆ ಬಂದೆ ? ಎಲ್ಲವನ್ನೂ ಹೇಳು. ನಿನ್ನ ದುಃಖಕ್ಕೇನು ಕಾರಣ, ನನಗೆ ತಿಳಿಸು.' ಎಂದ. 'ಮುನಿಯೆ, ನಾನು ಶ್ರೀ ರಾಮಚಂದ್ರನ ಮಡದಿ. ನಾನೇನೂ ಅಪರಾಧ ಮಾಡಿಲ್ಲ. ಆದರೂ ನನ್ನನ್ನು ಆತ ಪರಿತ್ಯಾಗ ಮಾಡಿದ್ದಾನೆ. ಕಾರಣವೇನೆಂದು ನಾನರಿಯೆ. ಅವನ ಆಜ್ಞೆಯಂತೆ ಲಕ್ಷ್ಮಣನು ನನ್ನನ್ನು ಇಲ್ಲಿಯವರೆಗೆ ಕರೆತಂದು ಬಿಟ್ಟು ಹೋಗಿದ್ದಾನೆ' ಎಂದು ಹೇಳಿ ಕಣ್ಣೀರಿಟ್ಟಳು ಸೀತೆ. ''ಅಮ್ಮ ನಾನು ವಾಲ್ಮೀಕಿ. ನಿನ್ನ ತಂದೆ ಜನಕ ಮಹಾರಾಜನ ಗುರು. ನೀನೇನೂ ದುಃಖಿಸಬೇಡ. ನನ್ನಾಶ್ರಮಕ್ಕೆ ಬಾ. ಇದು ನಿನ್ನ ತಂದೆಯ ಮನೆ ಎಂದು ಭಾವಿಸಿಕೊಳ್ಳು. ರಾಮನು ಇಂಥ ಕೆಲಸ ಮಾಡಬಾರದಿತ್ತು. ಅವನ ಮೇಲೆ ನನಗೂ ಕೋಪವಿದೆ.'

ವಾಲ್ಮೀಕಿಯ ಈ ಮಾತನ್ನು ಕೇಳಿ ಸೀತೆಗೆ ತುಸು ಸಮಾಧಾನವೆನಿಸಿತು. ಮುನಿಯನ್ನು ಹಿಂಬಾಲಿಸಿ ಅವರ ಆಶ್ರಮಕ್ಕೆ ಹೋದಳು. ಚಂದ್ರನ ಹಿಂದೆ ಬರುವ ನಕ್ಷತ್ರದಂತೆ ತಪೋನಿಧಿಯಾದ ಮುನಿಯ ಹಿಂದೆ ನಡೆದು ಬಂದ ಸೀತೆಯನ್ನು ತಾಪಸಿಯರು ನೋಡಿ ಸಂತೋಷಪಟ್ಟರು. ಅವರಿಗೆ ಮುನಿಯು ಅವಳ ಪರಿಚಯವನ್ನು ಮಾಡಿಸಿದರು. ಅವಳು ಎಲ್ಲರನ್ನೂ ನಮಸ್ಕರಿಸಿದಳು. ಅವರೂ ಆನಂದದಿಂದ ಆಕೆಯನ್ನು ತಬ್ಬಿಕೊಂಡರು.

ವಾಲ್ಮೀಕಿ ಮುನಿ ತನ್ನ ಶಿಷ್ಯರನ್ನು ಕರೆದು ಸೀತೆಗೊಂದು ಪರ್ಣಶಾಲೆಯನ್ನು ನಿರ್ಮಿಸಿಕೊಡಲು ಆಜ್ಞಾಪಿಸಿದರು. ಒಡನೆ ಪರ್ಣಶಾಲೆ ಸಿದ್ಧವಾಯಿತು. ಸೀತೆ ಅದರಲ್ಲಿ ವಾಸಮಾಡುತ್ತ ವಾಲ್ಮೀಕಿಯ ಸೇವೆ ಮಾಡತೊಡಗಿದಳು. ಹಣ್ಣು ಹಂಪಲಗಳನ್ನು ತಿಂದು ರಾಮನಾಮ ಸ್ಮರಣೆಯಲ್ಲಿ ದಿವಸಗಳನ್ನು ನೂಕಿದಳು.

ಕೆಲ ಕಾಲದ ಬಳಿಕ ಸೀತೆ ಇಬ್ಬರು ಗಂಡು ಮಕ್ಕಳಿಗೆ ಜನ್ಮವಿತ್ತಳು. ಅಶ್ವಿನೀ ದೇವತೆಗಳಂಥ ಸುಂದರಾಕಾರ. ರಾಮನ ಪ್ರತಿನಿಧಿಗಳೆನ್ನುವಂತಿದ್ದರು ಆ ಮಕ್ಕಳು. ಮುನಿಯು ಅವರಿಗೆ ಜಾತ ಕರ್ಮ ಮುಂತಾದ ಸಂಸ್ಕಾರಗಳನ್ನು ಮಾಡಿ ಕುಶ ಲವ ಎಂಬ ಹುಲ್ಲುಗಳಿಂದ ಆ ಕರ್ಮಗಳನ್ನು ನಡೆಸಿದ್ದರಿಂದ ಅವರಿಗೆ ಕುಶ-ಲವ ಎಂದೇ ಹೆಸರಿಟ್ಟರು. ಆ ದಿನ ಶತ್ರುಘ್ನನು ಲವಣಾಸುರನನ್ನು ಕೊಂದು ಮಿತ್ರ ಪರಿವಾರದೊಡನೆ ಆಶ್ರಮಕ್ಕೆ ಬಂದಿದ್ದ. ಒಂದು ರಾತ್ರಿ ಅಲ್ಲಿ ತಂಗಿದ್ದ. ಆಗ 'ಶತ್ರುಘ್ನ, ಲವ ಕುಶರ ಜನ್ಮ ವೃತ್ತಾಂತವನ್ನು ರಾಮನ ಮುಂದೆ ಹೇಳಬೇಡ. ಮುಂದೆ ಒಂದು ದಿನ ನಾನೆ ಹೇಳುತ್ತೇನೆ' ಎಂದಿದ್ದರು ವಾಲ್ಮೀಕಿ.

ಲವ ಕುಶರು ಆಶ್ರಮದಲ್ಲಿ ಬೆಳೆದರು. ಗಡ್ಡೆ ಗೆಣಸುಗಳನ್ನು ತಿಂದು ಪುಷ್ಟರಾದರು. ಮನೋಹರವಾಗಿ ಶುಕ್ಲಪಕ್ಷದ ಚಂದ್ರನಂತೆ ಕಂಡರು. ಮುನಿಯು ಅವರಿಗೆ ಉಪನಯನ ಮಾಡಿ ಸಾಂಗ ವೇದಾಧ್ಯಯನ ಮಾಡಿಸಿದನು. ಧನುರ್ವೇದದ ಎಲ್ಲ ರಹಸ್ಯವನ್ನೂ ಉಪದೇಶಿಸಿದನು. ಜತೆಗೆ ರಾಮಾಯಣವನ್ನೂ ಹೇಳಿಕೊಟ್ಟನು. ಉತ್ತಮವಾದ ಅಭೇದ್ಯವಾದ ಧನುಸ್ಸು. ಅಕ್ಷಯ ಬತ್ತಳಿಕೆ, ಕತ್ತಿ ಗುರಾಣಿಗಳನ್ನು ಹಿಡಿದು ಆಶ್ರಮದಲ್ಲೆಲ್ಲ ಓಡಾಡುವ ಸುಂದರವಾದ ಇಬ್ಬರು ಮಕ್ಕಳನ್ನು ಕಣ್ತುಂಬ ನೋಡಿ ಆನಂದ ಪಟ್ಟಳು ಸೀತೆ. ರಾಮನ ವಿರಹ ದುಃಖವನ್ನು ಮರೆತಳು.

**ಶೇಷ :-** ಲವನು ಶತ್ರುಘ್ನನ ಪಡೆಯ ವೀರರ ಭುಜಗಳನ್ನು ಕತ್ತರಿಸಿದೊಡನೆ ಅದನ್ನು ತಿಳಿದ ಶತ್ರುಘ್ನನು ಕೋಪದಿಂದ ಹಲ್ಲುಕಡಿದು ಹೇಳಿದ. 'ವೀರರೆ, ಅವನ ತೋಳುಗಳನ್ನು ನಾನು ಕಡಿಯುತ್ತೇನೆ. ಅವನು ದೇವತೆಗಳನ್ನು ಮೊರೆಹೊಕ್ಕರೂ ಬಿಡೆನು. ಮೂಢ ! ರಾಮಚಂದ್ರನ ಬಲವನ್ನು ಅವನು ತಿಳಿದಿಲ್ಲ. ಈಗ ಅದನ್ನು ತೋರಿಸಿ ಕೊಡುವೆನು. ಅವನೆಲ್ಲಿದ್ದಾನೆ? ಕುದುರೆ ಎಲ್ಲಿದೆ? ಮಲಗಿರುವ ಹಾವನ್ನು ತಿಳಿಯದೆ ಹಿಡಿದಿದ್ದಾನೆ!'

ಪ್ರಭು, ಅವನೊಬ್ಬ ಸಣ್ಣ ಬಾಲಕ. ಎಲ್ಲ ರೀತಿಯಿಂದಲೂ ಶ್ರೀರಾಮಚಂದ್ರ ಪ್ರಭುಗಳನ್ನೆ ಹೋಲುತ್ತಾನೆ.' ಎಂದರು, ಅವರು.

ಶತ್ರುಘ್ನನ ಕೋಪವಿನ್ನೂ ಹೆಚ್ಚಿತು. ಕಣ್ಣುಗಳು ಕೆಂಪಗಾದವು. 'ಬಾಲಕನು ಕುದುರೆಯನ್ನು ಹಿಡಿದನೆ ? ಎನ್ನುತ್ತ ಸೇನಾಪತಿ ಕಾಲಜಿತ್ತನ್ನು ಕರೆದು ಸೈನ್ಯವನ್ನು

ಸಿದ್ಧಪಡಿಸಲಾಜ್ಞಾಪಿಸಿದ. 'ನಾವೀಗ ಸಾಮಾನ್ಯವಾದ ಒಬ್ಬ ಶತ್ರುವನ್ನಿದಿರಿಸುತ್ತಿಲ್ಲ. ಆತ ಮಹಾಬಲ ಪರಾಕ್ರಮಿ. ಬಾಲಕನಲ್ಲ. ವಿಷ್ಣುವೊ ರುದ್ರನೊ ಇರಬೇಕು, ಆದ್ದರಿಂದ ದೊಡ್ಡ ಯುದ್ಧವೆ ನಡೆಯಲಿದೆ. ಸಣ್ಣ ಹುಡುಗನಾದರೂ ನಿರ್ಭಯವಾಗಿ ಆಟ ಆಡುತ್ತಿದ್ದಾನೆ'. ಎಂದ.

ಚತುರಂಗ ಸೇನೆ ಸಜ್ಜಾಗಿ ನೆಲವನ್ನದುರಿಸುತ್ತ ಲವನ ಮುಂದೆ ಬಂದುನಿಂತಿತು. ಸೇನಾಧಿಪತಿ ಹೇಳಿದ. 'ಬಾಲಕ, ಕುದುರೆಯನ್ನು ಬಿಟ್ಟುಬಿಡು. ಬಲಶಾಲಿಯಾದ ರಾಮನ ಕುದುರೆ ಇದು. ನಾನು ಅವನ ಸೇನಾಧಿಪತಿ. ಕಾಲಜಿತ್ತು ನೀನು ಆಕಾರದಲ್ಲಿ ರಾಮನಂತೆಯೆ ಇರುವೆ. ಆದ್ದರಿಂದ ನನ್ನ ಹೃದಯದಲ್ಲಿ ನಿನ್ನ ಮೇಲೆ ದಯೆ ಉಂಟಾಗುತ್ತದೆ. ಇಲ್ಲದಿದ್ದರೆ ಇಷ್ಟರೊಳಗೆ ನಿನ್ನ ಪ್ರಾಣಗಳು ಹೊರಟುಹೋಗುತ್ತಿದ್ದುವು.'

ಲವನು ಇದನ್ನು ಕೇಳಿ ನಕ್ಕುನುಡಿದ, 'ಹೋಗು, ನಿನ್ನನ್ನು ಬಿಟ್ಟಿದ್ದೇನೆ. ಕುದುರೆಯನ್ನು ನಾನು ಹಿಡಿದೆನೆಂದು ನಿನ್ನ ರಾಮನಿಗೆ ಹೇಳು. ನಿನಗಾಗಲಿ ನಿನ್ನ ಪೌರುಷದ ಮಾತಿಗಾಗಿ ನಾನು ಹೆದರುವುದಿಲ್ಲ. ನಿನ್ನಂಥವರು ಕೋಟಿ ಜನ ಬಂದರೂ ಲೆಕ್ಕಿಸುವುದಿಲ್ಲ. ತಾಯಿಯ ಪಾದಗಳ ಅನುಗ್ರಹದಿಂದ ಅಷ್ಟುಮಂದಿಯೂ ಹತ್ತಿಯಂತೆ ಹಾರಿ ಹೋಗುವರು. ನಿನ್ನ ತಾಯಿ ನಿನಗಿಟ್ಟ ಕಾಲಜಿತ್ತೆಂಬ ಹೆಸರು ಸುಂದರವಾಗಿದೆ. ನಿನ್ನ ಬಣ್ಣ ನೋಡಿ ಹಾಗೆ ಹೆಸರಿಟ್ಟಿರಬಹುದು. ಪಕ್ವವಾದ ತೊಂಡೆ ಹಣ್ಣಿನಂತೆ ಹೊರಗೆ ನೋಡಲು ಚೆನ್ನಾಗಿದೆ. ಒತ್ತಿ ನೋಡಿದರೆ ಬಲುಮೆತ್ತಗೆ, ಸ್ವಲ್ಪವೂ ತಡೆಯಲಾರದು, ನಿನ್ನಲ್ಲಿ ಪರಾಕ್ರಮವೇನಾದರೂ ಇದ್ದರೆ ಯುದ್ಧದಲ್ಲಿ ತೋರಿಸು. ನಾನು ಕಾಲಯಮನಂತಿರುವೆನು. ನನ್ನನ್ನು ಗೆದ್ದರೆ ನೀನು ನಿಜವಾಗಿಯೂ ಕಾಲಜಿತ್.'

ಸೇನಾಧಿಪತಿಗೆ ಈ ಮಾತು ವಜ್ರಪಾಯವೆನಿಸಿತು. ಕೋಪ ಹೃದಯವನ್ನೆಲ್ಲ ಆವರಿಸಿತು. 'ಬಾಲಕ ನೀನು ಹುಟ್ಟಿದ ಕುಲ ಯಾವುದು ? ನಿನ್ನಹೆಸರೇನು ? ನಿನ್ನ ಹೆಸರು ಕುಲಶೀಲ ವಯಸ್ಸು ಯಾವುದೂ ನನಗೆ ಗೊತ್ತಿಲ್ಲ. ನೀನು ಪಾದಚಾರಿ ನಾನು ರಥದಲ್ಲಿದ್ದು ಅಧರ್ಮದಿಂದ ನಿನ್ನನ್ನು ಜಯಿಸುವುದಾಗದು.' ಎಂದನಾತ.

ಲವನು ಕೋಪದಿಂದ ನುಡಿದ, 'ನನ್ನ ಕುಲ ಶೀಲ ಹೆಸರು ವಯಸ್ಸುಗಳನ್ನು ಕಟ್ಟಿಕೊಂಡು ಏನು ಮಾಡುವೆ ? ಆದರೂ ಹೇಳುತ್ತೇನೆ. ನನ್ನ ಹೆಸರು ಲವ ಒಂದು 'ಲವ' ಅಂದರೆ ಹುಲ್ಲು ಕಡ್ಡಿಯಿಂದ ಶತ್ರುಸೈನ್ಯವನ್ನೆಲ್ಲ ಗೆಲ್ಲಬಲ್ಲೆ. ಈಗ ನಾನು ಪಾದಚಾರಿಯಾಗಿರಬಹುದು. ಆದರೆ ಇನ್ನೊಂದು ಕ್ಷಣದಲ್ಲಿ ನೀನೂ ಪಾದಚಾರಿಯಾಗುವೆ.

ಹೀಗೆ ಹೇಳಿ ಲವನು ಬಿಲ್ಲಿಗೆ ಹೆದೆಯೇರಿಸಿ ಅದರ ಠೇಂಕಾರದಿಂದ ವೀರರೆದೆಯನ್ನು ನಡುಗಿಸಿದ. ವಾಲ್ಮೀಕಿ ಮುನಿಯನ್ನೂ ತಾಯಿ ಜಾನಕಿಯನ್ನೂ ನೆನೆದು ಬಾಣಗಳನ್ನೆಸೆದ. ಕ್ಷಣದಲ್ಲಿ ಕಾಲಜಿತ್ತನ ರಥ ಪುಡಿಯಾಯಿತು. ಅವನು ಆನೆಯನ್ನೇರಿ ಭಾರವಾದ ಗದೆಯನ್ನೆಸೆದ. ಅದನ್ನು ಲವನು ಮೂರಾಗಿ ತುಂಡರಿಸಿದ. ಅವನ ಪರಿಘವನ್ನೂ ಪುಡಿ ಮಾಡಿ. ಆನೆಯ ಸೊಂಡಿಲನ್ನು ಕಡಿದು ದಂತಗಳ ಮೇಲೆ ಕಾಲಿಟ್ಟು ಹತ್ತಿ ಕವಚ ಕಿರೀಟಗಳನ್ನು ಪುಡಿ ಮಾಡಿದ. ತಲೆ ಕೂದಲನ್ನು ಹಿಡಿದೆಳೆದು ಅವನನ್ನು ನೆಲದ ಮೇಲೆ ಎಸೆದ. ಅವನು ಮುಷ್ಟಿಯಿಂದ ಲವನ ಎದೆಗೆ ಹೊಡೆದ. ಕೋಪದಿಂದ ಹಲ್ಲುಕಡಿದು

ಖಡ್ಗವನ್ನು ಹಿರಿದು ಬಂದ. ಆದರೆ ಒಂದೇ ಕ್ಷಣದಲ್ಲಿ ಅವನು ಕೈ ಕಡಿದು ಬಿದ್ದಿತು. ಎಡಗೈಯಿಂದ ಗದೆಯನ್ನೆತ್ತಿದ. ಆ ಕೈಯೂ ಕಡಿದು ಬಿದ್ದಿತು. ಕಾಲುಗಳಿಂದ ಒದೆಯಲು ಪ್ರಯತ್ನಿಸಿದ. ಆಗ ಕಾಲು ಕಡಿದುಬಿದ್ದಿತು. ಕೊನೆಗೆ ತಲೆಯಿಂದಲೆ ತಿವಿಯಲು ಬಂದ. ತಲೆಯೂ ಕಡಿದು ಬಿದ್ದಿತು.

ಸೇನಾಧಿಪತಿಯ ರುಂಡ ಉರುಳಿದೊಡನೆ ಸೈನ್ಯದಲ್ಲಿ ಹಾಹಾಕಾರ ಎದ್ದಿತು. ಎಲ್ಲರೂ ಕ್ರೋಧದಿಂದ ಲವನ ಮೇಲೇರಿ ಬಂದರು. ಆದರೆ ಅವನ ಬಾಣಗಳ ಏಟನ್ನು ಸಹಿಸಲಾರದೆ ಓಡತೊಡಗಿದರು. ಲವನು ಈಗ ವರಾಹ ಮೂರ್ತಿಯಾದ ಹರಿಯು ಮಹಾಸಾಗರವನ್ನು ಪ್ರವೇಶಿಸಿದಂತೆ ಶತ್ರುಘ್ನನ ಸೇನಾವ್ಯೂಹವನ್ನು ಪ್ರವೇಶಿಸಿದ. ಆನೆಗಳ ಕುಂಭಸ್ಥಳವನ್ನು ಒಡೆದು ಅಲ್ಲಿದ್ದ ಮುತ್ತುಗಳನ್ನು ರಣರಂಗದಲ್ಲೆಲ್ಲ ಚೆಲ್ಲುವಂತೆ ಮಾಡಿದ. ಸತ್ತ ಆನೆಗಳ ರಾಶಿಗಳು ಪರ್ವತಗಳಂತೆ ಕಂಡವು. ಕುದುರೆಗಳು ರಕ್ತದ ಮಡುವಿನಲ್ಲಿ ಮುಳುಗಿ ಹೋದವು. ರಥಿಕರು ಕೈಯಲ್ಲಿ ಬಿಲ್ಲು ಹಿಡಿದಿದ್ದಂತೆಯೆ ರಥದ ಮಧ್ಯದಲ್ಲಿ ಒರಗಿದರು. ಭಯಂಕರವಾದ ರಕ್ತದ ನದಿ ಪ್ರವಹಿಸಿತು. ಕೈ ಕಾಲು ಮೂಗುಗಳನ್ನು ಕಳೆದುಕೊಂಡು ವೀರರು ಎಲ್ಲರೂ ಬಿದ್ದರು. ಕೆಲವರೇನೊ ಪುಣ್ಯವಶಾತ್ ಉಳಿದುಕೊಂಡು ಶತ್ರುಘ್ನನ ಬಳಿಗೋಡಿ ಎಲ್ಲವನ್ನು ಹೇಳಿದರು. ಒಬ್ಬ ಸಣ್ಣ ಹುಡುಗನು ಸೇನಾಧಿಪತಿ ಕಾಲಜಿತ್ತನ್ನು ಕೊಂದುದು. ಅತ್ಯಾಶ್ಚರ್ಯಕರ ರೀತಿಯಲ್ಲಿ ಯುದ್ಧ ಮಾಡಿದ ಎಲ್ಲವೂ ಅವನಿಗೆ ವಿಚಿತ್ರವೆನಿಸಿ ಜತೆಗೆ ಕೋಪದಿಂದ ಹಲ್ಲುಗಳು ಕಟಕಟನೆ ಮಸೆಯತೊಡಗಿದವು. ಅವನು ಅವರನ್ನೆ ಆಕ್ಷೇಪಿಸಿದ 'ಛಿ, ವೀರರೆ, ನಿಮಗೆ ಮದವೇರಿದೆಯೆ? ಕಪಟ ಯುದ್ಧ ಮಾಡಿದಿರಾ ? ಇಲ್ಲವೆ ಬುದ್ಧಿವಿಕಲತೆಯುಂಟಾಯಿತೆ? ಕಾಲಜಿತ್ತು ಹೇಗೆ ಮಡಿದ ? ವೈರಿಭಯಂಕರನಾಗಿದ್ದು ಯಮನಿಗೂ ಅಂಜದ ನಮ್ಮ ಸೇನಾನಿಯನ್ನು ಬಾಲಕನು ಕೊಂದನೆಂದರೆ ಅದು ಹೇಗೆ ?'

'ಪ್ರಭು, ನಾವು ಮದಮತ್ತರಾಗಿರಲಿಲ್ಲ. ಕಪಟ ನಮ್ಮಲ್ಲಿಲ್ಲ. ಇದೊಂದು ಆಟವೆಂದೂ ಬಗೆಯಲಿಲ್ಲ. ಲವನು ಕಾಲಜಿತ್ತನ್ನು ಕೊಂದುದು ನಿಜ. ನಮ್ಮ ಸೈನ್ಯವನ್ನೆಲ್ಲ ಆತ ನಾಶಪಡಿಸಿದ್ದಾನೆ. ಇನ್ನುಮೇಲೆ ಏನಾದರೂ ನಿರ್ಧಾರ ಕೈಗೊಳ್ಳುವಾಗ, ನಮ್ಮ ರಾಜರುಗಳನ್ನು ಯುದ್ಧಕ್ಕೆ ಕಳಿಸುವಾಗ ಅವನೊಬ್ಬ ಬಾಲಕನೆಂದು ಮಾತ್ರ ಬಗೆಯಬೇಡ. ಹಾಗೆ ಮಾಡಿದರೆ ಅದು ಸಾಹಸವಾದೀತು' ಎಂದರು ವೀರರು. ಆಗ ಶತ್ರುಘ್ನನು ಅಮಾತ್ಯ ಸುಮತಿಯನ್ನು ಕರೆದು ಮಂತ್ರಾಲೋಚನೆ ಮಾಡಿದ.

**ಶತ್ರುಘ್ನ :-** ಅಮಾತ್ಯ, ಕುದುರೆಯನ್ನು ಹಿಡಿದುಕೊಂಡು ಸಮುದ್ರದಂಥ ನಮ್ಮ ಸೇನೆಯನ್ನು ಧ್ವಂಸಗೊಳಿಸಿದ ಆ ಬಾಲಕನು ಯಾರು, ತಿಳಿದಿರುವೆಯ ?

**ಸುಮತಿ :-** ಪ್ರಭು, ಇದು ವಾಲ್ಮೀಕಿ ಮಹರ್ಷಿಗಳ ಆಶ್ರಮ. ಕ್ಷತ್ರಿಯರು ಯಾರೂ ಇಲ್ಲ ವಾಸ ಮಾಡುವುದಿಲ್ಲ. ಆದ್ದರಿಂದ ಇಂದ್ರನೊ ರುದ್ರನೊ ಕುದುರೆಯನ್ನು ಹಿಡಿದಿರಬಹುದು. ಇಲ್ಲದಿದ್ದರೆ ಇನ್ನಾರು ? ವೈರಿಭಯಂಕರನಾದ ಕಾಲಜಿತ್ ನನ್ನೆ ಕೊಂದಿರುವನೆಂದ ಮೇಲೆ ಪುಷ್ಕಲನನ್ನು ಹೊರತು ಇನ್ನಾರೂ ಅವನೊಡನೆ ಹೋರಾಡಲಾರರು. ನೀನೂ ಸೈನ್ಯ ಸಮೇತನಾಗಿ ಹೋಗಿ ಅವನನ್ನು ಸಜೀವವಾಗಿ

ಓಡಿದು ಬಂಧಿಸಿ ರಾಮನಿಗೆ ತೋರಿಸು. ವಿಚಿತ್ರ ಬಾಲಕನೊಬ್ಬನನ್ನು ನೋಡಿ ರಾಮನು ಸಂತೋಷಪಡಲಿ. ಇದು ನನ್ನ ಅಭಿಪ್ರಾಯ.

ಶತ್ರುಘ್ನನು ಈ ಸಲಹೆಯನ್ನು ಒಪ್ಪಿ ಸೈನ್ಯವನ್ನು ಮುಂದೆ ಕಳಿಸಿದ. ಆ ಮಹಾಸೇನೆಯನ್ನು ನೋಡಿ ಲವನು ಒಂದಿಷ್ಟೂ ಬೆದರಲಿಲ್ಲ. ಮೃಗಗಳ ನಡುವೆ ಸಿಂಹದಂತೆ ನಿಂತು ಬಿಲ್ಲ ಹಗ್ಗವನ್ನೆಳೆದು ಸಾವಿರಾರು ಬಾಣಗಳನ್ನೆಸೆದ. ಒಂದು ಸಾವಿರ, ಹತ್ತು ಸಾವಿರ, ಇಪ್ಪತ್ತು ಸಾವಿರ, ಐವತ್ತು ಸಾವಿರ, ಒಂದು ಲಕ್ಷ. ಒಂದು ಲಕ್ಷದ ಹತ್ತು ಸಾವಿರ ಮತ್ತು ಎರಡು ಲಕ್ಷ ಹೀಗೆ ಏಳು ಸುತ್ತಿನಲ್ಲಿ ಸೈನಿಕರು ನಿಂತು ಲವನನ್ನು ಮುತ್ತಿದರು. ಆದರೆ ಅವನು ಅದರ ನಡುವೆ ಬೆಂಕಿಯಂತೆ ಸಂಚರಿಸಿ ಎಲ್ಲರನ್ನೂ ನಾಶ ಮಾಡಿ ಮೋಡಗಳಾಚ್ಛಾದನೆಯಿಂದ ಮುಕ್ತನಾದ ಶರತ್ಕಾಲದ ಚಂದ್ರನಂತೆ ಹೊಳೆಯತೊಡಗಿದ.

ಸೈನ್ಯ ವಿಫಲಗೊಂಡಾಗ ಪುಷ್ಕಲನು ಕೋಪದಿಂದ 'ನಿಲ್ಲು, ನಿಲ್ಲೆನ್ನುತ್ತ ಲವನ ಬಳಿಗೆ ಹೋಗಿ 'ನಾನೊಂದು ರಥವನ್ನು ಕೊಡುತ್ತೇನೆ. ಅದನ್ನೇರಿ ನನ್ನೊಡನೆ ಹೋರಾಡು. ನೀನು ಪಾದಚಾರಿಯಾಗಿದ್ದರೆ ನಾನು ರಥದಲ್ಲಿ ಕುಳಿತು ಹೇಗೆ ಯುದ್ಧ ಮಾಡಲಿ ?' ಎಂದ. 'ನೀನು ಕೊಟ್ಟ ರಥವನ್ನು ಏರಿ ನಾನು ಯುದ್ಧ ಮಾಡಬೇಕೆ ? ನಾವು ಬ್ರಾಹ್ಮಣರಲ್ಲ. ಕ್ಷತ್ರಿಯರು. ದಾನವನ್ನು ಕೊಡುವೆವೆ ಹೊರತು ಸ್ವೀಕರಿಸಲಾರೆವು. ಸ್ವೀಕರಿಸಿದರೆ ಯುದ್ಧದಲ್ಲಿ ಜಯ ಎಂದೂ ಸಂದಿಗ್ಧವೆ; ಸ್ವೀಕರಿಸಿದ ಪಾಪ ಬರುವುದಂತೂ ನಿಶ್ಚಿತ. ಆದರಿಂದ ನಾನೆ ನಿನ್ನ ರಥವನ್ನು ಪುಡಿಮಾಡಿ ನಿನ್ನನ್ನು ಪಾದಚಾರಿಯನ್ನಾಗಿ ಮಾಡುವೆ. ಆಗ ಸಮಸ್ಯೆ ಇರುವದಿಲ್ಲ' ಎಂದ ಲವ.

ಲವನ ಧೀರ ಸ್ವಭಾವ ಧರ್ಮನಿಷ್ಠೆ ಮಾತಿನ ಚಮತ್ಕಾರಗಳನ್ನು ನೋಡಿ ಪುಷ್ಕಲನು ಮನಸ್ಸಿನಲ್ಲಿ ವಿಸ್ಮಯಪಟ್ಟು ಬಿಲ್ಲಿಗೆ ಹೆದೆಯೇರಿಸಿದ. ಅಷ್ಟರಲ್ಲಿ ಲವನು ಆ ಬಿಲ್ಲನ್ನು ತನ್ನ ಬಾಣದಿಂದ ಕಡಿದೊಗೆದ. ರಥವನ್ನು ಮುರಿದ. ಈಗ ಇಬ್ಬರೂ ಪಾದಚಾರಿಗಳಾಗಿ ಯುದ್ಧಕ್ಕೆ ತೊಡಗಿದರು. ಪರಸ್ಪರ ಬಾಣಗಳೇಟಿನಿಂದ ರಕ್ತದಲ್ಲಿ ಮಿಂದರು. ಪರಸ್ಪರ ಹೋರಾಟಕ್ಕೆ ನಿಂತ ಜಯಂತ ಕಾರ್ತಿಕೆಯರಂತೆ, ಶಿವ-ವಿಷ್ಣುಗಳಂತೆ ಕಂಡರು.

ಪುಷ್ಕಲನು 'ಲವ. ನಿನ್ನಂಥ ವೀರರನ್ನು ನಾನೆಲ್ಲೂ ಕಂಡಿಲ್ಲ. ನಿನ್ನ ತಲೆಯನ್ನು ಕಡಿದುರುಳಿಸುತ್ತೇನೆ. ಓಡಿ ಹೋಗಬೇಡ. ನಿನ್ನ ಪ್ರಾಣಗಳನ್ನು ನೀನೀಗ ರಕ್ಷಿಸಿಕೊಳ್ಳು' ಎಂದು ಹೇಳಿ ಬಾಣಗಳ ಸುರಿಮಳೆಗೈದು ಅವನನ್ನು ಶರಪಂಜರದೊಳಗೆ ಸಿಲುಕಿಸಿದ. ಲವನೂ ಪುಷ್ಕಲನ ಪರಾಕ್ರಮವನ್ನು ಹೊಗಳಿ 'ನನ್ನ ಬಾಣಗಳೇಟಿನಿಂದ ನಿನ್ನನ್ನು ನೀನು ರಕ್ಷಿಸಿಕೊಳ್ಳು ಇಲ್ಲದಿದ್ದರೆ ರಕ್ತದಿಂದ ತೊಯ್ದು ನೆಲದಲ್ಲಿ ಒರಗುವೆ' ಎಂದ. ಬಿಲ್ಲಿನ ಹೆದೆಯನ್ನು ಕಿವಿಯವರೆಗೂ ಸೆಳೆದು ಹಾವಿನಂತೆ ಭಯಂಕರವಾದ ಬಾಣವನ್ನೆಸೆದ. ಅದನ್ನು ಪುಷ್ಕಲನು ತನ್ನ ಬಾಣದಿಂದ ಕಡಿದೆಸೆದ. ಆದರೆ ಅಂಥ ಇನ್ನೊಂದು ಬಾಣ ಅವನೆದೆಯಲ್ಲಿ ನೆಟ್ಟು ಮೂರ್ಛೆತಂದಿತು.

ಪುಷ್ಕಲನು ಮೂರ್ಛೆಗೊಂಡುದನ್ನು ಕಂಡ ಹನುಮಂತನು ಅವನನೆತ್ತಿ ಶತ್ರುಘ್ನನ ಬಳಿಗೊಯ್ದು ಅವನ ಆಜ್ಞೆಯಿಂದ ಲವನ ಮುಂದೆ ಹೋರಾಟಕ್ಕೆ ನಿಂತ. ಒಂದು ದೊಡ್ಡ ಬೂರುಗದ ಮರವನ್ನು ಕಿತ್ತು ಲವನ ತಲೆಯ ಮೇಲೆ ಬೀಸಿದ. ಆದರೆ ಅದು ಕ್ಷಣದಲ್ಲಿ

ಲವನ ಬಾಣಗಳಿಂದ ಚೂರು ಚೂರಾಯಿತು. ಹೀಗೆ ಅನೇಕ ವೃಕ್ಷಗಳು ನಾಶವಾದುವು. ಇನ್ನು ವೃಕ್ಷಗಳಿಂದ ಪ್ರಯೋಜನವಿಲ್ಲವೆಂದು ತಿಳಿದು ಬೆಟ್ಟದಷ್ಟು ಗಾತ್ರದ ಕಲ್ಲುಗಳನ್ನೆಸೆದ. ಅವು ಪುಡಿಯಾದುವು. ಬಾಲದಿಂದ ಸುತ್ತಿ ಲವನನ್ನು ಹಿಡಿದುಕೊಂಡ. ತಾಯಿ ಜಾನಕಿಯನ್ನು ನೆನೆದು ಲವನೊಂದುಬಾರಿ ಮುಷ್ಟಿಯಿಂದ ಬಾಲಕ್ಕೆ ಹೊಡೆದಾಗ ಅವನನ್ನು ಬಿಟ್ಟುಬಿಡಬೇಕಾಯಿತು. ನನ್ನ ಪ್ರಯತ್ನಗಳೆಲ್ಲ ವಿಫಲವಾಗುತ್ತಿವೆ. ಲವನ ಬಾಣಗಳ ಸುರಿಮಳೆ ಮಾತ್ರ ನಿಲ್ಲುತ್ತಿಲ್ಲ. ಏನು ಮಾಡಲಿ ? ಓಡಿ ಹೋಗಲೆ ? ಪ್ರಭುವಿಗೆ ಅದು ನಾಚಿಕೆಗೇಡು. ಬ್ರಹ್ಮನ ವರಬಲದಿಂದ ನನಗೆ ರಣರಂಗದಲ್ಲಿ ಮೂರ್ಛೆಯಾಗಲಿ ಮರಣವಾಗಲಿ ಇಲ್ಲ. ಆದ್ದರಿಂದ ಮೂರ್ಛೆ ಹೊಂದಿದವನಂತೆ ನಟಿಸುವೆ. ಶತ್ರುಘ್ನನು ಬಂದು ಹೋರಾಡಿ ಗೆದ್ದುಕೊಳ್ಳಲಿ' ಎಂದುಕೊಂಡು ಎಲ್ಲ ವೀರರು ನೋಡುತ್ತಿದ್ದಂತೆ ನೆಲಕ್ಕೆ ಒರಗಿದ. ಲವನು ಬೇರೆ ರಾಜರೊಡನೆ ಯುದ್ಧಕ್ಕೆ ತೊಡಗಿದ.

**ಶೇಷ** :- ಹನುಮಂತನೂ ಮೂರ್ಛಿತನಾಗಿ ಬಿದ್ದನೆಂದು ಕೇಳಿ ಶತ್ರುಘ್ನನಿಗೆ ದುಃಖವಾಯಿತು. 'ಏನು ಮಾಡಲಿ ? ಹುಡುಗನು ಮಹಾಬಲಶಾಲಿಯಾಗಿದ್ದಾನೆ' ಎಂದುಕೊಂಡು ರಥವನ್ನು ಏರಿ ಲವನ ಬಳಿಗೆ ಹೊರಟ. ಅಲ್ಲಿ ನೋಡಿದರೆ ಸಾಕ್ಷಾತ್ ರಾಮನೆ ಬಾಲರೂಪದಿಂದ ಬಂದು ಬಿಲ್ಲು ಬಾಣಗಳನ್ನು ಹಿಡಿದು ಸೇನೆಯನ್ನು ಧ್ವಂಸ ಮಾಡುತ್ತಿರುವಂತೆ ಕಾಣಿಸಿತು. 'ಯಾರಿವನು ? ರಾಮನಂತೆ ನೀಲೋತ್ಪಲದಲ ಶ್ಯಾಮನಾಗಿ ಮನೋಹರನಾಗಿರುವನು ! ಸೀತೆಯ ಮಗನೆ ಇರಬೇಕು. ಬೇರಾರೂ ಅಲ್ಲ. ಸಿಂಹದಂತೆ ಪರಾಕ್ರಮ ತೋರಿ ನಮ್ಮನ್ನು ಗೆದ್ದು ಹೊರಟು ಹೋಗುವುದರಲ್ಲಿ ಸಂಶಯವಿಲ್ಲ. ನಮಗೆ ಜಯ ಸಿಗಲಾರದು. ಏನು ಮಾಡಲಿ ?' ಎಂದುಕೊಂಡು ಲವನನ್ನು ಕೇಳಿದ 'ಬಾಲಕನೆ, ನೀನು ಯಾರು ? ವೀರರನ್ನೆಲ್ಲ ಕೆಡಹುತ್ತಿರುವೆ. ನಿನಗೆ ರಾಕ್ಷಸಾಂತಕನಾದ ರಾಮನ ಬಲ ತಿಳಿದಿಲ್ಲ ನಿನ್ನ ತಾಯಿ ತಂದೆಗಳು ಯಾರು ? ನಿನ್ನ ಹೆಸರೇನು ? ಕುದುರೆಯನ್ನು ಬಿಟ್ಟು ಬಿಡು. ಸಣ್ಣ ಬಾಲಕನೆಂದು ನಾನು ಕ್ಷಮಿಸು ಬಿಡುತ್ತೇನೆ. ಬಾ, ರಾಮನ್ನು ಸಂದರ್ಶಿಸು. ನಿನಗೆ ಬೇಕಾದುದೆಲ್ಲವನ್ನೂ ಕೊಡುತ್ತಾನೆ.'

ಲವನು ಉತ್ತರಿಸಿದ. 'ನನ್ನ ಹೆಸರು, ತಂದೆತಾಯಿಗಳು, ಕುಲ, ವಯಸ್ಸು ಇವೆಲ್ಲ ನಿನಗೇಕೆ ? ನಿನ್ನಲ್ಲಿ ಬಲವಿದ್ದರೆ ತೋರಿಸು. ಕುದುರೆಯನ್ನು ಬಿಡಿಸಿಕೊಳ್ಳು. ಆದಾಗದಿದ್ದಲ್ಲಿ ನಮ್ಮಣ್ಣನಾದ ಕುಶನ ಕಾಲಿಗೆ ಬೀಳು.'

ಹೀಗೆ ಹೇಳಿ ಅವನ ಎದೆ ತಲೆ ಭುಜಗಳಿಗೆ ಬಾಣಗಳನ್ನೆಸೆದ. ಶತ್ರುಘ್ನನು ಬಿಲ್ಲಿಗೆ ಹೆದೆಯೇರಿಸಿ ಬಾಲಕನನ್ನು ಹೆದರಿಸುವವನಂತೆ ಮೇಘಧ್ವನಿಯಂಥ ಧನುಷ್ಟಂಕಾರವನ್ನು ಮಾಡಿದ. ಲೆಕ್ಕವಿಲ್ಲದಷ್ಟು ಬಾಣಗಳನ್ನೆಸೆದ. ಲವನು ಅವೆಲ್ಲವನ್ನು ಕಡಿದು ಭೂತಲವನ್ನೆಲ್ಲ ವ್ಯಾಪಿಸುವಂತೆ ಕೋಟಿಗಟ್ಟಲೆ ಬಾಣಗಳನ್ನೆಸೆದ. ವ್ಯತೀಪಾತ ಯೋಗದಲ್ಲಿ ಮಾಡಿದ ದಾನದಂತೆ ಲವನೆಸೆದ ಬಾಣಗಳೂ ಅಕ್ಷಯವಾಗಿ ಆಕಾಶವನ್ನೆಲ್ಲ ತುಂಬಿ ಸೂರ್ಯಮಂಡಲವನ್ನೂ ಮುಟ್ಟಿದುವು. ಆ ಶರಪಂಜರದೊಳಗೆ ಗಾಳಿಯೂ ಸಂಚಾರ ಮಾಡುವಂತಿರಲಿಲ್ಲ. ಮನುಷ್ಯರ ಪಾಡೇನು ? ಅದನ್ನು ನೋಡಿ ಶತ್ರುಘ್ನನು ಆಶ್ಚರ್ಯಗೊಂಡು ತನ್ನ ಬಾಣಗಳಿಂದ ಅವನ್ನೆಲ್ಲ ಕಡಿದ. ಅಷ್ಟರಲ್ಲಿ ಅವನ ಬಿಲ್ಲೂ

ಕಡಿದುಬಿದ್ದಿತು. ಇನ್ನೊಂದು ಬಿಲ್ಲನ್ನೆತ್ತಿ ಬಾಣಗಳನ್ನು ಹೂಡುವಷ್ಟರಲ್ಲಿ ರಥವು ಪುಡಿಯಾಯಿತು. ಎತ್ತಿದ ಬಿಲ್ಲೂ ಕಡಿದುಬಿದ್ದಿತು. ರಣರಂಗದಲ್ಲಿದ್ದ ವೀರರೆಲ್ಲರೂ ಈ ಸಾಹಸವನ್ನು ಮನಸಾರೆ ಹೊಗಳಿದರು.

ಶತ್ರುಘ್ನನು ಇನ್ನೊಂದು ರಥವನ್ನೇರಿ ಲವನೊಡನೆ ಯುದ್ಧಮಾಡಿದ. ಆಗ ಲವನು ಬಾಣಗಳ ಪೆಟ್ಟಿನಿಂದ ರಕ್ತದಲ್ಲಿ ಮಿಂದು ಹೂಬಿಟ್ಟ ಮುತ್ತುಗದ ಮರದಂತೆ ಕಂಡ. ಕೋಪದಿಂದ ಶತ್ರುಘ್ನನ ಕವಚವನ್ನು ಭೇದಿಸಿದ. ಕಿರೀಟವನ್ನು ಹಾರಿಸಿದ. ಮೈಯೆಲ್ಲ ರಕ್ತದಲ್ಲಿ ಮೀಯುವಂತೆ ಮಾಡಿದ. ಅರ್ಧ ಚಂದ್ರಾಕಾರದ ಒಂದು ತೀಕ್ಷ್ಣವಾದ ಬಾಣವನ್ನು ಅವನ ವಿಶಾಲವಾದ ಎದೆಗೆ ಗುರಿಯಿಟ್ಟು ಹೊಡೆದು ಮೂರ್ಛೆಗೊಳಿಸಿದ.

ಇತರ ರಾಜರುಗಳೆಲ್ಲ ಲವನನ್ನು ಮುತ್ತಿದರು. ಸುರಥ, ವಿಮಲ, ವೀರಮಣಿ ಸುಮದ ರಿಪುತಾಪ ಮುಂತಾದವರೆಲ್ಲ ಏಕಕಾಲದಲ್ಲಿ ಸುತ್ತುವರಿದು ಏಕಾಂಗಿಯಾದ ಲವನನ್ನು ಬಾಣ ಪ್ರಾಸ ಕುಂತ ಪರಶು ಮುಸಲ ಮುಂತಾದ ಎಲ್ಲ ಆಯುಧಗಳಿಂದ ಎಲ್ಲ ಕಡೆಯಿಂದ ಹೊಡೆಯಲಾರಂಭಿಸಿದರು.

ಹೀಗೆ ಅಧರ್ಮದಿಂದ ಯುದ್ಧ ಮಾಡಿದರೂ ಲವನನ್ನು ಸೋಲಿಸಲಾರದೆ ಹಿಮ್ಮೆಟ್ಟಿದರು. ಅಷ್ಟರಲ್ಲಿ ಶತ್ರುಘ್ನನು ಮೂರ್ಛೆ ತಿಳಿದೆದ್ದು ಲವನಿದಿರು ನಿಂತು ಹೇಳಿದ 'ಬಾಲಕ ನೀನು ಧನ್ಯ. ಇಂದಿನವರೆಗೆ ಯಾವ ವೀರನೂ ನನ್ನನ್ನು ಯುದ್ಧ ರಂಗದಲ್ಲಿ ಮೂರ್ಛೆ ಕೆಡವಿದ್ದಿಲ್ಲ. ನೀನು ಆ ಕೆಲಸ ಮಾಡಿದೆ. ನೀನು ಬಾಲಕನಲ್ಲ. ನನ್ನನ್ನು ವಂಚಿಸಲು ಬಂದ ಯಾವನೊ ದೇವನಿರಬೇಕು. ಈಗ ನನ್ನ ಪರಾಕ್ರಮವನ್ನು ನೋಡು. ನಿನ್ನನ್ನು ಮೂರ್ಛೆ ಕೆಡವುತ್ತೇನೆ. ಈ ಒಂದು ಬಾಣದೇಟನ್ನು ಸಹಿಸಿಕೊಳ್ಳು. ಓಡಿ ಹೋಗಬೇಡ.'

ಹೀಗೆ ಹೇಳಿ ಹಿಂದೆ ಲವಣಾಸುರನ ವಧೆಯಲ್ಲಿ ಪ್ರಯೋಗಿಸಿದ್ದ ಕ್ರೂರವಾದ ಯಮನ ದವಡೆಯಂಥ ಬಾಣವನ್ನು ಲವನ ಎದೆಗೆ ಎಸೆದ. ಅದು ಪ್ರಜ್ವಲಿಸುತ್ತ ದಿಕ್ಕುಗಳನ್ನು ಬೆಳಗುತ್ತ ಬರುವುದನ್ನು ಕಂಡು 'ಈಗ ನನ್ನ ಬಳಿ ವೀರನಾದ ನಮ್ಮಣ್ಣ ಕುಶನಿರುತ್ತಿದ್ದರೆ ನಾನು ಶತ್ರುಘ್ನನಿಗೆ ವಶನಾಗುವ ಭಯವೆ ಇರುತ್ತಿರಲಿಲ್ಲ. ನನ್ನ ಬಲವಿನ್ನೂ ಹೆಚ್ಚುತ್ತಿತ್ತು' ಎಂದು ಯೋಚಿಸಿದ. ಅಷ್ಟರಲ್ಲಿ ಕಾಲಾಗ್ನಿಯಂಥ ಆ ಬಾಣವು ಅವನ ಎದೆಯಲ್ಲಿ ನೆಟ್ಟು ಮೂರ್ಛೆ ತಂದಿತು.

**ಶೇಷ :-** ಲವನು ಮೂರ್ಛಿತನಾಗಿ ಬಿದ್ದುದನ್ನು ಕಂಡು ಶತ್ರುಘ್ನನು ಅವನನ್ನು ಎತ್ತಿ ತನ್ನ ರಥದಲ್ಲಿಟ್ಟುಕೊಂಡು ಹೊರಟ. ಇತ್ತ ಲವನ ಸಹಪಾಠಿಗಳಾದ ಮುನಿಕುಮಾರರು ಸೀತೆಯ ಬಳಿಗೆ ಬಂದು 'ಅಮ್ಮ ಜಾನಕಿ, ಲವನು ಯಾವನೊ ಒಬ್ಬ ಬಲಿಷ್ಠನಾದ ರಾಜನ ಕುದುರೆಯನ್ನು ಅಪಹರಿಸಿ ಭಯಂಕರ ಯುದ್ಧ ಮಾಡಿದ. ಆ ರಾಜನನ್ನೂ ಮೂರ್ಛೆಗೊಳಿಸಿ ಜಯಶಾಲಿಯಾದ. ಆದರೆ ಅವನು ಎಚ್ಚತ್ತು ಲವನನ್ನೆ ಮೂರ್ಛೆಗೊಳಿಸಿದ್ದಾನೆ. ನಾವು ಮೊದಲೆ ಎಚ್ಚರಿಸಿದ್ದೆವು ಕುದುರೆಯನ್ನು ಹಿಡಿಯಬೇಡ ಎಂದು. ಆದರೂ ನಾವು ಬ್ರಾಹ್ಮಣರು ಎಂದು ತಿರಸ್ಕರಿಸಿ, ಕುದುರೆಯನ್ನು ಹಿಡಿದು ಕಟ್ಟಿಹಾಕಿದ' ಎಂದರು.

ಸೀತೆಗೆ ದಾರುಣವಾದ ಈ ವೃತ್ತಾಂತವನ್ನು ಕೇಳಿ ನೆಲದ ಮೇಲೆ ಬಿದ್ದು ಅಳ ತೊಡಗಿದಳು. 'ಅವನು ರಾಜನಂತೆ. ಮಗುವಿನ ಮೇಲೆ ಒಂದಿಷ್ಟು ದಯೆಯಿಲ್ಲ. ಸಣ್ಣ

ಮಗುವಿನೊಡನೆ ಇವನ ಯುದ್ಧವೆ ? ಇದು ಧರ್ಮವೆನಿಸುವುದೆ ? ದುಷ್ಟ, ನನ್ನ ಮಗುವನ್ನು ಮೂರ್ಛೆಗೊಳಿಸಿದನಂತೆ ! ಲವ, ನೀನು ಎಲ್ಲಿರುವೆ ? ಬಲಿಷ್ಠನಾಗಿದ್ದರೂ ನೀನೇಕೆ ಆ ನಿರ್ದಯಿಯಾದ ರಾಜನ ಕುದುರೆಯನ್ನು ಹಿಡಿದೆ ? ನೀನು ಎಳೆಯವ. ರಥವಿಲ್ಲದೆ ಪಾದಚಾರಿಯಾಗಿ ಯುದ್ಧ ಮಾಡುವವ. ಅವರು ರಥದಲ್ಲಿ ಕುಳಿತು ಎಲ್ಲ ವಿಧದ ಆಯುಧಗಳನ್ನು ಎಸೆಯುವವರು. ಇಂಥ ಯುದ್ಧ ಸಮವಾದೀತೆ ? ಮಗು, ನಾನು ನಿನ್ನೊಡನಿದ್ದು ರಾಮನ ವಿರಹ ದುಃಖವನ್ನು ಮರೆತಿದ್ದೆ. ಇನ್ನೂ ನೀನೂ ಹೊರಟು ಹೋದರೆ ನಾನು ಹೇಗೆ ಈ ಕಾಡಿನಲ್ಲಿ ಬದುಕಿರಲಿ ? ಬಾ ಮಗು, ಕುದುರೆಯನ್ನು ಬಿಟ್ಟು ಬಿಡು. ಆ ರಾಜನು ಹೋಗಲಿ. ನಿನಗೆ ದುಃಖದ ಅರಿವಿಲ್ಲ. ಆದರೆ ನಿನ್ನ ಕಣ್ಣೀರನ್ನೊರೆಸಬಲ್ಲೆ. ಕುಶನೀಗ ಇರುತ್ತಿದ್ದರೆ ನಿನ್ನನ್ನು ಬಿಡಿಸಿಕೊಂಡು ಬರುತ್ತಿದ್ದ. ನನ್ನ ಪಾಲಿಗೆ ದೇವತೆಯಂತಿರುವ ಅವನೂ ಬಳಿಯಲ್ಲಿ ಇಲ್ಲ. ಏನೂ ಮಾಡಲಿ ? ಈಗಲೂ ನನ್ನ ದುಃಖಕ್ಕೆ ದೈವವೆ ಕಾರಣ.'

ಸೀತೆ ಹೀಗೆ ವಿಲಾಪ ಮಾಡುತ್ತಿದ್ದಾಗ ಅತ್ತ ಉಜ್ಜಯನಿಯಲ್ಲಿ ಮಾಘ ಕೃಷ್ಣ ಚತುರ್ದಶಿ ದಿನ ಮಹಾಕಾಲನನ್ನು ಅರ್ಚಿಸಿ ಅವನಿಂದ ಅನೇಕ ವರಗಳನ್ನು ಪಡೆದ ಕುಶನು ತಾಯಿಯ ಬಳಿಗೆ ಬಂದ. ಅವಳು ಶೋಕ ವಿಹ್ವಲಳಾಗಿ ಕಣ್ಣೀರಿಡುವುದನ್ನು ಕಂಡು 'ಅಮ್ಮ, ನಿನ್ನ ಮಗ ನಾನು ಬಳಿಯಲ್ಲಿರುವಾಗ ಏಕೆ ದುಃಖಿಸುವೆ ? ನಾನು ಜೀವಿಸುತ್ತಿರುವಾಗ ನಿನ್ನ ಕಣ್ಣಿಂದ ನೀರು ಬೀಳಕೂಡದು. ಅಮ್ಮ, ಲವನೆಲ್ಲಿ ? ನಾನು ಬಂದುದನ್ನು ತಿಳಿದೊಡನೆ ಸಂತೋಷಗೊಂಡು ಬಳಿಗೆ ಬರುವವನು. ಅವನೇಕೆ ಕಾಣಿಸುತ್ತಿಲ್ಲ ? ಎಲ್ಲಿ ಆಟ ಆಡುತ್ತಿದ್ದಾನೆ ? ನೀನೇಕೆ ಅಳುತ್ತಿರುವೆ ? ಲವನೆಲ್ಲಿದ್ದಾನೆ ? ಹೇಳು, ನಿನ್ನ ದುಃಖಕ್ಕೇನು ಕಾರಣ ?' ಎಂದ.

'ಮಗು, ಲವನನ್ನು ಯಾವನೊ ಒಬ್ಬ ರಾಜನು ಹಿಡಿದೊಯ್ಯುತ್ತಿದ್ದಾನೆ. ಆ ರಾಜನ ಯಾಗದ ಕುದುರೆಯನ್ನು ಅವನು ಹಿಡಿದು ಏಕಾಂಗಿಯಾಗಿ ಸೇನೆಯನ್ನೆಲ್ಲ ಪುಡಿಗೈದನಂತೆ. ಈಗ ರಾಜನು ಲವನನ್ನು ಮೂರ್ಛೆಗೊಳಿಸಿದನಂತೆ ಜತೆಯ ಹುಡುಗರು ಹೇಳಿದರು. ನೀನೀಗಲೆ ಹೋಗಿ ಅವನ್ನು ಬಿಡಿಸು. ಸರಿಯಾದ ಕಾಲಕ್ಕೆ ಬಂದೆ.' ಎಂದಳು ಸೀತೆ.

'ಅಮ್ಮ, ಲವನು ಈ ಕ್ಷಣದಲ್ಲಿಯೆ ಬಂಧ ಮುಕ್ತನಾದನೆಂದು ತಿಳಿ. ನಾನೀಗಲೆ ಆ ರಾಜನನ್ನೂ ಅವನ ಸೇನೆಯನ್ನೂ ಧ್ವಂಸ ಮಾಡುವೆನು. ಅವನ ಸಹಾಯಕ್ಕೆ ದೇವತೆಗಳೆ ಬರಲಿ. ಸಾಕ್ಷಾತ್ ರುದ್ರನೆ ಬರಲಿ ನನ್ನ ಬಾಣಗಳ ಸಹಾಯದಿಂದ ಲವನನ್ನು ಬಿಡಿಸಿಕೊಂಡು ಬರುವೆನು. ಅಮ್ಮ. ಲವನು ಮೂರ್ಛೆಗೊಂಡನೆಂದು ಅಳಬೇಡ. ವೀರರಿಗೆ ಅದರಿಂದಲೆ ಕೀರ್ತಿ. ಪಲಾಯನ ಮಾಡಿದರೆ ಅಪಕೀರ್ತಿ. ನನಗೀಗ ಕವಚ ಧನುರ್ಬಾಣಗಳನ್ನೂ, ಖಡ್ಗ ಶಿರಸ್ತ್ರಾಣಗಳನ್ನೂ ಕೊಡು. ಈಗಲೆ ರಣರಂಗಕ್ಕೆ ಹೋಗಿ ಲವನನ್ನು ಬಿಡಿಸಕೊಂಡು ಬರುವೆ. ಇಲ್ಲದಿದ್ದರೆ ನಿನ್ನ ಪಾದಗಳು ನನ್ನಲ್ಲಿ ಕೋಪಗೊಳ್ಳಲಿ.'

ಕುಶನ ಈ ಮಾತನ್ನು ಕೇಳಿ ಜಾನಕಿ ಸಂತೋಷದಿಂದ ಎಲ್ಲ ಅಸ್ತ್ರಗಳನ್ನೂ ಕೊಟ್ಟು ಜಯಶಾಲಿಯಾಗೆಂದು ಆಶೀರ್ವದಿಸಿ ಕಳಿಸಿದಳು. ಅವನು ವೇಗವಾಗಿ ರಣರಂಗಕ್ಕೆ ಧಾವಿಸಿದ. ಆಗ ತಾನೆ ಎಚ್ಚತ್ತಿದ್ದ ಲವನು ಅಣ್ಣನನ್ನು ಕಂಡು ಗಾಳಿ ಬೀಸಿದಾಗ

ಪ್ರಜ್ವಲಿಸುವ ಅಗ್ನಿಯಂತೆ ಎದ್ದು ರಥದಿಂದ ಕೆಳಕ್ಕೆ ಹಾಕಿ ಯುದ್ಧಕ್ಕೆ ನಿಂತ. ಶತ್ರುಘ್ನನ ಪಡೆಗೆ ಪೂರ್ವ ದಿಕ್ಕಿನಲ್ಲಿ ಸಮಸ್ತ ಪ್ರಪಂಚವನ್ನೆ ಸಂಹರಿಸುವ ಕಾಲ ಯಮನಂತೆ ಕುಶನು ನಿಂತ. ಪಶ್ಚಿಮದಲ್ಲಿ ಲವನು ಎಲ್ಲರನ್ನೂ ಕೊಲ್ಲತೊಡಗಿದ. ಸೇನೆಯು ಆಗ ಅಲ್ಲೋಲ ಕಲ್ಲೋಲವಾಯಿತು.

ಶತ್ರುಘ್ನನು ಕುಶನ ಮುಂದೆ ನಿಂತು ಹೇಳಿದ 'ನೀನು ಯಾರು? ನಿನ್ನ ಹೆಸರು ಏನು ? ತಾಯಿ ತಂದೆಗಳು ಯಾರು ? ಬ್ರಾಹ್ಮಣರು ವಾಸ ಮಾಡುವ ಕಾಡಿನಲ್ಲಿ ನೀನೇಕೆ ಇರುವೆ ? ಎಲ್ಲವನ್ನೂ ಹೇಳು. ಬಳಿಕ ನಿನ್ನೊಡನೆ ನಾನು ಯುದ್ಧ ಮಾಡುವೆನು'. ಕುಶನೆಂದ 'ಪತಿವ್ರತೆಯಾದ ಸೀತೆ ನಮ್ಮನ್ನು ಹಡೆದವಳು. ತಂದೆ ತಾಯಿಗಳ ಬಗ್ಗೆ ಇಷ್ಟು ಮಾತ್ರ ಹೇಳಬಲ್ಲೆ. ಮಹರ್ಷಿ ವಾಲ್ಮೀಕಿ ಮತ್ತು ತಾಯಿ ಸೀತೆಯರ ಪಾದಸೇವೆ ಮಾಡುತ್ತ ಸರ್ವವಿದ್ಯಾಪ್ರವೀಣರಾಗಿ ಕುಶ-ಲವರೆಂದು ನಾವು ಇಬ್ಬರು ಅಣ್ಣತಮ್ಮಂದಿರು ಪ್ರಸಿದ್ಧರಾಗಿದ್ದೇವೆ. ಈಗ ನೀನಾರು ಹೇಳು, ಕುದುರೆಯನ್ನು ಬಿಟ್ಟಿದ್ದೇಕೆ ? ಸೈನ್ಯವನ್ನು ತಂದು ದಿಗ್ವಿಜಯ ಮಾಡುತ್ತಿರುವುದೇಕೆ ? ನೀವು ವೀರನಾಗಿರುವಿಯಾದರೆ ನನ್ನೊಡನೆ ಯುದ್ಧ ಮಾಡು. ಈಗಲೆ ನಿನ್ನನ್ನು ಕೊಲ್ಲುತ್ತೇನೆ.'

ಶತ್ರುಘ್ನ ಇದನ್ನು ಕೇಳಿ ಇವನು ಸೀತೆಯಲ್ಲಿ ಜನಿಸಿದ ರಾಮಪುತ್ರನೆಂದು ತಿಳಿದು ಮನದೊಳಗೆ ಆಶ್ಚರ್ಯಪಟ್ಟ. ಬಿಲ್ಲಿಗೆ ಹೆದೆಯೇರಿಸಿದ. ಒಡನೆ ಕುಶನೂ ಬಿಲ್ಲನ್ನೆತ್ತಿ ಬಾಣಗಳನ್ನೆಸೆದ. ಒಂದು ಕ್ಷಣದಲ್ಲಿ ಬಾಣ ಪ್ರತಿ ಬಾಣಗಳಿಂದ ಲೋಕವೆಲ್ಲ ತುಂಬಿತು. ಆಗ್ನೇಯಾಸ್ತ್ರ, ವಾರುಣಾಸ್ತ್ರ, ವಾಯವ್ಯಾಸ್ತ್ರ, ಪರ್ವತಾಸ್ತ್ರ, ವಜ್ರಾಸ್ತ್ರಗಳೆಲ್ಲವೂ ಒಂದನ್ನೊಂದು ಹೊಡೆದು ಶಾಂತವಾದವು. ಕುಶನ ನಾರಾಯಣ ಅಸ್ತ್ರವು ನಾರಾಯಣ ರೂಪಿಯಾದ ಶತ್ರುಘ್ನನನ್ನು ಬಾಧಿಸಲಿಲ್ಲ. ಕುಶನ ಕೋಪ ಎಲ್ಲೆ ಮೀರಿತು. 'ಭಯಂಕರವಾದ ನಾರಾಯಣಾಸ್ತ್ರವೂ ನಿನ್ನನ್ನೇನೂ ಮಾಡುತ್ತಿಲ್ಲವೆ ? ಹಾಗಿದ್ದರೆ ನೀನು ಮಹಾ ಬಲ ಪರಾಕ್ರಮಿಯೆ ಸರಿ. ಈಗ ನೋಡು. ಮೂರು ಬಾಣಗಳಲ್ಲಿ ನಿನ್ನನ್ನು ಕೆಡವದಿದ್ದರೆ ಕೋಟಿ ಪುಣ್ಯಗಳಿಂದಲೂ ಅಲಭ್ಯವಾದ ಮನುಷ್ಯ ಜನ್ಮವನ್ನು ಪಡೆದು ಸದುಪಯೋಗ ಮಾಡಿಕೊಳ್ಳದವನ ಪಾಪ ನನಗಾಗಲಿ. ಜಾಗರೂಕನಾಗಿರು. ಈಗಲೆ ನಿನ್ನನ್ನು ಬೀಳಿಸುವೆ' ಎನ್ನುತ್ತ ಕಾಲಾಗ್ನಿಯಂಥ ಘೋರವಾದ ಒಂದು ಬಾಣವನ್ನು ಶತ್ರುಘ್ನನ ವಿಶಾಲವಾದ ದೃಢವಾದ ಎದೆಗೆ ಗುರಿಯಿಟ್ಟ. ಅದು ಹಾವಿನಂತೆ ಬುಸುಗುಟ್ಟುತ್ತ ಬಂದಾಗ ಶತ್ರುಘ್ನನು ರಾಮನನ್ನು ನೆನೆದು ಆ ಬಾಣವನ್ನು ತುಂಡರಿಸಿದ. ಕುಶನ ಎರಡನೇ ಬಾಣವೂ ಹೀಗೆ ಕಡಿದು ಬಿದ್ದಿತು. ಆಗ ಅವನು ತಾಯಿಯ ಪಾದಗಳನ್ನು ನೆನೆದು ಮೂರನೆ ಬಾಣವನ್ನು ಎಸೆದ. ಅದನ್ನೂ ತುಂಡರಿಸಲು ಶತ್ರುಘ್ನನು ಬಾಣ ಹೂಡುವಷ್ಟರಲ್ಲಿ ಅದು ಎದೆಯಲ್ಲಿ ನೆಟ್ಟು ಮೂರ್ಛೆ ತಂದಿತು. ಸೈನ್ಯದಲ್ಲಿ ಹಾಹಾಕಾರವೆದ್ದಿತು. ಕುಶನು ಜಯಶಾಲಿಯಾದ.

ಶತ್ರುಘ್ನನು ಮೂರ್ಛಿತನಾಗಿ ಬಿದ್ದುದನ್ನು ಕಂಡ ಸುರಥ ರಾಜನು ಕುಶನೊಡನೆ ಯುದ್ಧಕ್ಕೆ ನಿಂತ. ಪುಷ್ಕಲನು ಹಿಂದೆ ಲವನಿಂದ ಮೂರ್ಛೆ ಹೊಂದಿದ್ದರೂ ತಿರುಗಿ ಅವನೊಡನೆ ಹೋರಾಡಲು ತೊಡಗಿದ. ಕುಶನು ಸುರಥನ ರಥವನ್ನು ಮುರಿದ. ಧನುಸ್ಸನ್ನು ತುಂಡರಿಸಿದ. ಆದರೂ ಅಸ್ತ್ರ ಪ್ರತ್ಯಸ್ತ್ರಗಳಿಂದ ವೀರರಿಗೆ ಮೈನವಿರೆಬ್ಬಿಸುವ

ಮಗುವಿನೊಡನೆ ಇವನ ಯುದ್ಧವೆ ? ಇದು ಧರ್ಮವೆನಿಸುವುದೆ ? ದುಷ್ಟ, ನನ್ನ ಮಗುವನ್ನು ಮೂರ್ಛೆಗೊಳಿಸಿದನಂತೆ ! ಲವ, ನೀನು ಎಲ್ಲಿರುವೆ ? ಬಲಿಷ್ಠನಾಗಿದ್ದರೂ ನೀನೇಕೆ ಆ ನಿರ್ದಯಿಯಾದ ರಾಜನ ಕುದುರೆಯನ್ನು ಹಿಡಿದೆ ? ನೀನು ಎಳೆಯವ. ರಥವಿಲ್ಲದೆ ಪಾದಚಾರಿಯಾಗಿ ಯುದ್ಧ ಮಾಡುವವ. ಅವರು ರಥದಲ್ಲಿ ಕುಳಿತು ಎಲ್ಲ ವಿಧದ ಆಯುಧಗಳನ್ನು ಎಸೆಯುವವರು. ಇಂಥ ಯುದ್ಧ ಸಮವಾದೀತೆ ? ಮಗು, ನಾನು ನಿನ್ನೊಡನಿದ್ದು ರಾಮನ ವಿರಹ ದುಃಖವನ್ನು ಮರೆತಿದ್ದೆ. ಇನ್ನೂ ನೀನೂ ಹೊರಟು ಹೋದರೆ ನಾನು ಹೇಗೆ ಈ ಕಾಡಿನಲ್ಲಿ ಬದುಕಿರಲಿ ? ಬಾ ಮಗು, ಕುದುರೆಯನ್ನು ಬಿಟ್ಟು ಬಿಡು. ಆ ರಾಜನು ಹೋಗಲಿ. ನಿನಗೆ ದುಃಖದ ಅರಿವಿಲ್ಲ. ಆದರೆ ನಿನ್ನ ಕಣ್ಣೀರನ್ನೊರೆಸಬಲ್ಲೆ. ಕುಶನೀಗ ಇರುತ್ತಿದ್ದರೆ ನಿನ್ನನ್ನು ಬಿಡಿಸಿಕೊಂಡು ಬರುತ್ತಿದ್ದ. ನನ್ನ ಪಾಲಿಗೆ ದೇವತೆಯಂತಿರುವ ಅವನೂ ಬಳಿಯಲ್ಲಿ ಇಲ್ಲ. ಏನೂ ಮಾಡಲಿ ? ಈಗಲೂ ನನ್ನ ದುಃಖಕ್ಕೆ ದೈವವೆ ಕಾರಣ.'

ಸೀತೆ ಹೀಗೆ ವಿಲಾಪ ಮಾಡುತ್ತಿದ್ದಾಗ ಅತ್ತ ಉಜ್ಜಯನಿಯಲ್ಲಿ ಮಾಘ ಕೃಷ್ಣ ಚತುರ್ದಶಿ ದಿನ ಮಹಾಕಾಲನನ್ನು ಅರ್ಚಿಸಿ ಅವನಿಂದ ಅನೇಕ ವರಗಳನ್ನು ಪಡೆದ ಕುಶನು ತಾಯಿಯ ಬಳಿಗೆ ಬಂದ. ಅವಳು ಶೋಕ ವಿಹ್ವಲಳಾಗಿ ಕಣ್ಣೀರಿಡುವುದನ್ನು ಕಂಡು 'ಅಮ್ಮ, ನಿನ್ನ ಮಗ ನಾನು ಬಳಿಯಲ್ಲಿರುವಾಗ ಏಕೆ ದುಃಖಿಸುವೆ ? ನಾನು ಜೀವಿಸುತ್ತಿರುವಾಗ ನಿನ್ನ ಕಣ್ಣಿಂದ ನೀರು ಬೀಳಕೂಡದು. ಅಮ್ಮ, ಲವನೆಲ್ಲಿ ? ನಾನು ಬಂದುದನ್ನು ತಿಳಿದೊಡನೆ ಸಂತೋಷಗೊಂಡು ಬಳಿಗೆ ಬರುವವನು. ಅವನೇಕೆ ಕಾಣಿಸುತ್ತಿಲ್ಲ ? ಎಲ್ಲಿ ಆಟ ಆಡುತ್ತಿದ್ದಾನೆ ? ನೀನೇಕೆ ಅಳುತ್ತಿರುವೆ ? ಲವನೆಲ್ಲಿದ್ದಾನೆ ? ಹೇಳು, ನಿನ್ನ ದುಃಖಕ್ಕೇನು ಕಾರಣ ?' ಎಂದ.

'ಮಗು, ಲವನನ್ನು ಯಾವನೊ ಒಬ್ಬ ರಾಜನು ಹಿಡಿದೊಯ್ಯುತ್ತಿದ್ದಾನೆ. ಆ ರಾಜನ ಯಾಗದ ಕುದುರೆಯನ್ನು ಅವನು ಹಿಡಿದು ಏಕಾಂಗಿಯಾಗಿ ಸೇನೆಯನ್ನೆಲ್ಲ ಪುಡಿಗೈದನಂತೆ. ಈಗ ರಾಜನು ಲವನನ್ನು ಮೂರ್ಛೆಗೊಳಿಸಿದನಂತೆ ಜತೆಯ ಹುಡುಗರು ಹೇಳಿದರು. ನೀನೀಗಲೆ ಹೋಗಿ ಅವನ್ನು ಬಿಡಿಸು. ಸರಿಯಾದ ಕಾಲಕ್ಕೆ ಬಂದೆ.' ಎಂದಳು ಸೀತೆ.

'ಅಮ್ಮ, ಲವನು ಈ ಕ್ಷಣದಲ್ಲಿಯೆ ಬಂಧ ಮುಕ್ತನಾದನೆಂದು ತಿಳಿ. ನಾನೀಗಲೆ ಆ ರಾಜನನ್ನೂ ಅವನ ಸೇನೆಯನ್ನೂ ಧ್ವಂಸ ಮಾಡುವೆನು. ಅವನ ಸಹಾಯಕ್ಕೆ ದೇವತೆಗಳೆ ಬರಲಿ. ಸಾಕ್ಷಾತ್ ರುದ್ರನೆ ಬರಲಿ ನನ್ನ ಬಾಣಗಳ ಸಹಾಯದಿಂದ ಲವನನ್ನು ಬಿಡಿಸಿಕೊಂಡು ಬರುವೆನು. ಅಮ್ಮ. ಲವನು ಮೂರ್ಛೆಗೊಂಡನೆಂದು ಅಳಬೇಡ. ವೀರರಿಗೆ ಅದರಿಂದಲೆ ಕೀರ್ತಿ. ಪಲಾಯನ ಮಾಡಿದರೆ ಅಪಕೀರ್ತಿ. ನನಗೀಗ ಕವಚ ಧನುರ್ಬಾಣಗಳನ್ನೂ, ಖಡ್ಗ ಶಿರಸ್ತ್ರಾಣಗಳನ್ನೂ ಕೊಡು. ಈಗಲೆ ರಣರಂಗಕ್ಕೆ ಹೋಗಿ ಲವನನ್ನು ಬಿಡಿಸಕೊಂಡು ಬರುವೆ. ಇಲ್ಲದಿದ್ದರೆ ನಿನ್ನ ಪಾದಗಳು ನನ್ನಲ್ಲಿ ಕೋಪಗೊಳ್ಳಲಿ.'

ಕುಶನ ಈ ಮಾತನ್ನು ಕೇಳಿ ಜಾನಕಿ ಸಂತೋಷದಿಂದ ಎಲ್ಲ ಅಸ್ತ್ರಗಳನ್ನೂ ಕೊಟ್ಟು ಜಯಶಾಲಿಯಾಗೆಂದು ಆಶೀರ್ವದಿಸಿ ಕಳಿಸಿದಳು. ಅವನು ವೇಗವಾಗಿ ರಣರಂಗಕ್ಕೆ ಧಾವಿಸಿದ. ಆಗ ತಾನೆ ಎಚ್ಚತ್ತಿದ್ದ ಲವನು ಅಣ್ಣನನ್ನು ಕಂಡು ಗಾಳಿ ಬೀಸಿದಾಗ

ಪ್ರಜ್ವಲಿಸುವ ಅಗ್ನಿಯಂತೆ ಎದ್ದು ರಥದಿಂದ ಕೆಳಕ್ಕೆ ಹಾಕಿ ಯುದ್ಧಕ್ಕೆ ನಿಂತ. ಶತ್ರುಘ್ನನ ಪಡೆಗೆ ಪೂರ್ವ ದಿಕ್ಕಿನಲ್ಲಿ ಸಮಸ್ತ ಪ್ರಪಂಚವನ್ನೆ ಸಂಹರಿಸುವ ಕಾಲ ಯಮನಂತೆ ಕುಶನು ನಿಂತ. ಪಶ್ಚಿಮದಲ್ಲಿ ಲವನು ಎಲ್ಲರನ್ನೂ ಕೊಲ್ಲತೊಡಗಿದ. ಸೇನೆಯು ಆಗ ಅಲ್ಲೋಲ ಕಲ್ಲೋಲವಾಯಿತು.

ಶತ್ರುಘ್ನನು ಕುಶನ ಮುಂದೆ ನಿಂತು ಹೇಳಿದ 'ನೀನು ಯಾರು? ನಿನ್ನ ಹೆಸರು ಏನು ? ತಾಯಿ ತಂದೆಗಳು ಯಾರು ? ಬ್ರಾಹ್ಮಣರು ವಾಸ ಮಾಡುವ ಕಾಡಿನಲ್ಲಿ ನೀನೇಕೆ ಇರುವೆ ? ಎಲ್ಲವನ್ನೂ ಹೇಳು. ಬಳಿಕ ನಿನ್ನೊಡನೆ ನಾನು ಯುದ್ಧ ಮಾಡುವೆನು'. ಕುಶನೆಂದ 'ಪತಿವ್ರತೆಯಾದ ಸೀತೆ ನಮ್ಮನ್ನು ಹಡೆದವಳು. ತಂದೆ ತಾಯಿಗಳ ಬಗ್ಗೆ ಇಷ್ಟು ಮಾತ್ರ ಹೇಳಬಲ್ಲೆ. ಮಹರ್ಷಿ ವಾಲ್ಮೀಕಿ ಮತ್ತು ತಾಯಿ ಸೀತೆಯರ ಪಾದಸೇವೆ ಮಾಡುತ್ತ ಸರ್ವವಿದ್ಯಾಪ್ರವೀಣರಾಗಿ ಕುಶ-ಲವರೆಂದು ನಾವು ಇಬ್ಬರು ಅಣ್ಣತಮ್ಮಂದಿರು ಪ್ರಸಿದ್ಧರಾಗಿದ್ದೇವೆ. ಈಗ ನೀನಾರು ಹೇಳು, ಕುದುರೆಯನ್ನು ಬಿಟ್ಟಿದ್ದೇಕೆ ? ಸೈನ್ಯವನ್ನು ತಂದು ದಿಗ್ವಿಜಯ ಮಾಡುತ್ತಿರುವುದೇಕೆ ? ನೀವು ವೀರನಾಗಿರುವಿಯಾದರೆ ನನ್ನೊಡನೆ ಯುದ್ಧ ಮಾಡು. ಈಗಲೆ ನಿನ್ನನ್ನು ಕೊಲ್ಲುತ್ತೇನೆ.'

ಶತ್ರುಘ್ನ ಇದನ್ನು ಕೇಳಿ ಇವನು ಸೀತೆಯಲ್ಲಿ ಜನಿಸಿದ ರಾಮಪುತ್ರನೆಂದು ತಿಳಿದು ಮನದೊಳಗೆ ಆಶ್ಚರ್ಯಪಟ್ಟ. ಬಿಲ್ಲಿಗೆ ಹೆದೆಯೇರಿಸಿದ. ಒಡನೆ ಕುಶನೂ ಬಿಲ್ಲನ್ನೆತ್ತಿ ಬಾಣಗಳನ್ನೆಸೆದ. ಒಂದು ಕ್ಷಣದಲ್ಲಿ ಬಾಣ ಪ್ರತಿ ಬಾಣಗಳಿಂದ ಲೋಕವೆಲ್ಲ ತುಂಬಿತು. ಆಗ್ನೇಯಾಸ್ತ್ರ, ವಾರುಣಾಸ್ತ್ರ, ವಾಯವ್ಯಾಸ್ತ್ರ, ಪರ್ವತಾಸ್ತ್ರ, ವಜ್ರಾಸ್ತ್ರಗಳೆಲ್ಲವೂ ಒಂದನ್ನೊಂದು ಹೊಡೆದು ಶಾಂತವಾದವು. ಕುಶನ ನಾರಾಯಣ ಅಸ್ತ್ರವು ನಾರಾಯಣ ರೂಪಿಯಾದ ಶತ್ರುಘ್ನನನ್ನು ಬಾಧಿಸಲಿಲ್ಲ. ಕುಶನ ಕೋಪ ಎಲ್ಲೆ ಮೀರಿತು. 'ಭಯಂಕರವಾದ ನಾರಾಯಣಾಸ್ತ್ರವೂ ನಿನ್ನನ್ನೇನೂ ಮಾಡುತ್ತಿಲ್ಲವೆ ? ಹಾಗಿದ್ದರೆ ನೀನು ಮಹಾ ಬಲ ಪರಾಕ್ರಮಿಯೆ ಸರಿ. ಈಗ ನೋಡು. ಮೂರು ಬಾಣಗಳಲ್ಲಿ ನಿನ್ನನ್ನು ಕೆಡವದಿದ್ದರೆ ಕೋಟಿ ಪುಣ್ಯಗಳಿಂದಲೂ ಅಲಭ್ಯವಾದ ಮನುಷ್ಯ ಜನ್ಮವನ್ನು ಪಡೆದು ಸದುಪಯೋಗ ಮಾಡಿಕೊಳ್ಳದವನ ಪಾಪ ನನಗಾಗಲಿ. ಜಾಗರೂಕನಾಗಿರು. ಈಗಲೆ ನಿನ್ನನ್ನು ಬೀಳಿಸುವೆ' ಎನ್ನುತ್ತ ಕಾಲಾಗ್ನಿಯಂಥ ಘೋರವಾದ ಒಂದು ಬಾಣವನ್ನು ಶತ್ರುಘ್ನನ ವಿಶಾಲವಾದ ದೃಢವಾದ ಎದೆಗೆ ಗುರಿಯಿಟ್ಟ. ಅದು ಹಾವಿನಂತೆ ಬುಸುಗುಟ್ಟುತ್ತ ಬಂದಾಗ ಶತ್ರುಘ್ನನು ರಾಮನನ್ನು ನೆನೆದು ಆ ಬಾಣವನ್ನು ತುಂಡರಿಸಿದ. ಕುಶನ ಎರಡನೇ ಬಾಣವೂ ಹೀಗೆ ಕಡಿದು ಬಿದ್ದಿತು. ಆಗ ಅವನು ತಾಯಿಯ ಪಾದಗಳನ್ನು ನೆನೆದು ಮೂರನೆ ಬಾಣವನ್ನು ಎಸೆದ. ಅದನ್ನೂ ತುಂಡರಿಸಲು ಶತ್ರುಘ್ನನು ಬಾಣ ಹೂಡುವಷ್ಟರಲ್ಲಿ ಅದು ಎದೆಯಲ್ಲಿ ನೆಟ್ಟು ಮೂರ್ಛೆ ತಂದಿತು. ಸೈನ್ಯದಲ್ಲಿ ಹಾಹಾಕಾರವೆದ್ದಿತು. ಕುಶನು ಜಯಶಾಲಿಯಾದ.

ಶತ್ರುಘ್ನನು ಮೂರ್ಛಿತನಾಗಿ ಬಿದ್ದುದನ್ನು ಕಂಡ ಸುರಥ ರಾಜನು ಕುಶನೊಡನೆ ಯುದ್ಧಕ್ಕೆ ನಿಂತ. ಪುಷ್ಕಲನು ಹಿಂದೆ ಲವನಿಂದ ಮೂರ್ಛೆ ಹೊಂದಿದ್ದರೂ ತಿರುಗಿ ಅವನೊಡನೆ ಹೋರಾಡಲು ತೊಡಗಿದ. ಕುಶನು ಸುರಥನ ರಥವನ್ನು ಮುರಿದ. ಧನುಸ್ಸನ್ನು ತುಂಡರಿಸಿದ. ಆದರೂ ಅಸ್ತ್ರ ಪ್ರತ್ಯಸ್ತ್ರಗಳಿಂದ ವೀರರಿಗೆ ಮೈನವಿರೆಬ್ಬಿಸುವ

ತುಮುಲ ಯುದ್ಧವೆ ನಡೆಯಿತು. ಸುರಥನನ್ನು ಪರಾಭವಗೊಳಿಸುವುದು ಸುಲಭವೇನಲ್ಲ ಎಂದೆನಿಸಿತು. ಕೊನೆಗೆ ಚೆನ್ನಾಗಿ ಯೋಚಿಸಿ ಕಾಲಾಗ್ನಿಯಂಥ ಘೋರವಾದ ಒಂದು ಬಾಣವನ್ನೆಸೆದ. ಅದನ್ನೂ ಸುರಥನು ತುಂಡರಿಸಬೇಕೆಂದುಕೊಳ್ಳುವಷ್ಟರಲ್ಲಿ ಅದು ಮೈಮೇಲೆ ಎರಗಿ ಮೂರ್ಛೆ ತಂದಿತು.

ಆಗ ಹನುಮಂತನು ಕುಶನ ಬಳಿಗೆ ಧಾವಿಸಿ ಬಂದ. ಬಲಶಾಲಿಯಾದ ಕಪಿಯೊಂದು ಬಂದು ತನ್ನೆದಿರು ನಿಂತುದನ್ನು ನೋಡಿ ಕುಶನು ಹಲ್ಲು ಕಿರಿದು ಹಾಸ್ಯ ಮಾಡಿದ. 'ಬಾ, ಸಾವಿರ ಬಾಣಗಳನ್ನೆಸೆದು ನಿನ್ನನ್ನು ಯಮಪುರಿಗೆ ಕಳಿಸುವೆ' ಎಂದ. ರಾಮನ ಮಗನೆಂದು ತಿಳಿದ ಹನುಮಂತ ಸ್ವಾಮಿಕಾರ್ಯ ತತ್ಪರನಾಗಿ ಒಂದು ದೊಡ್ಡ ಮತ್ತಿಯ ಮರವನ್ನು ಕಿತ್ತಿ ಕುಶನ ಎದೆಗೆ ಹೊಡೆದ. ಕುಶನು ಮಾತ್ರ ಸ್ವಲ್ಪವೂ ಅಲ್ಲಾಡಲಿಲ್ಲ. ನಗುತ್ತ ನಿಂತ. ಇದನ್ನು ಕಂಡ ವೀರರು ಶ್ಲಾಘಿಸಿದರು. ಬಳಿಕ ಕುಶನು ಸಂಹಾರಾಸ್ತ್ರವನ್ನು ಎಸೆದ. ಹನುಮಂತನು ರಾಮನನ್ನು ಧ್ಯಾನಿಸಿ ತಿರುಗಿ ಮೂರ್ಛೆಯನ್ನು ನಟಿಸಿದ.

ಕುಶನು ಸೈನ್ಯವನ್ನೆಲ್ಲ ನಾಶ ಪಡಿಸುತ್ತಿರುವುದನ್ನು ಕಂಡ ಸುಗ್ರೀವನು ಅನೇಕ ಮರಗಳನ್ನು ಕಿತ್ತಿ ಕುಶಲವರ ಬಳಿಗೆ ಧಾವಿಸಿ ಬಂದ. ಆದರೆ ಅವೆಲ್ಲವನ್ನೂ ಕುಶನು ಅನಾಯಾಸವಾಗಿ ಕತ್ತರಿಸಿದ. ಒಂದು ದೊಡ್ಡ ಬೆಟ್ಟವನ್ನೆ ಎತ್ತಿ ಕುಶನ ತಲೆಯ ಮೇಲೆ ಎಸೆದ ಸುಗ್ರೀವ. ಆದರೆ ಅದೂ ಪುಡಿಯಾಯಿತು. ಈಗ ಸುಗ್ರೀವನಿಗೆ ಅರಿವಾಯಿತು. ಈ ಹುಡುಗನನ್ನು ಪರಾಭವಗೊಳಿಸುವ ಆಸೆಯನ್ನು ಬಿಟ್ಟುಬಿಡಬೇಕೆಂದು. ಆದರೂ ಕೋಪ ತಡೆಯಲಾರದೆ ಮತ್ತಿಯ ಮರವನ್ನು ಕಿತ್ತಿ ಬೀಸಿದ. ಕುಶನು ವಾರುಣಾಸ್ತ್ರವನ್ನು ಪ್ರಯೋಗಿಸಿ ಸುಗ್ರೀವನನ್ನು ವರುಣ ಪಾಶದಿಂದ ಬಂಧಿಸಿದ. ಆಗ ಸೈನಿಕರೆಲ್ಲರೂ ಪಲಾಯನ ಮಾಡಿದರು. ಅತ್ತ ಲವನೂ ಪುಷ್ಕಲ, ಅಂಗದ, ಪ್ರತಾಪಾಗ್ರ್ಯ, ವೀರಮಣಿ ಮುಂತಾದ ವೀರರನ್ನು ಸೋಲಿಸಿ ಜಲಶಾಲಿಯಾಗಿ ಕುಶನ ಬಳಿಗೆ ಬಂದ. ಸೋದರಿಬ್ಬರೂ ಸಂತೋಷದಿಂದ ಆಲಿಂಗನೆ ಮಾಡಿ ಮಾತಾಡಿಕೊಂಡರು. 'ಅಣ್ಣ, ನಿನ್ನ ಅನುಗ್ರಹದಿಂದ ಯುದ್ಧ ಸಾಗರವನ್ನು ದಾಟಿ ಬಂದೆ. ಈಗ ರಣಾಂಗಣದಲ್ಲಿ ನಮಗೆ ಆಟದ ಸಾಮಾನುಗಳೇನು ಸಿಗಬಹುದೆಂದು ನೋಡೋಣ.' ಹೀಗೆ ಅನ್ನುತ್ತ ಲವನು ರಾಜರ ಕಿರೀಟಗಳನ್ನು ಎತ್ತಿಕೊಂಡ. ಬಳಿಕ ಇಬ್ಬರೂ ಹನುಮಂತ ಸುಗ್ರೀವರನ್ನು ಕಟ್ಟಿದರು. ಹನುಮಂತನನ್ನು ಬಾಲದಲ್ಲಿ ಹಿಡಿದು 'ಅಣ್ಣ, ಮುನಿ ಕುಮಾರರಿಗೂ ನನಗೂ ಆಟಕ್ಕೆ ಇದು ಬೇಕು. ಇದರ ಬಾಲವನ್ನು ಹಿಡಿದು ನಾವು ಆಡಿಸುವೆವು. ನಮ್ಮ ತಾಯಿಯೂ ನೋಡಿ ಸಂತೋಷಪಡಲಿ. ನಾನಿದನ್ನು ಮನೆಗೆ ಒಯ್ಯುತ್ತೇನೆ' ಎಂದ ಲವ. 'ಸರಿ ಹಾಗಾದರೆ ನಾನು ಈ ಕಪಿಯನ್ನು ಒಯ್ಯುತ್ತೇನೆ' ಎಂದ ಸುಗ್ರೀವನನ್ನು ಕುಶನು ಎಳೆದ. ಹೀಗೆ ಇಬ್ಬರು ಕಪಿಗಳನ್ನೂ ಅವರು ಆಶ್ರಮಕ್ಕೊಯ್ದರು.

ಕಪಿಗಳು ಮಾತನಾಡಿಕೊಂಡರು 'ರಾಜನೆ, ನಮ್ಮಿಬ್ಬರನ್ನೂ ಇವರು ಆಶ್ರಮಕ್ಕೊಯ್ಯುತ್ತಾರೆ. ನಾನು ಹಿಂದೆ ಜಾನಕಿಯನ್ನು ನೋಡಲು ಹೋದಾಗ ನನ್ನ ಪರಾಕ್ರಮವನ್ನು ಕಂಡು ಅವಳು ಸಂತೋಷಗೊಂಡಿದ್ದಳು. ಈಗ ಪಾಶಬದ್ಧನಾಗಿರುವ ನನ್ನನ್ನು ನೋಡಿ ನಗದೆ ಇರುತ್ತಾಳೆಯೆ ? ನನಗೆ ನಾಚಿಕೆಯಾಗುತ್ತದೆ. ಪ್ರಾಣವನ್ನೆ ಬಿಡಬೇಕೆನಿಸುತ್ತದೆ. ಈ ನಡುವೆ ನಾವು ಸೋತು ರಾಮನಿಗೆ ದುಃಖ ಉಂಟು

ಮಾಡುತ್ತಿದ್ದೇವೆ. ಅವನಿನ್ನೇನು ಮಾಡುವನೊ ?' ಆಂಜನೇಯ, ನನಗೂ ಹಾಗೆ ಅನಿಸುತ್ತಿದೆ. ಸೀತೆಯ ಮುಂದೆ ನನ್ನನ್ನು ನಿಲ್ಲಿಸಿದರೆ ನನ್ನ ಪ್ರಾಣವೆ ಹೋಗುತ್ತದೆ.'

ಅಷ್ಟರಲ್ಲಿ ಕುಶ-ಲವರು ಆಶ್ರಮವನ್ನು ಪ್ರವೇಶಿಸಿ ತಾಯಿಯ ಮುಂದೆ ನಿಂತರು. ಅವಳು ಆನಂದದಿಂದ ಮಕ್ಕಳ್ನ ತಬ್ಬಿಕೊಂಡಳು. ಅವರು ಬಾಲದಲ್ಲಿ ಹಿಡಿದೆಳೆದು ತಂದಿದ್ದ ಸುಗ್ರೀವ ಹನುಮಂತರನ್ನು ಕಂಡು ನಕ್ಕು ಹೇಳಿದಳು 'ಮಕ್ಕಳೆ ಆ ಕಪಿಗಳನ್ನು ಬಿಟ್ಟುಬಿಡಿ. ಅವರನ್ನು ನನ್ನನ್ನು ನೋಡಿದರೆ ಲಜ್ಜೆಯಿಂದ ಪ್ರಾಣ ತ್ಯಾಗ ಮಾಡಬಹುದು. ಇವನು ಹನುಮಂತ ಲಂಕೆಯನ್ನು ಸುಟ್ಟ ಕಪಿ. ಇವನು ಸುಗ್ರೀವ, ಕಪಿರಾಜ. ಇವರನ್ನೇಕೆ ಕಟ್ಟಿದಿರಿ ? ಬಾಲವನ್ನು ಏಕೆ ಹಿಡಿದಿರಿ ? ಏನು ಮಾಡಿದರು ?'

ಮಕ್ಕಳು ಹೇಳಿದರು 'ಅಮ್ಮ, ದಶರಥನ ಮಗ ರಾಮನೆಂಬ ಒಬ್ಬ ರಾಜನಂತೆ. ಅವನು ಒಂದು ಕುದುರೆಯ ಹಣೆಗೆ ಚಿನ್ನದ ಪತ್ರವನ್ನು ಕಟ್ಟಿ ಆ ಕುದುರೆಯನ್ನು ಬಿಟ್ಟಿದ್ದಾನೆ. ಪತ್ರದಲ್ಲಿ ಹೀಗಿದೆ - ನನ್ನ ತಾಯಿಯೊಬ್ಬಳೆ ವೀರಮಾತೆ. ಕ್ಷತ್ರಿಯರಾದವರು ಕುದುರೆಯನ್ನು ಹಿಡಿಯಲಿ. ಇಲ್ಲವೆ ನನ್ನ ಪಾದಸೇವೆ ಮಾಡಲಿ ಎಂದು. ಅದನ್ನು ಓದಿದಾಗ ನನಗನಿಸಿತು, ನಮ್ಮ ತಾಯಿ ನೀನು ವೀರಮಾತೆಯಲ್ಲವೆ ? ಆ ರಾಜನಿಗೆಷ್ಟೊಂದು ದರ್ಪ ? ನಾನು ಅದನ್ನು ಸಹಿಸಲಾರದೆ ಕುದುರೆಯನ್ನು ಹಿಡಿದೆ. ಕುಶನು ಅವನ ಸೇನೆಯನ್ನು ನಾಶ ಮಾಡಿದ. ಅಮ್ಮ. ಇದು ರಾಜನ ಕಿರೀಟ. ಇದು ಇನ್ನೊಬ್ಬನದು, ಅವನು ಪುಷ್ಕಲನಂತೆ. ಈ ಕುದುರೆಯೂ ಚೆನ್ನಾಗಿದೆ. ಅಣ್ಣನ ಸವಾರಿಗೆ ಯೋಗ್ಯವಾಗಿದೆ. ಇವರಿಬ್ಬರೂ ಕಪಿಗಳು, ಆಟಕ್ಕಾಗಿ ತಂದೆವು. ಇವರು ನಮ್ಮೊಡನೆ ಕಾದಿದ್ದರು. ನೀನೂ ನೋಡಿ ಆನಂದಪಡು.'

ಸೀತೆ ತನ್ನ ಪತಿದೇವನ ಕುದುರೆ ಇದೆಂದು ತಿಳಿದು ಬೇಗನೆ ಆ ಹನುಮಂತ ಸುಗ್ರೀವರನ್ನು ಬಿಡಿಸಿ ಮಕ್ಕಳಿಗೆ ಬೋಧಿಸಿದಳು. 'ಮಕ್ಕಳೆ, ನೀವು ಅಪರಾಧ ಮಾಡಿದಿರಿ. ರಾಮನ ಕುದುರೆಯನ್ನು ಕಟ್ಟಿದಿರಿ. ಅನೇಕ ವೀರರನ್ನು ಕೆಡವಿ ಈ ಇಬ್ಬರು ಕಪಿಗಳನ್ನ ಹಿಡಿದಿರಿ. ನಿಮ್ಮ ತಂದೆಯ ಯಾಗದ ಕುದುರೆಯನ್ನು ನೀವು ಕಟ್ಟಬಹುದೆ ? ಬಿಟ್ಟುಬಿಡಿ. ರಾಮನ ತಮ್ಮನಾದ ಶತ್ರುಘ್ನನಲ್ಲಿ ಕ್ಷಮೆ ಬೇಡಿ.'

'ಅಮ್ಮ, ಕ್ಷಾತ್ರ ಧರ್ಮದಿಂದ ಅವನನ್ನು ನಾವು ಗೆದ್ದಿರುವಾಗ ಇದರಲ್ಲಿ ನಮ್ಮ ಅಪರಾಧವೇನೂ ಇಲ್ಲ. ನಮಗೆ ಅಧ್ಯಯನಕಾಲದಲ್ಲಿ ವಾಲ್ಮೀಕಿಮುನಿಗಳೆ ಹೇಳಿದರು.

**ದುಷ್ಯಂತೇನ ಸಮಂ ಯುದ್ಧ ಭರತೇನ ಕೃತಂ ಪುರಾ ।**
**ಕಣ್ವಸ್ಯಚಾಶ್ರಮೇ ವಾಹಂ ಧೃತ್ವಾ ಯಾಗ ಕ್ರಿಯೋಚಿತಂ ॥**

ಹಿಂದೆ ಕಣ್ವರ ಆಶ್ರಮದಲ್ಲಿ ಭರತನು ದುಷ್ಯಂತನ ಯಾಗದ ಕುದುರೆಯನ್ನು ಕಟ್ಟಿ ಅವನೊಡನೆ ಯುದ್ಧ ಮಾಡಿದನು. ಆದ್ದರಿಂದ ಮಗನು ತಂದೆಯೊಡನೆ, ತಮ್ಮನು ಅಣ್ಣನೊಡನೆ, ಶಿಷ್ಯನು ಗುರುವಿನೊಡನೆ ಯುದ್ಧ ಮಾಡಿದರೆ ತಪ್ಪಿಲ್ಲವಂತೆ.

ಈಗ ನಿನ್ನ ಆಜ್ಞೆಯಂತೆ ಕುದುರೆಯನ್ನು ಕೊಟ್ಟು ಬಿಡುವೆವು. ಈ ಕಪಿಗಳನ್ನೂ ಬಿಡುವೆವು. ನೀನು ಹೇಳಿದುದನ್ನೆಲ್ಲ ಮಾಡುವೆವು. ಹೀಗೆ ಹೇಳಿ ಮಕ್ಕಳು ಹೊರಟು ಹೋದರು.

ತುಮುಲ ಯುದ್ಧವೆ ನಡೆಯಿತು. ಸುರಥನನ್ನು ಪರಾಭವಗೊಳಿಸುವುದು ಸುಲಭವೇನಲ್ಲ ಎಂದೆನಿಸಿತು. ಕೊನೆಗೆ ಚೆನ್ನಾಗಿ ಯೋಚಿಸಿ ಕಾಲಾಗ್ನಿಯಂಥ ಘೋರವಾದ ಒಂದು ಬಾಣವನ್ನೆಸೆದ. ಅದನ್ನೂ ಸುರಥನು ತುಂಡರಿಸಬೇಕೆಂದುಕೊಳ್ಳುವಷ್ಟರಲ್ಲಿ ಅದು ಮೈಮೇಲೆ ಎರಗಿ ಮೂರ್ಛೆ ತಂದಿತು.

ಆಗ ಹನುಮಂತನು ಕುಶನ ಬಳಿಗೆ ಧಾವಿಸಿ ಬಂದ. ಬಲಶಾಲಿಯಾದ ಕಪಿಯೊಂದು ಬಂದು ತನ್ನಿದಿರು ನಿಂತುದನ್ನು ನೋಡಿ ಕುಶನು ಹಲ್ಲು ಕಿರಿದು ಹಾಸ್ಯ ಮಾಡಿದ. 'ಬಾ, ಸಾವಿರ ಬಾಣಗಳನ್ನೆಸೆದು ನಿನ್ನನ್ನು ಯಮಪುರಿಗೆ ಕಳಿಸುವೆ' ಎಂದ. ರಾಮನ ಮಗನೆಂದು ತಿಳಿದ ಹನುಮಂತ ಸ್ವಾಮಿಕಾರ್ಯ ತತ್ಪರನಾಗಿ ಒಂದು ದೊಡ್ಡ ಮತ್ತಿಯ ಮರವನ್ನು ಕಿತ್ತಿ ಕುಶನ ಎದೆಗೆ ಹೊಡೆದ. ಕುಶನು ಮಾತ್ರ ಸ್ವಲ್ಪವೂ ಅಲ್ಲಾಡಲಿಲ್ಲ. ನಗುತ್ತ ನಿಂತ. ಇದನ್ನು ಕಂಡ ವೀರರು ಶ್ಲಾಘಿಸಿದರು. ಬಳಿಕ ಕುಶನು ಸಂಹಾರಾಸ್ತ್ರವನ್ನು ಎಸೆದ. ಹನುಮಂತನು ರಾಮನನ್ನು ಧ್ಯಾನಿಸಿ ತಿರುಗಿ ಮೂರ್ಛೆಯನ್ನು ನಟಿಸಿದ.

ಕುಶನು ಸೈನ್ಯವನ್ನೆಲ್ಲ ನಾಶ ಪಡಿಸುತ್ತಿರುವುದನ್ನು ಕಂಡ ಸುಗ್ರೀವನು ಅನೇಕ ಮರಗಳನ್ನು ಕಿತ್ತಿ ಕುಶಲವರ ಬಳಿಗೆ ಧಾವಿಸಿ ಬಂದ. ಆದರೆ ಅವೆಲ್ಲವನ್ನೂ ಕುಶನು ಅನಾಯಾಸವಾಗಿ ಕತ್ತರಿಸಿದ. ಒಂದು ದೊಡ್ಡ ಬೆಟ್ಟವನ್ನೆ ಎತ್ತಿ ಕುಶನ ತಲೆಯ ಮೇಲೆ ಎಸೆದ ಸುಗ್ರೀವ. ಆದರೆ ಅದೂ ಪುಡಿಯಾಯಿತು. ಈಗ ಸುಗ್ರೀವನಿಗೆ ಅರಿವಾಯಿತು. ಈ ಹುಡುಗನನ್ನು ಪರಾಭವಗೊಳಿಸುವ ಆಸೆಯನ್ನು ಬಿಟ್ಟುಬಿಡಬೇಕೆಂದು. ಆದರೂ ಕೋಪ ತಡೆಯಲಾರದೆ ಮತ್ತಿಯ ಮರವನ್ನು ಕಿತ್ತಿ ಬೀಸಿದ. ಕುಶನು ವಾರುಣಾಸ್ತ್ರವನ್ನು ಪ್ರಯೋಗಿಸಿ ಸುಗ್ರೀವನನ್ನು ವರುಣ ಪಾಶದಿಂದ ಬಂಧಿಸಿದ. ಆಗ ಸೈನಿಕರೆಲ್ಲರೂ ಪಲಾಯನ ಮಾಡಿದರು. ಅತ್ತ ಲವನೂ ಪುಷ್ಕಲ, ಅಂಗದ, ಪ್ರತಾಪಾಗ್ರ್ಯ, ವೀರಮಣಿ ಮುಂತಾದ ವೀರರನ್ನು ಸೋಲಿಸಿ ಜಲಶಾಲಿಯಾಗಿ ಕುಶನ ಬಳಿಗೆ ಬಂದ. ಸೋದರಿಬ್ಬರೂ ಸಂತೋಷದಿಂದ ಆಲಿಂಗನೆ ಮಾಡಿ ಮಾತಾಡಿಕೊಂಡರು. 'ಅಣ್ಣ, ನಿನ್ನ ಅನುಗ್ರಹದಿಂದ ಯುದ್ಧ ಸಾಗರವನ್ನು ದಾಟಿ ಬಂದೆ. ಈಗ ರಣಾಂಗಣದಲ್ಲಿ ನಮಗೆ ಆಟದ ಸಾಮಾನುಗಳೇನು ಸಿಗಬಹುದೆಂದು ನೋಡೋಣ.' ಹೀಗೆ ಅನ್ನುತ್ತ ಲವನು ರಾಜರ ಕಿರೀಟಗಳನ್ನು ಎತ್ತಿಕೊಂಡ. ಬಳಿಕ ಇಬ್ಬರೂ ಹನುಮಂತ ಸುಗ್ರೀವರನ್ನು ಕಟ್ಟಿದರು. ಹನುಮಂತನನ್ನು ಬಾಲದಲ್ಲಿ ಹಿಡಿದು 'ಅಣ್ಣ, ಮುನಿ ಕುಮಾರರಿಗೂ ನನಗೂ ಆಟಕ್ಕೆ ಇದು ಬೇಕು. ಇದರ ಬಾಲವನ್ನು ಹಿಡಿದು ನಾವು ಆಡಿಸುವೆವು. ನಮ್ಮ ತಾಯಿಯೂ ನೋಡಿ ಸಂತೋಷಪಡಲಿ. ನಾನಿದನ್ನು ಮನೆಗೆ ಒಯ್ಯುತ್ತೇನೆ' ಎಂದ ಲವ. 'ಸರಿ ಹಾಗಾದರೆ ನಾನು ಈ ಕಪಿಯನ್ನು ಒಯ್ಯುತ್ತೇನೆ' ಎಂದ ಸುಗ್ರೀವನನ್ನು ಕುಶನು ಎಳೆದ. ಹೀಗೆ ಇಬ್ಬರು ಕಪಿಗಳನ್ನೂ ಅವರು ಆಶ್ರಮಕ್ಕೊಯ್ದರು.

ಕಪಿಗಳು ಮಾತನಾಡಿಕೊಂಡರು 'ರಾಜನೆ, ನಮ್ಮಿಬ್ಬರನ್ನೂ ಇವರು ಆಶ್ರಮಕ್ಕೊಯ್ಯುತ್ತಾರೆ. ನಾನು ಹಿಂದೆ ಜಾನಕಿಯನ್ನು ನೋಡಲು ಹೋದಾಗ ನನ್ನ ಪರಾಕ್ರಮವನ್ನು ಕಂಡು ಅವಳು ಸಂತೋಷಗೊಂಡಿದ್ದಳು. ಈಗ ಪಾಶಬದ್ಧನಾಗಿರುವ ನನ್ನನ್ನು ನೋಡಿ ನಗದೆ ಇರುತ್ತಾಳೆಯೆ ? ನನಗೆ ನಾಚಿಕೆಯಾಗುತ್ತದೆ. ಪ್ರಾಣವನ್ನೆ ಬಿಡಬೇಕೆನಿಸುತ್ತದೆ. ಈ ನಡುವೆ ನಾವು ಸೋತು ರಾಮನಿಗೆ ದುಃಖ ಉಂಟು

ಮಾಡುತ್ತಿದ್ದೇವೆ. ಅವನಿನ್ನೇನು ಮಾಡುವನೊ ?' ಆಂಜನೇಯ, ನನಗೂ ಹಾಗೆ ಅನಿಸುತ್ತಿದೆ. ಸೀತೆಯ ಮುಂದೆ ನನ್ನನ್ನು ನಿಲ್ಲಿಸಿದರೆ ನನ್ನ ಪ್ರಾಣವೆ ಹೋಗುತ್ತದೆ.'

ಅಷ್ಟರಲ್ಲಿ ಕುಶ-ಲವರು ಆಶ್ರಮವನ್ನು ಪ್ರವೇಶಿಸಿ ತಾಯಿಯ ಮುಂದೆ ನಿಂತರು. ಅವಳು ಆನಂದದಿಂದ ಮಕ್ಕಳ್ನ ತಬ್ಬಿಕೊಂಡಳು. ಅವರು ಬಾಲದಲ್ಲಿ ಹಿಡಿದೆಳೆದು ತಂದಿದ್ದ ಸುಗ್ರೀವ ಹನುಮಂತರನ್ನು ಕಂಡು ನಕ್ಕು ಹೇಳಿದಳು 'ಮಕ್ಕಳೆ ಆ ಕಪಿಗಳನ್ನು ಬಿಟ್ಟುಬಿಡಿ. ಅವರನ್ನು ನನ್ನನ್ನು ನೋಡಿದರೆ ಲಜ್ಜೆಯಿಂದ ಪ್ರಾಣ ತ್ಯಾಗ ಮಾಡಬಹುದು. ಇವನು ಹನುಮಂತ ಲಂಕೆಯನ್ನು ಸುಟ್ಟ ಕಪಿ. ಇವನು ಸುಗ್ರೀವ, ಕಪಿರಾಜ. ಇವರನ್ನೇಕೆ ಕಟ್ಟಿದಿರಿ ? ಬಾಲವನ್ನು ಏಕೆ ಹಿಡಿದಿರಿ ? ಏನು ಮಾಡಿದರು ?'

ಮಕ್ಕಳು ಹೇಳಿದರು 'ಅಮ್ಮ, ದಶರಥನ ಮಗ ರಾಮನೆಂಬ ಒಬ್ಬ ರಾಜನಂತೆ. ಅವನು ಒಂದು ಕುದುರೆಯ ಹಣೆಗೆ ಚಿನ್ನದ ಪತ್ರವನ್ನು ಕಟ್ಟಿ ಆ ಕುದುರೆಯನ್ನು ಬಿಟ್ಟಿದ್ದಾನೆ. ಪತ್ರದಲ್ಲಿ ಹೀಗಿದೆ - ನನ್ನ ತಾಯಿಯೊಬ್ಬಳೆ ವೀರಮಾತೆ. ಕ್ಷತ್ರಿಯರಾದವರು ಕುದುರೆಯನ್ನು ಹಿಡಿಯಲಿ. ಇಲ್ಲವೆ ನನ್ನ ಪಾದಸೇವೆ ಮಾಡಲಿ ಎಂದು. ಅದನ್ನು ಓದಿದಾಗ ನನಗನಿಸಿತು, ನಮ್ಮ ತಾಯಿ ನೀನು ವೀರಮಾತೆಯಲ್ಲವೆ ? ಆ ರಾಜನಿಗೆಷ್ಟೊಂದು ದರ್ಪ ? ನಾನು ಅದನ್ನು ಸಹಿಸಲಾರದೆ ಕುದುರೆಯನ್ನು ಹಿಡಿದೆ. ಕುಶನು ಅವನ ಸೇನೆಯನ್ನು ನಾಶ ಮಾಡಿದ. ಅಮ್ಮ. ಇದು ರಾಜನ ಕಿರೀಟ. ಇದು ಇನ್ನೊಬ್ಬನದು, ಅವನು ಪುಷ್ಕಲನಂತೆ. ಈ ಕುದುರೆಯೂ ಚೆನ್ನಾಗಿದೆ. ಅಣ್ಣನ ಸವಾರಿಗೆ ಯೋಗ್ಯವಾಗಿದೆ. ಇವರಿಬ್ಬರೂ ಕಪಿಗಳು, ಆಟಕ್ಕಾಗಿ ತಂದೆವು. ಇವರು ನಮ್ಮೊಡನೆ ಕಾದಿದ್ದರು. ನೀನೂ ನೋಡಿ ಆನಂದಪಡು.'

ಸೀತೆ ತನ್ನ ಪತಿದೇವನ ಕುದುರೆ ಇದೆಂದು ತಿಳಿದು ಬೇಗನೆ ಆ ಹನುಮಂತ ಸುಗ್ರೀವರನ್ನು ಬಿಡಿಸಿ ಮಕ್ಕಳಿಗೆ ಬೋಧಿಸಿದಳು. 'ಮಕ್ಕಳೆ, ನೀವು ಅಪರಾಧ ಮಾಡಿದಿರಿ. ರಾಮನ ಕುದುರೆಯನ್ನು ಕಟ್ಟಿದಿರಿ. ಅನೇಕ ವೀರರನ್ನು ಕೆಡವಿ ಈ ಇಬ್ಬರು ಕಪಿಗಳನ್ನ ಹಿಡಿದಿರಿ. ನಿಮ್ಮ ತಂದೆಯ ಯಾಗದ ಕುದುರೆಯನ್ನು ನೀವು ಕಟ್ಟಬಹುದೆ ? ಬಿಟ್ಟುಬಿಡಿ. ರಾಮನ ತಮ್ಮನಾದ ಶತ್ರುಘ್ನನಲ್ಲಿ ಕ್ಷಮೆ ಬೇಡಿ.'

'ಅಮ್ಮ, ಕ್ಷಾತ್ರ ಧರ್ಮದಿಂದ ಅವನನ್ನು ನಾವು ಗೆದ್ದಿರುವಾಗ ಇದರಲ್ಲಿ ನಮ್ಮ ಅಪರಾಧವೇನೂ ಇಲ್ಲ. ನಮಗೆ ಅಧ್ಯಯನಕಾಲದಲ್ಲಿ ವಾಲ್ಮೀಕಿಮುನಿಗಳೆ ಹೇಳಿದರು.

**ದುಷ್ಯಂತೇನ ಸಮಂ ಯುದ್ಧ ಭರತೇನ ಕೃತಂ ಪುರಾ ।**
**ಕಣ್ವಸ್ಯಚಾಶ್ರಮೇ ವಾಹಂ ಧೃತ್ವಾ ಯಾಗ ಕ್ರಿಯೋಚಿತಂ ॥**

ಹಿಂದೆ ಕಣ್ವರ ಆಶ್ರಮದಲ್ಲಿ ಭರತನು ದುಷ್ಯಂತನ ಯಾಗದ ಕುದುರೆಯನ್ನು ಕಟ್ಟಿ ಅವನೊಡನೆ ಯುದ್ಧ ಮಾಡಿದನು. ಆದ್ದರಿಂದ ಮಗನು ತಂದೆಯೊಡನೆ, ತಮ್ಮನು ಅಣ್ಣನೊಡನೆ, ಶಿಷ್ಯನು ಗುರುವಿನೊಡನೆ ಯುದ್ಧ ಮಾಡಿದರೆ ತಪ್ಪಿಲ್ಲವಂತೆ.

ಈಗ ನಿನ್ನ ಆಜ್ಞೆಯಂತೆ ಕುದುರೆಯನ್ನು ಕೊಟ್ಟು ಬಿಡುವೆವು. ಈ ಕಪಿಗಳನ್ನೂ ಬಿಡುವೆವು. ನೀನು ಹೇಳಿದುದನ್ನೆಲ್ಲ ಮಾಡುವೆವು. ಹೀಗೆ ಹೇಳಿ ಮಕ್ಕಳು ಹೊರಟು ಹೋದರು.

ಇತ್ತ ಸೀತೆ ತನ್ನ ಮಕ್ಕಳು ಸೈನ್ಯವನ್ನೆಲ್ಲ ಕೊಂದಿರುವುದನ್ನು ನೆನೆದು ಶ್ರೀರಾಮನನ್ನು ಮನಸ್ಸಿನಲ್ಲಿ ಧ್ಯಾನಿಸಿ ಕರ್ಮಸಾಕ್ಷಿಯಾದ ಸೂರ್ಯನನ್ನು ನೋಡುತ್ತ ಪ್ರಾರ್ಥಿಸಿದಳು. 'ನಾನು ತ್ರಿಕರಣಗಳಿಂದಲೂ ರಾಮನನ್ನೆ ಭಜಿಸುತ್ತ ಇನ್ನೊಬ್ಬನನ್ನು ಮನಸ್ಸಿನಲ್ಲಿಯೂ ಚಿಂತಿಸದಿರುವುದು ನಿಜವಾದರೆ ನನ್ನ ಮಕ್ಕಳ ಕೈಯಲ್ಲಿ ಹತರಾದ ಮೂರ್ಛಿತರಾದ ಎಲ್ಲ ರಾಜರೂ ವೀರರೂ ಬದುಕಲಿ.' ಅಷ್ಟರಲ್ಲಿ ರಣರಂಗದಲ್ಲಿ ಬಿದ್ದಿದ್ದ ವೀರರೆಲ್ಲರೂ ಎದ್ದು ನಿಂತರು.

**ಶೇಷ ಉವಾಚ**

**ಶೇಷ :-** ಶತ್ರುಘ್ನನು ಮೂರ್ಛೆಯಿಂದೆದ್ದು ನೋಡಿದಾಗ ತನ್ನ ಸೇನೆ ಎಲ್ಲವೂ ಬದುಕಿಕೊಂಡಿತ್ತು. ಕುದುರೆಯೂ ಕಣ್ಣ ಮುಂದೆ ನಿಂತಿತ್ತು. ತನ್ನ ಕಿರೀಟ ಮಾತ್ರ ಕಳೆದುಹೋಗಿತ್ತು. ಎಲ್ಲವೂ ವಿಚಿತ್ರವೆನಿಸಿತು. ಬಳಿಯಲ್ಲಿದ್ದ ಅಮಾತ್ಯ ಸುಮತಿ ಮೂರ್ಛೆ ಹೊಂದಿರಲಿಲ್ಲ. 'ಬಾಲಕನು ದಯೆಯಿಂದ ಕುದುರೆಯನ್ನು ಹಿಂತಿರುಗಿಸಿದ್ದಾನೆ. ಶ್ರೀರಾಮನೂ ಕುದುರೆಗಾಗಿ ಕಾಯುತ್ತಿದ್ದಾನೆ. ನಾವು ಬೇಗನೆ ಹೋಗೋಣ' ಎಂದ.

ಶತ್ರುಘ್ನನು ಇದನ್ನು ಕೇಳಿ ರಥವನ್ನೇರಿ ಕುದುರೆಯನ್ನು ಜತೆಗೆ ಕರೆದುಕೊಂಡು ವೇಗವಾಗಿ ಯಾವ ಭೇರಿ, ಶಂಖನಾದಗಳಿಲ್ಲದೆ ಆಶ್ರಮದಿಂದ ಹೊರಟ. ಹಿಂದಿನಿಂದ ಸೈನ್ಯವೂ ಬಂದಿತು. ಅದರ ಭಾರವನ್ನು ತಡೆಯಲಾರದೆ ಆದಿಶೇಷನೂ ಬಗ್ಗುವಂತಾಯಿತು. ಎಲ್ಲರೂ ಗಂಗಾ ನದಿಯನ್ನು ದಾಟಿ ರಾಜಧಾನಿಯನ್ನು ಪ್ರವೇಶಿಸಿದರು.

ರಾಮನು ಯಾಗದ ಕುದುರೆ ಆಗಮಿಸಿದುದನ್ನು ಕೇಳಿ ಲಕ್ಷ್ಮಣನನ್ನು ಕಳಿಸಿದ. ಅವನು ಶತ್ರುಘ್ನನನ್ನು ಇದಿರುಗೊಂಡು ಸಂತೋಷದಿಂದ ಆಲಿಂಗಿಸಿ ಕುಶಲ ಪ್ರಶ್ನೆಮಾಡಿದ. ಬಳಿಕ ಅವನೊಂದಿಗೆ ರಥದಲ್ಲಿ ಕುಳಿತು ಎಲ್ಲ ಸೇನೆಯೊಂದಿಗೆ ಯಜ್ಞ ಮಂಟಪಕ್ಕೆ ಆಗಮಿಸಿ.

ಯಜ್ಞಮಂಟಪವು ಸರಯೂ ನದೀ ತೀರದಲ್ಲಿತ್ತು.

**ಸರಯೂಃ ಪುಣ್ಯ ಸಲಿಲಾ ಪವಿತ್ರಿತ ಜಗತ್ರಯಾ ।**
**ರಾಮಪಾದರಜಃ ಪೂತಾ ಶರಚ್ಚಂದ್ರನಿಭಪ್ರಭಾ ॥**

ಸರಯೂ ನದಿಯ ನೀರು ಪುಣ್ಯಕರ. ಮೂಲೋಕವನ್ನೂ ಪಾವನಗೊಳಿಸುತ್ತದೆ. ರಾಮನ ಪಾದ ಧೂಳಿಯಿಂದ ತಾನು ಪಾವನವಾಗಿದೆ. ಶರತ್ಕಾಲದ ಚಂದ್ರನಂತೆ ಬಿಳಿಯಾಗಿದೆ.

ಹಂಸ ಬಕ ಚಕ್ರವಾಕ ಮುಂತಾದ ವಿಚಿತ್ರ ಬಣ್ಣದ ನಾನಾ ವಿಧವಾದ ಪಕ್ಷಿಗಳು ಈ ನದಿಯಲ್ಲಿದ್ದು ಒಳ್ಳೆಯ ಧ್ವನಿಯನ್ನು ಮಾಡುತ್ತವೆ.

ಈ ನದಿಯ ದಡದಲ್ಲಿ ರಾಮನ ಅಶ್ವಮೇಧಯಾಗದ ಮಂಟಪಗಳು ಬಹು ಸಂಖ್ಯೆಯಲ್ಲಿ ನಿರ್ಮಿತವಾಗಿದ್ದವು. ಬಿಲ್ಲನ್ನು ಹಿಡಿದು ಠೇಂಕಾರ ಮಾಡಿ ಭೂತಲದಲ್ಲೆಲ್ಲ ಅದರ ಧ್ವನಿಯನ್ನು ತುಂಬುವ ಕ್ಷತ್ರಿಯರು ವೇದಪಾಠ ಮಾಡುವ ಬ್ರಾಹ್ಮಣರು ಎಲ್ಲೆಡೆ ತುಂಬಿದ್ದರು. ಬ್ರಾಹ್ಮಣರು ಪರಸ್ಪರ ವಿನೋದವಾಗಿ ಮಾತನಾಡುತ್ತ ಆನಂದದಿಂದ ಭೋಜನ ಮಾಡುತ್ತಿದ್ದರು. ಬೆಳದಿಂಗಳಿನಂತೆ ಬಿಳಿಯಾದ ಅನ್ನ, ಹಾಲು, ತುಪ್ಪ, ಸಕ್ಕರೆ,

ಜೇನು ಅಪೂಪ, ಫೇಣಿ, ಒಡೆ, ಮಂಡಿಗೆ, ಚಕ್ಕುಲಿ ಮುಂತಾದ ಘಮಘಮಿಸುವ ಭಕ್ಷ್ಯ ಭೋಜ್ಯಗಳನ್ನುಣ್ಣುತ್ತಿದ್ದರು. ಪಾಯಸವನ್ನು ಬಡಿಸಿದಾಗ ಅದು ಕತ್ತಲೆಗೆ ಹೆದರಿ ಬಿದ್ದ ಚಂದ್ರನೆಂದರು ಕೆಲವರು. ಛೆ, ಛೆ, ಚಂದ್ರನೊಬ್ಬನೆ ಆಕಾಶದಲ್ಲಿರುವನು. ಇಲ್ಲಿ ಸಾವಿರಾರು ತಟ್ಟೆಗಳಲ್ಲಿ ಒಬ್ಬ ಚಂದ್ರನು ಬಂದು ಬೀಳಲು ಸಾಧ್ಯವೆ ? ಆದ್ದರಿಂದ ಕುಮುದವೊ ಕರ್ಪೂರವೊ ಇರಬೇಕು ಎಂದರು ಕೆಲವರು. ಕ್ಷೀರಕಂದದ ರಸದಿಂದ ಮಾಡಿದ ಭಕ್ಷ್ಯವಿದು ಎಂದರು ಇನ್ನು ಕೆಲವರು. ಕಂದ ಮೂಲ ಫಲಗಳನ್ನೆ ತಿಂದು ಅಭ್ಯಾಸವಾಗಿರುವುದರಿಂದ ಅವರು ಈ ತೀರ್ಮಾನಕ್ಕೆ ಬಂದರು.

ರಸವತ್ತಾದ ಮೃಷ್ಟಾನ್ನ ಭೋಜನ ಮಾಡುವಾಗ ಒಬ್ಬ ಬ್ರಾಹ್ಮಣನೆಂದ 'ಕ್ಷತ್ರಿಯನ ಜನ್ಮ ಸಾರ್ಥಕ. ಇಂಥ ಭೋಜನವನ್ನು ನೀಡುತ್ತಾನೆ. ಪುಣ್ಯವಂತ. ಆಗ ಇನ್ನೊಬ್ಬ ಬ್ರಾಹ್ಮಣನೆಂದ 'ಹಿಂದಿನ ಜನ್ಮದಲ್ಲಿ ಇಂಥ ಷಡ್ರಸಾನ್ನ ಮಾಡಿದ್ದರೆ ಈ ಜನ್ಮದಲ್ಲಿ ಅದು ನಮಗೇ ಸಿಗುತ್ತದೆ. ಹರಿಗೆ ನೈವೇದ್ಯವನ್ನು ಅರ್ಪಿಸದಿದ್ದರೆ, ಯೋಗ್ಯ ಬ್ರಾಹ್ಮಣರಿಗೆ ದಾನ ಮಾಡದಿದ್ದರೆ ಅದೆಲ್ಲಿ ಸಿಗುತ್ತದೆ ? ಕಣ್ಣಿಂದ ನೋಡಲು ಸಿಗಲಾರದು.' ಹೀಗೆ ಮಧುರವಾದ ಅನ್ನವನ್ನುಂಡು ತೃಪ್ತರಾದ ಬ್ರಾಹ್ಮಣರು ಮಂಟಪದಲ್ಲಿ ಕುಳಿತು ಶಬ್ದ ಬ್ರಹ್ಮವನ್ನು ಪಠಿಸಿದರು.

ಪುಷ್ಕಲನೊಂದಿಗೆ ಶತ್ರುಘ್ನನು ಬಂದಾಗ ರಾಮನಿಗಾದ ಆನಂದಕ್ಕೆ ಪಾರವೆ ಇರಲಿಲ್ಲ. ಅಡಿಗೆರಗಿದ ಸೋದರನನ್ನೆತ್ತಿ ಆಲಿಂಗಿಸಿ ಅವನ ತಲೆಯನ್ನು ಆನಂದ ಬಾಷ್ಪದಿಂದ ತೋಯಿಸಿದ. ಪುಷ್ಕಲ, ಹನುಮಂತ, ಸುಗ್ರೀವ, ಅಂಗದ, ಲಕ್ಷ್ಮೀನಿಧಿ, ಪ್ರತಾಪಾಗ್ರ್ಯ, ಸುಬಾಹು, ಸುಮದ, ವಿಮಲ, ನೀಲರತ್ನ, ಸತ್ಯವಂತ, ವೀರಮಣಿ, ಸುರಥ ಮುಂತಾದವರನ್ನು ಪ್ರೀತಿಯಿಂದ ಆಲಿಂಗಿಸಿದ. ಅಮಾತ್ಯ ಸುಮತಿಯನ್ನು ಆಲಿಂಗಿಸಿ ಕೇಳಿದ 'ಅಮಾತ್ಯ, ಈ ರಾಜರೆಲ್ಲ ಯಾರು ? ಇಲ್ಲಿಗೆ ಹೇಗೆ ಬಂದರು ? ಕುದುರೆ ಎಲ್ಲೆಲ್ಲಿ ಸಂಚರಿಸಿತು ? ಯಾರು ಕಟ್ಟಿದರು ? ಶತ್ರುಘ್ನನು ಹೇಗೆ ಬಿಡಿಸಿದ ? ಎಲ್ಲವನ್ನೂ ಹೇಳು.

ಸುಮತಿ ಹೇಳತೊಡಗಿದ 'ಸರ್ವಜ್ಞನಾದ ನಿನಗೆ ನಾನೇನು ಹೇಳಲಿ. ಲೋಕ ರೀತಿಯಿಂದ ಕೇಳುವಿ. ನಿನ್ನಾಜ್ಞೆಯನ್ನು ಶಿರಸಾವಹಿಸಿ ಹೇಳುತ್ತೇನೆ ಕೇಳು. ನಿನ್ನ ಅನುಗ್ರಹ ಬಲದಿಂದ ಭೂತಲದಲ್ಲೆಲ್ಲ ಸುತ್ತಿತು. ಯಾರೂ ದರ್ಪದಿಂದ ಕಟ್ಟಲಿಲ್ಲ. ತಮ್ಮ ತಮ್ಮ ರಾಜ್ಯವನ್ನು ಸಮರ್ಪಿಸಿ ನಿನ್ನ ಪಾದಕಮಲಗಳಿಗೆ ಮಣಿದರು. ರಾವಣಾಂತಕನಾದ ನಿನ್ನ ಕುದುರೆಯನ್ನು ದೇವತೆಗಳಲ್ಲಿಯೂ ಯಾರು ಹಿಡಿದುಕೊಳ್ಳಬಲ್ಲರು ?

ಅಹಿಚ್ಛತ್ರಪುರದಲ್ಲಿ ರಾಜ ಸುಮದನು ರಾಜ್ಯವನ್ನು ಅರ್ಪಿಸಿ ನಿನ್ನ ದರ್ಶನಕ್ಕಾಗಿ ಬಂದಿದ್ದಾನೆ, ನಮಸ್ಕರಿಸುತ್ತಿದ್ದಾನೆ. ಜಗದಂಬೆಯನ್ನು ಒಲಿಸಿ ಅವಳಿಂದ ಸಮೃದ್ಧವಾದ ರಾಜ್ಯವನ್ನು ಅವನು ನಿನಗಿತ್ತಿದ್ದಾನೆ. ಅನಂತರ ಕುದುರೆ ಸುಬಾಹುವಿನ ನಗರಕ್ಕೆ ಹೋದಾಗ ಅವನ ಮಗ ದಮನನು ಅದನ್ನು ಕಟ್ಟಿ ಪುಷ್ಕಲನೊಡನೆ ಯುದ್ಧ ಮಾಡಿ ಮೂರ್ಛೆ ಹೊಂದಿದ. ಸುಬಾಹು ಹನುಮಂತನೊಡನೆ ಯುದ್ಧ ಮಾಡಿ ಅವನ ಕಾಲಿನ ಒದೆತದಿಂದ ಮುನಿ ಶಾಪವನ್ನು ಕಳೆದುಕೊಂಡು ಜ್ಞಾನೋದಯ ಹೊಂದಿದ. ನಿನಗೆ ತನ್ನ ಸರ್ವಸ್ವವನ್ನೂ ಸಮರ್ಪಿಸಿ ಕುದುರೆಯ ರಕ್ಷಣೆಗಾಗಿ ನಮ್ಮೊಡನೆ ಬಂದ. ಅವನೂ

ನಮಸ್ಕರಿಸುತ್ತಿದ್ದಾನೆ. ದಯಾದೃಷ್ಟಿಯಿಂದ ನೋಡು. ಬಳಿಕ ಕುದುರೆ ರೇವಾ ನದಿಯ ಮಡುವಿನಲ್ಲಿ ಮುಳುಗಿದಾಗ ಶತ್ರುಘ್ನನು ನೀರನ್ನು ಹೊಕ್ಕು ಒಳಗಿದ್ದ ಯೋಗಿನಿಯರಿಂದ ಮೋಹನಾಸ್ತ್ರವನ್ನು ಪಡೆದ. ಬಳಿಕ ಕುದುರೆ ದೇವಪುರಕ್ಕೆ ಹೋಯಿತು. ಅಲ್ಲಿ ಶಿವನಿದ್ದ. ನೀನೂ ಅಲ್ಲಿಗೆ ಬಂದೆ. ಅಲ್ಲಿ ನಡೆದುದೆಲ್ಲ ನಿನಗೆ ಗೊತ್ತು. ಬಳಿಕ ವಿದ್ಯುನ್ಮಾಲಿಯ ವಧೆ. ಸತ್ಯವಂತನೊಡನೆ ಸೇರಿದ್ದು. ಸುರಥನೊಡನೆ ಯುದ್ಧ. ಇದು ನಿನಗೆ ಗೊತ್ತು ಇದಾದ ಮೇಲೆ ಯಾವ ರಾಜನೂ ನಿನ್ನ ಕುದುರೆಯನ್ನು ಕಟ್ಟಲಿಲ್ಲ. ವಾಲ್ಮೀಕಿ ಮುನಿಯ ಸುಂದರವಾದ ಆಶ್ರಮದಲ್ಲಿ ಒಂದು ಆಶ್ಚರ್ಯಕರವಾದ ಸಂಗತಿ ನಡೆಯಿತು.

ಹದಿನಾರು ವರ್ಷದ ಬಾಲಕ. ನಿನ್ನಂತೆ ಕಾಣುತ್ತಾನೆ. ಅವನು ಕುದುರೆಯ ಹಣೆಯ ಪತ್ರವನ್ನು ಓದಿ ಕುದುರೆಯನ್ನು ಹಿಡಿದ. ಕಾಲಜಿತ್ತಿಯೊಡನೆ ಘೋರ ಯುದ್ಧಮಾಡಿ ಅವನನ್ನು ಖಡ್ಗದಿಂದ ಹೊಡೆದು ಕೊಂದ. ಪುಷ್ಕಲನನ್ನೂ ಮೂರ್ಛೆಗೊಳಿಸಿದ ಶತ್ರುಘ್ನನ್ನು ಅವನೊಡನೆ ಹೋರಾಡಿ ಮೊದಲಿಗೆ ತಾನೆ ಮೂರ್ಛೆಗೊಂಡರೂ ಎದ್ದು ಅವನನ್ನು ಮೂರ್ಛೆಗೊಳಿಸಿದ. ಅಷ್ಟರಲ್ಲಿ ಇನ್ನೊಬ್ಬ ಬಾಲಕನು ಬಂದು ಯುದ್ಧಕ್ಕೆ ನಿಂತ ಮೂರ್ಛೆಗೊಂಡ ಬಾಲಕನೂ ಎದ್ದು ಅವನೊಂದಿಗೆ ಸೇರಿದ. ಇಬ್ಬರೂ ಸೇರಿ ನಿನ್ನ ಸೇನೆಯನ್ನು ನಾಶ ಮಾಡಿದರು. ಮೂರ್ಛಿತರಾಗಿ ಬಿದ್ದವರು ಶಸ್ತ್ರ ಆಭರಣಗಳನ್ನು ತೆಗೆದುಕೊಂಡರು ಹನುಮಂತ ಸುಗ್ರೀವರನ್ನು ಕಟ್ಟಿದರು. ಆಶ್ರಮಕ್ಕೊಯ್ದರು. ಬಳಿಕ ದಯೆಯಿಂದ ಕುದುರೆಯನ್ನು ಹಿಂತಿರುಗಿಸಿದರು. ಸೈನ್ಯದಲ್ಲಿ ಸತ್ತವರನ್ನೆಲ್ಲ ಬದುಕಿಸಿದರು. ಈಗ ನಾವು ಬಂದಿರುವುದು ಆಶ್ರಮದಿಂದ.

**ಶೇಷ ಉವಾಚ**

**ಶೇಷ** :- ವಾಲ್ಮೀಕಿಯಾಶ್ರಮದ ಮಕ್ಕಳೆಂದು ಸುಮತಿ ಹೇಳುತ್ತಿರುವುದು ತನ್ನ ಮಕ್ಕಳನ್ನೆ ಎಂದು ತಿಳಿದ ರಾಮನು ವಾಲ್ಮೀಕಿ ಮುನಿಯನ್ನು ಕೇಳಿದನು.

**ಶ್ರೀರಾಮ** :- ಮುನಿಯೆ, ನಿನ್ನ ಆಶ್ರಮದಲ್ಲಿರುವ ಆ ಮಕ್ಕಳು ಯಾರು ? ನನ್ನಂತೆ ಇರುವವರು, ಶೂರರು, ಧರ್ನುವಿದ್ಯಾ ವಿಶಾರದರು. ಶತ್ರುಘ್ನ ಹನುಮಂತರನ್ನೂ ಅನಾಯಾಸವಾಗಿ ಜಯಿಸಿದವರು ಎಂದು ಸುಮತಿ ಹೇಳುವುದನ್ನು ಕೇಳಿ ನನಗೆ ಆಶ್ಚರ್ಯ ಉಂಟಾಗಿದೆ. ಮುನಿಯೆ ಹೇಳು, ಅವರು ನಿನ್ನ ಆಶ್ರಮದಲ್ಲಿ ಏಕೆ ಇದ್ದಾರೆ ?

**ವಾಲ್ಮೀಕಿ** :- ಅಂತರ್ಯಾಮಿಯಾದ ನೀನು ಈ ಮಾನವರ ಬಗ್ಗೆ ತಿಳಿಯದುದು ಏನಿದೆ ? ಆದರೂ ನಿನ್ನ ಸಂತೋಷಕ್ಕಾಗಿ ಹೇಳುವೆನು ಕೇಳು. ಅವರು ಇಬ್ಬರೂ ಕ್ಷತ್ರಿಯರು. ಹಿಂದೆ ನೀನು ನಿರಪರಾಧಿನಿಯಾದ ಸೀತೆಯನ್ನು ಭಯಂಕರವಾದ ಕಾಡಿನಲ್ಲಿ ಬಿಟ್ಟಾಗ ಅವಳು ಗರ್ಭಿಣಿ, ಅಳುತ್ತ, ಮೂರ್ಛೆ ಹೊಂದುತ್ತ ಇದ್ದ ಅವಳನ್ನು ನಾನು ನನ್ನ ಆಶ್ರಮಕ್ಕೆ ಕರೆದೊಯ್ದೆನು. ಮುನಿಕುಮಾರರು ಅವಳಿಗೊಂದು ಪರ್ಣಶಾಲೆಯನ್ನು ಕಟ್ಟಿಕೊಟ್ಟರು. ಅಲ್ಲಿ ಹುಟ್ಟಿದ ಮಕ್ಕಳೆ ಇವರು. ನಿನ್ನಂತೆ ಇದ್ದಾರೆ. ಅವರಿಗೆ ಕುಶ-ಲವರೆಂದು ನಾಮಕರಣ ಮಾಡಿದೆ. ಉಪನಯನ ಮಾಡಿ ಸಾಂಗ ವೇದಗಳನ್ನೂ ಆಯುರ್ವೇದ ಧನುರ್ವೇದ ಮುಂತಾದ ವಿದ್ಯೆಗಳನ್ನು ಕಲಿಸಿದೆ. ಸಂಗೀತದಲ್ಲಿಯೂ ವಿಶಾರದರನ್ನಾಗಿ ಮಾಡಿದೆ.

ಅವರು ಗಂಗಾ ನದಿಯ ತೀರದಲ್ಲಿ ಲತಾಕುಂಜಗಳಲ್ಲಿ ಹಾಡುತ್ತಿರುತ್ತಾರೆ. ಚಂಚಲ ಸ್ವಭಾವದವರು. ಎಲ್ಲ ವಿದ್ಯೆಯಗಳಲ್ಲಿಯೂ ನಿಪುಣರು. ನನಗೆ ಅವರನ್ನು ನೋಡಿ ತುಂಬ ಸಂತೋಷವಾಯಿತು. ಎಲ್ಲ ಶಸ್ತ್ರಗಳನ್ನೂ ಅವರಿಗಿತ್ತು ತಲೆಯ ಮೇಲೆ ಕೈಯಿಟ್ಟು ಹರಸಿದೆ. ಅವರ ಗಾನ ಕೌಶಲ್ಯಕ್ಕೆ ಲೋಕವೆ ಬೆರಗಾಗುತ್ತದೆ. ನಾನು ಸದಾ ಅವರಿಂದ ಹಾಡಿಸಿ ಕೇಳುತ್ತೇನೆ. ಭವಿಷ್ಯ ಜ್ಞಾನದಿಂದ ನಾನು ಹಿಂದೆಯೆ ರಾಮಾಯಣವನ್ನು ರಚಿಸಿದ್ದೆ. ಅದನ್ನೂ ಅವರಿಗೆ ಕಲಿಸಿದೆ. ವೀಣೆ ಮೃದಂಗ ಮುಂತಾದವುಗಳನ್ನು ಬಾರಿಸುತ್ತ ಅವರು ರಾಮಾಯಣವನ್ನು ಹಾಡಿದರೆ ಕಾಡಿನ ಮೃಗಪಕ್ಷಿಗಳೂ ಮೈಮರೆಯುತ್ತವೆ. ಬಾಲಕರ ವಯಸ್ಸು, ರೂಪ, ಕಂಠ ಎಲ್ಲವೂ ಮನೋಹರ, ಮಧುರ, ನಿನ್ನ ಚರಿತ್ರೆಯೂ ಪರಮ ಮಧುರ, ರಮ್ಯ, ಪವಿತ್ರ. ಅದನ್ನು ಅವರ ಬಾಯಿಂದ ಕೇಳುವ ಕುತೂಹಲ ಒಮ್ಮೆ ವರುಣನಿಗೂ ಉಂಟಾಯಿತು. ಅವರನ್ನು ಕರೆಸಿಕೊಂಡು ಒಂದುರಾತ್ರಿ ಇಡಿ ರಾಮಾಯಣವನ್ನು ಹಾಡಿಸಿ ಕೇಳಿದ. ವರುಣನೂ ಮಿತ್ರನೂ ಅವರ ಕುಟುಂಬದವರೂ ಅಮೃತರಸಕ್ಕಿಂತ ಮಧುವರಾದ ನಿನ್ನ ಚರಿತ್ರೆಯನ್ನು ಬಾಲಕರ ಮಧುರ ಕಂಠದಿಂದ ಕೇಳಿ ಆನಂದಪರವಶರಾಗಿ ಮೈಮರೆತರು. ಮನೋಹರವಾದ ಮಹಾಭೋಗವಸ್ತುಗಳನ್ನು ನೀಡಿದರು. ಬಳಿಕ ಅವರನ್ನು ಆಶ್ರಮಕ್ಕೆ ಹಿಂತಿರುಗಿ ಕಳಿಸಲು ಒಪ್ಪಲಿಲ್ಲ. ಅಲ್ಲಿಯೇ ಇರುವಂತೆ ಬಾಲಕರ ಮನವೊಲಿಸಲು ತೊಡಗಿದರು. 'ಗುರುವಿನಾಜ್ಞೆ ಇದೆ, ನಮಗಾಗಿ ನಮ್ಮನ್ನು ಕಾಯುತ್ತಿದ್ದಾರೆ. ನಾವು ಹೋಗಬೇಕು' ಎಂದು ಹೇಳಿದರೂ ಅವರು ಮಕ್ಕಳನ್ನು ಕಳಿಸಲಿಲ್ಲ. ಕೊನೆಗೆ ನಾನೆ ವರುಣ ಲೋಕಕ್ಕೆ ಹೋದೆ. ನನಗೆ ಪ್ರೀತಿಯಿಂದ ಸತ್ಕಾರ ಮಾಡಿದ ವರುಣ. ಮಕ್ಕಳ ಹುಟ್ಟು ಬೆಳವಣಿಗೆ ಮುಂತಾದವುಗಳ ಬಗ್ಗೆ ನನ್ನನ್ನು ಕೇಳಿದ. ಅವನು ಸರ್ವಜ್ಞ. ಆದರೂ ನನ್ನನ್ನು ಕೇಳಿದ್ದರಿಂದ ಎಲ್ಲವನ್ನೂ ಹೇಳಿದೆ. ಸೀತೆಯ ಮಕ್ಕಳು ಆ ಬಾಲಕರೆಂದು ನಾನು ಹೇಳಿದೊಡನೆ ವರುಣನು ಆನಂದದಿಂದ ಅವರಿಗೆ ವಸ್ತ್ರಭೂಷಣಗಳನ್ನಿತ್ತ. ದೇವತೆಗಳು ಕೊಟ್ಟರೆ ಸ್ವೀಕರಿಸಬೇಕು ಎಂದು ನಾನು ಹೇಳಿದ್ದರಿಂದ ಅವರು ಸ್ವೀಕರಿಸಿದರು. ಬಳಿಕ ಸೀತೆಯ ಬಗ್ಗೆ ವರುಣನು ಹೀಗೆ ಹೇಳಿದ - 'ಶ್ರೀರಾಮ, ಪತಿವ್ರತೆಯರಲ್ಲೆ ಮೊದಲಿಗಳು ನಿನ್ನ ಸೀತೆ. ಶೀಲ, ರೂಪ, ವಯಸ್ಸು ಎಲ್ಲವೂ ಇದೆ. ವೀರರಾದ ಪುತ್ರರನ್ನು ಪಡೆದಿದ್ದಾಳೆ. ಎಂದೂ ಚ್ಯುತಿ ಇಲ್ಲದ ಪರಮ ಸಿದ್ಧಿ ಸ್ವರೂಪಳು. ಪಾಮರರಾದ ಜನರು ತಿಳಿಯದೆ ಏನಾದರೂ ಆಡಿದರೆ ಅವಳಿಗೇನೂ ಕುಂದು ಬರಲಾರದು. ಅವಳ ಚಾರಿತ್ರ್ಯ ಪಾವನವಾದುದೆನ್ನಲು ನಾವು ಸಾಕ್ಷಿ. ಅವಳ ಪಾದವನ್ನು ಸ್ಮರಿಸಿದರೆ ಸಾಕು. ಎಲ್ಲ ಅಭೀಷ್ಟಗಳೂ ಸಿದ್ಧಿಸುತ್ತವೆ. ಅವಳ ಸಂಕಲ್ಪದಿಂದಲೆ ಪ್ರಪಂಚದ ಸೃಷ್ಟಿ ಸ್ಥಿತಿ ಲಯಗಳು ಉಂಟಾಗುತ್ತವೆ. ಅವಳೆ ಮೃತ್ಯು, ಅವಳೆ ಅಮೃತ. ಸ್ವರ್ಗ ಮೋಕ್ಷ ದಾನ ತಪಸ್ಸು ಎಲ್ಲವೂ ಅವಳೆ. ಬ್ರಹ್ಮ ಶಿವ ಮತ್ತು ನನ್ನಂಥ ಲೋಕಪಾಲಕರನ್ನು ಅವಳು ನೇಮಿಸಲೂಬಲ್ಲಳು. ಆ ಪದವಿಗಳಿಂದ ಇಳಿಸಲೂಬಲ್ಲಳು. ಎಲ್ಲ ಲೋಕಗಳಿಗೂ ನೀನು ತಂದೆ. ಅವಳು ತಾಯಿ. ಅವಳ ವಿಷಯದಲ್ಲಿ ತಪ್ಪಾಗಿ ತಿಳಿಯುವುದು ಯೋಗ್ಯವಲ್ಲ. ಸರ್ವಜ್ಞನಾದ ನಿನಗೆ ಅವಳು ಪತಿವ್ರತೆಯೆನ್ನುವುದು ಗೊತ್ತು. ನಿನ್ನ ಪ್ರಾಣಕ್ಕಿಂತ ಮಿಗಿಲಾಗಿ ಅವಳನ್ನು ಪ್ರೀತಿಸುತ್ತಿರುವೆ. ಆದ್ದರಿಂದ ನೀನು ಸೀತೆಯನ್ನು ಪರಿಶುದ್ಧಳೆಂದು ಆದರಿಸಬೇಕು. ವಾಲ್ಮೀಕಿ ನನ್ನ ಈ ಮಾತುಗಳನ್ನು ಸ್ವತಃ ನೀನೆ ರಾಮನಿಗೆ ತಿಳಿಸಬೇಕು.'

ಹೀಗೆ ಎಲ್ಲ ಲೋಕಪಾಲಕರೂ, ದೇವ ದಾನವರೂ, ಗಂಧರ್ವರೂ, ನಿನ್ನ ಮಕ್ಕಳಬಾಯಿಯಿಂದ ನಿನ್ನ ಚರಿತ್ರೆಯನ್ನು ಕೇಳಿ ಸಂತೋಷದಿಂದ ಪ್ರಶಂಸೆಮಾಡಿದರು. ಅವರೆಲ್ಲರೂ ಮಕ್ಕಳಿಗೆ ಅನೇಕ ವರಗಳನ್ನಿತ್ತರು. ಎಲ್ಲ ಮುನಿಗಳೂ ಹರಸಿದರು. ಹಿಂದೆ ಜಗತ್ತಿಗೆ ಒಬ್ಬ ರಾಮನಿದ್ದ. ಈಗ ನಿನ್ನ ಮಕ್ಕಳು ಹುಟ್ಟಿದ ಮೇಲೆ ಮೂವರು ರಾಮರಾದರು. ಹಿಂದೆ ಸೌಂದರ್ಯದಲ್ಲಿ ಜಗತ್ತನ್ನು ಮೀರಿಸಿದವ ಒಬ್ಬ ಮನ್ಮಥನಿದ್ದ. ಈಗ ಅವನೊಡನೆ ನೀನೂ ನಿನ್ನ ಮಕ್ಕಳೂ ಸೇರಿ ನಾಲ್ಕು ಮಂದಿಯಾದಿರಿ.

ಮಹಾರಾಜ, ಬೇರೆಲ್ಲಕಡೆ ನಿನ್ನ ಮಕ್ಕಳು ಸಂಗೀತವನ್ನು ಏರ್ಪಡಿಸುತ್ತಾರೆ. ವಿದ್ವಾಂಸನಾದ ನಿನ್ನ ಬಳಿ ಮಾತ್ರ ಏಕೆ ಅವಕಾಶ ಸಿಗಲಿಲ್ಲ ? ನೀನು ಮಾಡಿದ ಎಲ್ಲ ಕಾರ್ಯಗಳನ್ನೂ ಲೋಕ ಹೊಗಳುತ್ತಿದೆ. ಸೀತಾ ಪರಿತ್ಯಾಗವನ್ನು ಮಾತ್ರ ಯಾರೂ ಒಪ್ಪುವುದಿಲ್ಲ. ಜಗದೊಡೆಯ ನೀನು ಗೃಹಸ್ಥಧರ್ಮವನ್ನು ಆಚರಿಸಿ ತೋರಿಸುವವ. ವಿದ್ಯೆ ಶೀಲ ಗುಣಗಳೆಲ್ಲವನ್ನೂ ಪಡೆದಿರುವ ನಿನ್ನ ಮಕ್ಕಳನ್ನು ಸ್ವೀಕರಿಸಬೇಕು. ಅವರು ತಾಯಿಯನ್ನು ಬಿಟ್ಟು ಇರಲಾರರು. ಆದ್ದರಿಂದ ಅವಳನ್ನೂ ಕರೆಸಿಕೊಳ್ಳಬೇಕು. ಅವಳು ರಣರಂಗದಲ್ಲಿ ಮಡಿದವರನ್ನು ಬದುಕಿಸಿದ್ದಾಳೆ. ಅವಳ ಚಾರಿತ್ರ್ಯದ ಬಗ್ಗೆ ಇದಕ್ಕಿಂತಲೂ ಹೆಚ್ಚಿನ ಸಾಕ್ಷಿ ಬೇಕೆ ? ಅವಳು ಶುದ್ಧಳೆನ್ನುವುದು ನಿನಗೆ ಗೊತ್ತು, ನಮಗೆ ಗೊತ್ತು, ದೇವತೆಗಳೆಲ್ಲರಿಗೂ ಗೊತ್ತು.'

ಇದನ್ನು ಕೇಳಿ ರಾಮನು ವಾಲ್ಮೀಕಿಯನ್ನು ನಮಿಸಿ, ಲಕ್ಷ್ಮಣನನ್ನು ಕರೆದು ಹೇಳಿದ 'ತಮ್ಮ, ಸೀತೆಯನ್ನೂ ಮಕ್ಕಳನ್ನೂ ಕರೆದು ತಾ, ನನ್ನ ಮತ್ತು ಮುನಿಯ ಮಾತುಗಳನ್ನು ಅವರಿಗೆ ತಿಳಿಸಿ ರಥದಲ್ಲಿ ಅವರನ್ನು ಕರೆದುಕೊಂಡು ಬಾ.' ಲಕ್ಷ್ಮಣನೆಂದ 'ಅಣ್ಣ, ನಿನ್ನ ಅಪ್ಪಣೆಯಿದ್ದರೆ, ನಿಮ್ಮೆಲ್ಲರಿಗೂ ಇಷ್ಟವೆನಿಸಿದರೆ ನಾನು ಹೋಗುವೆ. ಆದರೆ ದೇವಿ ಬರಲೊಪ್ಪಿದರೆ ಮಾತ್ರ ನಾನು ಹೋಗುವುದು ಸಾರ್ಥಕವಾಗುವುದು. ಒಂದುವೇಳೆ ಹಿಂದೆ ಅವಳನ್ನು ಕಾಡಿನಲ್ಲಿ ಬಿಟ್ಟುಬಂದವನಾನೆಂದು ಕೋಪದಿಂದ ಬಾರದಿದ್ದರೆ, ನಾನೊಬ್ಬನೆ ಹಿಂದೆ ಬಂದರೆ ನೀನು ಕ್ಷಮಿಸಬೇಕು.'

ಹೀಗೆ ಹೇಳಿ ಲಕ್ಷ್ಮಣನು ರಥವನ್ನು ಏರಿ ಆಶ್ರಮಕ್ಕೆ ಹೊರಟ. ಸೀತೆಯನ್ನು ಕರೆದು ತರಲು ಹೊರಟದ್ದೇನೆಂಬ ಸಂತೋಷ ರಾಮನಾಜ್ಞೆಯಂತೆ ಅವಳನ್ನು ಕಾಡಿನಲ್ಲಿ ಬಿಟ್ಟವನು ತಾನೆಂಬ ಸಂಕೋಚ ಇವುಗಳ ನಡುವೆ ಹೊಯ್ದಾಡುತ್ತ 'ಸೀತೆ ನನ್ನಲ್ಲಿ ಪ್ರಸನ್ನಳಾಗುವಂತೆ ಏನು ಮಾಡಲಿ ? ಅಥವಾ ರಾಮನಾಜ್ಞೆಯಂತೆ ನಾನು ಹಿಂದೆ ನಡೆದಿದ್ದೆ ಎಂದು ತಿಳಿದು ನನ್ನಲ್ಲಿ ಅಸಮಾಧಾನ ಮಾಡದಿರುವಳೆ ?' ಎಂದು ಆಲೋಚಿಸುತ್ತ ಆಶ್ರಮವನ್ನು ಪ್ರವೇಶಿಸಿದ. ರಥದಿಂದ ಇಳಿದು ಕಣ್ಣಲ್ಲಿ ನೀರು ತುಂಬಿಕೊಂಡು ಆರ್ಯೆ, ಪೂಜ್ಯೆ, ಭಗವತಿ, ಶುಭೆ ಎಂದು ಹೇಳುತ್ತ ನಡುಗುತ್ತ ಸೀತೆಯ ಕಾಲುಗಳಿಗೆ ನಮಸ್ಕರಿಸಿದ. ಅವಳು ಆತನನ್ನು ಎಬ್ಬಿಸಿ ಕೇಳಿದಳು 'ಲಕ್ಷ್ಮಣ,ಏನು ಕಾರಣ ಆಶ್ರಮಕ್ಕೆ ಬಂದೆ ? ಶ್ರೀ ರಾಮನು ಸೌಖ್ಯದಿಂದಿರುವನೆ ? ಅವನಿಗೆ ನನ್ನ ಮೇಲೆ ಕೋಪವಿಲ್ಲವಷ್ಟೆ ? ಲೋಕವು ಅವನನ್ನು ಹೊಗಳುತ್ತದೆ ಅಲ್ಲವೆ ? ಅಪಕೀರ್ತಿಯ ಭಯದಿಂದ ನನ್ನನ್ನು ಕೊಲ್ಲಲು ಕಳಿಸಿದನೆ ? ಅವನಿಗೆ ಕೇವಲ ಕೀರ್ತಿ ಒಂದೇ ಬೇಕು. ನಾನು ಸತ್ತರೆ ಅವನ ಕೀರ್ತಿ ನಿರ್ಮಲವಾಗುವುದೆಂದಿದ್ದರೆ ನಾನು ಸಾಯಲು ಸಿದ್ಧ. ಪತಿಗೆ

ಕೀರ್ತಿ ತಂದ ಪುಣ್ಯದಿಂದ ಮುಂದಿನ ಜನ್ಮದಲ್ಲಿಯಾದರೂ ನನಗೆ ಪತಿ ಸಾನ್ನಿಧ್ಯ ದೊರಕಲಿ. ಅವನು ನನ್ನನ್ನು ಬಿಟ್ಟರೂ ನಾನು ಅವನನ್ನು ಬಿಡಲಿಲ್ಲ. ನನ್ನ ಬಾಳು ಸಫಲವಾಗಲು ಅವನು ನನಗೆ ಬೇಕು. ಅವನಿಗೆ ನನ್ನ ಅವಶ್ಯಕತೆ ಇಲ್ಲದಿರಬಹುದು. ಕೌಸಲ್ಯೆ ಸುಖದಿಂದ ಇರುವಳೆ ? ಅವಳಿಗೆ ನನ್ನ ಮೇಲೆ ತುಂಬ ದಯೆ ಇದೆ. ಭರತ ಮುಂತಾದವರೂ ಕ್ಷೇಮವೆ ? ಸುಮಿತ್ರೆ ಚೆನ್ನಾಗಿರುವಳೆ ? ನನ್ನನ್ನು ಪ್ರಾಣಕ್ಕಿಂತ ಹೆಚ್ಚಾಗಿ ಪ್ರೀತಿಸುವವಳು ಕೀರ್ತಿಗೋಸ್ಕರ ರಾಮನು ನನ್ನಂತೆ ನಿನ್ನನ್ನೂ ಬಿಟ್ಟನೇನು ? ಎಲ್ಲ ಲೋಕಗಳಲ್ಲಿ ತನ್ನ ಕೀರ್ತಿ ಹರಡುವಂತಾದರೆ ಅದಕ್ಕಾಗಿ ಅವನು ಬಿಡಲಾರದು ಏನಿದೆ ? ತನ್ನಾತ್ಮವೆ ತನಗೆ ಬೇಡವೆನಿಸಬಹುದು ಅವನಿಗೆ.'

ಹೀಗೆ ಪ್ರಶ್ನೆಗಳ ಸುರಿಮಳೆಯನ್ನು ಕೇಳಿ ಲಕ್ಷ್ಮಣನೆಂದ 'ರಾಮನು ಸೌಖ್ಯದಿಂದ ಇದ್ದಾನೆ. ನಿನ್ನ ಕ್ಷೇಮವನ್ನು ಕೇಳಿದ್ದಾನೆ. ಕೌಸಲ್ಯೆ ಸುಮಿತ್ರೆ ಮುಂತಾದವರೆಲ್ಲರೂ ನಿನ್ನ ಕ್ಷೇಮವನ್ನು ಕೇಳಿ ಪ್ರೀತಿಯಿಂದ ಆಶೀರ್ವದಿಸುತ್ತಾರೆ. ಭರತ ಶತ್ರುಘ್ನರೂ ನಿನ್ನ ಪಾದಗಳಿಗೆ ವಂದನೆ ಮಾಡುತ್ತಾರೆ. ಗುರುಗಳೂ ಗುರುಪತ್ನಿಯರೂ ಹರಿಸಿದ್ದಾರೆ. ಈಗ ರಾಮನು ನಿನ್ನನ್ನು ಕರೆಸಿದ್ದಾನೆ ನಿನ್ನನ್ನು ಹೊರತು ಬೇರಾರಲ್ಲೂ ಅವನು ಸುಖ ಕಂಡಿಲ್ಲ. ನೀನಿಲ್ಲವೆಂದಾದ ಮೇಲೆ ಅವನಿಗೆ ದಿಕ್ಕುಗಳೆಲ್ಲವೂ ಶೂನ್ಯವಾಗಿವೆ. ಶೂನ್ಯದೃಷ್ಟಿಯಿಂದ ಎಲ್ಲೆಡೆ ನೋಡುತ್ತ ಅಳುತ್ತಾನೆ. ನಮ್ಮನ್ನೂ ಅಳಿಸುತ್ತಾನೆ. ನೀನಿದ್ದ ಸ್ಥಳದಲ್ಲಿ ನಿನ್ನನ್ನು ನೆನೆದು ಈಗಲೂ ನೀನಲ್ಲಿ ಇರುವೆ ಎಂದು ಭಾವಿಸುತ್ತಾನೆ. ಜಾನಕಿ ನನ್ನನ್ನು ಸ್ಮರಿಸುತ್ತ ಇರುವ ಆ ಆಶ್ರಮವೆ ಧನ್ಯ ಎನ್ನುತ್ತಾನೆ. ಈಗ ತಾನೆ ನನ್ನ ಮುಂದೆ ಅಳುತ್ತ ಅವನಾಡಿದ ಮಾತು ಅವನ ಹೃದಯದಲ್ಲಿ ವ್ಯಾಪಿಸಿರುವ ದುಃಖವೆಷ್ಟಂಬುದನ್ನು ತೋರಿಸುತ್ತದೆ. ಅವನು ಹೇಳಿದುದನ್ನು ಕೇಳು ಲೋಕವು ನನ್ನನ್ನು ಪರಮಾತ್ಮನೆಂದು ಹೇಳುತ್ತದೆ. ಆದರೆ ಎಲ್ಲಕ್ಕೂ ಲೋಕದ ಅದೃಷ್ಟವೆ ಸ್ವತಂತ್ರವಾದ ಕಾರಣವೆಂದು ನಾನು ಹೇಳುತ್ತೇನೆ. ಸರ್ವೇಶ್ವರನೂ ತನ್ನ ಕಾರ್ಯದಲ್ಲಿ ಅದೃಷ್ಟವನ್ನು ಅನುಸರಿಸಬೇಕಾಗುತ್ತದೆ. ಉಳಿದವರ ಪಾಡೇನು ? ನಾನು ಧನುಸ್ಸನ್ನು ಮುರಿದುದು, ಕೈಕೇಯಿಯ ವಿವೇಕ ಮರೆಯಾದುದು. ತಂದೆಯ ಮರಣ, ಅರಣ್ಯವಾಸ, ನಿನ್ನನ್ನು ರಾಕ್ಷಸನು ಅಪಹರಿಸಿದುದು, ಸಮುದ್ರವನ್ನು ದಾಟಿದುದು, ರಾವಣವಧೆ, ಕಪಿಗಳ ಸಹಾಯ ನನಗೆ ದೊರತುದು, ನಿನ್ನನ್ನು ತಿರುಗಿ ಪಡೆದುದು, ಬಂಧುಗಳೊಡನೆ ಸೇರಿ ರಾಜ್ಯವಾಳಿದುದು, ಮತ್ತೆ ನಿನ್ನನ್ನು ಬಿಟ್ಟಿದ್ದು, ಇವೆಲ್ಲಕ್ಕೂ ಆ ಅದೃಷ್ಟ ಒಂದೆ ನಿರಂಕುಶವಾದ ಸ್ವತಂತ್ರವಾದ ಕಾರಣ. ಅದರ ಅನುಗ್ರಹದಿಂದ ನಮ್ಮಿಬ್ಬರ ಪುನರ್ಮಿಲವಾಗುತ್ತಿದೆ. ವಸ್ತುತಃ ವೇದವು ಇತರ ಶಾಸ್ತ್ರಗಳಿಗಿಂತ ವಿಲಕ್ಷಣವಾಗಿದ್ದು ನಿತ್ಯವೆನಿಸಿರುವುದು ನನ್ನಿಂದ. ಲೋಕದ ಉತ್ಪತ್ತಿ ಸ್ಥಿತಿ ಲಯಗಳಾಗುವುದು ನನ್ನಿಂದ. ನನ್ನ ಈ ಕಾರ್ಯಗಳನ್ನು ಲೋಕ ಅನುಕರಿಸಲಾರದು. ಆದ್ದರಿಂದ ನಾನೇ ಮುಖ್ಯ ಕಾರಣ. ಲೋಕವು ಮಾತ್ರ ಅದೃಷ್ಟವನ್ನು ಅವಲಂಬಿಸುತ್ತದೆ. ಕರ್ಮದ ಫಲ ಉಂಡರೆ ಕರ್ಮ ಕ್ಷಯ ಹೊಂದುತ್ತದೆ. ಅದರಿಂದ ನೀನು ಕಾಡಿನಲ್ಲಿ ಕರ್ಮದ ಫಲ ಉಂಡಂತೆ ತೋರಿರುವೆ. ಲೋಕವನ್ನೂ ಅದರ ಅದೃಷ್ಟವನ್ನೂ ಲೆಕ್ಕಿಸದೆ ನಿರ್ವ್ಯಾಜವಾದ ಪ್ರೇಮ ನಿನ್ನಲ್ಲಿ ನನಗೆ ಸದಾ ಪ್ರವರ್ಧಮಾನವಾಗಿದ್ದು ಅದು ನಿನ್ನನ್ನು ಕರೆಯುತ್ತಿದೆ. ಪ್ರಣಯಿಗಳಲ್ಲಿ ದೋಷ ಸಂದೇಹ ಬಂದರೂ. ಅದರಿಂದ ವಿಯೋಗ ಉಂಟಾದರೂ ಸ್ನೇಹವು ನಿರ್ಮಲವಾಗಿ ಶುದ್ಧವಾಗಿ

ಅಸ್ವಾದ್ಯವೆನಿಸುತ್ತದೆ. ಈಗ ನಮ್ಮೊಳಗೆ ಸ್ನೇಹದ ಶುದ್ಧಿ ಕಾರ್ಯ ಆಗಿದೆ. ಲೋಕರೀತಿಯನ್ನನುಸರಿಸಿ ನಾನು ಹೀಗೆ ಮಾಡಿದೆ. ಇಲ್ಲದಿದ್ದರೆ ಲೋಕ ಉಳಿಯಲಾರದು. ಮಹಾತ್ಮರು ತಮಗೆ ಸಹಜವಾದ ನಡತೆಯನ್ನ ಲೋಕಕ್ಕೆ ತೋರಿದರೆ ಅದನ್ನು ಲೋಕ ಅನುಕರಿಸುತ್ತದೆ. ಆದರೆ ಅರಗಿಸಿಕೊಳ್ಳಲಾರದು. ಆದ್ದರಿಂದ ನಮ್ಮ ನಡತೆಯಲ್ಲಿ ಲೋಕವೇನಾದರೂ ತಪ್ಪನ್ನು ಕಂಡರೆ ಅದನ್ನು ಅವರ ದೃಷ್ಟಿಯಲ್ಲಿ ಸರಿಪಡಿಸಲೇಬೇಕು. ಆಗ ನಮ್ಮ ಕೀರ್ತಿ ಉಜ್ವಲವಾಗಿ ಪ್ರಕಾಶಿಸುತ್ತದೆ. ಅದನ್ನು ಜನರು ಕೊಂಡಾಡುತ್ತಾರೆ. ಅದರಿಂದ ಭಕ್ತಿಯನ್ನು ಪಡೆದು ಸಂಸಾರವನ್ನು ದಾಟುತ್ತಾರೆ.'

ರಾಮನು ಹೀಗೆ ಹೇಳಿ ನನ್ನನ್ನು ಕಳಿಸಿದ್ದಾನೆ. ಪತಿಯ ಪಾದ ಕಮಲವನ್ನು ನೋಡಲು ಹೊರಡು. ಒಳ್ಳೆಯ ಬಟ್ಟೆ ಒಡವೆ ಅಂಗ ರಾಗ ಸುಗಂಧಗಳನ್ನು ನಿನಗಾಗಿ ಕಳುಹಿಸಿಕೊಟ್ಟಿದ್ದಾನೆ. ರಥಗಳು ದಾಸಿಯರು ಛತ್ರ ಚಾಮರಗಳು ಆನೆ ಕುದುರೆಗಳು ಸ್ತುತಿಸುವ ಬ್ರಾಹ್ಮಣರು ಸೂತ ಮಾಗದವಂದಿಗಳು ವಂದಿಸುವ ಪೌರಮಹಿಳೆಯರು, ಸೇವೆ ಮಾಡುವ ಯೋಧರು, ಹೂಗಳನ್ನೆರಚುವ ದೇವ ದೇವಾಂಗನೆಯರು ಇವರೆಲ್ಲರ ನಡುವೆ ಬ್ರಾಹ್ಮಣರಿಗೆ ದಾನ ನೀಡುತ್ತ, ಮುಂದೆ ಆನೆಗಳನ್ನೇರಿದ ನಿನ್ನ ಮಕ್ಕಳು, ಹಿಂದೆ ನಾನು. ಹೀಗೆ ವೈವಭದಿಂದ ನಿನ್ನ ರಾಜಧಾನಿಯನ್ನು ನೀನು ಪ್ರವೇಶ ಮಾಡು. ಎಲ್ಲರಿಗೂ ಸಂತೋಷ ವಾಗಲಿ. ಮಂಗಳ ವಾದ್ಯ ಗೀತ ಮುಂತಾದವುಗಳಿಂದ ದೊಡ್ಡ ಉತ್ಸವ ನಡೆಯಲಿ.'

ಸೀತೆ ಈ ವಿಜ್ಞಾಪನೆಯನ್ನು ನಿರಾಕರಿಸಿದಳು. 'ನಾನು ರಾಜನಿಗೆ ಕೀರ್ತಿ ತರುವಂಥವಳಲ್ಲ. ಸ್ವಯಂ ಕೀರ್ತಿಯೂ ನಾನಲ್ಲ. ಧರ್ಮ ಅರ್ಥ ಕಾಮಗಳಾವುದರಲ್ಲಿಯೂ ನನ್ನಿಂದ ಉಪಯೋಗವಿಲ್ಲ. ಹೀಗಿರುವಾಗ ನಿಮ್ಮ ಮಹಾರಾಜನಲ್ಲಿ ನಾನು ಹೇಗೆ ವಿಶ್ವಾಸವಿಡಲಿ. ಅವನು ಯಾರ ಅಂಕೆಗೂ ಒಳಪಡುವವನಲ್ಲ. ಪತಿಯ ದೋಷ ಪ್ರತ್ಯಕ್ಷವಿರಲಿ, ಅಪ್ರತ್ಯಕ್ಷವಿರಲಿ ಮನಸ್ಸಿನಲ್ಲಿ ಇರುವುದನ್ನು ಬಾಯಲ್ಲಿ ನನ್ನಂಥ ಕುಲೀನ ಮಹಿಳೆಯರು ಆಡಕೂಡದು. ಪ್ರಾಣಿಗ್ರಹಣ ಕಾಲದಲ್ಲಿ ಅವನ ಯಾವ ರೂಪವು ನನ್ನೆದೆಯಲ್ಲಿ ತುಂಬಿತ್ತೋ ಆ ರೂಪ ಇಂದಿಗೂ ಅಚ್ಚಳಿಯದೆ ನಿಂತಿದೆ. ಎಂದೂ ಅಲ್ಲಿಂದ ದೂರವಾಗುವುದಿಲ್ಲ. ಲಕ್ಷ್ಮಣ, ಈ ಮಕ್ಕಳು ರಾಮನ ತೇಜಸ್ಸಿನ ಅಂಶದಿಂದ ಜನಿಸಿದವರು. ವಂಶವನ್ನು ಬೆಳೆಸುವವರು, ಮಹಾವೀರರು. ಧರ್ನುವಿದ್ಯಾ ವಿಶಾರದರು. ತಂದೆಯ ಬಳಿಗೊಯ್ದು ಅವರನ್ನು ಲಾಲಿಸು. ನಾನು ಇಲ್ಲಿಯೆ ಇದ್ದು ರಾಮನ್ನು ಆರಾಧಿಸುವೆ. ನೀನು ಅಲ್ಲಿರುವ ಎಲ್ಲ ಪೂಜ್ಯ ಗುರು ಜನರಿಗೆ ನನ್ನ ಪಾದ ವಂದನೆಯನ್ನು ತಿಳಿಸು. ಎಲ್ಲರಿಗೂ ನನ್ನ ಕುಶಲ ಪ್ರಶ್ನೆಯನ್ನು ತಿಳಿಸು.

ಹೀಗೆ ಹೇಳಿ ಸೀತೆ ಮಕ್ಕಳನ್ನು ಕರೆದು 'ತಂದೆಯ ಬಳಿಗೆ ಹೋಗಿ. ಅವನ ಶುಶ್ರೂಷೆ ಮಾಡಿ' ಎಂದಳು. ಆದರೆ ಮಕ್ಕಳು ಒಪ್ಪಲಿಲ್ಲ. ವಾಲ್ಮೀಕಿ ಮುನಿಯೂ ಅದೇ ಮಾತನ್ನಾಡಿದಾಗ ಲಕ್ಷ್ಮಣನ ಜೊತೆಯಲ್ಲಿ ಹೊರಟರು.

ಅಯೋಧ್ಯೆಯಲ್ಲಿ ಕುಶಲವರು ವಾಲ್ಮೀಕಿಯ ಬಳಿಯಲ್ಲಿಯೆ ನಿಂತರು. ಲಕ್ಷ್ಮಣನು ಮುನಿಗೆ ನಮಿಸಿ ಅವರನ್ನೂ ಮಕ್ಕಳನ್ನೂ ರಾಮನ ಬಳಿಗೆ ಕರೆದುಕೊಂಡು ಬಂದ. ರಾಮನ ಮುಂದೆ ಸೀತೆಯ ಮಾತನ್ನೆಲ್ಲ ಹೇಳಿದ. ಒಡನೆ ರಾಮನೊಂದು ಕ್ಷಣ ಮೂರ್ಛೆ ಹೊಂದಿ ಎಚ್ಚತ್ತು ಹೇಳಿದ.

'ಲಕ್ಷ್ಮಣ, ನೀನು ಇನ್ನೊಮ್ಮೆ ಆಶ್ರಮಕ್ಕೆ ಹೋಗಿ ಹೇಗಾದರೂ ಆಕೆಯನ್ನು ಕರೆದುಕೊಂಡು ಬರಬೇಕು. ನನ್ನ ಮಾತನ್ನು ಅವಳಿಗೆ ಹೇಳು. 'ಅರಣ್ಯದಲ್ಲಿ ತಪಸ್ಸು ಮಾಡುತ್ತ ಬೇರೆ ದಾರಿ ಹುಡುಕಿಕೊಂಡೆಯ ? ಅಂತಹುದನ್ನು ನನ್ನಿಂದ ನೀನೆಂದೂ ಕೇಳಿಲ್ಲ ನೋಡಿಲ್ಲ. ಜಾನಕಿ, ನೀನೇಕೆ ಬರುತ್ತಿಲ್ಲ ? ನೀನಾಗಿಯೆ ಬಯಸಿ ಮುನಿಗಳನ್ನು ಮುನಿಪತ್ನಿಯರನ್ನೂ ಸತ್ಕರಿಸಲು ಅರಣ್ಯಕ್ಕೆ ಹೋದೆ. ನಿನ್ನ ಮನೋರಥ ಈಡೇರಿದೆ. ಇನ್ನು ಏಕೆ ಹಿಂತಿರುಗಲಾರೆ ? ನನ್ನಲ್ಲಿ ದೋಷವನ್ನು ಎಣಿಸಬೇಡ. ಸತಿಯಾದವಳಿಗೆ ಕೊನೆಗೂ ಪತಿಯೆ ಗತಿ. ಅವನು ಗುಣವಂತನಿರಲಿ. ಅಲ್ಲದಿರಲಿ. ಹೀಗಿರುವಲ್ಲಿ ನಿನ್ನ ಮನಸ್ಸಿಗೆ ಮೆಚ್ಚಿಗೆಯಾದ ಪತಿಯ ಬಗ್ಗೆ ಏನು ಹೇಳಲಿ ? ಕುಲಸ್ತ್ರೀಯರು ಮಾಡುವ ಎಲ್ಲ ಕ್ರಿಯೆಗಳೂ ಪತಿಯ ಸಂತೋಷಕ್ಕಾಗಿ. ನಾನು ನಿನಗೆ ಹಿಂದೆಯೆ ಒಲಿದಿದ್ದೇನೆ. ಈಗಲಂತೂ ನಿನಗೆ ವಶನಾಗಿದ್ದೇನೆ. ಯಾಗ ಜಪ ತಪ ದಾನ ವ್ರತ ತೀರ್ಥ ದಯಾ ದೇವತಾರಾಧನೆ ಎಲ್ಲವೂ ನಾನೊಲಿದರೆ ಒಲಿಯುವುವು.' ಸೀತೆಗೆ ರಾಮನ ಈ ಸಂದೇಶವನ್ನು ಹೇಳಿ ಅವಳನ್ನು ಕರೆತರಲು ಲಕ್ಷ್ಮಣನು ವೇಗವಾಗಿ ರಥದಲ್ಲಿ ಹೊರಟನು.

ಇತ್ತ ವಾಲ್ಮೀಕಿ ಮುನಿ ಕುಶಲವರಿಗಾಜ್ಞಾಪಿಸಿದರು. 'ವೀಣೆ ನುಡಿಸುತ್ತ ಮಧುರ ಕಂಠದಿಂದ ರಾಮಾಯಣವನ್ನು ಗಾನ ಮಾಡಿರಿ.'

ಒಡನೆ ಅವರು ಹಾಡಿದರು. ಪಾತಿವ್ರತ್ಯ, ಸೋದರಸ್ನೇಹ, ಗುರುಭಕ್ತಿ ಸ್ವಾಮಿನಿಷ್ಠೆಯಂಥ ನೂರಾರು ಧರ್ಮಗಳನ್ನೊಳಗೊಂಡ ಅದ್ಭುತವಾದ ರಾಮಾಯಣವನ್ನು ಅವರು ಹಾಡಿದಾಗ ಅವರ ಧ್ವನಿ ಜಗತ್ತನ್ನೆಲ್ಲ ವ್ಯಾಪಿಸಿತು. ದೇವತೆಗಳೂ ಅಚ್ಚರಿಗೊಂಡರು. ಕಿನ್ನರರು ಮೂರ್ಛೆ ಹೋದರು. ಸಭೆಯಲ್ಲಿ ಕುಳಿತವರೆಲ್ಲರೂ ಚಿತ್ರದ ಬೊಂಬೆಗಳಂತಾದರು. ರಾಮನೂ ಬೇರೆ ರಾಜರೂ ಆನಂದಾಶ್ರುವನ್ನು ಸುರಿಸಿದರು. ಪಂಚಮದಾಲಾಪಕ್ಕೆ ಮುಗ್ಧರಾಗಿ ಚಿತ್ರದ ಬೊಂಬೆಗಳಂತೆ ಕುಳಿತರು.

ಹಾಡು ಮುಗಿದೊಡನೆ ರಾಮನು ಅವರಿಬ್ಬರಿಗೂ ಒಂದೊಂದು ಲಕ್ಷ ಸುವರ್ಣಗಳನ್ನು ಕೊಡಲು ಹೋದ. ಮಕ್ಕಳು ನಕ್ಕು ವಾಲ್ಮೀಕಿ ಮುನಿಯ ಮುಂದೆ ನುಡಿದರು. 'ಮುನಿಯೇ, ಮಹಾರಾಜನು ದೊಡ್ಡ ತಪ್ಪು ಮಾಡುತ್ತಿದ್ದಾನೆ. ನಮಗೆ ಸುವರ್ಣಗಳನ್ನು ಕೊಡುವೆನೆಂದು ಆಸೆ ಹುಟ್ಟಿಸುತ್ತಿದ್ದಾನೆ. ಬ್ರಾಹ್ಮಣರು ದಾನವನ್ನು ಸ್ವೀಕರಿಸಬಹುದು. ನಾವು ಕ್ಷತ್ರಿಯರು ಸ್ವೀಕರಿಸಿದರೆ ನರಕ ಉಂಟಾಗುವುದು. ಅದೂ ಅಲ್ಲದೆ ನಾವು ದಯೆಯಿಂದ ಕೊಟ್ಟ ರಾಜ್ಯವನ್ನು ಮಹಾರಾಜನಿಟ್ಟು ಕೊಂಡಿದ್ದಾನೆ. ಅವನು ನಮಗೆ ಹೇಗೆ ಸುವರ್ಣವನ್ನು ದಾನ ಮಾಡಬಲ್ಲ ?''

ವಾಲ್ಮೀಕಿ ಮುನಿ ಮಕ್ಕಳಿಗೆ ಬೋಧಿಸಿದ 'ಮಕ್ಕಳೆ ಹಾಗೆನ್ನಬೇಡಿ. ನಿಮ್ಮ ತಂದೆಯಲ್ಲವೆ?'

ಒಡನೆ ಮಕ್ಕಳು ರಾಮನ ಬಳಿ ಹೋಗಿ ವಿನಯದಿಂದ ಕಾಲಿಗೆ ನಮಸ್ಕರಿಸಿದರು. ರಾಮನು ಅವನರ್ನು ಬಿಗಿಯಾಗಿ ಅಪ್ಪಿಕೊಂಡು ತನ್ನ ಧರ್ಮಮೂರ್ತಿ ಮತ್ತಾಗಿ ಎರಡೂ ರೂಪದಿಂದ ಬಂದಿದೆ ಎಂದು ಭಾವಿಸಿದ. ಸಭಾಸದರೆಲ್ಲರೂ ಮಕ್ಕಳ ಮುದ್ದು ಮುಖವನ್ನು ಕಂಡಾಗ ಸೀತೆಯ ಪತಿ ಭಕ್ತಿಯಲ್ಲಿ ಕುಂದಿಲ್ಲವೆಂದು ಕೊಂಡರು.

**ವ್ಯಾಸ :-** ಶೇಷ ದೇವನು ಹೀಗೆ ರಾಮಾಯಣದ ಬಗ್ಗೆ ಹೇಳಿದುದನ್ನು ಕೇಳಿ ವಾತ್ಸ್ಯಾಯನನಿಗೆ ಆದರ ಬಗ್ಗೆ ಇನ್ನೂ ಹೆಚ್ಚಿನ ಸಂಗತಿಗಳನ್ನು ಅರಿಯುವ ಕುತೂಹಲ ಉಂಟಾಯಿತು.

**ವಾತ್ಸ್ಯಾಯನ :-** ದೇವ, ವಾಲ್ಮೀಕಿ ಮುನಿ ರಾಮಾಯಣವನ್ನು ರಚಿಸಿದುದು ಎಂದು ? ಏಕೆ ? ಅದರಲ್ಲಿ ಏನು ವರ್ಣನೆಗಳಿವೆ ?

**ಶೇಷ :-** ಒಮ್ಮೆ ವಾಲ್ಮೀಕಿ ಮುನಿ ಒಂದು ದೊಡ್ಡ ಕಾಡಿನಲ್ಲಿ ಸಂಚರಿಸುತ್ತಿದ್ದ. ಅಲ್ಲಿ ತಾಲ, ತಮಾಲ, ಶಿಂಶುಪ, ಚಂಪಕ, ಬಕುಳ, ಕೋವಿದಾರ ಕುರಂಟಕ ಮೊದಲಾದ ಮರಗಳು ಹೂ ಬಿಟ್ಟಿದ್ದವು. ಕೇದಗೆಯ ಹೂವಿನ ಪರಿಮಳವು ವನವನ್ನೆಲ್ಲ ತುಂಬಿತ್ತು. ಅದರ ಪರಾಗದಿಂದ ಬೆಳದಿಂಗಳು ಚೆಲ್ಲಿದಂತೆ ಕಾಣುತ್ತಿತ್ತು ಕೋಗಿಲೆ ದುಂಬಿಗಳ ಮಧುರಧ್ವನಿ ಎಲ್ಲೆಡೆಯೂ ಕೇಳಿ ಬರುತ್ತಿತ್ತು. ಆಗ ಎರಡು ಕ್ರೌಂಚ ಪಕ್ಷಿಗಳು ಪ್ರಣಯದಾಟ ಆಡುತ್ತಿದ್ದುವು. ಒಬ್ಬ ಬೇಡನು ಮಾಂಸಕ್ಕಾಗಿ ಆ ಹಕ್ಕಿಗಳಲ್ಲಿ ಒಂದನ್ನು ಹೊಡೆದು ಕೊಂದನು. ಇನ್ನೊಂದು ಹಕ್ಕಿ ತನ್ನ ಪ್ರಿಯನ ಸಾವನ್ನು ಕಂಡು ಗಟ್ಟಿಯಾಗಿ ಕೂಗಿತು. ಅದರ ಕರುಣಾ ಕ್ರಂದನವನ್ನು ಕೇಳಿ ಅಲ್ಲಿಯೇ ಸಂಚರಿಸುತ್ತಿದ್ದ ವಾಲ್ಮೀಕಿ ಮುನಿಯು ಬೇಡನನ್ನು ಕೋಪದಿಂದ ಶಪಿಸಿದನು.

**ಮಾನಿಷಾದ ಪ್ರತಿಷ್ಠಾಂ ತ್ವಮಗಮಃ ಶಾಶ್ವತೀ ಸಮಾಃ ।**
**ಯತ್ ಕ್ರೌಂಚ ಪಕ್ಷಿಣೋರೇಕಮವಧೀಃ ಕಾಮಮೋಹಿತಂ ॥**

ಬೇಡನೆ, ಪ್ರೇಯಸಿಯೊಡನೆ ಆಟವಾಡುತ್ತ ಮೈಮರೆತಿದ್ದ ಕ್ರೌಂಚ ಪಕ್ಷಿಯನ್ನು ಕೊಂದೆ. ಅದರಿಂದ ನೀನು ಹೆಚ್ಚು ಕಾಲ ಬದುಕಬೇಡ.

ಈ ಶ್ಲೋಕ ರಚನೆಯನ್ನು ಕಂಡ ಮುನಿಯ ಶಿಷ್ಯರು ಅದನ್ನು ಬಾಯಿ ತುಂಬ ಹೊಗಳಿದರು. 'ಸ್ವಾಮಿ ನಿಮ್ಮ ಶಾಪದ ನುಡಿಯನ್ನು ಸರಸ್ವತಿಯು ಶ್ಲೋಕವನ್ನಾಗಿ ಮಾರ್ಪಡಿಸಿದಳು. ಈ ಶ್ಲೋಕ ಬಹುಸುಂದರವಾಗಿದೆ.' ಮುನಿಗೂ ಸಂತೋಷವಾಯಿತು. ಆಗಲೇ ಬ್ರಹ್ಮನೂ ಬಂದು, 'ಮುನಿಯೆ, ನೀನು ಧನ್ಯ. ಸರಸ್ವತಿ ನಿನ್ನ ಮುಖದಲ್ಲಿ ಕುಳಿತು ಶ್ಲೋಕ ರೂಪದಿಂದ ವ್ಯಕ್ತಳಾದಳು. ಆದ್ದರಿಂದ ರಮ್ಯವಾದ ರಾಮಾಯಣ ಕಾವ್ಯವನ್ನು ರಚಿಸು. ಅದರಿಂದ ಕಲ್ಪದ ಕೊನೆಯ ತನಕ ನಿಲ್ಲಬಲ್ಲ ಕೀರ್ತಿ ನಿನ್ನದಾಗುವುದು. ರಾಮನಾಮದಿಂದ ಕೂಡಿದ ಮಾತು ಬಾಯಿಯಲ್ಲಿದ್ದರೆ ಅದುವೆ ಧನ್ಯ. ಉಳಿದ ಪ್ರಾಪಂಚಿಕ ವಿಷಯಗಳ ಮಾತುಕಥೆ ಎಲ್ಲವೂ ಅಪವಿತ್ರವಾದುದು. ಪಾಪಿಗಳ ಎಲ್ಲ ಪಾಪವನ್ನು ಪರಿಹರಿಸಬಲ್ಲ ಲೋಕ ಪ್ರಸಿದ್ಧವಾದ ರಾಮಾಯಣ ನೀನು ರಚಿಸು' ಎಂದು ಹೇಳಿ ಅಂತರ್ಧಾನ ಹೊಂದಿದನು.

ಬಳಿಕ ಮುನಿಯು ರಾಮಾಯಣವನ್ನು ಹೇಗೆ ರಚಿಸಲಿ ಎಂದು ಚಿಂತಿಸಿ ಧ್ಯಾನಮಗ್ನನಾದಾಗ ಅವನ ಅಂತಃಕರಣದಲ್ಲಿ ಮನೋಹರವಾದ ರಾಮನು ಕಾಣಿಸಿಕೊಂಡ. ನೀಲಲೋತ್ಪಲದಳದಂತೆ ಶ್ಯಾಮವರ್ಣನಾದ ತಾವರೆ ಗಣ್ಣಿನ ರಾಮನನ್ನೂ ಅವನ ಹಿಂದಿನ ಮುಂದಿನ ಎಲ್ಲ ಕಥೆಗಳನ್ನೂ ಕಂಡುಕೊಂಡ ಮುನಿ ರಾಮಾಯಣವನ್ನು ರಚಿಸಿದ. ಅದರಲ್ಲಿರುವ ಪದಗಳೆಲ್ಲವೂ ಮನೋಹರ. ಬಳಸಿದ ವೃತ್ತವೂ ನಾನಾವಿಧ. ಅದರಲ್ಲಿ ರಮಣೀಯವಾದ ಆರು ಕಾಂಡಗಳಿವೆ. ಅವು ಬಾಲ, ಅರಣ್ಯಕ ಕಿಷ್ಕಿಂಧಾ, ಸುಂದರ, ಯುದ್ಧ ಮುತ್ತು ಉತ್ತರ ಕಾಂಡಗಳು. ಶ್ರವಣ ಮಾತ್ರದಿಂದ ಎಲ್ಲ ಪಾಪಗಳನ್ನು ಪರಿಹರಿಸಬಲ್ಲವು.

ದಶರಥನು ಪುತ್ರೇಷ್ಟಿಯಿಂದ ಸನಾತನ ಬ್ರಹ್ಮ ಸ್ವರೂಪನಾದ ಹರಿಯನ್ನು ನಾಲ್ಕು ರೂಪದಿಂದ ಮಕ್ಕಳನ್ನಾಗಿ ಪಡೆದ. ಅವರಲ್ಲಿ ರಾಮನು ವಿಶ್ವಾಮಿತ್ರನ ಯಜ್ಞ ರಕ್ಷಣ ಮಾಡಿ ಸೀತೆಯನ್ನು ವಿವಾಹವಾಗಿ ಪರಶುರಾಮನನ್ನು ಸಂಧಿಸಿ ಅಯೋಧ್ಯೆಗೆ ಮರಳಿದ. ಅಲ್ಲಿ ಯುವರಾಜ ಪಟ್ಟಾಭಿಷೇಕ ಕಾಲದಲ್ಲಿ ಕೈಕೇಯಿಯ ಮಾತಿನಂತೆ ಸೀತಾಲಕ್ಷ್ಮಣ ಸಮೇತನಾಗಿ ಕಾಡಿಗೆ ಹೋಗಿ ಗಂಗೆಯನ್ನು ದಾಟಿ ಚಿತ್ರಕೂಟದಲ್ಲಿ ನೆಲೆಸಿದ. ಅಲ್ಲಿಗೆ ಭರತನು ಬಂದು ರಾಮನನ್ನು ಅಯೋಧ್ಯೆಗೆ ಕರೆತರುವಲ್ಲಿ ವಿಫಲನಾಗಿ ನಂದಿಗ್ರಾಮದಲ್ಲಿಯೇ ಉಳಿದ. ಇದು ಬಾಲಕಾಂಡದ ಕಥಾವಸ್ತು.

ರಾಮನು ಮುನಿಗಳ ಆಶ್ರಮದಲ್ಲಿ ವಾಸ ಮಾಡುತ್ತಿದ್ದ. ಶೂರ್ಪನಖಿಯ ಮೂಗು ಕೊಯ್ದು ಖರ ದೂಷಣರನ್ನು ಕೊಂದು ಮಾಯಾ ರೂಪದಿಂದ ಬಂದ ಮಾರೀಚನನ್ನೂ ಕೊಂದ. ರಾವಣನು ಸೀತೆಯನ್ನು ಅಪಹರಿಸಿದಾಗ ವಿರಹ ದುಃಖದಿಂದ ಕಾಡಿನಲ್ಲೆಲ್ಲ ಅಲೆಯುತ್ತ ಸಾಮಾನ್ಯ ಮಾನವನಂತೆ ವರ್ತಿಸಿದ. ಕಬಂಧನನ್ನು ಕೊಂದುದು, ಹಂಪೆಗೆ ಹೋದುದು, ಬಳಿಕ ಹನುಮಂತನ ಸ್ನೇಹ ಮಾಡಿದುದು, ಹೀಗೆ ಅರಣ್ಯ ಕಾಂಡದಲ್ಲಿ ವರ್ಣನೆಗಳಿವೆ.

ಏಳು ತಾಳೆಯ ಮರಗಳನ್ನು ಕಡಿದು ವಾಲಿಯನ್ನು ಕೊಂದು ಸುಗ್ರೀವನಿಗೆ ಪಟ್ಟಾಭಿಷೇಕ ಮಾಡುತ್ತಾನೆ ರಾಮ. ಬಳಿಕ ಪರ್ವತ ವರ್ಣನೆ. ಲಕ್ಷ್ಮಣನು ಸುಗ್ರೀವನನ್ನೆಚ್ಚರಿಸುವುದು, ಸುಗ್ರೀವನು ಹೊರಡುವುದು, ಸೈನ್ಯ ಸಂಗ್ರಹ ಇವುಗಳ ವರ್ಣನೆ. ಸೀತಾನ್ವೇಷಣದ ಸಂದರ್ಭಲ್ಲಿ ಸಂಪಾತಿಯ ಭೆಟ್ಟಿಯಾಗುವುದು. ಬಳಿಕ ಹನುಮಂತನು ಸಮುದ್ರವನ್ನು ಹಾರಿ ಆಚೆ ದಡವನ್ನು ಸೇರಿದ. ಇದು ಕಿಷ್ಕಿಂದಾ ಕಾಂಡ.

ಸುಂದರ ಕಾಂಡದಲ್ಲಿ ರಾಮಾಯಣ ಕಥೆ ಅದ್ಭುತವಾಗಿದೆ. ಹನುಮಂತನು ಮನೆ ಮನೆಗಳಲ್ಲಿ ಸುತ್ತಿ ಅನೇಕ ಆಶ್ಚರ್ಯಗಳನ್ನು ಕಂಡು ಕೊನೆಗೆ ಸೀತೆಯನ್ನು ಸಂದರ್ಶಿಸುವನು. ಆಕೆಯೊಡನೆ ಸಂಭಾಷಣೆ ನಡೆಸುವನು. ಅಶೋಕ ವನವನ್ನು ಧ್ವಂಸಗೊಳಿಸುವನು. ಕುಪಿತರಾದ ರಾಕ್ಷಸರು ಅವನನ್ನು ಬಂಧಿಸಿದಾಗ ಅವನು ಲಂಕೆಯನ್ನೇ ಸುಟ್ಟನು. ಅಲ್ಲಿಂದ ಹಿಂತಿರುಗಿ ಬಂದು ಕಪಿಗಳೊಂದಿಗೆ ಸೇರಿದ. ರಾಮನಿಗೆ ಸೀತೆಯ ಗುರುತಿನ ಆಭರಣಗಳನ್ನಿತ್ತ. ಕಪಿಸೇನೆ ಲಂಕೆಗೆ ಹೊರಟಿತು. ಸಮುದ್ರಕ್ಕೆ ಸೇತುವೆ ನಿರ್ಮಾಣವಾಯಿತು. ಶುಕಸಾರಣರು ಬಂದರು ಇದು ಸುಂದರಕಾಂಡದ ಕಥೆ.

ಯುದ್ಧಕಾಂಡದಲ್ಲಿ ಮುಖ್ಯವಾಗಿ ಸೀತೆಯೊಡನೆ ರಾಮನ ಸಮಾಗಮವಾದ ವೃತ್ತಾಂತ ವರ್ಣಿತವಾಗಿದೆ.

ಉತ್ತರಕಾಂಡದಲ್ಲಿ ಅಗಸ್ತ್ಯ ಋಷಿಯೊಂದಿಗೆ ರಾಮನ ಸಂವಾದ. ಯಜ್ಞದ ಪ್ರಾರಂಭ. ಈ ಸಂದರ್ಭದಲ್ಲಿ ಪವಿತ್ರವಾದ ಅನೇಕ ರಾಮಕಥೆಗಳಿವೆ.

ರಾಮಾಯಣಕ್ಕೆ ಬ್ರಹ್ಮಹತ್ಯಾ ಪಾತಕವನ್ನು ಪರಿಹರಿಸುವ ಶಕ್ತಿ ಇದೆ. ಇಪ್ಪತ್ನಾಲ್ಕು ಸಾವಿರ ಶ್ಲೋಕಗಳು. ಆರು ಕಾಂಡಗಳು ಇದು ರಾಮಾಯಣದ ಗಾತ್ರ. ಅದನ್ನು ರಾಮನು ಕುಶಲವರ ಬಾಯಿಂದ ಕೇಳಿ ಅವರನ್ನು ಬಿಗಿಯಾಗಿ ಆಲಿಂಗಿಸಿಕೊಂಡು ತನ್ನ ಪ್ರೀತಿಯ ಸೀತೆಯನ್ನು ನೆನೆದುಕೊಂಡನು.

**ಶೇಷ :-** ಇತ್ತ ಲಕ್ಷ್ಮಣನು ವಾಲ್ಮೀಕಿಯಾಶ್ರಮಕ್ಕೆ ಬಂದು ಸೀತೆಗೆ ನಮಸ್ಕರಿಸಿ ಪ್ರೀತಿಯ ಗದ್ಗದ ಧ್ವನಿಯಿಂದ ರಾಮನು ಹೇಳಿದ ಮಾತನ್ನು ತಿಳಿಸಿದನು. ಸೀತೆ ತಿರುಗಿ ಅದೇ ಮಾತನ್ನು ಹೇಳಿದಳು. 'ಲಕ್ಷ್ಮಣ, ರಾಮನೆ ನನ್ನನ್ನು ಈ ಮಹಾ ಅರಣ್ಯದಲ್ಲಿ ಬಿಟ್ಟಿರುವಾಗ ನಾನು ಹೇಗೆ ನಿನ್ನ ಜತೆಗೆ ಬರಲಿ ?' 'ಅಮ್ಮ ನೀನು ಪತಿವ್ರತೆಯಾದವಳು, ಪತಿಯು ಬಾ ಎನ್ನುವಾಗ ಬರಲು ನಿರಾಕರಿಸಕೂಡದು. ಪತಿವ್ರತೆಯರು ಪತಿಯ ಅಪರಾಧವನ್ನು ಮನಸ್ಸಿನಲ್ಲಿಟ್ಟುಕೊಳ್ಳುವುದಿಲ್ಲ. ಬಾ, ನನ್ನೊಡನೆ ರಥವನ್ನೇರು' ಎಂದು ಲಕ್ಷ್ಮಣನು ಅಗ್ರಹಪಡಿಸಿದಾಗ ಸೀತೆ ಕೋಪವನ್ನು ಬದಿಗಿಟ್ಟಳು. ತಾಪಸ ತಾಪಸಿಯರನ್ನು ವಂದಿಸಿ ಲಕ್ಷ್ಮಣನೊಡನೆ ರಥವನ್ನೇರಿ ಕುಳಿತಳು. ರಾಜಧಾನಿಯನ್ನು ಸೇರಿ ಸರಯೂ ತೀರದಲ್ಲಿ ರಥದಿಂದಿಳಿದು ರಾಮನ ಪಾದಗಳಿಗೆ ಎರಗಿದಳು. 'ಸಾಧ್ವಿ, ನಿನ್ನೊಡನೆ ನಾನು ಯಾಗವನ್ನು ಸಮಾಪ್ತಿಗೊಳಿಸಬೇಕೆಂದಿದ್ದೇನೆ' ಎಂದ ಶ್ರೀರಾಮ.

ಬಳಿಕ ಸೀತೆ ಕೌಸಲ್ಯೆ, ಕೈಕೇಯಿ, ಸುಮಿತ್ರೆ ಮೊದಲಾದವರನ್ನೆಲ್ಲ ನಮಸ್ಕರಿಸಿ ಪತಿಯ ಮತ್ತು ಪುತ್ರರ ಜೊತೆಗೆ ಬಹುಕಾಲ ಬಾಳೆಂದು ಆಶೀರ್ವಾದವನ್ನು ಪಡೆದಳು. ವಶಿಷ್ಠರು ಈಗ ಸುವರ್ಣ ಸೀತೆಯನ್ನು ಬದಿಗಿಟ್ಟು ನಿಜವಾದ ಸೀತೆಯನ್ನು ರಾಮನ ಬಳಿ ಕುಳ್ಳಿರಿಸಿದ. ನಕ್ಷತ್ರದ ಜೊತೆಗಿರುವ ಚಂದ್ರನಂತೆ ರಾಮನು ಶೋಭಿಸಿದ ಯಜ್ಞದ ಕ್ರಿಯೆಗಳೆಲ್ಲವೂ ಸಾಂಗವಾಗಿ ನಡೆದುವು. ಬಳಿಕ ವಶಿಷ್ಠರ ಆದೇಶದಂತೆ ಬ್ರಾಹ್ಮಣರಿಗೆ ಪೂಜೆ ಮಾಡಿದ ಶ್ರೀರಾಮ. ಹಿಂದೆ ಮರುತ್ತರಾಜನು ತನ್ನ ಯಜ್ಞದಲ್ಲಿ ಬ್ರಾಹ್ಮಣರಿಗೆ ಅಪರಿಮಿತವಾಗಿ ದಾನ ಮಾಡಿದ್ದ. ಆಗ ಬ್ರಾಹ್ಮಣರು ತಮಗೆ ದೊರೆತ ಐಶ್ವರ್ಯದ ಭಾರವನ್ನು ಪೂರ್ಣ ಒಯ್ಯಲಾರದ ಹಿಮಾಲಯದ ಬಳಿಯಲ್ಲಿ ಒಗೆದಿದ್ದರು. ಅದೇ ರೀತಿಯಲ್ಲಿ ಲಕ್ಷ್ಮೀಪತಿಯಾದ ಶ್ರೀರಾಮನೂ ಬ್ರಾಹ್ಮಣರನ್ನು ದಾನಗಳಿಂದ ತೃಪ್ತಿಪಡಿಸಬೇಕೆಂದು ವಶಿಷ್ಠ ಬಯಸಿದ, ಅಂತೆಯೆ ಶ್ರೀ ರಾಮನು ಮೊದಲಿಗೆ ಗುರು ವಶಿಷ್ಠರನ್ನೆ ಪೂಜಿಸಿದ. ಅನೇಕ ದೇಶಗಳನ್ನು ಚಿನ್ನ ಮುತ್ತು ರತ್ನಗಳನ್ನೂ ಅವರಿಗೆ ಸಮರ್ಪಿಸಿದ. ಅದೇ ರೀತಿಯಿಂದ ಅಗಸ್ತ್ಯ ದಂಪತಿಗಳನ್ನು ಪೂಜಿಸಿದ. ಹಾಗೆಯೆ ಸತ್ಯವತೀ ಸುತನಾದ ವೇದ ವ್ಯಾಸರನ್ನೂ ಪೂಜಿಸಿದ. ಚ್ಯವನ ಮುಂತಾದ ಬೇರೆ ಋಷಿಗಳನ್ನು ಪೂಜಿಸಿ ಎಲ್ಲ ಬ್ರಾಹ್ಮಣರಿಗೂ ಒಂದೊಂದುಲಕ್ಷದಂತೆ ಸುವರ್ಣದಾನ ಮಾಡಿದ. ದೀನ ಅಂಧ ಕೃಪಣರಿಗೂ ತೃಪ್ತಿಯಾಗುವಷ್ಟು ಸಂಪತನ್ನು ಕೊಟ್ಟ. ಅಯೋಧ್ಯೆಯ ಸ್ತ್ರೀ ಪುರುಷರೆಲ್ಲರೂ ಆನಂದದಿಂದ ನಲಿಯುವಂತೆ ಮಾಡಿದ. ಗುರು ವಶಿಷ್ಠರು ಇದನ್ನು ನೋಡಿ ಪರಮಾನಂದ ಭರಿತರಾದರು.

ಬಳಿಕ ವಶಿಷ್ಠಮುನಿ ಯಾಗದ ಕುದುರೆಯನ್ನು ತೊಳೆಯಲು ಸರಯೂ ನದಿಗೆ ಅರವತ್ತನಾಲ್ಕು ರಾಜ ದಂಪತಿಗಳನ್ನು ಕಳಿಸಿದ. ಅವನಾದೇಶದಂತೆ ಸುವರ್ಣ ಕಲಶವನ್ನು ಹಿಡಿದು ರಾಮನು ಸೀತೆಯೊಂದಿಗೆ ಹೊರಟ. ಹಾಗೆಯೆ ಊರ್ಮಿಳಾ-ಲಕ್ಷ್ಮಣ, ಮಾಂಡವೀ-ಭರತ, ಶ್ರುತಕೀರ್ತಿ-ಶತ್ರುಘ್ನ, ಕಾಂತಿಮತಿ-ಪುಷ್ಕಲ, ಸತ್ಯವತಿ-ಸುಬಾಹು, ವೀರಭೂಷಾ-ಸತ್ಯವಂತ, ಸತ್ಕೀರ್ತಿ-ಸುಮದ, ರಾಜ್ಞೀ-ವಿಮಲ, ಶ್ರುತವತೀ-ವೀರಮಣಿ, ಕೋಮಲಾ-ಲಕ್ಷ್ಮಿನಿಧಿ, ಅಂಗಸೇನಾ-ರಿಪುತಾಪ, ಮಹಾಮೂರ್ತಿ-ವಿಭೀಷಣ, ಪ್ರತೀತಾ-ಪ್ರತಾಪಾಗ್ರ್ಯ, ಕಾಮಗಮಾ-ವಿಗ್ರಾಶ್ವ, ಅಧಿರಮ್ಯಾ-ನೀಲರತ್ನ, ಸುಮನೋಹಾರೀ-

ಸುರಥ, ಮೋಹನಾ-ಸುಗ್ರೀವ ಮುಂತಾದ ರಾಜ ದಂಪತಿಗಳೂ ಸುವರ್ಣ ಕಲಶಗಳನ್ನು ಹಿಡಿದು ಸರಯೂ ನದೀ ತೀರದಲ್ಲಿ ನಿಂತರು.

ನದಿಯ ನೀರನ್ನು ವಶಿಷ್ಠರು ವೇದ ಮಂತ್ರಗಳಿಂದ ಅಭಿಮಂತ್ರಿಸಿ ಪ್ರಾರ್ಥಿಸಿದರು. 'ನದಿಯೆ, ಸರ್ವಲೋಕೈಕ ರಕ್ಷಕನಾದ ರಾಮಚಂದ್ರನ ಯಾಗದ ಈ ಕುದುರೆಯನ್ನು ಪವಿತ್ರಗೊಳಿಸು.'

ಬಳಿಕ ಎಲ್ಲ ರಾಜದಂಪತಿಗಳೂ ನೀರನ್ನು ಮಂಟಪಕ್ಕೆ ತಂದರು. ವಶಿಷ್ಠರ ಆದೇಶದಂತೆ ರಾಮನು ಆ ನೀರಿನಿಂದ ಕುದುರೆಯ ಮೈ ತೊಳೆದು ಕೈಯಿಂದ ಮುಟ್ಟಿ ಅಭಿಮಂತ್ರಿಸಿದ. 'ಬ್ರಾಹ್ಮಣರು ತುಂಬಿರುವ ಈ ಯಜ್ಞದಲ್ಲಿ ನೀನು ಪಶುವಾಗಿ ನನ್ನನ್ನು ಪವಿತ್ರಗೊಳಿಸು. ದೇವತೆಗಳು ಇದರಿಂದ ಸಂತುಷ್ಟರಾಗಲಿ ಸುಪ್ರೀತರಾಗಲಿ' ಎಂದು ಪ್ರಾರ್ಥಿಸಿದ. ಆಗ ಬ್ರಾಹ್ಮಣರು ಒಬ್ಬರನ್ನೊಬ್ಬರು ಕೇಳಿದರು. 'ಇದೇನು ರಾಮನು ಹೇಳುತ್ತಿರುವುದು ? ಯಾರ ನಾಮಸ್ಮರಣೆಯಿಂದಲೆ ಜನರು ಮಹಾಪಾಪಗಳಿಂದ ಬಿಡುಗಡೆಯಾಗುವರೊ ಆ ರಾಮನು ಹೀಗೆನ್ನುವುದೆ ?'

ವಶಿಷ್ಠ ಮುನಿಯು ಕತ್ತಿಯನ್ನು ಅಭಿಮಂತ್ರಿಸಿ ರಾಮನ ಕೈಗೆ ಕೊಟ್ಟನು. ಆ ಕತ್ತಿಯಿಂದ ರಾಮನು ಯಜ್ಞ ಪಶುವಾದ ಕುದುರೆಯನ್ನು ವಧಿಸಲು ಹೊಡೆಯುವಷ್ಟರಲ್ಲಿ ಆ ಕುದುರೆ ತನ್ನ ಪಶುತ್ವವನ್ನು ತೊರೆದು ದಿವ್ಯರೂಪ ಧರಿಸಿತು. ಉತ್ತಮವಾದ ವಿಮಾನದಲ್ಲಿ ಚಾಮರ ಬೀಸುವ ಅಪ್ಸರೆಯರ ನಡುವೆ ವೈಜಯಂತೀ ಮಾಲೆಯಿಂದ ಅಲಂಕೃತನಾದ ದಿವ್ಯ ಪುರುಷನನ್ನು ಜನರು ನೋಡಿ ವಿಸ್ಮಿತರಾದರು. ರಾಮನು ತನಗೆ ತಿಳಿದಿದ್ದರೂ ಜನರು ತಿಳಿಯಲೆಂದು ಆ ದಿವ್ಯ ಪುರುಷನನ್ನು ಕೇಳಿದ 'ನೀನು ಯಾರು ? ಕುದುರೆಯ ಜನ್ಮ ನಿನಗೇಕೆ ಬಂದಿತು ? ಈಗ ಅಪ್ಸರೆಯರೊಡನೆ ಮರೆಯುವಂತಾದುದು ಹೇಗೆ ? ಇನ್ನೆನು ಮಾಡಬೇಕೆಂದಿರುವೆ ?' ಆಗ ಅವನು ಹೀಗೆ ಉತ್ತರಿಸಿದ. 'ಶ್ರೀರಾಮ, ಒಳಗೂ ಹೊರಗೂ ಎಲ್ಲೆಡೆ ವ್ಯಾಪಿಸಿರುವ ನಿನಗೆ ತಿಳಿಯದಿರುವುದೇನಿಲ್ಲ. ನೀನು ಕೇಳಿದ್ದರಿಂದ ಹೇಳುತ್ತೇನೆ. ನಾನು ಹಿಂದಿನ ಜನ್ಮದಲ್ಲಿ ಆಚಾರವಂತನಾದ ಬ್ರಾಹ್ಮಣನಾಗಿದ್ದೆ. ಒಮ್ಮೆ ಈ ಸರಯೂ ನದಿಯ ತೀರದಲ್ಲಿ ಸ್ನಾನ ಪಿತೃತರ್ಪಣ ದಾನ ಮುಂತಾದುನ್ನು ಮಾಡಿ ನಿನ್ನನ್ನು ಧ್ಯಾನಿಸಿದೆ. ಆಗ ಆ ಸ್ಥಳಕ್ಕೆ ಯಾತ್ರಿಕರು ಬಹು ಮಂದಿ ಬರುತ್ತಿದ್ದರು. ಅವರಿಗೆ ವಂಚನೆ ಮಾಡಬಯಸಿ ದೊಡ್ಡ ಪ್ರಮಾಣದಲ್ಲಿ ಅಗ್ನಿಹೋತ್ರ ಮಾಡತೊಡಗಿದೆ. ಆಕಾಶವನ್ನೆಲ್ಲ ಹೋಮಧೂಮವು ಆವರಿಸುವಂತೆ ಮಾಡಿದೆ. ಸುಂದವರಾದ ಯಜ್ಞಮಂಟಪವನ್ನು ರಚಿಸಿ ಅನೇಕ ತಿಲಕಗಳಿಂದ ನನ್ನ ಮೈಯನ್ನು ಸಿಂಗರಿಸಿಕೊಂಡು ದರ್ಭೆ ಸಮಿತ್ತುಗಳನ್ನು ಧರಿಸಿ ನಿನ್ನನ್ನು ಧ್ಯಾನಿಸುತ್ತ ಮಹಾತಪಸ್ವಿಯಂತೆ ಕುಳಿತೆ. ಮೂರ್ತಿಮತ್ತಾದ ಡಂಭಾಚಾರವೆ ನಾನಾದೆ. ದೂರ್ವಾಸರು ದೇಶ ಸಂಚಾರ ಮಾಡುತ್ತ ಆ ಸಮಯದಲ್ಲಿ ಅಲ್ಲಿಗೆ ಬಂದರು. ನಾನು ಅವರನ್ನು ಸ್ವಾಗತಿಸಲಿಲ್ಲ. ಅರ್ಘ್ಯಪಾದ್ಯಾದಿಗಳಿಂದ ಸತ್ಕರಿಸಲಿಲ್ಲ. ಪರ್ವಕಾಲದ ಸಮುದ್ರದಂತೆ ಅವರ ಕೋಪ ಉಕ್ಕಿತು. ನನ್ನನ್ನು ಅವರು ಶಪಿಸಿದರು. 'ಸರಯೂ ತೀರದಲ್ಲಿಯೂ ಡಂಭಾಚಾರ ಮಾಡುವೆಯಾದ್ದರಿಂದ ನೀನು ಪಶುವಾಗಿ ಜನ್ಮವೆತ್ತು'. ನಾನು ಅವರ ಕಾಲಿಗೆ ಬಿದ್ದು ಬೇಡಿದ್ದರಿಂದ ಅವರು ಕೋಪವನ್ನು ಮರೆತು ಹೇಳಿದರು.

'ನೀನು ಶ್ರೀರಾಮನು ಮುಂದೆ ಮಾಡಲಿರುವ ಯಾಗದ ಕುದುರೆಯಾಗು. ಅವನ ಹಸ್ತ ಸಂಪರ್ಕದಿಂದ ದಿವ್ಯ ರೂಪ ಧರಿಸಿ ಪರಮ ಪದವನ್ನು ಹೊಂದು'. ಶ್ರೀರಾಮ, ನನಗೆ ಶಾಪವೆ ವರವೆನಿಸಿತು. ಇಲ್ಲದಿದ್ದರೆ ನಿನ್ನ ಮನೋಹರ ಹಸ್ತಸ್ಪರ್ಶ ನನಗೆ ಹೇಗೆ ದೊರಕುತ್ತಿತ್ತು ? ಬಹು ಜನ್ಮಗಳಲ್ಲಿ ಸಾಧನೆ ಮಾಡಿದರೂ ದೇವತೆಗಳಿಗೆ ಅಲಭ್ಯವಾದ ನಿನ್ನ ಹಸ್ತ ಸ್ಪರ್ಶವು ನನ್ನಗೀಗ ದೊರಕಿತು. ಮಹಾರಾಜ, ಅಪ್ಪಣೆಕೊಡು. ನಿನ್ನ ಅನುಗ್ರಹದಿಂದ ಜರಾಮರಣ ದುಃಖವರ್ಜಿತವಾದ ನಿನ್ನ ಶಾಶ್ವತ ಸ್ಥಾನವನ್ನು ನಾನು ಹೋಗಿ ಸೇರುವೆ.'

ಹೀಗೆ ಹೇಳಿ ಆ ದಿವ್ಯ ಪುರುಷನು ರಾಮನಿಗೆ ಪ್ರದಕ್ಷಿಣೆ ನಮಸ್ಕಾರಗಳನ್ನು ಮಾಡಿ ವಿಮಾನವನ್ನೇರಿ ಪುನರಾವೃತ್ತಿರಹಿತವಾದ ಸ್ಥಾನವನ್ನು ಸೇರಿದ. ಅವನ ಮಾತಿನಿಂದ ರಾಮನ ಮಹಿಮೆಯನ್ನು ತಿಳಿದು ಜನರು ಆನಂದಾಶ್ಚರ್ಯಗಳಿಂದ ತುಂಬಿದರು.

ಡಂಭಾಚಾರಕ್ಕಾಗಿಯೆ ಇರಲಿ. ಇನ್ನಾವ ಉದ್ದೇಶದಿಂದಲೆ ಇರಲಿ ಹರಿಸ್ಮರಣೆ ಮಾಡಿದರೆ ಮೋಕ್ಷ ಲಭಿಸುತ್ತದೆ. ಕೇವಲ ಭಕ್ತಿಯಿಂದ ಮಾಡಿದರೆ ಏನು ಹೇಳಲಿ. ಕುದುರೆ ಸ್ವರ್ಗವನ್ನು ಸೇರಿದಾಗ ಶ್ರೀರಾಮನು ಋತ್ವಿಜರನ್ನು ಪ್ರಶ್ನಿಸಿದ 'ಕುದುರೆ ಏನೋ ಸುಖವಾಗಿ ಹೊರಟು ಹೋಯಿತು. ನಮ್ಮ ಯಾಗವನ್ನು ಮಾಡುವ ಬಗೆ ಹೇಗೆ ? ವಿಧಿವತ್ತಾಗಿ ಯಾಗ ಪೂರೈಸುವಂತೆ ಮಾಡಿರಿ. ದೇವತೆಗಳಿಗೆ ತೃಪ್ತಿಯು ಆಗುವಂತೆ ಮಾಡಿರಿ.

ಆಗ ವಶಿಷ್ಠ ಮುನಿ ಕರ್ಪೂರವನ್ನು ತರಿಸುವಂತೆ ಹೇಳಿದ. ಉತ್ತಮವಾದ ಕರ್ಪೂರ ಯಜ್ಞ ವೇದಿಕೆಗೆ ಬಂದಿತು. ಮುನಿಯು ಸಂತೋಷದಿಂದ ದೇವತೆಗಳನ್ನಾಹ್ವಾನಿಸಿದ. ಅವರೂ ಒಂದು ಕ್ಷಣದಲ್ಲಿ ಪರಿವಾರ ಸಮೇತರಾಗಿ ಬಂದರು.

**ಶೇಷ** :- ಆ ಯಾಗದಲ್ಲಿ ಶ್ರೀರಾಮಚಂದ್ರನ ದೃಷ್ಟಿಯಿಂದ ಪಾವನವಾದ ಹವಿಸ್ಸನ್ನು ಇಂದ್ರನು ಎಲ್ಲ ದೇವತೆಗಳೊಡನೆ ಸ್ವೀಕರಿಸಿ ಅದರ ಸವಿಯನ್ನುಂಡು ಎಷ್ಟು ಉಂಡರೂ ತೃಪ್ತಿಯೆನಿಸಲಿಲ್ಲ. ನಾರಾಯಣ, ಶಿವ, ಬ್ರಹ್ಮ, ಕುಬೇರ ಮುಂತಾದ ಲೋಕಪಾಲಕರು ವಶಿಷ್ಠನ ಕೈಯಿಂದ ಸಿದ್ಧವಾದ ಆ ಹವಿಸ್ಸನ್ನು ಒಳ್ಳೆ ಹಸಿದವರಂತೆ ಆತುರದಿಂದ ಉಂಡರು. ಶ್ರೀರಾಮನು ಹವಿಸ್ಸಿನಿಂದ ದೇವತೆಗಳನ್ನ ತೃಪ್ತಿಪಡಿಸಿ ವಶಿಷ್ಠರ ಪ್ರೇರಣೆಯಂತೆ ಎಲ್ಲ ಯಾಗ ಕ್ರಿಯೆಗಳನ್ನು ಮುಗಿಸಿದ. ಹೋತೃ ಮೊದಲಾದ ಋತ್ವಿಜರಿಗೆ ನಾಲ್ಕು ದಿಕ್ಕುಗಳ ರಾಜ್ಯಗಳನ್ನು ದಾನ ಮಾಡಿ ಸಂತುಷ್ಟರಾದ ಅವರ ಬಾಯಿಯಂದ ಶುಭಾಶೀರ್ವಾದವನ್ನು ಪಡೆದ. ಪೂರ್ಣಾಹುತಿಯನ್ನು ಮಾಡಿದ ನಂತರ ವಶಿಷ್ಠಮುನಿ ಮುತ್ತೈದೆಯರನ್ನು ಕರೆದು ರಾಮನಿಗೆ ಆರತಿ ಬೆಳಗುವಂತೆ ಹೇಳಿದ. ಒಡನೆ ಅವರು ಸೌಂದರ್ಯದಲ್ಲಿ ಮನ್ಮಥನನ್ನು ಗೆದ್ದ ರಾಮನಿಗೆ ಆರತಿ ಎತ್ತಿ ಅರಳು ಚೆಲ್ಲಿದರು. ಬಳಿಕ ಅವಭೃಥ ಸ್ನಾನ. ಕೋಟಿ ರಾಜರುಗಳೊಡನೆ ಪಾದಚಾರಿಯಾಗಿ ಸರಯೂನದಿಯ ಬಳಿಗೆ ಹೋಗುವ ಶ್ರೀರಾಮನನ್ನು ನೋಡುವುದೆ ಕಣ್ಣಿಗೆ ದೊಡ್ಡ ಹಬ್ಬವೆಂದು ತಿಳಿದು ಜನರೆಲ್ಲರೂ ಬಂದರು. ಎವೆಯಿಕ್ಕದೆ ಸೀತಾಸಮೇತನಾದ ಶ್ರೀರಾಮನನ್ನು ನೋಡಿ ಆನಂದಪಟ್ಟರು. ನಕ್ಷತ್ರಗಳ ನಡುವೆ ಹೊಳೆವ ಚಂದ್ರನಂತೆ ರಾಮನು ಆ ರಾಜರುಗಳ ನಡುವೆ ಶೋಭಿಸಿದ. ಅನೇಕ ನಟರು ಗಾಯಕರು ರಾಮನ

ಉಜ್ವಲವಾದ ಕೀರ್ತಿಯನ್ನು ಕೊಂಡಾಡುತ್ತ ಅವನನ್ನು ಹಿಂಬಾಲಿಸಿದರು. ನರ್ತಕಿಯರು ತಮ್ಮ ನೃತ್ಯಗಳಿಂದ ಎಲ್ಲರ ಮನಸ್ಸನ್ನು ಉದ್ರೇಕಗೊಳಿಸುತ್ತ ನೀರಕೊಳವಿಗಳಿಂದ ಓಕುಳಿಯಾಡುತ್ತ ಶ್ರೀರಾಮನ ಸೇವೆ ಮಾಡಿದರು. ಅವನಿಗೆ ಅರಿಶಿನ-ಕುಂಕುಮಗಳನ್ನು ಹಚ್ಚಿ ತಾವೂ ಪರಸ್ಪರ ಹಚ್ಚಿಕೊಂಡು ಎದೆಯ ಮುತ್ತಿನ ಹಾರ, ಕಿವಿಗಳ ಚಿನ್ನದ ಕುಂಡಲಗಳಿಂದ ಎಲ್ಲರ ಕಣ್ಮನಗಳನ್ನು ಸೆಳೆಯುತ್ತ ಪರಮಾನಂದನ್ನು ಅನುಭವಿಸಿದರು.

ನದಿಗೆ ಹೋಗುವ ದಾರಿಯಲ್ಲಿ ಜನರು ಕಿಕ್ಕಿರಿದು ನೆರೆದಿದ್ದರು. ಶ್ರೀರಾಮನು ಆ ದಾರಿಯಿಂದ ನಡೆದು ಸೀತಾಸಮೇತನಾಗಿ ಸರಯೂ ನದಿಯಲ್ಲಿ ಮುಳುಗಿ ಸ್ನಾನ ಮಾಡಿದ. ಜತೆಗೆ ವಶಿಷ್ಠಾದಿ ಮುನಿಗಳೂ ಎಲ್ಲ ರಾಜರೂಗಳೂ ಪ್ರಜೆಗಳೂ ಸ್ನಾನ ಮಾಡಿದರು. ರಾಮನ ಪಾದಧೂಳಿಯಿಂದ ಪವಿತ್ರವಾದ ಲೋಕೈಕವಂದ್ಯವಾದ ಆ ಸರಯೂ ತೀರ್ಥವನ್ನು ಕೊಳವಿಗಳಿಂದ ಪರಸ್ಪರ ಎರಚಿಕೊಂಡು ಕಣ್ಣುಗಳನ್ನು ಕೆಂಪಾಗಿಸಿಕೊಂಡರು. ಆನಂದಪಟ್ಟರು. ಶ್ರೀರಾಮನೂ ಸೀತೆಯೊಂದಿಗೆ ಬಹು ಕಾಲ ನೀರಿನ ಅಲೆಗಳಲ್ಲಿ ಆಟವಾಡಿ ಮೇಲೆ ಬಂದನು. ರೇಶಿಮೆ ಬಟ್ಟೆಯನ್ನುಟ್ಟು ಕಿರೀಟ ಕುಂಡಲ ಕೇಯೂರ ಕಂಕಣಗಳನ್ನು ಧರಿಸಿ ಕೋಟಿ ಮನ್ಮಥರ ಕಾಂತಿಯನ್ನು ಬೀರುತ್ತ ರಾಜರುಗಳ ಸ್ತುತಿಗೆ ಪಾತ್ರನಾಗಿ ಮೆರೆದ ಶ್ರೀರಾಮಚಂದ್ರ.

ಹೀಗೆ ಶ್ರೀರಾಮನು ಸರಯೂ ತೀರದಲ್ಲಿ ಯಾಗದ ಯೂಪವನ್ನು ನೆಟ್ಟು ಬೇರಾರಿಂದಲೂ ಪಡೆಯಲಾಗದ ತ್ರಿಲೋಕಾಧಿಪತ್ಯವನ್ನು ಭುಜಬಲದಿಂದ ಸಂಪಾದಿಸಿದನು. ಸೀತಾಸಮೇತನಾಗಿ ಇಂಥ ಮೂರು ಅಶ್ವಮೇಧ ಯಾಗಗಳನ್ನು ಮಾಡಿ ಮೂರು ಲೋಕದಲ್ಲಿ ತನ್ನ ಅನುಪಮವಾದ ಕೀರ್ತಿಯನ್ನು ಹರಡಿಸಿದನು.

ಈ ರಾಮಾಶ್ವಮೇಧದ ಕಥೆಯನ್ನು ಭಕ್ತಿಯಿಂದ ಕೇಳಿದರೆ ಬ್ರಹ್ಮಹತ್ಯೆಯೂ ಕ್ಷಣದಲ್ಲಿ ದೂರವಾಗುವುದು. ಶಾಶ್ವತನಾದ ಪರಬ್ರಹ್ಮನೂ ದೊರೆಯುವನು. ಅಪುತ್ರರಿಗೆ ಪುತ್ರ ಲಾಭ. ದರಿದ್ರರಿಗೆ ಧನಲಾಭ, ರೋಗಿಗಳಿಗೆ ರೋಗದಿಂದ ಮುಕ್ತಿ. ಬಂಧನದಲ್ಲಿರುವವರಿಗೆ ಅದರಿಂದ ಬಿಡುಗಡೆ ಉಂಟಾಗುವುದು. ದುಷ್ಟ ಚಂಡಾಲರೂ ಈ ಕಥೆಯನ್ನು ಕೇಳಿದರೆ ಪರಮಪದವನ್ನು ಹೊಂದುವರು. ರಾಮಭಕ್ತರಾದ ವಿಪ್ರಶ್ರೇಷ್ಠರ ವಿಷಯದಲ್ಲಿ ಹೇಳತಕ್ಕದ್ದೇನಿದೆ ?

**ರಾಮಂ ಸ್ಮೃತ್ವಾ ಮಹಾಭಾಗಂ ಪಾಪಿನೋಪಿ ಪರಂ ಪದಂ ।**
**ಪ್ರಾಪ್ನುಯುಃ ಪರಮಂ ಸ್ವರ್ಗಂ ಶಕ್ರದೇವಾದಿ ದುರ್ಲಭಂ ॥**

ಮಹಾತ್ಮನಾದ ರಾಮನನ್ನು ಸ್ಮರಿಸಿ ಪಾಪಿಗಳೂ ಪರಮಪದವನ್ನು ಹೊಂದುವರು. ಇಂದ್ರಾದಿಗಳಿಗೂ ದುರ್ಲಭವಾದ ಮೋಕ್ಷವನ್ನು ಪಡೆಯುವರು.

**ತೇ ಧನ್ಯಾ ಮಾನವಾ ಲೋಕೇ ಯೇ ಸ್ಮರಂತಿ ರಘೂದ್ವಹಂ ।**
**ತೇ ಕ್ಷಣಾತ್ ಸಂಸೃತಿಂ ತೀರ್ತ್ವಾ ಗಚ್ಛಂತಿ ಸುಖಮವ್ಯಯಂ ॥**

ರಾಮನನ್ನು ಸ್ಮರಿಸುವ ಮಾನವರೆ ಲೋಕದಲ್ಲಿ ಧನ್ಯರು. ಅವರು ಕ್ಷಣದಲ್ಲಿ ಸಂಸಾರವನ್ನು ದಾಟಿ ಶಾಶ್ವತ ಸುಖವನ್ನು ಹೊಂದುವರು.

ಈ ಕಥೆಯಲ್ಲಿರುವ ಪ್ರತಿಯೊಂದು ಅಕ್ಷರವೂ ಬ್ರಹ್ಮಹತ್ಯೆ ಎಂಬ ಬಿದಿರಮೆಳೆಗೆ ಕಾಳ್ಗಿಚ್ಚಿನಂತಿರುವುದರಿಂದ ಅದನ್ನು ಹೇಳುವ ಗುರುವನ್ನು ಚೆನ್ನಾಗಿ ಪೂಜಿಸಬೇಕು. ಎರಡು ಗೋದಾನ ಮಾಡಬೇಕು. ವಸ್ತ್ರ ಅಲಂಕಾರ ಭೋಜನಗಳಿಂದ ದಂಪತಿ ಪೂಜೆ ಮಾಡಬೇಕು. ಕುಂಡಲ ಮುದ್ರಿಕೆಗಳಿಂದ ಶೋಭಿಸುವ ಸೀತಾರಾಮರ ಸ್ವರ್ಣ ಪ್ರತಿಮೆಗಳನ್ನು ಮಾಡಿಸಿ ಅವನಿಗೆ ದಾನ ಮಾಡಿದರೆ ತನ್ನ ಪಿತೃಗಳಿಗೂ ವೈಕುಂಠ ಲಭಿಸುವುದು.

ಈ ಕಥೆಯನ್ನು ಕೇಳಿದರೆ ಬ್ರಹ್ಮಾಹತ್ಯಾ ಪತಾಕಗಳೆಷ್ಟಿದ್ದರೂ ತೊಲಗುವವು. ದೇವತೆಗಳಿಗೂ ದುರ್ಲಭವಾದ ಪರಮಪದವೂ ಲಭಿಸುವುದು. ಗೋಹತ್ಯೆ, ಪುತ್ರಹತ್ಯೆ, ಸುರಾಪಾನ, ಗುರುತಲ್ಪಗಮನಗಳಂಥ ಪಾಪಗಳೂ ಕ್ಷಣದಲ್ಲಿ ದೂರವಾಗುವುವು.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಪಾತಾಳಖಂಡದಲ್ಲಿ ಶೇಷ ವಾತ್ಸ್ಯಾಯನ ಸಂವಾದದಲ್ಲಿ ರಾಮಾಶ್ವಮೇಧದಲ್ಲಿ ಸೀತಾರಾಮರ ಸಮಾಗಮವೆಂಬ ಇಪ್ಪತ್ತೊಂದನೆ ಅಧ್ಯಾಯ ಮುಗಿದುದು*



## ಶ್ರೀಕೃಷ್ಣ ಚರಿತ್ರೆ, ವೃಂದವನ ಮಹಾತ್ಮ್ಯೆ — ಅಧ್ಯಾಯ - ೨೨

**ಋಷಿಯ ಉವಾಚ**

**ಋಷಿಗಳು** :- ಸೂತನೆ, ಶ್ರೀರಾಮಾಶ್ವಮೇಧದ ಕಥೆಯನ್ನು ಚೆನ್ನಾಗಿ ಕೇಳಿದೆವು. ಈಗ ಶ್ರೀ ಕೃಷ್ಣನ ಮಹಿಮೆಯನ್ನು ಹೇಳು.

**ಸೂತ** :- ಅಮೃತದಂತೆ ಮಧುರವಾದ ಶ್ರೀಕೃಷ್ಣನ ಚರಿತ್ರೆಯ ವಿಷಯದಲ್ಲಿ ಹಿಂದೊಮ್ಮೆ ಪಾರ್ವತಿಯು ಶಿವನಲ್ಲಿ ಕೇಳಿದಳು.

**ಪಾರ್ವತಿ** :- ನಾಥ, ಅನಂತ ಕೋಟಿ ಬ್ರಹ್ಮಾಂಡಗಳ ಒಳಗೂ ಹೊರಗೂ ಇರುವ ಸ್ಥಾನಗಳಲ್ಲೆಲ್ಲ ವಿಷ್ಣುವಿನ ಸ್ಥಾನವೆ ಅತ್ಯುತ್ತಮವಾದುದು. ಆ ಕೃಷ್ಣನಿಗೆ ಪ್ರಿಯವಾದ ಸುಂದರಧಾಮಗಳಲ್ಲೆಲ್ಲ ಉತ್ತಮವಾದುದನ್ನು ಬಣ್ಣಿಸು.

**ಈಶ್ವರ** :- ವೃಂದಾವನವೆಂಬ ವಿಷ್ಣುವಿನ ಅತ್ಯಂತ ರಹಸ್ಯವಾದ. ಪವಿತ್ರ ಆನಂದಮಯ ಶಾಶ್ವತ ಸ್ಥಾನವೊಂದು ಬ್ರಹ್ಮಾಂಡದ ಮೇಲಿದೆ. ಪೂರ್ಣಾನಂದ ಐಶ್ವರ್ಯಮಯವಾದ ವೈಕುಂಠ ಮೊದಲಾದ ಸ್ಥಾನವೂ ಅದರ ಅಂಶದ ಅಂಶದಂತಿದೆ. ಗೋಲೋಕದ ಐಶ್ವರ್ಯ ಗೋಕುಲದಲ್ಲಿದ್ದರೆ ವೈಕುಂಠದ ವೈಭವ ದ್ವಾರಕೆಯಲ್ಲಿದೆ. ಪರಬ್ರಹ್ಮನಾದ ಶ್ರೀಕೃಷ್ಣನು ವೃಂದಾವನದಲ್ಲಿದ್ದಾನೆ. ಆದ್ದರಿಂದಲೆ ಮೂರು ಲೋಕಗಳಲ್ಲಿ ಭೂಲೋಕವೆ ಧನ್ಯವೆನಿಸಿದೆ. ಇಲ್ಲಿ ವಿಷ್ಣುವಿಗೆ ಅತಿಪ್ರಿಯವಾದ ಮಧುರೆ ಇರುವುದೂ ಅದಕ್ಕೆ ಇನ್ನೊಂದು ಕಾರಣ. ಮಧುರೆಯು ಸಹಸ್ರದಳ ಕಮಲದಾಕಾರದಲ್ಲಿದೆ. ವಿಷ್ಣುಚಕ್ರದಷ್ಟು ವಿಸ್ತಾರವಿದೆ. ಇಲ್ಲಿ ಭದ್ರ, ಶ್ರೀ, ಲೋಹ, ಭಾಂಡೀರ, ಮಹಾ, ತಾಳ, ಖರೀರ, ವಕುಲ, ಕುಮುದ, ಕಾಮ್ಯ, ಮಧು, ವೃಂದಾ ಎಂಬ ಹನ್ನೆರಡು ದೊಡ್ಡ ವನಗಳಿವೆ. ಅವುಗಳಲ್ಲಿ ಏಳು ಯಮುನೆಯ ಪಶ್ಚಿಮಕ್ಕಿವೆ. ಐದು ಪೂರ್ವಕ್ಕಿವೆ. ಕದಂಬ, ಖಂಡಕ, ನಂದ, ನಂದೀಶ್ವರ ನಂದನ ಮೊದಲಾದ ಉಪವನಗಳೂ

ಇಲ್ಲಿ ಇವೆ. ಸಂಕೇತ, ದ್ವಿಪದ ಮುಂತಾದ ಕ್ರೀಡಾ ಸ್ಥಳಗಳೂ ಇವೆ. ಕಮಲದ ಕರ್ಣಿಕೆಯಂತೆ ಇರುವ ಕೃಷ್ಣನ ಸ್ಥಾನದಲ್ಲಿ ಸುವರ್ಣ ಪೀಠದ ಮೇಲೆ ಮಣಿಮಯ ಮಂಟಪವಿದೆ. ಕರ್ಣಿಕೆಯ ಸುತ್ತಲೂ ದಿಕ್ಕು ದಿಕ್ಕುಗಳಲ್ಲಿ ಎಂಟು ದಳಗಳು. ದಕ್ಷಿಣ ದಳದಲ್ಲಿ ಒಂದು ಮಹಾಪೀಠವಿದೆ. ಅದು ಮಹಾಯೋಗಿಗಳಿಗೂ ದುರ್ಲಭ. ಅಗ್ನೇಯ ದಳದಲ್ಲಿ ಸಂಕೇತ, ದ್ವಿಪದ ಎಂಬ ಎರಡು ಕುಟೀರಗಳಿವೆ. ಪೂರ್ವ ದಳದಲ್ಲಿ ಗಂಗಾದಿ ಸರ್ವತೀರ್ಥಗಳಿಗಿಂತ ನೂರುಪಾಲಷ್ಟು ಮಿಗಿಲಾದ ಒಂದು ಸ್ಥಾನವಿದೆ. ಈಶಾನ್ಯ ದಳದಲ್ಲಿ ಸಿದ್ಧಪೀಠವಿದೆ. ಗೋಪಿಯರು ಕಾತ್ಯಾಯಿನೀ ವ್ರತ ಮಾಡಿ ಕೃಷ್ಣನನ್ನೊಲಿಸಿಕೊಂಡುದೂ, ಕೃಷ್ಣನು ಅವರ ವಸ್ತ್ರಾಭರಣಗಳನ್ನು ಅಪಹರಿಸಿದುದೂ ಇಲ್ಲಿಯೆ. ಉತ್ತರ ದಳದಲ್ಲಿ ದ್ವಾದಶಾದಿತ್ಯರಿರುವರು. ಕರ್ಣಿಕೆಯಂತೆಯೆ ಈ ದಳವೂ ಪವಿತ್ರವೆನಿಸಿದೆ. ವಾಯವ್ಯ ದಳದಲ್ಲಿ ಕಾಲಿಯನ ಮಡುವಿದೆ. ಪಶ್ಚಿಮ ದಳದಲ್ಲಿ ವಿಪ್ರಪತ್ನಿಯರಿಗೆ ಕೃಷ್ಣನೊಲಿದು ವರವನ್ನಿತ್ತ ಸ್ಥಳವಿದೆ. ಇಲ್ಲಿಯೇ ಬ್ರಹ್ಮಹ್ರದವೂ ಇದೆ. ನೈಋತ್ಯ ದಳದಲ್ಲಿ ಶಂಖ ಚೂಡನನ್ನು ಕೊಂದ ಸ್ಥಳವಿದೆ. ಹೀಗೆ ಅಷ್ಟದಳ ಪದ್ಮವು ಈ ಪ್ರದೇಶದಲ್ಲಿದೆ.

ಈ ಅಷ್ಟದಳ ಪದ್ಮದ ಹೊರಗೆ ಷೋಡಶದಳ ಪದ್ಮವಿದೆ. ಪ್ರದಕ್ಷಿಣಾಕಾರವಾಗಿ ಒಂದನೆ ದಳದಲ್ಲಿ ಕರ್ಣಿಕೆಯಲ್ಲಿರುವಂತೆಯೇ ಮಹಾ ಐಶ್ವರ್ಯವಿದೆ. ಗೋವರ್ಧನಗಿರಿ ಇದೆ. ಎರಡನೆ ದಳದಲ್ಲಿ ಕೃಷ್ಣನು ವೃಂದಾವನದ ಅಧಿಪತಿಯಾಗಿ ಗೋವಿಂದನೆನಿಸಿದ. ಮೂರನೆ ದಳವೂ ಅತ್ಯುತ್ತಮವಾಗಿದೆ. ನಾಲ್ಕನೆ ಧಳದಲ್ಲಿ ನಂದೀಶ್ವರ ವನವಿದೆ. ನಂದನ ಮನೆ ಇದೆ. ಐದನೆ ದಳದಲ್ಲಿ ಕೃಷ್ಣನು ಗೋವುಗಳನ್ನು ಪಾಲಿಸುತ್ತ ಅಧಿಷ್ಠಾನೆನಿಸಿದ್ದಾನೆ. ಆರನೆ ದಳದಲ್ಲಿ ನಂದನವನವಿದೆ. ಏಳನೆ ದಳದಲ್ಲಿ ವಕುಲ ವನವಿದೆ. ಇಲ್ಲಿಯೆ ಧೇನುಕ ವಧೆ ನಡೆಯಿತು. ಒಂಬತ್ತನೆ ದಳದಲ್ಲಿ ಕುಮುದ ವನವಿದೆ. ಹತ್ತನೆ ದಳದಲ್ಲಿ ಕಾಮ್ಯ ವನವಿದೆ. ಇಲ್ಲಿಯೇ ಬ್ರಹ್ಮ ಪ್ರಸಾದನವಿದೆ. ವಿಷ್ಣುವು ಕಪಟ ತೋರಿದುದು ಇಲ್ಲಿಯೆ. ಕೃಷ್ಣನ ಮುಖ್ಯವಾದ ಕ್ರೀಡಾಸ್ಥಾನ ಇದು. ಹನ್ನೊಂದನೆ ದಳದಲ್ಲಿ ಸೇತುಬಂಧದ ಸ್ಥಳವಿದೆ. ಹನ್ನೆರಡನೆ ದಳದಲ್ಲಿ ಭಾಂಡೀರ ವನವಿದೆ. ಶ್ರೀದಾಮ ಮುಂತಾದವರೊಡನೆ ಕೃಷ್ಣನ ಮುಖ್ಯವಾದ ಕ್ರೀಡಾಸ್ಥಾನ ಇದು. ಕೃಷ್ಣನು ಇಲ್ಲಿ ಆಟ ಆಡುತ್ತಿದ್ದ. ಹದಿಮೂರನೇ ದಳದಲ್ಲಿ ಭದ್ರವನವಿದೆ. ಹದಿನಾಲ್ಕನೆ ದಳದಲ್ಲಿ ಎಲ್ಲ ಸಿದ್ಧಿಗಳನ್ನು ಕೊಡುವ ಶ್ರೀವನವಿದೆ. ಐಶ್ವರ್ಯ ಕಾಂತಿ ಕೀರ್ತಿಗಳನ್ನು ವೃದ್ಧಿಗೊಳಿಸುವ ಕೃಷ್ಣನ ವಿಹಾರ ಸ್ಥಳವಿದು. ಹದಿನೈದನೆ ದಳದಲ್ಲಿ ಲೋಹ ವನವಿದೆ. ಹದಿನಾರನೆ ದಳದಲ್ಲಿ ಮಹಾವನವಿದೆ. ಕೃಷ್ಣನ ಬಾಲಕ್ರೀಡೆಯ ಸ್ಥಳವಿದು. ಪೂತನೆ ಮುಂತಾದವರನ್ನೂ ಯಮಳಾರ್ಜುನರನ್ನೂ ಸಂಹರಿಸಿದ ಐದು ವರ್ಷ ವಯಸ್ಸಿನ ಬಾಲಗೋಪಾಲನು ದಾಮೋದರನೆನಿಸಿದುದು ಇಲ್ಲಿ.

**ಪಾರ್ವತಿ :-** ನಾಥ, ವೃಂದಾವನದ ಮಹಿಮೆಯನ್ನು ಹೇಳು.

**ಈಶ್ವರ :-** ವೃಂದಾವನದ ಮಹಿಮೆ ಅತ್ಯಂತ ಗೋಪ್ಯವಾದುದು. ಬ್ರಹ್ಮಾದಿಗಳೂ ಸುರಸಿದ್ಧ ಮುಂತಾದವರೂ ಅದನ್ನು ಬಯಸುವರು. ಯೋಗಿಗಳು ಅದನ್ನೆ ಧ್ಯಾನಿಸುವರು. ಅಪ್ಸರ ಗಂಧರ್ವರ ನಾಟ್ಯ ಗೀತೆಗಳು ಅಲ್ಲಿ ಸದಾ ಇರುತ್ತವೆ.

ಆನಂದಮಯವಾದ ಸ್ಥಳವಿದು. ಚಿಂತಾಮಣಿಯಂಥ ಅಮೃತರಸ ಇಲ್ಲಿ ತುಂಬಿದೆ. ಇಲ್ಲಿ ಮರಗಳೆಲ್ಲವೂ ಕಲ್ಪವೃಕ್ಷಗಳು. ಗೋವುಗಳೆಲ್ಲವೂ ಕಾಮಧೇನುಗಳು. ಸ್ತ್ರೀ ಪುರುಷರೆಲ್ಲರೂ ಲಕ್ಷ್ಮೀನಾರಾಯಣರ ಅಂಶಭೂತರು. ತನ್ನ ಪೂರ್ಣಾನಂದದಲ್ಲಿ ಮಗ್ನನಾದ ಹೊಳೆಯುವ ಕಿಶೋರ ರೂಪಿನ ಕೃಷ್ಣನನ್ನು ಸತ್ವಮಯರಾದ ಪ್ರೇಮಪೂರ್ಣರಾದ ವೈಷ್ಣವರು ಸೇವಿಸುವರು. ಕೋಗಿಲೆ, ದುಂಬಿ, ಪಾರಿವಾಳ, ಗಿಳಿ ಮುಂತಾದ ಹಕ್ಕಿಗಳು ಆನಂದದಿಂದ ಮದವೇರಿ ಧ್ವನಿ ಮಾಡುವವು. ನವಿಲುಗಳು ಕುಣಿಯುವವು. ಪೂರ್ಣಚಂದ್ರನ ಬೆಳದಿಂಗಳು ಬಾಲಸೂರ್ಯನ ಹೊಂಬೆಳಕು ಹೂಗಳ ಪರಾಗಗಳು ಎಲ್ಲೆಡೆ ಹರಡಿದ್ದು ದುಃಖ ಜರಾ ಮರಣಗಳಿಂದ ದೂರವಾದ ಕ್ರೋಧ ಮಾತ್ಸರ್ಯ ಅಹಂಕಾರಗಳ ಲೇಶವಿಲ್ಲದ ಪೂರ್ಣಾನಂದಮೃತರಸಸಾಗರದಲ್ಲಿ ವಿಷ್ಣುಭಕ್ತರು ಮುಳುಗಿರುವ ಸ್ಥಳವಿದು. ಅಲ್ಲಿಯ ಮರಗಿಡಗಳೂ ಪ್ರೇಮ ಆನಂದಗಳ ಬಾಷ್ಪ ಸುರಿಸುತ್ತವೆ ಎಂದ ಮೇಲೆ ವಿಷ್ಣುಭಕ್ತರ ಸುಖವೆಷ್ಟೆಂದು ವರ್ಣಿಸಲಿ ? ಇದಕ್ಕೆಲ್ಲ ಗೋವಿಂದನ ಪಾದಧೂಳಿಯ ಸ್ಪರ್ಶ ಈ ಸ್ಥಳದಲ್ಲಾದುದೆ ಕಾರಣ. ಈ ಸ್ಥಳ ಭೂಮಿಯ ಮೇಲಿರುವುದರಿಂದ ಭೂಮಿ ಧನ್ಯವೆನಿಸಿತು. ಈ ಸ್ಥಳಕ್ಕೆ ಎಂದೂ ನಾಶವಿಲ್ಲ. ಗೋವಿಂದನ ಶರೀರದೊಡನೆ ಒಂದಾಗಿರುವಂತೆ ಇರುವ ಈ ಸ್ಥಳದ ದೂಳಿಯೂ ಸ್ಪರ್ಶಮಾತ್ರದಿಂದ ಮುಕ್ತಿ ಕೊಡಬಲ್ಲುದು. ದೇವಿ, ಬಾಲಕೃಷ್ಣನ ವಿಹಾರ ಸ್ಥಾನವಾದ ಈ ವೃಂದಾವನವನ್ನು ನಿನ್ನೆದೆಯಲ್ಲಿ ಸದಾ ಧ್ಯಾನಿಸು.

ಈ ಸ್ಥಳಕ್ಕೆ ಪ್ರದಕ್ಷಿಣಾಕಾರವಾಗಿ ಯಮುನಾ ನದಿ ಹರಿಯುತ್ತದೆ. ಗಂಭೀರವಾಗಿ ಲಾಸ್ಯವಾಡುತ್ತ ಪದ್ಮ ಉತ್ಪಲ ಮುಂತಾದ ಹೂಗಳ ನಾನಾ ಬಣ್ಣ ನಾನಾ ಪರಿಮಳಗಳನ್ನು ಹೊತ್ತು ಹರಿಯುವ ಈ ನದಿಯಲ್ಲಿ ಮನೋಹರವಾದ ಅಲೆಗಳ ಮೇಲೆ ಚಕ್ರವಾಕಾದಿ ಹಕ್ಕಿಗಳು ತೇಲುತ್ತ ನಾನಾವಿಧದ ಮಧುರ ಧ್ವನಿಗಳನ್ನು ಮಾಡುತ್ತಿವೆ. ನದಿಯ ಎರಡು ದಡಗಳು ಶುದ್ಧ ಚಿನ್ನದಿಂದ ನಿರ್ಮಿತವಾಗಿವೆ. ಆ ನೀರಿನ ಸ್ಪರ್ಶ ಗಂಗೆಗಿಂತ ಕೋಟಿ ಪಾಲು ಹೆಚ್ಚು ಪವಿತ್ರ. ಶ್ರೀಕೃಷ್ಣನು ಅದರಲ್ಲಿ ಆಟವಾಡುತ್ತ ಒಂದಾಗಿ ಬೆರೆತು ಹೋಗಿದ್ದ.

**ಪಾರ್ವತಿ :-** ಶ್ರೀಕೃಷ್ಣನ ಅದ್ಭುತ ಸೌಂದರ್ಯ ಹೇಗಿರುವುದು ? ಹೇಳು.

**ಈಶ್ವರ :-** ಒಂದು ಯೋಜನ ವಿಸ್ತಾರದ ವೃಕ್ಷಶಾಖಾಪಲ್ಲವಗಳಿಂದ ಅಲಂಕೃತವಾದ ರಮ್ಯವಾದ ವೃಂದಾವನದ ಮಧ್ಯದಲ್ಲಿ ಸುಂದರವಾದ ಗೃಹದಲ್ಲಿ ಉಜ್ವಲವಾದ ಯೋಗಪೀಠವಿದೆ. ಅಷ್ಟಕೋನಾಕೃತಿಯ ಈ ಪೀಠದ ಮೇಲೆ ಮಾಣಿಕ್ಯ, ರತ್ನ ಸಿಂಹಾಸನ, ಅದರ ಮೇಲಿನ ಅಷ್ಟದಳ ಪದ್ಮದ ಕರ್ಣಿಕೆಯಲ್ಲಿ ಸುಖಾಸನದಲ್ಲಿ ಗೋವಿಂದನು ಕುಳಿತು ವೈಷ್ಣವ ವೃಂದಗಳ ಸೇವೆಗಳನ್ನು ಕೈಗೊಳ್ಳುತ್ತಾನೆ. ಬಾಲಕರೆಲ್ಲರಿಗೂ ಪರಮಪ್ರಿಯನೀತ. ವೃಂದಾವನದ ಅಧಿಪತಿ. ಕಿಶೋರ ವಯಸ್ಸಿನಲ್ಲಿಯೂ ಯೌವನದ ಮೋಹಕತೆಯನ್ನು ಪಡೆದ ಅದ್ಭುತ ಶರೀರವುಳ್ಳವ. ತಾನು ಅನಾದಿ. ಎಲ್ಲಕ್ಕೂ ಆಧಿ. ಆದರೆ ನಂದಗೋಪನ ಪ್ರೀತಿಯ ಮಗ. ಶ್ರುತಿಗಳು ಹುಡುಕುತ್ತಿರುವುದು ಈತನನ್ನೆ. ಗೋಪಿಯರು ಮನಸ್ಸನ್ನು ಅಪಹರಿಸಿದವನೀತ. ದ್ವಿಭುಜನಾದ ಈ ಗೋಪಿಯ ಕಂದನನ್ನು ಗುಣತ್ರಯರಹಿತವಾದ ಮೋಕ್ಷಕ್ಕೆ ಮುಖ್ಯ ಕಾರಣನೆಂದು ಧ್ಯಾನಿಸಬೇಕು.

ಸ್ವಚ್ಛವಾದ ಹೊಸ ಶ್ಯಾಮಲ ವರ್ಣದ ಕಾಂತಿಯಿಂದೆಸೆವ ಅವನ ಶರೀರ ಮೋಡದಂತೆ ಹೊಳೆಯುತ್ತದೆ. ಅರಳಿದ ನೈದಿಲೆಯಂತೆ ಕಾಣುತ್ತದೆ. ಅದರಂತೆ ಸುಖಸ್ಪರ್ಶವನ್ನೂ ನೀಡುತ್ತದೆ. ನೀಲವರ್ಣದ ಸ್ನಿಗ್ಧವಾದ ಕುರುಳು ಕೂದಲು ಪರಿಮಳವನ್ನು ಬೀರುತ್ತದೆ. ಹಣೆಯ ಬಲಭಾಗದಲ್ಲಿ ನವಿಲುಗರಿಗಳಿಂದ ಅಲಂಕೃತವಾದ ಶ್ಯಾಮಲವರ್ಣದ ತುರಾಯಿ ಇದೆ. ಮಂದಾರದ ಹೂಗಳಿಂದ ಅದು ಭೂಷಿತವಾಗಿದೆ. ಕೆಲವೊಮ್ಮೆ ನವಿಲುಗರಿಗಳಿಂದ ಒಪ್ಪುವ ಕಿರೀಟ. ಕೆಲವೊಮ್ಮೆ ನಾನಾ ರತ್ನಮಯವಾದ ಮಾಣಿಕ್ಯದ ಕಿರೀಟ. ಹಾರಾಡುವ ಮುಂಗುರುಳಿನಿಂದೆಸೆವ ಕೋಟಿ ಚಂದ್ರರಂತೆ ಹೊಳೆವ ಮುಖ. ಕಸ್ತೂರಿಯ ತಿಲಕ ಮನೋಹರ ಗೋರೋಚನಗಳಿಂದ ಕೂಡಿದ ಹಣೆ. ನೀಲತಾವರೆಯಂತೆ ಹೊಳೆವ ಉದ್ದವಾದ ಕಣ್ಣುಗಳು. ತುಸು ಕುಣಿಯುವ ಹುಬ್ಬಿನ ಬಳ್ಳಿಯಿಂದ ಕೂಡಿ ನಗುವ ಬಾಗಿದ ಕಣ್ಣುಗಳು. ಸುಂದರವಾದ ತುದಿಯುಳ್ಳ ಮೂಗು, ಚಿನ್ನದ ಮಕರ ಕುಂಡಲಗಳು. ಅವುಗಳ ಕಾಂತಿಯನ್ನು ಪಡೆದ ಕನ್ನಡಿಯಂಥ ಕಪೋಲಗಳು. ಉತ್ಪಲ ಮಂದಾರಗಳಿಂದ ಅಲಂಕೃತವಾದ ಕಿವಿಗಳು. ಶ್ರೀವತ್ಸ ಕೌಸ್ತುಭ ಭೂಷಿತವಾದ ಎದೆ. ಮುತ್ತಿನ ಹಾರಗಳಿಂದ ಕೂಡಿದ ಕತ್ತು ದಿವ್ಯ ಮಾಣಿಕ್ಯ ಚಿನ್ನಗಳಿಂದ ಮಾಡಿದ ಕೈಬಳೆ ಭುಜ ಕೀರ್ತಿ ಕಾಲು ಕಡಗಗಳು. ಮಧುರವಾಗಿ ಶಬ್ದ ಮಾಡುವ ಗೆಜ್ಜೆಗಳಿಂದ ಒಪ್ಪುವ ಹೊಳೆವ ಪಾದಗಳು. ಮೈಯೆಲ್ಲ ಕರ್ಪೂರ ಅಗುರು ಕಸ್ತೂರಿ ಚಂದನ ಗೋರೋಚನ ಮುಂತಾದವುಗಳಿಂದ ಕೂಡಿದ ಅಂಗರಾಗದ ಲೇಪ. ಮೃದುವಾದ ಪೀತಾಂಬರದ ಶೋಭೆ. ಗಂಭೀರ ನಾಭಿ ಕಮಲ ಚಿಹ್ನೆಗಳುಳ್ಳ ಅಂಗೈ ಅಂಗಾಲುಗಳು. ಬೆಳದಿಂಗಳು ಚೆಲ್ಲುವ ಉಗುರುಗಳು. ಇಂಥ ಮನೋಹರ ರೂಪಿನ ಶ್ರೀಕೃಷ್ಣನೇ ಜಗತ್ತಿಗೆ ಮೂಲ ಕಾರಣ. ಬಲ್ಲವರು ಕೆಲವರು ಅವ್ಯಯ ಚಿದ್ರೂಪ ಬ್ರಹ್ಮನೂ ಮಹಾವಿಷ್ಣುವೂ ಇವನ ಅಂಶವೆಂದು ಅನ್ನುವರು.

ಯೋಗಿಗಳೆಲ್ಲರೂ ಹೃದಯದಲ್ಲಿ ಶ್ರೀಕೃಷ್ಣನು ತ್ರಿಭಂಗಿಯಲ್ಲಿ ನಿಂತ ಮೋಹಕವಾದ ಮುರಳೀಧರ ಮೂರ್ತಿಯನ್ನು ಧ್ಯಾನಿಸುವರು. ಆ ಕೃಷ್ಣನು ಪ್ರೇಮಾಮೃತ ಸಮುದ್ರದಲ್ಲಿ ಮುಳುಗಿದ್ದು ಮೂರು ಲೋಕವನ್ನೂ ಮೋಹಗೊಳಿಸುತ್ತಾನೆ.

**ಪಾರ್ವತಿ :-** ಎಲ್ಲಕ್ಕೂ ಮೂಲ ಕಾರಣವಾದ ಆ ಗೋವಿಂದನ ರಹಸ್ಯ ಮಹಿಮೆ ಐಶ್ವರ್ಯಗಳೇನು ಹೇಳು.

**ಈಶ್ವರ :-** ಯಾರ ಪಾದಕಾಂತಿಯ ಮಹಿಮೆಗೇ ಪಾರವಿಲ್ಲವೊ ಅವನ ಮಹಿಮೆಯನ್ನು ಎಷ್ಟೆಂದು ಹೇಳಲಿ ? ಬ್ರಹ್ಮ ವಿಷ್ಣು ಮಹೇಶ್ವರರು ಅವನ ಹದಿನಾರನೆ ಒಂದಂಶದ ಕೋಟಿಯ ಒಂದಂಶದಲ್ಲಿ ಕೋಟಿಯ ಒಂದಂಶ ಎನ್ನಬೇಕು. ಅವ ಪ್ರಕಾಶದಲ್ಲಿ ಕೋಟಿಯ ಒಂದಂಶ ಕೋಟಿಯ ಒಂದಂಶ ಸೂರ್ಯನ ಪ್ರಕಾಶ. ಅವನ ಮೈಯ ಸುಗಂಧದ ಒಂದಂಶದಲ್ಲಿ ಅನಂತ ಕೋಟಿಯ ಒಂದಂಶ ಜಗತ್ತಿನಲ್ಲಿ ಸಿಗಬಹುದು. ಅವನ ಪ್ರಿಯೆಯ ಮೂಲ ಪ್ರಕೃತಿ. ಅವಳೆ ರಾಧೆ. ದುರ್ಗೆ ಸರಸ್ವತಿ ಮೊದಲಾದವರು ಅವಳ ಹದಿನಾರನೆ ಒಂದಂಶದ ಕೋಟಿಯ ಒಂದಂಶದಲ್ಲಿ ಕೋಟಿಯ ಒಂದಂಶ. ಅವಳ ಪಾದಧೂಳಿಯ ಸ್ಪರ್ಶಮಾತ್ರದಿಂದ ಕೋಟಿ ಸಂಖ್ಯೆಯಲ್ಲಿ ವಿಷ್ಣುಗಳು ಹುಟ್ಟಬಹುದು.

**ಪಾರ್ವತ್ಯುವಾಚ**

**ಪಾರ್ವತಿ :-** ಶ್ರೀಕೃಷ್ಣನ ಪರಿವಾರದವರು ಯಾರು ? ಅದನ್ನು ಹೇಳು.

**ಈಶ್ವರ :-** ಸ್ವರ್ಣಸಿಂಹಾಸನದಲ್ಲಿ ಶ್ರೀಕೃಷ್ಣನು ರಾಧೆಯೊಡನೆ ಕುಳಿತಿರುವುದನ್ನು ಧ್ಯಾನಿಸಬೇಕು. ಆ ಸ್ವರ್ಣ ಸಿಂಹಾನದೆದುರಿಗೆ ಲಲಿತೆ. ವಾಯವ್ಯದಲ್ಲಿ ಶ್ಯಾಮಲೆ, ಉತ್ತರದಲ್ಲಿ ಶ್ರೀಮತಿ, ಈಶಾನ್ಯದಲ್ಲಿ ಹರಿಪ್ರಿಯೆ, ಪೂರ್ವದಲ್ಲಿ ವಿಶಾಖೆ, ಆಗ್ನೇಯದಲ್ಲಿ ಶೈವ್ಯೆ. ದಕ್ಷಿಣದಲ್ಲಿ ಪದ್ಮೆ ಹೀಗೆ ಪ್ರಕೃತಿಯ ಅಂಶರೂಪವಾದ ಕೃಷ್ಣನ ಪ್ರೇಯಸಿರಿರುತ್ತಾರೆ. ಯೋಗಪೀಠದ ಕೇಸರದ ತುದಿಯಲ್ಲಿ ಚಂದ್ರಾವತಿ ಇರುವಳು. ರಾಧೆ, ಚಂದ್ರಾವತಿ, ಚಂದ್ರಾವಳಿ, ಚಿತ್ರರೇಖೆ, ಚಂದ್ರೆ, ಮದನಸುಂದರಿ, ಮಧುಮತಿ, ಚಂದ್ರರೇಖೆ ಮತ್ತು ಹಿಂದೆ ಎಂಟು ಜನ ಪ್ರೇಯಸಿಯರು. ಹೀಗೆ ಹದಿನಾರು ಮಂದಿ ಪ್ರಧಾನರಾದ ಪ್ರೇಯಸಿಯರಿದ್ದಾರೆ. ಗುಣ ಸೌಂದರ್ಯಗಳಲ್ಲಿ ಎಲ್ಲರೂ ಸಮಾನರು, ಮನೋಹರಿಯರು, ಮುಗ್ಧವೇಷ ತೊಡುವವರು. ಚಿನ್ನದಂತೆ ಹೊಳೆವ ಮೈ. ಎದೆಯಲ್ಲಿ ಸದಾ ಕೃಷ್ಣನ ಧ್ಯಾನ. ಅವನನ್ನು ಆಲಿಂಗಿಸುವ ಕಾತರ. ಪ್ರೇಮಾಮೃತ ರಸದಲ್ಲಿ ಮುಳುಗಿದ್ದು ಕಮಲದಂಥ ಕಣ್ಣುಗಳಿಂದ ಕೃಷ್ಣನ ಪಾದ ಕಮಲಗಳನ್ನು ಅರ್ಚಿಸಿ ಅಲ್ಲಿಯೆ ಮನಸ್ಸನ್ನು ನೆಟ್ಟಿದ್ದಾರೆ. ಬಲಪಾರ್ಶ್ವದಲ್ಲಿ ಸಾವಿರಾರು ಮಂದಿ ಶ್ರುತಿ ಕನ್ನೆಯರು ಮೂರು ಲೋಕಗಳನ್ನೆ ತಮ್ಮ ಪ್ರೇಮಗಾನದಿಂದ ಮೋಹಗೊಳಿಸುವವರು. ಎಡಭಾಗದಲ್ಲಿ ದಿವ್ಯ ವೇಷಗಳಿಂದ ಉಜ್ವಲವಾಗಿ ಹೊಳೆವ ಲಾವಣ್ಯವತಿಯರಾದ ದೇವಕನ್ನೆಯರು. ಕೃಷ್ಣನ ಅಂಗಸಂಗಕ್ಕಾಗಿ ನಿರ್ಲಜ್ಜೆಯಿಂದ ಕಾತರಪಡುತ್ತಿರುವವರು.

ಮಂದಿರದ ಪಶ್ಚಿಮ ದ್ವಾರದಲ್ಲಿ ಶ್ರೀಧಾಮೆ. ಉತ್ತರ ದ್ವಾರದಲ್ಲಿ ವಸುದಾಮೆ, ಪೂರ್ವದ್ವಾರದಲ್ಲಿ ಸುದಾಮೆ, ದಕ್ಷಿಣ ದ್ವಾರದಲ್ಲಿ ಕಿಂಕಿಣಿ, ಹೊರಗೆ ಸುವರ್ಣಪೀಠದಲ್ಲಿ ಸಾವಿರಾರು ಗೋಪಾಲಕರು ಕೊಂಬು ವೀಣೆ ಕೊಳಲು ಮುಂತಾದವುಗಳನ್ನು ಬಾರಿಸುತ್ತ ಕೃಷ್ಣ ಧ್ಯಾನ ಮಾಡುತ್ತ ಅವನನ್ನು ಹಾಡಿ ಕೊಂಡಾಡುತ್ತಾರೆ. ಆನಂದ ಬಾಷ್ಪಗಳನ್ನು ಸುರಿಸುತ್ತಾರೆ. ಅಲ್ಲಿಯೆ ರೋಮಾಂಚಗೊಂಡು ಆನಂದಾಶ್ರು ಹರಿಸುತ್ತ ಯೋಗಿಗಳಂತೆ ನಿಶ್ಚಲವಾಗಿ ಚಿತ್ರದಲ್ಲಿ ಬರೆದಂತೆ ನಿಂತು ಹಾಲುಸುರಿಸುತ್ತಿರುವ ಗೋವುಗಳು ಲೆಕ್ಕವಿಲ್ಲದಷ್ಟು ಕಂಡುಬರುತ್ತವೆ.

ಹೊರಗೆ ಕೋಟಿ ಸೂರ್ಯರಂತೆ ಹೊಳೆಯುವ ಚಿನ್ನದ ಕೋಟೆ. ಅದರ ನಾಲ್ಕು ದಿಕ್ಕುಗಳಲ್ಲಿ ಉದ್ಯಾನಗಳು. ಪಶ್ಚಿಮದ ಉದ್ಯಾನದಲ್ಲಿ ಪಾರಿಜಾತವೃಕ್ಷದ ಬುಡದಲ್ಲಿ ಸುವರ್ಣಪೀಠ. ಅದರಲ್ಲಿ ಮಾಣಿಕ್ಯಖಚಿತವಾದ ದಿವ್ಯಸಿಂಹಾಸನ. ಅದರ ಮೇಲೆ ಜಗತ್ಪ್ರಭು ವಾಸುದೇವನು ಮಂಡಿಸಿದ್ದಾನೆ. ತ್ರಿಗುಣಾತೀತ ಚಿದ್ರೂಪನಾಗಿದ್ದರೂ ಇಂದ್ರನೀಲದಂತೆ, ಮೋಡದಂತೆ ಹೊಳೆವ ಶರೀರ ನಾಲ್ಕು ಕೈಗಳಲ್ಲಿ ಶಂಖ ಚಕ್ರ ಗದಾ ಪದ್ಮಗಳನ್ನು ಧರಿಸಿದ್ದಾನೆ. ತಾವರೆಯ ದಳದಂಥ ಉದ್ದನೆಯ ಕಣ್ಣುಗಳು. ಪಿತಾಂಬರವನ್ನುಟ್ಟು ದಿವ್ಯಾಭರಣಗಳನ್ನೂ ವನಮಾಲೆಯನ್ನೂ ಧರಿಸಿದ್ದಾನೆ. ಸುತ್ತಲೂ ರುಕ್ಮಿಣಿ, ಸತ್ಯಭಾಮೆ, ಸುಲಕ್ಷಣೆ, ಮಿತ್ರವಿಂದೆ, ಅನುವಿಂದೆ, ಸುನಂದೆ, ಜಾಂಬವತಿ, ಸುಶೀಲೆಯೆಂಬ ಅಷ್ಟಮಹಿಷಿಯರು ಆ ಪುರುಷೋತ್ತಮನನ್ನು ಓಲೈಸಿದ್ದಾರೆ.

ಉತ್ತರ ಉದ್ಯಾನದಲ್ಲಿ ಹರಿಚಂದನ ವೃಕ್ಷದ ಬುಡದಲ್ಲಿ ಸುವರ್ಣಪೀಠ. ಅದರಲ್ಲಿ ಮಣಿಖಚಿತವಾದ ದಿವ್ಯ ಸಿಂಹಾಸನ. ಅದರ ಮೇಲೆ ರೇವತಿರಮಣನಾದ ಬಲರಾಮ. ಶುದ್ಧಸ್ಫಟಿಕ ವರ್ಣದವನು. ನೀಲಾಂಬರವನ್ನುಟ್ಟು ದಿವ್ಯಾಭರಣ ತೊಟ್ಟು ಮಧುಸೇವನೆಯನ್ನು ಮಾಡುತ್ತಾನೆ. ಮದದಿಂದ ತಿರುಗುವ ಕಣ್ಣುಗಳು ಕೆಂಪಗೆ ಕನ್ನೈದಿಲೆಯ ದಳಗಳಂತೆ ಕಾಣುತ್ತವೆ.

ದಕ್ಷಿಣದ ಉದ್ಯಾನವನದಲ್ಲಿ ಸಂತಾನ ವೃಕ್ಷದ ಕೆಳಗೆ ಸುವರ್ಣಪೀಠ. ಅದರಲ್ಲಿ ಮಣಿಮಯವಾದ ದಿವ್ಯ ಸಿಂಹಾಸನ. ಅದರ ಮೇಲೆ ರತಿಯೊಡನೆ ಜಗನ್ಮೋಹಕ ಸೌಂದರ್ಯ ಸಾರದಿಂದ ಮೆರೆವ ಪ್ರದ್ಯುಮ್ನ. ನೀಲಕಮಲದ ಬಣ್ಣ. ತಾವರೆಯ ದಳದಂಥ ಕಣ್ಣುಗಳು. ದಿವ್ಯ ಗಂಧ ಆಭರಣಗಳನ್ನು ಧರಿಸಿದ್ದಾರೆ.

ಪೂರ್ವದ ಉದ್ಯಾನದಲ್ಲಿ ಕಲ್ಪವೃಕ್ಷದ ಕೆಳಗೆ ಸುವರ್ಣಪೀಠ. ಅದರಲ್ಲಿ ದಿವ್ಯ ಸಿಂಹಾಸನದ ಮೇಲೆ ಉಷೆಯೊಡನೆ ಅನಿರುದ್ಧನು ಮಂಡಿಸಿದ್ದಾನೆ. ಆಶ್ಚರ್ಯಕರ ಸೌಂದರ್ಯ ಮೂರ್ತಿ. ನಾನಾ ಆಭರಣಗಳನ್ನು ತೊಟ್ಟು ಪ್ರಿಯಭೃತ್ಯರ ನಡುವೆ ಸಂಗೀತದಲ್ಲಿ ನಿರತನಾಗಿದ್ದಾನೆ.

ಮೇಲೆ ಅಂತರಿಕ್ಷದಲ್ಲಿ ತ್ರಿಗುಣಾತೀತ ಸಚ್ಚಿದಾನಂದಮಯ ಘನಶ್ಯಾಮ ಸುಂದರಮೂರ್ತಿಯಾದ ಸರ್ವೇಶ್ವರನಾದ ವಿಷ್ಣುವನ್ನು ಆತ್ಮಾರಾಮರಾದ ಚಿದ್ರೂಪಿಗಳಾದ ಯೋಗಿಗಳು ಭಜಿಸುತ್ತಾರೆ. ಅವನ ಎಡ ಪಾರ್ಶ್ವದಲ್ಲಿ ಯಕ್ಷ ಗಂಧರ್ವ ವಿದ್ಯಾಧರ ಮುಂತಾದವರು ಅವನ ಅಂಗಸಂಗಕ್ಕೆ ಕಾತರರಾದ ಅಪ್ಸರೆಯರೂ ಹಾಡುತ್ತ ಕುಣಿಯುತ್ತಾರೆ. ಮುಂದೆ ಪ್ರಹ್ಲಾದ ನಾರದ ಕುಮಾರ ಶುಕ ಮುಂತಾದ ವೈಷ್ಣವರು ಪ್ರೇಮರಸದಲ್ಲಿ ತೇಲಾಡುತ್ತ ರೋಮಾಂಚಗೊಂಡು ಬಾಲಗೋಪಾಲ ಮಂತ್ರಗಳನ್ನು ಅವುಗಳಲ್ಲಿ ವಿಶೇಷವಾಗಿ ಚೂಡಾಮಣಿ ಮಂತ್ರವನ್ನು ಜಪಿಸುವರು.

ಹೊರಗೆ ಸ್ಫಟಿಕದ ಕೋಟೆ ಇದೆ. ನಾಲ್ಕು ದಿಕ್ಕಿನ ಮಹಾದ್ವಾರಗಳಲ್ಲಿ ನಾಲ್ಕುರೂಪದಿಂದ ವಿಷ್ಣು ನಿಂತಿದ್ದಾನೆ. ಪಶ್ಚಿಮದ್ವಾರ ಪಾಲಕನಾಗಿ ಶುಕ್ಲ ರೂಪದ ಚತುರ್ಭುಜಮೂರ್ತಿ. ಉತ್ತರದ್ವಾರ ಪಾಲಕನಾಗಿ ಕೆಂಪುಬಣ್ಣದ ಚತುರ್ಭುಜಮೂರ್ತಿ. ಪೂರ್ವದ್ವಾರ ಪಾಲಕನಾಗಿ ಗೌರವರ್ಣದ ಚತುರ್ಭುಜಮೂರ್ತಿ. ದಕ್ಷಿಣದ್ವಾರ ಪಾಲಕಾಗಿ ಕೃಷ್ಣವರ್ಣದ ಚತುರ್ಭುಜಮೂರ್ತಿ.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಪಾತಾಳಖಂಡದಲ್ಲಿ*
*ಶ್ರೀಕೃಷ್ಣಚರಿತ್ರೆ, ವೃಂದವನ ಮಹಾತ್ಮ್ಯೆ ಎಂಬ ಇಪ್ಪತ್ತೆರಡನೆ ಅಧ್ಯಾಯ ಮುಗಿದುದು*

—೦—

**ಶ್ರೀ ದೇವ್ಯುವಾಚ**

**ಪಾರ್ವತಿ :-** ದೇವ ದೇವ, ಕರುಣಾಕರ, ಮಹಾ ಮೋಹನರೂಪಿ ಶ್ರೀಕೃಷ್ಣನು ಗೋಪಿಯರೊಡನೆ ಹೇಗೆ ನಲಿದನೆಂಬುದನ್ನು ಹೇಳು.

**ಶಿವ :-** ಕೃಷ್ಣಾವತಾರವನ್ನು ತಿಳಿದು ಒಮ್ಮೆ ನಾರದಮುನಿ ವೀಣೆಬಾರಿಸುತ್ತ ನಂದಗೋಕುಲಕ್ಕೆ ಬಂದು ಬಾಲಕನಾಗಿ ಕುಣಿವ ಕೃಷ್ಣನನ್ನು ಗೋಪಕನ್ನಿಕೆಯರು ಚಿನ್ನದ ಮಂಚದ ಮೇಲೆ ಹಾಸಿದ ಮಿದುವಾದ ಹಾಸಿಗೆಯ ಮೇಲೆ ಮಲಗಿಸಿ ನೋಡಿ ಆನಂದ ಪಡುತ್ತಿರುವುದನ್ನು ಕಂಡ. ಶ್ರೀಕೃಷ್ಣನ ಮುಗ್ಧ ದೃಷ್ಟಿ, ಮಂದ ಹಾಸದಲ್ಲಿ ಕಾಣುವ ಒಂದೆರಡು ಹಲ್ಲಿನ ಕುಡಿಗಳು, ಹಾರಾಡುವ ಕಪ್ಪಾದ ಗುಂಗುರು ಕೂದಲುಗಳು, ಬೆತ್ತಲೆಯಾದ ಅತಿ ಸುಕುಮಾರ ಮುಗ್ಧ ಶರೀರ. ಎಲ್ಲ ಲೋಕಗಳನ್ನು ಬೆಳಗಿಸುತ್ತಿದ್ದ ಆ ಶರೀರದ ಕಾಂತಿ, ಇವನ್ನು ಕಂಡು ಮುನಿ ಅತ್ಯಾನಂದಪಟ್ಟ. ನಂದನೊಡನೆ ಮಾತನಾಡುವಾಗ ಮುನಿಯು ಮಗುವಿನ ಬಗ್ಗೆ ನುಡಿದ. 'ಈ ಮಗುವಿನ ಪ್ರಭಾವ ಸಾಮಾನ್ಯವಲ್ಲ. ಅನೇಕರು ಅದನ್ನು ತಿಳಿದಿರಬಹುದು. ಆದರೆ ಶಿವ ಬ್ರಹ್ಮ ಮುಂತಾದವರೂ ಈ ಮಗುವಿನ ಸಂಗ ಸುಖವನ್ನು ಶಾಶ್ವತವಾಗಿ ಪಡೆಯುವಾಸೆ ಇಟ್ಟು ಕೊಂಡಿದ್ದಾರೆ. ಇವನ ನಡೆ ನುಡಿ ಎಲ್ಲವೂ ಲೋಕಕ್ಕೆ ಆನಂದ ನೀಡುವುವು. ನೀನೂ ಪರಲೋಕದಾಸೆಬಿಟ್ಟು ಇವನನ್ನೆ ಪ್ರೀತಿಯಿಂದ ನೋಡಿಕೊಳ್ಳು.'

ಹೀಗೆ ಹೇಳಿ ಮುನಿಯು ನಂದನ ಅದರದ ಸತ್ಕಾರವನ್ನು ಸ್ವೀಕರಿಸಿ ಅಲ್ಲಿಂದ ಹೊರಟ. 'ಹರಿಯು ಕೃಷ್ಣನಾಗಿ ಅವತರಿಸಿದರೆ ಲಕ್ಷ್ಮಿಯು ಅವನೊಡನೆ ನಲಿಯಲು ಗೋಪಿಯ ರೂಪದಿಂದ ಅವತರಿಸಲೆಬೇಕು. ಪ್ರತಿ ಮನೆಯನ್ನೂ ಶೋಧಿಸಿದರೆ ಅವಳ ದರ್ಶನ ನನಗೆ ಲಭಿಸಬಹುದು' ಎಂದುಕೊಂಡು ಪ್ರತಿ ಮನೆಗೂ ಭೆಟ್ಟಿನೀಡಿದ. ಅವರೆಲ್ಲರಿಗೂ ಕೃಷ್ಣನಲ್ಲಿ ಪ್ರೀತಿ ಇರುವುದನ್ನು ಕಂಡು ಭಕ್ತಿಯಿಂದ ಮನಸ್ಸಿನಲ್ಲಿಯೇ ನಮಿಸುತ್ತ ಅವರು ನೀಡಿದ ಅತಿಥ್ಯವನ್ನು ಸ್ವೀಕರಿಸಿದ. ಒಂದು ಮನೆಯ ಮುಂದೆ ಶ್ವೇತವರ್ಣದ ಬಾಲಿಕೆಯನ್ನು ಕಂಡು ಆ ಮನೆಯನ್ನು ಪ್ರವೇಶಿಸಿದ. ಆ ಬಾಲಿಕೆಯೆ ಲಕ್ಷ್ಮಿಯ ಅವತಾರವಿರಬಹುದೆಂದು ಮುನಿಯ ಊಹೆಯಾಗಿತ್ತು. ಆ ಮನೆಯ ಒಡೆಯನು ಭಾನು ಎಂಬ ಗೊಲ್ಲ. ಅವನ ಅತಿಥ್ಯವನ್ನು ಸ್ವೀಕರಿಸಿ ನಿನಗೆ ಮಕ್ಕಳು ಎಷ್ಟು ಯಾರು ಎಂದೆಲ್ಲ ವಿಚಾರಿಸಿದ. ಭಾನು ತನ್ನ ಮಗನನ್ನು ಮುನಿಯ ಮುಂದೆ ನಿಲ್ಲಿಸಿದ. ಅನುಪಮ ರೂಪ ಸೌಂದರ್ಯದ ಕೂಡಿದ ತೇಜಸ್ವಿಯಾದ ಆ ಬಾಲಕನನ್ನು ಮುನಿಯು ಆಲಿಂಗಿಸಿ ಪ್ರೇಮಾಶ್ರು ಹರಿಸುತ್ತ ಗದ್ಗದ ಕಂಠದಿಂದ ಹೇಳಿದ.

**ನಾರದ :-** ಗೊಲ್ಲನೆ, ನಿನ್ನ ಈ ಮಗನು ರಾಮಕೃಷ್ಣರ ಪ್ರೀತಿಯ ಗೆಳೆಯನಾಗಿದ್ದು ಅವರೊಡನೆ ಹಗಲು ರಾತ್ರಿ ಎನ್ನದೆ ಸದಾ ವಿಹರಿಸುವ ಪುಣ್ಯವಂತ.

ಹೀಗೆ ಹೇಳಿ ಮುನಿ ಹೊರಟುನಿಂತಾಗ ಭಾನು ಸಂಕೋಚಪಡುತ್ತ ನುಡಿದ.

**ಭಾನು** :- ಮುನಿಯೆ, ನನಗೊಬ್ಬಳು ಮಗಳೂ ಇದ್ದಾಳೆ. ನೋಡಿದರೆ ದೇವತಾ ಸ್ತ್ರೀಯರಂಥ ಆಕೃತಿ. ಆದರೆ ಬುದ್ಧಿ ಸರಿಯಿಲ್ಲ. ಕುರುಡ ಮೂಕರಂತೆ ಇರುತ್ತಾಳೆ. ತಾವು ಒಮ್ಮೆ ಅವಳ ಮೇಲೆ ಪ್ರಸನ್ನ ದೃಷ್ಟಿಯನ್ನು ಬೀರಿ ನಮ್ಮನ್ನು ಅನುಗ್ರಹಿಸಬೇಕೆಂದು ಬೇಡುತ್ತೇನೆ.

ಮುನಿಯು ಕುತೂಹಲದಿಂದ 'ಎಲ್ಲಿ ? ತೋರಿಸು' ಎಂದ. ಭಾನು ಆ ಶ್ವೇತವರ್ಣದ ಬಾಲಿಕೆಯನ್ನೆತ್ತಿ ತಂದು ಮುನಿಗೆ ತೋರಿಸಿದ. ಎಲ್ಲೂ ನೋಡದ ಕೇಳದ ಅದ್ಭುತ ರೂಪವನ್ನು ಕಂಡ ಮುನಿ ಆನಂದಸಾಗರದಲ್ಲಿ ಮುಳುಗಿ ಮೈಮರೆತು ಎರಡು ಮುಹೂರ್ತಗಳ ಕಾಲ ಕಲ್ಲಿನಂತೆ ನಿಂತುಬಿಟ್ಟ. ಬಳಿಕ ನಿಧಾನವಾಗಿ ಕಣ್ಣು ಬಿಟ್ಟು ಆಶ್ಚರ್ಯದಿಂದ ನೋಡುತ್ತ ಮನದಲ್ಲೆ ಚಿಂತಿಸಿದ. 'ನಾನು ಎಲ್ಲ ಲೋಕಗಳಲ್ಲಿಯೂ ಸ್ವಚ್ಛಂದವಾಗಿ ತಿರುಗಿದ್ದೇನೆ. ಇಂಥ ರೂಪವನ್ನು ಮಾತ್ರ ಎಲ್ಲೂ ನೋಡಿಲ್ಲ. ಬ್ರಹ್ಮಲೋಕ ರುದ್ರಲೋಕ ಇಂದ್ರಲೋಕಗಳಲ್ಲಿಯೂ ನೋಡಿದ್ದೇನೆ. ಈ ಸೌಂದರ್ಯದ ಕೋಟಿಯ ಒಂದಂಶವೂ ಕಾಣಲು ದೊರೆಯಲಿಲ್ಲ. ತನ್ನ ರೂಪದಿಂದ ಸಕಲ ಚರಾಚರ ಪ್ರಪಂಚವನ್ನೆ ಮೈಮರೆಸುವ ಮಹಾಮಾಯೆ ಪಾರ್ವತಿಯನ್ನು ನೋಡಿದ್ದೇನೆ. ಅವಳೂ ಈ ಹುಡುಗಿಗೆ ಸಮಾನವಲ್ಲ. ಲಕ್ಷ್ಮಿ ಸರಸ್ವತಿ ಕಾಂತಿ ವಿದ್ಯೆ ಮೊದಲಾದವರೂ ಇವಳ ಛಾಯೆಯನ್ನು ಹೋಲಲಾರರು. ವಿಷ್ಣುವಿನ ಮೋಹಿನಿ ರೂಪ ಶಿವನನ್ನೆ ಮೈಮರೆಸಿತ್ತು. ಆದರೆ ಅದೂ ಈ ಸೌಂದರ್ಯದ ಮುಂದೆ ಏನೂ ಅಲ್ಲ. ಇವಳ ಸ್ವರೂಪವೇನೆಂದು ನನಗೆ ತಿಳಿಯುತ್ತಿಲ್ಲ. ಬೇರೆಯವರೂ ಪ್ರಾಯಃ ತಿಳಿಯಲಾರರು. ಇವಳ ದರ್ಶನ ಮಾತ್ರದಿಂದ ಗೋವಿಂದನ ಪಾದಾರವಿಂದಗಳಲ್ಲಿ ಭಕ್ತಿ ಹೆಚ್ಚುತ್ತಿದೆ. ಇಂಥ ಅನುಭವ ಹಿಂದೆಂದೂ ನನಗಾಗಿಲ್ಲ. ನಾನಿವಳನ್ನು ಏಕಾಂತದಲ್ಲಿ ಸ್ತುತಿಸುತ್ತೇನೆ.

ಹೀಗೆ ಹೇಳಿಕೊಂಡು ಭಾನುವನ್ನು ಎಲ್ಲಿಗೋ ದೂರ ಕಳಿಸಿ ಬಾಲಿಕೆಯನ್ನು ಏಕಾಂತದಲ್ಲಿ ಸ್ತುತಿಸಿದ. ನಾರದಮುನಿ. 'ದೇವಿ, ಮಹಾಯೋಗೆ, ಮಾಯೇಶ್ವರಿ, ಮಹಾ ಮೋಹನ ದಿವ್ಯಾಂಗಿ. ನೀನು ನನ್ನ ದೃಷ್ಟಿಗೋಚರಳಾದುದು ಮಹಾ ಭಾಗ್ಯವೆ ಸರಿ. ನೀನು ನಿನ್ನೊಳಗೇ ಸುಖಾನುಭವ ಪಡುತ್ತ ತೃಪ್ತಿಯಿಂದಿರುವಂತೆ ಕಾಣುತ್ತದೆ. ನಿನ್ನ ಮುಖ ಪ್ರಸನ್ನವಾಗಿದೆ. ಸುಂದರವಾಗಿದೆ. ಒಳಗಿನ ಯಾವುದೋ ಒಂದು ಅನಿರ್ವಚನೀಯ ಸುಖಾನುಭವವನ್ನು ಸೂಚಿಸುತ್ತದೆ. ಸೃಷ್ಟಿ ಸ್ಥಿತಿಸಂಹಾರ ರೂಪಿಣಿಯಾದ ನೀನು ಬ್ರಹ್ಮರುದ್ರಾದಿಗಳಿಗೂ ಅಗಮ್ಯಳೆನಿಸಿರುವೆ. ಯೋಗಿಗಳ ಧ್ಯಾನಕ್ಕೂ ನಿಲುಕದಿರುವೆ. ಭಗವಂತನ ಜ್ಞಾನ ಇಚ್ಛಾ ಕ್ರಿಯಾಶಕ್ತಿಗಳೆಲ್ಲ ನಿನ್ನ ಅಂಶಮಾತ್ರವೆಂದು ನಾನು ತಿಳಿದಿದ್ದೇನೆ. ಆನಂದರೂಪಿಯಾದ ಶಕ್ತಿ ನೀನು ಪರಮೇಶ್ವರಿ ನೀನು. ಸಂಶಯವಿಲ್ಲ. ನಿನ್ನೊಡನೆ ಕೃಷ್ಣನು ವೃಂದಾವನದಲ್ಲಿ ವಿಹಾರ ಮಾಡುವುದರಲ್ಲಿ ಸಂಶಯವಿಲ್ಲ. ಈ ಎಳೆ ವಯಸ್ಸಿನಲ್ಲಿಯೆ ನಿನ್ನ ರೂಪುಲೋಕವನ್ನು ಮೈಮರೆಸುತ್ತಿದೆ. ಇನ್ನು ತಾರುಣ್ಯದಲ್ಲಿ ನಿನ್ನ ರೂಪಲಾವಣ್ಯಗಳು ಬೆಡಗು ಬಿನ್ನಾಣಗಳು ಎಷ್ಟು ಅದ್ಭುತವಾಗಿರುವುದೊ, ನಾನು ಊಹಿಸಿಕೊಳ್ಳಲಾರೆ. ಕೃಷ್ಣನನ್ನು ನೀನು ಸೌಂದರ್ಯದಿಂದ ಮೈ ಮರೆಸಿದಾಗ ಅದೊಂದು ಮಹಾ ಅದ್ಭುತ ಘಟನೆ ಎನಿಸಬಹುದು. ಆ ರೂಪವನ್ನೊಮ್ಮೆ ನಾನು ನೋಡಲು ಆಸೆ ಪಡುತ್ತೇನೆ. ಪರಮೇಶ್ವರಿ, ದಯೆತೋರು; ನಿನ್ನನ್ನು ನಮಸ್ಕರಿಸುತ್ತೇನೆ.

ವೃಂದಾವನದಲ್ಲಿ ವಿಹರಿಸುತ್ತ ಕೊಳಲನೂದುತ್ತ ಗೋಪಿಯರ ಮೈ ಮರೆಸುತ್ತ ನವಿಲ ಗರಿಯನ್ನು ರತ್ನ ಭೂಷಣಗಳನ್ನು ಕುಂಕುಮಲೇಪವನ್ನೂ ಧರಿಸಿ ಹುಬ್ಬನ್ನು ಆಕರ್ಷಕವಾಗಿ ಕುಣಿಸುತ್ತ ಎಲ್ಲರ ಮನಸೆಳೆವ ಕೃಷ್ಣನೆ, ನಿನಗೆ ಜಯವಾಗಲಿ. ನವತಾರುಣ್ಯದಿಂದೊಪ್ಪುವ ಈ ದೇವಿಯೊಡನೆ ನೀನು ವಿಹರಿಸುವುದನ್ನು ನಾನೆಂದು ನಿನ್ನ ಅನುಗ್ರಹದಿಂದ ನೋಡುವೆನು ?'

ನಾರದನು ಹೀಗೆ ಬೇಡುತ್ತಿದ್ದಾಗ ದೇವಿಯು ಹದಿನಾಲ್ಕು ಹರೆಯದ ಲಲಿತವಾದ ರೂಪು ಧರಿಸಿ ಅದೇ ವಯಸ್ಸಿನ ಸಖಿಯರೊಡನೆ ಮೈ ದೋರಿದಳು. ಮುನಿಯು ಒಂದುಕ್ಷಣ ಇದನ್ನು ಕಂಡು ಆಶ್ಚರ್ಯಚಕಿತನಾಗಿ ಮೈ ಮರೆತುಬಿಟ್ಟನು. ದೇವಿಯ ಗೆಳತಿಯರು ಅವಳ ಪಾದೋದಕವನ್ನು ಮುನಿಯ ಮೈಗೆ ಚೆಲ್ಲಿ ಎಚ್ಚರಗೊಳಿಸಿದರು. ದಯೆಯಿಂದ ನುಡಿದರು.

**ಬಾಲೆಯರು** :- ಮುನಿವರ್ಯ, ಭಕ್ತಿಯಿಂದ ಹರಿಯನ್ನೊಲಿಸಿಕೊಂಡವನೆಂದರೆ ನೀನೆ ಸರಿ. ಬ್ರಹ್ಮರುದ್ರಾದಿದೇವತೆಗಳಿಗೂ ಮುನಿಗಳಿಗೂ ಕಾಣಲು ಸಿಗದ ಈ ಅದ್ಭುತ ವಯೋ ರೂಪಗಳ ಮೋಹಿನಿ ಹರಿಯ ಪ್ರೇಯಸಿ ನೋಡಲು ಸಿಗಬೇಕಾದರೆ ನೀನು ಎಷ್ಟು ಪುಣ್ಯ ಮಾಡಿರುವೆಯೊ ! ಮುನಿಯೆ, ಎದ್ದೇಳು, ಸಾವರಿಸಿಕೊಳ್ಳು. ಪ್ರದಕ್ಷಿಣೆ ಬಂದು ನಮಸ್ಕಾರಮಾಡು. ಕಣ್ತುಂಬ ನೋಡು, ಈಗಿನ್ನು ಒಂದು ಕ್ಷಣದಲ್ಲಿ ಆಕೆ ಅದೃಶ್ಯಳಾಗುವಳು. ಬಳಿಕ ಅವಳೊಡನೆ ಮಾತನಾಡುವ ಅವಕಾಶ ಎಂದೂ ದೊರಕಲಾರದು. ನೋಡಲೂ ಆಕೆ ಸಿಗಲಾರಳು. ಆದರೆ ವೃಂದಾವನದಲ್ಲಿ ಗೋವರ್ಧನ ಗಿರಿಯ ಸಮೀಪದ ಕುಸುಮಾನದೀ ತೀರದಲ್ಲಿ ಎಲ್ಲ ಋತುಗಳಲ್ಲಿಯೂ ಹೂ ಬಿಟ್ಟು ಸುಗಂಧವನ್ನೆಲ್ಲೆಡೆ ಬೀರುವ ಒಂದು ಅಶೋಕ ವೃಕ್ಷವಿದೆ. ಅರ್ಧ ರಾತ್ರಿಯ ವೇಳೆಯಲ್ಲಿ ನೀನು ಬಂದರೆ ಆ ಮರದ ಬುಡದಲ್ಲಿ ನಮ್ಮೆಲ್ಲರನ್ನೂ ಇನ್ನೊಮ್ಮೆ ನೋಡಬಹುದು.

ಮುನಿಯು ಈ ಮಾತನ್ನು ಕೇಳಿ ದೇವಿಗೆ ಪ್ರದಕ್ಷಿಣೆ ನಮಸ್ಕಾರಗಳನ್ನರ್ಪಿಸಿದ ಎರಡು ಮುಹೂರ್ತಗಳ ಕಾಲ ದೇವಿಯು ಅದ್ಭುತ ಲೀಲೆಗಳನ್ನು ತೋರಿ ಮೊದಲಿನಂತಾದಳು. ಮುನಿಯು ಭಾನುವನ್ನು ಕರೆದು ಹೇಳಿದ. 'ಈ ಹುಡುಗಿಯ ಸ್ವಭಾವವೆ ಹಾಗೆ. ಯಾವ ದೇವತೆಯೂ ಅದನ್ನು ಹೆಚ್ಚು ಕಡಿಮೆ ಮಾಡಲಾರ. ಆದರೆ ಇವಳು ಕಾಲಿಟ್ಟ ಮನೆ ನಾರಾಯಣನ ವಾಸಸ್ಥಾನವಾಗುವುದು. ಎಲ್ಲ ದೇವತೆಗಳೂ ಅಲ್ಲಿ ವಾಸಿಸುವರು. ಎಲ್ಲ ವಿಧದ ಸಂಪತ್ತು ಸಮೃದ್ಧಿ ಅಲ್ಲಿರುವುದು ಆದ್ದರಿಂದ ಇವಳನ್ನು ಪರದೇವತೆಯಂತೆ ಆದರದಿಂದ ಮನೆಯಲ್ಲಿಟ್ಟುಕೊಂಡು ನೋಡಿಕೊಳ್ಳು.'

ಮನಸ್ಸಿನಲ್ಲಿ ತಾನು ಕಂಡ ದೇವಿಯ ಅದ್ಭುತ ಸುಂದರ ರೂಪವನ್ನೆ ಧ್ಯಾನಿಸುತ್ತ ಮುನಿಯು ಅಶೋಕ ವೃಕ್ಷದ ಬುಡಕ್ಕೆ ಬಂದು ದೇವಿಯ ದರ್ಶನಕ್ಕೆ ಕಾದು ಕುಳಿತ. ಮಧ್ಯ ರಾತ್ರಿಯಲ್ಲಿ ಆ ಅದ್ಭುತ ಯುವತಿಯರು ಪ್ರತ್ಯಕ್ಷರಾದರು. ಅವರನ್ನು ನೋಡಿ ದಿಗ್ಭ್ರಮೆ ಹೊಂದಿದ ಮುನಿ ದಂಡ ಪ್ರಣಾಮ ಮಾಡಿ ಕೈ ಮುಗಿದು ನಿಂತ. ಏನೋ ಕೇಳುವ ಬಯಕೆ. ಆದರೆ ಅವರ ಲಾವಣ್ಯ ಪ್ರೇಮ ಮಧುರಾಲಾಪಗಳಿಂದ ಮೈ ಮರೆತ ಮುನಿ ಏನೂ ಕೇಳಲಿಲ್ಲ. ಸಂಭ್ರಮಾಶ್ಚರ್ಯ ಪರವಶನಾಗಿ ಭಕ್ತಿಯಿಂದ ನಿಂತ. ಅಶೋಕವನ ದೇವತೆಯಾದ ಅಶೋಕ ಮಾಲಿನಿ ಹೇಳಿದಳು.

**ಅಶೋಕಮಾಲಿನಿ :-** ಮಹಾಮುನಿಯೆ, ನಾನು ಅಶೋಕಮಾಲಿನಿ, ಅಶೋಕ ವನದಲ್ಲಿ ವಾಸಿಸುತ್ತೇನೆ. ರಕ್ತವರ್ಣದ ವಸ್ತ್ರಾಭರಣ ಗಂಧ ಮಾಲ್ಯಗಳನ್ನು ಧರಿಸುತ್ತೇನೆ. ಒಮ್ಮೆ ನನ್ನ ಗೆಳತಿಯೊಂದಿಗೆ ವಿಹರಿಸುತ್ತಿದ್ದಾಗ ಈ ಗೋಪಕನ್ಯೆಯರನ್ನು ಕಂಡೆ. ಇವರು ಲಕ್ಷ್ಮೀಸ್ವರೂಪರು. ಗೋಪಾಲಕ ರೂಪಿನಿಂದಿರುವ ಹರಿಯನ್ನೂ ಇವರನ್ನೂ ನಾನು ಅಶೋಕ ಮೂಲಗಳಿಂದ ಭಕ್ತಿಪೂರ್ವಕವಾಗಿ ಆರಾಧಿಸಿದೆ. ಅಂದಿನಿಂದ ನಾನು ಇವರೊಡನೆ ಸೇರಿಕೊಂಡು ಹರಿಯನ್ನು ಒಲಿಸಿಕೊಂಡೆ. ತ್ರಿಕಾಲ ಜ್ಞಾನವನ್ನು ಸಂಪಾದಿಸಿದೆ. ಗೋವುಗಳು, ಗೋಪಾಲಕರು, ಗೋಪಿಯರು ಇವರೆಲ್ಲರ ರಹಸ್ಯ ವೃತ್ತಾಂತಗಳನ್ನು ತಿಳಿದಿದ್ದೇನೆ. ಈಗ ನೀನು ಮನಸ್ಸಿನಲ್ಲಿ ಏನು ಯೋಚಿಸುತ್ತಿರುವೆ ಎಂಬುದನ್ನೂ ಬಲ್ಲೆ. ಹರಿಯ ಪ್ರೇಯಸಿಯಾದ ಚಿನ್ನದಂತೆ ಹೊಳೆವ ಆ ದೇವಿಯನ್ನು ಹೇಗೆ ನೋಡಲಿ? ಅವಳ ಪಾದಕಮಲವನ್ನು ಹೇಗೆ ಆರಾಧಿಸಲಿ ? ಎಂದು ತಾನೆ ವಿಮರ್ಶಿಸುತ್ತಿರುವೆ ? ಈ ವಿಷಯದಲ್ಲಿ ಮಹಾತ್ಮರ ಚರಿತ್ರೆಯನ್ನು ಹೇಳುವೆನು ಕೇಳು. ಮಾನಸ ಸರೋವರದಲ್ಲಿ ಎಪ್ಪತ್ತೊಂದು ಸಾವಿರ ಮುನಿಗಳು ಹರಿ ಧ್ಯಾನ ಮಾಡುತ್ತ ತೀವ್ರ ತಪಸ್ಸು ಮಾಡುತ್ತಿದ್ದಾರೆ. ಸಿದ್ಧಿ ಮಂತ್ರಗಳನ್ನು ಜಪಿಸುತ್ತಿದ್ದಾರೆ. ಆ ದೇವಿಯ ಪಾದಕಮಲವನ್ನು ನೋಡಲು ಕಾತರರಾಗಿದ್ದಾರೆ. ಇದರ ರಹಸ್ಯ ಸಂಗತಿಗಳನ್ನು ನಿನಗೆ ಹೇಳುತ್ತೇನೆ.

*ಇತಿ ಪದ್ಮ ಮಹಾಪುರಾಣ ಭಾಗ-೨ರ ಪಾತಾಳಖಂಡದಲ್ಲಿ ಶ್ರೀ ರಾಧಾಕೃಷ್ಣ ಮಾಹಾತ್ಮ್ಯ ಕಥನವೆಂಬ ಇಪ್ಪತ್ತಮೂರನೆ ಅಧ್ಯಾಯ ಮುಗಿದುದು*



## ಶ್ರೀ ಕೃಷ್ಣ ಮಹಿಮೆ

ಅಧ್ಯಾಯ - ೨೪

**ಈಶ್ವರ ಉವಾಚ**

**ಈಶ್ವರ :-** ಪ್ರಿಯೆ ಕೇಳು, ಅಶೋಕಮಾಲಿನಿಯು ನಾರದ ಮುನಿಗೆ ಹೇಳಿದಳು - ''ಉಗ್ರತಪನೆಂಬ ಮುನಿ ಅಗ್ನಿಹೋತ್ರ ಮಾಡುತ್ತ ಅಗ್ನಿಯನ್ನೆ ಭಕ್ಷಿಸುತ್ತ ಅತ್ಯದ್ಭುತವಾದ ತಪಸ್ಸು ಮಾಡಿದ. ಕಾಮಮಂತ್ರ ಪುಟಿತವಾದ ಕೃಷ್ಣಾಯಸ್ವಾಹಾ ಎಂಬ ಪದಗಳಿಂದ ಕೂಡಿದ ಹದಿನೈದು ಅಕ್ಷರದ ಮಂತ್ರವನ್ನು ಜಪಿಸುತ್ತ ರಾಸಕ್ರೀಡೆಯಲ್ಲಿ ಆನಂದೋನ್ಮಾದ ಹೊಂದಿರುವ ಮುರಳೀಧರ ಕೃಷ್ಣನು ಪ್ರಿಯೆಯನ್ನು ಕೈಯಿಂದ ಸೆಳೆದುಕೊಳ್ಳುತ್ತಿರುವ ದೃಶ್ಯವನ್ನು ಧ್ಯಾನಿಸಿದ. ಒಂದು ನೂರು ಕಲ್ಪಗಳ ಕಾಲ ಹೀಗೆ ತಪಸ್ಸು ಮಾಡಿ ದೇಹವನ್ನು ತೊರೆದು ಈಗ ಸುನಂದನೆಂಬ ಗೊಲ್ಲನ ಮಗಳಾಗಿ ಸುನಂದ ಎಂಬ ಹೆಸರಿನಿಂದ ಜನಿಸಿದ್ದಾನೆ. ಇವಳೆ ಆ ಸುನಂದೆ. ಕೈಯಲ್ಲಿ ವೀಣೆಯ ಚಿಹ್ನೆ ಇದೆ.

ಸತ್ಯತಪನೆಂಬ ಇನ್ನೊಬ್ಬ ಮುನಿ ತರಗೆಲೆಗಳನ್ನೆ ತಿಂದು ನೀರಲ್ಲಿ ನಿಂತು ನಮಃ ಪದದಲ್ಲಿ ಕೊನೆಗೊಳ್ಳುವ ಕಾಮಬೀಜದಿಂದ ಪುಟಿತವಾದ ಹದಿನೈದು ಅಕ್ಷರಗಳ ಮಂತ್ರವನ್ನು ಜಪಿಸುತ್ತ ರಮೆಯ ಬಳ್ಳಿಯಂಥ ಎರಡು ತೋಳುಗಳನ್ನು ಹಿಡಿದು ಕುಣಿಯುವ, ಪದೇ ಪದೇ ಆಲಿಂಗಿಸುವ, ನಗುವ ವೇಣುಗೋಪಾಲನನ್ನು ಧ್ಯಾನಿಸುತ್ತಿದ್ದ.

ಅವನು ಹತ್ತು ಕಲ್ಪಗಳ ಕಾಲ ಹೀಗೆ ತಪಸ್ಸು ಮಾಡಿ ಸುಭದ್ರನೆಂಬ ಗೊಲ್ಲನ ಮಗಳಾಗಿ ಭದ್ರೆ ಎಂಬ ಹೆಸರಿನಿಂದ ಹುಟ್ಟಿದ್ದಾನೆ. ಬೆನ್ನಿನ ಮೇಲೆ ಬೀಸಣಿಗೆಯ ಚಿಹ್ನೆ ಇದೆ.

ಹರಿಧಾಮನೆಂಬ ಇನ್ನೊಬ್ಬ ಮುನಿ ನಿರಾಹಾರನಾಗಿ ಬೇಗನೆ ಸಿದ್ಧಿ ಕೊಡುವ ಇಪ್ಪತ್ತು ಅಕ್ಷರಗಳ ಮಂತ್ರವೊಂದನ್ನು ಜಪಿಸುತ್ತ ವೃಂದಾವನದ ಮಾಧವೀಮಂಟಪದಲ್ಲಿ ಅಂಗತರನಾಗಿ ಮಲಗಿ ಗೋಪಿಯರ ಆಲಿಂಗನ ಚುಂಬನಗಳನ್ನು ಸ್ವೀಕರಿಸುವ ನಗುವ ಹರಿಯನ್ನು ಧ್ಯಾನಿಸುತ್ತಿದ್ದ. ಮೂರು ಕಲ್ಪಗಳ ಕಾಲ ಹೀಗೆ ತಪಸ್ಸು ಮಾಡಿ ಸಾರಂಗನೆಂಬ ಗೊಲ್ಲನ ಮಗಳಾಗಿ ರಂಗವೇಣಿ ಎಂಬ ಹೆಸರಿನಿಂದ ಹುಟ್ಟಿದ್ದಾನೆ. ಇವಳೆ ಆ ರಂಗವೇಣಿ, ಚಿತ್ರ ಬರೆಯುವುದರಲ್ಲಿ ನಿಪುಣೆ. ಇವಳ ಹಲ್ಲುಗಳಲ್ಲಿ ಕೆಂಬಣ್ಣದ ಚುಕ್ಕೆಗಳಿವೆ.

ಜಾಬಾಲಿಯೆಂಬ ಮತ್ತೊಬ್ಬ ಮುನಿ ಸಂಚಾರ ಮಾಡುತ್ತಿದ್ದಾಗ ಯೋಜನ ವಿಸ್ತಾರವಾದ ಒಂದು ಮಹಾರಣ್ಯದಲ್ಲಿ ಸಿಹಿ ನೀರಿನ ಸುಂದರವಾದ ಕೊಳವನ್ನು ಕಂಡ. ಸ್ಫಟಿಕದ ಕಲ್ಲುಗಳಿಂದ ಕಟ್ಟಿದ ಆ ಕೊಳದಲ್ಲಿ ಕಮಲಗಳು ಅರಳಿ ಸುಗಂಧವನ್ನು ಎಲ್ಲೆಡೆ ಬೀರುತ್ತಿದ್ದುವು. ಅದರ ಪಶ್ಚಿಮಕ್ಕೆ ಒಂದು ಆಲದ ಮರದ ಬುಡದಲ್ಲಿ ಸುಂದರಿಯಾದ ಯುವತಿಯೋರ್ವಳು ಉಗ್ರತಪಸ್ಸು ಮಾಡುತ್ತಿದ್ದಳು. ಎಡಗೈಯನ್ನು ನಡುವಿನ ಮೇಲಿಟ್ಟು ಬಲಗೈಯಲ್ಲಿ ಜ್ಞಾನ ಮುದ್ರೆ ಧರಿಸಿ ಎವೆಯಿಕ್ಕದ ಏಕಾಗ್ರ ದೃಷ್ಟಿಯಿಂದ ತಪಸ್ಸು ಮಾಡುವ ಬೆಳದಿಂಗಳಂತೆ ಹೊಳೆವ ಮನೋಹರ ರೂಪಿನ ಆ ತಾಪಸಿಯನ್ನು ಕಂಡು ಮುನಿಯು ಕುಳಿತ. ನೂರು ವರ್ಷಗಳ ಕಾಲ ಕಾದು ಕೊನೆಗೆ ಅವಳು ತಪಸ್ಸನ್ನು ಮುಗಿಸಿ ಎದ್ದಾಗ 'ಯಾರು ನೀನು ? ಏನು ತಪಸ್ಸು ಮಾಡುತ್ತಿದ್ದೆ ? ಹೇಳಲು ಯೋಗ್ಯವಾಗಿದ್ದರೆ ಕೃಪೆಯಿಂದ ಹೇಳು' ಎಂದು ವಿನಯದಿಂದ ಕೇಳಿಕೊಂಡ. ತಪಸ್ಸಿನಿಂದ ಸೊರಗಿ ಹೋಗಿದ್ದ ಆ ಬಾಲೆ ಹೇಳಿದಳು, ಯೋಗಿವರೇಣ್ಯರು ಹುಡುಕುತ್ತಿರುವ ಬ್ರಹ್ಮ ವಿದ್ಯೆಯೆ ನಾನು. ಹರಿಯಪಾದ ಕಮಲವನ್ನು ಹೊಂದಲು ತಪಸ್ಸು ಮಾಡುತ್ತಿದ್ದೇನೆ. ಬ್ರಹ್ಮಾನಂದದಿಂದ ನಾನು ಪೂರ್ಣಳಾಗಿದ್ದರೂ ಹರಿಯು ಬಳಿಯಲಿಲ್ಲದಿದ್ದರೆ ಎಲ್ಲವೂ ಶೂನ್ಯವೆನಿಸುತ್ತಿದೆ. ನಾನೀಗ ದುಃಖದಿಂದ ನನ್ನ ಶರೀರವನ್ನು ಈ ಕೊಳದಲ್ಲಿ ಪರಿತ್ಯಾಗಮಾಡಬೇಕೆಂದಿದ್ದೇನೆ.'

ಮುನಿಯ ಆಶ್ಚರ್ಯಗೊಂಡು ಅವಳ ಕಾಲಿಗೆ ನಮಿಸಿ ಕೃಷ್ಣನನ್ನು ಉಪಾಸನೆ ಮಾಡುವ ವಿಧಾನಗಳನ್ನು ಕೇಳಿದ. ಅವಳು ಒಂದು ಮಂತ್ರವನ್ನು ಉಪದೇಶಿಸಿದಳು. ಅದನ್ನು ಜಪಿಸಲು ಮಾನಸ ಸರೋವರದ ಬಳಿಗೆ ಹೋಗಿ ಆಶ್ಚರ್ಯಕರವಾದ ತೀವ್ರ ತಪಸ್ಸಿಗೆ ತೊಡಗಿದ. ಒಂದು ಕಾಲಿನಲ್ಲಿ ನಿಂತು ಎವೆಯಿಕ್ಕದೆ ಸೂರ್ಯನನ್ನೆ ದಿಟ್ಟಿಸುತ್ತ ಇಪ್ಪತ್ತೈದು ಅಕ್ಷರಗಳ ಆ ಮಂತ್ರವನ್ನು ಜಪಿಸಿದ ಆನಂದರೂಪಿಯಾದ ಕೃಷ್ಣನನ್ನು ಧ್ಯಾನಿಸಿದ. ವ್ರಜದಲ್ಲಿ ಸುಂದರ ಗತಿಯಲ್ಲಿ ಓಡಾಡುತ್ತ ಮುಗುಳು ನಗು ಕಡೆಗಣ್ಣನೋಟ, ನಾನಾವಿಧದ ಶೃಂಗಾರ ಲೀಲೆಗಳು, ತುಟಿಗಳನ್ನು ಚುಂಬಿಸುವ ಸಂಮೋಹಿನಿಯೆಂಬ ಕೊಳಲು, ಮಧುರ ಮನೋಹರ ನುಡಿಗಳು, ಇವುಗಳಿಂದ ವ್ರಜದ ಯುವತಿಯರ ಮನಸೆಳೆದು ಉಟ್ಟ ಬಟ್ಟೆ ಬಿಚ್ಚಿ ಹೋಗುವುದರ ಪರಿವೆ ಇಲ್ಲದೆ ಆಲಂಗಿಸುವ ಅವರ ಮೈಯನ್ನು ಸೆಳೆದು ಲೋಕವನ್ನೆ ಮೈ ಮರೆಸುತ್ತಾನೆ ಆ ಜಗದೊಡೆಯ ಕೃಷ್ಣನೆಂದು

ಧ್ಯಾನಿಸಿದ. ಒಬ್ಬತ್ತು ಕಲ್ಪಗಳ ಕಾಲ ಹೀಗೆ ತಪಸ್ಸು ಮಾಡಿ ಪ್ರಚಂಡನೆಂಬೊಬ್ಬ ಗೊಲ್ಲನ ಮಗಳಾಗಿ ಚಿತ್ರ ಗಂಧೆ ಎಂಬ ಹೆಸರಿನಿಂದ ಹುಟ್ಟಿದ್ದಾನೆ. ಇವಳೆ ಆ ಚಿತ್ರಗಂಧೆ. ಮೈಯಿಂದ ಸೂಸುವ ಹಲವು ಬಗೆಯ ಸುವಾಸನೆಯಿಂದ ಹತ್ತು ದಿಕ್ಕುಗಳನ್ನು ತುಂಬುವಳು. ಪ್ರಣಯದ ಆವೇಶದಿಂದ ಅವಳು ಹರಿಯನ್ನಾಲಿಂಗಿಸುವಾಗ ಎದೆಯ ಮೇಲಿನಿಂದ ಬೀಳುವ ಹೂ ಮಾಲೆಯ ವಿಚಿತ್ರ ಪರಿಮಳವು ಎಲ್ಲೆಡೆ ಹರಡುವಂತೆ ಮಾಡುವಳು.

ಇನ್ನೂ ಅನೇಕ ಮುನಿಗಳು ಕೇವಲ ಗಾಳಿಯನ್ನೆ ಆಹಾರವನ್ನಾಗಿ ಸೇವಿಸಿ ಹದಿನೈದು ಅಕ್ಷರಗಳ ಕೃಷ್ಣಮಂತ್ರವನ್ನು ಜಪಿಸಿದರು. ಕೃಷ್ಣನ ವೇಣುಗೋಪಾಲ ಮೂರ್ತಿಯನ್ನು ಧ್ಯಾನಿಸಿದರು. ಒಂದು ಕಲ್ಪಕಾಲ ಹೀಗೆ ತಪಸ್ಸು ಮಾಡಿ ಈಗ ಗೋಪಿಯರಾಗಿ ಜನಿಸಿದ್ದಾರೆ. ಕಿವಿಯಲ್ಲಿ ರತ್ನದ ಓಲೆಗಳನ್ನೂ ಕತ್ತಿನಲ್ಲಿ ರತ್ನದ ಮಾಲೆಗಳನ್ನೂ ಜಡೆಯಲ್ಲಿ ರತ್ನ ಪುಷ್ಪಗಳನ್ನೂ ಹಾಕಿಕೊಂಡಿದ್ದಾರೆ. ಶುಚಿಶ್ರವ, ಸುವರ್ಣ ಎಂಬಿಬ್ಬರು ಕುಶಧ್ವಜ ಮಹರ್ಷಿಯ ಮಕ್ಕಳು ವೇದಪಾರಂಗತರು. ಅವರು ಕಾಲುಗಳನ್ನು ಮೇಲಕ್ಕೆ ಮಾಡಿಕೊಂಡು ಘೋರ ತಪಸ್ಸನ್ನು ಮಾಡಿದರು. ಹ್ರೀಂ ಹಂಸಃ ಎಂಬ ಮೂರಕ್ಷರದ ಮಂತ್ರವನ್ನು ಜಪಿಸುತ್ತ ವ್ರಜನಾರಿಯರನ್ನು ಮೋಹಗೊಳಿಸುವ ಸುಂದರವಾದ ಹತ್ತು ವರ್ಷ ವಯಸ್ಸಿನ ಕೃಷ್ಣರೂಪವನ್ನು ಧ್ಯಾನಿಸಿದರು. ಒಂದು ಕಲ್ಪಕಾಲ ತಪಸ್ಸು ಮಾಡಿ ಈಗ ಸುವೀರನೆಂಬ ಗೊಲ್ಲನ ಮಕ್ಕಳಾಗಿ ಹುಟ್ಟಿದರು. ಅವರ ಕೈಯಲ್ಲಿ ಮುದ್ದಾಗಿ ಮಾತನಾಡುವ ಸಾರಿಕಾ ಪಕ್ಷಿಗಳಿವೆ. ಜಟಿಲ, ಜಂಘಪೂತ, ಘೃತಾಶೀ ಕರ್ಬುರ ಎಂಬ ನಾಲ್ವರು ಋಷಿಗಳು ನೀರಲ್ಲಿ ಮುಳುಗಿ ಏಕಾಗ್ರತೆಯಿಂದ ಹತ್ತು ಅಕ್ಷರದ ಮಂತ್ರವನ್ನು ಜಪಿಸಿದರು. ಗೋಪಿಯರೊಡನೆ ಹಾಡುತ್ತ ಕುಣಿಯುತ್ತ ವನದಲ್ಲಿ ವಿಹರಿಸುವ ಗೊಲ್ಲವೇಷದ ಗೋವಿಂದನನ್ನು ಧ್ಯಾನಿಸಿದರು. ಮೂರು ಕಲ್ಪಗಳ ಕಾಲ ತಪಸ್ಸುಮಾಡಿ ಗೋಪಿಯರಾಗಿ ಇಲ್ಲಿ ಜನಿಸಿದ್ದಾರೆ ನೋಡು.

ಹಿಂದಿನ ಕಲ್ಪದಲ್ಲಿ ದೀರ್ಘತಪವೆಂಬ ಮುನಿಯು ವ್ಯಾಸನಾಗಿದ್ದ. ಅವನಿಗೂ ಶುಕನೆಂಬ ಒಬ್ಬ ಮಗನಿದ್ದ. ಎಳೆವಯಸ್ಸಿನಲ್ಲಿಯೆ ಆ ಶುಕಮುನಿಯು ಉತ್ತಮ ಜ್ಞಾನಿಯೆನಿಸಿ ಕೃಷ್ಣನನ್ನೆ ಸದಾ ಚಿಂತಿಸುತ್ತ ಒಂದು ದಿನ ತಂದೆತಾಯಿಗಳನ್ನೆಲ್ಲ ತೊರೆದು ಅರಣ್ಯದಲ್ಲಿ ತಪಸ್ಸಿಗೆ ತೊಡಗಿದ. ತಾನು ಉಪವಾಸದಿಂದಿದ್ದು ಗೋಪಾಲ ಕೃಷ್ಣನನ್ನು ಮಾನಸ ಉಪಚಾರಗಳಿಂದ ಅರ್ಚಿಸಿದ. ಹದಿನೆಂಟು ಅಕ್ಷರದ ಮಂತ್ರವನ್ನು ಜಪಿಸಿದ. ಚಿನ್ನದ ಮರದ ಬುಡದಲ್ಲಿ ಚಿನ್ನದ ಮಂಟಪದೊಳಗೆ ಚಿನ್ನದ ಸಿಂಹಾಸನದಲ್ಲಿ ಕುಳಿತು ಚಿನ್ನದ ಕೊಳಲನ್ನು ಹಿಡಿದು ಇನ್ನೊಂದು ಕೈಯಲ್ಲಿ ಚಿನ್ನದ ತಾವರೆಯನ್ನು ತಿರುಗಿಸುತ್ತಿರುವ, ಚಿನ್ನದ ಬಣ್ಣದಿಂದ ಹೊಳೆವ ಅಂಗರಾಗವನ್ನು ಪ್ರಿಯೆಯ ಕೈಯಿಂದ ಮೈಮೇಲೆಲ್ಲ ಧರಿಸಿರುವ ಹಸನ್ಮುಖಿಯಾದ ಕೃಷ್ಣನನ್ನು ಧ್ಯಾನಿಸಿದ. ಮೈಯೆಲ್ಲ ರೋಮಾಂಚಗೊಂಡು ಆನಂದಬಾಷ್ಪ ಸುರಿಸುತ್ತ 'ನಾಥ, ಪ್ರಸನ್ನನಾಗೆಂದು ಗಟ್ಟಿಯಾಗಿ ಕೂಗುತ್ತ ನಡುಗುತ್ತ ದಂಡಪ್ರಣಾಮ ಮಾಡಿದ. ಒಡನೆ 'ಇಗೊ ನಾನು ಇಲ್ಲಿಯೇ ಇದ್ದೇನೆ' ಎನ್ನುತ್ತ ಕೃಷ್ಣನು ಮೈದೋರಿ ಅವನ ತೋಳುಗಳನ್ನು ಹಿಡಿದೆತ್ತಿ ಮೈದಡವಿದ. ಆನಂದದಿಂದ ಅರಳಿದ ಕಣ್ಣುಗಳಿಂದ ನೋಡಿ 'ನೀನು ನನ್ನ ಪ್ರಿಯತಮೆಯಾಗಿ ಸದಾ ನನ್ನ ಬಳಿ ಇರು' ಎಂದು ಅನುಗ್ರಹಿಸಿದ. ಆ ಶುಕಮುನಿಯೆ ಈಗ ಗೋಕುಲದಲ್ಲಿ ಉಪನಂದನ

ಮಗಳಾಗಿ ಜನಿಸಿದ. ಅವಳೇ ಈ ಗೋಪಿ. ನೀಲೋತ್ಪಲದಂತೆ ಹೊಳೆವ ಮೈಗೆ ಚಂದ್ರವನ್ನು ಬಳಿದು ಕೊಂಡಿದ್ದಾಳೆ. ಕೆಂಪು ರವಿಕೆ, ಪೀತಾಂಬರಗಳನ್ನು ಧರಿಸಿದ್ದಾಳೆ. ಸ್ವರ್ಣ ಕುಂಡಲ ಸುವರ್ಣ ಕಮಲಗಳ ಮಾಲೆಗಳನ್ನು ಧರಿಸಿದ್ದಾಳೆ. ಕೊಳಲು ಊದುವುದರಲ್ಲಿ ಚದುರೆ. ಅವಳ ವೇಣಿವಾದನಕ್ಕೆ ಮೆಚ್ಚಿ ಸ್ವಯಂ ಕೃಷ್ಣನೆ ಶಂಖದಂತೆ ಮನೋಹರವಾದ ಅವಳ ಕೊರಳಿಗೆ ಗುಲಗಂಜಿಯ ಹಾರವನ್ನು ತೊಡಿಸಿದ್ದಾನೆ. ಕೈಯಲ್ಲಿ ತಾಂಬೂಲವನ್ನಿತ್ತಿದ್ದಾನೆ. ಕೃಷ್ಣನು ಸಮೀಪದಲ್ಲಿಲ್ಲದಿರುವಾಗಲೂ ಅವಳು ಕಾಮಬಾಧೆಯಿಂದ ಮಧುರವಾಗಿ ಹಾಡುತ್ತ ಗೆಳತಿಗೆ ಕೃಷ್ಣನ ವೇಷ ತೊಡಿಸಿ ಅವಳೊಡನೆ ಕುಣಿಯುವಳು. ಬಿಗಿದಪ್ಪಿ ಮುದ್ದಿಡುವಳು. ಇವಳು ಎಲ್ಲ ಗೋಪಿಯರಿಗೂ ಪ್ರಿಯಳು. ಕೃಷ್ಣನಿಗೂ ಅತಿ ಪ್ರಿಯಳು.

ಶ್ವೇತಕೇತುವಿನ ಒಬ್ಬ ಮಗನು ಸರ್ವಸಂಗ ಪರಿತ್ಯಾಗ ಮಾಡಿ ತಪಸ್ಸು ಮಾಡುತ್ತಿದ್ದ. ಬ್ರಹ್ಮರುದ್ರಾದಿಗಳಿಗೆ ಅಗಮ್ಯಳಾದ ಹರಿಪ್ರಿಯೆಯನ್ನು ಧ್ಯಾನಿಸುತ್ತ ಹನ್ನೊಂದು ಅಕ್ಷರಗಳ ಕೃಷ್ಣಮಂತ್ರವನ್ನು ಜಪಿಸಿದ. ಹೀಗೆ ಎರಡು ಕಲ್ಪಗಳ ಕಾಲ ತಪಸ್ಸು ಮಾಡಿ ಈಗ ಭೂಮಿಯ ಮಗಳಾಗಿ ಹುಟ್ಟಿದ್ದಾನೆ. ಅವಳೆ ಈ ಹುಡುಗಿ ಮುತ್ತಿನ ಮಾಲೆ ಧರಿಸಿದ್ದಾಳೆ. ಶುದ್ಧ ರೇಶಿಮೆ ಉಟ್ಟಿದ್ದಾಳೆ.

ಚಂದ್ರಪ್ರಭನೆಂಬ ರಾಜರ್ಷಿ ಕೃಷ್ಣನ ಅನುಗ್ರಹದಿಂದ ಚಿತ್ರಧ್ವಜನೆಂಬ ಸುಂದರನಾದ ಒಬ್ಬ ಮಗನನ್ನು ಪಡೆದ. ಅವನು ಎಳೆ ವಯಸ್ಸಿನಲ್ಲಿಯೆ ವಿಷ್ಣುಭಕ್ತನಾಗಿದ್ದ. ಹನ್ನೆರಡನೆಯ ವಯಸ್ಸಿನಲ್ಲಿ ಅವನಿಗೆ ತಂದೆಯು ಮಂತ್ರಪೂತವಾದ ಜಲದಿಂದ ಅಭಿಷೇಕ ಮಾಡಿ ಹದಿನೆಂಟು ಅಕ್ಷರಗಳ ವಿಷ್ಣುಮಂತ್ರವನ್ನು ಉಪದೇಶಿಸಿ ದೀಕ್ಷೆಯನ್ನಿತ್ತ. ಒಡನೆ ಮಗನು ಪ್ರೀತಿಯಿಂದ ಕಣ್ಣೀರು ಸುರಿಸುತ್ತ ತಂದೆಗೆ ನಮಿಸಿದ. ಆ ದಿನವೇ ಶುಚಿಯಾದ ವೇಷ ಭೂಷಣಗಳನ್ನು ಧರಿಸಿ ವಿಷ್ಣು ದೇವಾಲಯಕ್ಕೆ ಹೋಗಿ ಅಲ್ಲಿ ಏಕಾಕಿಯಾಗಿ ಕುಳಿತು ಚಿಂತಿಸತೊಡಗಿದ. ಗೊಲ್ಲರ ಯುವತಿಯರ ಮನ ಸೆಳೆದು ಅವರೊಡನೆ ಯಮುನೆಯ ಮಳಲ ದಂಡೆಯಲ್ಲಿ ಆಡುವ ಆ ಕೃಷ್ಣನನ್ನು ನಾನು ಹೇಗೆ ಸೇವಿಸಲಿ ಎಂದು ಉತ್ಕಂಠೆಯಿಂದ ಬಾಲಕನು ಆಲೋಚಿಸುತ್ತ ನಿದ್ದೆಯಲ್ಲಿ ಒಂದು ಕನಸು ಕಂಡ. ಆ ದೇವಾಲಯದಲ್ಲಿ ಚಿನ್ನದ ಪೀಠದ ಮೇಲೆ ನಿಂತ ಶ್ರೀ ಕೃಷ್ಣನ ಶಿಲಾಪ್ರತಿಮೆ ಅವನ ಕನಸಿನಲ್ಲಿ ಸಾಕ್ಷಾತ್ ಕೃಷ್ಣರೂಪವನ್ನು ತಾಳಿತು. ತ್ರಿಭಂಗಿಯಾಕಾರದಲ್ಲಿ ನಿಂತು ಕೃಷ್ಣ ಕೊಳಲನ್ನು ಊದುತ್ತಿದ್ದ. ಎಡಬಲಗಳಲ್ಲಿ ಸುಂದರಿಯರು ಅವನನ್ನು ಬಳಸಿ ಮುದ್ದಿಡುತ್ತಿದ್ದರು. ಬಾಲಕನು ಕೃಷ್ಣನೆದುರಿನಲ್ಲಿ ಲಜ್ಜೆಯಿಂದ ತಲೆಬಾಗಿ ನಿಂತಿದ್ದ. ಕೃಷ್ಣನು ತನ್ನ ಬಲಭಾಗದಲ್ಲಿದ್ದ ಪ್ರಿಯೆಗೆ ಹೇಳಿದ 'ಹರಿಣಾಕ್ಷಿ. ಈ ಬಾಲಕನು ಲಜ್ಜೆಯಿಂದ ತಲೆ ಬಾಗಿ ನಿಂತಿದ್ದಾನೆ. ಅವನಿಗೆ ನಿನ್ನಂಥ ಅದ್ಭುತ ಸುಂದರ ಯುವತಿಯ ರೂಪವನ್ನು ಕೊಡು. ಅವನ ಶರೀರವನ್ನು ನಿನ್ನ ಶರೀರದೊಂದಿಗೆ ಒಂದಾಗಿ ಭಾವಿಸು. ಆಗ ಅವನೂ ನಿನ್ನಂತಾಗುವನು.'

ಒಡನೆ ಆ ಸುಂದರಿಯು ಚಿತ್ರಧ್ವಜನ ಬಳಿಗೆ ಬಂದು ತನ್ನ ಶರೀರದೊಂದಿಗೆ ಅವನ ಶರೀರವನ್ನು ಒಂದಾಗಿ ಧ್ಯಾನಿಸಿದಳು. ಆಗ ಅವಳ ಅಂಗಗಳಿಂದ ಕಾಂತಿ ಹೊರಬಂದು ಚಿತ್ರಧ್ವಜನ ಮೈಯನ್ನಾವರಿಸಿ ತುಂಬಿಕೊಂಡಿತು. ಅವನು ಹೆಣ್ಣಾದ ಅವನ ಮೈ ಕೈ ಅವನ

ಒಡವೆ ವಸ್ತ್ರಗಳೆಲ್ಲವೂ ಅವಳದೆ. ಅವಳದೆ ಕಲಾ ಚಾತುರ್ಯ ಅವಳದೆ ಮೈಗಂಪು. ಎಲ್ಲವೂ ಅವಳದೆ. ದೀಪದಿಂದ ಇನ್ನೊಂದು ದೀಪ ಬೆಳಗಿದಂತಾಯಿತು. ಈಗ ಮನೋಹರಿಯಾದ ಚಿತ್ರಧ್ವಜೆ ನಾಚಿ ತಲೆತಗ್ಗಿಸಿ ನಿಂತಳು. ಕೃಷ್ಣನ ಆ ಪ್ರೇಯಸಿ ಪ್ರೇಮದಿಂದ ಅವಳನ್ನು ಕೈ ಹಿಡಿದು ಕೃಷ್ಣನ ಬಳಿಗೊಯ್ದಳು. ಎಡ ಪಾರ್ಶ್ವದಲ್ಲಿದ್ದ ಇನ್ನೊಬ್ಬ ಪ್ರೇಯಸಿಯನ್ನಪ್ಪಿಕೊಂಡು ಹೇಳಿದಳು. ಇವಳು ನಿನ್ನ ದಾಸಿ. ನಾಮಕರಣ ಮಾಡು. ನೀನು ಬಯಸುವ ಸೇವೆಯನ್ನು ಅವಳಿಂದ ಮಾಡಿಸಿಕೊಳ್ಳು' ಆ ಪ್ರೇಯಸಿಯು ಚಿತ್ರಧ್ವಜೆಗೆ ಚಿತ್ರಕಲೆ ಎಂದು ಹೆಸರಿಟ್ಟಳು. 'ವೀಣೆಯನ್ನು ಹಿಡಿದು ಸದಾ ಬಳಿಯಲ್ಲಿದ್ದು ನನ್ನ ಈ ಪ್ರಾಣನಾಥನ ಗುಣಗಾನ ಮಾಡುತ್ತಿರೆಂದು ಅಜ್ಞಾಪಿಸಿದಳು. ಚಿತ್ರಕಲೆ ಆ ಆಜ್ಞೆಯನ್ನು ಶಿರಸಾವಹಿಸಿ ಕೃಷ್ಣನನ್ನು ನಮಿಸಿದಳು. ಅವನ ಪ್ರೇಯಸಿಯ ಪಾದಧೂಳಿಯನ್ನು ತಲೆಯಲ್ಲಿ ಧರಿಸಿ ಹಾಡತೊಡಗಿದಳು. ಕೃಷ್ಣನು ಅವಳನ್ನು ಪ್ರೀತಿಯಿಂದ ತಬ್ಬಿಕೊಂಡ. ಅಷ್ಟರಲ್ಲಿ ಸ್ವಪ್ನದಿಂದ ಎಚ್ಚತ್ತ ಚಿತ್ರಧ್ವಜನು ವಿರಹದುಃಖದಿಂದ ಅಳತೊಡಗಿದ. ಆಹಾರವಿಹಾರಗಳನ್ನು ತೊರೆದ. ತಂದೆ ತಾಯಿಗಳು ಮಾತನಾಡಿಸಿದರೂ ಪ್ರತ್ಯುತ್ತರ ನೀಡಲಿಲ್ಲ. ಹೀಗೆ ಒಂದು ತಿಂಗಳ ಕಾಲ ಮನೆಯಲ್ಲಿದ್ದು ಒಂದು ಮಧ್ಯರಾತ್ರಿ ಮನೆಯಿಂದ ಹೊರಟು ಅರಣ್ಯವನ್ನು ಸೇರಿದ. ಮುನಿಗಳಿಗೂ ಅಸಾಧ್ಯವಾದ ಘೋರ ತಪಸ್ಸು ಮಾಡಿದ. ಕಲ್ಪದ ಕೊನೆಯಲ್ಲಿ ದೇಹವನ್ನು ತೊರೆದು ವೀರಗುಪ್ತನೆಂಬ ಗೊಲ್ಲನ ಮಗಳಾಗಿ ಚಿತ್ರಕಲೆ ಎಂಬ ಹೆಸರಿನಿಂದಲೆ ಜನಿಸಿದ. ಅವಳ ಹೆಗಲ ಮೇಲೆ ವೀಣೆಯ ಚಿಹ್ನೆ ಇದೆ. ಎಡಗೈಯಲ್ಲಿ ರತ್ನಮಯವಾದ ಬಟ್ಟಲು. ಬಲಗೈಯಲ್ಲಿ ರತ್ನಮಯ ಪಂಜರಗಳಿವೆ.

ಪುಣ್ಯಶ್ರವನನೆಂಬ ಮುನಿ ಇದ್ದ. ಅವನ ತಂದೆ ಶಿವಭಕ್ತ. ಶತರುದ್ರೀಯ ಮಂತ್ರಗಳಿಂದ ಶಿವನನ್ನು ಸ್ತುತಿಸಿ ಒಲಿಸಿಕೊಂಡ. ಶಿವನು ಮೈದೋರಿ 'ನಿನಗೊಬ್ಬ ಕೃಷ್ಣಭಕ್ತನಾದ ಮಗನು ಹುಟ್ಟುವನು. ಎಂಟನೆ ವರ್ಷದಲ್ಲಿ ಅವನಿಗೆ ಉಪನಯನ ಮಾಡು. ವಿದ್ಯಾಗೋಪಾಲನೆಂಬ ವಾಕ್ಸಿದ್ಧಿದಾಯಕವಾದ ದಶಾಕ್ಷರ ಮಂತ್ರವನ್ನು ಉಪದೇಶಿಸು. ಅದನ್ನು ನಾನು ನಿನಗೆ ಉಪದೇಶಿಸುವೆನು. ಆ ಮಂತ್ರದ ಸಿದ್ಧಿ ಪಡೆದರೆ ನಾಲಗೆಯಲ್ಲಿ ಸ್ವಯಂ ಅನಂತ ಮೂರ್ತಿಯಾದ ಗೋಪಾಲಕೃಷ್ಣನು ನಲೆಸುವನು. ಜಪ ಕಾಲದಲ್ಲಿ ಹೀಗೆ ಧ್ಯಾನಿಸಬೇಕು.

'ತುಂಬಿದ ಅಮೃತ ಸಾಗರದ ನಡುವೆ. ಜ್ಯೋತಿರ್ಮಯವಾದ ಒಂದು ದೀಪ. ಅದರಲ್ಲಿ ಯಮುನೆಯಿಂದ ಆವೃತವಾದ ವೃಂದಾವನ, ಎಲ್ಲ ಕಾಲಗಳಲ್ಲಿಯೂ ಹೂ ಬಿಡುವ ಮರ ಬಳ್ಳಿಗಳಿಂದ ತುಂಬಿದೆ. ಆನಂದೋನ್ಮಾದದಿಂದ ಕುಣಿದು ಹಾಡುವ ನವಿಲು ಕೋಗಿಲೆ ದುಂಬಿಗಳು ಅಲ್ಲಿವೆ. ಮಧ್ಯದಲ್ಲಿ ಒಂದು ದೊಡ್ಡ ಪಾರಿಜಾತ ವೃಕ್ಷ. ಶಾಖೋಪಶಾಖೆಗಳಿಂದ ಹರಡಿ ನೂರು ಯೋಜನದೆತ್ತರಕ್ಕೆ ಬೆಳೆದುನಿಂತಿದೆ. ಆ ಮರದ ಬುಡದಲ್ಲಿ ಸುತ್ತಲೂ ಗೋವುಗಳು. ಅವುಗಳ ನಡುವೆ ಕೊಳಲು ಉದುವ ಗೋಪಾಲಕರು. ಅವರ ನಡುವೆ ಗೋಪಿಕಾ ಸ್ತ್ರೀಯರು. ಆನಂದಪರವಶರಾಗಿ ಕೃಷ್ಣನಿಗೆ ಅರ್ಪಿಸಲು ನಾನಾ ಬಗೆಯ ಕಾಣಿಕೆ ವಸ್ತುಗಳನ್ನು ತಂದಿದ್ದಾರೆ. ಬಿಳಿಬಟ್ಟೆ ಬಿಳಿಯಒಡವೆಗಳನ್ನು ಧರಿಸಿ ಕೈಮುಗಿದು ಕೃಷ್ಣನ ಸವಿನುಡಿಗಳನ್ನು ಆಲಿಸುತ್ತಿದ್ದಾರೆ.

ಅವರು ಮೂರ್ತಿಮತ್ತಾಗಿ ಬಂದ ಶ್ರುತಿಕನ್ನಿಕೆಯರು ಅವರ ನಡುವೆ ರತ್ನದ ವೇದಿಕೆಯಲ್ಲಿ ರಾಧೆಯ ತೊಡೆಯ ಮೇಲೆ ಪೀತಾಂಬರವನ್ನು ಉಟ್ಟ ಹರಿ ಮಲಗಿದ್ದಾನೆ. ಅವಳ ಚಂದ್ರನಂಥ ನಗುಮೊಗವನ್ನು ಈಕ್ಷಿಸುತ್ತಿದ್ದಾನೆ. ಎಡಗಾಲನ್ನು ಸ್ವಲ್ಪ ಎಳೆದುಕೊಂಡು ಬಗ್ಗಿಸಿಕೊಂಡಿದ್ದಾನೆ. ಕೊಳಲನ್ನು ಹಿಡಿದ ಎಡಗೈಯಿಂದ ಪ್ರಿಯೆಯ ಮೈಯನ್ನು ಬಳಸಿ. ಬಲಗೈಯಿಂದ ಅವಳ ಮುಖವನ್ನು ಸ್ಪರ್ಶಿಸುತ್ತಾನೆ. ಮರಕತಮಣಿಯಂತೆ ಹೊಳೆವ ಮೈ ಬಣ್ಣ. ಮುತ್ತಿನ ಕಾಂತಿ. ತಾವರೆಯಂತೆ ನೀಳವಾದ ಕಣ್ಣು. ನಿರ್ಮಲವಾದ ಪೀತಾಂಬರ. ತಲೆಯಲ್ಲಿ ನವಿಲುಗರಿಗಳು. ಕೆನ್ನೆಯ ಬಳಿ ಹೊಳೆವ ಮಕರ ಕುಂಡಲಗಳು. ಮುತ್ತಿನಹಾರ. ತುಳಸಿಮಾಲೆ, ಬಳೆ, ಭುಜಕೀರ್ತಿ, ಕಾಲುಗೆಜ್ಜೆ, ಉಂಗುರ, ಉಡಿದಾರಗಳಿಂದ ಶೋಭಿಸುವ ಸುಕುಮಾರ ಶರೀರ. ಇನ್ನೂ ಎಳೆ ವಯಸ್ಸು. ಇಂಥ ಕೃಷ್ಣನನ್ನು ಧ್ಯಾನಿಸುತ್ತ ಮಂತ್ರವನ್ನು ನಾಲ್ಕು ಲಕ್ಷ ಬಾರಿ ಪುನಶ್ಚರಣೆ ಮಾಡು' ಎಂದು ಹೇಳಿ ಮಂತ್ರವನ್ನು ಉಪದೇಶಿಸಿ ಕಣ್ಮರೆಯಾದ. ತಂದೆ ಆ ಮಂತ್ರವನ್ನು ಮಗನಿಗುಪದೇಶಿಸಿದ. ಬಾಲಕನು ಆನಂದದಿಂದ ಕಾಡಿಗೆ ಹೋಗಿ ಗಾಳಿಯೊಂದನ್ನೆ ಆಹಾರವಾಗಿ ಸೇವಿಸುತ್ತ ಮೂವತ್ತು ಸಾವಿರ ಕಲ್ಪಗಳಕಾಲ ತಪಸ್ಸು ಮಾಡಿದ. ಬಳಿಕ ಗೋಕುಲದಲ್ಲಿ ನಂದನ ಸೋದರನ ಮಗಳಾಗಿ ಲವಂಗೆ ಎಂಬ ಹೆಸರಿನಿಂದ ಹುಟ್ಟಿದ್ದಾಳೆ. ಅವಳ ಕೈಯಲ್ಲಿ ಮುಖ ಒರೆಸುವ ಯಂತ್ರವಿದೆ.

ಇವರೆಲ್ಲರೂ ಕೃಷ್ಣನ ಪ್ರಧಾನ ಪ್ರೇಯಸಿಯರಲ್ಲಿ ಕೆಲವರು. ಶ್ರೀ ಹರಿಯ ಮತ್ತು ವ್ರಜನಾರಿಯರ ವೃತ್ತಾಂತವನ್ನೊಳಗೊಂಡ ಈ ಅಧ್ಯಾಯವನ್ನು ಭಕ್ತಿಯಿಂದ ಓದುವ ಓದಿಸುವ ಮಾನವನು ಆ ಭಗವಂತನ ಲೋಕವನ್ನು ಹೊಂದುತ್ತಾನೆ.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಪಾತಾಳಖಂಡದಲ್ಲಿ*
*ಶ್ರೀ ಕೃಷ್ಣಮಹಿಮೆಯಲ್ಲಿ ಇಪ್ಪತ್ತನಾಲ್ಕನೆ ಅಧ್ಯಾಯ ಮುಗಿದುದು*



## ಮಧುರಾ ಮಹಾತ್ಮ್ಯ — ಅಧ್ಯಾಯ - ೨೫

**ಈಶ್ವರ ಉವಾಚ**

**ಈಶ್ವರ :-** ಪ್ರಿಯೆ, ಶ್ರೀ ಕೃಷ್ಣನ ಲೀಲೆಯನ್ನು ನಾನು ನಿನಗೆ ಹೇಳಿದ್ದೇನೆ. ಬ್ರಹ್ಮಾದಿ ದೇವತೆಗಳಿಗೂ ಇದರಬಗ್ಗೆ ಸರಿಯಾದ ಜ್ಞಾನವಿಲ್ಲ. ವೇದವ್ಯಾಸ ಮಹರ್ಷಿಯು ವಿಷ್ಣುಭಕ್ತನಾದ ಅಂಬರೀಷ ಮಹಾರಾಜನಿಗೆ ಉಪದೇಶಿಸಿದುದನ್ನೂ ನಿನಗೆ ಹೇಳುವೆನು ಕೇಳು. ಅಂಬರೀಷನು ಬದರಿಕಾಶ್ರಮದಲ್ಲಿ ಸರ್ವಜ್ಞರಾದ ವೇದವ್ಯಾಸರನ್ನು ಕುರಿತು ವಿಷ್ಣುಧರ್ಮದ ವಿಷಯದಲ್ಲಿ ಹೀಗೆ ಹೇಳಿದ.

**ಅಂಬರೀಷ :-** ಗುರುವೆ, ಸಂಸಾರ ಸಮುದ್ರದಲ್ಲಿ ಬಿದ್ದಿರುವ ನನ್ನನ್ನೆತ್ತಿ ಕಾಪಾಡು. ವಿಷಯ ಸುಖವನ್ನು ಕಂಡು ಬೇಸತ್ತಿದ್ದೇನೆ. ಸಚ್ಚಿದಾನಂದಮಯನಾದ ಪರಬ್ರಹ್ಮನನ್ನು ಉಪದೇಶಿಸು. ಅವನನ್ನು ಸಾಕ್ಷಾತ್ಕರಿಸಿಕೊಂಡು ಮುನಿಗಳು ಸಂಸಾರಸಾಗರವನ್ನು ದಾಟುತ್ತಿದ್ದಾರೆ.

**ವೇದವ್ಯಾಸ :-** ಅತಿರಹಸ್ಯವಾದ ವಿಷಯವನ್ನೆ ಕೇಳುತ್ತಿರುವೆ. ಶುಕಮುನಿಗೂ ಹೇಳದಿರುವ ಆ ರಹಸ್ಯವನ್ನು ಹರಿಭಕ್ತ ನಿನಗೆ ಹೇಳುತ್ತೇನೆ. ಹಿಂದೆ ನಾನು ಅನೇಕ ಸಾವಿರ ವರ್ಷಗಳ ಕಾಲ ತಪಸ್ಸು ಮಾಡಿದಾಗ ಹರಿಯು ಮೈದೋರಿ ನುಡಿದ.

**ಹರಿ :-** ಮುನಿಯೆ, ನಿನಗೇನುಬೇಕು ? ಬೇಕಾದ ವರವನ್ನು ಕೇಳು.

**ವೇದವ್ಯಾಸ :-** ಪರಬ್ರಹ್ಮನಾದ ನಿನ್ನ ಅದ್ಭುತ ರೂಪವನ್ನು ಕಣ್ಣಾರೆ ಕಾಣಬೇಕಾಂಬಸೆ ನನಗಿದೆ. ಉಪನಿಷತ್ತುಗಳು ಕೊಂಡಾಡುವ ಜಗಜ್ಯೋತಿಯಾದ ಆ ನಿನ್ನ ರೂಪವನ್ನು ತೋರು.

**ಹರಿ :-** ಹೀಗೇ ಬ್ರಹ್ಮನೂ ಹಿಂದೆ ಪ್ರಾರ್ಥಿಸಿದ್ದ. ನಾನು ಆಗ ಅವನಿಗೆ ಹೇಳಿದುದನ್ನೆ ನಿನಗೂ ಹೇಳುವೆನು. ನನ್ನನ್ನು ಪ್ರಕೃತಿ, ಪುರುಷ, ಧರ್ಮ, ಧಾನ, ಮೋಕ್ಷ, ಶೂನ್ಯ, ಭಾವ, ಶಿವ, ಉಪನಿಷದ್‌ವೇದ್ಯ ಸನಾತನ ತತ್ವವೆಂದು ಮುಂತಾಗಿ ಹಲವರು ಹಲವು ಬಗೆಯಿಂದ ತಿಳಿದುಕೊಂಡಿದ್ದಾರೆ. ವೇದಗಳಲ್ಲಿ ನಿಗೂಢವಾಗಿರುವ ನನ್ನ ರೂಪವನ್ನು ತೋರಿಸುತ್ತೇನೆ, ನೋಡು.

ರಾಜನೆ, ನಾನು ಆಗ ಹರಿಯ ಬಾಲ ಗೋಪಾಲಕೃಷ್ಣರೂಪವನ್ನು ಕಂಡೆ. ಗೋಪಕನ್ಯೆಯರ ಮತ್ತು ಗೋಪಾಬಾಲಕರ ಜೊತೆಗೆ ಕದಂಬ ವೃಕ್ಷದ ಬುಡದಲ್ಲಿ ಕುಳಿತ ಹಸನ್ಮುಖನಾದ ಪೀತಾಂಬರ ಧಾರಿಯಾದ ಕೃಷ್ಣನನ್ನು ಕಂಡೆ. ಎಳೆದಳಿರುಗಳಿಂದ ಶೋಭಿಸುವ ಕೋಗಿಲೆಯದನಿಯಿಂದ ತುಂಬಿದ. ಮನ್ಮಥನಿಗೆ ಪ್ರಿಯವಾದ ವೃಂದಾವನವನ್ನು ಕಂಡೆ, ಬಳಿಯಲ್ಲಿಯೆ ಹರಿವ, ನೈದಿಲೆಗಳಿಂದ ತುಂಬಿ ಶೋಭಿಸುವ ಯಮುನೆಯನ್ನೂ ಕಂಡೆ. ಗೋ-ಗೋಪಾಲಕರ ಸುಖಕ್ಕಾಗಿ ಇಂದ್ರನ ದರ್ಪವನ್ನಡಗಿಸಲೆಂದೆ ಕೃಷ್ಣರಾಮರು ಕೈಯಿಂದೆತ್ತಿದ್ದ ಗೋವರ್ಧನ ಪರ್ವತವನ್ನು ಕಂಡೆ. ಅಬಲೆಯರ ನಡುವೆ ನಲಿಯುತ್ತ ಕೊಳಲೂದುತ್ತ ನಿಂತ ಗೋಪಾಲಕೃಷ್ಣನನ್ನು ಕಂಡು ಅಮಿತ ಆನಂದವನ್ನು ಪಡೆದೆ. ಸ್ವಯಂ ಕೃಷ್ಣನೆ ನನಗೆ ಹೀಗೆ ನುಡಿದ - 'ಈಗ ನೀನು ನೋಡಿದ ರೂಪವೆ ಸನಾತನ ದಿವ್ಯರೂಪ ನಿಷ್ಕಲ, ನಿಷ್ಕ್ರಿಯ, ಶಾಂತ, ಸಚ್ಚಿದಾನಂದಮಯ, ಪೂರ್ಣ, ಕಮಲದಂಥ ಕಣ್ಣುಳ್ಳುದು. ಇದಕ್ಕಿಂತ ಉತ್ತಮವಾದುದು ಇನ್ನೊಂದಿಲ್ಲ. ಇದನ್ನೆ ವೇದಗಳು ಜಗತ್ತಿನ ಮೂಲ ಕಾರಣವೆನ್ನುತ್ತಿವೆ. ಈ ಮಧುರ, ವೃಂದಾವನ, ಯಮುನೆ, ಗೋಪ ಕನ್ಯೆಯರು, ಗೋಪಾಲಕರು ಇವೆಲ್ಲವೂ ನಿತ್ಯ. ನನ್ನ ಈ ಅವತಾರವೂ ನಿತ್ಯ. ಈ ರಾಧೆ ನನ್ನ ಪ್ರೇಯಸಿ. ನಾನು ಸರ್ವಜ್ಞ, ಸರ್ವಕಾಮ, ಸರ್ವೇಶ್ವರ, ಸರ್ವಾನಂದ, ಸರ್ವೋತ್ತಮ, ವಿಶ್ವಕ್ಕೆಲ್ಲ ನಾನೆ ಆಧಾರ.'

'ಈ ಗೋಪಕನ್ಯೆಯರು, ಈ ಗೋಪಾಲಕರು, ಈ ಕದಂಬ ವೃಕ್ಷ ಇವೆಲ್ಲವೂ ಏನು ? ಈ ವೃಂದಾವನ ಕೋಗಿಲೆ ಮುಂತಾದ ಹಕ್ಕಿಗಳು, ಯಮುನೆ, ಗೋವರ್ಧನ ಪರ್ವತ ಲೋಕಕ್ಕೆ ಆನಂದ ಉಂಟುಮಾಡುವ ಈ ಕೊಳಲು ಇವೆಲ್ಲ ಏನು ? ಎಂದು ನಾನು ಕೇಳಿದೆ. ಭಗವಂತನೆಂದ.'

ಶ್ರುತಿಗಳೆ ಗೋಪಿಯರು ಮತ್ತು ಗೋಪಕನ್ಯೆಯರು, ಮುಮುಕ್ಷುಗಳಾದ ಮುನಿಗಳೆ ಗೋಪಾಲಕರು. ಕಲ್ಪವೃಕ್ಷವೆ ಈ ಕದಂಬ. ನಂದನ ವನವೆ ಈ ವೃಂದಾವನ. ಸಿದ್ಧ, ಸಾಧ್ಯ

ಗಂಧರ್ವರೆ ಈ ಕೋಗಿಲೆ ಮುಂತಾದವುಗಳು. ಅನಾದಿಕಾಲದಿಂದ ನನ್ನ ದಾಸನಾಗಿರುವ ಬೆಟ್ಟ ಈ ಗೋವರ್ಧನ ಪರ್ವತ. ದೇವವ್ರತನೆಂಬ ಒಬ್ಬ ತಪಸ್ವಿಯಾದ, ಯಜ್ಞಕಾರ್ಯಗಳಲ್ಲಿ ನಿಪುಣನಾದ ಮುನಿ ಹಿಂದೆ ಇದ್ದ. ಅವನ ಮನೆಗೆ ನನ್ನ ಭಕ್ತನಾದ ಒಬ್ಬ ಬ್ರಾಹ್ಮಣನು ಬಂದಾಗ ಅವನಿಗೆ ತುಳಸೀದಳ, ನೀರು, ಹಣ್ಣು ಗಡ್ಡೆಗೆಣಸುಗಳನ್ನು ಕೊಟ್ಟು ಸತ್ಕರಿಸಿದನು. ಆ ಪುಣ್ಯದಿಂದ ಅವನು ನನ್ನ ಪ್ರೀತಿಯ ಕೊಳಲಾಗಿ ಜನ್ಮವೆತ್ತಿದ್ದಾನೆ. ಈ ಸುಂದರವಾದ ಸನಾತನ ನಗರವಾದ ಮಧುರೆಯನ್ನು ಜನರು ಸರಿಯಾಗಿ ತಿಳಿದಿಲ್ಲ. ಕಾಶಿ ಮುಂತಾದ ನಗರಗಳಿಗಿಂತಲೂ ಇದು ಮಿಗಿಲು. ಇಲ್ಲಿ ಜನ್ಮ, ಉಪನಯನ, ಮರಣ, ಉತ್ತರ ಕ್ರಿಯೆಗಳನ್ನು ಹೊಂದಿದವರು ಮುಕ್ತರಾಗುತ್ತಾರೆ. ಒಳ್ಳೆಯ ತಪಸ್ಸು ಧ್ಯಾನಗಳನ್ನು ಮಾಡುತ್ತ ಅಂತರಂಗ ಶುದ್ಧಿಯನ್ನು ಸಂಪಾದಿಸಿದ ಜನರು ಮಾತ್ರ ನನ್ನ ಈ ನಗರವನ್ನು ಕಾಣಬಲ್ಲರು. ಉಳಿದವರು ನೂರು ಕಲ್ಪಗಳ ಕಾಲ ಪ್ರಯತ್ನಿಸಿದರೂ ಕಾಣಲಾರರು. ಇಲ್ಲಿ ವಾಸಿಸುವವರೆ ಧನ್ಯರು. ಅವರು ಚತುರ್ಭುಜರಾಗಿದ್ದು ದೇವತೆಗಳಿಗೂ ಮಾನ್ಯರಾಗಿ ಅಗಣಿತ ಮಹಿಮರಾಗಿರುವರು.

ನನ್ನ ಈ ಮಧುರೆಯನ್ನು ಸ್ಮರಿಸಿದ ಮಾತ್ರಕ್ಕೆ ನೀಚರೂ ಧನ್ಯರಾಗುತ್ತಾರೆ. ನನಗೆ ಅತ್ಯಂತ ಪ್ರೀತಿ ಪಾತ್ರನಾದ ಭೂತೇಶ್ವರನು ನನ್ನ ಪ್ರೀತಿಗಾಗಿ ಈ ಪಟ್ಟಣದಲ್ಲಿಯೆ ಸದಾ ಇರುವನು. ಅವನನ್ನು ನಮಿಸದೆ, ಪೂಜಿಸದೆ, ಸ್ಮರಿಸದೆ ನನ್ನ ಮಧುರಾ ನಗರದ ದರ್ಶನ ದೊರೆಯಲಾರದು. ನನ್ನ ಪರಮಭಕ್ತನಾದ ಶಿವನನ್ನು ಪೂಜಿಸದ ಪಾಪಿಯು ನನ್ನಲ್ಲಿ ಭಕ್ತಿಯನ್ನು ಯಾವ ಬಗೆಯಿಂದಲೂ ಪಡೆಯಲಾರ.

**ನ ಕಥಂ ಮಯಿ ಭಕ್ತಿಂ ಸ ಲಭತೇ ಪಾಪ ಪೂರುಷಃ ।**
**ಯೋ ಮದಿಯಂ ಪರಂ ಭಕ್ತಂ ಶಿವಂ ಸಂಪೂಜಯೇನ್ನಹಿ ॥**

ಭೂತೇಶ್ವರನನ್ನು ನಮಿಸದ, ಸ್ಮರಿಸದ, ಸ್ತೋತ್ರ ಮಾಡದವರು ನೀಚರು; ನನ್ನ ಮಾಯೆಯಿಂದ ಮೋಹಿತರಾದವರು. ಬಾಲಕನಾದ ಧ್ರುವನೂ ಇಲ್ಲಿಯೇ ನನ್ನನ್ನು ಆರಾಧಿಸಿ ಉತ್ತಮ ಪದವಿಯನ್ನು ಪಡೆದನು. ವೇದವ್ಯಾಸನೆ, ಇದುವೆ ಉಪನಿಷತ್ತಿನ ರಹಸ್ಯ.

ಈ ಅಧ್ಯಾಯವನ್ನು ಓದುವ ಕೇಳುವ ಜನರಿಗೆ ಶಾಶ್ವತವಾದ ಮುಕ್ತಿ ದೊರೆಯುವುದು.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಪಾತಾಳ ಖಂಡದಲ್ಲಿ ಶ್ರೀ ಕೃಷ್ಣ ಚರಿತ್ರೆಯಲ್ಲಿ ಮಧುರಾಮಾಹಾತ್ಮ್ಯಕಥನವೆಂಬ ಇಪ್ಪತ್ತೈದನೆ ಅಧ್ಯಾಯ ಮುಗಿದುದು*

—o—

**ಈಶ್ವರ ಉವಾಚ**

**ಈಶ್ವರ :-** ಒಮ್ಮೆ ಉದ್ದವನು ಏಕಾಂತದಲ್ಲಿ ಸನತ್ಕುಮಾರನ ಬಳಿ ಕೇಳಿದನು.

**ಉದ್ಧವ :-** ಗೋವಿಂದನು ಗೋಪಕನ್ಯೆಯರೊಡನೆ ನಿತ್ಯವೂ ವಿಹರಿಸುವ ಸ್ಥಳ ಯಾವುದು ? ಅವನ ವಿಹಾರದ ವೃತ್ತಾಂತವನ್ನೂ ಅದ್ಭುತ ಲೀಲೆಯನ್ನೂ ನೀನು ತಿಳಿದಿದ್ದರೆ ಪ್ರೀತಿಯಿಂದ ಅವೆಲ್ಲವನ್ನೂ ನನಗೆ ಹೇಳು.

**ಸನತ್ಕುಮಾರ :-** ಒಮ್ಮೆ ಯಮುನೆಯ ದಡದಲ್ಲಿ ಒಂದು ಮರದ ಕೆಳಗೆ ಭಗವಂತನ ಪಾರ್ಷದನಾದ ಸುವ್ರತನು ಕುಳಿತಿದ್ದ. ಆಗ ಅವನು ಅರ್ಜುನನಿಗೆ ಒದಗಿದ್ದ ಅನುಭವವನ್ನು ನನಗೆ ಹೇಳಿದ. ಅದೊಂದು ರಹಸ್ಯ. ಎಂದೂ ಅಯೋಗ್ಯರಿಗೆ ಅದನ್ನು ಹೇಳಕೂಡದು. ನಿನಗೆ ಅದನ್ನು ಹೇಳುತ್ತೇನೆ ಕೇಳು.

**ಅರ್ಜುನ :-** ಶಂಕರ ಬ್ರಹ್ಮ ಮೊದಲಾದವರೂ ಕಂಡಿರದ ಕೇಳಿರದ ರಹಸ್ಯವೊಂದನ್ನು ನೀನು ನನಗೆ ಹೇಳು. ನಿನ್ನ ಪ್ರೇಯಸಿಯರಾದ ಗೋಪಿಯರು ಎಷ್ಟು ಮಂದಿ ? ಎಷ್ಟು ವಿಧವಾಗಿರುವರು ? ಅವರ ಹೆಸರೇನು ? ಎಲ್ಲಿರುತ್ತಾರೆ ? ಅವರ ವಯಸ್ಸು, ವೇಷಭೂಷಣಗಳು ಏನು ? ಅವರೊಡನೆ ನೀನು ಎಲ್ಲೆಲ್ಲಿ ವಿಹರಿಸುವೆ ? ದಯೆಯಿಂದ ಎಲ್ಲವನ್ನೂ ನನಗೆ ಹೇಳು. ಇನ್ನೂ ಬೇರೆ ರಹಸ್ಯಗಳಿದ್ದರೆ ಅವನ್ನೂ ತಿಳಿಸು.

**ಕೃಷ್ಣ :-** ಆ ಸ್ಥಾನ, ಆ ಪ್ರೇಯಸಿಯರು, ಆ ವಿಹಾರಗಳು ಇವೆಲ್ಲವೂ ನನ್ನ ಪ್ರಾಣಪ್ರಿಯರಾದ ಬ್ರಹ್ಮಾದಿ ದೇವತೆಗಳಿಗೂ ನೋಡಲು ಸಿಗಲಾರದು. ಉಳಿದವರ ಪಾಡೇನು ? ಆದ್ದರಿಂದ ನೀನೂ ಸುಮ್ಮನಿರು.

ಈ ಮಾತನ್ನು ಕೇಳಿದ ಅರ್ಜುನನು ದೈನ್ಯದಿಂದ ಕೃಷ್ಣನ ಪಾದಾರವಿಂದಗಳಿಗೆ ದಂಡಪ್ರಣಾಮ ಮಾಡಿದ. ಕೃಷ್ಣನು ನಕ್ಕು ತೋಳಿನಿಂದ ಅವನನ್ನು ಎತ್ತಿ ಪ್ರೀತಿಯಿಂದ ಹೇಳಿದ 'ಅರ್ಜುನ ಅದನ್ನು ಹೇಳಿ ಪ್ರಯೋಜನವಿಲ್ಲ. ಕಣ್ಣಿನಿಂದ ನೋಡ ಬಯಸುವಿಯಾದರೆ ಸೃಷ್ಟಿ ಸ್ಥಿತಿ ಲಯಕಾರಿಣಿಯಾದ ತ್ರಿಪುರ ಸುಂದರಿಯನ್ನು ಭಕ್ತಿಯಿಂದ ಆರಾಧಿಸಿ ಬೇಡಿಕೊಳ್ಳು. '

ಅರ್ಜುನನು ಈ ಮಾತನ್ನು ಕೇಳಿ ದೇವಿ ತ್ರಿಪುರಸುಂದರಿಯ ದರ್ಶನಕ್ಕಾಗಿ ಅವಳ ಬಳಿಗೆ ಹೋದನು. ಅಲ್ಲಿ ಚಿಂತಾಮಣಿಯಿಂದ ನಿರ್ಮಿತವಾದ ವೇದಿಕೆಗೆ ರತ್ನಖಚಿತವಾದ ಮೆಟ್ಟಿಲುಗಳು. ವೇದಿಕೆಯ ಮೇಲೆ ಕಲ್ಪವೃಕ್ಷ. ಅದರಲ್ಲಿ ಎಲ್ಲ ಋತುಗಳಲ್ಲಿಯೂ ಸಿಗುವ ಹೂ ಹಣ್ಣುಗಳು, ಸುರಿಯುವ ಮಧು, ಗಾಳಿಗೆ ಅಲ್ಲಾಡುವ ಎಳೆ ಚಿಗುರುಗಳು, ಗಿಳಿ, ಕೋಗಿಲೆ, ಸಾರಿಕೆ, ಪಾರಿವಾಳ, ಚಕೋರ ಮುಂತಾದ ಹಕ್ಕಿಗಳು ಮತ್ತು ದುಂಬಿಗಳ ನಾದ ಇವೆಲ್ಲವೂ ಮನೋಹರವಾಗಿದ್ದವು. ಆ ಮರದ ಬುಡದಲ್ಲಿ ರತ್ನಸಿಂಹಾಸನ. ಅದರಲ್ಲಿ ಉದಿಸುವ ಸೂರ್ಯನಂತೆ ಕಂಗೊಳಿಸುವ ನವ

ಯೌವ್ವನಭರಿತೆಯಾದ, ಸರ್ವಾಭರಣ ಭೂಷಿತಳಾದ, ಬ್ರಹ್ಮ, ವಿಷ್ಣು, ಮಹೇಶಾದಿಗಳ ಕಿರೀಟ ರತ್ನಕಾಂತಿಯಿಂದ ಬೆಳಗಿದ ಪಾದಕಮಲಗಳುಳ್ಳ, ಅಣಿಮಾದಿ ಸಿದ್ಧಿಗಳಿಂದ ಸುತ್ತುವರಿದ ಭಕ್ತವತ್ಸಲೆಯಾದ ದೇವಿಯನ್ನು ಅರ್ಜುನನು ಕಂಡ. 'ನಾನು ಅರ್ಜುನ' ಎಂದು ಹೇಳುತ್ತ ನಮಸ್ಕರಿಸಿದ. ಕೈ ಮುಗಿದು ನಿಂತ.

ದೇವಿಯು ಅರ್ಜುನನ ಮೇಲೆ ಭಗವಂತನಿಗಿರುವ ಪ್ರೀತಿಯನ್ನು ನೆನೆದು ಪರವಶಳಾಗಿ ಹೇಳಿದಳು.

**ಭಗವತಿ :-** ಮಗು, ನೀನು ಯಾವ ದಾನ ಯಜ್ಞ ತಪಸ್ಸುಗಳನ್ನು ಮಾಡಿದೆಯೊ ! ಭಗವಂತನಲ್ಲಿ ಎಷ್ಟು ನಿರ್ಮಲವಾದ ಭಕ್ತಿಯನ್ನು ಸಂಪಾದಿಸಿದೆಯೊ ! ಯಾರಿಗೂ ದೊರೆಯದ ಭಗವಂತನ ಅನುಗ್ರಹ ನಿನಗೆ ದೊರೆತಿದೆ. ಇಂಥ ಅನುಗ್ರಹವನ್ನು ಭಗವಂತನು ಯಾವ ಭಕ್ತರಲ್ಲಿಯೂ ಮಾಡಿಲ್ಲ. ಆದ್ದರಿಂದ ನೀ ನೀ ಕುಲಕುಂಡವೆಂಬ ದೇವಿಯ ಜೊತೆಗೆ ಹೋಗು.

ಭಗವತಿಯನ್ನು ಆದೇಶದಂತೆ ಅರ್ಜುನನು ಸ್ನಾನ ಮಾಡಿ ಹಿಂತಿರುಗಿ ಬಂದು ಅವಳಿಂದ ಬಾಲಾ ವಿದ್ಯೆಯ ಉಪದೇಶವನ್ನು ಪಡೆದ. ಜಪ ಪೂಜೆ ಅನುಷ್ಠಾನಗಳನ್ನೂ ತಿಳಿದುಕೊಂಡು ಅವಳ ಉಪಾಸನೆ ಮಾಡಲು ಅವಳಿಂದಲೆ ಆಜ್ಞೆ ಪಡೆದುಕೊಂಡ. 'ಮಗು, ನಾನು ಹೇಳಿದಂತೆ ನನ್ನನ್ನಾರಾಧಿಸು. ನನಗೆ ತೃಪ್ತಿಯಾದರೆ ನನ್ನ ಅನುಗ್ರಹದಿಂದ ಕೃಷ್ಣಲೀಲೆಯಲ್ಲಿ ನೀನೂ ಭಾಗವಹಿಸಬಲ್ಲೆ. ಇದು ಭಗವಂತನೆ ಮಾಡಿರುವ ಒಂದು ನಿಯಮ'.

ಅರ್ಜುನನು ಬಾಲಾ ವಿದ್ಯೆಯ ಉಪಾಸನೆ ಮಾಡಿ ದೇವಿಯ ಅನುಗ್ರಹವನ್ನು ಬೇಗನೆ ಸಂಪಾದಿಸಿದ. ದೇವಿ ನಗು ಮೊಗದಿಂದ ಹೇಳಿದಳು, 'ಮಗು, ಆ ಮಂದಿರದೊಳಗೆ ಹೋಗು'. ಸಂಭ್ರಮದಿಂದ ಅವಳಿಗೆ ದಂಡಪ್ರಣಾಮವನ್ನು ಸಲ್ಲಿಸಿ ಅವಳ ಸಖಿಯೊಡನೆ ಸಿದ್ಧ ಪುರುಷರಿಗೂ ಕಾಣಲಾಗದ ರಾಧಾರಮಣನ ಸ್ಥಾನವನ್ನು ಸೇರಿ ಕುಳಿತ. ದಿವ್ಯ ದೃಷ್ಟಿಯಿಂದ ಗೋಲೋಕದ ಮೇಲೆ ಗಾಳಿಯಲ್ಲಿಯೆ ನಿಂತಿರುವ ಶಾಶ್ವತ ಲೋಕವಾದ ವೃಂದಾವನವನ್ನು ಕಂಡ. ಕೃಷ್ಣನು ನಿತ್ಯ ರಾಸಕ್ರೀಡೆಯಾಡುವ ಪೂರ್ಣ ಪ್ರೇಮಮಯವಾದ ರಹಸ್ಯವಾದ ಸ್ಥಳ ಅದು. ಅದನ್ನು ಕಂಡು ಪ್ರೇಮವಿಹ್ವಲನಾಗಿ ಮೈ ಮರೆತು ಬಿದ್ದನು, ಅರ್ಜುನ. ದೇವಿಯ ಗೆಳತಿ ಅವನನ್ನು ಮೆಲ್ಲನೆ ಕೈಗಳಿಂದೆತ್ತಿ ಸಂತೈಸಿದಳು. ಮೂರ್ಛೆ ತಿಳಿದೆದ್ದರೂ ತಿರುಗಿ ವೃಂದಾವನವನ್ನು ಕಾಣುವ ಉತ್ಕಂಠೆಯನ್ನು ತಾಳಲಾರದೆ 'ದೇವಿ, ನಾನಿನ್ನೇನು ಮಾಡಬೇಕು. ಬೇಗನೆ ಹೇಳು' ಎಂದ.

ಆಕೆ ಅರ್ಜುನನ ಕೈಹಿಡಿದು ಅಲ್ಲಿಂದ ಬಲಕ್ಕೆ ಹೋಗಿ ಬಂದು ಕೊಳವನ್ನು ತೋರಿಸುತ್ತ 'ಸಾವಿರದಳದ ತಾವರೆಗಳು ಬೆಳೆಯುವ ಪ್ರಶಸ್ತವಾದ ಈ ಸರೋವರದಲ್ಲಿ ಸ್ನಾನ ಮಾಡು. ಆಗ ಒಂದು ಆಶ್ಚರ್ಯವನ್ನು ನೀನು ಕಾಣುವೆ. ಇಲ್ಲಿಯೇ ದಕ್ಷಿಣಕ್ಕೆ ಇನ್ನೊಂದು ಸರೋವರವಿದೆ. ಮಲಯನಿರ್ಝರವೆಂದು ಹೆಸರು. ಜೇನಿನಂತೆ ಸವಿಯಾದ ನೀರು. ಈ ಉದ್ಯಾನವೂ ಅರಳಿದ ಹೂಗಳಿಂದ ತುಂಬಿದ್ದು ಅದು ವಸಂತಮಾಸದಲ್ಲಿ ಕೃಷ್ಣನು ಮದನೋತ್ಸವವನ್ನು ನಡೆಸುವ ಸ್ಥಳವಾಗಿದೆ. ಹಗಲು ರಾತ್ರಿಯೆನ್ನದೆ ಸದಾಕಾಲ ಮುನಿಗಳು ಇಲ್ಲಿ ಕೃಷ್ಣಲೀಲೆಯನ್ನು ಸ್ತುತಿಸುತ್ತಾರೆ. ಕೃಷ್ಣನನ್ನು ಸ್ಮರಿಸಿದರೆ ಸಾಕು;

ಅವರೆದೆಯಲ್ಲಿ ಮದನನು ಆವಿರ್ಭವಿಸುವನು. ನೀ ನೀ ಕೊಳದಲ್ಲಿ ಸ್ನಾನ ಮಾಡು. ಬಳಿಕ ಪೂರ್ವ ದಿಕ್ಕಿನಲ್ಲಿರುವ ಆ ಸರೋವರದ ಬಳಿಗೆ ಹೋಗಿ ನೀರು ಕುಡಿ. ನಿನ್ನ ಮನೋರಥವು ಆಗ ಈಡೇರುವುದು; ಎಂದಳು.

ಒಡನೆ ಅರ್ಜುನನು ಕೊಳದಲ್ಲಿಳಿದನು. ರತ್ನಖಚಿತವಾದ ನಾಲ್ಕು ದಡಗಳ ನಡುವೆ ಕಲ್ಹಾರ ಕುಮುದ ಅಂಭೋಜ ರಕ್ತೋತ್ಪಲ ನೀಲೋತ್ಪಲ ಮೊದಲಾದ ಹೂಗಳಿಂದುದುರಿದ ಪರಾಗದಿಂದ ರಂಜಿತವಾಗಿ, ಮಕರಂದ ಬಿಂದುಗಳಿಂದ ತುಂಬಿ. ಮಂದಾನಿಲದಿಂದೆದ್ದ ಸಣ್ಣ ಅಲೆಗಳ ಮೇಲೆ ತೇಲುವ ಕಲಹಂಸಗಳ ನಿನಾದದಿಂದ ಮನೋಹರವಾದ ಆ ನೀರಿನಲ್ಲಿ ಅರ್ಜುನನು ಮುಳುಗಿದಾಗ ಸಖಿ ಮಾಯವಾದಳು. ಅವನೆದ್ದಾಗ ತಾನು ಅತಿ ಚೆಲುವೆಯಾದಾ ಓರ್ವ ಹೆಣ್ಣಾಗಿ ಮಾರ್ಪಟ್ಟಿರುವುದನ್ನು ಕಂಡ. ಬಳಿಯಲ್ಲಿ ಯಾರೂ ಇರಲಿಲ್ಲ. ಪುಟಕ್ಕಿಟ್ಟ ಚಿನ್ನದಂತೆ ಹೊಳೆವ ಬಳ್ಳಿಯಂಥ ಮೈ ಕಿಶೋರಿಯಾಗಿ ತಾನೊಬ್ಬನೆ ಇದ್ದನು. ಅರ್ಜುನ. ಶರತ್ಕಾಲದ ಚಂದ್ರನಂಥ ಮುಖ, ಅದರ ಚೆಲುವನ್ನು ಹೆಚ್ಚಿಸುವ ರತ್ನ ಕುಂಡಲಗಳು. ಸಿಂದೂರದಿಂದೊಪ್ಪುವ ಬೈತಲೆ. ಮನ್ಮಥನ ಬಿಲ್ಲನ್ನೂ ಮೀರಿಸುವ ಬಳ್ಳಿಯಂಥ ಹುಬ್ಬುಗಳು. ಕಪ್ಪಾಗಿ ಹೊಳೆದು ಕುಣಿಯುವ ಚಂಚಲ ನಯನಗಳ ಮೇಲೆ ಕಾಡಿಗೆ. ರತ್ನಕುಂಡಲಗಳ ಪ್ರಭೆಯಿಂದ ಹೊಳೆಯುವ ಕೆನ್ನೆಗಳು. ಕಮಲದಂಟಿನಂತೆ ಕೋಮಲವಾಗಿದ್ದು ಅಚ್ಚರಿಯುಂಟು ಮಾಡುವ ತೋಳುಬಳ್ಳಿಗಳು, 'ಶರತ್ಕಾಲದ ಕಮಲಗಳ ಎಲ್ಲ ಚೆಲ್ಲುವನ್ನೂ ಸೂರೆಗೊಳ್ಳುವ ಎಳೆದಳಿರಿನಂಥ ಕೈಗಳು, ನಿಪುಣನಾದ ಸೊನ್ನೆಗಾರನು ತಯಾರಿಸಿದಂತಿರುವ ಚಿನ್ನದ ಉಡಿದಾರ. ಮಧುರ ಧ್ವನಿ ಉಂಟುಮಾಡುವ ಒಡ್ಡಿಯಾಣದಿಂದೊಪ್ಪುವ ಜಘನ, ಹೊಳೆವ ರೇಶಿಮೆಯನ್ನುಟ್ಟ ನಿತಂಬ ಮತ್ತು ತೊಡೆಗಳು, ಇಂಪಾದ ದನಿಯುಳ್ಳ ಕಾಲುಗೆಜ್ಜೆಗಳು, ನಾನಾ ಬಗೆಯ ಮನ್ಮಥ ಕಲಾ ಕೌಶಲ್ಯ. ಎಲ್ಲ ಲಕ್ಷಣಗಳಿಂದ ಎಲ್ಲ ಆಭರಣಗಳಿಂದ ಕೂಡಿ ಬೆರಗುಂಟು ಮಾಡುವ ಲಲನಾಮಣಿ. ಅವಳಿಗೆ ಹಿಂದಿನ ಅರ್ಜುನ ಶರೀರದ ವೃತ್ತಾಂತವೆ ಮರೆತು ಹೋಯಿತು. ಕೃಷ್ಣನ ಮಾಯೆ ಹಾಗೆ ಮಾಡಿತ್ತು. ಮನಸ್ಸಿನಲ್ಲಿ ಅಚ್ಚರಿ ಏನು ಮಾಡಬೇಕೆಂದು ಅರಿಯದ ಸ್ಥಿತಿ. ಅಷ್ಟರಲ್ಲಿ ಅಶರೀರವಾಣಿ ಕೇಳಿಸಿತು.

'ಸುಂದರಿ, ಈ ದಾರಿಯಿಂದಲೆ ಹೋಗು. ಪೂರ್ವ ದಿಕ್ಕಿನಲ್ಲಿ ಒಂದು ಕೊಳವಿದೆ. ಅದರ ನೀರನ್ನು ಕುಡಿದರೆ ನಿನ್ನ ಮನೋರಥ ಈಡೇರುತ್ತದೆ. ಅಲ್ಲಿ ನಿನಗೆ ಗೆಳತಿಯರು ಸಿಗುತ್ತಾರೆ, ದುಃಖಿಸಬೇಡ. ನೀನು ಬಯಸಿದ ಎಲ್ಲವನ್ನೂ ಅವರು ತಂದುಕೊಡುತ್ತಾರೆ.'

ಒಡನೆ ಆ ಲಲನೆ ಪೂರ್ವ ದಿಕ್ಕಿಗೆ ನಡೆದು ನಾನಾ ಬಗೆಯ ಪಕ್ಷಿಗಳಿಂದ ಕೂಡಿದ ತಾವರೆಕೊಳದ ಬಳಿಗೆ ಬಂದಳು. ಪದ್ಮರಾಗ ಮಣಿಯ ಸೋಪಾನಗಳಲ್ಲಿ ಇಳಿದು ನೀರನ್ನು ಸವಿದು ಕ್ಷಣ ಕಾಲ ನಿಂತಳು. ಒಡನೆ ಒಡ್ಡಿಯಾಣ, ಕಾಲು ಗೆಜ್ಜೆ. ಕೈ ಬಳೆಗಳ ದನಿ ಕೇಳಿಸಿತು. ಬಳಿಕ ನವ ಯುವತಿಯರ ಒಂದು ಗುಂಪು ಕಾಣಿಸಿತು. ಅಪೂರ್ವವಾದ ಸೌಂದರ್ಯ, ಯೌವನ, ಒಯ್ಯಾರಗಳು, ನಾನಾ ಅಲಂಕಾರ, ನಡೆ ನುಡಿ ನೋಟ, ನಗು ಎಲ್ಲವೂ ಅದ್ಭುತ, ಮನೋಹರ. ಅವರನ್ನು ನೋಡಿ ಆ ಲಲನೆ ತಲೆ ತಗ್ಗಿಸಿ

ಅಂಗುಷ್ಠದಿಂದ ನೆಲವನ್ನು ಕೆರೆಯುತ್ತ ನಿಂತಳು. ಅವರೂ ಅವಳನ್ನು ನೋಡಿದೊಡನೆ ಒಬ್ಬರನ್ನೊಬ್ಬರು ಆಶ್ಚರ್ಯದಿಂದ ಸಂಭ್ರಮದಿಂದ ನೋಡತೊಡಗಿದರು. 'ಯಾರಿವಳು ? ನಮ್ಮಂತೆಯೆ ಇರುವಳು!' ಎಂದುಕೊಂಡರು. 'ಇವಳಾರೆಂದು ತಿಳಿಯಲೇಬೇಕು' ಎಂದು ಪರಸ್ಪರ ಮಾತನಾಡಿಕೊಂಡು ಅವಳ ಬಳಿಗೆ ಬಂದರು. ಅವರಲ್ಲಿ ಒಬ್ಬಳು ಪ್ರಿಯಂವದೆ. ಅವಳು ಮೊದಲಿಗೆ ಕೇಳಿದಳು.

**ಪ್ರಿಯಂವದೆ** :- ಯಾರು ನೀನು ? ಯಾರ ಮಗಳು ? ಯಾರ ಪ್ರೆಯಸಿ ? ಹುಟ್ಟೂರು ಯಾವುದು ? ನಿನ್ನನ್ನಾರು ಇಲ್ಲಿಗೆ ಕರೆತಂದರು ? ನೀನೆ ಬಂದೆಯೇನು ? ಎಲ್ಲವನ್ನೂ ಹೇಳು. ಸುಮ್ಮನೆ ಚಿಂತಿಸುತ್ತ ನಿಲ್ಲಬೇಡ. ಪರಮಾನಂದ ಭರಿತವಾದ ಈ ಸ್ಥಾನದಲ್ಲಿ ಯಾರಿಗಾದರೂ ದುಃಖವೆನ್ನುವದು ಇರಬಹುದೆ ?

**ಅರ್ಜುನ** :- ನಾನು ಯಾರು ? ಯಾರ ಮಗಳು ? ಯಾರ ಪ್ರೇಯಸಿ ? ಯಾರು ನನ್ನನ್ನು ಕರೆತಂದರು ? ನಾನೆ ಬಂದೆನೆ ? ಒಂದೂ ನನಗೆ ತಿಳಿಯದು. ಎಲ್ಲವೂ ದೇವಿಯೊಬ್ಬಳಿಗೇ ಗೊತ್ತು. ನನ್ನ ಮಾತಿನಲ್ಲಿ ವಿಶ್ವಾಸವಿಡುವಿರಾದರೆ ಕೇಳಿ ಹೇಳುತ್ತೇನೆ. ಇಲ್ಲಿಯೆ ದಕ್ಷಿಣದಲ್ಲಿ ಒಂದು ಕೊಳವಿದೆ. ಅದರಲ್ಲಿ ಸ್ನಾನ ಮಾಡಿ ಅಲ್ಲಿಯೆ ನಿಂತಿದ್ದೆ. ಏನು ಮಾಡಬೇಕು ? ಎಲ್ಲಿಗೆ ಹೋಗಬೇಕೆಂದು ತಿಳಿಯದೆ ಸುತ್ತಲೂ ನೋಡುತ್ತಿದೆ. ಆಗೊಂದು ಆಕಾಶವಾಣಿ ಕೇಳಿಸಿತು. 'ಈ ದಾರಿಯಿಂದಲೆ ಹೋಗಿ ಪೂರ್ವ ದಿಕ್ಕಿನ ಒಂದು ಕೊಳದ ನೀರನ್ನು ಕುಡಿ. ನಿನ್ನ ಮನೋರಥ ಈಡೇರುತ್ತದೆ. ಗೆಳತಿಯರೂ ಸಿಗುತ್ತಾರೆ. ಬಯಸಿದುದನ್ನು ತಂದು ಕೊಡುತ್ತಾರೆ.' ಎಂದಿತು ಆ ಧ್ವನಿ. ಅದನ್ನು ಕೇಳಿ ಈ ಕೊಳದ ಬಳಿಗೆ ಬಂದು ನೀರು ಕುಡಿದು ನಿಂತೆ. ನೀವು ಬಂದಿರಿ. ಇಷ್ಟು ಮಾತ್ರ ನನಗೆ ಗೊತ್ತು. ಈಗ ನೀವು ಹೇಳಿ, ನೀವು ಯಾರು ? ಯಾರ ಮಕ್ಕಳು ? ಯಾವೂರು ? ಯಾರ ಪ್ರೇಯಸಿಯರು?

**ಪ್ರಿಯಂವದೆ** :- ಹಾಗಿದ್ದರೆ ನಾವೆಲ್ಲರೂ ನಿನ್ನ ಪ್ರಾಣಸಖಿಯರೆಂದು ತಿಳಿ. ವ್ರಜಬಾಲೆಯರು ವೃಂದಾವನದಲ್ಲಿ ಕೃಷ್ಣನೊಂದಿಗೆ ವಿವರಿಸುವವರು. ಕೆಲವರು ಶ್ರುತಿಕನ್ನೆಯರು, ಕೆಲವರು ಮುನಿಗಳು, ಉಳಿದವರು ಎಲ್ಲರೂ ಗೋಪಕನ್ನಿಕೆಯರು. ರಾಧಾರಮಣನಾದ ಕೃಷ್ಣನಿಗೆ ನಾವೆಲ್ಲ ಸಮಾನರು. ಇವಳು ದೇವಿ ಪೂರ್ಣರಸೆ, ಇವಳು ರಸಮಂಥರೆ, ಇವಳು ರಸಾಲಯೆ, ಇವಳು ರಸವಲ್ಲರಿ. ಹೀಗೆ ಅನಂಗ ಸೇನೆ, ಅನಂಗ ಮಾಲಿನಿ, ಮದಯಂತಿ, ರಸವಿಹ್ವಲೆ, ಲಲಿತೆ, ಮದನ ಮಂಜರಿ ಮುಂತಾದ ಗೋಪಕನ್ನೆಯರಿಲ್ಲಿದ್ದಾರೆ. ಉದ್ಗೀತೆ, ಸುಗೀತೆ, ಕಲಗೀತೆ ಮುಂತಾದ ಶ್ರುತಿ ಕನ್ನಿಕೆಯರಿದ್ದಾರೆ. ಉಗ್ರತಪಾ ಬಹುಗಣಾ, ಪ್ರಿಯವ್ರತೆ, ಸುವ್ರತೆ ಮುಂತಾದ ಮುನಿಗಳಿದ್ದಾರೆ. ಎಲ್ಲರೊಡನೆ ನೀನೂ ವಿಹರಿಸುತ್ತಿರು. ಪೂರ್ವ ಸರೋವರದ ತೀರಕ್ಕೆ ಬಾ, ಅಲ್ಲಿ ವಿಧಿವತ್ತಾಗಿ ಸ್ನಾನ ಮಾಡಿಸಿ ಸಿದ್ಧಿದಾಯಕವಾದ ಒಂದು ಮಂತ್ರವನ್ನು ಉಪದೇಶಿಸುತ್ತೇನೆ.

ಹೀಗೆ ಹೇಳಿ ಅವಳನ್ನು ಕೈಹಿಡಿದು ಎಳೆದೊಯ್ದು ಕೊಳದಲ್ಲಿ ಸ್ನಾನ ಮಾಡಿಸಿ ದೀಕ್ಷಾ ಪೂರ್ವಕವಾಗಿ ಕೃಷ್ಣನ ಪ್ರೇಯಸಿಯಾದ ರಾಧೆಯ ಮಂತ್ರವನ್ನು ಉಪದೇಶಿಸಿದಳು. ಓಂಹ್ರೀಂ ಓಂ ಎಂಬ ಆ ಮಂತ್ರ ಮೂರು ಲೋಕದಲ್ಲಿ ದುರ್ಲಭ. ಸರ್ವಸಿದ್ಧಿದಾಯಕ.

ಅದರ ಪುರಶ್ಚರಣೆಯ ವಿಧಿ, ಧ್ಯಾನ, ಹೋಮ, ಜಪಸಂಖ್ಯೆಗಳನ್ನು ಹೇಳಿದಳು. ಅರ್ಜನಿಯು ಬಳಿಕ ನಾನಾಲಂಕಾರ ಭೂಷಿತೆಯಾದ ಪುಟಕ್ಕಿಟ್ಟ ಚಿನ್ನದಂತೆ ಹೊಳೆವ ಗೌರಾಂಗಿಯಾದ ರೂಪಲಾವಣ್ಯಗಳಿಂದ ಬೆರಗುಂಟು ಮಾಡುವ ಪ್ರಸನ್ನೆಯಾದ ವರಪ್ರದೆಯಾದ ದೇವಿ ರಾಧಿಕೆಯನ್ನು ಕಲ್ಹಾರ ಕರವೀರ ಚಂಪಾ ಕಮಲ ಮುಂತಾದ ಸುಗಂಧ ಬೀರುವ ಹೂಗಳಿಂದ, ಅರ್ಘಪಾದ್ಯ ಆಚಮನೀಯ ಧೂಪ ದೀಪ ನೈವೇದ್ಯಗಳಿಂದ ಪೂಜಿಸಿದಳು. ಸಖಿಯರ ಸಹಾಯದಿಂದ ವಿಧಿವತ್ತಾಗಿ ದೇವಿಯನ್ನರ್ಚಿಸಿ ಲಕ್ಷ ಜಪ ಹೋಮಗಳನ್ನೂ ಮಾಡಿ ಸ್ತೋತ್ರ ದಂಡ ಪ್ರಣಾಮಗಳನ್ನೂ ಕಲ್ಪಿಸಿದಳು. ಆಗ ದೇವಿ ಒಲಿದು ಮೈದೋರಿ ನುಡಿದಳು.

**ದೇವಿ :-** ನನ್ನ ಸಖಿಯರ ಮಾತು ನಿಜವಾಯಿತು. ನೀನೀಗ ನನ್ನ ಪ್ರಿಯಸಖಿ. ಏಳು ಬಾ, ನಿನ್ನಿಷ್ಟವನ್ನು ಪೂರೈಸುತ್ತೇನೆ.

ಅರ್ಜುನಿಯು ಆನಂದದಿಂದ ರೋಮಾಂಚಗೊಂಡು ಕಣ್ಣೀರು ಸುರಿಸುತ್ತ ದೇವಿಯ ಪಾದಗಳಿಗೆ ಎರಗಿದಳು. ದೇವಿಯು ಬಳಿಯಲ್ಲಿದ್ದ ಪ್ರಿಯಂವದೆಗೆ ಹೇಳಿದಳು.

**ದೇವಿ :-** ಈ ಸಖಿಯನ್ನು ಕೈ ಹಿಡಿದು ಸಂತೈಸಿ ನನ್ನ ಬಳಿಗೆ ಕರೆದು ತಾ. ಪ್ರಿಯಂವದೆ ಸಂಭ್ರಮದಿಂದ ಕರೆತಂದಳು. ದೇವಿ ಅವಳನ್ನು ಉತ್ತರದ ಕೊಳದಲ್ಲಿ ಸ್ನಾನ ಮಾಡಿಸಿ, ಮೋಹನ ಗೋಕುಲ ಚಂದ್ರ ಮಂತ್ರವನ್ನು ಉಪದೇಶಿಸಿದಳು. ಅದರ ವ್ರತಾನುಷ್ಠಾನವನ್ನೂ ಹೇಳಿದಳು. ಧ್ಯಾನ ಕಾಲದಲ್ಲಿ ನೀಲೋತ್ಪಲದಳ ಶ್ಯಾಮನೂ ನಾನಾ ಅಲಂಕಾರ ಭೂಷಿತನೂ,ಕೋಟಿ ಮನ್ಮಥ ಲಾವಣ್ಯಯುಕ್ತನೂ ರಾಸಕ್ರೀಡೆಯಲ್ಲಿ ತನ್ಮಯನೂ ಆದ ಗೋಕುಲ ಚಂದ್ರನನ್ನು ಚಿಂತಿಸಬೇಕು ಎಂದು ಉಪದೇಶಿಸಿದಳು. ಈ ಮಂತ್ರದ ಪುನಶ್ಚರಣೆಯು ಮುಗಿಯುವವರೆಗೂ ಈಕೆಯನ್ನು ನೋಡಿಕೊಳ್ಳೆಂದು ಪ್ರಿಯಂವದೆಗೆ ಆಜ್ಞಾಪಿಸಿ ತಾನು ಕೃಷ್ಣನ ಸನ್ನಿಧಿಗೆ ಹೊರಟು ಹೋದಳು. ಅರ್ಜುನಿಯು ಮಾಡುವ ಪೂಜೆ ಅರ್ಚನೆಗಳಲ್ಲಿ ಪ್ರಿಯಂವದೆ ಮತ್ತು ಇತರ ಗೆಳತಿಯರು ಸಹಾಯ ಮಾಡಿದರು. ಮಾರ್ಗದರ್ಶನ ಮಾಡಿದರು. ಅಷ್ಟದಳ ಪದ್ಮವನ್ನು ಗೋರೋಚನ ಕುಂಕುಮ ಚಂದನ ಮುಂತಾದ ದ್ರವ್ಯಗಳಿಂದ ಬರೆಸಿದರು. ಅದ್ಭುತವಾದ ಯಂತ್ರ ರಾಜವನ್ನೂ ಬರೆಸಿದರು. ಅರ್ಘ್ಯಪಾದ್ಯ ಮುಂತಾದವುಗಳಿಂದ ನಂದನ ಕಂದನನ್ನು ಸಪರಿವಾರವಾಗಿ ಆಯುಧ ವಾಹನಗಳಿಂದ ಒಡಗೂಡಿ ಭಕ್ತಿಯಿಂದ ಪೂಜಿಸಿದಳು ಅರ್ಜುನಿ. ಸ್ತೋತ್ರ ಮಾಡಿ ನಮಸ್ಕರಿಸಿದಳು. ತನ್ಮಯಳಾಗಿ ಧ್ಯಾನಿಸಿದಳು.

ಯಶೋದಾ ನಂದನನಾದ ಪ್ರಭು ಶ್ರೀಕೃಷ್ಣನು ಭಕ್ತಿಗೆ ಬಹು ಬೇಗನೆ ವಶನಾಗುವನು. ಆತನು ನಕ್ಕು ಕಡೆಗಣ್ಣಿಂದ ರಾಧೆಯನ್ನು ನೋಡುತ್ತು 'ಅವಳನ್ನು ಇಲ್ಲಿಗೆ ಕರೆಸು' ಎಂದು ಹೇಳಿದ. ಒಡನೆ ರಾಧೆ ಶಾರದೆಯ ಮೂಲಕ ಅರ್ಜುನಿಯನ್ನು ಕರೆಸಿದಳು. ಆಕೆ ಕೃಷ್ಣನ ಇದಿರಿಗೆ ಬಂದು ಪ್ರೇಮ ವಿಹ್ವಲತೆಯಿಂದ ನೆಲಕ್ಕೊರಗಿದಳು. ಮೆಲ್ಲನೆ ಕಣ್ಣು ತರೆದು ಸುವರ್ಣಮಯವಾದ ಆ ಅದ್ಭುತ ಲೋಕವನ್ನು ಬೆರಗಾಗಿ ನೋಡಿದಳು, ಬೆವರಿದಳು. ಕಣ್ಣೀರುಸುರಿಸಿದಳು. ರೋಮಾಂಚಗೊಂಡಳು, ನಡುಗುತ್ತ ನಿಂತಳು.

ಸುಂದರವಾದ ಒಂದು ಪ್ರದೇಶದಲ್ಲಿ ಮರಕತದಂಥ ಎಲೆಗಳು ಹವಳದಂಥ ಚಿಗುರುಗಳು ಚಿನ್ನದಂಥ ಕೋಮಲ ಕಾಂಡಗಳು ಇವುಗಳಿಂದ ಶೋಭಿಸುವ ಕಲ್ಪವೃಕ್ಷವು

ಬಯಸಿದುದನ್ನೆಲ್ಲ ಕೊಡುತ್ತ ನಿಂತಿದೆ. ಅದರ ಬುಡದಲ್ಲಿ ರತ್ನಮಂಟಪದೊಳಗೆ ರತ್ನ ಸಿಂಹಾಸನ ಅದರಲ್ಲಿ ಅಷ್ಟದಳಪದ್ಮ. ಅದರ ಎಡಬಲಗಳಲ್ಲಿ ಶಂಖಪದ್ಮ ನಿಧಿಗಳು ನಾಲ್ಕು ದಿಕ್ಕುಗಳಲ್ಲಿ ಕಾಮಧೇನುಗಳು, ಸುತ್ತಲೂ ನಂದನವನ, ಮಲಯ ಮಾರುತವು ಅಲ್ಲಿ ಎಲ್ಲ ಋತುಗಳಲ್ಲಿ ಹೂಗಳ ಸುಗಂಧವನ್ನು ಹೊತ್ತು ಬೀಸುತ್ತಿದೆ. ಮಕರಂದದ ಬಿಂದುಗಳಿಂದ ತಂಪಾಗಿ ಹಿತವೆನಿಸುತ್ತಿದೆ. ಮಕರಂದವನ್ನು ಸವಿದು ಆನಂದದಿಂದ ಹೆಣ್ಣುದುಂಬಿಗಳು ಝೇಂಕರಿಸುತ್ತಿವೆ. ಕೋಗಿಲೆ ಪಾರಿವಾಳ ಸಾರಿಕೆ ಗಿಳಿ ಮುಂತಾದ ಜಾತಿಯ ಹೆಣ್ಣು ಹಕ್ಕಿಗಳು ಮಧುರ ಧ್ವನಿಯಿಂದ ಕೂಗುತ್ತಿವೆ. ಆನಂದೋನ್ಮಾದದಿಂದ ನವಿಲುಗಳು ಕುಣಿಯುತ್ತಿವೆ. ಮನ್ಮಥನ ಪ್ರಭಾವ ವಿಜೃಂಭಿಸುತ್ತಿದೆ. ಅಲ್ಲಿ ರತ್ನ ಸಿಂಹಾಸನದಲ್ಲಿ ನೀಲವರ್ಣದ ಕೃಷ್ಣನಿದ್ದಾನೆ. ಕಪ್ಪಾದ ಕುರುಳು ಕೂದಲುಗಳು ನವಿಲುಗರಿಗಳಿಂದ ಶೋಭಿಸುತ್ತಿವೆ. ಮುಂಗುರುಳು ಚಲಿಸುತ್ತ ಕೆನ್ನೆಗಳಿಗೆ ಶೋಭೆ ತಂದಿವೆ. ತಲೆಯಲ್ಲಿ ಮುಡಿದ ಹೂಗಳಿಂದ ದುಂಬಿಗಳು ಮುತ್ತಿವೆ. ಹಣೆಯ ತಿಲಕವೂ ವಿಚಿತ್ರವಾಗಿದೆ. ಎಳ್ಳಿನ ಹೂವಿನಂತೆ ಗರುಡನ ಕೊಕ್ಕಿನಂತೆ ಸುಂದರವಾದ ಮೂಗು. ತೊಂಡೆ ಹಣ್ಣಿನಂಥ ತುಟಿಗಳ ಮೇಲೆ ಮುಗುಳನಗು, ವನಮಾಲೆಯಿಂದೊಪ್ಪುವ ಕೊರಳು, ಹೆಗಲುಗಳ ಮೇಲೆ ಸಾವಿರ ಹೆಣ್ಣು ದುಂಬಿಗಳು ಆನಂದದಿಂದ ಸೇವಿಸುವ ಕಲ್ಪವೃಕ್ಷದ ಹೂಮಾಲೆ ಮುತ್ತಿನ ಮಾಲೆಗಳು ಎದೆಯಲ್ಲಿ ಕೌಸ್ತುಭ ಮಣಿ, ಶ್ರೀವತ್ಸ ಚಿನ್ಹೆ, ಆಜಾನು ಲಂಬಿಕವಾದ ನಿಡಿ ದೋಳುಗಳು. ಆಳವಾದ ಹೊಕ್ಕುಳು. ಸಿಂಹದ ನಡುವಿನಂಥ ನಡು. ಪೀತಾಂಬರದಿಂದೊಪ್ಪುವ ನಿತಂಬ. ಅವನ ಲಾವಣ್ಯ ಸೌಂದರ್ಯಗಳಿಗೆ ಕೋಟಿ ಮನ್ಮಥರೂ ಸೋಲುವರು. ಕೊಳಲಿನ ದನಿಯಿಂದ ಮೂರು ಲೋಕಗಳೂ ಮೈ ಮರೆಯುವುವು, ಸುಖ ಸಮುದ್ರದಲ್ಲಿ ಮುಳುಗುವುವು. ಅವನ ಪ್ರತಿಯೊಂದು ಅಂಗವೂ ಮನ್ಮಥನ ಬೀಡು. ಪ್ರೇಮರಸದಿಂದ ಜಡವಾಗಿದೆ. ಚಾಮರ ಬೀಸಣಿಕೆ ಗಂದ ಚಂದನ ಮಾಲೆ ಮುಂತಾದುವನ್ನು ಹಿಡಿದು ನಾಥನ ಇಂಗಿತವನ್ನೆ ಇದಿರು ನೋಡುತ್ತ ಗೋಪಿಯರು ನಿಂತಿದ್ದಾರೆ. ಎಡದಲ್ಲಿ ರಾಧೆ ನಿಂತು ಸಂಭ್ರಮದಿಂದ ತಾಂಬೂಲ ನೀಡುತ್ತಾಳೆ, ನಗುತ್ತಿದ್ದಾಳೆ.

ಅರ್ಜುನಿ ನೋಡಿದಳು ಮನ್ಮಥನಾವೇಶಕ್ಕೆ ಬಲಿಯಾದಳು. ಕೃಷ್ಣನೂ ಅವಳ ಅವಸ್ಥೆಯನ್ನು ಕಂಡು ಕೈ ಹಿಡಿದು ಸೆಳೆದು ರಮಿಸಿದನು. ಅವಳಿಗೆ ತೃಪ್ತಿಯೆನಿಸುವಷ್ಟು ಎಲ್ಲ ಕ್ರೀಡೋಧ್ಯಾನಗಳಲ್ಲಿ ವಿಹರಿಸಿದನು. ಕೊನೆಗೆ ಅವಳ ಹೆಗಲಿನ ಮೇಲೆ ತೋಳನ್ನಿರಿಸಿ ಶಾರದೆಯನ್ನು ಕರೆದು ಅಜ್ಞಾಪಿಸಿದನು. 'ಇವಳನ್ನು ಪಶ್ಚಿಮದ ಸರೋವರದಲ್ಲಿ ಸ್ನಾನ ಮಾಡಿಸು'.

ಶಾರದೆ ಅರ್ಜುನಿಯನ್ನು ಕೊಳದಲ್ಲಿ ಇಳಿಸಿದಳು. ಅರ್ಜುನಿ ಅರ್ಜುನ ರೂಪು ತಳೆದು ಮೇಲೆದ್ದಳು. ಬಳಿಯಲ್ಲಿ ಕೃಷ್ಣನು ನಿಂತು ಕೈಯಿಂದ ಸ್ಪರ್ಶಿಸಿದ. ಅರ್ಜುನನ್ನು ಆವರಿಸಿದ್ದ ತನ್ನ ಮಾಯೆನ್ನು ಕಳೆದ.ಅರ್ಜುನನೀಗ ಮೊದಲಿನಂತಾದ. ಕೃಷ್ಣನೆಂದ 'ಅರ್ಜುನ, ನೀನು ನನ್ನ ಪ್ರಿಯಮಿತ್ರ. ನಿನ್ನಂತೆ ನನ್ನ ರಹಸ್ಯ ವೈಭವವನ್ನು ತಿಳಿದವರು ಮೂರುಲೋಕದಲ್ಲಿ ಯಾರೂ ಇಲ್ಲ. ನೀನು ಆ ರಹಸ್ಯವನ್ನು ನೋಡಿ ಅನುಭವಿಸಿರುವುದನ್ನು ಮಾತ್ರ ಯಾರಿಗೂ ಹೇಳಬೇಡ, ನನ್ನಾಣೆ.'

**ಸನತುಕುಮಾರ :-** ಅರ್ಜುನನು ಆ ಅನುಭವವನ್ನು ಸ್ಮರಿಸುತ್ತ ಆನಂದ ಆಶ್ಚರ್ಯಗಳಲ್ಲಿ ಮಗ್ನನಾಗಿ ತನ್ನ ಮನೆಗೆ ತೆರಳಿದ. ಉದ್ಧವ, ನೀನೂ ಈ ರಹಸ್ಯವನ್ನು ಯಾರಿಗೂ ಹೇಳಬೇಡ. ಹೇಳಿದರೆ ನನ್ನಾಣೆ.

**ಈಶ್ವರ :-** ಪ್ರಿಯೆ, ಸನತ್ಕುಮಾರನ ಈ ಉಪದೇಶವನ್ನು ಕೇಳಿ ಧನ್ಯನಾದ ಉದ್ಧವನು ನರನಾರಾಯಣಾಶ್ರಮದಲ್ಲಿ ಸಿದ್ಧಿ ಪಡೆದು ವೃಂದಾವನವನ್ನು ಸೇರಿದನು. ಇಂದಿಗೂ ಅವನು ಅಲ್ಲಿ ಕೃಷ್ಣಲೀಲೆಯನ್ನು ಕಾಣುತ್ತಿದ್ದಾನೆ. ನಾರದನು ಕೇಳಿದರೂ ಈ ರಹಸ್ಯವನ್ನು ನಾನು ಹೇಳಲಿಲ್ಲ. ಕೊನೆಗೆ ಅವನು ಕೃಷ್ಣನ ಪ್ರೇಯಸಿಯಾಗಿ ಅನುಭವದಿಂದಲೇ ತಿಳಿದುಕೊಂಡ. ಆದ್ದರಿಂದ ನೀನೂ ಹೇಳಬೇಡ.

ಭಗವದ್ಭಕ್ತನಾದ ಅರ್ಜುನನ ಮಹಿಮೆಯನ್ನು ವರ್ಣಿಸುವ ಈ ಅಧ್ಯಾಯವನ್ನು ಓದಿದರೂ ಕೇಳಿದರೂ ಹರಿಯಲ್ಲಿ ಆನಂದವನ್ನನುಭವಿಸುವನು.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಪಾತಾಳಖಂಡದಲ್ಲಿ*
*ಅರ್ಜುನನುನಯವೆಂಬ ಇಪ್ಪತ್ತಾರನೆ ಅಧ್ಯಾಯ ಮುಗಿದುದು*



## ನಾರದರ ಅನುಭವ

**ಅಧ್ಯಾಯ - ೨೭**

**ಪಾರ್ವತ್ಯುವಾಚ**

**ಪಾರ್ವತಿ :-** ನಾಥ, ವೃಂದಾವನದ ರಹಸ್ಯವನ್ನು ವಿಸ್ತಾರವಾಗಿಯೇ ಹೇಳಿರುವೆ. ಆ ಪುಣ್ಯಶಾಲಿಯಾದ ನಾರದ ಹೇಗೆ ಕೃಷ್ಣನ ಪ್ರೇಯಸಿಯಾಗಿ ಅದನ್ನು ಅನುಭವದಿಂದ ತಿಳಿದನೆಂಬುದನ್ನು ಹೇಳು.

**ಈಶ್ವರ :-** ಈ ವೃಂದಾವನ ರಹಸ್ಯವನ್ನು ನಾನೊಮ್ಮೆ ತಿಳಿಯ ಬಯಸಿದಾಗ ಕೃಷ್ಣನ ಮುಖದಿಂದಲೇ ಎಲ್ಲವನ್ನು ಮೊದಲೆ ತಿಳಿದಿದ್ದ ಬ್ರಹ್ಮನು ನನಗೆ ಹೇಳಿದ. ನಾರದನು ನನ್ನ ಬಳಿಯಲ್ಲಿ ಅದನ್ನು ಕೇಳಿದಾಗ ನಾನೆಂದೆ, 'ವೃಂದಾವನದ ಮಹಿಮೆಯನ್ನು ನಾನು ಹೇಳಲಾರೆ. ಹೇಳಿದರೆ ನನಗೆ ಆಣೆ ಇದೆ. ಏನು ಮಾಡಲಿ ? ನಾರದನಿಗೆ ನಿರಾಶೆಯಾಯಿತು, ದುಃಖ ಉಕ್ಕಿತು. ನಾನು ಬ್ರಹ್ಮನನ್ನು ಕರೆದು 'ನೀನು ನನಗೆ ಏನು ಹೇಳಿದೆಯೋ ಅದನ್ನು ನಾರದನೀಗೂ ಹೇಳು' ಎಂದೆ, ಅವನು ನಾರದನನ್ನು ಕರೆದುಕೊಂಡು ಗೋಲೋಕದಲ್ಲಿ ಕೃಷ್ಣನ ಬಳಿಗೆ ಹೋಗಿ ಕೇಳಿದ.

**ಬ್ರಹ್ಮ :-** ಪ್ರಭು, ಮೂವತ್ತೆರಡು ವನಗಳಿಂದ ಕೂಡಿದ ವೃಂದಾವನದ ಮಹಿಮೆ ಏನು ? ನಾವು ಕೇಳಬಹುದಾದರೆ ಹೇಳು.

**ಕೃಷ್ಣ :-** ವೃಂದಾವನವು ನನ್ನ ಮುಖ್ಯ ಸ್ಥಾನ. ಇಲ್ಲಿ ವಾಸ ಮಾಡುವ ಮಾನವರು, ದೇವತೆಗಳೂ, ಪಶುಗಳೂ, ವೃಕ್ಷಗಳೂ ಮರಣಾ ನಂತರದಲ್ಲಿ ನನ್ನ ಬಳಿಗೇ ಬರುವರು. ನನ್ನ ಮಂದಿರದಲ್ಲಿ ವಾಸ ಮಾಡುವ ಗೋಪಿಯರೆಲ್ಲ ಯೋಗಿನಿಯರು, ಐದು ಯೋಜನ ವಿಸ್ತಾರದ ಈ ವೃಂದಾವನದಲ್ಲಿ ಅಮೃತವಾಹಿನಿಯಾದ ಯಮುನೆ ಹರಿಯುವಳು.

ಎಲ್ಲೆಡೆಯಲ್ಲಿಯೂ ವ್ಯಾಪಕನಾಗಿರುವುದರಿಂದ ನಾನೀ ವನವನ್ನು ಎಂದೂ ಬಿಟ್ಟು ಹೋಗುವುದಿಲ್ಲ. ಪ್ರತಿಯೊಂದು ಯುಗದಲ್ಲಿಯೂ ಅದು ಒಮ್ಮೆ ಕಾಣಿಸುತ್ತದೆ. ಇನ್ನೊಮ್ಮೆ ಮರೆಯಾಗುತ್ತದೆ. ತೇಜೋಮಯವಾಗಿದ್ದು ಸ್ಥೂಲವಾದ ಕಣ್ಣಿಗೆ ಅದೃಶ್ಯವಾಗಿರುತ್ತದೆ. ದೇವತೆಗಳಿಗೂ ಅದನ್ನು ಪ್ರತ್ಯಕ್ಷ ಕಾಣಲಾಗದು.

**ಈಶ್ವರ :-** ನಾರದನಿದೆಲ್ಲವನ್ನು ಕೇಳಿಸಿಕೊಂಡು ಭೂಲೋಕಕ್ಕೆ ಮರಳಿದ. ಅಲ್ಲಿ ಶೌನಕ ಮುಂತಾದ ಮುನಿಗಳು ಕೇಳಿದರು.

**ಶೌನಕ :-** ಮುನಿಯೆ, ನೀನೀಗ ಎಲ್ಲಿಂದ ಬರುತ್ತಿರುವೆ ?

**ನಾರದ :-** ಗೋಲೋಕದಿಂದ, ಕೃಷ್ಣನ ಮುಖಾರವಿಂದದಿಂದ ವೃಂದಾವನ ರಹಸ್ಯವನ್ನು ಕೇಳಿಕೊಂಡು ಬಂದೆ.

**ಶೌನಕ :-** ಮುನಿಯೆ, ನಮಗೂ ಅದನ್ನು ಹೇಳು, ದಯೆದೋರು.

**ನಾರದ :-** ಹಿಂದೊಮ್ಮೆ ಗೌತಮನು ನನ್ನ ಬಳಿಗೆ ಬಂದು ಕಾಲಿಗೆರಗಿದ. ಬಲು ಚಿಂತಾಕ್ರಾಂತನಾಗಿದ್ದ. 'ಮಗು, ಏಳು, ಏಕೆ ಚಿಂತಿಸುತ್ತಿರುವೆ, ಹೇಳು' ಎಂದೆ ನಾನು. ಗುರುವೆ, ಕೃಷ್ಣನ ದ್ವಾರಕೆಯ ಮಧುರೆಯ ರಹಸ್ಯಗಳನ್ನೆಷ್ಟೋ ನಿನ್ನ ಮುಖದಿಂದಲೇ ಕೇಳಿದ್ದೇನೆ, ವೃಂದಾವನದ ರಹಸ್ಯವನ್ನು ಮಾತ್ರ ನೀನು ಹೇಳಿಲ್ಲ. ಅದನ್ನು ಕೇಳಿದರೆ ಮನಸ್ಸಿಗೆ ನೆಮ್ಮದಿ ಉಂಟಾಗುವುದು' ಎಂದ ಗೌತಮ. ನಾನೆಂದೆ, ಅದೊಂದು ಮಹಾ ರಹಸ್ಯ, ನಾನೊಮ್ಮೆ ಬ್ರಹ್ಮನ ಬಳಿಯಲ್ಲಿ ಅದನ್ನು ಕೇಳ ಬಯಸಿದಾಗ ಅವನು ಒಂದು ಕ್ಷಣ ಮೌನವಾಗಿದ್ದು, 'ಮಗು, ನನ್ನ ಪ್ರಭುವಾದ ಮಹಾವಿಷ್ಣುವಿನ ಬಳಿಗೆ ಹೋಗು, ನಾನು ನಿನ್ನ ಜೊತೆಗೆ ಬರುವೆನು', ಎಂದು ಹೇಳಿ ವಿಷ್ಣುಲೋಕಕ್ಕೆ ನನ್ನನ್ನು ಕರೆದೊಯ್ದ. ಅಲ್ಲಿ ವಿಷ್ಣು ನಮ್ಮ ಪ್ರಾರ್ಥನೆಯನ್ನಾಲಿಸಿ ಬ್ರಹ್ಮನಿಂದ ನನಗೆ ಅಮೃತ ಸರೋವರದಲ್ಲಿ ಸ್ನಾನ ಮಾಡಿಸಿದ. ಒಡನೆ ನಾನು ಹೆಣ್ಣಾದೆ. ಕೊಳದ ಸಮೀಪದಲ್ಲಿ ಕೆಲವರು ಸ್ತ್ರೀಯರು ಗುಂಪಾಗಿ ಕುಳಿತಿದ್ದರು. ಅವರ ಬಳಿಗೆ ನಾನು ಹೋದೆನು. 'ಯಾರು ನೀನು ? ಎಲ್ಲಿಂದೆ ಬಂದೆ ?' ಎಂದರು ಅವರು. 'ನಾನು ಯಾರು ? ಈ ಸ್ತ್ರೀ ರೂಪ ಹೇಗೆ ಬಂದಿತು ? ಈಗ ಎಲ್ಲಿಗೆ ಬಂದಿದ್ದೇನೆ ? ನನಗೊಂದು ತಿಳಿಯುತ್ತಿಲ್ಲ. ಎಲ್ಲವೂ ಸ್ವಪ್ನದಂತೆ ಭಾಸವಾಗುತ್ತಿದೆ' ಎಂದೆ, ನಾನು.

ಆ ಲಲನೆಯಲ್ಲಿ ಒಬ್ಬಳು ಇಂಪಾದ ದನಿಯಲ್ಲಿ ನನ್ನನ್ನು ಸಂತೈಸಿದಳು 'ಇದು ಕೃಷ್ಣನಿಗೆ ಪ್ರಿಯವಾದ ವೃಂದಾವನ. ನಾನು ಸುಲಲಿತೆ, ನನ್ನೊಡನೆ ಬಾ.' ಎಲ್ಲರೂ ಈ ಮಾತಿಗೆ ದನಿಗೂಡಿಸಿದರು. ದೇವಿ ಸುಲಲಿತೆ ನನಗೆ ಹದಿನಾಲ್ಕು ಅಕ್ಷರಗಳ ಕೃಷ್ಣ ಮಂತ್ರವನ್ನೂ ದೇವೀ ಮಂತ್ರವನ್ನೂ ಉಪದೇಶಿಸಿದಳು. ಒಡನೆ ನಾನೂ ಅವಳಂತೆ ಸರ್ವಲಕ್ಷಣ ಸಂಪನ್ನೆಯಾಗಿ ಹೊಳೆಯತೊಡಗಿದೆ. ಆ ಅಬಲೆಯರೊಡನೆ ಕೃಷ್ಣನ ಬಳಿಗೆ ಹೋದೆ. ಸಚ್ಚಿದಾನಂದಮಯನಾದ ಆ ಪ್ರಭು ನನ್ನನ್ನು ಕಂಡು 'ಪ್ರಿಯೆ ಬಾ, ನನ್ನನ್ನು ಆಲಿಂಗಿಸು' ಎಂದು ಹೇಳಿ ನನ್ನೊಡನೆ ಒಂದು ವರ್ಷಕಾಲ ರಮಿಸಿದ. ಬಳಿಕ ಒಂದು ದಿನ ಸುಲಲಿತೆಯನ್ನು ಕರೆದು ಹೇಳಿದ 'ಇವಳು ಹಿಂದೆ ನಾರದ ರೂಪದಿಂದ ಇದ್ದವಳು. ಅಮೃತ ಸರೋವರದ ಬಳಿಗೊಯ್ದು ಸ್ನಾನ ಮಾಡಲು ಹೇಳು.'

ದೇವಿ ಸುಲಲಿತೆ ನನ್ನ ಬಳಿಗೆ ಬಂದು ಹೇಳಿದಳು 'ನಾರದ, ನಾನೆ ರಾಧೆ, ನಾನೆ ಕೃಷ್ಣ. ನಮ್ಮಿಬ್ಬರಲ್ಲಿ ಭೇದವಿಲ್ಲ. ಇದನ್ನು ತಿಳಿದು ನನ್ನ ಮಂತ್ರವನ್ನು ಜಪಿಸಿದರೆ ನಾನು ಒಲಿಯುವೆನು ಇದು ವೃಂದಾವನ. ನನ್ನ ರಹಸ್ಯ ಮಂದಿರ. ಯಾರಿಗೂ ಹೇಳಬೇಡ.' ಬಳಿಕ ಅಮೃತ ಸರೋವರದ ಬಳಿಗೆ ನನ್ನನ್ನು ಕರೆದೊಯ್ದು ಮರಳಿದಳು.

ನಾನು ಅದರಲ್ಲಿ ಸ್ನಾನ ಮಾಡಿ ಮೇಲೇಳುವಾಗ ನಾರದ ಮುನಿಯಾಗಿದ್ದೆ. ವೀಣೆ ಹಿಡಿದು ಹಾಡತೊಡಗಿದ್ದೆ. ಬ್ರಹ್ಮನಿಗೆ ನಮಸ್ಕರಿಸಿ ಅಲ್ಲಿಂದ ಹೊರಟು ಹೋದೆ. ಮಗು, ನೀನೂ ಕೃಷ್ಣ ಪರಂಧಾಮದ ರಹಸ್ಯವನ್ನು ಯಾರಿಗೂ ಹೇಳಬೇಡ' ಎಂದು ಗೌತುಮನಿಗೆ ಉಪದೇಶಿಸಿದೆ. ನೀವೂ ಅದನ್ನು ಗೋಪ್ಯವಾಗಿ ಇರಿಸಿಕೊಳ್ಳಿ. ಯಾರಿಗಾದರೂ ಹೇಳಿದರೆ ಕೃಷ್ಣನಾಣೆ.

**ಈಶ್ವರ ಉವಾಚ**

**ಈಶ್ವರ :-** ಶಿಶುಪಾಲನು ಹತನಾದುದನ್ನು ಕೇಳಿ ದಂತ್ತವಕ್ರನು ಕೃಷ್ಣನೊಡನೆ ಯುದ್ಧಮಾಡಲು ಮಧುರೆಗೆ ಬಂದ. ಅವನನ್ನು ಕೃಷ್ಣನು ಕೊಂದ. ಯಮುನೆಯನ್ನು ದಾಟಿ ನಂದಗೋಕುಲಕ್ಕೆ ಬಂದು ತಂದೆ ತಾಯಿಗಳನ್ನು ನಮಿಸಿದ. ಅವರು ಆನಂದದಿಂದ ಅಪ್ಪಿಕೊಂಡರು. ಬಳಿಕ ಎಲ್ಲ ಹಿರಿಯ ಗೋಪಾಲಕರನ್ನೂ ಕೃಷ್ಣನು ಆಲಿಂಗಿಸಿ ವಸ್ತ್ರಾಭರಣಗಳನ್ನಿತ್ತು ಸಂತೋಷಪಡಿಸಿದ. ಯಮುನೆಯ ಮರಳ ತೀರದಲ್ಲಿ ಪವಿತ್ರ ವೃಕ್ಷಗಳ ಬುಡದಲ್ಲಿ ಹಗಲು ರಾತ್ರಿಯೆನ್ನದೆ ಸದಾಕಾಲ ಗೋಪಿಯರೊಡನೆ ವಿಹರಿಸುತ್ತ ಮೂರು ದಿನ ಕಳೆದ. ನಂದಗೋಪ ಮುಂತಾದ ಗೋಪಾಲಕರೂ ಅಲ್ಲಿ ವಾಸಿಸುತ್ತಿದ್ದ ಇತರರೂ ಪಶು ಪಕ್ಷಿಗಳೂ ಕೃಷ್ಣನ ಅನುಗ್ರಹದಿಂದ ದಿವ್ಯರೂಪ ಧರಿಸಿ ವಿಮಾನವನ್ನೇರಿ ವೈಕುಂಠಕ್ಕೆ ತೆರಳಿದರು. ಅವರೆಲ್ಲರಿಗೂ ತನ್ನ ಲೋಕವನ್ನು ಕರುಣಿಸಿ ಕೃಷ್ಣನು ದ್ವಾರಕೆಯನ್ನು ಪ್ರವೇಶಿಸಿದ.

ಅಲ್ಲಿ ವಸುದೇವ ಉಗ್ರಸೇನ ಬಲರಾಮ ಪ್ರದ್ಯುಮ್ನ ಅನಿರುದ್ಧ ಅಕ್ರೂರ ಮುಂತಾದವರೊಡನೆ ಇದ್ದು ಹದಿನಾರುಸಾವಿರದೆಂಟು ಮಂದಿ ಮಹಿಷಿಯರ ನಡುವೆ ವಿಶ್ವರೂಪ ಧರಿಸಿ ದಿವ್ಯರತ್ನಮಯವಾದ ಲತಾಗೃಹಗಳಲ್ಲಿ ಕಲ್ಪವೃಕ್ಷದ ಹೂಗಳ ಮಿದುವಾದ ಹಾಸಿಗೆಗಳಲ್ಲಿ ರಮಿಸಿದನು, ಶ್ರೀ ಕೃಷ್ಣ.

ಹೀಗೆ ದೇವತೆಗಳ ಹಿತಕ್ಕಾಗಿ ಭೂಭಾರನಾಶಕ್ಕಾಗಿ ಯದುಕುಲದಲ್ಲಿ ಅವತರಿಸಿ ದೈತರನ್ನು ಕೊಂದು ನಂದ ಗೋಕುಲ ದ್ವಾರಕೆಗಳಲ್ಲಿದ್ದ ಚರಾಚರಗಳಿಗೆ ಸಂಸಾರದಿಂದ ಬಿಡುಗಡೆ ನೀಡಿದ, ಯೋಗಿಗಳು ಧ್ಯಾನಿಸುವ ಶಾಶ್ವತ ಲೋಕದಲ್ಲಿ ಅವರೆನ್ನಿರಿಸಿದ. ತಾನೂ ದಿವ್ಯಮಹಿಷಿಯಿಂದ ಸೇವಿಸಲ್ಪಡುತ್ತ ಎಲ್ಲರ ಹೃದಯದಲ್ಲಿ ವಾಸಮಾಡಿದ.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಪಾತಾಳಖಂಡದಲ್ಲಿ*
*ಶ್ರೀರಾಧಾಕೃಷ್ಣಮಾಹಾತ್ಮ್ಯ ಕಥನವೆಂಬ ಇಪ್ಪತ್ತೇಳನೆ ಅಧ್ಯಾಯ ಮುಗಿದುದು*

—o—

ಎಲ್ಲೆಡೆಯಲ್ಲಿಯೂ ವ್ಯಾಪಕನಾಗಿರುವುದರಿಂದ ನಾನೀ ವನವನ್ನು ಎಂದೂ ಬಿಟ್ಟು ಹೋಗುವುದಿಲ್ಲ. ಪ್ರತಿಯೊಂದು ಯುಗದಲ್ಲಿಯೂ ಅದು ಒಮ್ಮೆ ಕಾಣಿಸುತ್ತದೆ. ಇನ್ನೊಮ್ಮೆ ಮರೆಯಾಗುತ್ತದೆ. ತೇಜೋಮಯವಾಗಿದ್ದು ಸ್ಥೂಲವಾದ ಕಣ್ಣಿಗೆ ಅದೃಶ್ಯವಾಗಿರುತ್ತದೆ. ದೇವತೆಗಳಿಗೂ ಅದನ್ನು ಪ್ರತ್ಯಕ್ಷ ಕಾಣಲಾಗದು.

**ಈಶ್ವರ :-** ನಾರದನಿದೆಲ್ಲವನ್ನು ಕೇಳಿಸಿಕೊಂಡು ಭೂಲೋಕಕ್ಕೆ ಮರಳಿದ. ಅಲ್ಲಿ ಶೌನಕ ಮುಂತಾದ ಮುನಿಗಳು ಕೇಳಿದರು.

**ಶೌನಕ :-** ಮುನಿಯೆ, ನೀನೀಗ ಎಲ್ಲಿಂದ ಬರುತ್ತಿರುವೆ ?

**ನಾರದ :-** ಗೋಲೋಕದಿಂದ, ಕೃಷ್ಣನ ಮುಖಾರವಿಂದದಿಂದ ವೃಂದಾವನ ರಹಸ್ಯವನ್ನು ಕೇಳಿಕೊಂಡು ಬಂದೆ.

**ಶೌನಕ :-** ಮುನಿಯೆ, ನಮಗೂ ಅದನ್ನು ಹೇಳು, ದಯೆದೋರು.

**ನಾರದ :-** ಹಿಂದೊಮ್ಮೆ ಗೌತಮನು ನನ್ನ ಬಳಿಗೆ ಬಂದು ಕಾಲಿಗೆರಗಿದ. ಬಲು ಚಿಂತಾಕ್ರಾಂತನಾಗಿದ್ದ. 'ಮಗು, ಏಳು, ಏಕೆ ಚಿಂತಿಸುತ್ತಿರುವೆ, ಹೇಳು' ಎಂದೆ ನಾನು. ಗುರುವೆ, ಕೃಷ್ಣನ ದ್ವಾರಕೆಯ ಮಥುರೆಯ ರಹಸ್ಯಗಳನ್ನೆಷ್ಟೋ ನಿನ್ನ ಮುಖದಿಂದಲೇ ಕೇಳಿದ್ದೇನೆ, ವೃಂದಾವನದ ರಹಸ್ಯವನ್ನು ಮಾತ್ರ ನೀನು ಹೇಳಿಲ್ಲ. ಅದನ್ನು ಕೇಳಿದರೆ ಮನಸ್ಸಿಗೆ ನೆಮ್ಮದಿ ಉಂಟಾಗುವುದು' ಎಂದ ಗೌತಮ. ನಾನೆಂದೆ, ಅದೊಂದು ಮಹಾ ರಹಸ್ಯ, ನಾನೊಮ್ಮೆ ಬ್ರಹ್ಮನ ಬಳಿಯಲ್ಲಿ ಅದನ್ನು ಕೇಳ ಬಯಸಿದಾಗ ಅವನು ಒಂದು ಕ್ಷಣ ಮೌನವಾಗಿದ್ದು, 'ಮಗು, ನನ್ನ ಪ್ರಭುವಾದ ಮಹಾವಿಷ್ಣುವಿನ ಬಳಿಗೆ ಹೋಗು, ನಾನು ನಿನ್ನ ಜೊತೆಗೆ ಬರುವೆನು', ಎಂದು ಹೇಳಿ ವಿಷ್ಣುಲೋಕಕ್ಕೆ ನನ್ನನ್ನು ಕರೆದೊಯ್ದ. ಅಲ್ಲಿ ವಿಷ್ಣು ನಮ್ಮ ಪ್ರಾರ್ಥನೆಯನ್ನಾಲಿಸಿ ಬ್ರಹ್ಮನಿಂದ ನನಗೆ ಅಮೃತ ಸರೋವರದಲ್ಲಿ ಸ್ನಾನ ಮಾಡಿಸಿದ. ಒಡನೆ ನಾನು ಹೆಣ್ಣಾದೆ. ಕೊಳದ ಸಮೀಪದಲ್ಲಿ ಕೆಲವರು ಸ್ತ್ರೀಯರು ಗುಂಪಾಗಿ ಕುಳಿತಿದ್ದರು. ಅವರ ಬಳಿಗೆ ನಾನು ಹೋದೆನು. 'ಯಾರು ನೀನು ? ಎಲ್ಲಿಂದೆ ಬಂದೆ ?' ಎಂದರು ಅವರು. 'ನಾನು ಯಾರು ? ಈ ಸ್ತ್ರೀ ರೂಪ ಹೇಗೆ ಬಂದಿತು ? ಈಗ ಎಲ್ಲಿಗೆ ಬಂದಿದ್ದೇನೆ ? ನನಗೊಂದು ತಿಳಿಯುತ್ತಿಲ್ಲ. ಎಲ್ಲವೂ ಸ್ವಪ್ನದಂತೆ ಭಾಸವಾಗುತ್ತಿದೆ' ಎಂದೆ, ನಾನು.

ಆ ಲಲನೆಯಲ್ಲಿ ಒಬ್ಬಳು ಇಂಪಾದ ದನಿಯಲ್ಲಿ ನನ್ನನ್ನು ಸಂತೈಸಿದಳು 'ಇದು ಕೃಷ್ಣನಿಗೆ ಪ್ರಿಯವಾದ ವೃಂದಾವನ. ನಾನು ಸುಲಲಿತೆ, ನನ್ನೊಡನೆ ಬಾ.' ಎಲ್ಲರೂ ಈ ಮಾತಿಗೆ ದನಿಗೂಡಿಸಿದರು. ದೇವಿ ಸುಲಲಿತೆ ನನಗೆ ಹದಿನಾಲ್ಕು ಅಕ್ಷರಗಳ ಕೃಷ್ಣ ಮಂತ್ರವನ್ನೂ ದೇವೀ ಮಂತ್ರವನ್ನೂ ಉಪದೇಶಿಸಿದಳು. ಒಡನೆ ನಾನೂ ಅವಳಂತೆ ಸರ್ವಲಕ್ಷಣ ಸಂಪನ್ನೆಯಾಗಿ ಹೊಳೆಯತೊಡಗಿದೆ. ಆ ಅಬಲೆಯರೊಡನೆ ಕೃಷ್ಣನ ಬಳಿಗೆ ಹೋದೆ. ಸಚ್ಚಿದಾನಂದಮಯನಾದ ಆ ಪ್ರಭು ನನ್ನನ್ನು ಕಂಡು 'ಪ್ರಿಯೆ ಬಾ, ನನ್ನನ್ನು ಆಲಿಂಗಿಸು' ಎಂದು ಹೇಳಿ ನನ್ನೊಡನೆ ಒಂದು ವರ್ಷಕಾಲ ರಮಿಸಿದ. ಬಳಿಕ ಒಂದು ದಿನ ಸುಲಲಿತೆಯನ್ನು ಕರೆದು ಹೇಳಿದ 'ಇವಳು ಹಿಂದೆ ನಾರದ ರೂಪದಿಂದ ಇದ್ದವಳು. ಅಮೃತ ಸರೋವರದ ಬಳಿಗೊಯ್ದು ಸ್ನಾನ ಮಾಡಲು ಹೇಳು.'

ದೇವಿ ಸುಲಲಿತೆ ನನ್ನ ಬಳಿಗೆ ಬಂದು ಹೇಳಿದಳು 'ನಾರದ, ನಾನೆ ರಾಧೆ, ನಾನೆ ಕೃಷ್ಣ. ನಮ್ಮಿಬ್ಬರಲ್ಲಿ ಭೇದವಿಲ್ಲ. ಇದನ್ನು ತಿಳಿದು ನನ್ನ ಮಂತ್ರವನ್ನು ಜಪಿಸಿದರೆ ನಾನು ಒಲಿಯುವೆನು ಇದು ವೃಂದಾವನ. ನನ್ನ ರಹಸ್ಯ ಮಂದಿರ. ಯಾರಿಗೂ ಹೇಳಬೇಡ.' ಬಳಿಕ ಅಮೃತ ಸರೋವರದ ಬಳಿಗೆ ನನ್ನನ್ನು ಕರೆದೊಯ್ದು ಮರಳಿದಳು.

ನಾನು ಅದರಲ್ಲಿ ಸ್ನಾನ ಮಾಡಿ ಮೇಲೇಳುವಾಗ ನಾರದ ಮುನಿಯಾಗಿದ್ದೆ. ವೀಣೆ ಹಿಡಿದು ಹಾಡತೊಡಗಿದ್ದೆ. ಬ್ರಹ್ಮನಿಗೆ ನಮಸ್ಕರಿಸಿ ಅಲ್ಲಿಂದ ಹೊರಟು ಹೋದೆ. ಮಗು, ನೀನೂ ಕೃಷ್ಣ ಪರಂಧಾಮದ ರಹಸ್ಯವನ್ನು ಯಾರಿಗೂ ಹೇಳಬೇಡ' ಎಂದು ಗೌತುಮನಿಗೆ ಉಪದೇಶಿಸಿದೆ. ನೀವೂ ಅದನ್ನು ಗೋಪ್ಯವಾಗಿ ಇರಿಸಿಕೊಳ್ಳಿ. ಯಾರಿಗಾದರೂ ಹೇಳಿದರೆ ಕೃಷ್ಣನಾಣೆ.

**ಈಶ್ವರ ಉವಾಚ**

**ಈಶ್ವರ** :- ಶಿಶುಪಾಲನು ಹತನಾದುದನ್ನು ಕೇಳಿ ದಂತ್ತವಕ್ರನು ಕೃಷ್ಣನೊಡನೆ ಯುದ್ಧಮಾಡಲು ಮಧುರೆಗೆ ಬಂದ. ಅವನನ್ನು ಕೃಷ್ಣನು ಕೊಂದ. ಯಮುನೆಯನ್ನು ದಾಟಿ ನಂದಗೋಕುಲಕ್ಕೆ ಬಂದು ತಂದೆ ತಾಯಿಗಳನ್ನು ನಮಿಸಿದ. ಅವರು ಆನಂದದಿಂದ ಅಪ್ಪಿಕೊಂಡರು. ಬಳಿಕ ಎಲ್ಲ ಹಿರಿಯ ಗೋಪಾಲಕರನ್ನೂ ಕೃಷ್ಣನು ಆಲಿಂಗಿಸಿ ವಸ್ತ್ರಾಭರಣಗಳನ್ನಿತ್ತು ಸಂತೋಷಪಡಿಸಿದ. ಯಮುನೆಯ ಮರಳ ತೀರದಲ್ಲಿ ಪವಿತ್ರ ವೃಕ್ಷಗಳ ಬುಡದಲ್ಲಿ ಹಗಲು ರಾತ್ರಿಯೆನ್ನದೆ ಸದಾಕಾಲ ಗೋಪಿಯರೊಡನೆ ವಿಹರಿಸುತ್ತ ಮೂರು ದಿನ ಕಳೆದ. ನಂದಗೋಪ ಮುಂತಾದ ಗೋಪಾಲಕರೂ ಅಲ್ಲಿ ವಾಸಿಸುತ್ತಿದ್ದ ಇತರರೂ ಪಶು ಪಕ್ಷಿಗಳೂ ಕೃಷ್ಣನ ಅನುಗ್ರಹದಿಂದ ದಿವ್ಯರೂಪ ಧರಿಸಿ ವಿಮಾನವನ್ನೇರಿ ವೈಕುಂಠಕ್ಕೆ ತೆರಳಿದರು. ಅವರೆಲ್ಲರಿಗೂ ತನ್ನ ಲೋಕವನ್ನು ಕರುಣಿಸಿ ಕೃಷ್ಣನು ದ್ವಾರಕೆಯನ್ನು ಪ್ರವೇಶಿಸಿದ.

ಅಲ್ಲಿ ವಸುದೇವ ಉಗ್ರಸೇನ ಬಲರಾಮ ಪ್ರದ್ಯುಮ್ನ ಅನಿರುದ್ಧ ಅಕ್ರೂರ ಮುಂತಾದವರೊಡನೆ ಇದ್ದು ಹದಿನಾರುಸಾವಿರದೆಂಟು ಮಂದಿ ಮಹಿಷಿಯರ ನಡುವೆ ವಿಶ್ವರೂಪ ಧರಿಸಿ ದಿವ್ಯರತ್ನಮಯವಾದ ಲತಾಗೃಹಗಳಲ್ಲಿ ಕಲ್ಪವೃಕ್ಷದ ಹೂಗಳ ಮಿದುವಾದ ಹಾಸಿಗೆಗಳಲ್ಲಿ ರಮಿಸಿದನು, ಶ್ರೀ ಕೃಷ್ಣ.

ಹೀಗೆ ದೇವತೆಗಳ ಹಿತಕ್ಕಾಗಿ ಭೂಭಾರನಾಶಕ್ಕಾಗಿ ಯದುಕುಲದಲ್ಲಿ ಅವತರಿಸಿ ದೈತರನ್ನು ಕೊಂದು ನಂದ ಗೋಕುಲ ದ್ವಾರಕೆಗಳಲ್ಲಿದ್ದ ಚರಾಚರಗಳಿಗೆ ಸಂಸಾರದಿಂದ ಬಿಡುಗಡೆ ನೀಡಿದ, ಯೋಗಿಗಳು ಧ್ಯಾನಿಸುವ ಶಾಶ್ವತ ಲೋಕದಲ್ಲಿ ಅವರೆನ್ನಿರಿಸಿದ. ತಾನೂ ದಿವ್ಯಮಹಿಷಿಯಿಂದ ಸೇವಿಸಲ್ಪಡುತ್ತ ಎಲ್ಲರ ಹೃದಯದಲ್ಲಿ ವಾಸಮಾಡಿದ.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಪಾತಾಳಖಂಡದಲ್ಲಿ*
*ಶ್ರೀರಾಧಾಕೃಷ್ಣಮಾಹಾತ್ಮ್ಯ ಕಥನವೆಂಬ ಇಪ್ಪತ್ತೇಳನೆ ಅಧ್ಯಾಯ ಮುಗಿದುದು*

—o—

## ಶ್ರೀ ಕೃಷ್ಣರೂಪ ಗುಣವರ್ಣನೆ

ಅಧ್ಯಾಯ - ೨೮

**ಪಾರ್ವತಿ ಉವಾಚ**

**ಪಾರ್ವತಿ :-** ದೇವೇಶನೆ, ಮಂತ್ರಾರ್ಥವನ್ನು ಈಶ್ವರ ಸ್ವರೂಪವನ್ನು ಅವನ ಐಶ್ವರ್ಯ ಪರಂಧಾಮಗಳನ್ನೂ ಪೂರ್ಣವಾಗಿ ನನಗೆ ಉಪದೇಶಿಸು.

**ಈಶ್ವರ :-** ಪ್ರಪಂಚದಲ್ಲಿ ಸಾರಭೂತವಾದುದು ವೃಂದಾವನ. ಅಲ್ಲಿ ಕೋಟಿ ಸಂಖ್ಯೆಯಲ್ಲಿ ಗೋಪಿಯರು ಕೃಷ್ಣನನ್ನು ಸೇವಿಸುತ್ತಿದ್ದಾರೆ. ನಾನಾ ಬಗೆಯ ಹೂಗಳ ಸುಗಂಧವನ್ನು ಹೊತ್ತು ಗಾಳಿ ಬೀಸುತ್ತದೆ. ಯಮುನೆಯ ದಿವ್ಯ ತರಂಗ ಸ್ಪರ್ಶದಿಂದ ಆ ಪ್ರದೇಶವೆಲ್ಲ ತಂಪಾಗಿದೆ. ಸನಕಾದಿ ಮುನಿಗಳು, ಮಧುರವಾಗಿ ಹಾಡುವ ಗೋಪಾಲಕರು, ಮಾಲೆ, ಆಭರಣಗಳಿಂದ ಅಲಂಕೃತರಾಗಿ ಕುಣಿವ ಬಾಲಕರು ವೃಂದಾವನದ ಸೊಬಗನ್ನು ಹೆಚ್ಚಿಸುತ್ತಿದ್ದಾರೆ. ಚಿನ್ನದೆಲೆಗಳಿಂದ ತುಂಬಿದ ಕಲ್ಪವೃಕ್ಷ ನಾನಾ ಮಣಿಮಯವಾದ ಹಣ್ಣುಗಳಿಂದ ಉಜ್ವಲವಾಗಿ ಪ್ರಕಾಶಿಸುತ್ತಿದೆ. ಅದರ ಬುಡದಲ್ಲಿ ರತ್ನವೇದಿಕೆಯ ಮೇಲೆ ತ್ರಿಗುಣಾತೀತನಾದ ಜಗನ್ನಾಥ ಕೋಟಿ ಚಂದ್ರರ ಹೊಳಪು, ಕೋಟಿಸೂರ್ಯರ ದೀಪ್ತಿ. ಕೋಟಿ ಮನ್ಮಥರ ಕಾಂತಿಗಳಿಂದ ಹತ್ತು ದಿಕ್ಕುಗಳನ್ನು ಬೆಳಗಿಸುತ್ತಿದ್ದಾನೆ. ಮೂರು ಕಣ್ಣುಗಳು, ಎರಡು ಕೈಗಳು ಚಿನ್ನದಂತೆ ಹೊಳೆವ ಮೈ. ಅಂಗನೆಯರು ಆಲಿಂಗಿಸಿದ್ದಾರೆ. ಬ್ರಹ್ಮಾದಿಗಳು, ಸನಕಾದಿಗಳು ಧ್ಯಾನಮಾಡುತ್ತಿದ್ದಾರೆ. ಶ್ರುತಿಗಳು ಗೋಪಿಯರಾಗಿ ಕೋಟಿ ಕೋಟಿ ಸಂಖ್ಯೆಗಳಲ್ಲಿ ಬಂದು ಕೃಷ್ಣಪಾದಾರವಿಂದಮಕರಂದಕ್ಕಾಗಿ ಸುತ್ತಲೂ ನೆರದಿದ್ದಾರೆ. ಆನಂದೋನ್ಮಾದದಿಂದ ಕಣ್ಣು ತಿರುಗಿಸುತ್ತ ಕುಣಿಯುತ್ತಿದ್ದಾರೆ, ಮುದ್ದಿಸುತ್ತಿದ್ದಾರೆ, ಆಲಿಂಗಿಸುತ್ತಿದ್ದಾರೆ.

ಹೀಗೆ ಕೃಷ್ಣನನ್ನು ಸೇವಿಸುವ ಅಂಗನೆಯರ ನಡುವೆ ಮಿಂಚಿನಂತೆ ಎಲ್ಲ ದಿಕ್ಕುಗಳನ್ನು ಬೆಳಗಿಸುವ ಭಗವತಿ ರಾಧೆ ವೃಂದಾವನದ ಅಧೀಶ್ವರಿ. ಜಗತ್ತಿನ ಸೃಷ್ಟಿ ಸ್ಥಿತಿಲಯಕಾರಿಣಿ. ಬ್ರಹ್ಮ ವಿಷ್ಣು ಮಹೇಶ್ವರರ ಜನನಿ. ಚರಾಚರಗಳನ್ನು ತನ್ನ ಮಾಯೆಯಿಂದ ಆವರಿಸಿದ ಚಿನ್ಮಯಿ. ಅವಳು ವೃಂದಾವನದ ಯಧೀಶ್ವರನಾದ ಜಗನ್ನಾಥನನ್ನಾಲಂಗಿಸಿದ್ದಾಳೆ. ಪ್ರಣಯಿಗಳೀರ್ವರೂ ಅನ್ಯೋನ್ಯ ಆಲಿಂಗನಚುಂಬನಗಳ ಆನಂದಾವೇಶದಿಂದ ಕಣ್ಣುಗಳನ್ನು ತಿರುಗುಸುತ್ತಿದ್ದಾರೆ.

ಶ್ರೀ ಕೃಷ್ಣನನ್ನು ಈ ರೀತಿ ಧ್ಯಾನಿಸಿದರೆ ಸರ್ವಸಿದ್ಧಿಗಳನ್ನೂ ಪಡೆಯಬಹುದು.

ರಾಧೆಯಂತೆಯೇ ಚಿತ್ರರೇಖೆ, ಚಂದ್ರೆ, ಮದನಸುಂದರಿ, ಪ್ರಿಯೆ, ಮಧುಮತಿ, ಶಶಿರೇಖೆ ಹಾಗೂ ಹರಿಪ್ರಿಯೆ ಇವರೂ ಪ್ರಧಾನರಾದ ಕೃಷ್ಣಪ್ರೇಯಸಿಯರು. ಚಿತ್ರರೇಖೆ ಸುರತೋತ್ಸವ ಯುದ್ಧದಲ್ಲಿ ನಿಪುಣೆ, ಚಂದ್ರೆ ಹರಿಯ ಬಲಭಾಗದಲ್ಲಿದ್ದು ಅನುರಾಗದ ಉನ್ಮಾದದಿಂದ ರೋಮಾಂಚಗೊಂಡು ಮೂರ್ಛಿತಳಾಗಿರುತ್ತಾಳೆ. ಮದನಸುಂದರಿ ಪ್ರೇಮಧಾರೆಯಲ್ಲಿ ಮಿಂದು ಕಣ್ಣು ಮುಚ್ಚಿರುತ್ತಾಳೆ. ಪ್ರಿಯೆ ಪ್ರೇಮಕಟಾಕ್ಷದಿಂದ ಹರಿಯ ಮನಸ್ಸನ್ನು ಮೋಹಗೊಳಿಸಿದ್ದಾಳೆ. ಮಧುಮತಿಯು ಮಧುರಾಲಾಪ ಚತುರೆ, ವಿಚಿತ್ರ ಮಧುರ ಆಕೃತಿ ಉಳ್ಳವಳು. ಶಶಿರೇಖೆ ರಾಸಕ್ರೀಡೆಯಲ್ಲಿ ಮುಖ್ಯ ನಟಿ. ಹರಿಪ್ರಿಯೆ ಮಧು ಪಾನದಿಂದ ಕಣ್ಣನ್ನು ಕೆಂಪಾಗಿಸಿಕೊಂಡು ಪ್ರೇಮಭರದಿಂದ ಸದಾ ರೋಮಾಂಚಿತಳಾಗಿರುವವಳು.

ರಾಧೆಗೆ ಅನೇಕ ಅವತಾರಗಳಿವೆ. ಅವಳೇ ಶಿವಕುಂಡದಲ್ಲಿ ಶಿವಾನಂದೆ. ದೇವಿಕಾ ನದಿತೀರದಲ್ಲಿ ನಂದಿನಿ, ದ್ವಾರಕೆಯಲ್ಲಿ ರುಕ್ಮಿಣಿ, ವೃಂದಾವನದಲ್ಲಿ ರಾಧೆ, ಮಧುರೆಯಲ್ಲಿ ದೇವಕಿ, ಚಂದ್ರಕೂಟದಲ್ಲಿ ಸೀತೆ, ವಿಂಧ್ಯದಲ್ಲಿ ವಿಂಧ್ಯನಿವಾಸಿನಿ. ವಾರಾಣಸಿಯಲ್ಲಿ ವಿಶಾಲಾಕ್ಷಿ ಮತ್ತು ಪೂರಿಯಲ್ಲಿ ವಿಮಲೆ.

**ನ ತಸ್ಯ ಪ್ರಾಕೃತೀ ಮೂರ್ತಿ ರ್ಮೇದೋಮಾಂಸಾಸ್ಥಿ ಸಂಭವಾ ।**
**ಯೋಗೀ ಚೈವೇಶ್ವರ ಶ್ಚಾನ್ಯ : ಸರ್ವಾತ್ಮಾ ನಿತ್ಯ ವಿಗ್ರಹಃ ॥**

ಗೋವಿಂದನ ಶರೀರ ಕೊಬ್ಬು ಮಾಂಸ ಮೂಳೆಗಳಿಂದ ಮಾಡಿದ ಪಾಕೃತ ಶರೀರವಲ್ಲ. ಅವನು ಯೋಗಿ ಸರ್ವೇಶ್ವರ, ಲೋಕ ವಿಲಕ್ಷಣ, ಸರ್ವಾಂತರ್ಯಾಮಿಯಾದ ನಿತ್ಯಶರೀರ.

**ಗೋಪ್ಯೈ ್ಯಕಯಾ ವೃತಸ್ತತ್ರ ಪರಿಕ್ರೀಡತಿ ಸರ್ವದಾ ।**
**ಗೋವಿಂದ ಏವ ಪುರುಷೋ ಬ್ರಹ್ಮಾದ್ಯಾಸ್ತ್ರಿಯ ಏವ ಚ ॥**

ಗೋವಿಂದನು ಸರ್ವದಾ ಕ್ರೀಡಿಸುವುದು ಒಬ್ಬಳು ಗೋಪಿಯೊಂದಿಗೆ ಮಾತ್ರ. ಅವನೊಬ್ಬನೆ ಪ್ರಪಂಚದಲ್ಲಿ ಪುರುಷ. ಉಳಿದ ಬ್ರಹ್ಮಾದಿಗಳೆಲ್ಲರೂ ಅವನಿಗೆ ಸ್ತ್ರೀಯರಂತೆಯೆ.

**ನ ರಾಧಿಕಾ ಸಮಾ ನಾರೀ ನ ಕೃಷ್ಣ ಸದೃಶಃ ಪುಮಾಸ ।**
**ವಯಃ ಪರಂ ನ ಕೈಶೋರಾತ ನ ಭಾವ: ಪ್ರಕೃತೇ : ಪರ ॥**

ರಾಧೆಗೆ ಸಮಾನಳಾದ ನಾರಿಯಿಲ್ಲ. ಕೃಷ್ಣನಿಗೆ ಸಮನಾದ ಪುರುಷನಿಲ್ಲ. ಕಿಶೋರಾವಸ್ಥೆ ಗಿಂತ ಉತ್ತಮವಾದ ವಯಸ್ಸಿಲ್ಲ. ಪ್ರಕೃತಿಗಿಂತ ಬೇರಾದ ಜಡವಸ್ತು ವಿಲ್ಲ.

**ವಂದೇ ಮದನ ಗೋಪಾಲಂ ಕೈಶೋರಾಕಾರಮದ್ಭುತಂ ।**
**ಯಮಾ ಹುರ್ಯೌವನೋದ್ಭಿನ್ನ ಶ್ರೀ ಮನ್ಮದನ ಮೋಹನಂ ॥**

ಅದ್ಭುತ ಕಿಶೋರರೂಪಿನ ಮದನ ಗೋಪಾಲನನ್ನೆ ವಂದಿಸುವೆನು ಯೌವನದಿಂದ ಹೊರಹೊಮ್ಮುವ ಕಾಂತಿಯಿಂದ ಮನ್ಮಥನಂತೆ ಮೋಹಕನಾಗಿದ್ದಾನೆ. ಅವನು ಎಂದು ಹೇಳುತ್ತಾರೆ ಬಲ್ಲವರು.

**ಸುಲಭಂ ವ್ರಜನಾರೀಣಾಂ ದುರ್ಲಭಂ ತನ್ಮುಮುಕ್ಷುಣಂ ।**
**ತಂ ಭಜೇನಂದ ಸೂನುಂ ಯನ್ನಖತೇಜ : ಪರಂ ಮಹ ॥**

ಮುಮುಕ್ಷುಗಳಿಗೆ ದುರ್ಲಭನೆನಿಸಿದ್ದೂ ನಂದಗೋಕುಲದ ನಾರಿಯರಿಗೆ ಸುಲಭನೆನಿಸಿದ ನಂದಕುಮಾರನನ್ನು ಭಜಿಸುವೆನು. ಅವನ ಉಗುರಿನ ಕಾಂತಿಯೂ ಕೂಡ ಎಲ್ಲಕ್ಕಿಂತ ದೊಡ್ಡ ತೇಜಸ್ಸು ಎಂದೆನಿಸಿದೆ.

**ಪಾರ್ವತಿ :-** ಈ ಪ್ರೇಮ ಸುಖ ಉದಿಸಲು ಎದೆಯೊಳಗಿರುವ ಭೋಗ ಮೋಕ್ಷಗಳ ಆಶಾ ಪಿಶಾಚಿ ಎಂದೂ ಬಿಡಲೊಲ್ಲದು.

**ಈಶ್ವರ :-** ಸರಿಯಾಗೇ ಹೇಳಿದೆ. ಆದರೆ ಗೋವಿಂದನ ನಾಮಸ್ಮರಣೆ ಗುಣಚಿಂತನೆ ಕೀರ್ತನೆಗಳಿಂದ ಆತ್ಮವು ತನ್ನಿಂದ ತಾನೆ ಎಚ್ಚರಗೊಂಡು ಪ್ರೇಮದಲ್ಲಿ ತಲ್ಲೀನನಾಗಿ ಬಿಡುವುದು.

*ಇತಿ ಶ್ರೀ ಪದ್ಮ ಮಹಾಪುರಾಣ - ೨ರ ಪಾತಾಳಖಂಡದಲ್ಲಿ ಶಿವ-ಪಾರ್ವತೀ ಸಂವಾದದಲ್ಲಿ ಶ್ರೀ ಕೃಷ್ಣರೂಪ ಗುಣವರ್ಣನೆ ಎಂಬ ಇಪ್ಪತ್ತೆಂಟನೆ ಅಧ್ಯಾಯ ಮುಗಿದುದು*

## ಶ್ರೀ ಕೃಷ್ಣರೂಪ ಗುಣವರ್ಣನೆ

ಅಧ್ಯಾಯ - ೨೮

**ಪಾರ್ವತಿ ಉವಾಚ**

**ಪಾರ್ವತಿ :-** ದೇವೇಶನೆ, ಮಂತ್ರಾರ್ಥವನ್ನು ಈಶ್ವರ ಸ್ವರೂಪವನ್ನು ಅವನ ಐಶ್ವರ್ಯ ಪರಂಧಾಮಗಳನ್ನೂ ಪೂರ್ಣವಾಗಿ ನನಗೆ ಉಪದೇಶಿಸು.

**ಈಶ್ವರ :-** ಪ್ರಪಂಚದಲ್ಲಿ ಸಾರಭೂತವಾದುದು ವೃಂದಾವನ. ಅಲ್ಲಿ ಕೋಟಿ ಸಂಖ್ಯೆಯಲ್ಲಿ ಗೋಪಿಯರು ಕೃಷ್ಣನನ್ನು ಸೇವಿಸುತ್ತಿದ್ದಾರೆ. ನಾನಾ ಬಗೆಯ ಹೂಗಳ ಸುಗಂಧವನ್ನು ಹೊತ್ತು ಗಾಳಿ ಬೀಸುತ್ತದೆ. ಯಮುನೆಯ ದಿವ್ಯ ತರಂಗ ಸ್ಪರ್ಶದಿಂದ ಆ ಪ್ರದೇಶವೆಲ್ಲ ತಂಪಾಗಿದೆ. ಸನಕಾದಿ ಮುನಿಗಳು, ಮಧುರವಾಗಿ ಹಾಡುವ ಗೋಪಾಲಕರು, ಮಾಲೆ, ಆಭರಣಗಳಿಂದ ಅಲಂಕೃತರಾಗಿ ಕುಣಿವ ಬಾಲಕರು ವೃಂದಾವನದ ಸೊಬಗನ್ನು ಹೆಚ್ಚಿಸುತ್ತಿದ್ದಾರೆ. ಚಿನ್ನದೆಲೆಗಳಿಂದ ತುಂಬಿದ ಕಲ್ಪವೃಕ್ಷ ನಾನಾ ಮಣಿಮಯವಾದ ಹಣ್ಣುಗಳಿಂದ ಉಜ್ವಲವಾಗಿ ಪ್ರಕಾಶಿಸುತ್ತಿದೆ. ಅದರ ಬುಡದಲ್ಲಿ ರತ್ನವೇದಿಕೆಯ ಮೇಲೆ ತ್ರಿಗುಣಾತೀತನಾದ ಜಗನ್ನಾಥ ಕೋಟಿ ಚಂದ್ರರ ಹೊಳಪು, ಕೋಟಿಸೂರ್ಯರ ದೀಪ್ತಿ. ಕೋಟಿ ಮನ್ಮಥರ ಕಾಂತಿಗಳಿಂದ ಹತ್ತು ದಿಕ್ಕುಗಳನ್ನು ಬೆಳಗಿಸುತ್ತಿದ್ದಾನೆ. ಮೂರು ಕಣ್ಣುಗಳು, ಎರಡು ಕೈಗಳು ಚಿನ್ನದಂತೆ ಹೊಳೆವ ಮೈ. ಅಂಗನೆಯರು ಆಲಿಂಗಿಸಿದ್ದಾರೆ. ಬ್ರಹ್ಮಾದಿಗಳು, ಸನಕಾದಿಗಳು ಧ್ಯಾನಮಾಡುತ್ತಿದ್ದಾರೆ. ಶ್ರುತಿಗಳು ಗೋಪಿಯರಾಗಿ ಕೋಟಿ ಕೋಟಿ ಸಂಖ್ಯೆಗಳಲ್ಲಿ ಬಂದು ಕೃಷ್ಣಪಾದಾರವಿಂದಮಕರಂದಕ್ಕಾಗಿ ಸುತ್ತಲೂ ನೆರದಿದ್ದಾರೆ. ಆನಂದೋನ್ಮಾದದಿಂದ ಕಣ್ಣು ತಿರುಗಿಸುತ್ತ ಕುಣಿಯುತ್ತಿದ್ದಾರೆ, ಮುದ್ದಿಸುತ್ತಿದ್ದಾರೆ, ಆಲಿಂಗಿಸುತ್ತಿದ್ದಾರೆ.

ಹೀಗೆ ಕೃಷ್ಣನನ್ನು ಸೇವಿಸುವ ಅಂಗನೆಯರ ನಡುವೆ ಮಿಂಚಿನಂತೆ ಎಲ್ಲ ದಿಕ್ಕುಗಳನ್ನು ಬೆಳಗಿಸುವ ಭಗವತಿ ರಾಧೆ ವೃಂದಾವನದ ಅಧೀಶ್ವರಿ. ಜಗತ್ತಿನ ಸೃಷ್ಟಿ ಸ್ಥಿತಿಲಯಕಾರಿಣಿ. ಬ್ರಹ್ಮ ವಿಷ್ಣು ಮಹೇಶ್ವರರ ಜನನಿ. ಚರಾಚರಗಳನ್ನು ತನ್ನ ಮಾಯೆಯಿಂದ ಆವರಿಸಿದ ಚಿನ್ಮಯಿ. ಅವಳು ವೃಂದಾವನದ ಯಧೀಶ್ವರನಾದ ಜಗನ್ನಾಥನನ್ನಾಲಂಗಿಸಿದ್ದಾಳೆ. ಪ್ರಣಯಿಗಳೀರ್ವರೂ ಅನ್ಯೋನ್ಯ ಆಲಿಂಗನಚುಂಬನಗಳ ಆನಂದಾವೇಶದಿಂದ ಕಣ್ಣುಗಳನ್ನು ತಿರುಗುಸುತ್ತಿದ್ದಾರೆ.

ಶ್ರೀ ಕೃಷ್ಣನನ್ನು ಈ ರೀತಿ ಧ್ಯಾನಿಸಿದರೆ ಸರ್ವಸಿದ್ಧಿಗಳನ್ನೂ ಪಡೆಯಬಹುದು.

ರಾಧೆಯಂತೆಯೇ ಚಿತ್ರರೇಖೆ, ಚಂದ್ರೆ, ಮದನಸುಂದರಿ, ಪ್ರಿಯೆ, ಮಧುಮತಿ, ಶಶಿರೇಖೆ ಹಾಗೂ ಹರಿಪ್ರಿಯೆ ಇವರೂ ಪ್ರಧಾನರಾದ ಕೃಷ್ಣಪ್ರೇಯಸಿಯರು. ಚಿತ್ರರೇಖೆ ಸುರತೋತ್ಸವ ಯುದ್ಧದಲ್ಲಿ ನಿಪುಣೆ, ಚಂದ್ರೆ ಹರಿಯ ಬಲಭಾಗದಲ್ಲಿದ್ದು ಅನುರಾಗದ ಉನ್ಮಾದದಿಂದ ರೋಮಾಂಚಗೊಂಡು ಮೂರ್ಛಿತಳಾಗಿರುತ್ತಾಳೆ. ಮದನಸುಂದರಿ ಪ್ರೇಮಧಾರೆಯಲ್ಲಿ ಮಿಂದು ಕಣ್ಣು ಮುಚ್ಚಿರುತ್ತಾಳೆ. ಪ್ರಿಯೆ ಪ್ರೇಮಕಟಾಕ್ಷದಿಂದ ಹರಿಯ ಮನಸ್ಸನ್ನು ಮೋಹಗೊಳಿಸಿದ್ದಾಳೆ. ಮಧುಮತಿಯು ಮಧುರಾಲಾಪ ಚತುರೆ, ವಿಚಿತ್ರ ಮಧುರ ಆಕೃತಿ ಉಳ್ಳವಳು. ಶಶಿರೇಖೆ ರಾಸಕ್ರೀಡೆಯಲ್ಲಿ ಮುಖ್ಯ ನಟಿ. ಹರಿಪ್ರಿಯೆ ಮಧು ಪಾನದಿಂದ ಕಣ್ಣನ್ನು ಕೆಂಪಾಗಿಸಿಕೊಂಡು ಪ್ರೇಮಭರದಿಂದ ಸದಾ ರೋಮಾಂಚಿತಳಾಗಿರುವವಳು.

ರಾಧೆಗೆ ಅನೇಕ ಅವತಾರಗಳಿವೆ. ಅವಳೇ ಶಿವಕುಂಡದಲ್ಲಿ ಶಿವಾನಂದೆ. ದೇವಿಕಾ ನದಿತೀರದಲ್ಲಿ ನಂದಿನಿ, ದ್ವಾರಕೆಯಲ್ಲಿ ರುಕ್ಮಿಣಿ, ವೃಂದಾವನದಲ್ಲಿ ರಾಧೆ, ಮಧುರೆಯಲ್ಲಿ ದೇವಕಿ, ಚಂದ್ರಕೂಟದಲ್ಲಿ ಸೀತೆ, ವಿಂಧ್ಯದಲ್ಲಿ ವಿಂಧ್ಯನಿವಾಸಿನಿ. ವಾರಾಣಸಿಯಲ್ಲಿ ವಿಶಾಲಾಕ್ಷಿ ಮತ್ತು ಪೂರಿಯಲ್ಲಿ ವಿಮಲೆ.

**ನ ತಸ್ಯ ಪ್ರಾಕೃತೀ ಮೂರ್ತಿ ರ್ಮೇದೋಮಾಂಸಾಸ್ಥಿ ಸಂಭವಾ ।**
**ಯೋಗೀ ಚೈವೇಶ್ವರ ಶ್ಚಾನ್ಯ : ಸರ್ವಾತ್ಮಾನಿತ್ಯ ವಿಗ್ರಹಃ ॥**

ಗೋವಿಂದನ ಶರೀರ ಕೊಬ್ಬು ಮಾಂಸ ಮೂಳೆಗಳಿಂದ ಮಾಡಿದ ಪಾಕೃತ ಶರೀರವಲ್ಲ. ಅವನು ಯೋಗಿ ಸರ್ವೇಶ್ವರ, ಲೋಕ ವಿಲಕ್ಷಣ, ಸರ್ವಾಂತರ್ಯಾಮಿಯಾದ ನಿತ್ಯಶರೀರ.

**ಗೋಪ್ಯೈ ೖಕಯಾ ವೃತಸ್ತತ್ರ ಪರಿಕ್ರೀಡತಿ ಸರ್ವದಾ ।**
**ಗೋವಿಂದ ಏವ ಪುರುಷೋ ಬ್ರಹ್ಮಾದ್ಯಾಸ್ತ್ರಿಯ ಏವ ಚ ॥**

ಗೋವಿಂದನು ಸರ್ವದಾ ಕ್ರೀಡಿಸುವುದು ಒಬ್ಬಳು ಗೋಪಿಯೊಂದಿಗೆ ಮಾತ್ರ. ಅವನೊಬ್ಬನೆ ಪ್ರಪಂಚದಲ್ಲಿ ಪುರುಷ. ಉಳಿದ ಬ್ರಹ್ಮಾದಿಗಳೆಲ್ಲರೂ ಅವನಿಗೆ ಸ್ತ್ರೀಯರಂತೆಯೆ.

**ನ ರಾಧಿಕಾ ಸಮಾ ನಾರೀ ನ ಕೃಷ್ಣ ಸದೃಶಃ ಪುಮಾಸ ।**
**ವಯಃ ಪರಂ ನ ಕೈಶೋರಾತ ನ ಭಾವ: ಪ್ರಕೃತೇ : ಪರ ॥**

ರಾಧೆಗೆ ಸಮಾನಳಾದ ನಾರಿಯಿಲ್ಲ. ಕೃಷ್ಣನಿಗೆ ಸಮನಾದ ಪುರುಷನಿಲ್ಲ. ಕಿಶೋರಾವಸ್ಥೆಗಿಂತ ಉತ್ತಮವಾದ ವಯಸ್ಸಿಲ್ಲ. ಪ್ರಕೃತಿಗಿಂತ ಬೇರಾದ ಜಡವಸ್ತುವಿಲ್ಲ.

**ವಂದೇ ಮದನ ಗೋಪಾಲಂ ಕೈಶೋರಾಕಾರಮದ್ಭುತಂ ।**
**ಯಮಾ ಹುರ್ಯೌವನೋದ್ಭಿನ್ನ ಶ್ರೀ ಮನ್ಮದನ ಮೋಹನಂ ॥**

ಅದ್ಭುತ ಕಿಶೋರರೂಪಿನ ಮದನ ಗೋಪಾಲನನ್ನೆ ವಂದಿಸುವೆನು ಯೌವನದಿಂದ ಹೊರಹೊಮ್ಮುವ ಕಾಂತಿಯಿಂದ ಮನ್ಮಥನಂತೆ ಮೋಹಕನಾಗಿದ್ದಾನೆ. ಅವನು ಎಂದು ಹೇಳುತ್ತಾರೆ ಬಲ್ಲವರು.

**ಸುಲಭಂ ವ್ರಜನಾರೀಣಾಂ ದುರ್ಲಭಂ ತನ್ಮುಮುಕ್ಷುಣಾಂ ।**
**ತಂ ಭಜೇನಂದ ಸೂನುಂ ಯನ್ನಖತೇಜ : ಪರಂ ಮಹ ॥**

ಮುಮುಕ್ಷುಗಳಿಗೆ ದುರ್ಲಭನೆನಿಸಿದ್ದೂ ನಂದಗೋಕುಲದ ನಾರಿಯರಿಗೆ ಸುಲಭನೆನಿಸಿದ ನಂದಕುಮಾರನನ್ನು ಭಜಿಸುವೆನು. ಅವನ ಉಗುರಿನ ಕಾಂತಿಯೂ ಕೂಡ ಎಲ್ಲಕ್ಕಿಂತ ದೊಡ್ಡ ತೇಜಸ್ಸು ಎಂದೆನಿಸಿದೆ.

**ಪಾರ್ವತಿ :-** ಈ ಪ್ರೇಮ ಸುಖ ಉದಿಸಲು ಎದೆಯೊಳಗಿರುವ ಭೋಗ ಮೋಕ್ಷಗಳ ಆಶಾ ಪಿಶಾಚಿ ಎಂದೂ ಬಿಡಲೊಲ್ಲದು.

**ಈಶ್ವರ :-** ಸರಿಯಾಗೇ ಹೇಳಿದೆ. ಆದರೆ ಗೋವಿಂದನ ನಾಮಸ್ಮರಣೆ ಗುಣಚಿಂತನೆ ಕೀರ್ತನೆಗಳಿಂದ ಆತ್ಮವು ತನ್ನಿಂದ ತಾನೆ ಎಚ್ಚರಗೊಂಡು ಪ್ರೇಮದಲ್ಲಿ ತಲ್ಲೀನನಾಗಿ ಬಿಡುವುದು.

*ಇತಿ ಶ್ರೀ ಪದ್ಮ ಮಹಾಪುರಾಣ - ೨ರ ಪಾತಾಳಖಂಡದಲ್ಲಿ ಶಿವ-ಪಾರ್ವತೀ ಸಂವಾದದಲ್ಲಿ*
*ಶ್ರೀ ಕೃಷ್ಣರೂಪ ಗುಣವರ್ಣನೆ ಎಂಬ ಇಪ್ಪತ್ತೆಂಟನೆ ಅಧ್ಯಾಯ ಮುಗಿದುದು*

ವೈಷ್ಣವಧರ್ಮ ವರ್ಣನೆ | ಅಧ್ಯಾಯ - ೨೯

**ಪಾರ್ವತ್ಯುವಾಚ**

**ಪಾರ್ವತಿ :-** ಎಲ್ಲ ಮಾನವರನ್ನೂ ಸಂಸಾರ ಸಾಗರದಿಂದ ದಾಟಿಸಬಲ್ಲ ವೈಷ್ಣವಧರ್ಮವನ್ನು ಬಣ್ಣಿಸು.

**ಈಶ್ವರ :-** ವೈಷ್ಣವರಿಗೆ ಮೊದಲು ಹನ್ನೆರಡು ವಿಧದ ಶುದ್ಧಿ ಬೇಕು. ಹರಿ ಮಂದಿರಕ್ಕೆ ಯಾತ್ರೆ ಮಾಡುವುದು. ಉತ್ಸವದಲ್ಲಿ ಹರಿಯ ರಥವನ್ನು ಹಿಂಬಾಲಿಸುವುದು, ಪ್ರದಕ್ಷಿಣೆ ಮಾಡುವುದು ಇವು ಮೂರು ಪಾದಶುದ್ಧಿಗಳು. ಹರಿಪೂಜೆಗಾಗಿ ಭಕ್ತಿಯಿಂದ ಪತ್ರಪುಷ್ಪಗಳನ್ನು ಕೊಯ್ದು ತರುವುದು ಅತ್ಯುತ್ತಮವಾದ ಕರ ಶುದ್ಧಿ. ಹರಿನಾಮ ಜಪ, ಭಕ್ತಿಯಿಂದ ಹರಿಯ ಗುಣಗಾನ ಮಾಡುವುದು ಇವೆರಡು ವಾಕ್ ಶುದ್ಧಿಗಳು. ಹರಿಕಥಾ ಶ್ರವಣನವು ಶ್ರೋತ್ರ ಶುದ್ಧಿ. ಹರಿಯ ಉತ್ಸವವನ್ನು ಕಣ್ಣ ತುಂಬ ನೋಡುವುದ ನೇತ್ರ ಶುದ್ಧಿ. ಹರಿ ಪಾದೋದಕ ನಿರ್ಮಾಲ್ಯಗಳನ್ನು ಶಿರದಲ್ಲಿ ಧರಿಸುವುದು, ಹರಿಗೆ ತಲೆ ಬಾಗಿ ನಮಿಸುವುದು ಇವೆರಡು ಶಿರಃ ಶುದ್ಧಿಗಳು. ಹರಿಪಾದಗಳಿಗೆ ಅರ್ಪಿತವಾದ ಪುಷ್ಪನಿರ್ಮಾಲ್ಯಗಳನ್ನು ಅಘ್ರಾಣಿಸುವುದೆ ಘ್ರಾಣ ಶುದ್ಧಿ. ಕೃಷ್ಣನಿಗರ್ಪಿತವಾದ ಪತ್ರ ಪುಷ್ಪ ಮುಂತಾದುವನ್ನೆ ಬಯಸುವುದು ಮನಃ ಶುದ್ಧಿ. ಹೀಗೆ ಹನ್ನೆರಡು ಬಗೆಯ ಶುದ್ಧಿ ಉಳ್ಳವನು ಐದು ಬಗೆಯಿಂದ ಹರಿಪೂಜೆ ಮಾಡಬಹುದು.

ಅಭಿಗಮನ, ಉಪಾದಾನ, ಯೋಗ, ಸ್ವಾಧ್ಯಾಯ, ಇಜ್ಯಾ, ಎಂದು ಹರಿ ಪೂಜೆ ಐದು ಬಗೆಯದು. ದೇವಾಲಯವನ್ನು ಗುಡಿಸಿ ಸಾರಿಸಿ ನಿರ್ಮಾಲ್ಯವನ್ನು ತೆಗೆಯುವುದು ಅಭಿಗಮನ. ಪೂಜೆಗಾಗಿ ಗಂದ ಪುಷ್ಪಗಳನ್ನು ತರುವುದು ಉಪಾದಾನ. ದೇವನನ್ನು ಆತ್ಮ ಭಾವನೆಯಿಂದ ಕಾಣುವುದು ಯೋಗ. ಅರ್ಥಾನು ಸಂಧಾನ ಪೂರ್ವಕವಾದ ಮಂತ್ರ ಜಪ, ಸೂಕ್ತ ಸ್ತೋತ್ರ ಪಾಠ, ಹರಿ ಕೀರ್ತನೆಗಳೂ ತತ್ವ ಶಾಸ್ತ್ರ ಮುಂತಾದವುಗಳ ಅಭ್ಯಾಸವೂ ಸ್ವಾಧ್ಯಾಯ ಎನಿಸುವುದು. ದೇವತಾರ್ಚನೆಯ ಇಜ್ಯಾ. ಈ ಐದು ಬಗೆಯ ಪೂಜೆಯಿಂದ ಕ್ರಮವಾಗಿ ಸಾರ್ಷ್ಟಿಕ, ಸಾಮೀಪ್ಯ, ಸಾಲೋಕ್ಯ ಸಾಯುಜ್ಯ, ಸಾರೂಪ್ಯ ಮೋಕ್ಷಗಳು ಲಭಿಸುವುವು.

ಕೇಶವಾದಿ ಚತುರ್ವಿಂಶತಿ ಮೂರ್ತಿಗಳ ನಾಲ್ಕು ಕೈಗಳಲ್ಲಿ ಶಂಕಚಕ್ರಾದಿಗಳ ಕ್ರಮವು ಹೀಗಿದೆ - ಬಲದಲ್ಲಿ ಕೆಳಗಿನ ಕೈಯಿಂದ ತೊಡಗಿ ಪ್ರದಕ್ಷಿಣಾಕಾರವಾಗಿ ಶಂಖ ಚಕ್ರ ಗದಾ ಪದ್ಮಗಳು ಕೇಶವ ಮೂರ್ತಿಯ ಲಕ್ಷಣ. ಪದ್ಮ ಗದಾ ಚಕ್ರ ಶಂಖಗಳಿದ್ದರೆ ನಾರಾಯಣ. ಚಕ್ರ ಶಂಖ ಪದ್ಮ ಗದೆಗಳಿದ್ದರೆ ಮಾಧವ. ಗದಾ ಪದ್ಮ ಶಂಖ ಚಕ್ರಗಳಿದ್ದರೆ ಗೋವಿಂದ. ಪದ್ಮ ಶಂಖ ಚಕ್ರ ಗದೆಗಳಿದ್ದರೆ ವಿಷ್ಣು, ಶಂಖ ಪದ್ಮ ಗದಾ ಚಕ್ರಗಳಿದ್ದರೆ ಮಧುಸೂದನ. ಗದಾ ಚಕ್ರ ಶಂಖ ಪದ್ಮಗಳಿದ್ದರೆ ತ್ರಿವಿಕ್ರಮ. ಚಕ್ರ ಗದಾ ಪದ್ಮ ಶಂಖಗಳಿದ್ದರೆ ವಾಮನ. ಚಕ್ರ ಪದ್ಮ ಶಂಖ ಗದೆಗಳಿದ್ದರೆ ಶ್ರೀಧರ. ಚಕ್ರ ಗದಾ ಶಂಖ ಪದ್ಮಗಳಿದ್ದರೆ ಹೃಷೀಕೇಶ. ಪದ್ಮಶಂಖ ಗದಾಚಕ್ರಗಳಿದ್ದರೆ ಪದ್ಮನಾಭ. ಶಂಖ ಗದಾ ಚಕ್ರ ಪದ್ಮಗಳಿದ್ದರೆ ದಾಮೋದರ. ಶಂಖ ಪದ್ಮ ಚಕ್ರ ಗದೆಗಳಿದ್ದರೆ ಸಂಕರ್ಷಣ. ಚಕ್ರ ಶಂಖ ಗದಾ ಪದ್ಮಗಳಿದ್ದರೆ ವಾಸುದೇವ. ಶಂಖ ಚಕ್ರ ಗದಾ ಪದ್ಮಗಳಿದ್ದರೆ ಪ್ರದ್ಯುಮ್ನ. ಗದಾ ಶಂಖ

ಪದ್ಮ ಚಕ್ರಗಳಿದ್ದರೆ ಅನಿರುದ್ಧ. ಪದ್ಮ ಶಂಖ ಗದಾ ಚಕ್ರಗಳಿದ್ದರೆ ಪುರುಷೋತ್ತಮ. ಪದ್ಮ ಗದಾ ಶಂಖ ಚಕ್ರಗಳಿದ್ದರೆ ಅಧೋಕ್ಷಜ. ಪದ್ಮ ಗದಾ ಶಂಕ ಚಕ್ರಗಳಿದ್ದರೆ ನೃಸಿಂಹ. ಪದ್ಮ ಚಕ್ರ ಶಂಖ ಗದೆಗಳಿದ್ದರೆ ಅಚ್ಯುತ. ಗದಾ ಪದ್ಮ ಚಕ್ರ ಶಂಖಗಳಿದ್ದರೆ ಶ್ರೀ ಕೃಷ್ಣ.

ಶಾಲಗ್ರಾಮದ ದ್ವಾರದಲ್ಲಿ ಎರಡು ಚಕ್ರಗಳಿದ್ದು ಬಿಳಿ ರೇಖೆ ಇದ್ದರೆ ಅದು ಗದಾಧಾರ ಶಾಲಗ್ರಾಮವೆನಿಸುವುದು. ಎರಡು ಚಕ್ರಗಳಿದ್ದು ಮುಂಭಾಗ ಕೆಂಪಾಗಿ ಉಬ್ಬಿಕೊಂಡಿದ್ದರೆ ಸಂಕರ್ಷಣ ಶಾಲಗ್ರಾಮವೆನಿಸುವುದು. ಚಕ್ರಗಳು ಸಣ್ಣಗಿದ್ದು ಹಳದಿ ಬಣ್ಣವಾಗಿದ್ದರೆ ಪ್ರದ್ಯುಮ್ನ. ದೀರ್ಘವಾದ ಛಿದ್ರ, ನೀಲವರ್ಣ, ದ್ವಾರದಲ್ಲಿ ಮೂರು ರೇಖೆಗಳು ಇದ್ದು ಗುಂಡಗಿದ್ದರೆ ಅನಿರುದ್ಧ. ಮಧ್ಯದಲ್ಲಿ ಗದೆಯಂಥ ರೇಖೆ ಇದ್ದು ನಾಭಿಪದ್ಮ ಉಬ್ಬಿದ್ದರೆ, ಕರಿಯ ಬಣ್ಣವಾಗಿದ್ದರೆ ನಾರಾಯಣ. ದೊಡ್ಡ ಚಕ್ರಗಳು ಮೂರು ಬಿಂದುಗಳು, ಕಪಿಲವರ್ಣ ಹೀಗಿದ್ದರೆ ನೃಸಿಂಹ ಶಾಲಗ್ರಾಮ ಐದು ಬಿಂದುಗಳಿದ್ದರೂ ಬ್ರಹ್ಮಚರಿಗಳಿಗೆ ಪೂಜೆಗೆ ಯೋಗ್ಯವಾದ ನೃಸಿಂಹ ಶಾಲಿಗ್ರಾಮವೆನಿಸುತ್ತದೆ. ಮೂರು ಬಿಂದುಗಳಿದ್ದು ಚಕ್ರಗಳು ಎರಡೂ ಒಂದಕ್ಕೊಂದು ಸಮಾನವಾಗಿಲ್ಲದಿದ್ದರೆ ವರಾಹ ಮೂರು ರೇಖೆಗಳಿದ್ದು ಗಾತ್ರದಲ್ಲಿ ಸಣ್ಣಗಿದ್ದು ಬಿಂದುಗಳಿಂದ ಕೂಡಿದ್ದು ಕಪ್ಪಾಗಿದ್ದು ವರ್ತುಲವಾದ ಸುಳಿ ಬೆನ್ನಿನ ಮೇಲೆ ಬಿಳಿ ಬಣ್ಣವಿದ್ದರೆ ಕೂರ್ಮಶಾಲಿಗ್ರಾಮ. ಐದು ರೇಖೆಗಳಿದ್ದು ವನಮಾಲೆ ಗದೆಗಳ ಚಿಹ್ನೆ ಇದ್ದರೆ ಶ್ರೀಧರ. ಕಪ್ಪಾಗಿ ದುಂಡಗಿದ್ದು ಮಧ್ಯದಲ್ಲಿ ಚಕ್ರವಿದ್ದರೆ ವಾಮನ ನಾನಾ ವರ್ಣಗಳಿಂದ ಕೂಡಿದ್ದು ಹಾವಿನ ಚಿಹ್ನೆ ಇದ್ದರೆ ಅನಂತ. ಗಾತ್ರದಲ್ಲಿ ದೊಡ್ಡದಾಗಿ ಕಪ್ಪಾಗಿ ಮಧ್ಯದಲ್ಲಿ ಚಕ್ರವಿದ್ದರೆ ದಾಮೋದರ. ದೊಡ್ಡದಾಗಿದ್ದು ದೀರ್ಘ ರೇಖೆಯಿಂದ ಕೂಡಿದ ಛಿದ್ರವಿದ್ದು ಒಂದು ಚಕ್ರ ಉಳ್ಳದ್ದಾದರೆ ಕೃಷ್ಣ. ಐದು ಚಕ್ರಗಳಿಂದ ಕೂಡಿದ್ದು ಅಂಕುಶಾಕಾರದಲ್ಲಿದ್ದರೆ ಹಯಗ್ರೀವ. ಉದ್ದವಾಗಿದ್ದು ಕಮಲದಾಕಾರದಲ್ಲಿದ್ದರೆ ಮತ್ಸ್ಯ. ಬೆಳ್ಳಗಿದ್ದು ಹಾರದ ರೇಖೆಯಿಂದ ಕೂಡಿದ್ದರೆ ರಾಮಚಂದ್ರ. ಬಲಗಡೆ ರೇಖೆ ಇದ್ದು ಕಪ್ಪಾಗಿದ್ದರೆ ತ್ರಿವಿಕ್ರಮ.

ಮೇಲೆ ಹೇಳಿದ ವಿಶೇಷ ಲಕ್ಷಣಗಳಿಲ್ಲದೆ ಬರಿಯ ಚಕ್ರ ಮಾತ್ರವಿದ್ದರೆ ಒಂದು ಚಕ್ರವಿರುವಾಗ ಗದಾಧರ ಶಾಲಗ್ರಾಮವೆಂದು ತಿಳಿಯಬೇಕು. ಎರಡು ಚಕ್ರವಿದ್ದರೆ ಲಕ್ಷ್ಮೀನಾರಾಯಣ. ಮೂರಿದ್ದರೆ ತ್ರಿವಿಕ್ರಮ. ನಾಕಿದ್ದರೆ ಚತುರ್ವ್ಯೂಹನಾದ ಹರಿ. ಐದಿದ್ದರೆ ವಾಸುದೇವ. ಆರಿದ್ದರೆ ಪ್ರದ್ಯುಮ, ಏಳಿದ್ದರೆ ಸಂಕರ್ಷಣ. ಎಂಟಿದ್ದರೆ ಪುರುಷೋತ್ತಮ ಒಂಬತ್ತಿದ್ದರೆ ನವವ್ಯೂಹ. ಹತ್ತಿದ್ದರೆ ದಶಾವತಾರ. ಹನ್ನೊಂದಿದ್ದರೆ ಅನಿರುದ್ಧ. ಹನ್ನೆರಡಿದ್ದರೆ ದ್ವಾದಶಮೂರ್ತಿ. ಅದಕ್ಕಿಂತ ಹೆಚ್ಚಿದ್ದರೆ ಅನಂತ.

ಪ್ರತಿಮೆಗೆ ನಾಲ್ಕು ಮುಖ ದಂಡ ಕಮಂಡಲು ಜಪಮಾಲೆಗಳಿದ್ದರೆ ಬ್ರಹ್ಮ ಐದು ಮುಖ ಹತ್ತು ಭುಜ ವೃಷಧ್ವಜ ಹೀಗಿದ್ದರೆ ಶಿವ. ಆಯುಧಗಳನ್ನು ನೋಡಿ ಗೌರಿ ಚಂಡಿಕೆ ಸರಸ್ವತಿ ಮಹಾಲಕ್ಷ್ಮಿ ಮಾತೃದೇವತೆಗಳು ಸೂರ್ಯ ಗಣಪತಿ ಷಣ್ಮುಖ ಗಣಗಳು ಇವನ್ನು ತಿಳಿಯಬೇಕು. ಸ್ವಯಂವ್ಯಕ್ತ ಇಲ್ಲವೆ ಪ್ರತಿಷ್ಠಿತವಾದ ಈ ಪ್ರತಿಮೆಗಳನ್ನು ಪೂಜಿಸಿದರೆ ಧರ್ಮ ಅರ್ಥ ಕಾಮ ಮೋಕ್ಷ ಮುಂತಾದ ಅಭೀಷ್ಟಗಳನ್ನು ಪಡೆಯಬಹುದು.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಪಾತಾಳಖಂಡದಲ್ಲಿ*
*ವೈಷ್ಣವ ಧರ್ಮ ವರ್ಣನೆ ಎಂಬ ಇಪ್ಪತ್ತೊಂಬತ್ತನೆ ಅಧ್ಯಾಯ ಮುಗಿದುದು*

—o—

**ಈಶ್ವರ ಉವಾಚ**

**ಈಶ್ವರ :- ಶಾಲಗ್ರಾಮೇ ಮಣೌ ಯಂತ್ರೇ ಮಂಡಲೆ ಪ್ರತಿಮಾಸುಚ ।**
**ನಿತ್ಯಂತು ಶ್ರೀ ಹರೇಃ ಪೂಜಾ ಕೇವಲೇ ಭವನೇ ನ ತು ॥**

ಶಾಲಗ್ರಾಮ ಮಣಿ ಯಂತ್ರ ಮಂಡಲ ಪ್ರತಿಮೆಗಳು ಇವುಗಳಲ್ಲಿ ಶ್ರೀಹರಿಯ ಪೂಜೆ ಮಾಡಬೇಕು. ಶೂನ್ಯ ದೇವಾಲಯದಲ್ಲಿ ಪೂಜೆ ಮಾಡಬಾರದು.

**ಗಂಡಕ್ಯಾಂ ಏಕದೇಶಸ್ತು ಸಾಲಗ್ರಾಮಸ್ಥಲಂ ಮಹತ್**
**ಪಾಷಾಣಂ ತದ್ಭವಂ ಯತ್ತು ಸಾಲಗ್ರಾಮ ಇತಿಸ್ಥಿತಂ**

ಗಂಡಕೀನದಿ ಹರಿವ ಒಂದು ಸ್ಥಳ. ದೊಡ್ಡದಾದ ಶಾಲಗ್ರಾಮ ಕ್ಷೇತ್ರವಾಗಿದೆ. ಅಲ್ಲಿ ಹುಟ್ಟಿದ ಕಲ್ಲು ಸಾಲಗ್ರಾಮ.

**ಸಾಲಗ್ರಾಮ ಶಿಲಾಸ್ಪರ್ಶಾತ್ ಕೋಟಿ ಜನ್ಮಾಘನಾಶನಂ**
**ಕಿಂ ಪುನಃ ಪೂಜನಂ ತತ್ರ ಹರೇಃ ಸಾನ್ನಿಧ್ಯ ಕಾರಣಂ**

ಶಾಲಗ್ರಾಮ ಶಿಲೆಯ ಸ್ಪರ್ಶಮಾತ್ರದಿಂದ ಕೋಟಿ ಜನ್ಮಗಳ ಪಾಪವು ತೊಲಗುತ್ತದೆ. ಹರಿಯ ಸಾನ್ನಿಧ್ಯಕ್ಕೆ ಕಾರಣವಾದ ಶಾಲಗ್ರಾಮಾರ್ಚನೆಯ ವಿಷಯದಲ್ಲಿ ಏನು ಹೇಳಬೇಕಾಗಿದೆ ?

**ಶಾಲಗ್ರಾಮೈಕ ಯಜನಾತ್ ಶತಲಿಂಗಫಲಂ ಲಭೇತ್**
**ಬಹುಭಿರ್ಜನ್ಮಭಿಃಪುಣ್ಯೈ ಃ ಯದಿಕೃಷ್ಣಶಿಲಾಲಭೇತ್**
**ಗೋಷ್ಪದೇನ ಚ ಚಿಹ್ನೇನ ತೇಸ ಸಮಾಪ್ಯತೇ ಜನುಃ ॥**

ಬಹುಜನ್ಮಗಳ ಪ್ರಯತ್ನದಿಂದ ಪುಣ್ಯವಶಾತ್ ಕೃಷ್ಣನ ಸನ್ನಿಧಾನವಿರುವ ಶಾಲಗ್ರಾಮ ಶಿಲೆಯು ಲಭಿಸುವುದರಿಂದ ಅದೊಂದನ್ನೇ ಪೂಜಿಸಿದರೂ ನೂರು ಲಿಂಗಗಳನ್ನು ಪೂಜಿಸಿದ ಫಲ ಸಿಗುತ್ತದೆ. ಸಂಸಾರ ಸಾಗರವು ಹಸುವಿನ ಹೆಜ್ಜೆಯಂತೆ ಸುಲಭವಾಗಿ ದಾಟಲು ಶಕ್ಯವಾಗುವುದು. ಪುನರ್ಜನ್ಮವಿಲ್ಲದಂತಾಗುವುದು.

ಶಾಲಗ್ರಾಮ ಶಿಲೆಯನ್ನು ಮೊದಲು ಪರೀಕ್ಷಿಸಿಕೊಳ್ಳಬೇಕು. ಅದು ನುಣ್ಣಗೆ ಕಪ್ಪಾಗಿರಬೇಕು. ಹಾಗಿದ್ದರೆ ಉತ್ತಮ ಕಪ್ಪಾಗಿಲ್ಲದಿದ್ದರೆ ಮಧ್ಯಮ. ಮಿಶ್ರಬಣ್ಣದ ಶಿಲೆ ಮಿಶ್ರಫಲವನ್ನೆ ಕೊಡುತ್ತದೆ.

**ಸದಾ ಕಾಷ್ಠಸ್ಥಿತೋ ವಹ್ನಿರ್ಮಥನೇನ ಪ್ರಕಾಶಯೇತ್ ।**
**ಯಥಾ ತಥಾ ಹರಿರ್ವ್ಯಾಪೀ ಶಾಲಗ್ರಾಮೇ ಪ್ರಕಾಶ್ಯತೇ ॥**

ಕಟ್ಟಿಗೆಯಲ್ಲಿ ಸದಾ ಬೆಂಕಿ ಇದ್ದೇ ಇದೆ. ಆದರೆ ಅದನ್ನು ಕಡೆದರೆ ಬೆಂಕಿ ಪ್ರಜ್ವಲಿಸುತ್ತದೆ. ಹಾಗೆಯೆ ಎಲ್ಲಡೆ ಹರಿಯು ವ್ಯಾಪ್ತನಾಗಿದ್ದರೂ ಶಾಲಗ್ರಾಮದಲ್ಲಿ ಅಭಿವ್ಯಕ್ತನಾಗುತ್ತಾನೆ.

**ಪ್ರತ್ಯಹಂ ದ್ವಾದಶ ಶಿಲಾಃ ಸಾಲಗ್ರಾಮಸ್ಯ ಯೋರ್ಚಯೇತ್ ।**
**ದ್ವಾರವತ್ಯಾಃ ಶಿಲಾಯುಕ್ತಾಃ ಸ ವೈಕುಂಠೇ ಮಹೀಯತೇ ॥**

ಪ್ರತಿದಿನ ದ್ವಾರಕೆಯ ಶಿಲೆಯೊಂದಿಗೆ ಹನ್ನೆರಡು ಶಾಲಗ್ರಾಮಗಳನ್ನು ಪೂಜಿಸುವವನು ವೈಕುಂಠದಲ್ಲಿ ಆದರಿಸಲ್ಪಡುತ್ತಾನೆ.

ಶಾಲಗ್ರಾಮದಲ್ಲಿ ಬಹುಕಾಲ ಪೂಜೆ ಮಾಡಿ ರಂಧ್ರ ಬಿದ್ದುದನ್ನು ಕಂಡರೆ ಪಿತೃಗಳು ತೃಪ್ತರಾಗಿ ಕಲ್ಪಾಂತದವರೆಗೂ ಸ್ವರ್ಗದಲ್ಲಿ ಇರುತ್ತಾರೆ. ದ್ವಾರಕೆಯ ಶಿಲೆ ಇರುವ ಮನೆಯೆ ವೈಕುಂಠ. ಅಲ್ಲಿ ಮರಣ ಹೊಂದುವ ಕೀಟವೂ ವಿಷ್ಣು ಲೋಕವನ್ನು ಸೇರುವುದು. ಆ ಮನೆಯ ಸುತ್ತಲೂ ಮೂರು ಯೋಜನಗಳ ಪ್ರದೇಶ ಪವಿತ್ರವೆನಿಸುದು. ಅಲ್ಲಿ ಮಾಡುವ ಜಪ, ಪೂಜೆ, ಹೋಮಗಳೆಲ್ಲವೂ ಕೋಟಿ ಪಾಲು ಮಿಗಿಲಾದ ಫಲ ನೀಡುವವು.

ಶಾಲಗ್ರಾಮ ಶಿಲೆಯ ಬೆಲೆಯನ್ನು ಹೇಳುವವನು, ಮಾರುವವನು, ಅದನ್ನು ಅನುಮೋದಿಸುವವನು ಇವರೆಲ್ಲರೂ ಸೂರ್ಯನು ಇರುವಷ್ಟುಕಾಲ ನರಕವಾಸ ಮಾಡುವರು. ಆದುದರಿಂದ ಶಾಲಗ್ರಾಮದ ಕ್ರಯ ವಿಕ್ರಯಗಳನ್ನು ಎಂದೂ ನಡೆಸಕೂಡದು.

**ಶಾಲಗ್ರಾಮೋದ್ಭವೋ ದೇವೋ ದ್ವಾರಕೋದ್ಭವ ।**
**ಉಭಯೋಃ ಸಂಗಮೋ ಯತ್ರ ಮುಕ್ತಿಸ್ತತ್ರನ ಸಂಶಯ ॥**

ಶಾಲಗ್ರಾಮದಲ್ಲಿ ಅಭಿವ್ಯಕ್ತನಾದ ದೇವನೂ ದ್ವಾರಕೆಯ ಶಿಲೆಯಲ್ಲಿ ಅಭಿವ್ಯಕ್ತನಾದ ದೇವನೂ ಎಲ್ಲಿ ಒಟ್ಟಾಗಿ ಸೇರುವರೋ ಅಲ್ಲಿ ಮುಕ್ತಿ ಸಿಗುವುದರಲ್ಲಿ ಸಂಶಯವಿಲ್ಲ.

ದ್ವಾರಕೆಯಲ್ಲಿ ಶಿಲೆಯಲ್ಲಿ ಚಕ್ರಗಳು ಬಹುವಾಗಿರುತ್ತವೆ. ಅದರಲ್ಲಿ ಚಿತ್ರರೂಪನೂ ನಿರಂಜನನೂ ಆದ ಹರಿ ಇದ್ದಾನೆ. ಓಂಕಾರ ಪ್ರತಿ ಪಾದ್ಯನಾದ ಸದಾನಂದ ಸ್ವರೂಪಿಯಾದ ಅವನಿಗಿದೊ ನಮಸ್ಕಾರ. ಶಾಲಗ್ರಾಮ ಶಿಲೆಯೆ, ಭಕ್ತನಾದ ನನ್ನ ಮೇಲೆ ಅನುಗ್ರಹಿಸು. ಋಣಗ್ರಸ್ತನಾಗಿ ನಿನ್ನ ಅನುಗ್ರಹವನ್ನು ಕೋರುತ್ತಿದ್ದೇನೆ.

ತಿಲಕ ಧಾರಣದ ವಿಧಾನವನ್ನು ಈಗ ಹೇಳುತ್ತೇನೆ. ಅದನ್ನು ಕೇಳುವ ಮಾನವರೆಲ್ಲರೂ ವಿಷ್ಣು ಸಾರೂಪ್ಯವನ್ನು ಹೊಂದುವರು.

ಹಣೆಯಲ್ಲಿ ತಿಲಕಧಾರಣ ಮಾಡುವಾಗ ಕೇಶವ ರೂಪಿ ಹರಿಯನ್ನು ಸ್ಮರಿಸಬೇಕು. ಕಂಠದಲ್ಲಿ ಪುರುಷೋತ್ತಮನನ್ನು ನೆನೆದು ತಿಲಕವಿಡಬೇಕು. ನಾಭಿಯಲ್ಲಿ ನಾರಾಯಣನನ್ನೂ, ಹೃದಯದಲ್ಲಿ ವೈಕುಂಠನನ್ನೂ, ಎಡಪಾರ್ಶ್ವದಲ್ಲಿ ದಾಮೋದರನನ್ನೂ, ಬಲ ಪಾರ್ಶ್ವದಲ್ಲಿ ತ್ರಿವಿಕ್ರಮನನ್ನೂ, ತಲೆಯಲ್ಲಿ ಹೃಷೀಕೇಶನನ್ನೂ, ಬೆನ್ನಿನಲ್ಲಿ ಪದ್ಮನಾಭನನ್ನೂ ಎರಡು ಕಿವಿಗಳಲ್ಲಿ ಗಂಗೆಯಮುನೆಯರನ್ನೂ ಎರಡು ತೋಳುಗಳಲ್ಲಿ ಹರಿ, ಕೃಷ್ಣರನ್ನೂ ನೆನೆದು ತಿಲಕವಿಡಬೇಕು. ಹೀಗೆ ಮಾಡಿದರೆ ಆ ದೇವತೆಗಳು ಪ್ರಸನ್ನರಾಗುತ್ತಾರೆ. ಪಾಪಗಳು ಪರಿಹಾರವಾಗುತ್ತವೆ, ವಿಷ್ಣುಲೋಕ ದೊರೆಯುತ್ತದೆ.

**ಊರ್ಧ್ವ ಪುಂಡ್ರಂ ಊರ್ಧ್ವರೇಕಂ ಲಲಾಟೇ ಯಸ್ಯ ದೃಶ್ಯತೆ ।**
**ಚಂಡಾಲೋಪಿ ಸ ಶುದ್ಧಾತ್ಮಾ ಪೂಜ್ಯ ಏವ ನ ಸಂಶಯ ॥**

ಯಾರ ಹಣೆಯಲ್ಲಿ ಮೇಲ್ಮುಖವಾಗಿ ಎಳೆದ ಊರ್ಧ್ವಪುಡ್ರಂವು ಕಾಣಿಸುತ್ತದೊ ಅವನ ಚಂಡಾಲನೆ ಇದ್ದರೂ ಶುದ್ಧನೆ ಸರಿ. ಅವನು ಪೂಜ್ಯ ನೆನ್ನುವುದರಲ್ಲಿ ಸಂಶಯವಿಲ್ಲ.

**ಯಸ್ಯೋರ್ಧ್ವಪುಂಡ್ರಂ ದೃಶ್ಯೇತ್ ಲಲಾಟೇ ನ ನರಸ್ಯ ಹಿ**
**ತದ್ದರ್ಶನಂ ನ ಕರ್ತವ್ಯಂ ದೃಷ್ಟ್ವಾ ಸೂರ್ಯಂ ನಿರೀಕ್ಷಯೇತ್**

ಯಾವ ಮಾನವನ ಹಣೆಯಲ್ಲಿ ಊರ್ಧ್ವಪುಂಡ್ರ ಕಾಣಿಸುವುದಿಲ್ಲವೋ ಅವನನ್ನು ನೋಡಬಾರದು. ನೋಡಿದರೆ ಸೂರ್ಯದರ್ಶನ ಮಾಡಬೇಕು.

**ತ್ರಿಪುಂಡ್ರಂ ಯಸ್ಯ ವಿಪ್ರಸ್ಯ ಊರ್ಧ್ವಪುಂಡ್ರಂ ನ ದೃಶ್ಯತೇ**
**ತಂ ದೃಷ್ಟ್ವಾ ಪ್ಯಥವಾ ಸ್ಪೃಷ್ಟ್ವಾ ಸ ಚೈಲಂ ಸ್ನಾನಮಾಚರೇತ್ ॥**

ಯಾವ ಬ್ರಾಹ್ಮಣನ ಹಣೆಯಲ್ಲಿ ತ್ರಿಪುಂಡ್ರ ಅಥವಾ ಊರ್ಧ್ವಪುಂಡ್ರವು ಕಾಣಿಸುವುದಿಲ್ಲವೋ ಅವನನ್ನು ನೋಡಿದರೂ ಮುಟ್ಟಿದ್ದರೂ ಸಚೈಲಸ್ನಾನ ಮಾಡಬೇಕು.

ಊರ್ಧ್ವಪುಂಡ್ರವನ್ನು ಮಧ್ಯದಲ್ಲಿ ಛಿದ್ರಸಹಿತವಾಗಿ ಮಾಡಿ ವಿಷ್ಣುಪಾದದಂತೆ ಕಾಣುವ ಹಾಗೆ ಧರಿಸಬೇಕು. ಹಾಗೆ ಮಾಡದಿದ್ದರೆ ಆ ಊರ್ಧ್ವಪುಂಡ್ರವು ನಾಯಿಯ ಕಾಲ ಹೆಜ್ಜೆಯಂತಾಗುತ್ತದೆ.

**ನಾಸಾದಿ ಕೇಶಪರ್ಯಂತಂ ಊರ್ಧ್ವಪುಂಡ್ರಂ ಸುಶೋಭನಂ ।**
**ಮಧ್ಯೇ ಛಿದ್ರ ಸಮಾಯುಕ್ತಂ ತಂ ವಿದ್ಯಾದ್ಧರಿ ಮಂದಿರಂ ॥**

ಮೂಗಿನಿಂದ ತಲೆಕೂದಲಿನವರೆಗೆ ಸುಂದರವಾದ ಊರ್ಧ್ವಪುಂಡ್ರವನ್ನಿಟ್ಟು ಮಧ್ಯದಲ್ಲಿ ಛಿದ್ರಸಹಿತವಾಗಿ ಮಾಡಿದರೆ ಅದು ಹರಿಮಂದಿರವಾಯಿತೆಂದು ತಿಳಿಯಬೇಕು.

**ವಾಮ ಭಾಗೇ ಸ್ಥಿತೋ ಬ್ರಹ್ಮಾ ದಕ್ಷಿಣೇ ತು ಸದಾಶಿವಃ**
**ಮಧ್ಯೆ ವಿಷ್ಣುಂ ವಿಜಾನೀಯಾತ್ ತಸ್ಮಾನ್ಮಧ್ಯಂ ನ ಲೇಪಯೇತ್**

ಎಡಭಾಗದಲ್ಲಿ ಬ್ರಹ್ಮ, ಬಲಭಾಗದಲ್ಲಿ ಸದಾಶಿವ, ನಡುವೆ ವಿಷ್ಣು ಇರುವುದರಿಂದ ನಡುವೆ ಲೇಪವಿರದಂತೆ ಛಿದ್ರ ಮಾಡಬೇಕು. ಕನ್ನಡಿಯಲ್ಲಿ ಇಲ್ಲವೆ ನೀರಿನಲ್ಲಿ ನೋಡಿಕೊಂಡು ಊರ್ಧ್ವಪುಂಡ್ರವನ್ನು ಪ್ರಯತ್ನಪಟ್ಟು ಧರಿಸಿದರೆ ಉತ್ತಮ ಲೋಕಸಿಗುವುದು.

**ಅಗ್ನಿರಾಪಶ್ಚ ವೇದಾಶ್ಚ ಚಂದ್ರಾದಿತ್ಯೌ ತಥಾನಿಲಃ**
**ವಿಪ್ರಾಣಾಂ ನಿತ್ಯಮೇತೇ ಕರ್ಣೇ ತಿಷ್ಠಂತಿ ದಕ್ಷಿಣೇ**
**ಗಂಗಾ ಚ ದಕ್ಷಿಣೇ ಶ್ರೋತ್ರೇ ನಾಸಿಕಾಯಾಂ ಹುತಾಶನಃ**
**ಉಭಯೇರಪಿ ಸಂಸ್ಪರ್ಶಾತ್ ತಕ್ಷಣಾದೇವ ಶುಧ್ಯತಿ ।**

ಅಗ್ನಿ, ಅಪ್, ವೇದಗಳು, ಚಂದ್ರ, ಸೂರ್ಯ, ವಾಯು, ಗಂಗೆ ಈ ದೇವತೆಗಳು ಬ್ರಾಹ್ಮಣನ ಬಲಗಿವಿಯಲ್ಲಿಯೂ, ಅಗ್ನಿಯು ಮೂಗಿನಲ್ಲಿಯೂ ಇರುವುದರಿಂದ ಅವುಗಳನ್ನು ಮುಟ್ಟಿದರೆ ಆ ಕ್ಷಣದಲ್ಲಿ ಶುದ್ಧಿ ಉಂಟಾಗುತ್ತದೆ.

ಶಂಖದಲ್ಲಿ ತುಳಸೀಮಿಶ್ರಿತವಾದ ನೀರನ್ನು ತುಂಬಿ ಅದನ್ನು ವಿಷ್ಣುಭಕ್ತರಿಗೆ ಕೊಡಬೇಕು. ತಾನೂ ಕುಡಿಯಬೇಕು. ಮೈಗೆ ಪ್ರೋಕ್ಷಿಸಿಕೊಳ್ಳಬೇಕು. ಪುತ್ರಮಿತ್ರ ಮುಂತಾದವರ ಮೇಲೂ ಪ್ರೋಕ್ಷಿಸಬೇಕು.

ವಿಷ್ಣುಪಾದೋದಕವನ್ನು ಕುಡಿದರೆ ಕೋಟಿ ಜನ್ಮಗಳ ಪಾಪ ಪರಿಹಾರ, ಒಂದು ಹನಿ ನೆಲಕ್ಕೆ ಬಿದ್ದರೂ ಅದುವೆ ಎಂಟು ಪಾಲು ಮಿಗಿಲಾದ ಪಾಪ ಉಂಟುಮಾಡುವುದು.

ನೀರು ತುಂಬಿದ ಶಂಖವನ್ನು ಹಿಡಿದು ಹರಿಗೆ ಪ್ರದಕ್ಷಿಣೆಮಾಡಿ ಸ್ತುತಿಸಿ, ನಮಿಸಿ ಆ ನೀರನ್ನು ಧರಿಸಿದರೆ ಜನ್ಮ ಸಫಲವಾಗುವುದು. ಹರಿಯ ಮುಂದೆ ಶಂಖವೂ ಗರುಡನಿಂದ ಕೂಡಿದ ಗಂಟೆಯೂ ಯಾರ ಮನೆಯಲ್ಲಿಲ್ಲವೋ ಅವನು ಭಗವಂತನ ಭಕ್ತನಲ್ಲ.

ಹರಿಮಂದಿರಕ್ಕೆ ವಾಹನದಿಂದ ಇಲ್ಲವೆ ಪಾದರಕ್ಷೆ ತೊಟ್ಟು ಹೋಗುವುದು ಅಪರಾಧವೆನಿಸುವುದು.

ಹರಿಯ ಉತ್ಸವದಲ್ಲಿ ಭಾಗವಹಿಸುವುದು, ಹರಿಯ ಮುಂದೆ ಅವನಿಗೆ ಪ್ರಣಾಮಸಲ್ಲಿಸದಿರುವುದು. ಎಂಜಲು ತೊಳೆದುಕೊಳ್ಳದೆ, ಅಶೌಚದಲ್ಲಿ ಹರಿಗೆ ವಂದಿಸುವುದು ಒಂದು ಕೈಯಿಂದ ನಮಸ್ಕರಿಸುವುದು. ಇದಿರಿನಲ್ಲಿ ಪ್ರದಕ್ಷಿಣೆಯಾಗಿ ಹೋಗುವುದು, ಇದಿರಿನಲ್ಲಿ ಕಾಲು ನೀಡಿ ಕುಳಿತುಕೊಳ್ಳುವುದು, ಮಂಚದ ಮೇಲಿರುವುದು, ಮಲಗುವುದು, ಉಣ್ಣುವುದು, ಸುಳ್ಳು ಹೇಳುವುದು, ಗಟ್ಟಿಯಾಗಿ ಮಾತನಾಡುವುದು, ಪರಸ್ಪರ ವಿವಾದ ಮಾಡುವುದು, ಅಳುವುದು, ಹೊಡೆದಾಟ. ಶಿಕ್ಷಿಸುವುದು, ಅನುಗ್ರಹಿಸುವುದು, ಸ್ತ್ರೀಯರಲ್ಲಿ ಕಟುನುಡಿಗಳನ್ನಾಡುವುದು, ಕಂಬಳಿ ಹೊದ್ದುಕೊಳ್ಳುವುದು, ಪರನಿಂದೆ, ಪರಸ್ತುತಿ, ಅಶ್ಲೀಲ ಮಾತು. ಅಪಾನವಾಯು ಬಿಡುವುದು, ಶಕ್ತಿ ಇದ್ದರೂ ದೇವರಿಗೆ ಅತ್ಯಲ್ಪವಾದ ಉಪಚಾರ ಮಾಡುವುದು, ಹರಿಗೆ ನಿವೇದಿಸದೆ ತಿನ್ನುವುದು ಆಯಾ ಕಾಲಗಳಲ್ಲಿ ದೊರೆವ ಹಣ್ಣು ಹೂ ಮುಂತಾದುವನ್ನು ಅರ್ಪಿಸದಿರುದು, ತಿಂದು ಉಳಿದುದನ್ನು ಹರಿಗೆ ನಿವೇದಿಸುವುದು, ಜಂಭ ಹೇಳಿಕೊಳ್ಳುತ್ತ ಉಣ್ಣುವುದು, ಗುರುವಿನ ಮುಂದೆ ಮೌನವಾಗಿರುವುದು, ಆತ್ಮಸ್ತುತಿ ಪ್ರಶಂಸೆ, ದೇವತೆಗಳನ್ನು ನಿಂದಿಸುವುದು, ಇವೂ ಅಪರಾಧಗಳು. ಈ ಮೂವತ್ತೆರಡು ಅಪರಾಧಗಳಿಂದ ಪ್ರಯತ್ನಪಟ್ಟು ದೂರವಿರಬೇಕು.

**ಅಪರಾಧ ಸಹಸ್ರಾಣಿ ಕ್ರಿಯಂತೇ ಹರ್ನಿಶಂ ಮಯಾ ।**
**ತ ವಾಹ ಮಿತಿ ಮಾಂ ಮತ್ವಾ ಕ್ಷಮಸ್ವ ಮಧುಸೂದನ ॥**

ಹೇ ಮಧುಸೂದನ, ನಾನು ದಿನನಿತ್ಯ ಸಾವಿರಾರು ತಪ್ಪು ಮಾಡುತ್ತಿರುತ್ತೇನೆ. ನಾನು ನಿನ್ನವನೆಂದು ಬಗೆದು ಅವೆಲ್ಲವನ್ನೂ ಕ್ಷಮಿಸು.

ಈ ಮಂತ್ರವನ್ನು ಹೇಳಿ ದಂಡಪ್ರಣಾಮ ಮಾಡಿದರೆ ಎಲ್ಲ ಅಪರಾಧಗಳನ್ನೂ ಹರಿಯು ಕ್ಷಮಿಸುವನು.

ವಿಷ್ಣುಭಕ್ತರು ಉಂಡು ಉಳಿದುದನ್ನು ಬೆಳಿಗ್ಗೆ ಸಂಜೆ ಎರಡು ಸಲ ಉಣ್ಣುವುದು ಶ್ರುತಿ ವಿಹಿತ. ದಿನದಲ್ಲಿ ಮಾಡಿದ ಪಾಪ ಅದರಿಂದ ಪರಿಹಾರವಾಗುವುದು. ಉಣ್ಣುವಾಗ ಅನ್ನವು ಬ್ರಹ್ಮ, ರಸವು ವಿಷ್ಣು ಎಂದುಕೊಳ್ಳುತ್ತ ಉಂಡರೆ ಅನ್ನದೋಷಗಳು ಅಂಟುವುದಿಲ್ಲ.

ದುಂಡಗಿನ ಸೋರೆ ಕಾಯಿ, ಸಿಪ್ಪೆಸಹಿತ ಬೆಳ್ಳುಳ್ಳಿ, ತಾಳ ಫಲ, ಬಿಳಿಬದನೆ ವೈಷ್ಣವನು ತಿನ್ನಕೂಡದು. ಆಲ ಅರಳಿ, ಎಕ್ಕ, ತೇಗ, ತೂಬರು, ಕಂಚುವಾಳ, ಕಡಹದ ಎಲೆಗಳಲ್ಲಿ ಉಣಬಾರದು.

**ಶ್ರಾವಣೇ ವರ್ಜಯೇ ಚ್ಛಾಕಂ ದಧಿ ಭಾದ್ರಪದಿ ತ್ಯಜೇತ್ ।**
**ದುಗ್ಧಂತಂ ಚಾಶ್ವಿನೇ ಮಾಸಿ ಕಾರ್ತಿಕೇ ಚಾಮಿಷಂ ತ್ಯಜೇತ್ ॥**

ಶ್ರಾವಣ ಮಾಸದಲ್ಲಿ ಶಾಕವನ್ನೂ ಭಾದ್ರಪದದಲ್ಲಿ ಮೊಸರನ್ನೂ ಆಶ್ವಯುಜದಲ್ಲಿ ಹಾಲನ್ನೂ ಕಾರ್ತಿಕದಲ್ಲಿ ಅಮಿಷಪದಾರ್ಥಗಳನ್ನೂ ತ್ಯಜಿಸಬೇಕು.

ಸೀಕಲು ಅನ್ನ ಹುಳಿ, ವಿಷ್ಣುವಿಗೆ ಅನಿವೇದಿತವಾದ ವಸ್ತುಗಳು ಸೀಟೆ ಮುಂತಾದುವನ್ನು ತಿನ್ನಕೂಡದು. ದೈವಾತ್ ತಿಂದರೆ ಹರಿನಾಮವನ್ನುಚ್ಚರಿಸಬೇಕು. ಹೇಮಂತದಲ್ಲಿ ಬೆಳೆದ ಧಾನ್ಯ, ಎಳ್ಳು ಯವ, ನೀವಾರ, ಲವಣ, ಆಕಳ ಮೊಸರು, ತುಪ್ಪ, ಬೆಣ್ಣೆತೆಗೆಯದ ಹಾಲು, ಹಲಸು ಮಾವು ಅಳಲೆ ಹಿಪ್ಪಲಿ ಜೀರಿಗೆ, ಹೇರಳೆ, ಹುಣಸೆ, ಬಾಳೆ, ನೆಲ್ಲಿ ಮೊದಲಾದುವು ಹವಿಷ್ಯ ಪದಾರ್ಥಗಳು ಎಂದು ಮುನಿಗಳು ಹೇಳುತ್ತಾರೆ.

ತುಳಸಿದಳ ಹೂ ಮುಂತಾದವುಗಳ ಮಾಲೆಯನ್ನು ಧರಿಸಿದರೆ ವಿಷ್ಣು ಸನ್ನಿಧಾನ ಉಂಟಾಗುವುದು. ನೆಲ್ಲಿಯ ಗಿಡವನ್ನು ಬೆಳಸಿದರೂ ವಿಷ್ಣುವಿನ ಸಾಮ್ಯ ದೊರಕುವುದು. ನೆಲ್ಲಿಗಿಡದ ಸುತ್ತಲಿನ ಮುನ್ನೂರೈವತ್ತು ಊರುಗಳು ಕುರುಕ್ಷೇತ್ರದಂತೆ ಪವಿತ್ರವೆನಿಸುವುದು. ಹರಿಪೂಜೆಗೆ ತೊಡಗುವವನು ತುಳಸೀ ಕಾಷ್ಠದಿಂದ ನಿರ್ಮಿತವಾದ ಮಾಲೆ ನೆಲ್ಲಿಯ ಮಾಲೆ ಮತ್ತು ಕಮಲದ ಮಣಿಯ ಮಾಲೆಗಳನ್ನು ಧರಿಸಬೇಕು. ನಿರ್ಮಾಲ್ಯವಾದ ತುಳಸಿ ಮಾಲೆಯನ್ನು ತಲೆಯಲ್ಲಿ ಧರಿಸಬೇಕು. ನಿರ್ಮಾಲ್ಯವಾದ ಗಂಧದಿಂದ ಹರಿನಾಮೋಚ್ಚಾರಣ ಪೂರ್ವಕವಾಗಿ ಹಣೆಯಲಿ ಗದೆ ಶಿರಸ್ಸಿನಲ್ಲಿ ಬಿಲ್ಲುಬಾಣಗಳು ಎದೆಯಲ್ಲಿ ನಂದಕಖಡ್ಗ, ಎರಡು ಭುಜಗಳಲ್ಲಿ ಶಂಖ ಚಕ್ರಗಳು ಹೀಗೆ ಚಿಹ್ನೆಯನ್ನು ಬರೆದುಕೊಳ್ಳಬೇಕು.

ಶಂಖ ಚಕ್ರಗಳನ್ನು ಧರಿಸಿದ ಬ್ರಾಹ್ಮಣನು ಶ್ಮಶಾನದಲ್ಲಿ ಸತ್ತರೂ ಪ್ರಯಾಗ ಮರಣದ ಫಲ ದೊರಕುತ್ತದೆ. ಶಿರಸ್ಸಿನಲ್ಲಿ ತುಳಸಿದಳವನ್ನು ಧರಿಸಿಕೊಂಡು ಮಾಡುವ ಎಲ್ಲ ಕರ್ಮಗಳೂ ಅಕ್ಷಯಫಲ ನೀಡುವುವು.

ತುಳಸೀಕಾಷ್ಠಮಾಲೆಯನ್ನು ಧರಿಸಿ ದೇವ ಪಿತೃಕರ್ಮಗಳನ್ನು ಮಾಡಿದರೆ ಕೋಟಿ ಫಲ ಲಭಿಸುವುದು. ಅದನ್ನು ಧರಿಸುವುದಕ್ಕೆ ಮೊದಲು ಹರಿಗೆ ಅದನ್ನು ಸಮರ್ಪಿಸಿರಬೇಕು. ಪಾದ್ಯಾದಿಗಳಿಂದ ಪೂಜಿಸಿ ಈ ಮಂತ್ರವನ್ನು ಹೇಳಬೇಕು.

**ತುಳಸೀ ಕಾನನಂ ಯತ್ರ ಯತ್ರ ಪದ್ಮ ವನಾನಿ ಚ**
**ವಸಂತಿ ವೈಷ್ಣವಾ ಯತ್ರ ತತ್ರ ಸನ್ನಿಹಿತೋ ಹರಿಃ ॥**

ಎಲ್ಲಿ ಎಲ್ಲಿ ತುಳಸೀ ಬನ ಮತ್ತು ಪದ್ಮವನ ಹಾಗೂ ವಿಷ್ಣುಭಕ್ತರು ಇರುವರೋ ಅಲ್ಲೆಲ್ಲ ಸ್ವಯಂ ಶ್ರೀಹರಿಯು ತಾನೇ ಸನ್ನಿಹಿತನಾಗುತ್ತಾನೆ.

**ಪುಷ್ಕರಾದ್ಯಾನಿ ತೀರ್ಥಾಣಿ ಗಂಗಾದ್ಯಾಸ್ಸರಿತಸತ್ತ ಥಾ ।**
**ವಾಸುದೇವಾ ದಯೋ ದೇವಾ ವಸಂತಿ ತುಲಸೀ ವನೇ ॥**

ಪುಷ್ಕರವೇ ಮೊದಲಾದ ತೀರ್ಥಗಳೂ ಗಂಗೆಯ ಮೊದಲಾದ ಪುಣ್ಯ ನದಿಗಳೂ ಶ್ರೀ ಕೃಷ್ಣನೇ ಮೊದಲಾದ ದೇವತೆಗಳೂ ತುಳಸೀ ವನದಲ್ಲಿ ಇರುತ್ತಾರೆ.

**ಪ್ರಸೀದ ತುಳಸೀ ದೇವಿ ಪ್ರಸೀದ ಹರಿವಲ್ಲಭೇ**
**ಕ್ಷೀರೋದ ಮಥನೋದ್ಭೂತೆ ತುಲಸಿ ತ್ವಾಂ ನತೋಽಸ್ಮ್ಯಹಮ್ ॥**

ತುಳಸೀ ದೇವಿಯೇ ನೀನು ನನ್ನ ಮೇಲೆ ಪ್ರಸನ್ನಳಾಗು. ವಿಷ್ಣು ಪ್ರಿಯಳೇ ಅನುಗ್ರಹ ಮಾಡು. ಸುರಾಸುರರು ಹಾಲಿನ ಕಡಲನ್ನು ಕಡಿಯುವಾಗ ಧನ್ವಂತರಿ ದೇವನ ಕೈಯಲ್ಲಿಯ ಅಮೃತಕಲಶದಲ್ಲಿ ಅವನ ಆನಂದ ಬಾಷ್ಪ ಬಿಂದುವಿನಿಂದ ಉದಿಸಿ ಬಂದ ತುಳಸೀ ದೇವಿಯೇ ನಾನು ನಿನ್ನನ್ನು ವಂದಿಸುತ್ತೇನೆ.

**ನಮಸ್ತೇ ತುಲಸೀದೇವಿ ನಮಸ್ತೇ ಹರಿವಲ್ಲಭೇ ।**
**ನಮಸ್ತೇ ನಾರದನುತೇ ತುಲಸಿ ತ್ವಾಂ ನತೋಽಸ್ಮ್ಯಹಮ್ ॥**

ತುಳಸಿದೇವಿಯೇ ನಿನಗೆ ನಮಸ್ಕಾರ. ಶ್ರೀ ಹರಿಯ ಪ್ರೇಯಸಿಯೇ ನಿನಗೆ ವಂದನೆ. ನಾರದಾದಿ ಋಷಿಗಳಿಂದ ಹೊಗಳಿಸಿಕೊಳ್ಳಲ್ಪಡುವ ಮಹಾ ತಾಯಿಯೇ ನಾನು ನಿನಗೆ ನಮಸ್ಕರಿಸುತ್ತೇನೆ.

**ಪಾಪಾನಿ ಯಾನಿ ರವಿಸೂನು ಪಟಸ್ಥಿತಾನಿ**
**ಗೋ ಬ್ರಹ್ಮ ಬಾಲ ಪಿತೃ ಮಾತೃ ವಧಾದಿಕಾನಿ ॥**
**ನಶ್ಯಂತಿ ತಾನಿ ತುಳಸೀವನ ದರ್ಶನೇನ**
**ಗೋ ಕೋಟಿ ದಾನ ಸದೃಶಂ ಫಲಮಾಪ್ಯತೇ ಚ ॥**

ತುಳಸೀ ವನದ ದರ್ಶನದಿಂದ ಮಾನವರು ಮಾಡಿದ ಗೋಹತ್ಯೆ ಬ್ರಹ್ಮಹತ್ಯೆ ಶಿಶುಹತ್ಯೆ ಪಿತೃಹತ್ಯೆ ಮಾತೃಹತ್ಯೆ ಮುಂತಾದ ಘೋರ ಪಾಪಗಳೆಲ್ಲವೂ ನಾಶವಾಗುತ್ತವೆ. ತುಳಸಿಯ ಬನವನ್ನು ಕಣ್ಣಿನಿಂದ ನೋಡಿ ಮಾತ್ರಕ್ಕೆ ಯಮಧರ್ಮನು ಬರೆದಕೊಂಡ ಯಾದಿ ಮಾಡಿಟ್ಟ ಪಾತಕಗಳೆಲ್ಲವೂ ಅಳಿಸಿಹೋಗುತ್ತವೆ. ಇಷ್ಟೇ ಅಲ್ಲ ಕೋಟಿ ಹಸುಗಳನ್ನು ದಾನ ಮಾಡಿದ ಪುಣ್ಯವೂ ತುಳಸೀವನವನ್ನು ನೋಡಿದವನಿಗೆ ಬರುತ್ತದೆ.

**ಲಲಾಟೇ ಯಸ್ಯ ದೃಶ್ಯೇತ ತುಳಸೀ ಮೂಲಮೃತ್ತಿಕಾ ।**
**ಯಮಸ್ತಂ ನೇ ಕ್ಷಿ ತುಂ ಶಕ್ತಃ ಕಿಮು ದೂತಾ ಭಯಂಕರಾಃ ॥**

ಯಾವ ಮಾನವನ ಹಣೆಯ ಮೇಲೆ ತುಳಸೀ ಮೃತ್ತಿಕೆ (ತುಳಸಿಗಿಡದ ಬುಡದಲ್ಲಿಯ ಮಣ್ಣು)ಯು ಕಾಣುವದೋ ಅವನನ್ನು ಯಮನಾಗಲಿ ಯಮದೂತರಾಗಲಿ ಕಣ್ಣೆತ್ತಿ ನೋಡಲಿಕ್ಕೂ ಸಮರ್ಥರಲ್ಲ.

**ಯುನ್ಮೂಲೇ ಸರ್ವತೀರ್ಥಾಣಿ ಯನ್ಮಧ್ಯೇ ಸರ್ವದೇವತಾ ।**
**ಯದಗ್ರೇ ಸರ್ವವೇದಾಶ್ಚ ತುಲಸಿ ತ್ವಾಂ ನತೋಽಸ್ಮ್ಯಹಮ್ ॥**

ಯಾವ ತುಳಸಿಯ ಬುಡ ಅಥವಾ ಬೊಡ್ಡೆಯಲ್ಲಿ ಎಲ್ಲ ತೀರ್ಥಗಳೂ ಸನ್ನಿಹಿತವಾಗಿರುತ್ತವೆಯೋ, ನಡುವೆ ಎಲ್ಲ ದೇವತೆಗಳು ಮೇಲೆ ಎಲ್ಲ ವೇದಗಳು ಸನ್ನಿಹಿತವಾಗಿರುವವೋ ಅಂಥ ತುಳಸೀ ದೇವಿಯನ್ನು ನಮಸ್ಕರಿಸುತ್ತೇನೆ.

**ಯಾ ದೃಷ್ಟಾ ನಿಖಿಲಾಘ ಸಂಘ ಶಮನೀ**
**ಸ್ಪೃಷ್ಟಾವಪು : ಪಾವನೀ ।**

**ರೋಗಾಣಾ ಮಭಿವಂದಿತಾ ನಿರಸಿನೀ**
**ಸಿಕ್ತಾಂತಕತ್ರಾಸಿನೀ ॥**
**ಪ್ರತ್ಯಾಸತ್ತಿ ವಿಧಾಯಿನೀ ಭಗವತಃ**
**ಕೃಷ್ಣಸ್ಯ ಸಂರೋಪಿತಾ ।**
**ನ್ಯಸ್ತಾ ತಚ್ಚರಣೇ ವಿಮುಕ್ತಿ ಫಲದಾ**
**ತಸ್ಮೈ ತುಲಸ್ಯೈ ನಮಃ ॥**

ದರ್ಶನ ಮಾತ್ರದಿಂದ ಎಲ್ಲ ಪಾಪಗಳನ್ನೂ ಪರಿಹರಿಸುವ, ಸ್ಪರ್ಶ ಮಾತ್ರದಿಂದ ಶರೀರವನ್ನು ಪಾವನಗೊಳಿಸುವ, ವಂದನೆಯಿಂದ ರೋಗಗಳನ್ನು ಪರಿಹರಿಸುವ, ನೀರೆರೆದ ಮಾತ್ರಕ್ಕೆ ಯಮನನ್ನು ಭಯಪಡಿಸುವ, ಬೆಳೆಸಿದರೆ ಕೃಷ್ಣನ ಸನ್ನಿಧಿಗೆ ಕೊಂಡೊಯ್ಯುವ, ಕೃಷ್ಣಪಾದಗಳಲ್ಲಿಟ್ಟರೆ ಮುಕ್ತಿ ಫಲವ ನೀವ ತುಳಸಿಗೆ ನಮಸ್ಕಾರ.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಪಾತಾಳಖಂಡದಲ್ಲಿ ದೇವೀಶ್ವರ ಸಂವಾದದಲ್ಲಿ ತಿಲಕಾದಿ ನಿಯಮವೆಂಬ ಮೂವತ್ತನೆ ಅಧ್ಯಾಯ ಮುಗಿದುದು*



## ಹರಿನಾಮ ಸ್ಮರಣೆ

ಅಧ್ಯಾಯ - ೩೧

**ಪಾರ್ವತ್ಯುವಾಚ**

**ಪಾರ್ವತಿ :-** ಮೊಸಳೆಗಳಂತೆ ಹಿಡಿದು ನುಂಗುವ ವಿಷಯ ಪದಾರ್ಥಗಳಿಂದ ಕೂಡಿ ಘೋರವಾದ ಕಲಿಯುಗ ಬಂದಾಗ ಹೆಂಡಿರು ಮಕ್ಕಳು, ಧನ ಧಾನ್ಯ, ಮುಂತಾದವುಗಳ ಮೋಹದಲ್ಲಿ ಮೊದಲೆ ಬಿದ್ದಿರುವ ಮಾನವರು ಏನು ಮಾಡಬೇಕು ? ಕಲಿಬಾಧೆಯನ್ನು ಹೇಗೆ ತಡೆದುಕೊಳ್ಳಬೇಕು ಹೇಳು.

**ಈಶ್ವರ :-** ಹರೇ ರಾಮ, ಹರೇ ಕೃಷ್ಣ ಕೃಷ್ಣ ಕೃಷ್ಣ ಎಂದು ಹರಿನಾಮ ಒಂದನ್ನೆ ಯಾರು ನಿತ್ಯ ಜಪಿಸುವರೋ ಅವರನ್ನು ಕಲಿ ಬಾಧಿಸಲಾರ. ಎಲ್ಲ ಕೆಲಸಗಳನ್ನು ಮಾಡುವಾಗ ಹರಿನಾಮವನ್ನು ಸ್ಮರಿಸಬೇಕು. ಶುಚಿಯಾಗಿರಲಿ ಅಶುಚಿಯಾಗಿರಲಿ ಸದಾ ಕಾಲ ನಾಮಸ್ಮರಣೆ ಮಾಡಿದರೆ ಕೃಷ್ಣನ ದರ್ಶನವಾಗುವುದು. ಜಯ ಶಬ್ದ ಅಥವಾ ಶ್ರೀ ಶಬ್ದಪೂರ್ವಕವಾಗಿ ನಾಮ ಜಪ ಮಾಡಬಹುದು. ಆದರಿಂದ ಎಲ್ಲ ಅಪರಾಧಗಳೂ ತೊಳೆದು ಹೋಗುವವು. ಸಂಸಾರದಿಂದ ಬಿಡುಗಡೆಯಾಗುವುದು.

**ಯಜ್ಞ ವ್ರತ ತಪೋದಾನಂ ಸಾಂಗಂ ನೈವ ಕಲೌಯುಗೇ ।**
**ಗಂಗಾ ಸ್ನಾನಂ ಹರೇರ್ನಾಮ ನಿರಪಾಯಮಿದಂ ದ್ವಯಂ ॥**

ಯಾಗ ವ್ರತ ತಪಸ್ಸು ದಾನಗಳಾವುವೂ ಕಲಿಯುಗದಲ್ಲಿ ಸಾಂಗವಾಗಿ ನಡೆಯುವುದಿಲ್ಲ. ಗಂಗಾಸ್ನಾನ ಹರಿನಾಮ ಸ್ಮರಣೆ ಇವೆರಡು ಮಾತ್ರ ಏನೂ ಅಪಾಯವಿಲ್ಲದ ಸುಲಭ ಉಪಾಯಗಳು.

ಪಂಚ ಮಹಾಪಾತಕಗಳನ್ನೆಷ್ಟೆ ಮಾಡಿರಲಿ ಗೋವಿಂದನ ನಾಮಸ್ಮರಣೆಯಿಂದ ಅವೆಲ್ಲವೂ ತೊಲಗುತ್ತವೆ.

**ಅಪವಿತ್ರಃ ಪವಿತ್ರೋ ವಾ ಸರ್ವಾವಸ್ಥಾಂ ಗತೋಽಪಿ ವಾ ।**
**ಯಃ ಸ್ಮರೇತ್ ಪುಂಡರೀಕಾಕ್ಷಂ ಸ ಬಾಹ್ಯಾಂಭ್ಯಂತರಃ ಶುಚಿಃ ॥**

ಶುಚಿಯಾಗಿರಲಿ, ಅಶುಚಿಯಾಗಿರಲಿ, ಯಾವ ಅವಸ್ಥೆಯಲ್ಲಿಯೆ ಇರಲಿ ಪುಂಡರೀಕಾಕ್ಷನನು ಸ್ಮರಿಸಿದವನು ಹೊರಗೂ ಒಳಗೂ ಶುಚಿ ಎನಿಸುವನು. ಹರಿ ನಾಮಸ್ಮರಣೆಯಂತೆ ಅವನ ಪಾದಸ್ಮರಣೆಯೂ ಪಾವನವಾಗಿದೆ.

ಚಿನ್ನ ಬೆಳ್ಳಿ ಅಥವಾ ಹಿಟ್ಟನಿಂದ ಪಾದಚಿಹ್ನೆಯನ್ನು ಬರೆದು ಪೂಜಿಸಬಹುದು. ಬಲಪಾದದ ಹೆಬ್ಬೆರಳಿನ ಬುಡದಲ್ಲಿ ಚಕ್ರವನ್ನು ಬರೆದು ನಮಿಸಿದರೆ ಅದು ಸಂಸಾರದ ಬಂಧನವನ್ನು ಕತ್ತರಿಸುವುದು. ನಡುಬೆರಳಿನ ಕೆಳಗೆ ಸುಂದರವಾದ ಕಮಲ ಧ್ಯಾನ ಮಾಡುವವರನ್ನು ಮನಸ್ಸೆಂಬ ದುಂಬಿಯನ್ನಾಕರ್ಷಿಸುವುದು. ಆ ಕಮಲದ ಕೆಳಗಡೆ ಧ್ವಜವಿದ್ದು ಭಕ್ತರ ಅನರ್ಥಜಯಕ್ಕೆ ಅದು ಧ್ವಜವೆನಿಸುವುದು. ಕಿರುಬೆರಳಿನ ಕೆಳಗೆ ಇರುವ ವಜ್ರವು ಭಕ್ತರ ಪಾಪಗಳನ್ನೆಲ್ಲ ಭೇದಿಸುವುದು. ಅದರ ಪಾರ್ಶ್ವದಲ್ಲಿ ಅಂಕುಶವಿದೆ. ಭಕ್ತರ ಮನಸ್ಸೆಂಬ ಆನೆಯನ್ನು ಅದು ನಿಯಂತ್ರಿಸುವುದು. ಹೆಬ್ಬೆರಳಿನ ಗಿಣ್ಣಿನಲ್ಲಿ ಯಮದ ಚಿಹ್ನೆ ಇಧೆ. ಭೋಗ ಸಂಪತ್ತುಗಳನ್ನು ಅದು ನೀಡಬಲ್ಲದು. ಅಲ್ಲಿಯೆ ಕೆಳಗಡೆ ಜೀವದ ಪಾಪ ಪರ್ವತಗಳನ್ನು ಭೇದಿಸುವ ಗದೆಯೂ ಇದೆ. ಅದುವೆ ಎಲ್ಲ ವಿದ್ಯೆಗಳನ್ನು ಪ್ರಕಾಶಪಡಿಸುತ್ತದೆ. ಎಡಪಾದದಲ್ಲಿಯೂ ಈ ಚಿಹ್ನೆಗಳನ್ನು ಹರಿ ಧರಿಸಿದ್ದಾನೆ.

ಹರಿಗೆ ಪ್ರೀತಿಕರವಾದ ಕರ್ಮಗಳನ್ನು ಯಾವ ಮಾಸದಲ್ಲಿ ಹೇಗೆ ಮಾಡಬೇಕೆಂಬುದನ್ನು ಹೇಳುತ್ತೇನೆ, ಕೇಳು. ಜೇಷ್ಠ ಮಾಸದಲ್ಲಿ ವಿಷ್ಣುವಿಗೆ ಅಭಿಷೇಕ ಮಾಡಬೇಕು. ಅದರಿಂದ ದಿನ ಪಕ್ಷ ಮಾಸ ಋತು ವರ್ಷಗಳಲ್ಲಿ ಮಾಡಿದ ಎಲ್ಲ ಪಾಪಗಳೂ ಪರಿಹಾರವಾಗುತ್ತವೆ. ಈ ಮಾಸದ ಹುಣ್ಣಿಮೆ ದಿನ ಪುರುಷಸೂಕ್ತ ಪವಮಾನ ಸೂಕ್ತಗಳಿಂದ ಪುಷ್ಪೋದಕಗಳನ್ನು ಅಭಿಷೇಕ ಮಾಡಿ ಪಂಚೋಪಚಾರಗಳನ್ನ ಸಲ್ಲಿಸಬೇಕು. **ಘಂ ಘಂಟಾಯೈ ನಮಃ** ಎನ್ನುತ್ತ ಘಂಟಾನಾದವನ್ನು ಸಮರ್ಪಿಸಬೇಕು. ಸಂಸಾರ ಸಾಗರದಲ್ಲಿ ಬಿದ್ದ ಪಾಪಿಯಾದ ನನ್ನನ್ನು ಕಾಪಾಡೆಂದು ಬೇಡಬೇಕು. ಹೀಗೆ ಮಾಡಿದ ಶ್ರೋತ್ರಿಯ ಬ್ರಾಹ್ಮಣನು ಎಲ್ಲ ಪಾಪಗಳಿಂದ ಮುಕ್ತನಾಗಿ ವಿಷ್ಣುಲೋಕವನ್ನು ಸೇರುತ್ತಾನೆ.

ಆಷಾಢ ಶುದ್ಧ ಏಕಾದಶಿ ದಿನ ಹರಿಯ ಶಯನೋತ್ಸವವನ್ನಾಚರಿಸಬೇಕು. ಶ್ರಾವಣದಲ್ಲಿ ಶ್ರವಣ ವಿಧಿ, ಭಾದ್ರಪದದಲ್ಲಿ ಕೃಷ್ಣ ಜನ್ಮೋತ್ಸವವನ್ನಾಚರಿಸಬೇಕು. ಉಪವಾಸ ಮಾಡಬೇಕು. ಅಶ್ವಯುಜ ಮಾಸದಲ್ಲಿ ಮಲಗಿದ್ದ ಹರಿಯನ್ನೆಬ್ಬಿಸುವ ಉತ್ಸವವನ್ನಾಚರಿಸಬೇಕು. ಮಹಾಮಾಯೆಯನ್ನೂ ಪೂಜಿಸಬೇಕು. ಕಾರ್ತಿಕದಲ್ಲಿ ದಾಮೋದರನಿಗೆ ಉನ್ನತ ಸ್ಥಾನದಲ್ಲಿ ದೀಪವಿಡಬೇಕು. ನಾಲ್ಕು ಅಂಗುಲ ಉದ್ದದ ಏಳು ಬತ್ತಿಗಳಲ್ಲಿ ದೀಪ ಉರಿಸಬೇಕು. ಹುಣ್ಣಿಮೆ ಅಮಾವಾಸ್ಯೆಗಳಲ್ಲಿ ಸಾಲು ದೀಪಗಳ ಉತ್ಸವವನ್ನಾಚರಿಸಬೇಕು. ಮಾರ್ಗಶೀರ್ಷ ಶುದ್ಧ ಷಷ್ಠಿ ದಿನದಲ್ಲಿ ಬಿಳಿ ಬಟ್ಟೆಗಳಿಂದ ಹರಿಯನ್ನೂ ಬ್ರಹ್ಮನನ್ನೂ ಪೂಜಿಸಬೇಕು. ಪುಷ್ಯ ಮಾಸದಲ್ಲಿ ಪುಷ್ಪಾಭಿಷೇಕ

ಚಂದನಗಳನ್ನು ವರ್ಜಿಸಬೇಕು. ಮಕರ ಸಂಕ್ರಮಣದಲ್ಲಿಯೂ ಮಾಘದಲ್ಲಿಯೂ ಸುವಾಸನೆಯುಕ್ತವಾದ ಅನ್ನವನ್ನು ಹರಿಗೆ ನಿವೇದಿಸಿ ಅವನೆದುರಿನಲ್ಲಿ ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು. ಆಗ ಒಬ್ಬನುಂಡರೆ ಕೋಟಿ ಜನರುಂಡಂತೆ. ಕರ್ಮಗಳಲ್ಲಿ ಲೋಪವಿದ್ದರೂ ಸಾಂಗವೆನಿಸುವುದು. ಮಾಘ ಶುದ್ಧ ಪಂಚಮಿ ದಿನದಲ್ಲಿ ಹರಿಗೆ ಅಭಿಷೇಕ ಮಾಡಿ ಮಾವಿನ ಚಿಗುರು ಬುಕ್ಕಿ ಹಿಟ್ಟು ಸುಗಂಧ ದ್ರವ್ಯಗಳಿಂದ ವಿಧಿವತ್ತಾಗಿ ಪೂಜಿಸಬೇಕು. ಬಳಿಕ ಸುಂದರವಾದ ಫಲ ಪುಷ್ಪ ಭರಿತವಾದ ಉದ್ಯಾನದಲ್ಲಿ ಜಯ ಕೃಷ್ಣ ಎನ್ನುತ್ತ ತೊಟ್ಟಿಲು ಪೂಜೆ ಮಾಡಬೇಕು.

ಫಾಲ್ಗುಣ ಮಾಸದ ಚತುರ್ದಶಿ ಎಂಟನೆಯಾಮದಲ್ಲಿ ಅಥವಾ ಹುಣ್ಣಿಮೆ ಪ್ರತಿಪದ ಸಂಧಿ ಕಾಲದಲ್ಲಿ ವಿಧಿವತ್ತಾಗಿ ಬಿಳಿ, ಕೆಂಪು, ಗೌರ, ಹಳದಿ ಬಣ್ಣದ ನಾಲ್ಕು ವಿಧವಾದ ಅಕ್ಕಿಹಿಟ್ಟು ಕರ್ಪೂರ ಅರಿಶಿನ ಮುಂತಾದವುಗಳನ್ನು ಸೇರಿಸಿ ಹರಿಗೆ ಸಮರ್ಪಿಸಿ ಪೂಜಿಸಬೇಕು. ಏಕಾದಶಿಯಿಂದ ಪಂಚಮಿವರೆಗೆ ಅಥವಾ ಐದುದಿನ ಕೊನೆಯ ಪಕ್ಷದಲ್ಲಿ ಮೂರುದಿನ ತೊಟ್ಟಿಲು ಪೂಜೆಯನ್ನು ಮಾಡಬೇಕು. ದಕ್ಷಿಣಾಭಿಮುಖವಾಗಿ ಉಯ್ಯಾಲೆಯಲ್ಲಿ ಕುಳ್ಳಿರಿಸಲ್ಪಟ್ಟ ಕೃಷ್ಣನನ್ನೊಮ್ಮೆ ಕಂಡರೆ ಎಲ್ಲ ಪಾಪವೂ ಪರಿಹಾರವಾಗುವುದು.

ವೈಶಾಖ ಮಾಸದಲ್ಲಿ ಚಿನ್ನ ಬೆಳ್ಳಿ ತಾಮ್ರ ಅಥವಾ ಮಣ್ಣಿನ ಜಲಪಾತ್ರೆಯಲ್ಲಿ ನೀರಿಟ್ಟು ಅದರಲ್ಲಿ ಶಾಲಗ್ರಾಮವನ್ನು ಅಥವಾ ಪ್ರತಿಮೆಯನ್ನಿಟ್ಟು ಪೂಜಿಸಿದರೆ ಅಮಿತವಾದ ಪುಣ್ಯ ಲಭಿಸುವುದು. ವೈಶಾಖ ಶ್ರಾವಣ ಇಲ್ಲವೆ ಭಾದ್ರಪದದಲ್ಲಿ ದವನವನ್ನು ಹರಿಗೆ ಅರ್ಪಿಸಬೇಕು. ವೈಶಾಖ ಶುದ್ಧ ತೃತೀಯೆದಲ್ಲಿ ನೀರಲ್ಲಿಇಲ್ಲವೆ ಮಂಡಲದಲ್ಲಿ ದವನವನ್ನು ಅರ್ಪಿಸಬೇಕು. ಶ್ರೀಗಂಧ, ಅಗರು, ಮಡಿವಾಳ, ಪಚ್ಚಕರ್ಪೂರ, ಕುಂಕುಮ ಕೇಸರಿ, ಗೋರೋಚನ, ಜಟಾ ಮಾಂಸಿ ಮತ್ತು ಮುರಾ ಎಂಬ ಎಂಟು ಬಗೆಯ ಸುಗಂಧ ದ್ರವ್ಯಗಳು ವಿಷ್ಣುವಿಗೆ ಪ್ರಿಯವಾದ ಅಷ್ಟಗಂಧಗಳು. ಇದರಿಂದ ಇಲ್ಲವೆ ಹರಿಚಂದನದಿಂದ ಕೃಷ್ಣನಿಗೆ ಲೇಪನ ಮಾಡಬೇಕು. ತುಳಸೀ ಕಾಷ್ಠವನ್ನು ತೇದು ಪಚ್ಚಕರ್ಪೂರ ಅಗರು ಅಥವಾ ಕೇಸರಿಯೊಡನೆ ಬೆರಸಿದರೆ ಹರಿ ಚಂದನವಾಗುತ್ತದೆ.

ಜಾತ್ರೆಯ ಕಾಲದಲ್ಲಿ ಕೃಷ್ಣನನ್ನು ಭಕ್ತಿಯಿಂದ ನೋಡಿದರೆ ಕೋಟಿಕಲ್ಪಗಳವರೆಗೂ ಪುನರ್ಜನ್ಮವಿರುವುದಿಲ್ಲ. ಸಿಪ್ಪೆ ಕರಟಗಳನ್ನು ತೆಗೆದ ತೆಂಗಿನಕಾಯಿ, ಬಿಚ್ಚಿದ ಹಲಸು, ಮೊಸರನ್ನ ಒಬ್ಬಟ್ಟು ತುಪ್ಪದಲ್ಲಿ ಬೇಯಿಸಿದ ಕರ್ಜಿಕಾಯಿ, ಎಳ್ಳುಂಡೆ, ಚಿಗಳಿ ಮಾಗಿದ ಹಣ್ಣುಗಳು ಇವೆಲ್ಲವನ್ನೂ ಹರಿಗೆ ನಿವೇದಿಸಬೇಕು.

**ಯದ್ಯ ದೇವಾತ್ಮನಃ ಪ್ರೀತಂ ತತ್ತದೀಶಾಯ ದಾಪಯೇತ್**
**ದತ್ವಾ ನೈವೇದ್ಯ ವಸ್ತ್ರಾದಿ ನಾದದೀತ ಕಥಂಚನ ।**
**ತ್ಯಕ್ತಂ ಚ ವಿಷ್ಣು ಮುದ್ದಿಶ್ಯ ತದ್ಭಕ್ತೇಭ್ಯೋ ವಿಶೇಷತಃ ॥**

ತನಗೆ ಪ್ರಿಯವಾದ ವಸ್ತುಗಳನ್ನು ಹರಿಗೆ ನಿವೇದಿಸಬೇಕು. ಆ ನೈವೇದ್ಯವನ್ನು ತಾನು ತೆಗೆಯಬಾರದು. ವಿಷ್ಣು ಪ್ರೀತಿಯ ಉದ್ದೇಶದಿಂದ ವಿಷ್ಣು ಭಕ್ತರಿಗೆ ಅದನ್ನು ದಾನ ಮಾಡಿದರೆ ವಿಶೇಷ.

ಪಾರ್ವತಿ, ಇದೆಲ್ಲವನ್ನೂ ಸಂಕ್ಷೇಪವಾಗಿ ಹೇಳಿದ್ದೇನೆ ಇದು ರಹಸ್ಯ. ಗೋಪ್ಯವಾಗಿಡು.

ಶ್ರೀ ಕೃಷ್ಣನ ರೂಪ ಗುಣಗಳನ್ನು ವರ್ಣಿಸುವ ಶಾಸ್ತ್ರ ಓದುತ್ತಿದ್ದರೆ ಇನ್ನು ಯಾವ ಶಾಸ್ತ್ರವೂ ಬೇಡ. ಅವನ ಪ್ರೇಮ ಭಾವ ರಸದಲ್ಲಿ ಓಲಾಡುತ್ತಿದ್ದರೆ ಇನ್ನು ಯಾವ ಭೋಗವೂ ಬೇಡ. ಅವನು ಸಂಚರಿಸಿ ವಿಹಾರ ಮಾಡಿದ ವೃಂದಾವನದ ಮಣ್ಣಿನ ಧೂಳಿನಿಂದ ಶರೀರವನ್ನು ಲೇಪಿಸಿದರೆ ಅಗುರು ಚಂದನ ಮುಂತಾದವುಗಳ ಲೇಪವೇಕೆ !

*ಇತಿ ಪದ್ಮ ಮಹಾಪುರಾಣ ಭಾಗ-೨ರ ಪಾತಾಳ ಖಂಡದಲ್ಲಿ ಉಮಾ ಮಹೇಶ್ವರ ಸಂವಾದದಲ್ಲಿ ಹರಿನಾಮಸ್ಮರಣೆಯೆಂಬ ಮೂವತ್ತೊಂದನೆ ಅಧ್ಯಾಯ ಮುಗಿದುದು*



## ಕೃಷ್ಣನ ಲೀಲೆ

**ಅಧ್ಯಾಯ - ೩೨**

**ಋಷಿಯ ಉವಾಚ**

**ಋಷಿಗಳು :-** ಸೂತನೆ, ಭಕ್ತರನ್ನು ಸಂಸಾರದಿಂದ ದಾಟಿಸುವ ಶ್ರೀಕೃಷ್ಣ ಚರಿತಾಮೃತವನ್ನು ಬಣ್ಣಿಸುವ ನೀನು ಬಹುಕಾಲ ಬಾಳು. ಈಗ ನೀನು ಕೃಷ್ಣನ ದೈನಂದಿನ ಲೀಲೆಯನ್ನು ಹೇಳು. ಗುರು ಶಿಷ್ಯರ ಮತ್ತು ಮಂತ್ರಗಳ ಲಕ್ಷಣಗಳನ್ನು ತಿಳಿಸು.

**ಸೂತ :-** ಒಮ್ಮೆ ಯಮುನಾ ತೀರದಲ್ಲಿ ಕುಳಿತಿದ್ದ ಜಗದ್ಗುರು ಸದಾಶಿವನನ್ನು ನಾರದಮುನಿ ನಮಸ್ಕರಿಸಿ ಕೇಳಿದ.

**ನಾರದ :-** ದೇವದೇವ, ಭಾಗವತ ಧರ್ಮವನ್ನು ಬಲ್ಲವನು ನೀನು. ಕೃಷ್ಣ ಮಂತ್ರವನ್ನು ತಿಳಿದವರಲ್ಲಿಯೆ ಅಗ್ರಗಣ್ಯ. ನಾನು ನಿನ್ನಿಂದಲೂ ನಮ್ಮ ತಂದೆಯಿಂದಲೂ ಅನೇಕ ಕೃಷ್ಣಮಂತ್ರಗಳನ್ನು ಪಡೆದು ಅನೇಕ ಸಾವಿರ ವರ್ಷಗಳಕಾಲ ನಿರಾಹಾರ ಬ್ರಹ್ಮಚರ್ಯ ಇಂದ್ರಿಯನಿಗ್ರಹ ಮುಂತಾದ ನಿಯಮಗಳಿಂದಿದ್ದೂ ಆತ್ಮಸಂತೋಷವನ್ನು ಪಡೆಯಲಾಗಲಿಲ್ಲ ಅಪ್ರಯತ್ನವಾಗಿ ಒಮ್ಮೆ ಉಚ್ಚರಿಸಿದರೂ ಫಲನೀಡುವ ಮಂತ್ರವಿದ್ದರೆ ಅದನ್ನು ಉಪದೇಶಿಸು.

**ಶಿವ :-** ಲೋಕಹಿತವನ್ನು ಕೋರುವ ನೀನು ಹೀಗೆ ಕೇಳುತ್ತಿರುವುದು ಸರಿಯೆ. ಬಲು ರಹಸ್ಯವಾಗಿದ್ದರೂ ಚಿಂತಾಮಣಿಯಂಥ ಮಂತ್ರವೊಂದನ್ನು ನಿನಗೆ ಹೇಳುವೆನು. ಅದನ್ನು ದೇವಿಪಾರ್ವತಿಗೇ ನಾನು ಉಪದೇಶಿಸಲಿಲ್ಲ. ನಿನ್ನ ಹರಿಯ ಸೋದರರಿಗೂ ಉಪದೇಶಿಸಲಿಲ್ಲ. ಮಂತ್ರಚಿಂತಾಮಣಿ ಎಂದೇ ಅದಕ್ಕೆ ಹೆಸರು. ಯುಗಳವೆಂದೂ ದ್ವಯವೆಂದೂ ಪಂಚಪದಿ ಎಂದೂ ಅದಕ್ಕೆ ಹೆಸರಿದೆ. **ಗೋಪೀ ಜನ ವಲ್ಲಭಯೋಃ ಪಾದಾಃ ಶರಣಂ ಪ್ರಪದ್ಯೇ** ಎಂಬ ಹದಿನಾರು ಅಕ್ಷರದ ಮಂತ್ರವೂ **ನಮೋ ಗೋಪೀಜನ ವಲ್ಲಭಾಭ್ಯಾಂ** ಎಂಬ ಹತ್ತು ಅಕ್ಷರದ ಮಂತ್ರವೂ ಯುಗಳ ಮಂತ್ರವೆನಿಸುತ್ತದೆ.

ಈ ಮಂತ್ರ ಚಿಂತಾಮಣಿಯನ್ನು ಶ್ರದ್ಧೆಯಿಂದಾಗಲಿ ಅಶ್ರದ್ಧೆಯಿಂದಾಗಲಿ ಒಮ್ಮೆಯಾದರೂ ಜಪಿಸಿದರೆ ಕೃಷ್ಣನ ಪ್ರೇಯಸಿಯರ ಸನ್ನಿಧಿಗೆ ಹೋಗಬಹುದು. ಇದಕ್ಕೆ ಪುನಶ್ಚರಣನ್ಯಾಸ ದೇಶಕಾಲ ನಿಯಮ ಅರಿಮಿತ್ರಾದಿಶೋಧನ ಒಂದೂ ಅವಶ್ಯಕವಿಲ್ಲ. ಸ್ತ್ರೀ, ಶೂದ್ರ, ಚಂಡಾಲ, ಜಡ, ಮೂಕ ಮೊದಲಾದವರೂ ಸೇರಿದಂತೆ ಎಲ್ಲರೂ ಈ ಮಂತ್ರವನ್ನು ಜಪಿಸಬಹುದು. ಜ್ಞಾನವೈರಾಗ್ಯ ಶಾಸ್ತ್ರಪಾಂಡಿತ್ಯಗಳೂ ಬೇಕಾಗಿಲ್ಲ.

ಗೋಹತ್ಯೆ ಬ್ರಹ್ಮಹತ್ಯೆಯಂಥ ಪಾಪಮಾಡಿದವರೂ ಇದನ್ನು ಜಪಿಸಬಹುದು. ಆದರೆ ಕೃಷ್ಣನಲ್ಲಿ ಭಕ್ತಿಯೊಂದು ಅವಶ್ಯಬೇಕು. ಅದಿಲ್ಲದಿದ್ದರೆ ಯಾಗ, ದಾನ, ಶಾಸ್ತ್ರಾಭ್ಯಾಸ, ಸತ್ಯನಿಷ್ಠೆ, ಇಂದ್ರಿಯನಿಗ್ರಹ, ವೇದ ವೇದಾಂಗಗಳ ಪಾಂಡಿತ್ಯ, ಬ್ರಹ್ಮಜ್ಞಾನ ತಪಸ್ಸು ವ್ರತ ಮುಂತಾದವುಗಳಿದ್ದೂ ಪ್ರಯೋಜನವಿಲ್ಲ. ಆದ್ದರಿಂದ ಕೃಷ್ಣಭಕ್ತಿಯಿಲ್ಲದ ಕೃತಘ್ನನಾದ ನಾಸ್ತಿಕನಿಗೆ ಈ ಮಂತ್ರವನ್ನು ಹೇಳಕೂಡದು. ಕಾಮ ಕ್ರೋಧ ದಂಭ ಲೋಭಗಳಿಲ್ಲದ ಉತ್ತಮ ಭಕ್ತನಿಗೆ ಪ್ರಯತ್ನಪಟ್ಟು ಈ ಮಂತ್ರವನ್ನು ಉಪದೇಶಿಸಬೇಕು.

ನಾನೇ ಈ ಮಂತ್ರಕ್ಕೆ ಋಷಿ. ಗಾಯತ್ರಿಯೇ ಛಂದಸ್ಸು. ಗೋಪಿಯರ ಪ್ರಿಯನಾದ ಕೃಷ್ಣನೇ ದೇವತೆ. ಗೋಪೀ ಸಮೇತನಾದ ಕೃಷ್ಣನಲ್ಲಿ ದಾಸನಾಗಲು ಈ ಮಂತ್ರವನ್ನು ಜಪಿಸಬೇಕು. ಬೀಜಮಂತ್ರದಿಂದ ಅಂಗನ್ಯಾಸ ಕರನ್ಯಾಸಗಳನ್ನು ಮಾಡಬೇಕು. ಗಂಧ ಪುಷ್ಪ ಅಕ್ಷತ ಮುಂತಾದವುಗಳಿಂದ, ಅವಿಲ್ಲದಿದ್ದರೆ ನೀರಿನಿಂದಲಾಗಲಿ ಅರ್ಚನೆ ಮಾಡಬೇಕು. ನ್ಯಾಸಪೂರ್ವಕವಾಗಿ ವಿಧಿವತ್ತಾಗಿ ಜಪಮಾಡಿದರೆ ಹರಿಯು ಬೇಗನೆ ಒಲಿವನೆಂದು ಕೆಲವರು ನ್ಯಾಸವು ಅವಶ್ಯಕವೆನ್ನುತ್ತಾರೆ. ಒಮ್ಮೆ ಈ ಮಂತ್ರವನ್ನು ಹೇಳಿದರೂ ಕೃತಕೃತ್ಯತೆ ಉಂಟಾಗುತ್ತದೆ. ಆದರೂ ನಿತ್ಯ ಹತ್ತು ಬಾರಿ ಜಪಿಸಬೇಕು.

ಪೀತಾಂಬರಧಾರಿ, ಘನಶ್ಯಾಮ, ದ್ವಿಭುಜ, ವನಮಾಲಿ, ನವಿಲುಗರಿಯಿಂದ ಅಲಂಕೃತನಾದವ, ಕೋಟಿ ಚಂದ್ರರಂತೆ ಹೊಳೆಯುವ ಮೊಗದವ, ಮುದದಿಂದ ತಿರುಗುವ ಕಣ್ಣಿನವ, ಕರ್ಣಿಕಾರ ಹೂವನ್ನು ಮುಡಿದವ, ಹಣೆಗೆ ಚಂದನ ಬಳಿದು ಮಧ್ಯದಲ್ಲಿ ಕುಂಕುಮದ ಬಟ್ಟು ಧರಿಸಿದವ, ಬಾಲರವಿಯಂಥ ಕುಂಡಲಗಳಿಂದ ಶೋಭಿಸುವವ, ಬೆವರ ಹನಿಗಳಿಂದ ಶೋಭಿಸುವ ಕನ್ನಡಿಯಂಥ ಕಪೋಲಗಳುಳ್ಳವ, ಪ್ರಿಯೆಯ ಮೊಗವನ್ನೀಕ್ಷಿಸುತ್ತಿರುವವ, ಉನ್ನತ ಭ್ರೂ, ಉನ್ನತ ನಾಸಿಕೆ, ದಂತಕಾಂತಿಯಿಂದ ಹೊಳೆವ ಬಿಂಬ ಫಲದಂಥ ತುಟಿಗಳುಳ್ಳವ, ಭುಜ ಕೀರ್ತಿ ರತ್ನ ದುಂಗುರಗಳನ್ನು ತೊಟ್ಟ ಕೈಗಳಲ್ಲಿ ಕೊಳಲು ಕಮಲಗಳನ್ನು ಹಿಡಿದಿರುವವ, ಸೊಂಟಕ್ಕೆ ಉಡುದಾರ ಕಾಲಿಗೆ ಗೆಜ್ಜೆ ತೊಟ್ಟಿರುವವ, ರತಿ ಕ್ರೀಡೆಯ ಆನಂದದಲ್ಲಿ ತಲ್ಲೀನನಾಗಿ ನಗುತ್ತ ಪ್ರಿಯೆಯನ್ನು ಆಗಾಗ ನಗಿಸುತ್ತಿರುವವ. ಇಂಥ ಕೃಷ್ಣನು ವೃಂದಾವನದ ಕಲ್ಪವೃಕ್ಷದ ಕೆಳಗೆ ರತ್ನ ಸಿಂಹಾಸನದಲ್ಲಿರುವನೆಂದು ಧ್ಯಾನಿಸಬೇಕು.

ಕೃಷ್ಣನ ಎಡದಲ್ಲಿ ರಾಧೆಯನ್ನೂ ಧ್ಯಾನಿಸಬೇಕು. ನೀಲಿ ಬಣ್ಣದ ಸೀರೆ ಉಟ್ಟ ಪುಟಕ್ಕಿಟ್ಟ ಚಿನ್ನದಂತೆ ಹೊಳೆವ ಮೈಯವಳು. ಸೆರಗಿಂದ ಅರ್ಧ ಮುಚ್ಚಿದ ನಗು ಮೊಗದವಳು. ಪ್ರಿಯಕರನ ಮೊಗವನ್ನು ಚಕೋರಿಯಂತೆ ಚಂಚಲಕಣ್ಣುಗಳಿಂದ ಈಕ್ಷಿಸುತ್ತಿರುವವಳು. ಅವನ ಬಾಯೊಳಗೆ ಹೆಬ್ಬೆಟ್ಟು ತೋರುಬೆರಳುಗಳಿಂದ ತಾಂಬೂಲವಿಡುತ್ತಿರುವವಳು. ಮುತ್ತಿನ ಸರದಿಂದ ಶೋಭಿಸುವ ಸುಂದರವಾದ ಉಬ್ಬಿದೆದೆಯವಳು. ಸಣ್ಣ ನಡು ವಿಶಾಲ ನಿತಂಬಗಳುಳ್ಳವಳು. ರತ್ನದೋಲೆ ತೋಳುಬಳೆ ಉಂಗುರ ಕೈಬಳೆ ಕಡಗ ಕಾಲು ಗೆಜ್ಜೆ ಕಾಲುಂಗುರಗಳನ್ನು ಧರಿಸಿದವಳು. ಲಾವಣ್ಯಮಯವಾದ ಸುಂದರ ಅವಯವಗಳುಳ್ಳವಳು. ಆನಂದ ರಸದಲ್ಲಿ ಮುಳುಗಿದ ಪ್ರಸನ್ನೆಯಾದ ನವ ಯುವತಿ. ಸುತ್ತಲೂ ಅವಳಂತೆಯೆ ವಯಸ್ಸು ರೂಪಗುಣಗಳಿರುವ ಸಖಿಯರು ಚಾಮರ ಬೀಸಣಿಗೆ ಮುಂತಾದವುಗಳನ್ನು ಹಿಡಿದು ಸೇವೆ ಮಾಡುತ್ತಿದ್ದಾರೆ.

ಮಂತ್ರದ ಅರ್ಥವನ್ನೂ ಹೇಳುತ್ತೇನೆ, ಕೇಳು. ಪ್ರಪಂಚದ ಒಳಗೂ ಹೊರಗೂ ತನ್ನ ಅಂಶ ರೂಪಗಳಿಂದ ವ್ಯಾಪಿಸಿ ಪ್ರಪಂಚ ರಕ್ಷಣೆಯ ಕಾರ್ಯವನ್ನು ಮಾಡುವುದರಿಂದ ಗೋಪಿಯೆನಿಸಿದವಳು ಕೃಷ್ಣನ ಪ್ರೇಯಸಿ ರಾಧೆ. ಅವಳು ಕೃಷ್ಣಮಯಿಯೂ ಹೌದು. ಅವಳೆ ಲಕ್ಷ್ಮೀ ಸ್ವರೂಪಳು. ಅವಳ ಕೋಟಿಯ ಕೋಟ್ಯಂಶಗಳು ದುರ್ಗೆ ಮುಂತಾದವರು, ತ್ರಿಗುಣಾತ್ಮಕರು. ಅವಳು ಮಾತ್ರ ಮಹಾಲಕ್ಷ್ಮಿ, ಕೃಷ್ಣನೆ ನಾರಾಯಣ ಅವರು ಎಂದೂ ಬೇರೆಯಾಗಿರುವುದಿಲ್ಲ. ಅವರಿಬ್ಬರನ್ನು ಬಿಟ್ಟು ಪ್ರಪಂಚವಿಲ್ಲ.

**'ಚಿದ ಚಿಲ್ಲಕ್ಷಣಂ ಸರ್ವಂ ರಾಧಾ ಕೃಷ್ಣಮಯಂ ಜಗತ್'**
ಚೇತನ ಅಚೇತನ ಸ್ವರೂಪದ ಎಲ್ಲ ಜಗತ್ತು ರಾಧಾ ಕೃಷ್ಣರಿಂದಲೆ ತುಂಬಿದೆ.

ಮೂಲೋಕದಲ್ಲಿಯೂ ಭೂಲೋಕ ಉತ್ತಮ. ಅದರಲ್ಲಿ ಜಂಬೂದ್ವೀಪ ಉತ್ತಮ, ಅದರಲ್ಲಿಯೂ ಭಾರತವರ್ಷ, ಅದರಲ್ಲಿಯೂ ಮಧುರೆ, ಆ ಮಧುರೆಯಲ್ಲಿಯೂ ವೃಂದಾವನದಲ್ಲಿ ಗೋಪಿಯರು. ಗೋಪಿಯರೊಳಗೆ ರಾಧೆಯ ಸಖಿಯರು. ಅವರಿಗಿಂತ ರಾಧೆ ಶ್ರೇಷ್ಠಳು. ಕೃಷ್ಣನ ಸಾನ್ನಿಧ್ಯ ಹೆಚ್ಚಿದಂತೆಲ್ಲ ವಸ್ತುವಿನ ಶ್ರೇಷ್ಠತೆ ಹೆಚ್ಚುತ್ತದೆ.

ಹೀಗೆ ಗೋಪಿ ಎಂದರೆ ರಾಧೆ-ಗೋಪೀಜನರೆಂದರೆ ರಾಧೆಯ ಸಖಿಯರು. ಅವರ ವಲ್ಲಭರು ಪ್ರಾಣಕಾಂತರೆನಿಸಿದವರು ರಾಧಾ ಕೃಷ್ಣರು. ಅವರ ಪಾದಗಳಿಗೆ ಶರಣು ಎಂದರೆ ಆಶ್ರಯ. ಅವುಗಳನ್ನೆ ನಾನು 'ಪ್ರಪದ್ಯೇ' ಆಶ್ರಯಿಸುತ್ತೇನೆ. ಇದು ಮೊದಲನೆ ಮಂತ್ರ.

ಎರಡನೆ ಮಂತ್ರದಲ್ಲಿ ಗೋಪೀಜನ ವಲ್ಲಭರೆನಿಸಿದ ರಾಧಾ ಕೃಷ್ಣರಿಗೆ ನಮಸ್ಕಾರ ಪೂರ್ವಕವಾಗಿ ತನ್ನನ್ನೂ ತನ್ನ ಸರ್ವಸ್ವವನ್ನೂ ಸಮರ್ಪಿಸುವ ಭಾವವಿದೆ.

ಯುಗಲಾರ್ಥ, ನ್ಯಾಸ, ಪ್ರಪತ್ತಿ, ಶರಣಾಗತಿ, ಆತ್ಮಾರ್ಪಣ ಈ ಐದು ಪದಗಳೂ ಪರ್ಯಾಯ, ಒಂದೆ ಅರ್ಥದ ಬೇರೆ ಬೇರೆ ಪದಗಳು. ಸ್ವಲ್ಪವೂ ಆಲಸ್ಯ ಪಡದೆ ಈ ಮಂತ್ರದ ಅರ್ಥವನ್ನೆ ಹಗಲು ರಾತ್ರಿ ನೆನೆಯುತ್ತಿರಬೇಕು.

*ಇತಿ ಪದ್ಮ ಮಹಾಪುರಾಣ ಭಾಗ-೨ರ ಪಾತಾಳ ಖಂಡದಲ್ಲಿ*
*ವೃಂದಾವನ ಮಾಹಾತ್ಮ್ಯದಲ್ಲಿ ಮೂವತ್ತೆರಡನೆ ಅಧ್ಯಾಯ ಮುಗಿದುದು*

—o—

## ದೀಕ್ಷಾ ವಿಧಿ

ಅಧ್ಯಾಯ - ೩೩

**ಶಿವ ಉವಾಚ**

**ಶಿವ :-** ನಾರದ, ಶ್ರವಣ ಮಾತ್ರದಿಂದಲೆ ಮೋಕ್ಷ ನೀಡಬಲ್ಲ ದೀಕ್ಷಾ ವಿಧಿಯನ್ನು ಈಗ ಹೇಳುತ್ತೇನೆ, ಕೇಳು. ಬ್ರಹ್ಮನಿಂದ ಮೊದಲುಗೊಂಡು ತೃಣ ಪರ್ಯಂತವಾದ ಎಲ್ಲ ಜಗತ್ತು ಅನಿತ್ಯವೆಂದು ತಿಳಿದು ಆಧ್ಯಾತ್ಮಿಕಾದಿ ತಾಪತ್ರಯಗಳನ್ನೀವ ವಿಷಯ ಸುಖ ಪದಾರ್ಥಗಳನ್ನು ದುಃಖಕರವೆಂದೆ ಭಾವಿಸಿ ವೈರಾಗ್ಯ ತಳೆಯಬೇಕು. ಸಂಸಾರವನ್ನು ಕಳೆದುಕೊಳ್ಳಲು ಯತ್ನಿಸಬೇಕು. ಮೋಕ್ಷ ಸುಖವನ್ನು ಪಡೆಯುವುದು ಸುಲಭವಲ್ಲವೆಂದು ತಿಳಿದು ಶ್ರೀ ಗುರುವನ್ನು ಶರಣು ಹೊಂದಬೇಕು.

**ಶಾಂತೋ ವಿಮತ್ಸರಃ ಕೃಷ್ಣೇ ಭಕ್ತೋನನ್ಯ ಪ್ರಯೋಜನಃ**
**ಅನನ್ಯ ಸಾಧನಃ ಶ್ರೀಮಾನ್ ಕ್ರೋಧ ಲೋಭ ವಿವರ್ಜಿತಃ**
**ಶ್ರೀ ಕೃಷ್ಣ ರಸತತ್ವಜ್ಞಃ ಕೃಷ್ಣಮಂತ್ರವಿದಾಂವರಃ**
**ಕೃಷ್ಣ ಮಂತ್ರಾಶ್ರಯೋ ನಿತ್ಯಂ ಮಂತ್ರಭಕ್ತಃ ಸದಾಶುಚಿಃ**
**ಸದ್ಧರ್ಮಶಾಸಕೋ ನಿತ್ಯಂ ಸದಾಚಾರ ನಿಯೋಜಕಃ**
**ಸಂಪ್ರದಾಯಿೊ ಕೃಪಾಪೂರ್ಣೋ ವಿರಾಗೀ ಗುರುರುಚ್ಯತೇ**

ಶಾಂತನಾಗಿದ್ದು ಮಾತ್ಸರ್ಯವಿಲ್ಲದವನು, ಕೃಷ್ಣಭಕ್ತನಾಗಿದ್ದು ಕೃಷ್ಣಭಕ್ತಿಯನ್ನೆ ಪರಮಪ್ರಯೋಜನವೆಂದೂ ಅತ್ಯುತ್ತಮ ಸಾಧನವೆಂದೂ ತಿಳಿದವನು, ಕಾಂತಿಮಂತನಾದವನು. ಕ್ರೋಧ ಲೋಭಗಳನ್ನು ತೊರೆದವನು ಶ್ರೀಕೃಷ್ಣನೆಂಬ ರಸದ ಮಹತ್ವವನ್ನು ಸರಿಯಾಗಿ ಬಲ್ಲವನು, ಕೃಷ್ಣಮಂತ್ರಗಳನ್ನು ಚೆನ್ನಾಗಿ ತಿಳಿದು ನಿತ್ಯ ಜಪಿಸುವವನು, ಸದಾ ಶುಚಿಯಾಗಿದ್ದು ಮಂತ್ರದಲ್ಲಿ ಭಕ್ತಿ ಉಳ್ಳವನು, ಸದ್ಧರ್ಮವನ್ನು ಉಪದೇಶಿಸಿ ಸದಾಚಾರದಲ್ಲಿ ಶಿಷ್ಯರನ್ನು ನಡೆಸಬಲ್ಲವನು, ಸಂಪ್ರದಾಯವನ್ನರಿತವನು ದಯಾಮಯನೂ ವಿರಾಗಿಯೂ ಆದವನು ಗುರುವೆನಿಸುವನು.

ಸಾಧಾರಣವಾಗಿ ಗುರುವಿನಲ್ಲಿರುವ ಎಲ್ಲ ಗುಣಗಳೂ ಶಿಷ್ಯನಲ್ಲಿಯೂ ಇರಬೇಕು. ಭಕ್ತಿಯಿಂದ ಗುರುವಿನ ಪಾದಸೇವೆ ಮಾಡುವವನಾಗಿರಬೇಕು. ಮೋಕ್ಷವನ್ನು ಬಯಸಬೇಕು. ಸಾಕ್ಷಾತ್ ವೇದ ವೇದಾಂತಗಳನ್ನರಿತ ಜ್ಞಾನಿಗಳು ಹೇಳುತ್ತಾರೆ.

ಶಿಷ್ಯನು ಗುರುವಿನ ಪಾದಗಳನ್ನಾಶ್ರಯಿಸಿ ತನ್ನ ಸ್ಥಿತಿಯನ್ನು ನಿವೇದಿಸಿಕೊಳ್ಳಬೇಕು. ಗುರು ಅವನಿಗೆ ಉಪದೇಶನೀಡಿ ಸಂದೇಹಗಳನ್ನೆಲ್ಲ ಕಳೆಯಬೇಕು. ಮೊದಲಿಗೆ ಅವನ ಎರಡು ತೋಳುಗಳಲ್ಲಿ ಚಂದನ ಅಥವಾ ಮಣ್ಣಿನಿಂದ ಶಂಖ ಚಕ್ರಗಳನ್ನು ಬರೆಯಬೇಕು. ಹಣೆ ಮುಂತಾದ ಅವಯವಗಳಲ್ಲಿ ಊರ್ಧ್ವಪುಂಡ್ರಗಳನ್ನಿಡಬೇಕು. ಬಳಿಕ ಬಲಗಿವಿಯಲ್ಲಿ ಹಿಂದೆ ಹೇಳಿದ ಎರಡು ಮಂತ್ರಗಳನ್ನು ಉಸುರಬೇಕು. ಮಂತ್ರಾರ್ಥವನ್ನೂ ಹೇಳಬೇಕು. 'ದಾಸ' ಎಂಬ ಶಬ್ದದಿಂದ ಕೂಡಿದ ಹೆಸರನ್ನು ಇಟ್ಟು ನಾಮಕರಣ ಮಾಡಬೇಕು. ಬಳಿಕ ಶಿಷ್ಯನು ಭಕ್ತಿ ಸ್ನೇಹಗಳಿಂದ ವಿಷ್ಣುಭಕ್ತರಿಗೆ ಅನ್ನದಾನ ಮಾಡಬೇಕು. ಗುರುವಿಗೂ ವಸ್ತ್ರಾಲಂಕಾರ ಮುಂತಾದವುಗಳನ್ನಿತ್ತು ಪೂಜಿಸಬೇಕು. ತನ್ನ ಸರ್ವಸ್ವವನ್ನೋ ಅಥವಾ ಅದರ ಅರ್ಧದಷ್ಟನ್ನೋ ಅವನಿಗರ್ಪಿಸಿ ತನ್ನ ಶರೀರವನ್ನೂ ಅವನ ವಶಕ್ಕೊಪ್ಪಿಸಬೇಕು.

ಹೀಗೆ ಶಂಖ ಚಕ್ರಾದಿಗಳನ್ನು ಧರಿಸಿಕೊಳ್ಳುವುದು. ಛಿದ್ರ ಸಹಿತವಾಗಿ ಊರ್ಧ್ವಪುಂಡ್ರವನ್ನು ಹಚ್ಚಿಕೊಳ್ಳುವುದು. ಮಂತ್ರ ಚಿಂತಾಮಣಿಯ ಉಪದೇಶ ಪಡೆಯುವುದು, ದಾಸ ಶಬ್ದಯುಕ್ತವಾದ ಹೆಸರಿಟ್ಟುಕೊಳ್ಳುವುದು. ಮತ್ತು ಗುರು ಹಾಗೂ ವೈಷ್ಣವರನ್ನು ಪೂಜಿಸುವುದು ಈ ಐದು ಬಗೆಯ ಸಂಸ್ಕಾರಗಳಿದ್ದರೆ ಕೃಷ್ಣನ ದಾಸ್ಯಕ್ಕೆ ಅರ್ಹತೆ ಉಂಟಾಗುತ್ತದೆ.

ಈ ಪಂಚ ಸಂಸ್ಕಾರಗಳಿಂದ ಕೃಷ್ಣನ ದಾಸನೆನಿಸಿದವನು ಗುರುವನ್ನೂ ವೈಷ್ಣವರನ್ನೂ ನಿತ್ಯ ಸೇವಿಸಬೇಕು.

**ತಾಡನಂ ಭರ್ತ್ಸನಂ ಕಾಮಿೊ ಭೋಗ್ಯತ್ವೇನ ಯಥಾ ಸ್ತ್ರಿಯಾಃ ।**
**ಗೃಹ್ಣಾತಿ ವೈಷ್ಣವಾನಾಂ ಚ ತತ್ತದ್ಗ್ರಾಹಂ ತಥಾ ಬುಧೈಃ ॥**

ಹೆಣ್ಣು ತನಗೆ ಎಷ್ಟು ಹೊಡೆದರೂ ಬೈದರೂ ಅವೆಲ್ಲವೂ ಸುಖ ಭೋಗದ ಇನ್ನೊಂದು ರೂಪವೆಂದೆ ಸ್ತ್ರೀಲಂಪಟನು ತಿಳಿಯುವಂತೆ ವೈಷ್ಣವರು ಏನೂ ಮಾಡಿದರೂ ಅದೆಲ್ಲವೂ ಸುಖವೆಂದೆ ವಿವೇಕಿಯು ತಿಳಿಯಬೇಕು.

ಐಹಿಕ ಸುಖವು ಪೂರ್ವ ಕರ್ಮದಿಂದಲೆ ಲಭಿಸುವುದು; ಪಾರತ್ರಿಕವನ್ನು ಕೃಷ್ಣನೆ ಸ್ವಯಂ ನೀಡುವನೆಂದು ಬಗೆದು ಆ ಎರಡು ಬಗೆಯ ಸುಖಕ್ಕೂ ಪ್ರಯತ್ನ ಮಾಡದಿರಬೇಕು.

ಬಹು ಕಾಲದಿಂದ ಪತಿಯು ಪರದೇಶದಲ್ಲಿ ವಾಸಮಾಡಿದರೆ ಪತಿಪರಾಯಣೆಯಾದ ಸತಿಯು ಸದಾ ಅವನಿಗಾಗಿ ಹಂಬಲಿಸಿ ಅವನನ್ನೆ ಧ್ಯಾನಿಸುತ್ತಿರುವಂತೆ ಭಕ್ತನು ಕೃಷ್ಣನ ಬಳಿ ಸೇರುವ ಕಾತರತೆಯಿಂದ ಅವನನ್ನೆ ಧ್ಯಾನಿಸುತ್ತಿರಬೇಕು. ಬಹುಕಾಲ ಕಳೆದ ಮೇಲೆ ಪತಿಯು ಪರದೇಶದಿಂದ ಹಿಂತಿರುಗಿ ಬಂದಾಗ ಸತಿಯು ಅವನನ್ನು ಆಲಿಂಗಿಸಿ ಚುಂಬಿಸಿ ಕಣ್ತುಂಬ ನೋಡಿ ಆನಂದಿಸುವಂತೆ ಪ್ರತಿಮೆಯಲ್ಲಿ ಅವತರಿಸುವ ಕೃಷ್ಣನನ್ನು ಕಂಡೊಡನೆ ಭಕ್ತನು ಸೇವೆ ಮಾಡಿ ಆನಂದಿಸಬೇಕು. ಕೃಷ್ಣನನ್ನು ಹೊರತು ಇನ್ನಾವ ದೇವರನ್ನೂ ಪೂಜಿಸಕೂಡದು. ಸ್ಮರಿಸಲೂ ಕೂಡದು. ಅವರ ನೈವೇದ್ಯವನ್ನೂ ನಿರ್ಮಾಲ್ಯವನ್ನೂ ಸೇವಿಸಕೂಡದು ಅವೈಷ್ಣವರೊಡನೆ ಸಂಭಾಷಣೆಯನ್ನು ಮಾಡಕೂಡದು. ವಿಷ್ಣು ವೈಷ್ಣವರ ನಿಂದೆಯನ್ನು ಕೇಳಿಸಿಕೊಳ್ಳಕೂಡದು. ಕಿವಿ ಮುಚ್ಚಿಕೊಂಡು ಅಲ್ಲಿಂದ ದೂರ ಹೋಗಬೇಕು. ಶಕ್ತಿಯಿದ್ದರೆ ಪ್ರತೀಕಾರ ಮಾಡಬೇಕು.

ಮಂತ್ರಚಿಂತಾಮಣಿಯ ಅರ್ಥವನ್ನೇ ಧ್ಯಾನಿಸುತ್ತ ಜಾತಕ ಪಕ್ಷಿಯಂತೆ ಜೀವನ ನಡೆಸಬೇಕು. ಆ ಪಕ್ಷಿಯು ಕೆರೆ ನದಿ ಸಮುದ್ರ ಮುಂತಾದವುಗಳ ನೀರನ್ನೆಂದೂ ಬಯಸದು. ಪ್ರಾಣಹೋಗುತ್ತಿದ್ದರೂ ಮಳೆ ನೀರಿಗೇ ಬಾಯ್ತೆರೆದು ಕುಳಿತುಕೊಳ್ಳುವುದು. ಭಕ್ತನೂ ಇನ್ನೊಬ್ಬರನ್ನೂ ಯೋಚಿಸದೆ ಎಂಥ ಕಠಿನ ಪರಿಸ್ಥಿಯಲ್ಲಿಯೂ ಕೃಷ್ಣನನ್ನೆ ಮೊರೆಯಿಡಬೇಕು.

**ತವಾಸ್ಮಿ ರಾಧಿಕಾ ಕಾಂತ ಕರ್ಮಣಾ ಮನಸಾ ಗಿರಾ**
**ಕೃಷ್ಣಕಾಂತೇ ತವೈವಾಸ್ಮಿ ಯುವಾಮೇವ ಗತಿರ್ಮಮ**

ರಾಧಾರಮಣ, ನಾನು ಮನೋವಾಕ್ ಕಾಯಗಳಿಂದಲೂ ನನ್ನನ್ನು ನಿನಗೆ ಅರ್ಪಿಸಿದ್ದೇನೆ. ನೀನೆ ನನಗೆ ಗತಿ.

ಹೀಗೆ ನಿತ್ಯ ಹೇಳಿಕೊಳ್ಳುತ್ತಿರಬೇಕು. ಇದು ಹರಿದಾಸರ ಬಾಹ್ಯ ಧರ್ಮ. ಸಂಕ್ಷೇಪದಿಂದ ಹೇಳಿದ್ದೇನೆ. ಅಂತರ ಧರ್ಮವನ್ನೂ ಹೇಳುತ್ತೇನೆ ಕೇಳು. ತಾನು ರಾಧೆಯ ಸಖಿಯೆಂದು ಭಾವಿಸಿಕೊಂಡು ಹಗಲು ರಾತ್ರಿ ರಾಧಾ ಕೃಷ್ಣರ ಸೇವೆ ಮಾಡುವುದು ಅತ್ಯುತ್ತಮವಾದ ಅಂತರ ಧರ್ಮ, ಪರಮ ರಹಸ್ಯವಾದುದು. ಯಾರಿಗೂ ಹೇಳಬೇಡ. ನಾರದ, ನೀನೂ ಹೀಗೆ ಅನುಷ್ಠಾನ ಮಾಡು. ರಾಧಾಕೃಷ್ಣರ ದಾಸ್ಯ ನಿನಗೂ ದೊರೆಯುವುದು.

**ಸಕೃನ್ಮಾತ್ರ ಪ್ರಪನ್ನಾಯ ತವಾಸ್ಮೀತ್ಯಭಿಯಾಚತೇ**
**ನಿಜ ದಾಸ್ಯಂ ಹರಿರ್ದದ್ಯಾನ್ನ ಮೇಽತ್ರಾಸ್ತಿ ವಿಚಾರಣಾ**

ಒಮ್ಮೆಯಾದರೂ ಮೊರೆ ಹೊಕ್ಕು ನಾನು ನಿನ್ನ ದಾಸನೆಂದು ಬೇಡುವ ಭಕ್ತನಿಗೆ ಹರಿಯು ತನ್ನ ದಾಸ್ಯವನ್ನು ಕೊಟ್ಟೇಕೊಡುವನು. ನನಗೆ ಇದರಲ್ಲಿ ಏನೂ ಸಂದೇಹವಿಲ್ಲ.

ಹಿಂದೊಮ್ಮೆ ನಾನು ಮಂತ್ರ ಚಿಂತಾಮಣಿಯನ್ನು ಜಪಿಸುತ್ತ ಕೈಲಾಸ ಶಿಖರದಲ್ಲಿ ಕುಳಿತು ನಾರಾಯಣನನ್ನು ಧ್ಯಾನಿಸುತ್ತಿದ್ದಾಗ ಅವನೊಲಿದು ಮೈದೋರಿದ. ಬೇಕಾದ ವರವನ್ನು ಕೇಳು ಎಂದ. ನಾನು ಕಣ್ಣು ತೆರೆದು ಪ್ರಿಯೆಯೊಡನೆ ಗರುಡನ ಮೇಲೆ ಕುಳಿತಿದ್ದ ಶ್ರೀಪತಿಯನ್ನು ಕಂಡು ನಮಿಸಿದೆ. 'ದಯಾ ಸಮುದ್ರನೆ, ನಾನು ನಿನ್ನ ನಿರ್ಗುಣ ನಿಷ್ಕ್ರಿಯ ಸರ್ವೋತ್ತಮ ಬ್ರಹ್ಮ ರೂಪವನ್ನು ಕಾಣಬೇಕು' ಎಂದು ಬೇಡಿಕೊಂಡೆ 'ನೀನು ಬಯಸಿದ ಆ ರೂಪವನ್ನು ಕಾಣು. ಯಮುನೆಯ ಪಶ್ಚಿಮ ತೀರದಲ್ಲಿ ವೃಂದಾವನವಿದೆ. ಅಲ್ಲಿಗೆ ಹೋಗು' ಎಂದು ಹೇಳಿ ಹರಿ ಅಂತರ್ಧಾನ ಹೊಂದಿದನು.

ನಾನು ಬಳಿಕ ಯಮುನೆಯ ಪಶ್ಚಿಮ ತೀರಕ್ಕೆ ಹೋಗಿ ಅಲ್ಲಿ ಸರ್ವದೇವೋತ್ತಮನಾದ ಕೃಷ್ಣನನ್ನು ಕಂಡೆ. ಕಿಶೋರ ವಯಸ್ಸಿನ ಗೋಪಾಲಕನ ವೇಷದಲ್ಲಿದ್ದು ಪ್ರಿಯೆಯ ಹೆಗಲ ಮೇಲೆ ಎಡ ತೋಳನ್ನು ಹಾಕಿ ನಗುತ್ತ ಅವಳನ್ನು ನಗಿಸುತ್ತಿದ್ದ. ಸುತ್ತಲೂ ಗೋಪಿಯರಿದ್ದರು. ಕಲ್ಯಾಣ ಗುಣಕಾರನಾದ ಆ ಮೇಘಶ್ಯಾಮನನ್ನು ಸೇವಿಸುತ್ತಿದ್ದರು. ಅವನು ನಕ್ಕು ಅಮೃತದಂತೆ ಸವಿಯಾದ ಈ ಮಾತನ್ನಾಡಿದ. ನೀನು ಬಯಸಿದಂತೆ ನಿನಗೀ ರೂಪವನ್ನು ತೋರಿದ್ದೇನೆ. ಇದು ಅಲೌಕಿಕವಾದ ನಿರ್ಮಲ ಪ್ರೇಮ ಸಚ್ಚಿದಾನಂದಮಯವಾದ ನಿರ್ಗುಣ ನಿರಾಕಾರವೆಂದು ಉಪನಿಷತ್ತುಗಳು ಕೊಂಡಾಡುವ ಪರಾತ್ಪರ ರೂಪ.

ಪ್ರಾಕೃತಗುಣಗಳಿಲ್ಲದಿರುವುದರಿಂದ ಅಪ್ರಾಕೃತಗುಣಗಳು ಅನಂತವಾಗಿದ್ದು ತಿಳಿಯಲು ಅವಶ್ಯಕವಾದುದರಿಂದ ನನ್ನನ್ನು ನಿರ್ಗುಣನೆಂದು ಕರೆಯುತ್ತಾರೆ. ನನ್ನ ಈ ರೂಪವನ್ನು ಚರ್ಮಚಕ್ಷುಸ್ಸಿನಿಂದ ನೋಡಲು ಅಶಕ್ಯವಾದುದರಿಂದ ಅರೂಪನೆನ್ನುತ್ತಾರೆ. ವ್ಯಾಪಕನಾದುದರಿಂದ ಬ್ರಹ್ಮನೆನ್ನುತ್ತಾರೆ. ಪ್ರಕೃತಿಯ ಗುಣಗಳಿಂದ ಆ ಪ್ರಪಂಚವನ್ನು ನಿರ್ಮಿಸುವೆನೆ ಹೊರತು ನಾನೆ ಪರಿಣಾಮ ಹೊಂದುವುದಿಲ್ಲವಾದುದರಿಂದ ನಿಷ್ಕ್ರಿಯ ನೆನ್ನುತ್ತಾರೆ. ಈ ಗೋಪಿಯರ ಮತ್ತು ಈ ರಾಧೆಯ ಪ್ರೇಮಕ್ಕೆ ವಶನಾಗಿ ನಿತ್ಯವೂ ವಿಹರಿಸುತ್ತ ಎಲ್ಲ ಕಾರ್ಯವನ್ನೂ ಏಕೆ, ನನ್ನನ್ನೆ ಮರೆಯುತ್ತೇನೆ. ಆದ್ದರಿಂದಲೂ ನಿಷ್ಕ್ರಿಯನೆನ್ನುತ್ತಾರೆ. ಈ ರಾಧೆಯು ಇವಳ ಈ ಸಖಿಯರೂ ನನ್ನಂತೆ ಚಿದಾನಂದಮಯರಾಗಿದ್ದು ನಿತ್ಯರಾಗಿದ್ದಾರೆ. ಈ ವೃಂದಾವನ, ಇಲ್ಲಿರುವ ಗೋಪಾಲಕರು, ಗೋವುಗಳು ಎಲ್ಲವೂ ಚಿದಾನಂದಮಯ, ನಿತ್ಯ ಇಲ್ಲಿಗೆ ಬಂದವರಿಗೆ ತಿರುಗಿ ಸಂಸಾರವಿರುವುದಿಲ್ಲ. ನಾನು ಈ ಲೋಕವನ್ನು ಬಿಟ್ಟು ಎಲ್ಲಿಗೂ ಹೋಗುವುದಿಲ್ಲ. ರಾಧೆಯೊಂದಿಗೆ ನಾನು ಸದಾ ಇಲ್ಲಿ ವಾಸ ಮಾಡುತ್ತೇನೆ. ಇನ್ನೇನು ತಿಳಿಯಬಯಸುವೆ ಹೇಳು.

'ನಿನ್ನನ್ನು ಹೊಂದುವ ಉಪಾಯವೇನು ಹೇಳು' ಎಂದೆ ನಾನು.

ಕೃಷ್ಣನೆಂದ, 'ಇದೊಂದು ರಹಸ್ಯ. ನಮ್ಮನ್ನು ಮೊರೆಹೊಕ್ಕು ಗೋಪೀಭಾವದಿಂದ ಉಪಾಸನೆ ಮಾಡುವವನು ನನ್ನನ್ನು ಹೊಂದುತ್ತಾನೆ. ನನ್ನನ್ನು ಮಾತ್ರ ಶರಣುಹೊಂದಿ ನನ್ನ ಪ್ರಿಯೆಯನ್ನು ಕಡೆಗಣಿಸಿದರೆ ನನ್ನನ್ನು ಹೊಂದಲು ಸಾಧ್ಯವಿಲ್ಲ.

**ಸಕೃದೇವ ಪ್ರಪನ್ನೋ ಯಸ್ತವಾಸ್ಮೀತಿ ವದೇದಪಿ ।**
**ಸಾಧನೇನ ವಿನಾಪ್ಯೇವ ಮಾಮಾಪ್ನೋತಿ ನ ಸಂಶಯಃ ॥**

ಒಂದುಬಾರಿ ಶರಣುಹೊಂದಿ ನಾನು ನಿನ್ನವನೆಂದು ಹೇಳಿದರೂ ಸಾಕು ಅವನು ಯಾಗಯಜ್ಞ ಮುಂತಾದ ಅನುಷ್ಠಾನಗಳಿಲ್ಲದೆಯೂ ನನ್ನನ್ನು ಹೊಂದುತ್ತಾನೆ ಸಂಶಯವಿಲ್ಲ.

ಶಿವನೆ, ನೀನೂ ನನ್ನ ಪ್ರೇಯಸಿಯಾದ ಈ ರಾಧೆಯನ್ನಾಶ್ರಯಿಸಿಕೊಂಡು ನನ್ನ ಮಂತ್ರಚಿಂತಾಮಣಿಯನ್ನು ಜಪಿಸುತ್ತ ವೃಂದಾವನದಲ್ಲಿರು. ಹೀಗೆ ಹೇಳಿ ನನ್ನ ಬಲಗಿವಿಯಲ್ಲಿ ಮಂತ್ರವನ್ನು ಉಪದೇಶಿಸಿ ದೀಕ್ಷೆ ಕೊಟ್ಟು ನಾನು ನೋಡುತ್ತಿದ್ದಂತೆಯೆ ಅಂತರ್ಧಾನ ಹೊಂದಿದನು. ಅಂದಿನಿಂದ ನಾನಿಲ್ಲಿಯೆ ಇದ್ದೇನೆ.

*ಇತಿ ಪದ್ಮ ಮಹಾಪುರಾಣ ಭಾಗ-೨ರ ಪಾತಾಳ ಖಂಡದಲ್ಲಿ*
*ವೃಂದಾವನ ಮಾಹಾತ್ಮ್ಯದಲ್ಲಿ ಮೂವತ್ತಮೂರನೆ ಅಧ್ಯಾಯ ಮುಗಿದುದು*



## ಹರಿಯ ನಿತ್ಯದ ಲೀಲೆ

**ಅಧ್ಯಾಯ - ೩೪**

**ನಾರದ ಉವಾಚ**

**ನಾರದ :-**ಗುರುವೆ, ಕೃಷ್ಣನನ್ನು ಹೊಂದುವ ಉತ್ತಮ ಮಾರ್ಗವನ್ನು ಇನ್ನೂ ಬಣ್ಣಿಸು.

**ಸದಾಶಿವ :-** ಮುನಿಯೆ, ಕೇಳು. ಹೇಳುತ್ತೇನೆ. ಹರಿಯ ಸೇವಕರು, ಮಿತ್ರರು ತಂದೆ ತಾಯಿಗಳು ಪ್ರೇಯಸಿಯರು ಎಲ್ಲರೂ ನಿತ್ಯರೆ. ಅವನಂತೆಯೇ ಗುಣಶಾಲಿಗಳು. ಲೋಕವು ಕಂಡಿದ್ದ ಹರಿ ಲೀಲೆಗಳಲ್ಲಿ ಯಾರಾರನ್ನು ಯಾವ ಯಾವ ವಸ್ತುಗಳನ್ನು ಪುರಾಣಗಳು ವರ್ಣಿಸಿವೆಯೋ ಅವೆಲ್ಲವೂ ವೃಂದಾವನದಲ್ಲಿ ನಡೆಯುವ ನಿತ್ಯ ಲೀಲೆಯಲ್ಲಿಯೂ ಇವೆ. ಕೃಷ್ಣನು ಕಾಡಿಗೂ, ಹಸುಗಳ ಕೊಟ್ಟಿಗೆಗೂ ಬಂದು ಹೋಗುವುದು. ಮಿತ್ರರೊಡನೆ ಹಸುಗಳನ್ನು ಮೇಯಿಸುವುದು ಎಲ್ಲವೂ ಇದೆ. ಆದರೆ ಅಸುರರನ್ನು ಕೊಲ್ಲುವ ಕಾರ್ಯ ಮಾತ್ರ ಇರುವುದಿಲ್ಲ. ಗೋಪಿಯರು ತಾವು ಪರಸ್ತ್ರೀಯರೆಂಬ ಭಾವನೆಯಿಂದ ಕೃಷ್ಣನ್ನು ಗುಟ್ಟಾಗಿ ಸೇರಿ ರಮಿಸುವರು.

ಸಾಧಕನು ತನ್ನನ್ನು ಅವರಲ್ಲೊಬ್ಬಳೆಂದೂ ರೂಪ ಯೌವನ ಸಂಪನ್ನೆಯಾದ ಕಿಶೋರಿ ಎಂದೂ ಬಗೆದು ರಾಧೆಯನ್ನು ಸೇವಿಸಬೇಕು. ಕೃಷ್ಣನಿಗಿಂತ ಹೆಚ್ಚಿನ ಪ್ರೀತಿಯನ್ನು ಅವಳಲ್ಲಿಡಬೇಕು. ಕೃಷ್ಣನು ವಿಹಾರಕ್ಕೆ ಕರೆದರೂ ಒಲ್ಲದೆ ರಾಧಾ ಕೃಷ್ಣರೊಂದಾಗುವುದನ್ನೇ ಬಯಸಬೇಕು. ಅವರ ವಿಹಾರವನ್ನು ಕಂಡು ಆನಂದಿಸಬೇಕು. ಅವರ ಸೇವೆಯಲ್ಲಿಯೆ ತನ್ನ ಸುಖವನ್ನು ಕಾಣಬೇಕು. ಇಂಥ ಸಖೀ ವೃತ್ತಿಯವನು ತಾನೆಂದು ಧ್ಯಾನ ಮಾಡಬೇಕು. ಬ್ರಾಹ್ಮ ಮುಹೂರ್ತವನ್ನಾರಂಭಿಸಿ ಮಧ್ಯ ರಾತ್ರಿಯವರೆಗೂ ಹೀಗೆಯೆ ಪ್ರತಿ ದಿನ ಧ್ಯಾನಿಸಬೇಕು.

**ನಾರದ :-** ಹರಿಯ ದಿನ ನಿತ್ಯದ ಲೀಲೆ ಏನಿರುವುದೆಂದು ಹೇಳು.

**ಸದಾಶಿವ :-** ನಾರದ, ಇದನ್ನು ನಾನು ಸರಿಯಾಗಿ ತಿಳಿದಿಲ್ಲ. ನೀನು ವೃಂದಾದೇವಿಯನ್ನೆ ಕೇಳು ಹೋಗು. ಅವಳು ಎಲ್ಲವನ್ನೂ ಹೇಳುತ್ತಾಳೆ. ಇಲ್ಲಿಯೆ ಸಮೀಪದಲ್ಲಿ ಕೇಶಿ ತೀರ್ಥದ ಬಳಿ ಅವಳು ಸಖಿಯರೊಡನೆ ಗೋವಿಂದನ ಪರಿಚರ್ಯೆ ಮಾಡುತ್ತಿದ್ದಾಳೆ.

**ಸೂತ :-** ನಾರದ ಮುನಿ ಆನಂದದಿಂದ ಶಿವನನ್ನು ಬಲವಂದು ನಮಿಸಿ ವೃಂದಾಶ್ರಮಕ್ಕೆ ತೆರಳಿದ. ವೃಂದೆಯು ಮುನಿಯನ್ನು ನಮಿಸಿ ಅವನಾಗಮನದ ಕಾರಣವನ್ನು ಕೇಳಿದಳು. 'ಹರಿಯ ದಿನಚರಿ ಏನೆಂದು ತಿಳಿಯ ಬಯಸಿದ್ದೇನೆ. ನಾನು ಕೇಳಬಹುದಾದರೆ ಹೇಳು.' ಎಂದನು. ಮುನಿ ವೃಂದೆ ಹೇಳ ತೊಡಗಿದಳು.

**ವೃಂದೆ :-** ಇದು ರಹಸ್ಯವೇ ಆಗಿದ್ದರೂ ಕೃಷ್ಣ ಭಕ್ತನಾದ ನಿನಗೆ ಹೇಳುತ್ತೇನೆ. ನೀನು ಯಾರಿಗೂ ಹೇಳ ಬೇಡ. ಈ ವೃಂದಾವನದ ಐವತ್ತು ಕುಂಜಗಳ ನಡುವೆ ಕಲ್ಪವೃಕ್ಷದ ಪೊದರಿನಲ್ಲಿ ದಿವ್ಯ ರತ್ನಮಯವಾದ ಮಂದಿರದೊಳಗೆ ಹಾಸಿಗೆಯ ಮೇಲೆ ಬಿಗಿಯಾದ ಆಲಿಂಗನದಲ್ಲಿ ರಾಧಾ ಕೃಷ್ಣರು ನಿದ್ರಿಸುತ್ತಾರೆ. ನನ್ನಾಜ್ಞೆಯಂತೆ ಹಕ್ಕಿಗಳು ಕೂಗಿ ಅವರನ್ನೆಬ್ಬಿಸಿದರೂ ಗಾಢಾಲಿಂಗನದ ಆನಂದದಲ್ಲಿ ಮುಳುಗಿದ ಅವರು ಅದನ್ನು ಬಿಟ್ಟು ಏಳಲಾರರು. ಆಗ ಸಾರಿಕೆಗಳೂ ಗಿಳಿಗಳೂ ನಾನಾ ಬಗೆಯ ಮಾತುಗಳಿಂದ ಅವರನ್ನೆಬ್ಬಿಸುವುವು. ಅವರೆದ್ದು ಕುಳಿತು ಸಖಿಯರ ಸೇವೆಯನ್ನು ಸ್ವೀಕರಿಸಿ ತಮ್ಮ ತಮ್ಮ ಮನೆಗಳಿಗೆ ಹೊರಟು ಹೋಗುತ್ತಾರೆ. ಅವರಿಗೆ ಒಂದೆಡೆ ತಂದೆ ತಾಯಿಗಳ ಭೀತಿ. ಇನ್ನೊಂದೆಡೆ ಪರಸ್ಪರ ಅಗಲಿಕೆಯಿಂದಾಗುವ ಉತ್ಕಂಠೆ. ಮನೆಯಲ್ಲಿ ಮಲಗಿದ ಕೃಷ್ಣನನ್ನು ಬೆಳಗ್ಗೆ ತಾಯಿ ಎಬ್ಬಿಸುವಳು. ಅವನು ಎದ್ದು ಹಲ್ಲುಜ್ಜಿ ತಾಯಿಯ ಅನುಮತಿ ಪಡೆದು ಬಲರಾಮನೊಡನೆ ಗೋಶಾಲೆಗೆ ಹೋಗುವನು.

ಇತ್ತ ರಾಧೆಯೂ ಮನೆಯಲ್ಲಿ ಮಲಗಿರುತ್ತಾಳೆ. ಸಖಿಯರು ಅವಳನ್ನೆಬ್ಬಿಸುತ್ತಾರೆ. ಅವಳು ಎದ್ದು ಹಲ್ಲುಜ್ಜಿ ಮೈಗೆಣ್ಣೆ ಹಚ್ಚಿಕೊಂಡು ಸ್ನಾನಕ್ಕೆ ಹೋಗುತ್ತಾಳೆ. ಸಖಿಯರು ಸ್ನಾನ ಮಾಡಿಸುತ್ತಾರೆ. ಒಡವೆಗಳನ್ನು ತೊಡಿಸುತ್ತಾರೆ. ಬಳಿಕ ರಾಧೆ ತನ್ನ ಸಖಿಯರ ಮೂಲಕ ಯಶೋದೆಯ ಬಳಿಯಲ್ಲಿ ಅವರ ಮನೆಯ ಅಡಿಗೆಯನ್ನು ತಾನು ಮಾಡಲು ಅನುಮತಿ ಕೇಳುತ್ತಾಳೆ. ಅವಳೂ ಒಪ್ಪಿ ರಾಧೆಯನ್ನು ಕರೆಯುತ್ತಾಳೆ.

**ನಾರದ :-** ಯಶೋದೆ ರಾಧೆಯನ್ನೇಕೆ ಅಡಿಗೆ ಮಾಡಲು ಕರೆಯುತ್ತಾಳೆ ? ರೋಹಿಣಿ ಮುಂತಾದವರಿಲ್ಲವೆ ?

**ವೃಂದೆ :-** ಒಮ್ಮೆ ಪಾರ್ವತಿಯು ಹೇಳುವದನ್ನು ಕೇಳಿದ್ದೆ. ರಾಧೆಗೆ ದುರ್ವಾಸ ಮುನಿ ವರವಿತ್ತನಂತೆ. 'ನೀನು ಮಾಡುವ ಅಡಿಗೆ ಎಲ್ಲವೂ ಅಮೃತದಂತೆ ರುಚಿಯಾಗಿದ್ದು ಅದನ್ನುಣ್ಣುವವನ ಆಯುಸ್ಸನ್ನು ಹೆಚ್ಚಿಸಲಿ' ಎಂದು ಯಶೋದೆ ಇದನ್ನು ತಿಳಿದು ಮಗನ ಆಯುಸ್ಸು ಹೆಚ್ಚಲೆಂದು ರುಚಿಯಾದ ಅಡಿಗೆ ಮಾಡಲು ರಾಧೆಯನ್ನೇ ಕರೆಯುತ್ತಾಳೆ. ರಾಧೆಗೂ ಇದು ಬಲು ಇಷ್ಟವಾದುದರಿಂದ ಅವಳು ಸಂತೋಷದಿಂದ ನಂದನ ಮನೆಗೆ ಸಖಿಯರೊಡನೆ ಹೋಗಿ ಅಡಿಗೆ ಮಾಡುತ್ತಾಳೆ. ಕೃಷ್ಣನು ಹಸುಗಳನ್ನು ತಾನು ಕರೆದು ಕೆಲವನ್ನು ಇತರರಿಂದ ಕರೆಸಿ ಮನೆಗೆ ಹಿಂತಿರುಗುತ್ತಾನೆ. ಪರಿಚಾರಕರಿಂದ ಎಣ್ಣೆ ವತ್ತಿಸಿಕೊಂಡು ನೀರು ಹಾಕಿಸಿಕೊಳ್ಳುತ್ತಾನೆ. ಮಡಿಯಾದ ಬಟ್ಟೆ ಉಟ್ಟು ಗಂಧ ಮಾಲೆಗಳನ್ನು ಧರಿಸುತ್ತಾನೆ. ತಲೆ ಬಾಚಿಕೊಂಡು ತಿಲಕವಿಟ್ಟುಕೊಂಡು ಆಭರಣಗಳನ್ನ ತೊಟ್ಟುಕೊಳ್ಳುತ್ತಾನೆ. ತಾಯಿಯು ಪದೇ ಪದೇ ಊಟಕ್ಕೆ ಬಾರೊ ಎನ್ನುತ್ತಿರುತ್ತಾಳೆ. ಕೊನೆಗೆ ಸ್ನೇಹಿತರ ಕೈಹಿಡಿದುಕೊಂಡು ಬಲರಾಮನೊಡನೆ ಊಟಕ್ಕೆ ಬರುತ್ತಾನೆ.

ಪರಿಹಾಸನುಡಿಗಳಿಂದ ಸ್ನೇಹಿತರನ್ನು ನಗಿಸಿ ತಾನೂ ನಕ್ಕು ನಾನಾ ಬಗೆಯ ಭಕ್ಷ್ಯಭೋಜ್ಯಗಳನ್ನು ಸವಿಯುತ್ತಾನೆ. ಬಳಿಕ ನೀರು ಕುಡಿದು ಮಂಚದ ಮೇಲ ವಿಶ್ರಮಿಸಿಕೊಳ್ಳುತ್ತ ಸೇವಕರು ಕೊಡುವ ತಾಂಬೂಲವನ್ನು ಮೆಲ್ಲುತ್ತಾನೆ.

ಬಳಿಕ ಹಸುಗಳನ್ನು ಮೇಯಿಸಲು ತಕ್ಕ ವೇಷಧರಿಸಿ ಹಸುಗಳೊಂದಿಗೆ ಕೃಷ್ಣನು ಹೊರಡುವಾಗ ಪ್ರೀತಿಯಿಂದ ನಂದಗೋಕುಲದ ಜನರೆಲ್ಲ ಅವನನ್ನು ಹಿಂಬಾಲಿಸುವರು. ಆದರೆ ಕೃಷ್ಣನು ತಂದೆತಾಯಿಗಳನ್ನು ನಮಿಸಿ ಉಳಿದವರನ್ನು ಕಡೆಗಣ್ಣ ನೋಟದಿಂದ ಹಿಂತಿರುಗಿಸಿ ಕಾಡಿಗೆ ತೆರಳುವನು.

ಕಾಡಿನಲ್ಲಿ ಮಿತ್ರರೊಡನೆ ಕೆಲಕಾಲ ಆಟವಾಡುತ್ತ ಅವರ ಕಣ್ಣು ತಪ್ಪಿಸಿ ರಾಧೆಯನ್ನು ನೋಡಲು ಸಂಕೇತ ಸ್ಥಳಕ್ಕೆ ಉತ್ಸಾಹದಿಂದ ಹೋಗುವನು. ಇತ್ತ ರಾಧೆಯೂ ಸೂರ್ಯಾರಾಧನೆ, ಹೂಗಳನ್ನು ತರುವುದು ಮುಂತಾದ ಯಾವುದಾದರೂ ನೆಪ ಹೇಳಿ ತಂದೆ ತಾಯಿಗಳ ಗಮನಕ್ಕೆ ಬಾರದಂತೆ ಸಖಿಯರೊಡನೆ ಸಂಕೇತ ಸ್ಥಳಕ್ಕೆ ಬಂದು ಕಾದಿರುತ್ತಾಳೆ. ಪ್ರಣಯಿಗಳಿಬ್ಬರೂ ಹೀಗೆ ಹೇಗಾದರೂ ಪ್ರಯತ್ನದಿಂದ ಒಂದೆಡೆ ಸೇರಿ ವಿಹಾರ ಮಾಡುವರು. ಉಯ್ಯಾಲೆಯನ್ನೇರಿ ಸಖಿಯರಿಂದ ತೂಗಿಸಿಕೊಳ್ಳುವರು. ಕೃಷ್ಣನ ಕೈಯಿಂದ ಕೊಳಲು ಜಾರಿ ಬಿದ್ದರೆ ರಾಧೆ ಅದನ್ನು ಬಚ್ಚಿಟ್ಟು ಕೃಷ್ಣನು ಹುಡುಕಿ ಸೋತು ನಗೆ ಪಾಟಲಾಗುವಂತೆ ಮಾಡುವಳು. ಎಲ್ಲರೂ ನಗುವರು. ಕೃಷ್ಣನು ತಾನೂ ನಗುವನು. ಎಲ್ಲರೂ ವಸಂತ ಮಾರುತವನ್ನು ಸೇವಿಸುತ್ತ ಸುಗಂಧಮಯವಾದ ಕುಂಕುಮದ ನೀರಿನಿಂದ ಓಕುಳಿಯಾಡುವರು. ನಾನಾಬಗೆ ಆಟಗಳನ್ನಾಡಿ ದಣಿದು ಮರದ ಬುಡದಲ್ಲಿ ಕುಳಿತು ಮಧುಪಾನ ಮಾಡುವರು. ಅದರಿಂದ ಮತ್ತರಾಗಿ ತೂಕಡಿಸಿ ಕಣ್ಣು ಮುಚ್ಚಿಕೊಳ್ಳುವರು. ಆಗ ರಾಧಾ ಕೃಷ್ಣರು ಅನ್ಯೋನ್ಯವಾಗಿ ಕೈಹಿಡಿದು ಕಾಮ ಬಾಣ ಪೀಡಿತರಾಗಿ ರಮಿಸುವ ಇಚ್ಛೆಯಿಂದ ತೊದಲು ನುಡಿ ನುಡಿಯುತ್ತ ಎಡವುತ್ತ ಮರಗಳ ಪೊದರುಗಳನ್ನು ಸೇರಿಕೊಳ್ಳುವರು. ಆನೆ ಸಲಗಗಳಂತೆ ಕ್ರೀಡಿಸುವರು. ಇತ್ತ ಸಖಿಯರೂ ಮಧುವಿನಿಂದ ಮತ್ತರಾಗಿ ಅಲ್ಲಲ್ಲಿಯೆ ಲತಾ ಕುಂಜಗಳ ನಡುವೆ ಮಲಗಿರುತ್ತಾರೆ. ರಾಧೆಯ ಅಪೇಕ್ಷೆಯನ್ನು ಮನ್ನಿಸಿ ಕೃಷ್ಣನು ಬೇರೆ ಬೇರೆ ರೂಪಗಳಿಂದ ಆ ಎಲ್ಲ ಸಖಿಯರೊಡನೆಯೂ ಕ್ರೀಡಿಸುವನು. ಸಲಗವು ಎಲ್ಲ ಹೆಣ್ಣಾನೆಗಳೊಡನೆ ರಮಿಸುವಂತೆ ಕೃಷ್ಣನು ರಾಧೆಯೊಡನೆಯೂ ಅವಳ ಸಖಿಯರೊಡನೆಯೂ ಕ್ರೀಡಿಸಿ ಅವರೊಡನೆ ಕೊಳದಲ್ಲಿಳಿದು ನೀರಾಟವಾಡುವನು. ಬಳಿಕ ಉತ್ತಮವಾದ ಬಟ್ಟೆಗಳನ್ನುಟ್ಟು ಗಂಧ ಮಾಲ್ಯಗಳನ್ನೂ ಒಡವೆಗಳನ್ನು ಧರಿಸಿ ಕೊಳದ ಬದಿಯಲ್ಲಿರುವ ರತ್ನಮಯವಾದ ದಿವ್ಯ ಮಂದಿರವನ್ನು ಪ್ರವೇಶಿಸುವನು.

ಅಷ್ಟರೊಳಗೆ ನಾನು ಅವರಿಗೆ ಹಣ್ಣು ಹಂಪಲು ಗಡ್ಡೆ ಗೆಣಸುಗಳನ್ನು ಅಲ್ಲಿ ಸಿದ್ಧ ಮಾಡಿಟ್ಟಿರುತ್ತೇನೆ. ಕೃಷ್ಣನು ಆ ಹಣ್ಣು ಗಡ್ಡೆಗಳನ್ನು ಸವಿದು ಹೂವಿನ ಹಾಸಿಗೆಯನ್ನೇರುತ್ತಾನೆ ರಾಧೆಯೂ ಸಖಿಯರೂ ತಾಂಬೂಲ ನೀಡಿ ಬೀಸಣಿಗೆ ಬೀಸುವರು. ಕಾಲುಗಳನ್ನೊತ್ತುವರು. ಬಳಿಕ ರಾಧೆಯೂ ಕೃಷ್ಣನು ತಿಂದುಳಿದ ಹಣ್ಣುಗಡ್ಡೆಗಳನ್ನು ತಿಂದು ಮಲಗುವ ಮನೆಗೆ ಹಿಂತಿರುಗಿ ಬರುವಳು. ಸಖಿಯರು

ಅವಳಿಗೆ ತಾಂಬೂಲ ಕೊಡುವರು ಅದನ್ನು ಮೆದ್ದು ಸಖಿಯರಿಗೂ ತಿನಿಸುವಳು ರಾಧೆ.

ಕೃಷ್ಣನು ಮುಸುಕೆಳೆದುಕೊಂಡು ನಿದ್ದೆಯ ನಟನೆ ಮಾಡುತ್ತ ಸಖಿಯರ ಸ್ವಚ್ಛಂದವಾದ ಮಾತುಕತೆಗಳನ್ನು ಆಲಿಸುತ್ತಾನೆ. ಸಖಿಯರೂ ಮೊದಲಿಗೆ ನಿಃಸಂಕೋಚವಾಗಿ ಸರಸವಾಡಿದರೂ ಏನೋ ಒಂದು ಅನುಮಾನದಿಂದ ನಾಲಿಗೆ ಕಚ್ಚಿಕೊಂಡು ಪರಸ್ಪರ ಮುಖ ನೋಡುವರು ಲಜ್ಜೆ ಪಡುವರು. ಕ್ಷಣಕಾಲ ಮಾತು ನಿಲ್ಲಿಸುವರು. ತಟ್ಟನೆ ಆ ಕೃಷ್ಣನ ಮುಸುಕಿನ ಬಟ್ಟೆಯನ್ನು ದೂರಮಾಡಿ ಚೆನ್ನಾಗಿ ನಿದ್ದೆ ಮಾಡಿದೆಯಲ್ಲವೆ ?' ಎಂದು ಹಾಸ್ಯ ಮಾಡಿ ನಗುವರು. ಹೀಗೆ ನಾನಾ ಬಗೆಯಿಂದ ಪರಿಹಾಸ್ಯ ಮಾಡುತ್ತ ನಗುತ್ತ ಸ್ವಲ್ಪ ಕಾಲ ನಿದ್ರಾ ಸುಖವನ್ನು ಎಲ್ಲರೂ ಅನುಭವಿಸುವರು.

ಬಳಿಕ ಎಲ್ಲರೂ ಒಂದೆಡೆ ಕುಳಿತು ಪಗಡೆಯಾಡುತ್ತಾರೆ. ಹಾರ, ಚುಂಬನ, ಆಲಿಂಗನ, ಬಟ್ಟೆಗಳನ್ನು ಪಣವಾಗಿಟ್ಟು ಆಡುತ್ತಾರೆ. ಕೃಷ್ಣನು ಸೋತರೂ ತಾನೆ ಗೆದ್ದೆನೆನ್ನುತ್ತ ರಾಧೆಯ ಹಾರವನ್ನು ಕಿತ್ತುಕೊಳ್ಳಲು ಕೈಹಾಕುವನು. ಆಕೆ ಹುಬ್ಬು ಗಂಟಿಕ್ಕಿ ಬೈಯುತ್ತ ಕೆನ್ನೆಗೆ ಬಾರಿಸುವಳು. ಕೃಷ್ಣನು ದುಃಖವನ್ನು ನಟಿಸಿ 'ದೇವಿ, ನಾನೆ ಸೋತಿರುವುದಾದರೆ ನಾನು ಪಣವಾಗಿಟ್ಟ ಚುಂಬನವನ್ನು ನಿನಗೆ ಕೊಟ್ಟುಬಿಡುವೆನೆನ್ನುತ್ತ ಆಕೆಯನ್ನು ಚುಂಬಿಸುವನು. ಹೀಗೆ ಉಪಾಯದಿಂದ ಪ್ರೇಯಸಿಯು ಹುಬ್ಬುಗಂಟಿಕ್ಕಿ ಬೈಯುವುದನ್ನು ಕೇಳಿ ಆನಂದಿಸುತ್ತಾನೆ ಕೃಷ್ಣ. ಅಷ್ಟರಲ್ಲಿ ಅಲ್ಲಿಯೆ ಇರುವ ಶುಕಸಾರಿಕೆಗಳು ಈ ಜಗಳ ವಾದವಿವಾದಗಳನ್ನು ಕೇಳಿ ತಾವೂ ಜಗಳವಾಡತೊಡಗುವುವು. ಅದನ್ನು ಕೇಳಿ ಎಲ್ಲರೂ ಅಲ್ಲಿಂದೆದ್ದು ಹೊರಡುವರು. ಕೃಷ್ಣನು ರಾಧೆಯ ಅನುಮತಿ ಪಡೆದು ದನಕರುಗಳ ಬಳಿಗೆ ಹೋಗುವನು. ರಾಧೆ ಸಖಿಯರೊಂದಿಗೆ ಸೂರ್ಯ ದೇವಾಲಯಕ್ಕೆ ಹೋಗುವಳು.

ಕೃಷ್ಣನು ಅವರಿಗೆ ತಿಳಿಯದಂತೆ ಬ್ರಾಹ್ಮಣ ವೇಷದಿಂದ ಮೊದಲೆ ದೇವಾಲಯಕ್ಕೆ ಬಂದಿರುತ್ತಾನೆ. ಅವರೂ ಬ್ರಾಹ್ಮಣ ಸಿಕ್ಕಿದನೆಂದು ಸಂತೋಷದಿಂದ ದೇವತಾರ್ಚನೆ ಮಾಡಲು ಕೇಳಿಕೊಳ್ಳುತ್ತಾರೆ. ಈ ಕಳ್ಳ ಬ್ರಾಹ್ಮಣನು ವೇದಮಂತ್ರಗಳಂತೆ ಭಾಸವಾಗುವ ಶಬ್ದಗಳನ್ನು ಸೃಷ್ಟಿಸಿ ಅದರಲ್ಲಿ ಸಖಿಯರ ಬಗ್ಗೆ ಪರಿಹಾರ ತುಂಬಿ ಉಚ್ಚರಿಸುತ್ತ ಪೂಜೆ ಮಾಡುತ್ತಾನೆ. ಚಾಣಾಕ್ಷರಾದ ಆ ಸಖಿಯರಿಗೆ ಗುಟ್ಟು ತಿಳಿಯುವುದು. ಅವರು ಆನಂದ ಸಾಗರದಲ್ಲಿ ಮುಳುಗಿ ತಮ್ಮನ್ನೆ ಮರೆತುಬಿಡುವರು.

ಹೀಗೆ ನಾನಾಬಗೆಯಿಂದ ವಿನೋದವಾಡುತ್ತ ಎರಡೂವರೆ ಯಾಮಗಳ ಕಾಲವನ್ನು ಕಳೆದು ಸಖಿಯರು ಮನೆ ಸೇರುತ್ತಾರೆ. ಕೃಷ್ಣನೂ ಗೋವುಗಳ ಬಳಿಗೆ ಬಂದು ಸ್ನೇಹಿತರನ್ನು ಕೂಡಿಕೊಳ್ಳುತ್ತಾನೆ. ಎಲ್ಲರೊಡನೆ ಹೊರಟು ಕೊಳಲೂದುತ್ತ ಗೋವುಗಳನ್ನು ಗೋಕುಲಕ್ಕೆ ತರುತ್ತಾನೆ.

ನಂದಗೋಪ ಮುಂತಾದವರೆಲ್ಲರೂ ಕೊಳಲಿನ ದನಿಯನ್ನು ಕೇಳಿ ಆಗಸವೆಲ್ಲ ಗೋಧೂಳಿಯಿಂದ ತುಂಬಿರುವುದನ್ನು ನೋಡಿ ತಮ್ಮೆಲ್ಲ ಕೆಲಸಗಳನ್ನು ನಿಲ್ಲಿಸಿ ಹೆಂಗಸರು ಮಕ್ಕಳೊಡನೆ ಕೃಷ್ಣನನ್ನು ನೋಡುವಾಸೆಯಿಂದ ಬಂದು ಇದಿರುಗೊಳ್ಳುವರು. ಅವರನ್ನು ಕೃಷ್ಣನು ಅವರವರಿಗೆ ತಕ್ಕಂತೆ ಮಾತನಾಡುತ್ತ ನಗುತ್ತ

ಕೆಲವು ಹಿರಿಯ ಗೋಪಾಲಕರಿಗೆ ನಮಸ್ಕಾರದಿಂದ ಗೌರವಿಸುತ್ತ ಪ್ರೇಯಸಿಯಾದ ರಾಧೆಯನ್ನು ಕಡೆಗಣ್ಣ ನೋಟದಿಂದ ಆನಂದಗೊಳಿಸುತ್ತ ರಾಜಮಾರ್ಗದಲ್ಲಿ ನಡೆದು ಬರುತ್ತಾನೆ. ಕೊಟ್ಟಿಗೆಗಳಲ್ಲಿ ದನಗಳನ್ನು ಸೇರಿಸುತ್ತಾನೆ.

ತಂದೆತಾಯಿಗಳ ಕರೆಯನ್ನು ಕೇಳಿ ಬಲರಾಮನೊಡನೆ ಮನೆಗೆ ಬರುತ್ತಾನೆ. ಸ್ನಾನಮಾಡಿ ಅಲ್ಪೋಪಹಾರ ಸ್ವೀಕರಿಸಿ ತಾಯಿಯ ಅನುಮತಿಯಿಂದ ಹಸುಗಳನ್ನು ಕರೆಯಲು ಕೊಟ್ಟಿಗೆಗೆ ಹೋಗುವನು. ಕೆಲವು ಹಸುಗಳನ್ನು ತಾನು ಕರೆದು ಕೆಲವನ್ನು ಇತರರಿಂದ ಕರೆಸಿ ಮನೆಗೆ ಬಂದು ಎಲ್ಲರೊಡನೆ ಊಟಕ್ಕೆ ಕುಳಿತು ಕೊಳ್ಳುವನು.

ರಾಧೆ, ಅವನಿಗೆ ಪ್ರಿಯವಾದ ಭಕ್ಷ್ಯಭೋಜ್ಯಗಳನ್ನು ಸಖಿಯರ ಕೈಯಲ್ಲಿ ಕಳಿಸುತ್ತಾಳೆ. ಅದನ್ನುಂಡು ಅದರ ಸವಿಯನ್ನು ಹೊಗಳುತ್ತಾನೆ ಕೃಷ್ಣ. ಬಳಿಕ ಸಖಿಯರು ಕೃಷ್ಣನು ತಿಂದುಳಿದ ಆ ಭಕ್ಷ್ಯಭೋಜ್ಯಗಳನ್ನೂ ಯಶೋದೆಯು ಕೊಡುವ ಬೇರೆ ಪದಾರ್ಥಗಳನ್ನೂ ತಂದು ರಾಧೆಗೆ ಕೊಡುತ್ತಾರೆ. ಅವಳು ಆ ಸಖಿಯರೊಡನೆ ಅದನ್ನು ಉಣ್ಣುತ್ತಾಳೆ.

ಕೃಷ್ಣನು ಸಭಾಮಂಟಪದಲ್ಲಿ ಕುಳಿತು ಅನೇಕ ಆಶ್ಚರ್ಯಗಳನ್ನು ನೋಡುತ್ತ ಮಧುರಗೀತೆಗಳನ್ನು ಕೇಳುತ್ತ ಆ ಕಲಾವಿದರಿಗೆ ಧನಧಾನ್ಯಾದಿಗಳನ್ನಿತ್ತು ಗೌರವಿಸುತ್ತಾನೆ. ಬಳಿಕ ಯಾರೂ ತಿಳಿಯದಂತೆ ಸಂಕೇತ ಸ್ಥಳಕ್ಕೆ ಬರುತ್ತಾನೆ.

ಅಲ್ಲಿಗೆ ರಾಧೆ ಮೊದಲೇ ಬಂದಿರುತ್ತಾಳೆ. ಶುಕ್ಲಪಕ್ಷ ಕೃಷ್ಣಪಕ್ಷಗಳ ರಾತ್ರಿಗೆ ಅನುಗುಣವಾದ ವೇಷಧರಿಸಿ ಯಮುನೆಯ ಬಳಿಯ ಕಲ್ಪವೃಕ್ಷಗಳ ತೋಪಿನೊಳಗೆ ಒಂದು ರತ್ನಮಯವಾದ ದಿವ್ಯಮಂದಿರಕ್ಕೆ ಅವಳು ನಡೆದುಬರುತ್ತಾಳೆ. ಕೃಷ್ಣನು ಅವಳೊಡನೆ ಸೇರಿ ಎರಡುವರೆ ಯಾಮಗಳ ಕಾಲ ರಾತ್ರಿಯನ್ನು ವಿಹಾರದಲ್ಲಿ ಕಳೆದು ಏಕಾಂತದಲ್ಲಿ ಹೂವಿನ ಹಾಸಿಗೆಯ ಮೇಲೆ ಪವಡಿಸುತ್ತಾರೆ.

ಹರಿಯ ಈ ದಿನಚರಿಯನ್ನು ಕೇಳಿದರೆ ಪಾಪಿಗಳೂ ಮೋಕ್ಷಹೊಂದುತ್ತಾರೆ.

**ನಾರದ** :- ದೇವಿ, ಕೃಷ್ಣನ ದೈನಂದಿನ ಲೀಲೆಯನ್ನು ನನಗೆ ಉಪದೇಶಿಸಿ ನನ್ನನ್ನು ಧನ್ಯನನ್ನಾಗಿಸಿ ಅನುಗ್ರಹಿಸಿರುವೆ.

**ಸೂತ** :- ಹೀಗೆ ಹೇಳಿ ಮುನಿಯು ವೃಂದಾದೇವಿಯನ್ನು ಪ್ರದಕ್ಷಿಣೆ ಮಾಡಿ ಅವಳಿಂದ ಸತ್ಕಾರವನ್ನು ಪಡೆದು ಅಂತರ್ಧಾನ ಹೊಂದಿದನು.

ಶೌನಕನೆ, ಮಂತ್ರ ಚಿಂತಾಮಣಿಯನ್ನು ಸಾಕ್ಷಾತ್ ಕೃಷ್ಣನೆ ಶಿವನಿಗೆ ಉಪದೇಶಿಸಿದನು. ಶಿವನು ನಾರದನಿಗೂ ನಾರದನು ನನಗೂ ಉಪದೇಶಿಸಿದನು. ನಾನು ಈಗ ನಿನಗೆ ಹೇಳಿದ್ದೇನೆ. ರಹಸ್ಯವಾದ ಈ ಮಂತ್ರವನ್ನು ಗೋಪ್ಯವಾಗಿಟ್ಟುಕೊಳ್ಳು.

**ಶೌನಕ** :- ನಿನ್ನ ಅನುಗ್ರಹದಿಂದ ನಾನಿಂದು ಧನ್ಯನಾದೆ. ಅತ್ಯಂತ ರಹಸ್ಯವಾದ ವಿಷಯಗಳನ್ನು ನಿನ್ನಿಂದ ಕೇಳಿ ತಿಳಿದೆ.

**ಸೂತ** :- ವೈಷ್ಣವ ಧರ್ಮಗಳನ್ನು ಕಾಪಾಡಿಕೊಂಡು ಹಗಲು ರಾತ್ರಿ ಮಂತ್ರವನ್ನು ಜಪಿಸುತ್ತಿರು. ಬೇಗನೆ ಕೃಷ್ಣನ ದಾಸ್ಯ ನಿನಗೆ ಲಭಿಸುವುದು. ನಾನೂ ಯಮುನಾ ತೀರದ ಆ ವೃಂದಾವನಕ್ಕೆ ನಿತ್ಯ ಹೋಗುತ್ತೇನೆ.

ಈ ಪಾವನ ಚರಿತ್ರೆಯನ್ನು ಶಿವನೆ ಹೇಳಿದ್ದಾನೆ. ಅದನ್ನು ಭಕ್ತಿಯಿಂದ ಕೇಳುವ ಮಾನವರು ವಿಷ್ಣು ಲೋಕವನ್ನು ಸೇರುವರು. ಧನ್ಯತೆ, ಯಶಸ್ಸು, ಆಯುಸ್ಸು, ಆರೋಗ್ಯ, ಸ್ವರ್ಗ, ಮೋಕ್ಷ ಮೊದಲಾದ ಎಲ್ಲ ಅಭೀಷ್ಟಗಳನ್ನು ಕೊಡುವುದು. ಪಾಪಗಳನ್ನ ಕಳೆಯುವುದು. ಭಕ್ತಿಯಿಂದ ಪಠಿಸುವ ಮಾನವರು ವಿಷ್ಣುಲೋಕವನ್ನು ಸೇರುತ್ತಾರೆ. ಅಲ್ಲಿಂದ ಹಿಂತಿರುಗಿ ಬರಬೇಕಾದುದಿಲ್ಲ.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಪಾತಾಳ ಖಂಡದಲ್ಲಿ*
*ಶ್ರೀ ವೃಂದಾವನ ಮಾಹಾತ್ಮ್ಯದಲ್ಲಿ ಮೂವತ್ತನಾಲ್ಕನೆ ಅಧ್ಯಾಯ ಮುಗಿದುದು*

—o—

## ವೈಷ್ಣವ ಧರ್ಮ

ಅಧ್ಯಾಯ - ೩೫

**ಋಷಯ ಉವಾಚ**

**ಋಷಿಗಳು** :- ಶ್ರೀ ಕೃಷ್ಣನ ಅದ್ಭುತ ಚರಿತ್ರೆಗಳನ್ನೆಲ್ಲ ಕೇಳಿ ನಮಗೆ ಆನಂದವಾಯಿತು. ಇನ್ನೂ ಕೇಳಬೇಕೆಂಬಾಸೆ ಉಂಟಾಗುತ್ತಿದೆ. ವ್ರತ ದಾನ ಪೂಜೆ ಸ್ನಾನ ಮುಂತಾದುವನ್ನೂ ಕೇಳಬಯಸುತ್ತೇವೆ. ಅವನ್ನು ಹಿಂದೆ ಯಾರ್ಯಾರು ಅನುಷ್ಠಾನ ಮಾಡಿದ್ದರು ಎಂಬುದನ್ನು ಹೇಳು.

**ಸೂತ** :- ಲೋಕವನ್ನು ದುಃಖದಿಂದ ಪಾರು ಮಾಡುವ ಕೃಷ್ಣ ಚರಿತ್ರೆಯನ್ನು ಭಕ್ತಿಯಿಂದ ಕೇಳಬಯಸುವ ನೀವು ಧನ್ಯರು. ಅದನ್ನು ಇನ್ನೂ ಹೇಳುತ್ತೇನೆ ಕೇಳಿ. ಒಮ್ಮೆ ನಾರದಮುನಿ ಲೋಕ ಪರ್ಯಟನೆ ಮಾಡುತ್ತ ಮಧುರೆಯಲ್ಲಿ ಕೃಷ್ಣನನ್ನಾರಾಧಿಸುತ್ತ ವ್ರತಗಳನ್ನು ಕೈಗೊಂಡಿದ್ದ ಅಂಬರೀಷ ಮಹಾರಾಜನನ್ನು ಕಂಡನು. ರಾಜನು ಅವನನ್ನು ಸತ್ಕರಿಸಿ ನಿಮ್ಮಂತೆ ಶ್ರದ್ಧೆಯಿಂದ ಕೇಳಿದನು.

**ಅಂಬರೀಷ** :- ವೇದವಾದಿಗಳು ಪರಬ್ರಹ್ಮವೆಂದು ಕರೆಯುವ ವಸ್ತು ಸ್ವಯಂ ನಾರಾಯಣನೆ. ಸಾಕಾರನೂ ನಿರಾಕಾರನೂ ವ್ಯಕ್ತನೂ ಅವ್ಯಕ್ತನೂ ಅವನೆ. ಅವನಲ್ಲಿ ಎಲ್ಲ ಪ್ರಪಂಚವೂ ಅಡಗಿದೆ. ಅವನೆ ಪರಮಾತ್ಮನೆಂದು ಪ್ರಸಿದ್ಧನಾದವನು. ಜಗತ್ತಿನ ಸೃಷ್ಟಿ ಸ್ಥಿತಿಲಯಗಳನ್ನು ಮಾಡುವವನು. ಬ್ರಹ್ಮನನ್ನು ಹುಟ್ಟಿಸಿ ತನ್ನಲ್ಲಿದ್ದ ವೇದಗಳನ್ನು ಅವನಿಗೆ ಉಪದೇಶ ಮಾಡಿ ಕೊಟ್ಟವನು. ಎಲ್ಲ ಪುರುಷಾರ್ಥಗಳನ್ನೂ ಕೊಡುವವನು. ಯೋಗಿಗಳಿಗೂ ತಿಳಿಯಲಾಗದವನು. ಅವನನ್ನು ಹೇಗೆ ಧ್ಯಾನಿಸಬೇಕು ? ಹೇಗೆ ಆರಾಧಿಸಬೇಕು ? ಅವನನ್ನಾರಾಧಿಸದೆ ಸಂಸಾರ ಭಯದಿಂದ ಬಿಡುಗಡೆ ಇಲ್ಲ. ತಪಸ್ಸು ಯಜ್ಞದಾನಗಳ ಉತ್ತಮ ಫಲವೂ ಲಭಿಸುವುದಿಲ್ಲ.

**ಅನಾಸ್ವಾದಿತ ಗೋವಿಂದ ಪದಾಂಬುಜ ರಸೋ ನರಃ ।**
**ಮನೋರಥಪಥಾನೀತಂ ಕಥ ಕಥಮಾಕಲಯೇತ್ ಫಲಂ ॥**

ಗೋವಿಂದ ಪಾದಾರವಿಂದದ ಮಕರಂದವನ್ನು ಸವಿಯದ ನರನು ತಾನು ಬಯಸಿದುದನ್ನೆಲ್ಲ ಹೊಂದುವುದು ಹೇಗೆ ಸಾಧ್ಯ ?

ಹರಿಯ ಆರಾಧನೆಯನ್ನು ಬಿಟ್ಟರೆ ಎಲ್ಲ ಪಾಪಗಳನ್ನು ಪರಿಹರಿಸಬಲ್ಲ ಇನ್ನೊಂದು ಪ್ರಾಯಶ್ಚಿತ್ತವನ್ನು ನಾನೆಲ್ಲೂ ಕಂಡಿಲ್ಲ. ಕ್ಲೇಶನಾಶಕವಾದ ಆ ಕೇಶವನನ್ನು ಹೇಗೆ ಆರಾಧಿಸಬೇಕು ? ಎಲ್ಲರೂ ಆರಾಧಿಸುವ ಬಗೆ ಹೇಗೆ ? ಸ್ತ್ರೀಯರೂ ಆರಾಧಿಸಬೇಕಾದರೆ ಹೇಗೆ ಆರಾಧಿಸಬೇಕು. ಭಕ್ತ ಪ್ರಿಯನಾದ ಆ ಭಗವಂತನನ್ನು ಹೇಗೆ ಸಂಪಾದಿಸಬೇಕು ? ಯಾವ ಭಕ್ತಿಯಿಂದ ಅವನು ಪ್ರಸನ್ನನಾಗುವನು ? ನೀನು ವಿಷ್ಣುಭಕ್ತನಾಗಿದ್ದು ಅವನಿಗೆ ಪ್ರಿಯನೆನಿಸಿದವನು. ಆದ್ದರಿಂದ ನಿನ್ನನ್ನೆ ಕೇಳುತ್ತಿದ್ದೇನೆ.

**ಶ್ರೋತಾರಮಥ ವಕ್ತಾರಂ ಪ್ರಷ್ಟಾರಂ ಪುರುಷಂ ಹರೇಃ ।**
**ಪ್ರಶ್ನಃ ಪುನಾತಿ ಕೃಷ್ಣಸ್ಯ ತದಂಘ್ರಿ ಸಲಿಲಂ ಯಥಾ ॥**

ಹರಿಯ ಬಗ್ಗೆ ಪ್ರಶ್ನೆಮಾಡುವ ಅದಕ್ಕೆ ಉತ್ತರ ಹೇಳುವ, ಕೇಳುವ ಎಲ್ಲರನ್ನೂ ಆ ಪ್ರಶ್ನೆಯೆ ಹರಿಪಾದೋದಕದಂತೆ ಪಾವನಗೊಳಿಸುವುದು.

**ದುರ್ಲಭೋ ಮಾನುಷೋ ದೇಹೋ ದೇಹಿನಾಂ ಕ್ಷಣ ಭಂಗುರಃ**
**ತತ್ರಾಪಿ ದುರ್ಲಭಂ ಮನ್ಯೇ ವೈಕುಂಠ ಪ್ರಿಯದರ್ಶನಂ**

ಕ್ಷಣಿಕವಾದ ಈ ಮನುಷ್ಯ ದೇಹವೂ ಜೀವರಿಗೆ ದುರ್ಲಭ. ಅದರಲ್ಲಿಯೂ ಶ್ರೀ ಕೃಷ್ಣನಿಗೆ ಪ್ರಿಯರಾದ ಸಾಧುಗಳ ದರ್ಶನ ದೊರಕುವುದು ಅತಿ ದುರ್ಲಭ.

**ಸಂಸಾರೇऽಸ್ಮಿನ್ ಕ್ಷಣಾರ್ಧೋऽಸಿ ಸತ್ಸಂಗಃ ಶೇವಧಿರ್ನೃಣಾಂ**
**ಯಸ್ಮಾದವಾಪ್ಯತೇ ಸರ್ವಂ ಪುರುಷರ್ಥಚತುಷ್ಟಯಂ**

ಈ ಸಂಸಾರದಲ್ಲಿ ಅರೆಕ್ಷಣವಾದರೂ ಸಾಧುಗಳ ಸಂಗ ದೊರಕಿದರೆ ಅದುವೆ ಒಂದು ದೊಡ್ಡ ನಿಧಿಯಂತೆ. ಏಕೆಂದರೆ ಅದರಿಂದ ಎಲ್ಲ ನಾಲ್ಕು ಪುರುಷಾರ್ಥಗಳೂ ಲಭಿಸುತ್ತವೆ.

ಪೂಜ್ಯನೆ, ತಂದೆತಾಯಿಗಳು ಸನ್ಮಾರ್ಗದಲ್ಲಿರುವ ಮಕ್ಕಳ ಬಳಿಗೆ ಬಂದು ಅವರಿಗೆ ಶ್ರೇಯಸ್ಸುಂಟು ಮಾಡುವಂತೆ ನೀನೂ ಎಲ್ಲ ಜೀವಿಗಳ ಬಳಿಗೆ ತಾನಾಗಿ ಬಂದು ಶ್ರೇಯಸ್ಸನ್ನು ದೊರಕಿಸುವೆ. ಜೀವಿಗಳ ಬಳಿಗೆ ದೇವತೆಗಳು ಬಂದರೂ ಸುಖದ ಜೊತೆಗೆ ದುಃಖವನ್ನೂ ಕೊಡುತ್ತಾರೆ.

ನಿನ್ನಂಥ ವಿಷ್ಣುಭಕ್ತರಾದ ಸಾಧುಗಳು ಬಂದರೆ ಅವರು ಸುಖವನ್ನೆ ಕೊಡುತ್ತಾರೆ. ಏಕೆಂದರೆ ದೇವತೆಗಳು ಭಕ್ತರ ಕರ್ಮಾಚರಣೆ ಹೇಗಿದೆ ಎಂಬುದನ್ನು ಮಾತ್ರ ನೋಡಿ ಅದಕ್ಕೆ ಸರಿಯಾದ ಫಲವನ್ನೆ ಕೊಡುತ್ತಾರೆ. ನಿನ್ನಂಥ ಸಾಧುಗಳು ಮಾತ್ರ ದೀನರಲ್ಲಿ ಅನುಕಂಪ ತೋರುತ್ತಾರೆ. ಕರ್ಮವನ್ನು ಪರೀಕ್ಷಿಸಲು ಹೋಗುವುದಿಲ್ಲ. ಆದ್ದರಿಂದ ವೈಷ್ಣವ ಧರ್ಮವನ್ನು ನನಗೆ ಉಪದೇಶಿಸು. ಅದರಿಂದ ವೇದವನ್ನೆ ಉಪದೇಶಿಸಿದಂತಾಗುತ್ತದೆ.

**ನಾರದ :-** ಹರಿ ಸೇವೆಯೊಂದೆ ಪರಮಾರ್ಥವೆಂಬುದು ನಿನಗೆ ಗೊತ್ತಿದೆ.

**ಯಸ್ಮಿನ್ನಾರಾಧಿತೇ ವಿಷ್ಣೌ ವಿಶ್ವಮಾರಾಧಿತಂ ಭವೇತ್**
**ತುಷ್ಟಂಚ ಸಕಲಂ ತುಷ್ಟೇ ಸರ್ವದೇವಮಯೇ ಹರೌ**

ವಿಷ್ಣುವನ್ನಾರಾಧಿಸಿದರೆ ಪ್ರಪಂಚವನ್ನೆ ಆರಾಧಿಸಿದಂತೆ. ಎಲ್ಲ ದೇವತೆಗಳಿಗೂ ಆಶ್ರಯನಾದ ಅವನು ಪ್ರಸನ್ನನಾದರೆ ಎಲ್ಲವೂ ಪ್ರಸನ್ನವಾದಂತೆ.

ಹರಿಯ ಸ್ಮರಣಮಾತ್ರದಿಂದ ಮಹಾಪಾತಕಗಳೆಲ್ಲವೂ ಆ ಕ್ಷಣದಲ್ಲಿಯೆ ಹೆದರಿ ಓಡಿ ಹೋಗುವವು. ದೇವತೆಗಳೂ ಋಷಿಗಳೂ ಅವನನ್ನೆ ಎಲ್ಲ ವಿಧದಿಂದಲೂ ಉಪಾಸನ ಮಾಡುವರು.

ಆದ್ದರಿಂದ ದೃಢವಾದ ಇಂದ್ರಿಯಗಳಿರುವ ಯಾವ ಮಾನವನು ಹರಿಯ ಪಾದಕಮಲಗಳನ್ನು ಸೇವಿಸದಿರಲಾರನು ? ಅವನನ್ನು ಪೂಜಿಸಿದರೆ ಹೆಂಡಿರು ಮಕ್ಕಳನ್ನೂ ರಾಜ್ಯವನ್ನೂ ದೀರ್ಘಾಯುಷ್ಯವನ್ನೂ ಸ್ವರ್ಗ ಮೋಕ್ಷಗಳನ್ನೂ ಬಯಸಿದುದನ್ನೇ ಕೊಡುವನು. ತ್ರಿಕರಣಗಳಿಂದ ಅವನನ್ನಾರಾಧಿಸುವ ಭಕ್ತರ ವ್ರತಗಳನ್ನು ನಾನೀಗ ಹೇಳುತ್ತೇನೆ ಕೇಳು.

ಅಹಿಂಸೆ, ಸತ್ಯ, ಅಸ್ತೇಯ, ಬ್ರಹ್ಮಚರ್ಯ ದಂಭಶೂನ್ಯತೆಗಳು ಹರಿಗೆ ಸಂತೋಷ ಉಂಟು ಮಾಡುವ ಮಾನಸ ವ್ರತಗಳು. ಒಪ್ಪೊತ್ತು ಊಟ, ಉಪವಾಸ ಇನ್ನೊಬ್ಬರಲ್ಲಿ ಬೇಡದಿರುವುದು ಇವು ಕಾಯಿಕ ವ್ರತಗಳು. ವೇದಾಧ್ಯಯನ, ಹರಿ ಕೀರ್ತನೆ, ಸತ್ಯಭಾಷಣ, ಚಾಡಿ ಹೇಳದಿರುವುದು ಇವು ವಾಚಿಕ ವ್ರತಗಳು.

**ಚಕ್ರಾಯುಧಸ್ಯ ನಾಮಾನಿ ಸದಾ ಸರ್ವತ್ರ ಕೀರ್ತಯೇತ್**
**ನಾಶೌಚಂ ಕೀರ್ತನೇ ತಸ್ಯ ಸದಾ ಶುದ್ಧಿ ವಿಧಾಯಿನಃ ॥**

ಹರಿನಾಮ ಕೀರ್ತನೆಯನ್ನು ಎಲ್ಲೆಡೆಯೂ ಎಲ್ಲ ಕಾಲದಲ್ಲಿಯೂ ಮಾಡಬೇಕು. ಅಶುಚಿಯಾಗಿರುವೆನೆಂದು ಹಿಂಜರಿಯಕೂಡದು. ಏಕೆಂದರೆ ಅದುವೆ ಶುದ್ಧಿಯನ್ನು ತಂದುಕೊಡುವುದು.

ಪುರುಷರು ವರ್ಣಾಶ್ರಮ ವಿಹಿತವಾದ ಆಚಾರಗಳನ್ನು ಮಾಡುತ್ತಿದ್ದು ವಿಷ್ಣುವನ್ನಾರಾಧಿಸಿದರೆ ಅವನೊಲಿವನು. ಸ್ತ್ರೀಯರು ಪತಿಯಲ್ಲಿ ತ್ರಿಕರಣ ಪೂರ್ವಕವಾಗಿ ಹರಿಯನ್ನಾರಾಧಿಸಬೇಕು.

**ತ್ರಯೋ ವರ್ಣಾಸ್ತು ವೇದೋಕ್ತ ಮಾರ್ಗಾರಾಧನತತ್ಪರಾಃ ।**
**ಸ್ತ್ರೀ ಶೂದ್ರಾದಯ ಏವಸ್ಯ ನಾದಮಾರಾಧನ ತತ್ಪರಾಃ ॥**

ತ್ರೈವರ್ಣಿಕರು ಮಾತ್ರ ವೇದೋಕ್ತ ವಿಧಾನದಿಂದ ಹರಿಯನ್ನಾರಾಧಿಸಬೇಕು. ಸ್ತ್ರೀಯರು ಶೂದ್ರರು ಮುಂತಾದವರು ಹರಿನಾಮ ಕೀರ್ತನೆಯಿಂದಲೆ ಅವನನ್ನಾರಾಧಿಸಬೇಕು.

**ನ ಪೂಜನ್ಯೆ ರ್ನಯಜನ್ಯೆ ರ್ನ ವ್ರತ್ಯೆರಪಿ ಮಾಧವಃ ।**
**ತುಷ್ಯತೇ ಕೇವಲಂ ಭಕ್ತ್ಯಾ ಪ್ರಿಯೋಽಸೌ ಸಮುದಾಹೃತಃ ॥**

ಪೂಜೆ ಯಾಗ ವ್ರತಗಳೊಂದರಿಂದಲೂ ಮಾಧವನಿಗೆ ತೃಪ್ತಿಯಾಗುವುದಿಲ್ಲ. ಕೇವಲ ಭಕ್ತಿಯೊಂದನ್ನೆ ಅವನು ಬಯಸುತ್ತಾನೆ ಎಂದು ಹೇಳುತ್ತಾರೆ.

**ಸ್ತ್ರೀಣಾಂ ಪತಿವ್ರತಾನಾಂ ತು ಪತಿರೇವ ಹಿ ದೈವತಂ**
**ಸ ತು ಪೂಜ್ಯೋ ವಿಷ್ಣುಭಕ್ತ್ಯಾ ಮನೋವಾಕ್ಕಾಯ ಕರ್ಮಭಿಃ**

ಪತಿವ್ರತೆಯರಾದ ಸ್ತ್ರೀಯರಿಗೆ ಪತಿಯೆ ದೇವತೆ. ವಿಷ್ಣುಭಕ್ತಿಯಿಂದ ತ್ರಿಕರಣ ಪೂರ್ವಕವಾಗಿ ಅವನನ್ನೆ ಅವರು ಪೂಜಿಸಬೇಕು.

**ಸ್ತ್ರೀಣಾ ಮಥಾಧಿಕತಯಾ ವಿಷ್ಣೋರಾರಾಧನಾಧಿಕಂ ।**
**ಪತಿಪ್ರಿಯರತಾನಾಂ ಚ ಶ್ರುತಿರೇಷಾ ಸನಾತನೀ ॥**

ಸ್ತ್ರೀಯರು ಪತಿಯ ಹಿತದಲ್ಲಿ ಆಸಕ್ತರಾಗಿದ್ದರೆ ಅದುವೆ ದೊಡ್ಡ ಹರಿಸೇವೆ ಎನಿಸುತ್ತದೆ.

**ಹವಿಷಾಗ್ನೌ ಜಲೇ ಪುಷ್ಪೈರ್ಧ್ಯಾನೇನ ಹೃದಯೇ ಹರಿಂ**
**ಯಜಂತಿ ಸೂರಯೋ ನಿತ್ಯಂ ಜಪೇನ ರವಿಮಂಡಲೆ ॥**

ಜ್ಞಾನಿಗಳು ಅಗ್ನಿಯಲ್ಲಿ ಹವಿಸ್ಸಿನಿಂದಲೂ ನೀರಲ್ಲಿ ಹೂಗಳಿಂದಲೂ ಹೃದಯದಲ್ಲಿ ಧ್ಯಾನದಿಂದಲೂ ಸೂರ್ಯಮಂಡಲದಲ್ಲಿ ಜಪದಿಂದಲೂ ಹರಿಯನ್ನು ಸದಾ ಪೂಜಿಸುತ್ತಾರೆ.

ಹರಿಯನ್ನರ್ಚಿಸಲು ಬಾಹ್ಯಪುಷ್ಪಗಳು ಬೇಕಾದಷ್ಟಿವೆ. ಆದರೆ ಭಕ್ತಿಪ್ರಿಯನಾದ ಅವನನ್ನು ಅಹಿಂಸೆ, ಇಂದ್ರಿಯನಿಗ್ರಹ, ಭೂತದಯೆ, ಕ್ಷಮೆ, ಶಾಂತಿ, ತಪಸ್ಸು, ಧ್ಯಾನ, ಸತ್ಯ ಎಂಬ ಎಂಟು ಬಗೆಯ ಅಂತರಂಗದ ಹೂಗಳಿಂದರ್ಚಿಸಿದರೆ ಹೆಚ್ಚು ಸಂತೋಷ.

ಬಾಹ್ಯಪುಷ್ಪಗಳಲ್ಲಿಯೂ ನೀರು ವಾರುಣ ಪುಷ್ಪ, ಹಾಲು ಮೊಸರು ತುಪ್ಪಗಳು ಸೌಮ್ಯಪುಷ್ಪ, ಅನ್ನಭಕ್ಷ್ಯಗಳು ಪ್ರಾಜಾಪತ್ಯ ಪುಷ್ಪ, ಧೂಪ ದೀಪಗಳು ಆಗ್ನೇಯ ಪುಷ್ಪ, ಫಲಪುಷ್ಪಾದಿಗಳು ವಾನಸ್ಪತ್ಯಪುಷ್ಪ, ಕುಶ ಮೂಲಾದಿಗಳು ಪಾರ್ಥಿವಪುಷ್ಪ, ಗಂಧ ಚಂದನಗಳು ವಾಯವ್ಯಪುಷ್ಪ, ವಾದ್ಯಗಳು ಆಕಾಶ ಪುಷ್ಪ. ಇವೆಲ್ಲವನ್ನೂ ಶ್ರದ್ಧೆಯಿಂದ ಸಮರ್ಪಿಸಿದರೆ ವಿಷ್ಣುವಿಗೆ ಪ್ರಿಯವಾದ ಪುಷ್ಪಗಳೆನಿಸುತ್ತವೆ.

**ಸೂರ್ಯೋಗ್ನಿ ರ್ಬ್ರಾಹ್ಮಣೋ ಗಾವೊ ವೈಷ್ಣವಃ ಖಂ ಮರುಜ್ಜಲಂ॥**
**ಭೂ ರಾತ್ಮಾ ಸರ್ವ ಭೂತಾನಿ ಪೂಜಾಸ್ಥಾನಾನಿ ವೈ ಹರೇಃ ॥**

ಸೂರ್ಯ, ಅಗ್ನಿ, ಬ್ರಾಹ್ಮಣ, ಗೋವುಗಳು, ವೈಷ್ಣವರು, ಆಕಾಶ, ವಾಯು, ಜಲ, ಭೂಮಿ, ಆತ್ಮ, ಎಲ್ಲ ಪ್ರಾಣಿಗಳು ಹರಿ ಪೂಜೆಗೆ ಯೋಗ್ಯವಾದ ಸ್ಥಾನಗಳು.

ಸೂರ್ಯನಲ್ಲಿ ವೇದ ವಿದ್ಯೆಯಿಂದ, ಅಗ್ನಿಯಲ್ಲಿ ಹವಿಸ್ಸಿನಿಂದ, ಬ್ರಾಹ್ಮಣನಲ್ಲಿ ಅತಿಥ್ಯದಿಂದ, ಗೋವಿನಲ್ಲಿ ಗೋಗ್ರಾಸದಿಂದ, ವೈಷ್ಣವರಲ್ಲಿ ಬಂಧುವಿನಂತೆ ಕಾಣುವುದರಿಂದ, ಹೃದಯದ ಆಕಾಶದಲ್ಲಿ ಧ್ಯಾನದಿಂದ, ವಾಯುವಿನಲ್ಲಿ ಪ್ರಾಣಾಯಮದಿಂದ ನೀರಿನಲ್ಲಿ ನೀರು ಮುಂತಾದ ವಸ್ತುಗಳಿಂದ, ಭೂಮಿಯಲ್ಲಿ ಮಂತ್ರಗಳಿಂದ, ಆತ್ಮದಲ್ಲಿ ಭೋಗವಸ್ತುಗಳಿಂದ, ಸರ್ವಭೂತಗಳಲ್ಲಿ ಸಮತ್ವ ದೃಷ್ಟಿಯಿಂದ ಹರಿಯನ್ನರ್ಚಿಸಬೇಕು. ಶಂಖ ಚಕ್ರ ಗದಾ ಪದ್ಮಗಳನ್ನು ಧರಿಸಿದ ಚತುರ್ಭುಜ ರೂಪವನ್ನು ಧ್ಯಾನಿಸಬೇಕು.

ಜ್ಞಾನಿಯನ್ನು ಪೂಜಿಸಿದರೆ ಹರಿಯನ್ನು ಚೆನ್ನಾಗಿ ಪೂಜಿಸಿದಂತಾಗುತ್ತದೆ. ಅವನನ್ನು ನಿಂದಿಸಿದರೆ ಹರಿಯನ್ನು ನಿಂದಿಸಿದಂತೆ. ವೇದ, ಧರ್ಮ, ಶಾಸ್ತ್ರಗಳು ಜ್ಞಾನಿಯಲ್ಲಿರುವುದರಿಂದ ಅವನೇ ಪವಿತ್ರವಾದ ವಿಷ್ಣುಪ್ರತಿಮೆ ಎಂದು ಹೇಳುತ್ತಾರೆ.

**ಸರ್ವಂ ಶುಭಂ ಜಗತಿ ಧರ್ಮತ ಏವ ಲಭ್ಯಂ ।**
**ಧರ್ಮೇ ಗತಿ ರ್ನಿಗಮತೋ ನೃಪ ಧರ್ಮಶಾಸ್ತ್ರಾತ್ ॥**

**ನೂನಂ ತಯೋ ರಪಿ ಗತಿ ರ್ಭುವಿ ಭೂಮಿದೇವಾಃ ।**
**ತೈರರ್ಚಿತೈರಿಹ ಜಗತ್ಪತಿ ರರ್ಚಿತ ಸ್ಯಾತ್ ॥**

ರಾಜನೆ, ಲೋಕದಲ್ಲಿ ಸುಖಸಿಗುವುದು ಧರ್ಮಾಚರಣೆಯಿಂದ. ಧರ್ಮಾಚರಣೆಯ ವಿಧಾನವನ್ನು ತಿಳಿಯುವುದು ವೇದ ಧರ್ಮ ಶಾಸ್ತ್ರಗಳಿಂದ.

ಆ ವೇದ ಧರ್ಮಶಾಸ್ತ್ರಗಳಿರುವುದು ಜ್ಞಾನಿಗಳಿಂದ ಅವರನ್ನು ಪೂಜಿಸಿದರೆ ಜಗದೊಡೆಯನನ್ನು ಪೂಜಿಸಿದಂತಾಗುತ್ತದೆ.

ಯಜ್ಞದಾನ ತಪಸ್ಸು ಯೋಗ ಪೂಜೆಗಳನ್ನೆಷ್ಟು ಮಾಡಿದರೂ ಜ್ಞಾನಿಗಳ ಆರಾಧೆಯನಿಂದಾಗುವ ಸಂತೋಷ ಅವುಗಳಿಂದ ಹರಿಗೆ ಆಗುವದಿಲ್ಲ.

ಒಬ್ಬನು ಹರಿಪೂಜೆ ಮಾಡಿದರೆ ಅವನ ತಾಯಿಯ ಹಾಗೂ ತಂದೆಯ ವಂಶದವರೆಲ್ಲರೂ ಬಹುಕಾಲದಲ್ಲಿ ನರಕದಲ್ಲಿದ್ದರೂ ತತ್‌ಕ್ಷಣದಲ್ಲಿಯೆ ಸ್ವರ್ಗಕ್ಕೆ ಹೋಗುತ್ತಾರೆ. ಹರಿಪೂಜೆ ಮಾಡದವರ ಜೀವನ ವ್ಯರ್ಥ. ಅವರ ಕಾರ್ಯಗಳೆಲ್ಲವೂ ವ್ಯರ್ಥ.

ಹರಿಧ್ಯಾನ ಮಾಡಿದರೆ ದೀಪದಿಂದ ಅಂಧಕಾರತೊಲಗುವಂತೆ ಅಂತರಂಗದ ಎಲ್ಲ ದೋಷಗಳು ದೂರವಾಗುತ್ತವೆ. ಶೋಕ, ಭಯ, ದ್ವೇಷ ಮುಂತಾದವುಗಳಿಂದಲೂ ವಿಷಯ ಪದಾರ್ಥಗಳ ಆಕರ್ಷಣೆಯಿಂದಲೂ ಬಿಡುಗಡೆ ದೊರೆಯುತ್ತದೆ.' ದೀಪ ಉರಿಯುವಾಗ ಎಣ್ಣೆಯು ಬತ್ತಿ ಹೋಗುವಂತೆ ಧ್ಯಾನದಿಂದ ಕರ್ಮವು ಕ್ಷಯಿಸುತ್ತದೆ.

ಧ್ಯಾನವು ಸಗುಣ ನಿರ್ಗುಣ ಧ್ಯಾನಗಳೆಂದು ಎರಡು ವಿಧ. ಹರಿಯು ಕೈಕಾಲು ಮೂಗು ಬಾಯಿ ಕಿವಿಗಳಿಲ್ಲದಿದ್ದರೂ ಆ ಅಂಗಗಳ ಎಲ್ಲ ಕಾರ್ಯಗಳನ್ನೂ ಮಾಡುತ್ತ ಸರ್ವಸಾಕ್ಷಿಯಾಗಿರುವನು. ರೂಪವಿಲ್ಲದಿದ್ದರೂ ರೂಪ ಎನಿಸುವನು. ನಾಲಿಗೆ ಇಲ್ಲದಿದ್ದರೂ ವೇದವನ್ನು ಉಪದೇಶಿಸುವನು. ನಿರ್ಗುಣನಾದರೂ ಸಗುಣನೆನಿಸುವನು. ಯಾರಿಗೂ ವಶನಲ್ಲದಿದ್ದರೂ ಎಲ್ಲರಿಗೂ ವಶನೆನಿಸುವನು. ಹೀಗೆ ಪ್ರಾಕೃತ ಶರೀರ, ಇಂದ್ರಿಯ ಗುಣರೂಪಗಳಿಲ್ಲದವನು ಹರಿ ಎಂದು ಧ್ಯಾನ ಮಾಡುತ್ತಿದ್ದರೆ ಪರಮಪದವು ಲಭ್ಯವಾಗುತ್ತದೆ. ಇನ್ನೊಂದು ಬಗೆಯ ಧ್ಯಾನದಲ್ಲಿ ಹರಿಗೆ ಅಪ್ರಾಕೃತ ಶರೀರ ಇಂದ್ರಿಯ ಮುಂತಾದವುಗಳಿವೆ ಎಂದು ಚಿಂತಿಸಬೇಕು. ಆ ಶರೀರ ಮೇಘ ಶ್ಯಾಮಲವಾಗಿದ್ದು ಸೂರ್ಯನಂತೆ ಹೊಳೆಯುತ್ತದೆ. ಕೈಗಳಲ್ಲಿ ಶಂಖ ಗದೆ ಪದ್ಮ ಚಕ್ರಗಳಿವೆ. ಕಣ್ಣುಗಳು ಕಮಲಗಳಂತಿವೆ. ತುಟಿಗಳು ಹವಳದಂತಿವೆ. ಹೊಳೆವ ಕಿರೀಟ ಕುಂಡಲ ಕೌಸ್ತುಭಗಳನ್ನು ಧರಿಸಿದ್ದಾನೆ. ಪೀತಾಂಬರ ಉಟ್ಟು ಹಾರ ಕೇಯೂರ ಮುಂತಾದ ಆಭರಣಗಳನ್ನು ತೊಟ್ಟು ಗರುಡನ ಮೇಲೆ ಕುಳಿತಿರುತ್ತಾನೆ.

ಈ ಎರಡು ಬಗೆಯಾದ ಧ್ಯಾನವನ್ನು ಮಾಡಿದರೆ ತ್ರಿಕರಣ ಜನ್ಯವಾದ ಎಲ್ಲ ಪಾಪಗಳನ್ನು ಕಳೆದುಕೊಂಡು ಬಯಸಿದುದನ್ನೆಲ್ಲ ಪಡೆಯಬಹುದು. ದೇವತೆಗಳಿಂದಲೂ ಆದರಿಸಲ್ಪಟ್ಟು ಕೊನೆಗೆ ವಿಷ್ಣು ಲೋಕವನ್ನು ಸೇರಬಹುದು.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಪಾತಾಳ ಖಂಡದಲ್ಲಿ ನಾರದಾಂಬರೀಷ ಸಂವಾದದಲ್ಲಿ ವೈಷ್ಣವ ಧರ್ಮಕಥನವೆಂಬ ಮೂವತ್ತೈದನೆ ಅಧ್ಯಾಯ ಮುಗಿದುದು*

—o—

**ಅಂಬರೀಷ ಉವಾಚ**

**ಅಂಬರೀಷ :-** ಲೋಕಾನುಗ್ರಹಕಾರಿಯಾದ ಮುನಿಶ್ರೇಷ್ಠನೇ, ವಿಷ್ಣುವಿನ ಸಗುಣ ನಿರ್ಗುಣ ಧ್ಯಾನಗಳೆರಡನ್ನೂ ಚೆನ್ನಾಗಿ ಉಪದೇಶಿಸಿರುವೆ. ಈಗ ಭಕ್ತಿಯ ಲಕ್ಷಣಗಳನ್ನೂ ಅದನ್ನು ಮಾಡುವ ಪ್ರಕಾರಗಳನ್ನೂ ಹೇಳು.

**ನಾರದ :-** ರಾಜನೆ, ಸಕಲ ಪಾಪಗಳನ್ನು ಪರಿಹರಿಸುವ ವಿಷ್ಣುಭಕ್ತಿಯನ್ನು ಹೇಳುತ್ತೇನೆ, ಕೇಳು. ಭಕ್ತಿಯು ಮನೋವಾಕ್ಕಾಯ ಜನ್ಮಗಳೆಂದೂ, ಲೌಕಿಕ ವೈದಿಕ ಆಧ್ಯಾತ್ಮಿಕಗಳೆಂದೂ ಅನೇಕ ಬಗೆಯಾಗಿದೆ.

ವೇದಾರ್ಥ ಸ್ಮರಣೆ ಧ್ಯಾನ ಧಾರಣಗಳು ವಿಷ್ಣು ಪ್ರೀತಿಕರವಾದ ಮಾಸ ಭಕ್ತಿಯೆನಿಸುವುದು. ಅವಿಶ್ರಾಂತವಾಗಿ ಹಗಲು ರಾತ್ರಿ ವೇದ ಪಾರಾಯಣ ಮಾಡುವುದೂ, ಜಪಿಸುವುದೂ ವಾಚಿಕ ಭಕ್ತಿ. ವ್ರತೋಪವಾಸ ನಿಯಮಗಳು ಇಂದ್ರಿಯ ನಿಗ್ರಹ ಇವು ಕಾಯಕ ಭಕ್ತಿ ಎನಿಸುವುವು. ಅರ್ಘ್ಯಪಾದ್ಯ ಮುಂತಾದ ಉಪಚಾರಗಳು ನೃತ್ಯ ವಾದ್ಯಗೀತಗಳು ನೈವೇದ್ಯ ಸಮರ್ಪಣೆ ಮುಂತಾದವುಗಳು ಲೌಕಿಕ ಭಕ್ತಿಯ ಪ್ರಕಾರಗಳು. ವೇದ ಪಾರಾಯಣ ಅಧ್ಯಯನ ಹೋಮ ದರ್ಶನ ಪೂರ್ಣಮಾಸ ಮುಂತಾದ ಯಾಗಗಳು ಇವೆಲ್ಲವೂ ವೈದಿಕ ಭಕ್ತಿಯೆನಿಸುವುವು. ಪ್ರಕೃತಿ ಮುಂತಾದ ಇಪ್ಪತ್ತನಾಲ್ಕು ತತ್ವಗಳು ಅಚೇತನಗಳು. ಇಪತ್ತೈದನೆಯ ಪುರುಷ ತತ್ವವೊಂದೆ ಚೇತನ. ಅವನು ಕರ್ತನೂ ಭೋಕ್ತನೂ ಆಗಿದ್ದು ಕಾರಣಗಳಿಗೆ ಕಾರಣನೆನಿಸುತ್ತಾನೆ.

ಪ್ರಕೃತಿ ಪುರುಷರಿಗೆ ಸಾಧರ್ಮ್ಯ ವೈಧರ್ಮ್ಯಗಳನ್ನು ತಿಳಿಯಬೇಕು. ಕಾರಣತ್ವವು ಸಾಧರ್ಮ್ಯ. ನಾನಾತ್ವವು ಪ್ರಕೃತಿಯ ವೃಧರ್ಮ್ಯ. ಪ್ರಕೃತಿ ಪುರುಷರು ಮಾತ್ರವಲ್ಲದೆ ಬ್ರಹ್ಮತತ್ವವೂ ಒಂದಿದೆ ಎಂದೂ ತಿಳಿಯಬೇಕು. ಅದನ್ನು ಇಂದ್ರಿಯ ನಿಗ್ರಹ ಪ್ರಾಣಾಯಾಮ ಧ್ಯಾನಗಳಿಂದ ಹೊಂದಲು ಯತ್ನಿಸಬೇಕು.

ಭಿಕ್ಷಾನ್ನ ಉಣ್ಣುತ್ತ ವಿಷಯಗಳಿಂದ ದೂರವಿದ್ದು ಹೃದಯದಲ್ಲಿ ಹೊಳೆಯುವ ಮುಖ, ಬಿಳಿ ಬಣ್ಣ, ನಾಲ್ಕು ಕೈಗಳು, ವರ ಅಭಯಮುದ್ರೆಗಳು, ಸೊಂಟದಲ್ಲಿ ಯೋಗಪಟ್ಟಿಕೆ. ಹೀಗಿರುವ ಪೀತಾಂಬರ ಧಾರಿಯಾದ ಹರಿಯನ್ನು ಧ್ಯಾನಿಸಬೇಕು. ಹೀಗೆ ಸಾಂಖ್ಯ ಯೋಗ ಶಾಸ್ತ್ರಗಳಲ್ಲಿ ಉಕ್ತವಾದ ಅನುಷ್ಠಾನವೆ ಆಧ್ಯಾತ್ಮಿಕ ಭಕ್ತಿ.

ಈ ಎಲ್ಲ ಭಕ್ತಿಗಳೂ ಸಾತ್ವಿಕ ರಾಜಸ ತಾಮಸ ಎಂದು ತಿರುಗಿ ಅನೇಕ ಬಗೆಯಾಗಿರುವುವು. ಚೆನ್ನಾಗಿ ಉರಿಯುವ ಬೆಂಕಿ ಕಟ್ಟಿಗೆಯನ್ನೆಲ್ಲ ಸುಟ್ಟು ಬಿಡುವಂತೆ ಭಗವದ್ಭಕ್ತಿಯು ಪಾಪಗಳನ್ನು ಸುಟ್ಟು ನಾಶಮಾಡುತ್ತದೆ. ಭಗವಂತನನ್ನು ಸ್ಮರಿಸಿದೊಡನೆ ಗಾಳಿಯು ಮೋಡವನ್ನೋಡಿಸುವಂತೆ ಸೂರ್ಯನು ಕತ್ತಲನ್ನು ದೂರಮಾಡುವಂತೆ ಅವನು ಪಾಪಗಳನ್ನು ದೂರಮಾಡುತ್ತಾನೆ.

ಅವನು ಹೃದಯದಲ್ಲಿದ್ದರೆ ದೇವಾರ್ಚನೆ ಯಾಗ ತೀರ್ಥಸ್ನಾನ ವ್ರತ ತಪಸ್ಸುಗಳಿಂದಲೂ ಸಿಗದ ಶುದ್ಧಿಯನ್ನು ಅಂತರಾತ್ಮನು ಪಡೆಯುತ್ತಾನೆ. ಹರಿಯ

ನಿರ್ಮಲ ಗುಣಗಾನದಿಂದ ಕೂಡಿದ ಕಥೆಗಳೇ ತಥ್ಯವೂ ಪಥ್ಯವೂ ಆಗಿರುತ್ತವೆ. ಕೇಳುವವನಲ್ಲಿ ಭಕ್ತಿಯನ್ನು ಮೂಡಿಸುತ್ತವೆ. ಅವುಗಳನ್ನೆ ಹರಿಭಕ್ತರು ಹೇಳುತ್ತಿರಬೇಕು.

ರಾಜನೇ ನೀನು ಧನ್ಯ. ಆ ಪುರುಷೋತ್ತಮನ ಧ್ಯಾನದಲ್ಲಿ ಸದಾ ಮುಳುಗಿರುವೆ. ಅವನ ಪಾದಗಳಲ್ಲಿ ನಿಶ್ಚಲವಾದ ಭಕ್ತಿಯನ್ನಿಟ್ಟಿರುವೆ. ವರದಾಯಕನಾದ ವಿಷ್ಣುವನ್ನು ಭಕ್ತಿಯಿಂದ ಆರಾಧಿಸದೆ ಬಯಸಿದುದನ್ನೆಲ್ಲ ತಾನೆ ಸಂಪಾದಿಸಿಕೊಳ್ಳುವೆನೆಂಬ ಅಹಂಕಾರದಿಂದ ಪ್ರವೃತ್ತಿ ಮಾಡಿದರೆ ಎಲ್ಲಿಯ ಶ್ರೇಯಸ್ಸು ? ರಾಜನೆ ನಿನಗೆಲ್ಲವೂ ಗೊತ್ತಿದೆ. ನಾನೊಬ್ಬ ವೈಷ್ಣವನೆಂದು ಗೌರವದಿಂದಲೂ ಪವಿತ್ರವಾದ ಮಾತು ಕತೆಗಳಲ್ಲಿ ಆಸಕ್ತಿಯಿಂದಲೂ ನನ್ನಲ್ಲಿ ಇದನ್ನೆಲ್ಲ ಕೇಳ ಬಯಸುತ್ತಿರುವೆ.

**ಬ್ರಾಹ್ಮಣಃ ಸುರಭಿಃ ಸತ್ಯಂ ಶ್ರದ್ಧಾಯಾಗ ತಪಾಂಸಿ ಚ ।**
**ಶ್ರುತಿಃ ಸ್ಮೃತಿರ್ದಯಾ ದೀಕ್ಷಾ ಸಂತೋಷಾ ಸ್ತನವೋ ಹರೇಃ ॥**

ಬ್ರಾಹ್ಮಣರು ಗೋವು ಸತ್ಯ ಶ್ರದ್ಧೆ ಯಾಗ ತಪಸ್ಸು ಶ್ರುತಿ ಸ್ಮೃತಿ ದಯೆ ದೀಕ್ಷೆ ಸಂತೋಷ ಇವು ಹರಿಯ ಸನ್ನಿಧಾನದಿಂದ ಕೂಡಿದ ವಸ್ತುಗಳು.

ರಾಜನೆ, ಭಕ್ತಿಯ ಲಕ್ಷಣವನ್ನೆಲ್ಲ ನಿನಗೆ ಹೇಳಿದ್ದೇನೆ. ಇನ್ನು ಗಂಗಾ ಸ್ನಾನಕ್ಕೆ ತೆರಳುವೆನು. ಹೆಚ್ಚಿನ ಮಾತುಕತೆಗಳಿಗೆ ಕಾಲಾವಕಾಶವಿಲ್ಲ. ಹರಿಗೆ ಅತಿ ಪ್ರಿಯವಾದ ಮಾಸವೇ ಈ ವೈಶಾಖಮಾಸ. ಅದರಲ್ಲಿಯೂ ಶುಕ್ಲಪಕ್ಷದ ಸಪ್ತಮಿ. ಜಹ್ನುಮುನಿಯು ಕೋಪದಿಂದ ಗಂಗೆಯನ್ನು ಕುಡಿದ ಮೇಲೆ ಬಲ ಕಿವಿಯಿಂದ ಆಕೆಯನ್ನು ಹೊರಗೆ ಬಿಟ್ಟ ದಿನ. ಇಂದು ಸ್ನಾನ ಮಾಡಿ ಅವಳನ್ನು ವಿಧಿವತ್ತಾಗಿ ಪೂಜಿಸುವವನೆ ಧನ್ಯ. ಇಂದು ದೇವ ಪಿತೃತರ್ಪಣಗಳನ್ನು ಮಾಡಿ ಪಾಪಗಳನ್ನೆಲ್ಲ ಕಳೆದುಕೊಳ್ಳುವ ಮಾನವನನ್ನು ಕಾಣಲು ಸಾಕ್ಷಾತ ಗಂಗಾದೇವಿ ಬರುವಳು.

**ನ ಮಾಧವ ಸಮೋ ಮಾಸೋ ನ ಗಂಗಾ ಸದೃಶೀ ನದೀ ।**
**ದುರ್ಲಭಃ ಖಲು ಯೋಗೋಯಂ ಹರಿಭಕ್ತ್ಯೈವ ಲಭ್ಯತೇ ॥**

ವೈಶಾಖಕ್ಕೆ ಸಮನಾದ ಮಾಸವಿಲ್ಲ. ಗಂಗೆಗೆ ಸಮನಾದ ನದಿ ಇಲ್ಲ. ಇವೆರಡೂ ಕೂಡಿ ಬರುವುದೂ ದುರ್ಲಭ. ವಿಷ್ಣುಭಕ್ತಿ ಇದ್ದರೆ ಮಾತ್ರ ದೊರಕೀತು.

ಹರಿಯ ಪಾದದಲ್ಲಿ ಆವಿರ್ಭವಿಸಿ ಬ್ರಹ್ಮಲೋಕದಿಂದಿಳಿದು ಬಂದು ಶಿವನ ಜಡೆಯಲಿ ನಿಂತವಳು ಗಂಗೆ. ಮೂರು ಭಾಗವಾಗಿ ಹರಿದು ಮೂಲೋಕವನ್ನು ಪಾವನ ಗೊಳಿಸುವವಳು. ಗಂಗಾ ಗಂಗಾ ಗಂಗಾ ಎಂದು ಮೂರು ಬಾರಿ ಮೂರು ಹೊತ್ತುಗಳಲ್ಲಿಯೂ ಉಚ್ಚರಿಸುವ ದೂರ ದೇಶದ ಜನರೂ ಮೂರು ಜನ್ಮಗಳ ಪಾಪಗಳಿಂದ ಮುಕ್ತರಾಗುವರು. ಸಾವಿರ ಯೋಜನ ದೂರದಲ್ಲಿದ್ದು ಗಂಗೆಯನ್ನು ಸ್ಮರಿಸುವವನೂ ಎಂಥ ಪಾಪಿಯೆ ಇರಲಿ ಅವನು ಪರಗತಿಯನ್ನೆ ಹೊಂದುವನು.

**ನ ಮಾಧವ ಸಮೋ ಮಾಸೋ ನ ಮಾಧವ ಸಮೋ ವಿಭುಃ ।**
**ಪೋತೋ ಹಿ ದುರಿತಾಂಭೊದೌ ಮಜ್ಜಮಾನ ಜನಸ್ಯ ಯಃ ॥**

ವೈಶಾಖದಂಥ ಮಾಸವಿಲ್ಲ. ಮಾಧವನಂಥ ಪ್ರಭು ಇಲ್ಲ. ಪಾಪ ಸಾಗರದಲ್ಲಿ ಮುಳುಗುವವನಿಗೆ ನೌಕೆಯಂತೆ ಇವರಿಬ್ಬರಿದ್ದಾರೆ.

ವೈಶಾಖ ಮಾಸದಲ್ಲಿ ಮಾಡುವ ದಾನ ಜಪ ಹೋಮ ಸ್ನಾನಗಳೆಲ್ಲವೂ ಅನಂತರ ಫಲ ನೀಡುವುವು. ದೇವರುಗಳಲ್ಲಿ ನಾರಾಯಣ, ಮಂತ್ರಗಳಲ್ಲಿ ಗಾಯತ್ರಿ, ನದಿಗಳಲ್ಲಿ ಗಂಗೆ, ನಾರಿಯರಲ್ಲಿ ಪಾರ್ವತಿ, ತೇಜಸ್ಸುಗಳಲ್ಲಿ ಸೂರ್ಯ, ಲಾಭಗಳಲ್ಲಿ ಆರೋಗ್ಯದ ಲಾಭ. ಎರಡು ಕಾಲಿನ ಪ್ರಾಣಿಗಳಲ್ಲಿ ವೇದಜ್ಞಾನಿ ಪುಣ್ಯಗಳಲ್ಲಿ ಪರೋಪಕಾರದ ಪುಣ್ಯ. ವಿದ್ಯೆಗಳಲ್ಲಿ ವೇದ ವಿದ್ಯೆ, ಮಂತ್ರಗಳಲ್ಲಿ ಓಂಕಾರ, ಧ್ಯಾನಗಳಲ್ಲಿ ಹರಿಧ್ಯಾನ, ತಪಸ್ಸುಗಳಲ್ಲಿ ಸತ್ಯ ಸ್ವಧರ್ಮಾಚರಣೆಗಳು, ಶೌಚಗಳಲ್ಲಿ ಮನಃ ಶುದ್ಧಿ, ದಾನಗಳಲ್ಲಿ ಅಭಯ ದಾನ, ಗುಣಗಳಲ್ಲಿ ಅಲೋಭ ಅಕ್ಷೋಭಗಳು ಹೇಗೆ ಶ್ರೇಷ್ಠವೆನಿಸುವುವೋ ಹಾಗೆಯೇ ಮಾಸಗಳಲ್ಲಿ ವೈಶಾಖವೇ ಶ್ರೇಷ್ಠವೆನಿಸುತ್ತದೆ.

**ವೈಶಾಖಾಂತಾನಿ ಪಾಪನಿ ಸೂರ್ಯಾಂತಾನಿ ತಮಾಂಸಿ ಚ ।**
**ಪರೋಪಕಾರ ಪೈಶುನ್ಯ ಪ್ರಾಂತಾನಿ ಸುಕೃತಾನಿ ಚ ॥**

ಸೂರ್ಯನು ಕತ್ತಲೆಗೆ ಕೊನೆ. ಪರೋಪಕಾರದಲ್ಲಿ ಚಾಡಿ ಹೇಳುವುದು ಕೊನೆ. ವೈಶಾಖ ಮಾಸವು ಪಾಪಗಳಿಗೆ ಕೊನೆ.

ಕಾರ್ತಿಕದಲ್ಲಿ ಸೂರ್ಯನು ತುಲಾರಾಶಿಗೆ ಬಂದಾಗ ಮಾಡುವ ಸ್ನಾನ ದಾನ ಮುಂತಾದವುಗಳಿಗೆ ಪರಾರ್ಧದಷ್ಟು ಹೆಚ್ಚಿನ ಪುಣ್ಯವಿದೆ. ಅದಕ್ಕಿಂತ ಸಾವಿರದಷ್ಟು ಪುಣ್ಯವು ಮಾಘದಲ್ಲಿ ಸೂರ್ಯನು ಮಕರರಾಶಿಗೆ ಬಂದಾಗ ಮಾಡುವ ಸ್ನಾನ ದಾನಗಳಿಗಿದೆ. ಅದಕ್ಕಿಂತ ನೂರರಷ್ಟು ಪುಣ್ಯವು ವೈಶಾಖದಲ್ಲಿ ಮೇಷರಾಶಿಯಲ್ಲಿ ಸೂರ್ಯನಿರುವಾಗ ಮಾಡುವ ಸ್ನಾನ ದಾನಗಳಿಗಿವೆ.

ವೈಶಾಖದಲ್ಲಿ ಪ್ರಾತಃಸ್ನಾನ, ಹರಿಪೂಜೆ, ಯಜ್ಞ, ದಾನ, ಉಪವಾಸ ಹವಿಷ್ಯ ಭೋಜನ, ಬ್ರಹ್ಮಚರ್ಯಗಳು ಮಹಾಪಾತಕಗಳನ್ನು ಕಳೆಯುತ್ತವೆ. ಪುಣ್ಯಕರವಾದ ಅಶ್ವಮೇಧದಂಥ ಯಾಗಗಳು ಕಲಿಯುಗದಲ್ಲಿ ನಡೆಯುವುದಿಲ್ಲ. ಆದರೆ ಅವುಗಳಷ್ಟು ಪುಣ್ಯಕರವಾದ ವೈಶಾಖ ಮಾಸದ ಅನುಷ್ಠಾನಗಳು ಸುಲಭವಾಗಿ ನಡೆಯಬಲ್ಲವು.

ಅಶ್ವಮೇಧದ ಪುಣ್ಯವು ಸ್ವರ್ಗವನ್ನು ಕೊಡಬಲ್ಲದು. ಆದರೆ ಕಲಿಯುಗದ ಪಾಪಿಗಳು ಅದನ್ನು ತಿಳಿಯಲಾರರು. ಅವರು ನರಕಕ್ಕೆ ಹೋಗುವವರೆಂದೆ ಅಶ್ವಮೇಧದ ಪ್ರಚಾರವನ್ನು ಅಪ್ಪಾಗಿ ಮಾಡಿಲ್ಲ.

**ಸೂತ :-** ನಾರದನ ಈ ಮಾತನ್ನು ಕೇಳಿ ಅಂಬರೀಷನಿಗೆ ವಿಸ್ಮಯ ಉಂಟಾಯಿತು. ಅವನು ಕೇಳತೊಡಗಿದ.

**ಅಂಬರೀಷ :-** ಮಹರ್ಷಿಯೇ, ಮಾರ್ಗಶೀರ್ಷ ಮಾಸ ಮುಂತಾದುವನ್ನು ಬಿಟ್ಟು ವೈಶಾಖವನ್ನೆ ಏಕೆ ಪ್ರಶಂಸಿಸುತ್ತಿರುವೆ ? ಎಲ್ಲ ಮಾಸಗಳಿಗಿಂತಲೂ ವೈಶಾಖವೆ ಹರಿಗೆ ಪ್ರಿಯವೆನ್ನುವುದಾದರೆ ಆ ಮಾಸದಲ್ಲಿ ಏನು ಅನುಷ್ಠಾನ ಮಾಡಬೇಕು? ಯಾವ ದಾನ ತಪಸ್ಸುಗಳನ್ನು ಮಾಡಬೇಕು? ಮಾಸದ ಅಧಿ ದೇವತೆ ಯಾವದು? ನಿನ್ನ ಪಾದ ಧೂಳಿಯಿಂದ ನಾನೀಗಾಗಲೆ ಪವಿತ್ರನಾಗಿದ್ದೇನೆ. ಇನ್ನು ಉಪದೇಶವನ್ನು ನೀಡಿ ಅನುಗ್ರಹಿಸಬೇಕು.

ನೀನು ಧರ್ಮಜ್ಞ, ಧರ್ಮೋಪದೇಶಕ ಧರ್ಮಾಚರಣೆ ಮಾಡುವವನೂ ಅದನ್ನು ಉಪದೇಶಿಸುವವನೂ ಅನುಮೋದಿಸುವವನೂ ಪ್ರೇರೆಪಿಸುವವನೂ ಪುಣ್ಯದಲ್ಲಿ

ಸಮಭಾಗಿಗಳೆಂದು ಶಾಸ್ತ್ರಜ್ಞರು ಹೇಳುತ್ತಾರೆ. ವ್ರತ ಯಜ್ಞ ತಪಸ್ಸು ದಾನಗಳ ಪುಣ್ಯ ಕೇವಲ ಧರ್ಮೋಪದೇಶದಿಂದಲೇ ದೊರಕಬಲ್ಲುದು. ಆದುದರಿಂದ ನೀನು ನನಗೆ ಉಪದೇಶಿಸು. ಈ ರಾಜ್ಯ ಸಂಪತ್ತುಗಳ ಲಾಭದಿಂದ ನನಗೆ ದೊರೆಯದ ಸುಖ ನಿನ್ನ ಸಮಾಗಮನದಿಂದ ದೊರೆಯುತ್ತಿದೆ.

**ನಾರದ :-** ರಾಜನೆ, ವೈಶಾಖ ಮಾಸದಲ್ಲಿ ಮಾಡಬೇಕಾದ ಅನುಷ್ಠಾನಗಳನ್ನು ಹಿಂದೆ ಬ್ರಹ್ಮನು ಹೇಳಿದ್ದಾನೆ. ಅದನ್ನೆ ಹೇಳುತ್ತೇನೆ, ಕೇಳು.

ಭಾರತ ವರ್ಷದಲ್ಲಿ ಜನ್ಮ ತಾಳುವುದೆ ದುರ್ಲಭ. ಅದರಲ್ಲಿಯೂ ಮನುಷ್ಯ ಜನ್ಮ ದುರ್ಲಭ. ಮನುಷ್ಯ ಜನ್ಮದಲ್ಲಿ ಸ್ವಧರ್ಮಾಚರಣೆ ಮಾಡುವುದು ಇನ್ನೂ ದುರ್ಲಭ. ಸ್ವಧರ್ಮಾಚರಣೆ ಮಾಡಿಕೊಂಡಿದ್ದರೂ ವಾಸುದೇವನಲ್ಲಿ ಭಕ್ತಿ ಹೊಂದುವುದು ಮತ್ತೂ ದುರ್ಲಭ. ಅದು ದೊರೆತರೂ ವೈಶಾಖದಲ್ಲಿ ಧರ್ಮಾನುಷ್ಠಾನ ಮಾಡುವುದು ಎಲ್ಲಕ್ಕಿಂತ ದುರ್ಲಭ. ಅದನ್ನು ಮಾಡುವವರೆ ಧನ್ಯರು. ಅವರನ್ನು ಕಂಡರೆ ಪಾಪಿಗಳೂ ಶುದ್ಧರಾಗಿ ಭಗವದ್ಭಕ್ತರಾಗಿ ಧರ್ಮಾನುರಾಗಿಗಳಾಗುತ್ತಾರೆ.

ವೈಶಾಖ ಪ್ರಾತಃಸ್ನಾನವನ್ನು ವಿಧಿವತ್ತಾಗಿ ಮಾಡುವವರು ನಂದನವನದಲ್ಲಿ ಕೋಟಿವರ್ಷಗಳ ಕಾಲ ವಿಹಾರ ಮಾಡುತ್ತಾರೆ ಸಮುದ್ರದಂಥ ಜಲಾಶಯವು ಹೇಗೆ ಇನ್ನೊಂದಿಲ್ಲವೊ ಹಾಗೆ ಈ ವೈಶಾಖಕ್ಕೆ ಸಮನಾದ ಇನ್ನೊಂದು ಮಾಸವಿಲ್ಲ. ಮಾನವ ಶರೀರದಲ್ಲಿ ಪಾಪಗಳು ಇರುವುದಾದರೆ ಅದು ವೈಶಾಖದ ಧರ್ಮಾನುಷ್ಠಾನವಿಲ್ಲದಾಗ ಮಾತ್ರ ಎನ್ನಬೇಕು. ವೈಶಾಖದ ಕೊನೆಯ ಏಕಾದಶಿಯಿಂದ ತೊಡಗಿ ಐದು ದಿನಗಳಲ್ಲಿ ಪ್ರತಿಯೊಂದು ದಿನವೂ ಇಡಿಯ ಮಾಸಕ್ಕೆ ಸಮಾನ. ವೈಶಾಖದಲ್ಲಿ ಮಧುಸೂಧನನನ್ನು ನಾನಾ ಉಪಚಾರಗಳಿಂದ ಪೂಜಿಸಿದರೆ ಜನ್ಮವು ಸಫಲವಾಗುವುದು. ದುರ್ಲಭವಾದ ಎಲ್ಲ ಅಭೀಷ್ಟಗಳೂ ಲಭಿಸುವವು. ಅವನನ್ನು ಧ್ಯಾನಿಸದವನು ದಾನ ಹೋಮ ಜಪ ತೀರ್ಥ ಕ್ಷೇತ್ರದಲ್ಲಿ ಮರಣ ಇವಾವುದನ್ನು ಮಾಡಿದರೂ ಮಾಡದಿದ್ದಂತೆಯೆ. ಅವರ ಜನ್ಮ ವ್ಯರ್ಥ. ಅದು ಹಣವುಳ್ಳವನು ಲೋಭಿಯಾಗಿದ್ದು ಯಾರಿಗೂ ಕೊಡದೆ ಸಾಯುವಾಗ ಬಿಟ್ಟುಹೋಗುವ ಹಣದಂತಾಗುತ್ತದೆ.

ಕಾರ್ತಿಕ, ಮಾಘ, ವೈಶಾಖಗಳಲ್ಲಿ ಸ್ನಾನ ಮಾಡಿ ದಾಮೋದರ, ಮಾಧವ. ಮಧುಸೂಧನರನ್ನು ಭಕ್ತಿಯಿಂದ ಆರಾಧಿಸಿ ದಾನಗಳನ್ನು ಕೊಟ್ಟರೆ ಐಹಿಕ ಸುಖವನ್ನೂ ವಿಷ್ಣುಲೋಕವನ್ನೂ ಪಡೆಯಬಹುದು. ಸೂರ್ಯೋದಯದಿಂದ ಕತ್ತಲೋಡುವಂತೆ ವೈಶಾಖ ಸ್ನಾನದಿಂದ ಅನೇಕ ಜನ್ಮಗಳ ಪಾಪಗಳೋಡುತ್ತವೆ ಎಂದು ಬ್ರಹ್ಮನು ನನಗೆ ಉಪದೇಶಿಸಿದ್ದಾನೆ. ವೈಶಾಖದ ಮಹತ್ವವನ್ನು ವಿಷ್ಣುವು ಭೂಮಿಯಲ್ಲಿ ಪ್ರಚಾರ ಮಾಡಿದ್ದರಿಂದ ಯಮನು ಗೋಪ್ಯವಾಗಿಟ್ಟುಕೊಂಡಿದ್ದ ಒಂದು ರಹಸ್ಯವನ್ನು ಬಯಲು ಮಾಡದಂತಾಗಿದೆ. ಆದ್ದರಿಂದ ವೈಶಾಖದಲ್ಲಿ ಗಂಗೆ ನರ್ಮದೆ ಯಮುನೆ ಸರಸ್ವತಿ ನದಿಗಳಲ್ಲಿ ಬೆಳಿಗ್ಗೆ ಸೂರ್ಯೋದಯಕ್ಕೆ ಮುಂಚೆ ವಿಧಿವತ್ತಾಗಿ ಸ್ನಾನ ಮಾಡಬೇಕು. ಮಧುಸೂದನನ್ನು ಪೂಜಿಸಬೇಕು. ಅದರಿಂದ ಇಹದಲ್ಲಿ ಪುತ್ರ ಪೌತ್ರಾದಿ ಸಂಪತ್ತನ್ನು ಅನುಭವಿಸಿ ಕೊನೆಗೆ ಅಕ್ಷಯ ಸುಖವನ್ನೂ ಪಡೆಯಬಹುದು.

ರಾಜನೆ, ನೀನೂ ಹಾಗೆ ಮಾಡು. ಚೈತ್ರ ಪೌರ್ಣಮಿಯಂದು ಈ ವ್ರತವನ್ನು ಪ್ರಾರಂಭಿಸು. ಯಮನಿಯಮಗಳಿಂದಿದ್ದು ಶಕ್ತ್ಯಾನುಸಾರ ದಾನ ಮಾಡು. ಹವಿಷ್ಯಾನ್ನ ಉಂಡು ನೆಲದ ಮೇಲೆ ಮಲಗುತ್ತ ಬ್ರಹ್ಮಚರ್ಯವನ್ನು ಪಾಲಿಸು. ಕೃಚ್ಛ್ರ ಮುಂತಾದ ತಪಸ್ಸಿನಿಂದ ಶರೀರವನ್ನು ಸೊರಗಿಸಿ ಕೊಳ್ಳು. ನಾರಾಯಣನನ್ನು ಹೃದಯದಲ್ಲಿ ಧ್ಯಾನಿಸು. ಮಧು ತಿಲಾದಿ ದಾನಗಳನ್ನು ಗೋದಾನ ಅನ್ನದಾನಗಳನ್ನೂ ಮಾಡು. ಜ್ಞಾನಿಗಳಿಂದ ವೈಶಾಖ ಸ್ನಾನದ ಪೂರ್ಣ ಫಲಸಿಗಲೆಂದು ಆಶೀರ್ವಾದವನ್ನು ಪಡೆ. ನಾರಾಯಣನಿಗೆ ಲಕ್ಷ್ಮಿ ಹೇಗೆ ಪ್ರಿಯಳೊ ಹಾಗೆ ಮಧುಸೂದನನಿಗೆ ವೈಶಾಖ ಮಾಸವು ಪ್ರಿಯವೆನಿಸಿದೆ. ಆದುದರಿಂದ ವಿಧ್ಯುಕ್ತವಾಗಿ ಹನ್ನೆರಡು ವರ್ಷಗಳ ಕಾಲ ವೈಶಾಖ ಸ್ನಾನವನ್ನಾಚರಿಸಿ ಉದ್ಯಾಪನ ಮಾಡಬೇಕು. ಆಗ ಮಧುಸೂದನನು ಒಲಿಯುತ್ತಾನೆ. ಇದು ವೈಶಾಖ ಮಾಸದ ಮಹಿಮೆ; ಹಿಂದೆ ಬ್ರಹ್ಮನು ನನಗೆ ಉಪದೇಶಿಸಿದುದು.

**ಸೂತ ಉವಾಚ**

**ಸೂತ** :- ಅಂಬರೀಷ ಮಹಾರಾಜನು ನಾರದನ ಈ ಉಪದೇಶ ಕೇಳಿ ಆಶ್ಚರ್ಯಪಟ್ಟು ಮನಸ್ಸಿನಲ್ಲಿಯೆ ಹರಿಯನ್ನು ಚಿಂತಿಸುತ್ತ ಮುನಿಗೆ ನಮಸ್ಕರಿಸಿ ಹೇಳಿದ.

**ಅಂಬರೀಷ** :- ಮುನಿಯೆ, ಕೇವಲ ಸ್ನಾನದಿಂದಲೆ ಅಷ್ಟು ಸುಲಭವಾಗಿ ದುರ್ಲಭವಾದ ಫಲವನ್ನು ಹೊಂದುವುದು ಹೇಗೆ ಸಾಧ್ಯ ? ಇದು ನನಗೆ ತಿಳಿಯಲಿಲ್ಲ.

**ನಾರದ** :- ರಾಜನೆ, ನೀನು ಹೇಳುವುದು ನಿಜವೆ. ಆದರೆ ಅಲ್ಪಾಯಾಸದಿಂದಲೂ ಮಹಾಫಲ ದೊರಕುತ್ತದೆ ಎಂಬುದರಲ್ಲಿ ಬ್ರಹ್ಮನ ಮಾತೆ ನಮಗೆ ಆಧಾರವಾಗಬಲ್ಲದು.

**ಧರ್ಮಸ್ಯ ಗತಯಃ ಸೂಕ್ಷ್ಮಾ ದುರ್ಜ್ಞೇಯಾ ಹೀಶ್ವರೈರಪಿ ।**
**ಮುಹ್ಯಂತೇ ಚಾತ್ರ ವಿದ್ವಾಂಸೋಽಚಿಂತ್ಯಶಕ್ತಿ ಹರೇಃ ಕೃತೌ ॥**

ಧರ್ಮವು ಫಲ ನೀಡುವ ರೀತಿ ಬಲು ಸೂಕ್ಷ್ಮ. ಎಂಥ ಸಮರ್ಥರಿಗೂ ಅದನ್ನು ತಿಳಿಯುವುದು ಕಷ್ಟ. ಅಚಿಂತ್ಯ ಶಕ್ತಿಯುಳ್ಳ ಹರಿಯ ಕಾರ್ಯ ವಿಧಾನವನ್ನು ವಿದ್ವಾಂಸರೂ ತಿಳಿಯಲಾರರು.

ವಿಶ್ವಾಮಿತ್ರರಂಥ ಕ್ಷತ್ರಿಯರೂ ಧರ್ಮದ ಪ್ರಭಾವದಿಂದ ಬ್ರಾಹ್ಮಣ್ಯವನ್ನು ಪಡೆದರೆಂದ ಮೇಲೆ ಆ ಧರ್ಮದ ಪ್ರಭಾವ ಎಷ್ಟು ಸೂಕ್ಷ್ಮವಿರಬಹುದು !

ಅಜಾಮಿಳನು ಧರ್ಮಪತ್ನಿಯನ್ನು ತ್ಯಾಗ ಮಾಡಿ ದಾಸಿಯನ್ನಿಟ್ಟುಕೊಂಡು ಅಧರ್ಮ ಮಾರ್ಗದಲ್ಲಿದ್ದ. ಸಾಯುವ ಕಾಲದಲ್ಲಿ ಮಗನ ಮೇಲಿನ ಪ್ರೀತಿಯಿಂದ ನಾರಾಯಣ ಎಂದು ಕೂಗಿ ಕರೆದ. ಅಷ್ಟರಿಂದಲೆ ಹರಿಯ ಧ್ಯಾನ ನಾಮ ಸ್ಮರಣೆಗಳನ್ನು ಹೊಂದಿ ಹರಿ ಪದವನ್ನೈದಿದ. ತಿಳಿಯದೆ ಬೆಂಕಿಯನ್ನು ಮುಟ್ಟಿದರೂ ಅದು ಸುಡುತ್ತದೆ. ಹಾಗೆಯೆ ಯಾವುದೇ ನೆವದಿಂದಲಾದರೂ ಹರಿನಾಮವನ್ನು ಉಚ್ಚರಿಸಿದರೆ ಮಹಾ ಫಲವನ್ನೆ ಕೊಡುತ್ತದೆ.

ವೇದವ್ಯಾಸ ಮಹರ್ಷಿಯು ವಾಸ್ತವವಾಗಿ ಕನ್ಯಾವಸ್ಥೆಯಲ್ಲಿದ್ದ ಸತ್ಯವತಿಯಲ್ಲಿ ಹುಟ್ಟಿದವನು. ಸೋದರರಾದ ಚಿತ್ರವೀರ್ಯ ವಿಚಿತ್ರವೀರ್ಯರು ಸತ್ತ ಮೇಲೆ ಅವರ ಹೆಂಡಿರಲ್ಲಿ ನಿಯೋಗದಿಂದ ವೇದವ್ಯಾಸನು ಪಾಂಡು ಧೃತರಾಷ್ಟ್ರರನ್ನು ಹುಟ್ಟಿಸಿದನು,

ಪಾಂಡು ಬದುಕಿರುವಾಗಲೆ ಅವನ ಹೆಂಡಿರಲ್ಲಿ ಯಮ ವಾಯು ಇಂದ್ರ ಅಶ್ವಿನಿ ದೇವತೆಗಳಿಂದ ಪಾಂಡವರು ಜನಿಸಿದರು. ಅವರೈವರೂ ಒಬ್ಬಳು ದ್ರೌಪದಿಯಲ್ಲಿ ರಮಿಸಿದರು.

ಹೀಗೆ ವ್ಯಾಸನ ಮಗ ಪಾಂಡು. ಅವನ ಮಕ್ಕಳಾದ ಪಾಂಡವರೂ ಅವರೆಲ್ಲರೂ ಒಬ್ಬಳು ಹೆಂಡತಿಯನ್ನು ಕಟ್ಟಿಕೊಂಡರು. ಹೀಗೆ ಲೋಕ ವಿರುದ್ಧವಾದುದು ಅವರ ವೃತ್ತಾಂತ. ಆದರೂ ಅದು ಪುಣ್ಯಕರ. ಆದ್ದರಿಂದ ಧರ್ಮವು ಅತಿ ಸೂಕ್ಷ್ಮ, ವಿಚಿತ್ರ.

ಕೆಲವೊಮ್ಮೆ ಬಹುದೊಡ್ಡ ಪೂರ್ವಪುಣ್ಯವು ಯಾವುದೊ ಒಂದು ಪ್ರತಿ ಬಂಧಕದಿಂದ ನಿಷ್ಕ್ರಿಯವಾಗಿರುತ್ತದೆ. ಆಗ ಯಾವುದಾದರೊಂದು ಸಣ್ಣಪುಣ್ಯ ಕರ್ಮದಿಂದ ಆ ಪ್ರತಿಬಂಧಕವು ದೂರವಾದರೆ ಅಪೂರ್ವ ಪುಣ್ಯದಿಂದ ಮಹಾಫಲ ದೊರೆಯಬಹುದು. ಅಂತೂ ಮಾಡಿದ ಕರ್ಮವೆಲ್ಲಿಯೂ ವ್ಯರ್ಥವಾಗುವುದಿಲ್ಲ. ದೊಡ್ಡ ಪುಣ್ಯದಿಂದ ಪಾಪನಾಶವಾಗಬಹುದು.

ರಾಜನೆ, ಮಹಾಪುಣ್ಯವು ಮಹಾಯಾಸ ಸಾಧ್ಯವಿರಬೇಕೆಂದು ನೀನು ಹೇಳುವುದು ಸರಿಯಲ್ಲ. ಹಾಗಿದ್ದರೆ ಬಹು ಶ್ರಮಮಹಿಸಿ ಉಳುವ ರೈತನು ಮಂತ್ರ ಜಪಿಸುವವನಿಗಿಂತ ಹೆಚ್ಚು ಪುಣ್ಯಶಾಲಿ ಎನ್ನಬೇಕಾದೀತು. ಸಿಂಹಾದಿ ಮೃಗಗಳನ್ನು ಬಿಟ್ಟು ಅನಾಯಾಸದಿಂದ ಗೋವಿನಿಂದಲೆ ವ್ರತೋಪಯೋಗಿಯಾದ ಪಂಚಗವ್ಯ ಪದಾರ್ಥಗಳನ್ನು ಪಡೆದರೆ ಪುಣ್ಯವಿಲ್ಲವೆಂದಾದೀತು. ಕರ್ಮವನ್ನು ಮಾಡುವಾಗ ಪಡುವ ಆಯಾಸವು ಹೆಚ್ಚುಕಡಿಮೆ ಎಂದೂ, ಆದರಿಂದ ಉಂಟಾಗುವ ಪುಣ್ಯ ಮಹತ್ತು ಅಲ್ಪ ಎನ್ನಲಾಗದು. ಶಾಸ್ತ್ರದಲ್ಲಿ ಹೇಳಿದಂತೆ ಎಲ್ಲವನ್ನೂ ಒಪ್ಪಬೇಕು. ಸಣ್ಣ ಬೆಂಕಿಯ ಕಿಡಿಯಿಂದ ದೊಡ್ಡ ಹುಲ್ಲಿನ ರಾಶಿ ಸುಟ್ಟುಹೋಗುವಂತೆ ಸ್ವಲ್ಪ ಕೃಷ್ಣಭಕ್ತಿ ಮಾಡಿದರೂ ತಿಳಿಯದೆ ಮಾಡಿರುವ ಬೆಟ್ಟದಂಥ ಪಾಪಗಳೂ ಉರಿದು ಹೋಗುವುವು. ವಿಷ್ಣುಭಕ್ತನಾದ ಜ್ಞಾನಿಯು ಎಷ್ಟೆ ಅಲ್ಪವಾದ ಕಾರ್ಯ ಮಾಡಿದರೂ ಅದು ಅಕ್ಷಯ ಫಲ ನೀಡಬಲ್ಲುದು. ಆದ್ದರಿಂದ ವೈಶಾಖ ಮಾಸದಲ್ಲಿ ಹರಿಯನ್ನಾರಾಧಿಸಿದರೆ ಎಲ್ಲ ಅಭೀಷ್ಟಗಳೂ ಸಿದ್ಧಿಸುವುದರಲ್ಲಿ ಸಂಶಯಬೇಡ.

ಮಾನವನು ಪವಿತ್ರವಾದ ಗಂಗಾಜಲದಲ್ಲಿ ಯೋಗ್ಯಕಾಲ ದೇಶದಲ್ಲಿ ಮಿಂದರೂ ಭಾವಶುದ್ಧಿ ಇಲ್ಲದಿದ್ದರೆ ಅದು ವ್ಯರ್ಥವೆ. ಗಂಗೆಯ ನೀರಿನಲ್ಲಿ ಎಷ್ಟೋ ಪ್ರಾಣಿಗಳಿವೆ. ದೇವಾಲಯಗಳಲ್ಲಿ ಪಕ್ಷಿಗಳಿರುತ್ತವೆ. ಕೆಲವೊಮ್ಮೆ ಅವು ಹೊಟ್ಟೆಗಿಲ್ಲದೆ ಉಪವಾಸದಿಂದ ಅಲ್ಲಿಯೆ ಸಾಯಬಹುದು. ಆದರೂ ಭಾವಶೂನ್ಯವಾಗಿರುವುದರಿಂದ ಸದ್ಗತಿಯನ್ನು ಅವು ಹೊಂದುವದಿಲ್ಲ.

**ಗಂಗಾದಿ ತೀರ್ಥೇಷು ವಸಂತಿ ಜೀ ವಾಃ ।**
**ದೇವಾಲಯೆ ಪಕ್ಷಿಗಣಾಶ್ಚ ನಿತ್ಯಂ ॥**

**ವಿನಾಶ ಮಾಯಾಂತಿ ಕೃತೋಪವಾಸಾ ।**
**ಭಾವೋಜ್ಝಿತಾ ನೈವ ಗತಿಂ ಲಭಂತೇ ॥**

ಆದ್ದರಿಂದ ಹೃತ್ಕಮಲದಲ್ಲಿ ಮಾಧವನನ್ನಿರಿಸಿಕೊಂಡು ಭಕ್ತಿಭಾವದಿಂದ ವೈಶಾಖ ಸ್ನಾನವನ್ನು ಮಾಡುತ್ತಿದ್ದರೆ ಅದರ ಪುಣ್ಯವೆಷ್ಟೆಂದು ಹೇಳಲಾಗದು. ಭಕ್ತಿ ಇಲ್ಲದೆ ಭಾವದಲ್ಲಿ ದುಷ್ಟನಾಗಿದ್ದರೆ ಉರಿವ ಬೆಂಕಿಗೆ ಹಾರಿದರೂ ಸ್ವರ್ಗಸಿಗಲಾರದು.

ರಾಜನೆ, ವೈಶಾಖ ಸ್ನಾನದ ಮಹಿಮೆಯ ವಿಷಯದಲ್ಲಿ ಸಂದೇಹ ಪಡಬೇಡ.

**ಸ್ವಲ್ಪಂ ಚಾಪಿ ಶುಭಂ ಕರ್ಮ ವಿಕರ್ಮಶತ ನಾಶನಂ**

ಒಂದು ಸಣ್ಣ ಪುಣ್ಯಕಾರ್ಯವೂ ನೂರು ಪಾಪಗಳನ್ನು ನಾಶ ಮಾಡೀತು. ರವಿಯು ಮೇಷರಾಶಿಗೆ ಬಂದಾಗ ತೀರ್ಥಸ್ನಾನ ಮಾಡಿದರೆ ಹರಿಯನ್ನು ಸ್ತುತಿಸಿದರೆ ಪಾಪಗಳೆಲ್ಲ ಅಂಜಿ ದೂರ ಓಡುವುವು.

ಗರುಡನ ಭಯದಿಂದ ಹಾವುಗಳೋಡುವಂತೆ ವೈಶಾಖಸ್ನಾನದಿಂದ ಪಾಪಗಳೋಡುವುವು. ಗಂಗೆಯಲ್ಲೋ ನರ್ಮದೆಯಲ್ಲೋ ಮೇಷಮಾಸದಲ್ಲಿ ಒಂದು ಅಥವಾ ಮೂರು ಹೊತ್ತು ಮಿಂದು ಪಾಪಪ್ರಶಮನ ಸ್ತೋತ್ರವನ್ನು ಪಠಿಸಿದರೆ ಎಲ್ಲ ಪಾಪಗಳಿಂದ ಮುಕ್ತನಾಗಿ ಪರಮಪದವನ್ನು ಹೊಂದಬಹುದು.

ಅಂಬರೀಷ, ವೈಶಾಖಸ್ನಾನ ಮಾಹಾತ್ಮ್ಯವನ್ನು ಸಂಕ್ಷೇಪವಾಗಿ ಹೇಳಿದ್ದೇನೆ. ಇನ್ನೇನು ಕೇಳಬಯಸುವೆ, ಹೇಳು.

*ಇತಿ ಪದ್ಮ ಮಹಾಪುರಾಣ ಭಾಗ-೨ರ ಪಾತಾಳ ಖಂಡದಲ್ಲಿ*
*ವೈಶಾಖ ಮಾಹಾತ್ಮ ಎಂಬ ಮೂವತ್ತಾರನೆ ಅಧ್ಯಾಯ ಮುಗಿದುದು*

—o—

## ಪಾಪಪ್ರಶಮನಸ್ತೋತ್ರ

ಅಧ್ಯಾಯ - ೩೭

**ಅಂಬರೀಷ** :- ಮುನಿಯೆ, ಆ ಪಾಪಪ್ರಶಮನ ಸ್ತೋತ್ರವನ್ನು ಕೇಳಲು ಬಯಸುತ್ತೇನೆ. ಪುಣ್ಯಕರ್ಮಾಚರಣೆಯ ಬಗ್ಗೆ ಉಪದೇಶವಿತ್ತು ನನ್ನನ್ನನುಗ್ರಹಿಸಿರುವಿ. ಯಾರ ನಾಮೋಚ್ಚಾರಣೆಯಿಂದಲೆ ವಿಷ್ಣುಲೋಕ ದೊರೆಯುವುದೊ ಆ ಮಧುಸೂದನನ ನಾಮ ಸ್ಮರಣೆ ಮಾಡುವವರೆ ಧನ್ಯರು. ಅವರ ಚರಿತ್ರೆಯನ್ನೂ ನನಗೆ ಹೇಳು.

**ಸೂತ** :- ಹರಿಯ ಪ್ರಿಯಭಕ್ತನಾದ ಅಂಬರೀಷನು ಹೀಗೆ ಕೇಳಿದಾಗ ವೈಶಾಖ ಸ್ನಾನದ ಆತುರವನ್ನೂ ತಡೆಹಿಡಿದುಕೊಂಡು ಪ್ರೀತಿಯಿಂದ ನಾರದನು ಹೇಳತೊಡಗಿದ.

**ನಾರದ** :- ರಾಜನೆ, ನಿನ್ನೊಡನೆ ಮುಕುಂದನ ಕುರಿತು ಸಂಭಾಷಣೆ ನಡೆಸುವುದು ವೈಶಾಖಮಾಸದ ಧರ್ಮಾಚರಣೆಗಿಂತಲೂ ಹೆಚ್ಚು ಪವಿತ್ರ ಕಾರ್ಯವೆಂದೇ ನಾನು ತಿಳಿದಿದ್ದೇನೆ. ಯಾರಿಗೆ ಜೀವನವೆ ಧರ್ಮಾಚರಣೆಗಾಗಿ, ಧರ್ಮಾಚರಣೆಯು ಹರಿಯ ಸಂತೋಷಕ್ಕಾಗಿ, ಹಗಲು ರಾತ್ರಿಯೂ ಪುಣ್ಯಸಂಪಾದನೆಗಾಗಿ ಇರುವುದೋ ಅವನೆ ವೈಷ್ಣವ, ವೈಶಾಖ ಸ್ನಾನದ ಫಲವನ್ನು ಸಂಕ್ಷೇಪವಾಗಿ ನಿನಗೆ ಹೇಳುತ್ತೇನೆ. ಪೂರ್ತಿಯಾಗಿ ಹೇಳಲು ನಮ್ಮ ತಂದೆಯಾದ ಬ್ರಹ್ಮನಿಗೂ ಶಕ್ಯವಿಲ್ಲ.

ಹಿಂದೊಮ್ಮೆ ಮುನಿಶರ್ಮನೆಂಬೊಬ್ಬ ಮುನಿ ತೀರ್ಥಯಾತ್ರೆ ಮಾಡುತ್ತ ವೈಶಾಖಮಾಸದಲ್ಲಿ ನರ್ಮದೆಯಲ್ಲಿ ಸ್ನಾನಮಾಡಲು ಹೋಗುತ್ತಿದ್ದ. ಶಮ ದಮಾದಿಗಳಿಂದ ಯುಕ್ತನಾದ ತ್ರಿಕಾಲಜ್ಞಾನಿ, ಆತ. ವಿಷ್ಣುಭಕ್ತ, ತೇಜಸ್ವಿ, ದಯಾಮಯ,

ಪಾಂಡು ಬದುಕಿರುವಾಗಲೆ ಅವನ ಹೆಂಡಿರಲ್ಲಿ ಯಮ ವಾಯು ಇಂದ್ರ ಅಶ್ವಿನಿ ದೇವತೆಗಳಿಂದ ಪಾಂಡವರು ಜನಿಸಿದರು. ಅವರೈವರೂ ಒಬ್ಬಳು ದ್ರೌಪದಿಯಲ್ಲಿ ರಮಿಸಿದರು.

ಹೀಗೆ ವ್ಯಾಸನ ಮಗ ಪಾಂಡು. ಅವನ ಮಕ್ಕಳಾದ ಪಾಂಡವರೂ ಅವರೆಲ್ಲರೂ ಒಬ್ಬಳು ಹೆಂಡತಿಯನ್ನು ಕಟ್ಟಿಕೊಂಡರು. ಹೀಗೆ ಲೋಕ ವಿರುದ್ಧವಾದುದು ಅವರ ವೃತ್ತಾಂತ. ಆದರೂ ಅದು ಪುಣ್ಯಕರ. ಆದ್ದರಿಂದ ಧರ್ಮವು ಅತಿ ಸೂಕ್ಷ್ಮ, ವಿಚಿತ್ರ.

ಕೆಲವೊಮ್ಮೆ ಬಹುದೊಡ್ಡ ಪೂರ್ವಪುಣ್ಯವು ಯಾವುದೊ ಒಂದು ಪ್ರತಿ ಬಂಧಕದಿಂದ ನಿಷ್ಕ್ರಿಯವಾಗಿರುತ್ತದೆ. ಆಗ ಯಾವುದಾದರೊಂದು ಸಣ್ಣಪುಣ್ಯ ಕರ್ಮದಿಂದ ಆ ಪ್ರತಿಬಂಧಕವು ದೂರವಾದರೆ ಅಪೂರ್ವ ಪುಣ್ಯದಿಂದ ಮಹಾಫಲ ದೊರೆಯಬಹುದು. ಅಂತೂ ಮಾಡಿದ ಕರ್ಮವೆಲ್ಲಿಯೂ ವ್ಯರ್ಥವಾಗುವುದಿಲ್ಲ. ದೊಡ್ಡ ಪುಣ್ಯದಿಂದ ಪಾಪನಾಶವಾಗಬಹುದು.

ರಾಜನೆ, ಮಹಾಪುಣ್ಯವು ಮಹಾಯಾಸ ಸಾಧ್ಯವಿರಬೇಕೆಂದು ನೀನು ಹೇಳುವುದು ಸರಿಯಲ್ಲ. ಹಾಗಿದ್ದರೆ ಬಹು ಶ್ರಮಮಹಿಸಿ ಉಳುವ ರೈತನು ಮಂತ್ರ ಜಪಿಸುವವನಿಗಿಂತ ಹೆಚ್ಚು ಪುಣ್ಯಶಾಲಿ ಎನ್ನಬೇಕಾದೀತು. ಸಿಂಹಾದಿ ಮೃಗಗಳನ್ನು ಬಿಟ್ಟು ಅನಾಯಾಸದಿಂದ ಗೋವಿನಿಂದಲೆ ವ್ರತೋಪಯೋಗಿಯಾದ ಪಂಚಗವ್ಯ ಪದಾರ್ಥಗಳನ್ನು ಪಡೆದರೆ ಪುಣ್ಯವಿಲ್ಲವೆಂದಾದೀತು. ಕರ್ಮವನ್ನು ಮಾಡುವಾಗ ಪಡುವ ಆಯಾಸವು ಹೆಚ್ಚು ಕಡಿಮೆ ಎಂದೂ, ಆದರಿಂದ ಉಂಟಾಗುವ ಪುಣ್ಯ ಮಹತ್ತು ಅಲ್ಪ ಎನ್ನಲಾಗದು. ಶಾಸ್ತ್ರದಲ್ಲಿ ಹೇಳಿದಂತೆ ಎಲ್ಲವನ್ನೂ ಒಪ್ಪಬೇಕು. ಸಣ್ಣ ಬೆಂಕಿಯ ಕಿಡಿಯಿಂದ ದೊಡ್ಡ ಹುಲ್ಲಿನ ರಾಶಿ ಸುಟ್ಟುಹೋಗುವಂತೆ ಸ್ವಲ್ಪ ಕೃಷ್ಣಭಕ್ತಿ ಮಾಡಿದರೂ ತಿಳಿಯದೆ ಮಾಡಿರುವ ಬೆಟ್ಟದಂಥ ಪಾಪಗಳೂ ಉರಿದು ಹೋಗುವುವು. ವಿಷ್ಣು ಭಕ್ತನಾದ ಜ್ಞಾನಿಯು ಎಷ್ಟೆ ಅಲ್ಪವಾದ ಕಾರ್ಯ ಮಾಡಿದರೂ ಅದು ಅಕ್ಷಯ ಫಲ ನೀಡಬಲ್ಲುದು. ಆದ್ದರಿಂದ ವೈಶಾಖ ಮಾಸದಲ್ಲಿ ಹರಿಯನ್ನಾರಾಧಿಸಿದರೆ ಎಲ್ಲ ಅಭೀಷ್ಟಗಳೂ ಸಿದ್ಧಿಸುವುದರಲ್ಲಿ ಸಂಶಯಬೇಡ.

ಮಾನವನು ಪವಿತ್ರವಾದ ಗಂಗಾಜಲದಲ್ಲಿ ಯೋಗ್ಯಕಾಲ ದೇಶದಲ್ಲಿ ಮಿಂದರೂ ಭಾವಶುದ್ಧಿ ಇಲ್ಲದಿದ್ದರೆ ಅದು ವ್ಯರ್ಥವೆ. ಗಂಗೆಯ ನೀರಿನಲ್ಲಿ ಎಷ್ಟೋ ಪ್ರಾಣಿಗಳಿವೆ. ದೇವಾಲಯಗಳಲ್ಲಿ ಪಕ್ಷಿಗಳಿರುತ್ತವೆ. ಕೆಲವೊಮ್ಮೆ ಅವು ಹೊಟ್ಟೆಗಿಲ್ಲದೆ ಉಪವಾಸದಿಂದ ಅಲ್ಲಿಯೆ ಸಾಯಬಹುದು. ಆದರೂ ಭಾವಶೂನ್ಯವಾಗಿರುವುದರಿಂದ ಸದ್ಗತಿಯನ್ನು ಅವು ಹೊಂದುವದಿಲ್ಲ.

**ಗಂಗಾದಿ ತೀರ್ಥೇಷು ವಸಂತಿ ಜೀ ವಾಃ ।**
**ದೇವಾಲಯೆ ಪಕ್ಷಿಗಣಾಶ್ಚ ನಿತ್ಯಂ ॥**

**ವಿನಾಶ ಮಾಯಾಂತಿ ಕೃತೋಪವಾಸಾ ।**
**ಭಾವೋಜ್ಝಿತಾ ನೈವ ಗತಿಂ ಲಭಂತೇ ॥**

ಆದ್ದರಿಂದ ಹೃತ್ಕಮಲದಲ್ಲಿ ಮಾಧವನನ್ನಿರಿಸಿಕೊಂಡು ಭಕ್ತಿಭಾವದಿಂದ ವೈಶಾಖ ಸ್ನಾನವನ್ನು ಮಾಡುತ್ತಿದ್ದರೆ ಅದರ ಪುಣ್ಯವೆಷ್ಟೆಂದು ಹೇಳಲಾಗದು. ಭಕ್ತಿ ಇಲ್ಲದೆ ಭಾವದಲ್ಲಿ ದುಷ್ಟನಾಗಿದ್ದರೆ ಉರಿವ ಬೆಂಕಿಗೆ ಹಾರಿದರೂ ಸ್ವರ್ಗಸಿಗಲಾರದು.

ರಾಜನೆ, ವೈಶಾಖ ಸ್ನಾನದ ಮಹಿಮೆಯ ವಿಷಯದಲ್ಲಿ ಸಂದೇಹ ಪಡಬೇಡ.

**ಸ್ವಲ್ಪಂ ಚಾಪಿ ಶುಭಂ ಕರ್ಮ ವಿಕರ್ಮಶತ ನಾಶನಂ**

ಒಂದು ಸಣ್ಣ ಪುಣ್ಯಕಾರ್ಯವೂ ನೂರು ಪಾಪಗಳನ್ನು ನಾಶ ಮಾಡೀತು. ರವಿಯು ಮೇಷರಾಶಿಗೆ ಬಂದಾಗ ತೀರ್ಥಸ್ನಾನ ಮಾಡಿದರೆ ಹರಿಯನ್ನು ಸ್ತುತಿಸಿದರೆ ಪಾಪಗಳೆಲ್ಲ ಅಂಜಿ ದೂರ ಓಡುವುವು.

ಗರುಡನ ಭಯದಿಂದ ಹಾವುಗಳೋಡುವಂತೆ ವೈಶಾಖಸ್ನಾನದಿಂದ ಪಾಪಗಳೋಡುವುವು. ಗಂಗೆಯಲ್ಲೋ ನರ್ಮದೆಯಲ್ಲೋ ಮೇಷಮಾಸದಲ್ಲಿ ಒಂದು ಅಥವಾ ಮೂರು ಹೊತ್ತು ಮಿಂದು ಪಾಪಪ್ರಶಮನ ಸ್ತೋತ್ರವನ್ನು ಪಠಿಸಿದರೆ ಎಲ್ಲ ಪಾಪಗಳಿಂದ ಮುಕ್ತನಾಗಿ ಪರಮಪದವನ್ನು ಹೊಂದಬಹುದು.

ಅಂಬರೀಷ, ವೈಶಾಖಸ್ನಾನ ಮಾಹಾತ್ಮ್ಯವನ್ನು ಸಂಕ್ಷೇಪವಾಗಿ ಹೇಳಿದ್ದೇನೆ. ಇನ್ನೇನು ಕೇಳಬಯಸುವೆ, ಹೇಳು.

*ಇತಿ ಪದ್ಮ ಮಹಾಪುರಾಣ ಭಾಗ-೨ರ ಪಾತಾಳ ಖಂಡದಲ್ಲಿ*
*ವೈಶಾಖ ಮಾಹಾತ್ಮ ಎಂಬ ಮೂವತ್ತಾರನೆ ಅಧ್ಯಾಯ ಮುಗಿದುದು*



## ಪಾಪಪ್ರಶಮನಸ್ತೋತ್ರ

**ಅಧ್ಯಾಯ - ೩೭**

**ಅಂಬರೀಷ** :- ಮುನಿಯೆ, ಆ ಪಾಪಪ್ರಶಮನ ಸ್ತೋತ್ರವನ್ನು ಕೇಳಲು ಬಯಸುತ್ತೇನೆ. ಪುಣ್ಯಕರ್ಮಾಚರಣೆಯ ಬಗ್ಗೆ ಉಪದೇಶವಿತ್ತು ನನ್ನನ್ನನುಗ್ರಹಿಸಿರುವಿ. ಯಾರ ನಾಮೋಚ್ಚಾರಣೆಯಿಂದಲೆ ವಿಷ್ಣುಲೋಕ ದೊರೆಯುವುದೊ ಆ ಮಧುಸೂದನನ ನಾಮ ಸ್ಮರಣೆ ಮಾಡುವವರೆ ಧನ್ಯರು. ಅವರ ಚರಿತ್ರೆಯನ್ನೂ ನನಗೆ ಹೇಳು.

**ಸೂತ** :- ಹರಿಯ ಪ್ರಿಯಭಕ್ತನಾದ ಅಂಬರೀಷನು ಹೀಗೆ ಕೇಳಿದಾಗ ವೈಶಾಖ ಸ್ನಾನದ ಆತುರವನ್ನೂ ತಡೆಹಿಡಿದುಕೊಂಡು ಪ್ರೀತಿಯಿಂದ ನಾರದನು ಹೇಳತೊಡಗಿದ.

**ನಾರದ** :- ರಾಜನೆ, ನಿನ್ನೊಡನೆ ಮುಕುಂದನ ಕುರಿತು ಸಂಭಾಷಣೆ ನಡೆಸುವುದು ವೈಶಾಖಮಾಸದ ಧರ್ಮಾಚರಣೆಗಿಂತಲೂ ಹೆಚ್ಚು ಪವಿತ್ರ ಕಾರ್ಯವೆಂದೇ ನಾನು ತಿಳಿದಿದ್ದೇನೆ. ಯಾರಿಗೆ ಜೀವನವೆ ಧರ್ಮಾಚರಣೆಗಾಗಿ, ಧರ್ಮಾಚರಣೆಯು ಹರಿಯ ಸಂತೋಷಕ್ಕಾಗಿ, ಹಗಲು ರಾತ್ರಿಯೂ ಪುಣ್ಯಸಂಪಾದನೆಗಾಗಿ ಇರುವುದೋ ಅವನೆ ವೈಷ್ಣವ, ವೈಶಾಖ ಸ್ನಾನದ ಫಲವನ್ನು ಸಂಕ್ಷೇಪವಾಗಿ ನಿನಗೆ ಹೇಳುತ್ತೇನೆ. ಪೂರ್ತಿಯಾಗಿ ಹೇಳಲು ನಮ್ಮ ತಂದೆಯಾದ ಬ್ರಹ್ಮನಿಗೂ ಶಕ್ಯವಿಲ್ಲ.

ಹಿಂದೊಮ್ಮೆ ಮುನಿಶರ್ಮನೆಂಬೊಬ್ಬ ಮುನಿ ತೀರ್ಥಯಾತ್ರೆ ಮಾಡುತ್ತ ವೈಶಾಖಮಾಸದಲ್ಲಿ ನರ್ಮದೆಯಲ್ಲಿ ಸ್ನಾನಮಾಡಲು ಹೋಗುತ್ತಿದ್ದ. ಶಮ ದಮಾದಿಗಳಿಂದ ಯುಕ್ತನಾದ ತ್ರಿಕಾಲಜ್ಞಾನಿ, ಆತ. ವಿಷ್ಣುಭಕ್ತ, ತೇಜಸ್ವಿ, ದಯಾಮಯ,

ಕಾಡುದಾರಿಯಲ್ಲಿ ಒಂದು ಆಲದ ಮರದ ಕೆಳಗೆ ಐದುಮಂದಿ ಕಪ್ಪುಮೈಯ ಜನರು ದುಃಖದಿಂದ ಸುತ್ತಲೂ ನೋಡುತ್ತ ಕುಳಿತಿರುವುದನ್ನು ಆತ ಕಂಡ.

ಈ ಭಯಂಕರವಾದ ಕಾಡಿನಲ್ಲಿ ಇವರೇಕೆ ಕುಳಿತಿದ್ದಾರೆ ? ಕಾಡಿಗೆಯಂತೆ ಹೊಳೆವ ಕಪ್ಪು ಮೈ, ವಿಕೃತ ಆಕಾರಗಳಿಂದ ಪಾಪಿಗಳಂತೆ ಕಾಣುತ್ತಿದ್ದಾರೆ. ಕಳ್ಳರೆ ಆಗಿರಬಹುದೆ ?' ಎಂದು ಅವನು ಆಲೋಚಿಸುತ್ತಿದ್ದಂತೆ ಅವರೆ ಬಂದು ಕೈಮುಗಿದು ಹೇಳಿದರು.

'ಮಹಾತ್ಮನೆ, ನೀನು ಒಬ್ಬ ಉತ್ತಮ ಪುರುಷನೆಂದು ನಂಬಿದ್ದೇವೆ. ನಮ್ಮ ದುಃಖವನ್ನು ನಿನ್ನಲ್ಲಿ ಹೇಳುತ್ತೇವೆ ಕೇಳು. ದೈವಾತ್ ಪಾಪ ಕರ್ಮದಲ್ಲಿ ತೊಡಗಿದ ದೀನರಿಗೆ ಸಜ್ಜನರು ಆಶ್ರಯ ಕೊಡುತ್ತಾರೆ. ದರ್ಶನ ಮಾತ್ರದಿಂದಲೆ ಅವರ ದುಃಖವನ್ನು ಕಳೆಯುತ್ತಾರೆ. ನಾನು ಪಂಚಾಲ ದೇಶದ ಕ್ಷತ್ರಿಯ. ನರವಾಹನನೆಂದು ಹೆಸರು. ತಿಳಿಯದೆ ಒಬ್ಬ ಬ್ರಾಹ್ಮಣನನ್ನು ದಾರಿಯಲ್ಲಿ ಬಾಣದಿಂದ ಹೊಡೆದು ಕೊಂದೆ. ಶಿಖೆಯ ಯಜ್ಞೋಪವೀತ ತಿಲಕಗಳಿಲ್ಲದೆ ದೇಶಾಟನೆ ಮಾಡುತ್ತ 'ಬ್ರಹ್ಮಹತ್ಯಾ ಪಾತಕಿ ನಾನು ಬರುತ್ತಿದ್ದೇನೆ, ಭಿಕ್ಷೆ ನೀಡಿರೆನ್ನುತ್ತ ಎಲ್ಲ ತೀರ್ಥಗಳಲ್ಲಿ ಸಂಚರಿಸಿದ್ದೇನೆ. ಇನ್ನೂ ನನ್ನ ಪಾಪ ದೂರವಾಗಲಿಲ್ಲ. ಇಂದಿಗೆ ಒಂದು ವರ್ಷ ಕಳೆಯಿತು. ದುಃಖದಿಂದ ಮನಸ್ಸಿನಲ್ಲಿ ಬೆಂದು ಹೋಗುತ್ತಿದ್ದೇನೆ. ಇವನು ಚಂದ್ರಶರ್ಮನೆಂಬ ಬ್ರಾಹ್ಮಣ ಮಗಧ ದೇಶದವನು. ಬಂಧುಗಳು ಅವನನ್ನು ತ್ಯಜಿಸಿದರು. ಎಲ್ಲ ಊರುಗಳಲ್ಲಿ ಅಲೆಯುತ್ತ ದೈವಾತ್ ಇಲ್ಲಿ ನಮ್ಮೊಡನೆ ಸೇರಿದ್ದಾನೆ. ಶಿಖೆ ಯಜ್ಞೋಪವೀತ ಮುಂತಾದ ಬ್ರಾಹ್ಮಣ ಚಿಹ್ನೆ ಇಲ್ಲದುದನ್ನು ಕಂಡು ನಾನು ಕೇಳಿದಾಗ ತನ್ನ ವೃತ್ತಾಂತವನ್ನೆಲ್ಲ ಹೇಳಿದ. ಗುರುಕುಲದಲ್ಲಿ ವಾಸಮಾಡುತ್ತ ಒಮ್ಮೆ ಕೋಪಾವೇಶದಲ್ಲಿ ಮೂಢನಾಗಿ ಗುರುವನ್ನೇ ಕೊಂದನಂತೆ. ಈಗ ಅವನೂ ಪಾಪದಿಂದ ದಗ್ಧನಾಗಿ ದುಃಖಿಸುತ್ತಿದ್ದಾನೆ. ಈ ಮೂರನೆಯವನು ದೇವಶರ್ಮನೆಂಬ ಬ್ರಾಹ್ಮಣ ವೇಶ್ಯಾ ಸಂಸರ್ಗದಿಂದ ವಿವೇಕವನ್ನು ಕಳೆದುಕೊಂಡು ಸುರಪಾನಕ್ಕಿಳಿದನಂತೆ. ನಾನು ಕೇಳಿದಾಗ ತನ್ನೆಲ್ಲ ವೃತ್ತಾಂತವನ್ನೂ ಹೇಳಿದ್ದಾನೆ. ಅವನನ್ನು ಹೆಂಡತಿಯೂ ಬಂಧು ಜನರೂ ಊರವರೂ ತೊರದುದರಿಂದ ಎಲ್ಲೆಡೆ ಅಲೆಯುತ್ತ ಇಲ್ಲಿಗೆ ಬಂದಿದ್ದಾನೆ. ತನ್ನ ಪಾಪಕ್ಕೆ ಪಶ್ಚಾತ್ತಾಪ ಪಡುತ್ತಿದ್ದಾನೆ. ಈ ನಾಲ್ಕನೆಯವನು ವಿಧರನೆಂಬ ವೈಶ್ಯ. ವೇಶ್ಯೆಯಾಗಿದ್ದ ತನ್ನ ತಾಯಿಯೊಡನೆ ತಿಳಿಯದೆ ಮೂರು ತಿಂಗಳ ಕಾಲ ಸಂಸರ್ಗ ಮಾಡಿ ಗುರುತಲ್ಪಗಮನ ಪಾತಕವನ್ನು ಕಟ್ಟಿಕೊಂಡ. ಈಗ ತಿಳಿದು ದುಃಖಿಗೊಂಡಿದ್ದಾನೆ. ಈ ಐದನೆಯವನು ತಾನು ಪಾಪಿ, ಪಾಪಿಗಳ ಸಂಸರ್ಗವನ್ನೂ ಮಾಡಿದ್ದಾನೆ. ಹಣದಾಸೆಯಿಂದ ಅನೇಕ ಕಳವು ಮಾಡಿ ಬಂಧುಗಳಿಂದ ಪರಿತ್ಯಕ್ತನಾಗಿ ದೈವಾತ್ ಇಲ್ಲಿಗೆ ಬಂದಿದ್ದಾನೆ. ಇವನು ವೈಶ್ಯ ನಂದನೆಂದು ಹೆಸರು.

ನಾವು ಐವರೂ ಇಲ್ಲಿ ಸೇರಿದ್ದೇವೆ. ಅನ್ಯೋನ್ಯ ಕಷ್ಟಗಳನ್ನು ಹೇಳಿಕೊಳ್ಳುತ್ತಿದ್ದೇವೆ. ಆದರೆ ಅನ್ನ ಬಟ್ಟೆ ಮುಂತಾದವುಗಳ ವಿಷಯದಲ್ಲಿ ಪರಸ್ಪರ ಸಂಪರ್ಕವಿಟ್ಟುಕೊಂಡಿಲ್ಲ. ಒಂದೆಡೆ ಕುಳಿತುಕೊಳ್ಳುವುದಿಲ್ಲ. ಒಂದೆಡೆ ಮಲಗುವುದಿಲ್ಲ. ಹೀಗೆ ದುಃಖಿಸುತ್ತ ನಾನಾ ತೀರ್ಥಕ್ಷೇತ್ರಗಳಲ್ಲಿ ಸಂಚರಿಸಿದ್ದೇವೆ. ನಮ್ಮ ಘೋರ ಪಾತಕಗಳ ಮಾತ್ರ ತೊಲಗಲ್ಲೊಲ್ಲವು. ನಿನ್ನ ದಿವ್ಯ ತೇಜಸ್ಸನ್ನು ಕಂಡಾಗ ನಮ್ಮ ಮನಸ್ಸು ಪ್ರಸನ್ನವಾಗಿ ಹೇಳುತ್ತಿದೆ 'ಸತ್ಪುರುಷನಾದ ನಿನ್ನ ಪವಿತ್ರ ದರ್ಶನದಿಂದ ನಮ್ಮ ಪಾಪಗಳು ನಶಿಸುತ್ತವೆ' ಎಂದು.

ಸ್ವಾಮಿ, ನಾವು ನಮ್ಮ ಪಾಪಗಳನ್ನು ಕಳೆದುಕೊಳ್ಳುವ ಉಪಾಯವನ್ನು ಹೇಳು ನಮ್ಮನ್ನು ಉದ್ಧರಿಸು.

**ಮುನಿಶರ್ಮ :-** ನೀವು ತಿಳಿಯದೆ ಪಾಪವನ್ನು ಮಾಡಿದ್ದು ಅದನ್ನು ಹೇಳಿದ್ದೀರಿ ಸತ್ಯನುಡಿಯುತ್ತಿರುವಿರಿ. ಪಶ್ಚಾತ್ತಾಪವನ್ನೂ ಹೊಂದಿರುವಿರಿ. ಆದ್ದರಿಂದ ನಾನು ನಿಮಗೆ ಸಹಾಯ ಮಾಡುತ್ತೇನೆ. ನನ್ನ ಮಾತನ್ನು ಕೇಳಿ, ಕೈಯೆತ್ತಿ ಹೇಳುತ್ತೇನೆ. ಅಂಗಿರಸಮುನಿ ಎಲ್ಲ ಮುನಿಗಳೆದುರಿನಲ್ಲಿ ಹೇಳಿದ ಮಾತು ಇದು. ವೇದಶಾಸ್ತ್ರಗಳಲ್ಲಿಯೂ ಉಕ್ತವಾಗಿದ್ದು ಎಲ್ಲರಿಗೂ ನಂಬಲರ್ಹವಾದುದು. ವಿಷ್ಣುವನ್ನಾರಾಧಿಸಿದಾಗ ಅವನೂ ಈ ಮಾತನ್ನೇ ಹೇಳಿದ್ದಾನೆ. ಅದೇನೆಂದರೆ.

**ನ ತೃಪ್ತಿರಶನಾದನ್ಯಾ ನ ಗುರುರ್ಜನಕಾತ್ ಪರ**
**ನ ಪಾತ್ರ ಮನ್ಯದ್ವಿಪ್ರೇಭ್ಯೋ ನ ದೇವಃ ಕೇಶವಾತ್ ಪರಃ ॥**

ಊಟಕ್ಕಿಂತ ಹೆಚ್ಚಿನ ತೃಪ್ತಿಕೊಡುವ ಇನ್ನೊಂದು ಸಾಧನವಿಲ್ಲ. ತಂದೆಗಿಂತ ಹೆಚ್ಚಿನ ಗುರು ಇಲ್ಲ. ವಿಪ್ರನಂಥ ಸತ್ಪಾತ್ರನು ಇನ್ನೊಬ್ಬನಿಲ್ಲ. ಕೇಶವನಂಥ ದೇವ ಇನ್ನೊಬ್ಬನಿಲ್ಲ.

**ನ ಗಂಗಯಾ ಸಮಂ ತೀರ್ಥಂ ನ ದಾನಂ ಸುರಭೀಸಮಂ**
**ನ ಗಾಯತ್ರ್ಯಾ ಸಮಂ ಜಾಪ್ಯಂ ನೈಕಾದಶ್ಯಾ ಸಮಂ ವ್ರತಂ ॥**

ಗಂಗೆಯಂಥ ತೀರ್ಥ ಇನ್ನೊಂದಿಲ್ಲ. ಗೋದಾನಕ್ಕೆ ಸಮನಾದ ದಾನವಿಲ್ಲ. ಗಾಯತ್ರಿಗೆ ಸಮವಾದ ಜಪವಿಲ್ಲ. ಏಕಾದಶಿಯಂಥ ವ್ರತವಿನ್ನೊಂದಿಲ್ಲ.

**ನ ಭಾರ್ಯಯಾ ಸಮಂ ಮಿತ್ರಂ ನ ಧರ್ಮೋ ದಯಾ ಸಮಃ**
**ನ ಸ್ವಾತಂತ್ರ್ಯ ಸಮಂ ಸೌಖ್ಯಂ ಗಾರ್ಹಸ್ಥ್ಯಾನ್ನಾಶ್ರಮಃ ಪರಃ ॥**

ಮಡದಿಗೆ ಸಮನಾದ ಮಿತ್ರನಿಲ್ಲ. ದಯೆಗೆ ಸಮಾನವಾದ ಧರ್ಮವಿಲ್ಲ. ಸ್ವಾತಂತ್ರ್ಯಕ್ಕೆ ಸಮಾನವಾದ ಸೌಖ್ಯವಿಲ್ಲ. ಗೃಹಸ್ಥಾಶ್ರಮದಂಥ ಆಶ್ರಮ ಇನ್ನೊಂದಿಲ್ಲ.

**ನ ಸತ್ಯಾತ್ ಪರ ಆಚಾರೋ ನ ಸಂತೋಷ ಸಮಂ ಸುಖಂ**
**ನ ಮಾಧವ ಸಮೋ ಮಾಸೋ ಮಹಾಪಾಪಹರಃ ಪರಃ ॥**

ಸತ್ಯಕ್ಕಿಂತ ಬೇರೆ ಆಚಾರವಿಲ್ಲ. ತೃಪ್ತಿಗಿಂತ ಹೆಚ್ಚಿನ ಸುಖವಿಲ್ಲ. ವೈಶಾಖ ಮಾಸಕ್ಕೆ ಸಮಾನವಾದ ಪಾಪ ಪರಿಹಾರಕರವಾದ ಇನ್ನೊಂದು ಮಾಸವಿಲ್ಲ.

ಗಂಗಾದಿ ತೀರ್ಥಗಳಲ್ಲಿ ವೈಶಾಖ ಸ್ನಾನ ಮಾಡುವುದು ಬಹು ದುರ್ಲಭ. ಅಶ್ವಮೇಧದಂಥ ಪ್ರಾಯಶ್ಚಿತ್ತ ಕರ್ಮಗಳೂ ವೈಶಾಖ ಸ್ನಾನದ ಮುಂದೆ ಏನೂ ಅಲ್ಲ. ಹರಿಭಕ್ತನಾಗಿದ್ದು ವೈಶಾಖಮಾಸ ಪೂರ್ತಿಯಾಗಿ ಗಂಗೆಯಲ್ಲಿ ಮಿಂದರೆ ಎಲ್ಲ ಪಾಪಗಳಿಂದಲೂ ಮುಕ್ತನಾಗಿ ಪರಗತಿ ಹೊಂದಬಹುದು.

ಈ ಮಾಸದಲ್ಲಿ ಮಹಾ ನದಿಗಳಲ್ಲಿ ಸ್ನಾನ ಮಾಡುವುದೆ ವಿಶೇಷ. ಅದರಲ್ಲಿಯೂ ಗಂಗೆ ಯಮುನೆ ನರ್ಮದೆಯರಲ್ಲಿ ಸ್ನಾನ ಬಹಳ ವಿಶೇಷ ಫಲ ನೀಡುವುದು. ಆದ್ದರಿಂದ ನೀವು ನನ್ನೊಡನೆ ಈ ವೈಶಾಖ ಮಾಸದಲ್ಲಿ ನರ್ಮದಾ ಸ್ನಾನ ಮಾಡಿರಿ.

ಇದನ್ನು ಕೇಳಿ ಆ ಐವರೂ ಮುನಿಯೊಡನೆ ನರ್ಮದೆಯ ಬಳಿಗೆ ಹೋಗಿ ಪ್ರಾತಃಕಾಲದಲ್ಲಿ ಸ್ನಾನ ಮಾಡಿದರು. ಆಗ ಅವರ ಮೈ ಚಿನ್ನದಂತೆ ಹೊಳೆಯ ತೊಡಗಿತು. ಬಳಿಕ ಮುನಿಯು ಪಾಪ ಪ್ರಶಮನ ಸ್ತೋತ್ರವನ್ನು ಅವರಿಗೆ ಉಪದೇಶಿಸಿದ. ಆಗ ಅವರ ಕಾಂತಿ ಇನ್ನೂ ಹೆಚ್ಚಿತು.

ಜನರು ಇದನ್ನೆಲ್ಲ ನೋಡುತ್ತಿದ್ದರೂ ಇನ್ನೂ ಪಾಪಗಳಿರಬಹುದೆಂಬ ಭಯದಿಂದ ಸಮೀಪಕ್ಕೆ ಬರಲು ಹಿಂಜರಿದರು. ಕೊನೆಗೆ ಮುನಿಶರ್ಮನ ಇಚ್ಛೆಯಂತೆ ಒಂದು ಅಶರೀರ ವಾಣಿ ಕೇಳಿಸಿತು.

''ಇವರು ಐವರೂ ಈಗ ಪಾಪಗಳಿಂದ ಮುಕ್ತರಾಗಿರುವರು. ವೈಶಾಖ ಮಾಸದಲ್ಲಿ ಸ್ನಾನ ಮಾಡಿದರೆ ಪಾಪ ಪ್ರಶಮನ ಸ್ತೋತ್ರವನ್ನು ಕೇಳಿದರೆ ಮುಕುಂದನನ್ನು ಸ್ಮರಿಸಿದರೆ ಎಲ್ಲ ಪಾಪಗಳಿಗೂ ಅದು ಪ್ರಾಯಶ್ಚಿತ್ತವಾಗುವುದು.''

ಇದನ್ನು ಕೇಳಿ ಜನರು ಆಶ್ಚರ್ಯಗೊಂಡರು. ಆಗ ಐದು ಜನರನ್ನೂ, ವೈಶಾಖ ಮಾಸವನ್ನು, ಮುನಿಶರ್ಮನನ್ನೂ, ನರ್ಮದೆಯನ್ನೂ ಮುಕ್ತ ಕಂಠದಿಂದ ಹೊಗಳಿದರು.

ಅಂಬರೀಷ, ಪಾಪ ಪ್ರಶಮನ ಸ್ತೋತ್ರವನ್ನು ಈಗ ಹೇಳುತ್ತೇನೆ, ಕೇಳು ಅದರ ಸ್ಮರಣ ಮಾತ್ರದಿಂದ ಎಲ್ಲ ಪಾಪಗಳೂ ನಶಿಸುತ್ತವೆ.

ವಿಷ್ಣುವಿಗೆ ನಮಸ್ಕಾರ. ಮನಸ್ಸಿನಲ್ಲಿದ್ದರೂ ಅವ್ಯಕ್ತನಾಗಿರುವ ಆದ್ಯಂತಗಳಿಲ್ಲದ ಹರಿಯನ್ನು ವಂದಿಸುತ್ತೇನೆ. ಅವನನ್ನು ನೆನೆದರೆ ಪಾಪಗಳೆಲ್ಲವೂ ನಾಶವಾಗುತ್ತವೆ. ಆಶ್ರಯವಿಲ್ಲದವರನ್ನು ಕೈ ಹಿಡಿದು ನಡೆಸುವ ಸರ್ವೇಶ್ವರನಾದ ಅಧೋಕ್ಷಜನನ್ನು ನಮಿಸುತ್ತೇನೆ.

**ನೃಸಿಂಹಾನಂತ ಗೋವಿಂದ ಭೂತ ಭಾವನ ಕೇಶವ**
**ದುರುಕ್ತಂ ದುಷ್ಕೃತಂ ಧ್ಯಾತಂ ಶಮಯಾಶು ಜನಾರ್ದನ**

ಹೇ ನೃಸಿಂಹ, ಅನಂತ, ಗೋವಿಂದ, ಸೃಷ್ಟಿಕರ್ತ, ಕೇಶವ ಜನಾರ್ದನ, ಮನೋವಾಕ್ಕಾಯಗಳಿಂದ ನಾನು ಮಾಡಿದ ಪಾಪಗಳನ್ನು ಬೇಗನೆ ಪರಿಹರಿಸು.

**ಯಚ್ಚಾಪರಾಹ್ಣೇ ಪೂರ್ವಾಹ್ಣೇ ಮಧ್ಯಾಹ್ನೇ ಚ ತಥಾ ನಿಶಿ ॥**
**ಕಾಯೇನ ಮನಸಾ ವಾಚಾ ಕೃತಂ ಪಾಪಮಜಾನತಾ ॥**

**ಜಾನತಾ ಚ ಹೃಷೀಕೇಶ ಪುಂಡರೀಕಾಕ್ಷ ಮಾಧವ ॥**
**ನಾಮತ್ರಯೋಚ್ಚಾರಣತಃ ಸರ್ವಂ ಯಾತು ಮಮ ಕ್ಷಯಂ ॥**

ಪೂರ್ವಾಹ್ನ ಮಧ್ಯಾಹ್ನ ಅಪರಾಹ್ನ ರಾತ್ರಿ ಕಾಲಗಳಲ್ಲಿ ತಿಳಿದೊ ತಿಳಿಯದೆಯೊ ಮನೋವಾಕ್ಕಾಯಗಳಿಂದ ನಾನು ಮಾಡಿದ ಎಲ್ಲ ಪಾಪಗಳು ಹೃಷೀಕೇಶ, ಪುಂಡರೀಕಾಕ್ಷ, ಮಾಧವ ಎಂಬ ನಾಮತ್ರಯದ ಉಚ್ಚಾರಣೆಯಿಂದ ನಶಿಸಲಿ.

**ಶಾರೀರಂ ಮೇ ಹೃಷೀಕೇಶ ಪುಂಡರೀಕಾಕ್ಷ ಮಾನಸಂ**
**ಪಾಪಂ ಪ್ರಶಮಾಯಾತು ವಾಕ್ಕೃತಂ ಮಮ ಮಾದವ**

ಹೇ ಹೃಷೀಕೇಶ, ನನ್ನ ಕಾಯಿಕ ಪಾಪವು ನಾಶವಾಗಲಿ ಹೇ ಪುಂಡರೀಕಾಕ್ಷ, ನನ್ನ ಮಾನಸಿಕ ಪಾಪವು ನಾಶಹೊಂದಲಿ. ಹೇ ಮಾಧವ, ನನ್ನ ವಾಚಿಕ ಪಾಪವು ಶಮನವಾಗಲಿ.

**ಯತ್ ಪ್ರಾಪ್ಯನ ನಿವರ್ತಂತೇ ಗಂಧ ಸ್ಪರ್ಶವಿವರ್ಜಿತಂ**
**ಸೂರಯಸ್ತತ್ಪದಂ ವಿಷ್ಣೋಸ್ತತ್ಸರ್ವಂ ಮೇ ಭವೇತ್ ಫಲಂ**

ಯಾವ ವಿಷ್ಣುಲೋಕವನ್ನು ಹೊಂದಿದವರು ಹಿಂತಿರುಗಿ ಸಂಸಾರಕ್ಕೆ ಬರಲಾರರೊ ಅಂಥ ಪ್ರಾಕೃತ ಗಂಧಸ್ಪರ್ಶಗಳಿಲ್ಲದ ಲೋಕವೆ ನನಗೆ ಸಿಗಲಿ.

ಈ ಪಾಪ ಪ್ರಶಮನ ಸ್ತೋತ್ರವನ್ನು ಹೇಳಿದವನೂ ಕೇಳಿದವನೂ ಕಾಯಿಕ ವಾಚಿಕ ಮಾನಸಿಕ ಪಾಪಗಳೆಲ್ಲವನ್ನು ಕಳೆದುಕೊಳ್ಳುವನು. ವಿಷ್ಣುಲೋಕವನ್ನು ಹೊಂದುವನು. ಆದ್ದರಿಂದ ಪ್ರಯತ್ನ ಪಟ್ಟು ಈ ಸ್ತೋತ್ರವನ್ನು ಪಠಿಸಬೇಕು. ಇದು ಪಾಪವೃಕ್ಷಕ್ಕೆ ಕೊಡಲಿ. ಪಾಪದ ಕಟ್ಟಿಗೆಗೆ ಕಾಳ್ಗಿಚ್ಚು. ಪಾಪದ ಕತ್ತಲಿಗೆ ಸೂರ್ಯ. ಲೋಕದ ಮೇಲಿನ ಅನುಕಂಪೆಯಿಂದಲೂ ನಾನಿದನ್ನು ನಿನಗೆ ಹೇಳಿದ್ದೇನೆ. ನನ್ನ ತಂದೆ ನನಗುಪದೇಶಿಸಿದ ಈ ರಹಸ್ಯ ಸ್ತೋತ್ರದ ಮಹಿಮೆಯನ್ನು ಸ್ವಯಂ ಹರಿಯೆ ಎಷ್ಟೆಂದು ಹೇಳಲು ಶಕ್ತ. ನಿನಗೆ ಶುಭವಾಗಲಿ. ನಾನು ಗಂಗೆಯಲ್ಲಿ ಸ್ನಾನ ಮಾಡಲು ಹೋಗುವೆ. ಉತ್ತಮವಾದ ವೈಶಾಖಮಾಸ ಬಂದಿದೆ.

*ಇತಿ ಪದ್ಮ ಮಹಾಪುರಾಣ ಭಾಗ-೨ರ ಪಾತಾಳ ಖಂಡದಲ್ಲಿ*
*ವೈಶಾಖ ಮಾಸ ಮಾಹಾತ್ಮ್ಯದಲ್ಲಿ ಮೂವತ್ತೇಳನೆ ಅಧ್ಯಾಯ ಮುಗಿದುದು*



## ವಿಷ್ಣು ಪೂಜಾವಿಧಾನ

ಅಧ್ಯಾಯ - ೩೮

**ಸೂತ ಉವಾಚ**

**ಸೂತ :-** ಸ್ನಾನಕ್ಕೆ ಹೊರಟ ನಾರದ ಮುನಿಗಳನ್ನು ತಿರುಗಿ ವೈಶಾಖ ಸ್ನಾನ ದಾನ ಮುಂತಾದವುಗಳ ವಿಧಾನದ ಬಗ್ಗೆ ಕೇಳಿದ ಮಹಾರಾಜ.

**ಅಂಬರೀಷ :-** ಮುನಿಯೆ, ವೈಶಾಖ ಮಾಸದ ಅನುಷ್ಠಾನಗಳಾವುವು ? ಸ್ನಾನದಾನ ತಪಸ್ಸು ಕೇಶವಾರಾಧನೆಗಳನ್ನು ಮಾಡುವ ವಿಧಾನ ಹೇಗೆ ? ಹರಿಯ ಪ್ರಿಯಭಕ್ತನೂ ಸರ್ವಜ್ಞನೂ ಆದ ನೀನು ದಯೆಯಿಂದ ನನಗೆ ಅದೆಲ್ಲವನ್ನು ಹೇಳು.

**ನಾರದ :-** ಸೂರ್ಯನು ಮೇಷ ರಾಶಿಗೆ ಬಂದಾಗ ವೈಶಾಖ ಮಾಸದಲ್ಲಿ ಹರಿಸ್ಮರಣ ಪೂರ್ವಕವಾಗಿ ವಿಧಿವತ್ತಾಗಿ ಸ್ನಾನ ಮಾಡಬೇಕು. ಮಹಾನದಿ, ನದಿ, ನದ, ಸರೋವರ, ಝರಿ, ಸಣ್ಣ ಕೊಳ, ಭಾವಿ ಮೊದಲಾದ ಯಾವ ಜಲಾಶಯದಲ್ಲಿಯೂ ಸ್ನಾನ ಮಾಡಬಹುದು. ವೈಶಾಖಶುದ್ಧ ಏಕಾದಶಿ ದಿನ ಉಪವಾಸ ಮಾಡಿ ಹುಣ್ಣಿಮೆ ಅಥವಾ ಮೇಷ ಸಂಕ್ರಮಣದ ದಿನದಲ್ಲಿ ಸ್ನಾನ ವಿಷ್ಣು ಪೂಜೆಗಳನ್ನು ಮಾಡಿ ಬ್ರಾಹ್ಮಣರ ಅನುಜ್ಞೆಯಿಂದ ವೈಶಾಖಸ್ನಾನ ನಿಯಮವನ್ನು ಸಂಕಲ್ಪಿಸಬೇಕು.

ವೈಶಾಖಮಖಿಲಂ ಮಾಸಂ ಮೇಷ ಸಂಕ್ರಮಣೇ ರವೇಃ
ಪ್ರಾತಃ ಸನಿಯಮಸ್ನಾನಾತ್ ಪ್ರೀಯತಾಂ ಮಧುಸೂದನಃ
ಮಧುಹಂತುಃ ಪ್ರಸಾದೇನ ಬ್ರಾಹ್ಮಣಾನಾಮನುಗ್ರಹಾತ್
ನಿರ್ವಿಘ್ನಮಸ್ತು ಮೇ ಪುಣ್ಯಂ ವೈಶಾಖಸ್ನಾನಮನ್ವಹಂ
ಮಾಧವೇ ಮೇಷಗೆ ಮಾಸಿ ಮುರಾರೆ ಮಧುಸೂದನ
ಪ್ರಾತಃಸ್ನಾನೇನ ಮೇ ನಾಥ ಯಥೋಕ್ತ ಫಲದೋ ಭವ
ಯಥಾ ತೇ ಮಾಧವೊ ಮಾಸೋ ವಲ್ಲಭೋ ಮಧುಸೂದನ
ಪ್ರಾತಃಸ್ನಾನೇನ ಮೇ ತಸ್ಮಿನ್ ಫಲದಃ ಪಾಪಹೋಭವ

ಸೂರ್ಯನು ಮೇಷದಲ್ಲಿರುವಾಗ ವೈಶಾಖ ಮಾಸದಲ್ಲಿ ಪೂರ್ತಿಯಾಗಿ, ಬೆಳಿಗ್ಗೆ, ವಿಧಿವತ್ತಾಗಿ ನಾನು ಮಾಡಲಿರುವ ಸ್ನಾನದಿಂದ ಮಧುಸೂದನನು ಪ್ರೀತನಾಗಲಿ. ಮಧುಸೂದನನ ಪ್ರಸಾದದಿಂದಲೂ ಬ್ರಾಹ್ಮಣರ ಅನುಗ್ರಹದಿಂದಲೂ ಪವಿತ್ರವಾದ ವೈಶಾಖ ಸ್ನಾನವು ಪ್ರತಿದಿನವೂ ನಿರ್ವಿಘ್ನವಾಗಿ ನಡೆಯಲಿ. ಸೂರ್ಯನು ಮೇಷರಾಶಿಯಲ್ಲಿರುವಾಗ ವೈಶಾಖ ಮಾಸದಲ್ಲಿ ಪ್ರಾತಸ್ನಾನ ಮಾಡುತ್ತೇನೆ. ಹೇ ನಾಥ, ಮುರಾರಿ, ಮಧೂಸೂದನ, ಯೋಗ್ಯ ಫಲವನ್ನು ನನಗೆ ನೀಡು. ಮಧುಸೂದನ, ನಿನಗೆ ಪ್ರಿಯವಾದ ಈ ವೈಶಾಖ ಮಾಸದಲ್ಲಿ ನಾನು ಮಾಡಲಿರುವ ಪ್ರಾತಃಸ್ನಾನದಿಂದ ನನ್ನ ಪಾಪಗಳನ್ನು ಕಳೆದು ಫಲ ನೀಡು.

ಹೀಗೆ ಹೇಳಿ ಆ ತೀರ್ಥದಲ್ಲಿ ಕಾಲು ತೊಳೆದುಕೊಂಡು ನಾರಾಯಣನನ್ನು ಸ್ಮರಿಸುತ್ತ ಸ್ನಾನ ಮಾಡಬೇಕು. ಓಂ ನಮೋ ನಾರಾಯಣಾಯ ಎಂಬ ಮೂಲ ಮಂತ್ರವನ್ನುಚ್ಚರಿಸಿದರೆ ಆ ನೀರು ತೀರ್ಥವಾಗುವುದು.

ದರ್ಭೆಯ ಪವಿತ್ರವನ್ನು ಹಾಕಿಕೊಂಡು ಆಚಮನ ಮಾಡಿ ತೀರ್ಥಕ್ಕೆ ನಮಸ್ಕರಿಸಬೇಕು. ನಾಲ್ಕು ಮಾರುಗಳಷ್ಟು ಉದ್ದ ಅಗಲದ ಚೌಕವನ್ನು ಬರೆದು ಅದರಲ್ಲಿ ಈ ಮಂತ್ರದಿಂದ ಗಂಗೆಯನ್ನಾವಾಹಿಸಬೇಕು.

ವಿಷ್ಣುಪಾದ ಪ್ರಸೂತಾಸಿ ವೈಷ್ಣವೀ ವಿಷ್ಣುದೇವತಾ
ತ್ರಾಹಿ ನಸ್ತ್ವೇನಸಸ್ತಸ್ಮಾದಾಜನ್ಮ ಮರಣಾಂತಿಕಾತ್
ತಿಸ್ರಃ ಕೋಟ್ಯೋರ್ಧಕೋಟೀ ಚ ತೀರ್ಥಾಣಾಂ ವಾಯುರಬ್ರವೀತ್
ದಿವಿ ಭುವ್ಯಂತರಿಕ್ಷೇ ಚ ತಾನಿ ತೇ ಸಂತಿ ಜಾಹ್ನವಿ
ನಂದಿನೀತಿ ಚ ತೇ ನಾಮ ವೇದೇಷು ನಳಿನೀತಿ ಚ
ದಕ್ಷಾ ಪೃಥ್ವೀ ವಿಯದ್ಗಂಗಾ ವಿಶ್ವಕಾಯಾ ಶಿವಾಮೃತಾ
ವಿದ್ಯಾಧರೀ ಮಹಾದೇವಿ ತಥಾ ಲೋಕ ಪ್ರಸಾದಿನೀ
ಕ್ಷೇಮಂಕರೀ ಜಾಹ್ನವೀಚ ಶಾಂತಾ ಶಾಂತಿ ಪ್ರಸಾದಿನೀ

ದೇವಿ ಜಾಹ್ನವಿ, ನೀನು ವಿಷ್ಣುವಿನ ಪಾದದಿಂದ ಜನಿಸಿದಳು, ವಿಷ್ಣುಭಕ್ತೆ, ವಿಷ್ಣುವೆ ನಿನಗೆ ಅಧಿದೇವತೆ, ಹುಟ್ಟಿದಂದಿನಿಂದ ಸಾಯುವವರೆಗೂ ನಾನು ಮಾಡುವ ಪಾಪಗಳಿಂದ ನನ್ನನ್ನು ಕಾಪಾಡು.

ಭೂಮಿ ಅಂತರಿಕ್ಷ ಸ್ವರ್ಗಗಳೆಲ್ಲೆಲ್ಲ ಒಟ್ಟು ಮೂರುವರೆ ಕೋಟಿ ಸಂಖ್ಯೆಯಲ್ಲಿ ತೀರ್ಥಗಳಿವೆ ಎಂದು ವಾಯು ಹೇಳಿದ್ದಾನೆ. ಅವೆಲ್ಲವೂ ನಿನ್ನಲ್ಲಿಯೇ ಇವೆಯಂತೆ.

ವೇದಗಳಲ್ಲಿ ನಿನ್ನ ಹೆಸರುಗಳು ಹೀಗಿವೆ. ನಂದಿನಿ, ನಳಿನಿ, ದಕ್ಷಾ, ಪೃಥ್ವೀ, ವಿಯದ್ಗಂಗಾ, ವಿಶ್ವಕಾಯಾ, ಶಿವಾಮೃತಾ, ವಿದ್ಯಾಧರೀ, ಮಹಾದೇವಿ, ಲೋಕಪ್ರಸಾದಿನಿ, ಕ್ಷೇಮಕರಿ, ಜಾಹ್ನವೀ, ಶಾಂತಾ, ಶಾಂತಿ ಪ್ರದಾಯಿನಿ.

ಈ ಪುಣ್ಯ ನಾಮಗಳನ್ನು ಸ್ನಾನ ಕಾಲದಲ್ಲಿ ಹೇಳಬೇಕು. ಏಳು ಬಾರಿ ಅವನ್ನು ಜಪಿಸಿದರೆ ಗಂಗೆಯ ಸನ್ನಿಧಾನ ನೀರಿನಲ್ಲಿ ಉಂಟಾಗುವುದು. ಬಳಿಕ ತಲೆಯ ಮೇಲೆ ಕೈಮುಗಿದು ನಾಲ್ಕು ಆರು ಅಥವಾ ಏಳು ಬಾರಿ ಸ್ನಾನ ಮಾಡಬೇಕು ಬಳಿಕ ಮೃತ್ತಿಕಾ ಸ್ನಾನ.

**ಅಶ್ವಕ್ರಾಂತೇ ರಥಕ್ರಾಂತೇ ವಿಷ್ಣುಕ್ರಾಂತೇ ವಸುಂಧರೇ**
**ಮೃತ್ತಿಕೇ ಹರಮೆ ಪಾಪಂ ಯನ್ಮಯಾ ಪೂರ್ವ ಸಂಚಿತಂ**
**ಉದ್ಧೃತಾಸಿ ವರಾಹೇ ಣ ವಿಷ್ಣುನಾ ಶತಬಾಹುನಾ**
**ನಮಸ್ತೇ ಸರ್ವಲೋಕಾನಾಂ ಪ್ರಭವಾರಿಣಿ ಸುವ್ರತೇ**

ಕುದುರೆ ರಥಗಳಿಂದಲೂ ವಿಷ್ಣುವಿನಿಂದಲೂ ಆಕ್ರಮಿಸಲ್ಪಟ್ಟ ವಸುಂಧರೆಯಾದ ಮೃತ್ತಿಕೆಯೆ, ನನ್ನ ಪೂರ್ವದ ಎಲ್ಲ ಪಾಪಗಳನ್ನೂ ಪರಿಹರಿಸು. ನೂರು ತೋಳುಗಳುಳ್ಳ ವರಾಹಮೂರ್ತಿಯಾದ ವಿಷ್ಣುವಿನಿಂದ ಉದ್ಧೃತಳಾದವಳು ನೀನು. ಎಲ್ಲ ಲೋಕಗಳಿಗೂ ತಾಯಿಯಾದ ನಿನಗೆ ನಮಸ್ಕಾರ.

ಹೀಗೆ ಪ್ರಾರ್ಥಿಸಿ ಸ್ನಾನಮಾಡಿ ಆಚಮನ ಮಾಡಬೇಕು. ಶುದ್ಧವಾದ ಬಿಳಿ ಬಟ್ಟೆಯನ್ನುಟ್ಟು ಬ್ರಹ್ಮ ವಿಷ್ಣು ರುದ್ರ ಪ್ರಜಾಪತಿಗಳಿಗೂ ದೇವ ಯಕ್ಷನಾಗ ಗಂಧರ್ವ ಅಪ್ಸರ ಅಸುರ ಸರ್ಪ ಸುಪರ್ಣ ತರು ಜಂತು ಖಗ ವಿದ್ಯಾಧರ ಜಲದರ ಆಕಾಶಚರ ನಿರಾಧಾರ ಜೀವರಿಗೂ ಪಾಪ ಕರ್ಮಿಗಳಿಗೂ ಎಲ್ಲರಿಗೂ ತೃಪ್ತಿಯಾಗಲೆಂದು ನೀರನ್ನು ಕೊಡಬೇಕು.

**ಯೇಽಬಾಂಧವಾ ಬಾಂಧವಾ ಯೇಪ್ಸನ್ಯ ಜನ್ಮನಿ ಬಾಂಧವಾಃ**
**ತೇ ತೃಪ್ತಿ ಮುಖಿಲಾ ಯಾಂತು ಯೇಸ್ಮತ್ತ ಸ್ತೋಽಯಕಾಂಕ್ಷಿಣಃ**

ಯಾರು ಬಂಧುಗಳೊ ಯಾರು ಈ ಜನ್ಮದಲ್ಲಿ ಬಂಧುಗಳಲ್ಲದಿದ್ದರೂ ಬೇರೆ ಜನ್ಮದಲ್ಲಿ ಬಂಧುಗಳೊ ಯಾರು ನನ್ನಿಂದ ನೀರಿನ ತರ್ಪಣವನ್ನಪೇಕ್ಷಿಸುತ್ತಾರೊ ಅವರೆಲ್ಲರೂ ಈ ತರ್ಪಣದಿಂದ ತೃಪ್ತಿ ಹೊಂದಿಲಿ.

ಈ ಮಂತ್ರದಿಂದ ತರ್ಪಣ ಕೊಟ್ಟು ಆಚಮನ ಮಾಡಬೇಕು. ಬಳಿಕ ಪದ್ಮದಾಕಾರವನ್ನು ಬರೆದು ಅಕ್ಷತೆ ಹೂ ಕೆಂಪು ಗಂಧಗಳಿಂದ ಸಹಿತವಾಗಿ ನೀರಿನಿಂದ ಸೂರ್ಯನಿಗೆ ಅರ್ಘ್ಯಪ್ರದಾನ ಮಾಡಬೇಕು.

ನಮಸ್ತೇ ವಿಷ್ಣುರೂಪಾಯ ನಮಸ್ತೇ ಬ್ರಹ್ಮರೂಪಿಣೇ ।
ಸಹಸ್ರ ರಶ್ಮಯೇ ನಿತ್ಯಂ ನಮಸ್ತೇ ಸರ್ವತೇಜಸೇ ॥

ನಮಸ್ತೇ ರುದ್ರವಪುಷೇ ನಮಸ್ತೇ ಭಕ್ತವತ್ಸಲ ।
ಪದ್ಮನಾಭ ನಮಸ್ತೇಸ್ತು ಕುಂಡಲಾಂಗದ ಭೂಷಿತ ॥

**ನಮಸ್ತೇ ಸರ್ವಲೋಕಾನಾಂ ಸುಪ್ತಾನಾ ಯುಪ ಬೋಧನ ।**
**ಸುಕೃತಂ ದುಷ್ಕೃತಂ ಚೈವ ಸರ್ವಂ ಪಶ್ಯಸಿ ಸರ್ವದಾ ॥**

**ಸತ್ಯದೇವ ನಮಸ್ತೇಸ್ತು ಪ್ರಸೀದ ಮಮ ಭಾಸ್ಕರ ।**
**ದಿವಾಕರ ನಮಸ್ತೇಸ್ತು ಪ್ರಭಾಕರ ನಮೋಸ್ತು ತೇ ॥**

ವಿಷ್ಣುರೂಪಿಯೂ ಬ್ರಹ್ಮರೂಪಿಯೂ ರುದ್ರರೂಪಿಯೂ ಆದ ಭಕ್ತವತ್ಸಲನಾದ ಸೂರ್ಯನೆ, ನಿನಗೆ ನಮಸ್ಕಾರ. ಕುಂಡಲ ಭುಜ ಕೀರ್ತಿಗಳಿಂದ ಅಲಂಕೃತನಾದ ಪದ್ಮನಾಭನೆ, ಎಲ್ಲ ಲೋಕಗಳನ್ನೂ ನಿದ್ದೆಯಿಂದ ಎಚ್ಚರಿಸುವವನೆ, ನಮ್ಮೆಲ್ಲ ಪಾಪ ಪುಣ್ಯಗಳನ್ನೂ ಸದಾ ನೋಡುವೆ, ನೀನು. ನಿನಗೆ ನಮಸ್ಕಾರ. ಸತ್ಯದೇವ, ಭಾಸ್ಕರ, ದಿವಾಕರ, ಪ್ರಭಾಕರ, ನಿನಗೆ ನಮಸ್ಕಾರ.

ಹೀಗೆ ಸೂರ್ಯನಿಗೆ ಏಳು ಬಾರಿ ಪ್ರದಕ್ಷಿಣೆ ನಮಸ್ಕಾರಗಳನ್ನ ಮಾಡಿ ಬ್ರಾಹ್ಮಣ ಗೋವು ಹಸು ಚಿನ್ನ ಇವುಗಳ ಸ್ಪರ್ಶ ಮಾಡಿ ಮನೆಗೆ ಹೋಗಬೇಕು. ಗೋವಿಂದನನ್ನು ಭಕ್ತಿಯಿಂದ ಪೂಜಿಸಬೇಕು. ವೈಶಾಖ ಮಾಸದಲ್ಲಿ ವಿಶೇಷವಾಗಿ ಗೋವಿಂದನನ್ನಾರಾಧಿಸಿದರೆ ವರ್ಷ ಪೂರ್ತಿ ಆರಾಧಿಸಿದ ಫಲ ಸಿಗುವುದು. ತಿಲ, ಅಜ್ಯ ಮುಂತಾದ ದಾನಗಳನ್ನಿತ್ತರೆ ಕೋಟಿ ಜನ್ಮಗಳ ಪಾಪ ಪರಿಹಾರವಾಗುವುದು.

ವೈಶಾಖದಲ್ಲಿ ವಿಧಿವತ್ತಾಗಿ ಎರಡು ಬಾರಿ ಸ್ನಾನ, ಹವಿಷ್ಯ ಭೋಜನ ಬ್ರಹ್ಮಚರ್ಯ ಭೂಶಯನ ನಿಯಮ ವ್ರತ ದಾನ ಜಪ ಹೋಮ ಲಕ್ಷ್ಮಿ ಸಹಿತನಾದ ಮಧುಸೂದನನ ಪೂಜೆ ಇವೆಲ್ಲವೂ ಎಂಥ ಘೋರ ಪಾಪಗಳನ್ನೂ ಪರಿಹರಸಬಲ್ಲವು.

ಮಾಧವನ ಧ್ಯಾನದಂತೆ ವೈಶಾಖ ಸ್ನಾನವೂ ಪಾಪಹರ. ದರಿದ್ರನಾದವನೂ ಕೇವಲ ಹೂಗಳಿಂದಲೇ ಮಧುಸೂದನನ್ನು ಅರ್ಚಿಸಬಹುದು. ಆದರಿಂದ ಎಲ್ಲ ಪಾಪ ಪರಿಹಾರವಾಗುವುದು, ಪರಮ ಪದ ದೊರೆಯುವುದು.

ಯಥಾಶಕ್ತಿ ದಾನ ಮಾಡಿದರೂ ಮುಂದೆ ಎಂದೂ ಯಾವ ಜನ್ಮದಲ್ಲಿಯೂ ವ್ಯಾಧಿ ದಾರಿದ್ರ್ಯ ಬಂಧನಗಳ ಭಯವಿರುವುದಿಲ್ಲ. ಪ್ರತಿ ಜನ್ಮದಲ್ಲಿಯೂ ವಿಷ್ಣುಭಕ್ತನಾಗಿ ಜನಿಸಿ ಧನ್ಯನೆನಿಸುತ್ತಾನೆ. ಸಾವಿರದ ನೂರೆಂಟು ಯುಗಗಳ ಕಾಲ ಸ್ವರ್ಗದಲ್ಲಿದ್ದು ಭೂಮಿಯಲ್ಲಿ ರಾಜನಾಗಿ ಹುಟ್ಟುತ್ತಾನೆ. ನಾನಾ ಸುಖಭೋಗಗಳನ್ನನುಭವಿಸಿ ಹರಿಯ ಅನುಗ್ರಹದಿಂದ ಹರಿಯಲ್ಲಿ ಲೀನನಾಗುತ್ತಾನೆ.

**ನಾರದ ಉವಾಚ**

**ನಾರದ :-** ರಾಜನೆ, ಈಗ ವಿಷ್ಣು ಪೂಜಾವಿಧಾನವನ್ನು ಹೇಳುತ್ತೇನೆ, ಕೇಳು. ವೈದಿಕ ತಾಂತ್ರಿಕ ಮತ್ತು ಮಿಶ್ರ ರೀತಿಯ ವಿಷ್ಣು ಪೂಜೆಗಳಿವೆ. ಅವುಗಳ ವಿಧಾನವನ್ನು ಹೇಳಹೊರಟರೆ ಅದಕ್ಕೆ ಕೊನೆ ಎಂಬುದೆ ಇಲ್ಲ. ಆದ್ದರಿಂದ ಸಂಕ್ಷೇಪವಾಗಿ ಹೇಳುತ್ತೇನೆ ಕೇಳು. ವೈದಿಕ ಅಥವಾ ಮಿಶ್ರರೀತಿಯಲ್ಲಿ ದ್ವಿಜರೂ ತಾಂತ್ರಿಕ ರೀತಿಯಲ್ಲಿ ಶೂದ್ರರೂ ಪೂಜೆ ಮಾಡಬೇಕು. ಸ್ಥಂಡಿಲ ಅಗ್ನಿ ಸೂರ್ಯ ತನ್ನ ಹೃದಯ ಅಥವಾ ಬ್ರಾಹ್ಮಣ ಈ ಸ್ಥಳಗಳಲ್ಲಿ ವಿಧಿವತ್ತಾಗಿ ಹರಿಯನ್ನು ಪೂಜಿಸಬೇಕು. ಗುರುವನ್ನು ಮೊದಲು ಪೂಜಿಸಿ ಅವನ ಅನುಜ್ಞೆಯಿಂದ ಸ್ನಾನಸಂಧ್ಯೋಪಾಸನೆಗಳನ್ನು ತೀರಿಸಿ ಪೂಜೆಗೆ ಸಂಕಲ್ಪ ಮಾಡಬೇಕು.

**ಶೈಲೀ ಧಾತುವಯೀ ಲೌಹೀ ಲೇಪ್ಯಾಲೇಖ್ಯಾ ಸ ಸೈಕತೀ**
**ಮನೋಮಯೀ ಮಣಿಮಯೀ ಪ್ರತಿಮಾಷ್ಟ ವಿಧಾಮತಾ**

ಶಿಲೆ, ಧಾತು, ಲೋಹ, ವರ್ಣಚಿತ್ರ, ರೇಖಾಚಿತ್ರ, ಮರಳು, ಮನಸ್ಸಿನ ಸಂಸ್ಕಾರ, ಮಣಿ ಹೀಗೆ ಎಂಟು ವಿಧವಾದ ಪ್ರತಿಮೆಗಳಿವೆ. ಎಲ್ಲವೂ ಚಲ ಅಚಲ ಎಂದು ಎರಡು ಬಗೆಯಾಗಿವೆ. ಅಚಲ ಪ್ರತಿಮೆಗಳಿಗೆ ಆವಾಹನ ಉದ್ವಾಸನಗಳಿಲ್ಲ. ಚಲ ಪ್ರತಿಮೆಗಳಿಗೆ ಅವೆರಡನ್ನೂ ಮಾಡಬಹುದು ಮಾಡದಿರಲೂ ಬಹುದು ಸ್ಥಂಡಿಲಕ್ಕೆ ಮಾತ್ರ ಮಾಡಲೇಬೇಕು. ರೇಖಾಚಿತ್ರಕ್ಕೆ ಅಭಿಷೇಕವಿಲ್ಲ. ಪ್ರೋಕ್ಷಣ ಮಾಡಬೇಕು ಉಳಿದ ಪ್ರತಿಮೆಗಳಿಗೆ ಸ್ನಾನ ಮಾಡಿಸಬಹುದು. ತನ್ನಲ್ಲಿರುವ ಪೂಜಾದ್ರವ್ಯಗಳನ್ನು ವಂಚನೆಯಿಲ್ಲದೆ ಭಕ್ತಿಯಿಂದ ಪ್ರತಿಮೆಯಲ್ಲಿರುವ ಹರಿಗೆ ಅರ್ಪಿಸಬೇಕು.

**ಶ್ರದ್ಧಯೋಪಹೃತಂ ಶ್ರೇಷ್ಠಂ ಕೃಷ್ಣಭಕ್ತೇನ ವಾರ್ಯಪಿ**
**ಗಂಧೋದೀಪಃ ಸುಮನಸೋ ದೀವೋನ್ನಾದ್ಯಂ ಚಕಿಂ ಪುನಃ**

ಕೃಷ್ಣ ಭಕ್ತನು ಶ್ರದ್ಧೆಯಿಂದ ನೀರು ತಂದರೂ ಅದು ಶ್ರೇಷ್ಠವೆ. ಹೀಗಿರುವಲ್ಲಿ ಗಂಧ, ಧೂಪ, ಹೂ, ದೀಪ, ಅನ್ನ ಮುಂತಾದವುಗಳನ್ನು ತಂದರೆ ಪ್ರಶಸ್ತವೆಂದು ಬೇರೆ ಹೇಳಬೇಕೇನು ?

ಪೂಜಾದ್ರವ್ಯಗಳನ್ನು ಸಿದ್ಧಪಡಿಸಿಟ್ಟುಕೊಂಡು ಪೂರ್ವ ಮುಖವಾದ ದರ್ಭೆಗಳ ಆಸನದಲ್ಲಿ ಉತ್ತರಾಭಿಮುಖವಾಗಿ ಅಥವಾ ಪ್ರತಿಮೆಗೆ ಅಭಿಮುಖವಾಗಿ ಕುಳಿತು ತನಗೂ ಪ್ರತಿಮೆಗೂ ನ್ಯಾಸಗಳನ್ನು ಮಾಡಿ ಪ್ರತಿಮೆಯನ್ನು ಸ್ಪರ್ಶಿಸಬೇಕು. ಕಲಶ ಪ್ರೋಕ್ಷಣೀಯಗಳ ನೀರಿನಿಂದ ಪೂಜಾದ್ರವ್ಯ ಸ್ಥಳಗಳನ್ನೂ ತನ್ನನ್ನೂ ಪ್ರೋಕ್ಷಿಸಿಕೊಳ್ಳಬೇಕು. ಪಾದ್ಯ ಅರ್ಘ್ಯ ಆಚಮನೀಯಗಳಿಗೆ ಮೂರು ಪಾತ್ರೆಗಳನ್ನಿಟ್ಟು ಗಾಯತ್ರಿಯಿಂದ ಅಭಿಮಂತ್ರಿಸಬೇಕು.

ವಾಯು ಅಗ್ನಿ ಬೀಜ ಮಂತ್ರಗಳಿಂದ ದೇಹವನ್ನು ಶುದ್ಧಿ ಮಾಡಿಕೊಂಡು ಹೃದಯಕಮಲದಲ್ಲಿ ಹರಿಯನ್ನು ಧ್ಯಾನಿಸಿ, ಪೂಜಿಸಿ, ಪ್ರತಿಮೆಯಲ್ಲಿ ಅವನನ್ನು ಆವಾಹಿಸಬೇಕು. ಅಂಗನ್ಯಾಸ ಮಾಡಿ ಪಾದ್ಯ ಅರ್ಘ್ಯ ಸ್ನಾನ ಮುಂತಾದ ಉಪಚಾರಗಳನ್ನು ಸಲ್ಲಿಸಬೇಕು. ಧರ್ಮ ಅಧರ್ಮ ಮುಂತಾದ ಒಂಭತ್ತು ದೇವತೆಗಳನ್ನು ನಮಿಸುತ್ತ ಪೀಠ ಪೂಜೆ ಮಾಡಬೇಕು. ಪೀಠವು ಎಂಟು ದಳದ ಪದ್ಮವೆಂದೂ ಮಧ್ಯದಲ್ಲಿ ಕರ್ಣಿಕೆ ಕೇಸರಗಳಿವೆ ಎಂದೂ ಧ್ಯಾನಿಸಬೇಕು.

ಸುದರ್ಶನ ಪಾಂಚಜನ್ಯ ಗದೆ ಕತ್ತಿ ಬಾಣ ಧನಸ್ಸು ನೇಗಿಲು ಮುಸಲ ಕೌಸ್ತುಭ ವನಮಾಲೆ ಶ್ರೀವತ್ಸ ಇವನ್ನು ಪೂಜಿಸಬೇಕು. ನಂದ ಸುನಂದ ಗರುಡ ಪ್ರಚಂಡ ಚಂಡ ಬಲ ಮಹಾಬಲ ಮುಕುಂದ ಕುಮುದೇಕ್ಷಣ ದುರ್ಗಾ ವಿನಾಯಕ ವ್ಯಾಸ ವಿಷ್ವಕಸೇನ ಮತ್ತು ಎಲ್ಲ ಗುರುಗಳನ್ನು ಆಯಾಸ್ಥಾನಗಳಲ್ಲಿ ಅಭಿಮುಖವಾಗಿ ಆವಾಹಿಸಿ ಪ್ರೋಕ್ಷಣೆ ಮುಂತಾದವುಗಳಿಂದ ಪೂಜಿಸಬೇಕು. ಗಂಧ ಲಾವಂಚ ಕರ್ಪೂರ ಕುಂಕುಮ ಕೇಸರಿ ಅಗರುಗಳಿಂದ ಸುಗಂಧಯುಕ್ತವಾದ ನೀರಿನಿಂದ ನಿತ್ಯವೂ ಹರಿಗೆ ಅಭಿಷೇಕ ಮಾಡಬೇಕು. ಲಕ್ಷ್ಮೀಸೂಕ್ತ ಘರ್ಮಸೂಕ್ತ ನಾರಾಯಣ ಸೂಕ್ತ ಪುರುಷ ಸೂಕ್ತಗಳನ್ನು ಆಗ

ಪಠಿಸಬೇಕು. ಪ್ರೇಮದಿಂದ ವಸ್ತ್ರ ಉಪವೀತ ಆಭರಣ ಮಾಲೆ ಗಂಧ ಮುಂತಾದವುಗಳನ್ನು ಇಟ್ಟು ಅಲಂಕರಿಸಬೇಕು. ಧೂಪ ದೀಪಗಳನ್ನರ್ಪಿಸಿ ಬೆಲ್ಲ ಪಾಯಸ ತುಪ್ಪ ಚಕ್ಕುಲಿ ಒಬ್ಬಟ್ಟು ಕಡುಬು ಮೊಸರು ಹಾಲು ಮುಂತಾದ ನೈವೇದ್ಯಗಳನ್ನರ್ಪಿಸಬೇಕು. ಬಳಿಕ ನೀರಾಜನ ನೃತ್ಯಗೀತಾದಿಗಳನ್ನು ಸಲ್ಲಿಸಬೇಕು.

ಅಗ್ನಿಕುಂಡದಲ್ಲಿ ವಿಧಿವತ್ತಾಗಿ ಅಗ್ನಿಪ್ರತಿಷ್ಠೆ ಮಾಡಬೇಕು. ದರ್ಭೆಯಿಂದ ಪರಿಸ್ತರಣ ಮಾಡಿ ಪ್ರೋಕ್ಷಿಸಿ ಸಮಿತ್ತುಗಳನ್ನು ಹಾಕಿ ಅಜ್ಯಾಹುತಿ ನೀಡಬೇಕು. ಪುಟಕ್ಕಿಟ್ಟ ಚಿನ್ನದಂತೆ ಹೊಳೆವ ಮೈ, ಶಂಖಚಕ್ರಗದಾ ಪದ್ಮಗಳಿಂದೊಪ್ಪುವ ನಾಕು ಕೈಗಳು ಪೀತಾಂಬರ ಉಟ್ಟು ಹೊಳೆಯುವ ಕಿರೀಟ ಕಡಗ ಉಡಿದಾರ ಉಂಗುರ ಶ್ರೀವಸ್ತ್ರಕೌಸ್ತುಭ ವನಮಾಲೆ ಧರಿಸಿದ್ದಾನೆ. ಇಂಥ ಹರಿಯನ್ನು ಧ್ಯಾನಿಸಿ ತುಪ್ಪದ ಜೊತೆಗೆ ಹವಿಸ್ಸನ್ನು ಹೋಮಿಸಬೇಕು. ಆಜ್ಯಭಾಗ ಆಹಾರಗಳನ್ನು ಕೊಟ್ಟು ನಮಸ್ಕರಿಸಿ ಪಾರ್ಷದರಿಗೆ ಬಲಿಹರಣ ಮಾಡಬೇಕು. ಸತ್ಕಥಾ ಪ್ರವಚನ ಶ್ರವಣಗಳನ್ನು ಮಾಡಬೇಕು.

**ಸರ್ವೈ ರುಚ್ಚಾವ ಚೈಃ ಸ್ತೋತ್ರೈಃ ಪೌರಾಣ್ಯೈಃ ಪ್ರಾಕೃತೈರಪಿ ।**
**ಸ್ತುತ್ವಾ ಪ್ರಸೀದ ಭಗವನ್ನಿತಿ ವಂದೇತ ದಂಡವತ ॥**

ಪುರಾಣಗಳಲ್ಲಿ ಹೇಳಿದ ಇಲ್ಲವೆ ದೇಶ ಭಾಷೆಗಳಲ್ಲಿ ನಿಬದ್ಧವಾದ ಸಣ್ಣ ದೊಡ್ಡ ಎಲ್ಲ ಸ್ತೋತ್ರಗಳನ್ನೂ ಯಥಾಶಕ್ತಿ ಪಠಿಸುತ್ತ ಭಗವಂತನೆ ಪ್ರಸನ್ನನಾಗು ಎಂದು ಬೇಡಿ ದಂಡ ಪ್ರಣಾಮ ಮಾಡಬೇಕು.

'ಮೃತ್ಯುವೆಂಬ ಮೊಸಳೆಗಳಿಂದ ತುಂಬಿದ ಸಂಸಾರ ಸಾಗರದಿಂದ ಭೀತನಾಗಿದ್ದೇನೆ. ನಿನ್ನನ್ನೆ ಮೊರೆ ಹೊಕ್ಕಿದ್ದೇನೆ, ಸ್ವಾಮಿ, ನನ್ನನ್ನು ಕಾಪಾಡು'. ಎಂದು ಬೇಡಿ ಹರಿಯ ಪಾದಗಳಿಗೆ ಶಿರಒಡ್ಡಿ ನಮಿಸಬೇಕು. ಬಾಹುಗಳಿಂದ ಆಲಂಗಿಸಿ ಕೊಳ್ಳಬೇಕು. ಅವನ ನಿರ್ಮಾಲ್ಯವನ್ನು ಭಕ್ತಿಯಿಂದ ತಲೆಯಲ್ಲಿ ಧರಿಸಬೇಕು. ಬಳಿಕ ಅವನನ್ನು ಪ್ರತಿಮೆಯಿಂದ ಉದ್ವಾಸನ ಮಾಡಿ ಹೃದಯದಲ್ಲಿ ಆತ್ಮಜ್ಯೋತಿಯೊಳಗೆ ನಿಲ್ಲಿಸಿಕೊಳ್ಳಬೇಕು.

**ಅರ್ಚಾದಿಷು ಪರಂ ಯತ್ರ ಶ್ರದ್ಧಾವಾಸ್ ತತ್ರ ಚಾರ್ಯಯೇತ್ ।**
**ಸರ್ವ ಭೂ ತೇಷ್ವಾತ್ಮನಿಚ ಸರ್ವಾತ್ಮಾನಮದಸ್ಥಿತಂ ॥**

ಹರಿಯು ಎಲ್ಲ ವಸ್ತುಗಳಲ್ಲಿ ಅಂತರ್ಯಾಮಿಯಾಗಿ ಎಲ್ಲೆಡೆ ಇರುವನಾದರೂ ಸಾಧಕನಿಗೆ ಎಲ್ಲಿ ವಿಶೇಷವಾದ ಶ್ರದ್ಧೆ ಇದೆಯೋ, ಅದು ಪ್ರತಿಮೆ ಮುಂತಾದುವೆ ಇರಲಿ, ಎಲ್ಲ ಪ್ರಾಣಿಗಳೆ ಇರಲಿ, ಅಥವಾ ಸ್ವಯಂ ತಾನೆ ಇರಲಿ- ಅಲ್ಲಿಯೆ ಹರಿಯನ್ನು ಆರಾಧಿಸಬೇಕು.

ಹೀಗೆ ವೈದಿಕ ತಾಂತ್ರಿಕ ವಿಧಾನಗಳಿಂದ ಕರ್ಮಯೋಗಿಗಳು ಹರಿಯ ಅನುಗ್ರಹ ಪಡೆದು ಎಲ್ಲ ಅಭೀಷ್ಟಗಳನ್ನು ಪೂರೈಸಿಕೊಳ್ಳಬಲ್ಲರು.

**ಪ್ರತಿಷ್ಠಯಾ ಸಾರ್ವಭೌಮಂ ಸದ್ಮನಾ ಭುವನತ್ರಯಂ ।**
**ಪೂಜಾದಿನಾ ಬ್ರಹ್ಮಲೋಕಂ ತ್ರಿಭಿಸ್ತತ್ಸಾಮ್ಯತಾ ಮಿಯಾತ್ ॥**

ವಿಷ್ಣುವಿನ ವಿಗ್ರಹವನ್ನು ಪ್ರತಿಷ್ಠಿಸಿದರೆ ಸಮಸ್ತ ಭೂಮಂಡಲದ ಆಧಿಪತ್ಯ ದೊರೆಯುವುದು. ಹರಿ ಮಂದಿರವನ್ನೇ ಕಟ್ಟಿಸಿದರೆ ಭೂಮಿ ಸ್ವರ್ಗ ಪಾತಾಳಗಳ ಒಡೆತನ

ಲಭಿಸುವುದು. ಹರಿ ಮಂದಿರದಲ್ಲಿ ಪೂಜೆ ಉತ್ಸವಾದಿಗಳು ಅವಿಚ್ಛಿನ್ನವಾಗಿ ನಡೆಯುವಂತೆ ಹೊಲ ಅಂಗಡಿ ಪಟ್ಟಣ ಗ್ರಾಮ ಮುಂತಾದುವನ್ನು ಉಂಬಳಿಯಾಗಿ ಬಿಟ್ಟರೆ ಬ್ರಹ್ಮಲೋಕ ಸಿಗುವುದು.

ಹರಿ ಮಂದಿರ ಕಟ್ಟಿಸಿ, ವಿಗ್ರಹವನ್ನು ಪ್ರತಿಷ್ಠಾಪಿಸಿ ಗ್ರಾಮ ನಗರಗಳನ್ನು ಉಂಬಳಿಯಾಗಿ ಬಿಟ್ಟು ಪೂಜೆಯು ಅವಿಚ್ಛಿನ್ನವಾಗಿ ನಡೆಯುವಂತೆ ವ್ಯವಸ್ಥೆ ಮಾಡಿದರೆ ವಿಷ್ಣು ಸಾರೂಪ್ಯ ರೂಪವಾದ ಮೋಕ್ಷ ದೊರೆಯುವುದು.

**ಯತ ಕೃಷ್ಣ ಪ್ರಣಿಪಾತ ಧೂಳಿಧವಳಂ ತದ್ವರ್ಷ್ಮ ತದ್ವಚ್ಛುಭಂ**
**ನೇತ್ರೇ ಚೇತ ತವಸೋರ್ಜಿತೇ ಸುರುಚಿರೇ ಯಾಭ್ಯಾಂಹರಿರ್ದೃಶ್ಯತೇ**
**ಸಾ ಬುದ್ಧಿರ್ವಿಮಲೇಂದು ಶಂಖಧವಳಾ ಯಾ ಮಾಧವ ವ್ಯಾಪಿನೀ**
**ಸಾ ಜಿಹ್ವಾ ಮೃದು ಭಾಷಿಣೇ ನೃಪ ಮುಹುರ್ಯಾಸ್ತೌತ್ತಿ ನಾರಾಯಣಂ**

ರಾಜನೆ, ಕೃಷ್ಣನಿಗೆ ನಮಸ್ಕಾರ ಮಾಡಿ ದೂಳಿನಿಂದ ಪವಿತ್ರವಾಗುವ ಶರೀರವೆ ಮಂಗಲ ತಪೋ ಬಲದಿಂದ ಹರಿಯನ್ನು ಕಾಣುವ ಕಣ್ಣುಗಳೆ ಸುಂದರ ಶ್ರೇಷ್ಠ. ಮಾಧವನಲ್ಲಿ ಹರಿದು ವ್ಯಾಪಿಸುವ ಬುದ್ಧಿಯೆ ಚಂದ್ರನಂತೆ ಶಂಖದಂತೆ ಶುಭ್ರವಾಗಿ ನಿರ್ಮಲವಾಗಿರುವ ಬುದ್ಧಿ. ನಾರಾಯಣನನ್ನು ಸ್ತುತಿಸುತ್ತ ಮೃದುವಾಗಿ ಮಾತನಾಡುವ ನಾಲಿಗೆಯ ಉತ್ತಮವಾದ ನಾಲಿಗೆ.

**ಮೂಲ ಮಂತ್ರೇಣ ಕರ್ತವ್ಯಂ ಸ್ತ್ರೀ ಶೂದ್ರೈರಪಿ ಪೂಜನಂ ।**
**ಶ್ರದ್ಧಯಾ ಗುರು ಮಾರ್ಗೇಣ ತಥಾನ್ಯೈರಪಿ ವೈಷ್ಣವೈಃ ॥**

ವಿಷ್ಣುಭಕ್ತರಾದ ಸ್ತ್ರೀ ಶೂದ್ರರು ಕೂಡ **ಓಂ ನಮೋ ನಾರಾಯಣಾಯ** ಎಂಬ ಮೂಲ ಮಂತ್ರದಿಂದ ವಿಷ್ಣು ಪೂಜೆ ಮಾಡಬೇಕು. ಉಳಿದ ವೈಷ್ಣವರು ಗುರುಗಳು ಹೇಳುವ ಮಾರ್ಗದಲ್ಲಿ ಶ್ರದ್ಧೆಯಿಂದ ವಿಷ್ಣುಪೂಜೆ ಮಾಡಬೇಕು. ರಾಜನೆ, ವಿಷ್ಣು ಪೂಜೆಯನ್ನು ಸಂಕ್ಷೇಪವಾಗಿ ಹೇಳಿದ್ದೇನೆ, ನೀನೂ ವಿಶೇಷವಾಗಿ ವೈಶಾಖ ಮಾಸದಲ್ಲಿ ಅದನ್ನು ಮಾಡು.

**ಸೂತ :-** ಹೀಗೆ ನಾರದ ಮುನಿ ಅಂಬರೀಷ ಮಹಾರಾಜನಿಗೆ ಉಪದೇಶಿಸಿ ಅವನಿಂದ ಸತ್ಕಾರವನ್ನು ಪಡೆದು ವೈಶಾಖ ಸ್ನಾನಕ್ಕಾಗಿ ಗಂಗೆಯ ಬಳಿಗೆ ತೆರಳಿದ. ರಾಜನೂ ಮುನಿಯ ಉಪದೇಶದಂತೆ ಸಪತ್ನೀಕನಾಗಿ ವೈಶಾಖ ಸ್ನಾನ ವಿಧಿಯನ್ನು ಅನುಷ್ಠಿಸಿ ಲೋಕಪಾವನವಾದ ಕೀರ್ತಿಯನ್ನು ಪಡೆದನು.

*ಇತಿ ಪದ್ಮ ಮಹಾಪುರಾಣ ಭಾಗ-೨ರ ಪಾತಾಳ ಖಂಡದಲ್ಲಿ*
*ವೈಶಾಖಮಹಾತ್ಮ್ಯದಲ್ಲಿ ಮೂವತ್ತೆಂಟನೆ ಅಧ್ಯಾಯ ಮುಗಿದುದು*

—o—

## ಹರಿಯು ವೈಶಾಖದ ಮಹಿಮೆಯನ್ನು ಭೂದೇವಿಗೆ ಉಪದೇಶಿಸಿದು

ಅಧ್ಯಾಯ - ೩೯

**ಋಷಿಯ ಉವಾಚ**

**ಋಷಿಗಳು** :- ಜಗತ್ತಿಗೆ ಹಿತ ಉಂಟು ಮಾಡುವ ಪವಿತ್ರ ಕಥೆಗಳನ್ನು ಉಪದೇಶಿಸುತ್ತಿರುವ ನೀನು ಬಹುಕಾಲ ಬಾಳು. ಇನ್ನೂ ನಿನ್ನ ಉಪದೇಶಾಮೃತವನ್ನು ನಾವು ಕುಡಿಯ ಬಯಸುತ್ತೇವೆ. ಎಷ್ಟು ಕುಡಿದರೂ ತೃಪ್ತಿಯಾಗುವುದಿಲ್ಲ.

**ಸೂತ** :- ಋಷಿಗಳೆ ಪುರಾತನ ಇತಿಹಾಸವೊಂದನ್ನು ಹೇಳುತ್ತೇನೆ ಕೇಳಿ, ಆರುಸಾವಿರ ಯೋಜನ ಎತ್ತರ, ಮೂರು ಸಾವಿರ ಯೋಜನ ಅಗಲವಾಗಿ ಬೆಳೆದ ವರಾಹಮೂರ್ತಿಯಾದ ಹರಿ ಎಡದಾಡೆಯಿಂದ ಭೂಮಿಯನ್ನೆತ್ತಿ ಒಂದು ಸಾವಿರ ವರ್ಷಗಳ ಕಾಲ ಹಾಗೇ ಧರಿಸಿಕೊಂಡನು. ಆಗ ಭೂದೇವಿ ಧರ್ಮದ ಕುರಿತಾಗಿ ಹರಿಯೊಡನೆ ಸಂಭಾಷಣೆ ನಡೆಸುತ್ತ ಒಮ್ಮೆ ಕೇಳಿದಳು.

**ಭೂದೇವಿ** :- ಈ ಹನ್ನೆರಡು ಮಾಸಗಳು, ಮುನ್ನೂರ ಆರವತ್ತು ದಿನಗಳು ಇವುಗಳಲ್ಲಿ ಅತ್ಯುತ್ತಮವಾದ, ಪವಿತ್ರವಾದ, ನಿನಗೆ ಪ್ರಿಯವಾದ ಕಾಲ ಯಾವುದು ? ಸೂರ್ಯನು ತುಲಾರಾಶಿಯಲ್ಲಿರುವಾಗ ಬರುವ ಕಾರ್ತಿಕ ಮೇಷದಲ್ಲಿ ಸೂರ್ಯನಿರುವಾಗ ಬರುವ ವೈಶಾಖ ಇವು ಪವಿತ್ರವೆಂದು ಹೇಳುತ್ತಾರೆ. ಮಾರ್ಗಶೀರ್ಷವು ಮಾಸಗಳಲ್ಲಿಯೆ ಅತಿ ಪಾವನವೆಂದೂ ಹೇಳುತ್ತಾರೆ. ಯುಗಾದಿ ಯುಗಾಂತಗಳು ಕಲ್ಪಾದಿಗಳು ಪವಿತ್ರವೆನ್ನುವರು. ಎಲ್ಲಕ್ಕಿಂತ ಶ್ರೇಷ್ಠವಾದ ಮಾಸ ಯಾವುದೆಂದು ನಿಶ್ಚಿತವಾಗಿ ಹೇಳಿಬಿಡು.

**ವರಾಹ** :- ದೇವಿ, ವೈಶಾಖದಲ್ಲಿ ನನ್ನನ್ನು ಹೇಗೆ ಪೂಜಿಸಿದರೂ ನನಗೆ ಪ್ರೀತಿ ಉಂಟಾಗುತ್ತದೆ. ನಾನು ಹಿರಣ್ಯಾಕ್ಷನನ್ನೂ ಮಧುವನ್ನೂ ಕೊಂದು ನಿನ್ನನ್ನೆತ್ತಿದುದು ವೈಶಾಖ ಮಾಸದಲ್ಲಿ, ತ್ರೇತ್ರಾಯುಗದಲ್ಲಿ ವೇದ ಧರ್ಮ ವರ್ಣ ವ್ಯವಸ್ಥೆಗಳು ಪ್ರಾರಂಭಿಸಿದುದು ವೈಶಾಖ ಮಾಸದಲ್ಲಿ.

ವೈಶಾಖ ಶುದ್ಧ ತೃತೀಯೆಯ ದಿನದಲ್ಲಿಯೇ ವೇದ ಧರ್ಮವು ಮೊದಲಿಗೆ ವ್ಯಕ್ತವಾದುದರಿಂದ ಆ ದಿನವು ಅಕ್ಷಯ ತೃತೀಯೆಯೆನಿಸಿ ಲೋಕಪೂಜ್ಯವಾಗಿದೆ. ನನಗೆ ಅತಿ ಪ್ರಿಯವಾಗಿದೆ. ಅಂದು ಮಾಡಿದ ಸ್ನಾನ ದಾನ ಅರ್ಚನ ಮುಂತಾದವುಗಳಿಗೆ ಸರ್ವಾಭೀಷ್ಟ ಸಿದ್ಧಿಯ ಫಲವನ್ನೆ ಕೊಡುತ್ತೇನೆ. ನಿತ್ಯವೂ ಯಾಗ ದಾನಗಳನ್ನು ಮಾಡುವವರಿಗಿಂತ ಹೆಚ್ಚಿನ ಫಲವನ್ನು ವೈಶಾಖದಲ್ಲಿ ನನ್ನನ್ನು ಪೂಜಿಸುವವರಿಗೇ ಕೊಡುತ್ತೇನೆ.

ಗ್ರಹಗಳು ಜನ್ಮ ವ್ಯಯ ಅಷ್ಟಮಗಳಲ್ಲಿದ್ದು ಕ್ರೂರವಾಗಿದ್ದರೂ ವೈಶಾಖ ಸ್ನಾನ ಮಾಡಿದರೆ ಅವು ಸೌಮ್ಯವಾಗುವುವು. ವೈಶಾಖದಲ್ಲಿ ಬ್ರಾಹ್ಮಣ ಭೋಜನ ಮಾಡಿಸಿದರೆ ಒಂದೊಂದು ಅಗುಳಿಗೂ ಒಂದೊಂದು ಯುಗದಂತೆ ಪಿತೃಗಳಿಗೆ ತೃಪ್ತಿ ದೊರಕುತ್ತದೆ. ಮಧು ಯುಕ್ತ ತಿಲದಾನ ಮಾಡಿದರೆ ಅದರ ಫಲವನ್ನು ಎಣಿಸಲಾಗುವುದಿಲ್ಲ. ಇಹದಲ್ಲಿ

ಪುತ್ರ ಪೌತ್ರಾದಿ ಸಂಪತ್ತು ದೀರ್ಘಾಯುಸ್ಸುಗಳನ್ನು ಪಡೆದು ಪರದಲ್ಲಿಯೂ ನನ್ನ ಲೋಕವನ್ನು ಹೊಂದಿರುತ್ತಾನೆ. ವೈಶಾಖ ವ್ರತವನ್ನು ತೊರೆದು ಬೇರೆ ವ್ರತವನ್ನು ಆಚರಿಸುವವನು ಕೈಯಲ್ಲಿರುವ ಮಹಾರತ್ನವನ್ನು ಬಿಸುಟು ಮಣ್ಣ ಹೆಂಟೆಯನ್ನು ಅರಸುವವನಂತಾಗುವನು.

**ಸೂತ** :- ಹೀಗೆ ಆದಿ ದೇವನಾದ ನಾರಾಯಣನು ವೈಶಾಖದ ಮಹಿಮೆಯನ್ನು ಭೂದೇವಿಗೆ ಉಪದೇಶಿಸಿದನು. ಹೆಚ್ಚೇಕೆ, ವೈಶಾಖದಲ್ಲಿ ಹರಿ ಪೂಜೆ ಮಾಡಿದವನಿಗೆ ದೊರೆಯದುದು ಪ್ರಪಂಚದಲ್ಲಿಯೆ ಇಲ್ಲ. ಹಿಂದೆ ಯಮನೊಡನೆ ಒಬ್ಬ ಬ್ರಾಹ್ಮಣನು ನಡೆಸಿದ ಸಂಭಾಷಣೆಯನ್ನು ಹೇಳುತ್ತೇನೆ ಕೇಳು.

ಗಂಗಾ ಯಮುನೆಯರ ಮಧ್ಯದ ಪ್ರದೇಶದಲ್ಲಿ ಮಹದ್ಗ್ರಾಮವೆಂಬ ಒಂದು ದೊಡ್ಡ ಅಗ್ರಹಾರವಿತ್ತು. ಅನೇಕ ವಿದ್ವಾಂಸರು ಅಲ್ಲಿದ್ದರು. ಯಮನು ಒಮ್ಮೆ ಕೆಂಗಣ್ಣು, ಮೇಲ್ಮುಖವಾಗಿ ಎದ್ದು ನಿಂತ ತಲೆಗೂದಲು, ಕಾಗೆಯ ಕಾಲಿನಂಥ ಕಾಲು, ಸಣ್ಣ ಮೂಗು, ಕಪ್ಪು ಕೆಂಪು ಬಣ್ಣದ ಮೈ ಇರುವ ಒಬ್ಬ ದೂತನನ್ನು ಕರೆದು, 'ಮಹದ್ಗ್ರಾಮಕ್ಕೆ ಹೋಗಿ ವಶಿಷ್ಠಗೋತ್ರದ ಯಜ್ಞದತ್ತನೆಂಬ ಒಬ್ಬ ಯಾಜ್ಞಿಕ ಬ್ರಾಹ್ಮಣನನ್ನು ಕರೆದು ತಾ ಅವನನ್ನು ನಾನು ಸತ್ಕರಿಸಬೇಕು. ಜೋಕೆ, ಬಳಿಯಲ್ಲೇ ಇನ್ನೊಬ್ಬ ಬ್ರಾಹ್ಮಣನು ಎಲ್ಲ ರೀತಿಯಲ್ಲಿಯೂ ಅವನಂತಿದ್ದಾನೆ. ಅವನನ್ನು ಕರೆತರಬೇಡ. ಎಂದು ಅಜ್ಞಾಪಿಸಿದ.

ಆದರೆ ಆ ದೂತನು ಯಾರನ್ನು ಯಮನು ಬೇಡವೆಂದಿದ್ದನೊ ಅವನನ್ನೆ ತಂದು ನಿಲ್ಲಿಸಿದ. ಯಮನು ತಿಳಿದು ಆ ಬ್ರಾಹ್ಮನನ್ನು ಸತ್ಕರಿಸಿ ದೂತನಿಗೆ ಹೇಳಿದ. 'ಇವನನ್ನು ತಿರುಗಿ ಅಲ್ಲೆ ಬಿಟ್ಟು ಇನ್ನೊಬ್ಬನನ್ನು ಕರೆದು ತಾ.' ಬ್ರಾಹ್ಮಣನಿಗೆ ಇದೊಂದೂ ತಿಳಿಯಲಿಲ್ಲ. 'ಧರ್ಮರಾಜ, ಇದೇನು ? ನನ್ನನ್ನೇಕೆ ಕರೆಸಿದೆ. ತಿರುಗಿ ಏಕೆ ಕಳುಹಿಸುತ್ತಿರುವೆ ? ತಿರುಗಿ ಮರ್ತ್ಯಲೋಕಕ್ಕೆ ಹೋಗುವ ಇಚ್ಛೆ ನನಗಿಲ್ಲ' ಎಂದ.

**ಯಮ**:-ಪುಣ್ಯವಂತರಾಗಿ ಆಯುಸ್ಸು ಮುಗಿದಿರುವವರು ಇಲ್ಲಿ ವಾಸ ಮಾಡುತ್ತಾರೆ. ನಾನು ಅವರಿಗೆ ಸೌಖ್ಯ ನೀಡುವೆನು. ಇದು ಧರ್ಮರಾಜನೆನಿಸಿದ ನನ್ನ ಧರ್ಮ. ಪಾಪಿಗಳಿಗೆ ಯಮನೆನಿಸಿ ನರಕದ ಶಿಕ್ಷೆಯನ್ನು ಕೊಡುವೆನು. ಪುಣ್ಯವಂತರಿಗೆ ಧರ್ಮಮೂರ್ತಿ ಎನಿಸಿ ಸೌಖ್ಯವನ್ನು ಕೊಡುವೆನು. ಬ್ರಾಹ್ಮಣನೆ, ನಿನಗಿನ್ನೂ ಹತ್ತು ವರ್ಷಗಳ ಆಯುಷ್ಯವಿದೆ. ಅದು ಮುಗಿದ ಮೇಲೆ ಬರುವಿಯಂತೆ. ಈಗ ಹೋಗು. ಏನಾದರೂ ಕೇಳ ಬಯಸುವಿಯಾದರೆ ಕೇಳು, ಹೇಳುತ್ತೇನೆ.

**ಬ್ರಾಹ್ಮಣ ಉವಾಚ**

**ಬ್ರಾಹ್ಮಣ** :- ದೇವ, ಧರ್ಮಾಧರ್ಮಗಳ ವಿಷಯದಲ್ಲಿ ನಿನ್ನ ಮಾತು ಎಲ್ಲರಿಗೂ ಗ್ರಾಹ್ಯ. ಸ್ವರ್ಗ ಸಾಧನಗಳಾದ ಕರ್ಮಗಳು ಯಾವುವು ? ನರಕಕ್ಕೆ ತಳ್ಳುವ ಕರ್ಮಗಳು ಯಾವುವು ಎಂಬುದನ್ನು ಹೇಳು.

**ಯಮ** :- ಮನೋವಾಕ್ಕಾಯಗಳಿಂದಲೂ ಧರ್ಮ ವಿಮುಖರಾದ ವಿಷ್ಣು ಭಕ್ತಿಹೀನರಾದ ಜನರು ನರಕಕ್ಕೆ ಹೋಗುವರು. ಬ್ರಹ್ಮವಿಷ್ಣು ಮಹೇಶ್ವರರಲ್ಲಿ ಭೇದವೆಣಿಸುತ್ತ, ವಿಷ್ಣು ವಿದ್ಯೆಗಳಲಿ ಅನಾಸಕ್ತಿ ತೋರುವವರು ನರಕಕ್ಕೆ ಹೋಗುವರು.

ಪರರ ಕ್ಷೇತ್ರ ವೃತ್ತಿ ಗೃಹಗಳ ನಾಶ ಮಾಡುವವರು, ಸ್ನೇಹಕ್ಕೆ ಭಂಗ ತರುವವರು, ಆಸೆಯನ್ನು ಭಂಗಗೊಳಿಸುವವರು, ಹಸಿದು ಬಂದ ಬ್ರಾಹ್ಮಣರನ್ನು ಪರೀಕ್ಷಿಸುವವರು, ನರಕಕ್ಕೆ ಹೋಗುವರು.

**ಅನಾಥಂ ವೈಷ್ಣವಂ ದೀನಂ ರೋಗಾರ್ತಂ ವೃದ್ಧಮೇವಚ**
**ನಾನು ಕಂಪಯತೇ ಮೂಢಃ ಸಜ್ಞೇಯೋ ನರಕಾತಿಥಿಃ**

ಅನಾಥನೂ ದೀನನೂ ರೋಗಿಯೂ ವೃದ್ಧನೂ ಆದ ವೈಷ್ಣವನನ್ನು ನೋಡಿ ದಯೆ ತೋರದವನು ನರಕಕ್ಕೆ ಹೋಗುವವನೆಂದು ತಿಳಿಯಬೇಕು.

ವ್ರತವನ್ನು ಪ್ರಾರಂಭಿಸಿ ಇಂದ್ರಿಯ ಲೋಲುಪತೆಯಿಂದ ಅದನ್ನು ಅರ್ಧದಲ್ಲಿಯೆ ಕೈ ಬಿಡುವವನು ನರಕಕ್ಕೆ ಹೋಗುವನು. ಹರಿಯ ಅರ್ಚನೆ ಧ್ಯಾನ ಸ್ಮರಣೆಗಳನ್ನ ಮಾಡುವವರು ಹರಿಪಾದವನ್ನು ಸೇರುವರು. ಅವರ ಬಾಳು ಸಾರ್ಥಕವಾಗುವುದು.

ಹರಿ ಕೀರ್ತನೆ ಮಾಡಿದೊಡನೆ ಸೂರ್ಯೋದಯವಾದಾಗ ಕತ್ತಲೋಡುವಂತೆ ಪಾಪಗಳು ನಶಿಸುತ್ತವೆ. ಹರಿಯ ಕೀರ್ತನೆ ಪದಗಳನ್ನು ಹಾಡುವವರೂ, ವೇದಾಧ್ಯಯನ ಮಾಡುವವರೂ, ಹರಿಯನ್ನು ಜಪಿಸುವವರೂ, ಬೇಡುವವರನ್ನು ಕಂಡು ಸಂತೋಷದಿಂದ ದಾನ ಮಾಡಿ ಒಳ್ಳೆಯ ಮಾತುಗಳನ್ನಾಡಿ ದಾನಫಲವನ್ನ ಪೇಕ್ಷಿಸದಿರುವವರೂ, ಹಗಲು ನಿದ್ದೆ ಮಾಡದವರೂ, ಶತ್ರುಗಳ ದುರ್ಗುಣಗಳನ್ನು ಮುಚ್ಚಿಟ್ಟು ಅವರ ಸದ್ಗುಣಗಳನ್ನೇ ಹೊಗಳುವವರೂ, ತ್ರಿಕರಣಗಳಲ್ಲಿಯೂ ಪರಸ್ತ್ರೀ ಸಂಗ ಮಾಡದವರೂ, ದಯೆ ಅನುಕಂಪ ಸದಾಚಾರಗಳುಳ್ಳವರೂ ಸ್ವರ್ಗಕ್ಕೆ ಹೋಗುವರು.

**ವ್ರತಂ ರಕ್ಷಂತಿ ಯೇ ಕೋಪಾತ್ ಶ್ರೀಯಂ ರಕ್ಷಂತಿ ಮತ್ಸರಾತ್**
**ವಿದ್ಯಾಂ ಮಾನಾಪಮಾನಾಭ್ಯಾಂ ಆತ್ಮಾನಂ ತು ಪ್ರಮಾದತ**
**ಮತಿಂ ರಕ್ಷಂತಿ ಯೋಲೋಭಾತ್ ಮನೋ ರಕ್ಷಂತಿ ಕಾಮತಃ**
**ಧರ್ಮಂ ರಕ್ಷಂತಿ ದುಃಸಂಗಾತ್ ತೇ ನರಾಃ ಸ್ವರ್ಗಗಾಮೀನ**

ವ್ರತ ಕಾಲದಲ್ಲಿ ಕೋಪದಿಂದ ಅದು ಕೆಡದಂತೆ ನೋಡಿಕೊಳ್ಳುವವರು, ಸಂಪತ್ತು ಬಂದಾಗ ಪರರ ಸಂಪತ್ತಿನಲ್ಲಿ ಮತ್ಸರ ಪಡದೆ ತನ್ನದನ್ನೂ ಕಾಪಾಡಿ ಕೊಳ್ಳುವವರೂ, ವಿದ್ಯೆ ದೊರೆತ ಮೇಲೆ ಮಾನಾಪಮಾನ ಜಯಾಪಜಯ ಮುಂತಾದ ದ್ವಂದ್ವಗಳಲ್ಲಿ ಸಿಲುಕದೆ ಆ ವಿದ್ಯೆಯನ್ನು ಕಾಪಾಡುವವರು, ವಿಚಾರವಿಲ್ಲದೆ ತಪ್ಪು ದಾರಿ ತುಳಿಯುವ ಪ್ರಮಾದಕ್ಕೆ ತಾನು ಬೀಳದಂತೆ ಜಾಗರೂಕತೆ ವಹಿಸುವವರು, ಲೋಭದಿಂದ ವಿವೇಕ ದೂರಾಗದಂತೆ ನೋಡಿಕೊಳ್ಳುವವರು, ರಾಗದ್ವೇಷಗಳಿಗೆ ಮನಸ್ಸು ಬಲಿಯಾಗದಂತೆ ನೋಡಿಕೊಳ್ಳುವವರು, ದುರ್ಜನರ ಸಹವಾಸದಿಂದ ವಿಹಿತ ಧರ್ಮಕ್ಕೆ ಚ್ಯುತಿಯಾಗದಂತೆ ನೋಡಿಕೊಳ್ಳುವವರೂ ಸ್ವರ್ಗಕ್ಕೆ ಹೋಗುತ್ತಾರೆ. ಶುಕ್ಲ ಪಕ್ಷಗಳೆರಡರ ಏಕಾದಶಿಗಳಲ್ಲಿಯೂ ವಿಧಿವತ್ತಾಗಿ ಉಪವಾಸ ಮಾಡುವವರೂ ಸ್ವರ್ಗ ಪಡೆಯುತ್ತಾರೆ.

**ಮಾತೇವ ಸರ್ವ ಬಾಲಾನಾಂ ಔಷಧಂ ರೋಗಿಣಾಮಿವ**
**ರಕ್ಷಾರ್ಥ ಸರ್ವ ಲೋಕಾನಾಂ ನಿರ್ಮಿತೈಕಾದಶೀ ತಿಥಿಃ**

ಮಕ್ಕಳಿಗೆ ತಾಯಿಯಂತೆ, ರೋಗಿಗಳಿಗೆ ಔಷಧಿಯಂತೆ ಎಲ್ಲರನ್ನು ಕಾಪಾಡಲು ಏಕಾದಶಿ ತಿಥಿ ಬರುತ್ತದೆ.

ಏಕಾದಶಿಯಂಥ ಪಾಪ ಪರಿಹಾರಕವಿನ್ನಿಲ್ಲ. ಅಂದು ಉಪವಾಸ ಮಾಡುವವರು ಸ್ವರ್ಗವನ್ನು ಪಡೆಯುವರು.

ಗಂಗೆ ಯಮುನೆ ಸರಸ್ವತಿ ಗೋದಾವರಿ ನದಿಗಳಲ್ಲಿ ಸ್ನಾನ ದಾನ ಮುಂತಾದುವನ್ನು ಆಚರಿಸುವ ಸದಾಚಾರಿಗಳು ನರಕದ ದಾರಿಯನ್ನು ಕಾಣುವುದಿಲ್ಲ. ನರ್ಮದಾ ಸ್ನಾನ ದರ್ಶನಗಳಿಂದ ಶಿವಲೋಕ ಪ್ರಾಪ್ತಿಯಾಗುತ್ತದೆ.

ಚರ್ಮಣ್ವತಿಯಲ್ಲಿ ಸ್ನಾನ ಮಾಡಿ ಅದರ ತೀರದಲ್ಲಿ ಮೂರು ದಿನ ನಿಯಮದಿಂದ್ದರೆ ಅದರಲ್ಲೂ ವ್ಯಾಸಾಶ್ರಮದಲ್ಲಿ ಹಾಗೆ ವಾಸಮಾಡಿದರೆ ವಿಷ್ಣುಲೋಕ ಪ್ರಾಪ್ತಿಯಾಗುವುದು.

ಗಂಗಾಜಲ, ಪ್ರಯಾಗ ಕೇದಾರ, ಪುಷ್ಕರ, ವ್ಯಾಸಾಶ್ರಮ ಪ್ರಭಾಸ, ದ್ವಾರಕೆ, ಕುರುಕ್ಷೇತ್ರಗಳಲ್ಲಿ ಮಡಿದರೆ ಇಲ್ಲವೆ ಯೋಗಾಭ್ಯಾಸದಿಂದ ಮರಣಹೊಂದಿದರೆ, ಹರಿ ಎಂಬ ಎರಡು ಅಕ್ಷರಗಳನ್ನು ಉಚ್ಚರಿಸುತ್ತ ಮಡಿದರೆ ಹರಿ ಲೋಕವನ್ನು ಸೇರುವರು. ದ್ವಾರಕೆಯಲ್ಲಿ ಮೂರು ದಿನ ವಾಸವಾಗಿದ್ದರೂ ಹನ್ನೊಂದು ಇಂದ್ರಿಯಗಳ ಪಾಪ ತೊಲಗುವುದು. ಸ್ವರ್ಗ ಸಿಗುವುದು.

**ಅಶ್ವಮೇಧ ಸಹಸ್ರಾಣಿ ರಾಜಸೂಯ ಶತಾನಿ ಚ**
**ಏಕಾದಶ್ಯುಪವಾಸಸ್ಯ ಕಲಾಂನಾರ್ಹಂತಿ ಷೋಡಶೀಂ**

ಸಾವಿರ ಅಶ್ವಮೇಧಗಳೂ, ನೂರು ರಾಜಸೂಯಗಳೂ ಏಕಾದಶಿ ಉಪವಾಸದ ಹದಿನಾರನೆ ಒಂದಂಶಕ್ಕೆ ಸಮನಾಗಲಾರವು.

**ಏಕತಃ ಕ್ರತವಃ ಸರ್ವೇ ಸರ್ವ ತೀರ್ಥತಪಾಂಸಿ ಚ**
**ಮಹಾ ದಾನಾನಿ ಚ ಬ್ರಹ್ಮನ್ ವ್ರತಂ ವೈಷ್ಣವ ಮೇಕತಃ**

ಎಲ್ಲ ಯಾಗಗಳೂ ಎಲ್ಲ ತೀರ್ಥಯಾತ್ರೆ ತಪಸ್ಸುಗಳೂ ಮಹಾದಾನಗಳೂ ಒಂದೆಡೆ, ವೈಷ್ಣವ ವ್ರತವೊಂದೆ ಇನ್ನೊಂದೆಡೆ.

**ವೈಷ್ಣವ ವ್ರತ ಜೋಧರ್ಮೊ ಧರ್ಮೋಯ ಜ್ಞಾದಿ ಸಂಭವಃ**
**ಏಕತ್ರ ತುಲಿತೌ ಧಾತ್ರಾತತ್ರ ಪೂರ್ವೋಭವದ್ಗುರು**

ವೈಷ್ಣವ ವ್ರತಗಳ ಪುಣ್ಯವನ್ನೂ ಯಜ್ಞಾದಿಗಳ ಪುಣ್ಯವನ್ನು ಬ್ರಹ್ಮನು ತೂಗಿ ನೋಡಿದಾಗ ವೈಷ್ಣವ ವ್ರತದ ಪುಣ್ಯವೆ ಅಧಿಕವೆಂದು ಕಂಡು ಬಂದಿತು.

ಏಕಾದಶಿಯಲ್ಲಿ ಭಕ್ತಿ ಉಳ್ಳವರನ್ನೂ ಅಚ್ಯುತ ಅಚ್ಯುತ ಎನ್ನುವವರನ್ನೂ ನಾನು ಎಂದು ಶಿಕ್ಷಿಸಲು ಹೋಗಲಾರೆ. ನನಗೆ ಅವರನ್ನು ಕಂಡರೆ ಭಯ.

ಕಿಂಸ್ಪೃಶಾ, ವಂಜುಳೀ, ಪಕ್ಷ ಸಂವರ್ಧಿನೀ ಜಯಾ, ವಿಜಯಾ, ಜಯಂತಿ, ಪಾಪನಾಶಿಕಾ, ತಿಲದಗ್ಧಾ, ಅಖಂಡ ದ್ವಾದಶೀ, ಮನೋರಥಾ, ಭೀಮ ದ್ವಾದಶೀ ಮೊದಲಾದ ದ್ವಾದಶಿಗಳಿವೆ. ಈ ಎಲ್ಲ ವ್ರತಗಳಲ್ಲಿ ಶಕ್ತರಾದವರು ಹರಿಯನ್ನೇ ಹೋಗಿ ಸೇರುತ್ತಾರೆ.

ಧರ್ಮಶಾಸ್ತ್ರವನ್ನು ಕೇಳಿ ಅದನ್ನು ನಂಬುವವರೂ, ಮಕ್ಕಳಲ್ಲಿ ಪ್ರೀತಿಯಿಂದಿರುವವರೂ, ದರ್ಶಶ್ರಾದ್ಧ ವ್ರತದಲ್ಲಿ ಅದರ ಉಳ್ಳವರೂ, ನಂದಾ ತಿಥಿಯಲ್ಲಿ ಬದರಿಯಲ್ಲಿ ಮೂರು ದಿನ ಉಪವಾಸವಿರುವವರೂ, ಪುರುಷೋತ್ತಮ ಕ್ಷೇತ್ರದಲ್ಲಿ ಆರು ತಿಂಗಳು ವಾಸ ಮಾಡುವವರೂ, ಮಣಿ ಕರ್ಣಿಕಾ ಸ್ನಾನ ಕಾಶಿ ವಿಶ್ವೇಶ್ವರನ ನಮಸ್ಕಾರಗಳನ್ನು ಮಾಡುವವರೂ, ಹರಿ ಪೂಜೆ ಮಾಡಿ ಭೂಮಿ ಲೋಹ ಗೋದಾನಗಳನ್ನು ಕೊಟ್ಟು ಮರಣ ಹೊಂದುವವರೂ, ಗಂಡು ಮಕ್ಕಳನ್ನು ಪಡೆದು ಅವರಿಗೆ ಪಿತೃ ಪಿತಾಮಹರ ಸ್ಥಾನವನ್ನು ಹೊಂದಿಸಿ ಮಮತೆ ಅಹಂಕಾರಗಳನ್ನು ತೊರೆದು ಮರಣ ಹೊಂದುವವರೂ, ತಮ್ಮ ಸಂಪತ್ತಿನಲ್ಲಿ ತೃಪ್ತಿ ಹೊಂದಿ ಪರ ಧನಕ್ಕಾಶಿಸದವರೂ, ಒಳ್ಳೆಯ ಮಧುರವಾದ ಪಾಪ ರಹಿತವಾದ ಮಾತನ್ನಾಡುವವರೂ, ಧಾರ್ಮಿಕರಿಗೆ ಪ್ರೋತ್ಸಾಹ ಕೊಡುವವರೂ, ಚಳಿಗಾಲದಲ್ಲಿ ಕಟ್ಟಿಗೆ, ಬೇಸಿಗೆಯಲ್ಲಿ ನೀರು, ಮಳೆಗಾಲದಲ್ಲಿ ಮನೆ ಕೊಡುವವರೂ, ನಿತ್ಯ ನೈಮಿತ್ತಿಕ ಮುಂತಾದ ಪುಣ್ಯಕಾಲಗಳಲ್ಲಿ ಶ್ರಾದ್ಧ ಮಾಡುವವರೂ ಸ್ವರ್ಗ ಪಡೆಯುತ್ತಾರೆ.

ದರಿದ್ರನಿಗೆ ದಾನ, ಅಧಿಕಾರಿಯ ಕ್ಷಮಾಗುಣ, ಯುವಕನ ತಪಸ್ಸು, ಜ್ಞಾನಿಯ ಮೌನ, ಸುಖ ಭೋಗಕ್ಕೆ ಯೋಗ್ಯರಾದವರ ವೈರಾಗ್ಯ, ಭೂತದಯೆ, ಇವೆಲ್ಲವೂ ಸ್ವರ್ಗ ಸಾಧನಗಳು. ಪಾಪ ಕರ್ಮ ಪುಣ್ಯ ಕರ್ಮಗಳು ಯಾವುದೆಂದು ಅವು ಸತ್ಯಕ್ಕೆ ವಿರುದ್ಧವೆ ಅಲ್ಲವೆ ಎಂದು ಪರೀಕ್ಷಿಸಿದರೆ ತಿಳಿಯುವುದು. ತಪಸ್ಸು ಧ್ಯಾನ ಮುಂತಾದವು ಸಂಸಾರವನ್ನು ಕಳೆಯುವುದು. ಪಾಪ ಕರ್ಮವು ನರಕಕ್ಕೆ ತಳ್ಳುವುದು.

ಸೈನ್ಯ ಪರಿವಾರ ಶೌರ್ಯ ಎಲ್ಲ ಇದ್ದರೂ ಪುಣ್ಯವೊಂದಿಲ್ಲದಿದ್ದರೆ ಅಧಃ ಪತನವೆ ಸರಿ. ಎತ್ತರವಾದ ಬೆಟ್ಟಗಳಲ್ಲಿ ಬೆಳೆದು ಹೂ ಬಿಟ್ಟ ಮರಗಳು ಗಾಳಿಯಿಂದ ಬೇರು ಸಹಿತ ಕಿತ್ತು ಹೊಗುವುವು. ಧರ್ಮದ ಬಲವೆ ಬಲ. ಇಹಪರಗಳೆರಡರಲ್ಲೂ ಅದರಿಂದ ಕ್ಷೇಮ ಉಂಟಾಗುವುದು. ಸಂಕ್ಷೇಪವಾಗಿ ಸ್ವರ್ಗ ನರಕ ಸಾಧನಗಳನ್ನು ವರ್ಣಿಸಿದ್ದೇನೆ. ಇನ್ನೇನು ಹೇಳಬೇಕು, ಕೇಳು.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಪಾತಾಳ ಖಂಡದಲ್ಲಿ ವೈಶಾಖ ಮಾಹಾತ್ಮ್ಯದಲ್ಲಿ ಮೂವತ್ತೊಂಬತ್ತನೆ ಅಧ್ಯಾಯ ಮುಗಿದುದು*

—o—

**ಬ್ರಾಹ್ಮಣ ಉವಾಚ**

**ಬ್ರಾಹ್ಮಣ :-** ಪುಣ್ಯ ಮಾಡಿದವನು ನರಕಕ್ಕೆ ಹೋಗಲಾರ. ಪಾಪ ಮಾಡಿದವನು ಸ್ವರ್ಗಕ್ಕೆ ಹೋಗಲಾರ ಎಂಬುದು ಎಂಥ ಮೂರ್ಖನಿಗೂ ಗೊತ್ತು.

ನಾನಾ ವಿಧದ ಯಜ್ಞ ದಾನವ್ರತ ಜಪ ಸತ್ಯಗಳಿಂದ ಸ್ವರ್ಗ ಸಿಗುತ್ತದೆ. ವಿದ್ಯೆ, ಧನ, ಆಚಾರ ಎಲ್ಲವೂ ಇದ್ದರೆ ಇದು ಸಾಧ್ಯ. ಹೇರಳ ಸಂಪತ್ತು ಇಲ್ಲದಿದ್ದರೆ ಕುಟುಂಬ ಪೋಷಣೆಯ ಚಿಂತೆಯ ದೆಸೆಯಿಂದ ದಾನ ಅಗ್ನಿ ಹೋತ್ರಾದಿ ಕರ್ಮಗಳು ಯಾವುವೂ ನಡೆಯುವುದಿಲ್ಲ. ಕಲಿಯುಗದಲ್ಲಿ ಅವು ಅತಿ ದುಷ್ಕರ. ಆದ್ದರಿಂದ ಹೆಚ್ಚಿನ ಶ್ರಮವಿಲ್ಲದೆ ಪುಣ್ಯವನ್ನು ಗಳಿಸುವ ಸಾಧನವಿದ್ದರೆ ಹೇಳು.

ಎಲ್ಲ ಧರ್ಮಕ್ಕಿಂತ ಉತ್ತಮವಾದುದು, ಅದನ್ನು ಮಾಡಿದರೆ ಎಲ್ಲ ಪಾಪ ಪರಿಹಾರವಾಗಬೇಕು. ಧನ ಧಾನ್ಯ ಯಶಸ್ಸು ಆಯುಷ್ಯಗಳು ಲಭಿಸಬೇಕು. ಇಹದಲ್ಲಿ ಸೌಖ್ಯ, ಪರದಲ್ಲಿ ಅಕ್ಷಯ ಸ್ವರ್ಗ ದೊರಕಬೇಕು. ಭಕ್ತರಿಗೆ ಅಭಯ ನೀಡುವ ಸಾಕ್ಷಾತ್‌ನಾರಾಯಣನ ಅನುಗ್ರಹವಾಗಬೇಕು. ಎಲ್ಲ ಯಜ್ಞದಾನ ತಪಸ್ಸು ತೀರ್ಥಯಾತ್ರೆಗಳ ಫಲ ದೊರೆಯಬೇಕು. ಅಂತಹ ಒಂದು ಧರ್ಮ ಯಾವುದೆಂದು ಹೇಳು. ಎಲ್ಲ ಧರ್ಮಗಳ ಸಾರವನ್ನು ಹೇಳು.

ಎಲ್ಲ ಪಾಪಗಳಿಗೂ ಪ್ರಾಯಶ್ಚಿತ್ತಗಳನ್ನು ಜ್ಞಾನಿಗಳು ಹೇಳಿದ್ದಾರೆ. ಅವೆಲ್ಲವನ್ನು ಒಂದೊಂದಾಗಿ ಮಾಡುವುದು ಅಶಕ್ಯ. ಎಲ್ಲ ಪಾಪಗಳ ಪರಿಹಾರಕ್ಕೆ ಒಂದು ಪ್ರಾಯಶ್ಚಿತ್ತವೇನಿದೆ. ಹೇಳು. ನನ್ನನ್ನು ಅನುಗ್ರಹಿಸು.

ಧರ್ಮರಾಜ, ನಿನಗೆ ನಮಸ್ಕಾರ. ನೀನು ಜಗದೊಡೆಯ ಧರ್ಮಶಾಸ್ತ್ರ ಸ್ವರೂಪಿ, ಎಲ್ಲ ಲೋಕಗಳನ್ನು ಪಾಲಿಸುವವ. ಸ್ಥಾವರ ಜಂಗಮಗಳಾವುವೂ ನಿನ್ನನ್ನು ಬಿಟ್ಟಿರಲಾರದು. ನೀನು ಹಿಡಿದು ಸೆಳೆದರೆ ಎಲ್ಲವೂ ನಾಶಹೊಂದುವುದು.

ಸಾತ್ವಿಕರಿಗೆ ಸತ್ವರೂಪನಾಗಿ ರಾಜಸರಿಗೆ ರಜೋರೂಪನಾಗಿ ತಾಮಸರಿಗೆ ತಮೋರೂಪನಾಗಿರುವವನು. ನಾಲ್ಕು ಕೊಂಬು, ಮೂರು ಕಣ್ಣು, ಏಳು ಕೈಗಳ ಎತ್ತಿನ ರೂಪದವನು, ಸರ್ವಯಜ್ಞಮಯ, ಎಲ್ಲ ಪ್ರಾಣಿಗಳ ಹೃದಯದಲ್ಲಿದ್ದು ಅವರ ಪುಣ್ಯಪಾಪಗಳಿಗೆ ಸಾಕ್ಷಿಯಾಗಿರುವವನು. ಅವುಗಳಿಗೆ ತಕ್ಕ ಶಿಕ್ಷೆ ನೀಡುವವನು, ಸುಖ ನೀಡುವವನು. ದಂಡಧರನಾಗಿದ್ದು ಧರ್ಮಪ್ರವರ್ತಕನೆನಿಸಿದವನು. ನಿನ್ನನ್ನು ಪ್ರತ್ಯಕ್ಷನಾಗಿ ನಾನು ಕಂಡೆ. ದೇವ ನಿನಗೆ ನಮಸ್ಕಾರ. ಎಲ್ಲ ಧರ್ಮಗಳ ಸಾರವನ್ನು ನನಗೆ ಉಪದೇಶಿಸು.

**ಯಮ :-** ನಿನ್ನ ಸ್ತೋತ್ರವನ್ನು ಕೇಳಿ ನಾನು ಸಂತುಷ್ಟನಾದೆ. ಶಾಸ್ತ್ರ ರೀತಿಯಿಂದ ನೀನು ನನಗೆ ಪೂಜ್ಯನಾಗಿರುವೆ. ಯಾರಿಗೂ ಹೇಳದಿರುವ ರಹಸ್ಯವಾದ ಧರ್ಮಸಾರ ಒಂದಿದೆ. ಮಹಾ ನರಕಗಳಲ್ಲಿರುವ ಪಾಪಿಗಳನ್ನೆಲ್ಲ ಅಲ್ಲಿಂದ ಹೊರಗೊಯ್ಯುವುದರಿಂದ

ಅದನ್ನು ಹೇಳಕೂಡದು. ಆದರೂ ನಿನ್ನ ವಿನಯ ಪೂರ್ವಕವಾದ ಪ್ರಾರ್ಥನೆಯನ್ನು ತಿರಸ್ಕರಿಸಲಾರದೆ ಹೇಳುತ್ತೇನೆ ಕೇಳು.

**ಸ್ಯುರ್ಮೋಹಾಯ ಚರಾಚರಸ್ಯ ಜಗತಸ್ತೇ ತೇ ಪುರಾಣಾಗಮಾ**
**ಸ್ತಾಂ ತಾಮೇವಹಿ ದೇವತಾಂ ಪರಿಮಿತಾಂ ಜಲ್ಪಂತು ಕಲ್ಪೇವಿಧೌ**
**ಸಿದ್ಧಾಂತೇ ಪುನರೇಕ ಏವ ಭಗವಾನ್ ವಿಷ್ಣುಃ ಸಮಾಸ್ತಾಗಮ**
**ವ್ಯಾಪಾರೇಷು ವಿವೇಕನಾಂ ವ್ಯತಿಕರಂ ನೀತೇಷು ನಿಶ್ಚೀಯತೇ**

ಆಯಾ ಪುರಾಣಗಳು ಆಗಮಗಳು ಚರಾಚರ ಜಗತ್ತಿಗೆ ಗೊಂದಲ ಉಂಟು ಮಾಡುತ್ತಿರಲಿ, ಆಯಾ ದೇವತೆಗಳನ್ನೇ ಸರ್ವೋತ್ತಮವೆನ್ನುತ್ತಿರಲಿ, ಸಿದ್ಧಾಂತದಲ್ಲಿ ಮಾತ್ರ ವಿವೇಕಿಗಳು ಎಲ್ಲ ಶಾಸ್ತ್ರಗಳ ತಾತ್ಪರ್ಯವನ್ನೂ ವಿಚಾರಿಸಿ ನೋಡಿದಾಗ ಭಗವಾನ್ ವಿಷ್ಣುವೆ ಸರ್ವೋತ್ತಮನೆಂದು ನಿಶ್ಚಯಿಸಲ್ಪಟ್ಟಿದ್ದಾನೆ.

**ಭವೋ ಬ್ರಹ್ಮಾಂಡ ವಿಷ್ಣುಶ್ಚ ತ್ರಯಮೇವ ತ್ರಯೀಮತಂ**
**ದೀಪೋಗ್ನಿರ್ವರ್ತಿಸ್ನೇಹೈಸ್ತು ಯಥಾ ವಿಪ್ರ ತಥಾ ಹರಿಃ**

ಹೇಗೆ ದೀಪವೆಂದರೆ ಅಗ್ನಿ ಬತ್ತಿ ಎಣ್ಣೆಗಳ ಸಮೂಹವೋ ಹಾಗೆ ಹರಿ ಎಂದರೆ ಶಿವ ಬ್ರಹ್ಮ ವಿಷ್ಣುಗಳ ಸಮೂಹರೂಪನಾದವನು. ಈ ತ್ರಿಮೂರ್ತಿಯನ್ನೇ ವೇದಗಳು ಹೇಳುತ್ತವೆ. **ಅನಾರಾಧ್ಯ ಹರಿಂ ಭಕ್ತ್ಯಾ ಕೋ ಲೋಕನ್ ಪ್ರಾಪ್ನುಯಾ ಚ್ಛುಭಾನ್ ಆರಾಧಿತೇ ಹರೆಕಾಮಾಃ ಸರ್ವೇ ಕರಿತಲೇ ಸ್ಥಿತಾ;** ಹರಿಯನ್ನಾರಾಧಿಸದೆ ಯಾರು ಪುಣ್ಯ ಲೋಕಗಳನ್ನು ಪಡೆಯಬಲ್ಲ? ಹರಿಯನ್ನಾರಾಧಿಸಿದರೆ ಬಯಸಿದುದೆಲ್ಲ ಕರಗತವಾಗುತ್ತದೆ.

**ಅನಾರಾಧ್ಯ ಹರಿಂ ಲೋಕಃ ಸರ್ವದಂ ಸರ್ವದೇಹಿನಾಂ ।**
**ಕೋಪಿ ಕ್ವಾಪಿ ಕಿಮಪ್ಯತ್ರ ನಲಭೇತೇತಿ ನಿಶ್ಚಿತಂ ॥**

ಎಲ್ಲರಿಗೂ ಎಲ್ಲವನ್ನೂ ಕೊಡುವ ಹರಿಯನ್ನು ಆರಾಧಿಸದೆ ಯಾರೂ ಎಲ್ಲಿಯೂ ಏನನ್ನೂ ಪಡೆಯಲಾರನೆಂಬುದು ನಿಶ್ಚಿತ.

**ಸಸರ್ಜ ನಾಭಿ ಕಮಲೇ ಬ್ರಹ್ಮಾಣಂ ಕಮಲಾಸನಂ ।**
**ರಜಸಾ ತಮಸಾಜುಷ್ಟಂ ಸ ರುದ್ರಮಸ್ಯ ಜತ್ ಪ್ರಭುಃ ॥**

ಹರಿಯ ರಜೋ ಗುಣದಿಂದ ತನ್ನ ನಾಭಿಕಮಲದಲ್ಲಿ ಕಮಲಾಸನನಾದ ಬ್ರಹ್ಮನನ್ನು ಹುಟ್ಟಿಸಿದ. ತಮೋ ಗುಣದಿಂದ ಕೂಡಿದ ರುದ್ರನನ್ನೂ ಬಳಿಕ ಅವನೆ ಹುಟ್ಟಿಸಿದ.

ಸತ್ವ ರಜ ತಮ ಎಂಬ ಮೂರು ಗುಣಗಳಲ್ಲಿ ಸತ್ವ ಗುಣದಿಂದ ಮೋಕ್ಷ ಸಿಗುವುದು. ಆ ಸತ್ವ ನಾರಾಯಣನ ಅಧೀನವಾದುದು. ಸತ್ವ ಮಿಶ್ರಿತವಾದ ರಜಸ್ಸಿನಿಂದ ಸಂಪತ್ತು ಯಶಸ್ಸು ದೊರಕುವುದು. ಕೊನೆಯದಾದ ರುದ್ರ ಎಂಬುದು ರಜೋ ಮಿಶ್ರಿತ ತಮೋಮಯವಾದುದು. ಅದರಿಂದ ರಾಜ್ಯ ಲಭಿಸುವುದು. ರಜಸ್ಸಿನಿಂದ ಕೂಡಿರದ ಕೇವಲ ತಮಸ್ಸು ಇಹಪರಗಳೆರಡರಲ್ಲೂ ದುರ್ಗತಿಯನ್ನು ನೀಡುವುದು. ವಿಷ್ಣು ಬ್ರಹ್ಮ ಶಿವರೊಳಗೆ ಭೇದವಿಲ್ಲ. ಭೇದವನ್ನು ತಿಳಿಯುವವನು ಪಾಪಿ, ಅನಿಷ್ಟ ಗತಿ ಹೊಂದುತ್ತಾನೆ.

ವಿಷ್ಣುವೆ ಪರಬ್ರಹ್ಮ. ವಿಷ್ಣುವೆ ಜಗದೊಡೆಯ. ಅವನಿಗೆ ಪ್ರಿಯವಾದುದು ಈ ವೈಶಾಖ ಮಾಸ. ಈ ಮಾಸದಲ್ಲಿ ಸ್ನಾನ ಮಾಡಿದವರು ನನ್ನ ದೂತರನ್ನೆ ನನ್ನ ಮುಂದೆ ಹೊಡೆಯುತ್ತಾರೆ. ಚಿತ್ರಗುಪ್ತನ ಲೇಖನದ ಮೇಲೆ ಪ್ರಶ್ನೆ ಹಾಕುತ್ತಾರೆ ವಂಶದ ಪೂರ್ವಿಕರನ್ನೆಲ್ಲ ನರಕದಿಂದ ಎತ್ತುತ್ತಾರೆ. ಇದು ರಹಸ್ಯ ಯಾರಿಗೂ ಹೇಳಕೂಡದು. ಹೇಳಿದರೆ ಎಲ್ಲರೂ ಸಂಸಾರದಿಂದ ಬಿಡುಗಡೆ ಹೊಂದುತ್ತಾರೆ. ನರಕಗಳೆಲ್ಲವೂ ಶೂನ್ಯವಾಗುತ್ತವೆ. ನನ್ನ ಅಧಿಕಾರಕ್ಕೆ ಚ್ಯುತಿ ಬರುತ್ತದೆ.

ವಿಂಧ್ಯದ ಉತ್ತರದಲ್ಲಿರುವ ಭಾಗೀರಥಿ, ನರ್ಮದೆ, ಯಮುನೆ, ಸರಸ್ವತಿ, ವಿಶೋಕೆ, ವಿತಸ್ತೆ ಎಂಬ ನದಿಗಳೂ ದಕ್ಷಿಣದ ಗೋದಾವರಿ, ಭೀಮರಥಿ, ತುಂಗಭದ್ರೆ, ವೇದಿಕೆ, ತಾಪಿ, ಪಯೋಷ್ಣಿ ನದಿಗಳು ಹೀಗೆ ಹನ್ನೆರಡು ನದಿಗಳಲ್ಲಿ ನಿತ್ಯ ವೈಶಾಖ ಸ್ನಾನ ಮಾಡಬೇಕು. ವೈಶಾಖದಲ್ಲಿ ಎಲ್ಲ ನದಿಗಳೂ ಜಲಾಶಯಗಳೂ ಎಲ್ಲ ದೇವಾಲಯಗಳೂ ಎಲ್ಲ ಆಶ್ರಮಗಳೂ ಪವಿತ್ರವೆ.

ಸೂರ್ಯನು ಅರ್ಧ ಉದಯಿಸಿರುವಾಗ ವಿಧಿವತ್ತಾಗಿ ವೈಶಾಖಸ್ನಾನ ಮಾಡಬೇಕು. ಆಗ ಸಿಗುವ ಪುಣ್ಯವನ್ನು ಸಾವಿರ ಸಾವಿರ ಮುಖಗಳಿದ್ದರೂ ಬ್ರಹ್ಮನ ಆಯುಸ್ಸು ಇದ್ದರೂ ಹೇಳುವುದು ಅಶಕ್ಯ. ವಿಷ್ಣುವಿನಂತೆಯೆ ವೈಶಾಖಮಾಸವೂ ಮಹಾನರಕಗಳನ್ನು ಸುಡುವುದರಲ್ಲಿ ಬೆಂಕಿಯಂತಿದೆ. ಆದ್ದರಿಂದ ವೈಶಾಖಸ್ನಾನ ವಿಷ್ಣುಪೂಜೆಗಳನ್ನು ಮಾಡಿದವನು ಎಲ್ಲ ಘೋರಪಾಪಗಳನ್ನೂ ಕಳೆದುಕೊಂಡು ಕೋಟಿ ಸಹಸ್ರ ಕಲ್ಪಗಳ ಕಾಲ ವೈಕುಂಠದಲ್ಲಿ ವಾಸಮಾಡುವನು.

**ಸೂತ ಉವಾಚ**

**ಸೂತ :-** ಧರ್ಮರಾಜನ ಈ ಮಾತನ್ನು ಕೇಳಿ ಬ್ರಾಹ್ಮಣನು ತಿರುಗಿ ವೈಶಾಖಮಾಸ ವಿಧಿಯನ್ನೆ ಕೇಳಿದ.

**ಬ್ರಾಹ್ಮಣ :-** ಧರ್ಮರಾಜಾ, ವೈಶಾಖ ಮಾಸದಲ್ಲಿ ಪ್ರಾತಃಸ್ನಾನ ಮಾಡಿ ಯಾವ ವಿಧಾನದಿಂದ ಹರಿಯನ್ನರ್ಚಿಸಬೇಕು ? ಯಾವ ಹೂವುಗಳನ್ನರ್ಪಿಸಬೇಕು ?

**ಯಮ :-** ಕೇಶವನಿಗೆ ತುಳಸಿಯೆ ಎಲ್ಲ ಪತ್ರಗಳಿಗಿಂತ ಹೆಚ್ಚು ಪ್ರಿಯ. ಪುಷ್ಕರ ಮುಂತಾದ ತೀರ್ಥಕ್ಷೇತ್ರಗಳು ಗಂಗಾದಿ ಪುಣ್ಯ ನದಿಗಳೂ ವಾಸುದೇವನೆ ಮುಂತಾದ ದೇವತೆಗಳೂ ತುಳಸಿಯಲ್ಲಿರುವರು. ಆದ್ದರಿಂದ ಜಾಜಿಯನ್ನೂ ಬಿಟ್ಟು ಬಿಡಬಹುದು ಕಮಲವನ್ನೂ ಬಿಡಬಹುದು ತುಳಸಿಯೊಂದರಿಂದಲೆ ಭಕ್ತಿಯಿಂದ ಮಾಧವನನ್ನರ್ಚಿಸಲು ಸಾಧ್ಯವಿದೆ. ಅದರ ಫಲವನ್ನು ಹೇಳಲು ಶೇಷನಿಂದಲೂ ಶಕ್ಯವಿಲ್ಲ ?

ಸ್ನಾನಮಾಡದೆ ತುಳಸಿಯನ್ನು ಕೊಯಿದರೆ ಅದರಿಂದ ಮಾಡಿದ ದೇವ ಪಿತೃಕರ್ಮಗಳೆಲ್ಲ ವ್ಯರ್ಥವಾಗುವುದು. ಪಂಚಗವ್ಯದಿಂದ ಶುದ್ಧಿಮಾಡಿ ಕೊಳ್ಳಬೇಕಾಗುತ್ತದೆ. ಅಳಲೆಕಾಯಿ ಅನೇಕ ರೋಗವನ್ನು ಪರಿಹರಿಸುವಂತೆ ತುಳಸಿಯು ದಾರಿದ್ರ್ಯ ದುಃಖಭೋಗ ಮುಂತಾದವನ್ನು ಪರಿಹರಿಸಬಲ್ಲದು. ತುಳಸಿಯು ಕಪ್ಪು ಬಿಳಿ ಎಂದು ಎರಡು ವಿಧ. ಅದರಿಂದ ಹರಿಯನ್ನರ್ಚಿಸುವ ಹರಿಭಕ್ತನಾದ ನರನೂ ನಾರಾಯಣನಂತಾಗುತ್ತಾನೆ. ವೈಶಾಖ ಮಾಸಪೂರ್ತಿಯಾಗಿ ಮೂರು ಹೊತ್ತು ತುಳಸಿಯಿಂದ ಹರಿಯನ್ನರ್ಚಿಸಿದರೆ ಪುನರ್ಜನ್ಮವಿಲ್ಲದಂತಾಗುತ್ತದೆ.

ಪತ್ರಪುಷ್ಪಗಳಾವುವು ದೊರೆಯದಿದ್ದಾಗ ಶಾಲಿ, ಗೋ, ಅಕ್ಕಿಯವಗಳಿಂದಲೂ ಅರ್ಚಿಸಬಹುದು. ಬಳಿಕ ಪ್ರದಕ್ಷಿಣೆ ಮಾಡಬೇಕು. ದೇವ ಪಿತೃ ಮನುಷ್ಯ ಚರಾಚರ ಜಂತುಗಳನ್ನೂ ತರ್ಪಣದಿಂದ ಸಂತೋಷ ಪಡಿಸಬೇಕು.

ಅಶ್ವತ್ಥಕ್ಕೆ ನೀರೆರೆದು ಅದರಲ್ಲಿ ಹರಿಯನ್ನು ಪೂಜಿಸಬೇಕು. ಅದರಿಂದ ಹತ್ತು ಸಾವಿರ ಕುಲಗಳ ಉದ್ಧಾರವಾಗುವುದು. ದಾರಿದ್ರ್ಯ, ಅಕಾಲ ಮರಣ, ದುಃಸ್ವಪ್ನ, ದುರಾಲೋಚನೆಗಳೂ ದೂರವಾಗುವುವು. ಪಿತೃಗಳೂ ಎಲ್ಲ ಗ್ರಹಗಳೂ ಸಂತೋಷಗೊಳ್ಳುವರು. ವಿಷ್ಣು ಪ್ರಸನ್ನನಾಗುವನು.

ಬಿಳಿ ಹೂ, ಅಕ್ಷತೆ, ಅಗ್ನಿ, ಚಂದನ, ಎಕ್ಕೆಗಿಡ. ಅಶ್ವತ್ಥ ಇವುಗಳನ್ನು ಸ್ಪರ್ಶಮಾಡಿ ತನ್ನ ವರ್ಣ ಧರ್ಮವನ್ನೂ ಆಚರಿಸಬೇಕು. ಅಷ್ಟಾಂಗ ಯೋಗ, ಸ್ನಾನ, ಅಶ್ವತ್ಥಕ್ಕೆ ನೀರೆರೆಯುವುದು. ಗೋವಿಂದನ ಅರ್ಚನೆ ಇವುಗಳನ್ನು ಮಾಡಿದರೆ ಎಂದೂ ದುರ್ಗತಿ ಇಲ್ಲ.

ವೈಶಾಖಮಾಸವಿಡೀ ಸ್ನಾನವಿಧಿಗಳನ್ನು ಅನುಷ್ಠಾನ ಮಾಡಲಾರದ ಅಶಕ್ತರು ತ್ರಯೋದಶಿ ಚತುರ್ದಶಿ ಹುಣ್ಣಿಮೆ ಈ ಮೂರು ದಿನಗಳಲ್ಲಿಯೂ ವಿಧಿವತ್ತಾಗಿ ಪ್ರಾತಃ ಸ್ನಾನ ಮಾಡಬೇಕು. ಎಲ್ಲ ಪಾಪಗಳು ಪರಿಹಾರವಾಗುತ್ತವೆ. ಅಕ್ಷಯ ಸ್ವರ್ಗ ಸಿಗುತ್ತದೆ.

ಈ ಮೂರು ದಿನ ಉಷಃಕಾಲದಲ್ಲಿ ಸ್ನಾನ ಮಾಡಿ ಮಧುತಿಲ ದಾನವನ್ನು ಹನ್ನೆರಡು ಮಂದಿ ಬ್ರಾಹ್ಮಣರಿಗಿತ್ತು ಸ್ವಸ್ತಿವಾಚನ ಮಾಡಿಸಬೇಕು. ಪಿತೃ ದೇವತರ್ಪಣವನ್ನು ಮಾಡಬೇಕು. ಅದರಿಂದ ಬದುಕಿರುವಷ್ಟು ಕಾಲ ಮಾಡುವ ಪಾಪವೆಲ್ಲ ನಶಿಸುತ್ತದೆ. ಸ್ವರ್ಗ ಸಿಗುತ್ತದೆ.

ನನ್ನನ್ನು ಅವನು ನೋಡಬೇಕಾಗುವುದಿಲ್ಲ. ಅನ್ನ ನೀರು, ಸುವರ್ಣ ತಿಲಪಾತ್ರ, ಉದಪಾತ್ರ ದಾನಗಳಿಂದ ಎಲ್ಲ ಪಾಪ ಪರಿಹಾರವಾಗುವುದು. ವೈಶಾಖ ಹುಣ್ಣಿಮೆಯಂದು ಬ್ರಹ್ಮನು ಎಳ್ಳನ್ನು, ಸೃಷ್ಟಿಸಿದ್ದರಿಂದ ಆ ದಿನ ತಿಲ ದಾನ ಮಾಡಿ ತಾನೂ ಭಕ್ಷಿಸಬೇಕು. ಅದರಿಂದ ಬಹಳ ಶ್ರೇಯಸ್ಸುಂಟಾಗುತ್ತದೆ.

ಮೇಷ ಸಂಕ್ರಮಣದಿಂದಾರಂಭಿಸಿ ಮೂವತ್ತು ದಿನಗಳು ಎಲ್ಲ ಯಜ್ಞಗಳಿಗಿಂತ ಉತ್ತಮವೆಂದು ಪುರಾಣಗಳು ಹೊಗಳುತ್ತವೆ. ಆ ಮೂತ್ತು ದಿನಗಳಲ್ಲಿಯೂ ತ್ರಯೋದಶಿ ಚತುರ್ದಶಿ ಹುಣ್ಣಿಮೆಗಳು ಅತಿ ದುರ್ಲಭ.

ಅವುಗಳಲ್ಲೂ ಹುಣ್ಣಿಮೆ ಹರಿಗೆ ಅತ್ಯಂತ ಪ್ರಿಯ ಏಕೆಂದರೆ ಹರಿಯು ವೈಶಾಖ ತ್ರಯೋದಶಿಯಂದು ಹಿರಣ್ಯಾಕ್ಷನನ್ನೂ ಚತುರ್ದಶಿಯಂದು ಮಧುವನ್ನೂ ಕೊಂದು ಹುಣ್ಣಿಮೆ ದಿನ ಭೂಮಿಯನ್ನುದ್ಧರಿಸಿದ್ದನು.

**ನ ವೇದೇನ ಸಮಂ ಶಾಸ್ತ್ರಂ ನ ತೀರ್ಥಂ ಗಂಗಾಯಾ ಸಮಂ**
**ನ ದಾನಂ ಜಲ ಗೋತುಲ್ಯಂ ನ ವೈಶಾಖೀಸಮಾ ತಿಥಿಃ ॥**

ವೇದಗಳಿಗೆ ಸಮಾನವಾದ ಬೇರೆ ಶಾಸ್ತ್ರವಿಲ್ಲ. ಗಂಗೆಗೆ ಸಮಾನವಾದ ತೀರ್ಥವಿಲ್ಲ. ಜಲ ಗೋದಾನಗಳಿಗೆ ಸಮಾನವಾದ ಬೇರೆ ದಾನವಿಲ್ಲ. ವೈಶಾಖದ ದಿನಗಳಿಗೆ ಸಮಾನವಾದ ದಿನಗಳು ಬೇರೆ ಇಲ್ಲ.

ವೈಶಾಖದಲ್ಲಿ ಜಲಧೇನು, ಸಕ್ಕರೆ, ಫಲ ತಾಂಬೂಲ, ಪಾದುಕೆ, ಜಲಪಾತ್ರೆ, ಅನ್ನ, ದಕ್ಷಿಣೆ ಮುಂತಾದ ದಾನಗಳನ್ನು ಮಾಡಬೇಕು. ಅಶ್ವಮೇಧ ಯಾಗದ ಫಲ ದೊರೆಯುತ್ತದೆ.

ಮಧ್ಯದೇಶದಲ್ಲಿ ಧನಶರ್ಮನೆಂಬ ಒಬ್ಬ ಬ್ರಾಹ್ಮಣನು ಒಮ್ಮೆ ದರ್ಭೆಸಮಿತ್ತುಗಳಿಗಾಗಿ ಕಾಡಿಗೆ ಹೋಗಿದ್ದಾಗ ಅವನನ್ನು ಭಯಂಕರ ಪ್ರೇತಗಳು ಅಟ್ಟಿಸಿಕೊಂಡು ಬಂದುವು. ಮೇಲ್ಮುಖವಾಗಿ ಎದ್ದು ನಿಂತ ಕೂದಲುಗಳು ಕೆಂಗಣ್ಣು ಕಪ್ಪು ಹಲ್ಲುಗಳು ಸಣ್ಣ ಹೊಟ್ಟೆಗಳಿಂದ ಕೂಡಿದ್ದು ವಿಚಿತ್ರ ಕೂಗುಗಳನ್ನು ಕೂಗುತ್ತ ಬಂದ ಅವುಗಳನ್ನು ಕಂಡು ಧನಶರ್ಮನು ಭಯದಿಂದ ಕಂಗೆಟ್ಟು ಹೇಳಿದ.

**ಧನಶರ್ಮ :-** ಯಾರು ನೀವು ? ನರಕ ಯೋಗ್ಯವಾದ ಈ ಅವಸ್ಥೆ ನಿಮಗೆ ಹೇಗೆ ಬಂದಿತು ? ನನಗೆ ಭಯವಾಗುತ್ತಿದೆ. ದಯೆಯಿಟ್ಟು ನನ್ನನ್ನು ಕಾಪಾಡಿ. ನಾನು ವೈಷ್ಣವ, ಬ್ರಾಹ್ಮಣ, ಬಡವ ನೀವು ನನ್ನನ್ನು ಕಾಪಾಡಿದರೆ ಆ ಹರಿ ನಿಮಗೂ ಶ್ರೇಯಸ್ಸು ಕೊಡುತ್ತಾನೆ. ಅವನು ಬ್ರಾಹ್ಮಣ ಪ್ರಿಯ. ಅಗಸೆ ಹೂವಿನಂಥ ನೀಲ ವರ್ಣದವ. ಪೀತಾಂಬರಧಾರಿ. ಸ್ಮರಣ ಮಾತ್ರದಿಂದ ಎಲ್ಲ ಪಾಪಗಳನ್ನು ಪರಿಹರಿಸುವವ. ಪ್ರೇತಗಳಿಗೂ ಮೋಕ್ಷ ಕೊಡುವವ.

**ಯಮ :-** ಹರಿನಾಮ ಶ್ರವಣ ಮಾತ್ರದಿಂದ ಪ್ರೇತಗಳಿಗೆ ಸುಖ ಉಂಟಾಯಿತು. ಪುಣ್ಯ ಭಾವನೆಯಿಂದ ಅವು ದಯೆ ದಾಕ್ಷಿಣ್ಯಗಳನ್ನು ತೋರಿದುವು. ಹಸಿವು ಬಾಯಾರಿಕೆಗಳಿಂದ ಕಂಗೆಟ್ಟಿದ್ದರೂ ಹೀಗೆ ಹೇಳಿದುವು.

**ಪ್ರೇತಗಳು :-** ಬ್ರಾಹ್ಮಣನೆ, ನಿನ್ನ ದರ್ಶನ, ಹರಿಯ ನಾಮಶ್ರವಣಗಳಿಂದ ನಮ್ಮ ಮನಸ್ಸು ಬದಲಾಯಿತು. ದಯೆಯಿಂದ ತುಂಬಿದೆವು.

**ಅಪಾಕ ರೋತಿ ದುರಿತಂ ಶ್ರೇಯ; ಸಂಯೋಜಯಿಷ್ಯತಿ**
**ಯಶೋ ವಿಸ್ತಾರ ಯತ್ಯಾಶು ನೂನಂ ವೈಷ್ಣವ ಸಂಗಮ**

ವೈಷ್ಣವರ ಒಡನಾಟವು ಪಾಪವನ್ನು ತೊಲಗಿಸುತ್ತದೆ. ಶ್ರೇಯಸ್ಸನ್ನು ತಂದು ಕೊಡುತ್ತದೆ. ಕೀರ್ತಿಯನ್ನು ಹರಡಿಸುತ್ತದೆ.

ರಸಾಯನದಂತೆ ಪರಮಾನಂದವನ್ನೀವ ವಿಷ್ಣುವಿನ ನಾಮದ ಬೆಳದಿಂಗಳು ಯಾರಿಗೆ ಸಂತೋಷ ಉಂಟು ಮಾಡಲಾರದು ?

ಇವನ ಹೆಸರು ಕೃತಘ್ನ. ಈ ಎರಡನೆಯವನ ಹೆಸರು ವಿದೈವತ. ನಾನು ಮೂರನೆಯವನು ಅವೈಶಾಖ್ಯ. ಇವನು ಸದಾ ಕೃತಘ್ನನಾಗಿದ್ದುದರಿಂದ ಆ ಪಾಪ ಕರ್ಮಕ್ಕೆ ಸರಿಯಾದ ಕೃತಘ್ನನೆಂಬ ಹೆಸರು ಬಂದಿದೆ. ಹಿಂದಿನ ಜನ್ಮದಲ್ಲಿ ಸುದಾಸನೆಂದು ಅವನ ಹೆಸರಿತ್ತು. ಮಹಾ ಕೃತಘ್ನನಾಗಿದ್ದ.

**ಅತಿ ಪಾಪಿನಿ ಧೂರ್ತೇ ಚ ಗುರುಸ್ವಾಮ್ಯಹಿತೇಪಿವಾ**
**ನಿಷ್ಕೃರ್ವಿದ್ಯತೇ ವಿಪ್ರ ಕೃತಘ್ನೇ ನಾಸ್ತಿ ನಿಷ್ಕೃತಿಃ**

ಬ್ರಾಹ್ಮಣನೆ ಅತ್ಯಂತ ಪಾಪ ಮಾಡುವವನಿಗೂ ಧೂರ್ತನಿಗೂ ಗುರು, ಸ್ವಾಮಿಗಳಿಗೆ ಅಹಿತ ಉಂಟು ಮಾಡುವವನಿಗೂ ಆ ಪಾಪಗಳಿಗೆ ಪ್ರಾಯಶ್ಚಿತ್ತವಿದೆ. ಆದರೆ ಕೃತಘ್ನನಾದವನಿಗೆ ಯಾವ ಪ್ರಾಯಶ್ಚಿತ್ತವೂ ಇಲ್ಲ.

ಅವನು ಅನೇಕ ನರಕಗಳಲ್ಲಿ ಯಾತನೆಗಳನ್ನನುಭವಿಸಿ ಕೊನೆಗೆ ಈ ಪ್ರೇತ ಶರೀರವನ್ನು ಪಡೆದಿದ್ದಾನೆ.

ಈ ಎರಡನೆಯ ವಿದ್ಯೆವತನು ಹಿಂದಿನ ಜನ್ಮದಲ್ಲಿ ಹತ್ತು ಸಾವಿರ ಗ್ರಾಮಗಳನ್ನಾಳುವ ರಾಜನಾಗಿದ್ದ. ಹರಿವೀರನೆಂದು ಹೆಸರಿತ್ತು. ಆಗ ಅವನು ದೇವತಾರ್ಚನೆ ಮಾಡದೆ ಗುರು ಬ್ರಾಹ್ಮಣರಿಗೆ ದಾನ ಮಾಡದೆ ತಾನೆ ಉಣ್ಣುತ್ತಿದ್ದ.

ರೋಷ, ಅಹಂಕಾರ, ನಾಸ್ತಿಕ್ಯ, ಗುರ್ವಾಜ್ಞೋಲ್ಲಂಘನ, ಬ್ರಾಹ್ಮಣನಿಂದೆಗಳನ್ನು ಮಾಡುತ್ತಿದ್ದ. ಯಜ್ಞಗಳೊಂದನ್ನೂ ಮಾಡುತ್ತಿರಲಿಲ್ಲ. ಆ ಪಾಪಗಳಿಂದ ಅನೇಕ ನರಕಗಳಲ್ಲಿ ದುಃಖವನ್ನನುಭವಿಸಿ ಈಗ ವಿದ್ಯೆತನೆಂಬ ಪ್ರೇತನಾಗಿದ್ದಾನೆ.

ನಾನು ಅವೈಶಾಖ. ನಾವು ಮೂವರಲ್ಲಿ ನಾನೆ ಹೆಚ್ಚು ಪಾಪ ಮಾಡಿದವನು. ಮಧ್ಯ ದೇಶದಲ್ಲಿ ಗೌತಮ ಗೋತ್ರದಲ್ಲಿ ಗೌತಮನೆಂಬ ಹೆಸರಿನಿಂದ ಬ್ರಾಹ್ಮಣನಾಗಿ ಹುಟ್ಟಿದ್ದೆ. ದೊಡ್ಡ ಯಾಜ್ಞಿಕನಾಗಿದ್ದೆ.

ವಿಷ್ಣುವನ್ನುದ್ದೇಶಿಸಿ ವೈಶಾಖ ಸ್ನಾನವನ್ನು ನಾನು ಮಾಡಿರಲಿಲ್ಲ. ದಾನ ಹೋಮ ವಿಷ್ಣು ಪೂಜೆಗಳಾವುದನ್ನು ಮಾಡಲಿಲ್ಲ. ವಿದ್ವಾಂಸರಾದ ಬ್ರಾಹ್ಮಣರಿಗೆ ಜಲಪಾತ, ತಿಲಮಧು, ಪುಷ್ಪಫಲ ತಾಂಬೂಲ, ಮುಂತಾದವುವನ್ನು ಕೊಡಲಿಲ್ಲ. ಇದರಿಂದ ನನ್ನ ವೈದಿಕ ಕರ್ಮಗಳೆಲ್ಲವೂ ವ್ಯರ್ಥವಾದುವು. ಅದರಿಂದ ನಾನೀಗ ಅವೈಶಾಖನೆಂಬ ಪ್ರೇತವಾಗಿ ಜನಿಸಿದ್ದೇನೆ.

ಬ್ರಾಹ್ಮಣನೆ, ನಮ್ಮನ್ನು ಈ ಪಾಪಗಳಿಂದ ಉದ್ಧರಿಸು. ನೀನು ಬ್ರಾಹ್ಮಣ. ತೀರ್ಥಗಳಿಗಿಂತಲೂ ಬ್ರಾಹ್ಮಣರು ಮೇಲು. ಅವರು ಮೊರೆಹೊಕ್ಕ ಮಹಾಪಾಪಿಗಳನ್ನೂ ನರಕದಿಂದ ಉದ್ಧರಿಸಬಲ್ಲರು. ಗಂಗಾದಿ ಸರ್ವತೀರ್ಥ ಸ್ನಾನಕ್ಕಿಂತಲೂ ಸಜ್ಜನರ ಒಡನಾಟವೆ ಮೇಲು. ಅಥವಾ ನನ್ನ ಮಗನೊಬ್ಬ ಧನಶರ್ಮನೆಂಬ ಬ್ರಾಹ್ಮಣನಿದ್ದಾನೆ. ಅವನಿಗೆ ನಮ್ಮ ದುರವಸ್ಥೆಯನ್ನು ತಿಳಿಸು. ಇನ್ನೊಬ್ಬರಿಗೆ ಉಪಕಾರ ಮಾಡಬೇಕಾದ ಕಾಲ ಬಂದಾಗ ಅದನ್ನು ಮಾಡಿದರೆ ತನಗಾಗಿ ಮಾಡುವ ಯಜ್ಞದಾನ ಕ್ರಿಯೆಗಳಿಗೂ ಹೆಚ್ಚಿನ ಫಲ ಸಿಗುತ್ತದೆ.

**ಯಮ :-** ಪ್ರೇತದ ಮಾತನ್ನು ಕೇಳಿದಾಗ ಅವನೆ ತನ್ನ ತಂದೆ ಎಂದು ತಿಳಿದು ಧನ ಶರ್ಮನು ಬಲು ದುಃಖಗೊಂಡ. ತನ್ನನ್ನು ಹಳಿದುಕೊಳ್ಳುತ್ತ ಹೇಳಿದ.

**ಧನಶರ್ಮ :-** ಸ್ವಾಮಿ, ನಾನೆ ಆ ನಿನ್ನ ಮಗ ಧನಶರ್ಮ. ತಂದೆಯನ್ನು ದುರ್ಗತಿಯಿಂದ ಕಾಪಾಡಲಾರದ ನಿರರ್ಥಕನಾದ ಮಗ. ಇಹಪರಗಳೆರಡರಲ್ಲೂ ತಂದೆಗೆ ಸುಖ ನೀಡದ ಮಗನು ಮಗನಲ್ಲ.

ಪ್ರತಿಯೊಬ್ಬನಿಗೂ ಲೋಕದಲ್ಲಿ ಇಬ್ಬರು ಗುರುಗಳು, ತಂದೆ ಮತ್ತು ತಾಯಿ ಅವರಲ್ಲಿ ಬೀಜ ಪ್ರಾಧಾನ್ಯ ದೃಷ್ಟಿಯಿಂದ ನೋಡಿದಾಗ ತಂದೆಯೆ ಮುಖ್ಯ. ಅಂಥ ತಂದೆಗೆ ದುರ್ಗತಿ ಬಂದಾಗ ನಾನು ಉಪೇಕ್ಷಿಸುವುದು ತಪ್ಪು. ಈಗ ನಾನೇನು ಮಾಡಲಿ ? ಎಲ್ಲಿಗೆ ಹೋಗಲಿ ? ನಿನಗೆ ಸದ್ಗತಿಯನ್ನು ಹೇಗೆ ದೊರಕಿಸಲಿ ? ಧರ್ಮದ ತತ್ವವನ್ನೆ ತಿಳಿಯೆನಲ್ಲ ! ನೀನು ಹೇಳುವಂತೆ ಮಾಡುತ್ತೇನೆ.

**ಪ್ರೇತ :-** ಮಗು, ಹೇಳುತ್ತೇನೆ ಕೇಳು. ನಾನು ವೈದಿಕ ಕರ್ಮಗಳನ್ನು ಆಚರಿಸುವಾಗ ಅಹಂಕಾರದಿಂದ ಗುರುಗಳ ಉಪದೇಶವನ್ನು ಕಡೆಗಣಿಸಿ ಅವರಿಗೆ ಅಪಮಾನ ಮಾಡಿದ್ದೆನು. ವೈದಿಕ ಕರ್ಮಕ್ಕೆ ವಿರೋಧವಿಲ್ಲದಂತೆ ಪೌರಾಣಿಕವಾದ ಕರ್ಮಗಳನ್ನು ಮಾಡಬೇಕಾಗಿತ್ತು. ಅಜ್ಞಾನದಿಂದ ಕೇವಲ ವೈದಿಕ ಕರ್ಮಗಳನ್ನೆ ಮಾಡಿದೆ. ಪಾಪಗಳಿಗೆ ಕಾಳ್ಗಿಚ್ಚಿನಂತೆ ಅವುಗಳ ಮೂಲಕ್ಕೆ ಕುಠಾರದಂತೆ ಇರುವ ವೈಶಾಖ ಹುಣ್ಣಿಮೆಯೊಂದನ್ನೂ ನಾನು ಅನುಷ್ಠಿಸಲಿಲ್ಲ. ವೈಶಾಖ ವ್ರತವನ್ನು ಮಾಡದವ ನನ್ನಂತೆ ಅವೈಶಾಖನಾಗುತ್ತಾನೆ. ಹತ್ತು ಜನ್ಮಗಳವರೆಗೆ ತಿರ್ಯಗ್ ಜಂತುವಾಗಿ ಹುಟ್ಟಿ ಬಹು ಕಾಲ ದುಃಖವುಂಡು ಕೊನೆಗೆ ಪ್ರೇತನಾಗುತ್ತಾನೆ. ಬಹು ಕಷ್ಟದಿಂದ ದುರ್ಲಭವಾದ ಮನುಷ್ಯ ಜನ್ಮವನ್ನು ಅವನು ಸಂಪಾದಿಸಿಕೊಳ್ಳಬೇಕಾಗುತ್ತದೆ.

ಈಗ ಈ ನನ್ನ ಪ್ರೇತಜನ್ಮ ಕಳೆಯಲು ಹಿಂದೆ ಗುರುಗಳೇ ಹೇಳಿದ್ದ ಒಂದು ಉಪಾಯವನ್ನು ಹೇಳುತ್ತೇನೆ.

ಇನ್ನು ಐದು ದಿನಗಳಲ್ಲಿ ವೈಶಾಖ ಹುಣ್ಣಿಮೆ ಬರುತ್ತದೆ. ಅಂದು ಯಮುನೆಯಲ್ಲಿ ಸ್ನಾನ ಮಾಡು. ಪಾನೀಯ, ಎಳ್ಳು, ಜಲಕುಂಭ, ಅನ್ನಫಲಗಳನ್ನು ಭಕ್ತಿಯಿಂದ ಬ್ರಾಹ್ಮಣರಿಗೆ ದಾನಮಾಡು. ಅವರಿಗೆ ಪಾಯಸ ಭೋಜನ ಮಾಡಿಸು. ಸ್ನಾನ ದಾನ ಜಪ ಹೋಮ ಹರಿಪೂಜೆಗಳನ್ನು ಮಾಡಿ ಅದರ ಫಲವನ್ನು ನಮಗೆ ಸಮರ್ಪಿಸು. ಇವರಿಬ್ಬರೂ ನನಗೆ ಪರಿಚಿತರು. ಅವರನ್ನು ಬಿಟ್ಟು ನಾನು ಸ್ವರ್ಗಕ್ಕೆ ಹೋಗಲೊಲ್ಲೆನು.

**ಯಮ :-** ಧನಶರ್ಮನು 'ಆಗಲಿ' ಎಂದು ಹೇಳಿ, ಮನೆಗೆ ಹೋಗಿ, ಭಕ್ತಿಯಿಂದ ವೈಶಾಖ ಸ್ನಾನ ದಾನಗಳನ್ನು ಮಾಡಿದ. ಅದರ ಫಲವನ್ನು ಪ್ರೇತಗಳಿಗೆ ದಾನಮಾಡಿದ.

ಒಡನೆ ಅವರು ದಿವ್ಯ ವಿಮಾನಗಳನ್ನೇರಿ ಸ್ವರ್ಗಕ್ಕೆ ತೆರಳಿದರು. ಧನಶರ್ಮನೂ ಬಹುಕಾಲ ಸುಖದಿಂದ ಬಾಳಿ ಬ್ರಹ್ಮಲೋಕವನ್ನು ಸೇರಿದ. ಹೀಗೆ ಅತ್ಯಂತ ಪವಿತ್ರವಾದ ದಿನ ವೈಶಾಖ ಹುಣ್ಣಿಮೆ. ಅದರ ಮಹಿಮೆಯನ್ನು ಸಂಕ್ಷೇಪವಾಗಿ ಹೇಳಿದ್ದೇನೆ.

ವೈಶಾಖ ಸ್ನಾನ ಮಾಡಿ ಹರಿಪೂಜೆ ಮಾಡುವವನ ಜನ್ಮ ಸಾರ್ಥಕವಾಗುವುದು. ಪಾಪಗಳೆನಿದ್ದರೂ ಅದು ವೈಶಾಖ ಸ್ನಾನ ಮಾಡುವ ತನಕ. ಮಾಡಿದ ಮೇಲೆ ಒಂದೂ ಇರಲಾರದು. ವೈಶಾಖ ಮಾಸದ ಪ್ರಾತಃಕಾಲದಲ್ಲಿ ಹರಿಯನ್ನು ಸ್ಮರಿಸುತ್ತ ತೀರ್ಥಸ್ನಾನಕ್ಕಾಗಿ ಇಡುವ ಪ್ರತಿಯೊಂದು ಹೆಜ್ಜೆಯೂ ಅಶ್ವಮೇಧ ಯಾಗಕ್ಕೆ ಸಮಾನವಾಗಿರುತ್ತದೆ. ಮೇರುಮಂದರಗಳಷ್ಟು ಮಹತ್ತಾದ ಪಾಪವೂ ಸುಟ್ಟು ಹೋಗುತ್ತದೆ.

ಈ ಪ್ರೇತ ಮೋಕ್ಷದ ಇತಿಹಾಸವನ್ನು ಕೇಳಿದರೂ ಪಾಪಪರಿಹಾರವಾಗುತ್ತದೆ. ನನ್ನ ಲೋಕ ದೊರೆಯುತ್ತದೆ. ಇಂಥಹುದೆ ಇನ್ನೊಂದು ಇತಿಹಾಸವಿದೆ. ಅದನ್ನೂ ಹೇಳಬಾರದು. ಆದರೂ ಹೇಳುತ್ತೇನೆ, ಕೇಳು.

*ಇತಿ ಪದ್ಮ ಮಹಾಪುರಾಣ ಭಾಗ-೨ರ ಪಾತಾಳ ಖಂಡದಲ್ಲಿ ಪ್ರೇತಮೋಕ್ಷವೆಂಬ ನಲವತ್ತನೆ ಅಧ್ಯಾಯ ಮುಗಿದುದು*

—o—

## ಮಹೀರಥರಾಜನ ಚರಿತ್ರೆ

## ಅಧ್ಯಾಯ - ೪೧

**ಯಮ ಉವಾಚ**

**ಯಮ** :- ಹಿಂದೊಮ್ಮೆ ಮಹೀರಥನೆಂಬ ರಾಜನಿದ್ದ. ಪೂರ್ವ ಜನ್ಮದ ಸುಕೃತದಿಂದ ಅವನು ಬಹು ಐಶ್ವರ್ಯವಂತನಾಗಿದ್ದ, ಆದರೆ ಸ್ತ್ರೀ ಲಂಪಟನಾಗಿದ್ದು ರಾಜಕಾರ್ಯಗಳನ್ನೆಲ್ಲ ಮಂತ್ರಿಗಳಿಗೆ ಒಪ್ಪಿಸಿ ಪ್ರಜಾಹಿತದ ಕಡೆಗೆ ಅಲಕ್ಷ್ಯ ತೋರಿದ. ಧರ್ಮವಿಮುಖನಾದ, ಬಹುಕಾಲ ಹೀಗೆ ಕಳೆಯಿತು. ಒಮ್ಮೆ ಅವನ ಪುರೋಹಿತನಾದ ಕಶ್ಯಪನು ಮನಸ್ಸಿನಲ್ಲಿ ಹೇಳಿಕೊಂಡ 'ರಾಜನು ಅಧರ್ಮದಲ್ಲಿದ್ದರೆ ಗುರುವಾದ ಪುರೋಹಿತನು ತಡೆಯಬೇಕು. ಹಾಗೆ ಮಾಡದಿದ್ದರೆ ರಾಜನ ಎಲ್ಲ ಅಧರ್ಮಕ್ಕೂ ಅವನೆ ಹೊಣೆಯಾಗಿರುತ್ತಾನೆ. ಪುರೋಹಿತನ ಮಾತನ್ನು ರಾಜನು ಕಡೆಗಣಿಸಿದರೆ ಆಗ ರಾಜನೆ ಅವನ ಎಲ್ಲ ಪಾಪಕ್ಕೆ ಗುರಿಯಾಗುತ್ತಾನೆ. ಪುರೋಹಿತನು ಹೊಣೆಯಾಗುವುದಿಲ್ಲ.' ಬಳಿಕ ರಾಜನಿಗೆ ಹೀಗೆ ಉಪದೇಶಿಸಿದ.

**ಕಶ್ಯಪ** :- ರಾಜನೆ, ನಾನು ನಿನ್ನ ಗುರು. ಹೌದು ತಾನೆ ! ನನ್ನ ಮಾತನ್ನು ಕೇಳು, ಯಾವ ಸ್ವಾರ್ಥವನ್ನೂ ಇಟ್ಟುಕೊಳ್ಳದೆ ಕೇವಲ ಧರ್ಮವನ್ನು ಹೇಳುತ್ತೇನೆ. ಗುರುವಿನ ಮಾತನ್ನು ನಡೆಸುವುದೆ ಉತ್ತಮವಾದ ಧರ್ಮ. ಅದರಿಂದಲೆ ರಾಜರಿಗೆ ಆಯುಶ್ಯ ಸಂಪತ್ತು ಸೌಖ್ಯ ಎಲ್ಲವೂ ಹೆಚ್ಚುವದು. ನೀನು ಜ್ಞಾನಿಗಳಿಗೆ ದಾನ ಮಾಡುತ್ತಿಲ್ಲ. ವಿಷ್ಣುವನ್ನಾರಾಧಿಸುತ್ತಿಲ್ಲ, ವ್ರತ, ತಪಸ್ಸು, ತೀರ್ಥಯಾತ್ರೆಗಳೊಂದನ್ನೂ ಮಾಡುವುದಿಲ್ಲ. ಕಾಮಪರವಶನಾಗಿದ್ದು ಹರಿನಾಮ ಸ್ಮರಣೆಯನ್ನೆ ಮಾಡುವುದಿಲ್ಲ. ಸ್ತ್ರೀ ಸಂಗವನ್ನೆ ಮಾಡುವೆ. ವಿದ್ವಾಂಸರ ಸಂಗ ಮಾಡಲಾರೆ. ಆ ಸ್ತ್ರೀಯರು ಮನ್ಮಥನ ದರ್ಪಕ್ಕೆ ಪ್ರೋತ್ಸಾಹ ನೀಡುವವರು. ಅವರು ಯಾರಿಗೆ ತಾನೆ ಬೇಡ ? ಆದರೆ ಅವರು ಗಾಳಿಗೆ ಅಲ್ಲಾಡುವ ಬಾಳೆ ಎಲೆಯಂತಿರುವವರು. ಸಂಪತ್ತು ನೀರ ಅಲೆಯಂತೆ ಚಂಚಲ. ಸುಖಭೋಗವೂ ಕ್ಷಣಭಂಗುರ. ತಾರುಣ್ಯವೂ ಮುಹೂರ್ತಕಾಲವಿರಬಲ್ಲದು. ಇವನ್ನು ಸಂಪಾದಿಸಿದೆನೆಂದು ಕುಣಿಯುವುದರಲ್ಲಿ ಏನರ್ಥ ? ಸ್ತ್ರೀಯರಿಗೆ ಒಬ್ಬನು ಮನಸೋತನೆಂದರೆ ಅವನ ವಿದ್ಯೆ ತಪಸ್ಸು ತ್ಯಾಗ ನೀತಿ ವಿವೇಕ ಎಲ್ಲವೂ ವ್ಯರ್ಥವಾಗುವುದು. ನಾವು ಮಾಡಿದ ಕರ್ಮ ಮಾತ್ರ ಸತ್ತಾಗ ನಮ್ಮೊಡನೆ ಬರುವುದು. ಭೋಗವಸ್ತುಗಳಾವುವೂ ಬರಲಾರವು. ಅವು ನಾಶ ಹೊಂದುವುವು. ಆದ್ದರಿಂದ ಸ್ವಲ್ಪಸ್ವಲ್ಪವಾಗಿಯಾದರೂ ಧರ್ಮಾಚರಣೆ ಮಾಡಿ ಪುಣ್ಯ ಸಂಗ್ರಹಿಸಿಕೊಳ್ಳಬೇಕು. ಗೆದ್ದಲು ಹುಳಗಳು ನಿಧಾನವಾಗಿಯಾದರೂ ದೊಡ್ಡ ಹುತ್ತವನ್ನೆ ಕಟ್ಟಿಕೊಳ್ಳುವಂತೆ ನಾವೂ ದೊಡ್ಡ ಪ್ರಮಾಣದಲ್ಲಿ ಪುಣ್ಯ ಸಂಗ್ರಹಿಸಲು ಸಾಧ್ಯವಿದೆ. ಸ್ವಲ್ಪಕಾಲ ಮಾತ್ರ ಸುಂದರವಾಗಿ ಹೊಳೆದು ಮಾಯವಾಗುವ ನೀರ ಅಲೆಯಂತೆ ಮನುಷ್ಯನ ಜೀವನ. ಆದ್ದರಿಂದ ವಿನಯವೆಂಬ ಕಿರೀಟ, ಸತ್ಯ ಧರ್ಮಗಳೆಂಬ ಕುಂಡಲಗಳು ತ್ಯಾಗವೆಂಬ ಕಂಕಣಗಳಿಗೆ ಆಶಿಸಬೇಕಲ್ಲದೆ ಜಡವಾದ ಕಿರೀಟ ಕುಂಡಲ ಕಂಕಣಗಳಿಗೆ ಮಾರುಹೋಗಬಾರದು. ನಾವು ಸತ್ತಾಗ ನಮ್ಮ ಶರೀರವು

ಮಣ್ಣಹೆಂಟೆಯಂತೆ ಕಟ್ಟಿಗೆಯಂತೆ ಏನೂ ಮಹತ್ವವಿಲ್ಲದ್ದಾಗುವದು. ಬಂಧುಗಳೂ ಅದನ್ನು ಬಿಟ್ಟು ಹೋಗುವರು. ನಮ್ಮೊಡನೆ ಬರುವುದು ಧರ್ಮಒಂದೆ. ಒಂದು ದಿನ ನಾವು ಈ ಸಂಪತ್ತು, ಈ ಕುಟುಂಬ, ಈ ಶರೀರ ಎಲ್ಲವನ್ನು ಬಿಟ್ಟೇ ಹೋಗಬೇಕಾಗಿರುವಾಗ ಅಧರ್ಮವನ್ನು ಸಂಗ್ರಹಿಸುವದು ಸರಿಯೆ ? ಏಕೆ ಧರ್ಮವನ್ನು ಸಂಗ್ರಹಿಸಬಾರದು ? ಈಗ ಸಂಗ್ರಹಿಸದಿದ್ದರೆ ವಿಶ್ರಾಂತಿಯಿಲ್ಲದೆ ತಿಂಡಿ ತೀರ್ಥವಿಲ್ಲದೆ ಕಾಡು ದಾರಿಯಲ್ಲಿ ಪರಲೋಕಕ್ಕೆ ಒಬ್ಬನೆ ಹೇಗೆ ಹೋಗಬಲ್ಲೆ, ಹೇಳು ಇಹದಲ್ಲಿಯೂ ನಿನಗೆ ಧರ್ಮದಿಂದಲೆ ಅರ್ಥಕಾಮಗಳು ಲಭಿಸುವವು. ಆದ್ದರಿಂದ ಧರ್ಮವಿರುದ್ಧವಾದ ಅರ್ಥ ಕಾಮಗಳನ್ನು ಪರಿತ್ಯಜಿಸಬೇಕು.

ಇಂದ್ರಿಯ ಜಯವೆ ಒಂದು ಯೋಗ. ಅದರ ಬಲದಿಂದಲೆ ಪ್ರಜೆಗಳನ್ನು ಸರಿದಾರಿಗೆ ತರಲು ಸಾಧ್ಯ. ಪ್ರಗಲ್ಭೆಯರಾದ ಸ್ತ್ರೀಯರ ಕಟಾಕ್ಷದಂತೆ ಚಂಚಲವಾದ ಸಂಪತ್ತನ್ನು ಹಿಡಿದು ನಿಲ್ಲಿಸಿಕೊಳ್ಳಲು ವಿನಯ, ಮನಸ್ಸಿನ ಏಕಾಗ್ರತೆಗಳು ಬೇಕು. ಸಂಪತ್ತು ಬಂದಾಗ ದರ್ಪದಿಂದ ಕುಣಿಯುವುದು ವಿವೇಕಿಗಳ ಲಕ್ಷಣವಲ್ಲ. ನದಿಗಳು ಬಂದರೂ ಹೋದರೂ ಸಮುದ್ರ ಒಂದೇ ತೆರನಾಗಿರುತ್ತದೆ. ದುಶ್ಚಟವೆನ್ನುವುದು ಮರಣಕ್ಕಿಂತ ಘೋರ ಅದಕ್ಕೆ ಬಲಿಯಾದವನು ಅಧಃಪತನ ಹೊಂದುತ್ತಾನೆ. ಅದು ಧರ್ಮಕ್ಕೆ ವಿರೋಧ. ಬೆಂಕಿಯಲ್ಲಿ ಬಿದ್ದ ಕಟ್ಟಿಗೆಯಂತೆ ದುಶ್ಚಟಗಳಿಗೆ ಬಲಿಯಾದವನ ಸಂಪತ್ತೂ ನಾಶಹೊಂದುತ್ತದೆ.

ನಡೆಯುವಾಗ, ನಿಲ್ಲುವಾಗ, ಎಚ್ಚತ್ತಿರುವಾಗ, ಮಲಗುವಾಗ, ಯಾರ ಮನಸ್ಸು ವಿಚಾರಮಾಡಲಾರದಿರುವುದೊ ಅವನು ಸತ್ತಂತೆಯೆ. ವಿಷಯಾಸಕ್ತಿ ಹೆಚ್ಚಿದರೆ ಅದು ಜ್ವರದಂತೆ ಕಾಡುತ್ತದೆ. ಆ ಜ್ವರವನ್ನು ಪರಿಹರಿಸಿಕೊಂಡು ಶಾಂತವಾದ ಮನಸ್ಸಿನಿಂದ ತನ್ನ ಹಿತವನ್ನು ಸಾಧಿಸಿಕೊಳ್ಳಬೇಕು. ಮನಸ್ಸು ಒಮ್ಮೆ ಒಳ್ಳೆಯ ಮಾರ್ಗದಲ್ಲಿ, ಇನ್ನೊಮ್ಮೆ ಹಾಗೇ ಕೆಟ್ಟ ಮಾರ್ಗದಲ್ಲಿ, ತಿರುಗಿ ಒಳ್ಳೆಯ ಮಾರ್ಗದಲ್ಲಿ ಹೀಗೆ ಮುಗ್ಧ ಶಿಶುಗಳಂತೆ ಸಂಚರಿಸುತ್ತದೆ. ಅದನ್ನು ವಿವೇಕದಿಂದ ನೋಡಿಕೊಳ್ಳಬೇಕು. ಧರ್ಮವನ್ನು ತಿಳಿದ ಹಿರಿಯರಿಂದ ಸಲಹೆ ಪಡೆದ ಕೆಟ್ಟಮಾರ್ಗದಲ್ಲಿ ಹೋಗುವ ಮನಸ್ಸನ್ನು ನಿಯಂತ್ರಿಸಬೇಕು. ಸದ್ಗತಿಯನ್ನು ಸಂಪಾದಿಸುವಾಗ ಬಂಧು ಮಿತ್ರರಾಗಲಿ, ಶ್ರಮದಿಂದ ತೀರ್ಥಯಾತ್ರೆ ಮುಂತಾದ ಕಾರ್ಯ ಮಾಡುವುದಾಗಲಿ, ಏನೂ ಉಪಕಾರ ಮಾಡುವುದಿಲ್ಲ. ಮನಸ್ಸಿನ ಏಕಾಗ್ರತೆಯೊಂದಿದ್ದರೆ ಅದು ಮಾತ್ರ ಸದ್ಗತಿಯನ್ನು ದೊರಕಿಸೀತು. ಆದ್ದರಿಂದ ವಿಷಯ ಸುಖಭೋಗದಲ್ಲಿ ಹರಿದಾಡುವ ಮನಸ್ಸನ್ನು ಹೇಗಾದರೂ ಯತ್ನದಿಂದ ನಿಯಂತ್ರಿಸಬೇಕು. ಕಾಮಕ್ರೋಧಗಳನ್ನು ಜಯಿಸಬೇಕು. ಕಾಮವೆಂಬುದು ಶರೀರದೊಳಗೆ ಇರುವ ಮಹಾಶತ್ರು, ಶ್ರೇಯಸ್ಸನ್ನು ಬಯಸುವವನು ಅದಕ್ಕೆ ವಶನಾಗಬಾರದು. ಹಿಂದೆ ಶಿವನು ಕಾಮವನ್ನು ಹಣೆಗಣ್ಣಿನಿಂದ ಸುಟ್ಟರೂ ಅವನು ಅನಂಗನಾಗಿಯೆ, ಅಂದರೆ ಶರೀರವಿಲ್ಲದೆಯೆ, ಇತರರ ಶರೀರದಲ್ಲಿ ಕುಳಿತು ಶತ್ರುವಾಗಿ ಕಾಡುತ್ತಾನೆ ಅವನನ್ನು ನಿಗ್ರಹಿಸಿ ಧರ್ಮಾಚರಣೆ ಮಾಡು.

ಚಂಚಲವಾದ ಈ ಶ್ವಾಸವು ಒಂದು ಕ್ಷಣದಲ್ಲಿ ನೂರುಬಾರಿ ಓಡಾಡುತ್ತದೆ. ಅದು ಎಂದು ನಿಲ್ಲುವುದೊ ಹೇಳಲಾಗದು. ಬದುಕಿರುವಾಗ ಧರ್ಮಾಚರಣೆಯಲ್ಲಿ ಆಲಸ್ಯ

ತೋರಬಾರದು. ರಾಜನೆ, ನಿನ್ನ ಯೌವನವೆಲ್ಲ ಕಾಮಕಶ್ಮಲದಿಂದ ನಿಷ್ಫಲವಾಗುತ್ತಿದೆ. ಬೇಗನೆ ಧರ್ಮಾಚರಣೆಯಿಂದ ನಿನ್ನ ಹಿತವನ್ನು ನೀನು ಸಾಧಿಸಿಕೊಳ್ಳು. ನಾನು ನಿನಗೆ ಹಿತವನ್ನೆ ಹೇಳುತ್ತಿದ್ದೇನೆ. ಏಕೆಂದರೆ ಪುರೋಹಿತನಾಗಿದ್ದು ನಿನ್ನ ಪುಣ್ಯಪಾಪಗಳೆರಡಕ್ಕೂ ನಾನು ಭಾಗಿಯಾಗಿರುತ್ತೇನೆ. ಪಾಪಗಳನ್ನು ಕಳೆವ ಪುಣ್ಯ ಕರ್ಮಗಳೆಲ್ಲ ಒಂದುಕಡೆಯಾದರೆ, ವಿಷ್ಣುವಿಗೆ ಪ್ರಿಯವಾದ ವೈಶಾಖಮಾಸವೆ ಒಂದು ಕಡೆ. ತ್ರಿಕರಣಗಳಿಂದ ಮಾಡಿದ ಮಹಾಪಾತಕಗಳನ್ನು ಸೂರ್ಯನು ಕತ್ತಲೆಯನ್ನೋಡಿಸುವಂತೆ ಅದು ಓಡಿಸಬಲ್ಲುದು. ವಿಷ್ಣುಲೋಕವನ್ನು ದೊರಕಿಸಿಕೊಡ ಬಲ್ಲುದು. ನೀನೂ ವೈಶಾಖಮಾಸದಲ್ಲಿ ವಿಧಿವತ್ತಾಗಿ ಪ್ರಾತಃಸ್ನಾನಮಾಡಿ ಹರಿಯನ್ನು ಪೂಜಿಸು.

ರಾಜನೆ, ಭತ್ತದ ಹೊಟ್ಟನ್ನೂ, ತಾಮ್ರದ ಕಿಲುಬನ್ನು ಹೇಗಾದರೂ ದೂರ ಮಾಡಲೆ ಬೇಕಲ್ಲವೆ ? ಹಾಗೆಯೆ ಮಾನವನು ತನ್ನ ಅಂತಃಕರಣದ ಮಲವನ್ನು ಹೋಗಲಾಡಿಸಬೇಕು. ಆ ಮಲವು ಭತ್ತಕ್ಕೆ ಹೊಟ್ಟಿನಂತೆ ಜೀವನಿಗೆ ಸ್ವಾಭಾವಿಕವಾಗಿ ಬಂದಿದ್ದರೂ, ಪ್ರಯತ್ನ ಮಾಡಿದರೆ ನಿಶ್ಚಯವಾಗಿಯೂ, ದೂರಾಗಬಲ್ಲುದು. ಆದ್ದರಿಂದ ನಾನು ಹೇಳಿದ ಧರ್ಮಾಚರಣೆಯನ್ನು ಮಾಡು.

**ರಾಜೋವಾಚ**

**ರಾಜ :-** ಮುನಿಯೆ ಚಂದ್ರನ ಕಿರಣದಂತೆ ತಂಪಾದ ನಿನ್ನ ಮಾತು ನನಗೆ ಸುಖ ಉಂಟುಮಾಡಿದೆ. ಅದು ಸಮುದ್ರದಿಂದ ಹುಟ್ಟದಿದ್ದರೂ ಅಮೃತವೆ. ಅದೊಂದು ದ್ರವ್ಯವಲ್ಲದಿದ್ದರೂ ಔಷಧವೆ, ಸಂಸಾರವೆಂಬ ರೋಗವನ್ನು ಕಳೆಯುತ್ತದೆ. ಅದನ್ನು ನನಗೆ ನೀನು ಕುಡಿಸಿರುವೆ. ಸಜ್ಜನರ ಒಡನಾಟ ಹೀಗೆ ಪಾಪಗಳನ್ನು ಕಳೆದು ಸಂತೋಷವಿತ್ತು ಜರಾಮಣಗಳನ್ನೆ ತೊಲಗಿಸುತ್ತದೆ. ಎಂಥ ದುರ್ಲಭವಾದ ಅಭೀಷ್ಟವನ್ನೂ ಪೂರೈಸುತ್ತದೆ.

**ಯಃ ಸ್ನಾತಃ ಪಾಪ ಹರಯಾ ಸಾಧು ಸಂಗಮಗಂಗಯಾ**
**ಕಿಂ ತಸ್ಯ ದಾನ್ಯೈಃ ಕಿಂ ತೀರ್ಥೈಃ ಕಿಂ ತಪೋಭಿಃ ಕಿಮಧ್ವರೈಃ**

ಸಜ್ಜನರ ಒಡನಾಟವೆಂಬ ಪಾಪಹರವಾದ ಗಂಗೆಯಲ್ಲಿ ಮಿಂದವನಿಗೆ ದಾನ ತೀರ್ಥಯಾತ್ರೆ ತಪಸ್ಸು ಯಜ್ಞಗಳ ಅವಶ್ಯಕತೆ ಎಲ್ಲಿ ? ನಿನ್ನ ಉಪದೇಶವನ್ನು ಕೇಳಿದ ಮೇಲೆ ನನ್ನ ಕಾಮಾಸಕ್ತವಾದ ಮನಸ್ಸು ಈಗ ಶುದ್ಧವಾಗಿದೆ.

**ಏಕಜನ್ಮ ಸುಖಸ್ಯಾರ್ಥೇ ಸಹಸ್ರಾಣಿ ವಿಲೋಪಯೇತ್**
**ಪ್ರಾಜ್ಞೋ ಜನ್ಮಸಹಸ್ರಾಣಿ ಸಂಚಿನೋತ್ಯೇಕ ಜನ್ಮನಃ**

ಮೂಢನು ಒಂದು ಜನ್ಮದ ಸುಖಕ್ಕಾಗಿ ಸಾವಿರಾರು ಜನ್ಮದ ಸುಖವನ್ನು ಕಳೆದುಕೊಳ್ಳುತ್ತಾನೆ. ಬುದ್ಧಿವಂತನಾದವನು ಮಾತ್ರ, ಒಂದು ಜನ್ಮದ ಸಾಧನೆಯಿಂದ ಸಾವಿರ ಜನ್ಮದ ಸುಖವನ್ನು ಸಂಪಾದಿಸಿಕೊಳ್ಳುತ್ತಾನೆ.

ಮುನಿಯೆ, ನಾನು ಕಾಮಾಸಕ್ತಿಯಿಂದ ಮೂಢನಾಗಿ ನನ್ನ ಹಿತವನ್ನು ಸಾಧಿಸಿಕೊಳ್ಳದೆ ಇದ್ದುಬಿಟ್ಟೆನು. ಅಯ್ಯೊ, ನನ್ನ ಅಜ್ಞಾನವೆ ! ಹೆಣ್ಣಿನ ಹಂಬಲದಿಂದ ನನ್ನನ್ನೆ ನಾನು ಭಯಂಕರ ದುಃಖಕ್ಕೆ ತಳ್ಳಿದ್ದೇನೆ. ನೀನು ನನ್ನನ್ನು ಸಕಾಲದಲ್ಲಿ ಎಚ್ಚರಿಸಿರುವೆ. ಇನ್ನೂ

ನನಗೆ ಉಪದೇಶ ನೀಡಿ ಉದ್ಧರಿಸು. ಪೂರ್ವಜನ್ಮದ ಪುಣ್ಯದಿಂದಲೋ ನಿನ್ನ ಪಾದಧೂಳಿಯ ಮಹಿಮೆಯಿಂದಲೊ ಈಗಲಾದರೂ ನಾನು ಎಚ್ಚತ್ತಿದ್ದೇನೆ. ಎಲ್ಲ ಪಾಪಗಳನ್ನು ಪರಿಹರಿಸುವ ವೈಶಾಖಮಾಸದ ವಿಧಿಯನ್ನು ಉಪದೇಶಿಸು. ಸ್ನಾನ ದಾನ ನಿಯಮಗಳು ಹೇಗೆ ? ಯಾವ ದೇವರನ್ನು ಪೂಜಿಸಬೇಕು. ಎಲ್ಲವನ್ನು ಹೇಳು.

**ಕಶ್ಯಪ** :- ಪಾಪಾಚರಣಯಲ್ಲಿದ್ದವನಿಗೆ ಉಪದೇಶಕೊಟ್ಟು ಒಳ್ಳೆಯ ಬುದ್ಧಿ ಉಂಟುಮಾಡಿದರೆ ವಿದ್ಯಾದಾನದ ಫಲ ಚೆನ್ನಾಗಿ ಲಭಿಸುತ್ತದೆ.

**ನಾಪೃಷ್ಟಃ ಕಸ್ಯಚಿದ್ ಬ್ರೂಯಾತ್ ನಚಾನ್ಯಾಯೇನಪೃಚ್ಛತಃ ।**
**ಜಾನನ್ನಪಿ ಹಿ ಮೇಧಾವೀ ಜಡವಲ್ಲೋಕ ಆಚರೇತ್ ॥**

ತಿಳಿಯುವಾ ಆಸೆ ಇಲ್ಲದವನಿಗೆ ಹೇಳಬಾರದು. ಅನ್ಯಾಯದಿಂದ ತಿಳಿಯ ಬಯಸುವವನಿಗೂ ಹೇಳಬಾರದು. ಬುದ್ಧಿವಂತನು ತಾನು ತಿಳಿದಿದ್ದರೂ ಅವರ ನಡುವೆ ಏನೂ ತಿಳಿಯದವನಂತಿರಬೇಕು.

**ವಿದುಷಾಮಥ ಶಿಷ್ಯಾಣಾಂ ಪುತ್ರಾಣಾಂಚ ಕೃಪಾವತಾ ।**
**ಅಪೃಷ್ಟ ಮಪಿ ವಕ್ತವ್ಯಂ ಶ್ರೇಯಃ ಶ್ರದ್ಧಾವತಾಂ ಹಿತಂ ॥**

ಶ್ರದ್ಧೆಯುಳ್ಳ ವಿದ್ವಾಂಸರು ಶಿಷ್ಯರು ಮಕ್ಕಳು ಇವರಿಗೆ ಹಿತವನ್ನು ಶ್ರೇಯಸ್ಸನ್ನೂ, ಅವರು ಪ್ರಶ್ನೆ ಮಾಡಿರದಿದ್ದರೂ ದಯೆಯಿಂದ ಹೇಳಬೇಕು.

ನೀನು ಈಗ ನನ್ನ ಉಪದೇಶದಿಂದಲೋ ಪೂರ್ವಪುಣ್ಯದಿಂದಲೋ ಶುದ್ಧ ಹೃದಯನಾಗಿರುವೆ. ಧರ್ಮಜ್ಞಾನರಹಿತವಾದ ಪಾಪಾವಸ್ಥೆಯನ್ನು ಕಳೆದುಕೊಂಡು ಗುರುಭಕ್ತಿ ಗುರೂಪದೇಶವನ್ನು ಕೇಳುವಾಸೆಗಳಿಂದ ಕೂಡಿದ ಧರ್ಮಾವಸ್ಥೆಯಲ್ಲಿ ನೀನಿರುವೆ. ಆದ್ದರಿಂದ ಈಗ ವೈಶಾಖಸ್ನಾನವನ್ನು ನಿನ್ನಿಂದ ಮಾಡಿಸುತ್ತೇನೆ. ಹೀಗೆ ಹೇಳಿ ಕಶ್ಯಪನು ರಾಜನಿಂದ ವೈಶಾಖಸ್ನಾನ ಮಾಡಿಸಿದ. ರಾಜನು ವಿಧಿವತ್ತಾಗಿ ಸ್ನಾನದಾನ ಹರಿಪೂಜೆಗಳನ್ನೂ ನಡೆಸಿದ. ಬ್ರಾಹ್ಮಣನೆ, ಮಹಾತ್ಮರಿಗೂ ಮನ್ಮಥನ ಪ್ರಭಾವವನ್ನು ತಡೆಯಲಾಗವುದಿಲ್ಲ. ಅದು ಶರೀರದೊಂದಿಗೇ ಹುಟ್ಟಿರುತ್ತದೆ. ಅನಾದಿ ವಾಸನಾ ಜನ್ಯವಾದುದು. ತಲೆಕೂದಲು, ಕಣ್ಣಿನ ಕಾಡಿಗೆಗಳಿಂದ ನೋಡು ಕಣ್ಣುಗಳಿಗೆ ಸ್ತ್ರೀಯರು ಆಕರ್ಷಕರಾಗಿರುತ್ತಾರೆ. ಮುಟ್ಟಿದರೆ ಮಾತ್ರ, ಉರಿವ ಬೆಂಕಿಯ ಜ್ವಾಲೆ ಹುಲ್ಲನ್ನು ಸುಟ್ಟುಹಾಕುವಂತೆ, ಮನುಷ್ಯನನ್ನು ನಾಶ ಮಾಡುತ್ತಾರೆ. ಕಾಮವು ಶರೀರದೊಳಗೇ ಇರುವ ಘೋರ ಶತ್ರು. ಅದು ಮೋಹವೆಂಬ ಹೊಗೆಯನ್ನು ಉಗುಳುತ್ತ ಎಲ್ಲರನ್ನೂ ಕುರುಡರನ್ನಾಗಿ ಮಾಡಬಲ್ಲದು.

**ಯಮ** :- ರಾಜನು ಮಿತಿಮೀರಿ ಸ್ತ್ರೀಸಂಗ ಮಾಡಿ ಕ್ಷಯರೋಗ ತಗುಲಿಸಿ ಕೊಂಡಿದ್ದ. ಅವನ ಶರೀರ ಸೊರಗಿತ್ತು. ಕಾಲಪುರುಷನ ಕಟಾಕ್ಷ ಅವನ ಮೇಲೆ ಬಿದ್ದೊಡನೆ ಅವನು ಮರಣಹೊಂದಿದ. ನನ್ನ ದೂತರು ಅವನನ್ನು ಹೊಡೆಯುತ್ತ ಎಳೆದುಕೊಂಡು ಬರುತ್ತಿದ್ದಾಗ ಅವನು ತನ್ನ ಪಾಪಗಳನ್ನು ನೆನೆದು ಗಟ್ಟಿಯಾಗಿ ಅಳುತ್ತಿದ್ದ, ಅಷ್ಟರಲ್ಲಿ ವಿಷ್ಣುದೂತರು ಬಂದರು. ನನ್ನ ದೂತರನ್ನು ಬೈದು ಇವನು ಪುಣ್ಯವಂತನು' ಎನ್ನುತ್ತ ವಿಮಾನದಲ್ಲಿ ಕುಳ್ಳಿರಿಸಿದರು. ವೈಶಾಖ ಮಾಸದಲ್ಲಿ ಅವನು

ಪ್ರಾತಃಸ್ನಾನಮಾಡಿ ಪುಣ್ಯಗಳಿಸಿದ್ದುದರಿಂದ ಅಪ್ಸರೆಯರ ಪ್ರಶಂಸೆಯ ನುಡಿಗಳನ್ನಾಲಿಸುತ್ತ ವಿಷ್ಣುಲೋಕಕ್ಕೆ ಹೊರಟ. ಆದರೆ ವೈಶಾಖ ಸ್ನಾನ ಒಂದನ್ನು ಹೊರತು ಇನ್ನಾವ ಪುಣ್ಯವನ್ನೂ ಅವನು ಮಾಡದಿದ್ದುದರಿಂದ ನರಕಕ್ಕೆ ಸಮೀಪದ ದಾರಿಯಲ್ಲಿ ಅವನ ವಿಮಾನವನ್ನು ನಡೆಸಿದರು, ವಿಷ್ಣುದೂತರು. ಆಗ ನರಕದಲ್ಲಿ ಯಾತನೆ ಪಡುತ್ತಿದ್ದ ಪಾಪಿಗಳ ದಾರುಣವಾದ ಆಕ್ರಂದನಗಳು ರಾಜನ ಕಿವಿಗೆ ಬಿದ್ದುವು. ರಾಜನು ಆಶ್ಚರ್ಯದಿಂದ ದೂತರನ್ನು ಇದೇನೆಂದು ಕೇಳಿದ.

**ದೂತರ** :- ರಾಜನೆ, ಪಾಪಿಗಳು ನರಕದಲ್ಲಿ ಶಿಕ್ಷೆ ಅನುಭವಿಸುತ್ತಿದ್ದಾರೆ. ಅವರನ್ನು ಅಲ್ಲಿ ಕಗ್ಗತ್ತಲಲ್ಲಿ ಹಾಕಿ ಯಮದೂತರು ಅತ್ತ ಇತ್ತ ಎಳೆಯುತ್ತಾರೆ. ಹುಲಿ ಹಾವು ಚೇಳು ಮುಂತಾದವುಗಳಿಂದ ಕಚ್ಚಿಸುತ್ತಾರೆ. ಮುಳ್ಳುಗಳಿಂದ ಚುಚ್ಚುತ್ತಾರೆ. ಬೆಂಕಿಯಿಂದ ಸುಡುತ್ತಾರೆ. ಹಸಿವು, ಬಾಯಾರಿಕೆ, ಭಯಂಕರ ರೋಗಗಳು, ಮೂರ್ಛೆ ಬರಿಸುವ ಕೀವುರಕ್ತಗಳ ದುರ್ವಾಸನೆಗಳು ಇವುಗಳಿಂದ ಮೊದಲೆ ಬಾಧೆಗೊಳಗಾದ ಅವರನ್ನು ಕುದಿವ ಎಣ್ಣೆಯಲ್ಲಿ ಹಾಕುವದು, ಬಾಣಲೆಯಲ್ಲಿ ಹುರಿಯುವದು, ಗರಗಸಗಳಿಂದ ಕೊಯ್ಯುವದು, ಭಯಂಕರವಾದ ವೈತರಣಿಯಲ್ಲಿ ಮುಳುಗಿಸುವದು, ಮುಂತಾದ ಶಿಕ್ಷೆಗಳಿಗೆ ಈಡುಮಾಡುತ್ತಾರೆ.

**'ಮುಹೂರ್ತವಿಷಯಾಸ್ವಾದೋಽನೇಕ ಕಲ್ಪಾಂತದುಃಖದಃ''**

ಒಂದು. ಮುಹೂರ್ತಕಾಲ ವಿಷಯ ಸುಖವುಂಡರೂ ಅದು ಅನೇಕ ಕಲ್ಪಗಳವರೆಗೂ ದುಃಖವುಂಟುಮಾಡುವದು.

ನೀನು ವೈಶಾಖ ಸ್ನಾನಮಾಡಿರುವುದರಿಂದ ನಿನ್ನ ಮೈಗೆ ತಾಗಿದ ಗಾಳಿ ಅವರಿಗೆ ಸ್ವರ್ಗಸುಖವನ್ನು ಕೊಡುತ್ತಿದೆ. ಕತ್ತಲಲ್ಲಿ ಮುಳುಗಿದ ಅವರಿಗೆ ನಿನ್ನ ತೇಜಸ್ಸಿನಿಂದ ಬೆಳಕು ಕಾಣಿಸಿದೆ. ಆದ್ದರಿಂದ ಅವರು ಈಗ ಆಕ್ರಂದನಗಳನ್ನು ನಿಲ್ಲಿಸಿದ್ದಾರೆ. ಪುಣ್ಯವಂತರ ಹೆಸರು ಕಿವಿಗೆ ಬಿದ್ದರೂ ಸೌಖ್ಯ ಉಂಟುಮಾಡುತ್ತದೆ. ಅವರ ಮೈಸೋಕಿದಗಾಳಿಯೂ ಆನಂದಕರವಾಗಿರುತ್ತದೆ.

ಯಮದೂತರ ಮಾತನ್ನು ಕೇಳಿ ಕರುಣಾಳುವಾದ ರಾಜನು ಕನಿಕರದಿಂದ ಹೇಳಿದ ಸಜ್ಜನರ ಬೆಣ್ಣೆಯಂಥ ಕೋಮಲವಾದ ಹೃದಯವು ಬೇಗನೆ ಕರಗುತ್ತದೆ.

**ರಾಜ** :- ದುಃಖಪಡುವ ಈ ಜೀವಿಗಳನ್ನು ಬಿಟ್ಟು ನಾನು ಹೋಗಲಾರೆ. ಮಹಾಪಾಪಿಗಳು ಹಾಗೆ ಹೋಗಬಲ್ಲರು. ನನ್ನ ಮೈಸೋಕಿದ ಗಾಳಿಯೆ ಅವರಿಗೆ ಸುಖಕೊಡಬಹುದಾದರೆ ನನ್ನನ್ನೆ ಅಲ್ಲಿಗೆ ಕೊಂಡೊಯ್ಯಿರಿ. ಪರರ ತಾಪವನ್ನು ಕಳೆಯಲು ತಾವು ಪೀಡೆಯನ್ನನುಭವಿಸುತ್ತ ಚಂದನದಂತಿರುವವರೆ ನಿಜವಾಗಿಯೂ ಧನ್ಯರು. ದುಃಖಿಗಳ ದುಃಪರಿಹಾರಕ್ಕಾಗಿ ಪ್ರಾಣವನ್ನೂ ಬಿಡಬಲ್ಲವರೆ ನಿಜವಾಗಿಯೂ ಸಜ್ಜನರು. ಅಂಥ ಜನರು ಕೆಲವರಾದರೂ ಇರುವದರಿಂದಲೆ ಲೋಕ ಉಳಿದಿದೆ. ಅವರಿಗೆ ಪರರ ಸುಖವೆ ತಮ್ಮ ಸುಖ, ಪರರ ದುಃಖವನ್ನು ಕಳೆಯದೆ ಅವರೆಂದೂ ಸುಖಪಡಲಾರರು.

**ದೂತರು** :- ಪಾಪಿಗಳು ತಮ್ಮ ಪಾಪಕ್ಕೆ ಶಿಕ್ಷೆ ಹೊಂದುತ್ತಿರುವಾಗ ನೀನು ದುಃಖಿಸಲು ಕಾರಣವಿಲ್ಲ. ರಾಜನೆ, ಬಾ ವಿಷ್ಣುಲೋಕಕ್ಕೆ ಹೋಗೋಣ ನಿನ್ನಂಥ ಪುಣ್ಯವಂತರು ಇಲ್ಲಿ ಹೆಚ್ಚು ಕಾಲ ನಿಲ್ಲುವುದು ಯುಕ್ತವಲ್ಲ.

**ರಾಜ** :- ನಾನು ಅಂಥ ಪುಣ್ಯವಂತನಾದರೆ ಇಲ್ಲಿಗೇಕೆ ಕರೆತಂದಿರಿ ? ಪುಣ್ಯವಂತನಲ್ಲದಿದ್ದರೆ ವಿಷ್ಣುಲೋಕಕ್ಕೆ ಹೇಗೆ ಕೊಂಡೊಯ್ಯುವಿರಿ ?

**ದೂತರು** :- ನೀನು ಕಾಮನ ಕೈ ಗೊಂಬೆಯಾಗಿದ್ದು ಯಾವ ಪುಣ್ಯಕರ್ಮವನ್ನು ಮಾಡಿರಲಿಲ್ಲ. ಆದರೆ ಗುರುವಿನ ಉಪದೇಶವನ್ನು ಕೇಳಿ ಮೂರು ವರ್ಷಗಳ ಕಾಲ ವಿಧಿವತ್ತಾಗಿ ವೈಶಾಖ ಪ್ರಾತಃ ಸ್ನಾನ ಮಾಡಿ ಭಕ್ತಿಯಿಂದ ಮಧುಸೂದನನ್ನು ಆರಾಧಿಸಿದೆ. ಎಲ್ಲ ಧರ್ಮಾಚರಣೆಗಳಲ್ಲಿ ಸಾರ ಭೂತವಾದ ಈ ವ್ರತದ ಪುಣ್ಯದಿಂದ ವಿಷ್ಣುಲೋಕವನ್ನು ಪಡೆದಿರುವೆ. ಬೆಂಕಿಯ ಒಂದು ಕಿಡಿಯೂ ಹುಲ್ಲಿನ ರಾಶಿಯನ್ನು ಸುಡುವಂತೆ ವೈಶಾಖ ಪ್ರಾತಃ ಸ್ನಾನವು ಎಲ್ಲ ಪಾಪಗಳನ್ನೂ ನಾಶಮಾಡುವದು. ವಿಷ್ಣುಲೋಕವನ್ನು ಕೊಡುವದು. ನೀನು ಬೇರೆ ಯಾವ ಪುಣ್ಯವನ್ನು ಮಾಡದಿದ್ದುದರಿಂದ ನರಕದ ಬಳಿಗೆ ಬಂದಿರುವೆ. ಇನ್ನು ಬೇಗನೆ ವಿಷ್ಣುಲೋಕಕ್ಕೆ ಹೋಗೋಣ.

**ಯಮ** :- ರಾಜನು ಆ ದುಃಖಿಗಳನ್ನು ಹಾಗೆ ಬಿಟ್ಟು ಬರಲು ಒಪ್ಪಲಿಲ್ಲ. ಅವನ ಹೃದಯ ಕರುಣೆಯಿಂದ ತುಂಬಿತ್ತು. ವಿಷ್ಣುದೂತರಲ್ಲಿ ವಿನಯದಿಂದ ಹೇಳಿದ.

**ರಾಜ** :- ಐಶ್ವರ್ಯ, ಒಳ್ಳೆಯ, ಕುಲ, ಸದ್ಗುಣ, ಪುಣ್ಯ ಇವೆಲ್ಲವೂ ದುಃಖಿಗಳ ದುಃಖ ನಿವಾರಣೆಯಲ್ಲಿ ಉಪಯುಕ್ತವಾದಾಗ ಸಾರ್ಥಕವಾಗುವುವು. ನನ್ನಲ್ಲಿ ಪುಣ್ಯವಿರುವುದಾದರೆ ಅದರಿಂದ ಈ ಜೀವಿಗಳೆ ಸ್ವರ್ಗಕ್ಕೆ ಹೋಗಲಿ ಅವರ ಜಾಗದಲ್ಲಿ ನಾನು ಇರುತ್ತೇನೆ. ರಾಜನು ನಿಜವಾಗಿಯೂ ಉದಾರಿ ಎಂದು ದೂತರಿಗೆ ಮನವರಿಕೆಯಾಯಿತು. ಅವರು ಹೇಳಿದರು.

**ದೂತರು** :- ನಿನ್ನ ಈ ದಯಾಧರ್ಮದಿಂದ ಹಿಂದೆ ಮಾಡಿದ ಧರ್ಮವೃದ್ಧಿ ಹೊಂದಿತು. ನಿನ್ನ ವೈಶಾಖಸ್ನಾನ ದಾನ ಜಪ ಹೋಮಗಳ ಪುಣ್ಯವೀಗ ಅನಂತ ಫಲದಾಯಕವಾಯಿತು. ವೈಶಾಖಸ್ನಾನ ಮಾಡುವವರೆಲ್ಲರೂ ಸ್ವರ್ಗದಲ್ಲಿ ಚಿನ್ನದ ಕಮಲಗಳುಳ್ಳ ಕೊಳಗಳಲ್ಲಿಯೂ ಕಲ್ಪವೃಕ್ಷಗಳ ವನಗಳಲ್ಲಿಯೂ ದೇವತಾಸ್ತ್ರೀಯರೊಡನೆ ಅವರು ಹಾಡುವ ಪ್ರಶಂಸೆಗಳನ್ನು ಕೇಳುತ್ತ ಸುಖಿಸುವರು. ಅನ್ನ ನೀರು ದಾನಮಾಡಿದರೆ ವರುಣಲೋಕ ದೊರೆಯುವುದು. ಗೋದಾನ ಮಾಡಿದರೆ ಏಳು ಕುಲಗಳು ಉದ್ಧಾರವಾಗುವುವು ಕುದುರೆಯನ್ನು ದಾನಮಾಡಿದರೆ ಸೂರ್ಯಲೋಕ, ವಿದ್ಯಾದಾನದಿಂದ ಬ್ರಹ್ಮಲೋಕ ಸುವರ್ಣದಾನದಿಂದ ದೇವಲೋಕ, ದಯಾದಾನ ಕನ್ಯಾದಾನಗಳಿಂದಲೂ ದೇವಲೋಕ. ಆದರೆ ವೈಶಾಖಸ್ನಾನ ದಾನ ಹರಿ ಪೂಜೆಗಳಿಂದ ಎಲ್ಲ ಅಭೀಷ್ಟಗಳನ್ನೂ ಪಡೆದು ವಿಷ್ಣುಲೋಕವನ್ನು ಸೇರಬಹುದು. ಬೇರೆಲ್ಲ ಪುಣ್ಯ ಒಂದು ಕಡೆಯಾದರೆ ವೈಶಾಖವಿಧಿಯೊಂದೆ ಒಂದು ಕಡೆ. ನೀನು ಆಚರಿಸಿದ ವೈಶಾಖ ಮಾಸ ಸ್ನಾನದಲ್ಲಿ ಒಂದ ದಿನದ ಪುಣ್ಯವನ್ನು ನರಕದಲ್ಲಿರುವ ದುಃಖಿಗಳಿಗೆ ಕೊಡು. ಈ ದಯಾ ದಾನಕ್ಕೆ ಸದೃಶವಾದ ಇನ್ನೊಂದು ದಾನವಿಲ್ಲ. ತಪಸ್ಸಿಲ್ಲ. ಒಂದು ಪುಣ್ಯವನ್ನು ದಾನಮಾಡಿದರೆ ಅದರ ಲಕ್ಷದಷ್ಟು ಪುಣ್ಯ ದೊರಕುವುದು. ಹರಿಯನ್ನು ಸಾಕ್ಷಿಯಾಗಿಟ್ಟುಕೊಂಡು ಒಂದು ದಿನದ ವೈಶಾಖ ಸ್ನಾನದ ಫಲವನ್ನು ಕೊಟ್ಟೆನೆಂದು ಮೂರುಬಾರಿ ಹೇಳಿ ದಾನ ಮಾಡು. ಅದರಿಂದ ಅವರೆಲ್ಲರೂ ಸ್ವರ್ಗಕ್ಕೆ ಹೋಗುವರು.

ಪಾರಿವಾಳವನ್ನು ಉಳಿಸುವದಕ್ಕಾಗಿ ತನ್ನ ಮಾಂಸವನ್ನಿತ್ತ ಶಿಬಿ ಸ್ವರ್ಗವನ್ನು ಹೊಂದಿ ಕೀರ್ತಿವಂತನಾದ. ರಾಜರ್ಷಿ ದಧೀಚಿಯು ಕೂಡ ತನ್ನ ಅಸ್ಥಿಪಂಜರವನ್ನು ದಾನಮಾಡಿ ಮೂಲೋಕಕ್ಕೆ ಬೆಳದಿಂಗಳಿನಂತಿರುವ ಕೀರ್ತಿಯನ್ನೂ ಅಕ್ಷಯಸ್ವರ್ಗವನ್ನೂ ಪಡೆದ. ರಾಜರ್ಷಿ ಸಹಸ್ರಜಿತ್ತೂ ಬ್ರಾಹ್ಮಣನಿಗಾಗಿ ತನ್ನ ಪ್ರಾಣಗಳನ್ನೆ ತೆತ್ತು ಉತ್ತಮ ಲೋಕವನ್ನು ಹೊಂದಿದ. ದುಃಖಿಗಳ ದುಃಖ ನಿವಾರಣೆಯಿಂದ ಸಿಗುವ ಸುಖ ಸ್ವರ್ಗದಲ್ಲಿಯೂ ಸಿಗದು. ಮೋಕ್ಷದಲ್ಲಿಯೂ ಸಿಗದು. ಇಂಥ ದಯಾದಾನವನ್ನು ನೀನು ಮಾಡುತ್ತಿರುವದನ್ನು ಕಂಡು ನಮಗೂ ಉತ್ಸಾಹ ಉಂಟಾಗುತ್ತದೆ.

ದೂತರು ಹೀಗೆ ಹೇಳಿದೊಡನೆ ರಾಜನು ಹರಿಯನ್ನು ಸಾಕ್ಷಿಯಾಗಿ ಇಟ್ಟುಕೊಂಡು ಮೂರುಬಾರಿ ಹೇಳುತ್ತ ವೈಶಾಖ ಸ್ನಾನ ಫಲವನ್ನು ದಾನಮಾಡಿದ. ಈಗ ನರಕದಲ್ಲಿದ್ದ ಜೀವಿಗಳೆಲ್ಲರೂ ವಿಮಾನವನ್ನೇರಿ ಸ್ವರ್ಗಕ್ಕೆ ತೆರಳಿದರು. ಹೋಗುವಾಗ ಆ ರಾಜನನ್ನು ಸಂತೋಷದಿಂದ ನಮಿಸಿ ಬಾಯಿತುಂಬ ಹೊಗಳಿಹೋದರು. ದೇವತೆಗಳೂ ಋಷಿಗಳೂ ಹೊಗಳಿದರು. ಹೀಗೆ ಎಲ್ಲ ಪ್ರಶಂಸೆಗೆ ಪಾತ್ರನಾಗಿ ರಾಜನು ಯೋಗಿಗಳಿಗೂ ಅಲಭ್ಯವಾದ ಪರಮಪದವನ್ನೈದಿದನು.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಪಾತಾಳಖಂಡದಲ್ಲಿ ವೈಶಾಖ ಮಾಹಾತ್ಮ್ಯದಲ್ಲಿ ಮಹೀರಥರಾಜನ ಚರಿತ್ರೆವೆಂಬ ನಲವತ್ತೊಂದನೆ ಅಧ್ಯಾಯ ಮುಗಿದುದು*



## ಶ್ರೀಕೃಷ್ಣನ ಧ್ಯಾನ

**ಅಧ್ಯಾಯ - ೪೨**

**ಯಮ ಉವಾಚ**

**ಯಮ :-** ವೈಶಾಖ ಮಾಸದ ಮಹಿಮೆಯನ್ನು ಸಂಕ್ಷೇಪವಾಗಿ ಹೇಳಿದ್ದೇನೆ. ನಮ್ಮ ಸಂವಾದವನ್ನೂ ಮಧುಸೂದನನಿಗೆ ಪ್ರಿಯವಾದ ಈ ರಾಜನ ಇತಿಹಾಸವನ್ನು ನಮ್ಮ ಸಂವಾದವನ್ನು ವೈಶಾಖಮಾಸದಲ್ಲಿ ಓದುವನು ಅನೇಕ ಕಲ್ಪಗಳ ಕಾಲ ವಿಷ್ಣುಲೋಕದಲ್ಲಿ ಸುಖಪಡುವನು. ಬ್ರಾಹ್ಮಣನೆ ಇನ್ನು ನೀನು ಹಿಂತಿರುಗಿ ಹೋಗು. ನಿನ್ನ ಬಂಧುಗಳು ನಿನ್ನ ಶರೀರವನ್ನು ನೆಲದ ಮೇಲಿಟ್ಟು ಅಳುತ್ತಿದ್ದಾರೆ. ಅವರು ಆ ಶರೀರವನ್ನು ಬೆಂಕಿಯಲ್ಲಿ ಹಾಕುವುದಕ್ಕೆ ಮೊದಲೇ ಅದರಲ್ಲಿ ಸೇರಿಕೊಂಡು ಮಲಗಿದ್ದವನೆದ್ದಂತೆ ಏಳು. ನಾನು ಹೇಳಿದಂತೆ ಧರ್ಮಾಚರಣೆಮಾಡು. ಕೊನೆಗೆ ನನ್ನೊಡನೆಯೂ ದೇವತೆಗಳೊಡನೆಯೂ ಕೂಡಿಕೊಳ್ಳುವೆ.

**ಸೂತ :-** ಬ್ರಾಹ್ಮಣನು ಯಮನ ಈ ಮಾತನ್ನು ಕೇಳಿ ಅವನನ್ನು ನಮಿಸಿ ಸಂತೋಷದಿಂದ ಭೂಮಿಗಿಳಿದು ಬಂದ. ನಿದ್ದೆಯಿಂದೆಚ್ಚತ್ತವನಂತೆ ಎದ್ದು ಕುಳಿತ. ಪ್ರತಿವರ್ಷವೂ ವೈಶಾಖ ಮಾಸದಲ್ಲಿ ಸ್ನಾನದಾನ ಮುಂತಾದವನ್ನು ಮಾಡಿದ. ಬೇರೆಯವರಿಂದಲೂ ಮಾಡಿಸಿದ.

**ಋಷಿಗಳು :-** ಮಹಾತ್ಮ, ಸೂತ, ಪಾಪನಾಶಕವಾದ ವೈಶಾಖ ಮಹಾತ್ಮೆಯನ್ನು ಉಪದೇಶಿಸಿ ಅನುಗ್ರಹಿಸಿರುವೆ. ಈಗ ನೀನು ಸಂಸಾರವನ್ನು ದಾಟಿಸುವ ಭಕ್ತಪ್ರಿಯನಾದ ಕೃಷ್ಣನ ಧ್ಯಾನದ ಬಗೆಯನ್ನು ಹೇಳು.

**ಸೂತ :-** ಋಷಿಗಳೆ ವೃಂದಾವನ ವಿಹಾರಿಯಾದ ಗೋ, ಗೋಪ, ಗೋಪೀಪ್ರಿಯನಾದ ಕೃಷ್ಣನ ಧ್ಯಾನವನ್ನು ಹೇಳುತ್ತೇನೆ. ಕೇಳಿ, ಹಿಂದೆ ಗೌತಮನು ನಾರದನನ್ನು ಕೇಳಿದಾಗ ಅವನು ಉಪದೇಶಿಸುವದನ್ನೆ ನಿಮಗೆ ಹೇಳುತ್ತೇನೆ.

**ನಾರದ :-** ಸುವಾಸನೆ ಮತ್ತು ಮಕರಂದಗಳಿಂದ ಕೂಡಿದ ಹೂಗಳಿಂದ ಶೋಭಿಸುವ ಮರಗಳು, ಅರಳಿದ ಹೂಗಳಿಂದ ತುಂಬಿದ ಸುಂದರ ಲತೆಗಳು, ಹೂವಿನ ಮಕರಂದವನ್ನು ಸವಿದು ಝೇಂಕರಿಸುವ ದುಂಬಿಗಳು, ಕೂಗುವ ಪಾರಿವಾಳ, ಗಿಳಿ, ಸಾರಿಕೆ ಕೋಗಿಲೆಗಳು, ಕುಣಿವ ನವಿಲುಗಳು, ಯಮುನೆಯ ಪ್ರವಾಹದ ತುಂತುರುಗಳನ್ನೂ ಅರಳಿದತಾವರೆಯ ಪರಾಗವನ್ನೂ ಹೊತ್ತು, ಮನ್ಮಥಾವೇಶಗೊಂಡಿರುವ ವ್ರಜವಿಲಾಸಿಯರುಟ್ಟ ಬಟ್ಟೆಯನ್ನು ಅಲ್ಲಾಡಿಸುವ ಗಾಳಿ ಇವುಗಳಿಂದ ಕೂಡಿದ ವೃಂದಾವನವನ್ನು ಮೊದಲಿಗೆ ಧ್ಯಾನಿಸಬೇಕು.

ಆ ವೃಂದಾವನದ ನಡುವೆ ಹವಳದಂಥ ಚಿಗುರುಗಳು. ಮರಕತದಂಥ ಎಲೆಗಳು, ಮುತ್ತಿನಂಥ ಮೊಗ್ಗುಗಳು, ಕಮಲದಂಥ ಫಲಗಳು ಇವುಗಳಿಂದ ಕೂಡಿ ಎಲ್ಲ ಋತುಗಳಲ್ಲಿಯೂ ಫಲ ಪುಷ್ಪಭರಿತವಾಗಿ ಬಯಸಿದುದನ್ನೆಲ್ಲ ಕೊಡುತ್ತ ನಿಂತ ದೊಡ್ಡ ಕಲ್ಪವೃಕ್ಷವನ್ನು ಧ್ಯಾನಿಸಬೇಕು. ಅಮೃತ ವೃಷ್ಟಿಯನ್ನು ಸುರಿಸುವ ಆ ಮರದ ಕೆಳಗೆ ಚಿನ್ನದ ಬೆಟ್ಟದಮೇಲೆ ಉದಿಸುವ ಸೂರ್ಯನಂತೆ ಹೊಳೆವ, ರತ್ನಖಚಿತವಾಗಿದ್ದು, ಹೂಗಳ ಪರಾಗದಿಂದ ತುಂಬಿದ ಚಿನ್ನದ ನೆಲವನ್ನು ಧ್ಯಾನಿಸಬೇಕು. ಆ ನೆಲದಲ್ಲಿ ಯೋಗ ಪೀಠದ ಮೇಲೆ ಅಷ್ಟದಳ ಪದ್ಮವನ್ನೂ ಅದರಲ್ಲಿ ಸುಖಾಸೀನನಾದ ಉದಿಸುವ ಸೂರ್ಯನಂತೆ ಹೊಳೆಯುವ ಮುಕುಂದನನ್ನೂ ಧ್ಯಾನಿಸಬೇಕು.

ಆ ಮುಕುಂದನ ಮೈ ಬಣ್ಣವು ವಜ್ರಾಯುಧದಿಂದ ಸೀಳಿದ ಅಂಜನಬೆಟ್ಟದಂತೆ, ಮೋಡದಂತೆ ಅಥವಾ ಆಗ ತಾನೆ ಅರಳಿರುವ ನೀಲೋತ್ಪಲದಂತೆ. ಕುರುಳುಕೂದಲು ಕಪ್ಪಾಗಿ ದಟ್ಟವಾಗಿದ್ದು ಹೊಳೆಯುತ್ತದೆ. ಸುಂದರವಾದ ನವಿಲುಗರಿ ತಲೆಯಲ್ಲಿದೆ. ಕಲ್ಪವೃಕ್ಷದ ಹೂಗಳು ತಲೆಯಲ್ಲಿ, ಅರಳಿದ ಉತ್ಪಲಗಳು ಕಿವಿಯಲ್ಲಿ, ಹೊಳೆವ ಗೋರೋಚನದ ತಿಲಕವು ಹಣೆಯಲ್ಲಿ, ಎಲ್ಲವೂ ದುಂಬಿಗಳನ್ನಾಕರ್ಷಿಸುತ್ತವೆ. ಕಮಲದಂಥ ಕಣ್ಣುಗಳು ರತ್ನದಂತಹ ಕುಂಡಲ ದೀಪ್ತಿನಯನ್ನು ಪ್ರತಿಫಲಿಸುವ ಕನ್ನಡಿಯಂಥ ಕಪೋಲಗಳು ಮತ್ತು ಉನ್ನತ ಸುಂದರ ನಾಸಿಕೆಗಳಿಂದ ಕೂಡಿ ಶರತ್ಕಾಲದ ಪೂರ್ಣ ಚಂದ್ರನಂತೆ ಹೊಳೆಯುತ್ತಿದೆ ಅವನ ಮುಖ. ಸಿಂದೂರದಂತೆ ಹೊಳೆವ ತುಟಿಗಳ ನಡುವಿನಿಂದ ಹೊರಸೂಸುವ ಚಂದ್ರ ಕುಂದಪುಷ್ಪ ಮಂದಾರಗಳಂತೆ ಬಿಳಿಯಾದ ಮುಗುಳನಗು ದಿಕ್ಕುಗಳನ್ನೆಲ್ಲ ಬೆಳಗುತ್ತಿದೆ. ಕಾಡಿನಲ್ಲಿ ಸಿಗುವ ಎಳೆ ಚಿಗುರು ಹೂವುಗಳಿಂದ ಮಾಡಿದ ಹಾರವು ಕತ್ತಿನಲ್ಲಿ ಶೋಭಿಸುತ್ತಿದೆ. ಆನಂದೋನ್ಮಾದದಿಂದ ಝೇಂಕರಿಸುವ ದುಂಬಿಗಳಿಂದ ಕೂಡಿದ ಕಲ್ಪವೃಕ್ಷದ ಉದ್ದನೆಯ ಹೂಮಾಲೆ ಹೆಗಲಿನಿಂದ ಮಂಡಿಯವರೆಗೂ ನೇತಾಡುತ್ತಿದೆ. ವಿಶಾಲವಾದ ಎದೆಯೆಂಬ ಆಕಾಶದಲ್ಲಿ ಹಾರಗಳೆಂಬ ನಕ್ಷತ್ರಗಳ ನಡುವೆ ಕೌಸ್ತುಭವೆಂಬ ಸೂರ್ಯ ಬೆಳಗುತ್ತಿದ್ದಾನೆ. ಅಲ್ಲಿ ಶ್ರೀವತ್ಸವೂ ಶೋಭಿಸುತ್ತಿದೆ. ದುಂಡಗೆ ಪುಷ್ಟವಾಗಿರುವ ನಿಡಿದೋಳುಗಳು ಮಂಡಿಯನ್ನು ಮುಟ್ಟುತ್ತಿವೆ. ಸುಂದರವಾದ ಹೊಟ್ಟೆ, ಆಳವಾದ ಹೊಕ್ಕಳು, ದುಂಬಿಗಳ ಸಾಲಿನಂಥ

ಮನೋಹರವಾದ ರೋಮರಾಜಿ. ರತ್ನಖಚಿತವಾದ ಬಳೆ ಉಂಗುರ ಹಾರ ಉಡದಾರ ಗೆಜ್ಜೆಗಳು ಅಂಗರಾಗದಿಂದೆಸೆವ ತೆಳುವಾದ ಮೈ. ಪೀತಾಂಬರದಿಂದಾವೃತವಾದ ನಿತಂಬ, ಮನೋಹರವಾದ ತೊಡೆಗಳು, ಮಂಡಿ ಕಾಲುಗಳು, ಮಾಣಿಕ್ಯದ ಕನ್ನಡಿಯಂತೆ ಹೊಳೆವ ಉಗುರುಗಳು, ಕಮಲದಂಥ ಪಾದಗಳು ಮತ್ಸ್ಯ ಅಂಕುಶ ಚಕ್ರಧ್ವಜ ಯವ ಕಮಲ ವಜ್ರ ಚಿನ್ಹಗಳಿಂದ ಶೋಭಿಸುವ ಹಸ್ತಪಾದಗಳು ಇವೆಲ್ಲವನ್ನೂ ನೋಡಿದರೆ ಲೋಕದಲ್ಲಿರುವ ಲಾವಣ್ಯಸಾರವನ್ನೆಲ್ಲ ಕೂಡಿಸಿ ಅದರಿಂದ ಮನ್ಮಥನನ್ನೂ ನಾಚಿಸುವಂಥ ಶರೀರ ನಿರ್ಮಿತವಾಗಿದೆ ಎನ್ನುವಂತಿದೆ.

ತಾವರೆಯಂಥ ಮುಖದಿಂದ ಬರುವ ಗಾಳಿ ಕೊಳಲಿನ ರಂಧ್ರವನ್ನು ಪ್ರವೇಶಿಸಿ ಬೆರಳುಗಳ ಚಲನೆಯಿಂದ ದಿವ್ಯರಾಗಗಳನ್ನು ಹೊರಡಿಸುತ್ತಿದೆ. ಎಲ್ಲ ಜಂತುಗಳೂ ಅದನ್ನು ಕೇಳಿ ಸುಖಪಡುತ್ತಿವೆ. ಗೋವುಗಳೂ ಕೃಷ್ಣನ ಮುಖವನ್ನೆ ನೋಡುತ್ತಿವೆ. ಕೆಚ್ಚಲಿನ ಭಾರದಿಂದ ಮೆಲ್ಲನೆ ಚಲಿಸುತ್ತಿವೆ. ಅರ್ಧತಿಂದ ಎಳೆಹುಲ್ಲು ಹಾಗೇ ಬಾಯಿಯಲ್ಲಿದೆ, ಕರುಗಳೂ ತಾಯಿಯ ಕೆಚ್ಚಲಿಗೆ ಬಾಯಿಟ್ಟರೂ ಸುರಿಯುವ ಹಾಲನ್ನು ಕುಡಿಯದೆ ಕೊಳಲಿನ ಧ್ವನಿಗೆ ಮನಸೋತು ಕಿವಿಗಳನ್ನು ನಿಮಿರಿಸಿಕೊಂಡು ನಿಂತಿವೆ. ಆಗ ತಾನೆ ಮೂಡುತ್ತಿರುವ ಕೊಂಬುಗಳಿಂದ ಶೋಭಿಸುವ ಮೃದುವಾದ ತಲೆಯನ್ನು ಗೊರಸುಗಳಿಂದ ಕೆರೆದುಕೊಳ್ಳುವ, ದಪ್ಪವಾದ ಗಂಗೆದೊಗಲು ಮತ್ತು ಎತ್ತಿದ ಬಾಲಗಳಿಂದ ಕೂಡಿದ ಕಡಸುಗಳು ಸುತ್ತಲೂ ನಿಂತಿವೆ. ಅಂಭಾ ಎಂದು ಕೂಗಿದರೆ ದಿಕ್ಕುಗಳಲ್ಲೆಲ್ಲ ಕ್ಷೋಭೆಯನ್ನುಂಟುಮಾಡುವ, ಹೆಗಲಿನ ಭಾರವನ್ನು ಹೊರಲಾರದಂತೆ ಕಾಣುವ ಎತ್ತುಗಳು ಕೊಳಲಿನ ಧ್ವನಿಯೆಂಬ ಅಮೃತವನ್ನು ಕಿವಿ ಎತ್ತಿ ಸವಿದು ಮೂಗಿನ ಹೊಳ್ಳೆಯನ್ನು ಅರಳಿಸುತ್ತ ನಿಂತಿವೆ.

ಗುಣ ಶೀಲ ವಯಸ್ಸು ವೇಷ ಭೂಷಣಗಳಲ್ಲಿ ತನಗೆ ಸಮಾನರಾಗಿರುವ ಗೋಪಾಲಕರು ಕೊಳಲೂದುತ್ತ ಹಾಡುತ್ತ ಕುಣಿಯುತ್ತ ಸುತ್ತುವರಿದಿದ್ದಾರೆ. ಸೊಂಟಕ್ಕೆ ಕಟ್ಟಿದ ಗಂಟೆ ಗೆಜ್ಜೆಗಳು ಶಬ್ದಮಾಡುವಂತೆ ನಡೆಯುತ್ತ ತೊದಲು ತೊದಲಾಗಿ ಏನೇನೋ ಮಾತನಾಡುತ್ತ ಮನಸೆಳೆವ ಗೋಪಬಾಲಕರು ಸುತ್ತಲೂ ನೆರದಿದ್ದಾರೆ.

ತಲೆಕೂದಲು, ನಿತಂಬ, ಎದೆಗಳ ಭಾರವನ್ನು ಹೊರಲಾರದೆ ಬಗ್ಗಿ ಮೆತ್ತಗೆ ನಡೆವ ಗೋಪಾಂಗನೆಯರು ಕೊಳಲಿನ ದನಿಯನ್ನು ಕೇಳಿ, ಆ ದನಿಯ ಅಮೃತರಸ ಸೇಚನೆಯಿಂದ ಚಿಗುರೊಡೆದ ಮನ್ಮಥ ವೃಕ್ಷವನ್ನು ಮೊಗ್ಗುಗಳಂತೆ ಕಾಣುವ ರೋಮಾಂಚದಿಂದ ಶೋಭಿಸುವ ತಮ್ಮ ಮೈಬಳ್ಳಿಗಳಿಂದ ಅಲಂಕರಿಸಿದ್ದಾರೆ.

ಕೃಷ್ಣನ ಮಂದಹಾಸದ ಬೆಳದಿಂಗಳಿನಿಂದ ಗೋಪಾಂಗನೆಯರ ಅನುರಾಗದ ಸಾಗರ ಉಕ್ಕಿದುದರಿಂದ ಅದರ ತೆರೆಗಳಿಂದೆದ್ದ ತುಂತುರುಗಳಂತೆ ಬೆವರ ಹನಿಗಳು ಅವರ ಮೈಯಲ್ಲಿ ಕಾಣಿಸಿಕೊಂಡಿವೆ. ಕೃಷ್ಣನ ಸುಂದರವಾದ ಹುಬ್ಬಿನ ಬಿಲ್ಲಿನಿಂದ ಹೊರಟ ಹರಿತವಾದ ಕಣ್ಣ ನೋಟದ ಕಾಮಬಾಣಗಳ ಸುರಿಮಳೆಯು ಗೋಪಾಂಗನೆಯರ ಮರ್ಮಗಳನ್ನು ಭೇದಿಸಿ ವಿಹ್ವಲರನ್ನಾಗಿ ಮಾಡಿದುದರಿಂದ ಅವರಲ್ಲಿ ನಡುಕವೂ ಅಸಹನೀಯವಾದ ವ್ಯಥೆಯೂ ಕಾಣಿಸುತ್ತದೆ.

ಚಂಚಲವಾದ ಕಮಲದಂಥ ಕಣ್ಣುಗಳಿಂದ ಕೃಷ್ಣನ ಸುಂದರ ರೂಪದಶೊಭಾಮೃತರಸವನ್ನು ಪಾನಮಾಡಲು ತವಕಗೊಂಡ ಗೋಪಾಂಗನೆಯರು ಪ್ರೇಮಜಲಪ್ರವಾಹದಿಂದ ತುಂಬಿಹರಿವ ಹೊಳೆಯಂತಾಗಿದ್ದಾರೆ. ಆ ಗೋಪಾಂಗನೆಯರ ಕೇಶಪಾಶವು ಬಿಚ್ಚಿಹೋಗುತ್ತಿದೆ. ಅದರಿಂದ ಉದುರುವ ಹೂಗಳ ಮಕರಂದಕ್ಕೆ ದುಂಬಿಗಳು ಎರಗುತ್ತಿವೆ. ಪ್ರೇಮೋನ್ಮಾದದ ಆನಂದದಿಂದ ಮಿದುವಾದ ತೊದಲು ಮಾತುಗಳು ಅವರ ಬಾಯಿಂದ ಹೊರಡುತ್ತಿವೆ. ಒಡ್ಯಾಣ ಅಲ್ಲಾಡುತ್ತಿದೆ. ಉಟ್ಟ ಬಟ್ಟೆ ಜಾರುತ್ತಿದೆ, ಸುಂದರವಾದ ತಾವರೆಯಂಥ ಪಾದಗಳು ಎಡವಿದಾಗ ಅವುಗಳ ಮೃದುವಾದ ಏಟಿನಿಂದ ಮಣಿಮಯವಾದ ನೆಲದಲ್ಲಿ ಕೆಂಬಣ್ಣದ ಕಾಂತಿ ಪ್ರತಿಫಲಿಸಿ ದಿಕ್ಕುಗಳನ್ನೆಲ್ಲ ಬೆಳಗಿಸುತ್ತಿದೆ, ತುಟಿಗಳು ಅದರುತ್ತಿವೆ. ಕಣ್ಣುಗಳು ಮೊಗ್ಗುಗಳಂತಾಗಿವೆ. ಕುಂಡಲಗಳು ಹೊಳೆಯುತ್ತಿವೆ. ದೀರ್ಘವಾದ ನಿಟ್ಟುಸಿರಿನ ಗಾಳಿಯ ಬಿಸಿಯಿಂದ ಚಂದಳಿರಿನಂಥ ತುಟಿಗಳು ಬಾಡಿವೆ, ಸುತ್ತಲೂ ಸಖಿಯರು ಕೈಯಲ್ಲಿ ಕೃಷ್ಣನಿಗೆ ಕೊಡಬೇಕಾಗಿರುವ ಕಾಣಿಕೆಗಳನ್ನು ಹಿಡಿದು ನಿಂತಿದ್ದಾರೆ.

ಆ ಗೋಪಾಂಗನೆಯರ ನೀಳವಾದ ಕಪ್ಪಾದ ಮುಚ್ಚಿದ ಕಣ್ಣುಗಳೆಂಬ ಕಮಲಗಳ ಹಾರಗಳು ಕೃಷ್ಣನ ದೇಹದಲ್ಲೆಲ್ಲ ತುಂಬಿವೆ. ಅವನ ಮುಗ್ಧ ಮುಖಕಮಲದಿಂದ ಹೊರಸೂಸುವ ಮಕರಂದವನ್ನು ಸವಿಯುತ್ತ ಉನ್ಮಾದಗೊಂಡ ಗೋಪಿಯರ ಕಣ್ಣುಗಳೆಂಬ ದುಂಬಿಗಳ ಸುಂದರ ಮಾಲೆಗಳೂ ಅವನನ್ನಲಂಕರಿಸಿವೆ. ಕೃಷ್ಣನ ಬಳಿಯಲ್ಲಿ ಸುತ್ತುವರಿದವರು ಮೊದಲಿಗೆ ಗೋಪಿಯರು ಬಳಿಕ ಗೋಪರು, ಪಶುಗಳು, ವರಗಳನ್ನು ಬೇಡುತ್ತ ಸ್ತೋತ್ರಮಾಡುತ್ತ ಬ್ರಹ್ಮ ಶಿವ ಇಂದ್ರ ಮೊದಲಾದ ದೇವತೆಗಳು ಎದುರಿಗೆ ನಿಂತಿದ್ದಾರೆ. ಬಲಗಡೆ ವೇದಾರ್ಥವನ್ನು ತಿಳಿಯುವ ಬಯಕೆಯಿಂದ ಮುನಿಗಳು ನಿಂತಿದ್ದಾರೆ. ಹಿಂಭಾಗದಲ್ಲಿ ಸಮಾಧಿ ಮಗ್ನರಾದ ಸನಕಾದಿಯೋಗಿಗಳು ಎಡಗಡೆ ಯಕ್ಷಸಿದ್ಧ ಗಂಧರ್ವವಿದ್ಯಾಧರ ಮುಂತಾದವರು. ಮೇಲೆ ಆಕಾಶದಲ್ಲಿ ಶಂಖ ಚಂದ್ರ ಕುಂದಪುಷ್ಪಗಳಂಥ ಬಿಳಿ ಮೈ, ಮಿಂಚಿನಂತೆ ಹೊಳೆಯುವ ಜಡೆಗಳುಳ್ಳ ನಾನು ಕೃಷ್ಣ ಪಾದಕಮಲಗಳಲ್ಲಿ ನಿರ್ಮಲ ಭಕ್ತಿಯೊಂದನ್ನೆ ಬಯಸುತ್ತ ನಾನಾವಿಧ ಶ್ರುತಿಗಳಿಂದ ಕೂಡಿದ ಸಪ್ತಸ್ವರಗಳಿಂದ ಮೂರುವಿಧದ ಗ್ರಾಮಗಳಲ್ಲಿಯೂ ಮೂರ್ಛನೆ ಮಾಡುತ್ತ ಕೃಷ್ಣನನ್ನು ಆರಾಧಿಸುತ್ತಿದ್ದೇನೆ. ಹೀಗೆ ಧ್ಯಾನಮಾಡಿ ಮನಸ್ಸಿನಲ್ಲೂ ಹೊರಗೂ ಅರ್ಘ್ಯಪಾದ್ಯಾದಿ ಉಪಚಾರಗಳನ್ನು ಸಲ್ಲಿಸಿ ಪೂಜಿಸಬೇಕು.

*ಇತಿ ಪದ್ಮ ಮಹಾಪುರಾಣ ಭಾಗ-೨ರ ಪಾತಾಳಖಂಡದಲ್ಲಿ ಶ್ರೀಕೃಷ್ಣನ ಧ್ಯಾನವೆಂಬ ನಲವತ್ತೆರಡನೆ ಅಧ್ಯಾಯ ಮುಗಿದುದು*

—o—

**ಋಷಯ ಊಚುಃ**

**ಋಷಿಗಳು :-** ಅದ್ಭುತವಾದ ರಾಮನ ಚರಿತ್ರೆಯನ್ನು ಇನ್ನೂ ಹೇಳು. ಅಶ್ವಮೇಧಯಾಗವನ್ನು ಮಾಡಿದ ಬಳಿಕ ಲೌಕಿಕ, ಧಾರ್ಮಿಕ ಕೃತ್ಯಗಳಲ್ಲಿ ಶ್ರೀರಾಮನ ಪ್ರವೃತ್ತಿ ಹೇಗಿತ್ತು ಎಂಬುದನ್ನೂ ತಿಳಿಸು.

**ಸೂತ :-** ಪಾರ್ವತೀಸಮೇತನಾಗಿ ಶಂಕರನು ಅಯೋಧ್ಯೆಗೆ ಹೊರಟು ದಾರಿಯಲ್ಲಿ ಸರಯೂ ತೀರದಲ್ಲಿ ತಂಗಿದರು. ಆಗ ಅಲ್ಲಿದ್ದ ಕಶ್ಯಪ ಮುಂತಾದ ಮುನಿಗಳು ಕೇಳಿದರು. ಮುನಿವರ್ಯ ನಿನಗೆ ಸ್ವಾಗತ. ಪತ್ನೀಸಮೇತನಾಗಿ ಎಲ್ಲಿಂದ ಬರುತ್ತಿರುವೆ ? ಇಲ್ಲಿಗೆ ಬರಲು ಏನು ಕಾರಣ ? ಎಲ್ಲಿಗೆ ಹೋಗುತ್ತಿರುವೆ ? 'ನಾನು ಶಂಭು ಎಂಬ ಬ್ರಾಹ್ಮಣ ಹಿಮಾಲಯದಲ್ಲಿರುತ್ತೇನೆ. ನನ್ನಿಂದ ಪುರಾಣ ಶ್ರವಣಮಾಡಲು ಬಯಸಿ ಶ್ರೀರಾಮನು ನನ್ನನ್ನು ಕರೆಸಿದ್ದಾನೆ. ಆದ್ದರಿಂದ ನಾನು ಅಲ್ಲಿಗೆ ಹೋಗುತ್ತಿದ್ದೇನೆ. ನೀವೂ ಬನ್ನಿ ರಾಮನಿಗೆ ಸಂತೋಷವಾಗುತ್ತದೆ' ಎಂದ ಶಂಕರ.

ಬಳಿಕ ಎಲ್ಲರೂ ರಾಮನ ಬಳಿಗೆ ಹೋದರು. ಇದನ್ನು ನೋಡಿ ವಶಿಷ್ಠಮುನಿ ರಾಮನಿಗೆ ಹೇಳಿದನು. ಒಡನೆ ಪುರೋಹಿತರೊಡನೆ ಬಂದು ಆ ಮುನಿಗಳನ್ನು ಅರ್ಘ್ಯಪಾದ್ಯಾದಿಗಳಿಂದ ಸತ್ಕರಿಸಿದ. ಅರಮನೆಯೊಳಗೆ ಕರೆದೊಯ್ದು ಆಸನಗಳಲ್ಲಿ ಕುಳ್ಳಿರಿಸಿದ. 'ಇಂದು ನನ್ನ ಜನ್ಮ ಸಫಲವಾಯಿತು. ತಪಸ್ಸು ವಿದ್ಯೆ ಎಲ್ಲವೂ ಫಲಿಸಿತು' ಎಂದು ಋಷಿಗಳು ಹೇಳಿದರು. ಇವನು ಶಂಭು ಎಂಬ ಬ್ರಾಹ್ಮಣ. ಎಲ್ಲ ಶಾಸ್ತ್ರಗಳನ್ನೂ ಬಲ್ಲವ, ಕೈಲಾಸದಲ್ಲಿರುವನಂತೆ, ಒಳ್ಳೆಯ ತಪಸ್ವಿ, ಬ್ರಹ್ಮ ವರ್ಚಸ್ಸಿನಲ್ಲಿ ಬ್ರಹ್ಮನಂತೆ. ಬ್ರಾಹ್ಮಣ ವಾತ್ಸಲ್ಯದಲ್ಲಿ ಹರಿಯಂತೆ, ಬೇಗನೆ ಪ್ರಸನ್ನನಾಗುವುದರಲ್ಲಿ ಶಂಕರನಂತೆ ಇದ್ದಾನೆ. ಹದಿನೆಂಟು ಪುರಾಣಗಳನ್ನೂ ಮೀಮಾಂಸಾ ನ್ಯಾಯಗಳನ್ನೂ ತಿಳಿದಿದ್ದಾನೆ. ನಿನ್ನ ಆಹ್ವಾನವನ್ನು ಮನ್ನಿಸಿ ಕೈಲಾಸದಿಂದ ಬಂದಿದ್ದಾನೆ. ಇವನಿಂದ ಪುರಾಣವನ್ನು ಹೇಳಿಸು ನಾವೂ ಕೇಳುತ್ತೇವೆ. ಅದಕ್ಕಾಗಿ ನಾವು ಬಂದಿದ್ದೇವೆ.

**ಅಂತಂ ಗತಸ್ಯ ವೇದಾನಾಂ ಸರ್ವಶಾಸ್ತ್ರಾರ್ಥ ವೇದಿನಃ ।**
**ಪುಂಸೋಽಶ್ರುತಪುರಾಣಸ್ಯ ನ ಸಮ್ಯಗ್ ಗತಿದರ್ಶನಂ ॥**

ಎಲ್ಲ ವೇದಗಳನ್ನೋದಿದರೂ ಶಾಸ್ತ್ರಾರ್ಥಗಳನ್ನು ತಿಳಿದುಕೊಂಡರೂ ಪುರಾಣಗಳನ್ನು ಕೇಳದೆ ಪರಲೋಕ ಸಾಧನೆಯ ಬಗ್ಗೆ ಸರಿಯಾದ ಜ್ಞಾನ ಸಿಗುವುದಿಲ್ಲ.

**ಶ್ರೀರಾಮ :-** ಮುನಿವರ್ಯ, ಲಿಂಗಪೂಜೆಯ ವಿಧಾನ, ಲಿಂಗ ಮಹಿಮೆ, ಶಿವಪೂಜೆ, ಶಿವದರ್ಶನ, ಶಿವ ನಮಸ್ಕಾರಗಳ ಮಹಿಮೆ, ಜಲದಾನ, ಧೂಪದಾನ, ದೀಪ ಗಂಧಾದಿ ದಾನ, ಪುಷ್ಪಾರ್ಚನೆ ಮುಂತಾದವುಗಳ ಮಹಿಮೆ, ನಾನಾ ಇತಿಹಾಸ ಕಥೆಗಳು, ಧರ್ಮ ಅರ್ಥಕಾಮ ಮೋಕ್ಷಗಳು ಅವುಗಳನ್ನು ಪಡೆಯುವ ಸಾಧನಗಳು ಇವೆಲ್ಲವನ್ನು ನಾನು ನಿನ್ನಿಂದ ಕೇಳಬೇಕೆಂದು ಬಯಸಿದ್ದೇನೆ.

**ಶಂಭು :-** ಶ್ರೀರಾಮ ನೀನು ಪುಣ್ಯಶಾಲಿ. ರಾಜ್ಯಾಡಳಿತದಲ್ಲಿ ಮಗ್ನನಾದ ನೀನು ಪುರಾಣ ಶ್ರವಣದಲ್ಲಿಯೂ ಒಲವು ತೋರುತ್ತಿರುವೆ. ಇದು ನೀನು ಮಾಡಿರುವ ದೊಡ್ಡವರ ಸೇವೆ ಪುಣ್ಯತೀರ್ಥಕ್ಷೇತ್ರಗಳ ಯಾತ್ರೆ ಇವುಗಳಿಂದ ಮಾತ್ರ ನಿನಗೆ ಸಾಧ್ಯವಾಗಿದೆ ಎನ್ನುತ್ತೇನೆ.

**ಸಾ ಜಿಹ್ವಾ ಯಾ ಶಿವಂ ಗಾಯೇತ್ ತಚ್ಚಿತ್ತಂ ಯತ್ತದರ್ಪಿತಂ**
**ತಾವೇವ ಕೇವಲೌ ಶ್ಲಾಘ್ಯೌಯೌ ತತ್ಪೂಜಾಕರೌ ಕರೌ ॥**
**ಸುಜನ್ಮದೇಹ ಮತ್ಯರ್ಥಂ ತದೇವಾಶೇಷ ಜನ್ಮಸು ।**
**ಯದ್ವೈವ ಪುಲಕೋ ಭಾತಿ ಹರನಾಮಾನು ಕೀರ್ತಿನಾತ್ ॥**

ಶಿವನನ್ನು ಕೊಂಡಾಡುವ ನಾಲಗೆಯು ಉತ್ತಮವಾದ ನಾಲಗೆ. ಅವನಲ್ಲಿ ನೆಟ್ಟ ಮನಸ್ಸೆ ಉತ್ತಮ ಮನಸು. ಅವನ ಪೂಜೆ ಮಾಡುವ ಕೈಗಳೆ ಉತ್ತಮ ಕೈಗಳು ಅವನ ನಾಮಸಂಕೀರ್ತನೆಯಿಂದ ದೇಹವು ರೋಮಾಂಚ ಗೊಂಡರೆ ಜನ್ಮ ಸಾರ್ಥಕ. ಮಹಾರಾಜ, ನೀನು ಆ ಶಿವನ ಮಹಿಮೆ ಅವನ ಪೂಜಾವಿಧಾನ ಮುಂತಾದವುಗಳನ್ನು ಕೇಳಲು ಬಯಸಿದೆಯೆಂದ ಮೇಲೆ ನೀನು ಕೃತಾರ್ಥನೆ ಸರಿ. ಅಷ್ಟರಲ್ಲಿ ಭಟರು ಬಂದು ಶ್ರೀರಾಮನಿಗೊಂದು ಪತ್ರವನ್ನು ಕೊಟ್ಟರು. ಅದನ್ನೋದುತ್ತಿದ್ದಂತೆ ಶ್ರೀರಾಮ ಮನಸ್ಸಿನಲ್ಲಿ ಚಿಂತಿಸಿದ. 'ಇದು ಹೇಗಾಯಿತು ?'

**ಶಂಭು:-** ಮಹಾರಾಜ, ನಾವೆಲ್ಲ ಮುನಿಗಳು ಎದುರಿನಲ್ಲಿರುವಾಗ ಏಕೆ ಚಿಂತಿಸುವೆ ? ಹೇಳು, ನಿನ್ನ ಸಮಸ್ಯೆ ಏನು ?

**ಶ್ರೀರಾಮ :-** ವಿಭೀಷಣನನ್ನು ಸರಪಣಿಗಳಿಂದ ಬಿಗಿದು ಯಾರೊ ಕಟ್ಟಿದ್ದಾರಂತೆ ಇದು ನಿಜವೆ, ಹೇಳುವಿರಾ ?

**ಮುನಿಗಳು :-** ನಾವು ಅದನ್ನು ತಿಳಿದುಕೊಳ್ಳಲು ಅಸಮರ್ಥರು.

**ಶ್ರೀರಾಮ :-** ಹಾಗಾದರೆ ಪುರಾಣವನ್ನು ವಿಧಿವತ್ತಾಗಿ ನೋಡಿ ಹೇಳಿ. ಮೊದಲಿಗೆ ಇಂಥ ವಿಷಯಗಳಲ್ಲಿ ಯಾವ ಯಾವ ಪುರಾಣಗಳನ್ನು ನೋಡಬೇಕು ? ಅವುಗಳಲ್ಲಿಯೂ ಎಂಥ ಶ್ಲೋಕಗಳನ್ನು ಓದಬೇಕು ? ಪುರಾಣ ಪೂಜೆ ಮಾಡುವವನು ಹೇಗಿರಬೇಕು ? ಪೂಜಾವಿಧಾನ ಹೇಗೆ ? ಇದನ್ನು ಹೇಳಿ.

**ಮುನಿಗಳು :-** ಈ ವಿಷಯದಲ್ಲಿ ಈ ಶಂಭು ಮುನಿಯೊಬ್ಬನೆ ಸಮರ್ಥ. ಅವನನ್ನೆ ಕೇಳು. ಶ್ರೀರಾಮನ ಪ್ರಾರ್ಥನೆಯಂತೆ ಶಂಭು ಹೇಳತೊಡಗಿದ.

**ಶಂಭು :-** ಪುರಾಣ ಹೇಳುವ ವೃತ್ತಿಯಲ್ಲಿದ್ದು ಸ್ವಶಾಖಾಧ್ಯಯನ ಮಾಡಿರುವವನು, ಮೀಮಾಂಸಾ ಶಾಸ್ತ್ರವನ್ನು ಬಲ್ಲವನು, ಎಲ್ಲ ದೇವತೆಗಳಲ್ಲಿಯೂ ಸಮದೃಷ್ಟಿಯಿಂದಿದ್ದು ಶಿವನನ್ನು ಆರಾಧಿಸುವವನು ಶತರುದ್ರಜಪ, ಅಗ್ನಿಹೋತ್ರಗಳನ್ನು ಮಾಡುತ್ತಿರುವವನು ವಿಶೇಷವಾಗಿ ಯಜುರ್ವೇದ ಶಾಖೆಯವನು ಪುರಾಣವನ್ನು ಪೂಜಿಸಬೇಕು.

ಪುರಾಣದ ಪುಸ್ತಕಗಳಲ್ಲಿಯೂ ದೇವನಾಗರಿ ಲಿಪಿಯಲ್ಲಿ ಬರೆದ ತಾಳೆಗರಿಯ ಪುಸ್ತಕವೆ ಶ್ರೇಷ್ಠ. ಬ್ರಹ್ಮ, ಪದ್ಮ, ವಿಷ್ಣು, ಸೌರ, ನಾರದ, ಮಾರ್ಕಂಡೇಯ, ಅಗ್ನಿ, ಕೂರ್ಮ,

ವಾಮನ, ಗರುಡ, ಲಿಂಗ, ಸ್ಕಂದ, ಮತ್ಸ್ಯ, ನೃಸಿಂಹ, ಕಪಿಲ, ವರಾಹ, ಬ್ರಹ್ಮವೈವರ್ತ, ಶಿವ, ಭಾಗವತ, ದುರ್ಗಾ, ಭವಿಷ್ಯತ್ತರ ಪುರಾಣಗಳನ್ನು ಮಾತ್ರ ನೋಡಬೇಕು.

ಸ್ನಾನಮಾಡಿ ಬಿಳಿ ಬಟ್ಟೆಯನ್ನುಟ್ಟು ಪುರಾಣಪುಸ್ತಕ ಪೂಜೆಗೆ ಸಂಕಲ್ಪಿಸಬೇಕು. ಪುಸ್ತಕದ ಹಗ್ಗವನ್ನು ಬಿಚ್ಚಿ ಪೀಠದ ಮೇಲಿಟ್ಟು ಪಾಶಾಂಕುಶ ಪುಸ್ತಕಾಕ್ಷ ಮಾಲೆಗಳನ್ನು ಧರಿಸಿದ ಹಸನ್ಮುಖಿಯಾದ ಶ್ವೇತವರ್ಣೆಯಾದ ಸರಸ್ವತಿಯನ್ನು ಧ್ಯಾನಿಸಬೇಕು. ಶುಕ್ಲಾಂಬರ ಧರಿಸಿ, ಮೇಲಿನೆರಡು ಕೈಗಳಲ್ಲಿ ಹರಿಣ ಅಭಯಮುದ್ರೆಗಳನ್ನು ಕೆಳಗಿನ ವ್ಯಾಖ್ಯಾನಮುದ್ರೆ ವರಮುದ್ರೆಗಳನ್ನೂ ಧರಿಸಿ, ಕಿರೀಟ ಮುಂತಾದ ನಾನಾ ರತ್ನಾಭರಣಗಳನ್ನು ತೊಟ್ಟು, ನಂದಿಯನ್ನೇರಿದ ಮತ್ತು ಧ್ಯಾನ ಮಾಡುವ ಮುನಿಗಳು ಮೂರ್ತಿಮತ್ತಾಗಿ ಬಂದು ಸ್ತುತಿಸುವ ವೇದ ಪುರಾಣಗಳು ಮತ್ತು ಪಾದಸೇವೆಮಾಡುವ ಸಮಸ್ತ ಲೋಕಗಳಿಂದ ಕೂಡಿದ ಗೋಕ್ಷೀರವರ್ಣದ ತ್ರಿಣೇತ್ರನಾದ ಶಿವನನ್ನು ಧ್ಯಾನಿಸಬೇಕು.

ಬಳಿಕ 'ಆಪೋವಾ ಇದಂ' ಎಂಬ ಮಂತ್ರದಿಂದ ಕಲಶವನ್ನು ಅಭಿಮಂತ್ರಿಸಿ ಪ್ರಣವ ಮತ್ತು 'ತತ್‌ಸದ್ ಬ್ರಹ್ಮ' ಎಂಬ ಮಂತ್ರಗಳಿಂದ ಸ್ತುತಿಸಿ 'ಯದ್‌ವಾಗ್ ವದಂತಿ' ಎಂಬ ಮೂರು ಋಕ್ಕುಗಳಿಂದ ಭಾರತಿಯನ್ನಾವಾಹಿಸಿ ಷೋಡಶೋಪಚಾರ ಪೂಜೆಗಳನ್ನು ಸಲ್ಲಿಸಬೇಕು. ಪುರುಷಸೂಕ್ತ ಅಥವಾ ಗಾಯಿತ್ರಿಯಿಂದ ಪೂಜ್ಯವಾದ ಈ ಪುರಾಣಕ್ಕೆ ನಮಸ್ಕಾರವೆಂದು ಪುರಾಣವನ್ನು ಪೂಜಿಸಬೇಕು.

'ಕಾಂಡಾತ್ ಕಾಂಡಾತ್' ಎಂಬ ಮಂತ್ರದಿಂದ ದೂರ್ವೆಯನ್ನು ತಂದು ಪೂಜ್ಯಳಾದ ದೂರ್ವೆಗೆ ನಮಸ್ಕಾರವೆಂದು ಅದನ್ನು ಪೂಜಿಸಬೇಕು. ಲೋಕ ಪಾಲಕರನ್ನು ಪೂಜಿಸಬೇಕು. ಐದು ಹತ್ತುವರ್ಷಗಳ ನಡುವಿನ ಕನ್ಯೆಯನ್ನು ಅಥವಾ ಮೇಲಾದರೆ ಋತುಮತಿಯಾಗದ ಹುಡುಗಿಯನ್ನು ಗಂಧ ಪುಷ್ಪ ಅಕ್ಷತ ಧೂಪ ದೀಪ ತಾಂಬೂಲ ಅಲಂಕಾರಗಳಿಂದ ಪೂಜಿಸಿ ಅವಳ ಬಾಯಿಯಿಂದ 'ಭಗವತಿ ಸರಸ್ವತಿಯೆ, ಸತ್ಯವನ್ನು ನುಡಿ, ಪ್ರಿಯವಾದುದನ್ನು ನುಡಿ, ನಿನಗೆ ನಮಸ್ಕಾರ, ನಿನಗೆ ನಮಸ್ಕಾರ' ಎಂದು ಹೇಳಿಸಬೇಕು. 'ಸಹಸ್ರಪರಮಾಂ ದೇವಿಂ' ಎಂಬ ಮಂತ್ರದಿಂದ ಮೂರುಜತೆ ದೂರ್ವೆಗಳನ್ನು ಅವಳ ಕೈಯಲ್ಲಿಟ್ಟು ಪುಸ್ತಕದನಡುವೆ ಇಡಿಸಬೇಕು. ಬಳಿಕ ಆ ಭಾಗದಲ್ಲಿ ಪುಸ್ತಕವನ್ನು ತೆರೆದು ಶ್ಲೋಕವನ್ನು ಓದಬೇಕು. ಅದರ ಅರ್ಥವನ್ನು ಯಥಾವತ್ತಾಗಿ ಹೇಳಬೇಕು. ಯುಕ್ತವೊ ಅಯುಕ್ತವೊ ಎಂಬುದನ್ನು ನೋಡಕೂಡದು. ಅಯುಕ್ತವಾಗಿದ್ದರೂ ನಿಜವಾದ ಅರ್ಥವನ್ನು ಹೇಳಿದಾಗ ಅದು ಅಪರಾಧವೆಂದು ತಿಳಿಯಕೂಡದು. ಉಪಶ್ರುತಿಯಂತೆ ದೈವಾತ್ ಶುಭಾಶುಭ ಸೂಚಕವಾದ ಶ್ಲೋಕ ಲಭಿಸುತ್ತದೆ. ಅದು ಸರಿಯಾಗಿಲ್ಲದಿದ್ದರೆ ಇನ್ನೂ ಎರಡು ಶ್ಲೋಕಗಳನ್ನು ನೋಡಬಹುದು.

ಅಧ್ಯಾಯದ ಆದಿ ಅಂತ್ಯಗಳು, ಪುನರುಕ್ತಿ, ವ್ಯರ್ಥವಾಕ್ಯಗಳು, ಸುಟ್ಟಹಾಳೆ, ಕಣ್ಣಿಗೆ ಕಾಣಿಸದ ಲಿಪಿ, ಸಂದಿಗ್ಧಾಕ್ಷರ ಇವನ್ನೆಲ್ಲ ಈ ಶಕುನದಲ್ಲಿ ಅಗ್ರಾಹ್ಯವೆಂದು ತಿಳಿಯಬೇಕು. ಸೀನು ಬಂದರೆ ಪುಸ್ತಕ ಬಿದ್ದರೆ ಶಕುನ ನಿಷ್ಫಲವಾಗುವುದು. ವಿವಾಹ, ಔಷಧ, ದಾನ, ವ್ಯವಹಾರ, ಕೃಷಿ ಇವುಗಳಲ್ಲಿ ಕಾರ್ಯ ಸಿದ್ಧಿಯನ್ನು ಸೂಚಿಸುವುದು, ಯಥಾರ್ಥವಾದ ಸ್ತುತಿಯೊಂದೆ. ಶ್ಲೋಕ ಅಬೋಧಕವಾಗಿದ್ದರೆ, ಪಲಾಯನ, ದೇಶನಾಶ, ವ್ಯಾಧಿ, ಕಳ್ಳತನ ದರೋಡೆ ಮುಂತಾದವುಗಳು, ಕಾರ್ಯನಾಶವನ್ನು ಸೂಚಿಸುತ್ತವೆ.

**ಶ್ರೀರಾಮ :-** ಶ್ಲೋಕವು ಅಬೋದಕವಾಗಿರುವುದಕ್ಕೆ ಉದಾಹರಣೆ ಏನು ?

**ಶಂಭು :-** ಮಧೂನಿ ಚ ಮಧೂನ್ಯತ್ರ ಮಧುರ್ಮಧುಭುಜಂಮಧು ಮಧುನಾ ಮಧುನಾದರ್ಥ ವಿಷಾಣಿ ಚ ಇದು ಅಬೋಧಕವಾದ ಶ್ಲೋಕ.

ರುತೇ ರುತೇ ರುತೇ ರೋಕೌ ರೀರೀರಾರಂ ರರೀರರಂ ಇದು ಅಬೋದಕ ಶ್ಲೋಕಾರ್ಥ.

ಇಂಥ ಶ್ಲೋಕ ಶ್ಲೋಕಾರ್ಥಗಳು ಪುರಾಣಗಳಲ್ಲಿವೆ. ಅವುಗಳಿಗೆ ಅರ್ಥವಿಲ್ಲ. ಆದರೆ ಪಠನ ಮಾಡಬೇಕು. ವೇದದಂತೆ ಪುರಾಣಗಳು ಏಕೆ ಎನ್ನಕೂಡದು. ಮೂರು ನಾಲ್ಕುಸಲ ಹೇಳಿದರೆ ಚೆನ್ನಾಗಿ ವಿಚಾರ ಮಾಡಿದರೆ ಅಲ್ಲಿಯೂ ಅರ್ಥಕಾಣಿಸಬಹುದು. ಖಾಲಿ ಹಾಳೆ ವ್ಯರ್ಥವಾದ ಅಕ್ಷರಗಳಿದ್ದರೆ ವ್ಯಥಾಆಯಾಸ ಸೂಚಿತವಾಗುತ್ತದೆ. ಹಾಳೆ ಸುಟ್ಟಿದ್ದರೆ. ಕಾರ್ಯನಾಶ. ಹಾಳೆ ಹರಿದಿದ್ದರೆ ಲಿಪಿ, ಅಳಿಸಿಹೋಗಿದ್ದರೆ, ಅದು ವ್ಯಯಸೂಚಕ. ಅಕ್ಷರ ಅಸ್ಪಷ್ಟವಾಗಿದ್ದರೆ ಕಾರ್ಯವಿಲಂಬ. ಆಗುವುದೊ ಇಲ್ಲವೊ ಎಂಬ ಸಂಶಯ.

ಈ ಪುರಾಣ ಶಕುನವನ್ನು ಪ್ರತಿದಿನ ನೋಡಬಾರದು. ಊಟ ಮಾಡಿದೊಡನೆ ಅದನ್ನು ನೋಡಬಾರದು. ಶುಭಕಾರ್ಯಗಳಲ್ಲಿ ಪ್ರೇತಕಾರ್ಯ, ಶ್ರಾದ್ಧಕರ್ಮ, ಶಿಕ್ಷೆ, ಶಾಪ, ದೇಶ ವಿಪ್ಲವ, ರಾಕ್ಷಸರು ಕ್ರೂರಜಂತುಗಳು ಮಾಡುವ ಪ್ರಾಣಹಿಂಸೆ, ದಹನ, ವಾಂತಿ, ಅಳು, ಹಾಸ್ಯ, ಬೀಭತ್ಸ, ದುಃಖ, ದುಸ್ವಪ್ನ, ಭ್ರಮ, ಪೀಡೆ, ಕಲಹ, ಮರಣ, ಕ್ರೂರ ಮೃಗಗಳ ಭಯ, ಇವೆಲ್ಲವೂ ಅಶುಭ ಸೂಚಕ. ಐಶ್ವರ್ಯ ಲಾಭದ ವಿಚಾರದಲ್ಲಿ ರಾಜರುಗಳ ದೃಷ್ಟಿ, ಗ್ರಹಗಳ ಉದಯರೋಗ ಶಾಂತಿ ಮುಂತಾದವುಗಳೆಲ್ಲ ಶುಭಸೂಚಕ.

ಪುರಾಣದಲ್ಲಿ ಸ್ಕಂದಪುರಾಣವು ಶಕುನಕ್ಕೆ ಉತ್ತಮ. ಕೆಲವರು ವಿಷ್ಣು ಪುರಾಣ ರಾಮಾಯಣಗಳುತ್ತಮವೆನ್ನುತ್ತಾರೆ. ವಿಷ್ಣುಪುರಾಣದಲ್ಲಿ ಹಿಂದೆ ಹೇಳಿದ ದೋಷಗಳು ದೋಷವಾಗುವದಿಲ್ಲ. ಸ್ಕಂದ, ರಾಮಾಯಣಗಳಲ್ಲಿ ಅಲ್ಪದೋಷ. ಆದರೆ ವಿಷ್ಣುಪುರಾಣವನ್ನು ಯಾರಿಂದಲೂ ಪೂಜಿಸಲಾಗುವುದಿಲ್ಲ. ಸದಾಚಾರವಿಲ್ಲದವನು ಪೂಜಿಸಿದರೆ ಅಶುಭವೆ ಉಂಟಾಗುವುದು. ಶಕುನ ಸಿದ್ಧಿಸುವದಿಲ್ಲ.

ಶ್ರೀರಾಮನು ಇದನ್ನು ಕೇಳಿ ವಿಭೀಷಣನನ್ನು ಬಂಧನದಲ್ಲಿರಿಸಿದುದರ ಸತ್ಯಾಸತ್ಯತೆಯನ್ನು ತಿಳಿಯಲು ಪುರಾಣ ಶಕುನವನ್ನು ನೋಡಲು ಬಯಸಿದ. ವಶಿಷ್ಠರನ್ನು ಕೇಳಿಕೊಂಡ. ಅವರು ಶಂಭು ಮುನಿಯ ಎದುರಿಗೆ ಶಕುನ ನೋಡುವುದು ನನ್ನಿಂದಾಗಲಾರದು ಎಂದರು. ಬಳಿಕ ಶಂಭುಮುನಿಯೆ ರಾಮನ ಪ್ರಾರ್ಥನೆಯಂತೆ ಪುರಾಣವನ್ನರ್ಚಿಸಿದ. ಸ್ಕಂದಪುರಾಣವನ್ನರ್ಚಿಸಿ ಶಕುನವನ್ನು ನೋಡಲು ಹೋದಾಗ ಈ ಮೂರು ಶ್ಲೋಕಗಳು ದೊರೆತವು.

**ಬದ್ಧ್ವಾ ಸಮುದ್ರಂ ಸ ತು ರಾಘವೇಂದ್ರೋ ರುರೋಧ ಗುಪ್ತಾನ್**
**ಕ್ಷಣದಾ ಚಂದ್ರಾನ್**
**ಯೋದ್ಧುಂ ಸಮಾಗತ್ಯ ಸಮಾಯಯುಸ್ತೆ ಲಂಕಾಪುರಸ್ಥಾಸ್ತ್ವತಿ ಕಾಯ**
**ಮುಖ್ಯಾಃ**

ಆ ರಾಮಚಂದ್ರನು ಸಮುದ್ರಕ್ಕೆ ಸೇತುವೆಯನ್ನು ಕಟ್ಟಿ ಅಂದಿನವರೆಗೆ ಸುರಕ್ಷಿತವಾಗಿದ್ದ ರಾಕ್ಷಸ ವೀರರಮೇಲೆ ದಂಡೆತ್ತಿಹೋದ. ಆಗ ಲಂಕೆಯಲ್ಲಿದ್ದ ಅತಿಕಾಯ ಮುಂತಾದವರು ಒಂದಾಗಿ ಯುದ್ಧಕ್ಕೆ ಬಂದರು.

**ಅಟ್ಟಶೂಲಾ ಜನಪದಾಃ ಶಿವಶೂಲಾ ದ್ವಿಜಾಸ್ತಥಾ ।**
**ಪ್ರಮದಾಃ ಕೇಶಶೂಲಿನ್ಯೋ ಭವಿಷ್ಯಂತಿ ಕಲೌ ಯುಗೇ ॥**

ಕಲಿಯುಗದಲ್ಲಿ ಜನರು ಅನ್ನ ವಿಕ್ರಯ ಮಾಡುತ್ತಾರೆ. ದ್ವಿಜರು ದುಡ್ಡಿಗೋಸ್ಕರ ಶಿವಪೂಜೆ ಮಾಡುತ್ತಾರೆ. ಹೆಂಗಸರು, ತಮ್ಮ ದೇಹ ವಿಕ್ರಯ ಮಾಡಿಕೊಳ್ಳುತ್ತಾರೆ.

**ಏವಂ ಸ್ತುತೋ ಮಹೇಶಸ್ತು ದೇವತಾಃ ಪ್ರಾಹವೈ ಶಿವಃ ।**
**ಮೋಚಯಿಷ್ಯೇ ಭವತ್ ಪತ್ನೀರ್ಮಲ್ಲಾಸುರ ನಿರೋಧಿಕಾಃ ॥**

ಮಹೇಶ್ವರನು ಈ ಸ್ತುತಿಯನ್ನು ಕೇಳಿ ದೇವತೆಗಳೆ, ಮಲ್ಲಾಸುರನಿಂದ ಬಂಧಿತರಾದ ನಿಮ್ಮ ಹೆಂಡಿರನ್ನು ಬಿಡಿಸುತ್ತೇನೆ ಎಂದನು.

ಶಂಭುಮುನಿ ಈ ಮೂರು ಶ್ಲೋಕಗಳನ್ನು ವಿಚಾರಿಸಿ ನುಡಿದ. 'ಶ್ರೀರಾಮ ವಿಭೀಷಣನು ಬಂಧನದಲ್ಲಿರುವನೆಂಬುದು ನಿಶ್ಚಿತ. ಅವನ ಬಿಡುಗಡೆಯೂ ಬೇಗನೆ ಆಗುವುದು. ಅದರಲ್ಲಿಯೂ ಸಂಶಯವಿಲ್ಲ.

ಇದನ್ನು ಕೇಳಿ ಶ್ರೀರಾಮನು ಮುನಿಗಳನ್ನೂ ಕಪಿಗಳನ್ನೂ ಕರೆದುಕೊಂಡು ವಿಭೀಷಣನನ್ನು ಹುಡುಕುತ್ತ ಹೊರಟ. ಶ್ರೀರಂಗದಲ್ಲಿ ಅಲ್ಲಿಯ ರಾಜರು ಅವನನ್ನು ಗೌರವಿಸಿದರು. ಆದರೆ ವಿಭೀಷಣನು ಅಲ್ಲಿ ಅವನ ಸ್ಥಿತಿ ಏನು ಎನ್ನುವುದು ಅವರಿಗೆ ತಿಳಿಯಲಿಲ್ಲ. ಕಪಿಗಳೂ ಎಲ್ಲಡೆ ಹುಡುಕಿದರು ಅದೂ ಪ್ರಯೋಜನವಾಗಲಿಲ್ಲ ಕೊನೆಗೆ ಶ್ರೀರಾಮ ಶಂಭುಮುನಿಯನ್ನೆ ಕೇಳಿಕೊಂಡಾಗ ಅವನು ಎಲ್ಲರನ್ನೂ ಒಂದು ಬ್ರಾಹ್ಮಣರ ಅಗ್ರಹಾರಕ್ಕೆ ಕರೆದೊಯ್ದ. ಅಲ್ಲಿಯ ಬ್ರಾಹ್ಮಣರು ವಿಭೀಷಣನನ್ನು ತೋರಿಸಿದರು. ನೆಲೆ ಮಾಳಿಗೆಯಲ್ಲಿ ಅವನನ್ನು ಸರಪಣಿಗಳಿಂದ ಕಟ್ಟಿಹಾಕಿದ್ದರು. ಅವನೇನು ಅಪರಾಧ ಮಾಡಿದನೆಂದು ಕೇಳಿದಾಗ 'ಬ್ರಹ್ಮಹತ್ಯೆ' ಎಂದರವರು. ವಯಸ್ಸಾದ ಬ್ರಾಹ್ಮಣನೊಬ್ಬ ಕಾಡಿನಲ್ಲಿ ಏಕಾಂತದಲ್ಲಿ ಕುಳಿತು ಧ್ಯಾನ ಮಾಡುತ್ತಿದ್ದಾಗ ವಿಭೀಷಣನ ಕಾಲತುಳಿತಕ್ಕೆ ಸಿಕ್ಕಿ ಮೃತನಾದನಂತೆ. 'ರಾಮಚಂದ್ರ, ನೀನೀ ಪಾಪಿಯನ್ನು ಕೊಲ್ಲು' ಎಂದರು ಬ್ರಾಹ್ಮಣರು.

'ವಿಭೀಷಣನು ನನ್ನ ಭಕ್ತ ಅವನಿಗೆ ರಾಜ್ಯವನ್ನು ಆಯುಸ್ಸನ್ನೂ ನಾನು ಕೊಟ್ಟೆ. ಅವನನ್ನು ಕೊಲ್ಲಲಾರೆ. ಬದಲಿಗೆ ನಾನೆ ಪ್ರಾಣಾರ್ಪಣೆ ಮಾಡಬಲ್ಲೆ.

**''ಭೃತ್ಯಾಪರಾಧೇ ಸರ್ವತ್ರ ಸ್ವಾಮಿನೋದಂಡ ಇಷ್ಯತೇ''**

ಸೇವಕನು ತಪುಮಾಡಿದರೆ ಎಲ್ಲಕಡೆ ಪ್ರಭುವಿಗೇ ಶಿಕ್ಷೆಯಾಗುತ್ತದೆ.

ರಾಮಚಂದ್ರ, ಪಟ್ಟಾಭಿಷಿಕ್ತನಾದ ನಿನಗೆ ಮರಣದಂಡನೆ ವಿಧಿಸಲು ಯಾವ ಮುನಿಗಳೂ ಒಪ್ಪಲಾರರು. ವಶಿಷ್ಠರೆ ಮುಂತಾದ ಮುನಿಗಳಿದ್ದಾರೆ. ಅವರೊಡನೆ ಸಮಾಲೋಚಿಸಿ ಸರಿತೋರಿದುದನ್ನು ಮಾಡು. ಬ್ರಾಹ್ಮಣರು ಹೀಗೆ ಹೇಳಿದಾಗ ಶ್ರೀರಾಮನು ಮುನಿಗಳೊಡನೆ ವಿಚಾರಿಸಿದ. ಅವರೆಂದರು ತಿಳಿಯದೆ ಮಾಡಿದ ಬ್ರಹ್ಮಹತ್ಯೆಗೆ ಪ್ರಾಯಶ್ಚಿತ್ತವಿದೆ. ಈಗ ವಿಭೀಷಣನು ತಿಳಿಯದೆ ಮಾಡಿದ ಈ ಅಪರಾಧಕ್ಕೆ ಮುನ್ನೂರಅರವತ್ತು ಗೋದಾನಗಳನ್ನು ಅವನು ಮಾಡಬೇಕಾಗುತ್ತದೆ.

ಬ್ರಾಹ್ಮಣರು ಇದನ್ನೊಪ್ಪಿ ಈ ಪ್ರಾಯಶ್ಚಿತ್ತವನ್ನು ಮಾಡುವ ಶರತ್ತಿನ ಮೇಲೆ ವಿಭೀಷಣನನ್ನು ಬಿಟ್ಟರು. 'ಅವನು ಸ್ನಾನಮಾಡಿ ಮುನಿಗಳಲ್ಲಿ ಪ್ರಾಯಶ್ಚಿತ್ತವನ್ನು ಕೇಳಿಕೊಂಡು ಅದನ್ನು ಆಚರಿಸಿ ಅವರ ಅನುಮತಿಯಿಂದ ನನ್ನ ಕಡೆಗೆ ಬರಲಿ' ಎಂದು ಶ್ರೀರಾಮ. ವಿಭೀಷಣನೂ ಹಾಗೇ ಮಾಡಿ ರಾಮನ ಬಳಿಗೆ ಬಂದ, ನಗುತ್ತ ಹೇಳಿದ ಶ್ರೀರಾಮ, 'ಇನ್ನು ಮುಂದೆ ಜಾಗರೂಕನಾಗಿರು. ನಿನ್ನ ಸಲುವಾಗಿ ಎಷ್ಟು ಪ್ರಯಾಸ ಪಡಬೇಕಾಯಿತು!'

**ಋಷಿಗಳು :-** ಸೂತನೆ, ತ್ರೇತಾಯುಗದಲ್ಲಿ ಶ್ರೀರಾಮನ ಅವತಾರ. ಪುರಾಣಗಳೂ ಭಾರತವೂ ರಚನೆಯಾದುದು ದ್ವಾಪರದ ಕೊನೆಯಲ್ಲಿ. ಪುರಾಣ ಶಕುನವನ್ನು ಶ್ರೀರಾಮನು ಹೇಗೆ ನೋಡಬಲ್ಲ ?

**ಸೂತ :-** ಹಿಂದೆ ಕಲ್ಪದ ಪುರಾಣಗಳಿದ್ದೇ ಇರುತ್ತವೆ. ತ್ರೇತಾಯುಗದಲ್ಲಿ ಅವಿರುತ್ತವೆ. ದ್ವಾಪರದಲ್ಲಿ ವೇದವ್ಯಾಸರು ಬೇರೆ ಪುರಾಣಗಳನ್ನು ರಚಿಸಿದ್ದಾರೆ. ಕಲಿಯುಗದಲ್ಲಿ ಆ ಪುರಾಣಗಳೆ ಪ್ರಚಲಿತವಾಗಿರುತ್ತವೆ.

ಮಹಾಭಾರತವೂ ಶಕುನ ನೋಡುವುದರಲ್ಲಿ ಪ್ರಶಸ್ತವಾಗಿದೆ. ಅದರಲ್ಲಿ ಆದಿ ಪರ್ವ ಒಂದನ್ನೆ ನೋಡಬಹುದು. ಇಲ್ಲವೆ ಎಲ್ಲ ಪರ್ವಗಳನ್ನು ನೋಡಬಹುದು. ಶ್ಲೋಕದ ಗುಣ ಲಕ್ಷಣಗಳ ಬಗ್ಗೆ ಹಿಂದೆ ಹೇಳಿದುದನ್ನೆ ಇಟ್ಟುಕೊಳ್ಳಬೇಕು. ಶ್ಲೋಕಗಳ ಅನ್ವಯಾರ್ಥ ತಾತ್ಪರ್ಯಾರ್ಥಗಳು ಕೆಲವೊಮ್ಮೆ ಬೇರೆಯಾಗಿರುವುದುಂಟು. ಆಗ ತಾತ್ಪರ್ಯಾರ್ಥವನ್ನೆ ಸ್ವೀಕರಿಸಬೇಕು.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಪಾತಾಳ ಖಂಡದಲ್ಲಿ*
*ಶಿವರಾಘವ ಸಂವಾದವೆಂಬ ನಲವತ್ತಮೂರನೆ ಅಧ್ಯಾಯ ಮುಗಿದುದು*

—o—

## ಭಸ್ಮ ಮಹಾತ್ಮೆ

ಅಧ್ಯಾಯ - ೪೪

**ಮುನಿಯ ಊಹುಃ**

**ಋಷಿಗಳು :-** ಸೂತನೆ, ಶ್ರೀರಾಮ ಚಂದ್ರನು ಮುಂದೇನು ಮಾಡಿದ ? ಮುನಿಗಳೂ ಏನು ಮಾಡಿದರು ?

**ಸೂತ :-** ಶ್ರೀರಾಮನು ವಿಭೀಷಣ ಸುಗ್ರೀವರೊಡನೆ ಸುಖಾಸನದಲ್ಲಿ ಕುಳಿತಿದ್ದಾಗ ಮುನಿಗಳು ಶಂಭು ಮುನಿಯಲ್ಲಿ ಕೇಳಿಕೊಂಡರು. 'ಪವಿತ್ರವಾದ ಕಥೆ ಏನಾದರೂ ಹೇಳು' ಎಂದು ಆಗ ಶಂಭು ಪಾರ್ವತಿಯೊಡನೆ ಹೇಳಿದ. ಪ್ರಿಯೆ, ನೋಡು ಎಷ್ಟು ಸುಂದರವಾಗಿದೆ ಈ ಮನೆ ! ಉಪವನವೂ ಸುಂದರವಾಗಿದೆ. ದುಂಬಿಗಳು ಝೇಂಕರಿಸುತ್ತ ನಮ್ಮನ್ನು ಕೂಗಿ ಕರೆಯುತ್ತಿವೆ. ಸೂರ್ಯನು ಮಧ್ಯಾಹ್ನದ ಸಮಯಕ್ಕೆ ಬಂದಿದ್ದಾನೆ. ಹೋಗೋಣ ಬಾ ಕೊಳದಲ್ಲಿ ಸ್ನಾನ ಮಾಡಿ ಒಳ್ಳೆ ಬಟ್ಟೆಗಳನ್ನುಟ್ಟು ಕಸ್ತೂರಿ ಪಚ್ಚಕರ್ಪೂರಯುಕ್ತ ಚಂದನವನ್ನು ಪೂಸಿಕೊಳ್ಳೋಣ. ಹೂಮಾಲೆ ಧರಿಸಿ ತಾಂಬೂಲ ಮೆಲ್ಲೋಣ. ನೀರು ಮನೆಗಳಲ್ಲಿ ನವಿಲು ಕೂಗನ್ನು ಕೇಳೋಣ. ಹಾಸಿಗೆಯಲ್ಲಿ ವಿಶ್ರಮಿಸಿ ತುಟಿಗಳನ್ನು ಚುಂಬಿಸೋಣ. ಆಗ ಸಂಸಾರದ ಮಧುರ ಫಲವನ್ನು ನಾವು ಸವಿದಂತಾಗುವುದು.

ಆ ರಾಮಚಂದ್ರನು ಸಮುದ್ರಕ್ಕೆ ಸೇತುವೆಯನ್ನು ಕಟ್ಟಿ ಅಂದಿನವರೆಗೆ ಸುರಕ್ಷಿತವಾಗಿದ್ದ ರಾಕ್ಷಸ ವೀರರಮೇಲೆ ದಂಡೆತ್ತಿಹೋದ. ಆಗ ಲಂಕೆಯಲ್ಲಿದ್ದ ಅತಿಕಾಯ ಮುಂತಾದವರು ಒಂದಾಗಿ ಯುದ್ಧಕ್ಕೆ ಬಂದರು.

**ಅಟ್ಟಶೂಲಾ ಜನಪದಾಃ ಶಿವಶೂಲಾ ದ್ವಿಜಾಸ್ತಥಾ ।**
**ಪ್ರಮದಾಃ ಕೇಶಶೂಲಿನ್ಯೋ ಭವಿಷ್ಯಂತಿ ಕಲೌ ಯುಗೇ ॥**

ಕಲಿಯುಗದಲ್ಲಿ ಜನರು ಅನ್ನ ವಿಕ್ರಯ ಮಾಡುತ್ತಾರೆ. ದ್ವಿಜರು ದುಡ್ಡಿಗೋಸ್ಕರ ಶಿವಪೂಜೆ ಮಾಡುತ್ತಾರೆ. ಹೆಂಗಸರು, ತಮ್ಮ ದೇಹ ವಿಕ್ರಯ ಮಾಡಿಕೊಳ್ಳುತ್ತಾರೆ.

**ಏವಂ ಸ್ತುತೋ ಮಹೇಶಸ್ತು ದೇವತಾಃ ಪ್ರಾಹವೈ ಶಿವಃ ।**
**ಮೋಚಯಿಷ್ಯೇ ಭವತ್ ಪತ್ನೀರ್ಮಲ್ಲಾಸುರ ನಿರೋಧಿಕಾಃ ॥**

ಮಹೇಶ್ವರನು ಈ ಸ್ತುತಿಯನ್ನು ಕೇಳಿ ದೇವತೆಗಳೆ, ಮಲ್ಲಾಸುರನಿಂದ ಬಂಧಿತರಾದ ನಿಮ್ಮ ಹೆಂಡಿರನ್ನು ಬಿಡಿಸುತ್ತೇನೆ ಎಂದನು.

ಶಂಭುಮುನಿ ಈ ಮೂರು ಶ್ಲೋಕಗಳನ್ನು ವಿಚಾರಿಸಿ ನುಡಿದ. 'ಶ್ರೀರಾಮ ವಿಭೀಷಣನು ಬಂಧನದಲ್ಲಿರುವನೆಂಬುದು ನಿಶ್ಚಿತ. ಅವನ ಬಿಡುಗಡೆಯೂ ಬೇಗನೆ ಆಗುವುದು. ಅದರಲ್ಲಿಯೂ ಸಂಶಯವಿಲ್ಲ.

ಇದನ್ನು ಕೇಳಿ ಶ್ರೀರಾಮನು ಮುನಿಗಳನ್ನೂ ಕಪಿಗಳನ್ನೂ ಕರೆದುಕೊಂಡು ವಿಭೀಷಣನನ್ನು ಹುಡುಕುತ್ತ ಹೊರಟ. ಶ್ರೀರಂಗದಲ್ಲಿ ಅಲ್ಲಿಯ ರಾಜರು ಅವನನ್ನು ಗೌರವಿಸಿದರು. ಆದರೆ ವಿಭೀಷಣನು ಅಲ್ಲಿ ಅವನ ಸ್ಥಿತಿ ಏನು ಎನ್ನುವುದು ಅವರಿಗೆ ತಿಳಿಯಲಿಲ್ಲ. ಕಪಿಗಳೂ ಎಲ್ಲಡೆ ಹುಡುಕಿದರು ಅದೂ ಪ್ರಯೋಜನವಾಗಲಿಲ್ಲ ಕೊನೆಗೆ ಶ್ರೀರಾಮ ಶಂಭುಮುನಿಯನ್ನೆ ಕೇಳಿಕೊಂಡಾಗ ಅವನು ಎಲ್ಲರನ್ನೂ ಒಂದು ಬ್ರಾಹ್ಮಣರ ಅಗ್ರಹಾರಕ್ಕೆ ಕರೆದೊಯ್ದ. ಅಲ್ಲಿಯ ಬ್ರಾಹ್ಮಣರು ವಿಭೀಷಣನನ್ನು ತೋರಿಸಿದರು. ನೆಲೆ ಮಾಳಿಗೆಯಲ್ಲಿ ಅವನನ್ನು ಸರಪಣಿಗಳಿಂದ ಕಟ್ಟಿಹಾಕಿದ್ದರು. ಅವನೇನು ಅಪರಾಧ ಮಾಡಿದನೆಂದು ಕೇಳಿದಾಗ 'ಬ್ರಹ್ಮಹತ್ಯೆ' ಎಂದರವರು. ವಯಸ್ಸಾದ ಬ್ರಾಹ್ಮಣನೊಬ್ಬ ಕಾಡಿನಲ್ಲಿ ಏಕಾಂತದಲ್ಲಿ ಕುಳಿತು ಧ್ಯಾನ ಮಾಡುತ್ತಿದ್ದಾಗ ವಿಭೀಷಣನ ಕಾಲತುಳಿತಕ್ಕೆ ಸಿಕ್ಕಿ ಮೃತನಾದನಂತೆ. 'ರಾಮಚಂದ್ರ, ನೀನೀ ಪಾಪಿಯನ್ನು ಕೊಲ್ಲು' ಎಂದರು ಬ್ರಾಹ್ಮಣರು.

'ವಿಭೀಷಣನು ನನ್ನ ಭಕ್ತ ಅವನಿಗೆ ರಾಜ್ಯವನ್ನು ಆಯುಸ್ಸನ್ನೂ ನಾನು ಕೊಟ್ಟೆ. ಅವನನ್ನು ಕೊಲ್ಲಲಾರೆ. ಬದಲಿಗೆ ನಾನೆ ಪ್ರಾಣಾರ್ಪಣೆ ಮಾಡಬಲ್ಲೆ.

**"ಭೃತ್ಯಾಪರಾಧೇ ಸರ್ವತ್ರ ಸ್ವಾಮಿನೋದಂಡ ಇಷ್ಯತೇ"**

ಸೇವಕನು ತಪುಮಾಡಿದರೆ ಎಲ್ಲಕಡೆ ಪ್ರಭುವಿಗೇ ಶಿಕ್ಷೆಯಾಗುತ್ತದೆ.

ರಾಮಚಂದ್ರ, ಪಟ್ಟಾಭಿಷಿಕ್ತನಾದ ನಿನಗೆ ಮರಣದಂಡನೆ ವಿಧಿಸಲು ಯಾವ ಮುನಿಗಳೂ ಒಪ್ಪಲಾರರು. ವಶಿಷ್ಠರೆ ಮುಂತಾದ ಮುನಿಗಳಿದ್ದಾರೆ. ಅವರೊಡನೆ ಸಮಾಲೋಚಿಸಿ ಸರಿತೋರಿದುದನ್ನು ಮಾಡು. ಬ್ರಾಹ್ಮಣರು ಹೀಗೆ ಹೇಳಿದಾಗ ಶ್ರೀರಾಮನು ಮುನಿಗಳೊಡನೆ ವಿಚಾರಿಸಿದ. ಅವರೆಂದರು ತಿಳಿಯದೆ ಮಾಡಿದ ಬ್ರಹ್ಮಹತ್ಯೆಗೆ ಪ್ರಾಯಶ್ಚಿತ್ತವಿದೆ. ಈಗ ವಿಭೀಷಣನು ತಿಳಿಯದೆ ಮಾಡಿದ ಈ ಅಪರಾಧಕ್ಕೆ ಮುನ್ನೂರಅರವತ್ತು ಗೋದಾನಗಳನ್ನು ಅವನು ಮಾಡಬೇಕಾಗುತ್ತದೆ.

ಬ್ರಾಹ್ಮಣರು ಇದನ್ನೊಪ್ಪಿ ಈ ಪ್ರಾಯಶ್ಚಿತ್ತವನ್ನು ಮಾಡುವ ಶರತ್ತಿನ ಮೇಲೆ ವಿಭೀಷಣನನ್ನು ಬಿಟ್ಟರು. 'ಅವನು ಸ್ನಾನಮಾಡಿ ಮುನಿಗಳಲ್ಲಿ ಪ್ರಾಯಶ್ಚಿತ್ತವನ್ನು ಕೇಳಿಕೊಂಡು ಅದನ್ನು ಆಚರಿಸಿ ಅವರ ಅನುಮತಿಯಿಂದ ನನ್ನ ಕಡೆಗೆ ಬರಲಿ' ಎಂದು ಶ್ರೀರಾಮ. ವಿಭೀಷಣನೂ ಹಾಗೇ ಮಾಡಿ ರಾಮನ ಬಳಿಗೆ ಬಂದ, ನಗುತ್ತ ಹೇಳಿದ ಶ್ರೀರಾಮ, 'ಇನ್ನು ಮುಂದೆ ಜಾಗರೂಕನಾಗಿರು. ನಿನ್ನ ಸಲುವಾಗಿ ಎಷ್ಟು ಪ್ರಯಾಸ ಪಡಬೇಕಾಯಿತು!'

**ಋಷಿಗಳು :-** ಸೂತನೆ, ತ್ರೇತಾಯುಗದಲ್ಲಿ ಶ್ರೀರಾಮನ ಅವತಾರ. ಪುರಾಣಗಳೂ ಭಾರತವೂ ರಚನೆಯಾದುದು ದ್ವಾಪರದ ಕೊನೆಯಲ್ಲಿ. ಪುರಾಣ ಶಕುನವನ್ನು ಶ್ರೀರಾಮನು ಹೇಗೆ ನೋಡಬಲ್ಲ ?

**ಸೂತ :-** ಹಿಂದೆ ಕಲ್ಪದ ಪುರಾಣಗಳಿದ್ದೇ ಇರುತ್ತವೆ. ತ್ರೇತಾಯುಗದಲ್ಲಿ ಅವಿರುತ್ತವೆ. ದ್ವಾಪರದಲ್ಲಿ ವೇದವ್ಯಾಸರು ಬೇರೆ ಪುರಾಣಗಳನ್ನು ರಚಿಸಿದ್ದಾರೆ. ಕಲಿಯುಗದಲ್ಲಿ ಆ ಪುರಾಣಗಳೆ ಪ್ರಚಲಿತವಾಗಿರುತ್ತವೆ.

ಮಹಾಭಾರತವೂ ಶಕುನ ನೋಡುವುದರಲ್ಲಿ ಪ್ರಶಸ್ತವಾಗಿದೆ. ಅದರಲ್ಲಿ ಆದಿ ಪರ್ವ ಒಂದನ್ನೆ ನೋಡಬಹುದು. ಇಲ್ಲವೆ ಎಲ್ಲ ಪರ್ವಗಳನ್ನು ನೋಡಬಹುದು. ಶ್ಲೋಕದ ಗುಣ ಲಕ್ಷಣಗಳ ಬಗ್ಗೆ ಹಿಂದೆ ಹೇಳಿದುದನ್ನೆ ಇಟ್ಟುಕೊಳ್ಳಬೇಕು. ಶ್ಲೋಕಗಳ ಅನ್ವಯಾರ್ಥ ತಾತ್ಪರ್ಯಾರ್ಥಗಳು ಕೆಲವೊಮ್ಮೆ ಬೇರೆಯಾಗಿರುವುದುಂಟು. ಆಗ ತಾತ್ಪರ್ಯಾರ್ಥವನ್ನೆ ಸ್ವೀಕರಿಸಬೇಕು.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಪಾತಾಳ ಖಂಡದಲ್ಲಿ*
*ಶಿವರಾಘವ ಸಂವಾದವೆಂಬ ನಲವತ್ತಮೂರನೆ ಅಧ್ಯಾಯ ಮುಗಿದುದು*

—o—

## ಭಸ್ಮ ಮಹಾತ್ಮೆ

ಅಧ್ಯಾಯ - ೪೪

**ಮುನಿಯ ಊಹು:**

**ಋಷಿಗಳು :-** ಸೂತನೆ, ಶ್ರೀರಾಮ ಚಂದ್ರನು ಮುಂದೇನು ಮಾಡಿದ ? ಮುನಿಗಳೂ ಏನು ಮಾಡಿದರು ?

**ಸೂತ :-** ಶ್ರೀರಾಮನು ವಿಭೀಷಣ ಸುಗ್ರೀವರೊಡನೆ ಸುಖಾಸನದಲ್ಲಿ ಕುಳಿತಿದ್ದಾಗ ಮುನಿಗಳು ಶಂಭು ಮುನಿಯಲ್ಲಿ ಕೇಳಿಕೊಂಡರು. 'ಪವಿತ್ರವಾದ ಕಥೆ ಏನಾದರೂ ಹೇಳು' ಎಂದು ಆಗ ಶಂಭು ಪಾರ್ವತಿಯೊಡನೆ ಹೇಳಿದ. ಪ್ರಿಯೆ, ನೋಡು ಎಷ್ಟು ಸುಂದರವಾಗಿದೆ ಈ ಮನೆ ! ಉಪವನವೂ ಸುಂದರವಾಗಿದೆ. ದುಂಬಿಗಳು ಝೇಂಕರಿಸುತ್ತ ನಮ್ಮನ್ನು ಕೂಗಿ ಕರೆಯುತ್ತಿವೆ. ಸೂರ್ಯನು ಮಧ್ಯಾಹ್ನದ ಸಮಯಕ್ಕೆ ಬಂದಿದ್ದಾನೆ. ಹೋಗೋಣ ಬಾ ಕೊಳದಲ್ಲಿ ಸ್ನಾನ ಮಾಡಿ ಒಳ್ಳೆ ಬಟ್ಟೆಗಳನ್ನುಟ್ಟು ಕಸ್ತೂರಿ ಪಚ್ಚಕರ್ಪೂರಯುಕ್ತ ಚಂದನವನ್ನು ಪೂಸಿಕೊಳ್ಳೋಣ. ಹೂಮಾಲೆ ಧರಿಸಿ ತಾಂಬೂಲ ಮೆಲ್ಲೋಣ. ನೀರು ಮನೆಗಳಲ್ಲಿ ನವಿಲು ಕೂಗನ್ನು ಕೇಳೋಣ. ಹಾಸಿಗೆಯಲ್ಲಿ ವಿಶ್ರಮಿಸಿ ತುಟಿಗಳನ್ನು ಚುಂಬಿಸೋಣ. ಆಗ ಸಂಸಾರದ ಮಧುರ ಫಲವನ್ನು ನಾವು ಸವಿದಂತಾಗುವುದು.

ಪುಣ್ಯ ಕಥೆಗಳನ್ನು ಕೇಳಲು ಕುತೂಹಲದಿಂದ ಕುಳಿತಿದ್ದ ಮುನಿಗಳಿಗೀ ಮಾತು ಕೇಳಿ ಕೋಪ ಬಂದಿತು. ಕೋಪದಿಂದ ಮುನಿಗಳು, ನಿನ್ನ ಹೆಂಡತಿಯೊಡನೆ ಸರಸ ಸಲ್ಲಾಪ ನಡೆಸೆಂದು ನಾವು ಹೇಳಲಿಲ್ಲ' ವೆಂದಾಕ್ಷೇಪಿಸಿದರು. ಶಂಭುವಿಗೂ ಕೋಪ ಬಂದಿತು. ಅವನ ಮುಖದಿಂದ ಕರಾಳ ಮುಖದ ಜ್ವಾಲೆಯೊಂದು ಹೊರಬಂದು ಒಬ್ಬ ಮುನಿಯ ಪತ್ನಿಯನ್ನು ಹಿಡಿದುಕೊಂಡಿತು. ರಾಮನನ್ನು ನೋಡಿ ಹೆದರಿ ಓಡತೊಡಗಿತು. ರಾಮನು ಮುನಿಗಳೊಂದಿಗೆ ಪುಷ್ಪಕ ವಿಮಾನವನ್ನೇರಿ ಹಿಂಬಾಲಿಸಿದ. ಬಿಲ್ಲಿಗೆ ಬಾಣವನ್ನು ಹೂಡಲು ಮರೆತ. ವಿಮಾನ ವೇಗವಾಗಿ ಹೋಗುತ್ತಿತ್ತು. ಮುನಿಗಳು ದಾರಿಯುದ್ದಕ್ಕೂ ಪವಿತ್ರ ವನಗಳನ್ನು ದೇವಾಲಯಗಳನ್ನೂ ನೋಡುತ್ತ ಮೈ ಮರೆತಿದ್ದರು. ಒಂದು ಕ್ಷಣದಲ್ಲಿ ವಿಮಾನವು ಲೋಕಾಲೋಕ ಪರ್ವತಕ್ಕೆ ಬಂತು. ಆ ಪರ್ವತದಾಚೆಗೆ ದಟ್ಟವಾದ ಕತ್ತಲು ಹಬ್ಬಿರುವುದರಿಂದ ರಾಮ ಚಿಂತೆಗೊಳಗಾದ. ಆಗ ಶಂಭುಮುನಿ ಬೆಳಕನ್ನು ಸೃಷ್ಟಿಸಿ ರಾಮನನ್ನು ಕರೆದೊಯ್ದು. ವಿಮಾನ ಮುಂದುವರಿದು ಕೋಟಿ ಸೂರ್ಯರಂತೆ ಜಾಜ್ವಲ್ಯ ಮಾನವಾಗಿ ಬೆಳಗುವ ನಾರಾಯಣಪುರವನ್ನು ತಲುಪಿತು. ರಾಮನಿಗೂ ಮುನಿಗಳಿಗೂ ಒಂದು ಕ್ಷಣ ಸಂದೇಹ ಮೂಡಿತು. ಇದೇನು ಮಾಯೆಯೊ ನಿಜವೋ ? ಇಲ್ಲಿ ಪ್ರವೇಶ ಮಾಡಿದರೆ ಅಪಾಯವಿರಬಹುದೇ ?' ಎಂದು ಆಗ ಶಂಭು ಮುನಿ ನುಡಿದ, ''ರಾಮ ಇದೇನೂ ಮಾಯೆಯಲ್ಲ. ನಾನು ಮಾಟದ ದೇವತೆಯೂ ಅಲ್ಲ'' ನಾರಾಯಣನ ಪರಮಧಾಮವಿದು. ಇದು ಕೇವಲ ಜ್ಞಾನ ದೃಷ್ಟಿಗೆ ಕಾಣುವಂತಹುದು. ಬರಿ ಗಣ್ಣಿಗೆ ನಿಲುಕದು. ಬ್ರಹ್ಮಾದಿ ದೇವತೆಗಳೂ ಋಷಿಗಳೂ ಮೇಲೆ ನಿಂತು ಅದನ್ನು ಸ್ತುತಿಸುತ್ತಿದ್ದಾರೆ. ನಾಲ್ಕು ವೇದಗಳೂ ಕೊಂಡಾಡುತ್ತಿವೆ. ಸನಕಾದಿಯೋಗಿಗಳು ಪ್ರಯತ್ನಪಟ್ಟು ಧ್ಯಾನಿಸುವುದೂ ಅದನ್ನೆ. ಇದೊ ರೋಮಮುನಿ ಮತ್ತು ವಾಲಖಿಲ್ಯ ಮುನಿಗಳು ಈ ಸ್ಥಳಕ್ಕೆ ಪ್ರದಕ್ಷಿಣೆ ನಮಸ್ಕಾರಗಳನ್ನು ಸಲ್ಲಿಸುತ್ತಿದ್ದಾರೆ. ಎಲ್ಲರೂ ಆ ಸಾಕಾರ ನಿರಾಕಾರ ಬ್ರಹ್ಮ ಸ್ವರೂಪಿಯಾದ ಅಚ್ಯುತನನ್ನು ಆರಾಧಿಸಿರಿ.

ಗಿರಿಕರ್ಣಿಕೆ ತುಳಸಿ ಕಮಲ ನೈದಿಲೆಗಳಿಂದ ಎಲ್ಲರೂ ವಿಷ್ಣುವನ್ನು ಪೂಜಿಸಿದರು. ಮೇಲೆ ನಾರದ ಮುನಿ ವೀಣೆಯನ್ನು ಬಾರಿಸುತ್ತ ಹರಿನಾಮ ಕೀರ್ತನೆ ಮಾಡುತ್ತ ಶಂಭು ಮುನಿಯನ್ನು ಕಂಡ. ಇವನಾರೆಂದು ಯೋಚಿಸಿದ ಒಡನೆ ತಿಳಿಯಿತು. ಮುನಿವೇಷದಿಂದ ಬಂದ ಶಿವನೆಂದು, ಶಿವ ಪಂಚಾಕ್ಷರವನ್ನು ಮನದಲ್ಲೆ ಚಿಂತಿಸಿ, ಶಿವನೆ, ನಾನು ಧನ್ಯನಾದೆ. ನನ್ನ ಜನ್ಮ ಇಂದು ಸಾರ್ಥಕವಾಯಿತು ಎಂದ. ಶುಂಭು ಮುನಿ ತಡೆದು ಹೇಳಿದ. 'ನಾರದ ಸುಮ್ಮನಿರು. ಇವರಿಗೆ ನಾನು ಯಾರೆಂದು ತಿಳಿಯದಂತೆ ವರ್ತಿಸು. ಹರಿಯ ಬಳಿಗೆ ಹೋಗಿ ನಾನು ಬಂದೆನೆಂದು ತಿಳಿಸು.'

ನಾರದನು ಶಂಕರನಾಗಮನವನ್ನು ತಿಳಿಸಿದೊಡನೆ, ವಿಷ್ಣು ಲಕ್ಷ್ಮಿ ಸಮೇತವಾಗಿ ಕೋಟಿ ಕೋಟಿ ಪರಿವಾರದೊಂದಿಗೆ ಬಂದು ಶಿವನನ್ನಿದಿರುಗೊಂಡು ನಮಸ್ಕರಿಸಿ ಅರ್ಘ್ಯಪಾದ್ಯ ಮುಂತಾದವುಗಳಿಂದ ಎಲ್ಲರನ್ನೂ ಸತ್ಕರಿಸಿದ. ಎಲ್ಲರೂ ಸುಖಾಸನದಲ್ಲಿ ಕುಳಿತಿದ್ದಾಗ ವಿಷ್ಣು ಪ್ರಶ್ನಿಸಿದ. ''ಇವರೆಲ್ಲ ಇಲ್ಲಿಯವರೆಗೆ ಹೇಗೆ ಬಂದರು ? ಈ ರಾಜನು ಯಾರು ? ಮನುಷ್ಯರಿಗೆ ಇಲ್ಲಿ ಪ್ರವೇಶವಿಲ್ಲ. ಬ್ರಹ್ಮಾದಿ ದೇವತೆಗಳೂ ಇಲ್ಲಿಗೆ ಬರಲಾರರು.''

**ಶಂಭು :-** ನಾನು ಮುನಿವೇಷದಿಂದ ಬಂದಂತೆ ಈ ರಾಜನೂ ನಿನ್ನ ಅಂಶದವನೆ ಆದ ಪ್ರತಾಪ ಶಾಲಿಯಾದ ರಾಮಚಂದ್ರ. ನಿನ್ನ ಪತ್ನಿಯನ್ನೀತ ನೋಡುವುದರಲ್ಲಿ ನಿನ್ನ ಅಭ್ಯಂತರವಿದೆಯೆ ?

'ಇಲ್ಲ'ವೆಂದು ವಿಷ್ಣು 'ರಾಮ, ಒಳಗೆ ಹೋಗು' ಎಂದ. ರಾಮನು ಲಕ್ಷ್ಮಿಯ ಅಂತಃಪುರಕ್ಕೆ ಹೋಗಿ ಆಕೆಗೆ ನಮಿಸಿ ವಿನಯದಿಂದ ನುಡಿದ, 'ನಾನು ಕೃತಾರ್ಥನಾದೆ. ನಿನ್ನ ಮನಸ್ಸಿನಲ್ಲಿ ಏನಿದೆ ಹೇಳು.'

**ಲಕ್ಷ್ಮೀ:-** ರಾಮ, ನೀನು ಯುವಕ, ಸ್ಫುರದ್ರೂಪಿ ಕಾಮದ ಆಕರ್ಷಣೆಗೊಳಗಾದವ. ನಿನ್ನ ಆ ಸೀತೆಯೂ ಸುಂದರಿ. ಅವಳ ವಿರಹ ಕಾಲದಲ್ಲಿ ನೀನೆಷ್ಟು ದುಃಖಿಸಿದೆ, ಹೇಳು.

ನಗುತ್ತ ಲಕ್ಷ್ಮಿ ಆಡಿದ ಮಾತುಗಳು ಯುವಕರ ಮನಸೆಳೆಯುವಂತಿದ್ದುವು. ರಾಮನು ಇಂದ್ರಿಯ ನಿಗ್ರಹ ಉಳ್ಳವ. ಅವಳ ಮಾತನ್ನೆಲ್ಲ ಕೇಳಿ ಹೊರಟುಬಿಟ್ಟ. ಒಡನೆ ಅವನ ಮುಖವನ್ನು ಬಗ್ಗಿಸಿ ಕಮಲದಿಂದ ಹೊಡೆದಳು ಲಕ್ಷ್ಮಿ. ಕಮಲವು ಮನ್ಮಥನ ಒಂದುಬಾಣ. ಲಕ್ಷ್ಮಿಗೆ ಅತಿಪ್ರಿಯ. ರಾಮನು ನಡುಗುತ್ತ ಅಂತಃಪುರದಿಂದ ಹೊರಗೆ ಬರುವಾಗ ಲಕ್ಷ್ಮಿ ಅವನನ್ನು ಹಿಂಬಾಲಿಸಿದಳು. ಶಿವನಾರಾಯಣರು ಆಶ್ಚರ್ಯಪಟ್ಟರು ಪರಸ್ಪರ ಹೇಳಿಕೊಂಡರು 'ಎಂಥ ಮನಃಸ್ಥೈರ್ಯ ರಾಮನದು ! ಏಕ ಪತ್ನಿವ್ರತನೆಂಬ ಕೀರ್ತಿ ಅವನಿಗೆ ನಿಜವಾಗಿಯೂ ಸಲ್ಲಬೇಕು. ಅದರಿಂದ.

**ಸರ್ವತಃ ಶಿವಮೇವಾಸ್ಯ ನಾಶಿವಂ ವಿದ್ಯತೇ ಕ್ವಚಿತ್**

ಶ್ರೀರಾಮನಿಗೆ ಎಲ್ಲೆಡೆಗಳಲ್ಲಿಯೂ ಶುಭವೊಂದೇ ಹೊರತು ಅಶುಭವೆಂಬುವುದು ಎಲ್ಲಿಯೂ ಇಲ್ಲ.

ಶ್ರೀರಾಮನು ಶಿವ ನಾರಾಯಣರ ಬಳಿಗೆ ಬಂದು 'ನಾನು ಹೋಗುವೆನು' ಎಂದು ಅನುಮತಿ ಕೇಳಿದ. ಅವರು ತಾವೂ ಪುಷ್ಪಕವಿಮಾನವನ್ನೇರಿ ಶ್ರೀರಾಮನೊಂದಿಗೆ ಅಲ್ಲಿಂದ ಹೊರಟರು. ಲೋಕಾ ಲೋಕ ಪರ್ವತ ಸ್ವಾದೂದಕ ಸಮುದ್ರ ದ್ವೀಪ ಮುಂತಾದುವನ್ನು ದಾಟಿ ಜಂಬೂ ದ್ವೀಪಕ್ಕೆ ಬಂದು ಗೌತಮೀ ನದೀತೀರದ ಭರದ್ವಾಜಾಶ್ರಮದಲ್ಲಿ ಇಳಿದರು. ಮುನಿಯು ಅವರನ್ನು ನೋಡಿ ಸ್ವಾಗತಿಸಿ ಭೋಜನಕ್ಕೆ ಆಹ್ವಾನಿಸಿದ. ರಾಮನು ಹೇಗೋ ಒಪ್ಪಿಕೊಂಡು ನದಿಯಲ್ಲಿ ಸ್ನಾನ ದೇವ ಋಷಿ ಪಿತೃ ತರ್ಪಣಗಳಾದ ಬಳಿಕ ಊಟಕ್ಕೆ ಕುಳಿತ. ಶ್ರಾದ್ಧಮಾಡಬೇಕಾಗಿತ್ತು ಎಂದು ವಶಿಷ್ಠಮುನಿ ನುಡಿದ. ರಾಮನೆಂದ.

ಅಮಾವಾಸ್ಯೆ, ಗ್ರಹಣ, ತೀರ್ಥ, ವ್ಯತೀಪಾತ, ಸಂಕ್ರಮಣ ಶ್ರಾದ್ಧಗಳು ತಪ್ಪಿಹೋದರೆ ತಿರುಗಿ ಮಾಡಬಹುದು. ನಿತ್ಯಶ್ರಾದ್ಧವನ್ನು ಹಾಗೆ ಮಾಡಲಾಗದು ಎಂದು ನೀವೇ ಹೇಳಿದ್ದಿರಿ. ನಮ್ಮತಾಯಿ ಮಡಿದಾಗ ಆಶೌಚದಲ್ಲಿ ನಿತ್ಯಶ್ರಾದ್ಧವನ್ನು ಮಾಡಲಿಲ್ಲ. ವಶಿಷ್ಠರು ಈ ವಿಷಯದಲ್ಲಿ ನಿರ್ಣಯ ಹೇಳುವುದನ್ನು ಶಂಭು ಮುನಿಗೆ ಬಿಟ್ಟುಕೊಟ್ಟರು. ಆತ ಹೇಳತೊಡಗಿದ.

**ಶಂಭು :-** ಸೂತಕ ಬಂದಾಗ ಅಥವಾ ವಿಘ್ನ ಉಂಟಾದಾಗ ಬಿಡಬೇಕಾದ ಶ್ರಾದ್ಧಗಳನ್ನು ಮಾಡಬೇಕಾದ ಶ್ರಾದ್ಧಗಳನ್ನು ಹೇಳುತ್ತೇನೆ ಕೇಳು. ಮಾಸಿಕ, ಸೋದಕುಂಭ, ಸಾಂವತ್ಸರಿಕ ಶ್ರಾದ್ಧಗಳು ಸೂತಕ ಮುಂತಾದವುಗಳಿಂದ ನಡೆಯದಿದ್ದಲ್ಲಿ ಅನಂತರ ಮಾಡಬೇಕು. ಉಳಿದ ಶ್ರಾದ್ಧಗಳನ್ನು ಮಾಡಬೇಕಾಗಿಲ್ಲ. ಅನಂತರ ಮಾಡಬೇಕಾದ ಶ್ರಾದ್ಧಗಳನ್ನು ಕೃಷ್ಣಪಕ್ಷದ ಏಕಾದಶಿ ಅಥವಾ ಅಮಾವಾಸ್ಯೆ ದಿನ ಮಾಡಬೇಕು.

ಮರಣದಿನದ ತಿಂಗಳು ಯಾವುದೆಂದು ತಿಳಿದಿಯದ್ದರೆ ಮಾರ್ಗಶೀರ್ಷ ಅಥವಾ ಮಾಘಮಾಸದಲ್ಲಿ ಆ ದಿನ ಶ್ರಾದ್ಧಮಾಡಬೇಕು. ತಿಂಗಳು ತಿಳಿದಿದ್ದು ಮರಣತಿಥಿ ತಿಳಿದಿಲ್ಲವಾದರೆ ಆ ತಿಂಗಳ ಅಮವಾಸ್ಯೆಯಂದು ಶ್ರಾದ್ಧ ಮಾಡಬೇಕು. ಮರಣ ತಿಥಿ, ಮಾಸ ಇವೆರಡು ತಿಳಿದಿಲ್ಲದಿದ್ದರೆ ಮರಣವಾರ್ತೆ ತಿಳಿದು ಬಂದ ದಿನವನ್ನೆ ಶ್ರಾದ್ಧದಿನವೆಂದು ಪರಿಗಣಿಸಬೇಕು. ಅಥವಾ ಆಶ್ವಯುಜ ಮಾರ್ಗಶೀರ್ಷ ಮಾಘಮಾಸದ ಅಮಾವಾಸ್ಯೆಗಳಲ್ಲಿ ಯಾವುದಾದರೊಂದನ್ನಾರಿಸಿಕೊಳ್ಳಬಹುದು. ವೃದ್ಧಿಶ್ರಾದ್ಧ, ಸಮಸ್ತಮಾಸಿಕ, ಅಂತಪ್ರೇತ ಶ್ರಾದ್ಧ, ಊನಮಾಸಿಕ, ನಿತ್ಯಶ್ರಾದ್ಧ, ಸೋದಕುಂಭ ಶ್ರಾದ್ಧಗಳನ್ನು ಅಧಿಕಮಾಸದಲ್ಲಿಯೂ ಮಾಡಬೇಕು. ಗ್ರಹಣ ಪುತ್ರಜನ್ಮ ಶಾಂತಿ ಕರ್ಮಗಳನ್ನೂ ಆಗ ಮಾಡಬೇಕು. ಅಸ್ವಸ್ಥತೆಯಿಂದ ಶ್ರಾದ್ಧಮಾಡಲಾಗದಿದ್ದಲ್ಲಿ ಹೆಂಡತಿ ಸೋದರ, ಶಿಷ್ಯರಲ್ಲಿ ಯಾರನ್ನಾದರೂ ನೇಮಿಸಿ ಅವರಿಂದ ಮಾಡಿಸಬೇಕು. ಅಮಾವಾಸ್ಯಾ ಮಾಸಿಕವು ಮೃತದಿನವಲ್ಲದಿದ್ದರೆ ತನಗೆ ಅವಶ್ಯವೆನಿಸಿದಾಗ ಬ್ರಾಹ್ಮಣನಿಂದ ಮಾಡಿಸಬಹುದು. ರಾಜಕಾರ್ಯ, ಸ್ವಾಮಿಕಾರ್ಯ, ವ್ಯಸನಗಳನ್ನು ಬ್ರಾಹ್ಮಣನಿಂದ ಶ್ರಾದ್ಧಮಾಡಿಸಿದರೆ ತಪ್ಪಿಲ್ಲ.

ಪ್ರಾತಃಕಾಲದಲ್ಲಿ ಶ್ರಾದ್ಧಮಾಡಬಾರದು. ನೈಮಿತ್ತಿಕ ಶ್ರಾದ್ಧಗಳಿಗೆ ಕಾಲನಿಯಮವಿಲ್ಲ. ಕುತಪಕಾಲ ಅಥವಾ ಅದಕ್ಕಿಂದ ಸ್ವಲ್ಪ ಮೊದಲಿಗೆ ಶ್ರಾದ್ಧವನ್ನಾರಂಭಿಸಬೇಕು. ಮಾಸಿಕ ಶ್ರಾದ್ಧಕ್ರಿಯೆ ಅಪರಾಹ್ಣವನ್ನು ಮುಟ್ಟುವಂತೆ ಮಾಡಬೇಕು. ಅಮವಾಸ್ಯೆಯು ಎರಡು ದಿನಗಳಲ್ಲಿ ಅಪರಾಹ್ಣವನ್ನು ವ್ಯಾಪಿಸಿದರೆ ಕ್ಷಯದಲ್ಲಿ ಮೊದಲನೆ ದಿನ, ವೃದ್ಧಿ ಅಥವಾ ಸಾಮ್ಯದಲ್ಲಿ ಎರಡನೆ ದಿನ ಶ್ರಾದ್ಧಕ್ಕೆ ಪ್ರಶಸ್ತ. ಪಾರ್ವಣ ಶ್ರಾದ್ಧಕ್ಕೆ ಕೃಷ್ಣಪಕ್ಷಯುಕ್ತವಾದ ಅಮಾವಾಸ್ಯೆಯೆಯುಕ್ತ. ಚತುರ್ದಶಿಯ ಎಂಟನೆ ಅಂಶದಲ್ಲಿ ಕ್ಷೀಣ ಚಂದ್ರನಿಲ್ಲದಿದ್ದರೆ ಮಧ್ಯಾಹ್ನ ವ್ಯಾಪಿನಿಯಾದ ಅಮಾವಾಸ್ಯೆಯೆ ಏಕೋದ್ದಿಷ್ಟಕ್ಕೆ ಯೋಗ್ಯ. ಪಾರ್ವಣ ಶ್ರಾದ್ಧದಲ್ಲಿ ಸಾಯಂಕಾಲ ವ್ಯಾಪಿನಿಯಾದ ಮೃತಾಹ ತಿಥಿಯನ್ನೆ ಪರಿಗ್ರಹಿಸಬೇಕು. ಅಮಾವಾಸ್ಯೆಯು ಅಪರಾಹ್ಣದಲ್ಲಿ ಅಲ್ಪವಿದ್ದರೂ ಸ್ವೀಕರಿಸಬೇಕು.

**ಶ್ರೀರಾಮ :-** ಮುನಿಯೆ, ಶ್ರಾದ್ಧಕ್ರಮ, ಪ್ರಾಸಂಗಿಕವಾಗಿ ಬರುವ ಧರ್ಮ ಇವುಗಳ ನಿರ್ಣಯವನ್ನೂ ಹೇಳು.

**ಶಂಭು :-** ಶ್ರಾದ್ಧದ ಹಿಂದಿನ ದಿನ ನಿಯಮದಿಂದಿದ್ದು ಒಳ್ಳೆಯ ಬ್ರಾಹ್ಮಣರನ್ನು ಆಮಂತ್ರಿಸಬೇಕು. ಆ ದಿನ ಒಪ್ಪೊತ್ತು ಊಟ, ಬ್ರಹ್ಮಚರ್ಯೆ, ದುರ್ಜನರೊಡನೆ ಸಂಭಾಷಣೆ ಮಾಡದಿರುವುದು ಈ ನಿಯಮದಲ್ಲಿರಬೇಕು. ಹಲ್ಲುಜ್ಜುವುದು, ಎಣ್ಣೆ, ನೀರು ಹಾಕಿಕೊಳ್ಳುವುದು, ಉಗುರು ಕೂದಲು ತೆಗೆಸುವುದು ಇವನ್ನೂ ಆ ದಿನ ಮುಗಿಸಿರಬೇಕು. ಮರುದಿನ ಮಾಡಕೂಡದು.

ಶ್ರಾದ್ಧದ ದಿನ ಅರುಣೋದಯ ಕಾಲದಲ್ಲಿ ದೇವತಾರ್ಚನೆ ಮಾಡಬೇಕು. ಪ್ರಾತಃ ಕರ್ಮಗಳನ್ನೆಲ್ಲ ಆಗಲೆ ಮುಗಿಸಬೇಕು. ಇದರಿಂದ ಋಣತ್ರಯ ಪರಿಹಾರ ಬ್ರಹ್ಮಪ್ರಾಪ್ತಿ. ಸೂರ್ಯೋದಯ ಕಾಲದಲ್ಲಿ ಶಿವಪೂಜೆ ಮಾಡಿದರೆ ಸೂರ್ಯನಂತೆ ತೇಜಸ್ಸು ಲಭಿಸುವುದು ಶಿವಲೋಕ ಪ್ರಾಪ್ತಿಯಾಗುವುದು. ಸೂರ್ಯೋದಯದ ಅನಂತರ ಎರಡನೆ ಗಳಿಗೆಯಲ್ಲಿ ಪೂಜೆಮಾಡಿದರೆ ವಾಯು ತೇಜಸ್ಸು, ಶಿವಲೋಕಪ್ರಾಪ್ತಿ, ಮೂರನೆ ಘಳಿಗೆಯಲ್ಲಿ ಪೂಜೆ

ಮಾಡಿದರೆ ಕುಬೇರನ ತೇಜಸ್ಸು, ಶಿವಲೋಕಪ್ರಾಪ್ತಿ. ನಾಲ್ಕರಿಂದ ಏಳನೆ ಘಳಿಗೆಯವರೆಗೆ ಪೂಜೆ ಮಾಡಿದರೆ ಮರುತ್ತುಗಳ ತೇಜಸ್ಸು ಶಿವಲೋಕ ಪ್ರಾಪ್ತಿ. ಇವು ಫಲಗಳು.

ಶ್ರೀರಾಮನು ಶಿವಪೂಜೆಯ ಬಗ್ಗೆ ಕೇಳಿದೊಡನೆ ಅಚಲನಾಗಿ ಕುಳಿತು ಮೂಗಿನ ತುದಿಯನ್ನೆ ದಿಟ್ಟಿಸುತ್ತ ಆನಂದ ಬಾಷ್ಪ ಸುರಿಸತೊಡಗಿದ. ಹೃದಯ ಕಮಲದಲ್ಲಿ ಗೋಕ್ಷೀರವರ್ಣದ ಶಿವನನ್ನು ಧರಿಸಿದ. ಶಂಭುವಿನೆದೆಯಲ್ಲಿ ರಾಮನು ಕಾಣಿಸಿಕೊಂಡ. ಎಲ್ಲ ಮುನಿಗಳೂ ನೋಡಿ ಆಶ್ಚರ್ಯಪಟ್ಟರು. ಅರ್ಧ ಯಾಮಕಾಲ ಅವರೆಲ್ಲರೂ ಸುಮ್ಮನೆ ನೋಡುತ್ತ ಕುಳಿತರು. ಬಳಿಕ ಶ್ರೀರಾಮನು ಶಿವಪೂಜೆಯ ವಿಧಾನವನ್ನು ಹೇಳೆಂದು ಶಂಭುಮುನಿಯನ್ನು ಪ್ರಾರ್ಥಿಸಿದ.

**ಶಂಭು :-** ಶಿವನನ್ನು ಚಲ ಅಥವಾ ಅಚಲ ಲಿಂಗಗಳಲ್ಲಿ ಪೂಜಿಸಬಹುದು. ಲಿಂಗ ದೊರೆಯದಿದ್ದಾಗ ಪ್ರತಿಮೆ ಮುಂತಾದವುಗಳಲ್ಲಿಯೂ ಪೂಜಿಸಬಹುದು. ಅವರವರ ಅಧಿಕಾರ ಯೋಗ್ಯತೆಗಳನ್ನನುಸರಿಸಿ ಪೂಜೆಗೆ ಫಲವಿದೆ. ಪ್ರತಿಮಾರ್ಚನೆಯನ್ನು ವಿಧಿವತ್ತಾಗಿ ಮಾಡಿದರೆ ಮಾತ್ರ ಫಲ. ಯೋಗಿಗಳು ಹೃದಯದಲ್ಲಿ, ಯಾಜ್ಞಿಕರು ಅಗ್ನಿಯಲ್ಲಿ, ಇತರರು ಲಿಂಗಗಳಲ್ಲಿ ಶಿವಪೂಜೆಮಾಡುತ್ತಾರೆ. ಚಿನ್ನ, ಬೆಳ್ಳಿ, ಬಳ್ಳಿಯನಾರು, ಮರ, ಬಟ್ಟೆ, ಅಥವಾ ಮಣ್ಣಿನ ಸಂಪುಟದಲ್ಲಿ ಮೃದುವಾದ ಬಟ್ಟೆಯಲ್ಲಿ ಇಟ್ಟುಕೊಂಡಿರುವುದು ಸಾತ್ವಿಕ ಸ್ಥಾಪನ. ತನ್ನ ಮೈಯಲ್ಲೆ ಧರಿಸಿಕೊಳ್ಳುವುದು ತಾಮಸ ಸ್ಥಾಪನ, ಅದರಲ್ಲಿಯೂ ತಲೆಯಲ್ಲಿ ಕಿರೀಟದೊಳಗೆ ಇಟ್ಟು ಧರಿಸುವುದು ಶುಭ, ಬ್ರಹ್ಮನು ಹಾಗೆ ಮಾಡುತ್ತಾನೆ. ಹಣೆಯಲ್ಲಿಯೂ ಧರಿಸಬಹುದು, ಲಕ್ಷ್ಮೀ ಹಾಗೆ ಧರಿಸುತ್ತಾಳೆ. ಕೆಲವು ಉತ್ತಮ ರಾಕ್ಷಸರು ತಮ್ಮ ಶರೀರವನ್ನು ಕೊಯ್ದು ಅದರೊಳಗೆ ಲಿಂಗಧಾರಣ ಮಾಡುತ್ತಾರೆ. ಮನೆ ಮಠವಿಲ್ಲದವರು ಅಶಕ್ತರು ತಲೆಯಲ್ಲಿ ಧರಿಸಬಹುದು ಸೊಂಟದ ಬಟ್ಟೆಯಲ್ಲಿ ಕಟ್ಟಿಕೊಳ್ಳುವುದು ಅಧಮ ಪಕ್ಷ. ಅವರೂ ಅಶುಚಿಯಾಗಿರುವಾಗ ತಲೆಯಲ್ಲಿಯೆ ಧರಿಸಬೇಕು. ಹೇಗೇ ಆಗಲಿ ಲಿಂಗಧಾರಣ ಮಾಡಿದವರಿಗೆ ಯಮಲೋಕ ಪ್ರಾಪ್ತಿ ಇಲ್ಲ.

ನೂರು ಜನ್ಮಗಳ ಪಾಪವನ್ನೂ ಭಸ್ಮಧಾರಣೆಯಿಂದ ಕಳೆಯಬಹುದು. 'ಭಸ್ಮ' ಎಂಬ ಶಬ್ದದಲ್ಲಿ 'ಭ' ಎಂದರೆ ಪಾಪಗಳ ಭರ್ತ್ಸನ, ಧಿಕ್ಕಾರ. 'ಸ್ಮ' ಎಂದರೆ ಶಿವನ ಸ್ಮರಣೆ, ಶಿವನ ಸ್ಮರಣೆಯಿಂದ ಪಾಪಗಳನ್ನು ಪರಿಹರಿಸಬಲ್ಲುದು ಭಸ್ಮ. ಹಣೆಯಲ್ಲಿ ಭಸ್ಮ ಧರಿಸಿದರೆ ಚಿತ್ರಗುಪ್ತನು ಅಲ್ಲಿ ಬರೆದು ವಿಧಿಸಿದ ಯಮ ಯಾತನೆ ಇಲ್ಲವಾಗುವುದು. ಮುಖ ಕಂಠ, ಬಾಹುಗಳಲ್ಲಿ ಭಸ್ಮಧಾರಣ ಮಾಡಿದರೆ ಆ ಅಂಗಗಳಿಂದ ಮಾಡಿದ ಪಾಪಗಳ ಪರಿಹಾರವಾಗುವುದು. ಎದೆಯಲ್ಲಿ ಧರಿಸಿದರೆ ಮನಸ್ಸಿನಿಂದ ಮಾಡಿದ ಪಾಪ, ನಾಭಿಯಲ್ಲಿ ಧರಿಸಿದರೆ ಶಿಶ್ನದಿಂದ ಮಾಡಿದ ಪಾಪ. ಪೃಷ್ಠದಲ್ಲಿ ಧರಿಸಿದರೆ ಗುದದಿಂದ ಮಾಡಿದ ಪಾಪ, ಪಾರ್ಶ್ವದಲ್ಲಿ ಧರಿಸಿದರೆ ಪರಸ್ತ್ರೀಯ ಆಲಿಂಗನದಪಾಪ ಪರಿಹಾರವಾಗುತ್ತದೆ. ಬ್ರಹ್ಮ ವಿಷ್ಣು ಮಹೇಶ್ವರರೆಂಬ ತ್ರಿಮೂರ್ತಿಗಳನ್ನೂ, ಮೂರು ಅಗ್ನಿಗಳನ್ನೂ, ಮೂರು ಲೋಕಗಳನ್ನೂ, ಕಾಪಾಡಲು ಮೂರು ಗೆರೆಗಳಲ್ಲಿ ಭಸ್ಮಧರಿಸಬೇಕು. ಮಂತ್ರಪೂತವಾದ ಭಸ್ಮವನ್ನು ಹದಿನೈದು ಕಡೆಗಳಲ್ಲಿ ಧರಿಸಬೇಕು. ಭಸ್ಮವೆ ಆಸನ ಅದುವೆ ಹಾಸಿಗೆ, ಅದರಿಂದಲೆ ಸ್ನಾನ ಹೀಗಿದ್ದರೆ ಎಲ್ಲ ಪಾಪಗಳ ಪರಿಹಾರವಾಗುವುದು. ಭೂತಬಾಧೆ, ವಿಷಬಾಧೆಗಳನ್ನು ಪರಿಹರಿಸುವುದು. ವೈಷ್ಣವನಿರಲಿ, ಅವೈಷ್ಣವನಿರಲಿ ಭಸ್ಮಸ್ನಾನ ಭಸ್ಮಧಾರಣಗಳಿಂದ ಕರ್ಮಾಧಿಕಾರ ಪಡೆಯಬಹುದು.

ಮರಣದಿನದ ತಿಂಗಳು ಯಾವುದೆಂದು ತಿಳಿದಿಯದ್ದರೆ ಮಾರ್ಗಶೀರ್ಷ ಅಥವಾ ಮಾಘಮಾಸದಲ್ಲಿ ಆ ದಿನ ಶ್ರಾದ್ಧಮಾಡಬೇಕು. ತಿಂಗಳು ತಿಳಿದಿದ್ದು ಮರಣತಿಥಿ ತಿಳಿದಿಲ್ಲವಾದರೆ ಆ ತಿಂಗಳ ಅಮವಾಸ್ಯೆಯಂದು ಶ್ರಾದ್ಧ ಮಾಡಬೇಕು. ಮರಣ ತಿಥಿ, ಮಾಸ ಇವೆರಡು ತಿಳಿದಿಲ್ಲದಿದ್ದರೆ ಮರಣವಾರ್ತೆ ತಿಳಿದು ಬಂದ ದಿನವನ್ನೆ ಶ್ರಾದ್ಧದಿನವೆಂದು ಪರಿಗಣಿಸಬೇಕು. ಅಥವಾ ಆಶ್ವಯುಜ ಮಾರ್ಗಶೀರ್ಷ ಮಾಘಮಾಸದ ಅಮಾವಾಸ್ಯೆಗಳಲ್ಲಿ ಯಾವುದಾದರೊಂದನ್ನಾರಿಸಿಕೊಳ್ಳಬಹುದು. ವೃದ್ಧಿಶ್ರಾದ್ಧ, ಸಮಸ್ತಮಾಸಿಕ, ಅಂತಪ್ರೇತ ಶ್ರಾದ್ಧ, ಊನಮಾಸಿಕ, ನಿತ್ಯಶ್ರಾದ್ಧ, ಸೋದಕುಂಭ ಶ್ರಾದ್ಧಗಳನ್ನು ಅಧಿಕಮಾಸದಲ್ಲಿಯೂ ಮಾಡಬೇಕು. ಗ್ರಹಣ ಪುತ್ರಜನ್ಮ ಶಾಂತಿ ಕರ್ಮಗಳನ್ನೂ ಆಗ ಮಾಡಬೇಕು. ಅಸ್ವಸ್ಥತೆಯಿಂದ ಶ್ರಾದ್ಧಮಾಡಲಾಗದಿದ್ದಲ್ಲಿ ಹೆಂಡತಿ ಸೋದರ, ಶಿಷ್ಯರಲ್ಲಿ ಯಾರನ್ನಾದರೂ ನೇಮಿಸಿ ಅವರಿಂದ ಮಾಡಿಸಬೇಕು. ಅಮಾವಾಸ್ಯಾ ಮಾಸಿಕವು ಮೃತದಿನವಲ್ಲದಿದ್ದರೆ ತನಗೆ ಅವಶ್ಯವೆನಿಸಿದಾಗ ಬ್ರಾಹ್ಮಣನಿಂದ ಮಾಡಿಸಬಹುದು. ರಾಜಕಾರ್ಯ, ಸ್ವಾಮಿಕಾರ್ಯ, ವ್ಯಸನಗಳನ್ನು ಬ್ರಾಹ್ಮಣನಿಂದ ಶ್ರಾದ್ಧಮಾಡಿಸಿದರೆ ತಪ್ಪಿಲ್ಲ.

ಪ್ರಾತಃಕಾಲದಲ್ಲಿ ಶ್ರಾದ್ಧಮಾಡಬಾರದು. ನೈಮಿತ್ತಿಕ ಶ್ರಾದ್ಧಗಳಿಗೆ ಕಾಲನಿಯಮವಿಲ್ಲ. ಕುತಪಕಾಲ ಅಥವಾ ಅದಕ್ಕಿಂದ ಸ್ವಲ್ಪ ಮೊದಲಿಗೆ ಶ್ರಾದ್ಧವನ್ನಾರಂಭಿಸಬೇಕು. ಮಾಸಿಕ ಶ್ರಾದ್ಧಕ್ರಿಯೆ ಅಪರಾಹ್ನವನ್ನು ಮುಟ್ಟುವಂತೆ ಮಾಡಬೇಕು. ಅಮವಾಸ್ಯೆಯು ಎರಡು ದಿನಗಳಲ್ಲಿ ಅಪರಾಹ್ನವನ್ನು ವ್ಯಾಪಿಸಿದರೆ ಕ್ಷಯದಲ್ಲಿ ಮೊದಲನೆ ದಿನ, ವೃದ್ಧಿ ಅಥವಾ ಸಾಮ್ಯದಲ್ಲಿ ಎರಡನೆ ದಿನ ಶ್ರಾದ್ಧಕ್ಕೆ ಪ್ರಶಸ್ತ. ಪಾರ್ವಣ ಶ್ರಾದ್ಧಕ್ಕೆ ಕೃಷ್ಣಪಕ್ಷಯುಕ್ತವಾದ ಅಮಾವಾಸ್ಯೆಯೆಯುಕ್ತ. ಚತುರ್ದಶಿಯ ಎಂಟನೆ ಅಂಶದಲ್ಲಿ ಕ್ಷೀಣ ಚಂದ್ರನಿಲ್ಲದಿದ್ದರೆ ಮಧ್ಯಾಹ್ನ ವ್ಯಾಪಿನಿಯಾದ ಅಮಾವಾಸ್ಯೆಯೆ ಏಕೋದ್ದಿಷ್ಟಕ್ಕೆ ಯೋಗ್ಯ. ಪಾರ್ವಣ ಶ್ರಾದ್ಧದಲ್ಲಿ ಸಾಯಂಕಾಲ ವ್ಯಾಪಿನಿಯಾದ ಮೃತಾಹ ತಿಥಿಯನ್ನೆ ಪರಿಗ್ರಹಿಸಬೇಕು. ಅಮಾವಾಸ್ಯೆಯು ಅಪರಾಹ್ಣದಲ್ಲಿ ಅಲ್ಪವಿದ್ದರೂ ಸ್ವೀಕರಿಸಬೇಕು.

**ಶ್ರೀರಾಮ :-** ಮುನಿಯೆ, ಶ್ರಾದ್ಧಕ್ರಮ, ಪ್ರಾಸಂಗಿಕವಾಗಿ ಬರುವ ಧರ್ಮ ಇವುಗಳ ನಿರ್ಣಯವನ್ನೂ ಹೇಳು.

**ಶಂಭು :-** ಶ್ರಾದ್ಧದ ಹಿಂದಿನ ದಿನ ನಿಯಮದಿಂದಿದ್ದು ಒಳ್ಳೆಯ ಬ್ರಾಹ್ಮಣರನ್ನು ಆಮಂತ್ರಿಸಬೇಕು. ಆ ದಿನ ಒಪ್ಪೊತ್ತು ಊಟ, ಬ್ರಹ್ಮಚರ್ಯೆ, ದುರ್ಜನರೊಡನೆ ಸಂಭಾಷಣೆ ಮಾಡದಿರುವುದು ಈ ನಿಯಮದಲ್ಲಿರಬೇಕು. ಹಲ್ಲುಜ್ಜುವುದು, ಎಣ್ಣೆ, ನೀರು ಹಾಕಿಕೊಳ್ಳುವುದು, ಉಗುರು ಕೂದಲು ತೆಗೆಸುವುದು ಇವನ್ನೂ ಆ ದಿನ ಮುಗಿಸಿರಬೇಕು. ಮರುದಿನ ಮಾಡಕೂಡದು.

ಶ್ರಾದ್ಧದ ದಿನ ಅರುಣೋದಯ ಕಾಲದಲ್ಲಿ ದೇವತಾರ್ಚನೆ ಮಾಡಬೇಕು. ಪ್ರಾತಃ ಕರ್ಮಗಳನ್ನೆಲ್ಲ ಆಗಲೆ ಮುಗಿಸಬೇಕು. ಇದರಿಂದ ಋಣತ್ರಯ ಪರಿಹಾರ ಬ್ರಹ್ಮಪ್ರಾಪ್ತಿ. ಸೂರ್ಯೋದಯ ಕಾಲದಲ್ಲಿ ಶಿವಪೂಜೆ ಮಾಡಿದರೆ ಸೂರ್ಯನಂತೆ ತೇಜಸ್ಸು ಲಭಿಸುವುದು ಶಿವಲೋಕ ಪ್ರಾಪ್ತಿಯಾಗುವುದು. ಸೂರ್ಯೋದಯದ ಅನಂತರ ಎರಡನೆ ಗಳಿಗೆಯಲ್ಲಿ ಪೂಜೆಮಾಡಿದರೆ ವಾಯು ತೇಜಸ್ಸು, ಶಿವಲೋಕಪ್ರಾಪ್ತಿ, ಮೂರನೆ ಘಳಿಗೆಯಲ್ಲಿ ಪೂಜೆ

ಮಾಡಿದರೆ ಕುಬೇರನ ತೇಜಸ್ಸು, ಶಿವಲೋಕಪ್ರಾಪ್ತಿ. ನಾಲ್ಕರಿಂದ ಏಳನೆ ಘಳಿಗೆಯವರೆಗೆ ಪೂಜೆ ಮಾಡಿದರೆ ಮರುತ್ತುಗಳ ತೇಜಸ್ಸು ಶಿವಲೋಕ ಪ್ರಾಪ್ತಿ. ಇವು ಫಲಗಳು.

ಶ್ರೀರಾಮನು ಶಿವಪೂಜೆಯ ಬಗ್ಗೆ ಕೇಳಿದೊಡನೆ ಅಚಲನಾಗಿ ಕುಳಿತು ಮೂಗಿನ ತುದಿಯನ್ನೆ ದಿಟ್ಟಿಸುತ್ತ ಆನಂದ ಬಾಷ್ಪ ಸುರಿಸತೊಡಗಿದ. ಹೃದಯ ಕಮಲದಲ್ಲಿ ಗೋಕ್ಷೀರವರ್ಣದ ಶಿವನನ್ನು ಧರಿಸಿದ. ಶಂಭುವಿನೆದೆಯಲ್ಲಿ ರಾಮನು ಕಾಣಿಸಿಕೊಂಡ. ಎಲ್ಲ ಮುನಿಗಳೂ ನೋಡಿ ಆಶ್ಚರ್ಯಪಟ್ಟರು. ಅರ್ಧ ಯಾಮಕಾಲ ಅವರೆಲ್ಲರೂ ಸುಮ್ಮನೆ ನೋಡುತ್ತ ಕುಳಿತರು. ಬಳಿಕ ಶ್ರೀರಾಮನು ಶಿವಪೂಜೆಯ ವಿಧಾನವನ್ನು ಹೇಳೆಂದು ಶಂಭುಮುನಿಯನ್ನು ಪ್ರಾರ್ಥಿಸಿದ.

**ಶಂಭು :-** ಶಿವನನ್ನು ಚಲ ಅಥವಾ ಅಚಲ ಲಿಂಗಗಳಲ್ಲಿ ಪೂಜಿಸಬಹುದು. ಲಿಂಗ ದೊರೆಯದಿದ್ದಾಗ ಪ್ರತಿಮೆ ಮುಂತಾದವುಗಳಲ್ಲಿಯೂ ಪೂಜಿಸಬಹುದು. ಅವರವರ ಅಧಿಕಾರ ಯೋಗ್ಯತೆಗಳನ್ನನುಸರಿಸಿ ಪೂಜೆಗೆ ಫಲವಿದೆ. ಪ್ರತಿಮಾರ್ಚನೆಯನ್ನು ವಿಧಿವತ್ತಾಗಿ ಮಾಡಿದರೆ ಮಾತ್ರ ಫಲ. ಯೋಗಿಗಳು ಹೃದಯದಲ್ಲಿ, ಯಾಜ್ಞಿಕರು ಅಗ್ನಿಯಲ್ಲಿ, ಇತರರು ಲಿಂಗಗಳಲ್ಲಿ ಶಿವಪೂಜೆಮಾಡುತ್ತಾರೆ. ಚಿನ್ನ, ಬೆಳ್ಳಿ, ಬಳ್ಳಿಯನಾರು, ಮರ, ಬಟ್ಟೆ, ಅಥವಾ ಮಣ್ಣಿನ ಸಂಪುಟದಲ್ಲಿ ಮೃದುವಾದ ಬಟ್ಟೆಯಲ್ಲಿ ಇಟ್ಟುಕೊಂಡಿರುವುದು ಸಾತ್ವಿಕ ಸ್ಥಾಪನ. ತನ್ನ ಮೈಯಲ್ಲೆ ಧರಿಸಿಕೊಳ್ಳುವುದು ತಾಮಸ ಸ್ಥಾಪನ, ಅದರಲ್ಲಿಯೂ ತಲೆಯಲ್ಲಿ ಕಿರೀಟದೊಳಗೆ ಇಟ್ಟು ಧರಿಸುವುದು ಶುಭ, ಬ್ರಹ್ಮನು ಹಾಗೆ ಮಾಡುತ್ತಾನೆ. ಹಣೆಯಲ್ಲಿಯೂ ಧರಿಸಬಹುದು, ಲಕ್ಷ್ಮೀ ಹಾಗೆ ಧರಿಸುತ್ತಾಳೆ. ಕೆಲವು ಉತ್ತಮ ರಾಕ್ಷಸರು ತಮ್ಮ ಶರೀರವನ್ನು ಕೊಯ್ದು ಅದರೊಳಗೆ ಲಿಂಗಧಾರಣ ಮಾಡುತ್ತಾರೆ. ಮನೆ ಮಠವಿಲ್ಲದವರು ಅಶಕ್ತರು ತಲೆಯಲ್ಲಿ ಧರಿಸಬಹುದು ಸೊಂಟದ ಬಟ್ಟೆಯಲ್ಲಿ ಕಟ್ಟಿಕೊಳ್ಳುವುದು ಅಧಮ ಪಕ್ಷ. ಅವರೂ ಅಶುಚಿಯಾಗಿರುವಾಗ ತಲೆಯಲ್ಲಿಯೆ ಧರಿಸಬೇಕು. ಹೇಗೇ ಆಗಲಿ ಲಿಂಗಧಾರಣ ಮಾಡಿದವರಿಗೆ ಯಮಲೋಕ ಪ್ರಾಪ್ತಿ ಇಲ್ಲ.

ನೂರು ಜನ್ಮಗಳ ಪಾಪವನ್ನೂ ಭಸ್ಮಧಾರಣೆಯಿಂದ ಕಳೆಯಬಹುದು. 'ಭಸ್ಮ' ಎಂಬ ಶಬ್ದದಲ್ಲಿ 'ಭ' ಎಂದರೆ ಪಾಪಗಳ ಭರ್ತ್ಸನ, ಧಿಕ್ಕಾರ. 'ಸ್ಮ' ಎಂದರೆ ಶಿವನ ಸ್ಮರಣೆ, ಶಿವನ ಸ್ಮರಣೆಯಿಂದ ಪಾಪಗಳನ್ನು ಪರಿಹರಿಸಬಲ್ಲುದು ಭಸ್ಮ. ಹಣೆಯಲ್ಲಿ ಭಸ್ಮ ಧರಿಸಿದರೆ ಚಿತ್ರಗುಪ್ತನು ಅಲ್ಲಿ ಬರೆದು ವಿಧಿಸಿದ ಯಮ ಯಾತನೆ ಇಲ್ಲವಾಗುವುದು. ಮುಖ ಕಂಠ, ಬಾಹುಗಳಲ್ಲಿ ಭಸ್ಮಧಾರಣ ಮಾಡಿದರೆ ಆ ಅಂಗಗಳಿಂದ ಮಾಡಿದ ಪಾಪಗಳ ಪರಿಹಾರವಾಗುವುದು. ಎದೆಯಲ್ಲಿ ಧರಿಸಿದರೆ ಮನಸ್ಸಿನಿಂದ ಮಾಡಿದ ಪಾಪ, ನಾಭಿಯಲ್ಲಿ ಧರಿಸಿದರೆ ಶಿಶ್ನದಿಂದ ಮಾಡಿದ ಪಾಪ. ಪೃಷ್ಠದಲ್ಲಿ ಧರಿಸಿದರೆ ಗುದದಿಂದ ಮಾಡಿದ ಪಾಪ, ಪಾರ್ಶ್ವದಲ್ಲಿ ಧರಿಸಿದರೆ ಪರಸ್ತ್ರೀಯ ಆಲಿಂಗನದಪಾಪ ಪರಿಹಾರವಾಗುತ್ತದೆ. ಬ್ರಹ್ಮ ವಿಷ್ಣು ಮಹೇಶ್ವರರೆಂಬ ತ್ರಿಮೂರ್ತಿಗಳನ್ನೂ, ಮೂರು ಅಗ್ನಿಗಳನ್ನೂ, ಮೂರು ಲೋಕಗಳನ್ನೂ, ಕಾಪಾಡಲು ಮೂರು ಗೆರೆಗಳಲ್ಲಿ ಭಸ್ಮಧರಿಸಬೇಕು. ಮಂತ್ರಪೂತವಾದ ಭಸ್ಮವನ್ನು ಹದಿನೈದು ಕಡೆಗಳಲ್ಲಿ ಧರಿಸಬೇಕು. ಭಸ್ಮವೆ ಆಸನ ಅದುವೆ ಹಾಸಿಗೆ, ಆದರಿಂದಲೆ ಸ್ನಾನ ಹೀಗಿದ್ದರೆ ಎಲ್ಲ ಪಾಪಗಳ ಪರಿಹಾರವಾಗುವುದು. ಭೂತಬಾಧೆ, ವಿಷಬಾಧೆಗಳನ್ನು ಪರಿಹರಿಸುವುದು. ವೈಷ್ಣವನಿರಲಿ, ಅವೈಷ್ಣವನಿರಲಿ ಭಸ್ಮಸ್ನಾನ ಭಸ್ಮಧಾರಣಗಳಿಂದ ಕರ್ಮಾಧಿಕಾರ ಪಡೆಯಬಹುದು.

ಭಸ್ಮದ ಸ್ಪರ್ಶದಿಂದ ಆರ್ಯುವೃದ್ಧಿ, ಪಾಪನಾಶ, ಶಿವಲೋಕ ಪ್ರಾಪ್ತಿಗಳುಂಟಾಗುವುವು ಎಂಬ ವಿಷಯದಲ್ಲಿ ಒಂದು ಐತಿಹ್ಯವಿದೆ. ವಶಿಷ್ಠ ಗೋತ್ರದಲ್ಲಿ ಧನಂಜಯನೆಂಬ ಬ್ರಾಹ್ಮಣನೊಬ್ಬನಿದ್ದ. ಅವನಿಗೆ ನೂರು ಮಂದಿ ಮಡದಿಯರು. ಅವರಲ್ಲಿ ಅಷ್ಟೇ ಸಂಖ್ಯೆಯಲ್ಲಿ ಮಕ್ಕಳು. ಶಾಲಾಕೆಯಲ್ಲಿ ಜನಿಸಿದ ಕರುಣನೆಂಬ ಮುನಿ ಅವರಲೊಬ್ಬನಾಗಿದ್ದ. ಧನಂಜಯನು ಮಕ್ಕಳಿಗೆಲ್ಲರಿಗೂ ತನ್ನ ಸಂಪತ್ತನ್ನು ವಿಭಾಗ ಮಾಡಿಕೊಟ್ಟಿದ್ದರೂ, ಅವರೆಲ್ಲರೂ ಪರಸ್ಪರ ದ್ವೇಷ ಮಾಡುತ್ತಿದ್ದರು. ಒಮ್ಮೆ ಕರುಣ ಮುನಿ ನೃಸಿಂಹ ದೇವಾಲಯಕ್ಕೆ ಹೋಗಿದ್ದಾಗ ಒಬ್ಬ ಭಕ್ತನು ಒಳ್ಳೆಯ ಒಂದು ನಿಂಬೆಹಣ್ಣನ್ನು ತಂದಿದ್ದ. ಆದರ ರೂಪವಾಸನೆಗಳನ್ನು ಕಂಡು ಕರುಣ ಮುನಿ ಆಶ್ಚರ್ಯದಿಂದ ಮೂಸಿನೋಡಿದ, ಮುನಿಗಳು ಕೋಪಗೊಂಡು ಶಪಿಸಿದರು. ನೂರುವರ್ಷಗಳ ಕಾಲ ನೊಣವಾಗಿರು, ಮುಂದೆ ದಧೀಚ ಮುನಿಯಿಂದ ಈ ಶಾಪದ ನಿವೃತ್ತಿಯಾಗಲಿ.

ಕರುಣಮುನಿ ಬಳಿಯಲ್ಲಿದ್ದ ಮಡದಿ ಶುಚಿಸ್ಮಿತೆ ಕಡೆಗೆ ತಿರುಗಿ 'ನಾನು ನೊಣವಾಗುತ್ತಿದ್ದೇನೆ ಮನೆಯಲ್ಲಿಟ್ಟುಕೊಂಡು ಕಾಪಾಡು.' ಎನ್ನುತ್ತ ನೊಣವಾದ. ಅವನ ಸೋದರರು ದ್ವೇಷದಿಂದ ಆ ನೊಣವನ್ನು ಎಣ್ಣೆಯಲ್ಲಿ ಹಾಕಿ ಕೊಂದರು. ಆ ಶವವನ್ನು ಶುಚಿಸ್ಮಿತೆ ಎತ್ತಿಕೊಂಡು ಆರುಂಧತಿಯ ಬಳಿಯಲ್ಲಿ ಮೊರೆಯಿಟ್ಟಳು. ಅರುಂಧತಿಯು ಅಗ್ನಿಹೋತ್ರದ ಭಸ್ಮವನ್ನು ಮೃತ್ಯುಂಜಯ ಮಂತ್ರದಿಂದ ಅಭಿಮಂತ್ರಿಸಿ ನೊಣದ ಶವದ ಮೇಲೆ ಎರಚಿದಳು. ಆಗ ನೊಣವು ಬದುಕಿಕೊಂಡಿತು. ನೂರುವರ್ಷ ಬಾಳಿತು. ಒಂದುದಿನ ಒಬ್ಬ ದಾಯಾದಿ ಅದನ್ನು ತಿರುಗಿ ಕೊಂದ. ಈಗ ದಧೀಚನ ಮೊರೆ ಹೊಕ್ಕಳು. ಆತನೆಂದ, 'ಅಮ್ಮ ಜಮದಗ್ನಿ ಕಶ್ಯಪರಂಥ ಋಷಿಗಳನ್ನೂ ದೇವತೆಗಳನ್ನೂ ನನ್ನನ್ನೂ ಹಿಂದೆ ಭಸ್ಮವು ಬದುಕಿಸಿತ್ತು. ಅದರ ಪ್ರಭಾವದಿಂದಲೆ ಈ ನೊಣವನ್ನು ಬದುಕಿಸುವೆನು.' ಹೀಗೆ ಹೇಳಿ ಶಿವನನ್ನು ಸ್ತುತಿಸಿ ಭಸ್ಮವನ್ನಭಿಮಂತ್ರಿಸಿ ಅದರಿಂದ ಸತ್ತನೊಣವನ್ನು ಬದುಕಿಸಿದ. ಅವನ ಕರಸ್ಪರ್ಶದಿಂದ ಕರುಣಮುನಿಯ ಶಾಪ ಕಳೆಯಿತು. ದಂಪತಿಗಳು ಒಂದಾಗಿ ಸೇರಿ ದಧೀಚ ಮುನಿಯನ್ನು ತಮ್ಮಾಶ್ರಮದಲ್ಲಿ ಭೋಜನಕ್ಕಾಹ್ವಾನಿಸಿದರು. ಮುನಿಯ ಅವರಾಶ್ರಮಕ್ಕೆ ಹೋಗಿ ಉಂಡು ಸುಖಾಗಮನದಲ್ಲಿ ಕುಳಿತಿದ್ದಾಗ ಅವನ ಶಿಷ್ಯ ಕೋಟಿಯೂ ದೇವತೆಗಳೂ ಅವನನ್ನು ನಮಿಸಿ ಬಳಿಯಲ್ಲಿ ಕುಳಿತರು. ದೇವತೆಗಳೆಂದರು.

**ದೇವತೆಗಳು** :- ನಾವು ಹಿಂದೆ ಗೌತಮರ ಪತ್ನಿಯನ್ನು ಕಂಡು ಮೋಹಿಸಿದೆವು. ಬಲಾತ್ಕರಿಸಿದೆವು. ಒಡನೆ ನಮ್ಮ ಜ್ಞಾನ ಮರೆಯಾಯಿತು. ದೂರ್ವಾಸ ಮುನಿಯನ್ನು ಮೊರೆಹೊಕ್ಕಾಗ ಅವರಿಂದ ಸಾಕ್ಷಾತ್ ಶಿವನ ಶತರುದ್ರೀಯ ಮಂತ್ರದಿಂದ ಅಭಿಮಂತ್ರಿಸಿಕೊಟ್ಟ ಭಸ್ಮ ನನ್ನಲ್ಲಿದೆ. ಬ್ರಹ್ಮಹತ್ಯಾದಿ ಪಾತಕಗಳನ್ನು ಕಳೆಯುತ್ತದೆ. ಅದರಿಂದ ನಿಮ್ಮ ಪಾಪವನ್ನೂ ದೂರಮಾಡುವೆನು. ಹೀಗೆ ಹೇಳಿ ಭಸ್ಮವನ್ನಿತ್ತ. ಶತರುದ್ರೀಯ ಮಂತ್ರದಿಂದ ಅದನ್ನು ಧರಿಸಿದೊಡನೆ ನಮ್ಮ ಹಿಂದಿನ ಜ್ಞಾನ ತಿರುಗಿ ಬಂದಿತು. ಇದೊಂದು ಆಶ್ಚರ್ಯ. ಭಸ್ಮದ ಸಾಮರ್ಥ್ಯವನ್ನಿನ್ನೂ ತಿಳಿಯಬಯಸುತ್ತೇವೆ.

**ಧಧೀಚ** :- ಶಿವನ ಭಸ್ಮದ ಶಕ್ತಿಯನ್ನು ಸಂಕ್ಷೇಪವಾಗಿ ತಿಳಿಸುತ್ತೇನೆ ಕೇಳಿ. ಹರಿಹರರ ಒಂದು ವೃತ್ತಾಂತವನ್ನು ಈ ವಿಷಯದಲ್ಲಿ ಉದಾಹರಿಸುತ್ತೇನೆ. ಹಿಂದೆ ಪ್ರಳಯಸಮುದ್ರದಲ್ಲಿ ಮಹಾವಿಷ್ಣು ಮಲಗಿ ತನ್ನೆರಡುಪಾರ್ಶ್ವಗಳಲ್ಲಿ ಇನ್ನೂರು

ಬ್ರಹ್ಮಾಂಡಗಳನ್ನೂ ಕಾಲುಗಳಲ್ಲಿ ಇಪ್ಪತ್ತು ತಲೆಯಲ್ಲಿ ಇಪ್ಪತ್ತು ಬ್ರಹ್ಮಾಂಡಗಳನ್ನೂ ಧರಿಸಿದ. ಈ ಬ್ರಹ್ಮಾಂಡಗಳೆಲ್ಲ ಹರಿಗೆ ಮೂಗಿನಮೇಲೆ ಮೂಗುತಿಯಂತೆ ಏನೂ ಮಹತ್ವವಿಲ್ಲದುದು. ಬಳಿಕ ಹರಿ ಸೃಷ್ಟಿ ಮಾಡಲು ಬಯಸಿದ. ಆದರೆ ಏನೂ ತಿಳಿಯದಾಯಿತು. ದುಃಖದಿಂದ ಗಟ್ಟಿಯಾಗಿ ಅಳತೊಡಗಿದ. ಆಗೊಂದು ಲೋಕವಿಲಕ್ಷಣವಾದ ಪ್ರಕಾಶ ಮೈದೋರಿತು. ಹರಿಯು ಅದನ್ನು ಒಮ್ಮೆ ನೋಡಿ ಭಯದಿಂದ ಕಣ್ಣುಮುಚ್ಚಿದ. ಗೋಕ್ಷೀರವರ್ಣದ ಶರೀರ. ಕೋಟಿಬ್ರಹ್ಮಾಂಡಗಳ ಮಾಲೆಗಳನ್ನು ಎರಡು ಕೈಯಲ್ಲಿ ಮತ್ತು ಅಂಥ ಇನ್ನೊಂದು ಮಾಲೆಯನ್ನು ಕೊರಳಲ್ಲಿ ಧರಿಸಿ ಒಂದು ಬ್ರಹ್ಮಾಂಡವನ್ನು ಎರಡು ಕೈಗಳಲ್ಲಿ ಒಂದರಿಂದ ಇನ್ನೊಂದಕ್ಕೆ ಎಸೆಯುತ್ತ ನಿಂತಿದ್ದ, ಪರಶಿವ. ಹರಿಯು ಅವನನ್ನು ನೋಡಲಾರದೆ ದರ್ಶನಕ್ಕಾಗಿ ಬಯಸಿ ಸ್ತೋತ್ರಮಾಡಿದ.

**ವಿಷ್ಣು :-** ದೇವ ದೇವೇಶ, ನಿನಗೆ ನಮಸ್ಕಾರ. ನಿನ್ನನ್ನು ನಾನು ತಿಳಿಯಲಾರೆ. ನೀನು ಮಾತ್ರ ನನ್ನನ್ನು ತಿಳಿದಿರುವೆ. ನಿನ್ನ ತೇಜಸ್ಸನ್ನು ನೋಡಲಾರೆ. ಶರಣು ಹೊಂದಿದ್ದೇನೆ. ವಿಜ್ಞಾನವೆಂಬ ಕೆಂಪುಬಟ್ಟೆ ಧರಿಸಿ ವೇದಗಳೆಂಬ ಆಭರಣಗಳನ್ನು ತೊಟ್ಟ ಪ್ರಸನ್ನಮುಖದ ನಿನ್ನ ರೂಪನ್ನು ನೋಡುವಂತೆ ಶಕ್ತಿನೀಡು.

ಶಿವನು ಆಗ ದಿವ್ಯಚಕ್ಷುಸ್ಸನ್ನು ನೀಡಿದ. ಆದರಿಂದ ಶಿವನನ್ನು ನೋಡಿ ನೀನಾರು ? ಎಂದು ನಾನರಿಯೆ, ಕೇವಲ ನಮಸ್ಕಾರ ಮಾಡಬಲ್ಲೆ. ತಿಳಿಯುವ ಶಕ್ತಿ ನನ್ನಲ್ಲಿಲ್ಲ, ಎಂದ.

**ಸದಾಶಿವ :-** ಆ ಶಕ್ತಿಯನ್ನೂ ಕೊಡುವೆನು. ಆದರೆ ನೀನು ಮೊದಲಿಗೆ ನೀರಲ್ಲಿ ಸ್ನಾನಮಾಡಿ ಭಸ್ಮಸ್ನಾನವನ್ನೂ ಮಾಡು.

**ವಿಷ್ಣು :-** ನಾನು ಸ್ನಾನಮಾಡುವಷ್ಟು ನೀರು ಎಲ್ಲಿಯೂ ಇಲ್ಲ. ಕುಳಿತರೆ ತೊಡೆಮುಳುಗವಷ್ಟು ಮಾತ್ರ ನೀರಿದೆ. ಹೇಗೆ ಸ್ನಾನ ಮಾಡಲಿ ?

ಇದನ್ನು ಕೇಳಿ ಸದಾಶಿವನು ಹಣೆಗಣ್ಣಿನಿಂದ ವಿಷ್ಣುವನ್ನು ಈಕ್ಷಿಸಿದ. ಒಡನೆ ಅವನ ಶರೀರವು ಸೂಕ್ಷ್ಮ ಅವಯವ ರೂಪದಿಂದ ವಿಲೀನವಾಯಿತು. ಎಡಗಣ್ಣಿನಿಂದ ನೋಡಿದ. ಸೂಕ್ಷ್ಮದೇಹ ಉತ್ಪನ್ನವಾಯಿತು.

**ಸದಾಶಿವ :-** ಹರಿಯೆ, ಈಗ ಸ್ನಾನಮಾಡಬಹುದಲ್ಲವೆ? ನೀರಿನ ದೊಡ್ಡ ಮಡುವೆ ಇದೆ!

**ಹರಿ:-** ಈ ಮಡುವಿನಲ್ಲಿ ಹೇಗೆ ಇಳಿಯಲಿ ? ಇಳಿಯುವ ಮಾರ್ಗವನ್ನು ತೋರಿಸು.

**ಸದಾಶಿವ :-** ಮೊದಲಿಗೆ ಈ ಕೋಟಿಯೋಜನ ಆಳದ ಈ ನೀರು ನೀನು ಕುಳಿತರೆ ತೊಡೆಮುಳುಗುವಷ್ಟಾಗಿತ್ತು. ಈಗ ನಿಂತರೂ ನೆಲ ಸಿಗುತ್ತಿಲ್ಲವೆ ? ವೇದವಾಕ್ಯ ಒಂದನ್ನು ಮೆಟ್ಟಲಾಗಿ ಮಾಡಿಕೊಂಡು ಇಳಿ.

**ಹರಿ :-** ವೇದವಾಕ್ಯವೆಂದರೆ ಅದು ಶಬ್ದ. ಅಮೂರ್ತವಾದ ವಸ್ತು. ಅದನ್ನು ಹೇಗೆ ತುಳಿಯಲಿ ?

**ಸದಾಶಿವ :-** ಹಿಡಿದುಕೊಳ್ಳುವುದು ಹತ್ತುವುದು ಇಳಿಯುವುದು ಇವೆಲ್ಲವೂ ಪುರುಷನ ಸಾಮರ್ಥ್ಯವನ್ನವಲಂಬಿಸುತ್ತದೆ. ವಸ್ತುವಿನ ಸಾಮರ್ಥ್ಯವನ್ನಲ್ಲ. ಆದ್ದರಿಂದ ಪ್ರಯತ್ನಿಸಿ ನೋಡು.

ವಿಷ್ಣುವು ವೇದವೆಂಬ ಮೆಟ್ಟಿಲಲ್ಲಿ ನಿಂತು ಸ್ನಾನಮಾಡಿದ. 'ಸ್ನಾನವಾಯಿತು ಇನ್ನೇನು?' ಎಂದ. 'ಜ್ಞಾನಬಂದಿತೆ ?' 'ಇಲ್ಲ' 'ಭಸ್ಮ ಸ್ನಾನಮಾಡು' ಶಿವನು ತನ್ನೆದೆಯ ಭಸ್ಮವನ್ನು ಉಗುರಿನಿಂದ ಕೆರೆದು ಪ್ರಣವ ಸಹಿತ ಗಾಯತ್ರಿಯಿಂದ ಅಭಿಮಂತ್ರಿಸಿ ಪಂಚಾಕ್ಷರ ಮಂತ್ರದಿಂದ ಹರಿಯ ಮೈಗೆ ಲೇಪಿಸಿದ. ಶಾಂತ ದೃಷ್ಟಿಯಿಂದ ನೋಡಿ 'ಬದುಕು' ಎಂದ. 'ಧ್ಯಾನಮಾಡು ಏನಾದರೂ ಕಾಣಿಸುವದೇ, ನೋಡು' ಎಂದ. ಹೃದಯದಲ್ಲಿ ಹರಿಗೆ ದೀರ್ಘಾಕಾರದ ಹೊಳೆವ 'ದೀಪ ಕಾಣಿಸುತ್ತಿದೆ'. ಹಾಗಾದರೆ ನಿನಗಿನ್ನೂ ಜ್ಞಾನಪಕ್ವವಾಗಿಲ್ಲ. ಭಸ್ಮವನ್ನು ತಿನ್ನು. ಆಗ ಪೂರ್ವಜ್ಞಾನ ಲಭಿಸುವುದು.

ವಿಷ್ಣು ಭಸ್ಮವನ್ನು ತಿಂದು ಮಾಗಿದ ತೊಂಡೆಹಣ್ಣಿನಂಥ ತನ್ನ ಶರೀರವರ್ಣವನ್ನು ಕಳೆದುಕೊಂಡು ಶುದ್ಧವಾದ ಮುತ್ತಿನಂತೆ ಹೊಳೆಯತೊಡಗಿದ. ಧ್ಯಾನದಲ್ಲಿ ದೀಪದ ನಡುವೆ ಶುದ್ಧ ಸ್ಫಟಿಕದಂತೆ ಹೊಳೆವ ಐದು ವರ್ಷದ ಮಗುವಿನ ಶರೀರ ಎರಡು ಕೈಗಳಲ್ಲಿ ವರ ಅಭಯ ಮುದ್ರೆಧರಿಸಿ ವಿಜ್ಞಾನವೆಂಬ ಕೆಂಪು ಬಟ್ಟೆ ಉಟ್ಟು ವೇದವೆಂಬ ಆಭರಣ ತೊಟ್ಟು ನಿಂತಿರುವುದು ಕಾಣಿಸಿತು. ಧನ್ಯನಾದೆನೆಂದು ಕೊಂಡನಾತ.

**ಸದಾಶಿವ :-** ನಿನ್ನ ಹೃದಯದಲ್ಲೇನಾದರೂ ಕಾಣಿಸಿತೆ ?

**ಹರಿ :-** ಶಾಂತ ಆಕೃತಿಯ ಪುರುಷನೊಬ್ಬ ಕಾಣಿಸುತ್ತಿದ್ದಾನೆ. ನಿನ್ನ ಭಸ್ಮದ ಶಕ್ತಿಯೆ ನನಗೆ ಅಚಿಂತ್ಯವೆನಿಸಿದೆ. ನಿನ್ನ ಶಕ್ತಿಯನ್ನು ಹೇಗೆ ತಿಳಿಯಲಿ ? ನಿನಗೆ ನಮಸ್ಕಾರ. ನಿನ್ನನ್ನೆ ಶರಣಾದೆ.

**ಸದಾಶಿವ :-** ನಿನಗೇನು ವರಬೇಕು ಕೇಳು.

**ಹರಿ :-** ನಿನ್ನ ಪಾದಭಕ್ತಿಯನ್ನು ನೀಡು.

**ಸದಾಶಿವ :-** ಭಸ್ಮ ಧರಿಸುತ್ತಿರು. ನನ್ನ ಭಕ್ತನಾಗುವಿ.

**ದಧೀಚ :-** ಹೀಗಿದೆ ಭಸ್ಮದ ಪ್ರಭಾವ. ಆದ್ದರಿಂದ ನೀವೆಲ್ಲರೂ ಭಸ್ಮವನ್ನು ಧರಿಸಿ.

ದೇವತೆಗಳು ಆಶ್ಚರ್ಯದಿಂದ ಕಣ್ಣರಳಿಸಿ 'ಆಗಲಿ' ಎಂದರು. ಈ ಕಥೆಯನ್ನು ಕೇಳಿದರೆ ಎಲ್ಲ ಪಾಪಪರಿಹಾರ. ಶಿವಲೋಕ ಪ್ರಾಪ್ತಿ.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಪಾತಾಳಖಂಡದಲ್ಲಿ ಶಿವರಾಘವ ಸಂವಾದದಲ್ಲಿ ಭಸ್ಮಮಾಹಾತ್ಮ್ಯವೆಂಬ ನಲವತ್ತನಾಲ್ಕನೆ ಅಧ್ಯಾಯ ಮುಗಿದುದು*

—o—

**ಶುಚಿಸ್ಮಿತೋವಾಚ**

**ಶುಚಿಸ್ಮಿತಾ** :- ಭಸ್ಮಭಕ್ಷಣದಿಂದ ಆಯುಷ್ಯ ಹೆಚ್ಚುವುದನ್ನು ನಾನು ಪತಿಯ ವಿಷಯದಲ್ಲಿ ಪ್ರತ್ಯಕ್ಷವಾಗಿ ಕಂಡುಕೊಂಡೆ. ಅದರಿಂದ ಪರಲೋಕದಲ್ಲಿಯೂ ಸುಖಿಸಿಗುತ್ತದೆ ಎಂಬುದು ಹೇಗೆಂದು ಬಣ್ಣಿಸು.

**ದಧೀಚ** :- ಈ ವಿಷಯದಲ್ಲಿಯೂ ಒಂದು ಕಥೆಯನ್ನು ಹೇಳುತ್ತೇನೆ, ಕೇಳು ಮಿಥಿಲೆಯಲ್ಲಿ ಹಿಂದೆ ಒಂದು ನಾಯಿ ಹಸಿದು ಅಲೆಯುತ್ತಿತ್ತು. ಹಿಂದಿನ ಜನ್ಮದಲ್ಲಿ ಅದು ಬ್ರಾಹ್ಮಣನಾಗಿತ್ತು. ಆ ಬ್ರಾಹ್ಮಣನು ತಾರುಣ್ಯದಲ್ಲಿ ಒಮ್ಮೆ ಗಂಗೆಯಲ್ಲಿ ಮಿಂದು ದೇವ ಋಷಿ ಪಿತೃ ತರ್ಪಣಮಾಡಿ ಪ್ರಾತ್ತಲಿಕಾ ಪುರದಲ್ಲಿ ಒಂದು ಮನೆಯಲ್ಲಿ ತಂಗಿದ್ದ. ಅಲ್ಲಿ ಓರ್ವ ಕ್ಷತ್ರಿಯ ಯುವತಿ ಇದ್ದಳು. ಆಕೆ ವಿಧವೆ. ರಾಜ್ಯವೂ ಕಳೆದುಹೋಗಿತ್ತು. ಆರು ಕೋಟಿ ಚಿನ್ನದ ನಾಣ್ಯಗಳನ್ನು ಹಿಡಿದುಕೊಂಡು ಬಂದಿದ್ದಳು. ಬ್ರಾಹ್ಮಣನನ್ನು ಕಂಡು ಮೋಹಿಸಿದಳು. ಅವನು ರಾತ್ರಿ ಉಂಡು ಮಲಗಿದ್ದ. ಆಗತಾನೆ ಚಂದ್ರೋದಯವಾಗಿತ್ತು. ಬೆಳದಿಂಗಳು ನಗುವಿನಂತೆ ಎಲ್ಲ ದಿಕ್ಕುಗಳಲ್ಲಿಯೂ ಚೆಲ್ಲಿತ್ತು. ಸುಂದರವಾದ ಆ ಬ್ರಾಹ್ಮಣನ ಬಳಿಗೆ ಆಕೆ ಬಂದು ಕೇಳಿದಳು.

**ಕ್ಷತ್ರಿಯೆ** :- ಬ್ರಾಹ್ಮಣನೆ, ನೀನೆಲ್ಲಿಂದ ಬಂದೆ ? ಎಲ್ಲಿಗೆ ಹೋಗುತ್ತಿದ್ದೆ.

**ಬ್ರಾಹ್ಮಣ** :- ಆಕಾಲದಲ್ಲಿ ಹೀಗೆ ಪರುಪುರುಷನೊಂದಿಗೆ ಸಂಭಾಷಣೆ ಮಾಡಿದರೆ ನೋಡಿದವರು ಸಂದೇಹಪಟ್ಟಾರು. ಯೌವನದಲ್ಲಿರುವ ಇಬ್ಬರು ಸ್ತ್ರೀಪುರುಷರು ಅನ್ಯೋನ್ಯವಾಗಿ ರಹಸ್ಯ ಸಂಭಾಷಣೆ ನಡೆಸುವುದು ಅಪಹಾಸಕ್ಕೆಡೆ ಕೊಡುತ್ತದೆ.

**ಕ್ಷತ್ರಿಯೆ** :- ಕಥೆ ಹೇಳುವಾಗ ತೀರ್ಥಯಾತ್ರೆಯಲ್ಲಿ, ದೇಶದ ಆಪತ್ತಿನಲ್ಲಿ ದುರ್ಭಿಕ್ಷದಲ್ಲಿ, ಊರು ಸುಟ್ಟು ಹೋಗುತ್ತಿರುವಾಗ ರಹಸ್ಯಸಂಭಾಷಣೆಯಲ್ಲಿ ದೋಷವಿಲ್ಲ. ನನ್ನ ಮನೆಯಲ್ಲಿ ನೀನು ಉಳಿದಿರುವೆ. ನಾನೂ ನನ್ನ ಮನೆಯಲ್ಲೆ ಇರುವಾಗ ಜನರು ಏಕೆ ಸಂದೇಹ ಪಡುತ್ತಾರೆ ?

**ಬ್ರಾಹ್ಮಣ** :- ನಾನು ಮಾತನಾಡಕೂಡದು. ಹೊರಟುಹೋಗು.

ಆ ಯುವತಿ ಒಂದು ಉಪಾಯ ಹೂಡಿದಳು. ತನ್ನ ಮಲಗುವ ಕೋಣೆಯಲ್ಲಿ ಕುಳಿತು ಅಳತೊಡಗಿದಳು. ಬಹುಹೊತ್ತು ಅತ್ತಳು. ಬ್ರಾಹ್ಮಣನು ಅನುಕಂಪೆಯಿಂದ ಅವಳ ಬಳಿಗೆ ಬಂದು ಅಳಬೇಡ, ಅದು ಶರೀರಕ್ಕೂ ಮನಸ್ಸಿಗೂ ಕೆಟ್ಟದು. ಆದ್ದರಿಂದ ಫಲವೂ ಇಲ್ಲ. ಏಕೆ ಅಳುವೆ ಎಂಬುದನ್ನಾದರೂ ಹೇಳು ಎಂದ. ಆಕೆ ಏನೂ ಹೇಳಲಿಲ್ಲ. ಮೂರ್ಛೆಗೊಂಡವಳಂತೆ ಬಿದ್ದುಕೊಂಡಳು. ಬ್ರಾಹ್ಮಣನು ಇದೆಲ್ಲವೂ ಯಥಾರ್ಥವೆಂದೆ ಬಗೆದು ಅವಳನ್ನೆತ್ತಿ ಕುಳ್ಳಿರಿಸಿದ. ತಿರುಗಿಬಿದ್ದಳು. ಉಪಾಯಕಾಣದೆ ಅವಳನ್ನು ತನ್ನ ತೊಡೆಯಮೇಲೆ ಇಟ್ಟುಕೊಂಡು ಅವಳ ಕಣ್ಣುಗಳನ್ನೊರಿಸಿದ. ಅವಳಿನ್ನೂ

ಮೈಮರೆತವಳಂತೆ ನಟಿಸುತ್ತ ಬಟ್ಟೆಯನ್ನು ಅಸ್ತವ್ಯಸ್ತಗೊಳಿಸಿ ಅಂಗಾಂಗಗಳನ್ನು ಪ್ರದರ್ಶಿಸಿದಳು. ತೋಳುಗಳಿಂದ ಅವನನ್ನು ಬಳಸಿ ಅಪ್ಪಿಕೊಂಡಳು. ಬ್ರಾಹ್ಮಣನಿಗೆ ಇದು ಅನುಚಿತವೆನಿಸಿತು. ಆದರೂ ಬೆಳದಿಂಗಳ ರಾತ್ರಿ, ಮಂದಮಾರುತ, ಏಕಾಂತ ಸ್ಥಳ- ಇವುಗಳ ಸಹಾಯದಿಂದ ಕಾಮನು ಆಗಲೆ ತನ್ನ ಬಾಣವನ್ನು ಪ್ರಯೋಗಿಸಿದ್ದ.

ಈ ಯುವತಿ ಸುಂದರಿ. ನನ್ನನ್ನಪೇಕ್ಷಿಸುವಂತೆ ಕಾಣುತ್ತಾಳೆ. ಎದೆಯ ಮೇಲೆ ಕೈ ಇಟ್ಟರೆ ಎಲ್ಲವೂ ತಿಳಿಯುತ್ತದೆ. ಎಂದುಕೊಂಡು ಬ್ರಾಹ್ಮಣನು ಅವಳೆದೆಯನ್ನು ಮುಟ್ಟಿದ. ಅವಳು ಮೂರ್ಛಿತಳಂತೆಯೆ ಇದ್ದು ಮಂದಹಾಸ ಬೀರಿದಳು. ಬಳಿಕ ಬ್ರಾಹ್ಮಣನನ್ನು ಅಪ್ಪಿಮುದ್ದಿಟ್ಟಳು. ನೂರುವರ್ಷಗಳಕಾಲ ಅವರು ಜೊತೆಗಿದ್ದರು. ಒಂದುದಿನ ಬ್ರಾಹ್ಮಣನು ನದಿಯಲ್ಲಿ ಮಿಂದು ಕೂರ್ಮ ಪುರಾಣ ಶ್ರವಣಮಾಡಿದ. ಅದರಲ್ಲಿ ಬ್ರಹ್ಮಹತ್ಯೆ ಸುರಾಪಾನ ಕಳುವು ಗುರುಪತ್ನಿಯ ಸಂಗಗಳ ಪಾಪಗಳೆಲ್ಲವೂ ಕೂರ್ಮ ಪುರಾಣ ಶ್ರವಣದಿಂದ ನಾಶವಾಗುತ್ತದೆ ಎಂಬ ಮಾತನ್ನು ಕೇಳಿದ. ಪುರಾಣ ಪ್ರವಚನ ಮುಗಿದಮೇಲೆ ಪೌರಾಣಿಕನ ಬಳಿಗೆ ಬಂದು 'ನಾನು ಮಾಡಿದ ಪಾಪಗಳಿಗೆ ಲೆಕ್ಕವಿಲ್ಲ ಆ ಎಲ್ಲ ಪಾಪಗಳನ್ನು ಕಳೆಯಲು ಏನು ಮಾಡಬೇಕು, ಹೇಳು' ಎಂದ. 'ಶಿವನನ್ನಾರಾದಿಸು. ಇಲ್ಲವೆ ಜ್ಞಾನವನ್ನು ಸಂಪಾದಿಸು. ಇವೆರಡು ಇಲ್ಲದಿದ್ದರೆ ನಿನಗೆ ನರಕವಾಸ ತಪ್ಪಿದ್ದಲ್ಲ' ಎಂದನಾತ. ಬ್ರಾಹ್ಮಣನು ಆ ಕ್ಷತ್ರಿಯ ಯುವತಿಯ ಸಹವಾಸವನ್ನು ಬಿಟ್ಟು ಶಿವನನ್ನಾರಾಧಿಸತೊಡಗಿದ. ಪ್ರತಿದಿನ ಸಾವಿರ ತುಂಬೆಹೂಗಳಿಂದ ಅರ್ಚಿಸಿದ. ಒಂದು ದಿನ ತುಪ್ಪವಿಲ್ಲದ ಅನ್ನವನ್ನು ಉಣಲಾರದೆ ಶಿವಾಲಯದಲ್ಲಿ ದೀಪಕ್ಕೆ ಹಾಕಿದ್ದ ತುಪ್ಪವನ್ನೊಯ್ದು ಊಟ ಮುಗಿಸಿದ. ಇದರ ಫಲವನ್ನಾಗಿ ಅನೇಕ ವಿಧವಾದ ನರಕಗಳಲ್ಲಿ ಶಿಕ್ಷೆ, ಬಳಿಕ ನಾಯಿಯ ಜನ್ಮವಾಗಬೇಕೆಂದು ಯಮನು ವಿಧಿಸಿದ. ಅವನು ಮರಣಹೊಂದಿದ.

ಈ ಬ್ರಾಹ್ಮಣನಿಗೆ ಅವ್ಯಯೆ ಎಂಬ ಓರ್ವ ಮಡದಿ ಇದ್ದಳು. ಅವಳ ಬಳಿಗೆ ನಾರದಮುನಿ ಬಂದು ನಿನ್ನ ಪತಿ ದೇಶಾಂತರದಲ್ಲಿ ಮಡಿದು ಬಿದ್ದಿದ್ದಾನೆ. ಎಂದ ಆಕೆ ಅಳತೊಡಗಿದಳು. ಅಳಬೇಡ ನೀನು ಪತಿಯೊಂದಿಗೆ ಸಹಗಮನಮಾಡು.' ಎಂದ ಮುನಿ. ''ಮುನಿಯೆ, ಕಾಲಕ್ಕೆ ಸರಿಯಾಗಿ ನಾನು ಅಲ್ಲಿಗೆ ಹೋಗಬಲ್ಲೆನೆ ?''

''ಅವ್ಯಯೆ, ನೋಡು ಇಲ್ಲಿಂದ ನೂರು ಯೋಜನ ದೂರದಲ್ಲಿ ನಾಳೆ ಅವನಿಗೆ ಉತ್ತರಕ್ರಿಯೆ ಆಗಲಿದೆ.''

''ಅಷ್ಟು ದೂರಕ್ಕೆ ಒಂದು ದಿನದಲ್ಲಿ ಹೇಗೆ ಹೋಗಬಲ್ಲೆನು ?''

''ನನ್ನ ವೀಣೆಯೊಳಗೆ ಕುಳಿತು ಬಾ''

ಅವ್ಯಯೆ ಮುನಿಯ ವೀಣೆಯೊಳಗೆ ಕುಳಿತು ಅಲ್ಲಿಗೆ ಹೋದಳು. ಅಲ್ಲಿ ಅಗ್ನಿಪ್ರವೇಶದ ವಿಧಾನವನ್ನು ಕೇಳಿದಳು. ಮುನಿ ಉಪದೇಶಿಸಿದ.

'ಸ್ನಾನ, ಮಂಗಳ ಸಂಸ್ಕಾರ, ಭೂಷಣ, ಕಣ್ಣುಗಳಿಗೆ ಕಪ್ಪು, ಗಂಧಪುಷ್ಪ, ಧೂಪ, ಅರಿಶಿನ ಕುಂಕುಮ, ಮಂಗಳಸೂತ್ರ ಕಾಲಿಗೆ ಲಾಕ್ಷಾರಸ ಲೇಪಗಳನ್ನು ಮಾಡಿಕೊಂಡು ಯಥಾಶಕ್ತಿ ದಾನಗಳನ್ನು ಕೊಟ್ಟು ಪ್ರಸನ್ನಳಾಗಿರಬೇಕು. ವ್ಯಭಿಚಾರ ದೋಷಪರಿಹಾರಕ್ಕೆ ತನ್ನ ಆಭರಣಗಳನ್ನು ಬ್ರಾಹ್ಮಣನಿಗೆ ದಾನಮಾಡಬೇಕು.'

ಮುನಿಯೆ ಅರಿಶಿನ ಇಲ್ಲ ಆಭರಣಗಳಿಲ್ಲ. ಏನು ಮಾಡಲಿ ?

ನಾರದಮುನಿ ಒಂದು ಕ್ಷಣದಲ್ಲಿ ಕೈಲಾಸಕ್ಕೆ ಹೋಗಿ ಪಾರ್ವತಿಯನ್ನು ಬೇಡಿದ, ಅಮ್ಮ ಅವ್ವಯೆಗೆ ಅರಿಶಿನ ಮತ್ತು ಆಭರಣಗಳನ್ನು ಕೊಡು.' ಪಾರ್ವತಿ ಕೊಡಲೊಪ್ಪಲಿಲ್ಲ.

'ವಿಧವೆಗೆ ನಾನು ಆಭರಣಗಳನ್ನು ಹೇಗೆ ಕೊಡಲಿ ? ಕೊಟ್ಟರೆ ಅವಳ ವೈಧವ್ಯವಿರಲಾರದು; ಎಂದಳು.

'ಅಮ್ಮ ಗಂಡನ ದೇಹವಿರುವವರೆಗೂ ಹೆಣ್ಣು ವಿಧವೆಯಲ್ಲ. ದಹನವಾಗುವತನಕ ಸೂತಕವೂ ಇಲ್ಲ. ಅವಳ ಸೌಭಾಗ್ಯ ಹಾಗೆ ಇರುತ್ತದೆ.' ಎಂದು ವಾದಿಸಿದ, ಮುನಿ.

'ನನ್ನ ಆಭರಣಗಳನ್ನೂ ಅರಿಶಿನವನ್ನೂ ಇನ್ನೊಬ್ಬರು ಧರಿಸಿದರೆ ಚಿಂರಜೀವಿಗಳಾಗುತ್ತಾರೆ. ಆದರಿಂದ ನೀನು ಜಯಂತಿಯ ಬಳಿಯಲ್ಲಿ ಅವನ್ನು ಕೇಳಿ, ಪಡೆ.

ಮುನಿಯು ಪಾರ್ವತಿಯು ಅನುಜ್ಞೆ ಪಡೆದು ಜಯಂತಿಯ ಬಳಿಯಲ್ಲಿ ಅವುಗಳನ್ನು ಬೇಡಿಪಡೆದ. ಅವ್ವಯೆಗೆ ತಂದಿತ್ತ. 'ನಿನ್ನ ಅಂತ್ಯೇಷ್ಟಿಯನ್ನು ಯಾರು ಮಾಡುವರು ?' 'ಮುನಿಯೆ, ನೀನೆ ನನಗೆ ತಂದೆ, ನನ್ನೆಲ್ಲ ಕರ್ಮಗಳಿಗೆ ನೀನೆ ಕಾರಣ' ಎನ್ನುತ್ತ ಆಕೆ ನಮಸ್ಕರಿಸಿದಳು.

ಮುನಿಯು ಬ್ರಾಹ್ಮಣನ ಶವವನ್ನು ಸುಟ್ಟು 'ಆ ಚಿತೆಯನ್ನೇರು' ಎಂದು ಅವ್ವಯೆಗೆ ಹೇಳಿದ. ಅವಳು ಚಿತೆಗೆ ಮೂರುಬಾರಿ ಪ್ರದಕ್ಷಿಣೆ ಬಂದು ನಮಸ್ಕರಿಸಿ ತನ್ನ ಮಂಗಳಸೂತ್ರ ಅರಿಶಿನ ಅಕ್ಷತೆ ಹೂ ಬಟ್ಟೆ ಕಸ್ತೂರಿ ಚಂದನ ಚಿನ್ನದಬಾಚಣಿಗೆ ಫಲ ದಕ್ಷಿಣೆ ಮುಂತಾದವನ್ನು ಮುತ್ತೈದೆಯರಿಗಿತ್ತು. ಪಾರ್ವತಿಗೆ ಪ್ರೀತಿಯಾಗಲಿ ಎಂದಳು. ಚಿತೆಗೆ ಮೂರುಬಾರಿ ಪ್ರದಕ್ಷಿಣೆ ಬಂದು ಕೈಮುಗಿದು ಹಸನ್ಮುಖದಿಂದ ಹೇಳಿದಳು.

'ಇಂದ್ರಾದಿ ದಿಕ್ಪಾಲಕರೆ, ತಾಯಿ ಭೂದೇವಿಯೆ, ಸೂರ್ಯನೆ, ಧರ್ಮರಾಯನೆ ಮುಂತಾದ ದೇವತೆಗಳೆ, ಕೇಳಿ. ನಾನು ಮದುವೆಯಾದಂದಿನಿಂದ ತ್ರಿಕರಣಗಳಿಂದಲೂ ಭಕ್ತಿಯಿಂದ ಪತಿಯನ್ನು ಸೇವಿಸಿರುವುದದಾರೆ ಎಂದೂ ವ್ಯಭಿಚಾರ ಮಾಡದಿರುವುದಾದರೆ ಆ ಸತ್ಯದ ಪ್ರಭಾವದಿಂದ ಪತಿಯೊಡನೆ ನನಗೆ ಪ್ರಯಾಣ ನೀಡಿ.'' ಹೀಗೆ ಹೇಳಿ ಕೈಯಲ್ಲಿದ್ದ ಹೂವನ್ನೆಸೆದು ಅಗ್ನಿಪ್ರವೇಶ ಮಾಡಿದಳು.

ಆಗ ಸೂರ್ಯನಂತೆ ಹೊಳೆಯುವ ದಿವ್ಯವಿಮಾನ ಬಂದಿತು. ಅವ್ವಯೆ ಪತಿಯೊಡನೆ ಅದನ್ನೇರಿ ಹೋದಳು. ಯಮನು ಆ ಸಾಧ್ವಿಯನ್ನು ನಮಸ್ಕರಿಸಿ ನಿನಗೆ ಅಕ್ಷಯ ಸ್ವರ್ಗಲೋಕವೆ ದೊರೆಯುತ್ತದೆ. ನಿನ್ನ ಪತಿಗೆ ಸಿಗಬೇಕಾಗಿದ್ದ ಎರಡುಕೋಟಿ ವರ್ಷಗಳ ನರಕವಾಸವು ನಿನ್ನ ಪಾತಿವ್ರತ್ಯ ಪ್ರಭಾವದಿಂದ ತಪ್ಪಿಹೋಯಿತು. ಶಿವಾಲಯದಲ್ಲಿ ದೀಪಕ್ಕೆ ಹಾಕಿದ ತುಪ್ಪವನ್ನು ತಿಂದ ಪಾಪವು ಮಾತ್ರ ಹಾಗೇ ಇದೆ. ಆದರಿಂದ ನೂರುಬಾರಿ ನಾಯಿಯಾಗಿ ಅವನು ಹುಟ್ಟಬೇಕು. ಬೇರೆಲ್ಲ ಪಾಪಗಳಿಗೆ ಪ್ರಾಯಶ್ಚಿತ್ತವಿದೆ. ಶಿವದ್ರವ್ಯಾಪಹಾರಕ್ಕೆ ಪ್ರಾಯಶ್ಚಿತ್ತವಿಲ್ಲವೆಂದು ಶಿವನು ಹೇಳಿದ್ದಾನೆ ಎಂದ.

ಬಳಿಕ ಬ್ರಾಹ್ಮಣನು ನಾಯಿಯ ಜನ್ಮದಲ್ಲಿ ದಧೀಚನ ಆಶ್ರಮಕ್ಕೆ ಬಂದ. ಮೃತ್ಯುವಿನ ದವಡೆಯಲ್ಲಿದ್ದ ಅವನು ಆಶ್ರಮದಲ್ಲಿ ಒಂದೆಡೆ ಗೋಡೆಯ ಬಳಿಯಲ್ಲಿದ್ದ

ಮಂತ್ರಪೂತವಾದ ಭಸ್ಮದ ಮೇಲೊರಗಿ ಅಸು ನೀಗಿದ. 'ಆಗ ಯಮನು ಅವನನ್ನು ತನ್ನ ಪಟ್ಟಣದಲ್ಲಿ ಇರಿಸುಕೊಳ್ಳದೆ ಶಿವಲೋಕಕ್ಕೆ ಹೋಗು ಎಂದ. ಆಗ ನಾರದ ಮುನಿ ಬಂದು ಅವನನ್ನು ನೋಡಿ ಶಿವನ ಬಳಿಯಲ್ಲಿ 'ನಿನ್ನ ಭಕ್ತನೊಬ್ಬ ಯಮ ಪಟ್ಟಣದ ಬಳಿಯಲ್ಲಿ ನಿಂತಿದ್ದಾನೆ ಕರೆಸಿಕೊಳ್ಳು' ಎಂದ. ಶಿವನು ವೀರಭದ್ರನ ಮೂಲಕ ಅವನನ್ನು ಕರೆಸಿಕೊಂಡು ತನ್ನ ಗಣಗಳಲ್ಲಿ ಸೇರಿಸಿಕೊಂಡ. ಅಂದಿನಿಂದ ನಾಯಿಯು ಶ್ವಾನಮುಖವೆಂಬ ಗಣವಾಯಿತು.

ಶುಚಿಸ್ಮಿತೆ, ಭಸ್ಮದ ಮಹಿಮೆ ಹೀಗೆ ಅನ್ಯಾದೃಶ್ಯವಾದುದು. ಇನ್ನೇನು ಕೇಳಬಯಸುವೆ. ಹೇಳು ಎಂದನು ದಧೀಚಮುನಿ.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಪಾತಾಳಖಂಡದಲ್ಲಿ ಶಿವರಾಘವ ಸಂವಾದದಲ್ಲಿ ಅವ್ವಯ ಸಹಗಮನವೆಂಬ ನಲವತ್ತೈದನೆ ಅಧ್ಯಾಯ ಮುಗಿದುದು*



## ವಿಭೂತಿ ಮಹಿಮೆ

**ಅಧ್ಯಾಯ - ೪೬**

**ಶುಚಿಸ್ಮಿತೋವಾಚ**

**ಶುಚಿಸ್ಮಿತೆ :-** ಮುನಿಯೆ, ಕಶ್ಯಪ ಜಮದಗ್ನಿ ಮತ್ತು ದೇವತೆಗಳನ್ನು ಭಸ್ಮವು ಕಾಪಾಡಿತೆಂದು ಹೇಳಿರುವೆ, ಆ ವೃತ್ತಾಂತವನ್ನೂ ಹೇಳು.

**ದಧೀಚ :-** ಕಶ್ಯಪ, ಜಮದಗ್ನಿ, ನಾನು ಮತ್ತು ಎಲ್ಲ ದೇವತೆಗಳೂ ಒಮ್ಮೆ ಶೌಕರವೆಂಬ ಬೆಟ್ಟದಲ್ಲಿ ಹರಿಯನ್ನು ಸ್ತೋತ್ರ ಮಾಡುತ್ತಿದ್ದೆವು. ಆಗ ಒಂದು ಮಹಾಜ್ವಾಲೆ ಎದ್ದು ನಮ್ಮನ್ನೆಲ್ಲ ಸುಟ್ಟು ಭಸ್ಮಮಾಡಿತು. ಏನೋ ಕಾರಣದಿಂದ ಅಲ್ಲಿಗೆ ವೀರಭದ್ರನೂ ಬಂದಿದ್ದ. ಮೈಗೆಲ್ಲ ಭಸ್ಮ ಬಳಿದುಕೊಂಡು ತಲೆಯಲ್ಲಿ ಶಿವಲಿಂಗವನ್ನು ಧರಿಸಿ ಏಕಾಕಿಯಾಗಿ ನಿಸ್ಪೃಹನಾಗಿ ಶಾಂತನಾಗಿ ನಡೆದುಬರುತ್ತಿದ್ದ. ನಮ್ಮ ಹಾಹಾಕಾರವನ್ನು ಕೇಳಿ ಆ ಜ್ವಾಲೆಯನ್ನು ಪ್ರವೇಶಿಸಿದ. ಒಡನೆ ಜ್ವಾಲೆ ನೀರಲ್ಲಿ ಬಿದ್ದ ಹುಲ್ಲುಕಡ್ಡಿಯ ಬೆಂಕಿಯಂತೆ ಆರಿತು. ಆದರೆ ಅದಕ್ಕಿಂತ ಮಿಗಿಲಾದ ಇನ್ನೊಂದು ಜ್ವಾಲೆ ಅವಿರ್ಭವಿಸಿತು. ಮುಗಿಲೆತ್ತರಕ್ಕೇರಿತು. ವೀರಭದ್ರನು ಅದನ್ನು ಕಂಡು ಮನಸ್ಸಿನಲ್ಲಿ ಹೇಳಿಕೊಂಡ, ಈ ಜ್ವಾಲೆ ಪ್ರಪಂಚದ ಮೇಲಿರುವ ಎಲ್ಲ ಪ್ರಾಣಿಗಳನ್ನೂ ಸುಡುತ್ತದೆ. ನಾನಿದನ್ನು ಕುಡಿದರೆ ಅವು ಬದುಕಿ ಉಳಿಯುವುವು ನನಗೆ ಬಾಯಾರಿಕೆಯೂ ಆಗಿದೆ. ಬಾಯಾರಿದವನು ನೀರು ಕುಡಿವಂತೆ ನಾನಿದನ್ನು ಕುಡಿಯುವೆನು. ಅಷ್ಟರಲ್ಲಿ ಅಶರೀರವಾಣಿ ಕೇಳಿಸಿತು. ವೀರನೆ, ಈ ಸಾಹಸಕ್ಕೆ ಇಳಿಯಬೇಡ. ನಿನ್ನ ಬಾಯಾರಿಕೆಗೂ ಬೆಂಕಿಗೂ ಏನು ಸಂಬಂಧ ? ಬಾಯಾರಿದವನಿಗೆ ನೀರುಬೇಕು. ಬೆಂಕಿಯಿಲ್ಲ. ಈ ಬೆಂಕಿಯೂ ಸಾಮಾನ್ಯವಲ್ಲ. ಇದರಲ್ಲಿ ಯೋಜನಗಾತ್ರದ ತಲೆಯ ರಾಕ್ಷಸನು ಬೆಂದಹೋದ. ನೂರುಯೋಜನ ಅಗಲದ ಮುಖ ನೂರುಕೈಗಳಿದ್ದ ಇನ್ನೊಬ್ಬ ರಾಕ್ಷಸನೂ ನಾಶವಾದ. ಸಮುದ್ರವನ್ನೆ ಪೂರ್ತಿಯಾಗಿ ಕುಡಿದ ಅಗಸ್ತ್ಯನೂ ಇದರಲ್ಲಿ ಸುಟ್ಟುಹೋದ.

'ನೀನು ಹೇಳುವಂತೆ ಈ ಜ್ವಾಲೆ ಭಯಂಕರವೆಂದು ನಾನು ತಿಳಿಯುವದಿಲ್ಲ. ನನಗೆ ಅವರಿಂದ ಭಯವಿಲ್ಲ. ಹೀಗೆ ಹೇಳುವ ನಿನ್ನಲ್ಲಿ ರೋಷ ಮಾತ್ರ ಉಕ್ಕುತ್ತಿದೆ. ನಾನಾರು ಗೊತ್ತೆ ? ವೀರಭದ್ರ. ಎಲ್ಲ ದೇವತೆಗಳೂ ನನ್ನ ಪಾದಸೇವೆ ಮಾಡುತ್ತಾರೆ. ಎಂದ ವೀರಭದ್ರ. 'ವೀರನೆ ನಿನಗೆ ಹಿತವಾಗಲೆಂದು ನಾನು ಹಾಗೆ ಹೇಳಿದೆ. ಅನ್ಯಥಾ ಭಾವಿಸಬೇಡ. ಕೋಪಮಾಡದೆ ನಿನ್ನ ಹಿತವನ್ನು ನೀನು ನೋಡಿಕೊಳ್ಳು.' ಹೀಗೆ ಹೇಳಿ ಅಶರೀರವಾಣಿ ಸುಮ್ಮನಾಯಿತು.

ವೀರಭದ್ರನು ನೂರುಯೋಜನ ವಿಸ್ತಾರದ ಭಯಂಕರ ಜ್ವಾಲೆಯನ್ನು ಕುಡಿದುಬಿಟ್ಟ. ಆಗ ಅಲ್ಲಲ್ಲಿ ದೇವತೆಗಳ ಮುನಿಗಳ ಭಸ್ಮರಾಶಿಗಳು ಕಣ್ಣಿಗೆ ಗೋಚರಿಸಿದುವು. ವೀರಭದ್ರನು ಅವರನ್ನು ಹೆಸರು ಹಿಡಿದು ಕರೆದ, ಪ್ರತ್ಯುತ್ತರವಿಲ್ಲ. ಎಲ್ಲರೂ ಸತ್ತಿರುವರೆಂದು ತಿಳಿಯಿತು. ಹೇಗೆ ಬದುಕಿಸಲಿ ಎಂದು ಕ್ಷಣಕಾಲ ಯೋಚಿಸಿ ಆಚಮನ ಮಾಡಿ ಮೃತ್ಯುಂಜಯ ಮಂತ್ರದಿಂದ ಅಭಿಮಂತ್ರಿತವಾದ ಭಸ್ಮವನ್ನು ಆ ಭಸ್ಮ ರಾಶಿಗಳ ಮೇಲೆ ಎರಚಿದ. ಆಗ ನಾವೆಲ್ಲ ಎದ್ದು ನಿಂತೆವು. ಆದರೆ ಒಂದು ದೊಡ್ಡ ಸರ್ಪವು ನಮ್ಮನ್ನು ನುಂಗಿತು. ವೀರಭದ್ರನು ಬಳಿಗೆ ಬಂದಾಗ ನಾನಾ ರೂಪಧರಿಸಿ ನೂರುವರ್ಷಗಳ ಕಾಲ ಅವನೊಡನೆ ಹೋರಾಡಿತು. ಕೊನೆಗೆ ವೀರಭದ್ರನು ಅದರ ದವಡೆಯನ್ನು ಹಿಡಿದು ಉದ್ದಕ್ಕೂ ಸೀಳಿದ. ತಿರುಗಿ ಭಸ್ಮದಿಂದಲೆ ನಮ್ಮೆಲ್ಲರನ್ನೂ ಬದುಕಿಸಿದ. ಅವನನ್ನು ನಮಿಸಿ ನಾವೆಲ್ಲರೂ ಹೊರಟೆವು. ದಾರಿಯಲ್ಲಿ ಹತ್ತು ಕೈಗಳು ಐದು ಕಾಲುಗಳು ಎಂಟು ತಲೆಗಳುಳ್ಳ ಮಹಾಕಾಯದ ಒಬ್ಬ ರಾಕ್ಷಸ ಎದುರಾದ. ಆಗ ತಾನೆ ಅವನು ವಾಲಿ ಸುಗ್ರೀವರನ್ನು ನುಂಗಿ ಬಂದಿದ್ದ. ವಾಲಿಯ ಬಲವೆ ವರಾಹಮೂರ್ತಿಯಾದ ಹರಿಯ ಬಲದ ಎರಡರಷ್ಟಿತ್ತು. ಅವನನ್ನು ನುಂಗಿ ಈಗ ಎದುರಿಗೆ ಸಿಕ್ಕಿದ ನಮ್ಮನ್ನು ಕೈಗಳಿಂದೆತ್ತಿ ಎತ್ತಿ ನುಂಗತೊಡಗಿದ.

ವೀರಭದ್ರನು ಇದನ್ನು ಕಂಡು ಐವತ್ತುಯೋಜನ ವಿಸ್ತಾರದ ಶಿಲೆಯನ್ನು ಕೈಯಿಂದೆತ್ತಿ ರಾಕ್ಷಸನ ತಲೆಯಮೇಲೆ ಎಸೆದ. ನಡುವಿನ ಒಂದು ತಲೆ ಒಡೆದುಬಿದ್ದಿತು. ಬಳಿಕ ನೂರು ಯೋಜನ ವಿಸ್ತಾರದ ಒಂದು ಪರ್ವತಶಿಖರವನ್ನೆತ್ತಿ ರಾಕ್ಷಸನ ಮೇಲೆ ಇಟ್ಟ. ಆಗ ರಾಕ್ಷಸನು ನಿನ್ನ ಬಲವನ್ನು ನಾನು ಕಂಡೆ. ಇನ್ನು ನನ್ನ ಬಲವನ್ನೂ ನೋಡು. ಐವತ್ತುಯೋಜನ ಉದ್ದ ಒಂದು ಯೋಜನ ಅಗಲದ ನನ್ನ ಈ ಎರಡು ಕತ್ತಿಗಳಲ್ಲಿ ಒಂದನ್ನು ನೀನು ಹಿಡಿ. ಇನ್ನೊಂದನ್ನು ನಾನು ಹಿಡಿಯುವೆನು.' ವೀರಭದ್ರನೊಪ್ಪಿ ಆ ಕತ್ತಿಯನ್ನು ಹಿರಿದು ಬೀಸಿದ. ರಾಕ್ಷಸನೂ ಕತ್ತಿ ಬೀಸಿದ. ವೀರಭದ್ರನ ಕತ್ತಿನಲ್ಲಿ ಗಾಯವಾಯಿತು. ರಾಕ್ಷಸನು ಒಂದು ಕೈಯಿಂದ ಆದನ್ನೆತ್ತಿ ಕುಡಿದು ತಿಂದು ಪ್ರಪಂಚವೆ ನಡುಗುವಂತೆ ಸಿಂಹನಾದ ಮಾಡಿದ. ಒಂದುವರ್ಷ ಕಾಲ ಈ ಖಡ್ಗಯುದ್ಧನಡೆಯಿತು. ಹೂಬಿಟ್ಟ ಮುತ್ತುಗದ ಮರದಂತೆ ಇಬ್ಬರೂ ಕಂಡರು. ಬಳಿಕ ಒಂದುವರ್ಷ ಗದಾಯುದ್ಧ. ಇನ್ನೊಂದು ವರ್ಷ ಚೂರಿ ಇರಿತ. ತಿರುಗಿ ಖಡ್ಗಗಳನ್ನು ಹಿಡಿದರು.

ವೀರಭದ್ರನು ರಾಕ್ಷಸನ ಉಳಿದೆಲ್ಲ ತಲೆಗಳನ್ನೂ ಬಾಳೆದಿಂಡುಗಳಂತೆ ಕತ್ತರಿಸಿ ತಿಂದು ಅವನ ಮೈಯನ್ನು ಉಗುರುಗಳಿಂದ ಸೀಳಿ ಒಳಗಿದ್ದ ದೇವತೆಗಳನ್ನೂ ವಾಲಿ ಸುಗ್ರೀವರನ್ನೂ ಹೊರಗೆ ತೆಗೆದ.

ಈ ಘೋರಯುದ್ಧವನ್ನು ನೋಡಿದ ನಾರದ ಮುನಿ ಬ್ರಹ್ಮ ವಿಷ್ಣು ಮಹೇಶ್ವರರಿಗೆ ಎಲ್ಲವನ್ನೂ ತಿಳಿಸಿದ. ಅವರು ಬಂದು ವೀರಭದ್ರನನ್ನು ಹೊಗಳಿದರು. ''ವೀರನೆ, ಈ ರಾಕ್ಷಸನು ಶಿವನಿಂದ ವರಪಡೆದವನು. ಹಿಂದೆಯೂ ಹಿರಣ್ಯಕಶಿಪುವಿನ ರಾಜ್ಯದಲ್ಲಿ ಏಕಾಂಗಿಯಾಗಿ ದೇವತೆಗಳೊಡನೆ ನೂರುವರ್ಷಗಳ ಕಾಲ ಹೋರಾಡಿದ ಶೂರ. ಅವನು ಅನೇಕ ಬಾರಿ ರಣರಂಗದಲ್ಲಿ ಸತ್ತು ಶುಕ್ರಾಚಾರ್ಯರ ಪ್ರಭಾವದಿಂದ ಬದುಕಿ ಎದ್ದು ಕೊನೆಗೊಂದು ದಿನ ಅವರನ್ನೇ ಕೇಳಿದ. 'ಗುರುವೆ, ನಾನು ನೂರಾರುಬಾರಿ ಸತ್ತೆ; ನೀನು ನನ್ನನ್ನು ಬದುಕಿಸಿದೆ. ಇನ್ನು ಮುಂದೆ ನನಗೆ ಮರಣವೇ ಇಲ್ಲದಂತಾಗಬೇಕು. ಅದು ಮಾತ್ರವಲ್ಲ. ನನ್ನ ಹೊಟ್ಟೆಯ ಒಳಗೆ ಸೇರಿದವರೆಲ್ಲ ಸಾಯಬೇಕು. ಅದಾಗದಿದ್ದರೆ ನಾನು ಸಾಯುವುದು ನಿಶ್ಚಯ, ಏಕೆಂದರೆ ನಾನು ಯಮನೊಡನೆ ಯುದ್ಧಮಾಡಿ ಅವನನ್ನು ನುಂಗಿದಾಗ ಅವನು ನನ್ನ ಹೊಟ್ಟೆಯನ್ನೆ ಸೀಳಿ ಹೊರಬಂದು ಗರ್ಜಿಸಿದ. ಆಗ ನನ್ನನ್ನು ನೀನೆ ಬದುಕಿಸಿದೆ. ಆದ್ದರಿಂದ ನನ್ನ ಹೊಟ್ಟೆಯೊಳಗೆ ಸೇರಿದವರೆಲ್ಲ ಸಾಯಬೇಕು. ಶುಕ್ರಾಚಾರ್ಯರು ಹೇಳಿದರು. 'ನೀನು ಹೇಳಿದುದು ನಿಜ. ಸ್ಯಮಂತ ಪಂಚಕ ತೀರ್ಥಕ್ಕೆ ಹೋಗಿ ತಪಸ್ಸು ಮಾಡು. ರಾಕ್ಷಸನಿಗೆ ಅದುವೆ ಯುಕ್ತವೆನಿಸಿತು.'' ಗುರುವೆ, ನಾನೀಗಲೇ ಯಾವ ದೇವನೆ ಆಗಲಿ ದೈತ್ಯನೆ ಆಗಲಿ ಮಾಡದಂಥ ಘೋರ ತಪಸ್ಸನ್ನು ಮಾಡತೊಡಗುವೆ. ಎರಡು ಕಬ್ಬಿಣದ ಕಂಬಗಳ ಮೇಲೆ ಪಟ್ಟಿಯನ್ನು ಸೇರಿಸಿ ನನ್ನ ಕಾಲುಗಳನ್ನು ಅದಕ್ಕೆ ಸರಪಣಿಗಳಿಂದ ಬಿಗಿದು ತಲೆಕೆಳಗಾಗಿ ನೇತಾಡುತ್ತ ಕೆಳಗೆ ಉರಿವ ಬೆಂಕಿಯಲ್ಲಿ ಕಣ್ಣುಬಾಯಿಗಳನ್ನು ತೆರೆದುಕೊಂಡು ತಪಸ್ಸನ್ನು ಮಾಡುವೆನು.

**ಬ್ರಹ್ಮಾ ವಾ ವರದಃ ಸೋऽಸ್ತು ಶಂಕರೋ ವಿಷ್ಣುರೇವ ಚ**
**ವರದೇನ ತು ಮೇ ಭಾವ್ಯಂ ಯೋ ವಾ ಕೋ ವಾ ವರಪ್ರದಃ**

ವರಕೊಡುವವನು ಬ್ರಹ್ಮನಿರಲಿ ಶಂಕರನಿರಲಿ ವಿಷ್ಣುವೆ ಇರಲಿ ಯಾವನಾದರೂ ನನಗೆ ವರವನ್ನು ಕೊಟ್ಟೇಕೊಡಬೇಕು.

ಹೀಗೆ ಹೇಳಿ ತಪಸ್ಸಿಗೆ ಕುಳಿತ ರಾಕ್ಷಸ. ಆರುತಿಂಗಳು ಕಳೆದ ಮೇಲೆ ಉಗುರುಗಳಿಂದ ತನ್ನ ತಲೆಯನ್ನೇ ಕತ್ತರಿಸಿ 'ನಮೋ ಭದ್ರಾಯ' ಎಂಬ ಮಂತ್ರದಿಂದ ಅಗ್ನಿಯಲ್ಲಿ ಹೋಮಿಸಲು ತೊಡಗಿದ. ನಾಲ್ಕು ತಲೆಗಳನ್ನು ಹೋಮಿಸಿ ಐದನೆಯದನ್ನು ಹೋಮಿಸಲು ಆತನು ಉದ್ಯುಕ್ತನಾದಾಗ ಅಗ್ನಿಯ ಮಧ್ಯದಲ್ಲಿ ಸ್ಫಟಿಕದಂತೆ ಹೊಳೆವ ಚಂದ್ರಶೇಖರನು ಮೈದೋರಿದ. 'ರಾಕ್ಷಸನೆ, ಇಂಥ ಸಾಹಸವನ್ನು ಸಾಕುಮಾಡು. ನಾನು ವರ ಕೊಡುತ್ತೇನೆ, ಕೇಳು ಎಂದ. 'ನೀನು ಹತ್ತಾರು ವರಗಳನ್ನು ಕೊಡುವವನು. ಆದ್ದರಿಂದ ಕಡಿದು ಹೋದ ತಲೆಗಳೆಲ್ಲವೂ ತಿರುಗಿ ಚಿಗುರಲಿ. ನಾನು ನುಂಗುವ ಪ್ರಾಣಿಗಳೆಲ್ಲ ಹೊಟ್ಟೆಯೊಳಗೆ ಸಾಯಲಿ. ವಿಷ್ಣುವಿನ ವರಾಹಮೂರ್ತಿಯ ಬಲದ ನಾಲ್ಕರಷ್ಟು ಬಲ ನನಗೆ ಬರಲಿ. ನನ್ನಲ್ಲಿ ನಿನಗೆಂದೂ ಕೋಪ ಉಂಟಾಗದಿರಲಿ. ನೀನು ಸದಾ ನನ್ನ ಬಳಿ ಇರು. ನಿನ್ನ ಜಡೆ ಕಿತ್ತು ಹೋದಾಗ ಜನಿಸುವ ವೀರನಿಂದ ಮಾತ್ರ ನನಗೆ ಮರಣ ಬರಲಿ.' ಎಂದು ರಾಕ್ಷಸನು ವರಗಳನ್ನು ಬೇಡಿದ. ಶಿವನು ಆಗಲಿ ಎಂದ. ಅಂಥ ಬಲಿಷ್ಠನಾದ ಪಾಪಿ ರಾಕ್ಷಸನನ್ನು ನೀನು ಕೊಂದೆ. ಹೀಗೆ ಹೇಳಿ ಬ್ರಹ್ಮ ವಿಷ್ಣು ಮಹೇಶ್ವರರು ವೀರಭದ್ರನನ್ನಾಲಿಂಗಿಸಿ ಹೊರಟು ಹೋದರು.

ದೇವತಾ ಸ್ತ್ರೀಯರೂ ಋಷಿ ಪತ್ನಿಯರೂ ವೀರಭದ್ರನನ್ನು ನಮಸ್ಕರಿಸಿ ನಮ್ಮ ಅಭೀಷ್ಟಗಳನ್ನು ಪೂರೈಸೆಂದು ಬೇಡಿಕೊಂಡರು. ವೀರಭದ್ರನೆಂದ. 'ದೇವತೆಗಳನ್ನೂ ಮುನಿಗಳನ್ನ ಕಪಿಗಳನ್ನು ಭಸ್ಮಪ್ರಭಾವದಿಂದ ಬದುಕಿಸುತ್ತೇನೆ. ಶೋಕಿಸಬೇಡಿರಿ.' ಹೀಗೆ ಹೇಳಿ ಭಸ್ಮದಿಂದ ಎಲ್ಲ ದೇವತೆಗಳನ್ನೂ ಮುನಿಗಳನ್ನೂ ಕಪಿಗಳನ್ನೂ ಬದುಕಿಸಿದ. ಅವರೆಲ್ಲರೂ ಕೈಮುಗಿದು ಹೇಳಿದರು. 'ನೀನು ನಮ್ಮನ್ನು ಬದುಕಿಸಿದ್ದರಿಂದ ಧರ್ಮದಿಂದ ನಮಗೆ ತಂದೆ ಎನಿಸಿದೆ. ನಮ್ಮನ್ನು ಸದಾ ಕಾಪಾಡುತ್ತಿರು. ಮಕ್ಕಳನ್ನು ಅವರ ಕೆಟ್ಟನಡತೆಗೆ ಶಿಕ್ಷಿಸುತ್ತ ಹೊರಗಿನ ಶತ್ರುಗಳಿಂದ ಬಾಧೆ ಉಂಟಾಗದಂತೆ ನೋಡಿಕೊಳ್ಳುತ್ತಾರೆ ಹಿರಿಯರು. ಹಾಗೆಯೆ ದಕ್ಷಯಜ್ಞದ ಸಮಯದಲ್ಲಿ ನಮ್ಮನ್ನು ಶಿಕ್ಷಿಸಿ ಈಗ ಕಾಪಾಡಿರುವೆ ನೀನು. ನಿನಗೆ ನಾವು ಮಕ್ಕಳಂತೆ.

**ದಧೀಚ :-** ಇದು ಭಸ್ಮಮಹಾತ್ಮೆ. ಓದಿದರೂ ಕೇಳಿದರೂ ನೆನೆದರೂ ಪಾಪನಾಶ ಮಾಡುವಂತಹದು.

**ಶುಚಿಸ್ಮಿತೆ :-** ಮುನಿಯೆ, ನಿನಗೆ ನಮಸ್ಕಾರ. ನಿನ್ನಿಂದ ಈ ಭಸ್ಮಮಹಿಮೆಯನ್ನು ತಿಳಿದು ಕೃತಾರ್ಥಳಾದೆ. ಸ್ತ್ರೀಯರೆಲ್ಲಲ್ಲ ಉತ್ತಮಳೆನಿಸಿದೆ.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಪಾತಾಳಖಂಡದಲ್ಲಿ ಶಿವರಾಘವ ಸಂವಾದದಲ್ಲಿ ವಿಭೂತಿ ಮಾಹಾತ್ಮ್ಯವೆಂಬ ನಲವತ್ತಾರನೆ ಅಧ್ಯಾಯ ಮುಗಿದುದು*



ಭಸ್ಮಧಾರಣೆ

ಅಧ್ಯಾಯ - ೪೭

**ಶ್ರೀರಾಮ ಉವಾಚ**

**ಶ್ರೀರಾಮ :-** ಭಸ್ಮದ ಉತ್ಪತ್ತಿ ಅದರ ಮಹಿಮೆ ಧಾರಣಕ್ರಮ ಮುಂತಾದುವನ್ನೂ ಹೇಳು.

**ಶಂಭು :-** ಭಸ್ಮೋತ್ಪತ್ತಿಯ ಬಗ್ಗೆ ಹೇಳುತ್ತೇನೆ. ಸ್ಮರಣ ಕೀರ್ತನೆಗಳಿಂದ ಅದು ಎಲ್ಲ ಪಾಪಗಳನ್ನೂ ಪರಿಹರಿಸುವುದು. ಗುಣಾತೀತನೂ ಗುಣಾಧಾರನೂ ಆದ ಮುಕ್ಕಣನಾದ ಸದಾಶಿವನು ಸೃಷ್ಟಿಮಾಡಲು ಬಯಸಿದ. ಇಲ್ಲಿ ಗುಣತ್ರಯವೆಂದರೆ ಮೂರುವೇದಗಳೆಂದು ತಿಳಿಯಬೇಕು. ಆ ಶಿವನು ತನ್ನ ಭಾಗದಿಂದ ವಿಷ್ಣುವನ್ನೂ ಬೆನ್ನಿನಿಂದ ಮಹೇಶ್ವರನನ್ನೂ ಸೃಷ್ಟಿಸಿದ. ಗುಣತ್ರಯವನ್ನು ಧರಿಸಿರೆಂದಾಜ್ಞಾಪಿಸಿದ. 'ಯಾರು ಯಾವ ಗುಣವನ್ನು ಎಷ್ಟುಕಾಲ ಧರಿಸಬೇಕು ? ಅದರ ನಿವೃತ್ತಿ ಎಂದು ?' ಎಂದು ಅವರು ಕೇಳಿದರು. ''ಪ್ರತಿಯೊಬ್ಬರೂ ಒಂದೊಂದು ಗುಣವನ್ನು ಅದರ ಜ್ಞಾನವಿರುವಷ್ಟು ಕಾಲ ಇಲ್ಲವೆ ಆಯುಸ್ಸು ಮುಗಿವವರೆಗೂ ಧರಿಸಿರಿ. ಸತ್ವವನ್ನು ಬ್ರಹ್ಮನೂ ರಜಸ್ಸನ್ನು ವಿಷ್ಣುವೂ ತಮಸ್ಸನ್ನು ಮಹೇಶ್ವರನೂ ಧರಿಸಲಿ'' ಎಂದು ಅಜ್ಞಾಪಿಸಿದ.

ಬ್ರಹ್ಮನು ಸತ್ವವನ್ನು ಹಿಡಿದ. ಅದು ಅಲ್ಲಾಡಲಿಲ್ಲ. ಧಾರಣದ ಮಾತು ದೂರದಲ್ಲಿಯೇ ಉಳಿಯಿತು. ಬಳಿಕ ರಜೋಗುಣವನ್ನು ಹಿಡಿದ. ಅದೂ ಅಲ್ಲಾಡಲಿಲ್ಲ.

ತಮೋಗುಣವನ್ನು ಹಿಡಿದ. ಅದು ಅಲ್ಲಾಡದಿರುವಾಗ ಕೆಳಗೆ ಬಿದ್ದು ಅಳತೊಡಗಿದ. ವಿಷ್ಣು ಎಡಗೈಯಿಂದ ರಜೋಗುಣವನ್ನೆತ್ತಿ ಧರಿಸಿದ. ಮಹೇಶ್ವರನು ಎರಡು ಬೆರಳುಗಳಿಂದ ತಮಸ್ಸನ್ನು ಧರಿಸಿ ಇನ್ನೆರಡು ಬೆರಳುಗಳಿಂದ ಸತ್ವ ಸಮೇತನಾದ ವಿಷ್ಣುವನ್ನು ಧರಿಸಿ ಪಾದಪೀಠದಲ್ಲಿ ಬ್ರಹ್ಮನನ್ನಿರಿಸಿ ಕುಣಿದ. ಗೋಕ್ಷೀರ ವರ್ಣದ ಮುಕ್ಕಣ್ಣನಾದ ಆ ಶಿವನನ್ನು ಕಂಡು ಪರಶಿವನೆಂದ, 'ಮಗನೆ, ನಾನು ನಿನಗೊಲಿದ್ದೇನೆ. ಬೇಕಾದವರವನ್ನು ಕೇಳು.'

'ನನಗೆ ಮಾಡುವ ಪೂಜೆ ನಿನಗೆ ಸೇರಲಿ. ನನ್ನೊಳಗೆ ನೀನು ಸದಾ ಇರು. ನೀನೆ ನಾನಾಗುವೆನು.'

'ಹಾಗೆ ಆಗಲಿ' ಎಂದ ಪರಶಿವ.

ಬ್ರಹ್ಮನನ್ನು ಕರೆದು 'ನೀನೊಂದು ಗುಣವನ್ನು ಧರಿಸು' ಎಂದ. ಬ್ರಹ್ಮನೆಂದ ನಾನು ರಜೋಗುಣವನ್ನು ಧರಿಸುವೆ. ವಿಷ್ಣು ಸತ್ವಗುಣವನ್ನು ಧರಿಸಲಿ. ತಮೋ ಗುಣವನ್ನು ಮಹೇಶ್ವರನು ಧರಿಸಲಿ. ಆದರೆ ಅದನ್ನು ನಿತ್ಯ ಧರಿಸಲು ಶಕ್ತಿಯನ್ನು ನೀನು ನಮಗೆ ಕೊಡಬೇಕು.' ಪರಶಿವನೆಂದ ''ವಿದ್ಯಾಶಕ್ತಿಯೆ ಗುಣಗಳನ್ನು ಧರಿಸಲು ಬೇಕಾಗುವ ಶಕ್ತಿ. ಅದು ಗುಣತ್ರಯವನ್ನಾಶ್ರಯಿಸುತ್ತದೆ. ಅವಿದ್ಯೆಯನ್ನೂ ಈ ಗುಣಗಳನ್ನಾಶ್ರಯಿಸು ವದರಿಂದ ಅವನ್ನು ಸುಟ್ಟು ಅದರ ಸಾರವನ್ನು ಮಾತ್ರ ಧರಿಸಬೇಕು.

'ಸುಡಲು ಬೆಂಕಿ ಎಲ್ಲಿದೆ ?'

'ಮಹೇಶ್ವರನ ಕಣ್ಣಿನಲ್ಲಿದೆ'.

ಹೀಗೆ ಹೇಳಿ ಪರಮಶಿವನು ಭಸ್ಮವನ್ನು ತಯಾರಿಸುವ ವಿಧಾನವನ್ನು ಉಪದೇಶಿಸಿದ. 'ಗುಣತ್ರಯವು ಒಂದು ಹಸು. ಅದರ ಗೋಮಯವೆ ವಿದ್ಯೆ. ಮೂತ್ರವೆ ಉಪನಿಷತ್ತು. ಅವುಗಳಿಂದ ಭಸ್ಮ ತಯಾರಿಸಬೇಕು.

''ಆಗಾವೊ'' ಎಂಬ ಮಂತ್ರದಿಂದ ಹಸುವನ್ನು ಅಭಿಮಂತ್ರಿಸಿ ''ಗಾವೋ ಭಗೋಗಾವ'' ಎಂಬ ಮಂತ್ರದಿಂದ ಹುಲ್ಲು ನೀರು ಕೊಡಬೇಕು. ಶುಕ್ಲ ಅಥವಾ ಕೃಷ್ಣಪಕ್ಷದ ಚತುರ್ದಶಿದಿನ ಉಪವಾಸವಿದ್ದು ಮರುದಿನ ಬೆಳಿಗ್ಗೆ ಸ್ನಾನ ಮಾಡಿ ಮಡಿ ಬಟ್ಟೆ ಉಟ್ಟು ಹಸುವಿನ ಬಳಿಗೆ ಹೋಗಬೇಕು. ಅದನ್ನೆಬ್ಬಿಸಿ ಗಾಯತ್ರಿ ಮಂತ್ರದಿಂದ ಮೂತ್ರವನ್ನು ಸಂಗ್ರಹಿಸಿಕೊಳ್ಳಬೇಕು. ಚಿನ್ನ ಬೆಳ್ಳಿ ತಾಮ್ರ ಮಣ್ಣು ತಾವರೆಎಲೆ ಮುತ್ತು ಗದೆಲೆ ಅಥವಾ ಗೋಶೃಂಗದಲ್ಲಿ ಆ ಮೂತ್ರವನ್ನಿಟ್ಟುಕೊಳ್ಳಬೇಕು. **''ಗಂಧದ್ವಾರಾಂ''** ಎಂಬ ಮಂತ್ರದಿಂದ ನೆಲಕ್ಕೆ ಬೀಳುವ ಮೊದಲು ಗೋಮಯವನ್ನು ಹಿಡಿದುಕೊಳ್ಳಬೇಕು.

**'ಶ್ರೀ ರ್ಮೇ'** ಭಜತು ಎಂಬ ಮಂತ್ರದಿಂದ ಗೋಮಯವನ್ನು ಶೋಧಿಸಿ **'ಅಲಕ್ಷ್ಮೀರ್ಮೇ'** ಎಂಬ ಮಂತ್ರದಿಂದ ಪ್ರೋಕ್ಷಿಸಿ **'ತಂತ್ವಾಸಿಂಚಾಮಿ'** ಎಂಬ ಮಂತ್ರದಿಂದ ಅದಕ್ಕೆ ಗೋಮೂತ್ರವನ್ನು ಸೇರಿಸಿ, **'ಪಂಚಾನಾಂ ತ್ವಾ'** ಎಂಬ ಮಂತ್ರದಿಂದ ಹದಿನಾಲ್ಕು ಉಂಡೆಗಳನ್ನು ಮಾಡಬೇಕು. ಬಿಸಿಲಲ್ಲಿ ಒಣಗಿಸಬೇಕು.

ಗೃಹ್ಯೋಕ್ತ ವಿಧಾನದಿಂದ ಅಗ್ನಿಪ್ರತಿಷ್ಠೆಮಾಡಿ ಆಧಾರಾಜ್ಯ ಭಾಗಗಳನ್ನು ಹೋಮಿಸಿ **'ನಿಧನಪತಯೇ ನಮಃ'** ಎಂಬ ಮಂತ್ರದಿಂದ ಗೋಮಯದ ಉಂಡೆಗಳನ್ನು ಹಾಕಿ ಐದು ಬ್ರಹ್ಮಾಹುತಿಗಳನ್ನ **'ನಮೋ ಹಿರಣ್ಯ ಬಾಹವೇ'** ಎಂಬ ಮಂತ್ರದಿಂದ

ಪೂರ್ಣಾಹುತಿಯನ್ನೂ ಕೊಡಬೇಕು. **'ಋತಸರ್ವಃ'** 'ಕದ್ರುದ್ರಾಯ' ಯಸ್ಯಚ್ಛೈ ಕಂಶತೀ' ಎಂಬ ಮಂತ್ರಗಳಿಂದಲೂ **'ಅನಾಜ್ಞಾತಂ'** ಎಂಬ ಮೂರು ಮಂತ್ರಗಳಿಂದಲೂ ವ್ಯಾಹೃತಿಗಳಿಂದಲೂ ಹೋಮಿಸಿ ಸ್ವಿಷ್ಟಕೃತ ಮತ್ತು ಇಧ್ಮಶೇಷ ಹೋಮ ಮಾಡಬೇಕು. ಪೂರ್ಣಮಾಸಾಂತವಾದ ಯಜುಸ್ಸಿನಿಂದ ಪೂರ್ಣ ಪಾತ್ರಜಲಕ್ಕೆ ಬೇರೆ ನೀರು ಸೇರಿಸಿ **'ಬ್ರಾಹ್ಮಣೇಷ್ವಮೃತಂ'** ಎಂಬ ಮಂತ್ರದಿಂದ ತಲೆಗೆ ಪ್ರೋಕ್ಷಿಸಿಕೊಳ್ಳಬೇಕು. **'ಪ್ರಾಚ್ಯಾಂ ದಿಶಿ ದೇವಾಃ'** ಎಂಬ ಮಂತ್ರದಿಂದ ಸುತ್ತಲೂ ನೀರನ್ನು ಪ್ರೋಕ್ಷಿಸಕೊಳ್ಳಬೇಕು. ಬ್ರಹ್ಮನಿಗೆ ದಕ್ಷಿಣೆಯಿತ್ತು ಮೂರು ದಿನಗಳ ಕಾಲ ಬೆಂಕಿ ಉಳಿಯುವಂತೆ ಅದನ್ನು ಮುಚ್ಚಲು ಹೊಟ್ಟನ್ನು ತರಬೇಕು. ಎಲ್ಲ ದೇವತೆಗಳ ಕರ್ಮ ರಕ್ಷಣೆಗಾಗಿ ಈ ಅಗ್ನಿಯನ್ನು ತಂದು ಹೊಟ್ಟಿನಿಂದ ಮುಚ್ಚುತ್ತೇನೆಂದು ಹೇಳುತ್ತ ಮುಚ್ಚಬೇಕು. ಬ್ರಾಹ್ಮಣರಿಗೆ ಭೋಜನಮಾಡಿಸಿ ತಾನೂ ಉಣಬೇಕು.

ಮೂರನೆ ಅಥವಾ ನಾಲ್ಕನೆ ದಿನ ಬೆಳಿಗ್ಗೆ ಸ್ನಾನಮಾಡಿ ಬಿಳಿ ಬಟ್ಟೆ ಬಿಳಿಯ ಜ್ಞೋಪವೀತ. ಬಿಳಿಹೂಮಾಲೆ, ಬಿಳಿ ಗಂಧಲೇಪ ಧರಿಸಿ ಭಸ್ಮವನ್ನು ಬಳಿದು **'ತದ್ಬ್ರತ' 'ಜಲಮಿತಿ ಭಸ್ಮ' 'ಸತ್ಯಮಿತಿ ಭಸ್ಮ** ಎಂಬ ಮಂತ್ರಗಳನ್ನು ಹೇಳಿ ಆವಾಹನಾದಿ ಷೋಡಶೋಪಚಾರ ಪೂಜೆ ಮಾಡಬೇಕು. ಆಹುತಿಗಳನ್ನು ಕೊಟ್ಟು ಅಗ್ನಿಯನ್ನು ಉಪಸಂಹರಿಸಿ **'ಅಗ್ನೇರ್ಭಸ್ಮ'** ಎಂಬ ಮಂತ್ರದಿಂದ ಭಸ್ಮವನ್ನು ಎತ್ತಿಕೊಳ್ಳಬೇಕು, **'ಅಗ್ನಿರಸ್ಮಿ'** ಎಂಬ ಮಂತ್ರದಿಂದ ಶೋಧಿಸಬೇಕು. ಬಳಿಕ ಗಂಗೋದಕ ಕೇಸರಿ, ಲಾಮಂಚ, ಚಂದನ, ಬಿಳಿಕಪ್ಪು ಅಗುರುಗಳನ್ನು ಪ್ರಣವೋಚ್ಚಾರಣ ಪೂರ್ವಕವಾಗಿ ಅದರಲ್ಲಿ ಬೆರಸಬೇಕು. ಬಳಿಕ ಕಪಿಲೆಯ ಹಾಲನ್ನು ಈ ಕಪಿಲಾ ಮಂತ್ರದಿಂದ ಬೆರೆಸಬೇಕು.

**ಅಮೃತಂ ದೇವಿ ತೇ ಕ್ಷೀರಂ ಪವಿತ್ರಮಿಹ ಬುದ್ಧಿದಂ**
**ತವ ಪ್ರಸಾದಾನ್ಮುಚ್ಯಂತೆ ಮನುಜಾಃ ಸರ್ವಪಾಪ್ಮನಃ**

ದೇವಿ, ನಿನ್ನ ಹಾಲು ಅಮೃತ, ಪವಿತ್ರ ಬುದ್ಧಿದಾಯಕ. ನಿನ್ನ ಅನುಗ್ರಹದಿಂದ ಮಾನವರು ಎಲ್ಲ ಪಾಪಗಳಿಂದ ಬಿಡುಗಡೆ ಹೊಂದುತ್ತಾರೆ.

ಪ್ರಣವ ಮತು **'ಅಣೋರಣೀಯಾನ್'** ಎಂಬ ಮಂತ್ರಗಳಿಂದ ಸಣ್ಣ ಸಣ್ಣಗುಳ್ಳೆಗಳನ್ನಾಗಿ ಮಾಡಬೇಕು, ಒಣಗಿಸಬೇಕು. ಸಪ್ತಪ್ರಣವಗಳಿಂದ ಅಭಿಮಂತ್ರಿಸಿ ಪ್ರಣವದಿಂದಲೆ ತಿಕ್ಕಿ ಈಶಾನ ತತ್ಪುರುಷ ಅಘೋರ ವಾಮದೇವ ಸದ್ಯೋಜಾತ ಮಂತ್ರಗಳಿಂದ ಕ್ರಮವಾಗಿ ತಲೆ ಮುಖ ಎದೆ ಗುಹ್ಯ ಪಾದಗಳಿಗೆ ಪ್ರಣವದಿಂದ ಸರ್ವಾಂಗಳಿಗೆ ಭಸ್ಮಬಳಿದುಕೊಂಡು ಆಚಮನಮಾಡಿ ಬಿಳಿಯಾದ ಮಡಿಬಟ್ಟೆ ಉಡಬೇಕು. ತಿರುಗಿ ಆಚಮನಮಾಡಿ ಪ್ರಣವದಿಂದ ಭಸ್ಮವನ್ನು ಕಲಸಿ ತ್ರಿಗುಣಾಧಾರನಾದ ತ್ರಿಮೂರ್ತಿಗಳ ಜನಕನಾದ ಮುಕ್ಕಣ್ಣನನ್ನು ನೆನೆದು **'ನಮಃ ಶಿವಾಯ' 'ನಮಃ ಶಿವಾಭ್ಯಾಂ' 'ಅಘೋರಾಯ ನಮಃ' 'ಭೀಮಾಯ' 'ನೀಲಕಂಠಾಯ'** ಎಂಬ ಮಂತ್ರಗಳಿಂದ ಕ್ರಮವಾಗಿ ಹಣೆ, ಬಾಹುಗಳು, ಮೊಳಕೈಗಳು, ಬೆನ್ನು ಮತ್ತು ಕುತ್ತಿಗೆಯ ಹಿಂಭಾಗ, ತಲೆ ಇವುಗಳಲ್ಲಿ ತ್ರಿಪುಂಡ್ರ ಧರಿಸಬೇಕು. **'ಸರ್ವಾತ್ಮನೇ ನಮಃ'** ಎಂದು ಕೈತೊಳೆದುಕೊಳ್ಳಬೇಕು.

ನೀವು ಈ ವಿಧಾನದಿಂದ ಭಸ್ಮವನ್ನು ಸಿದ್ಧಪಡಿಸಿ ಬಳಿದುಕೊಳ್ಳಿ. ಆಗ ಗುಣಗಳನ್ನು ಧರಿಸಬಲ್ಲಿರಿ. ಲೋಕವನ್ನು ಸೃಷ್ಟಿ ಮಾಡಬಲ್ಲಿರಿ.

ಬ್ರಹ್ಮ, ವಿಷ್ಣು, ಮಹೇಶ್ವರರು ಪರಶಿವನ ಈ ಮಾತನ್ನು ಕೇಳಿ ಹಾಗೇ ಮಾಡಿದರು. ಯಾವ ಗುಣವನ್ನು ಯಾರು ಧರಿಸಬೇಕೆನ್ನುವುದರಲ್ಲಿ ವಿವಾದ ಉಂಟಾದಾಗ ಪರಶಿವನನ್ನೆ ಕೇಳಿದರು. ಅವನೆಂದ, 'ರಜೋಗುಣವನ್ನು ಬ್ರಹ್ಮನು ಧರಿಸಲಿ, ಅವನು ಅಲ್ಪಾಯು ಮನುಗಳಿರುವಷ್ಟು ಕಾಲ ಇರುವನು, ನನ್ನ ಜ್ಞಾನವೂ ಅವನಿಗಿಲ್ಲ. ಅವನಿಗಿಂತ ಹೆಚ್ಚಿನ ಬಲ ಆಯುಸ್ಸುಗಳಿರುವುದರಿಂದ ವಿಷ್ಣು ಸತ್ವ ಗುಣವನ್ನು ಧರಿಸಲಿ. ನನ್ನ ನಾಲ್ಕು ನಿಶ್ವಾಸಗಳ ಕಾಲ ಅವನಾಯುಸ್ಸು ಇದೆ. ಅವನು ನನ್ನನ್ನು ತಿಳಿದಿದ್ದಾನೆ. ಎಂದೂ ನನ್ನನ್ನು ಮರೆಯುವುದಿಲ್ಲ. ಅವನ ಪೂಜೆ ಸಾತ್ವಿಕವಾಗಿರಬೇಕು. ರಾಜಸ, ತಾಮಸ ಪೂಜೆಗಳು ಅವನಿಗಿಲ್ಲ. ತಮೋಗುಣವನ್ನು ಮಹೇಶ್ವರನು ಧರಿಸಲಿ, ಅವನು ಹಿಂದೆ ಮೂರು ಗುಣಗಳನ್ನೂ ಧರಿಸಿರುವುದರಿಂದ ಸಾತ್ವಿಕ ರಾಜಸ ತಾಮಸ ಎಂಬ ಮೂರು ಬಗೆಯ ಪೂಜೆಗಳೂ ಅವನಿಗೆ ಸಲ್ಲುತ್ತವೆ. ರಜಸ್ಸು ತಮಸ್ಸಿನ ಜೊತೆಗೂಡಿದರೆ ದಾರುಣವೆನಿಸುತ್ತದೆ. ಶಂಕರನ ಆ ರೀತಿಯ ಪೂಜೆಯೂ ಗತಿ ನೀಡುವುದು. ಅದು ಮಧ್ಯೆ ನಿಂತರೂ ಫಲವಿದೆ. ತಮಸ್ಸಿಗೆ ಸತ್ವ ಸೇರಿದರೆ ಮಿಶ್ರ ಪೂಜೆಯಾಗುವುದು. ಅದು ನಿಷ್ಫಲ, ಯಾರೆ ಇರಲಿ ಎಂಥ ಪೂಜೆಯನ್ನೆ ಮಾಡಲಿ ನಿಯಮದಿಂದ ಮಾಡಿದರೆ ಶಂಕರನು ಬೇಗನೆ ಫಲ ನೀಡುತ್ತಾನೆ.'

**ಶಂಭು :-** ಭಸ್ಮಧಾರಣ ವಿಧಾನವನ್ನು ಸಂಕ್ಷೇಪವಾಗಿ ಹೇಳಿದ್ದೇನೆ. ಹೇಳುವವರ ಕೇಳುವವರ ಎಲ್ಲ ಪಾಪಗಳನ್ನೂ ಇದು ಪರಿಹರಿಸುತ್ತದೆ.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಪಾತಾಳಖಂಡದಲ್ಲಿ*
*ಭಸ್ಮಧಾರಣೆ ವೆಂಬ ನಲವತ್ತೇಳನೆ ಅಧ್ಯಾಯ ಮುಗಿದುದು*



## ಶಿವಪೂಜೆ

## ಅಧ್ಯಾಯ - ೪೮

**ಶಂಭುರುವಾಚ**

**ಶಂಭು :-** ಶಿವಭಕ್ತಿಯನ್ನುಂಟು ಮಾಡುವ ಒಂದು ಕಥೆಯನ್ನು ಹೇಳುತ್ತೇನೆ. ಹಿಂದೆ ಇಕ್ಷ್ವಾಕುವೆಂಬ ಒಬ್ಬ ಬ್ರಾಹ್ಮಣನಿದ್ದ. ಅವನು ಒಳ್ಳೆಯ ಬುದ್ಧಿಶಾಲಿ, ಎಲ್ಲ ಶಾಸ್ತ್ರಗಳನ್ನೋದಿದವ. ಆದರೆ ಯಾಗ, ದಾನ, ದೇವಪೂಜೆ, ಪಾಠ, ಪ್ರವಚನ, ಇವಾವುದನ್ನೂ ಮಾಡುತ್ತಿರಲಿಲ್ಲ. ಕೇವಲ ಶರೀರ ಪೋಷಣೆ ಮಾಡಿಕೊಂಡು ಸುಖಭೋಗಗಳನ್ನು ಅನುಭವಿಸುತ್ತಿದ್ದ. ಹೀಗೆ ಅವನ ಆಯಸ್ಸು ಕಳೆಯಿತು. ಆಯುಸ್ಸಿನ ಕೊನೆಯ ವರ್ಷದಲ್ಲಿ ಐದನೆ ತಿಂಗಳಿನ ಮೂರನೆ ದಿನದಲ್ಲಿ ರಾತ್ರಿ ಪುರಾಣ ಶ್ರವಣ ಮಾಡಿದನಾತ. 'ಗಳಿಸಿ ಕೂಡಿಟ್ಟ ಹಣವನ್ನು ಯಾರಿಗೂ ದಾನಮಾಡದಿದ್ದರೆ ನರಕವಾಸ ತಪ್ಪಿದ್ದಲ್ಲ. ಬಳಿಕ ಕ್ರಿಮಿಯಾಗಿ ಸಾವಿರ ಬಾರಿ ಹುಟ್ಟಿ, ಸತ್ತು, ಕೊನೆಗೆ ದರಿದ್ರನಾಗಿ ವ್ಯಾಧಿಗಳನ್ನು ಹಿಡಿದುಕೊಂಡೆ ಹುಟ್ಟುತ್ತಾನೆ. ಬಂಧುಗಳು ತೊಲಗುವರು. ಹೆಂಡತಿ ಕೆಡುವಳು. ಮಕ್ಕಳು ಬಹುಸಂಖೆಯಲ್ಲಿ ಹುಟ್ಟುವರು. ಭಿಕ್ಷೆ ಬೇಡಿ ಉಣ್ಣುವಂತಾಗುವುದು.' ಪುರಾಣದ ಈ ಉಪದೇಶವನ್ನು ಕೇಳಿ ಇಕ್ಷ್ವಾಕು ಭೀತನಾಗಿ ಚಿಂತಿಸತೊಡಗಿದ.

**ಬಹುಶಾಸ್ತ್ರಂ ಸಮಭ್ಯಸ್ಯ ಬಹೂನ್ ವೇದಾನ್ ಸವಿಸ್ತರಾನ್**
**ಪುಂಸೋಽಶ್ರುತ ಪುರಾಣಸ್ಯ ನ ಸಮ್ಯಗ್ ಗತಿ ದರ್ಶನಂ**

ಎಷ್ಟೇ ಶಾಸ್ತ್ರ ಓದಿದರೂ ವೇದಗಳನ್ನು ವಿಸ್ತಾರವಾಗಿ ಅಭ್ಯಾಸ ಮಾಡಿದರೂ ಪುರಾಣ ಶ್ರವಣ ಮಾಡದವನು ಪರಲೋಕದ ಮಾರ್ಗವನ್ನು ಸರಿಯಾಗಿ ಕಂಡುಕೊಳ್ಳಲಾರ. ಹೀಗೆ ಆಲೋಚಿಸುತ್ತಿದ್ದಂತೆ ಅವನಿಗೆ ಅಕಾಲ ಮರಣ ಒದಗಿತು. ಯಮಲೋಕದಲ್ಲಿ ಯಮನು ಅವನಿಗೆ ಉಪದೇಶಿಸಿದ. 'ನೀನು ಅನೇಕ ಪಾಪಗಳನ್ನು ಮಾಡಿರುವೆ. ಅದಕ್ಕಾಗಿ ಕೋಟಿವರ್ಷಗಳ ಕಾಲ ನರಕವಾಸ ನಿನಗಿದೆ. ಆದರೆ ಇನ್ನೂ ಸ್ವಲ್ಪ ಆಯಸ್ಸು ಇರುವುದರಿಂದ ಈಗ ಹಿಂತಿರುಗಿ ಹಿಂದಿನ ದೇಹವನ್ನೆ ಸೇರಿಕೊಳ್ಳು. ಪುಣ್ಯಸಂಪಾದನೆ ಮಾಡು. ದಾನ, ದೇವತಾರ್ಚನೆ, ಜಪ, ಪ್ರವಚನ, ಬ್ರಾಹ್ಮಣರಿಗೆ ಭೋಜನ, ಭಸ್ಮಧಾರಣ ಮಾಡುತ್ತ ಶಿವನನ್ನು ಭಜಿಸು. ಅದಕ್ಕೆ ಪ್ರಯತ್ನ ಮಾಡಿದರೂ ಮುಂದೆ ನನ್ನ ಲೋಕಕ್ಕೆ ನೀನು ಬರಬೇಕಾಗುವುದಿಲ್ಲ.

**ಯತ್ ಕಿಂಚಿತ್ ಪ್ರತ್ಯಹಂ ಪಾಪಿನ್ ಪುರಾಣಂ ಶೃಣು ಸಾದರಂ**
**ತತಸ್ತಚ್ಛ್ರವಣಾದೇವ ನೇಕ್ಷಸೇ ಮಮ ಯಾತನಾಃ ॥**

ಪಾಪಿಯೆ, ಪ್ರತಿದಿನವೂ ಯಾವುದಾದರೊಂದು ಪುರಾಣವನ್ನು ಶ್ರದ್ಧೆಯಿಂದ ಕೇಳು. ಅದರಿಂದ ನಾನು ಕೊಡುವ ಯಾತನೆಗಳ ದರ್ಶನ ನಿನಗುಂಟಾಗಲಾರದು.

ಬಳಿಕ ಇಕ್ಷ್ವಾಕು ತನ್ನ ಹಿಂದಿನ ಶರೀರವನ್ನೆ ಸೇರಿ ಶಿವಪೂಜೆ ಮಾಡಬಯಸಿದ. ಶಿವಪೂಜಕನಾದ ಜಾಬಾಲಿ ಮುನಿಯನ್ನು ಕಾಣಲು ಮಂದರಪರ್ವತಕ್ಕೆ ಹೋದ. ನಾನಾ ಬಗೆಯ ಹೂಬಳ್ಳಿಗಳು, ಹಕ್ಕಿಗಳು, ಗುಹೆಗಳಲ್ಲಿ ಕುಳಿತು ಹಾಡುವ ಕಿನ್ನರ ದಂಪತಿಗಳು, ರತಿ ಶ್ರಮದಿಂದ ಮಲಗಿ ನಿದ್ರಿಸುವವರನ್ನೆಚ್ಚರಿಸುವಂತೆ ಝೇಂಕರಿಸುವ ದುಂಬಿಗಳು, ವಿರಹಿಗಳು ಒಂದುಗೂಡುವಂತೆ ಉಲಿವ ಕೋಗಿಲೆಗಳು, ಪರಸ್ಪರ ವೈರವನ್ನು ಮರೆತು ಓಡಾಡುವ ಮೃಗಗಳು, ಋಷಿಗಳು, ಅಪ್ಸರೆಯರು, ಗಂಧರ್ವರು, ದೇವಾಲಯಗಳು, ಮಹಡಿ ಮನೆಗಳು, ಆನೆ ಹುಲಿ, ಕರಡಿ ಮುಂತಾದ ಪ್ರಾಣಿಗಳಂತೆ ಅಥವಾ ಮರ ಬಿಳಿಕಲ್ಲು ಶಂಖ ಕಮಲ ಮುಂತಾದ ವಸ್ತುಗಳಂತೆ ಕಾಣುವ ಚಿತ್ರವಿಚಿತ್ರಾಕಾರದ ಶಿವಗಣಗಳು, ಈ ಮಂದರ ಪರ್ವತದಲ್ಲಿವೆ. ಶಿವಗಣಗಳ ಆಕಾರ ವೈವಿಧ್ಯ ಎಷ್ಟೆಂದರೆ ಜಗತ್ತಿನಲ್ಲಿ ಎಷ್ಟು ಪದಾರ್ಥಗಳಿವೆಯೊ ಅವನ್ನು ಯಾವುದಾದರೊಂದು ಗಣದ ಮುಖ ಹೋಲುತ್ತದೆ. ಮನ್ಮಥನಂಥ ರೂಪಲಾವಣ್ಯ ಕೋಮಲತೆಗಳನ್ನು ಈ ಗಣಗಳಲ್ಲಿ ನೋಡಬಹುದು. ಕೋಟಿಸೂರ್ಯರ ತೇಜಸ್ಸನ್ನೂ ಕಾಣಬಹುದು. ಕೋಟಿಚಂದ್ರರ ಕಾಂತಿಯನ್ನೂ ಕಾಣಬಹುದು. ಗಣಗಳೆಲ್ಲವೂ ವಿಶ್ವಮುಖ ವಿಶ್ವರೂಪ. ಕೆಲವರು ರತಿ ಕಾಮರಂತೆ ಕೆಲವರು ಲಕ್ಷ್ಮೀ ನಾರಾಯಣರಂತೆ, ಇನ್ನು ಕೆಲವರು ಉಮಾಮಹೇಶ್ವರರಂತೆ ನಾನಾ ಭೋಗ ಸಮೃದ್ಧಿಯ ಸುಖವನ್ನು ಸವಿಯುವರು. ಅಲ್ಲಿರುವ ಹಸುಗಳೆಲ್ಲವೂ ವೇದಸ್ವರೂಪಿಗಳು, ಕರುಗಳೆಲ್ಲವೂ ಮೀಮಾಂಸಾ ಸ್ವರೂಪಿಗಳು, ಸ್ಮೃತಿ ಇತಿಹಾಸ ಪುರಾಣ ಆಗಮಗಳೆಲ್ಲವೂ ಮೂರ್ತಿಮತ್ತಾಗಿ ಅಲ್ಲಿ ವಿಹರಿಸುವುವು.

ಈ ಬೆಟ್ಟದ ಮಧ್ಯಭಾಗದಲ್ಲಿ ಅತ್ಯಂತ ಸುಂದರವಾದ ಒಂದು ನಗರವಿದೆ. ಏಳುಸುತ್ತಿನ ಕೋಟೆ ಕಂದಕಗಳಿಂದ ಸುತ್ತುವರಿಯುವದರಿಂದ ಆ ನಗರದ ಕಾಂತಿ

ಉಷ್ಣವೂ ಅಲ್ಲ ಶೀತವೂ ಅಲ್ಲ ಎನ್ನುವಂತಿತ್ತು. ನಗರದ ನಡುವೆ ಅರಮನೆ. ಅದರ ನಡುವೆ ಸಭೆ. ಅದರಲ್ಲಿ ಒಂದು ಭದ್ರಾಸನ. ನಾಲ್ಕು ವೇದಗಳೆ ಅದರ ಕಾಲುಗಳು. ಉಪನಿಷತ್ತುಗಳೆ ಪಾದಪೀಠ. ಪುರಾಣಗಳೂ ಆಗಮಗಳೂ ಪಾದಪೀಠದ ಬಳಿನಿಂತು ಸ್ವಸ್ತಿವಾಚನ ಮಾಡುವುವು. ಭದ್ರಾಸನವನ್ನಲಂಕರಿಸಿದವನು ಮಹಾಯೋಗಿಯಾದ ಶಂಕರ. ಗೋಕ್ಷೀರ ವರ್ಣದ ಹದಿನಾರು ವಯಸ್ಸಿನ ಶರೀರ. ಮಂದಹಾಸ ಬೀರುವ ಸುಂದರ ಮುಖ. ಜನಿವಾರ ರುದ್ರಾಕ್ಷಮಾಲೆ ಕಿರೀಟ ಕುಂಡಲ ಮುಂತಾದ ಆಭರಣಗಳನ್ನು ಧರಿಸಿದ್ದಾನೆ. ನಾನಾ ಬಗೆಯ ಗಂಧವನ್ನು ಬಳಿದುಕೊಂಡಿದ್ದಾನೆ. ಎಡತೊಡೆಯಲ್ಲಿ ನವಯೌವನ ಭರಿತೆಯಾದ ಮಧುರ ಮೋಹಕ ಸುಂದರಾಂಗಿ ಮುಗ್ಧೆ ಪಾರ್ವತಿ ಕುಳಿತಿದ್ದಾಳೆ. ಕೈಯಲ್ಲಿ ಚಿನ್ನದ ತಾವರೆ ಹೂವನ್ನು ಹಿಡಿದಿದ್ದಾಳೆ. ಶಿವನು ಎಡಗೈಯಿಂದ ಅವಳ ಬಾಗಿದ ಮುಖವನ್ನು ಮೇಲೆತ್ತುತ್ತಾನೆ. ಎಡಗೈಯಿಂದ ತಲೆಯನ್ನು ಹಿಡಿದು ಬಲಗೈಯಿಂದ ಹಣೆಗೆ ತಿಲಕವಿಡುತ್ತಾನೆ.

ಭಕ್ತಿವನಿತೆಯು ಪುಣ್ಯಕವೆಂಬ ಬೀಸಣಿಗೆ ಬೀಸುತ್ತಾಳೆ. ಪೂಜೆಯ ಹೂ ಮಾಲೆ ಹಿಡಿಯುತ್ತಾಳೆ. ಜ್ಞಪ್ತಿ ವಿರಕ್ತಿಯರು ಯೋಗಚಾಮರಗಳನ್ನು ಹಿಡಿಯುತ್ತಾರೆ. ಸಮಾಧಿಯು ಶಿವನ ಕಾರ್ಯನಿರ್ವಾಹಕ. ಅವನ ಮಡದಿಯೆ ಧಾರಣೆ. ಯಮನಿಯಮಗಳು ಕಿಂಕರರು. ಪ್ರಾಣಾಯಾಮವು ಪುರೋಹಿತ. ಪ್ರತ್ಯಾಹಾರವೆ ಸುವರ್ಣಧಾರಿ. ಧ್ಯಾನವೆ ಕೋಶ್ಯಾಧಕ್ಷ, ಸತ್ಯವೇ ಸೇನಾಪತಿ.

**ಬ್ರಹ್ಮ ಪ್ರಭೃತಿ ಕೀಟಾಂತಾಃ ಪಠವಸ್ತತ್ಪತಿಃ ಶಿವಃ**

ಬ್ರಹ್ಮನಿಂದ ತೊಡಗಿ ಕೀಟದವರೆಗಿನ ಎಲ್ಲ ಜಂತುಗಳೂ ಪಶುಗಳು. ಅವುಗಳಿಗೊಡೆಯನೆ ಶಿವ. ಧರ್ಮವು ಪಶುಗಳನ್ನು ಕಾಪಾಡುತ್ತದೆ. ಅಧರ್ಮವು ಅಪಹರಿಸುತ್ತದೆ. ಈ ಪಶುಗಳನ್ನು ಮಾಯೆಯ ಪಾಶ ಬಿಗಿದಿದೆ. ಕಾಶೀ ಮರಣದಿಂದ ಪಾಶನಿವೃತ್ತಿಯಾಗುತ್ತದೆ. ಬ್ರಹ್ಮ ವಿಷ್ಣು ಮಹೇಂದ್ರ ಮುಂತಾದವರು ಶಿವನ ನಗರದ ದ್ವಾರಪಾಲಕರು. ಲಕ್ಷ್ಮೀಸರಸ್ವತಿಯರು ಹೊಸಲಿನ ಅಲಂಕಾರ. ನೆಲ ಸಾರಿಸುವುದಕ್ಕೆ ನೇಮಿಸಲ್ಪಟ್ಟವರು. ಎಲ್ಲ ದೇವರುಗಳೂ ಅವನ ದಾಸರು ಎಲ್ಲ ದೇವಸ್ತ್ರೀಯರೂ ಅವನ ದಾಸಿಯರು. ಇಂಥ ಮಂದರ ಪರ್ವತವನ್ನು ನೋಡಿ ಜಾಬಾಲಿಯ ಬಳಿಗೆ ಬಂದ ಇಕ್ಷ್ವಾಕು. 'ಮುನಿಯೇ, ನಾನಿಲ್ಲಿ ತಪಸ್ಸು ಮಾಡಬಲ್ಲೆನೆ ? ನನ್ನ ಆಯುಸ್ಸು ಸ್ವಲ್ಪ ಮಾತ್ರ ಉಳಿದೆದೆಯೆಂದು ಯಮನೆ ಹೇಳಿದ್ದಾನೆ. ನರಕಗಳೂ ಬಹಳ ಇವೆ. ನನಗೆ ಶ್ರೇಯಸ್ಸು ಹೇಗೆ ದೊರಕೀತು ?' ಎಂದು ಕೇಳಿದ.

**ಜಾಬಾಲಿ :-** ಅಭ್ಯಾಸವಿಲ್ಲದಿರುವದರಿಂದ ನೀನು ತಪಸ್ಸು ಯೋಗಗಳನ್ನು ಅನುಷ್ಠಾನಮಾಡಲಾರೆ. ಸಂಪತ್ತಿಲ್ಲದಿದ್ದುದರಿಂದ ದಾನ ಮಾಡಲಾರೆ. ಸಾಮರ್ಥ್ಯ ವಿಲ್ಲದುದರಿಂದ ಪೂಜೆ ಮಾಡಲಾರೆ. ಆಯುಷ್ಯವಿಲ್ಲದುದರಿಂದ ಯಜ್ಞ, ವ್ರತಾನುಷ್ಠಾನ, ಜನಸೇವೆ, ಪಾಠಪ್ರವಚನ ತೀರ್ಥಯಾತ್ರೆ ಮುಂತಾದವುಗಳನ್ನು ಮಾಡಲಾರೆ. ಹತ್ತು ದಿನಗಳು ಮಾತ್ರ ನಿನಗೆ ಆಯುಷ್ಯವಿದೆ. ಅದರೊಳಗೆ ಏನು ಮಾಡಬಲ್ಲೆ !

**ಇಕ್ಷ್ವಾಕು :-** ಬದುಕಿರುವಷ್ಟು ಕಾಲವೂ ಅನುಷ್ಠಾನ ಮಾಡುವೆನೆಂದು ಸಂಕಲ್ಪಿಸಿ ಯಾವುದಾದರೊಂದು ವ್ರತವನ್ನು ಕೈಗೊಂಡರೆ ಪಾಪಪರಿಹಾರವಾಗುವುದೆಂದು

ಕೇಳಿದ್ದೇನೆ. ಅಂಥ ಯಾವುದಾದರೊಂದು ಪುಣ್ಯಕರ್ಮವನ್ನು ಉಪದೇಶಿಸು. ನರಕಭಯದಿಂದ ಕಂಗೆಟ್ಟಿದ್ದೇನೆ, ಕಾಪಾಡು.

**ಸರ್ವ ಧರ್ಮಫಲಂ ಪ್ರಾಹುಃ ಶರಣಾಗತ ಪಾಲನಂ ॥**

ಮೊರೆ ಹೊಕ್ಕವರನ್ನು ಕಾಪಾಡಿದರೆ ಎಲ್ಲ ಧರ್ಮಾಚರಣೆಯ ಫಲ ಸಿಗುವುದೆಂದು ಹೇಳುತ್ತಾರೆ.

**ಜಾಬಾಲಿ :-** ಒಂದು ಅತಿರಹಸ್ಯವಾದ ಧರ್ಮವಿದೆ. ಶ್ರುತ್ಯುಕ್ತವಾದ ಆ ಧರ್ಮವು ನನ್ನ ಪ್ರಾಣಕ್ಕೆ ಸಮಾನವಾದುದು. ಬ್ರಹ್ಮಾದಿಗಳು ಅದನ್ನು ಅನುಷ್ಠಾನ ಮಾಡುತ್ತಾರೆ. ಅದುವೆ ಎಲ್ಲ ಪಾಪಗಳನ್ನು ಪರಿಹರಿಸಿ ಭುಕ್ತಿಮುಕ್ತಿಗಳನ್ನು ಕೊಡುವ ಶಿವಲಿಂಗಾರ್ಚನೆ. ಯಾರಾದರೂ ಅದನ್ನು ಶುರುಮಾಡಿ ನಡುವೆಯೇ ಬಿಟ್ಟುಬಿಟ್ಟರೆ ನನ್ನ ತಲೆಯನ್ನೆ ಕಡಿದಷ್ಟು ವೇದನೆಯಾಗುವುದು. ನಾನು ಶೂಲಕ್ಕೇರಿಯೇನು. ಬೆಂಕಿಗೆ ಹಾರಿಯೇನು. ನನ್ನ ಮಲವನ್ನೆ ತಿಂದೇನು. ಪ್ರಾಣವನ್ನೇ ಬಿಟ್ಟೇನು. ಆದರೆ ಶಿವಪೂಜೆಯೊಂದನ್ನು ಮಾತ್ರ ಬಿಡಲಾರೆ.

**ಅಪೂಜಯಿತ್ವಾ ಚೇಶಾನಂ ಯೋ ಹಿ ಭುಂಕ್ತೇ ನರಾಧಮಃ ।**
**ಪಾಪಾನಾಮನ್ನರೂಪಾಣಾಂ ತಸ್ಯ ಭೋಜನಮುಚ್ಯತೇ ॥**

ಈಶ್ವರನನ್ನು ಪೂಜಿಸದೆ ಉಣ್ಣುವ ನರಾಧಮನು ಅನ್ನರೂಪದಿಂದ ಬಂದ ಪಾಪಗಳನ್ನೆ ಉಣ್ಣುವನೆಂದು ಹೇಳುತ್ತಾರೆ.

**ಶಿವೇತಿ ಮಂಗಳಂ ನಾಮ ಯಸ್ಯ ವಾಚಿ ಪ್ರವರ್ತತೇ ।**
**ಭಸ್ಮೀಭವಂತಿ ತಸ್ಯಾಶು ಮಹಾಪಾತಕ ಕೋಟಯಃ ॥**

ಶಿವನೆಂಬ ಮಂಗಳ ನಾಮವು ಯಾರ ಬಾಯಲ್ಲಿರುತ್ತದೊ ಅವನ ಕೊಟಿ ಮಹಾಪಾತಕಗಳೂ ಒಡನೆ ಭಸ್ಮವಾಗುವುವು.

**ಶಿವಂ ಪ್ರದಕ್ಷಿಣೀಕೃತ್ಯ ಯೋ ನಮಸ್ಯತಿ ಮಾನವಃ ।**
**ಭೂಮೇಃ ಪ್ರದಕ್ಷಿಣಂ ಕೃತ್ವಾ ಯತ್ತತ್ಪುಣ್ಯಮವಾಪ್ನುಯಾತ್ ॥**

ಶಿವನನ್ನು ಪ್ರದಕ್ಷಿಣೆ ಮಾಡುವವನಿಗೆ ಭೂಪ್ರದಕ್ಷಿಣೆ ಮಾಡಿದ ಫಲ ದೊರೆಯುವುದು. ಶಿವನಿಗೆ ಮೂರು ಪ್ರದಕ್ಷಿಣೆ ಮಾಡಿ ಐದುಬಾರಿ ನಮಿಸಿ ಮತ್ತೆ ಪ್ರದಕ್ಷಿಣೆಮಾಡಿ ನಮಿಸಿದರೆ ಪಾಪಗಳಿಂದ ಬಿಡುಗಡೆಯಾಗುವದು. ಶಿವಾಲಯದಲ್ಲಿ ಸರ್ವವಾದ್ಯ ಸೇವೆಮಾಡುವವನೂ ಮಾಡಿಸುವವನೂ ವೇದ ಸೇವೆಯನ್ನೆ ಮಾಡಿದಂತಾಗುತ್ತದೆ. ಶಿವನ ಮುಂದೆ ಪುರಾಣ ಪಠನ ಮಾಡುವವನು ಶಿವನ ಬಳಿ ವಾಸಮಾಡುತ್ತಾನೆ. ಶಿವನೇ ಅವನ ಬಳಿ ಸದಾ ಪ್ರೀತಿಯಿಂದ ಮಾತನಾಡುತ್ತಾನೆ. ನೀನು ಅಲ್ಪಾಯುಷಿಯಾದುದರಿಂದ ಶಿವಪೂಜೆಯನ್ನೆ ಮಾಡು. ಮೂರು ಹೊತ್ತು ಎರಡು ಹೊತ್ತು ಇಲ್ಲವೆ ಒಪ್ಪೊತ್ತು ಒಂದು ಯಾಮಕಾಲ ಕನಿಷ್ಠ ಪಕ್ಷದಲ್ಲಿ ಅರ್ಧ ಯಾಮಕಾಲ ಶಿವಪೂಜೆಮಾಡು. ವಾನಪ್ರಸ್ಥಾಶ್ರಮವನ್ನು ಸ್ವೀಕರಿಸು. ಬಿಲ್ವ ಕಮಲ ನೀರಂಜಿ ದಾಸವಾಳ ಪುನ್ನಾಗ ಕಣಿಗಲೆ ಪಾದರಿ ತುಳಸಿ ಎಕ್ಕದೆಲೆ ಅಪರಾಜಿತೆ ಉತ್ತರಣೆ ರುದ್ರಜಟೆ ದವನ ದತ್ತೂರಿ ತುಂಬೆ ಬಾಗೆಹೂ ಗರಿಕೆ ನಂದಿಬಟ್ಟಲು ಅಕ್ಷತೆಕಾಳುಗಳು ಪಗಡೆಹೂ ಇವುಗಳಿಂದ ಶಿವನನ್ನರ್ಚಿಸಬಹುದು. ಸಂಪಿಗೆ ಕಮಲ ಮೊಗ್ಗೆಗಳನ್ನು ಹೊರತು ಬೇರೆ ಮೊಗ್ಗೆಗಳಿಂದ ಶಿವನನ್ನರ್ಚಿಸಕೂಡದು. ಎಣ್ಣೆಯಲ್ಲಿ ಕರಿದ ಪದಾರ್ಥಗಳನ್ನು

ನಿವೇದಿಸಬೇಕು. ಫಲ, ಮೂಲ, ಶಾಕ ಮುಂತಾದುವನ್ನು ನೀರಿಂದ ಪ್ರೋಕ್ಷಿಸಿ ನಿವೇದಿಸಬೇಕು. ನೀರನ್ನು ರಾತ್ರಿ ತರಕೂಡದು. ಹಗಲುಮಾತ್ರ ತರಬೇಕು. ಇದನ್ನು ಗಮನದಲ್ಲಿಟ್ಟುಕೊಂಡು ಶಿವಪೂಜೆಮಾಡು.

**ಶಂಭು :-** ಜಾಬಾಲಿಯು ಹೀಗೆ ಹೇಳಿದೊಡನೆ ಇಕ್ಷ್ವಾಕು ಶಿವಪೂಜೆ ಮಾಡತೊಡಗಿದ. ಎಂಟುದಿನಗಳು ಹೀಗೆ ಕಳೆದುವು. ಒಂಬತ್ತನೆ ದಿನ ಅವನು ಬೆಳಿಗ್ಗೆ ಶಿವನನ್ನರ್ಚಿಸಿ ಮರಣಕಾಲ ಬಂದಾಗ ತನ್ನ ಪ್ರಾಣಗಳನ್ನೆ ಶಿವನಿಗೆ ನಿವೇದಿಸಿದ. ಒಡನೆ ಯಮದೂತರು ಅವನನ್ನು ಸೆಳೆದೊಯ್ಯಲು ಬಂದರು. ವಹ್ನಿಮುಖನೆ ಮೊದಲಾದ ಶಿವದೂತರೂ ಅಲ್ಲಿಗೆ ಬಂದರು. ಇವನು ನಮ್ಮವನು ನಮ್ಮವನೆಂದು ವಿವಾದವೆದ್ದಿತು. ಯಮದೂತರು ಹೊಡೆಯಲು ಬಂದರು. ವಹ್ನಿಮುಖನು ಕೋಪದಿಂದ ಮಹಾಕಾಯನಾಗಿ ನೂರು ಯಮಭಟರನ್ನೂ ಒಂದು ಕೈಯಿಂದ ಹಿಡಿದು ಅವರ ತಲೆಗಳನ್ನು ಕತ್ತರಿಸಿದ. ಇಕ್ಷ್ವಾಕುವನ್ನು ಒಯ್ದು ವೀರಭದ್ರನಿಗೊಪ್ಪಿಸಿದ. ವೀರಭದ್ರನು ಶಿವನಿಗೊಪ್ಪಿಸಿದ.

ಶಿವನು ನುಡಿದ, 'ನೀನು ಎಂಟುದಿನ ನನ್ನ ಪೂಜೆಯನ್ನು ಮಾಡಿದೆ, ಆದರೆ ಹಿಂದೆ ನನ್ನನ್ನು 'ಲಿಂಗ' 'ಶಿಶ್ನದ ಮುಂಭಾಗ' ಎಂದೆಲ್ಲ ಹಳಿದಿರುವೆ. ಆ ಪಾಪದಿಂದ ನೀನು ಶಿಶ್ನ ಚಕ್ರನಾಗು. ಶಿಶ್ನದ ಮುಂಭಾಗದಂತೆ ಮೂಗುನಾಲಿಗೆ ಮುಂತಾದುವಿಲ್ಲದವನಾಗು. ಹಿಂದೆ ನನ್ನ ನಾಮೋಚ್ಚಾರಣ ಮಾಡುತ್ತಿದ್ದುದರಿಂದ ಮಾತನಾಡಬಲ್ಲವನಾಗು.' ಒಡನೆ ಒಂದು ಕ್ಷಣದಲ್ಲಿ ಇಕ್ಷ್ವಾಕು ಶಿಶ್ನಚಕ್ರನಾದ. ಈ ಕಥೆಯನ್ನು ಕೇಳಿದರೆ ಪಾಶಬಂಧವು ತೊಲಗುತ್ತದೆ. ಶಿವನಲ್ಲಿ ಭಕ್ತಿ ಉಂಟಾಗುತ್ತದೆ. ಶಿವಲೋಕ ದೊರೆಯುತ್ತದೆ. ವಾಕ್ಶಕ್ತಿ ಹೆಚ್ಚುತ್ತದೆ. ಈ ಕಥೆಯ ಪ್ರವಚನ ಮಾಡುವವನು ಶಿವನಿಗೆ ಸಮಾನನಾಗುತ್ತಾನೆ.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಪಾತಾಳ ಖಂಡದಲ್ಲಿ ಶಿವರಾಘವಸಂವಾದದಲ್ಲಿ ಶಿವಪೂಜೆವೆಂಬ ನಲವತ್ತೆಂಟನೆ ಅಧ್ಯಾಯ ಮುಗಿದುದು*



## ಅಗ್ನಿಮುಖ

ಅಧ್ಯಾಯ - ೪೯

**ಶ್ರೀರಾಮ ಉವಾಚ**

**ಶ್ರೀರಾಮ :-** ಅಗ್ನಿಮುಖವೆಂಬ ಶಿವಗುಣಕ್ಕೆ ಅಗ್ನಿಯೆ ಮುಖವಾಗಲು ಕಾರಣವೇನು?

**ಶಂಭು :-** ಅವನು ಹಿಂದಿನ ಜನ್ಮದಲ್ಲಿ ಕ್ರೋಧನನೆಂಬ ಕ್ಷತ್ರಿಯನಾಗಿದ್ದ. ಅವನ ಹೆಂಡತಿ ಸತ್ತಳು. ಸೈನ್ಯ ನಾಶವಾಯಿತು. ರಾಜ್ಯವೂ ಶತ್ರುವಶವಾಯಿತು. ಕೊನೆಗೆ ಎರಡು ಕೋಣಗಳನ್ನು ಕೊಂಡು ಮಕ್ಕಳ ಸಹಾಯದಿಂದ ಕೃಷಿಮಾಡತೊಡಗಿದ. ಮಕ್ಕಳಲ್ಲೊಬ್ಬನು ಸರ್ಪಕಚ್ಚಿ ಸತ್ತ. ಸಾಲದ ಹೊರೆಯೂ ಇತ್ತು. ಜೊತೆಗೆ ಈ ಪುತ್ರಶೋಕವೂ ಸೇರಿದಾಗ ರಾಜ ಅಧೀರನಾದ. ಕೃಷಿಯನ್ನು ಬಿಟ್ಟು ನಿರಾಹಾರನಾಗಿ ಅಳುತ್ತ ಕುಳಿತ. ಇಬ್ಬರು ಮಕ್ಕಳು ತಂದೆಯನ್ನು ಸಂತೈಸಿದರು.

'ಅಪ್ಪ ಏಕೆ ಅಳುವೆ ? ಅತ್ತರೆ ಕಳೆದುಹೋದುದು ಹಿಂತಿರುಗಿ ಬರಲಾರದು. ಆದರಿಂದ ಶರೀರ ಮಾತ್ರ ಸೊರಗುವದು. ಅತ್ತು ಅತ್ತು ಕಣ್ಣುಗಳು ಮಂಜಾದುವು. ಕಂಠಧ್ವನಿ ಅಡಗಿತು. ಮಾಡಬೇಕಾದ ಕೆಲಸ ಅಲ್ಲೆ ನಿಂತಿತು. ಪರಿತಾಪವನ್ನು ಬಿಡು. ನಿನ್ನ ಪಂಚಪ್ರಾಣಗಳನ್ನು ಕಾಪಾಡಿಕೊಳ್ಳು. ಕಳೆದುಹೋದ ಒಬ್ಬನಿಗಾಗಿ ಐದು ಪ್ರಾಣಗಳನ್ನು ಬಿಡಬೇಡ. ಅವು ನಿನ್ನನ್ನಾಶ್ರಯಿಸಿವೆ. ಅವನು ಬೇರೆಯವರನ್ನಾಶ್ರಯಿಸಿದವನು. ನಿನ್ನ ಶತ್ರು'.

**ತಂದೆ** :- ಮಗನು ಶತ್ರು ಹೇಗಾದಾನು ? ಅವನು ಶತ್ರುವೆಂದಾದರೆ ನೀವೂ ಶತ್ರುಗಳೆ. ಒಳ್ಳೆಯಸುಖ ನೀಡುತ್ತಿದ್ದ ಮಗನನ್ನು ಶತ್ರುವೆಂದು ಹೇಗೆ ಕರೆಯುವಿರಿ ?

**ಮಕ್ಕಳು** :- ಮಗನು ಹುಟ್ಟುವಾಗ ಹೆಂಡತಿಗೆ ಅಪಾಯ. ಬೆಳೆಯುವಾಗ ಸಂಪತ್ತಿಗೆ ಅಪಾಯ. ಸಾಯುವಾಗ ಪ್ರಾಣಕ್ಕೆ ಅಪಾಯ. ಇದಕ್ಕಿಂತಲೂ ಶತ್ರುತ್ವ ಇನ್ನೇನು ಬೇಕು ? ಮಗನು ಏನಾದರೂ ಸುಖ ಕೊಟ್ಟರೆ ಅದರ ಪರಿಣಾಮ ದುಃಖವೆ. ಅವನು ಹುಟ್ಟುವಾಗ ತಾಯಿಯ ಸ್ಥಿತಿ ಚಿಂತಾಜನಕ ಇರುತ್ತದೆ. ಬದುಕಿ ಉಳಿದರೂ ಅವಳಲ್ಲಿ ಮುಂದೆ ಸುಖ ಕಾಣುವುದು ಅಶಕ್ಯ. ಪ್ರಸವದಿಂದ ಅವಳ ದೇಹದಲ್ಲಾಗುವ ಬದಲಾವಣೆಗಳು ಹಿತಕರವಾಗಿರುವುದಿಲ್ಲ. ಏಕಾಂತದಲ್ಲಿದ್ದಾಗ ಮಗು ಅಳಲುತೊಡಗುತ್ತದೆ. ಎಲ್ಲವೂ ವಿರಸವಾಗಿ ಪರಿಣಮಿಸುತ್ತದೆ. ತಾಯಿಗೆ ಮಾತ್ರ ಅಳುವ ಕಂದನ ಯೋಚನೆಯೆ ಹೆಚ್ಚಾಗಿರುತ್ತದೆ. ಹೀಗೆ ಸುಖಕ್ಕೆ ಅಡ್ಡಿ ಉಂಟಾದಾಗ ಆಗುವ ದುಃಖ ಅಪರಿಮಿತ. ಮಗುವಿನ ಆಲಿಂಗನ ಚುಂಬನ ಅವ್ಯಕ್ತ. ಮಧುರ ಮಾತುಗಳು ಇವೆಲ್ಲವುಗಳಿಂದ ಬರುವ ಸುಖವು ತಾಯಿಯೊಡನೆ ಏಕಾಂತಕ್ಕೆ ಅಡ್ಡಿಯಾದಾಗ ಉಂಟಾಗುವ ದುಃಖದ ಒಂದು ಸಣ್ಣ ಅಂಶಕ್ಕೆ ಸಮನಲ್ಲ. ಮಗುವಿನಾರೈಕೆಯಲ್ಲಿ ರೋಗ ಗ್ರಹ ಸರ್ಪ ಮುಂತಾದವುಗಳ ಬಾಧೆಗಳನ್ನು ನಿವಾರಿಸುವ ಕಷ್ಟ ಎಷ್ಟೆಂದು ಹೇಳಲಾಗದು. ಆದರೂ ಆ ಮಗುವು ತೊಡೆಯ ಮೇಲೆ ಕುಳಿತರೆ ಸಾಕೆಂದು ಹೇಳುವುದು ವಿಚಿತ್ರವೆ ಸರಿ. ಈಗ ಕಳೆದುಹೋದ ಮಗನಿಂದ ಇಹಪರಗಳೆರಡರಲ್ಲಿಯೂ ನಿನಗೆ ಸುಖವಿಲ್ಲ. ಅವನಿಗಾಗಿ ಏಕೆ ಅಳುವೆ ? ನಾವಿಲ್ಲವೆ ?

**ತಂದೆ** :- ಶೋಕಮಾಡುತ್ತ ಕುಳಿತರೆ ಎಲ್ಲ ಕೆಲಸವೂ ನಿಂತುಬಿಡುವುದು. ಆದ್ದರಿಂದ ಶೋಕವನ್ನು ಬಿಟ್ಟು ಇಹಪರಗಳೆರಡರಲ್ಲಿಯೂ ಸುಖವನ್ನು ಸಾಧಿಸಿಕೊಳ್ಳಬೇಕು. ಎಂದು ನೀವನ್ನುವುದ ನಿಜ. ನಾನೀಗ ಮಹಾಗುರುವೂ ಪುರೋಹಿತನೂ ಆದ ವಶಿಷ್ಠಮುನಿಯ ಬಳಿಗೆ ಹೋಗುವೆ. ನನಗೊಂದು ದಾರಿಯನ್ನು ಅವನು ತೋರಿಸುತ್ತಾನೆ.

ಹೀಗೆ ಹೇಳಿ ರಾಜನು ವಾರಾಣಸಿಯಲ್ಲಿದ್ದ ಗುರು ವಶಿಷ್ಠಮುನಿಯ ಬಳಿಗೆ ಹೋಗಿ ದಂಡ ಪ್ರಣಾಮ ಮಾಡಿದ. ಮುನಿಯೂ ಆದರದಿಂದ ಅವನನ್ನು ಬರಮಾಡಿಕೊಂಡು ಆಲಿಂಗಿಸಿ ನೆತ್ತಿಯನ್ನಾಘ್ರಾಣಿಸಿ ಆಸನದಲ್ಲಿ ಕುಳ್ಳಿರಿಸಿದ. 'ಏನು ಕಾರಣ ಬಂದೆ ? ನಾನೇನು ಮಾಡಲಿ' ? ಎಂದು ಕೇಳಿದ.

**ರಾಜ** :- ಗುರುವೆ, ಈ ಸಂಸಾರದಿಂದ ಪಾರಾಗಲು ದಾರಿ ತೋರು. ನಾನು ಜೀವನದಲ್ಲಿ ಸೋತು ಕಂಗೆಟ್ಟಿದ್ದೇನೆ, ಕಾಪಾಡು.

**ವಸಿಷ್ಠ** :- ಈ ವಿಶ್ವೇಶ್ವರ ಮಹಾಲಿಂಗವೊಂದೆ ಎಲ್ಲರನ್ನೂ ಕಾಪಾಡುವುದು. ನೋಡು, ಇದನ್ನು ಪೂಜಿಸು. ಇದರ ಪೂಜೆಯ ಪ್ರಭಾವದಿಂದಲೆ ನನ್ನ ಮಗ ಶಕ್ತಿ ರಾಕ್ಷಸನ ಬಾಯಿಗೆ ತುತ್ತಾದರೂ ಯಮಲೋಕಕ್ಕೆ ಹೋಗಲಿಲ್ಲ. ಅವನು ಸ್ವರ್ಗಲೋಕ ಬ್ರಹ್ಮಲೋಕಗಳಲ್ಲಿ ಸುಖದಿಂದಿದ್ದು ಈಗ ವಿಷ್ಣುಲೋಕದಲ್ಲಿ ವಾಸಮಾಡುತ್ತಿದ್ದಾನೆ.

ಈಗ ಈ ಬೇಡನನ್ನೆ ನೋಡು. ಈತ ಅರಣ್ಯವಾಸಿ, ಅರಣ್ಯದಿಂದ ಬನ್ನಿ ಪತ್ರೆಗಳನ್ನು ತಂದು ವಿಶ್ವೇಶ್ವರನನ್ನು ಪೂಜಿಸುತ್ತಾನೆ. ಅಡಕೆ ಕದಂಬ ಎಕ್ಕೆ ಗರುಗ ಹೂಗಳನ್ನು ಸಮರ್ಪಿಸುತ್ತಾನೆ. ಇನ್ನು ಒಂದು ಅರ್ಧಯಾಮದಲ್ಲಿ ಅವನು ಸಾಯಲಿದ್ದಾನೆ. ಮುಂದೇನಾಶ್ಚರ್ಯ ನಡೆಯವುದೋ ನೋಡುತ್ತಿರು.

ವಶಿಷ್ಠರ ಆದೇಶದಂತೆ ರಾಜನು ನೋಡುತ್ತನಿಂತ. ಬೇಡನು ಶಿವನಿಗೆ ನೈವೇದ್ಯವನ್ನರ್ಪಿಸಲು ಬಯಸಿ ಬಳಿಯಲ್ಲಿದ್ದ ಮಣ್ಣಿನ ಪಾತ್ರೆಯನ್ನು ನೋಡಿದರೆ ಅದರಲ್ಲಿ ಮಾವಿನ ಹಣ್ಣುಗಳಿದ್ದರೂ ಒಂದು ನಾಯಿ ಬಂದು ಅದನ್ನು ಮುಟ್ಟಿತು. ಅದು ಅಶುದ್ಧವಾಯಿತೆಂದು ಬಗೆದು ಬೇಡನು ಹೇಳಿಕೊಂಡ. 'ಹೂವಿಲ್ಲದಾಗ ಹರಿಯು ತನ್ನ ಕಣ್ಣುಗಳನ್ನೆ ಅರ್ಪಿಸಿದ. ಫಲವಿಲ್ಲದಾಗ ಸೂರ್ಯನು ಬೆರಳನ್ನೆ ಸಮರ್ಪಿಸಿದ. ಪೀಠವಿಲ್ಲದೆ ಲಿಂಗ ಅಲ್ಲಾಡತೊಡಗಿದಾಗ ಜಮದಗ್ನಿ ತನ್ನ ಶರೀರವನ್ನೇ ಕತ್ತರಿಸಿ ಲಿಂಗಕ್ಕೆ ಪೀಠವನ್ನಾಗಿ ಮಾಡಿದ. ಇನ್ನೂ ಅನೇಕ ಶಿವಭಕ್ತರೂ ಪರಮಸಾಹಸವನ್ನು ಮಾಡಿದ್ದುಂಟು. ನಾನು ಈಗ ಹಾಗೇ ಮಾಡಬೇಕಾಗುತ್ತದೆ. ಅದಕ್ಕೆ ಹಿಂಜರಿದರೆ ಪಾಪ ಬಂದೀತು!

ಬೇಡನು ಹೀಗೆ ಯೋಚಿಸುತ್ತಿರುವಾಗಲೆ ಒಬ್ಬ ಹುಚ್ಚನು ಬಂದು ಶಿವನೆದುರಿಗಿಟ್ಟಿದ್ದ ನೈವೇದ್ಯವನ್ನು ತಿಂದು ಲಿಂಗಪೀಠದ ಮೇಲೆ ವಾಂತಿ ಮಾಡಿದ. 'ಅವನನ್ನು ಕೊಲ್ಲಲೆ ?' ಎಂದು ಒಂದು ಕ್ಷಣ ಬೇಡನು ಯೋಚಿಸಿದ. ಬಳಿಕ ಹೀಗೆ ಅಂದುಕೊಂಡ, ಅವನನ್ನೇಕೆ ಕೊಲ್ಲಬೇಕು ? ನನ್ನನ್ನೆ ನಾನು ಕೊಲ್ಲಬೇಕೆಂದು ಶಿವನಿಚ್ಛೆ ಇರಬಹುದು. ಅದಕ್ಕೇ ಈ ಹುಚ್ಚನು ಹೀಗೆ ಮಾಡಿದ. ಇರಲಿ, ಲಿಂಗಕ್ಕೆ ಹೊದ್ದಿಕೆ ಬೇಕು. ನನಗೂ ಈ ದೇಹವು ನನ್ನಾತ್ಮಕ್ಕೆ ಹೊದ್ದಿಕೆಯಾಗಿರುವುದು ಇಷ್ಟವಿಲ್ಲ. ಆದನ್ನೀಗಲೆ ಕತ್ತರಿಸುವೆ.'

ಬೇಡನು ಹರಿತವಾದ ಕತ್ತಿಯಿಂದ ತನ್ನ ಮೈ ಚರ್ಮವನ್ನು ಕಾಲಿಂದ ತಲೆಯವರೆಗೂ ಸುಲಿದು ಶಿವನಿಗರ್ಪಿಸಿದ. ಆಗ ಆಕಾಶದಲ್ಲಿ ವೀರಭದ್ರನು ಕಾಣಿಸಿಕೊಂಡ. ಶಿವಗಣಗಳೂ ಸಾವಿರಾರು ಮಂದಿ ಬಂದು ನೆರೆದರು. ಅವರೆಲ್ಲರೂ ಸರ್ವಾಭರಣ ಭೂಷಿತರಾಗಿ ವಿಮಾನದಲ್ಲಿ ಕುಳಿತಿದ್ದರು. ಶುದ್ಧ ಸ್ಫಟಿಕದಂತೆ ಹೊಳೆವ ಸುಂದರ ಚತುರ್ಭುಜ ಶರೀರದ ಈ ಗಣಗಳು ರಂಭೆಯರಂಥ ಮಡದಿಯರೊಡನೆ ವಿಮಾನದಲ್ಲಿ ಕುಳಿತು ಹೂಮಳೆ ಗರೆದರು. 'ಬಾ' ಎಂದು ಕರೆದರು. 'ಹೆಂಡತಿ ಮಕ್ಕಳು ಬಂಧುಗಳೊಡನೆ ಬಾ' ಎಂದರೆ ಬರುವೆ ಎಂದ ಬೇಡ.

'ಯಾರು ಪುಣ್ಯಪಾಪಗಳನ್ನು ಮಾಡಿರುವರೋ ಅವರೇ ಅವನ್ನು ಅನುಭವಿಸಬೇಕು.'

'ಶೈವರನ್ನು ಬಿಟ್ಟು ಉಳಿದವರ ಬಗ್ಗೆ ಈ ಮಾತು ಸರಿಯಾದೀತು. ಶಿವ ಭಕ್ತರು ಗಳಿಸುವ ಪುಣ್ಯವನ್ನು ಮಾತ್ರ ಅನೇಕರು ಅನುಭವಿಸಬಹುದು.' ಬೇಡನ ಈ ಮಾತು ವೀರಭದ್ರನಿಗೆ ಸರಿ ಎನಿಸಿತು. 'ಬಂಧುಗಳೊಡನೆ ಬಾ' ಎಂದನಾತ. ಒಡನೆ ಬೇಡನು ತನ್ನೆಲ್ಲ ಬಂಧುಗಳೊಡನೆ ವಿಮಾನವನ್ನೇರಿ ಶಿವಲೋಕಕೆ ತೆರಳಿದ.

**ವಶಿಷ್ಠ :-** ರಾಜನೆ, ಎಲ್ಲವನ್ನೂ ನೋಡಿದೆ, ತಾನೆ ? ನೀನೂ ಶಿವಪೂಜೆ ಮಾಡು. ಶಿವಲೋಕವನ್ನು ಸೇರು. ರಾಜ್ಯ ಬೇಕಿದ್ದರೆ ಶಿವಾಲಯದ ಅಂಗಳವನ್ನು ಗೋಮಯದಿಂದ ನಿತ್ಯ ಸಾರಿಸು. ಮುಂದಿನ ಜನ್ಮದಲ್ಲಿ ರಾಜ್ಯ ಸಿಗುವುದು. ಜೊತೆಗ ಶಿವಭಕ್ತಿಯೂ ದೊರೆಯುವುದು.

**ಶಂಭು :-** ವಶಿಷ್ಠನ ಉಪದೇಶದಂತೆ ಆ ರಾಜನು ಶಿವಪೂಜೆ ಮಾಡಿ ಅದರ ಪ್ರಭಾವದಿಂದ ಸ್ವರ್ಗಸುಖವನ್ನನುಭವಿಸಿ ಭೂಮಿಯಲ್ಲಿ ರಾಜನಾಗಿ ಹುಟ್ಟಿದ. ರಾಜ್ಯವಾಳುತ್ತ ಶಿವಭಕ್ತಿಯನ್ನೂ ಮಾಡಿದ. ಒಂದು ದಿನ ಶಿವಾಲಯಕ್ಕೆ ರಾಜನು ಭೆಟ್ಟಿಕೊಡುತ್ತಿದ್ದಾಗ ಜನಸಂದಣಿ ಹೆಚ್ಚಾಯಿತು. ಒಂದು ದೀಪ ರಾಜನ ಮೈಮೇಲೆ ಬಿದ್ದಿತು. ಕೋಪವನ್ನು ತಡೆಯಲಾರದೆ ಆ ದೀಪದಿಂದಲೆ ಊರನ್ನೆಲ್ಲ ಸುಟ್ಟುಬಿಟ್ಟನಾತ. ಬಳಿಕ ಎಲ್ಲವನ್ನೂ ಮೊದಲಿನಂತೆ ಕಟ್ಟಿಸಿಕೊಟ್ಟು ಶಿವಮಂತ್ರವನ್ನು ಜಪಿಸಿದ.

ಮರಣದ ದಿನದಲ್ಲಿ ರಾಜನು ಶಿವನನ್ನು ಜಪಿಸಿ ಭಸ್ಮಸ್ನಾನ ಭಸ್ಮಶಯನ ನಿಯಮಗಳಲ್ಲಿದ್ದು ಶಿವಮಂತ್ರ ಜಪಿಸುತ್ತ ಅಸು ನೀಗಿದ. ಅದರಿಂದ ಅವನು ಶಿವಲೋಕಕ್ಕೆ ತೆರಳಿದ. ಅಲ್ಲಿ ವೀರಭದ್ರನೆಂದ, 'ನೀನು ಒಬ್ಬ ಮುಖ್ಯ ಗಣವೆನಿಸಿ ನನ್ನ ಪರಿಚಾರಕನಾಗಿರು. ಶಿವಭಕ್ತರು ಮರಣ ಹೊಂದಿದಾಗ ಅವರನ್ನಿಲ್ಲಿಗೆ ತಂದೊಪ್ಪಿಸು. ನಿನಗೆ ತಲೆಯು ಮಾತ್ರ ಇರಲಾರದು. ಬೆಂಕಿಯೆ ನಿನಗೆ ತಲೆ ನೀನು ವಹ್ನಿ ಮುಖನೆನಿಸುವೆ.'

'ಪ್ರಭು, ಕಣ್ಣು, ಕಿವಿ, ನಾಲಿಗೆ ಮೂಗು ಬಾಯಿ ಒಂದೂ ಇಲ್ಲದೆ ನಾನೇನು ವ್ಯವಹಾರ ಮಾಡಬಲ್ಲೆ ? ತಲೆ ಇಲ್ಲವೆಂದಾಗಲು ನಾನು ಅಂಥ ಪಾಪವನ್ನೇನು ಮಾಡಿದೆ' ?

'ನೀನು ಸುಂದರಿಯಾದ ಓರ್ವ ವೇಶ್ಯೆಯನ್ನಿಟ್ಟುಕೊಂಡಿದ್ದೆ. ಅವಳು ಶಿವಾಲಯದಲ್ಲಿ ನಿತ್ಯ ರಂಗೋಲಿ ಬರೆಯುತ್ತಿದ್ದಳು. ಶಿವ ಅವನ ಆಯುಧಗಳು, ನಂದಿ, ಗಣಗಳು, ಬೀಸಣಿಗೆ, ಚಾಮರಗಳು, ಸ್ವಸ್ತಿಕ, ಸರ್ವತೋಭದ್ರಗಳು ಮುಂತಾದುವನ್ನು ಸುಂದರವಾಗಿ ಬರೆದು ಶಿವನ ಸೇವೆ ಮಾಡುತ್ತಿದ್ದಳು. ಒಂದು ದಿನ ಕಾರಾಂಶಿಕನೆಂಬ ಒಬ್ಬ ರಾಜನು ಶಿವಾಲಯಕ್ಕೆ ಬಂದು ಅವಳನ್ನು ಕಂಡು ಮೋಹಿಸಿದ 'ಸುಂದರಿ, ನೀನೊಬ್ಬಳೆ ಇರುವೆ. ನಾನು ಯುವಕ, ನಿರೋಗಿ, ಶ್ರೀಮಂತ, ದೃಢಕಾಯ. ನನ್ನನ್ನು ನಿರಾಕರಿಸಲು ಯಾವ ಕಾರಣವಿಲ್ಲ. ನಿನ್ನ ಅಂಗಸಂಗವನ್ನಿತ್ತು ಕಾಪಾಡು. ಅನ್ಯಥಾ ನಾನು ಬದುಕಲಾರೆ' ಎಂದ.

'ಎಲ್ಲರಿಗೂ ಸುಖ ನೀಡುವುದು ಧರ್ಮ ಒಂದೆ. ಸ್ತ್ರೀಯರಿಗೆ ಪಾತಿವ್ರತ್ಯವೆ ಉತ್ತಮಧರ್ಮವೆಂದು ಕೇಳಿದ್ದೇನೆ. ನಾನು ವೇಶ್ಯೆಯಾಗಿದ್ದರೂ ಒಬ್ಬ ಅಧೀನಳಾಗಿರುವಾಗ ಇನ್ನೊಬ್ಬನೊಡನೆ ಕೂಡದಿದ್ದರೆ ವೇಶ್ಯೆಯೂ ಪತಿವ್ರತೆ ಎನಿಸುವಳು. ಆದ್ದರಿಂದ ನನ್ನ ಪಾತಿವ್ರತ್ಯ ಧರ್ಮವನ್ನು ಕೆಡಿಸಬೇಡ.

'ಹಾಗಾದರೆ ಸಾವು ಬೇಗನೆ ಬರುವುದು. ಇದರಲ್ಲಿ ಸಂಶಯವೆ ಬೇಡ' ಹೀಗೆ ಹೇಳಿ ಕಾರಾಂಶಿಕನು ನಿನ್ನ ಬಳಿಗೆ ಬಂದು 'ವೇಶ್ಯೆ ಎಂದೂ ವೇಶ್ಯೆಯ ಹೊರತು ಮಡದಿ ಆಗಲಾರಳು. ಇದನ್ನು ನೀನೊಂದು ದಿನ ಪ್ರತ್ಯಕ್ಷ ಕಂಡುಕೊಳ್ಳುವೆ, ನೋಡು' ಎಂದ.

ಬಳಿಕ ಜೋಳದ ಗಂಜಿಯನ್ನು ಕೈಯಲ್ಲಿ ತೆಗೆದುಕೊಂಡು ವೇಶ್ಯೆಯ ಮನೆಗೆ ಯಾರೂ ತಿಳಿಯದಂತೆ ಹೋದ. ಅವಳು ಗಾಢ ನಿದ್ರೆಯಲ್ಲಿರುವ ಸಮಯ ನೋಡಿ ಅವಳ ಉಟ್ಟ ಸೀರೆಯಲ್ಲಿ ಆ ಗಂಜಿಯನ್ನು ತಗುಲಿಸಿ ಹೊರಟುಹೋದ. ನಿನ್ನ ಬಳಿಗೆ ಬಂದು 'ನಿನ್ನ ವೇಶ್ಯೆಯನ್ನೊಮ್ಮೆ ಈಗಲೆ ಎಬ್ಬಿಸಿ ಅವಳ ಸರ್ವಾಂಗಗಳನ್ನೂ ಪರೀಕ್ಷೆ ಮಾಡಿ ನೋಡು. ಇಲ್ಲವೆ ಅಸ್ತವ್ಯಸ್ತವಾದ ಅವಳ ಬಟ್ಟೆಯನ್ನೆ ಪರೀಕ್ಷಿಸಿ ನೋಡು' ಎಂದ. ನೀನು ಅವಳ ಮನೆಗೆ ಹೋಗಿ ಅವಳ ತಾಯಿಯನ್ನು ಕರೆದು ಪರೀಕ್ಷೆ ಮಾಡಿಸಿದೆ.

ಸೀರೆ ಒದ್ದೆಯಾಗಿದ್ದುದು ತಿಳಿದು ಬಂದಿತು. ತಾಯಿ, ಮಗಳು ಇಬ್ಬರೂ 'ಏನೂ ಇಲ್ಲ, ಏನೂ ಇಲ್ಲ' ಎನ್ನತೊಡಗಿದರು. ನೀನು ನಂಬಲಿಲ್ಲ. ಬಳಿಯಲ್ಲಿದವರಾರೂ ನಂಬಲಿಲ್ಲ. ನೀನು ಅರಮನೆಗೆ ಹೋಗಿ ದಂಡಾಧ್ಯಕ್ಷನನ್ನಾಜ್ಞಾಪಿಸಿದೆ. 'ನೀನೀಗಲೆ ಒಂದು ಗಳಿಗೆಯೊಳಗೆ ಆ ವೇಶ್ಯೆಯ ತಲೆಯನ್ನು ಕಡಿದು ತಂದು ತೋರಿಸು.' ಅವನು ರಾಜಾಜ್ಞೆಯನ್ನು ಪಾಲಿಸಿದ. ಈ ಪಾಪದ ಫಲವನ್ನು ನೀನು ಅನುಭವಿಸಲೇಬೇಕು. ಅದರಿಂದ ಬೆಂಕಿಯ ಜ್ವಾಲೆಯೊಂದೆ ನಿನಗೆ ತಲೆ. ಅದರಿಂದಲೆ ನೀನು ಮಾತನಾಡುವೆ. ಕೇಳುವೆ. ನೋಡುವೆ. ಎಲ್ಲ ವ್ಯವಹಾರಗಳನ್ನೂ ಮಾಡುವೆ. ಅತಿ ಕೋಪಿಯೂ ಆಗಿರುವೆ.

**ಶಂಭು :-** ಹೀಗೆ ರಾಜನು ವಹ್ನಿಮುಖನೆನಿಸಿದ. ತಾಳ್ಮೆಗೆಟ್ಟು ಮಾಡಿದ ಪಾಪಕ್ಕೆ ಫಲವನ್ನನುಭವಿಸಿದ. ತಾಳ್ಮೆಹೊಂದಿದರೆ ಮಾತ್ರ ಇಹಪರಗಳೆರಡರಲ್ಲಿಯೂ ಸುಖ ಪಡೆಯಬಹುದು. ಈ ಪುಣ್ಯಕಥೆಯನ್ನು ಕೇಳಿದರೆ ಪಾಪನಿವೃತ್ತಿಯಾಗುವದು, ಶಿವಲೋಕವೂ ದೊರೆಯುವುದು.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಪಾತಾಲಖಂಡದಲ್ಲಿ ಶಿವರಾಘವ ಸಂವಾದದಲ್ಲಿ ಅಗ್ನಿಮುಖವೆಂಬ ನಲವತ್ತೊಂಬತ್ತನೆ ಅಧ್ಯಾಯ ಮುಗಿದುದು*



## ಶಿವನಾಮ ಮಹಿಮೆ

ಅಧ್ಯಾಯ - ೫೦

### ಶ್ರೀರಾಮ ಉವಾಚ

**ಶ್ರೀರಾಮ :-** ಶಿವನಾಮ ಮಹಿಮೆ, ಪೂಜೆ-ನಮಸ್ಕಾರ. ದರ್ಶನಗಳ ಮಹಿಮೆ, ಜಲ ಧೂಪ ದೀಪಾದಿ ದಾನಗಳ ಮಹಿಮೆಗಳನ್ನೂ ಹೇಳು.

**ಶಂಭು :-** ಇವೆಲ್ಲವನ್ನೂ ವಿಸ್ತಾರವಾಗಿ ಹೇಳುವುದು ಶಕ್ಯವಿಲ್ಲ. ಸಂಕ್ಷೇಪವಾಗಿ ಹೇಳುತ್ತೇನೆ ಕೇಳು. ಹಿಂದೆ ತ್ರೇತಾಯುಗದಲ್ಲಿ ವಿಧೃತನೆಂಬ ರಾಜನಿದ್ದ. ಎಳೆಮೆಯಲ್ಲಿಯೆ ತಂದೆಯನ್ನು ಕಳೆದುಕೊಂಡು ಪಟ್ಟಾಭಿಷಿಕ್ತನಾದ. ತನ್ನ ಸಮಾನ ವಯಸ್ಸಿನವರನ್ನೆ ಸಹಾಯಕರನ್ನಾಗಿ ನೇಮಿಸಿಕೊಂಡು ವಯಸ್ಸಾದ ವಿದ್ವಾಂಸರನ್ನು ದೂರ ವಿರಿಸಿದ. ದುಷ್ಟಯುವಕರು, ಅಕಾರ್ಯನಿರತರು, ಹೆಣ್ಣುಗಳನ್ನು ತಂದೊದಗಿಸುವವರು, ಕಳ್ಳತನ ದರೋಡೆಗಳಲ್ಲಿ ನಿಪುಣರಾದವರು, ವಶೀಕರಣವಿದ್ಯೆ ಬಲ್ಲವರು, ಜೂಜುಕೋರರು ಇವರಿಗೆಲ್ಲ ಆಶ್ರಯವಿತ್ತು ತನ್ನ ಬಳಿ ನೇಮಿಸಿಕೊಂಡ. ರಾಜನೀತಿ ತಿಳಿದವರು ಅವನಿಗೆ ಬೇಕಾಗಿರಲಿಲ್ಲ. ಕಾಮಶಾಸ್ತ್ರನಿಷ್ಣಾತರು ಮಾತ್ರ ಅವನಿಂದ ಮನ್ನಣೆಪಡೆದರು. ಇದರ ಫಲವಾಗಿ ಅವನ ಸೈನ್ಯ ನಶಿಸಿತು. ಕೋಶಬರಿದಾಯಿತು. ರಾಜ್ಯವು ಶತ್ರುಗಳ ಪಾಲಾಯಿತು. ಬಳಿಕ ಅವನು ಕಾಡಿಗೆ ಹೋಗಿ ಒಂದು ಬೆಟ್ಟದ ದುರ್ಗಮ ಪ್ರದೇಶದಲ್ಲಿ ಮಿತಪರಿವಾರದೊಂದಿಗೆ ವಾಸಮಾಡುತ್ತ ದರೋಡೆ ಸುಲಿಗೆಗಳಿಗೆ ಪ್ರಾರಂಭಿಸಿದ. ಆಹಾರ ಧಾನ್ಯಗಳನ್ನು ಊರ ಜನರಿಂದ ಸುಲಿದುತಿಂದ. ಹಸು ಎಮ್ಮೆಗಳನ್ನು ಕೊಂದು ಮಾಂಸವನ್ನುಂಡ. ಅವು ಸಿಗದಿದ್ದಾಗ ನರಮಾಂಸವನ್ನೂ ತಿನ್ನತೊಡಗಿದ. ಸಂಧ್ಯಾವಂದನ ಮುಂತಾದ ಧಾರ್ಮಿಕ ಕ್ರಿಯೆಗಳನ್ನು ಅವನಿಗೆ ವರ್ಜ್ಯವೆನಿಸಿದುವು.

ಸುರಾಪನೆಂಬ ಒಬ್ಬ ರಾಕ್ಷಸನು ಅವನ ಮಂತ್ರಿಯಾದ. ಅವನ ಸಲಹೆಗಳೆಲ್ಲವೂ 'ಅಹರ-ಪ್ರಹರ ಹಿಡಿದು ತಾ, ಕೊಲ್ಲು ಎನ್ನುವುದರಲ್ಲೆ ಪರ್ಯವಸಾನ ಹೊಂದುತ್ತಿದ್ದುವು. ರಾಜನಿಗೆ ಅವು ತುಂಬ ರುಚಿಸಿದುವು. ಅವನ ದರೋಡೆ ಕೋರರ ಗುಂಡಾಗಳ ಗುಂಪು ಬೆಳೆಯಿತು. ಅವರ ಸಹಾಯದಿಂದ ತನಗೆ ಬೇಕೆನಿಸಿದ ಹೆಣ್ಣುಗಳನ್ನು ಎಲ್ಲಿಂದಲಾದರೂ ತರಿಸಿ ಕೆಲಕಾಲ ಇಟ್ಟುಕೊಂಡು ಬಳಿಕ ಅವರನ್ನೆ ಕೊಂದು ತಿನ್ನುತ್ತಿದ್ದ. ಹೀಗೆ ಒಂದುಸಾವಿರ ವರ್ಷಗಳಕಾಲ ಕಾಡಿನಲ್ಲಿ ಅನಭಿಷಿಕ್ತ ದೊರೆಯಾಗಿ ಬಾಳಿ ಸಮಿಪದ ಹತ್ತು ಯೋಜನ ಪ್ರದೇಶದಲ್ಲಿ ಒಂದು ಪ್ರಾಣಿಯೂ ಇಲ್ಲದಂತೆ ಮಾಡಿದ. ತಾನೂ ಮುದುಕನಾಗಿ ಶಕ್ತಿಗುಂದಿ ಒಂದುದಿನ ಮರಣಶಯ್ಯೆಯಲ್ಲಿ ಮಲಗಿದ. ಅವನ ಸುತ್ತಲೂ ಪರಿವಾರದವರು ನಿಂತರು. ಮಂತ್ರಿ ಸುರಾಪನು ಬಳಿಯಲ್ಲಿ ಕುಳಿತು ರಾಜನ ಬಾಯಿಂದ ಕೊನೆಯ ಉಪದೇಶವನ್ನು ಕೇಳ ಬಯಸಿದ. ರಾಜನು ಬಹು ಕಷ್ಟದಿಂದ 'ಪ್ರಾಹರ ಪ್ರಹರ-ಅಹರ' ಎನ್ನುತ್ತ ಕೊನೆಯುಸಿರನ್ನೆಳೆದ. ಹಿಡಿದು ತಾ, ಕೊಲ್ಲು, ತಿನ್ನು ಎನ್ನುವುದೇ ಆ ಉಪದೇಶದ ಅರ್ಥ.

ಮೃತ್ಯು ಬಂದು ರಾಜನನ್ನು ಪಾಶದಿಂದ ಬಿಗಿದು ಒಯ್ಯತೊಡಗಿದ. ಆದರೆ ಒಡನೆ ಪಾಶವು ಕಿತ್ತುಹೋಯಿತು. ಯಮ ದೂತರ ಆಯಧಗಳೆಲ್ಲವೂ ರಾಜನ ಮೈಯನ್ನು ಸೋಕಿದೊಡನೆ ಪುಡಿಯಾದುವು. ಇವೆಲ್ಲವನ್ನೂ ಕಂಡು ಮೃತ್ಯು ಯೋಚನಾ ಮಗ್ನನಾದ. 'ಎಲ್ಲ ಮಾನವರ ಮರಣವನ್ನು ನಾನು ನೋಡುತ್ತಿದ್ದೇನೆ. ಇಂಥ ಮರಣವನ್ನು ಹಿಂದೆಂದೂ ನೋಡಿಲ್ಲ.' ಅವನು ಹೀಗೆ ಆಲೋಚಿಸುವಷ್ಟರಲ್ಲಿ ಶಿವಗಣಗಳ ನಾಯಕರಲ್ಲೊಬ್ಬನಾದ ವಹ್ನಿಮುಖನು ವೀರಭದ್ರನಾಜ್ಞೆಯಂತೆ ಬಂದು ಮೃತ್ಯುವನ್ನು ಶೂಲದಿಂದಿರಿದು ಎತ್ತಿಕೊಂಡ. ಯಮದೂತರನ್ನೂ ಬಂಧಿಸಿದ, ಕಾಲುಗಳಿಗೆ ಬೇಡಿ ತೊಡಿಸಿದ ಎಲ್ಲರನ್ನೂ ಕರೆದುಕೊಂಡು ರಾಜನನ್ನು ದಿವ್ಯವಿಮಾನದಲ್ಲಿ ಕುಳ್ಳಿರಿಸಿರಿ. ವೀರಭದ್ರನ ಬಳಿಗೆ ಬಂದ. ವೀರಭದ್ರನು ಎಲ್ಲರನ್ನೂ ಶಿವನ ಬಳಿಗೆ ತಂದೊಪ್ಪಿಸಿದ. ಶಿವನು ಮೃತ್ಯುವನ್ನು ನೋಡಿ 'ಇದೇನು ? ಏಕೆ ?' ಎಂದು ಕೇಳಿದ. ವಹ್ನಿಮುಖನು ನಮಸ್ಕರಿಸಿ ಕೋಪದಿಂದ ಮೃತ್ಯುವಿನ ಕಡೆಗೊಮ್ಮೆ ನೋಡಿ ಆನಂದದಿಂದ ಕುಣಿದು ಹೇಳಿದ. 'ಈ ಮೃತ್ಯು ಕಳ್ಳತನಕ್ಕೆ ಪ್ರಾರಂಭಿಸಿದ್ದಾನೆ. ಅದಕ್ಕೆ ಅವನನ್ನು ಶೂಲಕ್ಕೇರಿಸಿದ್ದೇನೆ.'.

ಶಿವನು ಒಡನೆ ಮೃತ್ಯುವನ್ನು ಶೂಲದಿಂದ ಬಿಡುಗಡೆಮಾಡಿ ಯಮಭಟರನ್ನೂ ಬಂಧ ಮುಕ್ತರನ್ನಾಗಿಸಿ ಹೇಳಿದ 'ಮರಣಕಾಲದಲ್ಲಿ ನನ್ನ ಹೆಸರನ್ನು ಉಚ್ಚರಿಸಿದವನಿಗೆ ನನ್ನ ಲೋಕವನ್ನು ಕೊಡುವೆನು. ಅದನ್ನು ಉಚ್ಚರಿಸುವಾಗ ಮನಸ್ಸು ಎಲ್ಲಿಯೆ ಇರಲಿ ಅಕ್ಷರಗಳು ಕೆಲವು ಹೆಚ್ಚೋ ಕಡಿಮೆಯೋ ಆಗಿರಲಿ ಅದನ್ನು ನಾನು ಗಮನಿಸುವುದಿಲ್ಲ. ಈ ರಾಜನು ಸಾಯುವಾಗ ಪ್ರಾಹರ, ಪ್ರಹರ ಅಹರ ಎಂದು ಹರನಾಮೋಚ್ಚರಣೆಯನ್ನೆ ಮಾಡಿದ. ಇದರಲ್ಲಿ 'ಪು' 'ಅ' ಎಂಬ ಅಕ್ಷರಗಳು ಅಧಿಕವಾಗಿರುವುದು ನಿಜ. ಆದರೂ ನಾಮೋಚ್ಚಾರಣೆಯು ಉತ್ತಮ ಲೋಕವನ್ನು ನೀಡಬಲ್ಲುದು. ಆದ್ದರಿಂದ ಶಿವನಾಮ ಜಪಮಾಡುವವರನ್ನು ನೀನು ದೂರದಿಂದಲೆ ನಮಸ್ಕಾರ ಮಾಡಬೇಕು. ಯಮನಿಗೆ ನನ್ನ ಈ ಮಾತನ್ನು ತಿಳಿಸು. 'ಶಿವನಿಗೆ ನಮಸ್ಕಾರ ಪೂಜೆ ಸ್ತೋತ್ರ ಧ್ಯಾನ ಪರಿಚರ್ಯೆಗಳನ್ನು ಮಾಡುತ್ತ ಶತರುದ್ರ ಪಂಚಾಕ್ಷರಗಳನ್ನು ಜಪಿಸುವವರ ವಿಷಯದಲ್ಲಿ ನೀನು ವಿಚಾರ

ಮಾಡಲೇಬೇಡ. ನನ್ನ ನಾಮಸ್ಮರಣೆ ರುದ್ರಾಕ್ಷವಿಭೂತಿ ಧಾರಣೆಗಳನ್ನು ಮಾಡುವ ಅಥವಾ ನನ್ನ ಮುಂದೆ ಪುರಾಣ ಪಠನ ಪ್ರವಚನ ಮಾಡುವ ಜನರಲ್ಲಿ ಎಷ್ಟು ಪಾಪಗಳಿದ್ದರೂ ಅವರನ್ನು ನಾನು ನೋಡಿಕೊಳ್ಳುವೆ. ನಿನಗೆ ಅವರ ಮೇಲೆ ಅಧಿಕಾರವಿಲ್ಲ. ವಾರಾಣಸಿಯಲ್ಲಿ ಮರಣ ಹೊಂದುವ ಅಥವಾ ಶ್ರೀಶೈಲದಲ್ಲಿ ವಾಸ ಮಾಡುವವರು ಪರರ ಅನ್ನ ವಸ್ತ್ರಾದಿಗಳನ್ನೂ ಪರಸ್ತ್ರೀಯರನ್ನೂ ಸೇವಿಸಿದರೂ ಅದರ ಬಗ್ಗೆ ನೀನು ವಿಚಾರಿಸಬೇಡ. ನನ್ನ ನಾಮ ಜಪ ಮಾಡುತ್ತ ನನ್ನನ್ನು ಸ್ಮರಿಸುವವರನ್ನು ನೀನೆಂದೂ ವಿಚಾರಿಸಬೇಡ. ಅವರಿಗೆ ನಮಸ್ಕಾರ ಮಾಡಿ ದೂರದಲ್ಲಿ ನಿಲ್ಲು.

ಮೃತ್ಯುವು ಶಿವನ ಈ ಮಾತನ್ನು ಕೇಳಿ ಅವನನ್ನು 'ಸರ್ವಜ್ಞನಾದ ದೇವತೆಗಳೊಡೆಯನಾದ ಪಶುಪತಿಯೆ ನಿನಗೆ ನಮಸ್ಕಾರ' ಎಂದು ಸ್ತುತಿಸಿದ. ನನ್ನನ್ನು ಕಾಪಾಡೆಂದು ಬೇಡಿದ. 'ಆಗಲಿ, ಮಗು, ಹೋಗು ಎನ್ನುತ್ತ ಶಿವನು ಅವನನ್ನು ಯಮಲೋಕಕ್ಕೆ ಕಳಿಸಿದ. ಈ ಕಥೆಯನ್ನು ಕೇಳಿದರೆ ಎಲ್ಲ ಪಾಪಗಳೂ ಪರಿಹಾರವಾಗುತ್ತವೆ. ಶಿವಲೋಕ ದೊರೆಯುತ್ತದೆ.

**ಶಂಭು ಉವಾಚ**

**ಶಂಭು :-** ಶಿವನಾಮೋಚ್ಚಾರಣೆಯ ಬಲದಿಂದ ದೇವರಾತನ ಮಗಳು ಕಲೆಯು ಯಾವ ಸದ್ಗತಿಯನ್ನು ಪಡೆದಳೆಂಬುದನ್ನು ಹೇಳುತ್ತೇನೆ, ಕೇಳು. ಧನಂಜಯನೆಂಬ ಬ್ರಾಹ್ಮಣನ ಮಗನಾದ ಶೋಣಕನ ಮಡದಿ ಈ ಕಲೆ. ದಂಪತಿಗಳಿಬ್ಬರೂ ನಿಯಮನಿಷ್ಠರು ಧರ್ಮದಲ್ಲಿ ಆಸಕ್ತರು.

ಒಂದುದಿನ ಅವರು ಗಂಗಾಸ್ನಾನಕ್ಕೆ ಹೋದಾಗ ನಿಧಿ ದೊರೆಯಿತು. ಒಂದು ಕಡೆ ಪ್ರವಾಹದಿಂದ ಬಿದ್ದು ಹೋಗುತ್ತಿದ್ದ ದಡದಲ್ಲಿ ಮಣ್ಣಿನ ಹೆಂಟೆಯನ್ನೆತ್ತಿಕೊಂಡಾಗ ಒಂದು ಬಿಂದಿಗೆ' ಕಾಣಿಸಿತು. ಅದೊಂದು ಬೆಳ್ಳಿಯ ಬಿಂದಿಗೆ. ಅದರ ಮೇಲೆ ಕಲ್ಲು ಮುಚ್ಚಿತ್ತು. ಶೋಣಕನು ಮಡದಿಯನ್ನು ಕೇಳಿದ, 'ಪ್ರಿಯೆ, ನಾವು ಇದನ್ನೇನು ಮಾಡೋಣ? ಅವಳೆಂದಳು, 'ಹೆಣ್ಣಿನ ಸಲಹೆಯನ್ನು ನಂಬಿ ಯಾವ ಕಾರ್ಯವನ್ನೂ ಮಾಡಕೂಡದು. ಅವಳೆದುರಿನಲ್ಲಿ ನಿಧಿ ಏನಾದರೂ ದೃಷ್ಟಿಗೆ ಗೋಚರವಾದರೆ ಅವಳಿಗೆ ಹೀಗೆ ಉಪದೇಶಿಸಬೇಕು. ನಾವು ಅದನ್ನು ನೋಡಕೂಡದು. ಅದರಲ್ಲೇನಿದೆಯೊ ! ಹಣವಾದರಂತೂ ನೋಡಲೇಕೂಡದು. ನೋಡಿದರೆ ಅದರಿಂದ ಮುಂದೆ ತೊಂದರೆಯುಂಟು. ಅದನ್ನು ಇನ್ನೊಬ್ಬನು ನೋಡಿಕೊಂಡಿರಬಹುದು. ಅವನಿಲ್ಲಿಯೆ ಅಮಿತುಕೊಂಡಿರಬಹುದು. ಇಲ್ಲವೆ ಮಾಯೆಯಿಂದ ಅದೃಶ್ಯನಾಗಿರಬಹುದು. ಅವನು ಮನುಷ್ಯನಲ್ಲವಾದರೆ ಕ್ಷೇತ್ರಪಾಲನೊ ಭೈರವನೊ ಬ್ರಹ್ಮರಾಕ್ಷಸನೊ ಇರಬಹುದು. ಇವರಾರೂ ಇಲ್ಲ ಎಂದರೂ ರಾಜನಿಂದ ಅಪಾಯ ಬರುವುದು ನಿಶ್ಚಿತ. ಅಥವಾ ಕಳ್ಳರ ಕಾಟ ತಪ್ಪಲಿಕ್ಕಿಲ್ಲ. ಎಷ್ಟು ಜಾಗರೂಕತೆಯಿಂದ ಇದ್ದರೂ ನಿಧಿಯು ಅನ್ಯರ ಪಾಲಾಗಿ ಅನರ್ಥ ತಂದೊಡ್ಡಬಹುದು. ನಿಧಿಯು ನಮ್ಮಲ್ಲಿಯೆ ಉಳಿದು ಕೊಂಡರೂ ಸುಖಭೋಗ ದಾಸೆಯನ್ನು ಹೆಚ್ಚಿಸಿ ಧರ್ಮಾಚರಣೆಗೆ ವಿಘ್ನ ತರುವುದು. ಮನೆಯಲ್ಲಿ ಅದು ಇರುವುದನ್ನು ತಿಳಿದರೆ ಹೆಣ್ಣು ಸ್ವಾತಂತ್ರ್ಯ ವಹಿಸಿ ಪರುಪುರುಷನ ಸಂಗವನ್ನು ಬಯಸುವಳು ಅವನು ಅವಳನ್ನು ಹೊಡೆದು ಬೆದರಿಸಿ ಹಣವನನು ದೋಚಿ ಅವಳನ್ನೂ ಕೊಂದು ಹೊರಟು

ಹೋಗುವನು. ಅಥವಾ ಮನೆಯಲ್ಲಿ ಹೇರಳ ಸಂಪತ್ತಿದ್ದರೆ ಪತಿಯು ಮೃತನಾದಾಗ ಹೆಣ್ಣು ಸಹಗಮಾನಕ್ಕೊಪ್ಪಲಾರಳು. ಆ ಸಂಪತ್ತನ್ನು ತಾನು ಭೋಗಿಸಲು ಬದುಕಬೇಕೆಂದು ಆಕೆ ಬಯಸುವಳು. ಆಗ ಏಕಾಕಿನಿಯಾಗಿ ಸಂಪತ್ತನ್ನು ಭೋಗಿಸಲಾರದೆ ಪರಪುರುಷರ ಹಿಂದೆ ಹೋಗುವಳು. ಆದುದರಿಂದ ಹಣದ ಬಗ್ಗೆ ನೀನು ನನ್ನೊಡನೆ ಏನೂ ಚರ್ಚಿಸಬೇಡ.

**ಶೋಣಕ :-** ಹಾಗಾದರೆ ನೀನು ದೂರಹೋಗಿರು. ನಾನು ಮಲಮೂತ್ರ ವಿಸರ್ಜಿಸಿ ಬರುವೆನು. ಕಲೆ ದೂರಹೋದಳು. ಶೋಣಕನು ಆ ನಿಧಿಯನ್ನು ಅಲ್ಲಿಯೆ ಮಳಲ ದಂಡೆಯಲ್ಲಿ ಹೂಳಿಟ್ಟು ಸ್ನಾನಕ್ಕೆ ತೆರಳಿದ. ಇತ್ತ ಕಲೆ ಒಬ್ಬಳೆ ಹೋಗುತ್ತಿದ್ದಾಗ ಮಾರೀಚನೆಂಬ ರಾಕ್ಷಸನು ಶೋಣನ ರೂಪ ಧರಿಸಿ ಅವಳ ಬಳಿಗೆ ಬಂದು ಹೇಳಿದ.

**ಮಾರೀಚ :-** ಪತಿಗೆ ವಿರುದ್ಧವಾಗಿ ನಡೆಯದಿರುವುದು ಹೆಣ್ಣಿನ ಧರ್ಮ. ನೀನು ಅದನ್ನು ಪಾಲಿಸುವೆಯೊ ಇಲ್ಲವೊ ಹೇಳು.

ಕಲೆ ಏನೂ ಹೇಳದೆ ಅವನು ಪತಿಯೆಂದೆ ನಂಬಿ ಹಿಂಬಾಲಿಸಿ ನಡೆದಳು. ಇಬ್ಬರೂ ಕಾಡು ದಾರಿಯನ್ನು ತುಳಿದರು. ಮಧ್ಯಾಹ್ನವಾದಾಗ ಕಲೆ ಹೇಳಿದಳು.

**ಕಲೆ :-** ಇದು ಮಧ್ಯಾಹ್ನ ಕಾಲ. ಮಾಧ್ಯಾಹಿಕ ಕ್ರಿಯೆಗಳನ್ನು ಮಾಡು.

**ಮಾರೀಚ:-** ಈ ಸ್ಥಳ ಅನುಷ್ಠಾನಕ್ಕೆ ಪ್ರಶಸ್ತವಾಗಿಲ್ಲ. ಬೇರೆ ಸ್ಥಳ ನೋಡೋಣ ಬಾ.

ಮುಂದೆ ಒಂದೆಡೆ ಗುಹೆ ಕಾಣಿಸಿತು. ಸಮಿಪದಲ್ಲಿಯೆ ಒಂದು ಕೊಳವೂ ಇತ್ತು. ಇದು ಮಾಧ್ಯಾಹ್ನಿಕ ಕ್ರಿಯೆಗೆ ಯೋಗ್ಯಸ್ಥಳವೆನ್ನುತ್ತ ರಾಕ್ಷಸನು ಅಲ್ಲಿ ಸ್ನಾನಕ್ಕೆ ಹೊರಟ. ಕಲೆಯೂ ಸ್ನಾನ ಮಾಡಿ ಫಲಾಹಾರಕ್ಕೆ ಸಿದ್ಧತೆ ಮಾಡಿದಳು. 'ಇವನು ತನ್ನ ಪತಿ ಹೌದೆ ಅಲ್ಲವೆ ಎಂದು ಅನುಮಾನಪಟ್ಟು ಪಾರ್ವತಿ ಪರಮೇಶ್ವರರನ್ನು ಒಂದು ಕ್ಷಣ ಧ್ಯಾನಿಸಿದಳು. ಆಗ ಅವನು ಮೋಸಗಾರನೆಂದು ತಿಳಿದು ಭಯಗೊಂಡಳು. ಅಳತೊಡಗಿದಳು. ರಾಕ್ಷಸನು ಬಲಾತ್ಕರಿಸ ತೊಡಗಿದ, ಅವಳ ಪಾತಿವ್ರತ್ಯ ಪ್ರಭಾವದಿಂದ ಹೊಕ್ಕುಳಿನಿಂದ ಮೊಳಕಾಲಿನವರೆಗಿನ ಭಾಗವನ್ನು ಕಲ್ಲಾಗಿಸಿಕೊಂಡಳು. ಉಟ್ಟಬಟ್ಟೆಯನ್ನು ಕಲ್ಲಾಗಿಸಿದಳು. ರಾಕ್ಷಸನು ಹತಾಶನಾಗಿ ಅವಳನ್ನು ಕೊಲ್ಲಲ್ಲು ಖಡ್ಗವನ್ನೆತ್ತಿದ 'ಮಾಪ್ರಹರ' ಕೊಲ್ಲಬೇಡ, ನನ್ನ ಪತಿ ತಿಳಿದು ನಿನ್ನನ್ನು ಶಪಿಸುವನು ಎಂದಳು ಕಲೆ. ಆದರೂ ಅವನು ಆಕೆಯ ತಲೆಯನ್ನು ತುಂಡರಿಸಿದ. ಒಡನೆ ಶಿವದೂತರು ಬಂದು ಅವಳನ್ನು ವಿಮಾನದಲ್ಲಿ ಕುಳ್ಳಿರಿಸಿ ಶಿವಲೋಕಕ್ಕೊಯ್ದರು. ಅಲ್ಲಿ ಪಾರ್ವತಿ ಸಂತೋಷದಿಂದ ಹೇಳಿದಳು. 'ನಿನ್ನ ಪಾತಿವ್ರತ್ಯಕ್ಕೆ ನಾನು ಮೆಚ್ಚಿದೆನು' ನಿನಗೇನು ವರಬೇಕು, ಹೇಳು. ಅವಳು ಬೇಡಿದಳು. 'ದೇವಿ ನಿನ್ನ ಪಾದ ಕಮಲಗಳ ಸೇವೆಯ ಅವಕಾಶ ನೀಡು. ನನಗೆ ಅದು ಬಲು ಇಷ್ಟ ಇನ್ನೇನೂ ಬೇಡ.' ಪಾರ್ವತಿ 'ತಥಾಸ್ತು' ಎಂದಳು.

ಇತ್ತ ಶೋಣಕನು ಕಲೆಯನ್ನು ಎಲ್ಲಿಯೂ ಕಾಣದೆ ಧ್ಯಾನ ದೃಷ್ಟಿಯಿಂದ ಎಲ್ಲವನ್ನೂ ತಿಳಿದು ದುಃಖದಿಂದ ಮಾವನಾದ ದೇವರಾತನ ಬಳಿಗೆ ಹೋಗಿ ಎಲ್ಲವನ್ನೂ ತಿಳಿಸಿದ. ಅವರಿಬ್ಬರೂ ವಿಶ್ವಾಮಿತ್ರನ ಬಳಿಗೆ ಹೋಗಿ ಸಮಾಲೋಚೋಸಿದರು. ಬಳಿಕ ವಶಿಷ್ಠನಲ್ಲಿಯೂ ಎಲ್ಲವನ್ನೂ ನಿವೇದಿಸಿಕೊಂಡರು. ವಶಿಷ್ಠನೆಂದ. ನಾವೆಲ್ಲರೂ ಕೈಲಾಸಕ್ಕೆ ಹೋಗಿ ಶಿವನನ್ನು ಭೆಟ್ಟಿಮಾಡಿ ಅವನನುಜ್ಞೆ ಪಡೆದು ಪಾರ್ವತಿಯ ಬಳಿ,

ಕೇಳಿಕೊಳ್ಳೋಣ. ಆಗ ಅವಳು ಕಲೆಯನ್ನು ನಮ್ಮೊಡನೆ ಕಳಿಸಿಕೊಡುವಳು. ಎಲ್ಲರೂ ಕೈಲಾಸಕ್ಕೆ ಹೋದರು. ವೀರಭದ್ರನು ಮಾಡಿದ ಸತ್ಕಾರವನ್ನು ಸ್ವೀಕರಿಸದರು. ಶಿವನಲ್ಲಿ ವಿಜ್ಞಾಪಿಸಿದರು. 'ದೇವ, ಶೋಣಕನ ಪತ್ನಿಯನ್ನು ಅಪಹರಿಸಿದ್ದಾರೆ.

**ಶಿವ :-** ಮುನಿಗಳೆ, ಇದು ನನಗೆ ಗೊತ್ತು. ಅವಳಿಗೆ ಅಕಾಲ ಮರಣ ಒದಗಿದೆ. ನೂರು ವರ್ಷಗಳ ಕಾಲ ಅವಳು ಬದುಕಿರಬೇಕಿತ್ತು. ಆ ಕಾಲ ಮರಳಿ ಒದಗಿದರೂ ತಿರುಗಿ ಜೀವಿಸಬಹುದು. ರೂಪ ಸೌಭಾಗ್ಯಗಳನ್ನು ಹೊಂದಿ ಹತ್ತು ಜನ ಗಂಡು ಮಕ್ಕಳನ್ನು ಹಡೆಯಬೇಕಾದವಳು ಎಂದು ಭಾವಿಸಿ ನೀವೀಗ ಬಂದಿದ್ದೀರಿ. ಆದರೆ ಅಕಾಲ ಮರಣದಿಂದ ಯಮಲೋಕ ಸೇರಿದವರ ಬಗ್ಗೆ ಇದೆಲ್ಲವೂ ಸರಿಯೆ. ನನ್ನ ಲೋಕಕ್ಕೆ ಬಂದವರು ಮಾತ್ರ ಇನ್ನೆಲ್ಲಿಗೂ ಹೋಗಲಾರರು. ಈ ಶೋಣಕನ ಪತ್ನಿ ಪ್ರಾಣೋತ್ಕ್ರಮಣ ಕಾಲದಲ್ಲಿ ನನ್ನ ನಾಮೋಚ್ಚಾರಣ ಮಾಡಿದುದರಿಂದ ಯಮನ ಲಿಪಿ ಅಳಿಸಿ ಹೋಯಿತು. ಆಯುಷ್ಯವನ್ನು ನಿರ್ಣಯಿಸುವಂತಿಲ್ಲ. ಆದರೂ ಪಾರ್ವತಿಯ ಬಳಿಯಲ್ಲಿ ಕೇಳಿ ನೋಡಿ.

ಮುನಿಗಳು ಪಾರ್ವತಿಯ ಬಳಿಗೆ ಹೋಗಿ ಬಿನ್ನವಿಸಿಕೊಂಡರು.

**ವಿಶ್ವಾಮಿತ್ರ :-** ಅಮ್ಮ, ದೀನ ಅನಾಥ ಶಿಶುಗಳನ್ನು ಕಾಪಾಡುತ್ತ ಸದಾ ನನಗೆ ಅಭೀಷ್ಟಗಳನ್ನು ಕರುಣಿಸುತ್ತಿದ್ದೆ. ನನ್ನ ಮೊಮ್ಮಗಳು ಕಲೆ ನಿನ್ನನ್ನಾರಾಧಿಸಿ ಶೋಣಕನನ್ನು ಪತಿಯನ್ನಾಗಿ ಹೊಂದಿದಳು. ಈಗ ಅವಳನ್ನು ತಿರುಗಿ ಪಡೆಯಲು ನಾನೇನು ಮಾಡಬೇಕು, ಹೇಳು. ತಪಸ್ಸೆ, ದಾನವೆ, ವ್ರತೋಪವಾಸಗಳೇ ? ಅವಳು ಬಡಿಸುವ ಅನ್ನವನ್ನು ನಾನುಣಬೇಕು, ಏನು ಮಾಡಲಿ ?

**ಪಾರ್ವತಿ :-** ಶೋಣಕನೆ ನಿನ್ನ ಆ ಕಲೆಗೆ ಸಮಾನಳಾದ ಇನ್ನೊಬ್ಬಳನ್ನು ನಿನಗೆ ಕೊಡುವೆನು. ಕಲೆಯನ್ನು ಮಾತ್ರ ಬಿಟ್ಟುಕೊಡಲಾರೆ. ವಿಶ್ವಾಮಿತ್ರನೆ, ನಿನ್ನ ಅಭಿಪ್ರಾಯವೇನು ಹೇಳು.

**ವಿಶ್ವಾಮಿತ್ರ :-** ಅಮ್ಮ, ನೀನು ತಾಯಿಯೆಂದೇ ನಿಃಸಂಕೋಚವಾಗಿ ನಾನು ನನ್ನ ಅಭೀಷ್ಟವನ್ನು ಕೇಳಿಕೊಂಡಿದ್ದೇನೆ. ಇನ್ನು ಶೋಣಕನ ಅಭಿಪ್ರಾಯವನ್ನು ಕೇಳಬಹುದು.

**ಶೋಣಕ :-** ಕಲೆಯಲ್ಲಿಯೆ ನನ್ನ ಪ್ರೀತಿ ಗಾಢವಾಗಿದೆ. ಅವಳನ್ನು ಕೊಡು. ಇಲ್ಲದಿದ್ದರೆ ನಾನು ಬದುಕಲಾರೆ.

**ಪಾರ್ವತಿ :-** ಗಂಡ ಹೆಂಡರು ಅನುರೂಪರಾಗಿರಬೇಕು. ಹಾಗಿಲ್ಲದಿದ್ದರೆ ಜತೆ ಸರಿಹೋಗುವುದಿಲ್ಲ. ಕಲೆ ನಿನಗೆ ಸರಿಯಾದವಳಲ್ಲ. ಯೋಗ್ಯಳಾದ ಇನ್ನೊಬ್ಬಳನ್ನು ನಿನಗೆ ಕೊಡುವೆನು. ಶರೀರತ್ಯಾಗ ಮಾಡಿ ನನ್ನ ಲೋಕಕ್ಕೆ ಬಂದವಳನ್ನು ನಾನು ಬಿಟ್ಟುಕೊಡಲಾರೆ.

**ಶೋಣಕ :-** ಹಾಗಾದರೆ ಇನ್ನೊಬ್ಬಳು ಹೆಂಡತಿಯನ್ನು ಕೊಡು. ರಾಜ್ಯವನ್ನೂ ಶಿವನಲ್ಲಿ ಭಕ್ತಿಯನ್ನೂ ಅನುಗ್ರಹಿಸು.

**ಪಾರ್ವತಿ :-** ಆಗಲಿ ಮುನಿಗಳೆ, ನೀವೆಲ್ಲರೂ ಮೂರುದಿನ ಇಲ್ಲಿದ್ದು ಭೋಜನ ಮಾಡಬೇಕು. ಪ್ರತಿ ಸೋಮವಾರ ಪ್ರೀತ್ಯರ್ಥವಾಗಿ ಎಂಟು ಜನ ಬ್ರಾಹ್ಮಣರನ್ನು ಭೋಜನ ಮಾಡಿಸಬೇಕು. ಯಾವುದಾದರೊಂದು ಸೋಮವಾರ ವ್ರತವನ್ನು ಮೊದಲು ಮಾಡಿ ವರ್ಷತುಂಬಿದ ಮೇಲೆ ಚಿನ್ನದಲ್ಲಿ ನಾಲ್ಕು ಅಥವಾ ಎರಡು ನಿಷ್ಕಪ್ರಮಾಣದ ಒಂದು

ಈಶ್ವರ ಪ್ರತಿಮೆ ಮಾಡಿಸಬೇಕು. ಎರಡು ಬಿಳಿ ಬಟ್ಟೆಗಳು, ಚಾಮರ, ಬೀಸಣಿಗೆ, ಪಾದುಕೆ ಛತ್ರಿ ಇವುಗಳನ್ನ ಬ್ರಾಹ್ಮಣರಿಗೆ ಕೊಟ್ಟು ದಕ್ಷಿಣೆ ನೀಡಬೇಕು. ಹೀಗೆ ಆದಿ ಮಧ್ಯ ಮತ್ತು ವ್ರತದ ಕೊನೆಯಲ್ಲಿ ಉದ್ಯಾಪನೆಗಳು ಮಾಡಬೇಕು. ಪ್ರತಿದಿನ ಮಂಡಲದಲ್ಲಿ ಇಲ್ಲವೆ ಪ್ರತಿಮೆಯಲ್ಲಿ ಶಿವನನ್ನು ಈ ಮಂತ್ರದಿಂದ ಪೂಜಿಸಬೇಕು.

**ತತ್ಪುರುಷಾಯ ವಿದ್ಮಹೇ ಮಹಾದೇವಸ್ಯ ದೀಮಹಿ ।**
**ತನ್ನೋ ರುದ್ರಃ ಪ್ರಚೋದಯಾತ್ ॥**

ಮಹಾದೇವನೆನಿಸಿದ ಆ ಸ್ವಾಮಿಯನ್ನು ಧ್ಯಾನಿಸುತ್ತೇವೆ. ಅವನು ನಮ್ಮನ್ನು ಸನ್ಮಾರ್ಗದಲ್ಲಿ ನಡೆಸಲಿ. ಒಪ್ಪೊತ್ತು ಊಟ ಮಾಡುತ್ತ ಬ್ರಹ್ಮಚರ್ಯದಿಂದಿರಬೇಕು. ಇದು **ಸೋಮವಾರ ವ್ರತ.** ಶಿವನಿಗೆ ಪ್ರೀತಿಕರ. ಇದನ್ನು ಭಕ್ತಿಯಿಂದಾಚರಿಸುವವರು ನೆರಳಿನಂತೆ ಶಿವನನ್ನೆ ಹಿಂಬಾಲಿಸುತ್ತಾರೆ.

ಇಂದು ಸೋಮವಾರ. ಮಧ್ಯಾಹ್ನದ ಮೇಲೆ ಊಟ. ನೀವೆಲ್ಲರೂ ಪೂರ್ವಾಹ್ನದ ಅನುಷ್ಠಾನಗಳನ್ನು ತೀರಿಸಿ ಮಾಧ್ಯಾಹ್ನಿಕವನ್ನೂ ಮಾಡಿ ಭೋಜನಕ್ಕೆ ದಯಮಾಡಿಸಬೇಕು.

ಪಾರ್ವತಿಯ ಈ ಮಾತುಗಳನ್ನು ಕೇಳಿ ಮುನಿಗಳು 'ಆಗಲಿ' ಎಂದು ಹೇಳಿ ನಮಸ್ಕರಿಸಿ ಅನುಷ್ಠಾನಕ್ಕಾಗಿ ಭಾಗೀರಥಿಯ ಬಳಿಗೆ ಹೋದರು. ಪ್ರಾತಃಕಾಲ, ಮಧ್ಯಾಹ್ನಗಳ ಅನುಷ್ಠಾನಗಳನ್ನು ಮುಗಿಸಿ ಷೋಡಶೋಪಚಾರಗಳಿಂದ ಶಿವನನ್ನು ಪೂಜಿಸಿದರು. ಬಳಿಕ ಈ ಪಾರ್ವತಿಯ ಮನೆಗೆ ಬಂದರು. ಅಲ್ಲಿ ಪಾರ್ವತಿಯ ಆಜ್ಞೆಯಂತೆ ಶಾಲಂಕಾಯನನ ಮಗನು ಮುನಿಗಳಿಗೆ ಪಾದಪ್ರಕ್ಷಾಳನೆ ಮುಂತಾದ ಉಪಚಾರಗಳನ್ನು ಸಲ್ಲಿಸಿದನು. ಪಂಚಗಂಧಗಳನ್ನು ಅವರ ಮೈಗೆ ಬಳಿದನು.

ಪಂಚಗಂಧಗಳನ್ನು ದಾನ ಮಾಡಿದರೆ ರಾಜ್ಯಲಾಭ ಉಂಟಾಗುವದು. ಮನ್ಮಥನಂತಾಗಿ ಸ್ತ್ರೀಯರ್ನನಾಕರ್ಷಿಸಬಹುದು. ಫಲದಾಶೆಯಿಂದ ಪಂಚಗಂಧಗಳನ್ನು ವಿಷ್ಣುವಿಗೆ ನಿವೇದಿಸಿದರೆ ಮನ್ಮಥನಂಥ ರೂಪ ಲಭಿಸುವುದು. ನಿಷ್ಕಾಮನೆಯಿಂದ ಮಾಡಿದರೆ ಕೈಲಾಸದಲ್ಲಿ ಐದುವರ್ಷಗಳ ಕಾಲ ಎಲ್ಲ ಸುವಾಸನೆಯ ದ್ರವ್ಯಗಳನ್ನೂ ಇಷ್ಟವಾದ ಎಲ್ಲ ಸುಖಗಳನ್ನೂ ಅನುಭವಿಸಿ ಭೂಮಿಯಲ್ಲಿ ರಾಜನಾಗಿ ಹುಟ್ಟುತ್ತಾನೆ.

**ಕಸ್ತೂರೀ ಚಂದನಂ ಚಂದ್ರ ಮಗುರು ದ್ವಿತಯಂ ತಥಾ**
**ಪಂಚಗಂಧಕಮಾಖ್ಯಾತಂ ಸರ್ವಕಾರ್ಯೇಷು ಶೋಭನಂ**

ಕಸ್ತೂರಿ, ಚಂದನ, ಪಚ್ಚಕರ್ಪೂರ, ಶ್ವೇತಾಗರು, ಕೃಷ್ಣಾಗುರು ಈ ಐದು ಕೂಡಿದರೆ ಪಂಚಗಂಧವೆನಿಸುವುದು. ಇದು ಸರ್ವಕಾರ್ಯಗಳಲ್ಲಿಯೂ ಮಂಗಳಕರ.

ಮುನಿಗಳು ಪಂಚಗಂಧವನ್ನು ಬಳಿದುಕೊಂಡು ಆಸನಗಳಲ್ಲಿ ಕುಳಿತಿದ್ದಾಗ ಒಬ್ಬ ಮುದಿ ಬ್ರಾಹ್ಮಣನು ಅಲ್ಲಿಗೆ ಬಂದನು. ಹುಚ್ಚನಂತೆ ಕಾಣುತ್ತಿದ್ದ. ದಿಗಂಬರನಾಗಿದ್ದ. ಮುಪ್ಪಿನಿಂದ ಜರ್ಜರಿತನಾಗಿದ್ದು ಕೆಮ್ಮು ಉಬ್ಬುಸಗಳಿಂದ ಬಳಲುತ್ತಿದ್ದ. ಜೊಲ್ಲು ಸುರಿಸುತ್ತಿದ್ದ. ಗಡ್ಡ ಮೀಸೆಗಳಲ್ಲಿ ಶ್ಲೇಷ್ಮ ಅಂಟಿಕೊಂಡಿತ್ತು. ಎಡವುತ್ತ ಹೆಜ್ಜೆ ಇಡುತ್ತಿದ್ದ. ಜೊತೆಯಲ್ಲಿ ಹದಿನಾರು ಹರೆಯದ ಸುಂದರಿಯೋರ್ವಳು ಇದ್ದಳು. ಎಲ್ಲ

ಆಭರಣಗಳನ್ನು ತೊಟ್ಟಿದ್ದಳು. ಸುಂದರ ಪುರುಷರನ್ನು ನೋಡುತ್ತ ಆಕಡೆ ಈ ಕಡೆ ದೃಷ್ಟಿ ಹಾಯಿಸುತ್ತಿದ್ದಳು. ಹಾಡುತ್ತಿದ್ದಳು. ಕುಣಿಯುತ್ತಿದ್ದಳು. ಮುದಿ ಗಂಡನ ಮುಖವನ್ನು ನೋಡಿ ನಗುತ್ತಿದ್ದಳು. 'ಬೇಗ ಬಾ, ನನಗೆ ಹಸಿವಾಗುತ್ತದೆ. ನಿನ್ನಂಥ ಮುದಿಯನ ಕೈ ಹಿಡದ ನನಗೆ ನಿತ್ಯವೂ ದುಃಖ. ಬಟ್ಟೆ, ಒಡವೆಗಳು, ಮಾಲೆ, ಗಂಧ, ಹಾಡು, ನಗು ಮುಂತಾದ ಎಲ್ಲ ಭೋಗಗಳೂ ಕಾಮೋದ್ದೀಪನಕ್ಕಾಗಿ ಇರುವಂಥವುಗಳು ಬೇರೆಲ್ಲ ಸುಖಗಳನ್ನು ಒಂದು ಕಡೆ ರತಿಸುಖ ಒಂದನ್ನೇ ಇನ್ನೊಂದು ಕಡೆ ಇಟ್ಟು ತೂಗಿದರೆ ರತಿಸುಖವೆ ಮಿಕ್ಕೆಲ್ಲ ಸುಖಗಳಿಗಿಂತ ನೂರರಷ್ಟು ಮಿಗಿಲಾಗಿರುತ್ತದೆ. ನಿನ್ನ ಕೈ ಹಿಡಿದು ನನ್ನಂಥವಳೇನು ಮಾಡಲಿ. ಹೇಳು ಎಂದು ಅವಳು ಜರಿಯುತ್ತಿದ್ದಳು. ಬ್ರಾಹ್ಮಣನು ಇದನ್ನು ಕೇಳಿ ನೊಂದು, 'ನಾವೇನು ಮಾಡಬಲ್ಲೆವು ? ನಮ್ಮ ಭಾಗ್ಯ ಹೀಗಿದೆ. ನಾನಿಂತವನೆಂದು ತಿಳಿದೂ ನನ್ನನ್ನೇಕೆ ಚುಚ್ಚು ನುಡಿಗಳಿಂದ ಕೊಲ್ಲುವೆ ?'' ಎನ್ನುತ್ತಿದ್ದ.

ಬ್ರಾಹ್ಮಣನು ಪಾರ್ವತಿಯ ಮುಂದೆ ಬಂದು ನಿಂತು ಅವಳಾರೆಂದು ತಿಳಿಯದೆ, 'ಮುನಿಯೆ, ನಾನು ಹಸಿದಿದ್ದೇನೆ. ಭೋಜನಕಾಲದಲ್ಲಿ ಬಂದಿದ್ದೇನೆ. ಅನ್ನ ನೀಡು' ಎಂದ.

'ಇಲ್ಲಿ ಮುನಿ ಎಲ್ಲಿದ್ದಾನೆ ? ಇವಳೊಬ್ಬಳು ಹೆಣ್ಣು. ಕುರುಡನಾಡುವ ಮಾತೆಲ್ಲ ಹೀಗೆಯೆ.' ಎಂದಳು ಹೆಂಡತಿ.

ಪಾರ್ವತಿಯು ಶಾಲಂಕಾಯನನ ಮಗನನ್ನು ಕರೆದು 'ಈ ಬ್ರಾಹ್ಮಣನಿಗೂ ಪಾದಪ್ರಕ್ಷಾಳನ ಮಾಡಿ ಚಿನ್ನದ ಮಣೆಯ ಮೇಲೆ ಕುಳ್ಳಿರಿಸು' ಎಂದಳು. ಅವನು ಹಾಗೇ ಮಾಡಿದ. ಬಳಿಕ ಕಲೆ, ಅರುಂಧತಿ, ಅನಸೂಯೆಯರು ಪಾರ್ವತಿಯ ಆಜ್ಞೆಯಂತೆ ಬ್ರಾಹ್ಮಣನಿಗೆ ಷಡ್ರಸಾನ್ನಗಳನ್ನು ಬಡಿಸಿದರು.

ಮುದಿ ಬ್ರಾಹ್ಮಣನು ಒಂದು ಕ್ಷಣದಲ್ಲಿ ಬಡಿಸಿದ ಆ ಅನ್ನವನ್ನೆಲ್ಲ ಉಣ್ಣುತ್ತಿದ್ದ. ಬಡಿಸುವವರು ಬಡಿಸಿ ಬಡಿಸಿ ಸೋತರು. ಕೊನೆಗೆ ಪಾರ್ವತಿಯೆ ಬಂದಳು. ಅವಳು ಬಡಿಸಿದ ಅನ್ನವನ್ನೂ ಕ್ಷಣದಲ್ಲಿ ಉಂಡು ಪಾತ್ರೆಯಲ್ಲಿರುವ ಅನ್ನವನ್ನೆಲ್ಲ ಬೇಡಿದನಾತ. ಪಾರ್ವತಿಯು 'ಅಕ್ಷಯವಾಗಲಿ' ಎನ್ನುತ್ತ ಬಡಿಸಿದಳು. ಬ್ರಾಹ್ಮಣನು ಎರಡು ಕೈಗಳಿಂದ ಉಣತೊಡಗಿದ ಪಾರ್ವತಿಯು ಎರಡು ಕೈಗಳಲ್ಲಿ ಯೂ ಅನ್ನ ಅಕ್ಷಯವಾಗಲಿ ಎಂದು ಹೇಳಿ ಬಡಿಸಿದಳು. ಎರಡು ಕೈಗಳು ಒಡನೆ ಮೂರಾದುವು ನಾಕಾದವು ಕೊನೆಗೆ ಸಾವಿರ ಕೈಗಳಾದವು. ಪಾರ್ವತಿಯು ಮಾತ್ರ ಬಡಿಸಿ ಬಡಿಸಿ ಸಂತೋಷಪಟ್ಟಳೆ ಹೊರತು ಅಸಹನೆ ತೋರಲಿಲ್ಲ. ಬ್ರಾಹ್ಮಣನೆ ಸೋತು ಎದ್ದ. ಕೈಕಾಲು ತೊಳೆದುಕೊಂಡು ಸುಗಂಧ ದ್ರವ್ಯಗಳನ್ನು ಸ್ವೀಕರಿಸಿ, 'ಅಮ್ಮ, ನನಗೆ ಸಂತೋಷವಾಯಿತು. ನಿನ್ನ ಅಭೀಷ್ಟವೇನು ಹೇಳು' ಎಂದ 'ಮುನಿಯೆ, ನೀನು ನನಗೆ ವರನೀಡಲು ಸಮರ್ಥನಿರಬಹುದು. ಆದರೆ ಆ ವರದಿಂದ ನನಗೇನು ಪ್ರಯೋಜನ ? ಶಿವನೆ ನನ್ನ ಪತಿಯಾಗಿದ್ದಾನೆ'. ಎಂದಳು ಪಾರ್ವತಿ.

**ಬ್ರಾಹ್ಮಣ :-** ಆ ಶಿವನು ಹೇಗಿರುವನೊ ? ನಿನಗೆ ಅನುರೂಪನಾಗಿರುವನೆ ? ಇಲ್ಲದಿದ್ದರೆ ಅವನು ನಿನಗೆ ಯೋಗ್ಯನಾಗಲಾರ. ಸ್ತ್ರೀಯನ್ನಾಕರ್ಷಿಸಬೇಕಾದರೆ ನನ್ನಂತಿರಬೇಕು. ಇಲ್ಲದಿದ್ದರೆ ಇಂತ ನನ್ನ ಮಡದಿ ನನ್ನ ವಶಳಾಗಿರುತ್ತದ್ದಳೆ ? ಹೇಳು.

**ಪಾರ್ವತಿ :-** ನೀನು ಹೇಳುವುದು ಸುಳ್ಳು. ನಿನ್ನ ಮಡದಿಯ ಮಾತು ಅದಕ್ಕೆ ನೀನು ಕೊಡುವ ಉತ್ತರ ಎಲ್ಲವನ್ನೂ ನಾನು ಕೇಳಿಸಿಕೊಂಡಿದ್ದೇನೆ.

**ಬ್ರಾಹ್ಮಣ :-** ನಿನ್ನ ಪಾತಿವ್ರತ್ಯವೆಷ್ಟಿದೆ ಎಂದು ತಿಳಿಯಲು ನಾನು ಹಾಗೆ ಹೇಳಿದೆ. ಈಗ ನೀನು ತೊಡೆಯೇರು. ನಿನ್ನ ತುರಬನ್ನು ನಾನು ಕಟ್ಟುವೆ. ಆಗ ನಿನ್ನ ಮನಸ್ಸು ಚಂಚಲವಾದರೆ ನೀನು ಹೇಗೆ ಪತಿವ್ರತೆಯೆನಿಸಬಲ್ಲೆ ?

**ಪಾರ್ವತಿ :-** ಮುನಿಯೆ ನಾನು ಶಿವನ ತೊಡೆಯನ್ನು ಮಾತ್ರ ಏರುವವಳು. ಇದು ನನ್ನ ವ್ರತ.

ಪಾರ್ವತಿಯ ಚಿತ್ತ ಸ್ಥೈರ್ಯವನ್ನು ಕಂಡು ಶಿವನು ನಿಜರೂಪವನ್ನು ತೋರಿ ನಿಂತನು. ಹದಿನಾರು ವಯಸ್ಸಿನ ಹಾಲು ಬಣ್ಣದ ಶರೀರ. ಸುಂದರ ಕಣ್ಣುಗಳು. ಸುಂದರವಾಗಿ ಕಟ್ಟಿದ ತಲೆಕೂದಲು. ಕೋಟಿ ಮನ್ಮಥರ ಚೆಲುವನ್ನು ಪಡೆದ ಆ ತರುಣನು ಮೆಲು ದನಿಯಲ್ಲಿ ಹಾಡುತ್ತ ಬಳಿಯಲ್ಲಿದ್ದ ಹೆಣ್ಣಿನ ಹೆಗಲಿನ ಮೇಲೆ ತನ್ನೆರಡು ತೋಳುಗಳನ್ನಿರಿಸಿದ. ಇನ್ನೊಬ್ಬಳು ಪಾರ್ವತಿಯೆ ಆ ಹೆಣ್ಣು ಎನ್ನುವಂತೆ ನಡೆದುಕೊಂಡ. ಬಳಿಕ ಪಾರ್ವತಿಯನ್ನೂ ತನ್ನೆಡೆಗೆ ಸೆಳೆದುಕೊಂಡು ನಗುತ್ತ ಅವಳ ಹೆಗಲಿನಮೇಲೆ ತೋಳನ್ನಿರಿಸಿದ. ಇಬ್ಬರ ಹೆಗಲಿನ ಮೇಲೆ ತೋಳುಗಳನ್ನಿರಿಸಿ ಹಾಡುತ್ತ ಕುಣಿದ. ಆನಂದದಿಂದ ಉಬ್ಬಿದ. ಶಿವನನ್ನು ಈ ರೂಪದಲ್ಲಿ ಧ್ಯಾನಿಸುವವರಿಗೆ ನೂರುಕೋಟಿ ಜನ್ಮಗಳಲ್ಲಿಯೂ ದುಃಖವಿಲ್ಲ. ಆನಂದಾನುಭವ ದೊರಕುವುದು.

ಪಾರ್ವತಿ ಕೇಳಿದಳು, ನಾಥ, ವೃದ್ಧ ಬ್ರಾಹ್ಮಣನಾಗಿ ಏಕೆ ಬಂದೆ ? ವಿಷ್ಣುವನ್ನು ಏಕೆ ಹೆಂಡತಿಯನ್ನಾಗಿ ಮಾಡಿಕೊಂಡೆ ? ಶಿವನೆಂದ 'ಪ್ರಿಯೆ, ಸೋಮವಾರ ವ್ರತದಲ್ಲಿ ಅತಿಥಿಗೆ ಅನ್ನದಾನ ಮಾಡುವುದು ಪ್ರಶಸ್ತ. ಅದರಲ್ಲಿ ಎಷ್ಟು ಕಷ್ಟ ಬಂದರೂ ದೃತಿಗೆಡದಿದ್ದರೆ ವ್ರತಸಿದ್ಧಿಯಾಯಿತೆಂದು ತಿಳಿಯಬೇಕು. ವ್ರತವು ಸಿದ್ಧಿಸಿದರೆ ವರ್ಷದಲ್ಲಿ ಎಷ್ಟು ಸೋಮವಾರಗಳು ಬರುವುವೋ ಅಷ್ಟು ನೂರು ವರ್ಷಗಳಕಾಲ ಮಾನವನು ನನ್ನ ಲೋಕದಲ್ಲಿ ಸಕಲ ಭೋಗಗಳನ್ನು ಅನುಭವಿಸಿ, ಇಹದಲ್ಲಿಯೂ ಹೆಂಡತಿ ಮಕ್ಕಳು ಬಂಧು ಬಳಗದವರೊಡನೆ ವೇದೋಕ್ತ ಪರಿಪೂರ್ಣಾಯುಷ್ಯವಂತನಾಗಿ ಬಾಳಿ, ಕೊನೆಗೆ ವಾರಣಾಸಿಯಲ್ಲಿ ಮರಣಹೊಂದಿ ಮುಕ್ತಿ ಪಡೆಯುವನು.

**ಶಂಭು :-** ಮುನಿಗಳು ಆ ದೇವನಿಗೆ ಮೂರುಪ್ರದಕ್ಷಿಣೆ ಐದು ನಮಸ್ಕಾರಗಳು ತಿರುಗಿ ಒಂದು ಪ್ರದಕ್ಷಿಣೆ ಮತ್ತು ನಮಸ್ಕಾರಗಳನ್ನು ಮಾಡಿ ಅವನ ಅನುಮತಿಯಿಂದ ಹೊರಟುಹೋದನು.

ಶೋಣಕನು ನಾನು ಬಯಸಿದಂಥ ಇನ್ನೊಬ್ಬಳು ಹೆಂಡತಿಯನ್ನು ಪಡೆದು ಭಾರತವರ್ಷದಲ್ಲಿ ರಾಜನಾಗಿ ಧರ್ಮದಿಂದಾಳಿ ಮರ್ತ್ಯ ಭೋಗಗಳನ್ನೆಲ್ಲ ಅನುಭವಿಸಿದ. ಶಿವಭಕ್ತನನ್ನು ಹೊಂದಿ ನಿತ್ಯವೂ ದೇವತಾರಾಧನೆ, ಬ್ರಾಹ್ಮಣಸತ್ಕಾರ, ದಾನ, ಯಜ್ಞ, ಪುರಾಣ ಶ್ರವಣಗಳನ್ನು ಮಾಡುತ್ತ ಮರಣಾನಂತರ ಶಿವಲೋಕವನ್ನು ಸೇರಿದ.

ಪ್ರಾಸಂಗಿಕವಾಗಿ ಉಕ್ತವಾದ ಈ ಶಿವನಾಮೋಚ್ಚರಣ ಮಾಹಾತ್ಮ್ಯವನ್ನು ಕೇಳಿದರೆ ಸರ್ವಪಾಪ ಪರಿಹಾರ. ಎಲ್ಲ ವಿಧದ ಶ್ರೇಯಸ್ಸು ಲಭಿಸುವುದು. ಶಿವಭಕ್ತಿ ಉಂಟಾಗುವುದು. ರಹಸ್ಯವಾದ ಈ ಮಹಿಮೆಯನ್ನು ಯಾರಾರಿಗೂ ಹೇಳುತ್ತಿರಕೂಡದು.

*ಇತಿ ಪದ್ಮ ಮಹಾಪುರಾಣ ಭಾಗ-೨ರ ಪಾತಾಳ ಖಂಡದಲ್ಲಿ ಶಿವರಾಘವ ಸಂವಾದದಲ್ಲಿ ಶಿವನಾಮ ಮಹಿಮೆಯೆಂಬ ಐವತ್ತನೆ ಅಧ್ಯಾಯ ಮುಗಿದುದು*

**ಶ್ರೀರಾಮ ಉವಾಚ**

**ಶ್ರೀರಾಮ** :- ಮುನಿಯೆ, ಅಂತರಿಕ್ಷದಲ್ಲಿ ದಿವ್ಯ ವಿಮಾನಗಳನ್ನೇರಿ ಸುಖಿಸುವ ಆ ಭಾಗ್ಯವಂತರು ಯಾರು ? ಸಾವಿರಾರು ಚಲುವೆಯರ ನಡುವೆ ಅವರು ಮಾಡುವ ಸೇವೆಗಳನ್ನು ಸ್ವೀಕರಿಸುತ್ತ ನಾನಾವಿಧ ಪರಿಹಾಸಗಳನ್ನು ಮಾಡುತ್ತ ನಗುತ್ತಿರುವ ಅವರೇನು ಪುಣ್ಯ ಮಾಡಿದರು ? ಅಥವಾ ಎಲ್ಲವೂ ವಿಷ್ಣುವಿನ ಮಾಯೆ ಇರಬಹುದೆ ?

**ಶಂಭು** :- ಅವರೆಲ್ಲರೂ ಮುನಿಗಳು, ಗೃಹಸ್ಥಾಶ್ರಮಿಗಳು. ದಶರಥನು ಹಿಂದೆ ಅವರಿಗೆ ಗ್ರಾಮದಾನ ಮಾಡಿದ್ದ. ಶಿವಭಕ್ತರಾಗಿದ್ದ ಅವರಿಗೊಮ್ಮೆ ಒಂದು ಬಯಕೆ ಮೂಡಿತು. 'ನಾವೆಲ್ಲ ಸುಖಿಗಳಾಗಬೇಕು. ಇನ್ನೊಬ್ಬರನ್ನಾಶ್ರಯಿಸದೆ ಎಲ್ಲರಿಗೂ ಆಶ್ರಯ ನೀಡುತ್ತ ಎಲ್ಲ ಸುಖಭೋಗಗಳನ್ನು ಅನುಭವಿಸುತ್ತಿರಬೇಕು. ಮುಪ್ಪುಸಾವುಗಳಿಂದ ರಹಿತರಾಗಿ ಯೌವನಭರಿತರಾಗಿ ರಾಜ್ಯಸುಖವನ್ನು ಸವಿಯುತ್ತ ಸುಂದರ ಸ್ತ್ರೀಯರ ಕೈಗಳಿಂದ ಸೇವಿಸಲ್ಪಡುತ್ತಿರಬೇಕು. ಇದಕ್ಕೆ ಯಾವ ಪುಣ್ಯ ಕರ್ಮವನ್ನಾಚರಿಸಬಹುದು ?

ಬಳಿಕ ಆ ಮುನಿಗಳು ವಶಿಷ್ಠರ ಆಶ್ರಮಕ್ಕೆ ಹೋದರು. ವಶಿಷ್ಠಮುನಿ ಅವರನ್ನು ಸತ್ಕರಿಸಿ 'ಏನು ಬಂದಿರಿ ? ಹೇಳಿ' ಎಂದು ಕೇಳಿದ. 'ಬಯಸಿದಲ್ಲಿಗೆ ಹೋಗಬಲ್ಲ ವಿಮಾನಗಳಲ್ಲಿ ಎಲ್ಲ ಸುಖಭೋಗಗಳನ್ನು ಪಡೆಯಲು ನಾವೇನು ಮಾಡಬೇಕು ? ಗುರುವೆ, ಉಪದೇಶಿಸು.' ಎಂದರು ಅವರು.

ವಶಿಷ್ಠರ 'ನಿತ್ಯವೂ ಪುರಾಣ ಶ್ರವಣ ಮಾಡುತ್ತಲಿರಿ. ಆದರಿಂದ ಧರ್ಮ, ಅರ್ಥ, ಕಾಮ, ಮೋಕ್ಷಗಳೆಲ್ಲವೂ ದೊರೆಯುವುದು. ಈ ಉಪದೇಶವನ್ನು ಕೇಳಿ ಮುನಿಗಳು ಪುರಾಣ ವಿಶಾರದನೆನಿಸಿದ್ದ ಅಂಗೀರಸ ಮುನಿಯ ಬಳಿಗೆ ಹೋಗಿ 'ಮುನಿಯೆ, ನಿನ್ನ ದರ್ಶನದಿಂದ ನಾವು ಕೃತಾರ್ಥರಾದೆವು' ಎಂದರು. ಮುನಿಯು ಅವರ ಆಗಮನದ ಉದ್ದೇಶವನ್ನರಿತು ಪುರಾಣ ಶ್ರವಣದ ವಿಧಾನವನ್ನು ಉಪದೇಶಿಸಿದ.

'ಮುನಿಗಳೆ, ಪದ್ಮಪುರಾಣವು ಸಮಸ್ತ ಪಾಪಗಳನ್ನು ಪರಿಹರಿಸುವುದು. ಎಲ್ಲ ವಿಷಯಗಳ ಸರಿಯಾದ ತಿಳಿವಳಿಕೆಯನ್ನು ಕೊಡುವುದು. ಶಿವನಲ್ಲಿಯೂ ವಿಷ್ಣುವಿನಲ್ಲಿಯೂ ಭಕ್ತಿನೀಡುವುದು. ವಿಚಿತ್ರ ರೀತಿಯಲ್ಲಿ ಸಂಚರಿಸುವ ನೈಪುಣ್ಯವನ್ನೂ ಸ್ತ್ರೀ ಸುಖವನ್ನೂ ಕೊಡಬಲ್ಲುದು. ವ್ರತ ಅನುಷ್ಠಾನ ಭಸ್ಮಧಾರಣ ದೇವತಾರಾಧನೆ ಮುಂತಾದವುಗಳ ವಿಧಿವಿಧಾನಗಳನ್ನೂ ತಿಳಿಸಬಲ್ಲುದು. ಪುರಾಣ ಶ್ರವಣ ಮಾಡಬಯಸುವವನು ಮೊದಲಿಗೆ ಪುರಾಣಜ್ಞನನ್ನು ನಮಿಸಿ ಅರ್ಘ್ಯ, ಆಸನಗಳನ್ನಿತ್ತು ಗಂಧಪುಷ್ಪ ತಾಂಬೂಲಗಳಿಂದ ಸತ್ಕರಿಸಿ, ಪುರಾಣದ ಪುಣ್ಯಕಥೆಗಳನ್ನು ಉಪದೇಶಿಸೆಂದು ಕೇಳಿಕೊಳ್ಳಬೇಕು. ಮಂಚ ಅಥವಾ ಇತರ ಉಚ್ಚ ಆಸನಗಳಲ್ಲಿ ಕುಳ್ಳಿರದೆ ಕೆಳಗೆ ಕುಳಿತು ಶ್ರವಣ ಮಾಡಬೇಕು. ಪುರಾಣಜ್ಞನು 'ಆಗಲಿ, ಕೇಳು' ಎಂದು ಹೇಳಿ,

**'ನಮೋ ಹರಿಂ ಹರಮಥೋ ಗಣೇಶಂ ಭಾರತೀಮಥ'**

ಹರಿ, ಹರ, ಗಣಪತಿ, ಭಾರತಿಯರಿಗೆ ನಮಸ್ಕಾರ ಎಂಬ ಮಂತ್ರವನ್ನು ಹೇಳಿ ಇಷ್ಟದೇವತೆಯನ್ನೂ ನಮಿಸಿ ಪುರಾಣ ಹೇಳಬೇಕು. ಪ್ರತಿದಿನ ಅರ್ಧಯಾಮದಷ್ಟಾದರೂ ಪುರಾಣ ಪ್ರವಚನ ನಡೆಸಬೇಕು. ಕೇಳುವವನು ಮೌನದಿಂದ ಕೇಳಬೇಕು. ಮೌನದಿಂದಲೆ ಅದನ್ನು ಚಿಂತಿಸಬೇಕು. ಇಲ್ಲದಿದ್ದರೆ ಸರಸ್ವತಿ ಕೋಪಿಸಿಕೊಳ್ಳುವಳು. ಪುರಾಣವಾದ ಮೇಲೆ ಹೇಳಿದವನಿಗೆ ಯಥಾಶಕ್ತಿ ವಸ್ತ್ರ, ಆಸನ, ಸುವರ್ಣ, ಗೋ, ಭೂಮಿ, ಗೃಹ ಮುಂತಾದುವನ್ನು ದಾನ ಮಾಡಬೇಕು. ಪುರಾಣ ಶ್ರವಣದ ಈ ವಿಧಾನಗಳನ್ನು ಹಿಂದೆ ದಕ್ಷಿಣಾಮೂರ್ತಿ ರೂಪಿಯಾದ ಶಿವನು ದೇವತೆಗಳಿಗೂ ಮುನಿಗಳಿಗೂ ಉಪದೇಶಿಸಿದ್ದನು.

ಬಳಿಕ ಮುನಿಗಳು ಅಂಗೀರಸರನ್ನು ನಮಿಸಿ ಆಸನವನ್ನಿತ್ತು ತಾಂಬೂಲ ನೀಡಿ ಪುರಾಣ ಶ್ರವಣಕ್ಕೆ ತೊಡಗಿದರು. ಮುನಿಯು ಸರ್ವಸಂಪತ್ತನ್ನು ನೀಡುವ ಪದ್ಮ ಪುರಾಣವನ್ನು ಪ್ರವಚನ ಮಾಡಿದರು. ಕೊನೆಯ ಅಧ್ಯಾಯದ ಹಿಂದಿನ ಅಧ್ಯಾಯದವರೆಗೂ ಪುರಾಣವನ್ನು ಹೇಳಿ ವಶಿಷ್ಠ ದಿಲೀಪರ ಒಂದು ಸಂವಾದವನ್ನು ವರ್ಣಿಸಿದರು.

**ದಿಲೀಪ** :- ಇಷ್ಟು ಬಂದಲ್ಲಿಗೆ ಹಾರಬಲ್ಲ, ಸರ್ವ ಸಂಪತ್ಸ ಮೃದ್ಧವಾದ, ಸುಖಮಯವಾದ ವಿಮಾನದಿಂದ ಪವಿತ್ರ ಸ್ಥಾನಗಳಲ್ಲಿ ಸಂಚರಿಸುವ ಸುಯೋಗವು ನನಗೀ ಪುರಾಣ ಶ್ರವಣದಿಂದ ಲಭ್ಯವಾಯಿತು.

**ವಶಿಷ್ಠ** :- ರಾಜನೆ, ಇಷ್ಟು ಸಾಲದು, ಇನ್ನೂ ಹೆಚ್ಚಿನ ಸುಖಕ್ಕೆ ನೀನು ಅರ್ಹನಿರುವೆ. ಅದಕ್ಕೆ ನಾನು ಹೇಳುವಂತೆ ಮಾಡು. ಒಂದು ಶಿವಾಲಯಕ್ಕೆ ಸುಣ್ಣ ಬಳಿಸಿ ಅಲ್ಲಿ ಒಳ್ಳೆಯ ರೂಪವತಿಯರೂ ಗೀತ, ನೃತ್ಯ, ವಿಶಾರದೆಯರೂ ಆದ ನಾಕಾರು ಮಂದಿ ಅಲಂಕೃತ ನವಯುವತಿಯರಿಂದ ನೃತ್ಯ ಗೀತವಾದ್ಯಗಳನ್ನು ಮಾಡಿಸು. ಒಂದು ದಿನ ಹೀಗೆ ಮಾಡಿಸಿದವನು, ಒಂದು ವರ್ಷದೊಳಗೆ ದಿವ್ಯ ವಿಮಾನವನ್ನೇರಿ, ನೂರಾರು ಯುವಕ ಯುವತಿಯರಿಂದ ಸೇವಿಸಲ್ಪಡುತ್ತ ಅವರ ನೃತ್ಯ, ಗೀತಗಳಿಂದ ಆನಂದಿಸುತ್ತಾನೆ. ಬಹುಕಾಲ ಹೀಗೆ ವಿಹಾರ ಮಾಡಿ ಕೊನೆಗೆ ರಾಜನಾಗಿ ಹುಟ್ಟಿ ಶಿವಭಕ್ತನಾಗಿ ರಾಜ್ಯವನ್ನೂ, ಬಳಿಕ ಸ್ವರ್ಗವನ್ನೂ ಅನುಭವಿಸುತ್ತಾನೆ.

ಈ ಸಂಭಾಷಣೆಯನ್ನು ಅಂಗೀರಸನು ಮುನಿಗಳಿಗೆ ಹೇಳಿದಾಗ ಅವರೂ ಶಿವನಿಗೆ ನೃತ್ಯ, ಗೀತ, ವಾದ್ಯಗಳನ್ನು ಸಮರ್ಪಿಸಿದರು. ಸಮಗ್ರವಾಗಿ ಪದ್ಮಪುರಾಣವನ್ನು ಕೇಳಿದರು. ಅದರ ಫಲವಾಗಿ ಈಗ ಅವರು ವಿಮಾನವನ್ನೇರಿ ಅಂತರಿಕ್ಷದಲ್ಲಿ ಆನಂದದಿಂದ ವಿಹಾರ ಮಾಡುತ್ತಿದ್ದಾರೆ. ರಾಮ, ಇನ್ನೇನು ಕೇಳಬಯಸುವೆಯೊ, ಹೇಳು.

**ರಾಮ** :- ಅಂತರಿಕ್ಷದಲ್ಲಿ ವಿಮಾನದಲ್ಲಿ ಕುಳಿತು ಸರ್ವಾಭರಣ ಭೂಷಿತನಾಗಿ ಮಧ್ಯಾಹ್ನದ ಸೂರ್ಯನಂತೆ ಬೆಳಗುವ ಆ ಇನ್ನೊಬ್ಬನು ಯಾರು ? ಅವನ ತೊಡೆಯಲ್ಲಿ ಲಕ್ಷ್ಮೀಯಂಥ ಒಬ್ಬ ಸುಂದರಿ ಕುಳಿತಿದ್ದಾಳೆ. ಬಳಿಯಲ್ಲಿ ಐದು ಮಂದಿ ಲಲನೆಯರು ಇಂಪಾಗಿ ಹಾಡುತ್ತಿದ್ದಾರೆ. ಮುಗುಳು ನಗುನಗುತ್ತಿದ್ದಾರೆ. ಅವನು ಅವರೊಡನೆ ಕ್ರೀಡಿಸುತ್ತಿದ್ದಾನೆ. ಏನು ಪುಣ್ಯಮಾಡಿದ್ದಾನೆ, ಹೇಳು.

**ಶಂಭು** :- ರಾಮ, ಇವನು ಹಿಂದೆ ಒಬ್ಬ ಶ್ರೀಮಂತ ಬ್ರಾಹ್ಮಣ. ಹೆಂಡತಿಯೊಬ್ಬಳನ್ನು ಪೋಷಿಸುತ್ತ ಸುಖವಾಗಿ ಕಾಲ ಕಳೆಯುತ್ತಿದ್ದ. ಮಕ್ಕಳಿರಲಿಲ್ಲ. ದಾನಮಾಡುತ್ತಿರಲಿಲ್ಲ. ದೇವತಾರ್ಚನೆ, ಪಂಚಯಜ್ಞ, ವೇದಾಧ್ಯಯನಗಳನ್ನು ತೊರೆದು ಮೂರು ಹೊತ್ತು ಊಟ ಮಾಡುತ್ತ ಅಶುಚಿಯಾಗಿದ್ದ. ಒಮ್ಮೆ ಅವನು ಗೌತಮ ಮುನಿಯ ಆಶ್ರಮಕ್ಕೆ ಹೋದನು.

ಮೇರು ಪರ್ವತದ ತಪ್ಪಲಿನಲ್ಲಿ ಅನೇಕ ಮಂದಿ ಋಷಿಗಳಿಂದ ಕೂಡಿದ ಅವನ ಆಶ್ರಮವಿತ್ತು. ಸ್ಪಟಿಕದ ಕಂಬಗಳಿಂದ ಅಗುರು ಕಸ್ತೂರಿ ಪಚ್ಚ ಕರ್ಪೂರಗಳ ಲೇಪವುಳ್ಳ ಗೋಡೆಗಳಿಂದ ಕೂಡಿದ ದಿವ್ಯಗೃಹ ಅಲ್ಲಿತ್ತು. ಅಂಗಳದಲ್ಲಿ ಬಾಳೆ ಅಡಿಕೆ ಮುಂತಾದ ಮರಗಳು. ಬಳಿಯಲ್ಲಿ ಕಮಲಗಳಿಂದ ತುಂಬಿದ ಕೊಳ. ಸುಂದರವಾದ ಉದ್ಯಾನ ನಂದನವನದಂತೆ ಕಾಣುತ್ತಿತ್ತು. ಸುಂದರ ಯುವತಿಯರು ವೀಣೆ ಕೊಳಲು ಮುಂತಾದುವನ್ನು ನುಡಿಸುತ್ತ ಹಾಡುತ್ತ ಕುಣಿಯುತ್ತಿದ್ದರು. ಇಂಥ ಭವ್ಯವಾದ ಆಶ್ರಮದಲ್ಲಿ ಮುನಿ ಇದ್ದ. ಗಂಧದ ಪೀಠದಲ್ಲಿ ಕರ್ಪೂರದ ಸಿಂಹಾಸವನ್ನಿಟ್ಟು ಅದರಲ್ಲಿ ಶಿವಲಿಂಗವನ್ನು ಪೂಜಿಸುತ್ತಿದ್ದ. ಸುಗಂದಯುಕ್ತವಾದ ಜಲದಿಂದ ಹಾಲಿನಿಂದ ಮಂತ್ರಪೂರ್ವಕವಾಗಿ ಶಿವನಿಗೆ ಅಭಿಷೇಕ ಮಾಡಿ ಪಂಚಗಂಧ ಅಷ್ಟಗಂಧಗಳನ್ನು ಲೇಪಿಸಿ ಆವರಣ ಪೂಜೆ ಮಾಡುತ್ತಿದ್ದ. ಲಿಂಗ ಮಧ್ಯದಲ್ಲಿ ಪಂಚ ಮುಖನಾದ ಶಿವ. ಶಕ್ತಿಯು ಅವನಿಗೆ ಆವರಣ. ಶಕ್ತಿಗೆ ವಿಷ್ಣು, ವಿಷ್ಣುವಿಗೆ ಬ್ರಹ್ಮ, ಬ್ರಹ್ಮನಿಗೆ ಚಂದ್ರ, ಚಂದ್ರನಿಗೆ ಸೂರ್ಯ, ಸೂರ್ಯನಿಗೆ ಶ್ರುತಿ, ಶ್ರುತಿಗೆ ದಿಗ್ದೇವತೆಗಳು, ಅವರಿಗೆ ದಿಕ್ಕುಗಳು ಅವುಗಳಿಗೆ ಶಂಭು. ಅವನಿಗೆ ಗಣಗಳು. ಹೀಗೆ ಹತ್ತು ಆವರಣಗಳು. ಅಥವಾ ಉಮಾ, ವಿಷ್ಣು, ಬ್ರಹ್ಮ, ಚಂದ್ರ, ಸೂರ್ಯ, ಶಿವ, ಎಂಬ ಆರು ಆವರಣಗಳು, ಇದಕ್ಕೆ ವಿದ್ಯಾವರಣವೆನ್ನುತ್ತಾರೆ. ಇದರಲ್ಲಿ ಬ್ರಹ್ಮನನ್ನು ಬಿಟ್ಟು ಪಂಚಾವರಣ ಪೂಜೆಯನ್ನೂ ಮಾಡಬಹುದು. ಚಂದ್ರ ವಿಷ್ಣು ಶಕ್ತಿಯರ ಆವರಣತ್ರಯವನ್ನೂ ಪೂಜಿಸಬಹುದು. ಕೇವಲ ಅಂಬಿಕಾವರಣ ಒಂದನ್ನೆ ಪೂಜಿಸಬಹುದು. ಲೋಕಪಾಲಕರನ್ನೆ ಆವರಣವನ್ನಾಗಿ ಪೂಜಿಸಲೂಬಹುದು ಅಥವಾ ಆವರಣವಿಲ್ಲದೆಯೂ ಶಿವಪೂಜೆ ಮಾಡಬಹುದು.

ಪೂಜಾದ್ರವ್ಯಗಳನ್ನು ಚಿನ್ನ, ಬೆಳ್ಳಿ ಅಥವಾ ತಾಮ್ರದ ಪಾತ್ರೆಯಲ್ಲಿಟ್ಟುಕೊಳ್ಳಬೇಕು. ಆ ಪಾತ್ರೆಗೆ ಎಂಟು, ಐದು ಅಥವಾ ಮೂರು ಮುತ್ತಿನ ಚಿಪ್ಪಿನ ಇಲ್ಲವೆ ಕಮಲಪತ್ರದಾಕಾರದಲ್ಲಿ ದಳಗಳಿರಬೇಕು.

ಮೂವತ್ತೆಂಟು ರುದ್ರಾಕ್ಷಿಗಳ ಸರವನ್ನು ಉಪವೀತವಾಗಿ ಧರಿಸಬೇಕು. ಎರಡು ತೋಳುಗಳು ಮೊಳಕೈಗಳಿಗೂ ರುದ್ರಾಕ್ಷಿಯನ್ನು ಕಟ್ಟಿಕೊಳ್ಳಬೇಕು. ತಲೆಯಲ್ಲಿಯೂ ಒಂದು ರುದ್ರಾಕ್ಷಿ ಧರಿಸಬೇಕು. ಕತ್ತಿನಲ್ಲಿ ಎಂಟು ರುದ್ರಾಕ್ಷಿಗಳನ್ನು ಧರಿಸಬೇಕು.

ರುದ್ರಾಕ್ಷಿ ಸ್ಪಟಿಕ ಇಲ್ಲವೆ ರತ್ನಗಳಿಂದ ಅಕ್ಷಮಾಲೆಯನ್ನು ಮಾಡಿಕೊಳ್ಳಬೇಕು. ಹುಲಿಯ ಚರ್ಮದ ಮೇಲೆ ಪದ್ಮಾಸನದಲ್ಲಿ ಕುಳಿತು ಆವಾಹನೆ ಆಸನ ಅರ್ಘ್ಯ ಪಾದ್ಯಾಚಮನಗಳ್ನು ಶಿವನಿಗರ್ಪಿಸಿ ಗಂಗಾಜಲದಿಂದ ಅಭಿಷೇಕ ಮಾಡಬೇಕು. ಆ ನೀರನ್ನು ಮೊದಲಿಗೆ ಬಟ್ಟೆಯಿಂದ ಸೋಸಿ ಚಿನ್ನದ ತಂಬಿಗೆಯಲ್ಲಿಟ್ಟು ಸುಗಂಧದ್ರವ್ಯಗಳನ್ನು ಹೂಗಳನ್ನು ಹಾಕಿರಬೇಕು. ಅಭಿಷೇಕವನ್ನು ಗೋವಿನ ಇಲ್ಲವೆ ಗವಯದ ಶೃಂಗದಿಂದ ಮಾಡಬಹುದು. ಬಲಮುರಿ ಶಂಖದಿಂದಲೂ ರತ್ನ, ಚಿನ್ನ, ಬೆಳ್ಳಿ, ತಾಮ್ರ, ಕಂಚು ಮಣ್ಣು ಇವುಗಳ ಪಾತ್ರಗಳಿಂದಲೂ ಕಮಲಪತ್ರ, ಪಲಾಶ ಮಾವು ನೇರಳೆ ಎಲೆಗಳಿಂದಲೂ ಮಾಡಬಹುದು. ಧಾರಾಭಿಷೇಕ ಮಾಡದರೆ ಉತ್ತಮ. ನಮಸ್ತೇ ರುದ್ರ ಎಂಬ ಶತರುದ್ರೀಯದಿಂದಲೂ, ಶಂಚಮೇ ಎಂಬ ಅನುವಾಕದಿಂದಲೂ ಶಾಂತಿಮಂತ್ರಗಳಿಂದಲೂ ಶಕ್ತ್ಯನುಸಾರವಾಗಿ ಅನೇಕ ಬಾರಿ ಅಭಿಷೇಕ ಮಾಡಬೇಕು. ಬಳಿಕ ಗಂಧ ಪತ್ರ

ಪುಷ್ಪಗಳನ್ನರ್ಪಿಸಬೇಕು. ಬಿಲ್ವಪತ್ರೆ ತುಳಸಿ ಮರುಗ ಕಲ್ಹಾರ ಉತ್ಪಲ ಕಣಿಗಲೆ ಕರ್ಣಿಕಾರ ಬಿಳಿ ಕಮಲ ವಿಷ್ಣುಕ್ರಾಂತಿ ಮುಂತಾದುವನ್ನರ್ಪಿಸಬಹುದು. ಕರ್ಪೂರ ಅಗುರು ಕಸ್ತೂರಿ ಮುಂತಾದವುಗಳ ಧೂಪವನ್ನು ಹದಿನಾರು ದೀಪಗಳನ್ನು ಅರ್ಪಿಸಬೇಕು. ಪಂಚಭಕ್ಷ್ಯಗಳನ್ನು ಹಣ್ಣುಗಳನ್ನೂ ಸಕ್ಕರೆ ಬೆಲ್ಲ ತುಪ್ಪ ಮುಂತಾದವನ್ನು ನಿವೇದಿಸಬೇಕು. ಚಿನ್ನದ ಹರಿವಾಣದಲ್ಲಿ ಮಂಗಳಾರತಿ ಎತ್ತಿಸಬೇಕು. ಚಿನ್ನದ ಹರಿವಾಣದಲ್ಲಿ ಅಡಿಕೆ ಪುಡಿ, ತೊಳೆದು ತೊಟ್ಟು ತುದಿ ನಾರುಗಳನ್ನು ತೆಗೆದ ಮೂರು ವೀಳೆಯದೆಲೆ ಮತ್ತು ಪಚ್ಚಕರ್ಪೂರ ಚೂರ್ಣಗಳಿಂದ ಕೂಡಿದ ತಾಂಬೂಲವನ್ನು ಸಮರ್ಪಿಸಬೇಕು. ಪ್ರದಕ್ಷಿಣೆ ನಮಸ್ಕಾರಗಳನ್ನು ಸಲ್ಲಿಸಬೇಕು.

ಗೌತಮಮುನಿ ಹೀಗೆ ವಿಧಿವತ್ತಾಗಿ ಶಿವಪೂಜೆ ಮಾಡುತ್ತಿದ್ದ. ಪೂಜೆಯ ಕೊನೆಯಲ್ಲಿ ಎಂಟು ಮಂದಿ ಯುವತಿಯರು ವೀಣೆ ಕೊಳಲು ವಿಚಿತ್ರ ವಾದ್ಯಗಳನ್ನು ಹಿಡಿದು ಮುನಿಯ ಬಳಿಗೆ ಬಂದು ಕುಳಿತುಕೊಳ್ಳುತ್ತಾರೆ. ಅವನು ಸಣ್ಣ ಎರಡು ತಾಳಗಳನ್ನು ಹಿಡಿದು ಹಾಡಲು ತೊಡಗುವನು. ಯುವತಿಯರು ಶ್ರುತಿ ಪಕ್ಕವಾದ್ಯಗಳನ್ನು ನುಡಿಸುವರು. ಮುನಿಯು ಆಗ ಮಧುರವಾಗಿ ಹಾಡುತ್ತಿದ್ದರೆ ಸಪ್ತಸ್ವರಗಳು ಮೂರ್ತಿಮತ್ತಾಗಿ ಬಂದು ಅಲ್ಲಿ ಶಿವನಮುಂದೆ ಕುಣಿಯುತ್ತವೆ. ಇದೊಂದು ಅದ್ಭುತ.

ಈ ಸಮಯದಲ್ಲಿ ಒಮ್ಮೆ ನಾರದ ಮುನಿ ಬಂದು ಹೇಳಿದ.

**ನಾರದ :-** ಪಾತಾಳಲೋಕದಿಂದ ಬರುತ್ತಿದ್ದೇನೆ. ಅಲ್ಲಿಂದ ನಿನ್ನಾಶ್ರಮಕ್ಕೆ ಬಾಣ, ಶುಕ್ರಾಚಾರ್ಯರು ಮುಂತಾದವರು ಬರುತ್ತಿದ್ದಾರೆ.

ಅಷ್ಟರಲ್ಲಿ ನಾರದನು ಹೇಳಿದಂತೆ ಇಪ್ಪತ್ತು ಅಕ್ಷೋಹಿಣಿ ಸೇನೆಯೊಡನೆ ಬಾಣನು ಬಂದ. ಅವನ ಜೊತೆಗೆ ಶುಕ್ರಾಚಾರ್ಯರು, ಪ್ರಹ್ಲಾದ, ಬಲಿ, ವೃಷಪರ್ವರೂ ಬಂದರು. ಗೌತಮನು ಅವರೆಲ್ಲರನ್ನೂ ಸ್ವಾಗತಿಸಿ ಸತ್ಕರಿಸಿದ. ಬಳಿಕ ಎಲ್ಲರೂ ಆ ಆಶ್ರಮದ ಕೆರೆ ಬಾವಿ ಮುಂತಾದವುಗಳಲ್ಲಿ ಸ್ನಾನಮಾಡಿ ಶಿವಪೂಜೆಗೆ ಕುಳಿತರು. ಪ್ರಹ್ಲಾದನೂ ವಿಷ್ಣು ಪೂಜೆಗೆ ಕುಳಿತ. ಗೌತಮನು ಮಧ್ಯಾಹ್ನದ ಶಿವಪೂಜೆಯನ್ನಾರಂಭಿಸಿದ. ಎಲ್ಲರೂ ಮೊದಲಿಗೆ ತ್ರಿಪುಂಡ್ರ ಧರಿಸಿ ಗುರುವಾದ ಶುಕ್ರಾಚಾರ್ಯರಿಗೆ ನಮಿಸಿದರು. ಭೂತಶುದ್ಧಿಯನ್ನು ಮಾಡಿಕೊಂಡರು. ಹೃದಯ ಕಮಲದ ಮಧ್ಯದಲ್ಲಿರುವ ಆಕಾಶದಲ್ಲಿ ಪಂಚಭೂತಗಳು, ಅವುಗಳ ಮಧ್ಯೆ ಮಹಾಕಾಶ. ಅದರಲ್ಲಿ ನಿರ್ಮಲವಾದ ಆಸನದಲ್ಲಿ ಪರಮೇಶ್ವರನಾದ ಆನಂದಮಯನಾದ ವಿಷ್ಣುವನ್ನೂ ಉದಿಸಿದ ಚಂದ್ರನಂತೆ ಹೊಳೆವ ಶಿವನನ್ನೂ ಅವರು ಚಿಂತಿಸಿದರು. ಪೂಜೆಗೂ, ಜಪಕ್ಕೂ ಮೊದಲು ಈ ರೀತಿಯಾಗಿ ಭೂತ ಶುದ್ಧಿಮಾಡಿಕೊಳ್ಳಬೇಕು. ಆದರಿಂದ ಶುದ್ಧಿ ಉಂಟಾಗುತ್ತದೆ. ಬ್ರಹ್ಮಹತ್ಯಾದಿ ಪಾತಕಗಳೂ ಕಳೆಯುತ್ತವೆ.

ಚಂದ್ರನಂತೆ ಹೊಳೆಯುವ ಆ ಶಿವನನ್ನು ಶಿವಲಿಂಗದಲ್ಲಿ ಆವಾಹಿಸಿ ಪಂಚಾಕ್ಷರಿ ಮಂತ್ರದಿಂದ ಅರ್ಚಿಸಬೇಕು. ಅರ್ಘ್ಯಪಾದ್ಯಾದಿಗಳನ್ನಿತ್ತು ಅಭಿಷೇಕ ಮಾಡಬೇಕು. ಅತ್ತಿಮರದ, ಬೆಳ್ಳಿಯ, ಚಿನ್ನದ ಪೀಠಗಳಲ್ಲಿ ಬಟ್ಟೆ ಮುಂತಾದವುಗಳನ್ನು ಹಾಸಿ ಆ ಪೀಠಗಳನ್ನು ಒಂದರಮೇಲೆ ಒಂದರಂತೆ ಇಟ್ಟು ಪ್ರತಿಪೀಠದಲ್ಲಿ ಒಂದೊಂದು ಸರ್ಪ ಪ್ರತಿಮೆ ಇಡಬೇಕು. ಮೇಲಿನ ಪೀಠದಲ್ಲಿ ಎರಡು ಸರ್ಪ ಪ್ರತಿಮೆಗಳನ್ನು ಲಿಂಗದ ಎಡ

ಬಲ ಭಾಗಗಳಲ್ಲಿರುವಂತೆ ಇಡಬೇಕು. ಆ ಸರ್ಪಗಳ ನಡುವೆ ದಾಸವಾಳದ ಹೂವನ್ನಿಟ್ಟು ಅದರ ಮೇಲೆ ಹನ್ನೆರಡು ಮಡಿಕೆ ಮಡಿಸಿದ ಬಿಳಿ ಬಟ್ಟೆ ಇಟ್ಟು ಅದರ ಮೇಲೆ ಪಾಣಿ ಬಟ್ಟಲಿಂದ ಕೂಡಿದ ಶಿವಲಿಂಗವನ್ನು ಸ್ಥಾಪಿಸಬೇಕು.

ಬಾಣ ಮುಂತಾದ ರಾಕ್ಷಸರು ಹೀಗ ಶಿವಪೂಜೆ ಮಾಡಿದರು. ಪಂಚಗಂಧ ಹೂ, ಪತ್ರೆ, ಅಕ್ಷತೆಗಳಿಂದಲೂ ಧೂಪದೀಪ ನೈವೇದ್ಯಗಳಿಂದಲೂ ಅರ್ಚಿಸಿ ಗೀತನೃತ್ಯಗಳನ್ನೂ ಸಲ್ಲಿಸಿದರು.

ಗೌತಮನ ಶಿಷ್ಯರಲ್ಲೊಬ್ಬ ಶಂಕರಾತ್ಮನೆಂಬುವನು ಹುಚ್ಚನಂತೆ ಬೆತ್ತಲೆಯಾಗಿ ತಿರುಗುತ್ತಿದ್ದ. ಕೆಲವೊಮ್ಮೆ ತಾಪಸನಂತೆ, ಕೆಲವೊಮ್ಮೆ ಶೂದ್ರನಂತೆ ಹೀಗೆ ವಿಚಿತ್ರ ರೀತಿಯಿಂದ ವರ್ತಿಸುತ್ತಿದ್ದ. ಗರ್ಜಿಸುವುದು, ಕುಣಿಯುವುದು, ಹಾಡುವುದು, ಅಳುವುದು ಇನ್ನೂ ಏನೇನೊ ಮಾಡುತ್ತಿದ್ದ. ಆದರೆ ಶಿವಜ್ಞಾನದಿಂದ ತುಂಬಿ ಸದಾ ಆನಂದದಲ್ಲಿ ಲೀನನಾಗಿದ್ದ. ತನ್ನ ಊಟದ ವೇಳೆಯಲ್ಲಿ ಆಶ್ರಮವನ್ನು ಹೊಕ್ಕು ಗೌತಮನ ಬಳಿ ನಿಲ್ಲುತ್ತಿದ್ದ. ಗೌತಮನು ಅವನನ್ನು ಬಳಿಯಲ್ಲಿಕುಳ್ಳಿರಿಸಿ ಉಣಿಸುತ್ತಿದ್ದ. ಅವನು ಕೆಲವೊಮ್ಮೆ ಗುರುವಿನ ಬಳಿ ಸುಮ್ಮನೆ ಉಂಡು ಹೋಗುತ್ತಿದ್ದ. ಕೆಲವೊಮ್ಮೆ ಗುರುವಿನ ಎಂಜಲುಣ್ಣುತ್ತಿದ್ದ. ಅವನ ತಟ್ಟೆಯನ್ನು ನೆಕ್ಕುತ್ತಿದ್ದ. ಗುರುವಿನ ಕೈಹಿಡಿದುಕೊಂಡು ತಾನೆ ಉಣ್ಣುತ್ತಿದ್ದ. ಮನೆಯೊಳಗೆ ಮಲಮೂತ್ರ ವಿಸರ್ಜಿಸುತ್ತಿದ್ದ. ಗೌತಮನು ಮಾತ್ರ ಪ್ರೀತಿಯಿಂದ ಅವನನ್ನು ಮಣೆಯ ಮೇಲೆ ಕುಳ್ಳಿರಿಸಿ ಉಣಿಸುತ್ತಿದ್ದ. ಅವನುಂಡ ತಟ್ಟೆಯಲ್ಲಿ ತಾನೂ ಉಣ್ಣುತ್ತಿದ್ದ. ಒಮ್ಮೆ ಗೌತಮನ ಪತ್ನಿ ಅಹಲ್ಯೆ ಶಂಕರಾತ್ಮನ ಬುದ್ಧಿ ಪರೀಕ್ಷೆಗೆಂದು ನಾಕು ತಟ್ಟೆಗಳನ್ನಿಟ್ಟು ಎರಡರಲ್ಲಿ ಅನ್ನಪಾನಾದಿಗಳನ್ನು ಬಡಿಸಿ, ಮೂರನೆಯದರಲ್ಲಿ ಉರಿವ ಕೆಂಡವನ್ನೂ, ನಾಲ್ಕನೆಯದರಲ್ಲಿ ಮುಳ್ಳುಗಳನ್ನೂ ಇಟ್ಟುಉಣ್ಣು ಎಂದಳು. ಅವನು ಅನ್ನ ಉಂಡು ಪಾನೀಯವನ್ನೂ ಕುಡಿದ. ಬೆಂಕಿಯನ್ನೂ ನುಂಗಿದ, ಮುಳ್ಳುಗಳನ್ನೂ ತಿಂದ. ಹಾಗೆ ಮುನಿ ಕನ್ನಿಕೆಯರೂ ಹಿಂದೆ ಅನೇಕ ಬಾರಿ ಅವನನ್ನು ಪರೀಕ್ಷಿಸಿದ್ದರು. ಊಟಕ್ಕೆ ಕರೆದು ಮಣ್ಣಹೆಂಟೆ, ಗೋಮಯ, ಕೆಸರು, ಸೌದೆತುಂಡುಗಳನ್ನೂ ಕೊಟ್ಟಿದ್ದರು. ಅವನೆಲ್ಲವನ್ನೂ ತಿಂದಿದ್ದ.

ಈ ಶಂಕರಾತ್ಮನು ಚಂಡಾಲ ವೇಷದಲ್ಲಿ ಬಂದು ಕೈಯಲ್ಲಿ ಹಳೆಯ ಜೋಡುಗಳನ್ನು ಹಿಡಿದುಕೊಂಡು ಆಶ್ರಮವನ್ನು ಹೊಕ್ಕು ವೃಷಪರ್ವನ ಮುಂದೆ ನಿಂತ. ವೃಷಪರ್ವನು ಸಿಟ್ಟಾಗಿ. ಅವನ ತಲೆಯನ್ನು ತುಂಡರಿಸಿದ. ಆಗ ಜಗತ್ತೆಲ್ಲವೂ ಕಾಂತಿಹೀನವಾಯಿತು. ಋಷಿಗಳೆಲ್ಲರೂ ದುಃಖಗೊಂಡರು. ಗೌತಮನು ಕಣ್ಣೀರು ಸುರಿಸುತ್ತ ಹೇಳಿದ.

**ಗೌತಮ :-** ಇದನ್ನೇನು ತಪ್ಪುಮಾಡಿದೆ ? ತಲೆ ಕಡಿಯುವಂಥ ಪಾಪವನ್ನೇನು ಮಾಡಿದ್ದ ? ನನ್ನ ಪ್ರಾಣಕ್ಕಿಂತ ಮಿಗಾಲದ ಶಿಷ್ಯನೀತ. ಅವನು ಸತ್ತನೆಂದರೆ ನಾನು ಸಾಯುವುದು ನಿಶ್ಚಿತ. ಶಿಷ್ಯರೂಪದಿಂದ ಇರುವವನು ಗುರುವೆ ತಾನೆ ! ಧರ್ಮಮಾಗದಲ್ಲಿದ್ದು ಶಿವಧ್ಯಾನದಲ್ಲಿಯೆ ಮುಳುಗಿದ ಶಿವಭಕ್ತರ ಮರಣವನ್ನು ಎಲ್ಲಿ ಕಾಣುವೆನೊ ಅಲ್ಲಿ ನನಗೂ ಮರಣವು ನಿಶ್ಚಿತವಾಗಿ ಬರಲಿ.

**ಶುಕ್ರ :-** ಮುನಿಯೆ, ನಾನೀತನನ್ನು ಬದುಕಿಸುತ್ತೇನೆ. ನನ್ನ ತಪೋಬಲವನ್ನು ನೋಡು. ಏಕೆ ಮರಣವನ್ನು ಬಯಸುವೆ ?

ಶುಕ್ರಾಚಾರ್ಯನು ಹೀಗೆ ಹೇಳುತ್ತಿರುವಾಗ ಗೌತಮನು ಆಗಲೆ ಆಸುನೀಗಿದ್ದ. ಅದನ್ನು ನೋಡಿ ಶುಕ್ರನೂ ಪ್ರಾಣತ್ಯಾಗ ಮಾಡಿದ. ಬಳಿಕ ಪ್ರಹ್ಲಾದ ಬಲ ಮುಂತಾದವರೆಲ್ಲರೂ ಕಣ್ಣು ಮುಚ್ಚಿದರು. ಬಾಣನ ಆ ಮಹಾಸೇನೆ ಇಡಿ ಅಸು ನೀಗಿತ್ತು. ಎಲ್ಲವೂ ಒಂದು ಅದ್ಭುತವಾಗಿತ್ತು. ಅಹಲ್ಯೆ ಅಳುತ್ತಿದ್ದಳು. ಗೌತಮನ ಪೂಜೆಯಿಂದ ಸಂತುಷ್ಟನಾಗಿದ್ದ ವೀರಭದ್ರನು ಬಹುಸಂಖ್ಯೆಲ್ಲಿ ಶಿವಭಕ್ತರು ಮಡಿದುದನ್ನು ಕಂಡು ದುಃಖ ಕೋಪಗಳಿಂದ ಮಂದರ ಪರ್ವತಕ್ಕೆ ಧಾವಿಸಿ ಶಿವನಲ್ಲಿ ಅವನ್ನು ವಿಜ್ಞಾಪಿಸಿದ. ಅಲ್ಲಿ ಶಿವ ವಿಷ್ಣು ಬ್ರಹ್ಮರು ಮೂವರು ಕುಳಿತು ಪರಸ್ಪರ ಮಾತನಾಡಿಕೊಳ್ಳುತ್ತಿದ್ದರು. ಶಿವನು 'ನೀವೂ ಬನ್ನಿ, ಏನಾಯಿತು ನೋಡೋಣ' ಎಂದು ಬ್ರಹ್ಮವಿಷ್ಣುಗಳನ್ನು ಕರೆದು ನಂದಿಯನ್ನೇರಿ ಗೌತಮನ ಆಶ್ರಮಕ್ಕೆ ಹೊರಟ. ವಿಷ್ಣುವು ಗರುಡನನ್ನೇರಿದ. ಬ್ರಹ್ಮನು ಹಂಸವನ್ನೇರಿದ ಎಲ್ಲರೂ ಆಶ್ರಮಕ್ಕೆ ಬಂದರು. ಇಂದ್ರಾದಿ ದೇವತೆಗಳೂ ಬಂದರು. ಶಿವಗಣಗಳೂ ಬಂದುವು. ಶಿವನು ಆಶ್ರಮದಲ್ಲಿ ಗೌತಮನನ್ನು ಕಡೆಗಣ್ಣ ನೋಟದಿಂದ ಬದುಕಿಸಿದ. 'ನಿನ್ನ ಅಭೀಷ್ಟವೇನು, ಹೇಳು.' ಎಂದ.

**ಗೌತಮ :-** ನೀನು ಪ್ರಸನ್ನನಾಗಿರುವಿಯಾದರೆ ಸದಾ ನಿನ್ನ ಲಿಂಗವನ್ನರ್ಚಿಸುವ ಸಾಮರ್ಥ್ಯವನ್ನು ಕೊಡು. ನನ್ನ ಶಿಷ್ಯ ಶಂಕರಾತ್ಮನು ನೋಡಲು ಹುಚ್ಚನಂತಿದ್ದರೂ ದೊಡ್ಡಯೋಗಿ. ಅವನಿಗೆ ಹೇಯ ಅಹೇಯ ಎಂಬ ಭೇದವಿಲ್ಲ. ತನ್ನದು, ತನಗೆ ಬೇಕು ಎಂಬ ಅಭಿಮಾನದಿಂದ ಏನನ್ನೂ ನೋಡಲಾರ. ಏನನ್ನೂ ಎತ್ತಿಕೊಳ್ಳಲಾರ. ಏನನ್ನೂ ಮೂಸಿನೋಡಲಾರ. ಅವನನ್ನು ಯಾರೂ ದ್ವೇಷಿಸಕೂಡದು ಹಿಂಸೆ ಕೊಡ ಕೂಡದು. ಈಗ ಮಡಿದವರೆಲ್ಲರೂ ಬದುಕಬೇಕು ಈ ಮೂರು ವರಗಳನ್ನು ನಿನ್ನಲ್ಲಿ ಬೇಡುತ್ತೇನೆ.

**ಶಿವ :-** ಆಗಲಿ, ಗೌತಮ, ನಾವೀಗ ನಿನ್ನ ಮನೆಯಲ್ಲಿ ಸ್ವಲ್ಪ ಕಾಲವಿದ್ದು ನಮ್ಮ ಸ್ಥಾನಗಳಿಗೆ ಹಿಂತಿರುಗುತ್ತೇವೆ.

ಹೀಗೆ ಹೇಳಿ ಶಿವನು ವಿಷ್ಣುವಿನ ಕೈಹಿಡಿದುಕೊಂಡು ನಗುತ್ತ ಹೇಳಿದ: ಗೋವಿಂದ, ನಿನಗೆ ಹೊಟ್ಟೆಹಸಿದಿರುವಂತೆ ಕಾಣುತ್ತದೆ. ಊಟ ಕೊಡಿಸಲೇನು ? ಬಾ, ಇದು ನಿನ್ನ ಮನೆಯೆಂದೇ ತಿಳಿದು ನೀನೆ ಬೇಕಾದುದನ್ನು ಉಣ್ಣು. ಅಥವಾ ಪಾರ್ವತಿಯ ಮನೆಗೆ, ಹೋಗೋಣ. ಅವಳು ಹೊಟ್ಟೆತುಂಬ ಅನ್ನ ಬಡಿಸುವಳು. ಅವನನ್ನು ಎಳೆದು ಏಕಾಂತಕ್ಕೆ ಕರೆದೊಯ್ದು. ಬಳಿಕ ಹೊರಗೆ ಬಂದು ನಂದಿಯನ್ನು ಬಾಗಿಲು ಕಾಯಲು ನೇಮಿಸಿ ಗೌತಮನನ್ನು ಕರೆದು 'ನಾವೆಲ್ಲರೂ ಹಸಿದಿದ್ದೇವೆ. ಅಡಿಗೆಮಾಡಿಸು ಎಂದ. ತಿರುಗಿ ವಿಷ್ಣುವಿನ ಬಳಿಗೆ ಏಕಾಂತಕ್ಕೆ ಹೋಗಿ ಮೆತ್ತನೆಯ ಹಾಸಿಗೆಯ ಮೇಲೆ ಸ್ವಲ್ಪಕಾಲ ಅವನೊಡನೆ ಮಲಗಿದ. ಇಬ್ಬರೂ ಹಾಸಿಗೆಯಲ್ಲಿ ಒರಗಿ ಸರಸವಾಡಿದರು. ಬಳಿಕ ಸ್ನಾನಕ್ಕಾಗಿ ಒಂದು ದೊಡ್ಡ ಆಳವಾದ ಕೊಳದಲ್ಲಿಳಿದರು. ಅವರ ಜೊತೆಗೆ ಮುನಿಗಳೂ ರಾಕ್ಷಸರೂ ಇಳಿದು ನೀರಾಟಕ್ಕೆ ತೊಡಗಿದರು. ಶಿವ ವಿಷ್ಣುಗಳು ಪರಸ್ಪರ ನೀರೆರಚಿಕೊಂಡರು. ಕಮಲ ಕೇಸರಗಳನ್ನು ವಿಷ್ಣುವಿನ ಮುಖಕ್ಕೆ ಎಸೆದ ಶಿವ. ಆಗ ವಿಷ್ಣುವಿನ ಕಣ್ಣೊಳಗೆ ಕೇಸರ ಬಿದ್ದುದರಿಂದ ಅವನು ಕಣ್ಣು ಮುಚ್ಚಿದ. ಒಡನೆ ಶಿವ ಅವನ ಹೆಗಲಮೇಲೆ ಹತ್ತಿಕುಳಿತ. ಅವನನ್ನು ಮುಳುಗಿಸಿದ. ಅವನೆದ್ದೊಡನೆ ತಿರುಗಿ ಹಾಗೇ ಮುಳುಗಿಸಿದ. ಹೀಗೆ ಅನೇಕ ಬಾರಿ ಮಾಡಿದಾಗ ಹರಿ ಶಿವನನ್ನು ಕೆಡವಿದ. ಕಾಲುಗಳಲ್ಲಿ

ಹಿಡಿದು ಎಳೆದು ತಿರುಗಿಸಿದ. ಶಿವನು ಹರಿಯ ಎದೆಗೆ ಹೊಡೆದು ಅವನನ್ನು ಬೀಳಿಸಿದ. ಬಳಿಕ ಇಬ್ಬರೂ ನೀರೆರಚಿಕೊಂಡರು. ಅತ್ತ ಋಷಿಗಳೂ ನೀರಾಟವಾಡಿದರು. ಅವರ ಜಡೆ ಬಿಚ್ಚಿಹೋದುವು. ಆಗ ಅವರೆ ಪರಸ್ಪರ ಜಡೆಯನ್ನು ಕಟ್ಟಿಸಿಕೊಂಡು ತಿರುಗಿ ಆಟ ಮುಂದುವರಿಸಿದರು. ಹೀಗೆ ಜಲಕ್ರೀಡೆ ನಡೆಯುತ್ತಿದ್ದುದನ್ನು ನಾರದನು ಆಕಾಶದಲ್ಲಿ ನಿಂತು ನೋಡಿ ಆನಂದದಿಂದ ಕುಣಿಯತೊಡಗಿದ. ವೀಣೆ ನುಡಿಸಿ ಹಾಡತೊಡಗಿದ. ಶಿವನು ಆ ಹಾಡನ್ನು ಕೇಳಿ ತಾನೂ ಮೆಲ್ಲಗೆ ಹಾಡತೊಡಗಿದ. ಋಷಿಗಳು ತಾಳಹಾಕತೊಡಗಿದರು. ಕ್ರಮೇಣ ದೇವದಾನವರು ಋಷಿಗಳೂ ಎಲ್ಲರೂ ಹಾಡತೊಡಗಿದರು.

ಆಗ ಹನುಮಂತನೂ ಹಾಡತೊಡಗಿದ. ಅದರ ಮಾಧುರ್ಯದಿಂದ ಬಾಡಿದ ವಸ್ತು ಎಲ್ಲ ಅರಳಿತು. ಸೊರಗಿದುದೆಲ್ಲ ಪುಷ್ಪವಾಯಿತು. ಹಾಡುತ್ತಿರುವವರೆಲ್ಲರೂ ತಮ್ಮ ಹಾಡು ನಿಲ್ಲಿಸಿ ಕೇಳಿದರು. ದೇವತೆಗಳೂ ಋಷಿಗಳೂ ಗಣಗಳೂ ರಾಕ್ಷಸರೂ ಶ್ರೋತೃಗಳಾದರು. ಹನುಮಂತನೊಬ್ಬನೆ ಹಾಡುವವ.

ಬಳಿಕ ಮಧ್ಯಾಹ್ನದ ಊಟದ ವೇಳೆ ಬಂದಿತೆಂದು ಎಲ್ಲರೂ ಮಡಿಯುಟ್ಟು ಮಾಧ್ಯಾಹ್ನಿಕ ಕ್ರಿಯೆಗಳನ್ನು ಮುಗಿಸಿ ತಮ್ಮ ತಮ್ಮ ವಾಹನಗಳನ್ನೇರಿ ಆಶ್ರಮಕ್ಕೆ ಹೊರಟರು. ಶಿವನು ಹನುಮಂತನ ಗಾನ ಮಾಧುರ್ಯಕ್ಕೆ ಸೋತುಹೋಗಿದ್ದ, ಅವನನ್ನು ತನ್ನೊಡನೆ ನಂದಿಯ ಮೇಲೆ ಕುಳ್ಳಿರಿಸಿ ಹಾಡಿಸುವ ಆಸೆಯಿಂದ ಕರೆದ. 'ನಿನ್ನ ವಾಹನವನ್ನೇರಿ ನಾನು ಪಾತಕಿ ಆಗಲಾರೆ. ಬೇಕಾದರೆ ನನ್ನ ಹೆಗಲ ಮೇಲೆ ನೀನೆ ಹತ್ತಿ ಕುಳಿತು 'ನನ್ನ ಹಾಡನ್ನು ಕೇಳು' ಎಂದ ಹನುಮಂತ.

ಶಿವನು ಆಗಲಿ ಎಂದು ಅವನ ಹೆಗಲಮೇಲೆ ಹತ್ತಿ ಕುಳಿತ. ಹನುಮಂತನು ತನ್ನ ಮುಖವನ್ನು ಹಿಂದಕ್ಕೆ ಶಿವನಿಗೆದುರಾಗಿ ತಿರುಗಿಸಿಕೊಂಡು ಹಾಡಿದ. ಅದನ್ನು ಕೇಳುತ್ತ ಗೌತಮನಾಶ್ರಮವನ್ನು ಸೇರಿದ ಶಿವ. ಅಷ್ಟರಲ್ಲಿ ದೇವತೆಗಳೂ ಋಷಿಗಳೂ ಗಣಗಳೂ ದಾನವರೂ ಅಲ್ಲಿ ಬಂದು ಸೇರಿದರು.

ಗೌತಮನು ಎಲ್ಲರನ್ನೂ ಸತ್ಕರಿಸಿದ. ಹನುಮಂತನು ಇನ್ನೂ ಹಾಡುತ್ತಲೆ ಇದ್ದ; ಆ ಗಾನದಿಂದ ಮನೆಯ ಒಣಗಿದ ಮರದ ಸಾಮಾನುಗಳೆಲ್ಲ ಹಸಿಯಾಗಿ ಚಿಗುರಿದುವು. ಎಲ್ಲರೂ ಬೆರಗಾಗಿ ಹನುಮಂತನನ್ನೆ ನೋಡುತ್ತಿದ್ದರು. ಶಿವನು ಅವನ ಮುಖವನ್ನು ತಿರುಗಿಸಿ ಮೊದಲಿನಂತೆ ಮಾಡಿದ. ಪದ್ಮಾಸನದಲ್ಲಿ ಕುಳಿತಿದ್ದ ಅವನ ಬೊಗಸೆಯಲ್ಲಿ ಒಂದು ಕಾಲಿಟ್ಟು ಇನ್ನೊಂದು ಕಾಲಿನಿಂದ ಅವನ ಮುಖವನ್ನು ಪ್ರೀತಿಯಿಂದ ಮೆಲ್ಲಗೆ ಸವರಿದ. ಬಳಿಕ ಹೆಗಲು ಕುತ್ತಿಗೆ ಎದೆ ಬೆನ್ನು ಹೊಟ್ಟೆ ಹೊಕ್ಕಳುಗಳನ್ನು ಸ್ಪರ್ಶಿಸಿ ಬೊಗಸೆಯಲ್ಲಿ ಆ ಎರಡನೆ ಕಾಲನ್ನೂ ಇಟ್ಟ. ಒಂದು ಮುತ್ತಿನ ಹಾರವನ್ನು ಅವನ ಕೊರಳಿಗೆ ಹಾಕಿದ.

ವಿಷ್ಣು ಹೇಳತೊಡಗಿದ. 'ಹನುಮಂತನಿಗೆ ಸಮಾನನಾದವನು ಇಡಿ ಬ್ರಹ್ಮಾಂಡದಲ್ಲಿಯೆ ಇಲ್ಲ. ಶ್ರುತಿಗಳಿಗೂ ನಿಲುಕದ ದೇವತೆಗಳಿಗೂ ಸಿಗದ ನಿನ್ನ ಪಾದ ಅವನಿಗೆ ಸಿಕ್ಕಿತು. ಮಹಾಯೋಗಿಗಳ ಹೃದಯ ಕಮಲದಲ್ಲಿ ಒಂದುಕ್ಷಣ ನಿಲ್ಲದಿದ್ದ ನಿನ್ನಪಾದ ಅವನ ಬೊಗಸೆಯಲ್ಲಿ ನಿಂತಿತು. ಇಷ್ಟಾದರೂ ಅವನೊಬ್ಬ ಚಪಲನಾದ ಕಪಿ. ಇದೊಂದು ವಿಚಿತ್ರವೆ ಸರಿ. ನಾನು ಪ್ರತಿದಿನ ಸಾವಿರ ಕಮಲಗಳಂತೆ ಸಾವಿರ

ವರ್ಷಗಳಕಾಲ ಭಕ್ತಿಯಿಂದ ನಿನ್ನನ್ನರ್ಚಿಸಿದರೂ ನೀನು ನಿನ್ನ ಪಾದ ತೋರಲಿಲ್ಲ. ಲೋಕದಲ್ಲಿ ಎಲ್ಲರೂ ಹೇಳುವುದು, ಶಿವನು ನಾರಾಯಣನಿಗೆ ಪ್ರಿಯ, ನಾರಾಯಣನು ಶಿವನಿಗೆ ಪ್ರಿಯನೆಂದು. ಆದರೆ ಈ ಕಪಿಯ ಭಾಗ್ಯ ನನಗೆ ಎಂದೂ ದೊರಕಿಲ್ಲ.'

ಶಿವನು ತಡೆದು ಹೇಳಿದ. 'ಹರಿಯೆ, ನಿನ್ನಷ್ಟು ಪ್ರಿಯನಾದವನು ನನಗಿನ್ನಾರೂ ಇಲ್ಲ. ಇರುವುದಾದರೆ ಪಾರ್ವತಿಯೊಬ್ಬಳೆ. ಇನ್ನಾರೂ ಇಲ್ಲ.

ಬಳಿಕ ಗೌತಮನ ಪ್ರಾರ್ಥನೆಯಂತೆ ಎಲ್ಲರೂ ಊಟಕ್ಕೆ ಕುಳಿತರು. ಶಿವನು ಆಚಮನಮಾಡಿ ಸರ್ವಾಲಂಕಾರ ಭೂಷಿತನಾಗಿ ಪಂಚಗಂಧಗಳನ್ನು ಲೇಪಿಸಿಕೊಂಡು ಉತ್ತಮವಾದ ಆಸನದಲ್ಲಿ ಕುಳಿತ. ಎದುರಿನಲ್ಲಿ ಬ್ರಹ್ಮವಿಷ್ಣುಗಳನ್ನೂ ಕುಳ್ಳಿರಿಸಿದ. ಎಲ್ಲರೂ ಚಿನ್ನದ ಹರಿವಾಣಗಳಲ್ಲಿ ಊಟಮಾಡತೊಡಗಿದರು. ಮೂವತ್ತು ಬಗೆಯ ಭಕ್ಷ್ಯಗಳು, ನಾಕು ಬಗೆಯ ಪಾಯಸಗಳು, ಇನ್ನೂರು ಬಗೆಯ ಪಕ್ವಾನ್ನಗಳು, ಮುನ್ನೂರು ಬಗೆಯ ಅಪಕ್ವಾನ್ನಗಳು. ನೂರು ನೂರು ಬಗೆಗಳ ಗೆಡ್ಡೆ ಕಾಯಿಪಲ್ಯ ಪದಾರ್ಥಗಳು, ಇಪ್ಪತ್ತೈದು ಬಗೆಯ ಸಾಸಿವೆಯಿಂದ ಮಿಶ್ರಿತವಾದ ಶಾಕಪದಾರ್ಥಗಳು ಸಕ್ಕರೆ ಮಾವು ದಾಳಿಂಬೆ ಬಾಳೆ ದ್ರಾಕ್ಷೆ ಖರ್ಜೂರ ಕಿತ್ತಳೆ ನೇರಳೆ ಮುಂತಾದ ಹಣ್ಣುಗಳು ಇವನ್ನೆಲ್ಲ ಗೌತಮನು ಬಡಿಸಿ ಆಪೋಶನವನ್ನಿತ್ತು 'ಊಟಮಾಡಿರಿ' ಎಂದನು. ಬೀಸಣಿಗೆಯಿಂದ ಶಿವ ವಿಷ್ಣುಗಳಿಗೆ ಗಾಳಿ ಬೀಸತೊಡಗಿದನು.

ಶಿವನು ಹಾಸ್ಯಕ್ಕಾಗಿ 'ಹರಿಯೆ, ನೋಡು, ಕಪಿ ಹೇಗೆ ಉಣ್ಣುತ್ತಾನೆ !' ಎಂದ. ವಿಷ್ಣು ಅವನಕಡೆಗೆ ನೋಡಲು ತಿರುಗಿದಾಗ ಶಿವನು ಎಂಜಲು ಮಂಡಿಗೆಯನ್ನು ಹರಿಯ ತಟ್ಟೆಯಲ್ಲಿ ಹಾಕಿದ. ಎಲ್ಲ ಋಷಿಗಳೂ ನೋಡುತ್ತಿದ್ದಂತೆ ಹನುಮಂತನ ತಟ್ಟೆಗೂ ಎಂಜಲು ಪಾಯಸವನ್ನು ಹಾಕಿದ. ಆಗ ಹನುಮಂತನು ಕೇಳಿದ, ''ನಿನ್ನ ಎಂಜಲನ್ನು ತಿನ್ನಬಾರದೆಂದು ನೀನೆ ಹೇಳಿರುವೆಯಲ್ಲ !

**ಅನರ್ಹಂ ಮಮ ನೈವೇದ್ಯಂ ಪತ್ರಂಪುಷ್ಪಂ ಫಲಂ ತಥಾ**
**ಮಹ್ಯಂ ನಿವೇದ್ಯ ಸಕಲಂ ಕೂಪ ಏವ ವಿನಿಕ್ಷಿಪೇತ್**

ನನ್ನ ನೈವೇದ್ಯವು ಸ್ವೀಕಾರಕ್ಕೆ ಅಯೋಗ್ಯವಾದುದು. ಪತ್ರ ಪುಷ್ಪ ಫಲಗಳನ್ನೂ ನನಗೆ ನಿವೇದಿಸಿದ ಮೇಲೆ ಎಲ್ಲವನ್ನೂ ಬಾವಿಯಲ್ಲಿ ಹಾಕಬೇಕು.

ಹೀಗೆ ನೀನು ಹೇಳಿರುವಾಗ ನಿನ್ನ ಎಂಜಲನ್ನು ಉಣದೆ ನಿನ್ನಾಜ್ಞೆಯನ್ನು ಪಾಲಿಸಬೇಕೆ ? ಉಂಡು ನಿನ್ನ ಕೃಪೆಗೆ ಪಾತ್ರರಾಗಬೇಕೆ ? ಹೇಳು.

ಶಿವನೆಂದ, 'ಬಾಣಲಿಂಗ, ಸ್ವಯಂ ವ್ಯಕ್ತವಾದ ಲಿಂಗ. ಹೃದಯದಲ್ಲಿರುವ ಚಂದ್ರಕಾಂತಲಿಂಗಗಳಲ್ಲಿ ಶಿವನಿಗೆ ನಿವೇದಿತವಾದುದನ್ನು ಭಕ್ಷಿಸಿದರೆ ಅದು ಚಾಂದ್ರಯಣ ವ್ರತಕ್ಕೆ ಸಮಾನವಾದುದು.

**ಬಾಣಲಿಂಗೇ ಸ್ವಯಂಭೂತೇ ಚಂದ್ರಕಾಂತೆ ಹೃದಿಸ್ಥಿತೇ**
**ಚಾಂದ್ರಾಯಣ ಸಮಂ ಜ್ಞೇಯಂ ಶಂಭೋರ್ನೈವೇದ್ಯಭಕ್ಷಣಂ**

ಈಗ ಇದು ಊಟದ ಸಮಯ. ಬೇರೆ ಮಾತುಗಳಿಂದ ವೈರಸ್ಯ ಉಂಟಾದೀತು. ಊಟ ಮಾಡಿದ ಮೇಲೆ ಎಲ್ಲ ಹೇಳುತ್ತೇನೆ. ಈ ಯಾವ ವಿಚಾರಕ್ಕೂ ಹೋಗದೆ ಊಟಮಾಡು.

ಗೌತಮನು ಕುಡಿಯುವ ನೀರನು ಸಿದ್ಧ ಪಡಿಸಿದನು. ಚಳ್ಳೆಬೀಜದ ಪುಡಿಯಿಂದ ಶುದ್ಧಮಾಡಿದ ಕೆರೆ ನೀರನ್ನು ಕಲಶಗಳಲ್ಲಿ ತುಂಬಿಸಬೇಕು. ನದಿಯ ಮರಳನ್ನು ತಂದು ಅದರಿಂದ ವೇದಿಕೆಯನ್ನು ಮಾಡಿ ಶುದ್ಧವಾದ ಬಿಳಿ ಬಟ್ಟೆಯಿಂದ ಅದನ್ನು ಮುಚ್ಚಿ ಅದರ ಮೇಲೆ ನೀರಿನ ಕಲಶಗಳನ್ನು ಇಡಬೇಕು. ನೀರಿಗೆ ಲಾಮಂಚ ಏಲಕ್ಕಿ ಕಸ್ತೂರಿ ಪುಡಿಗಳನ್ನೂ ಪಗಡೆ ಪಾದರಿ ಕಾಡುಮಲ್ಲಿಗೆ ಹೂಗಳನ್ನು ಹಾಕಿ ಒಂದು ಯಾಮಕಾಲ ಮುಚ್ಚಿಡಬೇಕು. ಬಳಿಕ ವಸ್ತ್ರದಿಂದ ನೀರನ್ನು ಶೋಧಿಸಿ ಪಚ್ಚ ಕರ್ಪೂರವನ್ನು ಹಾಕಿ ಕಲಶಗಳಲ್ಲಿ ತುಂಬಿಡಬೇಕು. ಮಿದುವಾದ ತೆಳುವಾದ ಬಟ್ಟೆಯಿಂದ ಬಾಯಿ ಮುಚ್ಚಿ ಕಟ್ಟಬೇಕು. ಬಿಸಿಲು ಬೀಳದ ಪ್ರದೇಶದಲ್ಲಿ ಮೆಲ್ಲಗೆ ಗಾಳಿ ಬೀಸುವಲ್ಲಿ ಇಡಬೇಕು. ನೀರು ಬಡಿಸುವ ಪುರುಷರು ಸ್ತ್ರೀಯರು ಕನ್ನಿಕೆಯರು ಸ್ನಾನಮಾಡಿ ಮಡಿ ಉಟ್ಟು ಕತ್ತು ಕಂಕುಳಲ್ಲಿ ಅಗರು ದ್ರವವನ್ನು ಲೇಪಿಸಿಕೊಳ್ಳಬೇಕು. ಮೈಗೆಲ್ಲ ಪಂಚ ಗಂಧಗಳನ್ನು ಪೂಸಿಕೊಂಡು ತಲೆಯ ಮೇಲೆ ಹೂ ಮುಡಿದು ಕೊಳ್ಳಬೇಕು. ಸ್ತ್ರಿಯರು ಕುಂಕುಮವನ್ನೂ ಸರ್ವಾಭರಣಗಳನ್ನೂ ಧರಿಸಬೇಕು. ಎಡಗೈಯಲ್ಲಿ ಕಲಶವನ್ನು ಹಿಡಿದುಕೊಂಡು ನೀರು ಬಡಿಸಬೇಕು.

ಊಟದ ಕೊನೆಯಲ್ಲಿ ಗೌತಮನು ಇಂಥ ನೀರನ್ನು ಎಲ್ಲರಿಗೂ ಬಡಿಸಿ ಸತ್ಕರಿಸಿದನು. ಎಲ್ಲರೂ ಎದ್ದು ಕೈಕಾಲು ತೊಳೆದುಕೊಂಡು ಗಂಧವನ್ನು ಕೈಗಳಿಗೆ ಪೂಸಿಕೊಂಡರು. ತಾಂಬೂಲವನ್ನು ಸ್ವೀಕರಿಸಿದರು. ಶಿವನಿಗೆ ಗೌತಮನು ತಾಂಬೂಲವನ್ನು ಕೊಡಲು ಹೋದಾಗ 'ಹನುಮಂತನೆ ತಾಂಬೂಲ ಕೊಡಲಿ' ಎಂದ ಶಿವ. 'ನಾನು ಕಾಡಿನಲ್ಲಿ ಸಿಕ್ಕಿದ ಹಣ್ಣು ಹಂಪಲು ತಿನ್ನುತ್ತ ಬದುಕುವವನು, ಅಶುಚಿಯಾಗಿರುವವನು' ಎಂದ ಹನುಮಂತ. 'ನನ್ನ ಮಾತಿನಿಂದ ಎಲ್ಲವೂ ಶುಚಿಯಾಗುವುದು ವಿಷವೂ ಅಮೃತವಾಗುವುದು. ಎಲ್ಲ ಶಬ್ದಗಳೂ ವೇದ ಪುರಾಣ ಆಗಮ ಸ್ಮೃತಿಗಳಾಗುವವು. ಧರ್ಮಜ್ಞಾನ ಉದಯಿಸುವುದು. ದೇವತ್ವ ಲಭಿಸುವುದು. ಮೋಕ್ಷವೂ ದೊರಯಲಿರುವುದು. ಕಪಿಯೆ, ತಾಂಬೂಲವನ್ನೆತ್ತಿ ಕೊಳ್ಳು, ಸಿದ್ಧಮಾಡಿ ನನಗೆ ಕೊಡು.

ಹನುಮಂತನು ಶಿವನ ಈ ಮಾತನ್ನು ಕೇಳಿ ಎಡಗೈಯಿಂದ ತಾಂಬೂಲವನ್ನು ತೆಗೆದು ಅಡಿಕೆ ಪುಡಿ ಪಚ್ಚ ಕರ್ಪೂರಗಳನ್ನು ಬೆರೆಸಿ ಶಿವನಿಗಿತ್ತನು.

ಶಿವನು ತಾಂಬೂಲವನ್ನು ಮೆಲ್ಲುತ್ತಿದ್ದಾಗ ಮಂದರ ಪರ್ವತದಿಂದ ಪಾರ್ವತಿಯು ಜಯಾ ವಿಜಯಾ ಎಂಬ ಸಖಿಯರೊಡನೆ ಆಶ್ರಮಕ್ಕೆ ಬಂದಳು. ಶಿವನಿಗೆ ವಂದಿಸಿ ಮುಖವನ್ನು ತಗ್ಗಿಸಿ ನಿಂತಳು. ಶಿವನು ಅವಳ ಮುಖವನ್ನೆತ್ತಿ ದೇವಿ, ನಿನ್ನನ್ನು ಬಿಟ್ಟು ಊಟ ಮಾಡಿ ಅಪರಾಧಸಗಿದ್ದೇನೆ. ನಿನ್ನೊಬ್ಬಳನ್ನೆ ಅಲ್ಲಿ ಬಿಟ್ಟು ಬಂದಿರುವುದೂ ತಪ್ಪಾಯಿತು. ಕ್ಷಮಿಸು, ಕೋಪಿಸದೆ ನನ್ನನ್ನು ನೋಡು' ಎಂದ. ಅಷ್ಟರಲ್ಲಿ ಗೌತಮನು ಪಾರ್ವತಿಗೆ ನಮಿಸಿ ಭೋಜನ ಮಾಡೆಂದು ಬೇಡಿಕೊಂಡ. ಬಳಿಕ ಪಾರ್ವತಿ ಉಂಡು ಗಂಧ ಪುಷ್ಪಗಳನ್ನು ಸ್ವೀಕರಿಸಿದಳು.

ಅಷ್ಟರಲ್ಲಿ ಸಂಧ್ಯಾಕಾಲವಾಯಿತು. ಎಲ್ಲರೂ ಕೆರೆಯ ಬಳಿಗೆ ಹೋಗಿ ಸಂಧ್ಯಾವಂದನೆ ಮಾಡಿದರು. ಶಿವನೂ ಜಪಿಸುವುದನ್ನು ಕಂಡು ವಿಷ್ಣು ಕೇಳಿದನು.

**ವಿಷ್ಣು :-** ಎಲ್ಲರೂ ನಮಿಸುವುದು ಪೂಜಿಸುವುದು ನಿನ್ನನ್ನು. ಯಜ್ಞ ಹೋಮಗಳು ನಿನಗೆ ಮಾಡುವರು. ಅಂಥವ ನೀನೇ ಏನು ಜಪಿಸುವೆ ? ಎಲ್ಲರೂ ನಿನಗೆ

ಕೈಮುಗಿಯುವಾಗ ನೀನು ಯಾರಿಗೆ ಕೈ ಮುಗಿವೆ ? ನಮಸ್ಕಾರ ಪೂಜೆ ಮುಂತಾದವುಗಳಿಗೆ ಫಲ ನೀಡುವವನು ನೀನು. ನಿನಗೆ ಯಾರು ಫಲ ಕೊಡುವವರು ? ನಿನಗಿಂತ ಶ್ರೇಷ್ಠನಾಗಿದ್ದು ವಂದ್ಯನೆನಿಸುವವನು ಯಾರು ?

**ಶಿವ :-** ನಾನೇನು ಧ್ಯಾನಿಸುವದಿಲ್ಲ. ನಮಿಸುವದಿಲ್ಲ. ಉಪಾಸನೆ ಮಾಡುವದಿಲ್ಲ. ಜಪಿಸುವದಿಲ್ಲ. ನಾಸ್ತಿಕರಿಗೆ ಧರ್ಮಾಚರಣೆಯಲ್ಲಿ ಆಸಕ್ತಿ ಉಂಟು ಮಾಡುವದಕ್ಕಾಗಿ ಹಾಗೆ ತೋರಿಸಿಕೊಳ್ಳುತ್ತೇನೆ. ಲೋಕಕ್ಕೆ ಉಪಕಾರವಾಗಲೆಂದು ಹಾಗೆ ಮಾಡುತ್ತೇನೆ.

'ಅದು ಸರಿ' ಎಂದು ಹೇಳಿ ಹರಿ ನಮಿಸಿದನು.

ಸಂಧ್ಯಾವಂದನೆ ಮುಗಿಸಿ ಎಲ್ಲರೂ ಆಶ್ರಮಕ್ಕೆ ತೆರಳಿದರು. ಶಿವಪೂಜೆಯನ್ನು ಮಾಡಿದರು. ಆಗ ಶಿವನು ಹನುಮಂತನೊಡನೆ ಹಾಡುತ್ತ ಕುಳಿತ. ಉಳಿದವರು ಪಂಚಾಕ್ಷರಿಯನ್ನು ಜಪಿಸಿದರು. ಬಳಿಕ ಶಿವನು ಹನುಮಂತನ ಕೈ ಹಿಡಿದುಕೊಂಡು ಪಾರ್ವತಿಯ ಬಳಿಗೆ ನಡೆದ ಹನುಮಂತ ತುಂಬುರು ನಾರದರು ಹಾಡುತ್ತಿದ್ದಂತೆ ಶಿವನು ಪಾರ್ವತಿಯೊಡನೆ ಹಾಸಿಗೆಯಲ್ಲಿ ಕುಳಿತು ನಾನಾ ವಿಧವಾದ ವಿಲಾಸದಲ್ಲಿ ತೊಡಗಿದ.

**ಶಿವ :-** ದೇವಿ, ನಿನಗೆ ತಲೆ ಬಾಚಿ ಜಡೆ ಹಾಕುತ್ತೇನೆ.

**ಪಾರ್ವತಿ :-** ನಾಥ, ಪತಿಯು ಪತ್ನಿಯ ಸೇವೆ ಮಾಡುವುದು ಯುಕ್ತವಲ್ಲ. ತಲೆ ಕೂದಲು ಸಿಂಗರಿಸಲು ತೊಡಗಿದರೆ ಇನ್ನೂ ಏನೇನೋ ಮಾಡಬೇಕಾಗುತ್ತದೆ. ಹೆಗಲು ಬೆನ್ನುಗಳನ್ನೆಲ್ಲ ಒರೆಸಿ ಉದುರಿದ ಕೂದಲು ಹೂಗಳನ್ನೆಲ್ಲ ತೆಗೆಯಬೇಕಾಗುತ್ತದೆ. ಇದನ್ನೆಲ್ಲ ಮಾಡುತ್ತಿದ್ದಾಗ ದೊಡ್ಡವರು ಬಂದರೆ ನಾನೇನು ಹೇಳೋಣ ?

ಪಾರ್ವತಿಯು ಹೀಗೆ ಹೇಳುತ್ತಿದ್ದಂತೆ ಶಿವನು ಅವಳನ್ನು ಕೈಯಿಂದ ಸೆಳೆದು ತೊಡೆಯಲ್ಲಿ ಕುಳ್ಳಿರಿಸಿ, ಜಡೆಯನ್ನು ಬಿಚ್ಚಿ ಉಗುರುಗಳಿಂದ ಬಿಡಿಸಿ ಹರವಿದನು. ವಿಷ್ಣುವು ಕೊಟ್ಟ ಪಾರಿಜಾತದ ಮಾಲೆಯನ್ನು ಇಟ್ಟು ಜಡೆ ಹಾಕಿದನು. ಮಲ್ಲಿಗೆಯ ಮಾಲೆಯನ್ನು ತೊಡಿಸಿದನು. ಬ್ರಹ್ಮನು ಕೊಟ್ಟ ಕಲ್ಪವೃಕ್ಷದ ಹೂವಿನ ಮಾಲೆಯನ್ನು ತೊಡಿಸಿದನು. ಹೆಗಲು ಬೆನ್ನುಗಳನ್ನೊರಸಿ ಸೊಂಟದಲ್ಲಿ ಬಿಚ್ಚಿ ಹೋಗಿದ್ದ ಬಟ್ಟೆಯ ಗಂಟನ್ನು ಸರಿಪಡಿಸಿದನು. ಮೂಗುತಿಗೆ ಅರಿಶಿನ ಅಂಟಿಕೊಂಡಿದ್ದುದರಿಂದ ಹೊಳಪು ಕಡಿಮೆಯಾಗಿದ್ದುದನ್ನು ನೋಡಿ 'ಇದನ್ನು ಇಟ್ಟುಕೊಳ್ಳಬೇಡ. ಚೆನ್ನಾಗಿ ಹೊಳೆಯತ್ತಿಲ್ಲ,' ಎಂದ. ಪಾರ್ವತಿ ಜಗಳಕ್ಕೆ ನಿಂತಳು.

**ಪಾರ್ವತಿ :-** ನಿನ್ನ ವೈಭವಕ್ಕೆ ಇದು ಸಾಕು. ನಿನಗೆ ನರಕಪಾಲಗಳ ಮಾಲೆ. ಶೇಷ ವಾಸುಕಿ ಸರ್ಪಗಳು ತಾನೆ ಆಭರಣಗಳು ! ಬಟ್ಟೆ ಇಲ್ಲವೆ ಇಲ್ಲ ! ಬೂದಿಯು ಅಂಗರಾಗ ! ತಲೆಯ ಮೇಲೆ ಜಡೆ ! ಮುದಿ ಎತ್ತು ವಾಹನ ! ಕುಲಗೋತ್ರಗಳೊಂದೂ ಯಾರಿಗೂ ತಿಳಿದಿಲ್ಲ ! ತಂದೆ-ತಾಯಿಗಳಾರೆಂದೂ ಗೊತ್ತಿಲ್ಲ ! ದೇಹವೂ ಕಣ್ಣುಗಳಿಂದ ವಿರೂಪವಾಗಿದೆ ! .................

**ವಿಷ್ಣು :-** ದೇವಿ, ಏಕೆ ಹೀಗೆಲ್ಲ ಜಗದೊಡೆಯನನ್ನೆ ಹಳಿಯುತ್ತಿರುವೆ ! ಶಿವ ನಿಂದೆಯನ್ನು ಕೇಳಿದರೆ ಮರಣ ಹೊಂದುವುದು ನನ್ನ ವ್ರತ.

ಹೀಗೆ ಹೇಳುತ್ತ ವಿಷ್ಣು ತನ್ನ ತಲೆಯನ್ನು ಉಗುರುಗಳಿಂದ ತುಂಡರಿಸ ತೊಡಗಿದ. ಶಿವನು ತಡೆದು ಅವನ ಕೈಹಿಡಿದು ಹೇಳಿದ.

**ಶಿವ :-** ಇಂಥ ಸಾಹಸ ಮಾಡಬೇಡ. ಪಾರ್ವತಿಯ ಮಾತುಗಳೆಲ್ಲವೂ ನನ ಇಷ್ಟವೆ. ನೀನು ಈಗ ಮಾಡಲು ಹೊರಟ ಕಾರ್ಯವೆ ನನಗೆ ಇಷ್ಟಲ್ಲದುದು.

ವಿಷ್ಣು ಸುಮ್ಮನಾದ. ಅಷ್ಟರಲ್ಲಿ ಹನುಮಂತನೆಂದ.

**ಹನುಮಂತ :-** ದೇವ, ನಾನು ಪೂಜೆಗೆ ಹೊರಡುತ್ತಿದ್ದೇನೆ. ಅನುಮತಿಕೊಡು.

**ಶಿವ :-** ಯಾರಿಗೆ ಪೂಜೆ ? ಎಲ್ಲಿ ಮಾಡುವೆ ? ಯಾವ ಹೂ ? ಯಾವ ಪತ್ರೆ ? ನಿನ್ನ ಗುರು ಯಾರು ? ಮಂತ್ರ ಯಾವುದು ? ಪೂಜೆಯನ್ನು ಯಾವ ವಿಧಾನದಿಂದ ಮಾಡುವೆ ?

ಹನುಮಂತನು ಹೆದರಿದ. ಭಯದಿಂದ ನಡುಗುತ್ತ ಸ್ತೋತ್ರ ಮಾಡತೊಡಗಿದ.

**ಹನುಮಂತ :-** ಮಹಾದೇವ, ಶಂಕರ, ಯೋಗಿಯೆ, ಯೋಗಿಗಳ ಗುರುವೆ, ಜ್ಞಾನಿ ವರೇಣ್ಯನೆ, ವೇದಪತಿಯೆ, ದೇವತೆಗಳೊಡೆಯನೆ 'ಅಂಭಸ್ಯಪಾರೇ.' 'ಆತನುಷ್ವ' ಮೊದಲಾದ ವಾಕ್ಯ ಪ್ರತಿಪಾದ್ಯನೆ, ಅಷ್ಟ ಮೂರ್ತಿಯೆ, ಪಶುಪತಿಯೆ, ಮುಕ್ಕಣ್ಣನೆ, ಗರುಗ ಉಮ್ಮತ್ತ ತುಂಬೆ ಅಡಕೆ ಸುರಹೊನ್ನೆ ಸಂಪಿಗೆ ಹೂಗಳನ್ನು ಪ್ರೀತಿಸುವವನೆ ನಿನಗೆ ನಮಸ್ಕಾರ. ಅನೇಕ ನಮಸ್ಕಾರ.

**ಶಿವ :-** ಅಂಜಬೇಡ, ನಾನು ಕೇಳಿದುದುನೆಲ್ಲ ಹೇಳು.

**ಹನುಮಂತ :-** ನಾನು ಶಿವಲಿಂಗವನ್ನು ಪೂಜಿಸುತ್ತೇನೆ. ಮೈಗೆ ಭಸ್ಮಲೇಪಿಸಿಕೊಂಡು ಹಗಲು ತಂದಿಟ್ಟ ನೀರು ಹೂಗಳಿಂದ ಶಿವಪೂಜೆ ಮಾಡುತ್ತೇನೆ. ಸಾಯಂಕಾಲ ಕಂಠದವರೆಗೆ ಸ್ನಾನ ಮಾಡಿ ಮಡಿ ಉಟ್ಟು ಎರಡು ಬಾರಿ ಆಚಮನ ಮಾಡಿ ಭಸ್ಮದಿಂದ ಆಗ್ನೇಯ ಸ್ನಾನ ಮಾಡುತ್ತೇನೆ. ಎಂಟು ಬಾರಿ ಪ್ರಣವದಿಂದ ಅಭಿಮಂತ್ರಿಸುತ್ತೇನೆ. ಪಂಚಾಕ್ಷರಿ ಅಥವಾ ಯಾವುದಾದರೊಂದು ನಾಮದಿಂದಲೂ ಏಳು ಬಾರಿ ಅಭಿಮಂತ್ರಿಸಬಹುದು. ದರ್ಭೆಯ ಪವಿತ್ರವನ್ನು ಧರಿಸಿ **'ಈಶಾನಃ ಸರ್ವವಿದ್ಯಾನಾಂ' ತತ್ಪುರುಷಾಯ ವಿದ್ಮಹೇ' 'ಅಘೋರೇಬೋಧ ಘೋರೇಭ್ಯಃ' 'ವಾಮದೇವಾಯನಮಃ' ಸದ್ಯೋಜಾತಂ ಪ್ರಪದ್ಯಾಮಿ'** ಈ ಮಂತ್ರಗಳಿಂದ ತಲೆ ಹಣೆ ಎದೆ ಗುಹ್ಯಪಾದಗಳಲ್ಲಿಯೂ ಪ್ರಣವದಿಂದ ಸರ್ವಾಂಗದಲ್ಲಿಯೂ ಭಸ್ಮ ಲೇಪಿಸಿಕೊಳ್ಳಬೇಕು. ಇದು ತ್ರೈವರ್ಣಿಕರಿಗೆ ನಿಯಮ. ಶೂದ್ರ ಮುಂತಾದವರು ಶಿವನಾಮದಿಂದ ಏಳು ಬಾರಿ ಭಸ್ಮವನ್ನು ಅಭಿಮಂತ್ರಿಸಿ **ಶಿವಾಯನಮಃ, ಶಂಕರಾಯನಮಃ, ಸರ್ವಜ್ಞಾಯ ನಮಃ, ಸ್ಥಾಣವೇ ನಮಃ, ಸ್ವಯಂಭುವೇನಮಃ,** ಎನ್ನುತ್ತ ತಲೆ ಹಣೆ ಎದೆ ಗುಹ್ಯಪಾದಗಳಿಗೂ ನಮಃ ಶಿವಾಯ ಎಂದು ಸರ್ವಾಂಗಗಳಿಗೂ ಭಸ್ಮಹಚ್ಚಿಕೊಳ್ಳಬೇಕು.

ಬಳಿಕ ಸಂಧ್ಯಾವಂದನೆ ದೇವೀ ಮಂತ್ರ ಜಪಗಳನ್ನು ಮಾಡಿ ಶಿವಪೂಜೆ ಮಾಡುವ ವೇದಿಕೆಯಲ್ಲಿ ಪದ್ಮ ಸ್ವಸ್ತಿಕ ಉತ್ಪಲ ಗದೆ ಶಂಖ ತ್ರಿಶೂಲ ಡಮರು ಶಿವಲಿಂಗ ಪಾದುಕೆ ಬೀಸಣಿಗೆ ಛತ್ರ ಚಾಮರ ವಿಷ್ಣು ಬ್ರಹ್ಮ ಮುಂತಾದವರ ಚಿತ್ರಗಳನ್ನು ರಂಗವಲ್ಲಿಯಿಂದ ಇಲ್ಲವೆ ಹಿಟ್ಟಿನಿಂದ ಬರೆಯಬೇಕು. ತಾನೆ ಬರೆದರೆ ಉತ್ತಮ. ಇನ್ನೊಬ್ಬರಿಗೆ ಪ್ರತಿಫಲ ಕೊಟ್ಟು ಬರೆಸಿದರೆ ಮಧ್ಯಮ. ಬೇಡಿ ಇನ್ನೊಬ್ಬರಿಂದ ಬರೆಸಿದರೆ ಕನಿಷ್ಠ.

ಬಲಾತ್ಕಾರದಿಂದ ಅರ್ಹರಾದವರ ಕೈಯಲ್ಲಿ ಬರೆಸಿದರೆ ಅಧಮ. ಬಲಾತ್ಕಾರದಿಂದ ಅನರ್ಹರಾದವರ ಕೈಯಲ್ಲಿ ಬರೆಸಿದರೆ ನಿಷ್ಫಲ.

ರೇಶ್ಮೆ ಬಟ್ಟೆ,ಹುಲಿ ಇಲ್ಲವೆ ಜಿಂಕೆ ಚರ್ಮ, ಹತ್ತಿ ಬಟ್ಟೆ, ಮರ, ತಾಳೆಗರಿ ಕಂಬಳಿ, ಚಿನ್ನ, ಬೆಳ್ಳಿ, ತಾಮ್ರ, ಒಣಗಿದ ಗೋಮಯ, ಎಕ್ಕದ ಮರಗಳಿಂದ ಆಸನವನ್ನು ಮಾಡಿಕೊಳ್ಳಬೇಕು. ಅದರ ಮೇಲೆ ದರ್ಭೆ ಭಸ್ಮಗಳನ್ನು ಹಾಕಿ ಪದ್ಮಾಸನ ಇಲ್ಲವೆ ಸ್ವಸ್ತಿಕಾಸನದಲ್ಲಿ ಕುಳಿತು ಪ್ರಾಣಾಯಾಮ ಮಾಡಬೇಕು. ಹೃದಯಾಕಾಶದಲ್ಲಿರುವ ಸೂಕ್ಷ್ಮರೂಪಿನ ಶಿವನನ್ನು ಧ್ಯಾನಿಸಿ ಅವನು ಶರೀರವನ್ನೆಲ್ಲ ವ್ಯಾಪಿಸುವನೆಂದು ಚಿಂತಿಸಿದರೆ ದೇಹಶುದ್ಧಿಯಾಗುವುದು.

ಚಿನ್ನ ಪಾದರಸಗಳ ಮಿಶ್ರಣದಿಂದ ಬಿಳಿ ಕೆಂಪು ಬಣ್ಣ ಹನ್ನೆರಡು ಎಂಟು ಐದು ಅಥವಾ ಮೂರು ದಳಗಳುಳ್ಳ ಆಸನವನ್ನು ನಿರ್ಮಿಸಿ ಲಿಂಗವನ್ನಿಟ್ಟು ಅದರಲ್ಲಿ ಹೃದಯವಾಸಿಯಾದ ಶಿವನನ್ನಾವಾಹಿಸಬೇಕು. ಶುದ್ಧವಾದ ಕಲಶದಲ್ಲಿ ಶುದ್ಧವಾದ ನೀರು ತುಂಬಿ ಗಂಧ ಪುಷ್ಪಗಳನ್ನು ಹಾಕಿ ಪ್ರಣವದಿಂದ ಅಭಿಮಂತ್ರಿಸಬೇಕು.

ಪ್ರಾಣಾಯಾಮ ಮತ್ತು ಪ್ರಣವೋಚ್ಚಾರಣಗಳನ್ನು ಅನರ್ಹರು ಮಾಡಕೂಡದು. ಪ್ರಾಣಾಯಾಮದ ಬದಲಿಗೆ ಬರಿ ಶಿವಧ್ಯಾನವನ್ನೂ ಪ್ರಣವೋಚ್ಚಾರಣದ ಬದಲಿಗೆ ಶಿವ ಎಂಬ ನಾಮೋಚ್ಚಾರಣೆಯನ್ನೂ ಅವರು ಮಾಡಬೇಕು.

ಬಳಿಕ ಶಿವನ ಪ್ರೀತಿಗಾಗಿ ಶಿವಪೂಜೆ ಮಾಡುವೆನೆಂದು ಸಂಕಲ್ಪಿಸಬೇಕು. ಅರ್ಘ್ಯಪಾದ್ಯಾದಿಗಳನ್ನಿತ್ತು ನಮಸ್ತೇ ರುದ್ರ ಎಂಬ ಮಂತ್ರದಿಂದ ಶಿವಕಲ್ಪೋಕ್ತ ಮಂತ್ರದಿಂದ ಅಥವಾ ಪ್ರಣವದಿಂದ ಅಭಿಷೇಕ ಮಾಡಬೇಕು. ಲಿಂಗದ ಮೇಲೆ ಒಂದೇಸಮನಾಗಿ ತಡೆ ಇಲ್ಲದೆ ಬೀಳುವ ಜಲಧಾರೆಗೆ ಮುಕ್ತಿಧಾರೆಯನ್ನುವರು. ಆ ಮುಕ್ತಿಧಾರೆಯನ್ನು ಸುರಿಸುತ್ತ ದಿನಕ್ಕೆ ಒಂದರಿಂದ ಹನ್ನೊಂದು ಬಾರಿಯಂತೆ ಒಂದು ತಿಂಗಳಕಾಲ ಅಭಿಷೇಕ ಮಾಡಿದರೆ ಅದು ಮುಕ್ತಿಸ್ನಾನವೆನಿಸುತ್ತದೆ. ಅದರಿಂದ ಮುಕ್ತಿ ದೊರೆಯುವುದು. ಮಣ್ಣಿನಪಾತ್ರೆ, ತೆಂಗಿನಕಾಯಿಯ ಕರಟ, ಕಂಚಿನ ಪಾತ್ರೆ, ಮುತ್ತಿನ ಚಿಪ್ಪು, ಹೂಮಾಲೆ, ಗವಯದ ಕೊಂಬು ಇವುಗಳಿಂದ ಅಭಿಷೇಕ ಮಾಡಬಹುದು.

ಬಳಿಕ ಪಂಚಗವ್ಯ ಪಂಚಾಮೃತ ಮಧುರತ್ರಯಗಳಿಂದ ಅಭಿಷೇಕಮಾಡಿ ಅಲಂಕಾರಗಳನ್ನು ತೊಡಿಸಬೇಕು. ತಿರುಗಿ ಅಭಿಷೇಕ ಮಾಡಬೇಕು. ಬಳಿಕ ಆಚಮನ, ವಸ್ತ್ರ, ಉಪವೀತ, ಪಂಚಗಂಧಗಳನ್ನೂ ಪುಷ್ಪಪತ್ರಗಳನ್ನೂ ಕಪಿಲೆಯ ತುಪ್ಪದಿಂದ ಧೂಪದೀಪಗಳನ್ನೂ ಅರ್ಪಿಸಬೇಕು. ನೈವೇದ್ಯ, ಮುಖಶುದ್ಧಿ, ತಾಂಬೂಲ ಪ್ರದಕ್ಷಿಣ ನಮಸ್ಕಾರಗಳನ್ನೂ ಸಲ್ಲಿಸಬೇಕು.

ಗೀತ ವಾದ್ಯ ಪುರಾಣ ನೃತ್ಯ ಹಾಸ್ಯೋಕ್ತಿಗಳು ಐದು ಗೀತ್ಯಂಗಗಳು. ನೀರಾಜನ, ಪುಷ್ಪಾಂಜಲಿ, ಪೂರ್ಣಫಲಾರ್ಪಣೆ, ಕ್ಷಮಾಪ್ರಾರ್ಥನೆ ಉದ್ವಾಸನಗಳು ಇವು ಐದು ಕೀರ್ತ್ಯುಪಚಾರಗಳು, ಭೂಷಣ ಛತ್ರ, ಚಾಮರ ವ್ಯಜನ ಶಿವೋಪವೀತ ಕೈಂಕರ್ಯ ಇವು ಆರು ಈಶಾನೋಪಚಾರಗಳು. ಮೂವತ್ತೆರಡು ಉಪಚಾರಗಳ ಪೂಜೆಯೆ ಅತ್ಯಂತ ಉತ್ತಮ. ಒಂದು ದಿನ ಆ ಪೂಜೆ ಮಾಡಿದರೂ ಎಲ್ಲ ಪಾಪಗಳೂ ಪರಿಹಾರವಾಗುತ್ತವೆ.

**ಶಿವ :-** ಕಪಿಶ್ರೇಷ್ಠನೆ, ನೀನು ಹೇಳುವ ಪೂಜಾ ವಿಧಾನ ಸರಿಯಾಗೇ ಇದೆ. ಹಾಗೇ ಮಾಡು. ಮೊದಲಿಗೆ ನನ್ನ ಪಾದಗಳನ್ನು ಪೂಜಿಸು. ಬಳಿಕ ಲಿಂಗ ಪೂಜೆ ಮಾಡುವೆಯಂತೆ.

**ಹನುಮಂತ :-** ನನಗೆ ಗುರುಗಳು ಲಿಂಗಪೂಜೆಯನ್ನೆ ನಿಯಮ ಪೂರ್ವಕ ಮಾಡಲು ಉಪದೇಶಿಸಿದ್ದಾರೆ. ಅದನ್ನೆ ಮೊದಲಿಗೆ ಮಾಡುತ್ತೇನೆ. ಬಳಿಕ ನಿನ್ನ ಪಾದಗಳ ಪೂಜೆ.

ಹೀಗೆ ಹೇಳಿ ನಮಸ್ಕರಿಸಿ ಹನುಮಂತನು ಸರೋವರದ ಬಳಿಗೆಹೋಗಿ ಮರಳಿನಿಂದ ಒಂದು ವೇದಿಕೆಯನ್ನು ನಿರ್ಮಿಸಿದ. ತಾಳೆಗರಿಯ ಆಸನವನ್ನೂ ನಿರ್ಮಿಸಿದ. ಕೈಕಾಲು ತೊಳೆದು ಆಚಮನ, ಭಸ್ಮಸ್ನಾನ, ಪುನರಾಚಮನಗಳನ್ನು ಮುಗಿಸಿದ. ವೇದಿಕೆಯಲ್ಲಿ ಕಮಲದ ಹೂಗಳನ್ನು ಚಿತ್ರಿಸಿ ತಾಳೆಗರಿಯ ಆಸನದ ಮೇಲೆ ಪದ್ಮಾಸನದಲ್ಲಿ ಕುಳಿತ. ಪ್ರಾಣಾಯಾಮ ನ್ಯಾಸ ಶುಕ್ಲಧ್ಯಾನ ಗುರುವಂದನೆ ಜಪಗಳನ್ನೂ ಮಾಡಿದ. ಆವಾಹನ ಮುಂತಾದ ಉಪಚಾರಗಳನ್ನು ಸಲ್ಲಿಸಿ ಅಭಿಷೇಕಕ್ಕಾಗಿ ಲಿಂಗವನ್ನೆತ್ತಿ ನೋಡಿದಾಗ ಅದಕ್ಕೆ ಪೀಠವಿರಲಿಲ್ಲ. ಅವನು ಭಯದಿಂದ 'ನಾನೇನು ಪಾಪಮಾಡಿದನೊ! ಪೀಠಸಿಗದೆ ಇದ್ದರೆ ನಾನು ಪ್ರಾಣತ್ಯಾಗ ಮಾಡಬೇಕಾಗುವುದು. ಈಗ ರುದ್ರಜಪ ಮಾಡುವೆನು. ಅವನು ಬರಲಿ' ಹೀಗೆಂದುಕೊಳ್ಳುತ್ತ ಶತರುದ್ರಿಯವನ್ನು ಜಪಿಸಿದ. ಶಿವನು ಬರಲಿಲ್ಲ. ಕೈಯಲ್ಲಿದ್ದ ಲಿಂಗವನ್ನು ನೆಲಕ್ಕೆ ಕೆಡವಿದ ಹನುಮಂತ. ಒಡನೆ ವೀರಭದ್ರನು ಬಂದು 'ಭಕ್ತನೆ ಏಕೆ ಅಳುವೆ ?' ಎಂದಾಗ ಲಿಂಗಕ್ಕೆ ಪೀಠವಿಲ್ಲ. ನನ್ನ ಪಾಪವೆಷ್ಟಿದೆಯೊ!' ಎಂದ.

'ಲಿಂಗ ಪೀಠ ಬರದಿದ್ದರೆ ನೀನೇನೂ ಸಾಹಸಕ್ಕೆ ಹೋಗಬೇಡ. ನಾನು ಲೋಕವನ್ನು ದಹಿಸುತ್ತೇನೆ.' ಎನ್ನುತ್ತ ವೀರಭದ್ರನು ನೆಲಕ್ಕೆ ಬೆಂಕಿಯನ್ನೆಸೆದ.

ಒಂದು ಕ್ಷಣದಲ್ಲಿ ಭೂಮಿಸುಟ್ಟು ಹೋಯಿತು. ಕೆಳಗಿನ ಏಳುಲೋಕಗಳನ್ನೂ ಮೇಲಿನ ಐದು ಲೋಕಗಳನ್ನೂ ಸುಟ್ಟು ಜನೋಲೋಕಕ್ಕು ಬೆಂಕಿ ವ್ಯಾಪಿಸಿತು. ಒಡನೆ ವೀರಭದ್ರನು ಆ ಬೆಂಕಿಯನ್ನು ಸೆಳೆದು ನಿಂಬೆಹಣ್ಣಿನ ಗಾತ್ರ ಮಾಡಿ ಕೈಯಲ್ಲಿಟ್ಟುಕೊಂಡನು. ಇನ್ನೂ ಪೀಠವು ಬರದಿದ್ದರೆ ಎಲ್ಲ ಲೋಕಗಳನ್ನೂ ಸುಡುವೆನೆಂದನು. ಆಗ ಸನಕಾದಿಗಳು ಯೋಗ ದೃಷ್ಟಿಯಿಂದ ಶಿವನು ಗೌತಮಾಶ್ರಮಕ್ಕೆ ಬಂದಿರುವುದನ್ನು ತಿಳಿದು ಅವನ ಬಳಿಗೆ ಬಂದು ಸ್ತೋತ್ರ ಮಾಡಿದರು.

'ದೇವ ದೇವ, ಅಚಿಂತ್ಯರೂಪ, ವೇದ ವೇದ್ಯ, ಸರ್ಪಯಜ್ಞೋಪವೀತ. ಪೃಥಿವಿ ಅಪ ತೇಜ ವಾಯು ಆಕಾಶ ಚಂದ್ರ ಸೂರ್ಯ ಆತ್ಮ ಎಂಬ ಅಷ್ಟಮೂರ್ತಿಗಳುಳ್ಳವನೆ ನಿನಗೆ ನಮಸ್ಕಾರ. ಹನ್ನೆರಡು ಲೋಕಗಳು ಭಸ್ಮವಾಗಿವೆ. ಈ ಗೌತಮಾಶ್ರಮ ಒಂದು ಮಾತ್ರ ಉಳಿದಿದೆ. ನೋಡು ಲೋಕ ಕ್ಷಯವನ್ನು' ಎಂದರು. 'ಮೇಲಿನ ಲೋಕಗಳೂ ಉರಿದುಹೋದುವೆ ? ಬೆಂಕಿಯ ಕೆಂಡಗಳು ಸುರಿಯುತ್ತಿಲ್ಲ. ಉರಿಯುವ ಧ್ವನಿಯೂ ಕೇಳಲಿಲ್ಲ' ಎನ್ನುತ್ತಾನೆ ಶಿವ. 'ವೀರಭದ್ರನು ಆ ಕೆಂಡಗಳನ್ನೂ ನುಂಗುತ್ತಿದ್ದಾನೆ. ಅವನಿಂದಲೆ ಈ ಭಯ ಉಂಟಾಗಿದೆ.' ಋಷಿಗಳು ದೂರಿತ್ತರು.

ಶಿವನು ವೀರಭದ್ರನನ್ನು ಕರೆದು ಕೇಳಿದಾಗ ಅವನೆಂದ. 'ಹನುಮಂತನ ಲಿಂಗ ಪೀಠ ಕಳೆದು ಹೋಗಿದೆ. ಅದರಿಂದ ಹೀಗೆ ಮಾಡಬೇಕಾಯಿತು.' ಆಗ ಶಿವನು 'ಹನುಮಂತನ ಮನಸ್ಸನ್ನರಿಯಲು ನಾನು ಹಾಗೆ ಮಾಡಿದೆನಷ್ಟೆ.' ಎನ್ನುತ್ತ ಲೋಕಗಳನ್ನೆಲ್ಲ ಮೊದಲಿನಂತಾಗಿಸಿದ. ವೀರಭದ್ರನನ್ನಾಲಿಂಗಿಸಿ ನೆತ್ತಿಯನ್ನು ಆಘ್ರಾಣಿಸಿದ. ತಾಂಬೂಲವನ್ನಿತ್ತ.

ಹನುಮಂತನು ಶಿವ ಪೂಜೆಮಾಡಿ ಒಬ್ಬ ವನಚರನಾದ ಗಂಧರ್ವನ ಕೈಯಿಂದ ದೊಡ್ಡ ವೀಣೆಯೊಂದನ್ನು ಸೆಳೆದುಕೊಂಡು ಹಾಡುತ್ತ ಶಿವನ ಬಳಿಗೆ ನಡೆದ. ಗುಳ್ಳದ ಹೂಗಳಿಂದ ಶಿವನ ಪಾದಗಳನ್ನು ಪೂಜಿಸಿದ. ಶಿವನು ಅವನಿಗೆ ಕಲ್ಪದ ಕೊನೆಯವರೆಗೂ ಬಾಳುತ್ತಿರುವ ವರವನ್ನೂ ಸಮುದ್ರವನ್ನು ಹಾರಬಲ್ಲ ಶಕ್ತಿಯನ್ನೂ ಕೊಟ್ಟ.

ವೀರಭದ್ರನು ಎಲ್ಲ ದೇವತೆಗಳಿಗೂ ಬಹುಮಾನ ಕೊಟ್ಟು ಗೌರವಿಸಿದ. ಶಿವನು ಪೀತಾಂಬರವನ್ನು ಹರಿಗೂ ಕೆಂಪು ಬಟ್ಟೆಯನ್ನು ಬ್ರಹ್ಮನಿಗೂ ಕೊಟ್ಟು ಎಲ್ಲ ದೇವತೆಗಳಿಗೂ ಋಷಿಗಳಿಗೂ ರಾಕ್ಷಸರಿಗೂ ಬಟ್ಟೆಗಳನ್ನಿತ್ತನು.

**ಸೂತ :-** ಇದನ್ನು ಕೇಳಿ ಶ್ರೀರಾಮನೂ ಶಂಭು ಮುನಿಗೆ ಬೆಲೆ ಬಾಳುವ ಒಂದು ಜೊತೆ ಬಟ್ಟೆ ಚಿನ್ನದ ಆಭರಣಗಳನ್ನಿತ್ತನು. ಬಳಿಕ ಭೋಜನ ಮಾಡಿ ಮಂತ್ರಿ ಪುರೋಹಿತರೊಡನೆ ಹಾಗೂ ಅನೇಕ ಮುನಿಗಳು ರಾಜರು ಕಪಿಗಳು ಇವರೊಡನೆ ಗೌತಮೀ ತೀರದಲ್ಲಿ ಕುಳಿತು ಶಂಭುವನ್ನು ಕೇಳಿದ.

**ಶ್ರೀರಾಮ :-** ಮುನಿಯೆ ಯಾವ ಯಾವ ಯುಗದಲ್ಲಿ ಯಾವ ಯಾವ ಧರ್ಮಾಚರಣೆಗೆ ಪ್ರಾಶಸ್ತ್ಯವಿದೆ ಎನ್ನುವುದನ್ನು ಹೇಳು.

**ಶಂಭು :- ಧ್ಯಾನಮೇವ ಕೃತೇ ಶ್ರೇಷ್ಠಂ ತ್ರೇತಾಯಾಂ ಯಜ್ಞ ಏವ ಚ**
**ದ್ವಾಪರೇ ಚಾರ್ಚನಂ ತಿಷ್ಯೇ ದಾನಂ ಚ ಹರಿಕೀರ್ತನಂ**

ಕೃತಯುಗದಲ್ಲಿ ಧ್ಯಾನವು ಶ್ರೇಷ್ಠ. ತ್ರೇತಾಯುಗದಲ್ಲಿ ಯಜ್ಞವು ಶ್ರೇಷ್ಠ. ದ್ವಾಪರಯುಗದಲ್ಲಿ ಪೂಜೆ ಶ್ರೇಷ್ಠ. ಕಲಿಯುಗದಲ್ಲಿ ದಾನವೂ ಹರಿಕೀರ್ತನೆಯೂ ಶ್ರೇಷ್ಠ.

ಮೇಲೆ ಹೇಳಿದ ಎಲ್ಲವೂ ಎಲ್ಲ ಯುಗದಲ್ಲಿಯೂ ಶ್ರೇಷ್ಠವೆ. ಧ್ಯಾನವು ಮಾತ್ರ ಕಲಿಯುಗದಲ್ಲಿ ನಡೆಯುವುದಿಲ್ಲ. ಕಲಿಯುಗದ ಜನರ ಮನಸ್ಸು ಅದಕ್ಕೆ ಬೇಕಾಗುವಷ್ಟು ಪಕ್ವವಾಗಿರುವುದಿಲ್ಲ. ಹೆಚ್ಚು ಕಾಲಾವಕಾಶವನ್ನು ಅಪೇಕ್ಷಿಸುವ ವೇದಾಭ್ಯಾಸ, ಪುರಾಣ, ಶ್ರವಣ, ತೀರ್ಥಯಾತ್ರೆ, ಜಪ ಮುಂತಾದುದನ್ನು ಜನರು ಮಾಡಲು ಸಮರ್ಥರಾಗಿಲ್ಲ. ದಾನಕ್ಕೆ ಹೆಚ್ಚು ಕಾಲ ಬೇಕಾಗಿಲ್ಲವಾದ್ದರಿಂದ ಅದು ಕಲಿಯುಗದಲ್ಲಿ ಪ್ರಶಸ್ತ.

ಪುರಾಣಗಳಲ್ಲಿ ವಿಶ್ವಾಸವಿಟ್ಟು ಪುರಾಣ ಹೇಳುವವನನ್ನು ಗುರುವೆಂದೂ ಬ್ರಹ್ಮ ವಿದ್ಯೋಪ ದೇಶಕನೆಂದೂ ತಿಳಿದು ಬಂಧುವಿಗಿಂತ ಹೆಚ್ಚಿನ ಸ್ಥಾನಮಾನ ಕೊಡುವವನ ಎಲ್ಲ ಪಾಪಗಳೂ ನಾಶವಾಗುವುವು. ಕಲಿಯುಗದಲ್ಲಿ ಪುರಾಣವು ಪಾಪನಾಶಕ್ಕೆ ಉತ್ತಮ ಸಾಧನ. ಹಿಂದಿನ ಕಲಿಯುಗದಲ್ಲಿ ಗೌತಮನೆಂಬ ಒಬ್ಬ ಬ್ರಾಹ್ಮಣನಿದ್ದ. ಅವನು ವೇದಾಭ್ಯಾಸವನ್ನು ಬಿಟ್ಟು ಕೃಷಿ ಮಾಡಿ ಶ್ರೀಮಂತನಾದ. ರಾಜನಿಗೆ ಸ್ವಲ್ಪ ಧನಧಾನ್ಯಗಳನ್ನು ಒಪ್ಪಿಸಿ 'ನನಗೆ ಎಲ್ಲಿಯಾದರೊಂದು ಅಧಿಕಾರವನ್ನು ಕೊಡು ಎಂದು ಕೇಳಿಕೊಂಡ, ರಾಜನೆಂದ. 'ಬ್ರಾಹ್ಮಣನಿಗೆ ವೈದಿಕ ಕರ್ಮದಲ್ಲಿಯೆ ಅಧಿಕಾರ. ಬೇರೆ ಅಧಿಕಾರವನ್ನು ಅವನಿಗೆ ಕೊಟ್ಟರೆ ಅವನ ಬ್ರಾಹ್ಮಣ್ಯ ಉಳಿಯುವುದಿಲ್ಲ.' ಗೌತಮನೆಂದ, 'ನೀನು ಹೇಳುತ್ತಿರುವುದು ಬೇರೆಯುಗದ ಧರ್ಮವನ್ನು. ಕಲಿಯುಗದಲ್ಲಿ ಹೀಗಿಲ್ಲ. ಬ್ರಾಹ್ಮಣನು ದರಿದ್ರನಾಗಿದ್ದರೆ ಅಧಿಕಾರವನ್ನು ವಹಿಸಿಕೊಳ್ಳಬಹುದು. ಅದರಲ್ಲಿ ದೋಷವಿಲ್ಲ. ವಾಸ್ತವವಾಗಿ ಕೃಷಿಯು ಶೂದ್ರಧರ್ಮ. ಅದನ್ನು ಬ್ರಾಹ್ಮಣನು ಎಂದೂ

ಪರಿಗ್ರಹಿಸಕೂಡದು. ಅಧಿಕಾರ ಪಾತ್ರ ಧರ್ಮ. ನನಗೆ ಅದು ಬೇಕು. ಕೆಲವು ಗ್ರಾಮಗಳ ಅಧಿಕಾರವನ್ನು ಕೊಡು. ಇಲ್ಲವೆ ಬೇರೆ ಕ್ಷತ್ರಿಯ ಧರ್ಮವನ್ನಾದರೂ ಮಾಡಲು ಅವಕಾಶಕೊಡು. ಬೇರೆ ಧರ್ಮಬೇಡ.'

ರಾಜನು ಗೌತಮನಿಗೆ ಕೆಲವು ಗ್ರಾಮಗಳ ಅಧಿಕಾರವನ್ನು ಕೊಟ್ಟ, ಕ್ರಮೇಣ ಗೌತಮನ ವರ್ತನೆ ಬೇರಾಯಿತು. ಮದ್ಯ, ಮಾಂಸ, ಪರಸ್ತ್ರೀಸಂಗ, ಪರದ್ರವ್ಯಾಪಹಾರ ಜೂಜು ಮುಂತಾದುವನ್ನು ಒಂದೊಂದಾಗಿ ಅಭ್ಯಾಸ ಮಾಡಿಕೊಂಡ. ಶಿವಪೂಜೆ ವಿಷ್ಣು ಪೂಜೆಗಳನ್ನು ಮರೆತ ರಾಜನು ಇದನ್ನು ಕಂಡು ಒಂದುದಿನ ಗೌತಮ, ಇದೇನು, ಬ್ರಾಹ್ಮಣ್ಯವನ್ನೆ ತೊರೆದು ಶೂದ್ರನಾಗಿರುವಿಯಲ್ಲ ? ನಿನ್ನನ್ನು ಅಧಿಕಾರದಿಂದ ತೆಗೆದು ಹಾಕುತ್ತೇನೆ' ಎಂದಾಗ 'ರಾಜನೆ, ನನಗೆ ಬ್ರಾಹ್ಮಣ್ಯವೆ ಬೇಡ. ನಾನು ಶೂದ್ರನಾಗಿಯೆ ಇರುವೆ. ಬ್ರಾಹ್ಮಣರು ನನ್ನೊಡನೆ ಉಣದಿದ್ದರೆ ಒಳ್ಳೆಯದೆ ಆಯಿತು. ನನ್ನನ್ನು ಅಧಿಕಾರದಿಂದ ತೆಗೆಯುವ ಮಾತೆಲ್ಲ ಆಯುಕ್ತವಾಗಿದೆ. ನಾನು ಸಮರ್ಥನಿದ್ದೇನೆ.' ಎಂದ ಗೌತಮ. ಇದನ್ನು ಕೇಳಿ ರಾಜನು ಸುಮ್ಮನಾದ.

ಒಂದು ದಿನ ಗೌತಮನು ಬೀದಿ ಚಾವಡಿಯಲ್ಲಿ ಒಬ್ಬ ಬ್ರಾಹ್ಮಣನು ಪುರಾಣ ಶ್ಲೋಕವನ್ನು ಪಠಿಸುವದನ್ನು ಕೇಳಿದ. 'ನಾರಾಯಣ ಪರಾಯಣರಾದವರು ಪರಾತ್ಪರ ಸ್ಥಾನವನ್ನು ಹೊಂದುವರು. ಮಹೇಶ್ವರನನ್ನು ದ್ವೇಷಿಸುವವರು ಆ ಸ್ಥಾನವನ್ನು ಹೊಂದಲಾರರು.' ಇದನ್ನು ಕೇಳಿ ಪೌರಾಣಿಕನನ್ನು ಕೇಳಿದ 'ನಾರಾಯಣನೆಂದರೆ ಯಾರು ? ಮಹೇಶ್ವರನು ಯಾರು ? ಪರಾಯಣವೆಂದರೇನು ? ಪರಾತ್ಪರತರವೆಂದರೇನು ? ದ್ವೇಷವೆಂದರೇನು ?'

**ಪೌರಾಣಿಕ** :- ಸುಖಮಯವಾದ ಬ್ರಹ್ಮಲೋಕವು ಪರವೆನಿಸಿದೆ. ಅದಕ್ಕಿಂತ ಉತ್ತಮವಾದ ವಿಷ್ಣುಲೋಕವು ಪರಾತ್‌ಪರ. ಅದನ್ನು ನಾರಾಯಣ ಪರಾಯಣರು ಹೊಂದುತ್ತಾರೆ. ನರನಿಂದ ಹುಟ್ಟಿದ ನೀರು ನಾರ. ಅದರಲ್ಲಿರುವವನು ಸಮುದ್ರ ಶಾಯಿಯಾದ ವಿಷ್ಣು, ನಾರಾಯಣನೆನಿಸಿದ್ದಾನೆ. ಅವನ ಪ್ರೀತಿಯ ಉದ್ದೇಶದಿಂದಲೇ ಯಾರ ನಡತೆ ಇರುವುದೋ ಅವರು ಅವನ ಪರಾಯಣರು, ಭಕ್ತರು, ಮಹದಾದಿ ತತ್ವಗಳಿಗೆ ಈಶ್ವರ ಅಂದರೆ ಒಡೆಯನೆ ಪರಮೇಶ್ವರ. ಸೂರ್ಯ ಅಗ್ನಿ ಚಂದ್ರ ಎಂಬ ಮೂರು ಕಣ್ಣುಳ್ಳ ಪಾರ್ವತೀಪತಿಯೇ ಪರಮೇಶ್ವರ. ದ್ವೇಷವೆಂದರೆ ವೈರ.

**ಗೌತಮ** :- ನನಗೆ ಸದ್ಗತಿ ದೊರೆಯಲು ಏನು ಮಾಡಬೇಕು ?

**ಪೌರಾಣಿಕ** :- ಪ್ರಾಯಶ್ಚಿತ್ತ ಮಾಡಿಕೊಳ್ಳು. ಯೋಗ್ಯ ಕಾಲದಲ್ಲಿ ವಿಧಿವತ್ತಾಗಿ ಯಥಾಶಕ್ತಿ ಧರ್ಮಾಚರಣೆ ಮಾಡು. ಆಗ ಪಾಪಗಳನ್ನೆಲ್ಲ ಕಳೆದುಕೊಂಡು ಸದ್ಗತಿ ಪಡೆಯುವೆ. ಅಥವಾ ನಿತ್ಯವೂ ಪುರಾಣ ಶ್ರವಣವನ್ನು ಏಕಾಗ್ರತೆಯಿಂದ ಮಾಡುತ್ತಿರು. ಅಥವಾ ವಿರಾಗಿಯಾಗಿ ಶಿವನನ್ನೊ ವಿಷ್ಣುವನ್ನೊ ಪೂಜಿಸು. ಅಥವಾ ಸನ್ಯಾಸಿಯಾಗಿ ಬ್ರಹ್ಮ ಜ್ಞಾನವನ್ನು ಸಂಪಾದಿಸು. ಅಥವಾ ಕಾಶಿಗೆ ಹೋಗಿ ಅಲ್ಲಿಯೆ ಮರಣಹೊಂದು. ಅಥವಾ ಗಯೆಯಲ್ಲಿ ಶ್ರಾದ್ಧ ಮಾಡು. ಅಥವಾ ರುದ್ರಜಪ ಮಾಡುತ್ತ ಶ್ರೀಶೈಲವನ್ನೊ ಕೇದಾರವನ್ನೊ ಸಂದರ್ಶಿಸು. ಅಥವಾ ಪ್ರತಿವರ್ಷ ಮಾಘಸ್ನಾನಮಾಡು. ಹೆಚ್ಚುಮಾತೇಕೆ? ಧರ್ಮದಲ್ಲಿ ಆಸಕ್ತನಾದರೆ ನಿನಗೆ ನರಕವಾಸ ತಪ್ಪುವುದು.

**ಗೌತಮ** :- ನಿನ್ನಲ್ಲಿ ಪುರಾಣ ಶ್ರವಣಮಾಡಿ ನೀನು ಹೇಳಿದುದನ್ನೆಲ್ಲ ಮಾಡುವೆನು, ವರ್ಜ್ಯ ಮತ್ತು ಅಭೋಜ್ಯ ವಸ್ತುಗಳು ಯಾವುವು, ಹೇಳು.

**ಪೌರಾಣಿಕ** :- ಮಾಂಸ, ಮದ್ಯ, ಪರಸ್ತ್ರೀ, ಜೂಜು, ಆತ್ಮ ಪ್ರಶಂಸೆ, ಕಠಿಣ ಮಾತು, ಸುಳ್ಳು, ಕಪಟ, ಶಿವನಿಂದೆ, ಗುರುನಿಂದೆ, ತಂದೆ-ತಾಯಿಗಳ ವಯೋವೃದ್ಧರ ಪುರಾಣ ಸ್ಮೃತಿಜ್ಞರ ನಿಂದೆಗಳು, ಬಿಳಿ ಬದನೆ, ಸೋರೆ, ಅಣಬೆ, ಶೀಬೆ, ಕುಸುಬೆ, ನಂಗು. ಕುಂಬಳಕಾಯಿ, ಕೋವಿದಾರ, ಮನುಷ್ಯರ ಹಾಲು, ಹೇಸರಕತ್ತೆ ಕತ್ತೆಗಳ ಹಾಲು, ಕರು ಹಾಕಿದ ಹತ್ತು ದಿನಗಳೊಳಗಿನ ಹಸುವಿನ ಹಾಲು, ಕುರಿಯ ಹಾಲು, ಒಂಟೆ ಹಾಲು ಗೊರಸು ಸೀಳದಿರುವ ಪ್ರಾಣಿಗಳ ಹಾಲು, ಜಿಂಕೆ ಆಡುಗಳ ಹಾಲು, ಕರುವಿಲ್ಲದ ಹಸುವಿನ ಹಾಲು, ಕಂಚು ತಾಮ್ರ ಪಾತ್ರೆಗಳಲ್ಲಿಟ್ಟ ಎಳೆ ನೀರು. ಸೀಸ ಪಾತ್ರೆಯಲ್ಲಿಟ್ಟ ಜೇನು, ಗಾಜಿನ ಪಾತ್ರೆಯ ಮಜ್ಜಿಗೆ, ತುಪ್ಪ ಬೆರಸಿದ ಮೊಸರು, ಹುರಿ ಹಿಟ್ಟು. ಇದನ್ನು ಸೇವಿಸಬಾರದು. ಹಾಲಿಗೆ ಉಪ್ಪು ಸೇರಿಸಿ ಕೊಂಡು ಸಿಂಧು ಸೌರಾಷ್ಟ್ರ ಕಾಂಭೋಜ ಮಗಧ ಸಿಂಹಳಗಳಲ್ಲಿ ಸೇವಿಸಬಹುದು. ಬೇರೆ ದೇಶಗಳಲ್ಲಿ ಸೇವಿಸಿದರೆ ಪತಿತರಾಗುತ್ತಾರೆ.

**ಶಂಭು** :- ಪೌರಾಣಿಕನ ಉಪದೇಶದಿಂದ ಎಚ್ಚತ್ತ ಗೌತಮನು ಮನೆಗೆ ಹೋಗಿ ಚಿಂತಿಸತೊಡಗಿದ.

'ನನಗೆ ರಾತ್ರಿ ಮೃತ್ಯುಬರುವುದೆ ? ಹಗಲು ಬರುವುದೆ ? ಎಂದು ತಿಳಿಯೆನು ? ಪರಲೋಕದಲ್ಲಿ ಸುಖವೆ ದುಃಖವೆ ಎಂಬುದೂ ನನಗೆ ತಿಳಿಯದು. ಪ್ರತಿ ಜೀವರಿಗೂ ಸುಖದುಃಖಕಾರಣಗಳು ಬೇರೆ ಬೇರೆ ಯಾಗಿರುತ್ತವೆ. ಪ್ರತಿ ಒಬ್ಬ ಜೀವನೂ ಬೇರೆ ಬೇರೆ ಕಾಲಗಳಲ್ಲಿ ಬೇರೆ ಬೇರೆ ಸ್ಥಿತಿಯಲ್ಲಿರುವನು. ಹುಟ್ಟುವಾಗ ಒಳ್ಳೆಯ ಜ್ಞಾನವಿರುತ್ತದೆ. ಶಿಶುವಾಗಿರುವಾಗ ಅತ್ಯಲ್ಪ. ಕೌಮಾರ ಅವಸ್ಥೆಯಲ್ಲಿ ಆಟದಲ್ಲಿಯೇ ಅತ್ಯಂತ ಆಸಕ್ತಿ. ಯೌವನದಲ್ಲಿ ವಿಷಯ ಲಲಾಸೆ. ಬಳಿಕ ಹಣ ಸಂಪಾದನೆಯಲ್ಲಿ ಆಸಕ್ತಿ. ಮುಪ್ಪಿನಲ್ಲಿ ಭೋಗಿಸುವಾಸೆ ಇದ್ದರೂ ಶಕ್ತಿ ಇರುವದಿಲ್ಲ. ಇಂದ್ರಿಯ ಪಾಟವ ಕಡಿಮೆಯಾಗಿರುತ್ತದೆ. ಊಟ ಮಾಡಲು ಶಕ್ತಿ ಇರುವದಿಲ್ಲ. ಸೊಸೆ ಮುಂತಾದವರು ಬಯ್ಯುತ್ತಾರೆ. ಸಣ್ಣವರು ಹಾಸ್ಯ ಮಾಡುತ್ತಾರೆ. ದೊಡ್ಡವರು ನೋಡಿ ಆಲಕ್ಷ್ಯದಿಂದ ಹೊರಟುಹೋಗುತ್ತಾರೆ. ಇಂಥ ದೈನ್ಯಸ್ಥಿತಿಯಲ್ಲಿ ತಾನಿದ್ದರೂ ಎಲ್ಲರನ್ನೂ ನಿಂದಿಸುತ್ತಾನೆ. ಗೊಣಗುತ್ತಾನೆ. ಬಡಿಸಿದ ಅನ್ನವನ್ನು ನಿಂದಿಸುತ್ತಾನೆ. ಹೀಗೆ ಇದ್ದರೆ ಪರಲೋಕವನ್ನು ಸಾಧಿಸಿಕೊಳ್ಳುವ ಬಗೆ ಹೇಗೆ?

ಮರುದಿನ ಆತ ಪೌರಾಣಿಕನ ಮನೆಗೆ ಬಂದು 'ನಾನೇನು ಪ್ರಾಯಶ್ಚಿತ್ತಮಾಡಿ ಕೊಳ್ಳಲಿ' ಎಂದು ತಲೆತಗ್ಗಿಸಿಕೊಂಡು ಲಜ್ಜೆಯಿಂದ ಕೇಳಿದ. ಪೌರಾಣಿಕನು ಏನೂ ಹೇಳದೆ ಶಿಷ್ಯನಿಂದ ಅವನನ್ನು ಹೊರಗಟ್ಟಿದ. ಆದರೂ ಅವನು ಬಾಗಿಲಲ್ಲಿಯೆ ನಿಂತಿದ್ದು ತಿರುಗಿ ವಿನಯದಿಂದ ಪೌರಾಣಿಕನ ಬಳಿ ನಿಂತ. ಕುಳಿತುಕೊಳ್ಳಲು ಹೇಳಿದರೂ ಕುಳಿತುಕೊಳ್ಳದೆ ಪ್ರಾಯಶ್ಚಿತ್ತವನ್ನು ಉಪದೇಶಿಸಲು ಬೇಡಿಕೊಂಡ. ಪೌರಾಣಿಕನು ಹೇಳಿದ.

**ಪೌರಾಣಿಕ** :- ನೀನು ಮಾಡಿದ ಪಾಪಗಳಾವುವು ಹೇಳು.

**ಗೌತಮ** :- ಸ್ವಾಮಿ, ನಾನು ಮಾಡದ ಪಾಪ ಒಂದೂ ಇಲ್ಲ. ಹೀಗನ್ನುತ್ತ ಅಳುತ್ತ ನೆಲದ ಮೇಲೆ ಬಿದ್ದುಬಿಟ್ಟ.

**ಪೌರಾಣಿಕ** :- ಮಹಾಪಾಪಗಳನ್ನು ಮೂರು ಬಾರಿ ಮಾಡಿದ ಮೇಲೂ ತಿರುಗಿ ಮಾಡಿದರೆ ಪ್ರಾಯಶ್ಚಿತ್ತವಿಲ್ಲ.

**ಗೌತಮ :-** ಸ್ವಾಮಿ, ಏನಾದರೂ ಪ್ರಾಯಶ್ಚಿತ್ತವನ್ನು ಹೇಳಲೇಬೇಕು. ನಿನ್ನಂಥ ಜ್ಞಾನಿಗಳ ಬಳಿಗೆ ಬಂದರೆ ಅದು ವಿಫಲವಾಗುವುದುಂಟೆ ?

**ಪೌರಾಣಿಕ :-** ಪ್ರಾಯಶ್ಚಿತ್ತವನ್ನು ನಿರ್ಣಯಿಸುವಲ್ಲಿ ಶಾಸ್ತ್ರವೊಂದೆ ಎಲ್ಲರಿಗೂ ಆಧಾರ. ಅದಕ್ಕೆ ವಿರುದ್ಧವಾಗಿ ಪ್ರಾಯಶ್ಚಿತ್ತವನ್ನು ಹೇಳಿದರೆ ಅದು ಪ್ರಾಯಶ್ಚಿತ್ತವೆ ಆಗುವದಿಲ್ಲ. ಒಮ್ಮೆ ಪಾಪಮಾಡಿದರೆ ಪ್ರಾಯಶ್ಚಿತ್ತ. ಎರಡನೇಬಾರಿ ಮಾಡಿದರೆ ಮೊದಲಿಗಿಂತ ಎರಡರಷ್ಟು ಪ್ರಾಯಶ್ಚಿತ್ತ. ಮೂರನೆ ಬಾರಿ ಮಾಡಿದರೆ ಮೂರರಷ್ಟು ಪ್ರಾಯಶ್ಚಿತ್ತ. ನಾಕನೆ ಬಾರಿಯೂ ಮಾಡಿದರೆ ಅದಕ್ಕೆ ಪ್ರಾಯಶ್ಚಿತ್ತವೆ ಇಲ್ಲ. ನೀನು ಅಂಥ ಪಾಪಗಳನ್ನು ಅನೇಕ ಬಾರಿ ಇಷ್ಟ ಬಂದಂತೆ ಮಾಡಿದವನು ನಿನಗೇನು ಪಾಯಶ್ಚಿತ್ತ ಹೇಳಲಿ ?

**ಗೌತಮ :-** ಹಾಗಾದರೆ ನಾನೆಲ್ಲಿಗೆ ಹೋಗಲಿ ?

ಪೌರಾಣಿಕನು ಏನೂ ಹೇಳದೆ ಸುಮ್ಮನಿದ್ದನು. ಬಳಿಕ ಗೌತಮನು ತಾನೆ ಶ್ರೀ ಶೈಲಕ್ಕೆ ಹೋಗಿ ನದಿಯಲ್ಲಿ ಸ್ನಾನಮಾಡಿ ಮಲ್ಲಿಕಾರ್ಜುನನ್ನು ದರ್ಶನಮಾಡಿದ. ಮೂರುದಿನ ಉಪವಾಸವಿದ್ದು ನಾಲ್ಕನೆ ದಿನವೂ ಶಿವರಾತ್ರಿಯಾಗಿದ್ದುದರಿಂದ ಉಪವಾಸವನ್ನೇ ಕಷ್ಟದಿಂದ ಮಾಡಿದ. ಅಮಾವಾಸ್ಯೆ ದಿನ ಹಣ್ಣಿನ ಸಿಪ್ಪೆಗಳಿಂದ ಪಾರಣಮಾಡಿ ಶ್ರೀ ಶೈಲಕ್ಕೆ ಪ್ರದಕ್ಷಿಣೆ ಬಂದು ಮನೆಗೆ ಹಿಂತಿರುಗಿದನು.

'ನಾನು ಸುಮ್ಮನೆ ಕುಳಿತರೆ ಪಾಪ ನಿವೃತ್ತಿ ಹೇಗಾದೀತು ? ಪಾಪಗಳೇನೊ ಮಹತ್ತಾಗಿವೆ. ಅನಂತವಾಗಿವೆ. ಆದರೂ ವಿಚಾರ ಮಾಡದಿರಲಾಗುತ್ತದೆಯೆ ? ಕೇಳಿದರೆ ಯಾರೂ ಪ್ರಾಯಶ್ಚಿತ್ತವನ್ನು ಹೇಳುವುದಿಲ್ಲ ! ಯಾವುದಾದರೊಂದು ಪುರಾಣವನ್ನು ಶ್ರವಣಮಾಡಿದರೆ ಪಾಪನಿವೃತ್ತಿಗೆ ಒಂದು ದಾರಿ ದೊರಕೀತು' ಎಂದುಕೊಂಡು ಪೌರಾಣಿಕನ ಬಳಿಗೆ ಹೋಗಿ ಹೇಳಿದ.

**ಗೌತಮ :-** ಪೂಜ್ಯನೆ, ಒಂದು ಪುರಾಣವನ್ನು ಹೇಳು. ನಾನು ಕೇಳುತ್ತೇನೆ. ಮೊದಲು ಜಾತಕರ್ಮ ಮುಂತಾದ ಸಂಸ್ಕಾರಗಳನ್ನು ನನಗೆ ಮಾಡಿಸು. ನಾನು ದ್ವಿಜನಾಗಿ ಪುರಾಣ ಶ್ರವಣ ಮಾಡುವೆ. ಬಳಿಕ ಏನಾದರೂ ಪ್ರಾಯಶ್ಚಿತ್ತವನ್ನೂ ಮಾಡುವೆ.

**ಪೌರಾಣಿಕ :-** ಆಗಲಿ ಯಥಾಶಕ್ತಿ ವಿಧಿವತ್ತಾಗಿ ಶುದ್ಧವಾಗಿ ನಿನಗೆ ತಿಳಿಯುವಂತೆ ಪುರಾಣ ಶ್ರವಣ ಮಾಡುವೆ. ಬಳಿಕ ಏನಾದರೂ ಪ್ರಾಯಶ್ಚಿತ್ತವನ್ನೂ ಮಾಡುವೆ.

**ಗೌತಮ :-** ಎಲ್ಲ ಪುರಾಣಗಳು ಇಷ್ಟವೆ. ಆದರೆ ಶಿವವಿಷ್ಣುಗಳಿಗೆ ಭೇದವನ್ನು ಹೇಳದೆ ಪುರಾಣವನ್ನು ಹೇಳು.

**ಪೌರಾಣಿಕ :-** ಕೂರ್ಮಪುರಾಣವು ಶಿವವಿಷ್ಣುಗಳಿಗೆ ಅಭೇದವನ್ನು ಹೇಳುತ್ತದೆ. ಆದರೆ ಶ್ರವಣದಿಂದ ಪಾಪನಿವೃತ್ತಿಯಾಗುತ್ತದೆ. ಆದರೆ ಪುರಾಣ ಹೇಳುವವನಲ್ಲಿ ಭಕ್ತಿ ಇದ್ದರೆ ಮಾತ್ರ ಇದು ಸಾಧ್ಯ. ಆಗ ಧರ್ಮ ಆಚಾರ, ಕರ್ಮಗಳು, ಮೋಕ್ಷ ಇವೆಲ್ಲವುಗಳ ಜ್ಞಾನ ಉಂಟಾಗುತ್ತದೆ. ಶಿವನು ಸಂತುಷ್ಟನಾಗುತ್ತಾನೆ. ವಿಷ್ಣುವು ಅಭೀಷ್ಟಗಳನ್ನೆಲ್ಲ ಕೊಡುತ್ತಾನೆ. ಪಿತೃಗಳೂ ಉದ್ಧೃತರಾಗುತ್ತಾರೆ. ಪರಗತಿಯನ್ನು ಹೊಂದುತ್ತಾರೆ.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಪಾತಾಳಖಂಡದಲ್ಲಿ ಶಿವರಾಘವ ಸಂವಾದದಲ್ಲಿ ಶಿವಪೂಜೆಯ ಮಹಿಮೆವೆಂಬ ಐವತ್ತೊಂದನೆ ಅಧ್ಯಾಯ ಮುಗಿದುದು*

# ಪುರಾಣಶ್ರವಣದ ಫಲ

**ಅಧ್ಯಾಯ - ೫೨**

**ಶ್ರೀರಾಮ ಉವಾಚ**

**ಶ್ರೀರಾಮ** :- ಬ್ರಾಹ್ಮಣಾಧಮನಾದ ಆ ಗೌತಮನಿಗೆ ಪುರಾಣ ಹೇಳಲು ಕುಳಿತರೆ ಅವನ ಸಂಗದಿಂದ ಅವನು ಮಾಡಿದ ಪಾಪವೆಲ್ಲ ಪೌರಾಣಿಕನಲ್ಲಿ ಬಂದು ಸೇರುತ್ತದೆ. ಆಗ ಅವನು ಹೇಗೆ ಪುರಾಣ ಹೇಳಬಲ್ಲನು ?

**ಶಂಭು** :- ಅಧ್ಯಯನ ಅಧ್ಯಾಪನಗಳಲ್ಲಿ ಇಬ್ಬರು ಒಟ್ಟಿಗೆ ಸೇರುವುದು ಅನಿವಾರ್ಯ. ಹೀಗೆ ಒಂದು ವರ್ಷಕಾಲ ಇಬ್ಬರೂ ಸೇರಿದರೆ ಪಾಪಿಯ ಪಾಪವೆಲ್ಲ ಗುರುವಾದ ಪೌರಾಣಿಕನಲ್ಲಿ ಬಂದು ಸೇರುತ್ತದೆ. ಆದರೇನು ? ಅವನು ತತ್ವಜ್ಞಾನಿಯಾದ್ದರಿಂದ ಅವನಲ್ಲಿ ಬಂದು ಸೇರಿದ ಪಾಪಗಳು ಅವನನ್ನು ಬಾಧಿಸಲಾರವು. ತಾವೆ ನಾಶಹೊಂದುವವು. ಮರಗಳ ರಾಶಿಯು ದೊಡ್ಡ ಬೆಂಕಿಯನ್ನು ನಾಶಮಾಡಲಾರದು. ದೀಪದ ಹುಳು ದೀಪವನ್ನು ನಾಶಮಾಡಿದರೂ ಬೆಂಕಿಯನ್ನು ನಾಶಮಾಡಲಾರದು. ಭೂತ ಪ್ರೇತಗಳ ಬಾಧೆಯನ್ನು ಕಳೆಯಬಲ್ಲ ಮಂತ್ರವಾದಿ ತಾನು ಆ ಬಾಧೆಗೆ ಒಳಗಾಗುವುದಿಲ್ಲ. ಹಾಗೆ ಪೌರಾಣಿಕನು ಇತರರ ಪಾಪಗಳನ್ನು ಕಳೆದರೂ ಆ ಪಾಪದಿಂದ ತಾನು ಬಾಧೆ ಪಡುವುದಿಲ್ಲ.

ಪುರಾಣ ಹೇಳುವವನು ಶಿವನಲ್ಲಿಯೂ ವಿಷ್ಣುವಿನಲ್ಲಿಯೂ ಭಕ್ತಿ ಉಳ್ಳವನಾಗಿರಬೇಕು. ವಿವೇಕ, ಲೋಕಜ್ಞಾನ, ವೇದಕರ್ಮ ಪರಿಜ್ಞಾನ, ರುದ್ರಜಪ, ಅತ್ಯಾಸೆಗೆ ಬಲಿಬೀಳದಿರುವುದು ತೃಪ್ತಿ. ಶಾಂತಿ, ದಕ್ಷತೆ, ಪ್ರಯತ್ನಶೀಲತೆ ಈ ಎಲ್ಲ ಗುಣಗಳು ಅವನಲ್ಲಿರಬೇಕು. ನಿನ್ನ ಗುರುವಾದ ಪುರಾಣಮೋತ್ತನಾದ ವಸಿಷ್ಠ ಮಹರ್ಷಿಯಂತಿರಬೇಕು.

ಒಮ್ಮೆ ನೀನು ಬೇಟೆಯಾಡಿ ಶ್ರಮದಿಂದ ಮಲಗಿ ನಿದ್ದೆ ಹೋಗಿದ್ದಾಗ ಒಬ್ಬ ರಾಕ್ಷಸನು ಇದೇ ಸರಿಯಾದ ಸಮಯವೆಂದುಕೊಂಡು ನಿನ್ನನ್ನು ಕೊಲ್ಲಲು ಬಂದ. ವಶಿಷ್ಠಮುನಿ ಅವನನ್ನು ಕಂಡು 'ಈತ ಬ್ರಹ್ಮನಿಂದ ವರಪಡೆದು ಅವಧ್ಯನನೆನಿಸಿದ್ದಾನೆ. ಶುಕ್ರಾಚಾರ್ಯರ ಉಪದೇಶದ ಬಲವೂ ಇದೆ. ಮಲಗಿ ನಿದ್ದೆಹೋಗಿರುವ ರಾಮನಿಗೆ ಇವನಿಂದ ಅಪಾಯವಿದೆ.' ಎಂದು ತಿಳಿದು ಸೇನೆಯೊಡನೆ ಆ ರಾಕ್ಷಸನ ಮುಂದೆ. ತಾನೆ ಯುದ್ಧಕ್ಕೆ ನಿಂತ. ರಾಕ್ಷಸನ ರೂಪವನ್ನೇ ತಾಳಿ 'ಮುನಿಗಳು ವಾಸಿಸುವ ಆ ಅರಣ್ಯಕ್ಕೆ ನೀನೇಕೆ ಬಂದೆ ? ಎಂದ.

**ರಾಕ್ಷಸ** :- ಈ ರಾಜನು ರಾಕ್ಷಸರ ಕುಲಕ್ಕೆ ವೈರಿ. ಅವನನ್ನು ಕೊಲ್ಲಲು ಬಂದಿದ್ದೇನೆ.

**ವಸಿಷ್ಠ** :- ಅವನು ಬದುಕಿದರೂ ಸತ್ತರೂ ನಿನಗೇನೂ ಪ್ರಯೋಜನವಿಲ್ಲ. ನನ್ನೊಡನೆ ಯುದ್ಧಮಾಡು. ಗೆದ್ದು ನನ್ನ ಮಾಂಸವನ್ನು ತಿನ್ನು.

**ರಾಕ್ಷಸ** :- ನೀನೂ ರಾಕ್ಷಸನೇ ತಾನೆ ! ನಿನ್ನನ್ನು ತಿನ್ನಲಾಗುವುದಿಲ್ಲ.

ಇದನ್ನು ಕೇಳಿ ವಶಿಷ್ಠನು ಮನುಷ್ಯರೂಪವನ್ನೆ ತಳೆದ. ಅಂತರಿಕ್ಷಕ್ಕೆ ಹಾರಿ ಅಲ್ಲಿಂದ ರಾಕ್ಷಸನ ತಲೆಗೆ ಉಗಿದು ಮುಷ್ಟಿಯಿಂದ ಹೊಡೆದ. ಏಟು ತಿಂದ ಅವನು ಮುನಿಯನ್ನು ಓಡಿಸಿಕೊಂಡು ಬಂದ. ಇಬ್ಬರೂ ಸಮುದ್ರಕ್ಕಿಳಿದರು. ಅಲ್ಲಿ ಒಂದು ಗ್ರಹವು ರಾಕ್ಷಸನನ್ನು ಹಿಡಿದುಕೊಂಡಿತು. ಮುನಿಯು ಅಯೋಧ್ಯೆಗೆ ತೆರಳಿದ.

ಪುರಾಣಿಕನು ಹೀಗೆ ಶಿಷ್ಯನಲ್ಲಿ ಮತ್ಸರಿಸದೆ ತನಗೆ ಯುಕ್ತವೆಂದು ತೋರಿದುದನ್ನು ಸಾಧಿಸಿಕೊಳ್ಳಬಲ್ಲವನಾಗಿರಬೇಕು. ಪುರಾಣ ಶ್ರವಣದ ವಿಧಾನವನ್ನು ಹೇಳುತ್ತೇನೆ, ಕೇಳು.

ಶುಕ್ಲಪಕ್ಷದಲ್ಲಿ ಶುದ್ಧವಾದ ತಿಥಿ ವಾರ ನಕ್ಷತ್ರ ಕರಣ ಲಗ್ನಗಳಿರುವಾಗ ಚಂದ್ರಬಲ ತಾರಾಬಲ ಸರಿಯಾಗಿರುವಾಗ ಪ್ರಾತಃಕಾಲ ಪುರಾಣ ಶ್ರವಣ ಪ್ರಾರಂಭಿಸಬೇಕು ಆಗ ಗ್ರಹಗಳು ಮೂಢರಾಗಿರಕೂಡದು. ಬಾಲರಾಗಿರಬಾರದು, ಗುರು ಉಚ್ಚನಾಗಿರಬೇಕು. ಗ್ರಹಣವಿರಕೂಡದು. ಬಳಿಯಲ್ಲಿ ನಾಸ್ತಿಕನು ಕುಳಿತರಕೂಡದು. ಶುದ್ಧವಾದ ಮನೆಯಲ್ಲಿ ಶುದ್ಧವಾದ ವೇದಿಕೆಯ ಮೇಲೆ ಕುಳಿತುಕೊಂಡು ಶ್ರವಣ ಮಾಡಬೇಕು. ಮಠ, ನದೀತೀರ, ದೇವಾಲಯ ಮುಂತಾದ ಪವಿತ್ರ ಸ್ಥಾನಗಳಲ್ಲಿಯೂ ಶ್ರವಣ ಮಾಡಬಹುದು. ಬ್ರಾಹ್ಮಣರನ್ನು ಪುರಾಣಿಕನನ್ನು ನಮಿಸಿ ಅವರಿಗೆ ಉನ್ನತ ಆಸನವನ್ನಿತ್ತು ಪುರಾಣಿಕನಿಗೆ ಉತ್ತಮ ವಸ್ತ್ರ ಆಭರಣ ಪಾತ್ರೆ ಆಸನ ಗಂಧ ಪುಷ್ಪ ಅಕ್ಷತ ತಾಂಬೂಲಗಳನ್ನು ನಿವೇದಿಸಬೇಕು.

**ಶುಕ್ಲಾಂಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಂ**
**ಪ್ರಸನ್ನವದನಂ ಧ್ಯಾಯೇತ್ ಸರ್ವವಿಘ್ನೋಪ ಶಾಂತಯೇ**

ಚಂದ್ರನಂತೆ ಹೊಳೆವ ಚತುರ್ಭುಜನಾದ ಬಿಳಿ ಬಟ್ಟೆಯುಟ್ಟ ಪ್ರಸನ್ನ ಮುಖನಾದ ವಿಷ್ಣುವನ್ನು ಸಕಲ ವಿಘ್ನಗಳ ನಾಶಕ್ಕಾಗಿ ಧ್ಯಾನಿಸಬೇಕು.

ಬಳಿಕ ಸಭಾ ಪೂಜೆ, ಗಣೇಶ ಪ್ರಾರ್ಥನೆ, ಭಾರತಿ ನಮನಗಳನ್ನು ಮಾಡಿ ಪುರಾಣ ಪ್ರವಚನ ಪ್ರಾರಂಭಿಸಬೇಕು. ಮೊದಲನೆ ದಿನ ಮೂರು ಐದು ಅಥವಾ ಹತ್ತು ಶ್ಲೋಕಗಳು. ಮುಂದೆ ಶ್ಲೋಕ ಸಂಖ್ಯೆಯಲ್ಲಿ ಹೆಚ್ಚಿಸಬೇಕು. ಪ್ರತಿದಿನವೂ ಬಿಡದೆ ಅವಿಚ್ಛಿನ್ನವಾಗಿ ಪ್ರವಚನ ಸಾಗುತ್ತಿರಬೇಕು.

ಹೀಗೆ ಪುರಾಣ ಶ್ರವಣ ಮಾಡಿದರೆ ಎಲ್ಲ ಮಹಾಪಾತಕಗಳೂ ಪರಿಹಾರವಾಗುತ್ತದೆ. ಕಲಿಯುಗದಲ್ಲಿ ಬ್ರಾಹ್ಮಣರೆಲ್ಲರೂ ಎಲ್ಲ ತಿಳಿದಿರುವುದಿಲ್ಲ. ಮತ್ತು ಪುರಾಣಗಳ ಅಭಿಪ್ರಾಯವನ್ನು ವೇದವ್ಯಾಸನೊಬ್ಬನೆ ತಿಳಿದಿರುವವನು. ಅವನಿಗಿಂತಲೂ ಬ್ರಹ್ಮನಿಗಿಂತಲೂ ನಾನು ಹೆಚ್ಚು ತಿಳಿದಿದ್ದೇನೆ. ಉಳಿದವರಿಗೆ ಏನೂ ತಿಳಿಯದು. ಆದ್ದರಿಂದ ಪ್ರವಚನದಲ್ಲಿ ಸ್ವಲ್ಪ ವ್ಯತ್ಯಾಸವಾದರೂ ದಾನ ಕರ್ಮದಂತೆ ಫಲ ನೀಡುವುದರಲ್ಲಿ ಸಂಶಯವಿಲ್ಲ. ಕಲಿಯುಗದಲ್ಲಿ ವೇದಾಧ್ಯಯನ ತಪಸ್ಸು ಮಂತ್ರಹೋಮಗಳಿಗಿಂತಲೂ ಪುರಾಣ ಶ್ರವಣವು ಬೇಗನೆ ಫಲಿಸುತ್ತದೆ.

ಪುರಾಣ ಪ್ರವಚನ ಮಾಡಬಲ್ಲವನೆ ನಿಜವಾದ ಗುರು. ಮಂತ್ರವೇದ ಶಾಸ್ತ್ರಗಳನ್ನು ಬಲ್ಲವರು ಎಲ್ಲ ವಿಷಯಗಳಲ್ಲಿಯೂ ಉಪದೇಶ ನೀಡಲು ಸಮರ್ಥರಲ್ಲ. ಅವರು ಪಿಶಾಚಗಳೊ ಬ್ರಹ್ಮರಾಕ್ಷಸರೊ ಆಗುವುದುಂಟು. ಪುರಾಣವನ್ನು ತಿಳಿದವರು ಹಾಗಾಗುವುದಿಲ್ಲ. ಪುರಾಣವನ್ನು ಆದರಿಸದವನು ಎಲ್ಲವನ್ನು ತಿಳಿಯಲಾರ. ಆದ್ದರಿಂದ ಪುರಾಣಜ್ಞನಾದವನೆ ಎಲ್ಲ ಪಾಪಗಳನ್ನು ಪರಿಹರಿಸಬಲ್ಲ. ಅವನನ್ನು ಗೌರವಿಸಿದರೆ ಎಲ್ಲರನ್ನು ಗೌರವಿಸಿದಂತೆ ಅವನಿಗೆ ಏನು ಅಲ್ಪದಾನ ಮಾಡಿದರೂ ಮಹಾ ಫಲ ನೀಡುತ್ತದೆ.

**ಶ್ರೀರಾಮ :-** ಪೌರಾಣಿಕನಿಗೆ ಏನು ದಾನ ಮಾಡಬೇಕು ? ಎಷ್ಟು ? ಎಂಥ ವಸ್ತುಗಳನು ಕೊಡಬೇಕು ? ಎಂಥ ಪುರಾಣವನ್ನು ಬಿಡಬೇಕು ? ಎಂಥ ಪೌರಾಣಿಕವನ್ನು ಬಿಡಬೇಕು ?

**ಶಂಭು :-** ಷಡ್ರಸ್ನಾನ, ಪಾನ, ತುಪ್ಪ ಎಣ್ಣೆಗಳ ಪದಾರ್ಥಗಳು ಮೊದಲಾದವನ್ನು ಪೌರಾಣಿಕನಿಗೆ ಕೊಡಬೇಕು. ಎಲ್ಲ ಉಪಕರಣಗಳಿಂದ ಕೂಡಿದ ಮನೆಯನ್ನು ದಾನಮಾಡಬಹುದು. ಹಣವನ್ನು ಭೂಮಿಯನ್ನು ಕೊಡಬಹುದು. ಪ್ರತಿದಿನ ಹೂ ಹಣ್ಣು ಸುಗಂಧ ದ್ರವ್ಯಗಳನ್ನು ತಾಂಬೂಲವನ್ನು ಕೊಟ್ಟು ಭಕ್ತಿಯಿಂದ ನಮಸ್ಕರಿಸಬೇಕು. ಹಾಗೇ ಏನೂ ಕೊಡದೆ ಪುರಾಣಶ್ರವಣ ಮಾಡಕೂಡದು. ತನ್ನ ಶಕ್ತ್ಯನುಸಾರ ಪೌರಾಣಿಕನನ್ನು ಸತ್ಕರಿಸಿ ಪುರಾಣ ಕೇಳಬೇಕು.

ಪೌರಾಣಿಕನು ಮಹಾಪಾಪಿಯೋ ಮಹಾರೋಗಿಯೋ ಆಗಿರಕೂಡದು. ಅನಾಚಾರಿ. ನಾಸ್ತಿಕ, ಅಂಗವಿಕಲನಾಗಿರಕೂಡದು. ವ್ಯಾಸಾದಿಮುನಿಗಳು ಹೇಳುತ್ತಿದ್ದ ಪ್ರಸಿದ್ಧ ಪುರಾಣಗಳನ್ನೆ ಹೇಳುವವನಾಗಿರಬೇಕು. ಮೂಲವನ್ನೋದಿ ದೇಶಭಾಷೆಯಲ್ಲಿ ಅರ್ಥ ಹೇಳಬೇಕು.

**"ನ ದೇಶ ಭಾಷಾ ರಚಿತಂ ಗ್ರಂಥಂ ಶ್ರುತ್ವಾ ಫಲಂ ಲಭೇತ್"** ದೇಶಭಾಷೆಯಲ್ಲಿಯೆ ರಚಿತವಾದ ಗ್ರಂಥವನ್ನು ಕೇಳಿ ಫಲವಿಲ್ಲ.

ಶ್ರೀರಾಮ, ಗೌತಮನು ಆ ಪುರಾಣಿಕನಿಂದ ಮೊದಲಿಗೆ ಕೂರ್ಮ ಪುರಾಣ ಶ್ರವಣ ಮಾಡಿದ. ಬಳಿಕ ವಸ್ತ್ರಾಭರಣಗಳನ್ನಿತ್ತು ಲಿಂಗ, ವಿಷ್ಣು, ವಾಮನ, ಪದ್ಮ, ಗರುಡ, ಸೌರ, ಬ್ರಹ್ಮ ಪುರಾಣಗಳನ್ನು ಕೇಳಿದ. ರಾಮಾಯಣವನ್ನೂ ಕೇಳಿದ. ತಿರುಗಿ ಕೂರ್ಮ ಪುರಾಣವನ್ನೂ ಕೇಳಿದ. ಶಿವ, ನಾರಾಯಣ ಎಂದು ಜಪಿಸುತ್ತ, ಮರಣ ಹೊಂದಿದ ಮೇಲೆ ಬ್ರಹ್ಮಲೋಕ ವಿಷ್ಣುಲೋಕಗಳಿಗೆ ಹೋಗಿ ಅಲ್ಲಿ ಬ್ರಹ್ಮ ವಿಷ್ಣುಗಳಿಂದ ಪೂಜಿತನಾಗಿ ಶಿವಲೋಕವನ್ನು ಸೇರಿದ. ಸರ್ವವಂದ್ಯನಾದ.

ಭಾರತ ಶ್ರವಣದಲ್ಲಿಯೂ ಹಿಂದೆ ಹೇಳಿದ ನಿಯಮಗಳನ್ನೇ ಅನುಸರಿಸಬೇಕು. ವ್ಯಾಸಮುನಿ ಮೂರು ವರ್ಷಕಾಲ ಬರೆದು ಪೂರ್ತಿಗೊಳಿಸಿದ ಭಾರತವನ್ನು ಪ್ರವಚನ ಮಾಡುವವನು ಸರ್ವವಂದ್ಯನೆನಿಸುತ್ತಾನೆ. ಉತ್ತಮಯೋಗಿಗಳನ್ನು ಹೊರತು ಅವನು ನಮಸ್ಕರಿಸಬಾರದು. ಅವನು ಎಲ್ಲ ಮಾನವರನ್ನು ಪಾಪಮುಕ್ತರನ್ನಾಗಿ ಮಾಡುವನು. ಕನಿಷ್ಠ ಒಂದು ಪರ್ವವನ್ನು ಪ್ರವಚನ ಮಾಡಿದರೂ ಅವನು ಪಾಪಮುಕ್ತನಾಗಿ ಹವ್ಯ ಕವ್ಯಗಳಲ್ಲಿ ಯೋಗ್ಯನಾಗುತ್ತಾನೆ. ಅವನಿಗೆ ನಮಸ್ಕಾರ ಪೂಜೆಗಳನ್ನು ಸಲ್ಲಿಸಬೇಕು. ಅನ್ನದಾನ ಮಾಡಬೇಕು. ಸರ್ವಸ್ವವನ್ನು ನಿವೇದಿಸಬೇಕು. ಆದಿಪರ್ವ ಪ್ರವಚನ ಮುಗಿದೊಡನೆ ಮೂರು ಪಂಚೆಗಳನ್ನೂ ಚಿನ್ನವನ್ನೂ ಕೊಡಬೇಕು. ಸಭಾಪರ್ವದ ಕೊನೆಯಲ್ಲಿ ಎರಡು ಪಂಚೆ ಚಿನ್ನಗಳನ್ನೂ ಕೊಡಬೇಕು. ಅನುಶಾಸನಿಕ ಅರಣ್ಯ ಸ್ವರ್ಗಾರೋಹಣ ಪರ್ವಗಳು ಮುಗಿದಾಗ ಆದಿಪರ್ವದ ಕೊನೆಯಲ್ಲಿ ಕೊಟ್ಟಂತೆ ಕೊಡಬೇಕು. ಕರ್ಣ ಅಶ್ವಮೇಧ ವಿರಾಟ ಶಲ್ಯ ದ್ರೋಣ ಪರ್ವಗಳ ಕೊನೆಯಲ್ಲಿ ಮೂರು ಪಂಚೆಗಳು ಇಲ್ಲವೆ ಎರಡು ಚಿನ್ನದ ನಾಣ್ಯಗಳು ಉಳಿದ ಪರ್ವಗಳ ಕೊನೆಯಲ್ಲಿ ಎರಡೆರಡು ಚಿನ್ನದ ನಾಣ್ಯಗಳು ಹರಿವಂಶದ ಕೊನೆಯಲ್ಲಿ ಮೂರು ಪಂಚೆಗಳು. ಒಂದು ನಿಷ್ಕ. ಸಮಗ್ರ ಭಾರತವನ್ನು ಕೇಳಿದ ಮೇಲೆ ಭೂ ದಾನ ಮಾಡಬೇಕು.

ರಾಮಾಯಣವನ್ನು ಕೇಳುವಾಗ ಪ್ರತಿಕಾಂಡದಲ್ಲಿಯೂ ಗುರುವನ್ನು ಪೂಜಿಸಬೇಕು. ಭೂ ದಾನ ಸುವರ್ಣ ದಾನಗಳನ್ನೂ ಮಾಡಬೇಕು. ಪುರಾಣ ಶ್ರವಣದಿಂದ ಧರ್ಮ ಅರ್ಥಕಾಮ ಮೋಕ್ಷಗಳೆಲ್ಲ ಲಭಿಸುತ್ತವೆ. ಬ್ರಹ್ಮಹತ್ಯೆಯಂಥ ಪಾಪಗಳೂ ತೊಲಗುತ್ತವೆ.

ಇನ್ನೂ ಅನೇಕ ಪುರಾಣಗಳು ಹೇಳುವ ಕೇಳುವವರಿಬ್ಬರನ್ನು ಪಾವನಗೊಳಿಸುತ್ತವೆ. ಅವು ಬ್ರಹ್ಮ, ಪದ್ಮ, ವಿಷ್ಣು, ಶಿವ, ಭಾಗವತ, ಭವಿಷ್ಯ, ನಾರದೀಯ, ಮಾರ್ಕಂಡೇಯ, ಅಗ್ನಿ, ಬ್ರಹ್ಮ ವೈವರ್ತ, ಲಿಂಗ, ವಾಮನ, ಸ್ಕಂದ, ಮತ್ಸ್ಯ, ಕೂರ್ಮ ವರಾಹ, ಗರುಡ, ಬ್ರಹ್ಮಾಂಡ ಎಂಬ ಹದಿನೆಂಟು ಮಹಾಪುರಾಣಗಳು ಮತ್ತು ಸನತ್ಕುಮಾರ, ನರಸಿಂಹ, ಅಂಡ ದೂರ್ವಾಸ, ನಾರದೀಯ, ಕಪಿಲ, ಮಾನವ, ಶುಕ್ರ, ಬ್ರಹ್ಮಾಂಡ, ವರುಣ, ಕಾಳಿಕಾ, ಮಹೇಶ, ಸಾಂಬ, ಸೌರ, ಪಾರಾಶರ, ಮಾರೀಚ, ಭಾರ್ಗವ, ಕೌಮಾರ ಎಂಬ ಹದಿನೆಂಟು ಉಪ ಪುರಾಣಗಳು, ಹದಿನೆಂಟು ಪುರಾಣಗಳ ವ್ಯಾಖ್ಯಾನ ಮಾಡಿದವನು ಮನು.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಪಾತಾಳಖಂಡದಲ್ಲಿ ಶಿವರಾಘವ ಸಂವಾದದಲ್ಲಿ ಪುರಾಣಶ್ರವಣದ ಫಲವೆಂಬ ಐವತ್ತೆರಡನೆ ಅಧ್ಯಾಯ ಮುಗಿದುದು*



## ರಾಮಯಣ ಕಥನ

**ಅಧ್ಯಾಯ - ೫೩**

**ಸೂತ ಉವಾಚ**

**ಸೂತ :-** ರಾಮನು ಶಂಭು ಮುನಿಯನ್ನು ಕುರಿತು, ಈಗ ಸೂರ್ಯಾಸ್ತದ ಸಮಯ. ಹಕ್ಕಿಗಳು ಗೂಡಿಗೆ ಹಿಂತಿರುಗುತ್ತಿವೆ. ಸಂಧ್ಯಾವಂದನೆ ಮಾಡು ಎಂದ. ತಾನೂ ಹಾಹಾ ಹೂಹೂಗಳ ಸಂಗೀತವನ್ನು ಕೇಳುತ್ತ ಸಂಧ್ಯಾವಂದನೆಗೆ ಹೊರಟು ಗೌತಮೀ ನದೀತೀರಕ್ಕೆ ಬಂದ. ಹನುಮಂತನು ಕಾಲುತೊಳೆದ. ಜಾಂಬವಂತನು ಹಸ್ತ ಲಾಘವನ್ನಿತ್ತ. ಬಳಿಕ ರಾಮನು ದರ್ಭೆಯನ್ನು ಹಿಡಿದು ಪಶ್ಚಿಮದಿಕ್ಕಿಗೆ ನಿಂತು ಮೂರು ಅರ್ಘ್ಯಗಳನ್ನು ಕೊಟ್ಟು ಜಪಿಸಿದ. ವರುಣನನ್ನು ಪ್ರಾರ್ಥಿಸಿ ಶಂಭುವನ್ನು ವಶಿಷ್ಠನನ್ನು ನಮಿಸಿದ. ಔಪಾಸನವನ್ನು ಮಾಡಿದ. ಅಷ್ಟರಲ್ಲಿ ಚಂದ್ರೋದಯವಾಗಿತ್ತು. ನಕ್ಷತ್ರಗಳು ಕಾಣುತ್ತಿದ್ದುವು. ರಾಮನು ಸಭಾಭವನವನ್ನು ಪ್ರವೇಶಿಸಿ ಶುಂಭು ಮುನಿಗೆ ಆಸನವನ್ನಿತ್ತು ತಾನು ಸಿಂಹಾಸನವನ್ನೇರಿದ. ಶಂಭು ಆಗ ಹೇಳಿದ, 'ರಾಮ' ನೀನು ಲೋಕವಂದಿತನಾಗಿ ಕುಳಿತಿದ್ದರೂ ನಿನ್ನ ಕಥೆ ಏಕೆ ಇನ್ನೂ ಪ್ರಸಿದ್ಧವಾಗಿಲ್ಲ ?

ರಾಮನು ಈ ಮಾತನ್ನು ಕೇಳಿ 'ಆ ಕಥೆಯನ್ನು ಹೇಳು' ಎಂದ, ಮುನಿ ಹೇಳತೊಡಗಿದ. ಆದರೆ ತನ್ನ ಕಥೆಯನ್ನೆ ವಿಪರೀತವಾಗಿ ಹೇಳುತ್ತಿರುವುದು ರಾಮನಿಗೆ ಆಶ್ಚರ್ಯ ಉಂಟುಮಾಡಿತು. ಕೊನೆಗೆ ಅವನು ಕೇಳಿದ, ನಾನು ಕುಂಭಕರ್ಣನನ್ನು ಮೊದಲು ಕೊಂದೆ. ಬಳಿಕ ರಾವಣನನ್ನು. ಈಗ ಹೇಳಿದ ರಾಮಾಯಣ ಕಥೆ ಎಲ್ಲವೂ ವ್ಯತ್ಯಾಸವಾಗಿದೆ. ಜನರು ಇನ್ನು ರಾಮಾಯಣ ನಡೆದುದೆ ಸುಳ್ಳೆಂದು ಹೇಳಲು ಅವಕಾಶ ಕೊಟ್ಟಂತಾಗಿದೆ. ಇಂಥ ಸುಳ್ಳು ರಾಮಾಯಣವನ್ನು ಆ ಸ್ಥಾನದಲ್ಲಿ ಹೇಳುವ ಬ್ರಾಹ್ಮಣನನ್ನು ನಾನು ದಂಡಿಸಬೇಕೆ ? ಪೂಜಿಸಬೇಕೆ ?

ಜಾಂಬವಂತನು ಆಗ ಶ್ರೀರಾಮನನ್ನು ಸಮಾಧಾನ ಪಡಿಸಿದ. 'ದೇವ, ಇದೂ ನಿನ್ನ ಕಥೆಯೆ, ಕಲ್ಪಿತವಲ್ಲ, ಅದನ್ನು ಇನ್ನೊಮ್ಮೆ ವಿಸ್ತಾರವಾಗಿ ನಾನೆ ಹೇಳುತ್ತೇನೆ, ಕೇಳು. ಹಿಂದಿನ ಕಲ್ಪದಲ್ಲಿ ನಡೆದ ಈ ಕಥೆಯನ್ನು ಬ್ರಹ್ಮನು ನನಗೆ ಹೇಳಿದ್ದನು.

ರಾಮನು 'ಆಗಲಿ ಹೇಳು' ಎಂದನು.

ಜಾಂಬವಂತನು ಹೇಳತೊಡಗಿದ.

**ಜಾಂಬವಂತ :-** ಬ್ರಹ್ಮನಿಗೂ ಶಿವ ಕೇಶವರಿಗೂ ನಮಸ್ಕಾರ. ಹಿಂದಿನ ಕಲ್ಪದಲ್ಲಿ ನಡೆದ ರಾಮಾಯಣವನ್ನು ಹೇಳುತ್ತೇನೆ. ಕೇಳಿದರೆ ಎಲ್ಲ ಜನ್ಮಗಳ ಪಾಪವನ್ನೂ ಪರಿಹರಿಸುತ್ತದೆ.

ದಶರಥನು ಒಮ್ಮೆ ಸುಮನಸವೆಂಬ ನಗರವನ್ನು ಗೆಲ್ಲುವ ಬಯಕೆಯಿಂದ ವಶಿಷ್ಠನಿಗೆ ನಮಸ್ಕರಿಸಿ ಆಶೀರ್ವಾದ ಪಡೆದು ನೂರು ಅಕ್ಷೋಹಿಣಿ ಸೇನೆಯೊಡನೆ ಯುದ್ಧಕ್ಕೆ ಹೊರಟ. ನಗರವನ್ನಾಳುತ್ತಿದ್ದ ಸಾಧ್ಯನೆಂಬ ರಾಜನನ್ನು ಒಂದು ತಿಂಗಳ ಯುದ್ಧದಿಂದ ಸೆರೆಹಿಡಿದ. ಅವನ ಮಗ ಭೂಷಣನು ಒಂದು ಸಣ್ಣ ಸೇನೆಯೊಡನೆ ಬಂದು ಯುದ್ಧಕ್ಕೆ ನಿಂತಾಗ ಮಾತ್ರ ಅವನೊಡನೆ ಯುದ್ಧ ಮಾಡಲು ಇಚ್ಛಿಸಲಿಲ್ಲ. 'ಇವನನ್ನು ನಾನು ಹೇಗೆ ಹೊಡೆಯಲಿ? ಇವನು ಸತ್ತರೆ ಈ ತಂದೆ ತಾಯಿಗಳು, ಎಳೆ ವಯಸ್ಸಿನ ಹೆಂಡತಿ. ಇವರೆಲ್ಲರ ಗತಿ ಏನಾದೀತು ? ಇವನ ಶರೀರದಲ್ಲಿ ಮಡದಿಯ ಆಲಿಂಗನ ಚುಂಬನಗಳ ಕಾಲದಲ್ಲಿ ಮೈಗೊತ್ತಿದ್ದ ಕಮಲದ ಎಸಳುಗಳ ಗುರುತುಗಳು ಈಗಲೂ ಹೂಗಳಂತೆ ಕಾಣುತ್ತಿವೆ. ಎಳೆ ವಯಸ್ಸು, ನೋಡಲು ಸುಂದರನಾಗಿದ್ದಾನೆ. ಪ್ರೀತಿಯನ್ನುಂಟು ಮಾಡುತ್ತಾನೆ. ನನ್ನ ಮಗನೂ ಹೀಗೇ ಇದ್ದ. ಕರಡಿ ಅವನನ್ನು ಕೊಂದರೂ ನನ್ನ ಸ್ಮರಣೆಯಲ್ಲಿ ಸದಾ ಇದ್ದಾನೆ. ಈ ಹುಡುಗನನ್ನು ಉಳಿಸಲು ನನ್ನ ಮನಸ್ಸನ್ನೆ ಅವನು ತಿರುಗಿಸುತ್ತಿದ್ದಾನೆ.'

ಹೀಗೆ ಯೋಚಿಸಿ ದಶರಥನು ಅವನನ್ನೂ ಸೆರೆ ಹಿಡಿದ. ಸಾಧ್ಯನಿಗೆ ತನ್ನ ಮಗನು ಬಳಿಯಲ್ಲೆ ಇದ್ದುದರಿಂದ ಬಂಧನವೂ ಸುಖಕರವೆ ಆಯಿತು. ತಾನು ಸೋತೆನೆಂಬ ಖೇದವನ್ನು ಅವನು ಅಷ್ಟಾಗಿ ಗಣನೆಗೆ ತರಲಿಲ್ಲ. ದಶರಥನು ಒಂದು ತಿಂಗಳ ಕಾಲ ಆ ನಗರದಲ್ಲಿದ್ದು ತಂದೆ ಮಕ್ಕಳ ಅನ್ಯೋನ್ಯ ಪ್ರೀತಿಯನ್ನು ಪ್ರತ್ಯಕ್ಷವಾಗಿ ಕಂಡ. 'ಮಕ್ಕಳನು ಸಾಕುವುದು ಎಷ್ಟು ಆನಂದಕರವೆಂಬುದು ಇವರನ್ನು ಕಂಡರೆ ತಿಳಿಯುತ್ತದೆ. ನಾನು ಎಲ್ಲ ರಾಜ್ಯಗಳನ್ನು ಗೆದ್ದರೂ ಪುತ್ರವಿಯೋಗವನ್ನು ಸ್ಮರಿಸಿಕೊಂಡಾಗ ಎಲ್ಲವೂ ದುಃಖವನ್ನೇ ಉಂಟುಮಾಡುವುದು. ಆದ್ದರಿಂದ ಇಂಥ ಒಬ್ಬ ಮಗನನ್ನು ನಾನು ಪಡೆಯಬೇಕು. ಹೇಗೆ ಎಂದು ಇವನನ್ನೆ ಕೇಳಿ ನೋಡುತ್ತೇನೆ' ಎಂದುಕೊಂಡು ಕೇಳಿದ. ಆಗ ಸಾಧ್ಯನು ಹೇಳಿದ, 'ರಾಜನೆ, ಶಿವ ವಿಷ್ಣುಗಳನ್ನು ಪೂಜಿಸು. ಏಕಾದಶಿ ಉಪವಾಸ ಮಾಡಿದ್ದಾದರೆ ಪ್ರತಿದಿನ ಬ್ರಾಹ್ಮಣರಿಗೆ ಅನ್ನದಾನ ಮಾಡು. ವಿಷ್ಣುವಿಗೆ ಕಪಿಲೆಯ ತುಪ್ಪದಿಂದ ಅಭಿಷೇಕಮಾಡು. ಕಸ್ತೂರಿ ಶ್ರೀಗಂಧ ತುಳಸಿ ಕಮಲ ಮುಂತಾದುವನ್ನರ್ಪಿಸಿ ವಾಸುದೇವ ದ್ವಾದಶಾಕ್ಷರ ಮಂತ್ರ ಪುರುಷ ಸೂಕ್ತ ಅಥವಾ ಕೇವಲ ನಾಮಗಳಿಂದ ಷೋಡಶೋಪಚಾರ ಮಾಡು. ನರ್ತನಮಾಡು. ಕ್ಷಮೆ ಬೇಡು. ಅನೇಕ ವಿಷ್ಣುವ್ರತಗಳನ್ನು ಮಾಡು. ವಿಷ್ಣು ಒಲಿದು ನಿನಗೆ ನೀನು ಬಯಸುವಂಥ ಮಗನನ್ನು ಅನುಗ್ರಹಿಸುತ್ತಾನೆ.'

ದಶರಥನು ಸಾಧ್ಯನನ್ನು ಸುಮನಸ ನಗರದಲ್ಲಿ ಕುಳ್ಳಿರಿಸಿ ಅಯೋಧ್ಯೆಗೆ ಹಿಂತಿರುಗಿ ವಿಷ್ಣುವಿನಾರಾಧನೆಗೆ ತೊಡಗಿದ. ಪುತ್ರಾಕಮೇಷ್ಟಿಯನ್ನೂ ಮಾಡಿದ. ಯಜ್ಞಕುಂಡದಿಂದ ಯಜ್ಞಪುರುಷನು ಶಂಖಚಕ್ರಗದಾಧಾರಿಯಾಗಿ ಮೈದೋರಿ ಬೇಕಾದ ವರವನ್ನು ಕೇಳು ಎಂದ. ಆಗ ದಶರಥನು ಧರ್ಮಿಷ್ಠರೂ ದೀರ್ಘಾಯುಷ್ಯವಂತರೂ

ಲೋಕೋಪಕಾರಕರೂ ಆದ ನಾಲ್ವರು ಮಕ್ಕಳನ್ನು ಬೇಡಿದ. ಆಗ ಕೌಸಲ್ಯೆ, ಸುಮಿತ್ರೆ, ಸುರೂಪಿ, ಸುವೇ, ಎಂಬ ದಶರಥನ ನಾಲ್ವರು ರಾಣಿಯರು ನಮಗೆಲ್ಲರಿಗೂ ಒಬ್ಬೊಬ್ಬರು ಮಕ್ಕಳು ಬೇಕು ಎಂದು ಕೇಳಿಕೊಂಡರು. 'ನೀನೇ ನನ್ನ ಮಗನಾಗಿ ಅವತರಿಸು' ಎಂದಳು ಕೌಸಲ್ಯೆ. ದಶರಥನೂ 'ಅದೂ ನನಗೂ ಇಷ್ಟವಾದುದು. ಹರಿಯೆ ಪ್ರಸನ್ನನಾಗು ಕಮಲಾಪತಿಯೆ, ಶಂಖಚಕ್ರಗದಾಧರ ನಿನಗೆ ನಮಸ್ಕಾರ ಎಂದು ಪ್ರಾರ್ಥಿಸಿದ. ವಿಷ್ಣು ಪ್ರೀತನಾಗಿ 'ಆಗಲಿ ನಾಲ್ಕು ಮಂದಿ ಮಕ್ಕಳು ನಾಲ್ವರು ರಾಣಿಯರಲ್ಲಿ ಹುಟ್ಟುವರು. ನಾನು ಕೌಸಲ್ಯೆಯಲ್ಲಿ ಅವತರಿಸುವೆನು' ಎಂದು ಹೇಳಿ ಯಜ್ಞದ ಹವಿಸ್ಸಿನಲ್ಲಿ ಪ್ರವೇಶಿಸಿದ. ಬಳಿಕ ದಶರಥನು ಹವಿಸ್ಸನ್ನು ನಾಲ್ಕು ಭಾಗ ಮಾಡಿ ನಾಲ್ವರು ರಾಣಿಯರಿಗೆ ಕೊಟ್ಟ. ಅದರ ಫಲವಾಗಿ ಕೌಸಲ್ಯೆಯಲ್ಲಿ ರಾಮ, ಸುಮಿತ್ರೆಯಲ್ಲಿ ಲಕ್ಷ್ಮಣ, ಸುರೂಪೆಯಲ್ಲಿ ಭರತ, ಸುವೇಷಯಲ್ಲಿ ಶತ್ರುಘ್ನ ಹೀಗೆ ನಾಲ್ವರು ಮಕ್ಕಳು ಹುಟ್ಟಿದರು. ಅಂತರಿಕ್ಷದಿಂದ ಹೂಮಳೆಯಾಯಿತು.

ಬ್ರಹ್ಮನು ತಾನೆ ಬಂದು ಮಕ್ಕಳಿಗೆ ಜಾತಕರ್ಮ ಮುಂತಾದುವನ್ನು ಮಾಡಿದ. ಮೂಲೋಕವನ್ನೂ ಆನಂದಗೊಳಿಸುವುದರಿಂದ ರಾಮ. ರೂಪಶೌರ್ಯ ಮುಂತಾದ ಗುಣ ಸಂಪತ್ತಿಗೆ ಯೋಗ್ಯನಾಗಿರುವುದರಿಂದ ಲಕ್ಷ್ಮಣ, ಭೂಮಿಯ ಭಾರವನ್ನು ಕಳೆವವನಾದುದರಿಂದ ಭರತ, ಶತ್ರುಗಳನ್ನು ಕೊಲ್ಲುವವನಾದುದರಿಂದ ಶತ್ರುಘ್ನ ಹೀಗೆ ನಾಮಕರಣಮಾಡಿ ತನ್ನ ಲೋಕಕ್ಕೆ ಹಿಂತಿರುಗಿದ. ಮಕ್ಕಳು ಬೆಳೆದರು. ಕಾಲಿಂದ ಸಂಚರಿಸತೊಡಗಿದರು.

ರಾಮನನ್ನು ಕಂಡೆ ದಶರಥನ ಹೃದಯ ಆನಂದದಿಂದ ಪೂರ್ಣವಾಗುತ್ತಿತ್ತು. ಅವನ ಬಾಲಚಂದ್ರನಂಥ ಹಣೆ, ತೊಂಡೆಹಣ್ಣಿನಂಥ ತುಟಿ, ಎಳ್ಳು ಹೂವಿನಂಥ ಮೂಗು ಕಿವಿಯಲ್ಲಿ ಹೊಳೆವ ಕುಂಡಲ. ಎದೆಯಲ್ಲಿ ಚಲಿಸುವ ಮುತ್ತಿನ ಹಾರ, ಚಿನ್ನದ ತೋಳು ಬಳೆ, ಮಧುರ ಧ್ವನಿ ಉಂಟುಮಾಡುವ ರತ್ನ ಕಂಕಣ, ಉಂಗುರ, ಚಿನ್ನ ರತ್ನಗಳ ಉಡಿದಾರ, ಗೆಜ್ಜೆಯಿಂದ ಶೋಭಿಸುವ ಕಾಲು, ವಜ್ರ ಅಂಕುಶ ಪದ್ಮ ಚಿಹ್ನೆಗಳಿಂದ ಶೋಭಿಸುವ ಪಾದಗಳು, ಸಣ್ಣನಡು, ಆಳವಾದ ಹೊಕ್ಕುಳು. ಇಂದ್ರನೀಲದಂತೆ ಹೊಳೆವ ವಿಶಾಲವಾದ ಎದೆ, ಶಂಖದಂಥ ಕತ್ತು, ಚಂದ್ರನಂಥ ಮುಖ, ಅರ್ಧಚಂದ್ರನಂಥ ಹಣೆ, ಕಪ್ಪಾದ ಕುರುಳು ಕೂದಲು, ಆಟದಿಂದ ಮೈಯೆಲ್ಲ ಅವರಿಸಿದ ಧೂಳು, ಶಿವನಂತೆ ಬೆತ್ತಲೆಯಾದ ಮೈ ಎಲ್ಲವೂ ರಾಜನನ್ನು ಮಾರುಹೋಗುವಂತೆ ಮಾಡಿ ಎತ್ತಿ ಬಿಗಿದಪ್ಪಿ ಮುದ್ದಿಡುವಂತೆ ಮಾಡುತ್ತಿತ್ತು.

ರಾಮನ ಬಾಲಲೀಲೆ ರಾಜನಿಗೆ ಸಂತೋಷ ಉಂಟುಮಾಡುತ್ತಿತ್ತು. ಅವನು ಊಟದ ಸಮಯದಲ್ಲಿ ರತ್ನಖಚಿತವಾದ ಚಿನ್ನದ ತಟ್ಟೆಯಲ್ಲಿ ಹಾಕಿದ ಅನ್ನವನ್ನು ಎಡಗೈಯಿಂದೆತ್ತಿ ರಾಜನ ಮೇಲೆಸೆದುದೂ ಉಂಟು. ಇಂಥ ಲೀಲೆಗಳನ್ನು ರಾಮನು ಅನೇಕ ಬಾರಿ ತೋರಿದ್ದ. ಒಮ್ಮೆ ಅವನು ಆಟ ಆಡುತ್ತಿದ್ದಾಗ ಬಿರುಗಾಳಿಯ ಹೊಡೆತಕ್ಕೆ ಸಿಲುಕಿ ಬಿದ್ದು ಅಳುತ್ತಿದ್ದ. ಆಗ ಒಬ್ಬ ಬ್ರಹ್ಮರಾಕ್ಷಸನು ಅವನನ್ನು ಹಿಡಿದುಕೊಂಡು ಮೂರ್ಛೆಬೀಳುವಂತೆ ಮಾಡಿದ. ಜೊತೆಯ ಹುಡುಗರು ಹೆದರಿ ರಾಜನಲ್ಲಿ ಈ ವೃತ್ತಾಂತವನ್ನು ತಿಳಿಸಿದರು. ರಾಜನು ವಶಿಷ್ಠರನ್ನು ಇದೇನೆಂದು ಕೇಳಿದ. ವಶಿಷ್ಠ ಮುನಿಯು ಭಸ್ಮವನ್ನು ಅಭಿಮಂತ್ರಿಸಿ ಎರಚಿ ಬ್ರಹ್ಮರಾಕ್ಷಸನನ್ನು ಬಿಡಿಸಿದ. ಯಾರು ನೀನೆಂದು ಕೇಳಿದ. 'ನಾನು ಒಬ್ಬ ಬ್ರಾಹ್ಮಣ. ವೇದ ಓದಿದವನೆಂಬ ಅಹಂಕಾರ ನನಗಿತ್ತು.

ಪರರ ಧನವನ್ನೂ ಅಪಹರಿಸಿದ್ದೆ. ಅದರಿಂದ ಬ್ರಹ್ಮ ರಾಕ್ಷಸನಾಗಿದ್ದೇನೆ. ನನಗೇನು ಪ್ರಾಯಶ್ಚಿತ್ತ, ಹೇಳು' ಎಂದ ಬ್ರಹ್ಮರಾಕ್ಷಸ. 'ನಿನಗಿನ್ನೂ ಒಂದು ನೂರು ವರ್ಷಗಳ ಕಾಲ ಈ ಬ್ರಹ್ಮರಾಕ್ಷಸತ್ವವಿರುವುದು. ಅದರಿಂದ ನೀನು ಗಂಗಾಸ್ನಾನ ಮಾಡಬೇಕಾಗುತ್ತದೆ. ಆದರೆ ನಾನೆ ನನ್ನ ಆ ಪುಣ್ಯವನ್ನು ನಿನಗೆ ಕೊಡುತ್ತೇನೆ. ನೀನು ಸ್ವರ್ಗವನ್ನು ಸೇರು' ಹೀಗೆ ಹೇಳಿ ವಸಿಷ್ಠ ಮುನಿ ತನ್ನ ಪುಣ್ಯದಿಂದ ಅವನನ್ನು ಸ್ವರ್ಗಕ್ಕೆ ಕಳಿಸಿದ.

ರಾಮನಿಗೆ ಸರಿಯಾದ ಕಾಲದಲ್ಲಿ ವಶಿಷ್ಠ ಮುನಿ ಉಪನಯನ ಮಾಡಿ ವೇದಂಗ ಪೂರ್ವೋತ್ತರ ಮೀಮಾಂಸಾಶಾಸ್ತ್ರಗಳನ್ನೂ ನೀತಿಶಾಸ್ತ್ರವನ್ನೂ ಉಪದೇಶಿಸಿದ. ಹಾಗೇ ಧನುರ್ವೇದ ಆಯುರ್ವೇದ ಭರತ ಗಾಂಧರ್ವ ವಾಸ್ತುಶಾಸ್ತ್ರ ಯುದ್ಧವಿದ್ಯೆಗಳನ್ನು ಉಪದೇಶಿಸಿದ. ರಾಮನಿಗೆ ವಿವಾಹ ಮಾಡುವ ಇಚ್ಛೆಯಿಂದ ದಶರಥನು ಎಲ್ಲ ದೇಶಗಳ ರಾಜರ ಬಳಿಗೆ ದೂತರನ್ನಿಟ್ಟದ. ಒಬ್ಬ ದೂತನು ಹಿಂತಿರುಗಿ ಬಂದು ಹೇಳಿದ. 'ಪ್ರಭು, ವಿದರ್ಭದೇಶಾಧಿಪತಿ ವಿದೇಹನೆಂಬ ರಾಜನು ತನ್ನ ಮಗಳನ್ನು ರಾಮನಿಗೆ ಕೊಡಬೇಕೆಂದಿದ್ದಾನೆ. ಅವಳು ಹೋಮದಿಂದ ಎದ್ದು ಬಂದವಳು ಲಕ್ಷ್ಮಿಯಂತಿದ್ದು ರಾಮನಿಗೆ ಯೋಗ್ಯಳಾಗಿದ್ದಾಳೆ ಸರ್ವಲಕ್ಷಣ ಸಂಪನ್ನೆಯಾಗಿದ್ದಾಳೆ. ಪ್ರಭುಗಳು ಶೀಘ್ರವಾಗಿ ಹೋಗಬೇಕು.

ದಶರಥನು ವಶಿಷ್ಠ ಮುಂತಾದವರನ್ನು ವಿದರ್ಭಕ್ಕೆ ಕಳಿಸಿದ, ಅವರು ವೈದೇಹಿಯನ್ನು ನೋಡಿ ಲಗ್ನವನ್ನೂ ನಿಶ್ಚಯಿಸಿ ಅಯೋಧ್ಯೆಗೆ ಬಂದರು. ಅವರ ಮಾತಿನಂತೆ ದಶರಥನು ರಾಮನನ್ನು ಕರೆದುಕೊಂಡು ಸಪರಿವಾರನಾಗಿ ಮಿಥಿಲೆಗೆ ಹೋಗಿ ನಗರದ ಹೊರವಲಯದ ಮಾವಿನತೋಟದಲ್ಲಿ ಬೀಡು ಬಿಟ್ಟು ಕುಳಿತ. ಮಿಥಲಾ ಪಟ್ಟಣವನ್ನು ಬಗೆ ಬಗೆಯಿಂದ ಸಿಂಗರಿಸಲಾಗಿತ್ತು. ತೋರಣ ಕಟ್ಟಿದ್ದರು. ಕಲ್ಪವೃಕ್ಷಗಳನ್ನು ನೆಟ್ಟಿದ್ದರು. ಬಾಗಿಲಿಗೆ ಬಾಳೆಯ ಕಂಬಗಳನ್ನು ಕಟ್ಟಿದ್ದರು. ಮಿಥಿಲೆಯು ಸದಾ ಹೀಗೇ ಸುಂದರವಾಗಿದ್ದರೂ ಈಗ ವಿಶೇಷ ಅಲಂಕಾರಗಳನ್ನು ಮಾಡಿದ್ದರು.

ವಿದೇಹ ರಾಜನು ದಶರಥನನ್ನು ಇದಿರು ಗೊಳ್ಳಲು ಮುತ್ತೈದೆಯರ ಕೈಯಲ್ಲಿ ಚಿನ್ನದ ಹರಿವಾಣಗಳಲ್ಲಿ ತುಪ್ಪ ಗುಗ್ಗುಳು ಫಲಗಳು ಮಂಗಳ ದ್ರವ್ಯಗಳು ತೆಗೆಸಿಕೊಂಡು ಮಂಗಳವಾದ್ಯ ವೇದಘೋಷಗಳೊಡನೆ ಬಂದನು. ಪರಸ್ಪರ ಅಕ್ಷತೆಗಳನ್ನೆರಚಿಕೊಂಡು ಇಬ್ಬರೂ ಪುರ ಪ್ರವೇಶಮಾಡಿದರು. ನಗದ ಪಶ್ಚಿಮ ಭಾಗದಲ್ಲಿ ನಿರ್ಮಿಸಿದ್ದ ಒಂದು ಮಂದಿರವನ್ನು ದಶರಥನು ಪ್ರವೇಶಿಸಿದ. ಅವನ ಪರಿವಾರದವರು ಬೇರೆ ಮನೆಗಳನ್ನು ಪ್ರವೇಶಿಸಿದರು. ಅಷ್ಟರಲ್ಲಿ ನಾರದಮುನಿ ಮಿಥಿಲೆಗೆ ಬಂದು ರಾಜನಿಂದ ಸತ್ಕಾರ ಪಡೆದ. ಭೋಜನವಾದ ಬಳಿಕ ಸುಖಾಸೀನನಾದ ಮುನಿಗೆ ರಾಜನು ಪಚ್ಚ ಕರ್ಪೂರ ತಾಂಬೂಲವನ್ನಿತ್ತು ವಿಜ್ಞಾಪಿಸಿಕೊಂಡ, 'ನಾಳೆ ನಡೆಯಲಿರುವ ವಿವಾಹದಲ್ಲಿ ನೀನು ಉಪಸ್ಥಿತನಿದ್ದು ಅದನ್ನು ಮಾಡಿಸಬೇಕು.'

**ನಾರದ** :- ನಾಳೆಯ ನಕ್ಷತ್ರವನ್ನು ಸೂರ್ಯನು ದೃಷ್ಟಿಸುತ್ತಾನೆ. ವಿವಾಹ ಮಾಡಕೂಡದು.

ಜ್ಯೋತಿಷ್ಕನಾದ ವೃದ್ಧಗಾರ್ಗ್ಯನನ್ನು ರಾಜನು ಬರಹೇಳಿಕಳಿಸಿದ.

**ರಾಜ :-** ವಿವಾಹ ಮುಹೂರ್ತವೆಂದು ?

**ಗ್ಯಾರ್ಗ :-** ನಾಳೆ.

**ರಾಜ :-** ನೀವಿಬ್ಬರೂ ಸೇರಿ ನಿಷ್ಕರ್ಷೆ ಮಾಡಿ ಹೇಳಿ.

**ನಾರದ :-** ಗಾರ್ಗ್ಯನೆ, ನೀನೀ ಲಗ್ನವನ್ನು ಹೇಗೆ ಕೊಡುತ್ತಿ ?

**ಗಾರ್ಗ್ಯ :-** ವಿಷ ಘಳಿಗೆಯನ್ನಿಟ್ಟು ಲಗ್ನವನ್ನು ಕೊಡುತ್ತೇನೆ.

**ನಾರದ :-** ಬ್ರಹ್ಮವಚನಗಳನ್ನು ನೀನು ತಿಳಿದಿಲ್ಲವೆ ?

**ಗಾರ್ಗ್ಯ :-** ಬ್ರಹ್ಮ ವಚನಗಳು ಏನು ಹೇಳುತ್ತವೆ ?

**ನಾರದ :-** ಉಲ್ಕೆ, ಬ್ರಹ್ಮದಂಡ, ಮೋಘ, ಕಂಪ ಇವು ಎಲ್ಲ ಕಾರ್ಯಗಳನ್ನೂ ಕೆಡಿಸುವುವು. ದೇವತಾಪ್ರತಿಷ್ಠೆ ಮದುವೆ ಮುಂಜಿ ರಾಜ್ಯಾಭಿಷೇಕಗಳನ್ನು ಹೊರತು ಇತರ ಕಾರ್ಯಗಳಿಗೆ ವಿಷಘಳಿಗೆಯನ್ನು ಬಿಟ್ಟು ಮುಹೂರ್ತ ಹೇಳಬಹುದು. ವಿವಾಹಾದಿಗಳಿಗೆ ಹಾಗೆ ಹೇಳಲಾಗುವುದಿಲ್ಲ. ಉಲ್ಕೆ ಎಂಬ ದೋಷವಿರುವಾಗ ವಿವಾಹಾದಿಗಳನ್ನು ಮಾಡಿದರೆ ಅದು ಕುಲವನ್ನು ಸುಟ್ಟೀತು. ಬ್ರಹ್ಮದಂಡವು ಕುಲವನ್ನು ನಾಶಮಾಡೀತು. ಮೋಘವು ಮರಣಕ್ಕೆ ಕಾರಣವಾಗುತ್ತದೆ. ಕಂಪದಿಂದ ಕಾರ್ಯ ಕೆಡುತ್ತದೆ.

ಇದನ್ನು ಕೇಳಿ ಗಾರ್ಗ್ಯನು ಸುಮ್ಮನಾದ. ಗ್ರಹಗಳಿಗೊಡೆಯನಾದ ಸೂರ್ಯನನ್ನು ಧ್ಯಾನಿಸಿದ. ಅವನು ಬಂದು ಹೇಳಿದ.

**ಸೂರ್ಯ :-** ವಿಷಘಳಿಗೆಯನ್ನು ಬಿಟ್ಟು ವಿವಾಹ ಮಾಡಬಹುದು.

**ನಾರದ :-** ಬ್ರಹ್ಮವಚನಕ್ಕೇನು ಗತಿ ?

**ಸೂರ್ಯ :-** ದೇಶಭೇದದಿಂದ ವ್ಯವಸ್ಥೆ ಉಕ್ತವಾಗಿದೆ. ಈ ದೇಶದಲ್ಲಿ ವಿಷಘಳಿಗೆಯನ್ನು ಬಿಟ್ಟು ವಿವಾಹ ಮಾಡಲು ಅಡ್ಡಿ ಇಲ್ಲ.

ಇದಕ್ಕೆ ನಾರದನು ಒಪ್ಪಿದನು. ರಾಜನೇ ನಾಳೆ ಅಪರಾಹ್ನ ಕಾಲದಲ್ಲಿ ವಿವಾಹ ನಡೆಯುವುದು. ಸ್ವಯಂವರಕ್ಕೆ ಎಲ್ಲ ರಾಜರೂ ಬರಲಿ ಎಲ್ಲರಿಗೂ ದೂತರನ್ನು ಕಳಿಸು. ಎಂದ. ವಿದೇಹ ರಾಜನು ಎಲ್ಲ ರಾಜರುಗಳಿಗೂ ಆಮಂತ್ರಣ ನೀಡಿ ಕರೆಸಿದ. 'ಅವರೆಲ್ಲರನ್ನೂ ಬಿಟ್ಟು ರಾಮನಿಗೆ ವೈದೇಹಿಯನ್ನು ನಾನು ಹೇಗೆ ಕೊಡಲಿ ?' ಎಂಬ ಚಿಂತೆ ರಾಜನ ಮನಸ್ಸಿನಲ್ಲಿ ಮೂಡಿತು. ಅದರಿಂದ ರಾತ್ರಿ ನಿದ್ದೆ ಬರಲಿಲ್ಲ. ಅಡಿಗಡಿಗೆ ನಿಟ್ಟುಸಿರುಬಿಟ್ಟ. ಕೊನೆಗೆ ಮಧ್ಯ ರಾತ್ರಿಯಲ್ಲಿ ಹದಿನಾರು ವರ್ಷ ವಯಸ್ಸಿನ ಶಿವನು ತೊಡೆಯಮೇಲೆ ಕುಳಿತ ಪಾರ್ವತಿಯ ಕೈಯಿಂದ ತಾಂಬೂಲವನ್ನು ಸ್ವೀಕರಿಸುತ್ತ ನಗುತ್ತ ಪ್ರಸನ್ನನಾಗುವದನ್ನು ಧ್ಯಾನಿಸಿದ. ಶತರುದ್ರೀಯವನ್ನು ಜಪಿಸಿ ಆ ಮಂತ್ರದಿಂದಲೆ ಅಗ್ನಿಯಲ್ಲಿ ಆಹುತಿ ಕೊಟ್ಟು ಪುರುಷ ಸೂಕ್ತದಿಂದ ಸ್ತೋತ್ರ ಮಾಡಿದ. ಆಗ ಶಿವನು ಮೈದೋರಿ 'ನಿನಗೇನು ವರ ಬೇಕು, ಹೇಳು' ಎಂದ.

**ವಿದೇಹರಾಜ :-** ನನ್ನ ಮಗಳಾದ ವೈದೇಹಿಯನ್ನು ರಾಮನಿಗೆ ಕೊಡಬೇಕೆಂಬುದು ನನ್ನ ಬಯಕೆ. ಕುಲ ರೂಪ ಬಲ ಉತ್ಸಾಹಗಳಿಂದ ಕೂಡಿದ ಅನೇಕ ರಾಜರು ರಾಕ್ಷಸರು ಮುನಿಗಳು ಮುಂತಾದವರೆಲ್ಲರೂ ಸ್ವಯಂವರದಲ್ಲಿ ಬಂದು ಸೇರಿರುವಾಗ ರಾಮನಿಗಿಂತ ಹೆಚ್ಚು ಬಲಿಷ್ಠನಾದವನು ಯಾರಾದರೂ ನನ್ನ ಮಗಳನ್ನು ಒಯ್ದರೆ ನಾನು ದಶರಥನಿಗೆ

ಕೊಟ್ಟ ಮಾತು ಸುಳ್ಳಾಗುತ್ತದೆ. ಪಾಪ ಬರುತ್ತದೆ.ಅದೂ ಅಲ್ಲದೆ ದಶರಥನು ಇಲ್ಲಿಗೆ ಬಂದವರೆನ್ನೆಲ್ಲ ಯುದ್ಧದಲ್ಲಿ ಸೋಲಿಸಲು ಸಮರ್ಥ. ಅದರಿಂದ ಕ್ಷತ್ರಿಯರ ದೊಡ್ಡ ಯುದ್ಧವೆ ನಡೆದೀತು. ಮೂಲೋಕವನ್ನೇ ಆ ದಶರಥನು ಇದಿರಿಸಬಲ್ಲವನಾಗಿರುವಾಗ ದುರ್ಬಲನಾದ ನನ್ನನ್ನೆ ಏನು ಮಾಡುವನೆಂದು ಹೇಳುವುದು ಕಷ್ಟ. ದೇವ, ನಿನ್ನನ್ನೇ ಮೊರೆಹೊಕ್ಕಿದ್ದೇನೆ. ಈ ವಿವಾಹವು ಚೆನ್ನಾಗಿ ನಡೆಯಬೇಕು. ರಾಮನು ಅಳಿಯನಾಗಬೇಕು. ಇದಕ್ಕೊಂದು ಉಪಾಯವನ್ನು ಹೇಳು.

**ಶಿವ** :- ಆಗಲಿ, ಹಾಗೇ ಮಾಡುತ್ತೇನೆ. ಈ ಅಜಗವ ಧನುಸ್ಸನ್ನು ತೆಗೆದುಕೊಳ್ಳು.

**ವಿದೇಹ** :- ನನಗೇಕೆ ಬಿಲ್ಲು ? ಸ್ವಯಂವರದಲ್ಲಿ ಸೀತೆ ರಾಮನನ್ನು ಸೇರುವಂತೆ ಮಾಡು.

**ಶಿವ** :- ಈ ಬಿಲ್ಲಿಗೆ ಹೆದೆಯೇರಿಸಲು ಯಾರು ಸಮರ್ಥನೊ ಅವನಿಗೆ ಸೀತೆಯನ್ನು ಕೊಡುತ್ತೇನೆ ಎನ್ನು.

ಹೀಗೆ ಹೇಳಿ ಶಿವನು ಅಂತರ್ಧಾನನಾದ. ವಿದೇಹನು ಆ ಬಿಲ್ಲನ್ನು ಎತ್ತಲು ಎಷ್ಟು ಪ್ರಯತ್ನಪಟ್ಟರೂ ಆಗಲಿಲ್ಲ. ಒಂದು ಲಕ್ಷ ಆನೆಗಳ ಬಲವಿದ್ದ ಉಲ್ವಲನು ಸೋದರ ಮಾವನಾದ ಮಾರೀಚನಿಗೆ ನಮಸ್ಕರಿಸಿ ಅಟ್ಟಹಾಸದಿಂದ ನೆಗೆಯುತ್ತ ಬಂದು ಎರಡು ಕೈಗಳಿಂದ ಬಿಲ್ಲನ್ನು ಎತ್ತಿದ್ದ ಆದರೆ ಮಂಡಿಯವರೆಗೆ ಮಾತ್ರ ಎತ್ತಲು ಸಾಧ್ಯವಾಯಿತು.

ಮಾರೀಚನು ಬ್ರಾಹ್ಮಣನ ವೇಷ ಧರಿಸಿ ವಿದೇಹನ ಬಳಿಗೆ ಬಂದು 'ವೈಶ್ವದೇವದ ಕೊನೆಯಲ್ಲಿ ಅತಿಥಿಯಾಗಿ ಬಂದಿದ್ದೇನೆ' ಎಂದ. 'ಬ್ರಾಹ್ಮಣನೆ, ನಿನಗೆ ಸ್ವಾಗತ. ಈ ಆಸನದಲ್ಲಿ ಕುಳಿತುಕೊಳ್ಳು' ಎಂದ, ರಾಜ. ಅತಿಥಿಯ ಕಾಲುತೊಳೆದು ಗಂಧ ಪುಷ್ಪ ಅಕ್ಷತೆಗಳಿಂದ ಪೂಜಿಸಿ ದೊಡ್ಡ ಹೋತ ಒಂದನ್ನು ಅರ್ಪಿಸಿ ಭೋಜನ ಮಾಡೆಂದು ಪ್ರಾರ್ಥಿಸಿದ. ಮಾರೀಚನು ಚಿನ್ನದ ತಟ್ಟೆಗಳಲ್ಲಿಟ್ಟ ಷಡ್ರಸಾನ್ನವನ್ನು ನೋಡುತ್ತಿರುವವನಂತೆ ಅತ್ತ ಇತ್ತ ದೃಷ್ಟಿ ಹಾಯಿಸಿದ. ಆಗ ಅವನ ಮುಂದೆ ಒಮ್ಮೆ ಸೀತೆ ಬಂದು ಹೋದಳು. ಅವಳು ಆಗ ಕಮಲ ಕೇಸರ ವರ್ಣ ಸೀರೆ ಉಟ್ಟಿದ್ದಳು. ಯುವಕರ ಮನಸೆಳೆವ ಕಪ್ಪಾದ ಗುಂಗುರು ಕೂದಲು ಹಣೆಯ ಮೇಲೆ ಹಾರಾಡುತ್ತಿತ್ತು. ಮನ್ಮಥನ ಬಿಲ್ಲಿನಂತೆ ಹುಬ್ಬುಗಳಿದ್ದವು. ಕಮಲದಂಥ ಕಣ್ಣುಗಳು. ಎಳ್ಳಿನ ಹೂವಿನಂಥ ನಾಸಿಕೆ ಮೃದುವಾದ ನುಣುಪಾದ ಕಪೋಲಗಳು, ದಾಳಿಂಬದಬೀಜದಂಥ ಹಲ್ಲುಗಳು. ದಾಸವಾಳದ ಹೂವಿನಂಥ ತುಟಿ, ಆಗ ತಾನೆ ಉಬ್ಬಲು ತೊಡಗಿದ್ದ ಎದೆಗಳು, ತೆಳುವಾದ ಬಳ್ಳಿಯಂಥ ತೋಳುಗಳು, ಸಣ್ಣನಡು. ರೋಮರಾಜಿಯಿಂದ ಶೋಭಿಸುವ ಆಳವಾದ ಹೊಕ್ಕಳು, ವಿಶಾಲವಾದ ಜಘನ, ಆನೆಯ ಸೊಂಡಿಲಿನಂಥ ತೊಡೆಗಳು, ಕಮಲದಂಥ ಪಾದಗಳು, ಗೆಜ್ಜೆಕಾಲುಂಗುರ, ಮುಂತಾದುವನ್ನು ಹಾಕಿಕೊಂಡಿದ್ದಳು. ಅರಳಿದ ಸುಗಂಧರಾಜವನ್ನು ಧರಿಸಿದ್ದಳು. ಆಕೆಯನ್ನು ಮಾರೀಚನು ನೋಡಿ 'ಇವಳನ್ನು ಅಪಹರಿಸಬೇಕು, ಹೇಗೆ ? ಹೇಗೆ ಆಲಿಂಗಿಸಿಕೊಳ್ಳಲಿ ?' ಎಂದುಕೊಳ್ಳುತ್ತ ಇದು ಸರಿಯಾದ ಸಮಯವಲ್ಲವೆಂದು ಬಗೆದು ಊಟಮಾಡಿ ಸುಮ್ಮನೆ ಹೊರಟುಹೋದ.

ಶಿವಧನಸ್ಸು ಹೆದೆಯೇರಿಸಲು ಅನೇಕ ಮಂದಿ ಉತ್ಸಾಹದಿಂದ ಬಂದು ನಿರಾಶರಾಗಿ ಹೊರಟುಹೋದರು. ದೇವೇಂದ್ರನು ಬಿಲ್ಲನೆತ್ತಿದರೂ ಬಗ್ಗಿಸಲಾರದೆ ಹೋದ.

ಸೂರ್ಯನೂ ಅದನ್ನೆತ್ತಿ ಬಗ್ಗಿಸುವಾಗ ಬಿದ್ದುಬಿಟ್ಟ. ವಾಯುವೂ ಅದನ್ನೆತ್ತಿ ಬಗ್ಗಿಸಲು ಯತ್ನಿಸಿ ಬಿದ್ದು ಬಿಟ್ಟ. ಅವನ ಮೇಲೆ ಬಿಲ್ಲು ಬಿದ್ದಿತು. ಎಲ್ಲರೂ ನಕ್ಕರು. ಸಾವಿರ ತೋಳುಗಳ ಬಾಣಾಸುರನು ಅಟ್ಟಹಾಸದಿಂದ ದೇವತೆಗಳನ್ನೆಲ್ಲ ಧಿಕ್ಕರಿಸುತ್ತ ಬಂದು ಎರಡು ಅಂಗುಲದಷ್ಟು ಎತ್ತರಕ್ಕೆ ಮಾತ್ರ ಬಿಲ್ಲನ್ನೆತ್ತಿದ್ದ. ಪ್ರಹ್ಲಾದನೂ ಬಲಿಯೂ ಓಡಿಬಂದರು, ನೋಡಿ ಸುಮ್ಮನಾದರು. ಬಳಿಕ ರಾಜರುಗಳ ಸರದಿ. ಅವರೂ ಪ್ರಯತ್ನ ಪಟ್ಟು ಸೋತು ಹಿಂತಿರುಗಿದರು. ಮುನಿಗಳು ಬಂದರು. ಅವರಲ್ಲಿ ವಿಶ್ವಾಮಿತ್ರನೊಬ್ಬ ಬಿಲ್ಲನ್ನೆತ್ತಿದ, ಹೆದೆಯೇರಿಸಲು ಒಂದು ಅಂಗುಲದಷ್ಟು ಇರುವಾಗ ಸೋತು ಸುಮ್ಮನಾದ. ಅನಂತರ ಆ ದಿನ ಯಾರೂ ಬಿಲ್ಲಿನ ಬಳಿಗೆ ಬರಲಿಲ್ಲ.

ಬಳಿಕ ರಾಮ ಲಕ್ಷ್ಮಣ ಮುಂತಾದವರು ಬಂದರು. ರಾಮನು ಲಕ್ಷ್ಮಣನ ಕೈ ಹಿಡಿದುಕೊಂಡು ಬಂದು ಬಿಲ್ಲನ್ನು ಸ್ಪರ್ಶಿಸಿ ನಮಿಸಿ ಪ್ರದಕ್ಷಿಣೆ ಬಂಧು ಕೈಯಿಂದ ಹಿಡಿದೆತ್ತಿದ. ಅವನು ಬಿಲ್ಲನ್ನು ಹಿಡಿದಾಗ ಎಲ್ಲರೂ ಬಂದು ಪರಿಹಾಸ ಮಾಡುತ್ತಿದ್ದರು. 'ಮಹಾರಥಿಕರೆಲ್ಲ ಸೋತರು. ನಿನ್ನಿಂದೇನಾದೀತು ?' ಎಂದು. ಆದರೆ ಅವರೆಲ್ಲರೂ ನೋಡುತ್ತಿದ್ದಂತೆ ರಾಮನು ಬಿಲ್ಲನೆತ್ತಿ ಬಗ್ಗಿಸಿ ಒಂದು ಕೈಯಿಂದ ಹೆದೆಯನ್ನು ಸಿಕ್ಕಿಸಿದ. ಎಲ್ಲರೂ ಮೂಗಿನ ಮೇಲೆ ಬೆರಳಿಟ್ಟುಕೊಂಡರು. ಅಷ್ಟರಲ್ಲಿ ರಾಮನು ಹೆದೆಯನ್ನೆಳೆದು ಧ್ವನಿಮಾಡಿ ಎಲ್ಲರ ಮನಸ್ಸಿನಲ್ಲಿ ಕ್ಷೋಭೆ ಉಂಟುಮಾಡಿದನು. ಎಲ್ಲರೂ ಹೇಳತೊಡಗಿದು 'ರಾಮನು ಬಿಲ್ಲಿಗೆ ಹೆದೆಯೇರಿಸಿದ' ಎಂದು. ಜನಕನು ರಾಮನಿಗೆ ಸೀತೆಯನ್ನು ವಿವಾಹ ಮಾಡಿಕೊಟ್ಟ. ರಾಮನು ಎಲ್ಲ ರಾಜರನ್ನು ಪರಾಭವಗೊಳಿಸಿ ಅಯೋಧ್ಯೆಗೆ ಹಿಂತಿರುಗಿದ.

ದಶರಥನು ರಾಮನನ್ನು ಯುವರಾಜ ಪದವಿಯಲ್ಲಿ ಪಟ್ಟಾಭಿಷೇಕ ಮಾಡಿ ಸಂತೋಷಪಟ್ಟ, ರಾಮನೂ ಪ್ರಜೆಗಳೆಲ್ಲರ ಪ್ರೀತಿಗಳಿಸಿ 'ರಾಮನೆ ಮುಂದೆ ರಾಜನಾಗಬೇಕು' ಎಂದು ಜನರು ಹೇಳಿಕೊಳ್ಳುವಂತೆ ಮಾಡಿದ. ಕೈಕೆಯ ರಾಜನ ಮಗಳು ರಾಣಿ ಸುವೇಷಮಾತ್ರ ರಾಮನು ರಾಜನಾಗುವದನ್ನು ಸಹಿಸದೆ ದಶರಥನ ಮುಂದೆ ಕೇಳಿದಳು. 'ನನಗೆ ಈಗ ವರಗಳನ್ನ ಕೊಡು'. 'ಆಗಲಿ, ಏನು ಕೊಡಲಿ' 'ಹದಿನಾಲ್ಕು ವರ್ಷಗಳ ಕಾಲ ರಾಮನು ವನವಾಸ ಮಾಡಲಿ ಭರತನು ರಾಜ್ಯವಾಳಲಿ'. ರಾಜನು ಕೊಟ್ಟ ಮಾತಿಗೆ ತಪ್ಪಲಾರದೆ ಹೇಗೋ ಒಪ್ಪಿದ. ವಶಿಷ್ಠ ಮುನಿಯನ್ನು ಕರೆಸಿ 'ರಾಮನಿಗೆ ಕಾಡಿಗೆ ಹೋದರೆ ಅವನಿಗೆ ಮುಂದೇನಾದೀತು ?ಎಂದು ಭವಿಷ್ಯವನ್ನು ಕೇಳಿದ. ವಸಿಷ್ಠನು ವಿಚಾರಮಾಡಿ ನೋಡಿ ಸಂತೋಷದಿಂದ ನುಡಿದ. 'ರಾಮನು ಕಾಡಿಗೆ ಹೋದರೆ ಅಲ್ಲಿ ರಾಕ್ಷಸ ವೀರರನ್ನೆಲ್ಲ ಕೊಂದು ಶಿವನಿಗೆ ಅನೇಕ ವಿಧವಾಗಿ ಪೂಜೆ ಮಾಡುತ್ತಾನೆ. ಸೀತಾ ವಿಯೋಗದಿಂದ ಕೋಪಗೊಂಡು ಕಪಿಸೇನೆಯೊಡನೆ ಸಮುದ್ರವನ್ನು ದಾಟಿ ರಾವಣನನ್ನು ಕೊಲ್ಲುತ್ತಾನೆ. ಅಯೋಧ್ಯೆಗೆ ಮರಳಿ ಬಂದು ಬಹುಕಾಲ ರಾಜ್ಯವಾಳುತ್ತಾನೆ. ಎಲ್ಲ ಲೋಕಗಳಲ್ಲಿ ಅವನ ಕೀರ್ತಿ ಹರಡುತ್ತದೆ. ಶಿವನೊಡನೆ ಬಹುಕಾಲ ವಾಸ ಮಾಡುತ್ತಾನೆ. ಸುಪುತ್ರರನ್ನು ಪಡೆದು ಅನೇಕ ಯಜ್ಞಗಳನ್ನೂ ಮಾಡಿ ಚಕ್ರವರ್ತಿ ಎನಿಸುತ್ತಾನೆ. ಎಲ್ಲ ಗುಣಗಳಲ್ಲಿಯೂ ಉತ್ತಮನೆನಿಸುತ್ತಾನೆ.

ದಶರಥನಿಗೆ ಆನಂದವಾಯಿತು. ರಾಮನು ಕಾಡಿಗೆ ಹೋಗುವುದರಿಂದ ನನಗೆ ಮರಣ ಬಂದರೂ ಚಿಂತಿಯಿಲ್ಲ, ಎಂದ. ರಾಮನು ತಂದೆ ತಾಯಿಗಳನ್ನೂ ಗುರುವಶಿಷ್ಠನನ್ನೂ ಮಲತಾಯಿಯರನ್ನೂ ನಮಸ್ಕರಿಸಿ ಕಾಡಿಗೆ ಹೊರಟ. ಉಪವನದಲ್ಲಿ ಒಂದು ದಿನ ಇದ್ದು ಜಟೆಗಳನ್ನು ಮಾಡಿಸಿಕೊಂಡ. ನಾರುಡೆ ಉಟ್ಟು ಒಂದು ಜನಿವಾರ ಹಾಕಿಕೊಂಡು ಇನ್ನೊಂದು ಜನಿವಾರದಿಂದ ಜಟೆಗಳನ್ನು ಕಟ್ಟಿ ಮೈಗೆ ಭಸ್ಮ ಲೇಪಿಸಿಕೊಂಡು ಮುತ್ತಿನ ಹಾರ ರುದ್ರಾಕ್ಷಿ ಮಾಲೆಗಳನ್ನು ಧರಿಸಿದ. ಸ್ವಲ್ಪ ಭೂಷಣಗಳನ್ನು ತೊಟ್ಟ ಸೀತೆಯನ್ನೂ ಲಕ್ಷ್ಮಣನನ್ನೂ ಜೊತೆಗೆ ಕರೆದುಕೊಂಡು ಅರಣ್ಯವನ್ನು ಪ್ರವೇಶಿಸಿದ.

ಶ್ರೀರಾಮ, ನಿನ್ನಂತೆಯೆ ಅವನೂ ಅನೇಕ ರಾಕ್ಷಸರನ್ನು ಕೊಂದ. ಸೀತಾಪಹರಣಾದಿಗಳೆಲ್ಲವೂ ಅವನಿಗೆ ನಿನ್ನಂತೆಯೆ ಸಂಭವಿಸಿತು. ಅವನು ಮುಂದೆ ಸುಗ್ರೀವನು ವಾಸವಾಗಿದ್ದ ಋಷ್ಯ ಮೂಕ ಪರ್ವತಕ್ಕೆ ಹೋಗಿ ಒಂದು ಮಾವಿನ ಮರದ ಕೆಳಗೆ ಕೃಷ್ಣಾ ಜಿನ ಹಾಗೂ ಲಕ್ಷ್ಮಣನ ತೊಡೆಯಮೇಲೆ ತಲೆಯನ್ನಿಟ್ಟು ಕೊಂಡು ಮಲಗಿದ. ಮರದ ಮೇಲಿಂದ ಹಾಡಿನ ಧ್ವನಿ ಕೇಳಿಸಿತು. ಮೇಲೆ ನೋಡಿದಾಗ ಒಬ್ಬ ಕಪಿ ಕಾಣಿಸಿಕೊಂಡ. ಮಣಿಕುಂಡಲ ಮೌಂಜಿಕೌಪೀನಯಜ್ಞೋಪವೀತಗಳನ್ನು ಧರಿಸಿದ ಚಿನ್ನದಂತೆ ಹೊಳೆವ ಮೈ ಬಣ್ಣದ ಆ ಕಪಿ ಚಪಲತೆಯಿಂದ ಹಣ್ಣುಗಳನ್ನು ಕಿತ್ತು ರಾಮನ ಮೇಲೆಸೆಯುತ್ತಿದ್ದ. ಹೂ ಗೊಂಚಲುಗಳನ್ನು ಚೆಲ್ಲುತ್ತಿದ್ದ. ಹಾಡುತ್ತ ಕೆಳಗಿಳಿದು ಬೀಸಣಿಗೆಯಿಂದ ರಾಮನಿಗೆ ಗಾಳಿ ಹಾಕುತ್ತಿದ್ದ. ತಿರುಗಿ ಮರದ ಮೇಲೇರಿ ಅಲ್ಲಿಂದಲೆ ಗಾಳಿ ಬೀಸುತ್ತಿದ್ದ.

'ಲಕ್ಷ್ಮಣ, ಈ ಕಪಿ ಯಾರು ?' ಎಂದ ರಾಮ. 'ನನಗೆ ತಿಳಿಯದು' ಎಂದ ಲಕ್ಷ್ಮಣ. ರಾಮನು ಕಪಿಯನ್ನೆ ಕೇಳಿದ, 'ಯಾರು ನೀನು ? ಯಾರವನು ? ನಿನ್ನ ಹೆಸರೇನು ?' 'ನಾನು ಸುಗ್ರೀವನ ಕಡೆಯವನು. ಹನುಮಂತನೆಂದು ಹೆಸರು.' 'ಸುಗ್ರೀವನನ್ನು ಬರಹೇಳು.'

ಹನುಮಂತನು ಸುಗ್ರೀವನ ಬಳಿಗೆ ಹೋಗಿ, 'ರಾಜನೆ' ಜಟಾಧಾರಿಯಾದ ಒಬ್ಬ ರಾಜಕುಮಾರ ಬಂದಿದ್ದಾನೆ. ಸಾಕ್ಷಾತ್ ನಾರಾಯಣನಂತೆ ಮೇಘಶ್ಯಾಮನಾಗಿದ್ದಾನೆ. ಅಜಾನುಬಾಹು ಆಗಿದ್ದಾನೆ. ಸೂರ್ಯನಂತೆ ಹೊಳೆಯುವ ಇನ್ನೊಬ್ಬ ರಾಜಕುಮಾರನೂ ಅವನ ಇನ್ನೊಂದು ಕೈಯಂತಿದ್ದು ಬಳಿಯಲ್ಲಿಯೆ ಇದ್ದಾನೆ. ದಾರಿಯಲ್ಲಿರುವ ಮಾವಿನಮರದ ಕೆಳಗೆ ಇದ್ದ ಆ ರಾಜಕುಮಾರನನ್ನು ನಾನು ಭೆಟ್ಟಿಮಾಡಿದೆ. ನನ್ನ ಪರಿಚಯ ಮಾಡಿಸಿದೆ. 'ಸುಗ್ರೀವನಿಗೆ ಹೇಳು' ಎಂದರು ಅವರು ! ಎಂದ.

ಒಡನೆ ಸುಗ್ರೀವನು ಎದ್ದು ಕಾಲು ತೊಳೆವ ನೀರು ಮುಂತಾದ ವಸ್ತುಗಳನ್ನು ಹಿಡಿದುಕೊಂಡು ಬಂದು ರಾಮಲಕ್ಷ್ಮಣರಿಗೆ ಪಾದ ಪ್ರಕ್ಷಾಲನೆ ಮುಂತಾದವನ್ನು ಮಾಡಿ ಹಣ್ಣುಗಳನ್ನು ಸಮರ್ಪಿಸಿದ.

**ಸುಗ್ರೀವ** :- ರಾಜಕುಮಾರರಂತೆ ಕಾಣುತ್ತಿರುವಿರಿ, ಮುನಿವೇಷದಲ್ಲಿರುವಿರಿ. ಯಾರು ನೀವು ? ಬಂದ ಕಾರಣವೇನು ?

**ಲಕ್ಷ್ಮಣ** :- ನಾವು ರಾಮ ಲಕ್ಷ್ಮಣರು. ದಶರಥನ ಮಕ್ಕಳು. ದುಷ್ಟನಿಗ್ರಹ ಶಿಷ್ಟಪರಿಪಾಲನೆಗಾಗಿ ಅರಣ್ಯವನ್ನು ಪ್ರವೇಶಿಸಿರುವೆವು.

**ಸುಗ್ರೀವ** :- ಬೇರೇನೋ ಉದ್ದೇಶವಿರುವಂತೆ ಕಾಣುತ್ತದೆ. ಇಲ್ಲದಿದ್ದರೆ ನೀವು ಸೈನ್ಯಸಮೇತರಾಗಿ ಬರುತ್ತಿದ್ದೀರಿ.

**ಲಕ್ಷ್ಮಣ :-** ಬೇರೆ ಕಾರ್ಯವೂ ಇದೆ. ಇವನ ಮಡದಿಯನ್ನು ಯಾರೋ ಅಪಹರಿಸಿದರು. ಯಾರು ಎನ್ನುವುದು ತಿಳಿಯಲಿಲ್ಲ. ಹುಡುಕುತ್ತಿದ್ದೇವೆ. ಅದಕ್ಕಾಗಿ ಸಮುದ್ರವನ್ನೂ ದಾಟಲು ಸಿದ್ಧರಾಗಿದ್ದೇವೆ. ಪಾತಾಳವನ್ನೂ ಪ್ರವೇಶಿಸುತ್ತೇವೆ. ಸ್ವರ್ಗಕ್ಕೂ ಹೋಗುತ್ತೇವೆ. ಇಂದ್ರನನ್ನೂ ಕೆಡವುತ್ತೇವೆ. ಬಲಿಯನ್ನೂ ಗೆಲ್ಲುತ್ತೇವೆ. ಏನೂ ಬೇಕಾದರೂ ಮಾಡಲು ಸಿದ್ಧರಿದ್ದೇವೆ.

**ಸುಗ್ರೀವ :-** ಹಾಗಾದರೆ ರಾವಣನೆ ಕದ್ದಿರಬೇಕು. ಅವನು ಒಬ್ಬಳನ್ನು ಕೊಂಡೊಯ್ಯುತ್ತಿದ್ದಾಗ ಅವಳು ಕೆಲವು ಆಭರಣಗಳನ್ನು ಕೆಳಗೆಸೆದಿದ್ದಳು. ಅದನ್ನು ನಾನು ಬಚ್ಚಿಟ್ಟಿದ್ದೇನೆ. ತೋರಿಸುವೆನು, ಬನ್ನಿರಿ.

ಹೀಗೆ ಹೇಳಿ ರಾಮ ಲಕ್ಷ್ಮಣರನ್ನು ತನ್ನ ಮನೆಗೆ ಕರೆದೊಯ್ದು ಆ ಆಭರಣಗಳನ್ನು ತೋರಿಸಿದ. ರಾಮನು ಅವುಗಳನ್ನು ನೋಡಿ ಸೀತೆಯ ಆಭರಣಗಳೆಂದು ನಿಶ್ಚಯಿಸಿ ಕಣ್ಣಲ್ಲಿ ನೀರು ತುಂಬಿಕೊಂಡು ಕೇಳಿದ. 'ರಾವಣನೆಲ್ಲಿ ?' 'ದಕ್ಷಿಣ ದಿಕ್ಕಿನಲ್ಲಿ ಹೊರಟು ಹೋದ' ಎಂದ ಸುಗ್ರೀವ. ಅವರೊಡನೆ ರಾಮನು ಮೈತ್ರಿ ಮಾಡಿಕೊಂಡು ಕೇಳಿದ, 'ಹೆಂಡತಿಯನ್ನು ಬಿಟ್ಟು ಒಬ್ಬನೆ ಏಕೆ ಇಲ್ಲಿರುವೆ ?'

**ಸುಗ್ರೀವ :-** ನನ್ನ ಅಣ್ಣ ವಾಲಿ ಮಹಾ ಬಲಶಾಲಿ. ನನ್ನ ಹೆಂಡತಿಯನ್ನು ರಾಜ್ಯವನ್ನೂ ಅಪಹರಿಸಿ ಕಿಷ್ಕಿಂಧೆಯಲ್ಲಿ ರಾಜ್ಯವಾಳುತ್ತಿದ್ದಾನೆ. ಅವನೊಡನೆ ನಾನು ಯುದ್ಧಮಾಡಿ ಸೋತೆ. ಅವನನ್ನು ಹೇಗಾದರೂ ಕೊಲ್ಲಬೇಕೆಂದು ನಿರ್ಧರಿಸಿದ್ದೇನೆ. ನೀನು ಅವನನ್ನು ಕೊಲ್ಲುವುದಾದರೆ ನಾನು ಸಮುದ್ರಕ್ಕೆ ಸೇತುವೆಯನ್ನು ಕಟ್ಟಿ ಆಚೆದವಡದಲ್ಲಿ ಲಂಕೆಯಲ್ಲಿರುವ ಸೀತೆಯನ್ನು ನಿನ್ನ ವಶಕೊಪ್ಪಿಸುವೆನು.

ಸುಗ್ರೀವನು ಹೀಗೆ ಹೇಳಿ ಶಪಥ ಮಾಡಿದ. ಬಳಿಕ ವಾಲಿಯನ್ನು ಯುದ್ಧಕ್ಕೆ ಕರೆದು ಹೋರಾಟಕ್ಕೆ ನಿಂತ. ರಾಮನು ಅಣ್ಣ ತಮ್ಮಂದಿರಲ್ಲಿ ವ್ಯತ್ಯಾಸವನ್ನು ತಿಳಿಯಲಾರದೆ ಸುಮ್ಮನೆ ನಿಂತ. ಅತ್ತ ಸುಗ್ರೀವನು ಸೋತು ಪಲಾಯನ ಮಾಡಿ ರಾಮನನ್ನು ಆಕ್ಷೇಪಿಸಿದ.

**ಸುಗ್ರೀವ:-** ನಿನ್ನ ಬುದ್ಧಿ ಹೀಗೆಂದು ತಿಳಿಯದೆ ನಾನು ಸಾಯಲು ಹೊರಟಂತಾಯಿತು.

**ರಾಮ :-** ನಿಮ್ಮಿಬ್ಬರೊಳಗೆ ವ್ಯತ್ಯಾಸವನ್ನು ತಿಳಿಯದೆ ಸುಮ್ಮನೆ ನಿಂತೆ. ನೀನೊಂದು ಚಿಹ್ನೆಯನ್ನು ಧರಿಸಿ ಯುದ್ಧಮಾಡು. ನಿನ್ನನು ಗುರುತಿಸಿ ಅವನನ್ನು ಕೊಲ್ಲುವೆನು.

ಒಡನೆ ಸುಗ್ರೀವನು ಒಂದು ಚಿಹ್ನೆಯನ್ನು ಧರಿಸಿ ತಿರುಗಿ ವಾಲಿಯನ್ನು ಯುದ್ಧಕ್ಕೆ ಕರೆದು ಎದುರಿಸಿದ. ವಾಲಿಯು ಯುದ್ಧಕ್ಕೆ ಹೊರಡುವಾಗ ತಾರೆ ಅವನನ್ನು ತಡೆದು ಹೇಳಿದ್ದಳು.

**ತಾರೆ :-** ಸುಗ್ರೀವನಿಗೆ ಯಾರೊ ಒಬ್ಬರ ಸಹಾಯ ದೊರೆತಂತೆ ಕಾಣುತ್ತದೆ. ಇಲ್ಲದಿದ್ದರೆ ಒಮ್ಮೆ ಸೋತು ತಿರುಗಿ ಯುದ್ಧಕ್ಕೆ ಕರೆಯುತ್ತಿರಲಿಲ್ಲ. ದಶರಥನ ಮಕ್ಕಳಾದ ರಾಮ ಲಕ್ಷ್ಮಣರು ಭೂಭಾರವನ್ನು ಕಳೆಯಲು ಬಂದಿದ್ದಾರೆ ಎಂದು ಕೇಳಿದ್ದೇನೆ. ಅವರು ನಾರಾಯಣನ ಅಂಶಭೂತರು ಅವರು ಸುಗ್ರೀವನಿಗೆ ಸಹಾಯ ಮಾಡುತ್ತಿರಬಹುದು.

**ವಾಲಿ :-** ರಾಮನು ನೀತಿಶಾಸ್ತ್ರಜ್ಞನೆಂದು ಕೇಳಿದ್ದೇನೆ. ಅಂಥವನು ಬಲಿಷ್ಠನಾದ ನನ್ನನ್ನು ಬಿಟ್ಟು ಶಕ್ತಿ ಇಲ್ಲದ ಸುಗ್ರೀವನ ಮೈತ್ರಿ ಮಾಡಿಕೊಳ್ಳಲಾರ. ಒಂದು ಪಕ್ಷದಲ್ಲಿ ಅವನು ಸುಗ್ರೀವನ ಸಹಾಯಕ್ಕೆ ಬಂದರೂ ಪ್ರತಿಪಕ್ಷದ ಬಲ ಹೆಚ್ಚಿಸಿರುವದನ್ನು ನೋಡಿ ಹೆದರಿ ಸುಮ್ಮನಾಗುವನು. ತಾನೆ ಯುದ್ಧಕ್ಕೆ ಬಂದರೆ ನಾನು ಯುದ್ಧ ಮಾಡಲೇಬೇಕು.

ಹೀಗೆ ಹೇಳಿ ತಾರೆಯನ್ನು ಸಮಾಧಾನಪಡಿಸಿ ಸುಗ್ರೀವನೊಡನೆ ಯುದ್ಧಕ್ಕೆ ಬಂದಿದ್ದ. ಇಬ್ಬರೂ ಮುಷ್ಟಿಯುದ್ಧ ಮಾಡುತ್ತಿದ್ದಾಗ ರಾಮನು ವಾಲಿಯನ್ನು ಬಾಣದಿಂದ ಹೊಡೆದ. ಅವನು ಬಿದ್ದು ಹೇಳಿದ, 'ಶಸ್ತ್ರವನ್ನು ಹಿಡಿಯದೆ ಯುದ್ಧ ಮಾಡುತ್ತಿರುವಾಗ ನನಗೆ ಬಾಣದೇಟು ಹೇಗೆ ತಗುಲಿತು ? ತಾರೆಯೂ ಅಂಗದನು ರಣಭೂಮಿಗೆ ಬಂದು ವ್ಯಥೆಪಟ್ಟರು. ಎಲ್ಲ ಕಪಿಗಳು ಬಂದು ವಾಲಿಯ ಬಳಿ ನಿಂತು ಕಣ್ಣೀರಿಟ್ಟರು. ತಾರೆ ಹೇಳಿದಳು.

**ತಾರೆ :-** ರಾಮ, ಹಿಂದಿನಿಂದಲೂ ರಘುಕುಲದ ರಾಜರು ಶಾಸ್ತ್ರ ತಿಳಿದವರೂ ಶೂರರೂ ಧಾರ್ಮಿಕರೂ ಆಗಿದ್ದರು. ನೀನು ಇಂಥ ಪಾಪ ಕಾರ್ಯವನ್ನು ಹೇಗೆ ಮಾಡಿದೆ? ರಾಜರೆಲ್ಲರೂ ಅನುಸರಿಸುವ ಕ್ಷಾತ್ರ ಧರ್ಮವನ್ನು ನೀನು ತಿಳಿದಿಲ್ಲವೆ ? ಇಬ್ಬರು ಹೋರಾಡುವಾಗ ಒಬ್ಬನಿಗೆ ಜಯ, ಇನ್ನೊಬ್ಬನಿಗೆ ಮರಣವಾದರೆ ತಪ್ಪಿಲ್ಲ. ಮೂರನೆಯವನು ಬಂದು ಅವರಲ್ಲೊಬ್ಬನನ್ನು ಕೊಂದರೆ ಅದು ಬ್ರಹ್ಮಹತ್ಯೆಗೆ ಸಮಾನವಾದ ಪಾಪವೆನಿಸುತ್ತದೆ. ವೈರಿಯನ್ನು ಕೊಲ್ಲಬಹುದಾದರೂ ವಾಲಿಯೊಡನೆ ನಿನಗೇನು ವೈರ? ಮಾಂಸಕ್ಕಾಗಿ ಬೇಟೆ ಎಂದರೆ ಕಪಿಗಳಿಗೆ ಮಾಂಸವು ಅಭೋಜ್ಯವಾದುದರಿಂದ ಅದೂ ಅಯುಕ್ತವೆ ಆಗುತ್ತದೆ, ನಾನು ಪ್ರಿಯೆಯಿಂದ ಆಗಲಿರುವುದರಿಂದ ಉಳಿದವರೂ ಹಾಗಾಗಲೆಂದು ನಿನ್ನ ಅಪೇಕ್ಷೆಯೆ ? ಹಾಗಿದ್ದರೆ ಇದು ಮೂಢತನವೆ ಸರಿ. ಏಕಪತ್ನೀ ವ್ರತಸ್ಥನಾಗಿರುವುದಿರಂದ ನನ್ನನ್ನು ಬಯಸಿ ನೀನೀ ಕೆಲಸಮಾಡಿರಲಾರೆ. ರಾವಣನು ಕದ್ದೊಯ್ದ ಸೀತೆಯನ್ನು ಸುಗ್ರೀವನ ಸಹಾಯದಿಂದ ತಿರುಗಿಪಡೆಯಲು ಹೀಗೆ ಮಾಡಿದೆನೆಂದರೆ ಅದೂ ಸರಿಯಲ್ಲ. ವಾಲಿಯ ಗೆಳೆತನ ಮಾಡಿದ್ದರೆ ಮಹಾಬಲಶಾಲಿಯಾದ ಅವನು ಇನ್ನೊಂದು ಸೂರ್ಯೋದಯವಾಗುವುದರೊಳಗೆ ಸೀತೆಯನ್ನು ತಂದು ನಿನಗೊಪ್ಪಿಸುತ್ತಿದ್ದ. ಸ್ಮರಣ ಮಾತ್ರದಿಂದ ರಾವಣನನ್ನು ಕರೆಸಿ ನಿನಗೊಪ್ಪಿಸುತ್ತಿದ್ದ. ಐವತ್ತು ಪರಾರ್ಧ ಸಂಖ್ಯೆಯಲ್ಲಿ ಕಪಿಗಳ ಮತ್ತ ಕರಡಿಗಳ ಸೇನೆ ಅವನ ವಶದಲ್ಲಿತ್ತು. ಆ ದುರ್ಬಲನಾದ ಸುಗ್ರೀವನ ವಶದಲ್ಲಿರುವುದು ಕೇವಲ ಏಳು ಪರಾರ್ಧ ಸೇನೆ. ಅವನಿಂದೇನಾಗುತ್ತದೆ? ನಿನ್ನ ಅಜ್ಞಾನವನ್ನು ಏನೆಂದು ಹೇಳಲಿ?

**ರಾಮ :-** ರಾಜನು ದುಷ್ಟನಿಗ್ರಹ ಶಿಷ್ಟರ ಪರಿಪಾಲನೆ ಮಾಡುವುದು ಅವನ ಕರ್ತವ್ಯ. ವಾಲಿ ಸುಗ್ರೀವನ ಹೆಂಡತಿಯಾದ ರುಮೆಯನ್ನು ಅಪಹರಿಸಿದ್ದಾನೆ. ರಾಜ್ಯವನ್ನು ಕಿತ್ತುಕೊಂಡಿದ್ದಾನೆ. ಅಂಥ ದುಷ್ಟನನ್ನು ಕೊಂದರೆ ತಪ್ಪೇನು.

**ತಾರೆ :-** ಹಾಗಾದರೆ ಸುಗ್ರೀವನನ್ನೂ ನೀನು ಕೊಲ್ಲಬೇಕು. ದುಂದುಭಿಯೊಡನೆ ಯುದ್ಧ ಮಾಡಲು ವಾಲಿ ಗುಹೆಯೊಳಗೆ ಪ್ರವೇಶಿಸಿ ಒಂದು ವರ್ಷಕಾಲ ಅಲ್ಲಿದ್ದ. ಆಗ ಸುಗ್ರೀವನು ನನ್ನನ್ನು ಅಪಹರಿಸಿ ರಾಜ್ಯವನ್ನೂ ತನ್ನದಾಗಿಸಿ ಕೊಂಡಿದ್ದ. ವಾಲಿಯನ್ನು ಮೊದಲು ಆಮೇಲೂ ಕೊಲ್ಲಬಯಸಿದ್ದನಾತ.

**ರಾಮ :-** ಇದು ಎಷ್ಟು ಕಾಲದ ಹಿಂದಿನ ವೃತ್ತಾಂತ ?

**ತಾರೆ :-** ಅರವತ್ತು ಸಾವಿರ ವರ್ಷಗಳಿಗಿಂತ ಈಚೆ ಎಂಬತ್ತನೆ ವರ್ಷದಲ್ಲಿ ದುಂದುಭಿಯೊಡನೆ ವಾಲಿ ಯುದ್ಧಮಾಡಿದ್ದ. ಆಗ ಸುಗ್ರೀವನು ರಾಜ್ಯವನ್ನಪಹರಿಸಿದ. ಒಂದುವರ್ಷ ಕಳೆದೊಡನೆ ವಾಲಿಯು ಬಂದು ಸುಗ್ರೀವನನ್ನೋಡಿಸಿ ಅವನ

ಹೆಂಡತಿಯನ್ನೂ ರಾಜ್ಯವನ್ನೂ ಕಸಿದುಕೊಂಡ. ಆ ದಿನವೆ ನಿನ್ನ ತಂದೆಯಾದ ದಶರಥನಿಗೆ ಪಟ್ಟಾಭಿಷೇಕ ನಡೆಯಿತು.

**ರಾಮ** :- ನಾನು ತಂದೆಯ ಆಜ್ಞೆಯಂತೆ ಅವನ ರಾಜ್ಯದಲ್ಲಿ ನಡೆದ ದುಷ್ಟ ಕೃತ್ಯಗಳನ್ನು ಶಿಕ್ಷಿಸಲು ಬಂದಿದ್ದೇನೆ. ಸುಗ್ರೀವನು ಕಸಿದುಕೊಂಡಾಗ ನಮ್ಮ ತಂದೆ ರಾಜನಾಗಿರಲಿಲ್ಲ. ಅಥವಾ ಇಬ್ಬರೂ ಮೃಗಗಳು ಪರಸ್ಪರ ಹೋರಾಡುತ್ತಿರುವಾಗ ಒಂದನ್ನು ಬೇಟೆಯಾಡಿದೆ. ಬೇಟೆ ಮಾಡುವುದು ರಾಜರಿಗೆ ಧರ್ಮವೆ. ಮಾಂಸವನ್ನು ಮಾತ್ರ ತಿನ್ನಕೂಡದು. ರಾಮನ ಈ ಮಾತನ್ನು ಕೇಳಿ ಎಲ್ಲರೂ ಹೌದೆಂದು ತಲೆದೂಗಿದರು. ವಾಲಿ ಇನ್ನೂ ಮಲಗಿದ್ದು ತಲೆಯ ಮೇಲೆ ಕೈಮುಗಿದು ಹೇಳಿದ.

**ವಾಲಿ** :- ನೀನು ಪ್ರಸನ್ನನಾಗಿರುವೆಯಾದರೆ ನನಗೆ ಸದ್ಗತಿ ನೀಡು. ಸುಗ್ರೀವನನ್ನು ಕಾಪಾಡುವಂತೆ ಈ ಅಂಗದನನ್ನೂ ತಾರೆಯನ್ನೂ ಕಾಪಾಡು. ನಾನು ಪಾಪಿ. ಅಪರಾಧವನ್ನು ಮಾಡಿ ಅದರ ಫಲವನ್ನನುಭವಿಸಿದ್ದೇನೆ.

ಹೀಗೆ ಹೇಳಿ ರಾಮನನ್ನೆ ನೋಡುತ್ತ ವಾಲಿ ಸತ್ತು ಸ್ವರ್ಗಸೇರಿದ. ರಾಮನು ಸುಗ್ರೀವನನ್ನು ಸಿಂಹಾಸನದಲ್ಲಿ ಕುಳ್ಳಿರಿಸಿ ಅರಣ್ಯವನ್ನು ಪ್ರವೇಶಿಸಿದ. ಬಳಿಕ ಸುಗ್ರೀವನೊಡನೆ ಸಮುದ್ರದ ಬಳಿಗೆ ಹೋಗಿ ಹೇಳಿದ.

**ರಾಮ** :- ಲಂಕೆ ಎಲ್ಲಿದೆ ? ಸೀತೆ ಎಲ್ಲಿ ? ಶತ್ರು ಇರುವುದೆಲ್ಲಿ ?

**ಹನುಮಂತ** :- ಲಂಕೆಗೆ ಹೋಗಿ ಸೀತೆಯನ್ನು ಹುಡುಕಿ ಅವಳ ಸ್ಥಿತಿಯನ್ನು ಸರಿಯಾಗಿ ತಿಳಿದು ಯುದ್ಧವೆ ಸಂಧಿಯೆ ಎಂಬುದನ್ನು ನಿಶ್ಚಯಿಸಿಕೊಂಡುಬರಲು ಸಮುದ್ರ ದಾಟಲು ಆಜ್ಞೆ ನೀಡು.

**ರಾಮ** :- ಸುಗ್ರೀವ, ಇದು ಹೇಗೆ ಸಾಧ್ಯ ?

**ಸುಗ್ರೀವ** :- ಕೋಟಿಸಂಖ್ಯೆಯಲ್ಲಿ ಕಪಿಗಳೂ ಕರಡಿಗಳೂ ನಮ್ಮಲ್ಲಿದ್ದಾರೆ. ಒಬ್ಬನನ್ನು ಈ ಕೆಲಸಕ್ಕೆ ನೇಮಿಸಿ ಕಳುಹಿಸು. ಅವನಿಂದ ಎಲ್ಲವನ್ನೂ ತಿಳಿದು ಯುಕ್ತವಾದುದನ್ನು ಮಾಡು.

**ಜಾಂಬವಾನ್** :- ಹನುಮಂತನೆ ಹೋಗಲಿ. ಲಂಕೆಯನ್ನೆಲ್ಲವನ್ನೂ ತಿಳಿದು ಬರಲಿ.

ಹನುಮಂತನು ಲಂಕೆಗೆ ಹೋಗಿ ನಗರವನ್ನೆಲ್ಲ ಸುತ್ತಿ ಅಶೋಕವನದಲ್ಲಿ ಸೀತೆ ಇರುವುದನ್ನು ಕಂಡು ಅವಳೊಡನೆ ಸಂಭಾಷಣೆ ನಡೆಸಿಧ. ಅವಳಿಗೆ ವಿಶ್ವಾಸ ಹುಟ್ಟುವಂತೆ ಮಾಡಿದ. ಆ ವನವನ್ನು ಮುರಿದು ಕಾವಲುಗಾರರನ್ನೂ ನಾಶಮಾಡಿದ. ರಾವಣನು ಹಿಡಿದು ಕಟ್ಟಿದಾಗ ಲಂಕೆಯನ್ನೆ ಸುಟ್ಟು ಉತ್ತರದ ತೀರಕ್ಕೆ ಹಿಂತಿರುಗಿ ರಾಮನ ಬಳಿಯಲ್ಲಿ ಎಲ್ಲ ವೃತ್ತಾಂತವನ್ನು ತಿಳಿಸಿದ. ರಾಮನು ಎಲ್ಲರೊಡನೆ ವಿಚಾರಿಸಿದ. ಆಗ ಜಾಂಬವಾನ್ ಎಂದ. 'ರಾಮನು ಕಪಿಗಳ ಸಹಾಯದಿಂದ ಲಂಕೆಯನ್ನು ನಾಶಪಡಿಸುವನೆಂದು ನಾರದ ಮುನಿಯು ಹಿಂದೆಯೆ ನನಗೆ ಹೇಳಿದ್ದಾನೆ. ಅದರಂತೆ ನಾವೆಲ್ಲರೂ ಸಮುದ್ರವನ್ನು ದಾಟುವ ಯತ್ನ ಮಾಡಬೇಕು.' ಆಗಲಿ ನಾನು ಮೊದಲಿಗೆ ಶಿವನನ್ನು ಆರಾಧಿಸಿ ಅವನಲ್ಲಿ ಎಲ್ಲವನ್ನೂ ನಿವೇದಿಸುವೆನು. ಬಳಿಕ ಅವನು ಹೇಳಿದಂತೆ ಮಾಡುವೆನು; ಎಂದ ರಾಮ.

ರಾಮನು ಶಿವನನ್ನರ್ಚಿಸಿ ನಮಸ್ಕರಿಸಿ ವಿಜ್ಞಾಪಿಸಿದ. 'ದೇವ, ನಾನು ಲಂಕೆಗೆ ಹೋಗಬೇಕು. ಸಮುದ್ರವನ್ನು ದಾಟುವ ಉಪಾಯ ಒಂದನ್ನು ಹೇಳು; ಎಂದ. ನನ್ನ ಆ ಜಗವ ಧನುಸ್ಸಿದೆ. ಅದನ್ನೇರಿ ಸಮುದ್ರವನ್ನು ದಾಟು. ಲಂಕೆಯನ್ನು ಸೇರು. ಎಂದ ಶಿವ.

ರಾಮನು 'ಹಾಗೇ ಆಗಲೆಂದು' ನಿಶ್ಚಯಿಸಿ ಆ ಜಗವ ಧನುಸ್ಸನ್ನು ಸ್ಮರಿಸಿದನು. ಅದು ಬಂದೊಡನೆ ತಿರುಗಿ ಶಿವನನ್ನು ಸ್ಮರಿಸಿ ಅವನಿಂದ ಧನುಸ್ಸನ್ನು ಪಡೆದು ಸಮುದ್ರದಲ್ಲಿಳಿಸಿದನು. ಅರವತ್ತು ಪರಾರ್ಧಸಂಖ್ಯೆಯ ಆ ಎಲ್ಲ ಕಪಿಗಳೊಡನೆ ರಾಮ ಲಕ್ಷ್ಮಣರು ಧನುಸ್ಸಿನ ಮೇಲೇರಿ ಕುಳಿತರು. ಧನುಸ್ಸು ಆಚೆಯ ದಡವನ್ನು ಸೇರಿತು. ಎಲ್ಲರೂ ಇಳಿದು ಲಂಕೆಯನ್ನು ನೋಡ ತೊಡಗಿದರು. ಒಡನೆ ಅತಿಕಾಯನೆಂಬ ರಾಕ್ಷಸನು ಕಪಿ ಸೇನೆಯನ್ನು ನೋಡಿ ರಾವಣನಿಗೆ ಹೇಳಿದ. ಆದರೆ ರಾವಣನೆಂದ, 'ಕಪಿಗಳಿಂದ ಏನಾದೀತು ? ಮನುಷ್ಯರಾದ ರಾಮ ಲಕ್ಷ್ಮಣರಿಂದ ಏನಾದೀತು ? ಅವರು ಬಂದರೆ ? ದೈವಾತ್ ನಮಗೆ ಭೋಜನ ದೊರೆತಂತಾಯಿತು.

ಇತ್ತ ಸುಗ್ರೀವನು ಸಾಯಂಕಾಲದಲ್ಲಿ ಹನುಮಂತ ಜಾಂಬವ ಮೊದಲಾದ ಮಹಾಬಲಶಾಲಿಗಳಾದ ವೀರರೊಡನೆ ಲಂಕೆಯ ಬಳಿಯ ಉಪವನವನ್ನು ಪ್ರವೇಶಿಸಿ ನಾನಾ ಬಗೆಯ ಹಣ್ಣುಗಳನ್ನು ತಿಂದು ನೀರು ಕುಡಿದು ಕಾವಲುಗಾರರನ್ನೋಡಿಸಿದ. ಒಂದೊಂದಾಗಿ ಎಲ್ಲ ಕಾಡುಗಳನ್ನೂ ಆಕ್ರಮಿಸಿಕೊಂಡು ಲಂಕೆಗೆ ನುಗ್ಗಿದ. ಹೊರಗಿನ ಕೋಟೆಯನ್ನು ಮುರಿದು ಮಹಡಿ ಮನೆಗಳ ಮೇಲೆ ಹತ್ತಿ ಒಂದೊಂದಾಗಿ ಕೆಡವಿದರು. ಕಪಿಗಳು. ರಾಕ್ಷಸರೊಡನೆ ಹೋರಾಡಿದರು. ಮನೆ ಮಠಗಳನ್ನೆಲ್ಲ ನೆಲ ಸಮಮಾಡಿದರು. ಮಕ್ಕಳು ಮುದುಕರು ಹೆಂಗಸರೆನ್ನದೆ ಎಲ್ಲರನ್ನೂ ಕೊಂದರು.

ಕಪಿಗಳು ಒಂದು ಸುತ್ತು ಕೋಟೆಯನ್ನು ಮುರಿದರೆಂದು ಕೇಳಿದೊಡನೆ ರಾವಣನು ಇಂದ್ರಜಿತ್ತನ್ನು ಕಳಿಸಿದ. ಅವನೊಡನೆ ಯುದ್ಧ ಮಾಡಿ ಕಪಿಗಳು ಹೆದರಿ ಪಲಾಯನ ಮಾಡಿದರು. ಒಡನೆ ಹನುಮಂತನು ಅವರನ್ನು ಕೂಗಿ ಕರೆದು ಬೈದು ತಿರುಗಿ ರಾವಣನ ಸೇನೆಯ ಮೇಲೆ ಬೀಳಿಸಿದ. ಇಂದ್ರಜಿತ್ತು ಆಕಾಶದಲ್ಲಿದ್ದುಕೊಂಡೆ ಯುದ್ಧ ಮಾಡಿದ. ಕಪಿಗಳಿಗೆ ಅವನು ಕಾಣಿಸುತ್ತಿರಲಿಲ್ಲ. ಹನುಮಂತ ಜಾಂಬವಂತರು ತಾವೂ ಆಕಾಶಕ್ಕೆ ನೆಗೆದು ಪರ್ವತ ಶಿಖರಗಳಿಂದ ಅವನನ್ನು ಹೊಡೆದರು. ಅವನು ನೆಲದ ಮೇಲೆ ಬಿದ್ದು ಲಕ್ಷ್ಮಣನಿಂದ ಹತನಾದ.

ಬಳಿಕ ಅತಿಕಾಯ ಮಹಾಕಾಯರು ಕಪಿ ಸೇನೆಯನ್ನು ಧ್ವಂಸ ಮಾಡ ತೊಡಗಿದರು ಲಕ್ಷ್ಮಣನನ್ನು ಪೀಡಿಸಿ ರಾಮನೊಡನೆಯೂ ಯುದ್ಧ ಮಾಡುತ್ತ ಸುಗ್ರೀವನನ್ನು ಗಾಯಗೊಳಿಸಿದರು. ಹನುಮಂತ ಜಾಂಬವಂತರು ಅವರನ್ನು ಸೋಲಿಸಿ ಸೆರೆ ಹಿಡಿದು ರಾಮನಿಗೊಪ್ಪಿಸಿದರು. ರಾಮನೆಂದ. 'ರಾಕ್ಷಸನೆ, ರಾವಣ, ಅವನ ಮಂತ್ರಿಗಳು ಮುಂತಾದವರ ಬಲವೆಷ್ಟೆಂದು ಹೇಳು.

**ಅತಿಕಾಯ** :- ನಾವು ಸೇನೆಯನ್ನು ವಿಭಾಗ ಮಾಡಿಕೊಂಡು ಮಾಡಬೇಕಾದ ಕಾರ್ಯಗಳನ್ನೆಲ್ಲ ನಿರ್ಣಯಿಸಿದ್ದೇವೆ. ವಿದ್ಯುನ್ಮಾಲಿ ಎಂಬ ರಾಕ್ಷಸ ಮಹಾ ಬಲಿಷ್ಠ. ವಿಚಿತ್ರವಾದ ಯುದ್ಧವನ್ನು ಮಾಡುವವ. ಅವನು ದೃಶ್ಯನಾಗಿಯೂ ಅದೃಶ್ಯನಾಗಿಯೂ

ಒಬ್ಬನೆ ನಿಂತು ಎಲ್ಲ ಕಪಿಗಳೊಡನೆ ಯುದ್ಧ ಮಾಡುತ್ತಾನೆ. ಉಳಿದವರೂ ಮಹಾಬಲ ಶಾಲಿಗಳು. ಅಸ್ತ್ರದಲ್ಲಿ ನಿಪುಣರು. ನಾವಿಬ್ಬರೂ ನಿಮ್ಮೊಡನೆ ಯುದ್ಧ ಮಾಡುತ್ತೇವೆ. ಕೊನೆಗೆ ರಾವಣನು ಪುಷ್ಪಕವನ್ನೇರಿ ಬಂದು ನಿನ್ನ ಮೇಲೆ ಪ್ರಹಾರಮಾಡುತ್ತಾನೆ. ಉಳಿದ ರಾಕ್ಷಸರೆಲ್ಲರೂ ಕುಂಭಕರ್ಣನೊಡನೆ ಬಂದು ನಿನ್ನನ್ನು ಸುತ್ತುಗಟ್ಟಿ ಸೆರೆಹಿಡಿದು ಸೀತೆಗೆ ತಂದು ತೋರಿಸುತ್ತಾರೆ. ಅವಳೆದುರಿನಲ್ಲಿಯೆ ನಿನ್ನನ್ನು ಕೊಲ್ಲುತ್ತಾರೆ.

**ರಾಮ** :- ನಿಮ್ಮಂಥ ಬಲಶಾಲಿಗಳಿಗೆ ಅಸಾಧ್ಯವೇನಿದೆ ? ನೀವು ಹೇಳುವಂತೆಯೆ ಆಗಬಹುದು. ಅದೃಷ್ಟವನ್ನು ಯಾರು ತಿಳಿದಿದ್ದಾರೆ ?

ರಾಮನ ಕೋಪವನ್ನು ನೋಡಿದ ಸುಗ್ರೀವ. ಅವನಿಗೆ ಮೊದಲೆ ಕೋಪ ಉರಿಯು ತೊಡಗಿತ್ತು. 'ಇವರಿಬ್ಬರನ್ನೂ ಕೊಲ್ಲಬೇಕು ಬಿಡಕೂಡದು' ಎಂದ ರಾಮನು ಮಾತ್ರ ಕೊಲ್ಲಲೊಪ್ಪಲಿಲ್ಲ. ಹನುಮಂತನಿಂದ ವಸ್ತ್ರಾಭರಣಗಳನ್ನು ತರಿಸಿ ಅವರಿಗಿತ್ತು ಕಳುಹಿಸಿದ.

ಅವರು ರಾಮನಿಗೆ ನಮಸ್ಕರಿಸಿ ಹೇಳಿದರು. 'ಈ ಲಂಕೆಯ ಹೆಬ್ಬಾಗಿಲಿನಲ್ಲಿ ಐದು ಮುಖದ ಮರದ ವಿಗ್ರಹವಿದೆ. ಇದು ಕಡಿದುಬಿದ್ದರೆ ರಾವಣನು ಯುದ್ಧದಲ್ಲಿ ಮಡಿಯುತ್ತಾನೆ. ಆದ್ದರಿಂದ ಅದು ಕಡಿದು ಬಿದ್ದೊಡನೆ ಎಲ್ಲ ರಾಕ್ಷಸರೂ ಪಾತಾಳಕ್ಕೆ ಹೋಗಿ ಸೇರಿಕೊಳ್ಳಬೇಕು. ಇದು ಶುಕ್ರಾಚಾರ್ಯರು ಕೊಟ್ಟಿರುವ ಎಚ್ಚರಿಕೆ. ಹಾಗೆ ಶಾಸನ ಲಿಖಿತವಾಗಿದೆ. ನೀನಿದ್ದನ್ನು ಒಂದು ಬಾಣದಿಂದ ಐದಾಗಿ ಕಡಿದುರುಳಿಸಿದರೆ ನಿನ್ನ ಶಕ್ತಿ ಎಷ್ಟೆಂದು ತಿಳಿದು ಅದಕ್ಕನುಗುಣವಾಗಿ ನಮ್ಮ ಯುದ್ಧದ ತೀಕ್ಷ್ಣತೆಯನ್ನು ತೋರುತ್ತೇವೆ.'

ರಾಮನು ಬಿಲ್ಲಿಗೆ ಹೆದೆ ಏರಿಸಿದ, ಹನುಮಂತನು ರಾಕ್ಷಸರನ್ನು ಕರೆದು 'ಬಾಣ ಪ್ರಯೋಗವನ್ನು ನೋಡಿರಿ' ಎಂದು ಹೇಳುತ್ತಿದ್ದಂತೆ ರಾಮನು ಬಾಣವನ್ನೆಸೆದ. ಬಾಣದ ಮಾರ್ಗವನ್ನೇ ರಾಕ್ಷಸರು ನೋಡಿದರು. ಕ್ಷಣದಲ್ಲಿ ಮರದ ವಿಗ್ರಹ ಐದು ಭಾಗಗಳಾಗಿ ಕಡಿದು ಬಿದ್ದಿತು. ಅದನ್ನು ನೋಡಿ ಹೇಳಿದರು. ರಾಕ್ಷಸರು, 'ರಾಮ, ನಮ್ಮ ಮಕ್ಕಳನ್ನು ನೀನೇ ಕಾಪಾಡಬೇಕು'. 'ಆಗಲಿ' ಎಂದ ರಾಮ. ರಾಕ್ಷಸರಿಬ್ಬರೂ ಲಂಕೆಗೆ ಹೊರಟುಹೋದರು.

ಇತ್ತ ಕಪಿಗಳು ಎರಡನೆಯ ಸುತ್ತಿನ ಕೋಟೆಯನ್ನು ಮುರಿಯಲು ತೊಡಗಿದರು. ಆಗ ರಾವಣನು ಬಂದು ಅವರನ್ನು ಬಾಣಗಳಿಂದ ಹೊಡೆದೋಡಿಸಿದ. ರಾಮನೊಡನೆ ಅತ್ಯಂತ ಘೋರ ಯುದ್ಧವನನು ಮಾಡಿದ. ಗಾಯಗೊಂಡು ರಕ್ತದಲ್ಲಿ ಮಿಂದು ಪಲಾಯನ ಮಾಡಿದ. ಕಪಿಗಳೂ ಲಕ್ಷ್ಮಣನೂ ಕೋಟಿಗಟ್ಟಲೆ ರಾಕ್ಷಸರನ್ನು ಕೊಂದರು.

ಮರುದಿನ ಬೆಳಿಗ್ಗೆ ವಿಭೀಷಣನು ರಾವಣನಿಗೆ ಬೋಧಿಸತೊಡಗಿದ. 'ಸಾಮದಾನ ಭೇದ ದಂಡಗಳಲ್ಲಿ ಈಗ ಮೂರನೆಯದನ್ನು ಪ್ರಯೋಗಿಸುವ ಕಾಲ. ನಾಲ್ಕನೆಯದು ಈಗ ಯೋಗ್ಯವಲ್ಲ. ಶತ್ರುವಿಗಿಂತ ನಮ್ಮ ಶಕ್ತಿ ಹೆಚ್ಚೆಂದು ತಿಳಿದರೆ ಅದು ಯೋಗ್ಯ. ಅದಕ್ಕೆ ವಿಪರೀತವಾಗಿ ಶತ್ರು ಪ್ರಬಲನಾಗಿದ್ದರೆ ಯುದ್ಧವು ಅಪಾಯಕಾರಿ. ರಾಮನು ಒಂದೇ ಬಾಣದಿಂದ ವಾಲಿಯನ್ನು ಕೊಂದವ. ವಾಲಿಯ ಬಲ ನಿನಗೆ ಗೊತ್ತು. ಮಾರೀಚನನ್ನೂ ಒಂದೇ ಬಾಣದಿಂದ ಕೊಂದ. ನಿನ್ನನ್ನೂ ಹೊಡೆದೋಡಿಸಿದ. ಇಂದ್ರಜಿತ್ತನೂ ಕೊಂದ. ಶೂರ ರಾಕ್ಷಸರನ್ನೆಲ್ಲ ಕೊಂದ. ಅಂಥವನೊಡನೆ ನೀನು ಯುದ್ಧ ಮಾಡುವೆಯಾ ? ಸೀತೆಯನ್ನೊಪ್ಪಿಸಿ ಶರಣಾಗತನಾದರೂ ಒಳ್ಳೆಯದೆ. ಗೋಪುರದಲ್ಲಿದ್ದ ಐದು ಮುಖದ

ವಿಗ್ರಹವನ್ನು ಒಂದು ಬಾಣದಿಂದ ಐದು ಭಾಗವಾಗಿ ಕಡಿದುರುಳಿಸಿದ ರಾಮನು ನಿನ್ನನ್ನು ಕೊಲ್ಲದಿರುತ್ತಾನೆಯೆ ? ನಿನಗಾಗಿ ಎಷ್ಟೋ ಜನ ಸತ್ತಿದ್ದಾರೆ ! ಸಾಯಲಿದ್ದಾರೆ ! ನೀತಿಯೊಂದೇ ಸುಖವನ್ನು ಕೊಡಬಲ್ಲುದು. ಮೂಢತನ ತೋರಿದರೆ ಎಂದೂ ಸುಖವಿಲ್ಲ.

ಅಣ್ಣ, ಸೀತೆ ಪತಿವ್ರತೆ, ಬಲಿಷ್ಠನಾದ ರಾಮನ ಮಡದಿ. ಅವಳು ನಿನ್ನನ್ನು ಬಯಸುತ್ತಿಲ್ಲ. ಮನುಷ್ಯ ಜಾತಿಯವಳು. ಅವಳನ್ನು ಗೌರವಿಸಿ ಕಳುಹಿಸಿಕೊಡು. ಇಚ್ಛಿಸದಿರುವ ಹೆಣ್ಣನ್ನು ಕೂಡಿದರೆ ಒಂದರ ಮೇಲೊಂದರಂತೆ ದುಃಖಗಳು ಬರತೊಡಗುತ್ತವೆ. ಆ ಸಹವಾಸವೂ ದುರ್ಗಂಧ ಮಲಯುಕ್ತವಾಗಿದ್ದು ಅಸಹ್ಯವಿರುತ್ತದೆ. ಅಣ್ಣ ನಿನಗೆ ಹಿತವಾದ ಪ್ರಿಯವಾದ ಒಂದು ಮಾತನ್ನು ಹೇಳುತ್ತೇನೆ, ಕೇಳು. ನೀನು ರಾಮನ ಬಳಿಗೆ ಹೋಗಿ ಕೇಳಿಕೊಳ್ಳು.

'ರಾಮ, ಶರಣಾಗತ ವತ್ಸಲ, ನೀನು ನನ್ನನ್ನು ಕ್ಷಮಿಸು. ನಾವೆಲ್ಲರೂ ರಾಕ್ಷಸರು. ತಮೋಗುಣದಿಂದ ಕೂಡಿ ಮಹಾಪಾಪಗಳನ್ನೂ ಮಾಡುವವರು. ಸೀತಾಪಹರಣದ ಅಪರಾಧವನ್ನು ಮರೆತು ನಮ್ಮನ್ನು ಮಕ್ಕಳಂತೆ ನೋಡಿಕೊಳ್ಳು. ನಾವು ನಿನ್ನವರು. ಕಾಪಾಡು, ಕೊಲ್ಲು, ಏನು ಬೇಕಾದರೂ ಮಾಡು.' - ಎಂದು.

ಹೀಗೆ ಮಾಡಿದರೆ ನಾವು ಉಳಿಯುತ್ತೇವೆ. ನಮ್ಮ ರಾಜ್ಯ ಉಳಿಯುತ್ತದೆ.

ಇದನ್ನು ಕೇಳಿ ರಾವಣನು ಸಿಟ್ಟಾಗಿ ಹೇಳಿದ. 'ನೀನು ರಾಕ್ಷಸನಲ್ಲ. ಶೂರನಲ್ಲ. ರಾಜನೀತಿಯನ್ನು ತಿಳಿದಿಲ್ಲ. ಶೂರರಾದವರಿಗೆ ಪರಸ್ತ್ರೀ ಪರದ್ರವ್ಯ ಪರರಾಜ್ಯಗಳನ್ನು ಭೋಗಿಸುವುದೆ ಉತ್ತಮಧರ್ಮ. ನಿನ್ನಂಥ ನಪುಂಸಕರಿಗಲ್ಲ. ಬೇಕೆನಿಸಿದರೆ ಶತ್ರುಪಕ್ಷವನ್ನು ಸೇರು, ಇಲ್ಲಿಂದ ಹೊರಟು ಹೋಗು.'

ವಿಭೀಷಣನು ರಾಮನಿಗೆ ಶರಣಾಗತನಾದ. ರಾವಣನು ರಾಕ್ಷಸರೊಡನೆ ಬಂದು ರಾಮ ಲಕ್ಷ್ಮಣರನ್ನೂ ಕಪಿಗಳನ್ನೂ ಇದಿರಿಸಿದ. ರಾವಣ ಮಹಾಬಲಶಾಲಿಯಾದ್ದರಿಂದ ರಾವನು ಅವನನ್ನು ಕೊಲ್ಲಲಾರದೆ ಕೊನೆಗೆ ವಿಭೀಷಣನ ಮುಖವನ್ನು ನೋಡಿದ. ಅವನು ಒಂದು ಮರ್ಮಸ್ಥಾನವನ್ನು ತಿಳಿಸಿದಾಗ ಅಲ್ಲಿಗೆ ಬಾಣವನ್ನು ಗುರಿಯಿಟ್ಟು ಹೊಡೆದ ರಾವಣ ಸತ್ತುಬಿದ್ದ. ಬಳಿಕ ಕುಂಭಕರ್ಣನು ಮಹಾಗದೆಯನ್ನೆತ್ತಿಕೊಂಡು ಬಂದು ಎಲ್ಲರನ್ನೂ ಹೊಡೆದು ಅನೇಕ ಕಪಿಗಳನ್ನು ಭಕ್ಷಿಸಿ ರಾಮನ ತಲೆಗೆ ಗದೆಯಿಂದ ಹೊಡೆದ. ಆಗ ರಾಮನು ತೀಕ್ಷ್ಣವಾದ ಬಾಣದಿಂದ ಅವನನ್ನು ಹೊಡೆದುಕೊಂದ.

ವಿಭೀಷಣನಿಂದ ರಾವಣ ಮುಂತಾದವರಿಗೆ ಉತ್ತರ ಕ್ರಿಯೆಗಳನ್ನು ಮಾಡಿಸಿದ ರಾಮ. ಅವನ ಹೆಸರಿನಲ್ಲಿ ಶಿವಾಲಯವನ್ನು ಕಟ್ಟಿಸಿ. ಅವನನ್ನು ಸಿಂಹಾಸನದಲ್ಲಿ ಕುಳ್ಳಿರಿಸಿ ಪಟ್ಟಾಭಿಷೇಕ ಮಾಡಿಸಿದ. ಸೀತೆಯನ್ನು ಅಗ್ನಿದಿವ್ಯದಿಂದ ಪರೀಕ್ಷಿಸಿ ಪಾರ್ವತಿ ಪರಮೇಶ್ವರರಿಗೆ ನಮಸ್ಕಾರ ಮಾಡಿಸಿದ. ಶಿವನಿಂದ ತನ್ನ ಮಡಿದ ಸೇನೆಗೆ ಆಯುಷ್ಯವನ್ನು ದೊರಕಿಸಿದ. ಪುಷ್ಪಕವನ್ನೇರಿ ಸಮುದ್ರವನ್ನು ದಾಟಿದ. ಸಮುದ್ರತೀರದಲ್ಲಿ ಸೇನಾಶಿಬಿರವನ್ನು ಹೂಡಿ ಅಲ್ಲಿ ಶಿವಲಿಂಗವನ್ನು ಪ್ರತಿಷ್ಠಿಸಿದ. ದೇವತೆಗಳಿಂದಲೂ ಋಷಿಗಳಿಂದಲೂ ಪೂಜಿತನಾಗಿ ಅಯೋಧ್ಯೆಗೆ ತೆರಳಿದ. ಅಲ್ಲಿ ಭರತನಿಂದಲೂ ನಾಗರಿಕರಿಂದಲೂ ವಶಿಷ್ಠಾದಿ ಮುನಿಗಳಿಂದಲೂ ಆದರಿಸಲ್ಪಡುತ್ತ ಅರಮನೆಯನ್ನು ಪ್ರವೇಶಿಸಿದ.

ಇಂದ್ರಾದಿ ದೇವತೆಗಳು ಬಂದು ರಾಮನಿಂದ ಸತ್ಕಾರ ಪಡೆದರು. ಕಪಿವೀರರಿಗೂ ಸನ್ಮಾನಗಳಾದುವು. ರಾಮನು ಜಡೆಯನ್ನು ತೆಗೆದುಹಾಕಿ ಪಟ್ಟಾಭಿಷೇಕ ಮಾಡಿಸಿಕೊಂಡ.

ರಾವಣವಧದಿಂದ ಹರ್ಷಿತರಾದ ದೇವತೆಗಳು ರಾಮನನ್ನು ಹೊಗಳಿದರು. 'ನೀನು ನಮ್ಮನ್ನು ಸದಾ ಹೀಗೆಯೆ ಕಾಪಾಡುತ್ತಿರು. ಆದಿನಾರಾಯಣನಾದ ನೀನು ಲಕ್ಷ್ಮಿಯೊಡನೆ ಸುಖವಾಗಿರು' ಎನ್ನುತ್ತ ಸ್ವರ್ಗಕ್ಕೆ ಹೊರಟು ಹೋದರು. ಅಯೋಧ್ಯೆಯ ಜನರೂ ಸಂತೋಷದಿಂದ ಹೇಳಿದರು, ನೀನು ಹಿಂತಿರುಗಿ ಬಂದು ಪ್ರಜೆಗಳನ್ನು ಕಾಪಾಡಲು ನಿಂತಿರುವುದು ನಮಗೆ ಸಂತೋಷ ಉಂಟು ಮಾಡಿದೆ. ಯಜ್ಞದಾನ ಮುಂತಾದುವನ್ನು ಮಾಡುತ್ತ ಧರ್ಮವನ್ನು ಕಾಪಾಡುತ್ತಿರು. ರಾಮನು ಅವರಿಗೆ ವಸ್ತ್ರ ಆಭರಣಗಳನ್ನಿತ್ತು ತೃಪ್ತಿಪಡಿಸಿದ. ಋಷಿಗಳ ಯೋಗಕ್ಷೇಮವನ್ನು ವಿಚಾರಿಸಿದ. ಅವರು ಹೇಳಿದರು 'ನೀನು ರಾಜನಾಗಿದ್ದರೆ ನಮಗೆ ಯಾವ ಚಿಂತೆಯೂ ಇರುವುದಿಲ್ಲ' ರಾಮನು ಅವರಿಗೆ ಮೃಷ್ಟಾನ್ನ ಭೋಜನವನ್ನಿತ್ತ. ಅವರು ಉಂಡು ತೃಪ್ತರಾಗಿ ಆಶ್ರಮಗಳಿಗೆ ತೆರಳಿದರು. ಅಂದಿನಿಂದ ರಾಮನು ನಿಷ್ಕಂಟಕವಾದ ರಾಜ್ಯವನ್ನಾಳುತ್ತ ಎಲ್ಲ ಪ್ರಜೆಗಳ ಪ್ರೀತಿಯನ್ನು ಸಂಪಾದಿಸಿ ಪತ್ನಿಯೊಂದಿಗೆ ಮತ್ತು ಸೋದರರೊಂದಿಗೆ ಸುಖವಾಗಿದ್ದನು.

ಪಾತಕಿಯಾದವನೂ ಈ ಕಥೆಯನ್ನು ಕೇಳಿದರೆ ಎಲ್ಲ ಪಾಪಗಳನ್ನೂ ಕಳೆದುಕೊಂಡು ಪರಬ್ರಹ್ಮನನ್ನು ಹೊಂದುತ್ತಾನೆ. ಇದನ್ನು ಸ್ಮರಿಸುವವನೂ ದುರ್ಗತಿಗೀಡಾಗುವುದಿಲ್ಲ. ಹೇಳುವವನೂ ನರಕವನ್ನು ಕಾಣುವುದಿಲ್ಲ.

*ಇತಿ ಪದ್ಮ ಮಹಾಪುರಾಣ ಭಾಗ - ೨ರ ಪಾತಾಳ ಖಂಡದಲ್ಲಿ ಶಿವರಾಘವ ಸಂವಾದದಲ್ಲಿ ಪುರಾಕಲ್ಪೀಯ ರಾಮಾಯಣ ಕಥನವೆಂಬ ಐವತ್ತಮೂರನೆ ಅಧ್ಯಾಯ ಮುಗಿದುದು*



## ಅಕಥನ ಶಿವಪೂಜೆ

**ಅಧ್ಯಾಯ - ೫೪**

**ಸೂತ ಉವಾಚ**

**ಸೂತ :-** ಶ್ರೀರಾಮನು ಭಾರಧ್ವಾಜಾಶ್ರಮದಲ್ಲಿ ಊಟ ಮಾಡಿ ಶಂಭುಮುನಿ, ವಿಷ್ಣು ಮತ್ತು ಕಪಿಗಳೊಡನೆ ತಿರುಗಿ ಸಭಾಭವನವನ್ನು ಪ್ರವೇಶಿಸಿ ಸಿಂಹಾಸನವೇರಿ ಕುಳಿತ. ಶಂಭುಮುನಿ ವಿಷ್ಣು ಕಪಿಗಳು ಎಲ್ಲರೂ ಉನ್ನತವಾದ ಆಸನದಲ್ಲಿ ಕುಳಿತರು. ರಾಮನು ಶಂಭುಮುನಿಯನ್ನು ಕೇಳಿದ.

**ರಾಮ :-** ಶಿವನು ಗೌತಮಾಶ್ರಮದಲ್ಲಿ ದೇವತೆಗಳೊಂದಿಗೆ ಇದ್ದು ಇನ್ನೇನು ಮಾಡಿದನು ?

**ಶಂಭು :-** ಹನುಮಂತನು ಶಿವನಲ್ಲಿ ಹೀಗೆ ಕೇಳಿದ.

**ಹನುಮಂತ :-** ನ್ಯಾಯದಿಂದ ಸಂಪಾದಿಸಿದ ವಸ್ತುಗಳಿಂದ ಶಿವನನ್ನು ಪೂಜಿಸಿದರೆ ಏನು ಫಲ ಸಿಗುವುದು ? ಕಳ್ಳತನದಿಂದ ಪಡೆದ ವಸ್ತುಗಳನ್ನು ಕೆಟ್ಟುಹೋದ ವಸ್ತುಗಳನ್ನು ಸಮರ್ಪಿಸಿದ ವಸ್ತುಗಳನ್ನೂ ಸಮರ್ಪಿಸಿದರೆ ಏನು ದೋಷವಿದೆ ?

**ಶಿವ** :- ಕಪಿಯೆ, ನ್ಯಾಯದಿಂದ ಸಂಪಾದಿಸಿದ ವಸ್ತುಗಳನ್ನು ಶಿವನಿಗರ್ಪಿಸಿದರೆ ಈ ಗೌತಮನಿಗೆ ದೊರೆತಂಥ ಐಶ್ವರ್ಯ ಲಭಿಸುತ್ತದೆ. ಹಿಂದೆ ಮಂಕಣನ ಮಗನಾಗ ಅಕಥನೆಂಬ ದರಿದ್ರ ಬ್ರಾಹ್ಮಣನಿದ್ದ. ಒಳ್ಳೆ ಹೆಂಡತಿಯೊಬ್ಬಳು ಅವನಿಗಿದ್ದಳು. ತಂದೆ ತಾಯಿಗಳಿರಲಿಲ್ಲ. ದುಃಖದಲ್ಲಿರುವವರನ್ನು ಕಂಡರೆ ಅವನಿಗೆ ಬಲು ಅನುಕಂಪ. ಐದು ದಿನ ಉಪವಾಸವಿದ್ದು ಆರನೇದಿನ ಉಣ್ಣುವ ವ್ರತವನ್ನು ಸದಾ ಅನುಷ್ಠಾನ ಮಾಡುತ್ತಿದ್ದ. ಒಮ್ಮೆ ಐದುದಿನ ಉಪವಾಸ ಮಾಡಿ ಆರನೆ ದಿನ ಉಣಲು ಆತ ಹೊರಟಾಗ ಒಬ್ಬ ಯತಿ ಅತಿಥಿಯಾಗಿ ಬಂದು 'ನಾನು ಮಾಸೋಪವಾಸಿ. ಇಂದು ನಿನ್ನಲ್ಲಿ ಪಾರಣೆ ಮಾಡುತ್ತೇನೆ.' ಬೇರೆ ಎಲ್ಲಿಗೂ ಹೋಗಲಾರೆ' ಎಂದ.

ಆಕಥನು ಯತಿಯ ಕಾಲು ತೊಳೆದು ಬಾಳೆ ಎಲೆಯಲ್ಲಿ ತನಗಾಗಿ ಸಿದ್ಧಪಡಿಸದ ಅನ್ನವನ್ನು ಉಣಬಡಿಸಿದ. ಯತಿ ಉಂಡು ತೃಪ್ತನಾಗಿ ಹೊರಟುಹೋದ. ಇತ್ತ ಆಕಥ ದಂಪತಿಗಳು ಕಪೋತ ವೃತ್ತಿಯಿಂದ ಪಾರಿವಾಳಗಳಂತೆ ಧಾನ್ಯಗಳನ್ನು ಹೆಕ್ಕಿತಂದು ಅನ್ನವನ್ನು ಸಿದ್ಧಪಡಿಸಿದರು. ಬಳಿಕ ಶಿವಪೂಜೆಗೆ ಆಕಥ ಕುಳಿತಿದ್ದಾಗ ದಿಗಂಬರನಾದ. ಒಂದು ಕಣ್ಣು ಒಂದು ಕಾಲು ಇಲ್ಲದ ಕಿವಿ ಕೇಳಿಸದ ಮುನಿ ಅತಿಥಿಯಾಗಿ ಬಂದ. ಅವನು ಶಾಸ್ತ್ರಜ್ಞ ಸಾಮಗಾನ ಮಾಡುತ್ತಿದ್ದ. ಆಕಥನು ಹೆಂಡತಿಯನ್ನು ಕರೆದು ಹೇಳಿದ.

**ಆಕಥ** :- ಆ ಅತಿಥಿಗೆ ನಮ್ಮ ಅನ್ನದಲ್ಲಿ ಅರ್ಧ ಭಾಗವನ್ನು ಬಡಿಸು. ಉಳಿದ ಅರ್ಧ ಭಾಗ ನಿನಗಿರಲಿ. ಈ ಆರನೆ ದಿನವೂ ನೀನುಣ್ಣದಿದ್ದರೆ ಬದುಕಿ ಉಳಿಯಲಾರೆ, ಅಲ್ಲವೆ ?

**ಹೆಂಡತಿ** :- ಇಷ್ಟು ಆಯುಷ್ಯವೆಂದು ಹಣೆಯಲ್ಲಿ ಬರೆದಿದ್ದರೆ ನಡುವೆ ಮರಣ ಬರಲಾರದು.

**ಆಕಥ** :- ದಕ್ಷನಿಗೆ ಆಯುಷ್ಯವಿದ್ದರೂ ವೀರಭದ್ರನು ತಲೆ ಕಡಿಯಲಿಲ್ಲವೇ ! ನಮ್ಮಂಥ ಪಾಪಿಗಳಾದ ಮನುಷ್ಯರ ಪಾಡೇನು ? ನಿನ್ನ ಪಾಲಿನ ಅನ್ನವನ್ನು ನೀನುಣ್ಣು. ನನ್ನ ಪಾಲಿನದನ್ನು ಅವನಿಗೆ ಬಡಿಸು.

**ಹೆಂಡತಿ** :- ನೀನು ಉಪವಾಸವಿರುವಾಗ ನಿನ್ನನ್ನು ಬಿಟ್ಟು ನಾನು ಹೇಗೆ ಉಣಲಿ ? ನಾನು ಹಿಂದೆಂದಾದರೂ ಹಾಗೆ ಮಾಡಿದ್ದೆನೆ? ಅನ್ನವೆಂಬುದು ಪ್ರಾಣಿಗಳಿಗೆ ಪ್ರತ್ಯಕ್ಷ ಪ್ರಾಣಕ್ಕೆ ಸಾಮಾನ. ಅನ್ನವಿಕ್ಕಿದರೆ ಪ್ರಾಣದಾನ ಮಾಡಿದಂತಾಗುತ್ತದೆ. ಅನ್ನದಿಂದಲೆ ಪ್ರಾಣಿಗಳ ಹುಟ್ಟು ಬೆಳವಣಿಗೆಗಳು. ಅಸ್ಥಿರವಾದ ಜೀವನದಲ್ಲಿ ಅನ್ನದಾನ ಮಾಡದಿದ್ದರೆ ಜನ್ಮವೆ ನಿರರ್ಥಕ. ಪರಲೋಕದಲ್ಲಿ ನಮ್ಮೊಡನೆ ಬರುವುದು ಪುಣ್ಯ ಒಂದೆ. ಬಂಧು ಮಿತ್ರ ಯಾರೂ ಬರುವುದಿಲ್ಲ. ಹೆಂಡತಿಯ ಈ ಮಾತನ್ನು ಕೇಳಿದಮೇಲೆ ಆಕಥನು ನಿಶ್ಚಿಂತೆಯಿಂದ ಎಲ್ಲ ಅನ್ನವನ್ನೂ ಮುನಿಗೆ ಬಡಿಸಿದ. ಅಷ್ಟರಲ್ಲಿ ಒಬ್ಬ ಹುಚ್ಚನು ಎಲ್ಲಿಂದಲೊ ಬಂದು ಆ ಮುನಿಯನ್ನು ಮನೆಯಿಂದ ಹೊರಗೆತ್ತಿ ತಂದು ಮನೆಗೆ ಬೆಂಕಿ ಇಟ್ಟ. ಆಕಥ ದಂಪತಿಗಳನ್ನು ಚೆನ್ನಾಗಿ ಹೊಡೆದ. ಉಪವಾಸದಿಂದ ಅಶಕ್ತರಾದ ಅವರು ಏನೂ ಮಾಡುವಂತಿರಲಿಲ್ಲ. ಇತ್ತ ಮನೆಯೊಳಗಿದ್ದ ಶಿವಲಿಂಗವನ್ನು ಬೇಗನೆ ಹೊರಗೆ ತರಲು ಆಕಥನು ಒಳಗೆ ಪ್ರವೇಶಿಸಿದ. ಲಿಂಗಕ್ಕೆ ಅರ್ಪಿಸಿದ ವಸ್ತ್ರ ಭೂಷಣ ಮುಂತಾದುವೆಲ್ಲ ಆಗಲೆ ಸುಟ್ಟು ಹೋಗಿತ್ತು. ಲಿಂಗವನ್ನು ಹೊರಗೆ ಎತ್ತಿ ತಂದು ಹೆಂಡತಿಯ ಬಳಿಯಲ್ಲಿ ಹೇಳಿದ. 'ಶಿವನ ಪೂಜೆಯ ಎಲ್ಲ ವಸ್ತುಗಳೂ ಸುಟ್ಟು ಹೋದುವು. ನನ್ನ ಶರೀರದಲ್ಲಿ ಮಾತ್ರ ಮುಖ ಒಂದೆ ಸುಟ್ಟಿದೆ. ಇದು ಕೂಡದು. ನನ್ನ ಶರೀರವನ್ನೆಲ್ಲ ಸುಟ್ಟು ಕೊಳ್ಳುವೆನು.

ಆ ಹೆಳವ ಮುನಿ ಹೇಳಿದ, 'ಶಿವನ ವಸ್ತ್ರ ಭೂಷಣಗಳು ಸುಟ್ಟರೆ ಬೇರೆ ಅಂಥವೆ ವಸ್ತುಗಳನ್ನು ತಂದು ಅರ್ಪಿಸಿದರಾಯಿತು.' ಆಕಥನೆಂದ, 'ನಾನೆಲ್ಲಿಂದ ತರಲಿ ? ಕಳವು ಮಾಡಿ ತರಲೆ ? ಹಾಗೆ ಅನ್ಯಾಯದಿಂದ ತಂದ ವಸ್ತುಗಳಿಂದ ಶಿವ ಪೂಜೆಮಾಡಿದರೆ ಶುಭವಾಗುವುದಿಲ್ಲ.' ಹೀಗೆ ಹೇಳಿ ಆಕಥನು ಬೆಂಕಿಗೆ ಹಾರಲು ತೊಡಗಿದ. ಅಷ್ಟರಲ್ಲಿ ಆ ಲಿಂಗವನ್ನು ಹಿಡಿದುಕೊಂಡು ಹುಚ್ಚನು ಅದೃಶ್ಯನಾದ. ಹೆಳವನು ಶಿವನಾಗಿ ನಿಂತ. ಆಕಥನನ್ನು ತಡೆದು 'ಮುನಿಯೆ, ಚಿಂತಿಸಬೇಡ. ಬೇಕಾದ ವರವನ್ನು ಕೊಡುತ್ತೇನೆ. ಕೇಳಿಕೊಳ್ಳು' ಎಂದ. ಆಕಥನು ಪ್ರಭುವಿನ ಪಾದದಲ್ಲಿ ನಿಶ್ಚಲವಾದ ಭಕ್ತಿ ತನಗುಂಟಾಗಲೆಂದು ಬೇಡಿದ.

**ಸೂತ** :- ರಾಮನು ಈ ಕಥೆಯನ್ನು ಕೇಳಿ ಸಂತುಷ್ಟನಾದ. ಭಾರದ್ವಾಜನನ್ನು ನಮಸ್ಕರಿಸಿ ಪ್ರಯಾಣಕ್ಕೆ ಅನುಮತಿ ಬೇಡಿದ. ಭಾರದ್ವಾಜನು ಎಲ್ಲರನ್ನೂ ನಮಸ್ಕರಿಸಿ ಬೀಳ್ಕೊಟ್ಟ. ಅವರೆಲ್ಲರೂ ಹೊರಟು ಹೋದರು.

**ಮುನಿಗಳು** :- ರಾಮನು ಅಯೋಧ್ಯೆಗೆ ಹೋಗಿ ಏನು ಮಾಡಿದ? ಶಂಭುಮುನಿ ಏನು ಮಾಡಿದ?

**ಸೂತ** :- ಮರುದಿನ ಕೌಸಲ್ಯೆಯ ಮಾಸಿಕ ಶ್ರಾದ್ಧವನ್ನು ರಾಮನು ಮಾಡಬೇಕಾಗಿತ್ತು. ಅದಕ್ಕಾಗಿ ಉತ್ತಮ ಬ್ರಾಹ್ಮಣರನ್ನು ಅವನು ಕರೆಸಿಕೊಂಡ ಶಂಭು, ನಾರದ, ರೋಮಶ, ಭೃಗು ವಿಶ್ವಾಮಿತ್ರ ಇವರು ಆಮಂತ್ರಿತರಾದರು. ಒಪ್ಪೊತ್ತು ಊಟಮಾಡಿ ಭೂಶಯನ ಮಾಡಿದ ರಾಮ ಮರುದಿನ ಎದ್ದು ಪ್ರಾತಃಸ್ನಾನಮಾಡಿ ಅಡಿಗೆ ಮಾಡಿಸಿದ. ವಡೆ ಮುಂತಾದ ಮೂವತ್ತೆಂಟು ಬಗೆಯ ಭಕ್ಷ್ಯಗಳು, ಆರು ಬಗೆ ಪಾಯಸ, ಇನ್ನೂರು ಬಗೆಯ ಪಲ್ಯ, ಮುನ್ನೂರು ಬಗೆಯ ಪಕ್ವಾನ್ನಗಳು. ಇವನ್ನೆಲ್ಲ ಮಾಡಿಸಿ ತಮ್ಮಂದಿರು ಮತ್ತು ಪುರೋಹಿತರೊಡನೆ ನದಿಗೆ ಸ್ನಾನಕ್ಕೆ ಹೋದನು. ಸರಯೂ ನದಿಯಲ್ಲಿ ಸ್ನಾನಮಾಡಿ ಅಗ್ನಿಯಲ್ಲಿ ಹೋಮಿಸಿ ದೇವತಾರ್ಚನೆಯನ್ನು ಮುಗಿಸಿ ಬಂದು ಬ್ರಾಹ್ಮಣರಿಗೆ ಸ್ವಾಗತ ಹೇಳಿದ, ರಾಮ. ಪ್ರಾಣಾಯಾಮ ಸಂಕಲ್ಪಮಾಡಿ ಬ್ರಾಹ್ಮಣರಿಗೆ ಅಸನವನ್ನಿತ್ತ. ರೋಮಶ ನಾರದರನ್ನು ವಿಶ್ವೇ ದೇವತೆಗಳ ಸ್ಥಾನಕ್ಕೂ ಶಂಭು ಭೃಗು ವಿಶ್ವಾಮಿತ್ರರನ್ನು ಮಾತೃ ಸ್ಥಾನಕ್ಕೂ ವರಸಿದ. ಗೋಮಯದಿಂದ ಮಂಡಲಮಾಡಿ ಅವರನ್ನು ಪೂಜಿಸಿದ. ಸೀತೆ ತಂದಿತ್ತ ನೀರಿನಿಂದ ಅವರ ಕಾಲು ತೊಳೆದು ಆಚಮನಮಾಡಿಸಿ ಅರಮನೆಯೊಳಗೆ ಕರೆದೊಯ್ದ. ಆಗ ಒಬ್ಬ ಮುದಿಬ್ರಾಹ್ಮಣ ಬಂದ, ತುಂಬ ಕೃಶನಾಗಿದ್ದನಾತ. ತಲೆ ಕಾಲುಗಳು ನಡುಗುತ್ತಿದ್ದುವು. ಕೆಮ್ಮುತ್ತಿದ್ದ ಜೊಲ್ಲು ಸುರಿಸುತ್ತಿದ್ದ. 'ನಾನೊಬ್ಬ ಬ್ರಾಹ್ಮಣ ನನಗೂ ಊಟಕೊಡು' ಎಂದನಾತ. ರಾಮನು ಲಕ್ಷ್ಮಣನನ್ನು ಕರೆದು 'ಬ್ರಾಹ್ಮಣನ ಕಾಲು ತೊಳೆ' ಎಂದ. 'ರಾಮ, ನೀನೆ ಕಾಲು ತೊಳೆದರೆ ನಾನುಣ್ಣುವೆನೆಂದ ಬ್ರಾಹ್ಮಣ. 'ನನ್ನನ್ನು ತಿರಸ್ಕಾರದಿಂದ ಕಾಣುವೆಯ ? ಆ ಬ್ರಾಹ್ಮಣರು ನನಗಿಂತ ಹೆಚ್ಚಿನವರೇನು ? ನಿನಗೆ ಋಷಿಗಳು ಆಚರಿಸುವ ಶ್ರಾದ್ಧನಿಯಮಗಳು ಗೊತ್ತಿಲ್ಲ. ನನಗೆ ಅವಮಾನ ಮಾಡಿದರೆ ಎಲ್ಲ ಬ್ರಾಹ್ಮಣರನ್ನೂ ಅವಮಾನಿಸಿದಂತೆ. ಅದರಿಂದ ಶ್ರಾದ್ಧ ಕೆಡುತ್ತದೆ. ನೀನೂ ನರಕಕ್ಕೆ ಹೋಗುವೆ' ಎಂದು ಆಕ್ಷೇಪಿಸಿದ. ರಾಮನು ಒಡನೆ ತಾನೆ ಆ ಬ್ರಾಹ್ಮಣನ ಕಾಲು ತೊಳೆದು ಆಚಮನಮಾಡಿ ಎಲ್ಲ ಬ್ರಾಹ್ಮಣರಿಗೂ ಆಸನವಿತ್ತು ಪ್ರಾಣಾಯಾಮ ಮಾಡಿದ. ಅವರ ಅನುಜ್ಞೆಪಡೆದು ಅಪಾಹತ ಎಂಬ ಮಂತ್ರದಿಂದ ದ್ವಾರದೇಶದಲ್ಲಿ ಎಳ್ಳುನೀರು ಬಿಟ್ಟ. ಉದೀರತಾ ಎಂಬ ಮಂತ್ರದಿಂದ ಪಿತೃಪಾತ್ರ ಸ್ಥಳದಲ್ಲಿ ಎಳ್ಳುನೀರೆರೆದ. ಗಾಯತ್ರಿಯಿಂದ ವಿಶ್ವೇದೇವ ಪಾತ್ರಸ್ಥಳದಲ್ಲಿ ಅಕ್ಷತೋದಕವನ್ನಿತ್ತ. ಅಡಿಗೆಯನ್ನೆಲ್ಲ ಪ್ರೋಕ್ಷಿಸಿದ. ಶ್ರಾದ್ಧ

ಭೂಮಿಯನ್ನು ಗಯೆ ಎಂದು ಭಾವಿಸಿ ಜನಾರ್ದನನ್ನೂ ವಸುಮುಂತಾದವರನ್ನೂ ಪಿತೃಗಳನ್ನೂ ಧ್ಯಾನಿಸಿ ಶ್ರಾದ್ಧಮಾಡೆಂದು ಮಂತ್ರವನ್ನು ಹೇಳಿದ. ಯಮ ಆಘನ ಅಕ್ಕಿಯಿಂದ ವಿಶ್ವೇದೇವಾರ್ಚನೆ, ಬುಡತುದಿಗಳಿಂದ ಎರಡುದರ್ಭೆ ಸೇರಿಸಿ ಇಟ್ಟುಕೊಂಡು ಅಕ್ಷತೆಯನ್ನು ತೆಗೆದುಕೊಂಡು ಬಲಗಾಲನ್ನು ಮಂಡಿಹಾಕಿಕೊಂಡು ವಿಶ್ವೇದೇವಸ್ಥಾನದ ಬ್ರಾಹ್ಮಣನ ಕೈಗೆ ನೀರೆರೆದ. ಪುರೂರವಾರ್ದ್ರವ ದೇವತೆಗಳಿಗಿದು ಆಸನವೆನ್ನುತ್ತ ಆಸನವನ್ನಿತ್ತ. ಕ್ಷಣವನ್ನು ಕೇಳಿ ದರ್ಭೆಯ ಮೇಲೆ ಒಂದು ಪಾತ್ರೆ ಕವುಚಿಟ್ಟು ಅದರ ಮೇಲೆ ಕೂರ್ಚವಿಟ್ಟ, ರೌಕ್ಮಪಾತ್ರೆಯ ನೀರಿನಿಂದ ಪ್ರೋಕ್ಷಿಸಿ ಕೂರ್ಚವನ್ನು ಪಾತ್ರೆಯೊಳಗಿಟ್ಟು ಶಂನೋದೇವಿ ಎಂಬ ಮಂತ್ರದಿಂದ ನೀರೆರೆದ. ಯವೋಸಿಧಾನ್ಯರಾಜೊವಾ ಎಂಬ ಮಂತ್ರದಿಂದ ಯವವನ್ನು ಹಾಕಿದ. ಬ್ರಾಹ್ಮಣರಿಗೆ ಅರ್ಘ್ಯವನ್ನಿತ್ತ. ವಿಶ್ವೇದೇವರ ನ್ನಾವಾಹಿಸಿದ 'ವಿಶ್ವೇದೇವಾಃ ಶ್ರುಣುತೇಮಂ, ಆಗಚ್ಛಂತು ಮಹಾಭಾಗಾಃ ಎಂಬ ಮಂತ್ರ ಉಚ್ಚರಿಸಿದ. ವಿಶ್ವೇದೇವಪಾತ್ರೆಯನ್ನೂ ಪವಿತ್ರವನ್ನೂ ಬ್ರಾಹ್ಮಣರ ಕೈಲಿಟ್ಟ'. ಯಾ ದವ್ಯಾ ಆಪಃ. ಎಂದು ಅರ್ಘ್ಯವಿತ್ತ. ಶುದ್ಧೋದಕವನ್ನಿತ್ತ. ಅಕ್ಷತೆಯಿಂದ ಪೂಜಿಸಿದ.

ಜನಿವಾರವನ್ನು ಎಡಗಡೆಗೆ ಹಾಕಿಕೊಂಡು ಉಪವೀತಿಯಾದ ಬ್ರಾಹ್ಮಣನಿಗೆ ಆಸನವನ್ನಿತ್ತು ದಕ್ಷಿಣಕ್ಕೆ ಮುಖಮಾಡಿ ಕ್ಷಣವನ್ನಿತ್ತ. ಮೂರು ಪಾತ್ರೆಗಳನ್ನು ಕವುಚಿಟ್ಟು ಮೂರು ಪವಿತ್ರಗಳನ್ನು ಅವುಗಳ ಮೇಲಿಟ್ಟು ಪ್ರೋಕ್ಷಿಸಿ ಪಾತ್ರೆಯೊಳಗಿಟ್ಟು ಶಂನೋದೇವಿ ಎಂದು ನೀರೆರೆದ. ತಿಲೋಸಿ ಸೋಮದೇವತ್ಯಃ ಎಂದು ಎಳ್ಳುಹಾಕಿದ. ಪಿತೃಗಳನ್ನು ಬ್ರಾಹ್ಮಣರಲ್ಲಿ ಆವಾಹಿಸಿ ಉಶಂತಸ್ತ್ವಾ ಎಂದು ಮಂತ್ರದಿಂದ ಅರ್ಘ್ಯವಿತ್ತ. ಅರ್ಚನೆ ಮಾಡಿದ. ಸೋಮಾಯ ಪಿತೃಮತೆ ಸ್ವಧಾ ನಮಃ ಯಮಾಯಾಂಗಿರಸೇ ಸ್ವಧಾನಮಃ ಅಗ್ನಯೇ ಕವ್ಯವಾಹನಾಯ ಸ್ವಧಾನಮಃ ಎಂದು ಮೂರು ಬಾರಿ ತುಪ್ಪ ಬೆರಸಿದ ಅನ್ನದಿಂದ ಅಗ್ನಿಯಲ್ಲಿ ಆಹುತಿಕೊಟ್ಟು ಬ್ರಾಹ್ಮಣರ ಬಳಿಗೆ ಹೋಗಿ ಪಿತೃಪಾತ್ರಕ್ಕೆ ಮೂರುಬಾರಿ ಅನ್ನ ಹಾಕಿದ. ಉಳಿದ ಅನ್ನವನ್ನು ಪಿಂಡ ಪಾತ್ರಕ್ಕೆ ಹಾಕಿದ. ಭಕ್ಷ್ಯಭೋಜ್ಯಗಳನ್ನು ಬಡಿಸಿದ.

ಅಷ್ಟರಲ್ಲಿ ಮುದಿ ಬ್ರಾಹ್ಮಣನು ತನಗೆ ಹಸಿದಿದೆ ಬೇಗನೆ ಬಡಿಸು ಎನ್ನುತ್ತಿದ್ದ. ರಾಮನು 'ಕ್ಷಣ ಕಾಲ ತಾಳು' ಎನ್ನುತ್ತ ದೇವತೆಗಳಿಗೂ ಪಿತೃಗಳಿಗೂ ಅನ್ನದಾನ ಮಾಡಿ ಮುದಿ ಬ್ರಾಹ್ಮಣನಿಗೂ ಬಡಿಸಿದ. ಅವನು ಒಂದೇ ತುತ್ತಿಗೆ ಎಲ್ಲವನ್ನು ತಿಂದು 'ನೀನು ಬಡಿಸಿದುದು ಪ್ರಾಣಾಹುತಿಗೆ ಮಾತ್ರ ಆಯಿತು. ಮಾಡಿದ ಅಡಿಗೆಯೆಲ್ಲ ನನಗೊಬ್ಬನಿಗೆ ಪ್ರಾಣಾಹುತಿಗೆ ಸಾಲದು. ನನಗೆ ಊಟವೆಲ್ಲಿದೆ ? ಇವರಿಗೆಲ್ಲಿದೆ ? ಎನ್ನತೊಡಗಿದ. ರಾಮನು ಆಶ್ಚರ್ಯಪಟ್ಟು ಶಂಭುವಿನ ಬಳಿಯಲ್ಲಿ ಬೇಡಿದ, ನೀನು ತಂದೆ. ಪಾರ್ವತಿ ತಾಯಿ, ಅನ್ನಪೂರ್ಣೆ. ಅವಳು ಬಡಿಸಲಿ. ಆಗ ಪಾರ್ವತಿ ತಾನೆ ಬಡಿಸ ತೊಡಗಿದಳು. ಕೈಗೆ ಹಾಕಿದ ಪಾಯಸವನ್ನು ಬ್ರಾಹ್ಮಣನು ಕುಡಿದ. ಆದರೂ ಕೈಯಲ್ಲಿ ಇನ್ನೂ ಪಾಯಸವಿತ್ತು. ಅದು ಅಕ್ಷಯವಾಗಿತ್ತು. ಬ್ರಾಹ್ಮಣನು ಇನ್ನೊಂದು ಕೈಯೊಡ್ಡಿದ. ಆ ಕೈಗೂ ಪಾರ್ವತಿ ಪಾಯಸ ಬಡಿಸಿದಳು, ಅದೂ ಅಕ್ಷಯವಾಯಿತು. ಬ್ರಾಹ್ಮಣನು ಇನ್ನೊಂದು ಕೈ ಒಡ್ಡಿದ. ಅದಕ್ಕೆ ತೊವ್ವೆ ತುಪ್ಪದನ್ನಗಳನ್ನು ಬಡಿಸಿದಳು. ಅದೂ ಅಕ್ಷಯವಾಯಿತು. ಬ್ರಾಹ್ಮಣನು ಸಾವಿರಾರು ಕೈಗಳನ್ನು ಸೃಷ್ಟಿಸಿ ಒಡ್ಡಿದ. ಅವುಗಳಲ್ಲೆಲ್ಲ ಅಕ್ಷಯವಾದ ಅನ್ನ ತುಂಬಿದ ಮೇಲೆ ಬ್ರಾಹ್ಮಣ ಸುಮ್ಮನಾದ.

ಬಳಿಕ ಬ್ರಾಹ್ಮಣನು ಆ ಅನ್ನವನ್ನೆಲ್ಲ ಮೈಗೆ ಬಳಿದುಕೊಂಡು ಎದ್ದ. ಅವನು ಹಾಗೆ ಮಾಡದಿರುತ್ತಿದ್ದರೆ ಕೈಯಲ್ಲಿ ಅನ್ನ ಪಾಯಸಗಳು ತುಂಬಿರುತ್ತಿದ್ದುವು ಊಟಕ್ಕೋಸ್ಕರ ಬೇಡಿದ ಅನ್ನ ಅಕ್ಷಯವಾಗಿತ್ತು. ಬೇರೆ ರೀತಿಯಿಂದ ಅದನ್ನು ಉಪಯೋಗಿಸಿದರೆ ಅಕ್ಷಯವಾಗಲಾರದೆಂದುಕೊಂಡು ಬ್ರಾಹ್ಮಣನು ಹಾಗೆ ಮಾಡಿದ್ದ.

ರಾಮನು ಬಡಿಸಿದ ಎಲೆಗಳಿದ್ದಲ್ಲಿ ದಕ್ಷಿಣಾಭಿಮುಖವಾಗಿ ಪಿಂಡ ಪ್ರಧಾನ ಮಾಡಿದ. ಬ್ರಾಹ್ಮಣರು ಕೈ ಬಾಯಿ ತೊಳೆದುಕೊಂಡು ಹೋದರು. ಮುದಿ ಬ್ರಾಹ್ಮಣನು 'ತಾನು ಏಳಲು ಅಸಮರ್ಥನು' ಎಂದ. ಹನುಮಂತನು ಅವನನ್ನು ಬಾಲದಿಂದ ಮಣೆಸಹಿತವಾಗಿ ಎತ್ತಿ ಬಹು ಪ್ರಯತ್ನದಿಂದ ಹೊರಗೆ ತಂದಿಟ್ಟ. ಜಾಂಬವಂತನು ನೀರು ತಂದಿತ್ತರೆ ಬೇಡವೆಂದ ಬ್ರಾಹ್ಮಣ. 'ಸೀತೆ ತೊಳೆಯಬೇಕು ಲಕ್ಷ್ಮಣನು ನೀರು ಹಾಕಬೇಕು' ಎಂದ. ಅವರು ಹಾಗೆ ಮಾಡಿದರು. ಜಾಂಬವಂತನು ಅವನನ್ನೆತ್ತಿ ಆಸನದಲ್ಲಿ ಕುಳ್ಳಿರಿಸಿದ. ರಾಮನು ತಾಂಬೂಲವನ್ನಿತ್ತ. ಸೀತೆ ಅವನ ಕಾಲೊತ್ತಿದಳು. ಶಂಭುಮುನಿ ಪಾರ್ವತಿಯರು ಬ್ರಾಹ್ಮಣನ ಮುಖ ನೋಡುತ್ತ ಮನಸ್ಸಿನಲ್ಲಿಯೆ ಪರಸ್ಪರ ಏನೋ ಮಾತನಾಡಿಕೊಂಡರು. ಒಡನೆ ಬ್ರಾಹ್ಮಣನು ಶಂಖ ಚಕ್ರಗಧಾಧಾರಿಯಾಗಿ ಮೈದೋರಿದ. ಶಂಭೂವೂ ಮುಕ್ಕಣ್ಣ ಶಿವನಾಗಿ ವಿಷ್ಣುವಿನ ಕೈಹಿಡಿದುಕೊಂಡು ನಿಂತ. ರಾಮನು ನೋಡಿ ರೋಮಾಂಚಿತನಾಗಿ ದಂಡ ಪ್ರಣಾಮ ಮಾಡಿದ. ಆನಂದದ ಕಣ್ಣೀರು ಸುರಿಸಿದ. ಶಿವನು ರಾಮನನ್ನೆಬ್ಬಿಸಿ ಬಿಗದಪ್ಪಿ ತಲೆಯನ್ನಾಘ್ರಾಣಿಸಿದ. 'ಬ್ರಹ್ಮಾದಿಗಳಿಗೂ ದುರ್ಲಭವಾದ ವರವನ್ನು ಕೊಡುತ್ತೇನೆ, ಕೇಳಿಕೊಳ್ಳು' ಎಂದ.

ರಾಮನೆಂದ, 'ಶಿವನೇ, ನಾನು ಕೇಳಿ ಕೊಳ್ಳಬೇಕಾದುದೇನೂ ಇಲ್ಲ. ಏಕಚಕ್ರಾಧಿಪತ್ಯವಿದೆ. ಕರ್ಮದಿಂದ ಸ್ವರ್ಗವೂ ಸಿಗುತ್ತದೆ. ಆರೋಗ್ಯವಿದೆ. ನಾರಿಯರಲ್ಲೆ ಉತ್ತಮಳಾದ ಸೀತೆ ಇದ್ದಾಳೆ. ಎಲ್ಲ ರಾಜರೂ ಅಧೀನದಲ್ಲಿದ್ದಾರೆ. ಪ್ರಜೆಗಳೂ ಧರ್ಮದಿಂದಿದ್ದಾರೆ. ನೀನು ಬಂದುದೆ ನನಗೆ ಸಂತೋಷ ಉಂಟುಮಾಡಿದೆ. ಆದರೂ ಒಂದು ವರ ನೀಡು. ನಿನ್ನಲ್ಲಿ ನನಗೆ ಸ್ಥಿರವಾದ ಭಕ್ತಿ ಇರಲಿ. ನೀನು ನನ್ನ ಮನೆಯಲ್ಲಿ ಧರ್ಮ ಭೋದನೆಯನ್ನು ಮಾಡುತ್ತ ಮೂರು ವರ್ಷಗಳ ಕಾಲ ಇರು.'

ಶಿವನು 'ಹಾಗೆ ಆಗಲಿ' ಎಂದ.

ವಿಷ್ಣುವೂ ಹೇಳಿದ, 'ರಾಮ, ನಾನೇನು ವರ ನೀಡಲಿ ಹೇಳು' ರಾಮನೆಂದ. ನನಗೆ ಬೇಕಾದುದನ್ನು ಶಿವನು ಕೊಟ್ಟಿದ್ದಾನೆ. ಆದರೂ ಒಂದುವರ ಬೇಡುತ್ತೇನೆ. ನೀನು ಸದಾ ನನ್ನಲ್ಲಿ ಪ್ರಸನ್ನನಾಗಿರು.' ಹರಿಯು 'ಆಗಲಿ' ಎಂದು ಹೇಳಿ ಸೀತೆಯನ್ನು ಕೇಳಿದ 'ನಿನಗೇನು ವರ ಬೇಕು ?' 'ನನ್ನ ಪತಿ ಈಗಾಗಲೆ ವರಗಳನ್ನು ಪಡೆದಿದ್ದಾನೆ. ನನಗೆ ಇನ್ನೇನೂ ಬೇಡ. ವರವನ್ನು ಕೊಡಬೇಕಾಗಿದ್ದರೆ ನನ್ನ ಮನಸ್ಸು ಪರಮಪುರುಷನಾದ ರಾಮನನ್ನೆ ಹಗಲಿರುಳು ಧ್ಯಾನಿಸುವಂತೆ ವರ ನೀಡು'. ಎಂದಳು ಸೀತೆ

*ಶ್ರೀ ವ್ಯಾಸಪ್ರಣೀತ ಪದ್ಮ ಮಹಾಪುರಾಣ ಭಾಗ - ೨ರ ಪಾತಾಳಖಂಡದಲ್ಲಿನ*
*ಆಕಥನ ಶಿವಪೂಜೆ ಎಂಬ ಐವತ್ತನಾಲ್ಕನೆ ಅಧ್ಯಾಯ ಮುಗಿಯುವುದರೊಂದಿಗೆ*
***ಪಾತಾಳಖಂಡವು ಸಂಪೂರ್ಣವಾಯಿತು***

ಸರ್ವೇಜನಾಃ ಸುಖಿನೋ ಭವಂತು

ಓಂ ಶಾಂತಿಃ ಶಾಂತಿಃ ಶಾಂತಿಃ



